

ಕರ್ನಾಟಕ ಸರ್ಕಾರ



ಕರ್ನಾಟಕ ನಾಟಕ ಅಕಾಡೆಮಿ

# ರಂಗದೀವಿಗೆ

## ಕರ್ನಾಟಕ ನಾಟಕ ಅಕಾಡೆಮಿ
## ಪ್ರಶಸ್ತಿ ಪುರಸ್ಕೃತರ ಮಾಹಿತಿ ಹೊತ್ತಿಗೆ

೧೯೫೯ ರಿಂದ ೨೦೧೬





ಕರ್ನಾಟಕ ಸರ್ಕಾರ

# ರಂಗದೀವಿಗೆ

## ಕರ್ನಾಟಕ ನಾಟಕ ಅಕಾಡೆಮಿ
## ಪ್ರಶಸ್ತಿ ಪುರಸ್ಕೃತರ ಮಾಹಿತಿ ಹೊತ್ತಿಗೆ

---

೧೯೫೯ ರಿಂದ ೨೦೧೬





**ಕರ್ನಾಟಕ ನಾಟಕ ಅಕಾಡೆಮಿ**

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು

ದೂರವಾಣಿ : ೦೮೦ – ೨೨೨೩೭೪೮೪

**RANGADEEVIGE**
**KARNATAKA NATAKA ACADEMY PRASHASTI PURASKRUTARU**
Citation of Academy Awardies
Published by Manjunath Aaradya, Registrar
Karnataka Nataka Academy, Kannada Bhavana
J.C. Road, Bengaluru - 560002, Phone : 080-22237484

Edition : 2017 Pages : XXII + 618

Copies : 500 Price : Rs. 1,000/-

---

ಹಕ್ಕುಗಳು : **ಕರ್ನಾಟಕ ನಾಟಕ ಅಕಾಡೆಮಿ**

ಮುದ್ರಣ : ೨೦೧೭ ಪುಟಗಳು : XXII + ೬೧೮

ಪ್ರತಿಗಳು : ೫೦೦ ಬೆಲೆ : ರೂ. ೧,೦೦೦/-

ಪ್ರಧಾನ ಸಂಪಾದಕರು
**ಎಲ್.ಬಿ. ಶೇಖ (ಮಾಸ್ತರ)**
ಅಧ್ಯಕ್ಷರು, ಕರ್ನಾಟಕ ನಾಟಕ ಅಕಾಡೆಮಿ

ಪ್ರಕಾಶಕರು
**ಬಿ. ಮಂಜುನಾಥ್ ಆರಾಧ್ಯ**
ರಿಜಿಸ್ಟ್ರಾರ್, ಕರ್ನಾಟಕ ನಾಟಕ ಅಕಾಡೆಮಿ,
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು–೫೬೦೦೦೨
ದೂರವಾಣಿ : ೦೮೦ – ೨೨೨೩೭೪೮೪

ವಿನ್ಯಾಸ ಮತ್ತು ಮುದ್ರಕರು :
ಎಂ.ಸಿ. & ಎ ಮುಖಾಂತರ
**ಸುಹಾಸ್ ಗ್ರಾಫಿಕ್ಸ್**
ರಾಜಾಜಿನಗರ, ಬೆಂಗಳೂರು
ಮೊ. : ೯೮೪೫೩ ೫೫೫೧೯

# ಅಧ್ಯಕ್ಷರ ಮಾತು



**ಎಲ್.ಬಿ. ಶೇಖ (ಮಾಸ್ತರ)**
ಅಧ್ಯಕ್ಷರು

ಮೈಸೂರು ರಾಜ್ಯ ಸರ್ಕಾರದಿಂದ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ 1959ರಲ್ಲಿ ಅಸ್ತಿತ್ವಕ್ಕೆ ಬಂದಿತು. ಕನ್ನಡ ರಂಗಭೂಮಿಯ ಪ್ರಾತಿನಿಧಿಕ ಸಂಸ್ಥೆಯಾಗಿ ರಂಗಭೂಮಿಯ ಸಮಗ್ರ ಅಭಿವೃದ್ಧಿಗಾಗಿ ಯೋಜನೆ ರೂಪಿಸಿ, ಅನುಷ್ಠಾನಗೊಳಿಸಿ ಕ್ರಿಯಾಶೀಲವಾಗಿ ಕಾರ್ಯ ನಿರ್ವಹಿಸುತ್ತಿದೆ.ಜಾನಪದ, ವೃತ್ತಿ, ಹವ್ಯಾಸಿ, ಆಧುನಿಕ ರಂಗಭೂಮಿ ಸೇರಿದಂತೆ ಪೌರಾಣಿಕ, ಗ್ರಾಮೀಣ ರಂಗಭೂಮಿಯ ಬೆಳವಣಿಗೆಯಲ್ಲಿ ನಾಟಕ ಅಕಾಡೆಮಿ ಸಾಕಷ್ಟು ಶ್ರಮವಹಿಸಿದೆ.

ಈವರೆಗೆ 13 ಅಧ್ಯಕ್ಷರು ಹಾಗೂ ಅವರ ನೇತೃತ್ವದ ಅಕಾಡೆಮಿ ತಮ್ಮ ತಮ್ಮ ಅವಧಿಯಲ್ಲಿ ಅಂದಿನ ದಿನಮಾನಗಳಿಗೆ ಅಗತ್ಯವಾದ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸಿದೆ.ಆದರೆ ರಂಗಭೂಮಿಯ ಹಿರಿಯರನ್ನು ಕ್ರಿಯಾಶೀಲರನ್ನು ಗುರುತಿಸುವ, ಅವರನ್ನು ಗೌರವಿಸುವ, ಪ್ರಶಸ್ತಿ ನೀಡಿ ಪುರಸ್ಕರಿಸುವ ಕಾರ್ಯವನ್ನು ನಾಟಕ ಅಕಾಡೆಮಿ ಮಾಡುತ್ತಾ ಬಂದಿದೆ.ರಾಜ್ಯದ ಮೂಲೆ ಮೂಲೆಯಲ್ಲಿರುವ ರಂಗಕಲಾವಿದರನ್ನು ಗುರುತಿಸುವುದರ ಜೊತೆಗೆ ಹೊರನಾಡು, ಗಡಿನಾಡು ಕನ್ನಡಿಗರನ್ನು ಈ ಪ್ರಶಸ್ತಿಗೆ ಪುರಸ್ಕೃತರುಗಳನ್ನು ಆಯ್ಕೆ ಮಾಡಿ ಸಕಲರನ್ನು ಒಳಗೊಳ್ಳುವ ಸುತ್ಯಾರ್ಹ ಕೆಲಸವನ್ನು ಮಾಡಿದೆ.

ಕರ್ನಾಟಕ ಸರ್ಕಾರ ಈ ರಂಗಭೂಮಿ ಕ್ಷೇತ್ರಕ್ಕೆ ಮಹತ್ತರವಾದ ಕೊಡುಗೆ ನೀಡಿದೆ. ಮೊದಲಿಗೆ ಗೌರವ ಪತ್ರ, ನಟರಾಜ ವಿಗ್ರಹ ನೀಡಿ ಗೌರವಿಸಲಾಗುತ್ತಿತ್ತು. ಇದರೊಂದಿಗೆ ಈಗ ವಾರ್ಷಿಕ ಪ್ರಶಸ್ತಿಯ ಮೊತ್ತ ರೂ. 25,000/– ಹಾಗೂ ಗೌರವ ಪ್ರಶಸ್ತಿ ಮೊತ್ತ ರೂ. 50,000/– ಗಳನ್ನು ನೀಡಲಾಗುತ್ತಿದೆ. ಅದಕ್ಕಾಗಿ ಕರ್ನಾಟಕ ಸರ್ಕಾರಕ್ಕೆ ಹಾಗೆಯೇ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸನ್ಮಾನ್ಯ ಸಚಿವರಾದ ಶ್ರೀಮತಿ ಉಮಾಶ್ರೀ ಅವರಿಗೆ ನಮ್ಮ ಧನ್ಯವಾದಗಳನ್ನು ತಿಳಿಸುತ್ತೇವೆ.

1959 ರಿಂದ 2009 ಸುವರ್ಣ ಸಂಭ್ರಮದ ಸಂದರ್ಭದಲ್ಲಿ ಆ ಅವಧಿಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಡಾ.ಬಿ.ವಿ.ರಾಜಾರಾಂ ಅವರು ಈ ಪ್ರಶಸ್ತಿ ಪುರಸ್ಕೃತರ ಕೃತಿ – ಸಂಗ್ರಹಿಸಿ ಪ್ರಕಟಿಸಬೇಕೆಂಬ ಕೆಲಸ ಆರಂಭ ಮಾಡಿದ್ದರು. ಆದರೆ ಸಂಕಲ್ಪಿಸಿದ ಕಾರ್ಯ ಕೈಗೂಡಿರಲಿಲ್ಲ. ಇದು ಆಗಲೇ ಆಗಬೇಕಾಗಿದ್ದ ಕೆಲಸ. ಆದರಿಂದಾಗಿ ಹಿಂದಿನ ವರ್ಷಗಳಲ್ಲಿ ಪ್ರಶಸ್ತಿ ಪಡೆದವರ ವಿವರಗಳು ಒಂದೆಡೆ ದೊರಕುವ ಕೃತಿ ಇದಾಗುವುದರಿಂದ

ಈ ಸಂಗ್ರಹವನ್ನು ಪ್ರಕಟಿಸಲು ನಮ್ಮ ಅವಧಿಯಲ್ಲಿ ಮತ್ತೆ ಕೈಗೆತ್ತಿಕೊಂಡೆವು. ಅದರ ಪ್ರಕಟಣೆಯ ಕಾರ್ಯದಲ್ಲಿ ಡಾ. ಬಿ.ವಿ. ರಾಜಾರಾಂ ಅವರೂ ಸಹಕರಿಸಿದ್ದಾರೆ. ಅವರಿಗೆ ನನ್ನ ವೈಯಕ್ತಿವಾಗಿ ಧನ್ಯವಾದಗಳನ್ನು ತಿಳಿಸುತ್ತೇನೆ.

ಇವರೆಲ್ಲಾ ಕನ್ನಡ ರಂಗಭೂಮಿಯನ್ನು ಬೆಳಗಿದ ರಂಗದೀವಿಗೆಗಳು. ಈವರೆಗೆ ಪ್ರಶಸ್ತಿ ದೊರಕಿರುವ ಎಲ್ಲಾ ಕಲಾವಿದರ ಕಿರು ಪರಿಚಯವನ್ನು ಒಂದು ಗ್ರಂಥದ ಮೂಲಕ ಪ್ರಕಟಿಸುವ ಕಾರ್ಯವನ್ನು ನಮ್ಮ ಅಕಾಡೆಮಿ ಮಾಡಿದೆ. ಆಯಾ ಅವಧಿಯಲ್ಲಿ ಪ್ರಕಟಗೊಂಡ ಪ್ರಶಸ್ತಿ ಸಂಚಿಕೆಗಳಲ್ಲಿದ್ದ ಮಾಹಿತಿಯನ್ನು ಇಲ್ಲಿ ಅದೇ ರೀತಿ ಸಂಗ್ರಹ ಮಾಡಿದೆ. ಇದು ಒಂದು ಮಾಹಿತಿ ಸಂಚಿಕೆಯಾಗಿ, ಮುಂದಿನ ತಲೆಮಾರಿಗೆ ತುಂಬಾ ಉಪಯುಕ್ತವಾಗಲಿದೆ ಎನ್ನುವುದು ನಮ್ಮ ಭಾವನೆ. ಇಂತಹ ಬೃಹತ್ ಗ್ರಂಥ ತರಲು ಒಪ್ಪಿಗೆ ನೀಡಿದ ಎಲ್ಲಾ ಸದಸ್ಯರಿಗೆ, ಸಹಕರಿಸಿದ ಕರ್ನಾಟಕ ಅಕಾಡೆಮಿ ರಿಜಿಸ್ಟ್ರಾರ್ ಶ್ರೀ ಬಿ. ಮಂಜುನಾಥ ಆರಾಧ್ಯ ಅವರಿಗೆ ಹಾಗೂ ಅಕಾಡೆಮಿಯ ಸಿಬ್ಬಂದಿ ವರ್ಗದವರಾದ ಶ್ರೀ ಕೆ. ರೇವಣ್ಣ, ಶ್ರೀಮತಿ ಸುಶೀಲಮ್ಮ, ಶ್ರೀ ಎಂ. ಭೋಜಣ್ಣ, ಶ್ರೀಮತಿ ಸೌಭಾಗ್ಯಲಕ್ಷ್ಮೀ ಅವರಿಗೆ ನನ್ನ ಕೃತಜ್ಞತೆಗಳು.

ಈ ಪುಸ್ತಕಕ್ಕೆ ಅಂದವಾದ ಮುಖಪುಟ ರಚಿಸಿಕೊಟ್ಟ ಕಲಾವಿದ ಕೃಷ್ಣರಾಯಚೂರು, ಎಂ.ಸಿ.ಹಿವಿ. ಮುಖಾಂತರ ಅಂದವಾಗಿ ವಿನ್ಯಾಸ ಹಾಗೂ ಮುದ್ರಣ ಮಾಡಿದ ಸುಹಾಸ್ ಗ್ರಾಫಿಕ್ಸ್‌ನ ಮೇಲುಕೋಟೆ ಮುರಳೀಧರ್, ಚಂದ್ರು ಮತ್ತು ನಾಗರಾಜ್ ಅವರಿಗೆ ಧನ್ಯವಾದಗಳು. ಕನ್ನಡ ರಂಗಸಹೃದಯರು ಈ ನಮ್ಮ ಗ್ರಂಥವನ್ನು ಸ್ವೀಕರಿಸಬೇಕೆಂದು ನಮ್ರತೆಯಿಂದ ಕೋರುತ್ತೇನೆ.

22–02–2017
ಬೆಂಗಳೂರು

– **ಎಲ್.ಬಿ. ಶೇಖ (ಮಾಸ್ತರ)**
ಅಧ್ಯಕ್ಷರು
ಕರ್ನಾಟಕ ನಾಟಕ ಅಕಾಡೆಮಿ

# ಪ್ರಕಾಶಕರ ಮಾತು

ಮೈಸೂರು ರಾಜ್ಯ ಸರ್ಕಾರದಿಂದ ಮೈಸೂರು ರಾಜ್ಯಸಂಗೀತ ನಾಟಕ ಅಕಾಡೆಮಿ 1959ರಲ್ಲಿ ಅಸ್ತಿತ್ವಕ್ಕೆ ಬಂದಿತು. ಕನ್ನಡ ರಂಗಭೂಮಿಯ ಪ್ರಾತಿನಿಧಿಕ ಸಂಸ್ಥೆಯಾಗಿರುವ ಕರ್ನಾಟಕ ನಾಟಕ ಅಕಾಡೆಮಿಯು ರಂಗಭೂಮಿಯ ಅಭಿವೃದ್ಧಿಗಾಗಿ ಅನುಷ್ಠಾನ ಯೋಗ್ಯ ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸಿದೆ.

ಕನ್ನಡ ರಂಗಭೂಮಿಯ ಎಲ್ಲ ಆಯಾಮಗಳಲ್ಲಿ ಅನನ್ಯ ಸೇವೆ ಸಲ್ಲಿಸಿರುವ ಕಲಾವಿದರನ್ನು ಗುರುತಿಸಿ ಅವರನ್ನು ಗೌರವಿಸುವ, ಪ್ರಶಸ್ತಿ ನೀಡಿ ಸತ್ಕರಿಸುವ ಕೆಲಸವನ್ನು 1959ರಿಂದಲೂ ಕರ್ನಾಟಕ ನಾಟಕ ಅಕಾಡೆಮಿ ಮಾಡುತ್ತಾ ಬಂದಿದೆ.

1959ರಿಂದ 2016ರವರೆಗೆ ಕನ್ನಡ ರಂಗಭೂಮಿಯನ್ನು ಬೆಳಗಿದ ಸರಿಸುಮಾರು 1128 ರಂಗದೀವಿಗೆಗಳ ಕಿರು ಪರಿಚಯ ಒಂದೇ ಕಡೆ ದೊರೆಯುವಂತಾಗಲು ಆಯಾ ವರ್ಷಗಳಲ್ಲಿ ಪ್ರಕಟಗೊಂಡ ಪ್ರಶಸ್ತಿ ಸಂಚಿಕೆಯಲ್ಲಿರುವ ಮಾಹಿತಿಯನ್ನು ಯಥಾವತ್ತಾಗಿ ಸಂಗ್ರಹಿಸಿ, ಈ ಒಂದು ಬೃಹತ್ ಹೊತ್ತಿಗೆಯು ಮುಂದಿನ ಯುವಪೀಳಿಗೆಗೆ, ಕಲಾಸಕ್ತರಿಗೆ ಉಪಯುಕ್ತವಾಗಲೆಂಬ ಆಶಯದೊಂದಿಗೆ ಕರ್ನಾಟಕ ನಾಟಕ ಅಕಾಡೆಮಿಯು ಅತ್ಯಂತ ಹೆಮ್ಮೆಯಿಂದ ಪ್ರಕಟಿಸಿದೆ.

**– ಬಿ. ಮಂಜುನಾಥ ಆರಾಧ್ಯ**
ರಿಜಿಸ್ಟ್ರಾರ್ (ಪ್ರ)
ಕರ್ನಾಟಕ ನಾಟಕ ಅಕಾಡೆಮಿ

ಕರ್ನಾಟಕ ಸರ್ಕಾರ

# ಕರ್ನಾಟಕ ನಾಟಕ ಅಕಾಡೆಮಿ

## ಅಧ್ಯಕ್ಷರು ಮತ್ತು ಸದಸ್ಯರ ಪಟ್ಟಿ

**ಶ್ರೀ ಎಲ್.ಬಿ. ಶೇಖ (ಮಾಸ್ತರ)**
ಅಧ್ಯಕ್ಷರು

ಸದಸ್ಯರು

**ಶ್ರೀ ಎಸ್.ಕೆ. ರಾಮಕೃಷ್ಣ,** ಬೆಂಗಳೂರು
**ಶ್ರೀಮತಿ ಕಲ್ಪನಾ ನಾಗನಾಥ್,** ಬೆಂಗಳೂರು
**ಶ್ರೀ ಉಮೇಶ ಸಾಲಿಯಾನ,** ಕಾಸರಗೋಡು
**ಶ್ರೀ ಎಚ್. ಷಡಾಕ್ಷರಪ್ಪ ಹೊಸಮನಿ,** ದಾವಣಗೆರೆ ಜಿಲ್ಲೆ
**ಶ್ರೀಮತಿ ಅನ್ನಪೂರ್ಣ ಸಾಗರ,** ಶಿವಮೊಗ್ಗ ಜಿಲ್ಲೆ
**ಶ್ರೀ ಹಾಲ್ಕುರಿಕೆ ಶಿವಶಂಕರ್,** ಕೊಪ್ಪಳ ಜಿಲ್ಲೆ
**ಶ್ರೀ ಎಂ.ಎಸ್. ಗುಣಶೀಲನ್,** ಬೆಂಗಳೂರು
**ಶ್ರೀ ಕೆ. ಜಗುಚಂದ್ರ,** ಧಾರವಾಡ

**ಶ್ರೀ ವಿ.ಎಸ್. ಅಕ್ಕಿ,** ರಾಯಚೂರು
**ಶ್ರೀ ಬಿ.ಎಂ. ರಾಮಚಂದ್ರ,** ಮೈಸೂರು
**ಶ್ರೀ ಪಿ. ತಿಪ್ಪೇಸ್ವಾಮಿ,** ಚಿತ್ರದುರ್ಗ ಜಿಲ್ಲೆ
**ಶ್ರೀ ಎಸ್.ಕೆ. ಕೊನೆಸಾಗರ,** ಬಾಗಲಕೋಟೆ ಜಿಲ್ಲೆ
**ಶ್ರೀಮತಿ ಎ. ವರಲಕ್ಷ್ಮಿ,** ಬಳ್ಳಾರಿ
**ಶ್ರೀ ರಾಜಪ್ಪ ಕಿರಗಸೂರು,** ಮೈಸೂರು ಜಿಲ್ಲೆ
**ಶ್ರೀ ಮುದ್ದಣ್ಣ ರಟ್ಟೆಹಳ್ಳಿ,** ಬೆಂಗಳೂರು

ಸಹಸದಸ್ಯರು

**ಡಾ. ಶ್ರೀಪಾದ ಭಟ್,** ಉತ್ತರ ಕನ್ನಡ ಜಿಲ್ಲೆ
**ಶ್ರೀ ಗುಡಿಹಳ್ಳಿ ನಾಗರಾಜ,** ಬೆಂಗಳೂರು
**ಶ್ರೀ ಎಲ್.ಎಚ್. ರಂಗನಾಥಪ್ಪ,** ತುಮಕೂರು ಜಿಲ್ಲೆ

ರಿಜಿಸ್ಟ್ರಾರ್
**ಬಿ. ಮಂಜುನಾಥ ಆರಾಧ್ಯ**

ಯೋಜನಾ ಸಹಾಯಕ
**ಕೆ. ರೇವಣ್ಣ**

ಕಚೇರಿ ಸಿಬ್ಬಂದಿ
**ಸುಶೀಲಮ್ಮ, ಎಂ. ಭೋಜಣ್ಣ, ಸೌಭಾಗ್ಯಲಕ್ಷ್ಮೀ**

Website : Kannadarangabhoomi.org    Gmail : academy.nataka@gmail.com

# ಕರ್ನಾಟಕ ನಾಟಕ ಅಕಾಡೆಮಿಯ ಹಿಂದಿನ ಅಧ್ಯಕ್ಷರು


ಶ್ರೀ ಗಿರೀಶ್ ಕಾರ್ನಾಡ್
೧೯೭೬ ರಿಂದ ೧೯೮೦


ಶ್ರೀ ಬಿ.ವಿ. ಕಾರಂತ
೧೯೮೦ ರಿಂದ ೧೯೮೩


ಡಾ. ಚಂದ್ರಶೇಖರ ಕಂಬಾರ
೧೯೮೩ ರಿಂದ ೧೯೮೬


ಡಾ. ಬಿ.ವಿ. ವೈಕುಂಠರಾಜು
೧೯೮೬ ರಿಂದ ೧೯೮೯


ಶ್ರೀ ಪರ್ವತವಾಣಿ
೧೯೮೯ ರಿಂದ ೧೯೯೦


ಪದ್ಮಶ್ರೀ ಚಿಂದೋಡಿ ಲೀಲಾ
೧೯೯೧ ರಿಂದ ೧೯೯೫


ಡಾ. ಕೆ. ಮರುಳಸಿದ್ಧಪ್ಪ
೧೯೯೫ ರಿಂದ ೧೯೯೮


ಡಾ. ಸಿ.ಜಿ. ಕೃಷ್ಣಸ್ವಾಮಿ
೧೯೯೮ ರಿಂದ ೨೦೦೧


ಶ್ರೀ ಆರ್. ನಾಗೇಶ್
೨೦೦೧ ರಿಂದ ೨೦೦೪


ಶ್ರೀ ಶ್ರೀನಿವಾಸ್ ಜಿ. ಕಪ್ಪಣ್ಣ
೨೦೦೫ ರಿಂದ ೨೦೦೮


ಡಾ. ಬಿ.ವಿ. ರಾಜಾರಾಂ
೨೦೦೮ ರಿಂದ ೨೦೧೧


ಡಾ. ಮಾಲತಿ ಸುಧೀರ್
೨೦೧೧ ರಿಂದ ೨೦೧೪

# ಪರಿವಿಡಿ

## ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ ಪುರಸ್ಕೃತರು

| ಪ್ರಶಸ್ತಿ ನೀಡಿದ ವರ್ಷ | ಕಲಾವಿದರ ಹೆಸರು | ಪುಟ ಸಂಖ್ಯೆ |
|---|---|---|
| **1959** | ಡಾ. ಗುಬ್ಬಿ ಎಚ್. ವೀರಣ್ಣ | 3 |
| **1960** | ಎಂ.ವಿ. ಸುಬ್ಬಯ್ಯನಾಯ್ಡು, ಮಳವಳ್ಳಿ ಸುಂದರಮ್ಮ | 6 |
| **1961** | ಹಾರಾಡಿ ರಾಮ ಗಾಣಿಗ | 9 |
| **1962** | ಲಕ್ಷ್ಮೀಬಾಯಿ, ಆರ್. ನಾಗೇಂದ್ರ ರಾವ್ | 10 |
| **1963** | ಬಲಿಪ ನಾರಾಯಣ ಭಾಗವತರು, ಆದ್ಯ ರಂಗಾಚಾರ್ಯ (ಶ್ರೀರಂಗ), ಎಂ. ರಂಗನಾಥಭಟ್ಟ, ಹಲಗೇರಿ ಚಿಕ್ಕಜಟ್ಟಪ್ಪ, ಬಿ.ವಿ. ಗುರುಮೂರ್ತಪ್ಪ | 14 |
| **1964** | ಕೊಟ್ಟೂರು ಬಸವಯ್ಯ | 18 |
| **1965** | ಮೂಡ್ಕಣಿ ನಾರಾಯಣ ಹೆಗಡೆ, ಎಂ. ಸುಬ್ಬರಾಯ, ಹುಲಿಮನೆ ಕೆ. ಸೀತಾರಾಮಶಾಸ್ತ್ರಿ, ಕೆರೆಮನೆ ಶಿವರಾಮ ಹೆಗಡೆ | 19 |
| **1966** | ಬಿ.ಆರ್. ಪಂತುಲು, ಜೋಳದರಾಶಿ ದೊಡ್ಡನ ಗೌಡರು, ಹಮ್ಮಿಗಿ ನೀಲಕಂಠಪ್ಪ, ಜಾನುವಾರುಕಟ್ಟೆ ಗೋಪಾಲಕೃಷ್ಣ ಕಾಮತ್, ಎಂ.ಜಿ. ಮರಿರಾವ್, ಜನಾಬ್ ಮಹಮ್ಮದ್ ಪೀರ್, ಎಂ.ವಿ. ರಾಜಮ್ಮ | 23 |
| **1967** | ಎನ್. ಲಕ್ಷ್ಮಮ್ಮ ಯಲ್ಲಮ್ಮ ದೇವದಾಸಿ, ಸುಂದರರಾವ್ ನಾಡಕರ್ಣಿ, ಎಂ. ಪಂಡರಿಬಾಯಿ | 31 |
| **1968** | ಕುರಿಯ ವಿಠಲ ಶಾಸ್ತ್ರಿ, ಎಚ್. ರಾಮಚಂದ್ರಶಾಸ್ತ್ರಿ, ಲಕ್ಷ್ಮಣ್‌ರಾವ್ (ಆಸೂಟಿ), ಕರ್ಕಿ ಪರಮಶಿವಯ್ಯ ಹಾಸ್ಯಗಾರ, ಹಾರಾಡಿ ಕುಷ್ಟ (ಕೃಷ್ಣ) ಗಾಣಿಗ | 32 |
| **1969** | ಎಚ್.ಎಲ್.ಎನ್. ಸಿಂಹ, ಬಾದಶಹಾ ಸಾಹೇಬ ಉರ್ಫ್ ಸರವರ ಅಲ್ಲಿಖಾನ್, ಎಂ.ಎಲ್. ಶ್ರೀನಿವಾಸ ಶಾಸ್ತ್ರೀ, ಡಿ. ಲಕ್ಷ್ಮಣಯ್ಯ, ಬಿ. ಜಯಮ್ಮ, | 36 |

| | | |
|---|---|---|
| | ಬಿ.ಎ. ಶಾಂತಾದೇವಿ, ಶಶಿಧರ ಅಡಪ, ಸಿದ್ದಪ್ಪ ಮಾಸ್ತರ, ಓಜಿನಹಳ್ಳಿ, ಸತ್ಯ ಮುಳಕಟೆ,<br>ಎಸ್. ಹನುಮಂತಯ್ಯ, ಎಮ್.ಎ. ನಾರಾಯಣರಾವ್, ಎ. ಸುಬ್ಬರಾವ್, ಕೆ.ಜಿ. ರಾವ್,<br>ಅಪ್ಪುರಾಜ ಮುಧೋಳ, ಹೆಚ್.ಎಸ್. ಉಮೇಶ್, ಯಲ್ಲಪ್ಪ ರಡ್ಡೇರ ತಿಮ್ಮಾಪುರ,<br>ಎಂ.ಎಸ್. ಕೊಟ್ರೇಶ್, ಗುಬ್ಬಿ ಪ್ರಭಾವತಮ್ಮ, ಕೆ. ಜಯಲಕ್ಷ್ಮಿ ಪಾಟೀಲ,<br>ಥೆರೇಸಮ್ಮ ಡಿಸೋಜಾ, ಪ್ರಮೀಳಾ ಗುಡೂರು, ಪುಷ್ಪರಾಣಿ ಮುನಿವೆಂಕಟಪ್ಪ,<br>ಎಂ.ಪಿ. ಬಾಬು, ಬಾಬಣ್ಣ ಹಾವೇರಿ, ಬಾಬಣ್ಣ ಕಲ್ಮನಿ ಕುಕನೂರ,<br>ಬೇಲೂರು ಕೃಷ್ಣಮೂರ್ತಿ, ಮಾರ್ತಾಂಡರಾವ್ ನಾಡಿಗೇರ್, ಮನೋರಮ ನಂಜಪ್ಪ,<br>ಎ.ಎಸ್. ಮೂರ್ತಿ, ಯೋಗೇಂದ್ರ ಸಿಂಗ್, ಜಿ.ಹೆಚ್. ರಾಘವೇಂದ್ರ,<br>ಬೋ.ನ. ರಾಮಮೂರ್ತಿ, ಸಿ.ಹೆಚ್. ಲೋಕನಾಥ್, ಲಲಿತಾ ಪಾತ್ರೋಟ, ಪಿ. ವಜ್ರಪ್ಪ,<br>ಎಸ್. ವೀರಭದ್ರಾಚಾರ್, ಎಸ್. ಶಾಮಮೂರ್ತಿ, ಶಿರಗಂಬಿ ರುದ್ರಪ್ಪ,<br>ಕಾ.ನಾ. ಶ್ರೀನಿವಾಸ್, ಶಿವಶಂಕರ ಬ್ಯಾಳಿ, ಕೆ. ಶ್ರೀಧರರಾವ್, ಕೆ. ಶ್ರೀಧರ, ಡಂಬಳ ಸಂಕಣ್ಣ,<br>ಸುಮಿತ್ರಾ ಶಿವಣ್ಣ ಕುಸುಬಿ, ಎಮ್. ಸಂಪಂಗಿ, ಸಾರಂಗಯ್ಯ ಸಂಗಯ್ಯ ಸಾರಂಗ ಮಠ,<br>ಹೊನ್ನಯ್ಯ, ಹೂಲಿಶೇಖರ್<br><br>**ವರ್ಷದ ಕಂಪನಿ ಪ್ರಶಸ್ತಿ** – ಶ್ರೀ ಸಂಗಮೇಶ್ವರ ನಾಟ್ಯ ಸಂಘ | |
| **1994** | **ಫೆಲೋಷಿಪ್** – ಡಾ. ಶ್ರೀರಾಮ ಇಟ್ಟಣ್ಣನವರ್, ಡಾ. ಜಿ.ಎಸ್. ಕಾಪಸೆ. ಸಿ.ಅಶ್ವಥ್,<br>ಕೀ.ರಂ. ನಾಗರಾಜ್, ಕೆ.ಆರ್. ನಾಗರಾಜ್, ವ್ಯಾಸರಾವ್ ನಿಂಜೂರು.<br><br>**ಪ್ರಶಸ್ತಿ** – ಅಜಂಬಾಯಿ ಹುಕ್ಕೇರಿ, ಲಾಲಾಮೊಹ್ಮದ್ ಬಂದೇನವಾಜ್ ಖಲೀಫ್ ಅಲ್ಲಾಳ್,<br>ಆರ್. ಅಶ್ವತ್ಥನಾರಾಯಣ, ಬಸವನಗೌಡ್ರು ಬಣ್ಣಗೇರಿ, ಎಂ. ಚಂದ್ರಶೇಖರ ಶ್ಯಾಡಗುಪ್ಪಿ,<br>ಜಿ.ಎಂ. ದೇವನ್, ಜಯಬಾಲು, ಜ್ಯೋತ್ಸ್ನಾರಾವ್, ಸಿ.ಎಸ್. ನಾಗೇಶ್, ಬಿ. ಚೆನ್ನಪ್ಪ ಕತ್ತಿಗೆ,<br>ಕೆ.ಎಂ. ಕುರುಂಬಯ್ಯ, ಶೇಖ್ ಮೋಹಿದ್ದೀನ್ ಖೇಡಗಿ, ಕೆ. ಮೌನೇಶ್ವರಾಚಾರ್,<br>ಪಿ. ಮುನಿರೆಡ್ಡಿ, ಎಲ್. ನಾಗಪ್ಪ, ರೇವಣ್ಣ ಸಿದ್ಧಯ್ಯ ರುದ್ರಸ್ವಾಮಿ ಮಠ,<br>ಡಿ.ಆರ್. ರಾಜಗೋಪಾಲ್, ರಾಜೇಶ್. ಎಂ.ಇ. ಗುಂಡಪ್ಪ ಅಂಕೇಗೌಡ,<br>ಶಾರದಾ ಶೇಷಾದ್ರಿ, ಶ್ರೀನಾಥ್ ಬಾಬು ಎನ್.ಆರ್., ಎನ್.ಶಿ. ಶ್ರೀಕಂಠಯ್ಯ,<br>ಎಸ್. ಲಕ್ಷ್ಮೀದೇವಿ, ಸೋಮಶೇಖರಯ್ಯ ಶಿವಲಿಂಗಯ್ಯ ಹಿರೇಮಠ, ವಿರೂಪಾಕ್ಷ ನಾಯಕ<br>ಎಂ.ಎಸ್. ನರಸಿಂಹಮೂರ್ತಿ, ಬಿ.ಜಿ. ರಾಮಕೃಷ್ಣ, ಎಂ. ಶಿವಶಂಕರ್,<br>ಕೆ. ಆನಂದ ಗಾಣಿಗ, ಅಬ್ದುಲ್‌ಸಾಬ ಅಣ್ಣಿಗೇರಿ, ಅನಂತ ಕಲ್ಲೋಳ,<br>ಹರಿಕಥೆ ವೆಂಕಟೇಶಮ್ಮ, ಬಸವನಗೌಡ ಮಣ್ಣೇರಿ, ಕೃಷ್ಣಚಂದ್ರ ವಿರೂಪಾಕ್ಷಪ್ಪ ಬಳ್ಳಾರಿ,<br>ಡಾ. ಧೀರೇಂದ್ರ ಕುಲಕರ್ಣಿ, ಧ್ರುವರಾಜ ವೆಂಕಟರಾವ್ ದೇಶಪಾಂಡೆ, ಗಂಗಯ್ಯ ಶಿರೂರ,<br>ಎ.ಜಿ. ಚಿದಂಬರರಾವ್ ಜಂಬೆ, ಕೆ.ಬಿ. ಶಿವರಾಜ, ಡಾ. ಬಿ.ಆರ್. ಮಂಜುನಾಥ್,<br>ಹಣ್ಣಿ ವೀರಭದ್ರಪ್ಪ, ಟಿ.ಎಸ್. ನಾಗಾಭರಣ, ಎನ್. ನಾಗರಾಜ,<br>ಕೆ. ನಾಗರತ್ನ ಮರಿಯಮ್ಮನಹಳ್ಳಿ, ಶಂಕ್ರಪ್ಪ ಅಡವೆಪ್ಪ ನರಗುಂದ,<br>ತುಮಕೂರು ನಂಜಪ್ಪ, ಪ್ರೇಮಾಕಾರಂತ್, ಎಂ.ಬಿ. ಪಾಟೀಲ, ಹೆಚ್. ಫ್ಲೋರಿನಾ,<br>ಯು. ಪ್ರಭಾಕರ ರಾವ್, ಟಿ.ಎಸ್. ರಂಗ, ರೇಣುಕಾದೇವಿ ಮುರಗೋಡು,<br>ಶ್ರೀಪತಿ ಮಂಜನಬೈಲು, ಕೆ. ಶಾಂತ, ಶಂಕ್ರಯ್ಯ ಬಸಯ್ಯ ಕಲ್ಯಾಣಮಠ,<br>ಎನ್.ಎಸ್. ಜೋಷಿ, ಗೌಸ್ ಮೊಹಿದ್ದೀನ್ ಶಿರಹಟ್ಟಿ, ಸರೋಜಮ್ಮ ಧುತ್ತರಗಿ, | 161 |

| | | |
|---|---|---|
| | ಎನ್. ಶಿಲ್ಪಾಚಾರಿ, ಎಂ. ಷಣ್ಮುಖಯ್ಯಸ್ವಾಮಿ, ಶಿವಪ್ಪ ಶೇಷಪ್ಪ ಶಿಂಗೆ, ಪಿ. ಶೇಷಗಿರಿ,<br>ಎಂ.ಎಸ್. ಉಮೇಶ್, ಎಂ.ಪಿ. ವೆಂಕಟರಾವ್, ಆರ್.ಎಸ್. ವಾಸುದೇವಮೂರ್ತಿ,<br>ಸಿ. ವಿಶ್ವನಾಥರಾವ್, ಎನ್. ವಸಂತಕುಮಾರ್, ಟಿ. ವೆಂಕಟನರಸಯ್ಯ | |
| **1995** | **ಫೆಲೋಶಿಪ್** – ಜಿ.ಕೆ. ಗೋವಿಂದರಾವ್, ಡಾ. ನಾ. ದಾಮೋದರಶೆಟ್ಟಿ, ಎಸ್. ಹಾಲಪ್ಪ<br><br>**ಪ್ರಶಸ್ತಿ** – ಉಳೇಬಿಡು ರಂಗಮ್ಮ, ಎರಿಂಗಳಿ ಶಿವಣ್ಣ, ಏಕನಾಥ, ಕುಮಾರಸ್ವಾಮಿ ಬಿ.,<br>ಕೃಷ್ಣೋಜಿ ಚವ್ಹಾಣ್, ಎಂ.ಆರ್. ನರಸಿಂಹಾಚಾರ್, ಬಿ.ವಿ. ನಂಜುಂಡಯ್ಯ,<br>ಬಿ.ಆರ್. ನಾಗೇಶ್, ಡಾ. ಚೆನ್ನಣ್ಣ ವಾಲೀಕಾರ, ಬಿ.ಎಂ. ರಾಮಚಂದ್ರ,<br>ಎಚ್.ಜಿ. ರಾಮಲಿಂಗೇಗೌಡ, ವೇಣುಗೋಪಾಲ ಕಾಸರಗೋಡು,<br>ಬಿ.ವಿ. ವೈಕುಂಠರಾಜು, ಎಚ್.ಎಸ್. ಶಿವಪ್ರಕಾಶ್, ಎಂ.ಎನ್. ಶಿವಪ್ಪ,<br>ಶ್ರೀಮಂತ ಕಣಬೂರು , ಜಿ.ವಿ. ಶಿವಾನಂದ, ಸಂಪಿಗೆ ತೋಂಟದಾರ್ಯ,<br>ಟಿ.ಎನ್. ಸೀತಾರಾಂ, ಹೀರಾಬಾಯಿ ಶಂಕರಗೌಡ ಪಾಟೀಲ, ವಿ.ತಿ. ಹೆಗಡೆ. | 190 |
| **1996** | **ಫೆಲೋಶಿಪ್** – ಡಾ. ವಿಜಯಾ, ಸಿ. ಬಸವಲಿಂಗಯ್ಯ, ಡಾ. ಸಿದ್ದಲಿಂಗ ಪಟ್ಟಣಶೆಟ್ಟಿ<br><br>**ಪ್ರಶಸ್ತಿ** – ಪದ್ಮಶ್ರೀ ಚಿಂದೋಡಿ ಲೀಲಾ, ಬಿ. ಜಯಶ್ರೀ, ಸೈಯದ್ ಸಾಬ್ ಕೊಲ್ಲಾಪುರೆ,<br>ಮದಿರೆ ಮರಿಸ್ವಾಮಿ, ರತ್ನಮ್ಮ ಬ್ರಹ್ಮಾವರ, ಕಾಶೀಬಾಯಿ ಬೂತಪ್ಪಗೋಳ,<br>ವಿ. ರಾಮಚಂದ್ರಯ್ಯ (ಕಳ್ಳ), ಶಿವಮೂರ್ತಿ ಕುಂದೂರು ಮಠ, ಪರಮೇಶ್ವರ ಹೆಗಡೆ<br>ರಾ.ಕೆ. ನಾಯಕ, ಗಂಗಾಧರ ಸ್ವಾಮಿ, ಕನಕಗಿರಿ ವಾದಿರಾಜ, ಹೆಚ್.ಎನ್. ನಕ್ಕತ್ತಾಯ,<br>ಆರ್.ಕೆ. ಹುಡಗಿ, ಸಿ.ಕೆ. ಗುಂಡಣ್ಣ, ಯು.ಆರ್. ನಾರಾಯಣಯ್ಯ, ಸಿ.ಪಿ. ಪರಮೇಶ್ವರಪ್ಪ,<br>ಎಸ್.ಆರ್. ರಮೇಶ್, ನಾಗನಗೌಡ ಸಿರಿಗೇರಿ, ಎಸ್.ಕೆ. ಮಾಧವರಾವ್, ನ. ಕೃಷ್ಣಶೆಟ್ಟಿ,<br>ಕೆ.ಆರ್. ಶ್ರೀನಿವಾಸ್, ನ. ಮಾರಪ್ಪ, ಶ್ರೀನಿವಾಸ ಜಿ. | 205 |
| **1997** | **ಫೆಲೋಶಿಪ್** – ಪ್ರೊ. ಎಚ್.ಎಂ. ಚನ್ನಯ್ಯ, ಪ್ರೊ. ಎಂ.ಎಸ್. ನಾಗರಾಜ್,<br>ಡಾ. ಎಚ್.ಕೆ. ರಂಗನಾಥ್, ಜಿ.ಎನ್. ರಂಗನಾಥರಾವ್, ಡಾ॥ ವೀರಣ್ಣ ರಾಜೂರ<br><br>**ಪ್ರಶಸ್ತಿ** – ಅಬ್ಬಾಸ ಆಲಿ, ಉಮಾಶ್ರೀ, ಎಚ್.ಕೆ. ಕರ್ಕೇರ, ಟಿ.ಎಚ್. ಗಣೇಶ್,<br>ಡಿ.ವಿ.ಎಸ್. ಗುಪ್ತ, ವಿ.ಎಂ. ಗುರುಸ್ವಾಮಿ, ಗೋಪಾಲ ವಾಜಪೇಯಿ,<br>ಗೋಪಾಲಕೃಷ್ಣ ನಾಯರಿ, ಚಂದ್ರಗುಪ್ತ ತಿ. ಚಾಂದಕವಠೆ, ತರೀಕೆರೆ ತಿಮ್ಮಣ್ಣ,<br>ಪಿ.ಬಿ. ನಾಗಭೂಷಣಸ್ವಾಮಿ, ವಿ.ಜೆ. ನಾಯಕ ವಂದಿಗೆ, ಪ್ರತಿಭಾ ನಾರಾಯಣ,<br>ಎಚ್.ಎಂ. ಪ್ರಭಾಕರ್, ಬನಹಟ್ಟಿ ವಾಸಣ್ಣ, ಭವಾನಿ ದೇವಿ, ಭಾರ್ಗವಿ ನಾರಾಯಣ,<br>ಡಾ. ಎಂ. ಮೋಹನ್ ಆಳ್ವ, ಮೋಹನಚಂದ ಕಿರಣಗಿ,<br>ರಾಜೇಂದ್ರ ಬಾಬು ಟಿ. ಅಲಿಗಾಂವಿ, ಕೆ. ರಾಮಕೃಷ್ಣ ಬಾಬು, ರಾಮೇಶ್ವರಿ ವರ್ಮಾ,<br>ಲಿಂಗದೇವರು ಹಳೇಮನೆ, ಟಿ.ಎಸ್. ಲೋಹಿತಾಶ್ವ, ವಜೀರಾ ಬಾಯಿ ಸೌದತ್ತಿ,<br>ವಾಲ್ಟರ್ ಡಿ'ಸೋಜಾ, ಶಂಕ್ರಯ್ಯಾ ರುದ್ರಯ್ಯಾ ಘಂಟಿ, ಶಿವಬಾಯವ್ವ ಹುಕ್ಕೇರಿ,<br>ಸಿದ್ಧರಾಜ ಗವಾಯಿ ಕಾಚಾಪುರ, ಸುರೇಂದ್ರನಾಥ್ ಎಸ್. | 222 |

| | | |
|---|---|---|
| **1998** | **ಫೆಲೋಶಿಪ್** – ಚಿತ್ತರಂಜನ ಚಟರ್ಜಿ, ಎಂ.ಪಿ. ಪ್ರಕಾಶ್, ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು, ಡಾ. ಎಚ್.ಎ. ಪಾರ್ಶ್ವನಾಥ್, ಎಚ್.ಎಸ್. ಪಾರ್ವತಿ<br><br>**ಪ್ರಶಸ್ತಿ** – ಅಜ್ಜಂಡ ಸಿ. ಕಾರ್ಯಪ್ಪ, ಟಿ.ವಿ. ಗುರುಮೂರ್ತಿ, ಗುರುರಾಜ ನಗರ್ ಜಿ.ಆರ್., ಗಿರಿಜಾ ಲೋಕೇಶ್, ಗವೀಶ ವೀರಭದ್ರಯ್ಯ ಹಿರೇಮಠ, ದೊಡ್ಡ ಹನುಮಂತಪ್ಪ ಪಂಪಣ್ಣ ಹೂಗಾರ, ಎನ್. ನರಸಿಂಹಯ್ಯ, ಕೆ.ಎಲ್. ನಾಗರಾಜಶಾಸ್ತ್ರಿ, ಬಿ.ಆರ್. ಜಯರಾಂ, ಪಿ. ಪದ್ಮಾ, ಬಸವರಾಜಪ್ಪ, ಮಚ್ಛೇಂದ್ರನಾಥ್ ಪಾಂಡೇಶ್ವರ, ವಿ.ಎಸ್. ಮೂರ್ತಿ, ಮೌಲಸಾಬ್ ಇಮಾಮ್‌ಸಾಬ್ ನದಾಫ್, ಮಹಬೂಬ ಅಲಿ, ಕೆ. ಮೋಹನಶೆಟ್ಟಿ, ಎಚ್.ಎಂ. ರಂಗಯ್ಯ, ಕೆ. ರಂಗಸ್ವಾಮಿ, ರವೀಶ್, ಪಿ. ರಾಮಕೃಷ್ಣ ಕಲ್ಯಾಣಿ, ರೋಹಿದಾಸ ಮಹಾಲೆ, ವಸಂತ ಕುಲಕರ್ಣಿ, ಎಸ್.ವಿ. ವೆಂಕಟರಂಗಾಚಾರ್ಯ, ಎಲ್.ಬಿ. ಶೇಖ ಮಾಸ್ತರ, ಸುಧಾಮಣಿ, ಸುರೇಶ್ ಅನಗಳ್ಳಿ, ಸೋಮಶೇಖರಯ್ಯ ಶಿವಲಿಂಗಯ್ಯ ಹಿರೇಮಠ, ಹಂಸಲೇಖ (ಪಡೆದಿರುವುದಿಲ್ಲ)<br><br>**ಪದ್ದಣ ಶ್ರಮ ಪ್ರಶಸ್ತಿ** – ಕಾಸಿಮಸಾಬ ಜಮಾದಾರ್, ಎಲ್. ಗುರು, ಗೋಪಿನಾಥ ಭಟ್ ಗುಲ್ವಾಡಿ, ದುಂಡಪ್ಪ ಅವ್ವಣ್ಣೆಪ್ಪ ಮುತ್ತಗಿ, 'ನಾದೇ' ನರಸಿಂಹಮೂರ್ತಿ, ಪುಟ್ಟಯ್ಯ, ಮುದ್ದಣ್ಣ, ಬಿ.ಎನ್. ಲಕ್ಷ್ಮೀನರಸಿಂಹಮೂರ್ತಿ, ಜಿ. ಮೈಲಾರಪ್ಪ, ಎಂ.ಎಸ್. ರಮೇಶ್, ಶಿವಣ್ಣ ಕುಸುಬಿ, ರಾಮು, ಶ್ರೀದರ್ಶನ್ | 245 |
| **1999** | **ಫೆಲೋಶಿಪ್** – ಬಾಬುರಾವ್ ಬಿ. ದೇಸಾಯಿ, ಹೆಚ್.ಎಸ್. ಕೃಷ್ಣಮೂರ್ತಿ (ಹಾ.ಸಾ.ಕೃ.), ಹೆಚ್.ಎಸ್. ಕುಲಕರ್ಣಿ, ಡಾ. ಬಿ.ಎಸ್. ಪರೇಶ್ ಕುಮಾರ್, ಕೆ.ಎಸ್. ಸಚ್ಚಿದಾನಂದ, ಬಿ. ಸಿದ್ದಗಂಗಯ್ಯ (ನಿಸರ್ಗಪ್ರಿಯ)<br><br>**ಪ್ರಶಸ್ತಿ** – ಅತ್ತಿಗುಪ್ಪೆ ಕೃಷ್ಣಮೂರ್ತಿ, ಜಿ.ಎನ್. ಅಂಜಲಿದೇವಿ, ಆನಂದ ಬಸರೂರು, ಎಂ.ಸಿ. ಆನಂದ್, ಬಷೀರ್, ಚನ್ನಬಸಯ್ಯ ಗುಬ್ಬಿ, ಹೆಚ್.ಕೆ. ಜಯದೇವ, ಕಿರಣ ಭಟ್, ಎಲ್. ಕೃಷ್ಣಪ್ಪ, ಹೆಚ್.ಆರ್. ಘಟಂ ಕೃಷ್ಣ, ಬಿ.ಆರ್. ಮಲ್ಲಿಕಾರ್ಜುನಯ್ಯ, ಹೆಚ್. ಮರಿಯಣ್ಣ, ಮಾಲತಿಶ್ರೀ ಮೈಸೂರು, ಮುಖ್ಯಮಂತ್ರಿ ಚಂದ್ರು, ಡಿ. ಮುನಿಯಪ್ಪ (ಮೋಹನ ಕುಮಾರ್) ನಂಜುಂಡಸ್ವಾಮಿ ಕೊಟ್ಟವಾಡಿ, ನಾಗರತ್ನಮ್ಮ ಹೊಸಮನಿ, ಪ್ರಭಾಕರ ಸಾತಖೇಡ, ಪುರುಷೋತ್ತಮ ತಲವಾಟ, ಗೋಪಾಲ ಟಿ. ಕೋಟ್ಯಾನ (ವಿ.ಜಿ.ಪಾಲ್) ಆರ್.ಟಿ. ರಮಾ, ರಾಜಶೇಖರ ಕದಂಬ, ಪಿ.ಬಿ.ರೈ, ಸಂಪಿಗೆ ಶಂಕರ, ಸುಶೀಲಮ್ಮ ಧಾರವಾಡ, ಹೆಚ್.ಜಿ. ಸೋಮಶೇಖರರಾವ್, ಶಂಭುಲಿಂಗ ವಾಲದೊಡ್ಡಿ, ಎಂ. ಶಿವಕುಮಾರ<br><br>**ಪದ್ದಣ ಶ್ರಮಪ್ರಶಸ್ತಿ** – ಚೆನ್ನಪ್ಪ ಸಿ.ಆರ್. ಎಚ್. ಫಕೀರಪ್ಪ, ಎನ್. ಗುರುನಾಥ್, ಎ.ಎಸ್. ಗುಂಡಪ್ಪ, ಗುರುಮೂರ್ತಿ ವರದಾಮೂಲ, ಕೇಶವ (ಕೇಶವಲು), ಎ. ಕೃಷ್ಣನಾಯ್ಕ, ಪಿ.ಟಿ. ಕೃಷ್ಣಮೂರ್ತಿ, ಲಾಡ್ಲೇಸಾಬ ಹುಸೇನಸಾಬ ಅಮೀನಗಡ, ಕೆ. ನಂಜಪ್ಪ, ಎಸ್. ನಾಗರಾಜ, ಎ. ಪೊನ್ನುಸ್ವಾಮಿ, ರಹಮಾನಸಾಬ್ ದೊಡಮನಿ, ಎ. ಶಿವಮಲ್ಲಯ್ಯ, ಕೆ.ವಿ. ತಿಮ್ಮಪ್ಪ, ವಸಂತ ಅಣ್ಣಾರಾವ ಕುಲಕರ್ಣಿ, ಬಿ.ಎಂ. ವೆಂಕಟೇಶ (ಅಣ್ಣಯ್ಯ). | 273 |

| | | |
|---|---|---|
| **2000** | **ಫೆಲೋಷಿಪ್** – ಕೆ.ವಿ. ಅಕ್ಷರ (ಸ್ವೀಕರಿಸಿರುವುದಿಲ್ಲ), ಡಾ॥ ಎಂ.ಜಿ. ಈಶ್ವರಪ್ಪ, ಎಸ್.ಬಿ. ಕಂಠಿ ಹನುಮಂತರಾಯ, ವಿ. ಕೃಷ್ಣನ್, ದರ್ಭೆ ಕೃಷ್ಣಾನಂದ ಚೌಟ, ಮಹಾಂತಯ್ಯಸ್ವಾಮಿ ಮುಂಡರಗಿ ಮಠ, ಪ್ರೊ. ರಾಮದಾಸ್, ಲಕ್ಷ್ಮೀ ಚಂದ್ರಶೇಖರ್<br><br>**ಪ್ರಶಸ್ತಿ** – ಎಚ್. ಅನಸೂಯ, ಅಂಕಲ್ ಶ್ಯಾಂ (ಎಂ.ಎನ್. ಶ್ಯಾಮಸುಂದರ್), ಎ.ಎನ್. ಕಟಿನಯ್ಯ, ಎಂ.ಬಿ. ಕೃಷ್ಣರಾವ್, ಗೌರಿದತ್ತು, ಡಾ. ಗುರುರಾವ್ ಬಾಪಟ್, ಗೋಪಾಲಕೃಷ್ಣ ಪಿ. ನಾಯಕ, ಹೆಚ್. ಜನಾರ್ಧನ (ಜನ್ನಿ), ಪಿ. ತಿಪ್ಪೇಸ್ವಾಮಿ, ಪಿ. ಧನಂಜಯ್ಯ, ಬಿ.ಎನ್. ನಂಜುಂಡಸ್ವಾಮಿ, ವಿ.ಎಮ್. ನಾಗೇಶ್ (ಚಡ್ಡಿ ನಾಗೇಶ್), ಎನ್. ನರಸಿಂಹಯ್ಯ (ಗಡವ), ಕೆ. ಪ್ರಕಾಶ್ ಶೆಣೈ, ಪಿಚ್ಚಳ್ಳಿ ಶ್ರೀನಿವಾಸ, ಎಸ್.ಕೆ. ಪರಮೇಶ್ವರಯ್ಯ, ಪ್ರಮೀಳಾ ಬೇಂಗ್ರೆ, ಡಾ॥ ಬಸವರಾಜ ಸಬರದ, ಆರ್. ಭರಮಲಿಂಗಪ್ಪ, ಮಹಾನಂದಾ ಹುಲ್ಲೂರ, ಪ್ರೊ॥ ಮೋಹನ್‌ರಾಜ್, ಯಶವಂತ್ ಎಂ., ಅ.ನ.ರಮೇಶ, ಎಚ್.ಸಿ. ರಾಮಚಂದ್ರ (ಹುಳಿಮಾವು), ಎಸ್.ಆರ್. ರಾಧಮ್ಮ, ಸೂತ್ರಧಾರ ರಾಮಯ್ಯ, ಲೂಸಿ ಪಿರೇರಾ, ಪಿ.ಎ. ವೇಣುಗೋಪಾಲ ರೆಡ್ಡಿ, ಬಿ.ವಿ. ವೆಂಕಟಗಿರಿಯಪ್ಪ (ಬಿ.ವಿ.ವಿ. ಗಿರಿ), ಶಂಕರ ಶಿವಬಸಪ್ಪ ದನದಮನಿ, ಶಂಕರಯ್ಯ ರಕ್ಕಸಗಿ, ಶೈಲಜಾ ಎಸ್. ಕುಂದಾಪುರ, ಡಾ. ಸಂಜೀವ ದಂಡಕೇರಿ, ಎಂ.ಕೆ. ಸತ್ಯ ನಾರಾಯಣ, ಕೆ. ಸುಬ್ಬಣ್ಣಶೆಟ್ಟಿ, ಕೆ.ಆರ್. ಸುಧೀಂದ್ರಶರ್ಮ, ಸುಲೋಚನಾ ಕಲಾವಂತ, ಸಂಗಮೇಶ ಆರ್. ಗುರುವ, ಹನುಮಯ್ಯ<br><br>**ಪದ್ಮಣ ಶ್ರಮ ಪ್ರಶಸ್ತಿ** – ಎ. ಕೃಷ್ಣಯ್ಯ (ಟ್ಯೂಬ್), ಕಲ್ಲೂರ ಶ್ರೀನಿವಾಸ್, ಕಲ್ಲಪ್ಪ ಬಾಲಪ್ಪ ದ್ಯಾವಣಸಿ, ಹೆಚ್.ಬಿ. ಕಂಚೀಪತಿ, ಎಂ.ಎಸ್. ಗುರುಮೂರ್ತಿ, ಚಂದ್ರಶೇಖರ ಚಕ್ಕಿ, ಡಿ. ಜಗದೀಶ್, ಎ.ಜಿ. ದೇಸಾಯಿ, ನಾರಾಯಣಪ್ಪ, ನರಸಿಂಗರಾವ್ ಕುಲ್ಕರ್ಣಿ, ಪಿ.ವಿ. ಪರಮೇಶ್, ಬುಡಾನ್ ಭಾಷಾ ಸಾಹೇಬ್, ಬಸವರಾಜ ಗೌಡ ನಾಡಂಗ, ಬಿ.ಎನ್. ಬ್ರಹ್ಮಾಚಾರ್ಯ, ವಿ. ರುದ್ರಯ್ಯ, ಜಿ.ಎಂ. ರಂಗಯ್ಯ, ಎಂ.ಎನ್. ವೆಂಕಟ್ ಸುಬ್ಬರಾವ್, ಬಿ.ಆರ್. ವಿಶ್ವನಾಥ್, ವಿ. ರವೀಂದ್ರಕುಮಾರ್, ವಿ. ಶಾಂತಯ್ಯ ಹಿರೇಮಠ, ಜಿ.ಎಸ್. ಸಬಕಾಳೆ | 306 |
| **2001** | ವಿ.ವಿ. ಅನಂತ ರಂಗಾಚಾರ್, ಹೆಚ್.ಟಿ. ಕಸ್ತೂರಮ್ಮ, ಗಂಗಾರಚರಣ್, ಬಿ. ಜಯಪ್ರಕಾಶಗೌಡ, ಎಸ್. ತಿಮ್ಮಪ್ಪ, ಸಿ.ಎಂ. ತಿಮ್ಮಯ್ಯ, ಬಸಪ್ಪ ದಂಡಿನ ಕಲ್ಲೂರ, ಎ. ಮುರಿಗೆಪ್ಪ, ಎನ್.ಎಸ್. ಮೂರ್ತಿ, ಎಚ್.ಆರ್. ರಮೇಶ್, ಜಿ. ರವೀಂದ್ರ, ಎನ್. ಕೆ. ರಾಮಕೃಷ್ಣ, ಡಾ. ರಾಮಕೃಷ್ಣ ಮರಾಠೆ, ಹೆಚ್.ಕೆ. ರಾಮನಾಥ್, ಕೆ. ರಾಮಯ್ಯ (ಕೋಟಗಾನಹಳ್ಳಿ ರಾಮಯ್ಯ), ರಿಚರ್ಡ್ ಲೂಯಿಸ್, ಎ. ವರಲಕ್ಷ್ಮೀ, ವಾಣಿ ಸರಸ್ವತಿ ನಾಯ್ಡು, ಡಾ. ಜಿ. ವೆಂಕಟೇಶಲು, ಎ. ಶಂಕರ ಭೀಮಪ್ಪ ಹಡಪದ, ಶಿವಪ್ಪ ಗೂಳಪ್ಪ ಕಳ್ಳನ್ನವರ, ಕೆ. ಶಿವರುದ್ರಯ್ಯ, ಶ್ರೀಧರ ಗಣಪತಿ ಹೆಗಡೆ, ಸದಾನಂದ ಶ್ಯಾನಭಾಗ್ (ಪುತ್ತಣ್ಣ), ಸದಾನಂದಸುವರ್ಣ | 352 |
| **2002** | ಅನ್ನದಾನಯ್ಯ, ವಿ.ಎನ್. ಅಕ್ಕಿ, ಕಾಲಭೈರವ ಗಂಗಾಧರ್, ಗಜಾನನ ಉಮೇಶ್ ಭಟ್ಟ, ಚೆನ್ನವೀರ ಝುಳಕಿ, ಕೆ. ಜಯರಾಮ ರೆಡ್ಡಿ, ಕೆ. ಜಂಬುನಾಥ್, ಎಂ. ದ್ವಾರಕಾನಾಥ್, | 366 |

| | | |
|---|---|---|
| **2006** | **ಗೌರವ ಪ್ರಶಸ್ತಿ** – ಎಚ್. ಡುಂಡಿರಾಜ್<br><br>**ಕಲ್ಚರ್ಡ್ ಕಮಿಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿ** – ಪ್ರಭಾತ್ ಕಲಾವಿದರು<br><br>**ಪ್ರಶಸ್ತಿ** – ಅನಿತಾ ಕಾರ್ಯಪ್ಪ, ಕೆ. ಆನಂದರಾಜ್, ಎಸ್.ಎನ್. ದೇಶಪಾಂಡೆ,<br>ದೇವೇಂದ್ರರೆಡ್ಡಿ ಮೈನಹಳ್ಳಿ, ದೊಡ್ಡ ಅಂಕಾಚಾರ್,<br>ನಾರಾಯಣ ಭೀಮಸೇನರಾವ ಕುಲಕರ್ಣಿ, ಮಹಾಂತೇಶ ಗಜೇಂದ್ರಗಡ,<br>ಮೈಕೋ ಚಂದ್ರು (ಎಂ. ಚಂದ್ರಶೇಖರ ರಾವ್), ಕೆ. ರಂಗಸ್ವಾಮಿ, ಪಿ.ಎಸ್. ರಾವ್,<br>ಲಿಂಗಯ್ಯ ವೀರಭದ್ರಯ್ಯ ಕುಲಕರ್ಣಿ, ಕೆ.ಬಿ. ಶಂಕರ್, ಡಿ.ಕೆ. ಶಿಂಧೆ,<br>ಜಿ. ಸೀತಾರಾಮಶೆಟ್ಟಿ ಕೊರಾಡಿ, ಶ್ರೀಮತಿ ಹರಿಪ್ರಸಾದ್<br><br>**ಸಿ.ಜಿ.ಕೆ. ಯುವರಂಗ ಪುರಸ್ಕಾರ** – ಮೋಹನ್ ಮಟ್ಟನವಿಲೆ, ರಾಜೇಶ್ ತಲಕಾಡು,<br>ರಾಮಕೃಷ್ಣ ಬೆಳ್ತೂರ್, ಸಂತೋಷ್ ಗಜಾನನ ಮಹಾಲೆ, ಸಿದ್ಧರಾಜ ಎಸ್.ಎಸ್.,<br>ಸುರೇಶ್ ಅಂಗಡಿ<br><br>**ಸುವರ್ಣ ಕರ್ನಾಟಕ ಗೌರವ ಪುರಸ್ಕಾರ** –<br><br>**ಹೊರರಾಷ್ಟ್ರ ಕನ್ನಡಿಗರು ಪುರಸ್ಕಾರ** – ಪ್ರೊ. ತಾವರೆಕೆರೆ (ಕಂಠಿ) ಶ್ರೀಕಂಠಯ್ಯ,<br>ವಲ್ಲೀಶ್ ಎಂ.ವಿ. ಶಾಸ್ತ್ರಿ, ಸುದರ್ಶನ್ ನಾರಾಯಣ, ಓಂದಾಸ್ ಕಣ್ಣಂಗಾರ್<br>ಜಿ. ಕುಮಾರಪ್ಪ, ಯಂ.ಆರ್. ಕೃಷ್ಣಮೂರ್ತಿ ಭಾಗವತರ್, ಪವನ್‌ಕುಮಾರ್ ಮಾನ್ವಿ<br>ಭಾಗೀರಥಿ ಬಾಯಿ ಕದಂ, ಕೆ. ಮಂಜುನಾಥಯ್ಯ, ಸರವು ಕೃಷ್ಣಭಟ್ (ಸ್ವೀಕರಿಸಿರುವುದಿಲ್ಲ).<br><br>**ರಂಗ ವಿಮರ್ಶಕರು ಪುರಸ್ಕಾರ** – ಎಂ.ಕೆ. ಭಾಸ್ಕರರಾವ್, ಶ್ರೀಕಂಠ ಗುಂಡಪ್ಪ,<br>ಹುಣಸವಾಡಿ ರಾಜನ್<br><br>**ರಂಗ ಪತ್ರಿಕೆ ಪುರಸ್ಕಾರ** – ರಂಗತೋರಣ ಸುದರ್ಶನ ದೇಸಾಯಿ,<br>ರಂಗವಾಣಿ ಜಿ. ಮಹಾದೇವಪ್ಪ<br><br>**ವಿಶೇಷ ಕೊಡುಗೆ** – ನಾಗರಾಜ್ ಕೋಟೆ, ನೀನಾಸಂ ಕೆ.ವಿ. ಸುಬ್ಬಣ್ಣ, ಕೆ.ಆರ್. ಪ್ರಕಾಶ್<br>ಸಿ. ಲಕ್ಷ್ಮಣ, ಶಿವಶಂಕರ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು, ಶ್ರೀಶೈಲ ಘೂಳಿ,<br><br>**ಗೌರವ ಪುರಸ್ಕಾರ** – ಉದ್ಯಾವರ ನಾಗೇಶ ಕುಮಾರ್<br><br>**ಪ್ರಶಸ್ತಿ** – ರಮಾನಂದ ಐನಕೈ, ಶ್ರೀಧರ್ ಹೆಗಡೆ ಹುಲಿಮನೆ, ಅಲ್ಲಮಪ್ರಭು ಬೆಟ್ಟದೂರ<br>ನರಸಣ್ಣ ಸೋನಾರ, ಎನ್.ಎಸ್. ದೇವಿಪ್ರಸಾದ್ ಸಂಪಾಜೆ, ಊ.ಮ. ಶಿವೇಸ್ವಾಮಿ,<br>ಡಿ.ಎಂ. ಮುನಿಶಾಮಪ್ಪ, ರಂಗಾರೆಡ್ಡಿ ಕೋಡಿರಾಂಪುರ, ಆರ್.ಎನ್. ಕುಲಕರ್ಣಿ,<br>ಈಶ್ವರಪ್ಪಾ ಫರಹತಾಬಾದ, ಅಯ್.ಎಸ್. ನವಲಿ, ಡಿ.ಎಸ್. ಕುಮಾರ,<br>ಕುಂಟೆಪ್ಪ ಮಾಸ್ತರ ಕೋಳ್ಳಿ, ರಾಚಣ್ಣಾ ಮಲ್ಲಣ್ಣಾ ಹುಗ್ಗಿ, ವಿಶ್ವನಾಥ ಮಾಸ್ತರ್ ಬೆಳಗುಂಪಿ,<br>ಬಣ್ಣದ ಬಸವರಾಜಪ್ಪ, ಮಹಾವೀರ್ ಜೈನ್, ಎಂ.ಬಿ. ಶಿವಪ್ಪ, ಜಿ.ಎಲ್. ರಾಮಪ್ಪ,<br>ಕುಪ್ಪೂರು ಕೃಷ್ಣಮೂರ್ತಿ, ಹೆಚ್.ಬಿ. ಸಿದ್ದಲಿಂಗಪ್ಪ, ಜನಾರ್ಧನ್ ಆಚಾರ್ಯ, | 413 |

| | | |
|---|---|---|
| | ರತ್ನಮಾಲಾ ಪುರಂದರ್, ರೋಹಿಣಿ ಜಯರಾಮ್, ಎ.ಕೆ. ವಿಜಯ್,<br>ಸುಕುಮಾರ್ ಕೆ. ಕಣ್ಣನ್, ಜಯಕುಮಾರ ಕೊಡಗನೂರು, ಕೆ. ವೀರಯ್ಯಸ್ವಾಮಿ,<br>ಎ. ಯಲ್ಲಪ್ಪ, ರಘುನಾಥ ಗುರುನಾಥ ನಾಡಿಗೇರ, ಎ. ರಾಜಲಕ್ಷ್ಮಿ, ವೀರಣ್ಣಾ ಕುರ್ಲಿ<br>ಶ್ರೀದೇವಿ ಜೋಶಿ, ಸುಲೋಚನಾ ಕೋಟೂರ, ಪಿ. ಗೋವಿಂದ್, ಕೆ. ಜಗದೀಶ್ ಬಳ್ಳಾರಿ,<br>ಆರ್. ಬದರಿನಾರಾಯಣ, ಮಹಾಲಿಂಗರಾಜ ಗವಾಯಿ, ವಿ.ಡಿ. ವೆಂಕನಗೌಡ,<br>ಕೆ. ಹೊನ್ನಮ್ಮ, ವಿಲಾಸಬಾಯಿ ಮಗೆಪ್ಪ ರಾಯಣ್ಣವರ, ಸುನಂದಾ ಕಂದಗಲ್ಲ,<br>ಡಾ. ಅಶೋಕ್ ಶೋಳನೂರ್, ಅಂಬಾದಾಸ ಜೋಶಿ, ಶಾಂತಪ್ಪ ದೇವರಾಯ,<br>ವೈಜನಾಥ ಬಿರಾದಾರ್, ಎನ್.ಎಸ್. ದಾನಿ, ನಾಗಿಣಿ ಭರಣ, ಎಚ್.ಎಸ್. ನೀಲಕಂಠ,<br>ಯು.ವಿ. ನಂಜಪ್ಪ, ಮೂರ್ತಿ ಬೆಂಗಳೂರ್ಕರ್, ಮೈನಾವತಿ, ಎಚ್.ಕೆ. ರಾಮಮೂರ್ತಿ,<br>ಜಿ.ಕೆ. ರಾಧಾ, ಜಿ.ಕೆ. ರುಕ್ಮಿಣಿ, ಎಂ.ಎನ್. ಲಕ್ಷ್ಮೀದೇವಿ, ಎಂ.ಜಿ. ವೆಂಕಟೇಶ್,<br>ಶೋಭಾ ಸತೀಶ್‌ಚಂದರ್, ಸಂಜಯ್ ಸೂರಿ, ಶಿರೀಷ ಜೋಶಿ, ಎಚ್.ವಿ. ಜಯರಾಂ,<br>ಕೆ. ಪ್ರಹ್ಲಾದ್‌ರಾವ್, ಪುಲಿವಾನ ರಾಮಲಿಂಗು, ಶಿಕ್ಕೇರಿ ಕೆ.ಜಿ. ನಾರಾಯಣ,<br>ಆರ್. ಜಯರಾಮು, ಪುಟ್ಟಯ್ಯ, ಕೆ.ಎನ್. ಬಸವರಾಜ್, ಮೋಹನ್ ದಾಸ್, ಬಿ.ಜಿ. ರಾವ್,<br>ವಿಜಯಾ ಸಿಂಧುವಳ್ಳಿ, ಶ್ರೀನಿವಾಸ ಭಟ್ (ಚೀನಿ), ಸಿ.ವಿ. ಶ್ರೀಧರಮೂರ್ತಿ,<br>ಬಿ. ಬಸವರಾಜ, ಬಸವರಾಜ ಪತ್ರಪ್ಪ ಯಮ್ಮಿ, ಕೆ.ಬಿ. ಕಪನೀಗೌಡ, ಕಾಗೋಡು ಅಣ್ಣಪ್ಪ,<br>ಜಿ.ಆರ್. ಕಲ್ಲಪ್ಪ ಹೊಸಮನಿ, ಗೇಣಿಗೆರೆ ರಂಗಪ್ಪದಾಸ್,<br>ಕರೀಂಸಾಬ ಪೀರಸಾಬ ಕೋಟಣ್ಣನವರ, ಕೆ.ಎನ್. ಜಾನ್ವೇಕರ್ | |
| **2007** | **ಗೌರವ ಪ್ರಶಸ್ತಿ** – ಕೆ.ಎಸ್. ಭಗವಾನ್<br><br>**ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿ** – ಶ್ರೀ ಶ್ರೀ ಕುಮಾರೇಶ್ವರ ಕೃಪಾ<br>ಪೋಷಿತ ಪಂಚಾಕ್ಷರಿ ಗವಾಯಿಗಳವರ ನಾಟ್ಯ ಸಂಘ, ಗದಗ,<br><br>**ಪ್ರಶಸ್ತಿ** – ಬಿ.ಎಸ್. ಮಂಜುಳಮ್ಮ, ಸದಾಶಿವ ಬ್ರಹ್ಮಾವರ್, ಮಡಿವಾಳರ ಬಾಳಪ್ಪ,<br>ಬಾಬು ಈರಪ್ಪ ಈಳಿಗೇರ, ಕೆ. ವೆಂಕಟರಾಜು, ಎನ್. ಗುಡ್ಡಪ್ಪ, ನಾ.ಸು., ನಾಗೇಶ್,<br>ಅಲ್ತಾಫ, ಪುಷ್ಪಮಾಲಾ ಎ. ಅಣ್ಣಿಗೇರಿ, ಜಯರಾಮ್ ತಾತಾಚಾರ್,<br>ರಾಜಮ್ಮ ಶ್ರೀಧರ ಹೆಗಡೆ, ಶಶಿಧರ್ ಭಾರಿಘಾಟ್, ಚಿಂದೋಡಿ ಶಂಭುಲಿಂಗಪ್ಪ,<br>ರಾಜೇಂದ್ರ ಕಾರಂತ, ಶಾಂತ ಭೀಮಸೇನರಾವ್<br><br>**ಸಿ.ಜಿ.ಕೆ. ಯುವರಂಗ ಪುರಸ್ಕಾರ** – ಶ್ರೀಪಾದ ಭಟ್, ಸುಜಾತ ಜಂಗಮಶೆಟ್ಟಿ,<br>ಕೆ.ಹೆಚ್. ಕುಮಾರ್, ಉಮೇಶ್ ತೆಂಕನಹಳ್ಳಿ<br><br>**ರಂಗಸಾಹಿತ್ಯ ಕೃತಿಗಳಿಗೆ ಅಕಾಡೆಮಿ ಬಹುಮಾನ** –<br>ಡಾ. ಗಣೇಶ್ ಅಮೀನಗಡ – ಪ್ರಯೋಗ ಪ್ರಸಂಗ (2004);<br>ಡಾ. ಎಸ್.ಎಂ. ಗಂಗಾಧರಯ್ಯ – ರಂಗ ಗಂಭೀರ (2005);<br>ಶ್ರೀ ಗುಡಿಹಳ್ಳಿ ನಾಗರಾಜ – ತೆರೆ ಸರಿದಾಗ (2006),<br>ಡಾ॥ ಜಯಪ್ರಕಾಶ್ ಮಾವಿನಕುಳಿ – ಬಾರೇ ಗೆಳತಿ ನಾಟಕ ನೋಡೋಣ (2006), | 465 |

| | | |
|---|---|---|
| **2008** | **ಜೀವಮಾನ ರಂಗಸಾಧನೆ ಪ್ರಶಸ್ತಿ** – ಬಿ.ಎಸ್. ಕೇಶವರಾವ್<br><br>**ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿ** – ಫಕೀರಪ್ಪ ವರವಿ<br><br>**ಪ್ರಶಸ್ತಿ** – ರಮಾನಂದ ಹಿರೇಜೇವರ್ಗಿ, ಶಿವಪ್ಪನಾಯ್ಕ, ಭಾರತಿ ಶಿರಹಟ್ಟಿ, ಪಿ. ವೆಂಕಟರಾಮಯ್ಯ, ಡಾ. ಕೆ.ಹೆಚ್. ಪಂಚಾಕ್ಷರಪ್ಪ, ಇಂದಿರಮ್ಮ, ಕೆ.ವಿ. ಶ್ರೀನಿವಾಸ ಪ್ರಭು, ಐ.ಕೆ. ಬೋಳುವಾರು, ಕಾಂತೇಶ ಕದರಮಂಡಲಗಿ, ಕನ್ನರ್ಪಾಡಿ ರಾಮಕೃಷ್ಣ, ಮೋಹನ್ ಸೋನ, ಮಂಜುನಾಥ ಹೆಗಡೆ, ಏಣಗಿ ನಟರಾಜ್, ಬಸವರಾಜ ಹೊಸಮನಿ, ಅರವಿಂದ ಪಾಟೀಲ.<br><br>**ರಂಗ ಕೃತಿಗೆ ಪುರಸ್ಕಾರ** – ವಿರೂಪಾಕ್ಷ ನಾಯಕ – ಜೀವನ ರಂಗಧಾರೆ (2007) | 479 |
| **2009** | **ಜೀವಮಾನ ರಂಗಸಾಧನೆ ಪ್ರಶಸ್ತಿ** – ಎಸ್.ಆರ್. ಶಂಕರರಾವ್<br><br>**ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿ** – ಲಕ್ಷ್ಮಣರಾವ್ ಮುತ್ತಂಗಿ<br><br>**ಪ್ರಶಸ್ತಿ** – ವೈ.ಎಮ್. ಪುಟ್ಟಣ್ಣಯ್ಯ, ಹೆಚ್. ಪಾಂಡುರಂಗಪ್ಪ, ಲಿಂಗರಾಜು ಪಲ್ಲೇದ, ಹನುಮಂತು, ಮಂಜುನಾಥ ಬೆಳಕೆರೆ, ಎನ್. ರವೀಂದ್ರ, ಜಯಮ್ಮ ಕಲ್ಲೂರು, ಡಾ. ಜಯಪ್ರಕಾಶ್ ಮಾವಿನಕುಳಿ, ಕಾಂತಾಬಾಯಿ ಡಿಗ್ಗಿ, ರಂಗಶ್ರೀ ಆರ್. ರಂಗಸ್ವಾಮಿ, ಪ್ರಕಾಶ್, ಹುಸೇನಪ್ಪ ಪುಲಮೇಶ್ವರ ದಿನ್ನಿ, ತಿರಕಪ್ಪ ವೀರಭದ್ರಪ್ಪ ಕಬಾಡಿ, ಪ್ರಕಾಶ್‌ರಾವ್ ಪಯ್ಯಾರ್, ಎಂ. ನಾಗರಾಜಾಚಾರ್<br><br>**ವಾರ್ಷಿಕ ಪುಸ್ತಕ ಪ್ರಶಸ್ತಿ** –<br>ರಾಜಶೇಖರ ಕದಂಬ – 108 ರಂಗಮುಖಗಳು ಒಂದು ರಂಗ ಚರಿತ್ರೆ<br>ಮಾರ್ತಾಂಡಪ್ಪ ಎಂ ಕತ್ತಿ – ರಂಗಭೂಮಿ ದಿಗ್ಗಜ ನಟಶೇಖರ ಪಂಡಿತ ಬಸವರಾಜ ಮನಸೂರ | 492 |
| **2010** | **ಜೀವಮಾನ ರಂಗಸಾಧನೆ ಪ್ರಶಸ್ತಿ** – ಶೋಭಾ ವೆಂಕಟೇಶ್<br><br>**ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿ** – ತಾವರೆಕೆರೆ ನಾಗರಾಜ್<br><br>**ಪ್ರಶಸ್ತಿ** – ವಸಂತಕೃಷ್ಣ, ಮಂಜುನಾಥ ಡಿ.ಎಸ್., ಬಿ. ಪರಶುರಾಂ, ಎಂ.ಎಂ. ಕೃಷ್ಣಮೂರ್ತಿ, ಜಿ.ಎನ್. ವಿರೂಪಾಕ್ಷಪ್ಪ, ತುಕಾರಾಂ ಏಣೇಕಲ್, ಶೃಂಗೇರಿ ರಾಮಣ್ಣ, ಜವರೇಗೌಡ, ಗುರುರಾಜ ಮಾರ್ಪಳ್ಳಿ, ಡಾ. ಭಾಸ್ಕರ್, ಡಿ.ಎಸ್. ಚೌಗಲೆ, ಅಮರಪ್ರಿಯ ಹಿರೇಮಠ, ವಜ್ರಕುಮಾರ ಕಿವುಡೆ, ಹುಲುಗಪ್ಪ ಕಟ್ಟಿಮನಿ, ರಾಮಚಂದ್ರ ಸೀತಾರಾಮ ಹೆಗಡೆ ಹಾರುಗಾರ<br><br>**ವಾರ್ಷಿಕ ಪುಸ್ತಕ ಪ್ರಶಸ್ತಿ** – ಬಸವರಾಜ ಬೆಂಗೇರಿ – ರಂಗ ನಟಸಾರ್ವಭೌಮ ಎನ್. ಬಸವರಾಜ ಆತ್ಮಕಥನ | 505 |

| | | |
|---|---|---|
| | **ವಾರ್ಷಿಕ ಪುಸ್ತಕ ಪ್ರಶಸ್ತಿ –**<br>ಪ್ರಕಾಶ ಗರುಡ – ಕಂಪನಿ ನಾಟಕ ಅರ್ಥಾತ್ ವೃತ್ತಿರಂಗಭೂಮಿ (2014)<br>ಗೋಪಾಲ ವಾಜಪೇಯಿ – ರಂಗದ ಒಳಗೆ – ಹೊರಗೆ (2015) | |
| **2016** | **ಜೀವಮಾನ ರಂಗಸಾಧನೆ ಪ್ರಶಸ್ತಿ** – *ಶ್ರೀ ಹಂಸಲೇಖ*<br><br>**ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿ** – ಆರ್. ಮಹದೇವಪ್ಪ<br><br>**ನಟರತ್ನ ಚಿಂದೋಡಿ ವೀರಪ್ಪ ದತ್ತಿ ಪುರಸ್ಕಾರ ಪ್ರಶಸ್ತಿ** – *ಬಿ. ಗಂಗಾಧರ್*<br><br>**ಪದ್ಮಶ್ರೀ ಚಿಂದೋಡಿಲೀಲಾ ದತ್ತಿ ಪುರಸ್ಕಾರ** – ಉಮಾ ರಾಣೆಬೆನ್ನೂರು<br><br>**ವಾರ್ಷಿಕ ಪ್ರಶಸ್ತಿ** – ರಾಮಕೃಷ್ಣ ಎಲ್., ವಿರುಪಾಕ್ಷರಾವ್ ಮೋರಿಗೇರಿ,<br>ಬಸವರಾಜ ಹೂಗಾರ, ಮಹಾಂತಯ್ಯಸ್ವಾಮಿ ಖಾನಾಪುರ,<br>ಹನುಮಂತಪ್ಪ ಆರ್. ನರಬೋಳಿ, ಅಶೋಕ ನೇಸರ್ಗಿ, ಸಿದ್ದಪ್ಪ ನಿಂಗಪ್ಪ ಗುಳ್ಳಿ<br>ಕೆ. ಭಾಗ್ಯಲಕ್ಷ್ಮೀ ರವಿಕುಮಾರ್, ಮಹದೇವಪ್ಪ ಹುಣಸ್ಯಾಳ, ಬೈರ್‍ನಳ್ಳಿ ಶಿವರಾಂ,<br>ಸಿ.ಬಿ. ಚೌಡಶೆಟ್ಟಿ, ಹೆಚ್.ಪಿ. ವೆಂಕಟೇಶ್, ಪಿ. ವಾಸುದೇವರಾವ್, ಲಕ್ಷ್ಮಣದಾಸ್,<br>ಚೇತನ್ ಪ್ರಸಾದ್ ಡಿ., ಕಮಲಮ್ಮಾ ಬೀಳಗಿ, ಆಂಜನೇಯ,<br>ಲಲಿತಾಬಾಯಿ ಅಣ್ಣಪ್ಪ ಸಣ್ಣಂಗಿ, ವಿಜಯಕಾಶಿ, ಛಾಯಾದೇವಿ ರೆಡ್ಡಿ,<br>ಪ್ರೇಮಾ ತಾಳಿಕೋಟಿ, ವೆಂಕಟೇಶ ಹೆಗಡೆ, ಆಲೆಮನೆ ಸುಂದರಮೂರ್ತಿ,<br>ಎ. ಭದ್ರಪ್ಪ, ಜಿ.ಎಂ. ಸಿದ್ದರಾಜು | 599 |



# ಮೈಸೂರು ರಾಜ್ಯ
# ಸಂಗೀತ ನಾಟಕ ಅಕಾಡೆಮಿ
# ಪ್ರಶಸ್ತಿ ಪುರಸ್ಕೃತರು

# 1959ರ ಪ್ರಶಸ್ತಿ ವಿಜೇತರು



## ಡಾ॥ ಗುಬ್ಬಿ ಎಚ್. ವೀರಣ್ಣ

ಕನ್ನಡ ರಂಗಭೂಮಿಯ ದಂತಕಥೆ ಗುಬ್ಬಿವೀರಣ್ಣ ಕನ್ನಡ ವೃತ್ತಿ ರಂಗಭೂಮಿಗೆ ರಾಷ್ಟ್ರೀಯ ಮಟ್ಟದಲ್ಲಿ ಪ್ರಖ್ಯಾತಿ ತಂದು ಕೊಟ್ಟ ಮಹಾನ್ ವ್ಯಕ್ತಿಯಾಗಿ, ನಟರಾಗಿ, ಸಂಘಟಕರಾಗಿ, ಕಂಪನಿಯ ಮಾಲೀಕರಾಗಿ ಗುಬ್ಬಿ ವೀರಣ್ಣಗಳಿಸಿದ ಖ್ಯಾತಿ ಎಂದೆಂದಿಗೂ ಚಿರಸ್ಥಾಯಿಯಾಗಿರುವಂತಹದ್ದು. ಇವರು ಮಾಡಿದ ಪ್ರಯೋಗಗಳು ಕನ್ನಡ ರಂಗಭೂಮಿಯ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂತಹದ್ದು. ಚಲನಚಿತ್ರ ರಂಗದಲ್ಲೂ ಹಲವು ಪ್ರಥಮಗಳ ಸಾಧನೆ ಮಾಡಿದ ಗುಬ್ಬಿವೀರಣ್ಣ ಕನ್ನಡ ರಂಗಭೂಮಿಯ ಮೇರು ಪ್ರತಿಭೆ. ಪ್ರಯೋಗಶೀಲರಾಗಿ ವೀರಣ್ಣನವರು ನಡೆಸಿದ ಬಾಳ್ವೆ, ಅದೇ ಒಂದು ರಂಗ ಇತಿಹಾಸ. ಈ ಇತಿಹಾಸದ ಪುಟ ಪುಟವೂ ಕುತೂಹಲಕರ; ಸಾಹಸಮಯ.

ಗುಬ್ಬಿ ವೀರಣ್ಣನವರು ಶ್ರೀಮಂತ ಮನೆತನದವರೇನಲ್ಲ, ಸಾಧಾರಣ ವರ್ಗದವರು. ಇವರ ತಂದೆ ಹಂಪಣ್ಣನವರು ಗುಬ್ಬಿಯಲ್ಲಿ ಕಬ್ಬಿಣದ ಅಂಗಡಿಯನ್ನು ಇಟ್ಟುಕೊಂಡು ವ್ಯಾಪಾರ ಮಾಡುತ್ತಿದ್ದರು. ತಾಯಿಯ ಹೆಸರು ರುದ್ರಾಂಬೆ. ಐದಾರು ವರ್ಷದವರಾಗಿದ್ದಾಗಲೇ ವೀರಣ್ಣನವರು ರಂಗಭೂಮಿಯನ್ನು ಪ್ರವೇಶಿಸಿದರು. ಅಂದರೆ ಶಾಲೆಗೆ ಹೋಗಬೇಕಾದ ವಯಸ್ಸಿನಲ್ಲಿ ನಾಟಕ ಶಾಲೆಗೆ, ಇದೊಂದು ಆಕಸ್ಮಿಕ.

ವೀರಣ್ಣನವರು ಕಿರು ವಯಸ್ಸಿನಲ್ಲೇ ಸೇರಿದ ಸಂಸ್ಥೆಯ ಪೂರ್ಣ ಹೆಸರು 'ಶ್ರೀ ಚೆನ್ನಬಸವೇಶ್ವರ ಸ್ವಾಮಿ ಕೃಪಾಪೋಷಿತ ನಾಟಕ ಸಂಘ' ಎಂದು. ಈ ನಾಟಕ ಮಂಡಲಿ ಕಳೆದ ಶತಮಾನದ 1884ರಲ್ಲಿ ಆರಂಭವಾಯಿತೆಂದು ತಿಳಿದು ಬಂದಿದೆ. ಪರಿಸ್ಥಿತಿಗೆ ಅನುಗುಣವಾಗಿ ವ್ಯವಸ್ಥಾಪಕ ಚಂದಣ್ಣನವರೇ ಕಂಪನಿಯ ಒಡೆಯರಾಗಿದ್ದರು. ವೀರಣ್ಣನವರಿಗೆ ಆಗ ಹದಿನೈದು ವಯಸ್ಸಿನ ತಾರುಣ್ಯ, ಕಂಠ ಒಡೆಯುವ ಪಾತ್ರಗಳಿಗೆ ಸಜ್ಜಾಗಿದ್ದರು. ವಿದ್ವಾನ್ ದಾನಪ್ಪನವರು ಇವರಿಗೆ ಪಾಠ ಹೇಳಿ ಕಲಿಸಿದ್ದರು. ಪುಟ್ಟಣ್ಣಯ್ಯನವರು ಸಂಗೀತ ಪಾಠವನ್ನು, ತಬಲಾ ವಾದನವನ್ನು ಹೇಳಿಕೊಟ್ಟಿದ್ದರು. ಆಗಿನ ನಾಟಕಗಳಲ್ಲಿ ಪುರುಷರೇ ಸ್ತ್ರೀ ಪಾತ್ರಗಳನ್ನು ನಿರ್ವಹಿಸುತ್ತಿದ್ದರು. 1903ರಲ್ಲಿ ಗುಬ್ಬಿ ಕಂಪನಿಗೆ ಮೊದಲ ಬಾರಿಯಾಗಿ ಕಲಾವಿದೆಯರ ಪ್ರವೇಶವಾಯಿತು.

ರಂಗ ಪ್ರಪಂಚದಲ್ಲಿ ವೀರಣ್ಣನವರ ಶುಭೋದಯಕ್ಕೆ 'ಸದಾರಮೆ' ನಾಟಕದ 'ಕಳ್ಳ'ನ ಪಾತ್ರವೇ ನಾಂದಿ. ಮೊದಲ ಬಾರಿಗೆ ಈ ಪಾತ್ರ ಇವರ ಪಾಲಿಗೆ ಬಂದ ಸಂದರ್ಭ ಕೇವಲ ಆಕಸ್ಮಿಕದ್ದು. 'ಸದಾರಮೆ' ನಾಟಕದ ಕಳ್ಳನ ಪಾತ್ರಧಾರಿ ಹಾಸ್ಯ ನಟ ಸುಬ್ಬಯ್ಯ ಬರಲಿಲ್ಲ. ಮಾಲೀಕರು ಅದನ್ನು ಬೇರೆಯವರಿಂದ ಮಾಡಿಸಿದರು ಸರಿಹೋಗಲಿಲ್ಲ. ಆಗ ವೀರಣ್ಣನವರು ತಾವೇ ಮಾಲೀಕರ ಮುಂದೆ ಹಾಜರಾಗಿ ಆ ಪಾತ್ರವನ್ನು ಚೆನ್ನಾಗಿ ನಿರ್ವಹಿಸುವ ಭರವಸೆ ವ್ಯಕ್ತಪಡಿಸಿದರು. ಚಂದಣ್ಣನವರು ಒಪ್ಪಿದರು. ಅಂದು ರಾತ್ರಿ ವೀರಣ್ಣನವರು ಆ ಪಾತ್ರವನ್ನು ಅಮೋಘವಾಗಿ ಅಭಿನಯಿಸಿದರು. ಇವರ ಹಾಸ್ಯ ಚಟಾಕಿಗಳಿಗೆ ಪ್ರೇಕ್ಷಕರು ಬಿದ್ದು ಬಿದ್ದು ನಕ್ಕರು. ಸಹ ಕಲಾವಿದರು, ಯಜಮಾನರು ಸಹ ಈ ಪಾತ್ರವನ್ನು ಮೆಚ್ಚಿಕೊಂಡರು. 'ವೀರಣ್ಣ ಚೆನ್ನಾಗಿ ವೇಷ ಮಾಡ್ದಿ, ನಾಳೆಯಿಂದ ಸದಾರಾಮೇಲಿ ನೀನೇ ಖಾಯಂ ಕಳ್ಳ' – ಎಂದು ಮಾಲೀಕರು ಅಣತಿ ಮಾಡಿದ್ದೇ ಅಲ್ಲದೆ ಬಡ್ತಿಕೊಟ್ಟು ಅವರ ಸಂಬಳವನ್ನು ಎಂಟು ರೂ.ಗಳಿಂದ ಹದಿನೈದಕ್ಕೆ ಏರಿಸಿದರು. ಅಂದಿನಿಂದ ವೀರಣ್ಣನವರು ಗುಬ್ಬಿ ಕಂಪನಿ ಸದಾರಮೆಯ ಖಾಯಂ ಕಳ್ಳ ಪಾತ್ರಧಾರಿಯಾದರು.

ಸದಾರಮೆ ನಾಟಕದಲ್ಲಿ ವೀರಣ್ಣನವರು ಶೆಟ್ಟರ ಹುಡುಗ ಆದಿಮೂರ್ತಿ; ಜಟಕಾ ಸಾಬು; ಮತ್ತು ಕಳ್ಳ – ಈ ಮೂರು ಪಾತ್ರಗಳನ್ನೂ ದಿವ್ಯವಾಗಿ ಅಭಿನಯಿಸುತ್ತಿದ್ದರು. ಕಳ್ಳನ ಜತೆ 'ಸದಾರಮೆ'ಯಾಗಿ ಅವರ ತಾರಾ ಪತ್ನಿ ಬಿ. ಜಯಮ್ಮ ಆ ನಾಟಕವನ್ನು ಸಜೀವಗೊಳಿಸಿದ್ದರು.

ಆಗಿನ ಗುಬ್ಬಿ ಕಂಪನಿಯ ಒಡೆಯ ಚಂದಣ್ಣನವರು 1917ರಲ್ಲಿ ನಿಧನರಾದರು. ಅನಂತರದಲ್ಲಿ ವೀರಣ್ಣನವರು ಸಂಸ್ಥೆಯ ಏಕೈಕ ಒಡೆಯರಾದರು. ಅಂದಿನಿಂದ ಇದು 'ಶ್ರೀ ಗುಬ್ಬಿ ಚನ್ನಬಸವೇಶ್ವರ ಸ್ವಾಮಿ ನಾಟಕ' ಸಂಘವಾಯಿತು. ಗುಬ್ಬಿ ಕಂಪನಿ, ಗುಬ್ಬಿ ವೀರಣ್ಣ ಎಂದು ಜನಜನಿತವಾಯಿತು.

ಚತುರ ವೀರಣ್ಣನವರಿಗೆ ಅಪಾರ ವ್ಯವಹಾರ ಜ್ಞಾನ, ಚಾಣಾಕ್ಷ ದೃಷ್ಟಿ, ಆಡಳಿತ ಪರಿಜ್ಞಾನ ಕರತಲಾಮಲಕ. ಕನ್ನಡ ರಂಗಭೂಮಿಯಲ್ಲಿ ವೀರಣ್ಣನವರಷ್ಟು ಪ್ರಯೋಗಶೀಲರು ಮತ್ತೊಬ್ಬರಿಲ್ಲ. ನಾಟಕದ ನೈಜತೆಗಾಗಿ ಅವರು ರಂಗಸಜ್ಜಿಕೆ ನಿರ್ಮಾಣಕ್ಕೆ ಅಪಾರ ಹಣ ಸುರಿಯುತ್ತಿದ್ದರು.

ಬೆಳ್ಳಾವೆ ನರಹರಿ ಶಾಸ್ತ್ರಿಗಳು ಮತ್ತು ಬಿ. ಪುಟ್ಟಸ್ವಾಮಯ್ಯನವರು ಗುಬ್ಬಿ ಕಂಪನಿಯ ಆಸ್ಥಾನ ಕವಿಗಳೆಂದೇ ಕರೆಯಬಹುದು. ನರಹರಿಶಾಸ್ತ್ರಿಗಳ 'ಕೃಷ್ಣ ಲೀಲಾ' ನಾಟಕ; ಪುಟ್ಟಸ್ವಾಮಯ್ಯನವರ 'ಕುರುಕ್ಷೇತ್ರ' ಮತ್ತು 'ದಶಾವತಾರ' ನಾಟಕಗಳು ಗುಬ್ಬಿ ಕಂಪನಿಗೆ ಕೋಡು ಮೂಡಿಸಿದವು; ಕಬ್ಬಿಣ ಪೆಟ್ಟಿಗೆಯನ್ನು ತುಂಬಿಸಿದವು.

ಕಲಾವಿದನೂ ಆದ ನಾಟಕ ಕಂಪನಿ ಮಾಲೀಕ ನಾವು ಅಭಿನಯಿಸುವ ನಾಟಕಗಳಲ್ಲಿ ನಾಯಕನ ಪಾತ್ರವನ್ನೇ ಬಯಸುವುದು, ವಹಿಸುವುದು ಸ್ವಾಭಾವಿಕ ಮಾತ್ರವಲ್ಲ, ನಡೆದು ಬಂದಿರುವ ರೂಢಿ. ಆದರೆ ವೀರಣ್ಣನವರು ಇದಕ್ಕೆ ಅಪವಾದವಾಗಿದ್ದರು. ಹಾಸ್ಯ ಪಾತ್ರವೇ ಅಲ್ಲದೆ ಎಂತಹ ಗಂಭೀರ ಪಾತ್ರವನ್ನು ನಿರ್ವಹಿಸಬಲ್ಲ ಕಲಾ ತಪಸ್ವಿ ವೀರಣ್ಣನವರು ತಮ್ಮ ಪ್ರವೃತ್ತಿಗೆ ಸಲ್ಲದ ದೊಡ್ಡ ಪಾತ್ರಗಳನ್ನು ಮಾಡುತ್ತಲೇ ಇರಲಿಲ್ಲ. ಲಕ್ಷಾಂತರ ರೂ.ಗಳನ್ನು ಹಾಕಿ ಭವ್ಯ ರಂಗಸಜ್ಜಿಕೆಗಳಿಂದ ನಾಡನ್ನೇ ದಂಗುಬಡಿಸಿದ 'ದಶಾವತಾರ' ನಾಟಕದಲ್ಲಿ ಅವರು ವಹಿಸುತ್ತಿದ್ದುದು 'ಹಾವಾಡಿಗ' ಸಣ್ಣ ಪಾತ್ರ ಮಾತ್ರ.

1931ರಲ್ಲಿ ಸುಮಾರು ಒಂದು ಲಕ್ಷ ರೂ. ವೆಚ್ಚದಲ್ಲಿ ರಂಗಸಜ್ಜಿಕೆ ಅಳವಡಿಸಿ 'ಕುರುಕ್ಷೇತ್ರ' ನಾಟಕವನ್ನು ಸಿದ್ಧಪಡಿಸುವ ವೀರಣ್ಣನವರು ಆ ನಾಟಕದಲ್ಲಿ ದುರ್ಯೋಧನನ ಪಾತ್ರವನ್ನು ತುಂಬಾ ಅಟ್ಟಹಾಸದಿಂದ ನಿರ್ವಹಿಸುತ್ತಿದ್ದರು. ಆ ಕಾಲದಲ್ಲಿಯೇ ಈ ನಾಟಕ ಚಲನಚಿತ್ರಕ್ಕೂ ಮೀರಿದ ತಾಂತ್ರಿಕತೆ ಹೊಂದಿತ್ತು. ದೃಶ್ಯ ದೃಶ್ಯದ ನಡುವೆ ಕ್ಷಣಾರ್ಧವೂ ವಿಳಂಬವಿಲ್ಲ. ಬೆಂಗಳೂರಿನ ಶಿವಾನಂದ ಥಿಯೇಟರಿನಲ್ಲಿ ನೂರು ಪ್ರದರ್ಶನದ ಕೀರ್ತಿ ಕುರುಕ್ಷೇತ್ರದ್ದು.

ಗುಬ್ಬಿ ಕಂಪನಿಯ 'ಕುರುಕ್ಷೇತ್ರ' ನಾಟಕ ರಂಗ ಇತಿಹಾಸದಲ್ಲೊಂದು ಮೈಲಿಕಲ್ಲು. ಈ ನಾಟಕದಲ್ಲಿ ಮಹಾಭಾರತವನ್ನು ಪರಿಣಾಮಕಾರಿಯಾಗಿ ಮೂಡಿಸಲು ವೀರಣ್ಣನವರು ರಂಗದ ಮೇಲೆ ಆನೆ, ಕುದುರೆ, ಜಿಂಕೆ, ನವಿಲು, ಪಾರವಾಳಗಳಿಂದಲೂ ಪಾರ್ಟ್ ಮಾಡಿಸುತ್ತಿದ್ದರು. ಅಂತಹ ಚತುರ, ಸಾಹಸಿ, ಪ್ರಯೋಗಶೀಲ ಆತ. 'ಲವ–ಕುಶ' ನಾಟಕಕ್ಕೂ ಅವರು ಹೀಗೆಯೆ ವೆಚ್ಚಮಾಡಿ ರಂಗವನ್ನು ಸಿಂಗರಿಸಿದರು.

ಹುಟ್ಟು ಕಲಾವಿದರಾದ ಅವರ 'ಸದಾರಮೆ'ಯ ಆದಿಮೂರ್ತಿ, ಸಾಬಿ, ಕಳ್ಳ, 'ಪಾಂಡವ ವಿಜಯ'ದ ಉತ್ತರ ಕುಮಾರ, 'ಕೃಷ್ಣಲೀಲೆ ಮತ್ತು 'ರುಕ್ಮಿಣಿ ಸ್ವಯಂವರ'ದ ಮಕರಂದ, ಕಬೀರದಾಸನ ಶೆಟ್ಟಿ, 'ಪಾಂಡವ ವಿಜಯ'ದ ಪಿಟೀಲುಗಾರ, 'ಸ್ವಾಮಿ ನಿಷ್ಠೆ'ಯ ಕಾಸೀಮ ಸಾಬಿ, 'ಪ್ರಹ್ಲಾದ ಚರಿತ್ರೆ'ಯ ಸಾಬು, ಪ್ರಭಾಮಣಿ ವಿಜಯ'ದ ವಿರೋಚನ, 'ಕುರುಕ್ಷೇತ್ರ'ದ ದುರ್ಯೋಧನ, 'ದಶಾವತಾರ'ದ ಹಾವಾಡಿಗ – ಈ ಎಲ್ಲ ಪಾತ್ರಗಳು ಕನ್ನಡ ರಸಿಕರನ್ನು ರಂಜಿಸಿವೆ.

ವೀರಣ್ಣನವರು ನಾಟಕ ಪ್ರಪಂಚದಲ್ಲಿ ಮಾತ್ರವಲ್ಲದೆ ಚಲನಚಿತ್ರ ರಂಗದಲ್ಲಿಯೂ ಹೆಸರಾದವರು. 'ಮೂಕಿ' ಚಿತ್ರಗಳ ಕಾಲದಿಂದಲೂ ಅವರಿಗೆ ಚಿತ್ರರಂಗದ ನಂಟು.

1931ರಲ್ಲಿ ವೀರಣ್ಣನವರು ಖ್ಯಾತ ಸಾಹಿತಿ ದೇವುಡು ನರಸಿಂಹಶಾಸ್ತ್ರಿಗಳ ಜತೆಗೂಡಿ 'ಹಿಸ್ ಲವ್ ಅಫೇರ್' ಎಂಬ ಸೈಲೆಂಟ್ ಚಿತ್ರವನ್ನು ನಿರ್ಮಿಸಿದರಲ್ಲದೆ ಅದರಲ್ಲಿ ಪಾತ್ರವನ್ನೂ ವಹಿಸಿದ್ದರು. ಸದಾರಮೆ, ಸುಭದ್ರಾ, ಜೀವನ ನಾಟಕ, ಗುಣಸಾಗರಿ, ಹೇಮರೆಡ್ಡಿ ಮಲ್ಲಮ್ಮ ಮೊದಲಾದ ಚಿತ್ರಗಳನ್ನು ತಯಾರಿಸಿದರು. ಪಾತ್ರವಹಿಸಿ ಚಿತ್ರ ನಟರಾಗಿಯೂ ಮೆರೆದರು.

ಅರಮನೆ, ಗುರುಮನೆಗಳಲ್ಲಿಯೂ ಮಾನ್ಯ; ಸನ್ಮಾನಿತ. ಪ್ರಜೆ–ಪ್ರಭುತ್ವಗಳಿಂದಲೂ ಮೆಚ್ಚುಗೆ. ರಾಷ್ಟ್ರ ಪ್ರಶಸ್ತಿ ವಿಜೇತ. ವಿನೋದ ರತ್ನಾಕರ, ನಾಟಕ ರತ್ನ, ನಾಟ್ಯಕಲಾ ಪ್ರವೀಣ, ನಾಟಕ ಮಣಿ, ನಾಟಕ ಕಲಾ ನಿಪುಣ, ವರ್ಸಟೈಲ್ ಕಮೆಡಿಯನ್ – ಹಲವಾರು ಬಿರುದುಗಳು, ನೂರಾರು ಬಿನ್ನವತ್ತಳೆಗಳು, ಸನ್ಮಾನಗಳ ಸುರಿಮಳೆ. ಸಾರ್ಥಕ ಬದುಕು – ಸಾರ್ಥಕ ಜೀವನ.

1959ರಲ್ಲಿ ಮೈಸೂರು ಸರ್ಕಾರ, ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿಯ ಮೊದಲ ಪ್ರಶಸ್ತಿಯನ್ನು ಗುಬ್ಬಿ ವೀರಣ್ಣನವರಿಗೆ ನೀಡಿ ಗೌರವಿಸಿದೆ. ಇವರಿಗೆ ನೂರಾರು ಮಂದಿ ಶಿಷ್ಯರು; ಏಕಲವ್ಯರೂ ಬಹಳ ಈ ದ್ರೋಣಾಚಾರ್ಯರಿಗೆ.

ಗುಬ್ಬಿ ಕಂಪನಿ – ಗುಬ್ಬಿ ವೀರಣ್ಣ ಈ ಎರಡೂ ಹೆಸರೂ ರಂಗಭೂಮಿಯ ಕ್ಷೇತ್ರದ ಶಿಲಾಶಾಸನ ಈ ನಾಡಿನಲ್ಲಿ.

## ಅಕಾಡೆಮಿ ಪ್ರಶಸ್ತಿ

ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿಯವರು ವಿನೋದರತ್ನಾಕರ,
ವರ್ಸಟೈಲ್ ಕಮೆಡಿಯನ್, ನಾಟಕರತ್ನ ಇತ್ಯಾದಿ ಬಿರುದಾಂಕಿತರಾದ
ಶ್ರೀ ಗುಬ್ಬಿ ಎಚ್. ವೀರಣ್ಣನವರಿಗೆ ಮೈಸೂರು ರಾಜ್ಯದ
ಮುಖ್ಯಮಂತ್ರಿ, ಶ್ರೀ ಬಿ. ಡಿ. ಜತ್ತಿಯವರ ಘನ
ಅಧ್ಯಕ್ಷತೆಯಲ್ಲಿ ಸಮರ್ಪಿಸಿದ ಪ್ರಶಸ್ತಿ
ಪತ್ರಿಕೆ

ಸ್ವಾಮಿ,

ಕರ್ನಾಟಕದ ನಟವರರಲ್ಲೆಲ್ಲಾ ನಾಟಕ ಸಂಪ್ರದಾಯವನ್ನು ಶಾಸ್ತ್ರೀಯವಾಗಿ ಪೋಷಿಸಿಕೊಂಡು ಬಂದಿರುವುದರಲ್ಲೂ ಏಕಮೇವಾದ್ವಿತೀಯರಾದ ನಾಟಕರತ್ನ ಶ್ರೀ ಜಿ. ಎಚ್. ವೀರಣ್ಣನವರಿಗೆ ಪ್ರಶಸ್ತಿ ಪತ್ರಿಕೆಯನ್ನು ಸಲ್ಲಿಸಲು ಅಧ್ಯಕ್ಷರ ಅನುಮತಿಯನ್ನು ಕೋರುತ್ತೇನೆ.

ಕೇವಲ ಬಾಲ್ಯದಲ್ಲೇ ರಂಗಭೂಮಿಯನ್ನು ಹತ್ತಿದ ಶ್ರೀ ವೀರಣ್ಣನವರು ಸ್ತ್ರೀ ಪಾತ್ರಗಳೇ ಮುಂತಾಗಿ ವಿವಿಧ ಪಾತ್ರಗಳನ್ನು ನಿರ್ವಹಿಸಿ, ಕಡೆಗೆ ತಮ್ಮ ನಟನ ವೈಶಿಷ್ಟ್ಯವನ್ನು ಹೊರ ಹೊಮ್ಮಿಸಿದ ವಿದೂಷಕ ಪಾತ್ರಗಳಲ್ಲಿ ಅಗಾಧ ಖ್ಯಾತಿಯನ್ನು ಸಂಪಾದಿಸಿದ್ದಾರೆ ಮತ್ತು ಜನಪ್ರಿಯತೆ, ವ್ಯವಹಾರಕೌಶಲಗಳಿಂದ ಹಾಳು ಸೇರಿದ ನಾಟಕ ಸಂಸ್ಥೆಯ ಒಡೆಯರಾಗಿ ಅದನ್ನು ಮುನ್ನಡೆಸಿಕೊಂಡು ಬಂದಿದ್ದಾರೆ. ಅರವತ್ತೊಂಬತ್ತರ ವಯಸ್ಸಿನಲ್ಲಿಯೂ ಶ್ರೀ ವೀರಣ್ಣನವರ ಅಭಿನಯ ಕೌಶಲವೂ ಪ್ರತಿಭೆಯೂ ಅಕ್ಷಯವಾದ ಊಟೆಯಿದೆ, ಅನುಭವಪರಿಪೂರ್ಣವಾಗಿದೆ.

ನಾಟಕರತ್ನ ಶ್ರೀ ವೀರಣ್ಣನವರು ತಮ್ಮ ಅಭಿನಯ ಪ್ರಾವೀಣ್ಯವನ್ನು ಬೆಳೆಸಿಕೊಂಡಂತೆ, ತಮ್ಮ ನಾಟಕ ಸಂಸ್ಥೆಯನ್ನು ಬೆಳೆಸಿಕೊಂಡು ಬಂದಿದ್ದಾರೆ, ಹೆಚ್ಚು ಹೆಚ್ಚು ಜನವಲ್ಲಭರಾಗಿದ್ದಾರೆ. ಬೆಂಗಳೂರು ಸಾರ್ವಜನಿಕರು ವಿನೋದರತ್ನಾಕರ ಎಂಬ ಬಿರುದನ್ನೂ, ಶ್ರೀಮನ್ ಮಹಾರಾಜರು ವರ್ಸಟೈಲ್ ಕಮೆಡಿಯನ್ ಮತ್ತು ನಾಟಕ ರತ್ನ ಎಂಬ ಬಿರುದುಗಳನ್ನೂ ಶ್ರೀ ವೀರಣ್ಣನವರಿಗೆ ದಯಪಾಲಿಸಿದ್ದಾರೆ. ಕೇಂದ್ರ ಸಂಗೀತ ನಾಟಕ ಅಕಾಡೆಮಿಯವರು ರಾಷ್ಟ್ರ ಪ್ರಶಸ್ತಿಯನ್ನು ನೀಡಿದ್ದಾರೆ.

ಕನ್ನಡ ನಾಡಿನಲ್ಲೂ ಹೊರಗಡೆಯೂ ತಮ್ಮ ನಾಟಕ ಮಂಡಲಿಯನ್ನು ಕೊಂಡೊಯ್ದು ಕನ್ನಡ ನಾಟಕ ಕಲೆಯ ಹಿರಿಮೆಯನ್ನೂ ನಟನ ವೈಭವದ ಔನ್ನತ್ಯವನ್ನೂ ಸಾರಿ ಕನ್ನಡ ನಾಡಿಗೆ ಭೂಷಣರಾದಂಥ ಶ್ರೀ ಜಿ. ಎಚ್. ವೀರಣ್ಣನವರನ್ನು ಯಥಾಶಕ್ತಿ ಆದರಿಸಿ ಸತ್ಕರಿಸುವ ಸೌಭಾಗ್ಯವು ಇವತ್ತು ನಮಗೆ ಲಭ್ಯವಾಗಿರುವುದು ನಮಗೆಲ್ಲಾ ಧನ್ಯತೆಯ ವಿಷಯವಾಗಿದೆ. ಶ್ರೀ ವೀರಣ್ಣನವರಿಗೆ ನಮ್ಮ ಗೌರವದ ಸಂಕೇತವಾಗಿ ಈ ಶಾಲು ಜೋಡಿಯನ್ನೂ ಈ ನಟರಾಜವಿಗ್ರಹವನ್ನೂ ಸಮರ್ಪಿಸುವಂತೆ ತಮ್ಮನ್ನೂ, ಅದನ್ನು ಅಂಗೀಕರಿಸಿ ನಮ್ಮ ಮನಸ್ಸಂತೋಷಪಡಿಸುವಂತೆ ಶ್ರೀ ವೀರಣ್ಣನವರನ್ನೂ ಪ್ರಾರ್ಥಿಸಿಕೊಳ್ಳುತ್ತೇನೆ.

ಬೆಂಗಳೂರು
೧೬-೪-೧೯೫೯

ಇತಿ, ಮೈಸೂರು ರಾಜ್ಯದ ಸಂಗೀತ ನಾಟಕ
ಅಕಾಡೆಮಿಯ ಸದಸ್ಯರ ಪರವಾಗಿ ಅಧ್ಯಕ್ಷರ
ಕೋರಿಕೆ

# 1960ರ ಪ್ರಶಸ್ತಿ ವಿಜೇತರು



## ಎಂ.ವಿ. ಸುಬ್ಬಯ್ಯನಾಯ್ಡು

ಕನ್ನಡ ರಂಗಭೂಮಿ ಹಾಗೂ ಚಲನಚಿತ್ರ ರಂಗದ ಅಭಿಜಾತ ಕಲಾವಿದ ಎಂ. ವಿ. ಸುಬ್ಬಯ್ಯನಾಯ್ಡು, ಕನ್ನಡ ಚಲನಚಿತ್ರ ರಂಗದ ಮೊದಲ ನಾಯಕ ನಟ.

ನಾಟಕಗಳಲ್ಲಿ ರಾಜನಾಗಿ ಪಾತ್ರವಹಿಸಿ ಸಾವಿರಾರು ಕಲಾಭಿಮಾನಿಗಳನ್ನು ತಣಿಸುತ್ತಿದ್ದ ನಾಯ್ಡು ಜನ್ಮತಾಳಿದ್ದು ಒಂದು ಬಡಸಂಸಾರದಲ್ಲಿ 1896ರಲ್ಲಿ, ಮೈಸೂರು ಜಿಲ್ಲೆಯ ಮಾದಲಾಪುರವೆಂಬ ಸಣ್ಣ ಹಳ್ಳಿಯಲ್ಲಿ. ತಂದೆ ವೆಂಕಟಸ್ವಾಮಪ್ಪ, ತಾಯಿ ಸುಬೇದಾರ್ ಸುಬ್ಬಣ್ಣ ಅವರ ಪುತ್ರಿ ಶ್ರೀಮತಿ ರಂಗಮ್ಮ. ನಾಯ್ಡು ತಂದೆಗೆ ಒಂಭತ್ತನೆಯ ಸಂತಾನ.

ಎರಡೂವರೆ ವರ್ಷದಲ್ಲೇ ತಂದೆ ಸ್ವರ್ಗಸ್ಥರಾದರು. ಜೀವನ ನಿರ್ವಹಣೆಗಾಗಿ ಹೆಗ್ಗಡೆ ದೇವನಕೋಟೆಯಲ್ಲಿದ್ದ ತಮ್ಮ ಸೋದರನ ಮನೆಗೆ ಮಗನೊಂದಿಗೆ ರಂಗಮ್ಮ ಹೋದರು. ಏಳು ವರ್ಷದ ಬಾಲಕ ಸುಬ್ಬಯ್ಯ ನಾಯ್ಡು ಪಾಲಿಗೆ ಎಮ್ಮೆ ಕಾಯುವ ಕೆಲಸ ಬಂದಿತು. ದಿನವೂ ಎಮ್ಮೆಯನ್ನು ಹೊಡೆದುಕೊಂಡು ಹೋಗುವಾಗ 'ಭಕ್ತಪ್ರಹ್ಲಾದ' ಬಯಲುನಾಟಕವನ್ನು ಅಭ್ಯಾಸ ಮಾಡುತ್ತಿದ್ದರು. ಎಷ್ಟೋ ಬಾರಿ ಅಭ್ಯಾಸವನ್ನು ನೋಡುತ್ತಾ ಮೈಮರೆಯುತ್ತಿದ್ದರು. ಈ ಬಯಲುನಾಟಕ ತಂಡದವರು ನಾಟಕವನ್ನು ಇನ್ನೇನು ಪ್ರದರ್ಶಿಸಬೇಕು ಎನ್ನುವ ವೇಳೆಯಲ್ಲಿ ಪ್ರಹ್ಲಾದನ ಪಾತ್ರವಹಿಸಬೇಕಾಗಿದ್ದ ನಟ ಅನಿರೀಕ್ಷಿತವಾಗಿ ಕಾಯಿಲೆಗೆ ತುತ್ತಾಗಿ ಹಾಸಿಗೆ ಹಿಡಿದ, ನಾಟಕ ವ್ಯವಸ್ಥಾಪಕನಿಗೆ ತಟ್ಟನೆ ಅಭ್ಯಾಸದಲ್ಲಿ ತನ್ಮಯನಾಗುತ್ತಿದ್ದ ಬಾಲಕ ನಾಯ್ಡು ನೆನಪಾದ. ಪ್ರಹ್ಲಾದನ ಪಾತ್ರವಹಿಸಲು ಅವಕಾಶ ಕಲ್ಪಿಸಿದರು. ಧೈರ್ಯವಾಗಿ ಪಾತ್ರ ನಿರ್ವಹಿಸಿ ಪ್ರೇಕ್ಷಕರ ಶಹಭಾಷ್‌ಗಿರಿಗೆ ಪಾತ್ರರಾದರು.

ಸೋದರಮಾವನ ಮನೆಯನ್ನು ಬಿಟ್ಟು ತಾಯಿಯೊಂದಿಗೆ ಮೈಸೂರಿಗೆ ಬಂದು ನೆಲೆಸಿದ ನಾಯ್ಡುರವರು ಜೀವನಕ್ಕಾಗಿ ಮಂಡಿ ಕೆಲಸಕ್ಕೆ ಸೇರಿದರು. ಮಂಡಿ ಕೆಲಸದ ಜೊತೆಗೆ ಮರ ಕೊಯ್ಯುವ ಕಾಯಕವನ್ನು ಕೈಗೊಂಡರು. ದಿನವೂ ಮರ ಕೊಯ್ಯುವ ಸ್ಥಳಕ್ಕೆ ಹಾವಿದ್ದ ವಾಲಗದ ಬೀದಿಯಿಂದ ಹೋಗುತ್ತಿದ್ದ ಅವರಿಗೆ ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ಎಂ.ವಿ. ಮಾದಪ್ಪನವರ ಮನೆಯ ಮುಂದೆಯೇ ಹೋಗಬೇಕಿತ್ತು. ಪಾಠಕಲಿಯುತ್ತಿದ್ದ ಹುಡುಗರನ್ನು ನೋಡಿ ಹಾಸ್ತೋತ್ಕವಾಗಿ ಸಂಗೀತ ಕಲಿಯುವ ಗೀಳು ಉಂಟಾಯಿತು. ಮಾದಪ್ಪನವರನ್ನು ಭೇಟಿಮಾಡಿ ತಮ್ಮ ಮನದಳಲನ್ನು ತೋಡಿಕೊಂಡರು. ಸಂಗೀತ ಶಿಕ್ಷಣ ಪ್ರಾರಂಭವಾಯಿತು. ಹಲವಾರು ವರ್ಷಗಳ ಕಾಲ ಸತತವಾಗಿ ವಿದ್ಯೆಯನ್ನು ಧಾರೆಯೆರೆದು ಆಶೀರ್ವದಿಸಿದರಲ್ಲದೆ ನಾಟಕ ಕಲೆಯಲ್ಲಿ ಮಾರ್ಗದರ್ಶಕರೂ ಆದರು. ಸಂಸ್ಕಾರವಂತನಾದ ತಮ್ಮ ಶಿಷ್ಯ ನಾಯ್ಡುವಿಗೆ ಅಭಿನಯ ಕಲೆ ಸುಲಭವಾಗಿ ಒಲಿಯುತ್ತದೆ ಎಂಬುದನ್ನು ಸೂಕ್ಷ್ಮವಾಗಿ ಗ್ರಹಿಸಿದ ಮಾದಪ್ಪನವರು ಸುಪ್ತವಾಗಿದ್ದ ಕಲೆಯ ವಿಕಾಸಕ್ಕೆ ನೆರವಾಗಲು ಗಿರಿಧರಲಾಲ್ ಅವರ ಸಂಸ್ಥೆಗೆ ಸೇರಿಸಿದರು.

ಆಗ್ಗೆ ಕಂಪನಿ ಪ್ರದರ್ಶಿಸುತ್ತಿದ್ದ 'ಶ್ರೀಕೃಷ್ಣ ತುಲಾಭಾರ' ಜನಾದರಣೀಯ ನಾಟಕ. ನಾರದನ ಪಾತ್ರ ನಾಯ್ಡು ಪಾಲಿಗೆ ಬಂದಿತು. ಸೊಗಸಾದ ಶಾರೀರ, ನಟನಾಚಾತುರ್ಯ, ಕಲೆಯಲ್ಲಿನ ಅಪರಿಮಿತ ಪ್ರೇಮ, ಅವಿಶ್ರಾಂತ ಶ್ರಮದಿಂದ ಬೇಗನೆ ಬೆಳಕಿಗೆ ಬಂದರು, ನಾಯ್ಡು. ಇಲ್ಲಿ ಕೆಲವಾರು ವರ್ಷಗಳು ಕಲಾಸೇವೆ ಮಾಡಿ ತುಮಕೂರಿನ 'ಸೀತಾ ಮನೋಹರ ನಾಟಕ ಮಂಡಲಿ'ಗೆ ಪದಾರ್ಪಣ ಮಾಡಿದರು. ಸ್ತ್ರೀ ಪಾತ್ರಗಳು ಲಭ್ಯವಾದವು. ಪಾತ್ರಗಳಲ್ಲಿ ತೋರುತ್ತಿದ್ದ ಶ್ರೀಮಂತ ಅಭಿನಯದಿಮದ ಪ್ರಮುಖ ನಟರ ಪಂಕ್ತಿಗೆ ಸೇರಿಹೋದರು. ಇಲ್ಲೂ ಹಲವಾರು ವರ್ಷಗಳ ಕಾಲ ವಿವಿಧ ಪಾತ್ರಗಳನ್ನು ವಹಿಸಿ ಚೆನ್ನಪಟ್ಟಣದ ತ್ರಿಯಂಬಕ ಶಾಸ್ತ್ರಿಗಳ 'ಭಾರತ ಜನ್ಮ ಮನೋಲ್ಲಾಸಿನಿ ನಾಟಕ ಸಭಾ' ಪ್ರವೇಶಿಸಿದರು. ಹಲವಾರು ವರ್ಷಗಳು ಆ ಮಂಡಲಿಯಲ್ಲಿ ಕಲಾವಂತಿಕೆಯನ್ನು ಬೆಳೆಸಿಕೊಂಡ ನಾಯ್ಡುರವರು ಅನಂತರ ನಟಭಯಂಕರ ಗಂಗಾಧರರಾಯರ ಸಂಸ್ಥೆ ಸೇರಿದರು.

ರಾಯರ ಕಂಪನಿಯಲ್ಲಿ ಕೆಲವಾರು ವರ್ಷಗಳು ಕಲಾಸೇವೆ ಮಾಡಿದ ನಾಯ್ಡು 1925–27ರ ಹೊತ್ತಿಗೆ ಪ್ರಖ್ಯಾತ ನಾಟಕ ಸಂಸ್ಥೆ ಗುಬ್ಬಿ ಕಂಪನಿಗೆ ಪ್ರವೇಶಿಸಿದರು. ಈ ಕಂಪನಿಯ ಹೆಸರಾಂತ ನಾಟಕಗಳಾದ 'ರಾಜಭಕ್ತಿ', 'ಕರ್ನಾಟಕ ಸಾಮ್ರಾಜ್ಯ', 'ಸ್ವಾಮಿನಿಷ್ಠೆ' ಮೊದಲಾದ ನಾಟಕಗಳಲ್ಲಿ ವಿಕ್ರಾಂತ, ತಿರುಮಲರಾಯ, ಶಿವಾಜಿ ಮುಂತಾದ ಪಾತ್ರಗಳನ್ನು ಪರಿಣಾಮಕಾರಿಯಾಗಿ ಅಭಿನಯಿಸಿದರು. ಈ ಮಧ್ಯೆ ಗುಬ್ಬಿ ವೀರಣ್ಣನವರು ಸ್ಥಾಪಿಸಿದ ಕರ್ನಾಟಕ ಫಿಲಂ ಕಾರ್ಪೋರೇಷನ್ ಮೂಕಿ ಚಿತ್ರ 'ಹಿಸ್ ಲವ ಅಫೇರ್'ನಲ್ಲಿ ನಾಯ್ಡು ಕಾಲೇಜು ವಿದ್ಯಾರ್ಥಿಯ ಪಾತ್ರವನ್ನು ವಹಿಸಿ ಚಲನಚಿತ್ರರಂಗವನ್ನೂ ಪ್ರವೇಶಿಸಿದರು.

ಸ್ವಂತ ಸಂಸ್ಥೆ ಸ್ಥಾಪಿಸುವ ಧ್ಯೇಯ ಹೊತ್ತ ನಾಯ್ಡುರವರು 1932ರಲ್ಲಿ ಮೈಸೂರಿನಲ್ಲಿ 'ಶ್ರೀ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿ'ಯನ್ನು ಸ್ಥಾಪಿಸಿದರು. 1934ರಲ್ಲಿ 'ಸತಿ ಸುಲೋಚನ' (ಕನ್ನಡದ ಮೊಟ್ಟ ಮೊದಲ ವಾಕ್ಚಿತ್ರ)ದಲ್ಲಿ ನಾಯಕ ಇಂದ್ರಜಿತುವಿನ ಪಾತ್ರವಹಿಸಿದರು. ಚಿತ್ರೀಕರಣದಲ್ಲಿ ಭಾಗವಹಿಸುತ್ತಿದ್ದಾಗ ಲಕ್ಷ್ಮೀಬಾಯಿ ಅವರ ಪರಿಚಯವಾಗಿ ಅನಂತರ ಆಕೆಯನ್ನು ತಮ್ಮ ಕಂಪನಿಯ ನಾಟಕಗಳ ಪ್ರಧಾನ ಪಾತ್ರಗಳನ್ನು ನಿರ್ವಹಿಸಲು ಆಹ್ವಾನಿಸಿದರು.

ಈ ಅವಧಿಯಲ್ಲೇ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿಗೆ ಆರ್. ನಾಗೇಂದ್ರರಾಯರು ಪಾಲುದಾರರಾಗಿ ಪ್ರವೇಶಿಸಿದ್ದು, ಕನ್ನಡ ರಂಗಭೂಮಿಯಲ್ಲಿ ನವ್ಯ ಪ್ರಯೋಗಗಳನ್ನು ನಡೆಸಲು ಅವರು ಇಟ್ಟ ಮೊದಲ ಹೆಜ್ಜೆ ಮುಂದ್ಯೆಯಿಂದ ಅನೇಕ ರೀತಿಯ ವಿದ್ಯುತ್ ಉಪಕರಣಗಳನ್ನು ತರಿಸಿ ರಂಗಭೂಮಿಗೆ ಅಳವಡಿಸಿದ್ದು. ಭೂ ಕೈಲಾಸ, ವಸಂತ ಸೇನಾ, ನಿರುಪಮ, ಕೀಚಕ ವಧೇ, ಮುಂತಾದ ನಾಟಕಗಳನ್ನು ಪ್ರದರ್ಶಿಸಿ ಜನಮನ್ನಣೆಗಳಿಸಿದರು. ರಾಯರು ರಚಿಸಿದ 'ಭೂಕೈಲಾಸ' ನಾಟಕಕ್ಕೆ ಫೋಕಸ್ ಲೈಟ್, ಡಿಮ್ಮರ್ ಲೈಟ್, ಸೈಕ್ಲೊರಮಾ, ಬಣ್ಣ ಬಣ್ಣದ ಸೀನರಿಗಳು, ಟ್ರಿಕ್‌ಸೀನ್ಸ್ ಮೊದಲಾದವುಗಳನ್ನು ಅಳವಡಿಸಿದರು. ಅನೇಕ ಟ್ರಿಕ್‌ಸೀನ್‌ಗಳಿಂದ ಕೂಡಿದ ಈ ನಾಟಕ ಪ್ರೇಕ್ಷಕರನ್ನು ಬೇರೊಂದು ಲೋಕಕ್ಕೆ ಕರೆದೊಯ್ಯತೊಡಗಿತು. 1935–36ರ ಸುಮಾರಿಗೆ ಕರ್ನಾಟಕದ ಪ್ರಮುಖ ಕೇಂದ್ರಗಳಲ್ಲೆಲ್ಲಾ ಮೊಕ್ಕಾಂ ಮಾಡಿ ಜಯಭೇರಿ ಹೊಡೆದರು.

ಕನ್ನಡ ರಂಗಭೂಮಿಯ ಉತ್ಕರ್ಷಕ್ಕಾಗಿ ಶ್ರಮಿಸುತ್ತಲೇ ಇದ್ದ ನಾಯ್ಡು ಅವರು ತಿರುಗು ರಂಗವೇದಿಕೆಯನ್ನು ಅಳವಡಿಸಲು ಯೋಜಿಸಿದರು. ಕೇವಲ ಕೆಲವೇ ನಿಮಿಷಗಳಲ್ಲಿ ಬದಲಾಯಿಸಬಹುದಾದ ರಂಗಸಜ್ಜಿಕೆಯ ಸಿದ್ಧತೆಗಾಗಿ ಸಹಸ್ರಾರು ರೂಪಾಯಿಗಳನ್ನು ನೀರಿನಂತೆ ಚೆಲ್ಲಿದರು. 'ಶ್ರೀರಾಮ ಜನನ' ನಾಟಕವನ್ನು ಈ ಹೊಸ ಪ್ರಯೋಗಕ್ಕೆ ಅಳವಡಿಸಿದರು. ನಾಟಕ, ರಂಗಭೂಮಿಯ ಅಭಿಮಾನಿಗಳ ಮೆಚ್ಚಿಗೆಗೆ ಪಾತ್ರವಾಯಿತು.

1960ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಅವರಿಗೆ ಪ್ರಶಸ್ತಿ ನೀಡಿ ಗೌರವಿಸಿತು.

---



## ಮಳವಳ್ಳಿ ಸುಂದರಮ್ಮ

ರಂಗಮಂಚದ ಮೇಲೆ ಸ್ತ್ರೀ ಪಾತ್ರಧಾರಿಗಳಿಲ್ಲದ ಕೊರಗನ್ನು ಕಳೆಯಲು ಜನ್ಮವೆತ್ತಿರೇನೋ ಎಂಬಂತೆ ಆಗ ರಂಗಮಂಚವನ್ನೇರಿದ ಮೊದಲನೇ ಪೀಳಿಗೆಯ ಅಭಿನೇತ್ರಿ ಶ್ರೀಮತಿ ಮಳವಳ್ಳಿ ಸುಂದರಮ್ಮನವರು. ಅದ್ವಿತೀಯ ಸಂಗೀತ ವಿದ್ವಾಂಸರಾದರೂ ತಮ್ಮ ಇಡೀ ಜೀವಿತವನ್ನು ನಾಟಕ ರಂಗದ ಏಳಿಗೆಗಾಗಿ ಧಾರೆಯೆರೆದ ಮಹಾವ್ಯಕ್ತಿ ಮಳವಳ್ಳಿ ಸುಬ್ಬಣ್ಣನವರೇ ಸುಂದರಮ್ಮನವರ ತಂದೆಯವರು.

12ನೇ ಸೆಪ್ಟೆಂಬರ್ 1905ರಂದು ಮೈಸೂರಿನಲ್ಲಿ ಜನಿಸಿದ ಶ್ರೀಮತಿಯವರಿಗೆ ಬಾಲ್ಯದಲ್ಲಿಯೇ ತಂದೆಯ ಬಳಿ ನಿಷ್ಠುರ ಶಿಕ್ಷಣವಾಯಿತು. ಅವರು 'ಶ್ರೀಕೃಷ್ಣ ವಿಲಾಸ ನಾಟಕ ಸಭಾ' ಎಂಬ ವೃತ್ತಿ ನಾಟಕ ಮಂಡಳಿಗೆ ಪ್ರವೇಶಿಸಿದರು. ಅಂದು ಈ ಮಂಡಲಿ ಕಲಾವತಿ ಪರಿಣಯ, ಪಾಂಡುವಿಜಯ, ಸದಾರಮೆ ಮೊದಲಾದ ಸಂಗೀತ ಪ್ರಧಾನವಾದ ನಾಟಕಗಳನ್ನು ಪ್ರದರ್ಶಿಸುತ್ತಿತ್ತು, ಈ ಮಂಡಲಿಯ ಪ್ರಮುಖ ಬಾಲಪಾತ್ರಗಳು

ಸುಂದರಮ್ಮನವರ ಪಾಲಿನದಾಯಿತು. ಶರೀರ ಹಾಗೂ ಶಾರೀರ ಸೊಗಸಾಗಿದ್ದುದರಿಂದ ಈ ಪಾತ್ರಗಳಲ್ಲಿ ಅವರು ಯಶಸ್ವಿಯಾದರು.

ವಿರಾಟ ಪರ್ವದ ದ್ರೌಪದಿ, ಸುಭದ್ರಾ ಪರಿಣಯದ ಸುಭದ್ರೆ, ಮುಂತಾದ ನಾಟಕಗಳ ಪಾತ್ರಗಳಲ್ಲಿ ಅಪಾರ ಹೆಸರು ಮಾಡಿದ ಇವರು ಶಾಸ್ತ್ರೀಯ ಸಂಗೀತ ಹಾಗೂ ರಂಗ ಸಂಗೀತಗಳಿಂದ ಜನಪ್ರಿಯತೆಗಳಿಸಿದರು.

'ಸೀತಾಮನೋಹರಾ ನಾಟಕ ಮಂಡಲಿ'ಯ ಮಾಲೀಕ-ನಟ ಸೀತಾರಾಮಯ್ಯನವರ ಕರೆ ಇದೇ ವೇಳೆಗೆ ಶ್ರೀಮತಿಯವರಿಗೆ ಬಂದಿತು. ಸೀತಪ್ಪನವರ ಆಹ್ವಾನವನ್ನು ಅಂಗೀಕರಿಸಿ 1914ರಲ್ಲಿ ಅವರ ಮಂಡಲಿಗೆ ಪ್ರವೇಶಿಸಿದರು.

ನಂತರದಲ್ಲಿ 1920-21ರಲ್ಲಿ ಸ್ಥಾಪಿತವಾದ 'ಶ್ರೀ ಸಾಮ್ರಾಜ್ಯ ಲಕ್ಷ್ಮೀ ನಾಟಕ ಸಭಾ' (ಮಳವಳ್ಳಿ ಸುಬ್ಬಣ್ಣನವರೇ ಈ ಕಂಪನಿಯ ಸ್ಥಾಪಕರು)ಕ್ಕೆ ಪದಾರ್ಪಣ ಮಾಡಿದರು. 'ಸುಭದ್ರಾ ಕಲ್ಯಾಣ' ನಾಟಕದ ಖ್ಯಾತಿ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್ ಅವರ ಕಿವಿಗೂ ಬಿದ್ದಿತು. ಜಗನ್ಮೋಹನ ಪ್ಯಾಲೇಸ್‌ನಲ್ಲಿ ನಾಟಕಗಳನ್ನಾಡಲು ಆಹ್ವಾನ ಲಭಿಸಿತು. 'ಸುಭದ್ರಾ' ಮತ್ತು 'ಕವಿರತ್ನ ಕಾಳಿದಾಸ' ನಾಟಕಗಳ ಏರ್ಪಾಡಾಯಿತು.

ಬಿಡಾರಂ ಕೃಷ್ಣಪ್ಪನವರು, ವೀಣೆ ಶೇಷಣ್ಣನವರು, ಸಂಗೀತರತ್ನ ಪಿಟೀಲು ಟಿ. ಚೌಡಯ್ಯನವರೂ ನಾಟಕಕ್ಕೆ ಆಗಮಿಸಿದ್ದರು. ಈ ನಾಟಕಗಳಲ್ಲಿನ ಸುಭದ್ರೆ ಮತ್ತು ಚೂಡಾಮಣಿಯ ಪಾತ್ರ ಪ್ರಭುಗಳನ್ನೂ, ಸಂಗೀತ ವಿದ್ವಾಂಸರನ್ನೂ ತಲೆದೂಗಿಸಿತು.

1924ರ ಒಂದು ದಿನ. ಆಸ್ಥಾನ ವಿದ್ವಾನ್-ರಂಗನಟ ರಾಚೊಟಪ್ಪ ಅವರು ಮದರಾಸಿನ ಹೆಸರಾಂತ ಧ್ವನಿಮುದ್ರಿಕೆ ಸಂಸ್ಥೆ ಓಡಿಯನ್ ಕಂಪನಿ ಸುಂದರಮ್ಮನವರಿಗೆ ಕೀರ್ತಿತಂದ ನಾಟಕಗಳು ರಂಗಗೀತೆಗಳನ್ನು ಧ್ವನಿಮುದ್ರಿಸಿಕೊಳ್ಳಲು ಇಚ್ಛಿಸಿರುವ ಸುದ್ದಿಯನ್ನು ತಿಳಿಸಿದರು. ಧ್ವನಿಮುದ್ರಿಕೆಗಾಗಿ ಹಾಡಿದರು. ಧ್ವನಿ ಮುದ್ರಿಕೆಗಳು ಮಾರುಕಟ್ಟೆಗೆ ಬಂದಾಗ ಮಾರಾಟದಲ್ಲಿ ಹೊಸ ವಿಕ್ರಮವನ್ನೇ ಸ್ಥಾಪಿಸಿದವು.

ಅಭಿಜಾತ ರಂಗಭೂಮಿಯಿಂದ ಸ್ಫೂರ್ತಿ ಪಡೆದು ಮೈಸೂರಿನಲ್ಲಿ ಪ್ರಾರಂಭವಾದ 'ಶ್ರೀ ಚಾಮುಂಡೇಶ್ವರಿ ನಾಟಕಸಭಾ' ಮಂಡಲಿಯ ಮೇಲ್ವಿಚಾರಣೆಯ ಹೊಣೆ ಹೊತ್ತು 'ರಾಜಸೂಯಯಾಗ', 'ದಾನಶೂರಕರ್ಣ', 'ಸುಭದ್ರಾಪರಿಣಯ' ಮೊದಲಾದ ನಾಟಕಗಳನ್ನು ಪ್ರಯೋಗಿಸಿದರು.

ಮೈಸೂರು ಸರ್ಕಾರ 1962ರ ಸೆಪ್ಟೆಂಬರ್ 17ರಂದು ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಸನ್ಮಾನಿಸಿತು. ಒಟ್ಟಿನಲ್ಲಿ ಕನ್ನಡ ರಂಗಭೂಮಿಗೆ ಶ್ರೀಮತಿ ಮಳವಳ್ಳಿ ಸುಂದರಮ್ಮನವರ ಕೊಡುಗೆ ವಿಶೇಷವಾದದ್ದು.



# 1961ರ ಪ್ರಶಸ್ತಿ ವಿಜೇತರು



## ಹಾರಾಡಿ ರಾಮ ಗಾಣಿಗ

ಉಡುಪಿ ಯಕ್ಷರಂಗದ ಸಹಭಾಗವತರಾಗಿ ಅಖಿಲ ಭಾರತ ಪ್ರದರ್ಶನಗಳಲ್ಲಿ ಪಾಲ್ಗೊಂಡ ದಿವಂಗತ ಕೊಗ್ಗಣ್ಣ ಕಾಮತರ ಸೂತ್ರದ ಬೊಂಬೆ ತಂಡದ ಭಾಗವತರಾಗಿ ವಿದೇಶದಲ್ಲೂ ತನ್ನ ಕಂಠಶ್ರೀಯನ್ನು ಮೆರೆದ ಐರೋಡಿಯವರ ಕರುಣ, ದುಃಖರಸಗಳು ಬಡಗು ತಿಟ್ಟಿನಲ್ಲಿ ಅನನ್ಯಯವೆಂಬ ಮೆಚ್ಚುಗೆಗೆ ಪಾತ್ರವಾಗಿವೆ.

ಗೀತೆಯ ಮುಕ್ತಾಯದಲ್ಲಿ ಜತಿಯ ನುಡಿಯನ್ನು ಮದ್ದಲೆಂದು ಜತಿಗೆ ರಮ್ಯವಾಗಿ ಸಮ ರಮಿಸುವುದು ಗಾಣಿಗರಿಗೇ ವಿಶಿಷ್ಟವಾದ ಸಿದ್ಧಿ.

1936 ರಿಂದ ದಶಾವತಾರ ಮೇಳದಿಂದಾರಂಭಿಸಿ 46ರವರೆಗೆ ರಂಗದಿಂದ ದೂರಾಗಿ ಅಧ್ಯಾಪಕನಾಗಿ ಅನಂತರ ಮತ್ತೆ ಒಳಗೇ ತುಡಿಯುತ್ತಿದ್ದ ಕಲೆಯ ಕರೆಯನ್ನು ಕಡೆಗಾಣಿಸಲಾಗದಾಗ ಗಾಣಿಗರು 1957ರಲ್ಲಿ ದಿಲ್ಲಿಯಲ್ಲಿ ನಡೆದ 'ಅಖಿಲ ಭಾರತ ನೃತ್ಯ ಸಮುದಾಯ'ದಲ್ಲಿ ಭಾಗವಹಿಸಿ ಹಳ್ಳಿಯ ಕಲೆಯನ್ನು ದಿಲ್ಲಿಯಲ್ಲಿ ಮೆರೆದ ಕೋಟ ಶಿವರಾಮಕಾರಂತರ ನೇತೃತ್ವದಲ್ಲಿ ತಂಡದ ಪ್ರಮುಖ ಸದಸ್ಯರಲ್ಲೊಬ್ಬರಾಗಿದ್ದರು.

ಇಂದಿಗೂ ರಾಗಾನ್ವೇಷಕನಾಗಿ, ಶುದ್ಧ ಕಲೆಗಾಗಿ ಪರಿಶ್ರಮಿಸುತ್ತಿರುವ ಗಾಣಿಗರು ಹತ್ತಾರು ಪ್ರಸಂಗಗಳ ಲೇಖಕರೂ ಕೂಡ.

ಗಾಣಿಗರ ಕಲಾ ಸೇವೆಯನ್ನು ಮೆಚ್ಚಿ ಮೈಸೂರು ರಾಜ್ಯ ಸಂಗೀತ, ನಾಟಕ ಅಕಾಡೆಮಿಯು 1961ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

# 1962ರ ಪ್ರಶಸ್ತಿ ವಿಜೇತರು



## ಲಕ್ಷ್ಮೀಬಾಯಿ

ಬೆಂಗಳೂರು ಜಿಲ್ಲೆಯ ಮತ್ತೀಕೆರೆಯಲ್ಲಿ ಹನುಮಂತಪ್ಪ ಮತ್ತು ತಾಯಮ್ಮ ದಂಪತಿಗಳಿಗೆ ಹಿರಿಯ ಪುತ್ರಿಯಾಗಿ 1918ರಲ್ಲಿ ಜನನ. ತಂದೆ ಸೈನಿಕ ವೃತ್ತಿಯಲ್ಲಿದ್ದರು. ಇವರ ತಂಗಿ ಕಮಲಾಬಾಯಿ. ಮೊದಲನೆಯ ಮಹಾಯುದ್ಧದಲ್ಲಿ ತಂದೆ ಮರಣದಿಂದ ಬಡತನದ ಕಣ್ಣೀರಿನಲ್ಲಿ ಕೈತೊಳೆಯುವ ಪರಿಸ್ಥಿತಿಯಿಂದಾಗಿ ಚಿಕ್ಕ ವಯಸ್ಸಿನಲ್ಲೇ ಬದುಕಿನ ರಂಗದ ಕಷ್ಟವನ್ನು ಅನುಭವಿಸಿ ಬಾಳನ್ನು ಸಾಧಿಸುವ ಹಟವನ್ನು ಬೆಳೆಸಿಕೊಂಡರು.

ಇದು 'ಸತೀ ಸುಲೋಚನ' ಚಿತ್ರದ ಅಭ್ಯಾಸ ಬೆಂಗಳೂರಿನಲ್ಲಿ ನಡೆಯುತ್ತಿದ್ದಾಗಿನ ಮಾತು. ಇಂದ್ರಜಿತು ಪಾತ್ರವನ್ನು ನಿರ್ವಹಿಸಲು ನಿಯೋಜಿತರಾಗಿದ್ದ ರಂಗ ಭೂಮಿಯ ಖ್ಯಾತ ನಟ ಎಂ.ವಿ. ಸುಬ್ಬಯ್ಯನಾಯ್ಡು ಅವರಿಗೂ ಇವರಿಗೂ ನಿಕಟ ಸಂಪರ್ಕ ಬೆಳೆಯಿತು. 'ಸತೀ ಸುಲೋಚನ' ಚಿತ್ರದ ಶೂಟಿಂಗ್ ಕೊಲ್ಹಾಪುರಕ್ಕೆ ಹೊರಡುವ ಮುನ್ನವೇ ಇವರ ಗಾಂಧರ್ವ ವಿವಾಹವಾಗಿತ್ತು. ಸತಿ ಸುಲೋಚನದ ನಂತರ ಮುಂಬೈನಲ್ಲಿದ್ದ ಇಂಪೀರಿಯಲ್ ಸ್ಟುಡಿಯೋದವರ ಚಿತ್ರಗಳಲ್ಲಿ ನಟಿಸಲು ಕರೆಬಂತು. ಆದರೆ ಆ ವೇಳೆಗೆ ಸುಬ್ಬಯ್ಯನಾಯ್ಡು ಹಾಗೂ ನಾಗೇಂದ್ರರಾಯರು ತಾವು ಸ್ಥಾಪಿಸಿದ್ದ 'ಶ್ರೀಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿ'ಯಲ್ಲಿ ಪ್ರಧಾನ ಪಾತ್ರಗಳನ್ನು ನಿರ್ವಹಿಸಲು ಕೋರಿದರು. ನಾಯ್ಡುಗಳ ಮತ್ತು ರಾಯರ ನಾಟಕ ಸಂಸ್ಥೆಯಲ್ಲಿಯೇ ಶಾಶ್ವತವಾಗಿ ತಂಗಿ ಕಮಲಾಬಾಯಿಯೊಂದಿಗೆ ನೆಲೆಸಿದರು. ನಾಗೇಂದ್ರರಾಯರು ಭಕ್ತಿರಸ ಪ್ರಧಾನವಾದ ಹಾಗೂ ಪರಾಕ್ರಮ ಭರಿತವಾದ 'ಭೂ ಕೈಲಾಸ' ನಾಟಕವನ್ನು ಬರೆದು ಸಿದ್ಧಪಡಿಸಿದರು. ರಾಯರ ನೇತೃತ್ವದಲ್ಲಿ ರಂಗಭೂಮಿಯನ್ನು ಕಂಡ 'ಭೂ ಕೈಲಾಸ' ರಂಗ ಇತಿಹಾಸದಲ್ಲಿ ಚಿರವಾಗಿ ಉಳಿಯುವಂತಹ ಒಂದು ಪ್ರಯೋಗವೆನಿಸಿತು.

ನಾಟಕದ ಸನ್ನಿವೇಶಗಳನ್ನು ಹೆಚ್ಚು ಪ್ರಭಾವಶಾಲಿಯಾಗಿ ಮಾಡಲು ರಾಯರು ಕನ್ನಡದಲ್ಲಿಯೇ ಪ್ರಥಮ ಬಾರಿಯಾಗಿ ಹೊಸ ಹೊಸ ರಂಗತಂತ್ರ ಚಮತ್ಕಾರಗಳನ್ನು ಮಾಡಿದರು. ಅಲೆಅಲೆಯಾಗಿ ಬರುವ ವಿದ್ಯುತ್ ಬೆಳಕಿನ ಡಿಮ್ಮರ್ ವ್ಯವಸ್ಥೆ, ಒಂದೇ ವ್ಯಕ್ತಿಯ ಅಭಿನಯವನ್ನು ಪ್ರಧಾನವಾಗಿ ಕೇಂದ್ರೀಕರಿಸಲು ಅವರ ಮೇಲೆ ಮಾತ್ರ ಅಧಿಕ ಬೆಳಕು ಚಿಮ್ಮಿಸುವ ಫೋಕಸ್ ತಂತ್ರ, ಪರದೆಗಳಲ್ಲಿ ನವೀನತೆ, ಅದ್ಭುತ ರಂಗ ವ್ಯವಸ್ಥೆ ಇವು 'ಭೂ ಕೈಲಾಸ'ದ ವೈಶಿಷ್ಟ್ಯಗಳಾಗಿದ್ದವು.

ರಾಯರ ನಾರದನ ಪಾತ್ರ, ಸುಬ್ಬಯ್ಯನಾಯ್ಡುಗಳ ರಾವಣನ ಪಾತ್ರ, ಮಂಡೋದರಿಯಾಗಿ ಲಕ್ಷ್ಮೀಬಾಯಿ ಪಾತ್ರ ರಂಗಭೂಮಿ ಅಭಿಮಾನಿಗಳ ಮನೆ ಮಾತಾಯಿತು. ನಾಟಕದ ಯಶಸ್ಸಿನಿಂದ ಉತ್ತೇಜಿತರಾದ ನಾಯ್ಡುಗಳು–ರಾಯರು ರಾಜಭಕ್ತಿ, ವಸಂತಸೇನಾ, ಮಹಾತ್ಮಾ ಕಬೀರ್, ಸಂಪೂರ್ಣ ರಾಮಾಯಣ, ಸದಾರಮೆ, ಭಕ್ತ ಅಂಬರೀಷ, ಬೇಡರ ಕಣ್ಣಪ್ಪ, ಎಚ್ಚಮನಾಯಕ, ಕೀಚಕ ವಧೆ ಮೊದಲಾದ ನಾಟಕಗಳನ್ನು ಪ್ರದರ್ಶಿಸತೊಡಗಿದರು.

ಈ ಎಲ್ಲಾ ನಾಟಕಗಳಲ್ಲೂ ಕ್ರಮವಾಗಿ ದೇವಾಂಗನೆ, ವಸಂತಸೇನೆ, ಬೀಬಿ, ಸೀತೆ, ಸದಾರಮೆ, ಪದ್ಮಾವತಿ, ಮಾಯಾ ಮೋಹಿನಿ, ದ್ರೌಪದಿ ಮೊದಲಾದ ಪ್ರಧಾನ ಪಾತ್ರಗಳನ್ನುವಹಿಸಿ ಕಲಾರಸಿಕರ ಮೆಚ್ಚುಗೆಗೆ ಲಕ್ಷ್ಮೀಬಾಯಿ ಪಾತ್ರರಾದರು. ಅಭಿನಯದ ಎಲ್ಲ ಮುಖಗಳನ್ನು ಸಾಧಿಸಿಕೊಂಡಿದ್ದರಿಂದ ಯಾವ ಪಾತ್ರಕ್ಕೇ ಆಗಲಿ ಸಾಮರ್ಥ್ಯದಿಂದ ಜೀವಕಳೆ ತುಂಬುವ ಶಕ್ತಿ ಲಕ್ಷ್ಮೀಬಾಯಿಯವರಿಗೆ ಬಂದಿತ್ತು.

ಪ್ರಯೋಗಪ್ರಿಯರೂ, ಪ್ರಾಗತಿಕ ಮನೋಭಾವಿಗಳು ಆದ ನಾಯ್ಡುರವರು ಹೊಸತನ ಸಾಧಿಸಲು ಇಚ್ಛಿಸಿ 'ತಿರುಗುವ ರಂಗವೇದಿಕೆ' ಯನ್ನು 'ಶ್ರೀರಾಮ ಜನನಂ' ನಾಟಕಕ್ಕೆ ಅಳವಡಿಸಿದರು. ಕಲಾವಿದ ಪತಿ ನಾಯ್ಡುರವರು, ಪ್ರತಿಭಾವಂತ ನಟ–ದಿಗ್ದರ್ಶಕ ಆರ್. ನಾಗೇಂದ್ರರಾವ್‌ರವರುಗಳಿಂದ ರಂಗ ಜೀವನದ ಸಾರ್ಥಕತೆಯನ್ನು

ಲಕ್ಷ್ಮೀಬಾಯಿಯವರು ಪಡೆದರು. 1961ರ ಜುಲೈ 21ರಂದು ಕಂಪನಿ ಮಂಡ್ಯ ಮೊಕ್ಕಾಂನಲ್ಲಿದ್ದಾಗ ನಾಯ್ಡುರವರು ಎದೆಯ ನೋವಿಗೆ ತುತ್ತಾಗಿ ನಿಧನರಾದರು. ಇವರ ನಿಧನದ ನಂತರ ದಿಕ್ಕು ಕಾಣದ ನೌಕೆಯಂತಾದರು ಲಕ್ಷ್ಮೀಬಾಯಿಯವರು.

ಇವರಿಗೆ ರಂಗಭೂಮಿಯೆ ತೃಪ್ತಿ ಸಂತೋಷಗಳನ್ನು ಕೊಡುವುದು. ಇಂತಹ ಪ್ರತಿಭಾನ್ವಿತ ಅಭಿನೇತ್ರಿಗೆ 1962ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿ ನೀಡಿ ಗೌರವಿಸಿದೆ.



## ಆರ್. ನಾಗೇಂದ್ರರಾವ್

ಕನ್ನಡ ರಂಗಭೂಮಿಯಲ್ಲಿ ದಕ್ಷಿಣ ಭಾರತದ ಚಲನಚಿತ್ರ ರಂಗದಲ್ಲಿ ಸಾರ್ಥಕವಾಗಿ ತಮ್ಮ ಬದುಕನ್ನು ನಡೆಸಿದ ಸಾಹಸಿಗಳಲ್ಲಿ ಆರ್. ನಾಗೇಂದ್ರರಾಯರು ಓರ್ವರು.

ರಾಯರ ಪ್ರತಿಭೆಗೆ ಹಲವಾರು ಮುಖಗಳು. ಅವರು ಎಲ್ಲ ಬಗೆಯ ನಾಟಕಗಳಲ್ಲಿಯೂ ಪಾತ್ರವಹಿಸುತ್ತಿದ್ದರು. ಸ್ತ್ರೀ ಪಾತ್ರಗಳಂತೂ ತುಂಬಾ ಜನಪ್ರಿಯ. ಹೊಸ ನಾಟಕಗಳನ್ನು ಬರೆದರು, ಅಮೋಘ ಅಭಿನಯದಿಂದ ಕೀರ್ತಿಗಳಿಸಿದರು. ಚಿತ್ರರಂಗವನ್ನೂ ಪ್ರವೇಶಿಸಿ ಅನೇಕ ಚಿತ್ರಗಳಲ್ಲಿ ನಟಿಸಿದರು. ಚಲನಚಿತ್ರಗಳನ್ನು ದಿಗ್ದರ್ಶಿಸಿದರು, ನಿರ್ಮಿಸಿದರು.

ನಾಗೇಂದ್ರರಾಯರು ಜನಿಸಿದ್ದು 1896 ಜೂನ್ 23ರಂದು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆಯಲ್ಲಿ ಸಾಮಾನ್ಯ ಕುಟುಂಬವೊಂದರಲ್ಲಿ. ಅವರ ತಂದೆ ರಟ್ಟೆಹಳ್ಳಿ ಕೃಷ್ಣರಾಯರು. ಅರಣ್ಯ ಇಲಾಖೆಯ ಅಧಿಕಾರಿಗಳಾಗಿದ್ದರು. ಇವರು ತಂದೆಗೆ ಎರಡನೆಯ ಮಗ.

ರಾಯರು ನಾಲ್ಕೈದು ವರ್ಷವಿದ್ದಾಗ ತಂದೆಗೆ ಬೆಂಗಳೂರಿಗೆ ವರ್ಗಾವಾಯಿತು ಆಗ ಬೆಂಗಳೂರಿನಲ್ಲಿ ಸಾಂಕ್ರಾಮಿಕ ಪ್ಲೇಗ್ ವ್ಯಾಧಿ ವ್ಯಾಪಿಸಿದ್ದರಿಂದ ಇಲ್ಲಿ ಕೆಲಸ ಮಾಡಲು ಇಚ್ಛಿಸದ ತಂದೆಯವರು ನೌಕರಿಗೆ ರಾಜೀನಾಮೆಯನ್ನು ನೀಡಿ ಕುಟುಂಬ ಸಮೇತ ಮೈಸೂರಿಗೆ ಬಂದು ನೆಲೆಸಿದರು.

ಆ ಸಮಯದಲ್ಲಿ ಅಂದಿನ ನಾಟಕಗಳ ಪ್ರಸಿದ್ಧ ನಟರಾದ ಜಿ. ನಾಗೇಶರಾಯರು 'ಚಂದಿರಾನಂದ ನಾಟಕ ಸಭಾ' ಎಂಬ ಹವ್ಯಾಸಿ ಸಂಸ್ಥೆಯನ್ನು ಕಟ್ಟಿ ನಾಟಕಗಳನ್ನು ಆಡಿಸುತ್ತಿದ್ದರು. ತಂದೆಯ ಪರಿಚಯವಿದ್ದ ನಾಗೇಶರಾಯರ ಬಳಿ ಮಗ ಚೆನ್ನಾಗಿ ಹಾಡುವನೆಂದೂ ನಾಟಕದಲ್ಲಿ ಅವನಿಗೂ ಒಂದು ಪಾತ್ರ ಕೊಡಬೇಕೆಂದು ಮನವಿ ಮಾಡಿಕೊಂಡರು.

'ಇಂದಿರಾನಂದ' ಎಂಬ ನಾಟಕದಲ್ಲಿ ಸಣ್ಣ ಸ್ತ್ರೀ ಪಾತ್ರವೊಂದು ದೊರಕಿತು. ಶಾಲಾ ವಿದ್ಯಾರ್ಥಿಯಾಗಿದ್ದ ನಾಗೇಂದ್ರರಾಯರಿಗೆ ಆಗ ಕೇವಲ ಎಂಟು ವರ್ಷ ಮಾತ್ರ, ಮಗ ದೊಡ್ಡ ಕಲಾವಿದನಾಗಬೇಕೆಂದು ತಂದೆಯ ಅಪೇಕ್ಷೆ.

ಅಭಿನಯ ಕಲೆಗೆ ಸಂಗೀತವೂ ಸಾಧಕ. ಆಗಿನ ಕಾಲದಲ್ಲಿ ನಾಟಕದ ನಟನಾಗುವವನಿಗೆ ಸಂಗೀತದ ಪರಿಶ್ರಮವೂ ಅಗತ್ಯವಾಗಿದ್ದಿತು. ಇದನ್ನು ತಿಳಿದಿದ್ದ ತಂದೆಯವರು ಸಂಗೀತ ಪಾಠಕ್ಕೆ ಆಸ್ಥಾನ ವಿದ್ವಾನ್ ಕರಿಗಿರಿರಾಯರ ಬಳಿಯಲ್ಲಿ ಸಂಗೀತಾಭ್ಯಾಸ ಮಾಡಿಸಿದರು.

ತಂದೆಯ ಅಕಾಲಿಕ ಮರಣದ ನಂತರ ಬೆಂಗಳೂರಿನ ರಾಯರ ಸೋದರಮಾವಂದರ ಬಳಿ ಬಂದು ನೆಲೆಸಿದರು. ಯಾವ ಪರಿಸ್ಥಿತಿಯಲ್ಲಿಯೂ ರಾಯರಿಗೆ ನಾಟಕದ ಅಭಿನಯದ ಗೀಳನ್ನು ಬಿಟ್ಟಿರಲಿಲ್ಲ. ತನ್ನ ಮಾವನ ಮುಂದೆ ಹಿಂದೆ ಅಭಿನಯಿಸಿದ್ದ 'ದುಶ್ಯಾಸನ ಕಾಳಗ'ದ ಭೀಮನ ಪಾತ್ರವನ್ನು ಕುಣಿದು ಅಭಿನಯಿಸಿ ತೋರಿಸಿದ್ದೂ ಉಂಟು.

ಒಮ್ಮೆ ಶಾಲೆಯ ವಾರ್ಷಿಕೋತ್ಸವ ಸಂದರ್ಭದಲ್ಲಿ 'ಚಂದ್ರಹಾಸ' ನಾಟಕದಲ್ಲಿ ವಿಷಯೆ ಪಾತ್ರ ಅಂದರೆ ನಾಯಕಿಯ ಪಾತ್ರವನ್ನು ಅಭಿನಯಿಸಿದ್ದನ್ನು ಶಿರಹಟ್ಟಿ ವೆಂಕೋಬರಾಯರ 'ಶ್ರೀ ಮಹಾಲಕ್ಷ್ಮಿ ಪ್ರಸಾದಿತ ನಾಟಕ ಮಂಡಲಿ'ಯ ಕೆಲವು ಕಲಾವಿದರು ಇವರ ಪಾತ್ರಾಭಿನಯ, ಹಾಡುಗಾರಿಕೆಯನ್ನು ಕಂಡು ಈ ಹುಡುಗ ಮುಂದೆ ದೊಡ್ಡ ಕಲಾವಿದನಾಗುವನೆಂದು ಮನಗಂಡ ಅವರು ಈ ವಿಷಯವನ್ನು ಕಂಪನಿಯ ಒಡೆಯರಾದ ವೆಂಕೋಬರಾಯರಿಗೆ ತಿಳಿಸಿದರು. ಮಾರನೆಯ ದಿನವೇ ಕರೆ ಬಂತು. ಈ ಸದಾವಕಾಶವನ್ನು ಕಳೆದು ಕೊಳ್ಳದೆ ಕಾಡಿಬೇಡಿ ತಾಯಿಯವರನ್ನು ಒಪ್ಪಿಸಿ ಹದಿನೈದು ರೂಗಳ ಸಂಬಳದ ಮೇಲೆ ನಟನಾಗಿ ಸಂಸ್ಥೆಯನ್ನು ಬಂದು ಸೇರಿದರು.

ವಾರಕ್ಕೆ ಹಲವಾರು ಬಾರಿ ಬಣ್ಣ ಹಚ್ಚಿಕೊಂಡು ಪಾತ್ರ ಮಾಡುವ ಅವಕಾಶ. ಊಟ ವಸತಿಗಳಲ್ಲದೆ ತಿಂಗಳಿಗೆ ಹದಿನೈದು ರೂ. ಸಂಬಳ ರಾಯರಿಗೆ ಪರಮಾನಂದವಾಯಿತು.

ಅನಂತರದಲ್ಲಿ ನಾಗೇಂದ್ರರಾಯರು ನಾಟಕ ಶಿರೋಮಣಿ ಎ.ವಿ. ವರದಾಚಾರ್ಯರ ನಾಟಕ ಸಂಸ್ಥೆಯನ್ನು ಪ್ರವೇಶಿಸಿದರು. ರಾಯರ ರಂಗ ಜೀವನದಲ್ಲಿ ಇದೊಂದು ಮಹತ್ತರವಾದ ಅಧ್ಯಾಯ. ನಾಗೇಂದ್ರರಾಯರನ್ನು ಪುತ್ರವಾತ್ಸಲ್ಯದಿಂದ ನೋಡಿಕೊಳ್ಳಲಾರಂಭಿಸಿದರು. ವರದಾಚಾರ್ಯರು ತಮ್ಮ ಮುಂದಿನ ಪ್ರದರ್ಶನಕ್ಕೆ 'ಪ್ರಹ್ಲಾದ ಚರಿತ್ರೆ' ನಾಟಕವನ್ನು ತೆಗೆದುಕೊಂಡರು. ಇದರಲ್ಲಿ ರಾಯರಿಗೆ ಭೂದೇವಿಯ ಪಾತ್ರವನ್ನು ನೀಡಲಾಯಿತು. ಭೂದೇವಿಯ ಪಾತ್ರವನ್ನು ನಿಜವಾಗಿಯೂ ಸುಂದರಿಯಾದ ಯುವತಿಯೇ ಅಭಿನಯಿಸಿದ್ದಳೆಂದು ಅನೇಕರು ವಾದಿಸಿ ಗಂಡೋ–ಹೆಣ್ಣೋ ಎಂಬುದರ ಬಗ್ಗೆ ಪಣಕಟ್ಟಿ ಪಂದ್ಯವಾಡುವವರೆಗೂ ನಾಟಕ ಯಶಸ್ವಿಯಾಯಿತು.

'ಶಾಕುಂತಲ', 'ರತ್ನಾವಳಿ', 'ಹರಿಶ್ಚಂದ್ರ' ಇನ್ನು ಅನೇಕ ನಾಟಕಗಳನ್ನು ಈ ಕಂಪನಿಯಿಂದ ದಕ್ಷಿಣ ಭಾರತ, ಮದ್ರಾಸ್, ತಿರುಚಿನಪಳ್ಳಿ, ತಮಿಳುನಾಡು, ಮಂಗಳೂರು, ಮಧುರೈ, ಕಾರೈಕುಡಿ, ಕುಂಭಕೋಣಂ ಹೀಗೆ ನಾನಾ ಕಡೆಗಳಲ್ಲಿ ಅಭಿನಯಿಸಿ ಅಪಾರ ರಂಗಾಭಿಮಾನಿಗಳನ್ನು ರಂಜಿಸಿತ್ತು. ತಿರುಚಿನಪಳ್ಳಿಯಲ್ಲಿ ಅಲ್ಲಿನ ಸಂಗೀತ ವಿದ್ವಾಂಸರು ವರದಾಚಾರ್ಯರನ್ನು ಗೌರವಿಸಲು ನಿರ್ಧರಿಸಿದರು. ಆಗ ಅಲ್ಲಿಗೆ ಬಂದಿದ್ದ ಡಾ. ಅನಿಬೆಸೆಂಟರ ಸಮ್ಮುಖದಲ್ಲಿ 'ಶಾಕುಂತಲ' ನಾಟಕವನ್ನು ಪ್ರದರ್ಶಿಸಿದರು. ಇದನ್ನು ವೀಕ್ಷಿಸಿ ವರದಾಚಾರ್ಯರಿಗೆ 'ನಾಟಕ ಶಿರೋಮಣಿ' ಮತ್ತು ರಾಯರಿಗೆ ಚಿನ್ನದ ಪದಕವನ್ನು ನೀಡಿ ಗೌರವಿಸಿತು.

1962ರಲ್ಲಿ ವರದಾಚಾರ್ಯರು ವಿಧಿವಶರಾದ ನಂತರ ಕಂಪನಿಯನ್ನು ಟಿ.ಪಿ. ಕೈಲಾಸಂ ನಡೆಸಿದರು. ಕೈಲಾಸಂ ಹೊಸ ನಾಟಕವನ್ನು ಹೇಳಿ ರಾಯರ ಕೈಯಲ್ಲಿ ಬರೆಯಿಸಿದರು. ಸ್ವಾರಸ್ಯವಾದ, ಹಾಸ್ಯಭರಿತವಾದ, ಸಮಾಜದ ಡೊಂಕಿಗೆ ಕನ್ನಡಿ ಹಿಡಿದು ತೋರಿಸುವ ವಿನೂತನ ಸಾಮಾಜಿಕ ನಾಟಕ 'ಅಮ್ಮಾವ್ರ ಗಂಡ'ವನ್ನು ಪ್ರದರ್ಶಿಸಿದರು. ಕೆಲವು ಸಮಯದ ತರುವಾಯ ನಾಗೇಂದ್ರರಾಯರು 'ಚಾಮುಂಡೇಶ್ವರಿ ಕರ್ನಾಟಕ ನಾಟಕ ಸಭಾ' ಸೇರಿದರು.

ಚಾಮುಂಡೇಶ್ವರಿ ಕಂಪನಿಯ ಪ್ರಸಿದ್ಧ ನಾಟಕ 'ರಾಜಸೂಯಯಾಗ'ದಲ್ಲಿ ಅರ್ಜುನನ ಪಾತ್ರ, 'ತುಕಾರಾಂ'ನಲ್ಲಿ ತುಕಾರಾಮನ ಪತ್ನಿ ಜೀಜಾಬಾಯಿ, ಪಾತ್ರಗಳು ರಾಯರದಾಯಿತು. ಅಪಾರ ಜನಮನ್ನಣೆಯನ್ನು ಗಳಿಸಿಕೊಟ್ಟಿತು. ಅಪೂರ್ವವಾಗಿ ಅಭಿನಯಿಸುವ ಪ್ರೌಢಿಮೆ ಸಮರ್ಥವಾಗಿ ಆಡಳಿತ ನಡೆಸುವ ಶಕ್ತಿಯನ್ನು ಪ್ರದರ್ಶಿಸಿದ ರಾಯರ ಇನ್ನೂ ಒಂದು ಪ್ರತಿಭೆ ಬೆಳಕಿಗೆ ಬಂದಿತು. ಅದುವರೆಗೂ ಬರವಣಿಗೆಯ ಕಲೆಯನ್ನು ಸುಪ್ತವಾಗಿರಿಸಿಕೊಂಡಿದ್ದ ರಾಯರು ಕಂಪನಿಗಾಗಿ 'ವೀರ ಅಭಿಮನ್ಯು' ನಾಟಕವನ್ನು ಸುಂದರವಾಗಿ ರಚಿಸಿದರು. 'ವಸಂತಸೇನಾ' ನಾಟಕದಲ್ಲಿ ನಾಯಕಿ ವಸಂತಸೇನೆ ಮತ್ತು ಶಕಾರನ ಪಾತ್ರವಹಿಸಿದ್ದರು.

1931ರ ಆದಿಭಾಗದಿಂದ ಚಲನಚಿತ್ರಗಳ ಯುಗ ಆರಂಭವಾಗಿ ಅದು ಜನತೆಯನ್ನು ವಿಶೇಷ ರೀತಿಯಲ್ಲಿ ಆಕರ್ಷಿಸುತ್ತಿತ್ತು. ಇದರಿಂದ ರಂಗಭೂಮಿಗೆ ತೊಂದರೆಯುಂಟಾಗಬಹುದೆಂದು ರಾಯರು ಶಂಕಿಸಿದರು. ಕಂಪನಿ ಬಿಟ್ಟ ಮೇಲೆ ಅವರ ಮುಂದೆ ಎರಡು ಹಾದಿಗಳು ಸುಳಿದವು. ರಂಗಭೂಮಿಯಲ್ಲೇ ಉಳಿಯಬೇಕೆ ಇಲ್ಲವೇ, ವಾಕ್ಚಿತ್ರರಂಗಕ್ಕೆ ಹಾರಬೇಕೆ. ಚಲನಚಿತ್ರರಂಗಕ್ಕೆ ನಡೆಯಬೇಕೆಂದು ಅವರು ಕಡೆಗೊಮ್ಮೆ ನಿರ್ಧಾರ ಕೈಗೊಂಡರು. ಈ ತೀರ್ಮಾನ ರಾಯರ ಬಣ್ಣದ ಬದುಕಿನಲ್ಲಿ ಮತ್ತೊಂದು ಮಜಲು.

‘ಪಾರಿಜಾತ ಪುಷ್ಪಾಪಹರಣ’ ರಾಯರ ಮೊದಲ ಚಿತ್ರ. ಅವರು ಚಿತ್ರ ಕ್ಷೇತ್ರವನ್ನು ಪ್ರವೇಶಿಸಿದ್ದು ತಮಿಳು ಚಿತ್ರದ ಹೆಬ್ಬಾಗಿಲಿನಿಂದಲೆ. ಮೈಸೂರಿಗೆ ಬಂದಿದ್ದ ನಾಗೇಂದ್ರರಾಯರು ಸುಬ್ಬಯ್ಯನಾಯ್ಡು ಅವರ ಕಂಪನಿಗೆ ಪಾಲುದಾರರಾಗಿ (1934) ಸೇರಬೇಕಾದ ಅಭಿಮಾನದ ಒತ್ತಾಯ ಪರಿಸ್ಥಿತಿ ಬಂದಿತು. ಸುಬ್ಬಯ್ಯನಾಯ್ಡು–ನಾಗೇಂದ್ರರಾಯರು ಸಂಸ್ಥೆಯ ಭಾಗಸ್ಥರಾದರು. ಅಷ್ಟೇ ಗಾಢ ಮೈತ್ರಿಯನ್ನೂ ಬೆಳೆಸಿಕೊಂಡರು.

‘ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿ’ಯ ‘ಭೂ ಕೈಲಾಸ’ ದಕ್ಷಿಣ ಭಾರತದ ಮುಖ್ಯ ಸ್ಥಳಗಳಲ್ಲೆಲ್ಲಾ ಪ್ರದರ್ಶನಗೊಂಡಿತು. ರಾಯರ ನಾರದನ ಪಾತ್ರ, ನಾಯ್ಡುಗಳ ರಾವಣನ ಪಾತ್ರ ಮನೆಮಾತಾಯಿತು. ಈ ಸಂಸ್ಥೆ ಪ್ರದರ್ಶಿಸಿದ ‘ಎಚ್ಚಮ ನಾಯಕ’ (ರಾಷ್ಟ್ರವೀರ) ನಾಟಕದ ರಾಯರ ಚಾಂದ್‌ಖಾನನ ಪಾತ್ರ ವಿನೂತನ ವಿಧವಾಗಿದ್ದು ಅವರ ಪ್ರತಿಭೆಯ ಪ್ರದರ್ಶನಕ್ಕೆ ಮತ್ತೊಂದು ಸಾಧನವಾಯಿತು.

1941ರಲ್ಲಿ ವಸಂತಸೇನಾ ಚಿತ್ರ ತಯಾರಾಯಿತು. ಕನ್ನಡ ಚಿತ್ರರಂಗದಲ್ಲಿ ಇನ್ನೊಂದು ಮೈಲಿಗಲ್ಲಾದ ‘ಹರಿಶ್ಚಂದ್ರ’ ಚಿತ್ರವೂ ಇವರ ನಿರ್ದೇಶನದಲ್ಲೇ ಮೂಡಿಬಂದಿತು. ರಾಯರ ಮತ್ತೊಂದು ಯಶಸ್ವಿ ಚಿತ್ರ ‘ಭಕ್ತ ಕಬೀರ’ ಸುಬ್ಬಯ್ಯನಾಯ್ಡು ಮಂಡಲಿಯನ್ನು ತೊರೆದು ಜೆಮಿನಿ ಸಂಸ್ಥೆಯವರ ಬಳಗದಲ್ಲಿ ತಮಿಳು, ತೆಲುಗು ಭಾಷೆಗಳಲ್ಲಿ ‘ಮೂವರು ತನಯರು’ ಚಿತ್ರವನ್ನು ನಿರ್ದೇಶಿಸಿದರು. ಅಪೂರ್ವ ಸಹೋದರ್‌ಗಳ್, ಹಿಂದಿಯಲ್ಲಿ ನಿಶಾನ್ ಚಿತ್ರದಲ್ಲಿ ಖಳನಾಯಕರಾಗಿ ಅಭಿನಯಿಸಿ ಚಿತ್ರ ಪ್ರೇಮಿಗಳು ತಲೆದೂಗುವಂತೆ ಮಾಡಿದರು.

1952–53ರಲ್ಲಿ ‘ಆರೆನ್ನಾರ್ ಪಿಕ್ಚರ್ಸ್’ ಎಂಬ ಸ್ವಂತ ಚಿತ್ರ ಸಂಸ್ಥೆಯನ್ನು ಆರಂಭಿಸಿದರು. ಈ ಸಂಸ್ಥೆಯ ಪ್ರಥಮ ಚಿತ್ರ ‘ಜಾತಕಫಲ’. ರಾಷ್ಟ್ರಮಟ್ಟದಲ್ಲಿ ಮನ್ನಣೆಗೆ ಪಾತ್ರವಾದ ಪ್ರಥಮ ಕನ್ನಡ ಚಿತ್ರ ‘ಪ್ರೇಮದ ಪುತ್ರಿ’ಗೆ ರಾಷ್ಟ್ರಪತಿಯವರ ರಜತ ಪದಕ ದೊರಕಿತು. ‘ಪತಿಯೇ ದೈವ’ ರಾಯರ ಸ್ವಂತ ಸಂಸ್ಥೆಯ ಅಂತಿಮ ಚಿತ್ರವಾಯಿತು.

‘ಹಣ್ಣೆಲೆ ಚಿಗುರಿದಾಗ’ ಚಿತ್ರದ ಅಭಿನಯಕ್ಕಾಗಿ ರಾಜ್ಯ ಸರ್ಕಾರ ‘ಶ್ರೇಷ್ಠ ನಟ’ನ ಪ್ರಶಸ್ತಿ ಲಭಿಸಿತು. ರಾಯರು ನಿರ್ದೇಶಿಸಿದ ‘ನಮ್ಮ ಮಕ್ಕಳು’ ಬೆಂಗಳೂರಿನಲ್ಲಿ ಶತದಿನೋತ್ಸವದ ಭಾಗ್ಯ ಕಂಡಿತು. ಆ ವರ್ಷದ ದ್ವಿತೀಯ ಶ್ರೇಷ್ಠ ಚಿತ್ರವೆನಿಸಿತು.

ರಾಯರು ತಮ್ಮ ಜೀವಮಾನವನ್ನೆಲ್ಲ ಕಲಾದೇವಿಯ ಸೇವೆಯಲ್ಲಿಯೇ ಕಳೆದಿದ್ದರೂ ‘ನಾನು ಪರಿಪೂರ್ಣ ಕಲಾವಿದ’ನೆಂದು ಎಂದೂ ಹೇಳಿಕೊಂಡವರಲ್ಲ. ಇಂಥಹ ಕಲಾತಪಸ್ವಿಗೆ 1962ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿತು.



## 1963ರ ಪ್ರಶಸ್ತಿ ವಿಜೇತರು



### ಬಲಿಪ ನಾರಾಯಣ ಭಾಗವತರು

ಬಲಿಪ ತೆಂಕು ತಿಟ್ಟಿನ ಖ್ಯಾತ ಭಾಗವತಿಕೆಯ ಮನೆತನ. ನಾರಾಯಣ ಭಾಗವತರು ತೀರ ಎಳವೆಯಿಂದಲೇ ಭಾಗವತಿಕೆಯತ್ತ ಆಕರ್ಷಿತರಾಗಿ ಕಲಾಭ್ಯಾಸಕ್ಕೆ ತೊಡಗಿದವರು.

ಅಜ್ಜ ಕೀರ್ತಿಶೇಷ ಬಲಿಪ ನಾರಾಯಣ ಭಾಗವತರಿಂದ ಹಿಡಿದು ತಂದೆ ಮಾಧವ ಭಾಗವತರವರೆಗೆ ಕುಟುಂಬದ ಮೂರು ತಲೆಯ ಹಿರಿಯರೆಲ್ಲ ಪರಂಪರೆಯ ಶೈಲಿಗೆ ಹೆಸರಾದವರು.

15ರ ಹರೆಯದಲ್ಲಿ ಮೇಳ ಪ್ರವೇಶ ಮಡಿದ ಬಲಿಪರು ಮೂಲ್ಕಿ, ಕೂಡು ಭಗವತಿ, ಜಟಾಧಾರಿ, ರೆಂಜಾಳ, ಇರಾಸೋಮನಾಥೇಶ್ವರ, ಕಟೀಲುಗಳಲ್ಲದೆ ಧರ್ಮಸ್ಥಳ, ಸುರತ್ಕಲ್ ಕರ್ನಾಟಕದ ಮೇಳಗಳಿಗೂ ಭಾಗವತಿಕೆ ನಡೆಸಿದ್ದಾರೆ.

ಗುರುವಾಗಿಯೂ ಅನೇಕರಿಗೆ ತನ್ನ ಸಂಗೀತ ಜ್ಞಾನವನ್ನು ಬಲಿಪರು ಧಾರೆ ಎರೆದಿದ್ದು, ಅವರಲ್ಲಿ ಹಲವರು ಹೆಸರುವಾಸಿಯಾಗಿದ್ದಾರೆ.

ಶ್ರೀಯುತರ ಕಲಾ ಸೇವೆಯನ್ನು ಮೆಚ್ಚಿ 1963ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.



### ಆದ್ಯ ರಂಗಾಚಾರ್ಯ (ಶ್ರೀರಂಗ)

ಆದ್ಯರಂಗಾಚಾರ್ಯ ಕನ್ನಡದ ನಾಟಕ ಕ್ಷೇತ್ರದಲ್ಲಿ ಅಪಾರ ಸಾಧನೆಯನ್ನು ಮಾಡಿದವರು. ಆದ್ಯರಂಗಾಚಾರ್ಯರು ಕನ್ನಡ ಸಾಹಿತ್ಯ ಲೋಕದಲ್ಲಿ ಶ್ರೀರಂಗ ಎಂಬ ಹೆಸರಿನಿಂದ ಪ್ರಸಿದ್ಧರು. ಕನ್ನಡದ ಖ್ಯಾತ ವಿದ್ವಾಂಸ, ನಾಟಕಕಾರ ಮತ್ತು ಸಾಹಿತಿ. ಆದ್ಯರಂಗಾಚಾರ್ಯರ ಮೂಲ ಹೆಸರು ಆರ್.ವಿ. ಜಾಗೀರದಾರ.

ಇವರು ಸೆಪ್ಟೆಂಬರ್ 26, 1904ರಂದು ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಆಗರಖೇಡದಲ್ಲಿ ಜನಿಸಿದರು. ಲಂಡನ್ನಿನಲ್ಲಿ ಎಂ.ಎ. ಪದವಿಯನ್ನು ಪೂರೈಸಿದ ಶ್ರೀರಂಗರು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು.

ಕನ್ನಡ ನಾಟಕ ಕ್ಷೇತ್ರದಲ್ಲಿ ಕೈಲಾಸಂ ಮತ್ತು ಶ್ರೀರಂಗರನ್ನು ಅಶ್ವಿನಿ ದೇವತೆಗಳೆಂದು ಕರೆಯಬಹುದು. ಕನ್ನಡದಲ್ಲಿ ಪೌರಾಣಿಕ, ಐತಿಹಾಸಿಕ ಹಾಗೂ ಸಾಮಾಜಿಕ ನಾಟಕಗಳು ಅಪಾರ ಸಂಖ್ಯೆಯಲ್ಲಿ ಬಂದಿವೆ. ಮುಖ್ಯವಾಗಿ ಸಾಮಾಜಿಕ ನಾಟಕವನ್ನು ಬೆಳೆಸಿದವರು, ಕನ್ನಡದಲ್ಲಿ ಸಮೃದ್ಧವಾಗಿ ನಾಟಕಗಳನ್ನು ಬರೆದು ನಾಟಕಕ್ಕೊಂದು ರೂಪಕೊಟ್ಟವರು ಇಬ್ಬರು, ಕೈಲಾಸಂ ಮತ್ತು ಶ್ರೀರಂಗರು.

ಸಾಮಾಜಿಕ ನಾಟಕದಲ್ಲಿ ಸಮಾಜದ ಸ್ವರೂಪ ಮತ್ತು ವ್ಯವಸ್ಥೆಯ ಕಲ್ಪನೆಯ ಜೊತೆಗೆ ಸಾಹಿತಿ ಚಿತ್ರಿಸಿದ ಸಮಾಜದ ವಿಶಿಷ್ಟ ಲಕ್ಷಣ, ಅದರ ದೌರ್ಬಲ್ಯ ಹಾಗೂ ಅದರ ಅಗತ್ಯತೆಯ ಮೇಲೆ ಬೆಳಕು ಚೆಲ್ಲಬೇಕು, ಶ್ರೀರಂಗರು ನಾಟಕಗಳನ್ನು ಜನಸಾಮಾನ್ಯರ ಹತ್ತಿರಕ್ಕೆ ತಂದರು ಬಹುಮಟ್ಟಿಗೆ ರಂಗಭೂಮಿಯಲ್ಲಿ ಕಾಣುತ್ತಿದ್ದ ರಾಜರು,

ಸನ್ಯಾಸಿಗಳ ಪಾತ್ರಗಳ ಬದಲಾಗಿ ಜನಸಾಮಾನ್ಯರನ್ನು ತಂದರು. ಶ್ರೀರಂಗರು ಚಿಕ್ಕಂದಿನಿಂದಲೂ ಮರಾಠಿ ನಾಟಕಗಳನ್ನು ನೋಡಿ ಬೆಳೆದವರು. ಸಂಸ್ಕೃತ ಪಂಡಿತರಾಗಿದ್ದ ಅವರು ಸಂಸ್ಕೃತದ ನಾಟಕದ ಒಳ ಹೊರಗನ್ನು ತಿಳಿದವರು. ಕೈಲಾಸಂರಂತೆ ಶ್ರೀರಂಗರೂ ಕೂಡ ನಾಟಕವನ್ನು ಜೀವನ ವಿಮರ್ಶೆಗಾಗಿ ಬಳಸಿಕೊಂಡರು.

ಅವರ ನಾಟಕಗಳನ್ನು ಮನಸ್ಸನ್ನು ಚಿಂತನೆಗೆ ಹಚ್ಚುತ್ತದೆ. ಜೀವನದ ವಿಡಂಬನೆಯು ಕೈಲಾಸಂ ಅವರ ವಿಡಂಬನೆಗಿಂತ ಹೆಚ್ಚು ತೀಕ್ಷ್ಣವಾದುದು ಎಂದು ಹೇಳಿದರೆ ತಪ್ಪಾಗಲಾರದು. ಶ್ರೀರಂಗರು ನಾಟಕ ರಚನೆ ಬಹು ಸಮೃದ್ಧವಾದುದು.

34 ದೊಡ್ಡ ನಾಟಕಗಳನ್ನು, 50 ಏಕಾಂಕಗಳನ್ನು, 10 ಕಾದಂಬರಿಗಳನ್ನು, 120 ಹಾಸ್ಯ ಪ್ರಬಂಧಗಳನ್ನು ರಚಿಸಿದ್ದಾರೆ. ಧಾರವಾಡದ ಪ್ರಸಿದ್ಧ ನಿಯತಕಾಲಿಕ 'ಜಯಂತಿ'ಗೆ ಸತತ 3 ವರ್ಷಗಳವರೆಗೆ ಅಂಕಣ ಬರೆದಿದ್ದಾರೆ. ಅವರ ಪ್ರಮುಖ ನಾಟಕಗಳನ್ನು ಸ್ವಾರ್ಥತ್ಯಾಗ, ಧರ್ಮವಿಜಯ, ಉದರವೈರಾಗ್ಯ, ಹರಿಜನ್ವಾರ, ಶೋಕಚಕ್ರ, ಕತ್ತಲೆ ಬೆಳಕು, ನೀ ಮಾಯೆಯೊಳಗೋ ? ನಿನ್ನೊಳು ಮಾಯೆಯೋ ? ಗುಮ್ಮನೆಲ್ಲಿಹ ತೋರಮ್ಮ ಇತ್ಯಾದಿ.

1954ರಲ್ಲಿ ರಾಯಚೂರಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಶ್ರೀರಂಗರು ಅಧ್ಯಕ್ಷರಾಗಿದ್ದರು. ಇವರ ಸಾಧನೆಗೆ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳು ಇವರ ಮಡಿಲಿಗೆ ಸಂದಿವೆ. ಮುಖ್ಯವಾಗಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರ, ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, ಕೇಂದ್ರ ಹಾಗೂ ರಾಜ್ಯ ಸಂಗೀತ ಅಕಾಡೆಮಿಯ ಪುರಸ್ಕಾರ ಇತ್ಯಾದಿ. ಮೈಸೂರು ವಿಶ್ವವಿದ್ಯಾಲಯ ಹಾಗೂ ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಿ.ಲಿಟ್ ನೀಡಿದೆ.

ಶ್ರೀಯುತರ ಕಲಾ ಸೇವೆಯನ್ನು ಮೆಚ್ಚಿ 1963ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

---

## ಎಂ. ರಂಗನಾಥ ಭಟ್ಟ

ಅಂಬಾ ಪ್ರಸಾದಿಕ ನಾಟಕ ಮಂಡಲಿಯ ಮಾಲೀಕರಾಗಿ ಹಲವು ವರ್ಷಗಳ ಕಾಲ ಕಂಪನಿಯನ್ನು ನಡೆಸಿದರು. ಪುರುಷ ಪ್ರಧಾನ ಪಾತ್ರಗಳನ್ನು ನಿರ್ವಹಿಸುತ್ತಿದ್ದ ಇವರು ತಮ್ಮ ಅಭಿನಯದಿಂದ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರರಾಗಿದ್ದರು. ಧ್ರುವ, ಹರಿಶ್ಚಂದ್ರ, ನಿಜಾಮಹಿಮ ಮುಂತಾದ ಪಾತ್ರಗಳಿಗೆ ಹೆಸರಾಗಿದ್ದರು.

ಶ್ರೀಯುತರ ಕಲಾ ಸೇವೆಯನ್ನು ಮೆಚ್ಚಿ 1963ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

---

## ಹಲಗೇರಿ ಚಿಕ್ಕಜಟ್ಟಪ್ಪ

ಹಲಗೇರಿ ಶ್ರೀ ಹಾಲಸಿದ್ಧೇಶ್ವರ ಪ್ರಸಾಂದಿತ ಸಂಗೀತ ನಾಟಕ ಸಭಾದ ಮಾಲೀಕರಾಗಿ, ನಟರಾಗಿ ರಂಗಭೂಮಿಯ ಏಳಿಗೆಗೆ ದುಡಿದವರು. ತಮ್ಮ ಅಣ್ಣ ದೊಡ್ಡ ಜಟ್ಟಪ್ಪನವರ ನಂತರ ಕಂಪನಿಯನ್ನು ಮುನ್ನೆಡೆಸಿದರು. ವಿಶಾಲ ನಾಟಕಾದ್ಯಂತ ಸಂಚರಿಸಿ, ತಮ್ಮ ಕಂಪನಿಯ ನಾಟಕಗಳ ಮೂಲಕ ಜನತೆಗೆ ಮನರಂಜನೆಯನ್ನು ನೀಡಿದರು. ಹಾಸ್ಯ ಪ್ರಧಾನ ನಟರಾಗಿ, ತಮ್ಮ ಕಂಪನಿಯ ಮಾಲೀಕರಾಗಿ ಹೆಮರೆಡ್ಡಿ ಮಲ್ಲಮ್ಮ, ಟಿಪ್ಪು ಸುಲ್ತಾನ್, ಪಠಾಣ್ ದಾಸ್, ನಿಶೀವೃಂದ, ಕಾಲೇಜ್‌ಗರ್ಲ್, ಚಿತ್ರರಂಗದ ನಾಟಕಗಳನ್ನು ಯಶಸ್ವಿಯಾಗಿ ಪ್ರದರ್ಶಿಸಿದರು.

ಶ್ರೀಯುತರ ಕಲಾ ಸೇವೆಯನ್ನು ಮೆಚ್ಚಿ 1963ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಬಿ.ವಿ. ಗುರುಮೂರ್ತಪ್ಪ

ಬೆಂಗಳೂರು ಜಿಲ್ಲೆ ಹೊಸಕೋಟೆ ತಾಲ್ಲೂಕಿನ ನಂದಗುಡಿ ಹೋಬಳಿಯ ಖಾಯಂಗುತ್ತಾ ಶಿವನಾಪುರದಲ್ಲಿ ಇವರ ಜನನ. ತಂದೆ ವೆಂಕಟರಮಣಪ್ಪನವರು ಸಜ್ಜನರು. ರಾಮನಗರ ತಾಲ್ಲೂಕಿನ ಬನ್ನಿಕುಪ್ಪೆ ಗ್ರಾಮಕ್ಕೆ ಬಂದು ನೆಲೆಸಿದ ಗುರುಮೂರ್ತಪ್ಪನವರು ತಂದೆ ಮತ್ತು ಅಣ್ಣ ನುಡಿಸುತ್ತಿದ್ದ ಪಿಟೀಲು ನೋಡಿ ಗುರುಮೂರ್ತಪ್ಪನವರಿಗೆ ಸಂಗೀತದ ಗೀಳು ಹಿಡಿಯಿತು.

ಅವರಲ್ಲಿ ದೈವದತ್ತವಾಗಿ ಬಂದಿದ್ದ ಅಭಿನಯ ಕಲೆಯ ಸುಪ್ತ ಪ್ರವೃತ್ತಿಯನ್ನು ಪ್ರಚೋದಿಸುವಂಥ ಒಂದು ಸಂದರ್ಭ ಒದಗಿ ಬಂದಿತು. ಅವರು ವಾಸಿಸುತ್ತಿದ್ದ ಬನ್ನಿಕುಪ್ಪೆಯ ಅಂತರದಲ್ಲಿದ್ದ ರೇವಣ ಸಿದ್ಧೇಶ್ವರ ಬೆಟ್ಟದ ಅರ್ಚಕ ಹಟ್ಟೀ ರುದ್ರಪ್ಪನವರ ನಾಟಕಗಳಾದ ಪಾಂಡವ ವಿಜಯ, ದ್ರೌಪದಿ ಪಾತ್ರ, ಸತ್ಯ ಹರಿಶ್ಚಂದ್ರ, ಸಾರಂಗಧರ ನಾಟಕಗಳು, ಚಂದ್ರಮತಿ, ಚಿತ್ರಾಂಗಿ ಪಾತ್ರಗಳನ್ನು ಗುರುರುಮೂರ್ತಪ್ಪನವರು ಯಶಸ್ವಿಯಾಗಿ ನಿರ್ವಹಿಸಿದರು. ಈ ನಾಟಕಗಳಿಂದ ಗುರುಮೂರ್ತಪ್ಪನವರ ರಂಗಜೀವನ ಆರಂಭವಾಯಿತು.

1916ರ ಸುಮಾರಿಗೆ ಅವರು ಸುಭದ್ರೆ, ಚೂಡಾಮಣಿ, ಮಂದಾರವಲ್ಲಿ, ಚಂದ್ರಮತಿ, ಚಿತ್ರಾಂಗಿ ಮೊದಲಾದ ಪ್ರಮುಖ ಸ್ತ್ರೀ ಪಾತ್ರಗಳನ್ನೆಲ್ಲ ಅಭಿನಯಿಸುತ್ತಿದ್ದರು.

1917ರ ಸುಮಾರಿಗೆ ಸಾಮ್ರಾಜ್ಯ ನಾಟಕ ಮಂಡಲಿಗೆ ಸೇರಿದರು. ಇದುವರೆಗೆ ಸ್ತ್ರೀ ಪಾತ್ರನಿರ್ವಹಿಸುತ್ತಿದ್ದ ಶ್ರೀಯುತರು ಇಲ್ಲಿ ರಾಜಾಪಾರ್ಟುಗಳನ್ನು ವಹಿಸತೊಡಗಿದರು. ರಂಗಗುರು, ನಾದಯೋಗಿ, ಪಿಟೀಲು ತಾತ ಮಳವಳ್ಳಿ ಸುಬ್ಬಣ್ಣನವರ ವಿಶೇಷ ತರಬೇತಿಯ ನಂತರ ಅವರು ವಹಿಸಿದ ಕಾಳಿದಾಸ, ಅರ್ಜುನ, ರಾಜಕೀರಿಟ, ರಾಮ, ಚಂದ್ರಭಾನು, ಹರಿಶ್ಚಂದ್ರ, ಜಯವೀರ, ಕನಕಸುಂದರ ಮುಂತಾದ ರಾಜಾಪಾರ್ಟುಗಳು ನಭೋತೋ ನಭವಿಷ್ಯತಿ ಎನಿಸಿದವು. 1920ರ ಸುಮಾರಿಗೆ ತುಮಕೂರು ಸೀತಾ ಮನೋಹರ ನಾಟಕ ಮಂಡಲಿಗೆ ಬಂದರು. ಇಲ್ಲಿ 'ಲಂಕಾದಹನ' ನಾಟಕದಲ್ಲಿ ಆಂಜನೇಯನ ಪಾತ್ರವಹಿಸಿ ಮನೆ ಮಾತಾದರು.

ಗುಬ್ಬಿ ಕಂಪನಿಯ ಕುರುಕ್ಷೇತ್ರ ನಾಟಕದಲ್ಲಿ ಕೃಷ್ಣನ ಪಾತ್ರಧಾರಿ ಬಿ.ವಿ. ಗುರುಮೂರ್ತಪ್ಪನವರ ತನ್ಮಯತೆಯ ಅಭಿನಯಕ್ಕೆ, ವಾಕ್ಚರಣೆಗೆ, ಮಧುರ ಸಂಗೀತಕ್ಕೆ, ಸುಂದರ ರೂಪಕ್ಕೆ, ರಂಗಭೂಮಿಗೆ ಆಗಮಿಸುತ್ತಿದ್ದ – ನಿಷ್ಕ್ರಮಿಸುತ್ತಿದ್ದ ವೈಖರಿಗೆ ಪ್ರೇಕ್ಷಕರು ಮಂತ್ರ ಮುಗ್ಧರಾಗಿ ಬಿಡುತ್ತಿದ್ದರು.

1921 ಗುಬ್ಬಿ ಕಂಪನಿ ದಾವಣಗೆರೆ ಮೊಕ್ಕಾಂ ಪ್ರಾರಂಭಿಸಿತು. 'ಕಬೀರ್ ದಾಸ್' ನಾಟಕ. ಅದರಲ್ಲಿ ಗುರುಮೂರ್ತಪ್ಪನವರು ಕಬೀರ್ ಪಾತ್ರ.

1920–21 'ಸಾಮ್ರಾಜ್ಯ ನಾಟಕ ಮಂಡಳಿ' ಎಂಬ ಲಾಂಛನದಲ್ಲಿ ಮಳವಳ್ಳಿ ಸುಬ್ಬಣ್ಣನವರ ಮಗ ದೊಡ್ಡಮಲ್ಲಪ್ಪನವರು ಸ್ವಂತ ಕಂಪನಿ ಪ್ರಾರಂಭಿಸಿದರು. ಬೆಂಗಳೂರು ದೊಡ್ಡಣ್ಣ ಹಾಲ್‌ನಲ್ಲಿ ನಾಟಕಗಳ ಪ್ರದರ್ಶನಕ್ಕೆ ಏರ್ಪಾಟಾಯಿತು.

ಕೃಷ್ಣ, ಕಾಳಿದಾಸ, ಅರ್ಜುನ, ರಾಜ ಕಿರೀಟಿ, ರಾಮ, ಚಂದ್ರಭಾನು, ಹರಿಶ್ಚಂದ್ರ, ಜಯವೀರ, ಕನಕಸುಂದರ ಮೊದಲಾದ ರಾಜಾ ಪಾರ್ಟುಗಳನ್ನು ಗುರುಮೂರ್ತಪ್ಪ ವಹಿಸುತ್ತಿದ್ದರು.

ನಾಲ್ವಡಿ ಕೃಷ್ಣರಾಜ ಒಡೆಯರ್‌ರು ಜಗನ್ಮೋಹನ ಅರಮನೆಯಲ್ಲಿ ನಾಟಕಗಳನ್ನಾಡಲು ಆಹ್ವಾನಿಸಿದರು. 'ಕವಿರತ್ನ ಕಾಳಿದಾಸ' ನಾಟಕದಲ್ಲಿ ಕುರುಬ ಮತ್ತು ಕಾಳಿದಾಸನ ಪಾತ್ರವನ್ನು ಗುರುಮೂರ್ತಪ್ಪನವರು ವಹಿಸಿದರು. ಪ್ರಭುಗಳು 'ನಿಮ್ಮ ಧ್ವನಿ ಸಂಗೀತಕ್ಕಾಗಿಯೇ ಮಾಡಿದ ಧ್ವನಿ. ನಿಮ್ಮ ಹಾಡಿಕೆಯಲ್ಲಿ ಭಾವ–ರಾಗ–ತಾಳ ಈ ಮೂರು ಅಂಶಗಳೂ ಪೂರ್ಣವಾಗಿವೆ' ಎಂದು ಶ್ಲಾಘಿಸಿದರು.

ಗುಬ್ಬಿ ಕಂಪನಿಯಲ್ಲಿ ಎಲ್ಲ ಪ್ರಮುಖ ಪಾತ್ರಗಳನ್ನೂ ನಿರ್ವಹಿಸಿ ಶ್ರೇಷ್ಠ ದರ್ಜೆಯ ನಟರ ಸಾಲಿಗೆ ಸೇರಿದರು. ಈ ಹಿರಿಯ ವೃತ್ತಿನಾಟಕ ಸಂಸ್ಥೆಯಲ್ಲಿ ಹನ್ನೆರಡು ವರ್ಷಕಾಲ ಅವಿಚ್ಛಿನ್ನ ರಂಗಸೇವೆಯ ನಂತರ ತಮ್ಮ 51ನೇ ವಯಸ್ಸಿನಲ್ಲಿ ಸ್ವಗ್ರಾಮದಲ್ಲಿ ನೆಲೆಸಿದರು.

ಪರಿಣತ ಸಂಗೀತಜ್ಞರಾಗಿ, ನಿಷ್ಠಾವಂತ ನಟರಾಗಿ ಸರಿಸುಮಾರು 50 ವರ್ಷಗಳ ಕಾಲ ಕನ್ನಡ ರಂಗಭೂಮಿಯ ಸೇವೆ ಸಲ್ಲಿಸಿದ ಶ್ರೀಯುತರಿಗೆ 1963ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.



## 1964ರ ಪ್ರಶಸ್ತಿ ವಿಜೇತರು



### ಕೊಟ್ಟೂರು ಬಸವಯ್ಯ

ಕೊಟ್ಟೂರು ಬಸವಯ್ಯ (ಕೊಟ್ಟೂರಪ್ಪ) ಅವರ ಹೆಸರನ್ನು ಕನ್ನಡನಾಡಿನಲ್ಲಿ ಕೇಳದವರೇ ವಿರಳ. 'ಕರ್ಣ' ಎಂದರೆ ಕೊಟ್ಟೂರಪ್ಪ, ಕೊಟ್ಟೂರಪ್ಪ ಎಂದರೆ 'ಕರ್ಣ' ಎನ್ನುವಷ್ಟು ಜನಪ್ರಿಯತೆ ಗಳಿಸಿತ್ತು ಅವರ ಕರ್ಣನ ಪಾತ್ರ.

ಅತ್ಯಂತ ಭಾವುಕವಾದ ನಿರೂಪಣೆ, ಮೋಹಕವಾದ ಕಂಠಶ್ರೀ, ಸಜೀವವಾದ ಪಾತ್ರಾಭಿನಯ, ಉತ್ಸಾಹ ಪೂರ್ಣ ಕಲಾಶ್ರದ್ಧೆ ಇವುಗಳಿಂದ ಕನ್ನಡ ರಂಗಭೂಮಿಯ ಪ್ರತಿಭಾನ್ವಿತ ನಟರೆನಿಸಿಕೊಂಡಿದ್ದ ಅವರ ಬದುಕಿನ ಕ್ಲೇಶ, ಕಷ್ಟಗಳಿಗೆ ಜಗ್ಗದೆ, ವಯಸ್ಸಿನ ಭಾರಕ್ಕೆ ಬಾಗದೆ ಯೌವನೋತ್ಸಾಹದಿಂದ ಏಳು ದಶಕಗಳ ಪರ್ಯಂತ ಕನ್ನಡ ರಂಗಭೂಮಿಯ ಸೇವೆಯನ್ನು ಸಲ್ಲಿಸಿದರು.

ಅವರು 1882ರಲ್ಲಿ ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿನಲ್ಲಿ (ಸೋಗೆ ಗ್ರಾಮ) ರುದ್ರಯ್ಯ–ಗುರುಬಸಮ್ಮ ಅವರ ಐದನೆಯ ಪುತ್ರರಾಗಿ ಜನಿಸಿದರು.

ಅಂದಿನ ನಾಟಕಗಳು ಇಂದಿನ ಹಾಗೆ ನವ ನಾಗರಿಕತೆಯಿಂದಾಗಲಿ, ಪ್ರಸಾಧನದಿಂದಾಗಲಿ, ಭವ್ಯ ದೃಶ್ಯಗಳ ಅಳವಡಿಕೆಯಿಂದಾಗಲಿ ಕೂಡಿರಲಿಲ್ಲ. ಸ್ತ್ರೀ ಪಾತ್ರಗಳನ್ನು ಸ್ತ್ರೀಯರೇ ವಹಿಸದೆ ಪುರುಷರೇ ವಹಿಸುತ್ತಿದ್ದರು. ಸೀಮೆಎಣ್ಣೆಯ ಕಕ್ಕಡಗಳ ಬೆಳಕಿನಲ್ಲಿಯೇ ನಾಟಕಗಳನ್ನು ಪ್ರದರ್ಶಿಸಬೇಕಾಗಿದ್ದಿತು. ಸಂಗೀತವೇ ಅಂದಿನ ನಾಟಕಗಳ ಪ್ರಮುಖ ಜೀವಾಳವಾಗಿದ್ದುದರಿಂದ ಸಂಗೀತ ಜ್ಞಾನವಿಲ್ಲದ, ಶಾರೀರವಿಲ್ಲದ ನಟರಿಗೆ ಯಾವ ಗೌರವವಾಗಲೀ, ಸ್ಥಾನವಾಗಲೀ ಇರಲಿಲ್ಲ. ಇದನ್ನರಿತ್ತಿದ್ದ ಶಿರಹಟ್ಟಿ ವೆಂಕೋಬರಾಯರು ಸಂಗೀತ ಪ್ರಧಾನವಾದ ನಾಟಕಗಳಿಗೇ ತಮ್ಮ ಕಂಪನಿಯಲ್ಲಿ ಹೆಚ್ಚು ಪ್ರಾಶಸ್ತ್ಯವಿತ್ತಿದ್ದರು.

ಮೈಸೂರು ಮೊಕ್ಕಾಂನಲ್ಲಿ 'ಭೋಜ ಪ್ರಬಂಧ' ನಾಟಕವನ್ನು ಕಂಪನಿಯವರು ಅಭ್ಯಾಸ ಮಾಡಿದರು. ಕೊಟ್ಟೂರಪ್ಪನವರದೇ ಕಾಳಿದಾಸ ಪಾತ್ರ. ಈ ಪಾತ್ರದಲ್ಲಿ ಇವರ ನಟನಾ ಕೌಶಲ ಮತ್ತು ಸಂಗೀತ ಸುಧೆ ಕಲಾಭಿಮಾನಿಗಳೂ, ಕಲಾ ಪ್ರೋತ್ಸಾಹಕರೂ ಆದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರನ್ನು ಆಕರ್ಷಿಸಿತು. ನಾಟಕ ನೋಡಿ ಪ್ರಭುಗಳು ಸಂತೋಷಪಟ್ಟು ಎರಡು ಸಾವಿರ ರೂ. ನಗದು ಬಹುಮಾನವನ್ನಿತ್ತು ಗೌರವಿಸಿದರು.

ಅರಮನೆ ಕಂಪನಿ ನಿಂತು ಹೋದ ನಂತರ ಕೊಟ್ಟೂರಪ್ಪನವರು ಚಾಮುಂಡೇಶ್ವರಿ ಕಂಪನಿಗೆ ಪದಾರ್ಪಣಗೈದರು. ಭವ್ಯವಾದ ಪರದೆಗಳು, ವೇಷ ಭೂಷಣಗಳು, ಸೆಟ್ಟಿಂಗ್ಸ್‌ನಿಂದ ಕೂಡಿದ್ದ ಈ ಕಂಪನಿಯ 'ದಾನಶೂರ ಕರ್ಣ', 'ರಾಜಸೂಯ ಯಾಗ', 'ಕುರುಕ್ಷೇತ್ರ' ಮೊದಲಾದ ನಾಟಕಗಳಲ್ಲಿ ಕರ್ಣ, ಆಂಜನೇಯ, ನಾರದ ಮೊದಲಾದ ಪಾತ್ರಗಳನ್ನು ಸಮರ್ಥ ರೀತಿಯಲ್ಲಿ ನಿರ್ವಹಿಸಿ 'ಶ್ರೇಷ್ಠ ನಟ' ಎಂಬ ಕೀರ್ತಿಗೆ ಭಾಜನರಾದರು. ಕರ್ಣನ ಪಾತ್ರದಲ್ಲಂತೂ ಅವರು ತೋರುತ್ತಿದ್ದ ತನ್ಮಯತೆಯ ಅಭಿನಯ, ಹಾಡುಗಾರಿಕೆ ಅವರನ್ನು 'ಕನ್ನಡ ರಂಗಭೂಮಿಯ ಅಭಿನವ ಕರ್ಣ' ಎಂಬ ಪ್ರಶಂಸೆಗೆ ಪಾತ್ರರನ್ನಾಗಿಸಿತು. ಚಾಮುಂಡೇಶ್ವರಿ ಕಂಪನಿಯಲ್ಲಿ ಕೊಟ್ಟೂರಪ್ಪನವರು ದೀರ್ಘ ಕಾಲ ಕಲಾ ಸೇವೆ ಸಲ್ಲಿಸಿದರು.

ಶ್ರೀಯುತರ ಅಖಂಡ ಕಲಾ ಸೇವೆಯನ್ನು ಮೆಚ್ಚಿ ಮೈಸೂರು ರಾಜ್ಯ ಸಂಗೀತ, ನಾಟಕ ಅಕಾಡೆಮಿ 1964ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

## 1965ರ ಪ್ರಶಸ್ತಿ ವಿಜೇತರು

## ಮೂಡ್ಕಣಿ ನಾರಾಯಣ ಹೆಗಡೆ

ಇವರು ಶಾಸ್ತ್ರೀಯವಾಗಿ ನಾಟ್ಯಭ್ಯಾಸ ಮಾಡಿದ ಅತ್ಯಂತ ಶ್ರೇಷ್ಠ ಕಲಾವಿದರು. ದಿವಂಗತ ಕೊಂಡದಕುಳಿ ರಾಮಹೆಗಡೆ ಹಾಗೂ ಲಕ್ಷ್ಮಣಹೆಗಡೆ ಅವಳಿ ಸಹೋದರರಿಗೆ ಯಕ್ಷಗಾನದ ಗುರುಗಳು. ಮಹಾಗಣಪತಿ ಯಕ್ಷಗಾನ ಮಂಡಳಿ, ಮೂಡ್ಕಣಿ ಇದರ ಸಂಸ್ಥಾಪಕರು. ಸುಮಾರು 93 ವರ್ಷಗಳ ಕಾಲ ಬದುಕಿದ್ದರು.

ಇವರು ದಶರಥ ಪಾತ್ರ, ಕೃಷ್ಣರುಕ್ಮಾಂಗದ, ಅರ್ಜುನ ಮುಂತಾದ ಪಾತ್ರಗಳಿಗೆ ಪ್ರಸಿದ್ಧರು. ಇವರ ಕಲಾಸೇವೆಯನ್ನು ಮೆಚ್ಚಿ ಮೈಸೂರು ರಾಜ್ಯ ಸಂಗೀತ, ನಾಟಕ ಅಕಾಡೆಮಿಯು 1965ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

ಇವರ ಕಲಾ ಸೇವೆಯನ್ನು ಮೆಚ್ಚಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಇವರ 1965ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಎಂ. ಸುಬ್ಬರಾಯರು

ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಸಣ್ಣ ಗ್ರಾಮ ಮೂಕನಹಳ್ಳಿಯಲ್ಲಿ ಸುಬ್ಬರಾಯರ ಜನನವಾಯಿತು. ತಂದೆ ರಾಮಣ್ಣ, ತಾಯಿ ಅಚ್ಚಮ್ಮ. ಹನ್ನೊಂದನೆಯ ತಿಂಗಳಿನಲ್ಲೇ ತಾಯಿ ಗತಿಸಿಹೋದರು. ಗೌರಿಬಿದನೂರು ತಾಲ್ಲೂಕು ಹುಣಸೇನಹಳ್ಳಿ ರಾಯರ ಪೂರ್ವಸ್ಥಳ. ಬಾಲ್ಯದಿಂದಲೂ ಅವರಿಗೆ ಸಂಗೀತದಲ್ಲಿ ಅಭಿರುಚಿ. ದೇವರನಾಮಗಳನ್ನು ಹಾಡುತ್ತಿದ್ದರು.

ಗುಬ್ಬಿಯ ಚಂದಣ್ಣನವರ ಕಂಪನಿ (ಗುಬ್ಬಿ ಕಂಪನಿ)ಯಲ್ಲಿ ಸುಬ್ಬರಾಯರ ಮಾವ ನಟಭಯಂಕರ ಗಂಗಾಧರರಾಯರಿದ್ದರು. ಗುಬ್ಬಿ ಚಂದಣ್ಣನವರ ಡೇರಾದಲ್ಲಿ ಸುಬ್ಬರಾಯರು ತಮ್ಮ ಕೆಲವು ಸ್ನೇಹಿತರೊಂದಿಗೆ 'ಪ್ರಹ್ಲಾದ ಚರಿತ್ರೆ' ನಾಟಕವಾಡಿದರು. ಆ ನಾಟಕಕ್ಕೆ ನಾಟಕರತ್ನ ಜಿ.ಎಚ್. ವೀರಣ್ಣನವರು ಹಾರ್ಮೋನಿಯಂ ನುಡಿಸಿದರು.

1919 ಗುಬ್ಬಿ ಕಂಪನಿ ತುಮಕೂರು ಮೊಕ್ಕಾಂ ಮಾಡಿತು. ಈ ಮೊಕ್ಕಾಂನಲ್ಲಿ ರಾಯರು ಗುಬ್ಬಿ ಕಂಪನಿಗೆ ಪದಾರ್ಪಣ ಮಾಡಿದುದು. 'ಸದಾರಮೆ' ನಾಟಕದಲ್ಲಿ ರಾಜಕುಮಾರನ ಪಾತ್ರ ಲಭ್ಯವಾಯಿತು. ಇದು ವೃತ್ತಿ ಕಂಪನಿಯಲ್ಲಿ ರಾಯರ ಪ್ರಥಮ ಪಾತ್ರ.

ಬೆಳ್ಳಾವೆ ನರಹರಿಶಾಸ್ತ್ರಿಗಳಿಂದ ವಿರಚಿತವಾದ 'ಶ್ರೀ ಕೃಷ್ಣಲೀಲಾ', 'ಕಂಸವಧಾ', 'ಯಮಗರ್ವಭಂಗ' ಮತ್ತು 'ರುಕ್ಮಿಣಿ ಸ್ವಯಂವರ' ಮೊದಲಾದ ನಾಟಕಗಳನ್ನು ಕಂಪನಿ ಪ್ರದರ್ಶಿಸತೊಡಗಿತು. 'ರುಕ್ಮಿಣಿ ಸ್ವಯಂವರ'ದಲ್ಲಿ ರಾಯರು ನಿರ್ವಹಿಸಿದ ಕೃಷ್ಣನ ಪಾತ್ರ ಕಲಾರಸಿಕರ ಮನವನ್ನು ಸೂರೆಗೊಂಡಿತು.

ಮಾತನಾಡುವ ವೈಖರಿಯನ್ನು ಗಂಗಾಧರರಾಯರನ್ನು ನೋಡಿಯೂ, ಪ್ರಸಾಧನ ಮತ್ತು ವೇಷಭೂಷಣಗಳನ್ನು ಸಿ.ಬಿ. ಮಲ್ಲಪ್ಪನವರನ್ನು ನೋಡಿಯೂ, ಹಾಡುತಕ್ಕ ಕ್ರಮವನ್ನು ಜಿ. ನಾಗೇಶರಾಯರನ್ನು ನೋಡಿಯೂ ಕಲಿತರು.

ಈ ಮೂವರ ಸಂಪರ್ಕದಿಂದ ಸುಬ್ಬರಾಯರ ಪಾತ್ರಗಳಿಗೆ ಪುಷ್ಟಿ ಬಂದಿತು. ನಂತರ ಗುಬ್ಬಿ ಕಂಪನಿಯಲ್ಲಿ ಆಂಜನೇಯನಪಾತ್ರ ನಿರ್ವಹಿಸತೊಡಗಿದರು. 1924ಕ್ಕೆ ಮುಂಚೆ ಗುಬ್ಬಿ ಕಂಪನಿಯಲ್ಲಿದ್ದ ಸುಬ್ಬರಾಯರು ಅನಂತರ

‘ಭಾರತ ಜನ ಮನೋಲ್ಲಾಸಿನಿ ನಾಟಕ ಸಭಾ’ಕ್ಕೆ ಸೇರಿದರು. ಪ್ರಾರಂಭದಲ್ಲಿ ‘ವೀರಸಿಂಹ ಚರಿತ್ರೆ’ಯಲ್ಲಿ ಚಿಕ್ಕರಾಣಿಯ ಪಾತ್ರವನ್ನು ಶ್ರೀ ರಾಚೋಟಪ್ಪನವರೇ ಹೇಳಿಕೊಟ್ಟು ಮಾಡಿಸಿದರು. ನಂತರ ದ್ರೌಪದಿ, ಕಯಾದು, ಚಂದ್ರಮತಿ, ಶಾಕುಂತಲಾ, ಚಾರುಮತಿ ಮೊದಲಾದ ಪಾತ್ರಗಳನ್ನೂ ನಿರ್ವಹಿಸತೊಡಗಿದರು. ಈ ಸ್ತ್ರೀ ಪಾತ್ರಗಳಲ್ಲಿ ‘ಕಯಾದು’ ಪಾತ್ರ ಅವರಿಗೆ ಅಪಾರ ಕೀರ್ತಿ ತಂದಿತು.

1935 ಗುಬ್ಬಿ ಕಂಪನಿ ಅದ್ದೂರಿಯ ರಂಗಸಜ್ಜಿಕೆ, ಉಡಿಗೆ–ತೊಡಿಗೆಯ ಭವ್ಯ ಪೌರಾಣಿಕ ನಾಟಕ ‘ಕುರುಕ್ಷೇತ್ರ’ವನ್ನು ಪ್ರದರ್ಶಿಸತೊಡಗಿತು. ಪ್ರಯೋಗ, ಅಭಿನಯ, ರಂಗಸಜ್ಜಿಕೆ–ಈ ಎಲ್ಲ ದೃಷ್ಟಿಯಿಂದಲೂ ತನ್ನದೇ ಆದ ವೈಶಿಷ್ಟ್ಯತೆಯಿಂದ ಕೂಡಿದ್ದ ಈ ನಾಟಕದಲ್ಲಿ ಅರ್ಜುನನಾಗಿ ಎಂ. ಸುಬ್ಬರಾಯರು ಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಈ ಪಾತ್ರದಲ್ಲಿ ಅವರು ತಮ್ಮ ಗಾಯನದಿಂದ ಪ್ರೇಕ್ಷಕರಿಗೆ ಕರ್ಣಾನಂದನವನ್ನುಂಟು ಮಾಡುತ್ತಿದ್ದರು.

ಗುಬ್ಬಿ ಕಂಪನಿ, ಗಂಗಾಧರರಾಯರ ಕಂಪನಿಯ ಮೂಲಕ ರಾಯರು ಐದು ದಶಕಗಳ ಪರ್ಯಂತ ಕನ್ನಡ ರಂಗಭೂಮಿಯ ಸೇವೆಯನ್ನು ಸಲ್ಲಿಸಿದ್ದಾರೆ.

ಈ ಅಭಿನವ ಶಿಖಾಮಣಿ ಕಲಾ ಸೇವೆಯನ್ನು ಮೆಚ್ಚಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ 1965ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.



## ಹುಲಿಮನೆ ಸೀತಾರಾಮಶಾಸ್ತ್ರಿ

ವೃತ್ತಿರಂಗದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿ, ಹೊಸ ರೂಪಕೊಟ್ಟು ಕಲಾಸೇವೆ ಮಾಡಿದವರಲ್ಲಿ ಶ್ರೀ ಹುಲಿಮನೆ ಸೀತಾರಾಮಶಾಸ್ತ್ರಿಗಳೂ ಒಬ್ಬರು.

ಶಾಸ್ತ್ರಿಗಳು ಸಿದ್ದಾಪುರ ತಾಲ್ಲೂಕಿನ ಹುಲಿಮನೆ ಎಂಬ ಹಳ್ಳಿಯಲ್ಲಿ ಮಧ್ಯಮ ತರಗತಿಯ ಕುಟುಂಬವೊಂದರಲ್ಲಿ 1906ರ ನವೆಂಬರ್ 11ರಂದು ಜನಿಸಿದರು. ಅವರಲ್ಲಿ ಕಲೆಯ ಗೀಳಿನ ಮನ ಬೆಂಗಳೂರಿನತ್ತ ದಾವಿಸಿತು. ಬೆಂಗಳೂರಿನಲ್ಲಿ ಶ್ರೀಯುತರಿಗೆ ಶ್ರೀ ಕರ್ಪೂರ ಶ್ರೀನಿವಾಸರಾಯರ ಆಶ್ರಯದೊರೆಯಿತು. ಇದೇ ಸಂದರ್ಭದಲ್ಲಿ ಶಾಸ್ತ್ರಿಗಳಿಗೆ ಕನ್ನಡ ರಂಗಭೂಮಿಯ ಐಸಿರಿ ನಾಟಕ ಶಿರೋಮಣಿ ವರದಾಚಾರ್ಯರ ಪರಿಚಯವಾಯಿತು. ಆಚಾರ್ಯರ ಭೇಟಿ ಬಣ್ಣದ ಬದುಕಿಗೆ ಪ್ರವೇಶಿಸಲು ನಾಂದಿಯಾಯಿತು.

1925ನೇ ಜುಲೈ 1 ರಂದು ಕರ್ನಾಟಕದ ಗಣನೀಯ ನಾಟಕ ಮಂಡಲಿಗಳಲ್ಲೊಂದೆನಿಸಿದ್ದ ಶ್ರೀ ದತ್ತಾತ್ರೇಯ ನಾಟಕ ಮಂಡಳಿಗೆ ಸೇರಿದರು. ಸರಿ, ಸುಮಾರು 5 ವರ್ಷಗಳ ಪರ್ಯಂತ ಈ ಮಂಡಳಿಯಲ್ಲಿ ನಾಟಕಾಭ್ಯಾಸ, ನಟನೆಯ ಕೌಶಲ್ಯಗಳನ್ನು ಅಭ್ಯಸಿಸಿದರು.

1929ರ ಅಂತ್ಯದಲ್ಲಿ ತಮ್ಮ ಅಚ್ಚು–ಮೆಚ್ಚಿನ ನಾಲ್ಕಾರು ಕಲಾವಿದರೊಂದಿಗೆ ಸಂಘದಿಂದ ಹೊರಬಂದರು. ‘ಶ್ರೀ ಗುರುಸಮರ್ಥ ನಾಟಕ ಸಂಘ’ ಎಂಬ ಲಾಂಛನದ ವೃತ್ತಿ ನಾಟಕ ಮಂಡಳಿಯನ್ನು ಕಟ್ಟಿದರು. ಇಲ್ಲಿಂದಲೇ ಶಾಸ್ತ್ರಿಗಳ ಕಲಾಜೀವನವು ಬೆಳಕಿಗೆ ಬರತೊಡಗಿತೆನ್ನಬಹುದು.

1932ರಲ್ಲಿ ಜನಪ್ರಿಯ ಮರಾಠಿ ‘ಪಂತಾಜಿಸೂನ್’ ನಾಟಕದ ಭಾಷಾಂತರ ಮಾಡಿ ‘ವರದಕ್ಷಿಣೆ’ ಎಂಬ ಹೆಸರಿನಿಂದ ನಾಟಕವನ್ನಾಡತೊಡಗಿದರು. ಈ ನಾಟಕದ ಯಶಸ್ಸು ಶಾಸ್ತ್ರಿಗಳನ್ನು ಉತ್ತೇಜಿಸಿತು. ‘ವೀರಧಾತ್ರಿಪನ್ನಾ’ ಎಂಬ ಐತಿಹಾಸಿಕ ನಾಟಕವನ್ನು ರಚಿಸಿದರು. ಹೀಗೆ ಇಲ್ಲಿ ನಾಲ್ಕೈದು ವರ್ಷಗಳ ಪರ್ಯಂತ ಕಲಾಸೇವೆ ಮಾಡಿದ ಶಾಸ್ತ್ರಿಗಳು ಈ ಕಂಪನಿ ಅನಿರೀಕ್ಷಿತವಾಗಿ ನಿಂತುಹೋದ್ದರಿಂದ 1935ರಲ್ಲಿ ‘ಶ್ರೀ ಜಯಕರ್ನಾಟಕ ನಾಟಕ ಸಭಾ’ ಎಂಬ ಹೆಸರಿನಲ್ಲಿ ತಾವೇ ಸ್ವಂತ ನಾಟಕ ಮಂಡಳಿಯನ್ನು ಸ್ಥಾಪಿಸಿದರು.

ಈ ಮಧ್ಯೆ ಕನ್ನಡ ರಂಗಭೂಮಿಯ ದುರಾದೃಷ್ಟವೋ ಏನೋ ಎನ್ನುವಂತೆ 1949ರಲ್ಲಿ ಅಂತ್ಯದಲ್ಲಿ ಇವರ ನಾಟಕ ಮಂಡಳಿಯು ರಾಯಚೂರಿನ ಮೊಕ್ಕಾಂ ಮಾಡಿದ್ದಾಗ್ಗೆ ರಜಾಕಾರರ ಹಾವಳಿಗೆ ಸಿಕ್ಕಿ ಒಂದು ಲಕ್ಷ ರೂ.ಗಳ ಸೀನರಿ–ಪರದೆ ಇನ್ನೂ ಅನೇಕ ಕಂಪನಿಯ ಸ್ವತ್ತುಗಳು ಸುಟ್ಟು ಭಸ್ಮವಾಗಿ ಹೋದವು.

1961ರ ಏಪ್ರಿಲ್ ಅವರ ಕಲಾಜೀವನದಲ್ಲಿಯೇ ಮರೆಯಲಾಗದ ಒಂದು ಸನ್ನಿವೇಶ. ಭಾರತದ ಪ್ರಥಮ ರಾಷ್ಟ್ರಪತಿಗಳಾಗಿದ್ದ ಡಾ॥ ರಾಜೇಂದ್ರ ಪ್ರಸಾದ್‌ರವರ ಸಮ್ಮುಖದಲ್ಲಿ 'ಟೀಪೂಸುಲ್ತಾನ್' ಏಕಪಾತ್ರಾಭಿನಯವನ್ನು ದೆಹಲಿಯಲ್ಲಿ ಯಶಸ್ವಿಯಾಗಿ ನಿರ್ವಹಿಸಿ ಮೆಚ್ಚುಗೆ ಪತ್ರವನ್ನು ಪಡೆದುಕೊಂಡರು.

ಶಾಸ್ತ್ರಿಗಳು ಕೇವಲ ನಟರೇ ಅಲ್ಲದೆ ನಾಟಕಕಾರರೂ ಆಗಿದ್ದರು. 'ವರದಕ್ಷಿಣೆ', 'ವೀರಧಾತ್ರಿ ಪನ್ನ', 'ಸಂಶಯ–ಸಾಮ್ರಾಜ್ಯ', 'ಧರ್ಮ ಸಾಮ್ರಾಜ್ಯ', 'ಸತೀಸಾವಿತ್ರಿ', 'ಟೀಪೂಸುಲ್ತಾನ್', 'ಪುತ್ರಾಪೇಕ್ಷೆ', 'ಮಾಯಾವಿ', 'ತಪ್ಪು ಗಂಟು', 'ನಡು ದಾರಿಯಲ್ಲಿ' ಇವೇ ಮೊದಲಾದ ಇತಿಹಾಸಿಕ, ಸಾಮಾಜಿಕ ನಾಟಕಗಳು ಅವರ ಲೇಖನಿಯಿಂದ ಬಂದಿವೆ. 'ಪುತ್ರಾಪೇಕ್ಷೆ' ಪ್ರಕಟಿತವೂ ಆಗಿದೆ.

ಈ ಎಲ್ಲಾ ನಾಟಕಗಳಲ್ಲೂ ಶಾಸ್ತ್ರಿ ಅವರು ಪ್ರಧಾನ ಪಾತ್ರವನ್ನು ನಿರ್ವಹಿಸುತ್ತಿದ್ದರು. ಅವರಿಗೆ 'ವರದಕ್ಷಿಣೆ' ನಾಟಕದ 'ಲಕ್ಷ್ಮೀಪತಿರಾಯ', 'ಸಂಶಯ ಸಾಮ್ರಾಜ್ಯ'ದ ದ ಫಲ್ಗುಣರಾಯ, 'ಪನ್ನದಾಸಿ'ಯ 'ಬನಬೀರ', 'ಟೀಪೂ ಸುಲ್ತಾನ್' ನಾಟಕದ 'ಟೀಪೂ' ಮೊದಲಾದ ಪಾತ್ರಗಳು ಅವರ ಹೆಸರನ್ನು ರಂಗಭೂಮಿಯ ಕ್ಷೇತ್ರದಲ್ಲಿ ಚಿರಸ್ಥಾಯಿಯನ್ನಾಗಿ ಮಾಡಿವೆ.

ರಂಗಭೂಮಿ ಕಲೆಗೆ ತುಂಬು ಸೇವೆಗೈದಿರುವ ಶ್ರೀ ಶಾಸ್ತ್ರಿಗಳನ್ನು ಮೆಚ್ಚಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ 1965ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.



## ಕೆರೆಮನೆ ಶಿವರಾಮ ಹೆಗಡೆ

ಯಕ್ಷಗಾನ ರಂಗಭೂಮಿ ಯುಗಪುರುಷರಲ್ಲೊಬ್ಬರೆನಿಸಿದ ಕೆರೆಮನೆ ಶಿವರಾಮ ಹೆಗಡೆಯವರಂತೆ ಉತ್ಕೃಷ್ಟ ಸಿದ್ಧಿಯ ಪರಾಕಾಷ್ಠೆ ತಲುಪಿದ ಸಿದ್ಧರು ಬೆರಳೆಣಿಕೆಯಷ್ಟು.

ಯಕ್ಷಗಾನ ಧ್ಯಾನ, ಚಿಂತನ, ಶಿಕ್ಷಣಗಳಲ್ಲಿ ನಿರತರಾಗಿರುವ ಹೆಗಡೆಯವರು ನಾಲ್ಕನೆ ತರಗತಿಗೇ ಓದುನಿಲ್ಲಿಸಿ, 13ರ ಪ್ರಾಯದಲ್ಲಿ ರಂಗವನ್ನೇರಿದವರು. ಮೊದಲ ಪ್ರವೇಶದಲ್ಲೆ ಯಕ್ಷರಂಗಕ್ಕೊಂದು ಆಸ್ತಿಯಾಗುವ ಪ್ರತಿಭೆಯಿದು ಎಂದು ರಂಗ ಸಂಘಟಕರಿಗೆ ಮನದಟ್ಟು ಮಾಡಿದವರು.

ಒಂದೆರಡು ಮೇಳಗಳಲ್ಲಿ ತಿರುಗಾಡಿ, 1934ರಲ್ಲಿ ಶ್ರೀ ಇಡಗುಂಜಿ ಮಹಾಗಣಪತಿ ಯಕ್ಷಗಾನ ಮಂಡಳಿ'ಯನ್ನು ಸ್ಥಾಪಿಸಿ ಉತ್ತರ ಕನ್ನಡದ ಅಂದಿನ ಘಟಾನುಘಟಿಗಳನ್ನೆಲ್ಲ ಸಂಘಟಿಸಿ ಅದನ್ನು ಶ್ರೇಷ್ಠ ಮಂಡಳಿಗಳಲ್ಲೊಂದನ್ನಾಗಿ ಮುನ್ನಡೆಸಿದರು.

50 ವರ್ಷಗಳ ಕಾಲ ಈ ಮಂಡಳಿ ಇವರ ಮತ್ತು ಇವರ ಮಗ ಶಂಭು ಹೆಗಡೆಯವರ ಕರ್ಣಧಾರತ್ವದಲ್ಲಿ ಶ್ರೇಷ್ಠ ಯಕ್ಷಗಾನ ಮಂಡಳಿಗಳಲ್ಲೊಂದಾಗಿ ಮೆರೆದು ಅನಂತರ ತಿರುಗಾಟವನ್ನು ನಿಲ್ಲಿಸಿ ಹವ್ಯಾಸಿ ಮಂಡಳಿಯಾಗಿ ಪರಿವರ್ತನೆಗೊಂಡಿತು.

ಹೆಚ್ಚು ರೂಢಿಯಲ್ಲಿಲ್ಲದ ಪ್ರಸಂಗಗಳನ್ನೆತ್ತಿಕೊಂಡು ಪ್ರದರ್ಶಿಸುವ ದಿಟ್ಟತನ ತೋರಿದ ಶಿವರಾಮ ಹೆಗಡೆ ಅವನ್ನು ಯಶಸ್ವಿಗೊಳಿಸಿದ್ದೂ ಹೆಗ್ಗಳಿಕೆ. ವೈವಿಧ್ಯಮಯ ಪಾತ್ರಗಳನ್ನು ಐದು ದಶಕಕ್ಕೂ ಹೆಚ್ಚು ಕಾಲ ನಿರ್ವಹಿಸಿ ಜನಮನದಲ್ಲಿ

ನೆಲೆ ನಿಂತ ಹೆಗಡೆಯವರದು ಎಲ್ಲೂ ನ್ಯೂನಾತಿರೇಕವಿಲ್ಲದಂತಹ ಅಭಿವ್ಯಕ್ತಿ, ಅಸಾಧಾರಣ ನೃತ್ಯ ಪರಿಣತಿ, ನವನವೋನ್ಮೇಷಶಾಲೀ ಕಲ್ಪನಾ ಶಕ್ತಿ, ಔಚಿತ್ಯ ಪ್ರಜ್ಞೆ ಇವರ ಬಂಡವಾಳ. ಸೂಕ್ಷ್ಮ ಹೆಜ್ಜೆ, ದಣಿವು ಕಾಣದ ಪಾದರಸದಂತಹ ಚಟುವಟಿಕೆ, ಭಾವ ಪೂರ್ಣ ಮಾತುಗಾರಿಕೆಗಳಿಂದ ವಹಿಸಿದ ಯಾವ ಪಾತ್ರವೂ ಅನನ್ಯ. ಸ್ತ್ರೀ ವೇಷವೂ ಇವರಿಗೆ ಒಲಿದದ್ದೇ.

ಈ ಕಲಾತಪಸ್ವಿಗೆ 1965ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.



## 1966ರ ಪ್ರಶಸ್ತಿ ವಿಜೇತರು



### ಬಿ.ಆರ್. ಪಂತುಲು

ಬಂಗಾರಪೇಟೆ ಸಮೀಪದ ಕುಪ್ಪಂಗೆ ಹನ್ನೊಂದು ಕಿಲೋಮೀಟರ್ ದೂರದಲ್ಲಿರುವ ಕುಗ್ರಾಮ ಬಡುಗೂರುನಲ್ಲಿ ಸಾವಿರದ ಒಂಬೈನೂರ ಹನ್ನೊಂದರಲ್ಲಿ ವೆಂಕಟಚಲಯ್ಯನವರ ಮೂರು ಮಂದಿ ಗಂಡುಮಕ್ಕಳು, ಇಬ್ಬರು ಹೆಣ್ಣು ಮಕ್ಕಳಲ್ಲಿ ಕಿರಿಯ ಮಗನಾಗಿ ಜನಿಸಿದರು ಬಿ.ಆರ್. ಪಂತುಲು.

ಪಂತುಲು ಅವರ ವ್ಯಕ್ತಿತ್ವ, ಪರಾಕ್ರಮ, ಮೈತಳೆದಿದ್ದು ಕನ್ನಡ ವ್ಯಕ್ತಿ ರಂಗಭೂಮಿಯಲ್ಲಿ. ಪಂತುಲು ಅವರು ಜನಿಸಿದ ಗ್ರಾಮ ಗಡಿಪ್ರದೇಶದಲ್ಲಿದ್ದುದರಿಂದ ತೆಲುಗು ಮತ್ತು ತಮಿಳುಗಳ ಪ್ರಭಾವ ಆ ಗ್ರಾಮದಲ್ಲಿ ತಾಂಡವವಾಡುತ್ತಿತ್ತು. ಆದರೆ ಪಂತುಲು ಅವರು ಈ ಭಾಷೆಗಳ ಪ್ರಭಾವದ ಸುಳಿಗೆ ಸಿಲುಕದೆ ಕನ್ನಡಿಗರಾಗಿಯೇ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡರು.

ಸ್ವಭಾವತಃ ಕಲಾಪ್ರೇಮಿಗಳಾಗಿದ್ದ ಇವರ ತಂದೆ ಸಂಗೀತ, ಸಾಹಿತ್ಯ, ನೃತ್ಯ ಮತ್ತು ನಾಟಕಕಲೆಗಳಲ್ಲಿ ಒಳ್ಳೆ ಅಭಿರುಚಿ ಹೊಂದಿದ್ದರು. ಈ ಅಭಿರುಚಿ ಮಗನಲ್ಲೂ ಮನೆಮಾಡಿತು. ಇವರು ಬಾಲ್ಯದಿಂದಲೇ ಮೂರು ಭಾಷೆಗಳನ್ನೂ ಕಲಿತರು. ಶಾಲಾ ಸಮಾರಂಭಗಳಲ್ಲಿ ಪ್ರಹ್ಲಾದ, ಚಂದ್ರಹಾಸ ನಾಟಕಗಳಲ್ಲಿ ಪಾತ್ರವಹಿಸಿ ಮೆಚ್ಚುಗೆ ಪಡೆದರು.

ಇವರಿಗೆ ಶಾಲಾ ಉಪಾಧ್ಯಾಯನ ವೃತ್ತಿ ದೊರೆಯಿತು. ಹುಟ್ಟು ಕಲಾವಿದರಾಗಿದ್ದ ಪಂತುಲು ಶಾಲೆಯಲ್ಲಿ ಹುಡುಗರಿಗೆ ಪಾಠ, ಪ್ರವಚನಗಳನ್ನು ಕಲಿಸುವ ಬದಲು ನಾಟಕಗಳನ್ನು ಕಲಿಸ ತೊಡಗಿದರು. ಇದರ ಪರಿಣಾಮವಾಗಿ ತಮ್ಮ ಉದ್ಯೋಗವನ್ನು ಕಳೆದುಕೊಳ್ಳಬೇಕಾಯಿತು.

ನಂತರ ಪಾಪಯ್ಯ ಎಂಬುವರ ಸಹಾಯದಿಂದ ಮಹಮದ್ ಪೀರ್ ಅವರ 'ಚಂದ್ರಕಲಾ ನಾಟಕ ಮಂಡಲಿ'ಗೆ ಪದಾರ್ಪಣ ಮಾಡಿದರು. ಅಂದು ಈ ಕಂಪನಿಯಲ್ಲಿ 'ಸಂಸಾರ ನೌಕ' ಯಶಸ್ವಿಯಾಗಿ ಪ್ರದರ್ಶಿತವಾಗುತ್ತಿತ್ತು. ಈ ನಾಟಕದ ಪ್ರಮುಖಪಾತ್ರ ಸುಂದರನ ಪಾತ್ರವೇ ಲಭಿಸಿತು. ಈ ಪಾತ್ರ ಅವರಿಗೆ ಕೀರ್ತಿ ತಂದಿತು. ಇಲ್ಲಿ ಹಲವಾರು ವರ್ಷವಿದ್ದು ಗುಬ್ಬಿ ಕಂಪನಿ ಸೇರಿದರು. 'ಆಶಾಪಾಶ', 'ಕೃಷ್ಣ ಗಾರುಡಿ' ಕಂಪನಿಯ ಹೆಸರಾಂತ ನಾಟಕಗಳೆನಿಸಿದ್ದವು. ಈ ನಾಟಕಗಳಲ್ಲಿ ವಸಂತಶೇಖರ, ಧರ್ಮರಾಯನ ಪಾತ್ರ ಮಾಡಿದರು. ಸ್ವಂತ ಕಂಪನಿ ಸ್ಥಾಪಿಸುವ ಉದ್ದೇಶದಿಂದ ಬೆಂಗಳೂರಿಗೆ ಬಂದು ತುಳಸಿ ತೋಟ ಥಿಯೇಟರ್‌ನಲ್ಲಿ 'ಕಲಾಸೇವಾ ಮಂಡಲಿ' ಲಾಂಛನದಲ್ಲಿ ಸ್ವಂತ ಕಂಪನಿ ಪ್ರಾರಂಭಿಸಿದರು.

ಎಚ್.ಎಲ್.ಎನ್. ಸಿಂಹ, ಎಂ.ಎಸ್. ಮಾಧವರಾವ್, ಡಿಕ್ಕಿ ಮಾಧವರಾವ್. ಇವರೆಲ್ಲವರೂ ಪಂತುಲು ಅವರ ಕಂಪನಿಗೆ ಸೇರಿದರು. 'ಸಂಸಾರ ನೌಕ'ವನ್ನು ಕಂಪನಿಯ ಪ್ರಧಾನ ನಾಟಕವನ್ನಾಗಿ ತೆಗೆದುಕೊಂಡರು. ಸುಂದರನ ಪಾತ್ರ ಪಂತುಲು ಅವರದು. ಈ ಪಾತ್ರದ ಜೊತೆಗೆ ಪುರೋಹಿತ (ಸದಾರಮೆ), ರಾವಣ (ರಾಮಾಯಣ), ನಾಯಕ (ಗುಲೇಬಕಾವಲಿ) ಮೊದಲಾದ ಪಾತ್ರಗಳನ್ನು ಅಭಿನಯಿಸಿ ಜನಪ್ರಿಯರಾದರು.

ಮದರಾಸಿನ ದೇವಿ ಫಿಲಂಸ್‌ನ ಸೇಲಂನ ರಾಜಗೋಪಾಲಚೆಟ್ಟಿ ಅವರು ನಾಟಕ ನೋಡಿ ಮೆಚ್ಚಿ ಚಿತ್ರ ತಯಾರಿಸಲು ಸಿದ್ಧರಾದರು. ನಟ–ಪ್ರಯೋಗಶೀಲ ಎಚ್.ಎಲ್.ಎನ್. ಸಿಂಹ ದಿಗ್ದರ್ಶಕರು. 1936 'ಸಂಸಾರ ನೌಕ' ತಯಾರಾಯಿತು. ಪಂತುಲು ಅವರು ಚಿತ್ರದಲ್ಲೂ ಸುಂದರನ ಪಾತ್ರವನ್ನೇ ವಹಿಸಿದರು. ಕರ್ನಾಟಕದ ಪ್ರಮುಖ ಕೇಂದ್ರಗಳಲೆಲ್ಲಾ ಚಿತ್ರ ಬಿಡುಗಡೆಯಾಗಿ ಕೀರ್ತಿ ಲಭಿಸಿತು.

ಟಿ.ಆರ್. ಮಹಾಲಿಂಗಂ ನಾಟಕ ಕಂಪನಿಯಲ್ಲಿ ಮ್ಯಾನೇಜರ್ ಹಾಗೂ ನಟನಾಗಿ ಕೆಲಸ ಕೈಗೊಂಡರು. ಮುಂದೆ 'ಲವಂಗಿ', 'ವಿಜಯಲಕ್ಷ್ಮಿ', 'ವೀಟು', ಮೊದಲಾದ ತಮಿಳು ಚಿತ್ರಗಳಲ್ಲಿ ಅಭಿನಯಿಸಿದರು. ತಮಿಳುನಾಡಿನಲ್ಲೆಲ್ಲಾ ಖ್ಯಾತಿಗೊಂಡರು.

1958ರಲ್ಲಿ 'ಸ್ಕೂಲ್ ಮಾಸ್ಟರ್' ಚಿತ್ರವನ್ನು ನಿರ್ಮಿಸಿದರು. ಅಖಿಲ ಭಾರತ ಮಟ್ಟದಲ್ಲಿ ಪ್ರಶಸ್ತಿ ಪಡೆದ ಮೊದಲ ಕನ್ನಡ ಚಿತ್ರವೆನಿಸಿತು. 'ಕಟ್ಟಾ ಬೊಮ್ಮನ್' ಪಂತುಲು ಅವರ ಕೀರ್ತಿಯನ್ನು ಅಮರವನ್ನಾಗಿಸಿತು.

ಎಂ.ವಿ. ರಾಜಮ್ಮ ಪದ್ಮಿನಿ ಪಿಕ್ಚರ್ಸ್ ಸಂಯುಕ್ತ ಉದ್ಯಮವಾಗಿ 'ಮಕ್ಕಳ ರಾಜ್ಯ' ನಿರ್ಮಾಣವಾಯಿತು. ಪುಟ್ಟಣ್ಣ ಕಣಗಾಲ್ ಈ ಚಿತ್ರದ ಮೂಲಕ ಚಿತ್ರರಂಗಕ್ಕೆ ಪದಾರ್ಪಣ ಮಾಡಿದರು. 'ಕಿತ್ತೂರು ಚೆನ್ನಮ್ಮ' ಚಿತ್ರ ಪಂತುಲು ಅವರ ಹೆಸರನ್ನು ಕನ್ನಡ ನಾಡಿನಲ್ಲಿ ಮನೆ ಮಾತಾಗಿಸಿತು.

ಕನ್ನಡ ರಂಗಭೂಮಿಯ ಪುನರುಜ್ಜೀವನ ಕಾಲದಲ್ಲಿ ಪಂತುಲು ಅವರು ಸಲ್ಲಿಸಿದ ಸೇವೆ ಉಲ್ಲೇಖನಾರ್ಹವಾದುದು.

ಶ್ರೀಯುತರ ಕಲಾ ಸೇವೆಯನ್ನು ಮೆಚ್ಚಿ 1966ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಜೋಳದರಾಶಿ ದೊಡ್ಡನ ಗೌಡರು

ಬಳ್ಳಾರಿ ಜಿಲ್ಲೆಯ ಜೋಳದ ರಾಶಿ ಗ್ರಾಮದವರು. ದೊಡ್ಡನಗೌಡರ ತಾತ ಸಣ್ಣ ಹೊನ್ನೇಗೌಡರು ಮೂಲತಃ ಪ್ರಸಿದ್ಧ ಬಯಲಾಟದ ಕವಿ-ನಟ ಆಗಿದ್ದುದರಿಂದ ದೊಡ್ಡನ ಗೌಡರಿಗೂ ಸಂಗೀತ ಮತ್ತು ರಂಗಭೂಮಿಯ ಒಲವುಗಳಿಗೆ ಪ್ರೋತ್ಸಾಹ ಸಿಕ್ಕಿತು.

1931ರಲ್ಲಿ 'ಸರ್ವಜನ ಮನೋರಂಜನಾ ನಾಟಕ ಸಭಾ'ದ ಪ್ರಖ್ಯಾತ ನಾಟಕಗಳ ಮೂಲಕ ರಂಗಭೂಮಿ ಪ್ರವೇಶಿಸಿದ ಇವರು ಹಲವಾರು ಪ್ರದೇಶಗಳನ್ನು ಸುತ್ತಿ ಪ್ರದರ್ಶನವಿತ್ತರು.

'ಶ್ರೀ ಗವಿಮಠದ' ಚೆನ್ನಬಸವೇಶ್ವರ ಕೃಪಾ ಪೋಷಿತ ಸಂಗೀತ ನಾಟಕ ಸಂಘ' ಎಂಬ ಸ್ವಂತ ನಾಟಕ ಮಂಡಳಿಯನ್ನು ಆರಂಭಿಸಿದರು.

ಮುಂದೆ ಗೌಡರು ಬಳ್ಳಾರಿ ರಾಘವ ಅವರ 'ಆರ್ಟ್ ಲವರ್ಸ್ ಲೀಗ್'ನಲ್ಲಿ ಕಬೀರ, ನಾರದ, ಚಂದ್ರಗುಪ್ತ ಮೊದಲಾದ ಪಾತ್ರಗಳಲ್ಲಿ ರಂಜಿಸುತ್ತಾ ಕರ್ನಾಟಕದಾಚೆಗೆ ಆಂಧ್ರದಲ್ಲೂ ಸುತ್ತಿ ಹೆಸರಾದರು. ಗೌಡರು ಕಲೆಯನ್ನು ಆತ್ಮವಿಶ್ವಾಸದ ಸಾಧನವೆಂದು ಭಾವಿಸಿ ಕಲೆಯ ಎಲ್ಲಾ ಪ್ರಕಾರಗಳನ್ನೂ ಅಭ್ಯಾಸ ಮಾಡಿದವರು. ಕರ್ನಾಟಕ-ಆಂಧ್ರ ಎಲ್ಲೆಡೆಯ ಮಹಾ ವ್ಯಕ್ತಿಗಳೂ ಇವರ ಗಾನ-ಭಕ್ತಿಗಳ ಪಾರವಶ್ಯವನ್ನು ಕಂಡು ಮೆಚ್ಚಿ ನುಡಿದಿದ್ದಾರೆ.

ಬಳ್ಳಾರಿಯ 'ರಾಘವ ಕಲಾಮಂದಿರ' ನಿರ್ಮಾಣಕ್ಕೆ ಗೌಡರು ಮುಖ್ಯ ಕಾರಣ. ಕನ್ನಡ ನಾಟಕ ಕಲಾ ಪರಿಷತ್ತನ್ನು ನಡೆಸಿ ಆಗಿಂದಾಗ್ಗೆ ಗರೂಡ ಸದಾಶಿವರಾವ್, ಜಿ.ಎಚ್. ವೀರಣ್ಣ, ಆರ್. ನಾಗೇಂದ್ರರಾಯರು, ಅ.ನ. ಕೃಷ್ಣರಾಯರು ಮೊದಲಾದ ಹೆಸರಾಂತವರನ್ನು ಕರೆಸಿ ವಿಚಾರಮಂಥನ ಮಾಡಿದ್ದಾರೆ. ಹಲವು ಬಿರುದು ಬಾವಲಿಗಳು ಇವರ ಗಮಕ ಕಲೆಗೆ ಸಂದಿದೆ. 1947ರಲ್ಲಿ ಗೋಕಾಕದಲ್ಲಿ ನಡೆದ ಜನಪದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು.

ಶ್ರೀಯುತರ ಕಲಾ ಸೇವೆಯನ್ನು ಮೆಚ್ಚಿ 1966ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

ಕಲೆಯನ್ನು ಶುದ್ಧವಾದ ಭಕ್ತಿಪೂರ್ಣವಾದ ರೀತಿಯಲ್ಲಿ ಸ್ವೀಕರಿಸಬೇಕೆನ್ನುವ, ಪರಿಪೂರ್ಣತೆಗಾಗಿ ದುಡಿಯುವ ಗೌಡರು ಶ್ರೇಷ್ಠಕಲಾವಿದರು.

---



## ಹಮ್ಮಿಗಿ ನೀಲಕಂಠಪ್ಪ

'ನಾಟ್ಯ ಸಾಮ್ರಾಜ್ಞೆ' ಬಿರುದಾಂಕಿತ ಶ್ರೀ ಹಮ್ಮಿಗಿ ನೀಲಕಂಠಪ್ಪನವರು. ಕನ್ನಡ ರಂಗಭೂಮಿಯ ಉಚ್ಛ್ರಾಯಕ್ಕಾಗಿ ತಮ್ಮ ಸಮಸ್ತಗಳಿಕೆಯನ್ನೂ ಸಮರ್ಪಿಸಿದವರು. ಕನ್ನಡ ವೃತ್ತಿರಂಗಭೂಮಿಯಲ್ಲಿ ವಿವಿಧ ಸ್ತ್ರೀಪಾತ್ರಗಳನ್ನು ವಹಿಸಿ ಕೀರ್ತಿ ಶಾಲಿಯಾದವರು.

ಧಾರವಾಡ ಜಿಲ್ಲಾ ಮುಂಡರಗಿ ತಾಲ್ಲೂಕಿನ ಹಮ್ಮಿಗಿ ಎಂಬ ಗ್ರಾಮದಲ್ಲಿ 1904ರಲ್ಲಿ ನೀಲಕಂಠಪ್ಪನವರ ಜನನವಾಯಿತು. ಜನ್ಮದ ಜೊತೆಗೇ ಅಳುವಾಗಿ ನಿಂದಲೇ ನಗುವಿನ ಕಲೆಯ ಗೀಳೂ ಬಂದಿತು.

ಅನೇಕ ದಶಕಗಳ ಕಾಲ ಕನ್ನಡ ರಂಗಭೂಮಿಯ ಸೇವೆಯನ್ನು ಸತತವಾಗಿ ಮಾಡಿದ ಮಹೋನ್ನತ ಕೀರ್ತಿ ದಿ॥ ಗರೂಡ ಸದಾಶಿವರಾಯರಿಗೆ ಸಲ್ಲಬೇಕು. ತಮ್ಮ ಅಭಿನಯ ಪ್ರಾವೀಣ್ಯತೆ ಬೆಳೆಸಿಕೊಂಡು ಬಂದಂತೆ ಶ್ರೀ ದತ್ತಾತ್ರೇಯ ನಾಟ್ಯ ಸಂಘವನ್ನು ಕಟ್ಟಿ, ಅದನ್ನು ಪೋಷಿಸಿ, ಅನೇಕ ನಟ–ನಟಿಯರನ್ನು ಪ್ರತಿಭಾವಂತರನ್ನಾಗಿ ಮಾಡಿ, ಅವರನ್ನು ಬೆಳಕಿಗೆ ತಂದ ಗೌರವ ಇವರಿಗೆ ಸಲ್ಲುತ್ತದೆ. ಗರೂಡರ ಅಭಿನಯ ಗರುಡಿಯಲ್ಲಿ ಸಾಧನೆ ಮಾಡಿದ ಹಲವಾರು ಮಂದಿ ನಟರಲ್ಲಿ ಅವರ ಜೀವನವುದ್ದಕ್ಕೂ ಮೆಚ್ಚುಗೆಯ ನಾಲ್ಕಾರು ಮಂದಿ ಶಿಷ್ಯರಲ್ಲಿ ಹಮ್ಮಿಗಿ ನೀಲಕಂಠಪ್ಪನವರು ಅತ್ಯಂತ ಪ್ರಮುಖರು.

ತಮ್ಮ ಪಾತ್ರಕ್ಕೆ ಬೇಕಾದ ಸ್ತ್ರೀ ಸ್ವಭಾವದ ಗುಣಗಳು ಶ್ರೀಯುತರಲ್ಲಿ ದೈವದತ್ತವಾಗಿ ಬಂದಿದ್ದರೂ ಅವರು ಅದನ್ನು ಸತತ ಸಾಧನೆ, ಸ್ವಪ್ರಯತ್ನ, ಶ್ರದ್ಧೆಗಳಿಂದ ಮತ್ತಷ್ಟು ಕರಗತ ಮಾಡಿಕೊಂಡು, ತಮ್ಮದೇ ಆದ ಒಂದು ವೈಶಿಷ್ಟವನ್ನು ಸ್ಥಾಪನೆ ಮಾಡಿಕೊಂಡರು.

'ಜಾಂಬವತಿ' (ಚವತಿ ಚಂದ್ರ) 'ರುಕ್ಮಿಣಿ' (ಮಾಯಾಬಜಾರ್) 'ಮದಾಲಸಾ' (ಕಬೀರದಾಸ) ಹಾಗೂ ಕ್ರಾಂತಿಕಾರಕ ನಾಟಕಗಳಾದ 'ಎಚ್ಚಮನಾಯಕ'ದಲ್ಲಿನ ಬಾಯಮ್ಮಾ, 'ಸತ್ಯ ಸಂಕಲ್ಪ'ದಲ್ಲಿ ಶಾರದ, 'ಕೃಷ್ಣಲೀಲಾ'ದ ರಾಧಾ, 'ಶ್ರೀ ಶರಣ ಬಸವೇಶ್ವರ'ದ ಮಹಾದೇವಿ ಮೊದಲಾದ ಪಾತ್ರಗಳು ಕಲಾರಸಿಕರ ಹೃದಯದಲ್ಲಿ ಚಿರಸ್ಥಾಯಿಯಾಗಿ ನಿಂತವು.

ಸುಮಾರು ನಾಲ್ಕು ದಶಕಗಳ ಕಾಲ ಸ್ತ್ರೀ ಪಾತ್ರಗಳ ಮೂಲಕ 'ರಂಗಭೂಮಿಯ ರಾಣಿ' ಎನ್ನಿಸಿಕೊಂಡರು.

1934ರಲ್ಲಿ ನೀಲಕಂಠಪ್ಪನವರು 'ಶ್ರೀ ಭುವನೇಶ್ವರಿ ನಾಟ್ಯಸಂಘ' ಎಂಬ ಕಂಪನಿ ಸ್ಥಾಪಿಸಿದರು.

ಸದಾಶಿವರಾಯರ ಕೃತಿಗಳಲ್ಲದೆ, 'ಹೇಮರೆಡ್ಡಿ ಮಲ್ಲಮ್ಮ' ಮತ್ತು ಅಸ್ಪೃಶ್ಯತಾ ನಿವಾರಣೆಗೆ ಸಂಬಂಧಿಸಿದ 'ಸ್ವ ಜನೋದ್ಧಾರ' ಎಂಬ ನಾಟಕಗಳನ್ನೂ ಪ್ರದರ್ಶಿಸಿದರು.

ಬೆಳಗಾವಿ ಮೊಕ್ಕಾಮಿನಲ್ಲಿದ್ದಾಗ ಸಾಹಿತ್ಯ ಪರಿಷತ್ತಿನವರಿಂದ 'ರಂಗಭೂಮಿಯ ರಾಣಿ' ಎಂಬ ಬಿರುದು ಬಂದಿತು.

ಮೈಸೂರು ಸರ್ಕಾರದ ಸಂಗೀತ ನಾಟಕ ಅಕಾಡೆಮಿಯ ನಿವೃತ್ತಿ ವೇತನವೂ ದೊರೆಯಿತು.

ಇವರ ಕಲಾಸೇವೆಯನ್ನು ಕಂಡು 1966ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಶ್ರೀ ನೀಲಕಂಠಪ್ಪನವರಿಗೆ ಪ್ರಶಸ್ತಿ ನೀಡಿ ಗೌರವಿಸಿತು.



## ಜಾನುವಾರುಕಟ್ಟೆ ಗೋಪಾಲಕೃಷ್ಣ ಕಾಮತ್

ಬಡಗು ತಿಟ್ಟಿನಲ್ಲಿ ಹಿರಿಯರಾದ ಜಾನುವಾರು ಕಟ್ಟೆಯವರದ್ದು ಕಸರಿಲ್ಲದ ನಾಜೂಕಾದ ಸ್ವರ, ಸಂಕರವಿಲ್ಲದ ಶೈಲಿಯ ಸೊಬಗು. 81ರ ಈ ಪ್ರಾಯದಲ್ಲಿ ಅಂದಿನಷ್ಟೆ ಉತ್ಸಾಹದಿಂದ ಹಾಡಬಲ್ಲ ಇವರ ಕಂಠ ತನ್ನ ಸಂಸ್ಕಾರವನ್ನುಳಿಸಿಕೊಂಡಿದೆ.

40 ವರ್ಷಗಳಷ್ಟು ಸುದೀರ್ಘ ಕಾಲ ಮೇಳ ಭಾಗವತರಾಗಿ ದುಡಿದ ಜಾನುವಾರುಕಟ್ಟೆಯವರ ಸೇವೆಯಲ್ಲಿ 35 ವರ್ಷಗಳು ಮಂದರ್ತಿ ಮೇಳಕ್ಕೇ ಸಂದಿದ್ದು, ಇದೊಂದು ದಾಖಲೆಯನ್ನಬಹುದು. ನಾಲ್ಕು ವರ್ಷ ಅಮೃತೇಶ್ವರಿ ಮತ್ತು ಒಂದು ವರ್ಷ ಸೌಕೂರು ಮೇಳದಲ್ಲೂ ಭಾಗವತರಾಗಿದ್ದರು.

ಐಗಳ ಶಾಲೆಯಲ್ಲಿ ಮರಳ ಮೇಲೆ ಅಕ್ಷರಾಭ್ಯಾಸ ಮಾಡುವಲ್ಲಿಗೇ ಶಿಕ್ಷಣ ಮುಕ್ತಾಯ. ರಂಗ ಮೋಡಿ ಮಾಡಿ ಸೆಳೆದು ಅಲ್ಲಿ ಆಗಿನ ಮಹಾಭಾಗವತರೆನಿಸಿದ್ದ ಸೋದರಮಾವ ಶೇಷಗಿರಿಕಿಣಿಯವರಲ್ಲಿ ಭಾಗವತಿಕೆಯನ್ನು ಕಲಿತು ರಂಗವನ್ನೇರಿದರು.

ಹಳೆಶೈಲಿಯ ಒಂದು ಅಮೂಲ್ಯ ಆಸ್ತಿಯೆನಿಸಿರುವ ಜಾನವಾರುಕಟ್ಟೆಯವರು 1958ರಲ್ಲಿ ಬ್ರಹ್ಮಾವರದಲ್ಲಿ ನಡೆದ ಮೊದಲ ಯಕ್ಷಗಾನ ಗೋಷ್ಠಿಯಿಂದ ಹಿಡಿದು ಇಂದಿನವರೆಗೂ ಗೋಷ್ಠಿ, ಶಿಬಿರಗಳ ಅಧ್ಯಯನ ವಿಷಯಗಳಲ್ಲಿ ನೆರವಾಗಿದ್ದಾರೆ.

ಉಡುಪಿ ಯಕ್ಷಗಾನ ಕೇಂದ್ರದಲ್ಲಿ ಎರಡು ವರ್ಷ ಕಾಲ ಪ್ರಾಚಾರ್ಯರಾಗಿದ್ದ ಕಾಮತರು ಡಾ॥ ಕೋಟ ಶಿವರಾಮ ಕಾರಂತರ ಯಕ್ಷಗಾನ ಬ್ಯಾಲೆ ತಂಡದ ಭಾಗವತರಾಗಿ ಯಕ್ಷಗಾನ ಶೈಲಿಯ ಸೊಗಸನ್ನು ದೇಶಾದ್ಯಂತ ಕಲಾಭಿಜ್ಞರಾಗಿ ಪರಿಚಯಿಸಿದರು. ನೃತ್ಯ ಕಲಾವಿದೆ ಮಾಯಾರಾವ್ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಆಶ್ರಯದಲ್ಲಿ ಆಡಿಸಿದ ಆಟಗಳಲ್ಲಿ ಭಾಗವತಿಕೆಯನ್ನು ನಿರ್ವಹಿಸಿದರು. ಪ್ರೊ॥ ಬಿ.ವಿ. ಆಚಾರ್ಯರ ಯಕ್ಷಗಾನ ತಂಡದ ಭಾಗವತರಾಗಿ ಯುರೋಪ್, ಅಮೆರಿಕ ಪ್ರವಾಸ ಮಾಡಿ ಬಂದರು.

ಹಲವಾರು ಶಿಷ್ಯರನ್ನು ಕಾಮತರು ತಯಾರು ಮಾಡಿದ್ದು ಅವರಲ್ಲಿ ಕೆಲವರು ತುಂಬ ಒಳ್ಳೆಯ ಭಾಗವತರೆಂದು ಹೆಸರು ಮಾಡಿದ್ದಾರೆ.

ಇವರ ಕಲಾಸೇವೆಯನ್ನು ಗೌರವಿಸಿ 1966ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಕಾಮತರಿಗೆ ಪ್ರಶಸ್ತಿ ನೀಡಿ ಸಂಮಾನಿಸಿತು.



## ಎಂ.ಜಿ. ಮರಿರಾವ್

ನಾಟಕ ಶಿರೋಮಣಿ ದಿ॥ ಎ.ವಿ. ವರದಾಚಾರ್ಯರ ಕಂಪನಿಯಲ್ಲಿ ಹಲವಾರು ದಶಕಗಳ ಪರ್ಯಂತ ತಮ್ಮ ಹಾಸ್ಯಾಭಿನಯದ ಮೂಲಕ ಜನತೆಯ ಮೇಲೆ ಅತ್ಯುತ್ತಮ ರೀತಿಯ ಪ್ರಭಾವವನ್ನು ಬೀರಿದ ಶ್ರೀಯುತ ಎಂ.ಜಿ. ಮರಿರಾಯರಿಗೆ ಹಾಸ್ಯ ಪಾತ್ರಾಭಿನಯದಲ್ಲಿ ಒಂದು ವಿಶಿಷ್ಟ ಸ್ಥಾನವಿದೆ. ದಿ॥ ಎ.ವಿ. ವರದಾಚಾರ್ಯರ ಕಂಪನಿಯಲ್ಲಿದ್ದ ತಮ್ಮ ಅಣ್ಣ ಎಂ.ಜಿ. ಶೇಷಗಿರಿರಾಯರನ್ನು ನೋಡಲು ಶ್ರೀ ಮರಿರಾಯರು ಬಂದಾಗ (ಐದನೇ ವಯಸ್ಸಿನಲ್ಲಿ) ಅಣ್ಣ, ತನ್ನ ತಮ್ಮ ನಾಟಕ ಕಲೆಯ ಚಟಕ್ಕೆ ಬೀಳಬಾರದೆಂದು ಇಚ್ಛಿಸಿ ಮರಿರಾಯರನ್ನು ಸೇರಿಸಲಾಗದೆ ಒಂದೆರಡು ವರ್ಷಗಳು ತಮ್ಮಲ್ಲಿಯೇ ಇಟ್ಟುಕೊಂಡರು. ಈ ವೇಳೆಯಲ್ಲಿ ಅನಿರೀಕ್ಷಿತವಾಗಿ ಮರಿರಾಯರಿಗೆ ಪಾತ್ರವಹಿಸುವ ಅವಕಾಶ ಲಭ್ಯವಾಯಿತು. ನಟ ವರದಾಚಾರ್ಯರಿಗೆ ತಾವು

ಅಭಿನಯಿಸುತ್ತಿದ್ದ 'ಹರಿಶ್ಚಂದ್ರ' ನಾಟಕದಲ್ಲಿ ಕಾಶೀರಾಜನ ಪುತ್ರನ ಪಾತ್ರ ವಹಿಸುವ ಬಾಲಕನ ಅವಶ್ಯಕತೆ ಉಂಟಾಯಿತು. ಈ ಸಂಗತಿ ಮರಿರಾಯರ ಸಹೋದರರಿಗೆ ತಿಳಿದು ತಮ್ಮನನ್ನು ಕರೆತಂದು ಮುಖಕ್ಕೆ ಬಣ್ಣ ಹಾಕಿಸಿದರು. ಇದೇ ಅವರ ರಂಗ ಭೂಮಿಯ ಪ್ರವೇಶಕ್ಕೆ ನಾಂದಿಯಾಯಿತು.

'ಕಾಮಪಾಲ ಚರಿತ್ರೆ'ಯಲ್ಲಿ ಬಾಲನಟನಾಗಿಯೂ, 'ಧ್ರುವ ಚರಿತ್ರೆ'ಯಲ್ಲಿ ಧ್ರುವನಾಗಿಯೂ, 'ಭಕ್ತ ಪ್ರಹ್ಲಾದ'ದಲ್ಲಿ ಪ್ರಹ್ಲಾದನಾಗಿಯೂ, ಅತ್ಯುತ್ತಮವಾಗಿ ಅಭಿನಯಿಸಿ ಕನ್ನಡ ಕಲಾಭಿಮಾನಿಗಳ ಪೂರ್ಣ ಮೆಚ್ಚುಗೆಗೆ ಪಾತ್ರರಾದರು. ಕಂಪನಿಯಲ್ಲಿ ಎಲ್ಲರೂ ಮರಿರಾಯರನ್ನು ಹೊಗಳುವವರೇ ಆದರು. ಕಂಪನಿಯವರೆಲ್ಲಾ ಬಹು ಪ್ರೀತಿಯಿಂದ ಅವರನ್ನು 'ಮರಿ' ಎಂದು ಕೂಗತೊಡಗಿದರು.

ಹೀಗೆ ದಿನೇ ದಿನೇ ತಮ್ಮ ಅಭಿನಯದ ಹಾದಿಯಲ್ಲಿ ಜನಪ್ರಿಯತೆಗಳಿಸುತ್ತಾ ನಡೆದರು ಮರಿರಾಯರು. ಇವರ ಪಾತ್ರಗಳನ್ನು ಮೆಚ್ಚಿ ಕಲಾರಸಿಕರು ಬಹುಮಾನಗಳನ್ನು ಕೊಡುತ್ತಿದ್ದರು. ಸಂಗೀತಶಾಸ್ತ್ರರತ್ನ ದಿ॥ ಕೆ. ವಾಸುದೇವಾಚಾರ್ಯರು ಇವರಿಗೆ ಬಂಗಾರದ ಕಾಪು ತೊಡಿಸಿದರು.

ಉನ್ನತಾಧಿಕಾರಿಗಳೂ, ಅರಸುಮನೆತನದ ಗಣ್ಯರು ಮರಿರಾಯರನ್ನು ತಮ್ಮ ಮನೆಗಳಿಗೆ ಕರೆದೊಯ್ದು ಅವರಿಂದ ನಾಟಕದ ಮಟ್ಟುಗಳನ್ನು ಹಾಡಿಸಿ, ಆನಂದಿಸಿ ಅವರನ್ನು ಪ್ರೀತಿಸುತ್ತಿದ್ದರು. ಆಚಾರ್ಯರು ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗಿಂತಲೂ, ಒಂದು ಪಾಲು ಹೆಚ್ಚಾಗಿಯೇ ನೋಡಿಕೊಳ್ಳುತ್ತಿದ್ದರು. ಆಚಾರ್ಯರ ಪ್ರೀತಿ ಮತ್ತು ಬಂಧುತ್ವದಿಂದಾಗಿ ಮರಿರಾಯರು ಕಂಪನಿ ಆಡಳಿತವನ್ನು ನಿರ್ವಹಿಸುವಂತಾಯಿತು.

ತಮ್ಮ 16ನೆಯ ವಯಸ್ಸಿನಲ್ಲಿ ಬಾಲಪಾತ್ರಗಳನ್ನು ಬಿಟ್ಟು ಮುಖ್ಯ ಪಾತ್ರಗಳ ಅಭಿನಯಕ್ಕೆ ಪ್ರವೇಶಿಸಬೇಕಾಯಿತು. ಆಚಾರ್ಯರ ಮಾರ್ಗದರ್ಶನದಿಂದಾಗಿ ಮರಿರಾಯರು ದಿನೇ ದಿನೇ ತಮ್ಮದೇ ಆದ ಹಾಸ್ಯಮಾರ್ಗ ರೂಪುಗೊಳ್ಳುವಂತೆ ಶ್ರಮಿಸತೊಡಗಿದರು. ಹಾಸ್ಯ ಪಾತ್ರಕ್ಕೇ ಮೀಸಲಾಗದೆ ಮರಿರಾಯರು ದೊಡ್ಡ ಪಾತ್ರವನ್ನೂ ಅಭಿನಯಿಸಿ ಸೈ ಎನಿಸಿಕೊಂಡರು.

ದಿವಂಗತ ಟಿ.ಪಿ. ಕೈಲಾಸಂರವರ ಸಹವಾಸವು ಮರಿರಾಯರಿಗೆ ದೊರೆಯಿತು. ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸಿ 'ಸೈ' ಎನಿಸಿಕೊಳುವ ಶಕ್ತಿ ಪಡೆದುಕೊಂಡರು. ಶ್ರೀ ವರದಾಚಾರ್ಯರು ಸ್ವರ್ಗವಾಸಿಗಳಾದ ನಂತರ ಮರಿರಾಯರು ಚಾಮುಂಡೇಶ್ವರಿ ಮಂಡಲಿಯಲ್ಲಿ ಸಾಮಾನ್ಯ ನಟನಾಗಿ ಕೆಲಸಕ್ಕೆ ಸೇರಿಕೊಂಡರು.

1932ರಲ್ಲಿ ಕಂಪನಿಯ ನಿರ್ವಹಣೆ ಮರಿರಾಯರ ಪಾಲಿಗೆ ಬಿದ್ದಿತು. ಹೆಚ್ಚುಕಾಲ ಈ ನಿರ್ವಹಣೆಯನ್ನು ವಹಿಸಲಾಗದೆ ಮರಿರಾಯರೂ ಕಂಪನಿಯನ್ನು ಬಿಡಬೇಕಾಯಿತು. ಆಗಲೇ ಕೊಲಂಬಿಯಾ ಕಂಪನಿಯ ನಟರಾಗಿ 'ನಾನೊಂದು ಮದುವೆಯ ಮಾಡಿಕೊಂಬೆ' ಎಂಬ ಧ್ವನಿ ಮುದ್ರಿಕೆಯನ್ನು ಕೊಟ್ಟದ್ದು, ಈ ವೇಳೆಗೆ ಚಲನಚಿತ್ರಗಳ ಪ್ರಭಾವ ಹೆಚ್ಚಾಗಿ ನಾಟಕ ರಂಗದ ಕ್ಷೀಣತೆಗೆ ಕಾರಣವಾಯಿತು. 'ಧ್ರುವಕುಮಾರ' ಹಾಗೂ 1937–38ರಲ್ಲಿ ಬೆಂಗಳೂರಿನಲ್ಲೇ ತಯಾರಾದ 'ರಾಜಸೂಯಯಾಗ'ದಲ್ಲೂ ನಟಿಸಿದರು.

ಜೀವನ ನಾಟಕ, ಹರಿಶ್ಚಂದ್ರ, ಕಬೀರ್ ದಾಸ್, ಸತಿ ತುಳಸಿ, ಜಗನ್ಮೋಹಿನಿ ಇನ್ನೂ ಹಲವಾರು ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದರು. ಮರಿರಾಯರು ಬೆಂಗಳೂರು ಆಕಾಶವಾಣಿಯಲ್ಲಿ 'ಸ್ಟಾಫ್ ಆರ್ಟಿಸ್ಟ್' ಆಗಿ ಕಾಯಕಕ್ಕೆ ಸೇರಿಕೊಂಡು ಕೆಲಸ ಮಾಡತೊಡಗಿದರು.

ಇವರ ಕಲಾಸೇವೆಯನ್ನು ಗೌರವಿಸಿ ಮರಿರಾಯರಿಗೆ 1966ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಸಂಮಾನಿಸಿತು.





## ಜನಾಬ್ ಮಹಮ್ಮದ್ ಪೀರ್

ಗುಂಡಾದ ಮುಖ, ತಿದ್ದಿ ಬಾಚಿದ ಕ್ರಾಪು, ಸುಮಾರು ಐದು ಐದೂವರೆ ಅಡಿ ಎತ್ತರ, ಗುಲಾಬಿ ಹೂವಿನಂತಹ ನಸುಗೆಂಪು ಬಣ್ಣ ನೋಡಿದವರನ್ನು ಸೂಜಿಗಲ್ಲಿನಂತೆ ಆಕರ್ಷಿಸುವ ದೇಹಧಾರ್ಡ್ಯವನ್ನು ದೈವದತ್ತವಾಗಿ ಪಡೆದಿದ್ದ ಈ ಯುವಕನ ಅಭಿನಯ ಚಾತುರ್ಯ, ಸೊಗಸಾದ ಶಾರೀರ ಕೀರ್ತಿ ಧಾರವಾಡದಲ್ಲೇ ಆಲಿಸಿದ ಶ್ರೀಗಳಾದ ದ.ರಾ. ಬೇಂದ್ರೆ, ಮುದವೀಡು ಕೃಷ್ಣರಾಯರು ಮತ್ತು ಆಲೂರು ವೆಂಕಟರಾಯರು ಮುಂತಾದ ಕವಿ ಧುರೀಣರನ್ನು ನಾಟಕ ನೋಡುವಂತೆ ಪ್ರೇರೇಪಿಸಿತು. ಮೂವರೂ ಒಟ್ಟಿಗೆ ನಾಟಕ ವೀಕ್ಷಣೆ ಮಾಡಿ ಧಾರವಾಡದ ಜನತೆಯ ಪರವಾಗಿ ಮುದವೀಡು ಕೃಷ್ಣರಾಯರು ಭಿನ್ನವತ್ತಳೆಯನ್ನು ನೀಡಿ 'ಕಲಾದುರಂಧರ' ಎಂಬ ಬಿರುದನ್ನು ಕೊಟ್ಟರು. ಪೂರ್ಣ ಮೆಚ್ಚಿಕೆಗೆ ಪಾತ್ರನಾದ ಈ ಯುವಕ ಕನ್ನಡ ರಂಗಭೂಮಿಯಲ್ಲಿ ಹೊಸ ಅಧ್ಯಾಯ ಸ್ಥಾಪಿಸಲು ದುಡಿದು ದಣಿದರು ಮಹಮದ್ ಪೀರ್.

ಒಂದೇ ನಾಣ್ಯ ಎರಡು ಮುಖಗಳಂತಿದ್ದ ಪೀರ್ ಮತ್ತು ಎಚ್.ಎಲ್.ಎನ್. ಸಿಂಹ ಕಂಪನಿಯ ಆಧಾರ ಸ್ತಂಭಗಳಂತ್ತಿದ್ದರು.

ಪೌರಾಣಿಕ ನಾಟಕಗಳಿಗೇ ಜೋತುಬಿದ್ದಿದ್ದ ನಾಟಕ ಕಂಪನಿಗಳ ಮಾಲೀಕರುಗಳಂತೆ ಪೀರ್ ಆ ಜಾಡಿಗೇ ಶರಣಾಗದೆ ಸಮಾಜದ ಅನ್ಯಾಯ, ಅತ್ಯಾಚಾರಗಳನ್ನು ಪ್ರದರ್ಶಿಸಲು ಮನಸ್ಸು ಮಾಡಿದರು. ಸಿಂಹರು ಎಲ್ಲ ದೃಷ್ಟಿಯಿಂದಲೂ ಕನ್ನಡ ರಂಗಭೂಮಿಯಲ್ಲಿ ಕ್ರಾಂತಿ ಎಬ್ಬಿಸುವಂತಹ 'ಸಂಸಾರ ನೌಕೆ' ಎಂಬ ಸಾಮಾಜಿಕ ನಾಟಕವನ್ನು ರಚಿಸಿದರು.

ಈ ನಾಟಕ ಒಂದು ವರ್ಷದವರೆಗೂ ರಂಗಭೂಮಿಯ ಮೇಲೆ ಪ್ರಯೋಗವಾಗದೆ ತರಬೇತಿಯಲ್ಲೇ ನಡೆಯಿತು. 1902ರಲ್ಲಿ ನಂಜನಗೂಡಿನಲ್ಲಿ ಬರೆದ ಈ ನಾಟಕ ಪ್ರಪ್ರಥಮವಾಗಿ ಕನ್ನಡ ಕಲಾಭಿಮಾನಿಗಳ ಮುಂದೆ ಪ್ರದರ್ಶಿತವಾದದ್ದು ಹೊಳೆನರಸೀಪುರದಲ್ಲಿ. ಅಂದಿನಿಂದ 'ಸಂಸಾರ ನೌಕೆ' ಕಂಪನಿಯ 'ಗಲ್ಲಾ ಪೆಟ್ಟಿಗೆ'ಯ ನಾಟಕವೆಂದೆನಿಸಿತು. 1932ರಲ್ಲಿ ಬರೆದ ಈ ನಾಟಕ 1974ರಲ್ಲೂ ಅಭಿನಯವಾಗುತ್ತಿರುವುದೇ ಇದರ ಜನಪ್ರಿಯತೆಗೆ ನಿದರ್ಶನ.

ಮೊದಲು ಗಿರಿಧರಲಾಲ್ ನಾಟಕ ಕಂಪನಿಯಲ್ಲಿ ಹಾಸ್ಯ ಪಾತ್ರಗಳನ್ನು ನಿರ್ವಹಿಸುತ್ತಿದರು ಪೀರ್. ಅನಂತರ ಚನ್ನಪಟ್ಟಣದ ತ್ರಿಯಂಬಕ ಶಾಸ್ತ್ರಿಗಳ 'ಭಾರತ ಜನ ಮನೋಲ್ಲಾಸಿನಿ ನಾಟಕ ಸಭಾ'ಕ್ಕೆ ಸೇರಿದರು. ಈ ಕಂಪನಿಯಲ್ಲಿ ಆಗ್ಗೆ ಆಡುತ್ತಿದ್ದ ನಾಟಕಗಳೆಂದರೆ 'ರಾಮಾಂಜನೇಯ ಯುದ್ಧ', 'ಕಬೀರ್', 'ಪ್ರಹ್ಲಾದ' ಮೊದಲಾದವು. 1930ರವರೆಗೂ ಈ ಕಂಪನಿಯಲ್ಲಿದ್ದ ಪೀರ್ ನಂತರ 'ಚಂದ್ರಕಲಾ ನಾಟಕ ಮಂಡಲಿ' ಎಂಬ ಹೆಸರಿನಲ್ಲಿ ಸ್ವಂತ ಕಂಪನಿಯನ್ನು ಪ್ರಾರಂಭ ಮಾಡಿಯೇ ಬಿಟ್ಟರು. ಹಾರ್ಮೋನಿಯಂ ಟಿ.ಆರ್. ಕೃಷ್ಣರಾಯರು, ಬಿ.ಆರ್. ಪಂತಲು, ಎಚ್.ಎಲ್.ಎನ್. ಸಿಂಹ, ಡಿಕ್ಕಿಮಾಧವರಾವ್, 'ತಮಾಷ' ಮಾಧವರಾವ್, ಚನ್ನರಾಯಪಟ್ಟಣದ ರಾಮಚಂದ್ರರಾಯರು, ಎಚ್.ಆರ್. ಶಾಸ್ತ್ರಿ, ವೆಂಕಟಸುಬ್ಬರಾಯರು ಪೀರ್ ಕಂಪನಿಗೆ ಸೇರಿದರು.

'ರಂಗಭೂಮಿಯ ಪ್ರತ್ಯಕ್ಷ ಬುದ್ಧ' ಎಂದು ಪತ್ರಿಕೆಗಳವರೂ ಕರೆದ ಬಿ. ಪುಟ್ಟಸ್ವಾಮಯ್ಯ ವಿರಚಿತ, 'ಗೌತಮ ಬುದ್ಧ' ನಾಟಕವನ್ನು ಪೀರ್ 1930ರಲ್ಲಿ ತಮ್ಮ ಕಂಪನಿಗೆ ಆಡಲು ತೆಗೆದುಕೊಂಡರು. ಬುದ್ಧನ ತೇಜಸ್ಸು, ಗಾಂಭೀರ್ಯ, ಮೈವೆತ್ತುಬಂದಂತ್ತಿದ್ದ ಪೀರ್ ಬುದ್ಧನ ಪಾತ್ರದಲ್ಲಿ ರಂಗಭೂಮಿಯಲ್ಲಿ ಒಂದು ಹೊಸ ದಾಖಲೆಯನ್ನೆ ಸ್ಥಾಪಿಸಿದರು. ಬುದ್ಧನ ಪಾತ್ರ ಪ್ರೇಕ್ಷಕವೃಂದದ ಮೇಲೆ, ಮಹತ್ತರ ಪರಿಣಾಮವನ್ನುಂಟು ಮಾಡಿತು.

ಬುದ್ಧ, ಸುಂದರ, ದಾರ, ನಾರದ, ಮಕರಂದ ಮೊದಲಾದ ಪಾತ್ರಗಳನ್ನು ಕನ್ನಡ ರಂಗಭೂಮಿಯಲ್ಲಿ ಹನ್ನೊಂದು ವರ್ಷಗಳ ಪರ್ಯಂತ ಯಶಸ್ವಿಯಾಗಿ ನಿರ್ವಹಿಸಿ ಆ ಪಾತ್ರಗಳನ್ನು ಸಜೀವ ಪಾತ್ರಗಳನ್ನಾಗಿ ಮಾಡಿ ಅಭಿನಯ ಕಲೆಯಲ್ಲಿಯೇ ಹೊಸ ಅಧ್ಯಾಯವನ್ನು ಸ್ಥಾಪಿಸಿದ ಪೀರರು ಸದ್ಗುಣಗಳ ತವರಾಗಿದ್ದರು.

ಶ್ರೀ ಬಿ. ಪುಟ್ಟಸ್ವಾಮಯ್ಯನವರಿಂದ ವಿರಚಿತವಾದ 'ಷಹಜಹಾನ್' ನಾಟಕ 1929ರಲ್ಲಿ ಮಂಗಳೂರಿನಲ್ಲಿ ಮೊದಲ ಬಾರಿಗೆ ಪ್ರಯೋಗವಾಯಿತು. 1936ರಲ್ಲಿ ಪೀರ್ ಮದರಾಸಿನಲ್ಲಿ ಸಹ ನಾಟಕಗಳನ್ನಾಡಿದರು. ಈ ಮೊಕ್ಕಾಂನಲ್ಲೇ ತ್ರಿಭಾಷಾ ತಾರೆ ಶ್ರೀಮತಿ ಎಂ.ವಿ. ರಾಜಮ್ಮನವರು ಪೀರ್ ಅವರ ಕಂಪನಿಗೆ ಪದಾರ್ಪಣ ಮಾಡಿದ್ದು.

ಪೀರರ ನಾಟಕಗಳ ವೈಶಿಷ್ಟ್ಯತೆ ಎಂದರೆ ವೈಭವದ ರಂಗಸಜ್ಜಿಕೆಯಾಗಲಿ, ವೇಷ ಭೂಷಣಗಳಾಗಲೀ ಇರುತ್ತಿರಲಿಲ್ಲ. ಸಾಮಾನ್ಯ ಸೀನ್ಸ್, ಡ್ರೆಸ್‌ಗಳನ್ನೇ ಮಾರ್ಪಡಿಸಿಕೊಂಡು ನಾಟಕವಾಡುತ್ತಿದ್ದರು.

ಸನ್ನಿವೇಶಗಳಿಗೆ ತಕ್ಕಂತಹ ಏರು–ತಗ್ಗುಗಳ ಧ್ವನಿಯಿಂದ, ಸ್ಪಷ್ಟವಾಗಿ ಉಚ್ಚರಿಸುವ ಸಂಭಾಷಣೆಯಿಂದ ಪ್ರೇಕ್ಷಕರನ್ನು ತಮ್ಮೆಡೆಗೆ ಆಕರ್ಷಿಸುತ್ತಿದ್ದರು. ಗದ್ಯ ಪ್ರಧಾನವಾದ ಸಾಹಿತ್ಯ ಮೌಲ್ಯವುಳ್ಳ ನಾಟಕಗಳನ್ನು ಪ್ರಚಾರಕ್ಕೆ ತಂದ ಕೀರ್ತಿ ಪೀರ್ ಸಾಹೇಬರದೇ ಆಗಿದೆ.

ಇವರ ಕಲಾಸೇವೆಯನ್ನು ಗೌರವಿಸಿ ಮಹಮ್ಮದ್ ಪೀರ್‌ರಿಗೆ 1966ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಸಂಮಾನಿಸಿತು.

---



## ಎಂ.ವಿ. ರಾಜಮ್ಮ

ಬೆಂಗಳೂರು ಜಿಲ್ಲೆಯ ಅಗ್ಗೊಂಡಹಳ್ಳಿಯಲ್ಲಿ 1921ರ ಮಾರ್ಚಿನಲ್ಲಿ ಜನಿಸಿದರು. ಪ್ರಸಿದ್ಧ ಜಮೀನುದಾರರೂ, ವ್ಯಾಪಾರಿಯೂ ಆಗಿದ್ದ ನಂಜಪ್ಪ ಇವರ ತಂದೆ. ತಾಯಿ ಸುಬ್ಬಮ್ಮ. ರಾಜಮ್ಮನವರಿಗೆ ಅಭಿನಯ ಕಲೆಯ ಗೀಳು ಬಾಲ್ಯದಿಂದಲೇ ಪ್ರಾರಂಭವಾಯಿತು. ಶಾಲಾ ರಂಗಭೂಮಿಯಿಂದಲೇ ರಂಗಪ್ರವೇಶ ಪಡೆದರು.

ಮಹಮದ್ ಪೀರ್‌ರವರ 'ಚಂದ್ರಕಲಾ ನಾಟಕ ಮಂಡಲಿ'ಯ ಮುಖಾಂತರ ಮೊದಲಬಾರಿಗೆ ರಂಗವನ್ನು ಪ್ರವೇಶಿಸಿದರು. ಕಂಪನಿಯ ಕೀರ್ತಿ ಪತಾಕೆಯನ್ನು ಹಾರಿಸಿದ 'ಸಂಸಾರ ನೌಕ', 'ಗೌತಮ ಬುದ್ಧ' ನಾಟಕಗಳಲ್ಲಿ ರಾಜಮ್ಮನವರು ಸರಳ ಮತ್ತು ಯಶೋಧರೆಯ ಪಾತ್ರಗಳನ್ನು ನಿರ್ವಹಿಸತೊಡಗಿದರು.

1936ರಲ್ಲಿ ಎಂ.ವಿ. ರಾಜಮ್ಮನವರ ಬಣ್ಣದ ಬದುಕಿನಲ್ಲಿ ಒಂದು ಹೊಸ ತಿರುವು ಉಂಟಾಯಿತು. ಆ ವೇಳೆಗಾಗಲೇ ಕನ್ನಡ ನಾಡಿನಾದ್ಯಂತ ಅತ್ಯಂತ ಜನಪ್ರಿಯವಾಗಿದ್ದ ಎಚ್.ಎಲ್.ಎನ್. ಸಿಂಹ ಅವರಿಂದ ವಿರಚಿತವಾದ 'ಸಂಸಾರ ನೌಕ' ನಾಟಕವನ್ನು ಚಿತ್ರರೂಪದಲ್ಲಿ ತರಲು ಸೇಲಂನ ಪ್ರಖ್ಯಾತ ಉದ್ಯಮಿ ರಾಜಗೋಪಾಲ ಚೆಟ್ಟಿ ನಿರ್ಧರಿಸಿದರು.

ದಕ್ಷಿಣ ಭಾರತದಲ್ಲೇ ತಯಾರಾದ ಈ ಪ್ರಥಮ ಸಾಮಾಜಿಕ ಚಿತ್ರದ ಮೂಲಕ ರಾಜಮ್ಮನವರು ಕನ್ನಡ ಹಾಗೂ ತಮಿಳುನಾಡಿನಲ್ಲಿ ಅಪಾರ ಕೀರ್ತಿಗೆ ಪಾತ್ರರಾದರು. ಈ ಚಿತ್ರದ ನಾಯಕ ಸುಂದರನ ಪಾತ್ರ ಬಿ.ಆರ್. ಪಂತುಲು ಅವರದು. ಇಲ್ಲಿ ರಾಜಮ್ಮನವರಿಗೂ ಪಂತುಲು ಅವರಿಗೂ ಪರಿಚಯವಾಯಿತು. ಈ ಪರಿಚಯ ಗಾಢವಾಯಿತು.

ತಮಿಳು ಭಾಷೆಯ ಚಿತ್ರಗಳಲ್ಲಿ ಅಭಿನಯಿಸಲು ಇಚ್ಛೆ ಹೊಂದಿ ಆ ಭಾಷೆಯನ್ನು ಓದಲು, ಬರೆಯಲು ರೂಢಿಸಿಕೊಂಡರು.

ತೆಲುಗು ಚಿತ್ರ 'ಕೃಷ್ಣ ಜರಾಸಂಧ'ದಲ್ಲಿ ನಟಿಸಿದರು, ಚಿತ್ರ ತೆರೆಕಂಡು ಯಶಸ್ವಿಯಾಯಿತು. ನಂತರ ರಾಜಮ್ಮನವರು ಕಲ್ಕತ್ತಾದಲ್ಲಿ ತಯಾರಾದ ತಮಿಳು ಚಿತ್ರ 'ಯಯಾತಿ'ಯಲ್ಲಿ ಪಿ.ಯು. ಚಿನ್ನಪ್ಪನವರೊಡನೆ 'ದೇವಯಾನಿ' ಪಾತ್ರವನ್ನು ನಿರ್ವಹಿಸಿದರು. ಈ ಚಿತ್ರದಲ್ಲಿನ ಅಭಿನಯ ಅವರಿಗೆ ತಮಿಳು ಚಿತ್ರರಂಗದಲ್ಲಿ ಒಂದು ಸುಭದ್ರ ಸ್ಥಾನವನ್ನು ದೊರಕಿಸಿಕೊಟ್ಟಿತು. ಇಲ್ಲಿಂದ ಮುಂದೆ ಅವರು ಲೆಕ್ಕವಿಲದಷ್ಟು ತಮಿಳು, ತೆಲುಗು, ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದರು.

1958ರಲ್ಲಿ ಬಿ.ಆರ್. ಪಂತುಲು ಅವರು ನಿರ್ಮಿಸಿದ 'ಸ್ಕೂಲ್ ಮಾಸ್ಟರ್' ಚಿತ್ರದಲ್ಲಿನ ಇವರ ಅಭಿನಯ ಕನ್ನಡಿಗರ ಮನೆಮಾತಾಯಿತು.

1943ರಲ್ಲಿ 'ರಾಧಾರಮಣ' ಕನ್ನಡ ಚಿತ್ರವನ್ನು ತಯಾರಿಸಿ ಈ ಚಿತ್ರದ ಮೂಲಕ ಜಿ.ವಿ. ಅಯ್ಯರ್ ಮತ್ತು ಟಿ.ಎನ್. ಬಾಲಕೃಷ್ಣ ಅವರು ಬೆಳಕಿಗೆ ಬಂದರು. ಸ್ಕೂಲ್ ಮಾಸ್ಟರ್ (1958), ಕಿತ್ತೂರು ಚೆನ್ನಮ್ಮ (1961) ಈ ಚಿತ್ರಗಳಲ್ಲಿನ ಅಭಿನಯಕ್ಕಾಗಿ ಇವರಿಗೆ ಪ್ರಶಸ್ತಿಗಳು ಲಭಿಸಿವೆ. 'ಮಕ್ಕಳ ರಾಜ್ಯ' ಕನ್ನಡ ಚಿತ್ರವನ್ನು ನಿರ್ಮಿಸಿದ ಸಾಹಸಿ ಕಲಾವಿದೆಯೂ ಇವರೇ.

ಬಹು ಭಾಷೆಯನ್ನು ಬಲ್ಲ ರಾಜಮ್ಮನವರು ಇದುವರೆಗೂ ಸುಮಾರು ನೂರು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ರಾಷ್ಟ್ರಾಧ್ಯಕ್ಷರ ಪದಕ, ಪ್ರಶಸ್ತಿಗಳೂ ಇವರಿಗೆ ಲಭ್ಯವಾಗಿದೆ.

1966ರಲ್ಲಿ ರಾಜಮ್ಮನವರಿಗೆ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿತು.



# 1967ರ ಪ್ರಶಸ್ತಿ ವಿಜೇತರು

## ಲಕ್ಷ್ಮಮ್ಮ ಯಲ್ಲಮ್ಮ ದೇವದಾಸಿ

ಲಕ್ಷ್ಮಮ್ಮ ಯಲ್ಲಮ್ಮನವರನ್ನು 1967ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ. ಹೆಚ್ಚಿನ ಮಾಹಿತಿ ಲಭ್ಯವಿಲ್ಲ.

---

## ಸುಂದರರಾವ್ ನಾಡಕರ್ಣಿ

ಸುಂದರರಾವ್ ನಾಡಕರ್ಣಿ ಅವರಿಗೆ 1967ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ. ಹೆಚ್ಚಿನ ಮಾಹಿತಿ ಲಭ್ಯವಿಲ್ಲ.

---



## ಪಂಡರಿಬಾಯಿ ಎಂ.

ದಾಸವಂಶದವರಾಗಿ ಕೀರ್ತನಕಲೆಗೆ ಹೆಸರಾದ ಕುಟುಂಬದವರಾದ ಪಂಡರಿಬಾಯಿ-ಯವರಿಗೆ ನಾಟಕ ಕ್ಷೇತ್ರವೇ ಅಭಿನಯಕಲೆಗೆ ಮೂಲ. ಉತ್ತರ ಕನ್ನಡ ಜಿಲ್ಲೆಯ ಭಟ್ಕಳ ಇವರ ಹುಟ್ಟೂರು. ತಂದೆಯವರೇ ಕಲಿಸಿದ ಕೀರ್ತನ ಕಲೆ. ಅವರ ಜೊತೆ ಪ್ರವಾಸ ಮಾಡಿ ಕೀರ್ತನೆ ಮಾಡಿದರು ಪಂಡರಿಬಾಯಿಯವರು. ಈಕೆಯ ಸಹೋದರ ವಿಮಲಾನಂದದಾಸರು 'ಆದರ್ಶ ನಾಟಕ ಸಂಘ' ಕಟ್ಟಿ ಅಲ್ಲಿ ಈಕೆಗೆ ಪಾತ್ರವಿತ್ತು ರಂಗಭೂಮಿಗೆ ಕರೆತಂದರು.

ಅಲ್ಲಿಯ ನಾಟಕಗಳಲ್ಲಿ ನಾಯಕಿಯಾಗಿ, ತನ್ನ ಸುಮಧುರ ಕಂಠದಲ್ಲಿ ಹಾಡಿ, ತೀರಾ ಸೌಮ್ಯವಾದ ಪಾತ್ರಗಳಲ್ಲಿ ಸ್ವಭಾವತಃ ವಿನಯಶೀಲೆಯಾದ ಈಕೆ ಅತ್ಯಂತ ಜನಪ್ರಿಯರಾದರು.

ಮುಂದೆ ಚಿತ್ರರಂಗದಲ್ಲೂ ಜನಪ್ರಿಯತೆ. ಬಹು ಭಾಷಾ ಚಿತ್ರಗಳಲ್ಲಿ ಅವಕಾಶ. ವಿಠಲನ ಆರಾಧಕಿಯಾದ ಈಕೆ ಇಂದೂ ರಂಗಭೂಮಿಯ ಬಗ್ಗೆ ಅಭಿಮಾನದ ಮಾತಾಡುತ್ತಾರೆ. ಆ ದಿನದ ವೈಭವ ಮತ್ತೆ ಕಂಡೇನೆ ಎನ್ನುತ್ತಾರೆ.

ಪಂಡರಿಬಾಯಿಯವರಿಗೆ ಚಿತ್ರರಂಗದ ಹಲವು ಪ್ರಶಸ್ತಿಗಳಲ್ಲದೆ, ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ 1967ರ ಪ್ರಶಸ್ತಿ ನೀಡಿ ಗೌರವಿಸಿದೆ.

---

# 1968ರ ಪ್ರಶಸ್ತಿ ವಿಜೇತರು



## ಕುರಿಯ ವಿಠಲ ಶಾಸ್ತ್ರಿ

ಯಕ್ಷಗಾನ ವಲಯದಲ್ಲಿ ಕುರಿಯ ವಿಠಲ ಶಾಸ್ತ್ರಿಗಳ ಹೆಸರನ್ನು ಕೇಳದವರು ಕಡಿಮೆ. ಅವರು ಯಕ್ಷಲೋಕದಲ್ಲಿ ಸೀಮಾತೀತರಾಗಿ ವಿಹರಿಸಿದವರು. ತೆಂಕುತಿಟ್ಟು ಯಕ್ಷಗಾನದ ಶಕಪುರುಷರು. ತೆಂಕಣ ಯಕ್ಷಗಾನ ಬಯಲಾಟದ 'ನವೋದಯದ ಮುಂಗೋಳಿ' ಎಂಬುದಾಗಿ ಖ್ಯಾತಿ ಪಡೆದವರು. ಪರಂಪರಾಗತ ಯಕ್ಷಗಾನ ಕಲೆಯನ್ನು ಪರಿಷ್ಕರಿಸಿ, ಕೇವಲ ಪಾಮರ ರಂಜಕವಾಗಿದ್ದ ಬಯಲಾಟಕ್ಕೆ ಪಂಡಿತರೂ ಮರ್ಯಾದೆಯ ಮಣೆಯನ್ನು ನೀಡುವಂತೆ ಮಾಡಿದ ಮಹನೀಯರಲ್ಲಿ ವಿಠಲ ಶಾಸ್ತ್ರಿಗಳು ಅಗ್ರಮಾನ್ಯರು. ಈ ಕಲೆಯೊಳಗಿನ ಅಪಾರ ಸತ್ವವನ್ನು ಶೋಧಿಸಿ, ಸೋಸಿ ತೆಗೆದು ಅಭಿಮಾನಿಗಳ ಮುಂದಿರಿಸಿದರು. ಮುಂದಿನ ಪೀಳಿಗೆಯ ಕಲಾವಿದರಿಗೆ ಮಾರ್ಗದರ್ಶಕರಾದರು. ಮಹೋನ್ನತ ನಟನಾಗಿ, ಮಹಾನ್ ಗುರುವಾಗಿ, ಚತುರ ಸಂಘಟಕನಾಗಿ ಯಕ್ಷಗಾನ ಕಲೆಯ ಕೀರ್ತಿಯನ್ನು ಎತ್ತರಿಸಿದ, ವಿಸ್ತರಿಸಿದ ವಿಠಲ ಶಾಸ್ತ್ರಿಗಳು ಚಿರಸ್ಮರಣೀಯರು. ಯೋಗ-ಯೋಗ್ಯತೆ ಎರಡೂ ಇದ್ದ ವಿಠಲ ಶಾಸ್ತ್ರಿಗಳದ್ದು ಸಾಟಿಯಿಲ್ಲದ ಕಲಾಮಯ ಬದುಕು. ತಾವು ನೆಚ್ಚಿಕೊಂಡ ಕಲೆಯ ಅಭಿವ್ಯಕ್ತಿಯಲ್ಲಿಯೇ ಜೀವನವಿಡೀ ತೊಡಗಿಸಿಕೊಂಡಿದ್ದ ಅವರ ಬದುಕೇ ಒಂದು ರಂಗಶಾಲೆ.

ವಿಧಾನಸೌಧದ ಬ್ಯಾಂಕ್ವೆಟ್ ಹಾಲ್ ಸೇರಿದಂತೆ, ಮೈಸೂರು ಮಹಾರಾಜರು ಹಾಗೂ ರಷ್ಯಾದ ಪ್ರಧಾನಿಗಳ ಸಮ್ಮುಖದಲ್ಲಿ ತಮ್ಮ ಯಕ್ಷಗಾನ ಪ್ರದರ್ಶಿಸಿ ಅಪಾರ ಮೆಚ್ಚುಗೆ ಗಳಿಸಿದರು ರಾಜ್ಯ ಪ್ರಶಸ್ತಿಗೂ ಪಾತ್ರರಾಗಿದ್ದರು. ವಿಠಲಶಾಸ್ತ್ರಿಯವರಿಗೆ 1968ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.



## ಎಚ್. ರಾಮಚಂದ್ರಶಾಸ್ತ್ರಿ

'ಶ್ರೀ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿ' ಮಂಗಳೂರು ಮೊಕ್ಕಾಂ ಪ್ರಾರಂಭಿಸಿ ನಾಟಕಗಳನ್ನು ಪ್ರದರ್ಶಿಸತೊಡಗಿತು. ಅಂದು 'ಸಂಪೂರ್ಣ ರಾಮಾಯಣ' ನಾಟಕ ನಿರ್ವಹಿಸಿದ್ದರು. ಅಚ್ಚ ಬಿಳುಪಿನ ಗಡ್ಡ, ಮೀಸೆ, ದಶರಥಮಹಾರಾಜರ ನೈಜ ಉಡುಗೆ-ತೊಡುಗೆಗಳೋ ಏನೋ ಎಂಬಂತಿದ್ದ ವೇಷ-ಭೂಷಣ, ಚಿಂತೆಯ ಪ್ರತಿರೂಪದಂತ್ತಿದ್ದ ದಶರಥ ಮಹಾರಾಜರ ಪಾತ್ರ, ಪಂಡಿತ ಪಾಮರರೆಲ್ಲರನ್ನೂ, ತಲೆದೂಗಿಸಿ ರಂಗಭೂಮಿಯ ನೈಜ ದಶರಥ ಎಂಬ ಪ್ರಶಂಸೆ ಪ್ರೇಕ್ಷಕನ ಬಾಯಿಂದ ಹೊರಬಂದಿತು. ನಾಗೇಂದ್ರರಾಯರು ಪಾತ್ರಧಾರಿ ಎಚ್. ರಾಮಚಂದ್ರ ಶಾಸ್ತ್ರಿಗಳನ್ನು ಆಲಂಗಿಸಿ ಕೊಂಡು 'ದಶರಥನೆಂದರೆ ಹೀಗಿರಬೇಕು' ಎಂದು ಮೆಚ್ಚುಗೆ ಸೂಚಿಸಿದರು.

ಮಂಡ್ಯ ಜಿಲ್ಲೆ ಮೇಲುಕೋಟೆ ಬಳಿಯ ಹಳೇಬೀಡಿನಲ್ಲಿ 1905ರ ನವೆಂಬರ್ ಎರಡರಂದು ಎಚ್.ಆರ್. ಶಾಸ್ತ್ರಿ ಅವರ ಜನನವಾಯಿತು. ತಂದೆ ಹಳ್ಳಿಯ ಶ್ಯಾನುಭೋಗರು. ಪ್ರಸಿದ್ಧ ಜ್ಯೋತಿಷ ವಿದ್ವಾಂಸರು. ಅವರಿಗೆ ಶಾಸ್ತ್ರಿಗಳು ಏಳನೆಯ ಮಗ. ಅವರಿಗೆ ವೃತ್ತಿ ನಾಟಕ ಮಂಡಳಿಯೊಂದರಲ್ಲಿ ನಟನಾಗಿ ಕೆಲಸ ಮಾಡಬೇಕೆಂಬ ಹಂಬಲವಾಯಿತು. ನಟಭಯಂಕರ ಎಂ.ಎನ್. ಗಂಗಾಧರರಾಯರು ಮತ್ತು ಚನ್ನಪಟ್ಟಣದ ತ್ರಿಯಂಬಕ ಶಾಸ್ತ್ರಿಗಳು ನಡೆಸುತ್ತಿದ್ದ 'ಭಾರತ ಜನ ಮನೋಲ್ಲಾಸಿನಿ ನಾಟಕ ಸಭಾ'ಕ್ಕೆ ಪದಾರ್ಪಣ ಮಾಡಿದರು. (1920) ಇಲ್ಲಿ ಶಾಸ್ತ್ರಿಗಳು ಆರು ವರ್ಷಗಳ ಕಾಲ ಬಗೆಬಗೆಯ ಪಾತ್ರಗಳ ಅಭಿನಯದಿಂದ ಕನ್ನಡ ಕಲಾರಸಿಕರನ್ನು ತಣಿಸಿದರು.

ಶಾಸ್ತ್ರಿಗಳ ಪೀರ್ ಸಾಹೇಬರ ಆಹ್ವಾನವನ್ನು ಅಂಗೀಕರಿಸಿ ಅವರ ಕಂಪನಿಯ ಪ್ರಮುಖ ನಟರಲ್ಲಿ ಒಬ್ಬರಾದರು. ಪೀರ್ ಸಾಹೇಬರ ಕಂಪನಿಯಲ್ಲಿ ಶಾಸ್ತ್ರಿಗಳ ಅಭಿನಯ ಕಲೆಯ ಪ್ರದರ್ಶನಕ್ಕೆ ಸರಿಯಾದ ಅವಕಾಶ ದೊರೆಯಿತು. ಕಂಪನಿಯ ಹೆಸರಾಂತ ನಾಟಕಗಳಾದ ಪ್ರಹ್ಲಾದ ಚರಿತ್ರೆ, ಕಂಸವಧೆ, ಮುಂತಾದ ಪೌರಾಣಿಕ ನಾಟಕಗಳಲ್ಲಿ ದೈತ್ಯನ ಪಾತ್ರವನ್ನು ವೀರ ಗಾಂಭೀರ್ಯದಿಂದ ಅಭಿನಯಿಸಿ ಪ್ರೇಕ್ಷಕ ಸಮೂಹದ ಅಪಾರ ಪ್ರಶಂಸೆಗೆ ಪಾತ್ರರಾದರು. ದೈತ್ಯನ ಪಾತ್ರವನ್ನು ವಹಿಸುತ್ತಿದ್ದ ಶಾಸ್ತ್ರಿಗಳು ಇದೇ ಮಂಡಲಿಯ ಹೆಸರಾಂತ ಸಾಮಾಜಿಕ ನಾಟಕ 'ಸಂಸಾರ ನೌಕ'ದಲ್ಲಿ ವಿಕಂತು ದೊಡ್ಡಮ್ಮ ಗುಂಡೂಬಾಯಿಯ ಪಾತ್ರವನ್ನು ಅಭಿನಯಿಸಿ 'ಬೋಳಿ' ಶಾಸ್ತ್ರಿಗಳು ಎಂದೇ ಕಲಾಭಿಮಾನಿಗಳಲ್ಲಿ ಖ್ಯಾತನಾಮರಾದರು.

ಈ ನಾಟಕಗಳ ಜೊತೆಗೆ 'ಗೌತಮ ಬುದ್ಧ'ದಲ್ಲಿ ಇವರು ನಿರ್ವಹಿಸುತ್ತಿದ್ದ ಚೆನ್ನ, 'ಷಹಜಹಾನ್'ನಲ್ಲಿ ನಿರ್ವಹಿಸುತ್ತಿದ್ದ ದಿಲ್‌ದಾರ, 'ಸಂಸಾರ ನೌಕ'ದ ಸಿದ್ಧ 'ಎಚ್ಚಮ ನಾಯಕ'ದ ಸಿದ್ಧಾಂತಿ ಇವರಿಗೆ ಕೀರ್ತಿಯ ಕಿರೀಟವನ್ನು ತೊಡಿಸಿತು. ಕನ್ನಡ ರಂಗ ಭೂಮಿಯಲ್ಲಿ ಅವರ ಹೆಸರು ಚಿರಸ್ಥಾಯಿಯಾಯಿತು.

1942ರ ಡಿಸೆಂಬರ್ ಕೊನೆಯ ದಿನ 'ಶ್ರೀ ಮಂಜುನಾಥೇಶ್ವರ ನಾಟಕ ಮಂಡಳಿ' ಲಾಂಛನದಲ್ಲಿ ತಮ್ಮದೇ ಆದ ನಾಟಕ ಮಂಡಲಿಯನ್ನು ಕೊಡಿಯಾಲದಲ್ಲಿ ಸ್ಥಾಪಿಸಿದರು. ಮೂರು ವರ್ಷಗಳ ಕಾಲ ಕರ್ನಾಟಕದ ಮೂಲೆ ಮೂಲೆಯಲ್ಲೂ ಬೆಳಗಿ ತನ್ನ ವೈಜಯಂತಿಯನ್ನು ದಿಕ್ಕು ದಿಕ್ಕುಗಳಲ್ಲೂ ಹಾರಿಸಿದ ಈ ಕಂಪನಿ ಆರ್ಥಿಕ ಹೊಡತಕ್ಕೆ ಸಿಲುಕಿ ನಿಂತು ಹೋಯಿತು.

ನೂರಾರು ನಾಟಕಗಳಲ್ಲಿ, 205 ಚಲನಚಿತ್ರಗಳಲ್ಲಿ ಬಗೆ ಬಗೆಯ ಪಾತ್ರಗಳನ್ನು ಅಭಿನಯಿಸಿದ್ದ ಶಾಸ್ತ್ರಿಗಳ ಪಾತ್ರ ವೈವಿಧ್ಯದ ಬಗ್ಗೆ ವರ್ಣಿಸುವುದು ಕ್ಲಿಷ್ಟವಾದರೂ ಅವರ ಅಭಿನಯ ಪ್ರತಿಭೆಗೆ 'ನಟಶೇಖರ' ಮತ್ತು 'ಬೇಡರ ಕಣ್ಣಪ್ಪ' ಚಿತ್ರದ ಪೋರ್ಟರ್ ಮತ್ತು ಶಿವನ ಪಾತ್ರಗಳು ಜ್ವಲಂತ ನಿದರ್ಶನ.

ಕಲಾರಂಗದಲ್ಲಿ ಹೀಗೆ ಐವತ್ತು ದೀರ್ಘ ವರ್ಷಗಳಷ್ಟು ಸೇವೆಗೈದು ತಮ್ಮ ಬಗೆ ಬಗೆಯ ಪಾತ್ರಗಳಿಂದ ಕನ್ನಡ ಕಲಾರಸಿಕರನ್ನು ಆನಂದಿತರನ್ನಾಗಿ ರಾಮಚಂದ್ರ ಶಾಸ್ತ್ರಿಗಳು ಮಾಡಿದರು. 1968ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಶಾಸ್ತ್ರಿಯವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

---

## ಲಕ್ಷ್ಮಣರಾವ್ (ಅಸೂಡಿ)

ಶ್ರೇಷ್ಠಮಟ್ಟದ ಗಾಯಕ ನಟ, ಶಿರಹಟ್ಟಿ ಕಂಪನಿಯಲ್ಲಿ ಅಭಿನಯಿಸಿದ ಸ್ತ್ರೀ ಪಾತ್ರಗಳಿಂದ ಇವರ ಕೀರ್ತಿ ಎಲ್ಲೆಡೆ ಹಬ್ಬಿತು. ಪದ್ಮಾವತಿ, ಚೂಡಾಮಣಿ, ಅನಸೂಯ, ಸುಶೀಲ ಮೊದಲಾದ ಪಾತ್ರಗಳಿಂದ ಇವರು ಪ್ರಸಿದ್ಧಿಗೆ ಬಂದರು. ತುಕರಾಮ ಭೂವ ಗೋಕಾಕ ಮತ್ತು ನೀಲಕಂಠಪ್ಪ ಮೊರೇಳಾ ಇವರಿಗೆ ಸಂಗೀತ ಶಿಕ್ಷಣ ನೀಡಿದರು.

1934ರಲ್ಲಿ ಶಿರಹಟ್ಟಿ ಕಂಪನಿ ನಿಲ್ಲಲು ಇವರು 1936ರಲ್ಲಿ ಶಿವಾನಂದ ನಾಟಕ ಮಂಡಳಿ ಎಂಬ ಸ್ವಂತ ಕಂಪನಿಯನ್ನು ಸ್ವತಃ ಸ್ಥಾಪಿಸಿದರು. ಹೇಮರೆಡ್ಡಿ ಮಲ್ಲಮ್ಮ, ನರಗುಂದ ಮುತ್ತಿಗೆ, ರಾಜ ಹರಿಶ್ಚಂದ್ರ ಇವರ ಕಂಪನಿಯ ಅತ್ಯುತ್ತಮ ನಾಟಕಗಳು. ಭಾವಪೂರ್ಣ ಅಭಿನಯದ ಜೊತೆಗೆ ಶಾಸ್ತ್ರಬದ್ಧ ಹಾಡುಗಾರಿಕೆ. ಇವರ ಪಾತ್ರದ ವಿಶೇಷತೆ ಇವರ ಸಹೋದರ ಸುಬ್ಬಾಲಪ್ಪ ಇವರ ರಂಗಭೂಮಿ ಜೀವನಕ್ಕೆ ಮತ್ತು ನಾಟಕ ಕಂಪನಿಗೆ ಆಧಾರಸ್ತಂಭವಾಗಿದ್ದರು. ಇವರ ಕಂಪನಿ, ಗದಗ, ಧಾರವಾಡ, ಬೆಳಗಾವಿ ಮುಂತಾದ ಕಡೆ ಸಂಚರಿಸುತ್ತಾ 15 ವರ್ಷ ಅಲೆದಾಟ ಮಾಡಿತು. ವಿಶೇಷವಾಗಿ ಗ್ರಾಮೀಣ ಭಾಗದಲ್ಲಿ ರಂಗಸೇವೆ ಮುಂದುವರಿಯಿತು.

ಇವರ ರಂಗಸೇವೆ ಗಮನಿಸಿ 1968ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಕರ್ಕಿ ಪರಮಯ್ಯ ಹಾಸ್ಯಗಾರ

ಎಳವೆಯಲ್ಲೇ ರಂಗದ ಬದುಕಿಗೆ ಮೋಹಗೊಂಡು ಕಲಿಕೆಯೆಲ್ಲ ಯಕ್ಷಗಾನವೇ ಮಾಡಿಕೊಂಡ ಕಲಾವಿದರು ಅನೇಕ. ಶಾಲಾ ಶಿಕ್ಷಣವನ್ನು ಕಡೆಗಣಿಸದೆ ಎಂ.ಎ.ಬಿ.ಎಡ್. ಮಾಡಿ ಅಧ್ಯಾಪನದ ಜತೆ ಜತೆಗೇ ಕಲಾ ಸೇವೆಯನ್ನೂ ಮುಂದುವರಿಸಿ ಯಶಸ್ವಿಯಾಗಿರುವ ಪರಮಯ್ಯ ಹಾಸ್ಯಗಾರರು ಅಗ್ರಮಾನ್ಯ ಕಲಾವಿದರಲ್ಲೊಬ್ಬರು. ಮನೆತನದ ಹೆಸರಿನಿಂದ ಹಾಸ್ಯಗಾರ. ಅವರು ವಹಿಸುವುದು ನಾಯಕ ಪಾತ್ರಗಳನ್ನು.

ಬಾಲ್ಯದಿಂದಲೆ ರಂಗಾಸಕ್ತಿ ಬೆಳೆಸಿಕೊಂಡ ಪರಮಯ್ಯ ಹಾಸ್ಯಗಾರರು 11ರ ಪ್ರಾಯದಲ್ಲೆ ಕರ್ಕಿ ಮೇಳದಲ್ಲಿ ಬಣ್ಣ ಹಚ್ಚಿ, ಅಮೃತೇಶ್ವರಿ ಮೇಳದಲ್ಲೂ ದುಡಿದವರು.

ಅರ್ಜುನ, ಬಲರಾಮ, ಜರಾಸಂಧ, ಕೌರವ, ದಕ್ಷ, ಸುಧನ್ವ ಮುಂತಾದ ಪಾತ್ರಗಳಲ್ಲಿ ಮಿಂಚುವ ಪರಮಯ್ಯ ಹಾಸ್ಯಗಾರರು ರಂಗದಲ್ಲಿ ನುರಿತ ತಂದೆ, ಇಬ್ಬರು ಚಿಕ್ಕಪ್ಪಂದಿರಿಮದ ಪ್ರಭಾವಿತರಾಗಿ ಅಜ್ಜನಿಂದ ಯಕ್ಷಗಾನ ನೃತ್ಯ ಅಭಿನಯಗಳಲ್ಲಿ ತರಬೇತಿ ಪಡೆದರು.

ಹೊನ್ನಾವರದಲ್ಲಿ ಶಾಲಾ ಪ್ರಾಧ್ಯಾಪಕರಾಗಿ ಅಧ್ಯಾಪನದಲ್ಲೂ ವಿದ್ಯಾರ್ಥಿಗಳ ಮೆಚ್ಚುಗೆ ಪ್ರೀತಿಗೆ ಪಾತ್ರರಾಗಿ ಜನಪ್ರಿಯರಾಗಿದ್ದಾರೆ. 1968ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಕರ್ಕಿ ಅವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಹಾರಾಡಿ ಕುಷ್ಟ (ಕೃಷ್ಣ ಗಾಣಿಗ)

ಇವರು ಪ್ರಸಿದ್ಧ ಪುರುಷವೇಷಧಾರಿ. ರಾಮಗಾಣಿಗರಿಂದ ನಾಲ್ಕು ವರ್ಷ ಹಿರಿಯವರು. ತೀರಿಕೊಂಡದ್ದು ರಾಮ ಗಾಣಿಗರು ನಿಧನರಾಗಿ ಆರೇಳು ವರ್ಷಗಳ ಬಳಿಕ. ಕೇದಗೆ ಮುಂದಲೆ ವೇಷದಲ್ಲಿ ಮಿಂಚಿದವರು. ಅರ್ಜುನನ ವೇಷದಲ್ಲಿ ಹೆಚ್ಚು ಪ್ರಸಿದ್ಧರು. ಕರ್ಣಾರ್ಜುನದ ಅರ್ಜುನ, ಸೈಂಧವನ ವಧೆಯ ಅರ್ಜುನ, ತಾಮ್ರಧ್ವಜ, ಮೈರಾವಣಕಾಳಗದ ವಿಭೀಷಣ, ಇವರ ಪ್ರಸಿದ್ಧ ವೇಷಗಳಲ್ಲಿ ಕೆಲವು ಮಾತ್ರ. ಕುಣಿತದಲ್ಲಿ ಇವರು ಮತ್ತು ವೀರಭದ್ರ ನಾಯ್ಕರು ಹೆಚ್ಚು ಕಡಿಮೆ ಸಮಾನರು. ಪಾಂಡೇಶ್ವರ ಪುಟ್ಟಯ್ಯನವರ ಅನಂತರ ನರ್ತನದಲ್ಲಿ ಹೆಸರು ಪಡೆದವರು ಇವರೇ ಇಬ್ಬರು.

ದಿವಂಗತ ರಾಮ ಗಾಣಿಗರ ಜೊತೆಗಿದ್ದು ಪ್ರಸಿದ್ಧರಾಗಿ ಅನಂತರವೂ ವ್ಯಕ್ತಿ ಮಾಡಿದ ಹಾರಾಡಿ ಕುಷ್ಟ (ಕೃಷ್ಣ) ಗಾಣಿಗರು ಮತ್ತು ಅವರು ತಮ್ಮ ನಾರಾಯಣ ಗಾಣಿಗರು ಹಾರಾಡಿಯ ಇನ್ನೆರಡು ರತ್ನಗಳು. ರಾಮ ಗಾಣಿಗರ ಎರಡನೇ ವೇಷಕ್ಕೆ ಕುಷ್ಟನವರ ಪುರುಷವೇಷವಾದರೆ ಆ ಸೊಗಸೇ ಬೇರೆ. ರಾಮನವರ ಕರ್ಣ, ಕುಷ್ಟನವರ ಅರ್ಜುನ ಒಂದು ಒಳ್ಳೆಯ ಜೋಡಿ. ಅರ್ಜುನನ ಹೆಸರು ಕೇಳಿದಾಗಲೆಲ್ಲ ನಮ್ಮ ನೆನಪಿಗೆ ಬರುವುದು ಕುಷ್ಟನವರ ಅರ್ಜುನ. 'ಅವರದ್ದು ಹುಟ್ಟು ಅರ್ಜುನ' ಎಂದು ಇಲ್ಲಿಯ ಜನ ಆಡಿಕೊಳ್ಳುವುದುಂಟು. ಸೈಂಧವವಧೆ, ಇಂದ್ರಕೀಲಕ, ಕರ್ಣಾರ್ಜುನ ಮುಂತಾದ ಪ್ರಸಂಗಗಳ ಅರ್ಜುನನಿಗೆ ಪ್ರಸಿದ್ಧರಾದವರು ಕುಷ್ಟನವರು. ಇದಲ್ಲದೆ ದಕ್ಷ, ವಿರಾಟಪರ್ವದ ಭೀಮ, ಮೈರಾವಣಕಾಳಗದ ವಿಭೀಷಣ, ವಿದ್ಯುನ್ಮತೀ ಕಲ್ಯಾಣದ ಜಯಂತ ಮುಂತಾದ ಪಾತ್ರಗಳನ್ನು ಕುಷ್ಟನವರು ಚೆನ್ನಾಗಿ ಮಾಡುತ್ತಿದ್ದರು. ಇವರಿಗೆ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿಯು 1968ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

---

ಮೈಸೂರು ರಾಜ್ಯ

## ಸಂಗೀತ ನಾಟಕ ಅಕಾಡೆಮಿ




ರವೀಂದ್ರ ಕಲಾಕ್ಷೇತ್ರ

ಬೆಂಗಳೂರು

# 1969ರ ಪ್ರಶಸ್ತಿ ವಿಜೇತರು



## ಎಚ್.ಎಲ್.ಎನ್. ಸಿಂಹ

ಎಚ್. ನರಸಿಂಹಯ್ಯನವರ ಕುಮಾರ ಎಚ್. ಲಕ್ಷ್ಮೀನರಸಿಂಹರವರು ಹುಟ್ಟಿದ್ದು ಮಳವಳ್ಳಿಯಲ್ಲಿ 1904ರಲ್ಲಿ. ತಂದೆ ಸರಕಾರಿ ಉದ್ಯೋಗದಲ್ಲಿದ್ದರು. ಸಿಂಹ ಅವರ ಹೈಸ್ಕೂಲು ವಿದ್ಯಾಭ್ಯಾಸ ಮೈಸೂರಿನಲ್ಲೆ ನಡೆಯಿತು. ಕನ್ನಡ ರಂಗಭೂಮಿಯ ನಟರಲ್ಲೊಬ್ಬರಾದ ದಿವಂಗತ ಮಹಮ್ಮದ್ ಪೀರ್‌ರವರು ಈ ಶಾಲೆಯಲ್ಲೇ ಸಿಂಹರವರ ಸಹಪಾಠಿಯಾಗಿದ್ದರು. ಇವರಿಬ್ಬರೂ ಹೈಸ್ಕೂಲು ನಾಟಕಗಳಲ್ಲಿ ಪಾತ್ರವಹಿಸಿದ್ದುಂಟು.

ಆದರೆ ಸಿಂಹರವರಿಗೆ ನಾಟಕಗಳಲ್ಲಿ ಆಸಕ್ತಿ ಬಲಿತದ್ದು ನಾಟಕ ಶಿರೋಮಣಿ ವರದಾಚಾರ್ಯರ ನಾಟಕಗಳನ್ನು ನೋಡಿ. ಅವರು ರಂಗಭೂಮಿಗೆ ಆಕರ್ಷಿತರಾದದ್ದು ತಮ್ಮ ಮಿತ್ರ ಪೀರ್‌ರವರು ಅಭಿನಯ ಕಂಠೀರವ ಗಂಗಾಧರರಾಯರು ಸ್ಥಾಪಿಸಿದ್ದ ಭಾರತಮನೋಲ್ಲಾಸಿ ಕಂಪನಿಯಲ್ಲಿ ಪಾತ್ರವಹಿಸಿದ್ದನ್ನು ನೋಡಿದಮೇಲೆ. ಮೊದಲು ಅವರು ನಟರಾಗಿ ಸೇರಿದ್ದು ಆ ಸಂಸ್ಥೆಯಲ್ಲೇ.

ಸಿಂಹರ ಸಾಧನೆಗಳು ಹಲವಾರು. ಅವರು ಜನರ ಕಣ್ಣಿಗೆ ಬಿದ್ದದ್ದು ಉತ್ತಮ ನಟರಾಗಿ "ಸಾಮ್ರಾಟ್ ಷಾಜಹಾನ್" ನಾಟಕದಲ್ಲಿ ಷಾಜಹಾನನಾಗಿ. ಅವರೇ ಬರೆದ "ಸಂಸಾರನೌಕ" ನಾಟಕದಲ್ಲಿ ಮಾಧು, ಮತ್ತು ಸುಂದರನಾಗಿ, ಗೌತಮಬುದ್ಧ ನಾಟಕದಲ್ಲಿ ಸೇವಕ ಚನ್ನನಾಗಿ ಸಿಂಹರವರು ನೀಡುತ್ತಿದ್ದ ಅಭಿನಯ ಅದನ್ನು ನೋಡಿದ್ದವರೆಲ್ಲರ ಮನಸ್ಸಿನಲ್ಲಿಯೂ – ಅದನ್ನು ನೋಡಿ ಮೂವತ್ತು ಮೂವತ್ತೈದು ವರ್ಷಗಳಾಗುತ್ತ ಬಂದಿದ್ದರೂ ಇಂದಿಗೂ ಹಸಿರಾಗಿದೆ.

ಸುಮಾರು ಮೂರು ಗಂಟೆಯೊಳಗಾಗಿ ಮುಗಿದು ಹೋಗುವಂಥ ಸಾಮಾಜಿಕ ನಾಟಕವನ್ನು ಬರೆದು ಅದನ್ನು ವೃತ್ತಿರಂಗಭೂಮಿಯಮೇಲೆ ತಂದು – ಅದನ್ನು ಸದೃಢವಾಗಿ ನಿಲ್ಲಿಸಿದ ಕೀರ್ತಿ ಸಿಂಹರದು. ಈ ಸಂಸಾರನೌಕ ನಾಟಕ ಕನ್ನಡದಲ್ಲಿ ಮಾತ್ರವಲ್ಲದೆ, ತಮಿಳು ಭಾಷಾಂತರದಲ್ಲಿ ಕೂಡ ಏಕಪ್ರಕಾರವಾಗಿ ನೂರಾರು ಬಾರಿ ಪ್ರದರ್ಶಿತವಾಯಿತು.

ದಕ್ಷಿಣ ಭಾರತ ಚಲನಚಿತ್ರ ರಂಗದ ಪ್ರಥಮ ಸಾಮಾಜಿಕ ಚಿತ್ರ ಕೂಡ ಸಂಸಾರನೌಕವೇ. ತಮಿಳುಭಾಷೆಯಲ್ಲಿ ಕೂಡ ಈ ಚಿತ್ರವನ್ನು ತೆಗೆದರು. ಸಿಂಹ ಅವರು ಉತ್ತಮ ಚಲನಚಿತ್ರ ನಿರ್ದೇಶಕರು ಕೂಡ. ಅನೇಕ ಚಲನಚಿತ್ರಗಳಿಗೆ ಸಾಹಿತ್ಯವನ್ನೂ ಬರೆದಿದ್ದಾರೆ. ಕನ್ನಡ ರಂಗಭೂಮಿ, ಚಲನಚಿತ್ರಗಳ ಇತಿಹಾಸದಲ್ಲಿ ದೃಢವಾಗಿ ನಿಲ್ಲುವ ಹೆಸರು ಸಿಂಹರದು.

1969ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಸಿಂಹರವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.



## ಬಾದಶಹಾ ಸಾಹೇಬ ಉರ್ಫ್ ಸರವರ ಅಲ್ಲಿಖಾನ್

ಬಾದಶಹಾ ಸಾಹೇಬ ಎಂದು ಪ್ರಸಿದ್ಧರಾದ ಸರವರ ಅಲ್ಲಿಖಾನ್ ಅವರು ಬಾಗಲಕೋಟೆ ತಾಲ್ಲೂಕಿನ ಬೀಳೂರಿನವರು. ಖಾನರು ಸವ್ಯಸಾಚಿಗಳು. ಸಂಗೀತ ಅಭಿನಯ ಎರಡರಲ್ಲೂ ಖ್ಯಾತಿ ಹೊಂದಿದವರು. ಅವರು ಅಭ್ಯಾಸ ಮಾಡಿದ್ದು ಉತ್ತರಾದಿ ಸಂಗೀತ. ಗುರುಗಳು ಗ್ವಾಲಿಯರ್ ಘರಾಣೆಯ ನಿಸ್ಸಾರ ಹುಸೇನ್ ಅವರ ಶಿಷ್ಯರಾದ ಕೃಷ್ಣಬುವ ಸಿಂಧೆ ಅವರು.

ಖಾನರವರ ಅಭಿನಯದ ಪ್ರಧಾನ ಕ್ಷೇತ್ರ ವಾಮನರಾವ್ ಮಾಸ್ತರು ನಡೆಸುತ್ತಿದ್ದ ವಿಶ್ವಗುಣಾದರ್ಶ ನಾಟಕ ಮಂಡಲಿ. ಖಾನರು ರಂಗಭೂಮಿಯನ್ನು ಪ್ರವೇಶಿಸಿದ್ದೂ ಉತ್ತಮ ನಟರೆಂಬ ಖ್ಯಾತಿಯನ್ನುಗಳಿಸಿಕೊಂಡಿದ್ದು ಈ ನಾಟಕ ಮಂಡಲಿಯಲ್ಲಿ ಅಭಿನಯಿಸುತ್ತಿದ್ದಾಗಲೇ. ಸುಕೋಮಲ ಶಾರೀರವಿದ್ದ, ಬಾದಶಹಾ ಸಾಹೇಬರು ವಿಶ್ವಾಗುಣಾದರ್ಶ ನಾಟಕ ಮಂಡಲಿಯಲ್ಲಿ ಸ್ತ್ರೀಪಾತ್ರ ನಿರ್ವಹಣೆಯಿಂದ ತಮ್ಮ ರಂಗಭೂಮಿಯ ಸೇವೆಯನ್ನು ಆರಂಭಿಸಿದರು. ಕ್ರಮಕ್ರಮವಾಗಿ ಗಣ್ಯ ಪುರುಷ ಪಾತ್ರಗಳ ಅಭಿನಯವನ್ನು ಕೈಗೊಂಡರು. ವಾಮನರಾವ್ ಮಾಸ್ತರರವರ ಖ್ಯಾತ "ವೀರ ಅಭಿಮನ್ಯು" ನಾಟಕದಲ್ಲಿ ಸಾಹೇಬರು ಅರ್ಜುನನ ಪಾತ್ರ ಅಭಿನಯಿಸುತ್ತಿದ್ದುದ್ದು ಅತ್ಯಂತ ಪ್ರಭಾವಶಾಲಿಯಾಗಿದ್ದು ಬಹಳ ಜನಪ್ರಿಯವಾಗಿತ್ತು.

ಮಲ್ಲಿಕಾರ್ಜುನ ಮನ್ಸೂರರು, ಬಸವರಾಜ ಮನ್ಸೂರರು – ಇಂತವರ ಜೊತೆಯಲ್ಲಿ ನಾಟಕದಲ್ಲಿ ಅಭಿನಯಿಸಿ ಕೀರ್ತಿ ಗಳಿಸಿಕೊಂಡವರು ಬಾದಶಹಾ ಸಾಹೇಬರು. ಸಾಹೇಬರ ಇನ್ನೊಂದು ಮುಖ್ಯ ಸಾಧನೆಯೆಂದರೆ, ಅವರು ಸಂಗೀತ ಅಭಿನಯಗಳಲ್ಲಿ ಅನೇಕರಿಗೆ ಕೊಟ್ಟ ಶಿಕ್ಷಣ. ಅಮೀರ್‌ಬಾಯಿ ಕರ್ನಾಟಕಿ, ಗೋಹರ್‌ಜಾನ್, ಬಾಳಪ್ಪ ಏಣಗಿ, ಹೆರಕಲ್ ಬಸಪ್ಪ ಮುಂತಾದವರು ಬಾದಶಹಾ ಸಾಹೇಬರ ಶಿಷ್ಯವರ್ಗಕ್ಕೆ ಸೇರಿದವರು.

ತಾವು ರಂಗಭೂಮಿಯಿಂದ ನಿವೃತ್ತರಾದ ಮೇಲೆ ಕೂಡ ಸಾಹೇಬರು ಇಲಕಲ್ಲಿನಲ್ಲಿ ನಿಂತು ಅನೇಕರಿಗೆ ಸಂಗೀತ, ಅಭಿಯಯಗಳಲ್ಲಿ ಶಿಕ್ಷಣ ಕೊಟ್ಟರು. ಈ ದೃಷ್ಟಿಯಿಂದ ಅವರ ಸೇವೆ ಅಮೂಲ್ಯವಾದದ್ದು. ಇದೇ ವರ್ಷ ತಮ್ಮ ಎಪ್ಪತ್ತನೆಯ ವಯಸ್ಸಿನಲ್ಲಿ ಬಾದಶಹ ಸಾಹೇಬರು ವಿಧಿವಶರಾದುದರಿಂದ ಕನ್ನಡ ಕಲಾದೇವಿ ಒಂದು ಅಪೂರ್ವರತ್ನವನ್ನು ಕಳೆದುಕೊಂಡಂತಾಯಿತು.

1969ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಸರವರ ಅಲ್ಲಿಖಾನ್‌ರವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಎಂ.ಎಲ್. ಶ್ರೀನಿವಾಸಶಾಸ್ತ್ರಿ

ಮಗ ನಾಟಕಗಳಲ್ಲಿ ಆಸಕ್ತಿ ಬೆಳೆಸಿಕೊಂಡು ನಾಟಕದವರ ಜೊತೆ ಸೇರಿದರೆ ಕೆಟ್ಟು ಹೋಗುತ್ತಾನೆಂದು ತಂದೆಗೆ ಹೆದರಿಕೆ; ನಾಟಕ ನೋಡಬೇಕು, ನಾಟಕ ಆಡಬೇಕು, ಇದು ಮಗನ ಅದಮ್ಯ ಆಸೆ. ಈ ಸೆಣಸಾಟದಲ್ಲಿ ಕೊನೆಗೆ ಗೆದ್ದ ವ್ಯಕ್ತಿ ಮಗನೇ. ತಂದೆ ಸಾಯುವ ಕಾಲಕ್ಕೆ ಬಾಯಿಬಿಟ್ಟು ಹೇಳಿಬಿಟ್ಟರು – ನಾನು ಹೆದರಿದಂತೆ ನಾಟಕಕ್ಕೆ ಸೇರಿ ಕೆಡಲಿಲ್ಲ, ಅದರಿಂದ ನಿನಗೆ ಒಳ್ಳೆಯದೇ ಆಯಿತು ಅಂತ. ತಂದೆಯಿಂದ ಈ ಪ್ರಶಸ್ತಿ ಪಡೆದುಕೊಂಡ ಮಗ ಎಂ.ಎಲ್. ಶ್ರೀನಿವಾಸಶಾಸ್ತ್ರೀ ಅವರು.

ನಾಟಕದಲ್ಲಿ ಆಸಕ್ತಿ ಬೆಳೆಸಿಕೊಳ್ಳುವುದಕ್ಕೆ ಮೊದಲು ಒಮ್ಮೊಮ್ಮೆಯಾದರೂ ಪರೀಕ್ಷೆಗಳಲ್ಲಿ ಫೇಲ್ ಆಗುತ್ತಿದ್ದರು. ನಾಟಕಗಳ ಸಂಬಂಧ ಬೆಳೆಸಿಕೊಂಡ ಮೇಲೆ ಒಂದು ವರ್ಷವೂ ಫೇಲ್ ಆಗದೆ ಬಿ.ಎ., ಬಿ.ಎಲ್., ಪರೀಕ್ಷೆಮಾಡಿ ಮುಗಿಸಿದರು. ಬೆಂಗಳೂರಿನಲ್ಲೇ ಇದ್ದರೆ, ತಮ್ಮ ನಾಟಕಶಕ್ತಿ ಬೆಳೆಸಿಕೊಳ್ಳಲು, ಉಳಿಸಿಕೊಳ್ಳಲು ಸಾಧ್ಯವೆಂದು

ಯೋಚಿಸಿ ಇಲ್ಲೇ ವಕೀಲಿ ವೃತ್ತಿಯನ್ನವಲಂಬಿಸಿದರು. ಶಾಸ್ತ್ರಿಗಳ ಮೇಲೆ ಪ್ರಭಾವ ಬೀರಿದ ಮೊದಲ ನಾಟಕಗಳೆಂದರೆ, ವರದಾಚಾರ್ಯರು ಅಭಿನಯಿಸಿದ ಶಾಕುಂತಲ ಮತ್ತು ನಿರುಪಮ ನಾಟಕಗಳು. ಅನಂತರ ಬೆಂಗಳೂರಿನ ಅಮೆಚ್ಯುರ್ ಡ್ರಮಟಿಕ್ ಅಸೋಸಿಯೇಷನ್‌ನಲ್ಲಿ ಬಳ್ಳಾರಿಯ ಟಿ. ರಾಘವಾಚಾರ್ಯರು ಅಭಿನಯಿಸುತ್ತಿದ್ದ ನಾಟಕಗಳನ್ನು ನೋಡಿದರು. ತಾಡಪತ್ರಿ ರಾಘವಾಚಾರ್ಯರ ವ್ಯಕ್ತಿತ್ವ, ಅವರ ಅಭಿನಯ ಚಾತುರ್ಯ ಶಾಸ್ತ್ರಿಗಳ ಮನಸ್ಸನ್ನು ಆಕರ್ಷಿಸಿದವು.

ಸರಿ ಎ.ಡಿ.ಎ.ಗೆ ವಿದ್ಯಾರ್ಥಿ ಸದಸ್ಯರಾಗಿ ಸೇರಿದರು, ಅಲ್ಲಿ ಪ್ರಯೋಗಿಸುತ್ತಿದ್ದ ನಾಟಕಗಳಲ್ಲಿ ಭಾಗವಹಿಸುತ್ತಿದ್ದುದಲ್ಲದೆ ಇತ್ತ ಕಾಲೇಜಿನಲ್ಲೂ ನಾಟಕ ಸಂಘ ಕಟ್ಟಿ ನಾಟಕಗಳನ್ನು ಪ್ರದರ್ಶಿಸಿದರು. ಹ್ಯಾಮ್‌ಲೆಟ್ ಪಾತ್ರ ಅಭಿನಯಕ್ಕಾಗಿ ಮೊದಲನೆಯ ಬಹುಮಾನವಾಗಿ ಬಂಗಾರದ ಪದಕವನ್ನು ಪಡೆದರು.

ಇತ್ತ ಎ.ಡಿ.ಎ.ನಲ್ಲಿ ಪ್ರಧಾನ ಪಾತ್ರಗಳನ್ನು ವಹಿಸುವ ಮಟ್ಟಕ್ಕೆ ಬಂದರು. ಸಂಸ್ಥೆಯ ಪ್ರಮುಖ ಮತ್ತು ಗಣ್ಯ ಸದಸ್ಯರಾಗಿ ಅದರ ನಿರ್ವಹಣೆಯಲ್ಲಿ ಪ್ರಮುಖ ಪಾತ್ರವಹಿಸಿದರು. ಹೀಗೆ ಶಾಸ್ತ್ರಿಗಳವರು ಕಾಲು ಶತಮಾನ ಕಾಲ ವಿಲಾಸಿರಂಗಭೂಮಿಯ ಉತ್ಕರ್ಷಕ್ಕಾಗಿ ನಿರಂತರವಾಗಿ ದುಡಿದು ಖ್ಯಾತಿಗಳಿಸಿಕೊಂಡ ಮಹನೀಯರು. 1969ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಶಾಸ್ತ್ರಿಯವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಡಿ. ಲಕ್ಷ್ಮಣಯ್ಯ

ಮೈಸೂರು ಬಲ್ಲವರಿಗೆ ಡಿ. ಸುಬ್ಬಯ್ಯ ರೋಡ್ ಪರಿಚಿತ. ಆ ರಸ್ತೆಯ ಕೊನೆಯಲ್ಲಿರುವ ಮನೆಯೇ ಡಿ. ಸುಬ್ಬಯ್ಯನವರ ಮನೆ. ಈಗ್ಗೆ ಸುಮಾರು ಎಂಭತ್ತೈದು ತೊಂಬತ್ತು ವರ್ಷಗಳ ಹಿಂದೆ ಆ ಮನೆ ಸುಪ್ರಸಿದ್ಧ ವಿದ್ವಾಂಸರ ಆಶ್ರಯಸ್ಥಾನವಾಗಿತ್ತು. ಬಿ. ಮಲ್ಲಪ್ಪನವರು, ಅಯ್ಯಾ ಶಾಸ್ತ್ರಿಗಳು, ಬಸವಪ್ಪಶಾಸ್ತ್ರಿಗಳು, ನಂಜನಗೂಡು ಸುಬ್ಬಾಶಾಸ್ತ್ರಿಗಳು, ಜಯರಾಯಚಾರ್ಯರು, ದೇವಶಿಖಾಮಣಿ ಅಳಶಿಂಗಚಾರ್ಯರು. ಹೀಗೆ ಬಸವಪ್ಪ ಶಾಸ್ತ್ರಿಗಳ ಕರ್ನಾಟಕ ಶಾಕುಂತಲ ನಾಟಕ ರಚನೆಗೆ ಪ್ರೇರಣೆ ದೊರೆತದ್ದು, ಅದು ರೂಪಗೊಂಡಿದ್ದು ಈ ಗೋಷ್ಠಿಯಲ್ಲೇ ಎಂದರೆ ತಪ್ಪಲ್ಲ.

ಹಾಗೇ ಇನ್ನೂ ಹಲವಾರು ನಾಟಕಗಳು. ಸಿ. ಸುಬ್ಬರಾಯರು ಈ ವಿದ್ವಾಂಸರ ಸಭೆಯಲ್ಲಿ ಸುಪ್ರಸಿದ್ಧ ಇಂಗ್ಲೀಷ್ ನಾಟಕಗಳನ್ನು ಓದಿ ವಿವರಿಸುತ್ತಿದ್ದುದೂ ಉಂಟು. ಇಂಥ ವಾತಾವರಣವಿದ್ದ ಮನೆಯಲ್ಲಿ 1893ರಲ್ಲಿ ಹುಟ್ಟಿದವರು ಡಿ. ಸುಬ್ಬಯ್ಯನವರ ಮಕ್ಕಳು ಡಿ. ಲಕ್ಷ್ಮಣಯ್ಯನವರು. ಹೈಸ್ಕೂಲು ತರಗತಿಯಲ್ಲಿದ್ದಾಗಿನಿಂದ ನಾಟಕಾಭಿನಯದ ಕಡೆಗೆ ವಾಲಿದರು ಲಕ್ಷ್ಮಣಯ್ಯನವರು. ಥಾಮಸ್ ಡೆನ್‌ಹ್ಯಾಮ್‌ರಂಥ ಉತ್ತಮ ವಿದ್ವಾಂಸರ ದಿಗ್ದರ್ಶನದ ಲಾಭ ದೊರೆಯಿತು. ಕಾಲೇಜಿಗೆ ಸೇರಿದಮೇಲೆ ಜೆ.ಸಿ ರಾಲೊ ಅವರ ಮಾರ್ಗದರ್ಶನ ಸಿಕ್ಕಿತು. ಅವರ ನೇತೃತ್ವದಲ್ಲಿ ಲಕ್ಷ್ಮಣಯ್ಯನವರು ಹಲವಾರು ಇಂಗ್ಲೀಷ್ ನಾಟಕಗಳಲ್ಲಿ ಭಾಗವಹಿಸಿದರು.

"ದಿ ಫ್ಲೈಯಿಂಗ್ ಡಾಕ್ಟರ್" ನಲ್ಲಿ ನಾಯಕನಾಗಿ ಅವರು ನೀಡಿದ ಅಭಿನಯ ಅವರಿಗೆ ಅಭೂತಪೂರ್ವ ಕೀರ್ತಿಯನ್ನು ತಂದಿತು. ವೃತ್ತಿಯಿಂದ ವಕೀಲರಾದರೂ ಪ್ರವೃತ್ತಿಯಿಂದ ನಟರಾದ ಲಕ್ಷ್ಮಣಯ್ಯನವರು ಅನೇಕ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಅನೇಕ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಅವರು ಕೆಲವು ನಾಟಕಗಳ ಕರ್ತೃಗಳೂ ಹೌದು. ತಮ್ಮ "ನವೀನ ಭಾರತ ಕೇಸರಿ ಶ್ರೀಪಾಲ"ವನ್ನು ಶ್ರೀ ಶಕುಂತಲಾ ಕರ್ನಾಟಕ ನಾಟಕ ಸಭಾಕ್ಕಾಗಿ ಲಕ್ಷ್ಮಣಯ್ಯನವರೇ ನಿರ್ದೇಶಿಸಿದರಲ್ಲದೆ ಅದರಲ್ಲೆ ಪ್ರಧಾನ ಪಾತ್ರವನ್ನೂ ವಹಿಸಿದರು. ಲಕ್ಷ್ಮಣಯ್ಯನವರ ನಾಟಕ ಪ್ರಜ್ಞೆ, ಅಭಿನಯ ಶಕ್ತಿಗಳು ಅಪೂರ್ವವಾದವು. 1969ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಲಕ್ಷ್ಮಣಯ್ಯನವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಬಿ. ಜಯಮ್ಮ

ಬೆಂಗಳೂರು ಜಯಮ್ಮನವರು ವಂಶಪಾರಂಪರ್ಯವಾಗಿ, ಕನ್ನಡ ರಂಗಭೂಮಿಯ ಸಂಬಂಧವುಳ್ಳವರು. ಅವರ ದೊಡ್ಡಪ್ಪನವರಾದ ಶಾಂತರಾಜಪ್ಪನವರು ಒಂದು ನಾಟಕ ಮಂಡಳಿಯನ್ನು ನಡೆಸುತ್ತಿದ್ದರು. ದೊಡ್ಡಮ್ಮನವರು ಹೆಸರಾಂತ ನಟಿಯಾಗಿದ್ದರು. ಆದ್ದರಿಂದ ಜಯಮ್ಮನವರಿಗೆ ಸಣ್ಣವಯಸ್ಸಿನಲ್ಲಿಯೇ ನಾಟಕಾಭಿನಯದ ಕಡೆಗೆ ಮನಸ್ಸು ಹರಿದಿದ್ದರಲ್ಲಿ ಆಶ್ಚರ್ಯವಿಲ್ಲ. ಕೇವಲ ಒಂಬತ್ತು ವಯಸ್ಸಿನ ಬಾಲಕಿಯಾಗಿದ್ದಾಗ ಸೀತಾಸ್ವಯಂವರ ನಾಟಕದಲ್ಲಿ ಸೀತೆಯಾಗಿ ರಂಗಭೂಮಿಯನ್ನು ಪ್ರವೇಶಿಸಿದರು. ಆದರೆ ಆ ಪಾತ್ರ ಮೂಕಪಾತ್ರ–ಮಾತಿಲ್ಲದ್ದು. ಜಯಮ್ಮನವರು ನಾಟಕಗಳಲ್ಲದೆ ಚಲನಚಿತ್ರಗಳಲ್ಲೂ ಅಭಿನಯಿಸಿದ್ದಾರೆ. ಅಲ್ಲೂ ಅವರು ಅಭಿನಯಿಸಿದ್ದು ಮೂಕ ಪಾತ್ರಗಳೇ–ಅಂದರೆ ಆಗಿನ್ನೂ ಟಾಕೀ ಚಿತ್ರಗಳು ಬಂದಿರಲಿಲ್ಲ.

ಕಳೆದ ನಲವತ್ತು–ನಲವತ್ತೈದು ವರ್ಷಗಳಿಂದ ಜಯಮ್ಮನವರು ರಂಗಭೂಮಿಗೂ ಚಲನಚಿತ್ರರಂಗಕ್ಕೂ ಅಪಾರ ಸೇವೆ ಸಲ್ಲಿಸಿದ್ದಾರೆ. ಅವರ ಪ್ರತಿಭೆ ಬಹುಮುಖವಾದದ್ದು. ಹಲವಾರು ಭಾಷೆಗಳನ್ನು, ಆ ಭಾಷೆ ಹುಟ್ಟುಮಾತಾಗಿರುವಷ್ಟು ಸಹಜವಾಗಿ ಆಡಲು ಅವರಿಗೆ ಬರುತ್ತದೆ. ಕನ್ನಡ, ತೆಲುಗು, ತಮಿಳು ಚಿತ್ರಗಳಲ್ಲೂ ಯಶಸ್ವಿಯಾಗಿ ಪಾತ್ರವಹಿಸಿದ್ದಾರೆ. ದಕ್ಷಿಣ ಭಾರತದ ಪ್ರಥಮ ಶ್ರೇಣಿಯ ನಟಿಯೆಂಬ ಖ್ಯಾತಿಯನ್ನು ಗಳಿಸಿಕೊಂಡಿದ್ದಾರೆ. ಅಭಿನಯದಂತೆ ಸಂಗೀತದಲ್ಲಿಯೂ ಆಸಕ್ತಿ ಜಯಮ್ಮನವರಿಗೆ. 1928ರಲ್ಲಿ ಇವರು ಗುಬ್ಬಿ ಕಂಪನಿಯನ್ನು ಸೇರಿದಾಗ, ಅಲ್ಲಿಯ ಶಿಕ್ಷಣದ ಅಂಗವಾಗಿ ಪಿಟೀಲು ವಿದ್ವಾನ್ ಪುಟ್ಟಪ್ಪನವರಿಂದ ಸಂಗೀತ ಪಾಠವೂ ಆರಂಭವಾಯಿತು. ಜಯಮ್ಮನವರು, ಅದನ್ನು ಮುಂದುವರಿಸಿ, ಸೇಲಂ ದೊರೆಸ್ವಾಮಿ ಅಯ್ಯಂಗಾರ್ಯರವರಲ್ಲಿ ಕರ್ನಾಟಕ ಸಂಗೀತವನ್ನು ಗವಾಯ್ ನೀಲಕಂಠ ಬುವಾ ಅವರಲ್ಲಿ ಉತ್ತರಾದಿ ಸಂಗೀತವನ್ನೂ ಅಭ್ಯಾಸ ಮಾಡಿದ್ದಾರೆ. ಅನೇಕ ಕಡೆಗಳಲ್ಲಿ ಸಂಗೀತ ಕಚೇರಿಗಳನ್ನು ಕೂಡ ನಡೆಸಿದ್ದಾರೆ.

ಚಲನಚಿತ್ರ ರಂಗದಲ್ಲಿ ಅಪಾರವಾದ ಖ್ಯಾತಿಯನ್ನು ಗಳಿಸಿದ್ದರೂ ಜಯಮ್ಮನವರು ಇಂದಿಗೂ ನಾಟಕರಂಗದೊಡನೆ ಘನತರವಾದ ಸಂಬಂಧವನ್ನಿಟ್ಟುಕೊಂಡು ಬಂದಿದ್ದಾರೆ. ಕನ್ನಡ ರಂಗಭೂಮಿ, ಚಲನಚಿತ್ರರಂಗಗಳಿಗೆ ಜಯಮ್ಮನವರಿಂದ ಸಂದಿರುವ ಕಲಾಸೇವೆ ಗಣನೀಯವಾದದ್ದು, ಸ್ಮರಣೀಯವಾದದ್ದು. 1969ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಜಯಮ್ಮನವರನ್ನು ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಎಂ.ಎಸ್. ಚೆಲುವ ಐಯ್ಯಂಗಾರ್ (ಸಂಪತ್)

ಎಂ.ಎಸ್. ಚೆಲುವ ಐಯ್ಯಂಗಾರ್ ಎಂದರೆ ಯಾರಿಗೂ ಅರ್ಥವಾಗುವುದಿಲ್ಲ. ಆದ್ದರಿಂದ ಅವರನ್ನು ಸಂಪತ್ ಎಂದೇ ಕರೆಯಬೇಕು. ಮಾವಿನಕೆರೆ ಶ್ರೀನಿವಾಸ ಐಯ್ಯಂಗಾರ್ಯರ ಮಕ್ಕಳಾದ "ಸಂಪತ್" ಹುಟ್ಟಿದ್ದು ಮೈಸೂರಿನಲ್ಲಿ 1913ರಲ್ಲಿ. ಬೆಳೆದದ್ದೂ ಅಲ್ಲೇ. ಕಾರ್ಯಕ್ಷೇತ್ರವೂ ಅದೇ.

ಸಂಪತ್, ಪ್ರಿಂಟಿಂಗ್ ಪ್ರೆಸ್‌ನ ಸೆರೆಮನೆಗೆ ಸಿಕ್ಕಿಬೀಳದೆ ಹೆಚ್ಚು ಸ್ವತಂತ್ರರಾಗಿದ್ದು ಪದೇ ಪದೇ ಮೈಸೂರು ನಗರದಿಂದ ಹೊರಗೆ ಸಂಚರಿಸುವುದು, ನಾಟಕ ಪ್ರಯೋಗ ಮಾಡುವುದು ಸಾಧ್ಯವಾಗಿದ್ದರೆ ಅದರಿಂದ ಹೆಚ್ಚು ಹೆಚ್ಚು ಜನರಿಗೆ ಅವರ ಪರಿಚಯ ಆಗುತ್ತಿತ್ತು. ಅದಕ್ಕಿಂತಲೂ ಹೆಚ್ಚಾಗಿ – ಅವರ ಅಪೂರ್ವ ಅಭಿನಯ ಕೌಶಲ, ನಾಟಕ ಪ್ರಯೋಗ ಕೌಶಲ, ತಂತ್ರಪರಿಣತಿಗಳ ಲಾಭ ಅನೇಕರಿಗೆ ದೊರೆಯುತ್ತಿತ್ತು. ಸಂಪತ್ ಅವರ ರಕ್ತ, ಮಾಂಸ, ಮೂಳೆ, ಎಲ್ಲ ನಾಟಕಮಯ.

ಉಸಿರು ಜೀವ ನಾಟಕ, ನಾಟಕದ ಮುಂದೆ ಇತರ ಎಲ್ಲ ವ್ಯವಹಾರಗಳೂ ಗೌಣ ಸಂಪತ್ ಅವರಿಗೆ. ನಾಟಕವೊಂದನ್ನು ಪ್ರಯೋಗಕ್ಕೆ ಕೈಗೆ ತೆಗೆದುಕೊಂಡ ಮೇಲೆ ಅನೇಕ ತಿಂಗಳಾದರೂ ಅದನ್ನು ತಮ್ಮ ನಿರೀಕ್ಷೆಯ ಮಟ್ಟವನ್ನು ಮುಟ್ಟಿಸದೆ ಬಿಡುವುದಿಲ್ಲ. ಇದರಿಂದ ಅವರಿಗೆ ಅಪಾರ ಯಶಸ್ಸು ದೊರೆತಿರುವಂತೆ, ಹಟಮಾರಿ ನಿರ್ದೇಶಕನೆಂಬ ಬಿರುದೂ ಬಂದಿದೆ.

ಸಂಪತ್ ರಂಗಭೂಮಿಯ ಮೇಲೆ ಹೆಜ್ಜೆಯಿಟ್ಟದ್ದು ಹತ್ತು ವರ್ಷದ ಪುಟ್ಟ ವಿದ್ಯಾರ್ಥಿಯಾಗಿದ್ದಾಗ. ಅವರ ನಾಟಕಾಸಕ್ತಿ, ಅಭಿನಯ ಪ್ರತಿಭೆಗಳನ್ನು ಗುರುತಿಸಿ ಪೋಷಿಸಿದವರು ಅವರ ವಿದ್ಯಾಗುರುಗಳಾಗಿದ್ದ ಕೆ.ವಿ. ಶ್ರೀನಿವಾಸಮೂರ್ತಿಗಳು ಮತ್ತು ಸ್ವಯಂ ಉತ್ತಮ ನಟರಾದ ಡಿ. ಲಕ್ಷ್ಮಣಯ್ಯನವರು. ಅಂದಿನಿಂದ ಇಂದಿನವರೆಗೆ ಸಂಪತ್ ಅನೇಕ ಕನ್ನಡ ಇಂಗ್ಲೀಷ್ ನಾಟಕದಲ್ಲಿ ಪಾತ್ರವಹಿಸಿದ್ದಾರೆ. ಅಭಿನಯಕ್ಕಾಗಿ ಖ್ಯಾತರೂ ಆಗಿದ್ದಾರೆ. ಅದಕ್ಕಿಂತಲೂ ಹೆಚ್ಚಿನ ಸಾಧನೆ ಎಂದರೆ ಅನೇಕ ಮಂದಿ ನಾಟಕ ವಿಲಾಸಿಗಳಲ್ಲಿ ಅಭಿನಯದಲ್ಲಿ, ನಾಟಕ ಪ್ರಯೋಗದಲ್ಲಿ ಉತ್ತಮ ಶಿಕ್ಷಣವನ್ನು ಕೊಟ್ಟದ್ದು.

ಸಂಪತ್ ಅವರ ಶಿಷ್ಯವರ್ಗದಲ್ಲಿ ಅಧ್ಯಾಪಕರಿದ್ದಾರೆ, ವೈದ್ಯರಿದ್ದಾರೆ, ಆಡಳಿತಗಾರರಿದ್ದಾರೆ, ಚಲನಚಿತ್ರಾಸಕ್ತರಿದ್ದಾರೆ. ಸಂಪತ್ ಅವರಿಗೆ ದೊರೆತಿರುವ ವಿಶಾಲ ಮನ್ನಣೆಗೆ ಇದು ನಿದರ್ಶನ. ಸರಳ, ಸ್ನೇಹಪರ ವ್ಯಕ್ತಿ ಸಂಪತ್. ಅವರಿಂದ ನಮ್ಮ ನಾಡಿನ ವಿಲಾಸಿ ರಂಗಭೂಮಿಗೆ ಸಂದಿರುವ ಸೇವೆ ಅಪಾರವಾದದ್ದು, ಅಮೂಲ್ಯವಾದದ್ದು. 1969ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಸಂಪತ್‌ರವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.





## ಬಿ.ಎಸ್. ನಾರಾಯಣರಾವ್

ಬಿ. ಸುಬ್ಬರಾಯರ ಮನೆ ಬುದ್ಧಿವಂತರೆಲ್ಲಾ ಬಂದು ಹೋಗುತ್ತಿದ್ದ ಮನೆ; ಕವಿಗಳು, ಕಲಾವಿದರು, ರಾಜಕಾರಣಿಗಳು ಎಲ್ಲಾ.

ಈಗ್ಗೆ ಐವತ್ತೆರಡು ವರ್ಷಗಳ ಹಿಂದೆ ರವೀಂದ್ರನಾಥ ಠಾಕೂರರು ಬೆಂಗಳೂರಿಗೆ ಬಂದಿದ್ದಾಗ ಸುಬ್ಬರಾಯರ ಮನೆಗೆ ಆಹ್ವಾನಿತರಾಗಿ ಬಂದರು. ಮನೆಯಲ್ಲಿ ಒಂದು ಗಂಡು ಮಗು ಹುಟ್ಟಿ ಸ್ವಲ್ಪ ದಿನಗಳಾಗಿತ್ತೆಂದು ತೋರುತ್ತದೆ. ತಂದೆ ಸುಬ್ಬರಾಯರು ಮಗುವನ್ನು ಕವಿಗಳಿಗೆ ತೋರಿಸಿ, ಇದಕ್ಕೆ ನೀವೇ ಹೆಸರಿಡಬೇಕು; ಆಶೀರ್ವಾದ ಮಾಡಬೇಕು ಎಂದರು. ಕವಿವರ್ಯರು ಮಗುವನ್ನು ನೋಡಿ ಅದಕ್ಕೆ ನಾರಾಯಣ ಎಂದು ಹೆಸರಿಟ್ಟರು. ಇವನು ಒಳ್ಳೆಯ ಕಲಾವಿದನಾಗುತ್ತಾನೆ ಎಂದು ಆಶೀರ್ವದಿಸಿದರು. ಬಿ.ಎಸ್. ನಾರಾಯಣರಾಯರಿಗೆ ಆ ಹೆಸರೂ ನಿಂತಿತು. ಆ ಆಶೀರ್ವಾದವೂ ಫಲಿಸಿತು.

ನಾರಾಯಣರಾಯರು ನಮ್ಮ ನಾಡಿನ ವಿಲಾಸಿ ರಂಗಭೂಮಿಯ ನಟರಲ್ಲಿ ನಿರ್ದೇಶಕರಲ್ಲಿ ಅಗ್ರಪಂಕ್ತಿಗೆ ಸೇರಿದವರು. ನಾಟಕ ಯಾವುದಿರಲಿ–ಅವರ ಭಾಷೆಯಲ್ಲಿ ಪಂಪನ ಪ್ರೌಢತೆಯಿರಲಿ, ಕುವೆಂಪುರವರ ಕಾವ್ಯಮಯತೆಯಿರಲಿ, ಕೈಲಾಸಂರವರ ಒತ್ತಕ್ಷರಗಳ ಜೋಡಣೆಯಿರಲಿ ಯಾವುದಾದರೂ ಸರಿ ಅದು ನಟರ ಬಾಯಲ್ಲಿ ಸರಿಯಾಗಿ ನುಡಿಯುವಂತೆ ನೋಡಿಕೊಳ್ಳಬಲ್ಲ, ಅವರ ಬಾಯಿಂದ ರಸಭಾವಪೂರ್ಣವಾಗಿ ಹೊಮ್ಮುವಂತೆ ಮಾಡಬಲ್ಲ ಸಾಮರ್ಥ್ಯ, ಶಿಕ್ಷಣ ನಿಷ್ಠೆಗಳೆರಡೂ ಇವೆ ನಾರಾಯಣರಿಗೆ.

ಅವರ ಅಭಿನಯ ಖಚಿತ ಆಗಿರುವಂತೆ ಅವರ ಶಿಕ್ಷಣ ವಿಧಾನವೂ ಅಷ್ಟೇ. ಅನವಶ್ಯಕವಾದ ವಿವರ, ಚರ್ಚೆಗಳಿಗೆ ಹೋಗದ ಅವಶ್ಯಕವಾದದ್ದನ್ನು ಹೇಳಿಕೊಡುತ್ತಾರೆ; ಹೇಳಿಕೊಟ್ಟಷ್ಟು ಸ್ಪಷ್ಟವಾಗಿರುತ್ತದೆ. ಇಡೀ ನಾಟಕ ಕೊನೆಗೆ ಹೇಗೆ ರೂಪುಗೊಳ್ಳಬೇಕು ಎಂಬುದನ್ನು ಅವರು ಮೊದಲು ತಮ್ಮ ಮನಸ್ಸಿನಲ್ಲಿ ಸಕಲ ವಿವರಗಳೊಂದಿಗೆ ಕಲ್ಪಿಸಿಕೊಳ್ಳುತ್ತಾರೆ. ಆ ಕಲ್ಪನೆಯನ್ನು ಚಾಚೂತಪ್ಪದಂತೆ ರಂಗದಮೇಲೆ ಇಳಿಸಲು ಪ್ರಯತ್ನ ಮಾಡುತ್ತಾರೆ. ಅದಕ್ಕನುಸಾರವಾಗಿ ನಟರಿಗೆ

ಶಿಕ್ಷಣ ಕೊಡುತ್ತಾರೆ. ಇದು ಅವರ ಶಿಕ್ಷಣ ವಿಧಾನ. ಬೇಕೆಂದು ಬಯಸಿದವರಿಗೆಲ್ಲಾ ನಾರಾಯಣರಾಯರ ಅನುಭವದ ಫಲ ಸಿದ್ಧ. ರವಿ ಕಲಾವಿದರು ಸಂಸ್ಥೆಯಲ್ಲಿ ನಿರಂತರವಾಗಿ ಪ್ರದರ್ಶನ ನೀಡಿದ್ದಾರೆ.

ನಾರಾಯಣರಾಯರು ಇದುವರೆಗೆ ನೂರಾರು ನಾಟಕಗಳಲ್ಲಿ ಪಾತ್ರವಹಿಸಿದ್ದಾರೆ; ನಿರ್ದೇಶಿಸಿದ್ದಾರೆ. ನೂರಾರು ಮಂದಿ ಯುವಜನರಿಗೆ ನಾಟಕ, ಪ್ರಯೋಗ ಅಭಿನಯಗಳಲ್ಲಿ ಶಿಕ್ಷಣ ಕೊಟ್ಟಿದ್ದಾರೆ. ಅವರಲ್ಲನೇಕರು ಉತ್ತಮ ನಟರೆಂದು, ನಿರ್ದೇಶಕರೆಂದು ಹೆಸರು ಪಡೆದಿದ್ದಾರೆ. ವಿಲಾಸಿರಂಗಭೂಮಿಗೆ ನಾರಾಯಣರಾಯರ ಅಪೂರ್ವ, ಅಮೂಲ್ಯ ಕೊಡುಗೆ ಇದು.

1969ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ನಾರಾಯಣರಾವ್‌ರವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಅಳಿಕೆ ರಾಮಯ್ಯ ರೈ

ಚುರುಕಿನ ನಡೆ, ಆಕರ್ಷಕ ಭಂಗಿ, ಗತ್ತು, ವೈವಿಧ್ಯಮಯ ನಾಟ್ಯ, ಒಳ್ಳೆಯ ಅಭಿನಯ ಭಾವಪೂರ್ಣ ಅರ್ಥಗಾರಿಕೆಯಿಂದ ರಂಗಕ್ಕೆ ಕಳೆ ತುಂಬುವ ರೈಯವರು ಎಪ್ಪತ್ತರ ಈ ಇಳಿಪ್ರಾಯದಲ್ಲೂ ವೇಷ ಹಾಕಿ ರಂಗಕ್ಕಿಳಿದರೆ ಯುವಕರನ್ನೂ ನಾಚಿಸುತ್ತಾರೆ. ಸ್ವತಃ ಖ್ಯಾತ ಕಲಾವಿದರಾಗಿದ್ದ ತಂದೆ ದಿವಂಗತ ಮೋನಪ್ಪ ರೈ (ಮೋನು ಶೆಟ್ಟಿ) ಅವರಿಂದ ಆರಂಭಿಕ ಶಿಕ್ಷಣ ಪಡೆದು ರಂಗಕ್ಕಿಳಿದ ರೈ ಅವರು ನಿರ್ವಹಿಸದ ಪಾತ್ರವಿಲ್ಲ ಎಂಬಷ್ಟು ಪ್ರಖ್ಯಾತರು.

ಬಾಲಗೋಪಾಲ ವೇಷದಿಂದ ಆರಂಭಿಸಿ ಸ್ವಪರಿಶ್ರಮದಿಂದ ನಾಯಕ ಪಾತ್ರಗಳಿಗೆ ಹಂತ, ಹಂತವಾಗಿ ಮೇಲೇರಿದ ರೈ ಬಬ್ರುವಾಹನ, ಅಭಿಮನ್ಯು, ಪರಶುರಾಮ ವೇಷಗಳಲ್ಲಿ ರಂಗ ತುಂಬಿ ಗುಡುಗಿನಂತೆ ಮೊಳಗಿದರೆ, ಚಂದ್ರಮತಿ, ದಮಯಂತಿ, ಸೀತೆ ಮೊದಲಾದ ಶೋಕ ಪ್ರಧಾನ ಸ್ತ್ರೀ ಪಾತ್ರಗಳಲ್ಲಿ ರಸಿಕರೆದೆಗಳನ್ನು ಆರ್ದಗೊಳಿಸಿ ಜನಮನದಲ್ಲಿ ಸ್ಥಿರಸ್ಥಾನಗಳಿಸಿಕೊಂಡವರು. ಪ್ರಮೀಳೆ, ಶಶಿಪ್ರಭೆಯಂಥ ಶೌರ್ಯ ಪ್ರಧಾನ ಸ್ತ್ರೀ ವೇಷಗಳಲ್ಲೂ ಸಾಟಿಯಿಲ್ಲದ ಕಲಾವಿದನೆನಿಸಿಕೊಂಡರು.

ಜೋಡಾಟದಲ್ಲಿ ರೈ ಸೋಲರಿಯದ ನರ್ತಕ, ಕೃಷ್ಣ, ಅರ್ಜುನ, ಕರ್ಣ, ಅತಿಕಾಯ, ಇಂದ್ರಜಿತು, ಸುಧನ್ವ, ತಾಮ್ರಧ್ವಜ, ಕೌರವ ಮುಂತಾದ ಪಾತ್ರಗಳಲ್ಲಿ ತಮ್ಮ ಪ್ರತಿಭೆಯನ್ನು ಪೂರ್ಣ ಪ್ರಕಟಗೊಳಿಸಿದ ಅವರ ಕೃಷ್ಣ, ಕೌರವ, ಕರ್ಣ, ಋತುಪರ್ಣ ವೇಷಗಳೂ ಸುಪ್ರಸಿದ್ಧವೆ. ತುಳು ಪ್ರಸಂಗಗಳಲ್ಲೂ ಸಮಾನ ಖ್ಯಾತಿಗೆ ಪಾತ್ರರಾಗಿರುವ ರೈ ಅವರ ವೇಷದ ಆಕರ್ಷಣೆ, ಚುರುಕುತನ ಈ ಇಳಿವಯಸ್ಸಿನಲ್ಲೂ ಕುಂದಿಲ್ಲ. ಪಾತ್ರದ ಘನತೆ, ಗೌರವ, ಭಾವನೆಗಳ ಕುರಿತು ಕಟ್ಟೆಚ್ಚರವಹಿಸುತ್ತಾರೆ ರೈ.

ತೆಂಕು ತಿಟ್ಟಿನ ನಾಟ್ಯದಲ್ಲಿ ಇಂದು ಪ್ರಾತಿನಿಧಿಕ ಕಲಾವಿದರೆಂದು ಗುರುತಿಸಬಹುದಾದ ರೈ ಅವರಿಗೆ ಇತ್ತೀಚಿನ 'ಸಾಮಾಜಿಕ' ಪ್ರಸಂಗಗಳಿಂದಾಗಿ ಅನುಭವ, ಪ್ರತಿಭೆಗೆ ಸೂಕ್ತ ಅಭಿವ್ಯಕ್ತಿ ಸಿಗದಿದ್ದರೂ ಅಲ್ಲೂ ಸೈ ಎನಿಸಿಕೊಂಡಿದ್ದಾರೆ.

1927ರಿಂದ ಎಡೆಬಿಡದೆ ತಿರುಗಾಟ ನಡೆಸಿರುವ ರೈ ಕಳೆದ ಇಪ್ಪತ್ತೆಂಟು ವರ್ಷಗಳಿಂದ ಹೆಚ್ಚಾಗಿ, ಕರ್ನಾಟಕ ಮೇಳಗಳಲ್ಲಿ ಪ್ರಧಾನ ಕಲಾವಿದ.

1969–70ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿಯಲ್ಲದೆ ಸಂಘ–ಸಂಸ್ಥೆಗಳಿಂದ ಹಲವು ಸನ್ಮಾನ, ಸತ್ಕಾರಗಳಿಗೆ ಪಾತ್ರರಾಗಿದ್ದಾರೆ.

1969ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ರಾಮಯ್ಯ ರೈ ಅವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

---

# 1970–71ರ ಪ್ರಶಸ್ತಿ ವಿಜೇತರು



## ಎ.ಎನ್. ಶೇಷಾಚಾರ್

ಮೈಸೂರು ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕು ಅಘಲಯಂ ಇವರ ಹುಟ್ಟೂರು. ಸದಾ ನಾಟಕದ ಕಂಪನಿಗಳು ಸುತ್ತ ಮುತ್ತ ಇರುತ್ತಿದ್ದವು. ನಾಟಕದಲ್ಲಿ ಒಲವು ಸಹಜವಾಗೇ ಬೆಳೆಯಿತು. ಪ್ರೌಢಶಾಲೆಯವರೆಗಷ್ಟೇ ವಿದ್ಯಾಭ್ಯಾಸ. 'ಶ್ರೀ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿ'ಯ ಎಂ.ವಿ. ಸುಬ್ಬಯ್ಯನಾಯ್ಡು, ಆರ್. ನಾಗೇಂದ್ರರಾಯರ ಪ್ರೋತ್ಸಾಹದಿಂದ ರಂಗಭೂಮಿಗೆ ಬಂದರು.

ಸಾಂಸಾರಿಕ ಕಥಾವಸ್ತುವಿಟ್ಟು ರಚಿತವಾದ ನಾಟಕಗಳು ಯಶಸ್ವಿ ಆಗ ತೊಡಗಿದಾಗ ಬೆಂಗಳೂರಿನ 'ಕಲಾಸೇವಾ ಮಂಡಲಿ' ಸೇರಿ ವಿಶೇಷ ಪಾತ್ರಗಳನ್ನು ನಿರ್ವಹಿಸಿದರು.

'ಕೀಚಕ ನಾಟಕದಲ್ಲಿ ಧರ್ಮರಾಯನ ಪಾತ್ರದ ಇವರ ಪೋಷಾಕು ವಿಶೇಷ ಪ್ರಸಾಧನ ಗುರುತಿಸಿ ಇವರಿಗೆ 'ಜೀಸಸ್ ಕ್ರೈಸ್ಟ್' ಎಂದವರೂ ಉಂಟು. ಶ್ರೀ ಚಾಮುಂಡೇಶ್ವರಿ ನಾಟಕ ಸಭಾದಲ್ಲಿ ಅನೇಕ ಪಾತ್ರಗಳು ಮುಖ್ಯವಾಗಿ ಇವರ ದುರ್ಯೋಧನ ಪಾತ್ರ ಜನ ಮನ್ನಣೆ ಪಡೆದಿತ್ತು.

ಭಾರತ ಮಾತಾ ಕರ್ನಾಟಕ ನಾಟಕ ಸಭಾ, ಗುಬ್ಬಿ ಕಂಪನಿ, ಹಿರಣ್ಣಯ್ಯ ಮಿತ್ರ ಮಂಡಲಿಗಳಲ್ಲಿ ದುಡಿದಿದ್ದಾರೆ. 'ಶೇಷಕಮಲ ಕಲಾಮಂಡಲಿ'ಯನ್ನು ಆರಂಭಿಸಿ 25 ವರ್ಷಗಳ ಕಾಲ ವೈಭವದಿಂದ ನಡೆಸಿದರು. ಇಲ್ಲಿಯ ಅನೇಕ ನಟರು ಇಂದು ಜನಪ್ರಿಯ ನಟರೆನಿಸಿದ್ದಾರೆ.

ಸ್ವತಃ ಶೇಷಾಚಾರ್ ಅವರು ತಮ್ಮ ದೇಹದಾರ್ಢ್ಯ, ಸಂಭಾಷಣೆ ಹೇಳುವಲ್ಲಿ ಮಾತಿನ 'ಕಾಕು'ಗಳ ಜಾಣತನಕ್ಕೆ ದೊಡ್ಡ ಹೆಸರು. ಅನೇಕ ಬಿರುದುಗಳ ಸನ್ಮಾನಗಳು ಇವರಿಗೆ ಸಂದಿದೆ. ಇವರ ಮಡದಿ ತುಳಸಮ್ಮನವರೂ ರಂಗ ಕಲಾವಿದೆ.

1970–71ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಶೇಷಾಚಾರ್ ಅವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ. ಇವರು ಸಂಗೀತ ನಾಟಕ ಅಕಾಡೆಮಿಯ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ವೈಯಕ್ತಿಕ ಹಿತವನ್ನೂ ಮರೆತು ರಂಗ ಕೈಂಕರ್ಯಕ್ಕೆ ಮುಂದಾಗುತ್ತಾರೆ ಶೇಷಾಚಾರ್‌ರವರು.

## ಎಂ. ಬಸವರಾಜಪ್ಪ

ಶ್ರೀ ಸೀತಾಮನೋಹರ ನಾಟಕ ಸಂಘವನ್ನು ಸ್ಥಾಪಿಸಿ ಕೆಲವು ವರ್ಷ ನಡೆಸಿದರು. ನಂತರ ಗುಬ್ಬಿ ಶ್ರೀ ಚೆನ್ನಬಸವೇಶ್ವರ ನಾಟಕ ಕಂಪನಿಯನ್ನು ಸೇರಿದರು.

ಅದ್ಭುತ ನಟರಾಗಿದ್ದ ಇವರು ಶಕುನಿ, ಕುಂಬಾ, ಲಿಂಗಾ ಮುಂತಾದ ವಿನೋದ ಪಾತ್ರಗಳಿಗೆ ಹೆಸರಾಗಿದ್ದರು. 'ಜೀವನ ನಾಟಕ' ಸದಾರಮೆ ಚಲನಚಿತ್ರಗಳಲ್ಲೂ ಅಭಿನಯಿಸಿದ ಇವರು, ಗುಬ್ಬಿ ಕಂಪನಿ ನಾಟಕಗಳ ಪ್ರಮುಖ ನಟರಲ್ಲಿ ಒಬ್ಬರಾಗಿದ್ದರು.

1970–71ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಬಸವರಾಜಪ್ಪ ಅವರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.



## ಜಿ.ವಿ. ಸ್ವರ್ಣಮ್ಮ

'ನಟಭಯಂಕರ ಎಂಎನ್. ಗಂಗಾಧರರಾಯರು ಯಮ ಮತ್ತು ಕಂಸನ ಪಾತ್ರವನ್ನು ವಹಿಸಿ ಕೋಣದ ಮೇಲೆ ರಂಗಭೂಮಿಯನ್ನು ಪ್ರವೇಶಿಸುವುದನ್ನು ನೋಡಲು ಮರೆಯದಿರಿ. ಅಂತೆಯೇ ಈ ನಾಟಕದಲ್ಲಿ 7 ವರ್ಷದ ಬಾಲಕ ಕೃಷ್ಣನ ಪಾತ್ರವಹಿಸಿ ಕಂಸನನ್ನು ಎದುರಿಸುವ ದೃಶ್ಯವನ್ನು ನೋಡಲು ಮರೆತರೆ ನೀವು ಇನ್ನೆಂದಿಗೂ ಇಂತಹ ದೃಶ್ಯವನ್ನು ನೋಡಲಾರಿರಿ' ಎಂದು ಭಿತ್ತಿ ಪತ್ರಗಳಲ್ಲಿ ಪ್ರಚುರಪಡಿಸಲಾಗಿತ್ತು.

ಸೈಡ್‌ವಿಂಗ್‌ನಿಂದ ಬಲರಾಮಕೃಷ್ಣರು ರಂಗಪ್ರವೇಶ ಮಾಡಿದರು. ಕಂಸ ಅವರಿಬ್ಬರನ್ನೂ ಆನಾಮತ್ ಎತ್ತಿ ತನ್ನ ಎರಡು ಭುಜಗಳ ಮೇಲೆ ಕೂಡಿಸಿಕೊಂಡು ಅರ್ಭಟಿಸಿದ. ಕಂಸನ ಕತ್ತನ್ನು ಹಿಚಿಕಬೇಕೆಂದು ಜಯರಾಯರು ಹೇಳಿದ್ದ ಮಾತು ಆ ಬಾಲಕಿಗೆ ತಟ್ಟನೆ ಜ್ಞಾಪಕಕ್ಕೆ ಬಂದಿತು. ಅಜಾನುಬಾಹುವಾದ ರಾಯರ ಕತ್ತು ಬಾಲಕಿಗೆ ಎಟುಕದೇ ಹೋಯಿತು. ಆಗ ಭಾವಾವೇಶದಿಂದ ಕಾಲಿನಿಂದ ಕಂಸನ ಕತ್ತಿಗೆ ಬಾಲಕಿ ಒದೆಯ ತೊಡಗಿದಳು. ಪ್ರೇಕ್ಷಕರು ಮೇಲಿಂದ ಮೇಲೆ ಕರತಾಡನಗೈದು ಬಾಲಕಿಯ ಸಾಹಸಕೃತ್ಯಕ್ಕೆ ಮೆಚ್ಚುಗೆ ಸೂಚಿಸಿದರು.

ಗಂಗಾಧರರಾಯರ ಎದುರು ಅಂದು ಆ ಪಾತ್ರಗಳನ್ನು ನಿರ್ವಹಿಸಿ ಕಲಾಭಿಮಾನಿಗಳ, ಸ್ವತಃ ಕಲಾವಿದರಾದ ತನ್ನ ತಂದೆ ನಾಟಕರತ್ನ ವೀರಣ್ಣನವರ ಹಾಗೂ ಪ್ರಸಿದ್ಧರಂಗ ಅಭಿನೇತ್ರಿ ತನ್ನ ತಾಯಿ ಜಿ.ವಿ. ಸುಂದರಮ್ಮನವರ ಪೂರ್ಣ ಮೆಚ್ಚುಗೆಗೆ ಪಾತ್ರಳಾದ ಆ ಕಿಶೋರಿ ಬೇರೆಯಾರೂ ಅಲ್ಲ ಕನ್ನಡ ರಂಗಭೂಮಿ–ಚಲನಚಿತ್ರರಂಗದ ಪ್ರಸಿದ್ಧ ಅಭಿನೇತ್ರಿ ಜಿ.ವಿ. ಸ್ವರ್ಣಮ್ಮ.

ತಂದೆ, ತಾಯಿ, ಬಂಧು, ಬಳಗ ಎಲ್ಲರೂ ಕಲಾವಿದರೇ ಆಗಿದ್ದುದರಿಂದ ಸ್ವರ್ಣಮ್ಮನವರಿಗೆ ಕಿಶೋರಾವಸ್ಥೆಯಲ್ಲಿಯೇ ಕಲಾವಾತ್ಸಲ್ಯ (ನಾಲ್ಕನೇ ವಯಸ್ಸಿನಲ್ಲಿ) ಮೈಗೂಡಿ ಬಂದಿತು.

ಬಾಲಕಿಯ ಚುರುಕು ತನವನ್ನು ನೋಡಿದ ಜಯರಾಯರು ಬಾಲಕೃಷ್ಣನ ಪಾತ್ರಕ್ಕೆ ತರಬೇತಿ ಇತ್ತು ತಯಾರು ಮಾಡಿದರು. ಸಭಾಕಂಪವಿಲ್ಲದೆ, ಶುದ್ಧವಾಗಿ, ಲಯಬದ್ಧವಾದ, ಲೀಲಾಜಾಲವಾಗಿ ಅಭಿನಯಿಸುವ ಶಕ್ತಿ ತಮ್ಮ ಪುತ್ರಿಗಿದೆ ಎಂಬುದನ್ನು ಖಚಿತಪಡಿಸಿಕೊಂಡ ನಾಟರತ್ನರು ಬಾಲಪಾತ್ರಗಳನ್ನು (ಸರ್ವದಮನ, ಭೋಜ, ವಸಂತ, ಪ್ರಹ್ಲಾದ, ಶ್ರೀಕೃಷ್ಣ, ಧ್ರುವ, ರೋಹಿತಾಶ್ವ, ಪ್ರಭಾಮಣಿ) ನಿರ್ವಹಿಸಲು ಅವಕಾಶ ಕಲ್ಪಿಸಿಕೊಟ್ಟರು.

ಮಗಳಿಗೂ ಸಂಗೀತ ಶಿಕ್ಷಣ ಕೊಡಿಸಲು ನಾಟಕರತ್ನರು ನಿಶ್ಚಯಿಸಿ ಸಪ್ತಸ್ವರದಲ್ಲಿ ಕೂಗಲು ತಾವೇ ಶಿಕ್ಷಣವಿತ್ತು ಸಂಗೀತ ಗುರುಗಳನ್ನು ಗೊತ್ತು ಮಾಡಿದರು.

1959 ನವೆಂಬರ್ ಒಂದನೇ ದಿನಾಂಕ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಕರ್ನಾಟಕ ರಾಜ್ಯ ದಿನೋತ್ಸವದ ಅಂಗವಾಗಿ ಗುಬ್ಬಿ ಕಂಪನಿಯ 'ಅಕ್ಕಮಹಾದೇವಿ' ನಾಟಕವನ್ನು ವ್ಯವಸ್ಥೆ ಮಾಡಿತ್ತು.

ಅಂದಿನ ರಾಷ್ಟ್ರಾಧ್ಯಕ್ಷರಾದ ಬಾಬು ರಾಜೇಂದ್ರ ಪ್ರಸಾದರು ನಾಟಕಕ್ಕೆ ವಿಶೇಷ ಆಹ್ವಾನದ ಮೇಲೆ ಬಂದಿದ್ದರು. ನಾಟಕವನ್ನು ವೀಕ್ಷಿಸಿ ಅಕ್ಕಮಹಾದೇವಿ ಪಾತ್ರಧಾರಿಣಿ ಸ್ವರ್ಣಮ್ಮನವರನ್ನು ಮುಕ್ತ ಕಂಠದಿಂದ ಪ್ರಶಂಸಿಸಿದರು.

ಇವರು ಅಭಿನಯಿಸುತ್ತಿದ್ದ ಉತ್ತರೆ, ರಾಧಾ, ಅಕ್ಕಮಹಾದೇವಿ, ದೇವಾಂಗನೆ, ತಾರಾಮಂಜರಿ, ಮಂದಾರವಲ್ಲಿ, ಸೀತೆ ಮುಂತಾದ ಪಾತ್ರಗಳೂ ಸಹ ಇಂದಿಗೂ ಪ್ರೇಕ್ಷಕರ ಮನಸ್ಸಿನಲ್ಲಿ ಜೀವಂತವಾಗಿ ಉಳಿದಿವೆ.

ಭಾವಪೂರ್ಣ ಅಭಿನಯ, ಸಂಭಾಷಣೆಗಳ ಸ್ಫುಟ ಉಚ್ಚಾರಣೆ, ಸುಶ್ರಾವ್ಯ ಮಧುರ ಗೀತೆಗಳು ಇವರ ಅಭಿನಯದ ಆಕರ್ಷಕ ವೈಶಿಷ್ಟ್ಯಗಳಾಗಿದ್ದುವು.

ಸ್ವರ್ಣಮ್ಮನವರು 'ಗೆಜ್ಜೆಪೂಜೆ', 'ದೇವರ ಮಕ್ಕಳು', 'ಶರಪಂಜರ', 'ಸಾಕ್ಷಾತ್ಕಾರ', 'ಸುಭದ್ರಾ ಕಲ್ಯಾಣ' ಮೊದಲಾದ ಇನ್ನೂ ಹಲವಾರು ಕನ್ನಡ ಚಲನ ಚಿತ್ರಗಳಲ್ಲಿ ಅಭಿನಯಿಸಿ ಕನ್ನಡ ಚಿತ್ರರಂಗಕ್ಕೂ ಸೇವೆ ಸಲ್ಲಿಸಿದ್ದಾರೆ.

ಸ್ವರ್ಣಮ್ಮನವರ ಕಲಾಸೇವೆಗೆ 1970–71ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.



## ಅಪ್ಪಾಲಾಲ್ ನದಾಫ್

ಉತ್ತರ ಕರ್ನಾಟಕದ ಕಡೆ 'ಶ್ರೀ ಕಾಡ ಸಿದ್ದೇಶ್ವರ, ಶ್ರೀ ಕೃಷ್ಣ ಪಾರಿಜಾತ ಜಮಖಂಡಿ' ಎಂದರೆ ಗೊತ್ತಿಲ್ಲ ಎನ್ನುವವರಿಲ್ಲ. ಅತ್ಯಂತ ಜನಪ್ರಿಯ ಪಾರಿಜಾತದ ಆಟಗಾರರು ಇವರು. ಅಪ್ಪಾಲಾಲ್ ನದಾಫ್‌ರ ಹೆಸರು, ಅವರ ಶಿಷ್ಯರ ತಂಡದ ಕಲಾವಂತಿಕೆ ಪ್ರಸಿದ್ಧವಾಗಿದೆ.

ಜಮಖಂಡಿ ತಾಲ್ಲೂಕಿನ ನಿಂಗನಾಥ ಗ್ರಾಮವು ನದಾಫರ ಹುಟ್ಟೂರು. ಎಂಟನೆಯ ವಯಸ್ಸಿನಿಂದಲೂ ಪಾರಿಜಾತದಲ್ಲಿ ಶಿಕ್ಷಣ. ಕೊರವಂಜಿ, ಗೊಲ್ಲತಿ, ಸತ್ಯಭಾಮ ಈ ಮೂರು ಪಾತ್ರಗಳನ್ನು ಅಂದೇ ನಿರ್ವಹಿಸುತ್ತಿದ್ದರು. ಇವರು ತಮ್ಮ ಕಂಪನಿ ಕಟ್ಟಿದಾಗ ಕೇವಲ ಹನ್ನೆರಡು ವಯಸ್ಸು, ಈ ಕಂಪನಿಯನ್ನು 56 ವರ್ಷಗಳಿಂದ ಅಡೆತಡೆಯಿಲ್ಲದೆ ನಡೆಸಿಕೊಂಡು ಬಂದಿದ್ದಾರೆ. ಅನೇಕ ಪ್ರಸಿದ್ಧ ಕಲಾವಿದರನ್ನು ತಯಾರು ಮಾಡಿ ಕಲಾಪ್ರಪಂಚಕ್ಕೆ ಕೊಟ್ಟಿದ್ದಾರೆ.

ಗ್ರಾಮಾಂತರ ಪ್ರದೇಶಕ್ಕೆ ಹೆಚ್ಚು ಒತ್ತುಕೊಡುವ ಇವರ ಪ್ರಯೋಗಗಳು ವಿಜಾಪುರ, ಕುಂದಗೋಳ, ಗದಗ, ಹುಬ್ಬಳ್ಳಿ, ಸೊಲ್ಲಾಪುರ, ಮುಂಬಯಿ, ದೆಹಲಿ, ಧಾರವಾಡ, ಗುಲ್ಬರ್ಗ ಮತ್ತು ಬೆಂಗಳೂರುಗಳಲ್ಲಿ ಅನೇಕ ಪ್ರದರ್ಶನಗಳನ್ನು ನೀಡಿದ್ದಾರೆ. ಇವರಿಗೆ ಸಂದ ಮೆಚ್ಚುಗೆಗಳಿಗೆ ಲೆಕ್ಕವಿಲ್ಲ. 'ಕರ್ನಾಟಕ ಗಂಧರ್ವ', 'ಪಾರಿಜಾತ ಕೋಗಿಲೆ' ಇತ್ಯಾದಿ ಬಿರುದುಗಳು ಸಂದಿವೆ.

ಆಕಾಶವಾಣಿ–ದೂರದರ್ಶನಗಳಲ್ಲೂ ಪ್ರಯೋಗಗಳಾಗಿವೆ. ಈವರೆಗೆ ಹತ್ತು ಸಾವಿರಕ್ಕೂ ಮೀರಿದ ಸಂಖ್ಯೆಯಲ್ಲಿ ಪಾರಿಜಾತ ಪ್ರಯೋಗಿಸಿದ್ದಾರೆ.

ಅಪ್ಪಾಲಾಲ್ ನದಾಫರು ಕರ್ನಾಟಕದ ಪಾರಿಜಾತ ಪ್ರಯೋಗ ಕ್ಷೇತ್ರದ ಬಹುದೊಡ್ಡ ಆಸ್ತಿ.

ಅಪ್ಪಾಲಾಲ್ ನದಾಫರಿಗೆ 1970–71ನೇ ಸಾಲಿನ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

## ಜಿ.ವಿ. ನರಸಿಂಹಯ್ಯ (ಗುಬ್ಬಿ ಪುಟ್ಟಸ್ವಾಮಯ್ಯ)

ಶ್ರೀ ಲಕ್ಷ್ಮಿ ನರಸಿಂಹರಾಯರ ಬಾಲ ನಾಟಕ ಸಂಘದ ಕಲಾವಿದರಾಗಿ ಅನುಭವ ಪಡೆದ ಇವರು ಮಹಿಳ ಪ್ರಧಾನ ಪಾತ್ರ, ನೃತ್ಯಗಳಲ್ಲಿ ಪರಿಣತಿಗಳಿಸಿದ್ದರು. ಶ್ರೀ ಚಂದ್ರಮೌಳೇಶ್ವರ ನಾಟಕ ಸಂಘದಲ್ಲೂ ಅಭಿನಯಿಸಿದರು. ಗುಬ್ಬಿ ಕಂಪನಿ ನಾಟಕಗಳಲ್ಲಿ ರೇವತಿ, ರಂಭ ಪಾತ್ರಗಳನ್ನು ಅಭಿನಯಿಸುತ್ತಿದ್ದರು. ಲಲಿತೆ, ಕಲಾವತಿ ಪಾತ್ರಗಳಲೂ ಹೆಸರಾಗಿದ್ದರು.

ನರಸಿಂಹಯ್ಯ ಅವರಿಗೆ 1970–71ನೇ ಸಾಲಿನ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

## ಜಿ.ಜಿ. ಪುರಾಣಿಕ



1909ರಲ್ಲಿ ಜನಿಸಿದ ಪುರಾಣಿಕ್‌ರವರು ಸರ್ಕಾರದಲ್ಲಿ ವಾಣಿಜ್ಯ ತೆರಿಗೆ ಖಾತೆಯ ಡೆಪ್ಯುಟಿ ಕಮಿಷನರ್ ಆಗಿ ದುಡಿದವರು. ಕಾಲೇಜು ದಿನಗಳಿಂದ ನಾಟಕದಲ್ಲಿ ಒಲವು. ರಂಗಭೂಮಿ ಬಗ್ಗೆ ಅಷ್ಟೇನೂ ಗೌರವಭಾವ ಇದ್ದಿರದ ಅಂದಿನ ಸಾಮಾಜಿಕ ಪರಿಸರಲ್ಲಿ ಪುರಾಣಿಕರು ನಾಟಕವಾಡಿ 'ಬಹಿಷ್ಕಾರ' ದಂಥ ಬೆದರಿಕೆಯನ್ನು ಸಹಿಸಬೇಕಾಯಿತು. ಅಂದು ತಾನೂ–ತನಗಾಗಿ ರಂಗವೇರಿದ ಮಡದಿ ಇದೆಲ್ಲವನ್ನೂ ಮೀರಿ ರಂಗಭೂಮಿಗಾಗಿ ಶ್ರಮಿಸಿದ್ದರು.

ಶ್ರೀರಂಗದ ನಾಟಕಗಳನ್ನು ಸಮರ್ಥವಾಗಿ ರಂಗಪ್ರಯೋಗ ಮಾಡಿದರು. ಐವತ್ತಕ್ಕೂ ಹೆಚ್ಚು ವರ್ಷಗಳ ಕಾಲ ರಂಗಭೂಮಿಗೆ ಅವರು ದುಡಿದವರು. ಸುತ್ತಲಿನ ಬೇರೆ ಪ್ರಾಂತ್ಯಗಳಲ್ಲಿ ಕನ್ನಡ ನಾಟಕ ಆಡಿದವರು. ಧಾರವಾಡದ ಕರ್ನಾಟಕ ನಾಟ್ಯ ವಿಲಾಸಿ ಸಂಘದ ವತಿಯಿಂದ ಹಲವು ನಾಟಕಗಳನ್ನು ಆಡಿದ್ದಾರೆ. ಅನೇಕ ನಾಟಕ ಸ್ಪರ್ಧೆಗಳಲ್ಲಿ ಬಹುಮಾನ ಪಡೆದವರು.

ಆಕಾಶವಾಣಿಯಲ್ಲೂ ಪಾತ್ರವಹಿಸಿದ್ದಾರೆ. ಇವರು ಎರಡು ಪೂರ್ಣಾವಧಿ ನಾಟಕಗಳು ಹಾಗೂ ಏಳು ಏಕಾಂಕಗಳನ್ನು ರಚಿಸಿದ್ದಾರೆ. ಇವರ 75ನೇ ಹುಟ್ಟುಹಬ್ಬದ ಸಮಾರಂಭದಂದು ಇವರ ರಂಗಭೂಮಿಯ ಐವತ್ತು ವರ್ಷಗಳ ಸೇವೆಯನ್ನು ಗೌರವಿಸಿ ಅಮೃತ ಮಹೋತ್ಸವವನ್ನಾಚರಿಸಿ 'ಜೂಜು' ಎಂಬ ನಾಟಕ ಪ್ರದರ್ಶಿಸಿದರು. ಅಲ್ಲಿ ಇವರೂ ಸೇರಿದಂತೆ ಇಡೀ ಕುಟುಂಬ ಪಾತ್ರವಹಿಸಿತ್ತು.

1971ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿಯು ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.

---

## ಎಸ್.ಆರ್. ಬಾಲಗೋಪಾಲ



ಏಳನೇ ವರ್ಷದಲ್ಲೆ ರಂಗಭೂಮಿಗೆ ಅಡಿಯಿಟ್ಟು ಇಂಗ್ಲೀಷ್ ನಾಟಕಗಳಲ್ಲೂ ಅಭಿನಯಿಸಿ ಬಹುಮಾನಗಳಿಸಿದ ಬಾಲಗೋಪಾಲ್ ಮಂಗಳೂರಿನ ಖ್ಯಾತ 'ಸಂಗೀತ ಕಲಾ ಪ್ರಸಾರಕ ಸಂಘ'ದ ಸ್ಥಾಪಕ ಸದಸ್ಯ. ಒಂದು ದಶಕಕಾಲ ಯಶಸ್ವಿಯಾಗಿ ಜಿಲ್ಲಾ ಮತ್ತು ರಾಜ್ಯ ಮಟ್ಟದ ನಾಟಕ ಸ್ಪರ್ಧೆಗಳನ್ನು ನಿರ್ವಹಿಸಿದ ಕಲಾಭವನದ ಸ್ಥಾಪಕ ಕಾರ್ಯದರ್ಶಿ.

ಕಲಾವಿದನಾಗಿ ಹಾಸ್ಯಪಾತ್ರಗಳಿಂದ ಜನಮನದಲ್ಲಿ ಸ್ಥಾಯಿ ಸಂಪಾದಿಸಿಕೊಂಡಿರುವ ಬಾಲಗೋಪಾಲ್ ಕನ್ನಡ, ತುಳು, ಮಲೆಯಾಳ, ಕೊಂಕಣಿ, ಹಿಂದಿ, ಇಂಗ್ಲಿಷ್ ನಾಟಕಗಳೆಲ್ಲದರಲ್ಲೂ ಸಮಾನ ಪ್ರೌಢಿಮೆ ಮೆರೆದವರು. ಏಕಪಾತ್ರಾಭಿನಯದಲ್ಲೂ ಎತ್ತಿದ ಕೈಯಾದ ಬಾಲಗೋಪಾಲ ಪ್ರೇಕ್ಷಕರು ಒಂದೂವರೆ ಗಂಟೆ ಎಲ್ಲ ಮರೆತು ನಕ್ಕು ನಲಿಯುವಂತೆ ಮಾಡಬಲ್ಲವರು.

ಕರಾವಳಿ, ಅಖಂಡ ಬ್ರಹ್ಮಚಾರಿಗಳು, ಕೊಂಕಣಿ ಜನಮನ, ತಪಸ್ವಿನಿಗಳಲ್ಲೂ ಗಮನ ಸೆಳೆವಂತಹ ಅಭಿನಯ ನೀಡಿದ್ದಾರೆ.

ಹವ್ಯಾಸೀ ನಟನೆಗಾಗಿ ಬಾಲಗೋಪಾಲರಿಗೆ 1970–71ನೇ ಸಾಲಿನ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಭೀಮಪ್ಪ ಚೆಟ್ಟಿ

ರಾಯದುರ್ಗ ತಾಲ್ಲೂಕಿನ ರಂಗಜೇಡ ಇವರ ಹುಟ್ಟೂರು. ಬಳ್ಳಾರಿ ಜಿಲ್ಲೆಯ ಶ್ರೀಧರಗೆಡ್ಡೆ ಸ್ವಗ್ರಾಮ. ಹೆಚ್ಚಿನಂಶ ಬಳ್ಳಾರಿಯಲ್ಲಿ ವಾಸ್ತವ್ಯ. ಕೃಷಿಕ ಮನೆತನ.

7–8ರ ಪ್ರಾಯದಲ್ಲೇ ಬಯಲಾಟಗಳಲ್ಲಿ ಪ್ರವೇಶ, ಕಾಲೇಜು ಕಲಿಯುವಾಗಲೂ ರಜೆಯ ದಿನಗಳಲ್ಲಿ ಬಯಲಾಟದ ಸ್ತ್ರೀ ವೇಷ ಹಾಕಲು ಓಡಿ ಬರುತ್ತಿದ್ದರು.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಕೆ, ನಾಡ ನೇತಾರರ ಸಾಮಿಪ್ಯ ಆತನನ್ನು ಕಲೆ–ಸಂಸ್ಕೃತಿಯಲ್ಲಿ ಹೆಚ್ಚಿನ ಒಲವು ಬೆಳೆಸಿಕೊಳ್ಳಲು ಪ್ರೇರೆಪಿಸಿತು. ಖ್ಯಾತ ತೊಗಲು ಗೊಂಬೆ ಆಟ ತಜ್ಞರಾದ ರುದ್ರಾರೆಡ್ಡಿಯವರಿಂದ ತೊಗಲುಗೊಂಬೆ ಆಟ ಕಲಿತರು.

ಓಬಳಾಚಾರ್, ಬಳ್ಳಾರಿ ರಾಘವರ ಪ್ರೋತ್ಸಾಹದಿಂದಾಗಿ ಪೌರಾಣಿಕ ಹಾಗೂ ಕೈಲಾಸಂ ನಾಟಕಗಳಲ್ಲೂ ಪಾತ್ರವಹಿಸಿದರು. ರಾಜ್ಯದ ಗಡಿ ಪ್ರದೇಶವಾಸಿಯಾದ್ದರಿಂದ ಆಂಧ್ರದ ಕಲೆ–ಸಂಸ್ಕೃತಿಯೂ ಪರಿಚಿತ. ಅತ್ತಣ ಹಿರಿಯ ಕಲಾವಿದರ ಸ್ನೇಹ. ಹೀಗೆ ಇವರು ಆಂಗ್ಲ–ಕನ್ನಡ–ತೆಲುಗು ನಾಟಕಗಳನ್ನು, ಅಂದಿನ ಖ್ಯಾತ ಚಿತ್ರನಟ–ನಟಿಯರನ್ನೂ ಸೇರಿಸಿಕೊಂಡು ಆಡಿದ್ದುಂಟು. ಇವರ 'ಒಥೆಲೊ' ಪಾತ್ರಕ್ಕೆ ಅಪಾರ ಪ್ರಶಂಸೆಯಿತ್ತು.

ಹೊರರಾಷ್ಟ್ರಗಳಲ್ಲಿ ಪ್ರವಾಸ ಮಾಡಿ ನಮ್ಮ ಕಲೆ–ಸಂಸ್ಕೃತಿಯ ಬಗ್ಗೆ ಉಪನ್ಯಾಸ ನೀಡಿದ್ದಾರೆ.

ರಾಘವ ಕಲಾ ಮಂದಿರದ ಸ್ಥಾಪಕ–ಕಾರ್ಯದರ್ಶಿಯಾಗಿದ್ದವರು. ಇವರ ಅರುವತ್ತು ವರ್ಷದ ಹುಟ್ಟು ಹಬ್ಬದ ನೆನಪಿಗಾಗಿ ಕಲೆ–ಕಲಾವಿದರ ನೆರವಿಗೆಂದು ಇವರ ಹೆಸರಿನಲ್ಲಿ ಒಂದು ಟ್ರಸ್ಟ್ ಸ್ಥಾಪಿಸಿದ್ದಾರೆ.

ಭೀಮಪ್ಪ ಚೆಟ್ಟಿಯವರನ್ನು 1970–71ನೇ ಸಾಲಿನ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.



## ಏ. ವೀರಭದ್ರನಾಯಕ

ಉಡುಪಿ ಜಿಲ್ಲೆಯ ಬ್ರಹ್ಮಾವರ ಬಳಿಯ ಮಟ್ಪಾದೆಯಲ್ಲಿ 1906ರಲ್ಲಿ ವೀರಭದ್ರನಾಯಕರು ಜನಿಸಿದರು. ಬಡಗುತಿಟ್ಟು ಪ್ರಾಕಾರದಲ್ಲಿ 'ದಶಾವತಾರಿ' ಎಂಬ ಅಭಿದಾನಕ್ಕೆ ಪಾತ್ರರಾದ ವೀರಭದ್ರನಾಯಕ ಅವರು 14ರ ಹರೆಯದಲ್ಲಿ ಬಾಲಕಲಾವಿದರಾಗಿ ಗೆಜ್ಜೆಕಟ್ಟಿದರು.

ಯಕ್ಷಗಾನ ಕುಟುಂಬದ ಕುಡಿಯಾಗಿ ಇವರು ಬಾಲಕಲಾವಿದರಾಗಿ, ನಂತರ ಮಹತ್ವದ ಪುರುಷ ಪಾತ್ರಗಳಾದ ಅರ್ಜುನ, ದಶರಥ, ಭರತ, ಶಂಭರಾಸುರ ಕಾಳಗದ ಕೃಷ್ಣ ಮುಂತಾದ ಪಾತ್ರಗಳಲ್ಲಿ ಮನೆಮಾತಾದರು.

ತಂದೆ ಚೆನ್ನಪ್ಪನವರ ಜೊತೆ ಜೊತೆಗೆ ಏಳ್ತೂರು ಮತ್ಯಪ್ಪಯ್ಯ, ಶೇಷಪ್ಪಯ್ಯ, ಭಡಾಕೆರೆ ರಾಯಪ್ಪ ಅಡಿಗರು, ಕುಂಜಾಲು ಶೇಷಗಿರಿ ಮುಂತಾದವರಿಂದ ಯಕ್ಷಗಾನದ ಎಲ್ಲ ಪಟ್ಟುಗಳನ್ನು ಕಲಿತರು.

ಉಡುಪಿ ಯಕ್ಷಗಾನ ಕೇಂದ್ರದ ಗುರುಗಳಾಗಿ, ನೂರಾರು ಜನರಿಗೆ ಯಕ್ಷಗಾನವನ್ನು ಕಲಿಸಿದ ಮಹಾಗುರು ವೀರ ಭದ್ರನಾಯಕರು ಸಾಲಿಗ್ರಾಮ ಮೇಳದ ಪ್ರಮುಖ ಕಲಾವಿದರಾಗಿ ಅಪಾರ ಸೇವೆ ಸಲ್ಲಿಸಿದರು.

ವೀರಭದ್ರನಾಯಕರಿಗೆ 1970–71ನೇ ಸಾಲಿನ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.



## ಏಣಗಿ ಬಾಳಪ್ಪ

ಕರ್ನಾಟಕದ ವೃತ್ತಿ ರಂಗಭೂಮಿಯಲ್ಲಿ ಅತ್ಯಂತ ಪ್ರಸಿದ್ಧರು ಏಣಗಿ ಬಾಳಪ್ಪನವರು. ಅಭಿನಯದ ಜೊತೆಗೆ ಯಾವ ಕಾರಣಕ್ಕೂ 'ಒಪ್ಪಂದ' ಮಾಡಿಕೊಳ್ಳದ ಸದಭಿರುಚಿ ಶುದ್ಧ ಕಲೆಯ ಪ್ರತಿಪಾದನೆ ಬಹುವಾಗಿ ಗುರುತಿಸಬೇಕಾದ ದೊಡ್ಡ ಗುಣಗಳು.

ಸವದತ್ತಿ ತಾಲ್ಲೂಕಿನ ಏಣಗಿ ಗ್ರಾಮದಲ್ಲಿ ಜನಿಸಿದ ಬಾಳಣ್ಣನವರ ಹೆಸರಿನ ಜೊತೆಗೇ ಅವರ ಗ್ರಾಮದ ಹೆಸರೂ ಜೋಡಿಸಿಕೊಂಡು ಬಂದಿದೆ. ಪ್ರಾಥಮಿಕ ಶಾಲಾ ಅಭ್ಯಾಸ ದಿನಗಳಲ್ಲೇ ಬಾಲನಟನಾಗಿ, ಬಯಲಾಟಗಳಲ್ಲಿ ತನ್ನನ್ನು ಕಲಾವಿದನಾಗಿ ರೂಪಿಸಿಕೊಂಡ ಬಾಳಪ್ಪನವರು ರಂಗಭೂಮಿಗೆ ಶರೀರ-ಶಾರೀರಗಳೆರಡರಲ್ಲೂ ವೈಶಿಷ್ಟ್ಯ ಪೂರ್ಣರು. ಅವರ ಸ್ತ್ರೀ ಪಾತ್ರಗಳು ಅತ್ಯಂತ ಜನಪ್ರಿಯ.

ಗುರುಸೇವಾ ಸಂಗೀತ ನಾಟಕ ಮಂಡಳಿಯನ್ನು ಗೆಳೆಯರೊಂದಿಗೆ ಸ್ಥಾಪಿಸಿದ್ದುಂಟು. ಇವರ ವೈಭಾವಶಾಲಿ ನಾಟಕ ಸಂಘಗಳ ಪ್ರಯೋಗಗಳಾದ 'ಕಲ್ಲಿಮಟ್ಟಿ ಸ್ಟೇಷನ್ ಮಾಸ್ತರ್', 'ಪಟಾಣಪಾಶ', 'ಸಿಂಧೂರ ಲಕ್ಷ್ಮಣ', 'ಕುರುಕ್ಷೇತ್ರ' ನಾಟಕಗಳು ಎಲ್ಲರ ಮನೆ ಮಾತಾಗಿತ್ತು.

ಇವರೇ ಸ್ವತಂತ್ರವಾಗಿ ಕಟ್ಟಿದ 'ಕಲಾವೈಭವ ನಾಟಕ ಸಂಘ' (1947) ಅನೇಕ ಅತಿರಥ ಮಹಾರಥರಾದಂಥ ಕಲಾವಿದರಿಂದ ತುಂಬಿ ಅಪೂರ್ವ ಪ್ರಯೋಗಗಳ ದಾಖಲೆ ನೀಡಿತು. ಇವರೂ 'ಜಗಜ್ಯೋತಿ ಬಸವೇಶ್ವರ'ನೆಂದೇ ಹೆಸರಾದರು. ಬಹಳಷ್ಟು ಸಾಮಾಜಿಕ ನಾಟಕಗಳಲ್ಲಿ ಹೊಸ ರಂಗತಂತ್ರ ಬಳಸಿದ್ದಾರೆ. ಏಣಗಿ ಬಾಳಪ್ಪನವರು ಉತ್ತರ ಕರ್ನಾಟಕದಲ್ಲಿ ಮಾತ್ರವಲ್ಲ ರಾಜ್ಯಾದ್ಯಂತ ತಮ್ಮ ಅಭಿನಯದಿಂದ ಜನಪ್ರಿಯರಾಗಿದ್ದಾರೆ.

ಏಣಗಿ ಬಾಳಪ್ಪನವರ ಕಲಾಸೇವೆಗೆ 1970-71ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

ವೃತ್ತಿ ರಂಗಭೂಮಿಯಲ್ಲಿ ಎಂದೆಂದೂ ಮರೆಯಲಾಗದ ಹೆಸರು ಏಣಗಿ ಬಾಳಪ್ಪ.



## 1972ರ ಪ್ರಶಸ್ತಿ ವಿಜೇತರು



### ಸಿಡಿಗಿನಮಳೆ ವೈ.ಎಂ. ಚಂದ್ರಯ್ಯ

ಕರ್ನಾಟಕ ಸಂಗೀತ ಶಾಸ್ತ್ರೀಯವಾಗಿ ಕಲಿತವರು. ರಂಗಭೂಮಿಯಲ್ಲಿ ನಿರಂತರ ಪಾತ್ರ ಮಾಡುವುದು, ನಿರ್ದೇಶನ ಮಾಡುವುದು. ಹಾರ್ಮೋನಿಯಂ ನುಡಿಸುವುದು ನಾಟಕ ರಚನೆ, ವೃತ್ತಿರಂಗಭೂಮಿ ನಾಟಕ ಕಂಪನಿಗಳಲ್ಲಿ ಕೆಲಸ, ಹೊನ್ನಪ್ಪ ಭಾಗವತರು ಮೊದಲಾದವರ ನಾಟಕ ಕಂಪನಿಗಳಲ್ಲಿ ಪಾತ್ರ ಮಾಡಿದವರು, ರೇಡಿಯೋ ಗಾಯಕರು, ಸಿನಿಮಾ ನಟರು, ಬಳ್ಳಾರಿ ರಾಘವರ ಜೊತೆಯಲ್ಲಿ ಪಾತ್ರ ಮಾಡಿದವರು ಹಾಗೂ ಡಾ. ಜೋಳದ ರಾಶಿ ದೊಡ್ಡನಗೌಡರ ಶಿಷ್ಯರು ಮತ್ತು ಜೊತೆಗೆ ನಾಟಕ ಪ್ರದರ್ಶನಗಳನ್ನು ಮಾಡಿ ನಿರಂತರ ರಂಗಭೂಮಿ ಸೇವೆ ಮಾಡಿದರು. ಇದು ಅಲ್ಲದೆ ಪುರಾಣ ಪ್ರವಚನಕಾರರು. ಕೀರ್ತನಕಾರರು ಹಾಗೂ ಸ್ವತಃ ವೃತ್ತಿರಂಗಭೂಮಿ ನಾಟಕ ಸಂಸ್ಥೆ ಕಟ್ಟಿದ್ದರು. ಬೆಳಗಲ್ಲು ವೀರಣ್ಣ ನವರಿಗೆ ನಾಟಕ. ಸಂಗೀತ ಪಾತ್ರಾಭಿನಯ ಹೀಗೆ ಸಂಘಟನೆಯ ಗುರುಗಳು, ಉತ್ತಮ ಕಲಾವಿದರಾಗಿದ್ದವರು. ಹೀಗೇ ಹಲವಾರು ಕಲಾಸೇವೆಯನ್ನು ಮಾಡಿರುವಂತಹ ಸಾಂಸ್ಕೃತಿಕ ಲೋಕದಲ್ಲಿ ಚಿರಸ್ಥಾಯಿಯಾಗಿ ಉಳಿಸಿದರುವ ಹೆಸರು ವೈ.ಎಂ. ಚಂದ್ರಯ್ಯನವರ ಹೆಸರು. ಚಂದ್ರಯ್ಯ ಅವರ ಕಲಾ ಸೇವೆಯನ್ನು ಮೆಚ್ಚಿ 1972ರಲ್ಲಿ ಮೈಸೂರು ರಾಜ್ಯ ಸಂಗೀತ, ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.

---



### ಪಿ.ವಿ. ಪಾಟೀಲ್

1900ರಲ್ಲಿ ಜನಿಸಿದ ಪಾಟೀಲ್‌ರವರು ಬೆಳಗಾಂ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ ಮೂಗಬಸವ ಗ್ರಾಮದಲ್ಲಿ ಹುಟ್ಟಿ ಏಳನೆಯ ತರಗತಿಯವರಗೆ ಕಲಿತವರು. ಬಯಲಾಟಗಳಲ್ಲಿ ಸೋಗು ಹಾಕುವುದರಿಂದ ಬಹು ಹಿಂದೆಯೇ ಆರಂಭವಾದ ಇವರ ನಾಟಕ ಕಲೆ ಹಲವು ಹಂತಗಳಲ್ಲಿ ಹಾದು ಬಂದು ಇದೀಗ ಎಂಭತ್ತೇಳು ವರ್ಷವಾದರೂ ಬಯಲಾಟದಲ್ಲಿಯೂ ಬಹುಕಾಲ ದುಡಿದ ಇವರು ತಮ್ಮ 16ನೆಯ ವಯಸ್ಸಿನಲ್ಲಿ ಕೊಣ್ಣೂರ ಕಂಪನಿಯಲ್ಲಿ ಸ್ತ್ರೀ ಪಾತ್ರ ಧರಿಸುವ ಮೂಲಕ ವೃತ್ತಿ ನಾಟಕ ಕಲಾವಿದರಾದರು. ಸೊಗಸಾಗಿ ಹಾಡುತ್ತಿದ್ದ ಇವರಿಗೆ ಎಂದೂ ರಾಣಿಯ ಪಾತ್ರವೇ ಕಾದಿರುತ್ತಿತ್ತು. ಸ್ತ್ರೀಯರಿನ್ನೂ ರಂಗದ ಮೇಲೆ ಬರುತ್ತಿರಲಿಲ್ಲವಾದ ಆ ದಿನಗಳಲ್ಲಿ ರಸಿಕರ ಹೃದಯವನ್ನು ತಲ್ಲಣಗೊಳಿಸಿದ ಸ್ತ್ರೀ ಪಾತ್ರಗಳಲ್ಲಿ ಇವರು ರಂಜಿಸಿದರು. ಆ ದಿನಗಳಲ್ಲಿ ಬಾಲ ಗಂಧರ್ವರನ್ನು ಮೀರಿಸಿದ ಕೆಲವು ಭಾವ ತುಂಬುವ ಸ್ತ್ರೀ ಪಾತ್ರಧಾರಿ ಇವರಾಗಿದ್ದರು ಎಂಬ ಕೀರ್ತಿಯೂ ಉಂಟು. ಮನಮೋಹನ ಸಂಗೀತ ನಾಟಕ ಮಂಡಳಿ, ಮೈಸೂರಿನ ಶೃಂಗೇರಿ ಕಂಪನಿ, ಎಂ.ಎಸ್. ಗಂಗಾಧರರಾಯರ ಲಲಿತಕಲಾ ನಾಟಕ ಮಂಡಳಿ, ಪೀರ್ ಸಾಹೇಬರ ಚಂದ್ರಕಲಾ ನಾಟಕ ಮಂಡಳಿಗಳಲ್ಲಿ ದುಡಿದವರು. ಎಚ್.ಎಲ್.ಎನ್. ಸಿಂಹ, ಬಿ.ಆರ್. ಪಂತಲು ಮೊದಲಾದವರ ಸಮಕ್ಷಮ ಕೆಲಸ ಮಾಡಿದ ಕಲಾವಿದರು. ಇವರ 'ಸಂಸಾರ ನೌಕೆ'ದ ಸುಶೀಲ ಪಾತ್ರ ಅತ್ಯಂತ ಜನಪ್ರಿಯವಾಯಿತು. ಇದು ಹೆಣ್ಣೋ ಎಂದು ಬಾಜಿ ಕಟ್ಟಿದ ರಸಿಕರೂ ಉಂಟು. ವಚನಗಳಿಗೆ ಸಂಗೀತ ಅಳವಡಿಸಿ ಹಾಡಿದ, ಅವರು ಧ್ವನಿಮುದ್ರಿಸಿದ ಮೊದಲಿಗರು ಇವರು. ಕೆಲವು ವರ್ಷಗಳ ಕಾಲ ಸಂಗೀತದ ಮಾಸ್ತರರೂ ಆಗಿದ್ದರು. ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿಯು ಇವರನ್ನು 1972ರಲ್ಲಿ ಪ್ರಶಸ್ತಿಕೊಟ್ಟು ಗೌರವಿಸಿದೆ. ಇವರ ರಂಗಭೂಮಿಯ ವೈಭವದ ಬಗ್ಗೆ ಅನೇಕ ಲೇಖನಗಳೂ ಪ್ರಕಟವಾಗಿವೆ.

---



## ಎಂ.ಎಸ್. (ತಮಾಷ್) ಮಾಧವರಾವ್

ಎಂ.ಎಸ್. ಮಾಧವರಾವ್ ಕನ್ನಡ ಕಲಾಭಿಮಾನಿಗಳಿಗೆ 'ತಮಾಷ್ ಮಾಧವರಾವ್' ಎಂದೇ ಚಿರಪರಿಚಿತರು. 1907, ಜೂನ್, 21ರಂದು ಚಿತ್ರದುರ್ಗದಲ್ಲಿ ಶ್ರೀ ಶ್ಯಾಮರಾವ್ ಮತ್ತು ಶ್ರೀಮತಿ ತುಳಸಿಬಾಯಿ ಅವರ ಪ್ರಥಮ ಪುತ್ರರಾಗಿ ಮಾಧವರಾಯರ ಜನನವಾಯಿತು. 'ಮಣಿದಾಸ' ಎಂಬ ಅಭಿದಾನದಿಂದ ಪ್ರಖ್ಯಾತರಾಗಿದ್ದ ಶ್ರೀ ಶ್ಯಾಮರಾಯರು ವೃತ್ತಿಯಲ್ಲಿ ಅರಣ್ಯ ಇಲಾಖೆಯಲ್ಲಿ ಗುಮಾಸ್ತರಾಗಿದ್ದರಲ್ಲದೆ, ಹಾರ್ಮೋನಿಯಂ ಮತ್ತು ಮೃದಂಗದ ವಾದಕರೂ ಆಗಿದ್ದರು. ಶ್ರೀ ಶ್ಯಾಮರಾಯರು ವರದಾಚಾರ್ಯರ ನಾಟಕ ಕಂಪನಿಯಲ್ಲಿ ಆಗಾಗ ಪಾತ್ರವಹಿಸುತ್ತಿದ್ದರು. ಶ್ರೀ ಶ್ಯಾಮರಾಯರ ಕಲಾಶಕ್ತಿ ಸಂಸ್ಕಾರ ರೂಪವಾಗಿ, ಅವರ ಪುತ್ರರಾದ ಶ್ರೀ ಮಾಧವರಾಯರಿಗೂ ಹರಿದು ಬಂದಿತು.

ಶ್ರೀ ರಾಯರು ವಿದ್ಯಾರ್ಥಿಯಾಗಿದ್ದಾಗಲೇ, ಶಾಲಾ ವಾರ್ಷಿಕೋತ್ಸವದ ನಾಟಕಗಳಲ್ಲಿ ಪಾತ್ರವಹಿಸಿ ಸಹಪಾಠಿಗಳಿಂದ, ಅಧ್ಯಾಪಕರಿಂದ ಮತ್ತು ಪ್ರೇಕ್ಷಕರಿಂದ ಬೆನ್ನು ತಟ್ಟಿಸಿಕೊಂಡಿದ್ದರು. 1920ರಲ್ಲಿ ಶ್ರೀ ಚಾಮುಂಡೇಶ್ವರಿ ನಾಟಕ ಕಂಪನಿಗೆ (ಎಂ. ಸುಬ್ಬಣ್ಣ ಪ್ಯಾಲೇಸ್ ಕಂಟ್ರಾಕ್ಟರ್ ಮತ್ತು ಮುನಿಯಪ್ಪ ನಡೆಸುತ್ತಿದ್ದರು) ಸೇರಿ, ಅಲ್ಲಿ ವೀರಸಿಂಹಚರಿತ್ರೆ, ಧ್ರುವವಿಜಯ, ಗುಲೇಬಕಾವಲಿ ಮತ್ತು ರಾಜಸೂಯಯಾಗ ನಾಟಕಗಳಲ್ಲಿ ಬಾಲಪಾತ್ರವನ್ನು ವಹಿಸಿ ಅಭಿಮಾನಿಗಳ ಮೆಚ್ಚುಗೆಯನ್ನು ಗಳಿಸಿಕೊಂಡರು. ಅನಂತರ ಶ್ರೀ ಎಚ್.ಎನ್. ರಾಜುರವರು ಪ್ರಾರಂಭಿಸಿದ 'ಭಾಗೀರಥಿ ನಾಟಕ ಮಂಡಲಿ'ಗೆ 1923ರಲ್ಲಿ ಸೇರಿ ಬಾಣಾವರದಲ್ಲಿ ಸದಾರಮೆ, ರಾಮದಾಸ್, ಗುಲೇಬಕಾವಲಿ ಮೊದಲಾದ ಮೊದಲಾದ ನಾಟಕಗಳಲ್ಲಿ ಪಾತ್ರವಹಿಸಿ, ರಂಗಭೂಮಿಯಲ್ಲಿ ಸಾಕಷ್ಟು ಹೆಸರು ಗಳಿಸಿದರು.

ಮಾಧವರಾಯರು 1927ರಲ್ಲಿ ಶ್ರೀ ಮಹಮದ್ ಪೀರ್ ಸಾಹೇಬರ 'ಚಂದ್ರಕಲಾ ನಾಟಕ ಮಂಡಲಿ'ಗೆ ಸೇರಿದರು. ಇಲ್ಲಿ ಅವರ ಕಲಾಪ್ರದರ್ಶನಕ್ಕೆ ಸರಿಯಾದ ಅವಕಾಶ ದೊರೆತು, ಸಹೃದಯರ ಪ್ರೀತ್ಯಾದರಗಳಿಗೆ ಕಾರಣರಾದರು. ರಾಯರು ಮಹಮದ್ ಪೀರ್ ಅವರೊಂದಿಗೆ 'ಸಾಮ್ರಾಟ್ ಷಹಜಹಾನ್', ಗುಲೇಬಕಾವಲಿ, ಕೃಷ್ಣಲೀಲೆ, ಸದಾರಮೆ, ಕಬೀರ್ ಮತ್ತು ಸಂಸಾರ ನೌಕ' ನಾಟಕಗಳಲ್ಲಿ ಪಾತ್ರವಹಿಸಿ ಕಲಾರಸಿಕರಿಗೆ ತಮ್ಮ ಅಮೋಘವಾದ ಅಭಿನಯವನ್ನು ಆನಂದದಿಂದ ಅರ್ಪಿಸಿದರು.

ಪ್ರಪ್ರಥಮವಾಗಿ ಬೆಂಗಳೂರಿನಲ್ಲಿ ಒಂದು ನೂರು ಇಪ್ಪತ್ತೈದು 'ಸಂಸಾರ ನೌಕ' (ಎಚ್.ಎಲ್.ಎನ್. ಸಿಂಹ ವಿರಚಿತ) ನಾಟಕಗಳನ್ನು ಆಡಿ ಯಶಸ್ಸು ಗಳಿಸಿದರು. 1936. 'ಸಂಸಾರ ನೌಕ' ಚಲನಚಿತ್ರವಾಗಿ ಕರ್ನಾಟಕದ ಬೆಳ್ಳಿ ತೆರೆಯ ಮೇಲೆ ರಂಜಿಸಿತು. ಶ್ರೀ ರಾಯರು ಮಾಧು ಪಾತ್ರವನ್ನು ಅತ್ಯಂತ ತನ್ಮಯತೆಯಿಂದ ಅಭಿನಯಿಸಿ ನಾಟಕಕ್ಕೆ ಮತ್ತು ಚಲನಚಿತ್ರಕ್ಕೆ ಜೀವಕಳೆ ಕೊಟ್ಟರು.

ಗೌತಮ ಬುದ್ಧ ನಾಟಕದಲ್ಲಿ ಸಿದ್ಧನ ಪಾತ್ರವನ್ನೂ ಅವರು ನೂರಾರು ಬಾರಿ ಅಭಿನಯಿಸಿದ್ದಾರೆ. ಈ ಚಿತ್ರದ ನಂತರ ಮಾಧವರಾಯರು ಮುಟ್ಟಿದೆಲ್ಲಾ ಚಿನ್ನ, ದಲ್ಲಾಳಿ, ವಸಂತಸೇನೆ, ಜೆಮಿನಿಯವರ ಪ್ರಥಮ ತೆಲುಗು ಚಿತ್ರ ಜೀವನ್ಮುಕ್ತಿ ಮತ್ತು ಬಂಗಾರದ ಕಳ್ಳ ಮುಂತಾದ ಚಿತ್ರಗಳಲ್ಲಿ ಪಾತ್ರವಹಿಸಿ ರಜತ ಪರದೆಯ ಕಲಾವಿದರಾಗಿ ರಂಜಿಸಿದರು. ರಾಯರು 1942ರಲ್ಲಿ ರಂಗಭೂಮಿಗೆ ಸಂಬಂಧಪಟ್ಟ 'ತಮಾಷ್' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿ ಅವರ ಸಂಪಾದಕರಾಗಿ ಬಹುನಿಷ್ಠೆಯಿಂದ 1953ರವರೆಗೆ ನಡೆಸಿದರು. ತಮಾಷ್ ಮಾಧವರಾವ್ ಎಂಬ ಅನ್ವರ್ಥನಾಮಧೇಯವೇ ಇವರದಾಯಿತು.

ಶ್ರೀಯವರಿಗೆ 1972ರಲ್ಲಿ ಬೆಂಗಳೂರಿನಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿತು. ಮಾಧವರಾಯರ ಪ್ರತಿಭಾ ಶಕ್ತಿ ವಿವಿಧ ಮುಖವಾಗಿ ಬೆಳೆದು ಕಂಗೊಳಿಸಿ ಕನ್ನಡ ರಂಗಮಂಚಕ್ಕೆ ಶೋಭೆಯನ್ನಿತ್ತಿದೆ.



## ಎನ್.ಆರ್. ಮಾಸೂರ್

ಇವರ ಪೂರ್ಣ ನಾಮಧೇಯ ನಾರಾಯಣ ದೀಕ್ಷಿತ ರಾಮಾದೀಕ್ಷಿತ ಮಾಸೂರ. ರಂಗಕರ್ಮಿಗಳಿಗೆ ಮಾಸೂರರೆಂದೇ ಪರಿಚಿತರು. ಸಾಗರ–ಶ್ರೀರಂಗ ಎಂದರೆ ಮೊದಲು ನೆನಪಿಗೆ ಬರುವುದು ಮಾಸೂರರ ಹೆಸರೇ. ಬೇಂದ್ರೆ–ಶ್ರೀರಂಗರ ನಾಟಕಗಳಿಂದ ಪ್ರಭಾವಿತರಾದ ಮಾಸೂರರು. ಸಾಗರದಲ್ಲಿ 1938ರಲ್ಲೇ ಕಿರಿಯರ ತಂಡ ಕಟ್ಟಿದ್ದಾರೆ. ಹತ್ತು ವರ್ಷಗಳವರೆಗೆ ನಾಟಕಗಳನ್ನು ಆಡಿ–ಆಡಿಸುತ್ತಾ ಬಂದವರು. 1948ರಲ್ಲಿ 'ಉದಯಕಲಾವಿದರು' ತಂಡವನ್ನು ಕಟ್ಟಿ ಸಾಹಿತ್ಯ ಮತ್ತು ನಾಟಕ ಚಟುವಟಿಕೆ ಮುಂದುವರಿಸಿದರು.

ನಟ–ನಿರ್ದೇಶಕನಾಗಿ ಶ್ರೀರಂಗರ ನಾಟಕಗಳ ಅನೇಕ ಪ್ರದರ್ಶನಗಳನ್ನು ನಾಡಿನಾದ್ಯಂತ ಇತ್ತವರು. ಬಹುತೇಕ ನಾಟಕ ಶಿಬಿರ–ವಿಚಾರ ಗೋಷ್ಠಿಗಳು, ಶ್ರೀರಂಗರ ನಾಟ್ಯ ಸಪ್ತಾಹ ಮಾಡಿದ ಕೀರ್ತಿ ಶ್ರೀಯುತರಿಗುಂಟು. ಗಮಕ, ಯಕ್ಷಗಾನಗಳಲ್ಲೂ ಇವರ ಆಸಕ್ತಿ ಬಹಳ. ತಮ್ಮ ತಂಡದೊಂದಿಗೆ ಕರ್ನಾಟಕ ಸುತ್ತಿ ಬಂದ ಮಾಸೂರರು ಬೇರೆ ತಂಡಗಳಿಗಾಗಿಯೂ ನಾಟಕಗಳನ್ನು ನಿರ್ದೇಶಿಸಿದ್ದಾರೆ.

ಧಾರವಾಡ ಜಿಲ್ಲೆಯ ಹಿರೇಕೆರೂರಿನವರಾದ ಮಾಸೂರರು ಕಲಾವಿಲಾಸಿ ರಂಗಭೂಮಿಗೆ ಸಲ್ಲಿಸಿದ ಸೇವೆ ಬಹು ಹಿರಿದು. ಶ್ರೀಯುತರ ಕಲಾ ಸೇವೆಯನ್ನು ಮೆಚ್ಚಿ 1972ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ.





## ಹಿರಿಯಡಕ ಗೋಪಾಲ ರಾವ್

ಹಿರಿಯಡಕ ಗೋಪಾಲ ರಾವ್ ಬಡಗು ತಿಟ್ಟಿನ ಯಕ್ಷಗಾನದ ಬಹು ಪ್ರಖ್ಯಾತ ಮದ್ದಲೆಗಾರರು. ಈ ರಂಗದ ಬಗೆಗೆ ಅಧಿಕಾರಯುತವಾಗಿ ಹೇಳಬಲ್ಲವರು. ಬಳಕೆಯಲ್ಲಿರುವ 'ಏರುಮದ್ದಲೆ' ಎಂಬ ಮದ್ದಳೆಯ ಪ್ರಕಾರವನ್ನು ನಿರ್ಮಿಸಿಕೊಟ್ಟವರು. 1934–35 ರಿಂದ 37 ವರ್ಷಗಳ ಕಾಲ ಪೆರ್ಡೂರು, ಮಂದರ್ತಿ, ಅಮೃತೇಶ್ವರಿ ಮೊದಲಾದ ಪ್ರಸಿದ್ಧ ಮೇಳಗಳಲ್ಲಿ ಮದ್ದಲೆಗಾರಿಕೆ ಮಾಡಿ 1971 ರಿಂದ 1975ರವರೆಗೆ ಡಾಕ್ಟರ್ ಶಿವರಾಮ ಕಾರಂತರ ನೇತೃತ್ವದ ಉಡುಪಿ ಯಕ್ಷಗಾನ ಕೇಂದ್ರದ ಗುರುವರ್ಗದಲ್ಲಿ ದುಡಿದು ನಿವೃತ್ತರಾದರು. 1970ರ ಸುಮಾರಿಗೆ ಇವರಲ್ಲಿ ಅಮೆರಿಕದ ಮಾರ್ಥಾ ಆಷ್ಟನ್ ಎಂಬ ಹುಡುಗಿ ಯಕ್ಷಗಾನ ನೃತ್ಯಾಭಿನಯ ಕಲಿತು ಅದರಲ್ಲಿ ಡಾಕ್ಟರೇಟ್ ಪದವಿ ಪಡೆದುಕೊಂಡರು. ಅಮೆರಿಕದ ಡಾಕ್ಟರ್ ಪೀಟರ್ ಕ್ಲಾಸ ಇವರಲ್ಲೇ ವಾದನ ವಿದ್ಯೆಯನ್ನು ಕಲಿತರು.

1977ರಲ್ಲಿ ಹಾಗೂ 1979–80ರಲ್ಲಿ ಹೀಗೆ ಎರಡು ಬಾರಿ ಅಮೆರಿಕ ಪ್ರವಾಸ ಕೈಗೊಂಡು ಅಲ್ಲಿ ಮದ್ದಲೆಗಾರಿಕೆಯ ಪ್ರಾತ್ಯಕ್ಷಿಕೆ ಹಾಗೂ ಯಕ್ಷಗಾನ ಪ್ರದರ್ಶನ ಮಾಡಿದ್ದಾರೆ. ಗೋಪಾಲರಾವ್‌ರವರಿಗೆ 1972ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿ ಗೌರವಿಸಿದೆ. ಹಾಗೂ ಇವರಿಗೆ ಇದೇ ವರ್ಷ ರಾಜ್ಯ ಪ್ರಶಸ್ತಿಯೂ ಸಹ ಬಂದಿದೆ.



# 1979ರ ಪ್ರಶಸ್ತಿ ವಿಜೇತರು

## ಪಾರಿಜಾತ ಶಿವಗೊರೆಪ್ಪ ಬಾಣಿ

ನರಸಾಪುರ ಗ್ರಾಮ, ರಾಮದುರ್ಗ ತಾಲ್ಲೂಕು, ಬೆಳಗಾಂ ಜಿಲ್ಲೆಯ ಯಲ್ಲಪ್ಪ ಬಾಣಿ ಅವರ ಮಗ ಶಿವಗೊರಪ್ಪ ಬಾಣಿ, ಇವರು ಚಿಕ್ಕ ವಯಸ್ಸಿನಲ್ಲಿ ಊರಿಗೆ ಬರುತ್ತಿದ್ದ ಪಾರಿಜಾತ ನಾಟಕಗಳನ್ನು ನೋಡಿ ಅದರ ಹಾಡುಗಳನ್ನು ಕುರಿಕಾಯುತ್ತಾ ಹಾಡುತ್ತಿದ್ದರು.

ಒಂದು ಸಾರಿ ಇವದನ್ನು ಗಮನಿಸಿದ ಪಾರಿಜಾತ ಕಲಾವಿದೆಯಾದ ಕೌಜಲಗಿ ನಿಂಗಮ್ಮ ಅವರು ಈ ಹುಡುಗನನ್ನು ನಿಂಗಣ್ಣ ಸಣ್ಣಕಿ, ಗೋಕಾಕ ಅವರ ಬಳಿ ಕರೆದೊಯ್ದುದರು. ಅವರಿಂದ ವಿದ್ಯೆ ಕಲಿತು ಮುಂದೆ ಪಾರಿಜಾತ ನಾಟಕಗಳ ಪ್ರದರ್ಶನಗಳನ್ನು ನೀಡುವಲ್ಲಿ "ಕರ್ನಾಟಕದ ಕೋಗಿಲೆ" ಎಂದು ಹೆಸರುವಾಸಿಯಾದರು.

ಇವರ ಕಲಾಸೇವೆಯನ್ನು ಮೆಚ್ಚಿ ಕರ್ನಾಟಕ ನಾಟಕ ಅಕಾಡೆಮಿಯು 1979ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಬಳ್ಳಾರಿ ಲಲಿತಮ್ಮ

ಪಿಟೀಲು ವಿದ್ವಾಂಸ ತಿಮ್ಮಪ್ಪನವರ ಮಗಳು. ಬಳ್ಳಾರಿ ಜಿಲ್ಲೆಯ ಅಮಿದ್ಯಾಲ ಇವರ ಗ್ರಾಮ. ತಂದೆಯ ಪ್ರೋತ್ಸಾಹದಿಂದಾಗಿ ಸಂಗೀತ–ನೃತ್ಯಗಳಲ್ಲಿ ಪರಿಣತರಾದ ಈಕೆ ಮೊದಲು ಚಿತ್ರನಟಿಯಾಗಿ ಹೆಸರಾದವರು. ಚಿತ್ರರಂಗದಲ್ಲಿದ್ದಾಗಲೇ ಪರಿಚಯವಾದ ಕೆ. ಹಿರಣ್ಣಯ್ಯನವರ ಮೂಲಕ ಕನ್ನಡ ರಂಗಭೂಮಿಗೆ ಮೊದಲು ಬಂದರು. ಈ ಸಲುವಾಗಿ ಶ್ರದ್ಧೆಯಿಂದ ಕನ್ನಡವನ್ನು ಓದಿ–ಪಾತ್ರಗಳನ್ನು ಅಭ್ಯಾಸ ಮಾಡಿ ರೂಢಿಸಲು ಕಲಿತು ಆ ದಿನಗಳಲ್ಲಿ ಹೊಸ ಪ್ರಯೋಗ ಎನ್ನಿಸಿದ 'ಸದಾರಮೆ' ನಾಟಕದ ನಾಯಕಿಯಾಗಿ ರಂಗಕ್ಕೆ ಬಂದರು. ಹಿರಣ್ಣಯ್ಯ ಮಿತ್ರಮಂಡಲಿಗೇ ಅಧಿಕ ಕಾಲ ಸೇವೆ ಸಲ್ಲಿಸಿದ ಲಲಿತಮ್ಮನವರು 'ಮಣಿ ಮಂಜರಿ' ಪಾತ್ರ ಇಂದಿಗೂ ಪ್ರೇಕ್ಷಕ ಮರೆತಿಲ್ಲ.

ಮುಂದೆ 'ಬಳ್ಳಾರಿ ಲಲಿತ ಕಲಾ ಸಂಘ' ಎಂಬ ತಮ್ಮದೇ ಸಂಸ್ಥೆಯನ್ನು ಕಟ್ಟಿ ಕರ್ನಾಟಕದಾದ್ಯಂತ ಸಂಚರಿಸಿ ರಂಗಾಸಕ್ತರನ್ನು ತಣಿಸಿದರು. ತನ್ನ ಸೌಂದರ್ಯ, ಮನತಣಿಸುವ ಶಾರೀರ ಹಾಗೂ ಸಂಭಾಷಣೆ ಹೇಳುವ ರೀತಿಗೆ, ಭಾವ ಪ್ರದರ್ಶನಕ್ಕೆ ಆ ದಿನಗಳಲ್ಲಿ ಅಪಾರ ಜನಪ್ರಿಯತೆಗಳಿಸಿದ್ದ ಕಲಾವಿದೆ.

ಇವರ ಕಲಾಸೇವೆಯನ್ನು ಮೆಚ್ಚಿ ಕರ್ನಾಟಕ ನಾಟಕ ಅಕಾಡೆಮಿಯು 1979ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಬಿ.ಎನ್. ನಾರಾಯಣ

ಬಿ.ಎನ್. ನಾರಾಯಣ್–ನಾಟಕದ 'ಎರೀನಾ'ಗೆ ಬಂದ ಕೂಡಲೇ ರಂಗಮಿತ್ರರಿಗೆ ಆತ್ಮೀಯವಾಗಿ 'ನಾಣಿ' ಎಂದಾದರು.

ಯಾವುದೇ ಕಾಲೇಜಿನಲ್ಲಿ ನಾಟಕವಿದ್ದರೂ, ನಾಣಿಯನ್ನು ಗ್ರೀನ್‌ರೂಮಿನಲ್ಲಿ ಕಾಣಬಹುದಿತ್ತು. ಹೈಸ್ಕೂಲು–ಕಾಲೇಜು ಹಂತದಲ್ಲಿ ನಾಟಕದ ಚಳವಳಿ ಬೆಳೆಯಲೂ– ಹೊಸ ಹೊಸ ಪ್ರತಿಭೆ ಗುರುತಿಸಲು ಇವರ ಪ್ರಯತ್ನ ಅಪಾರ.

ಈ ಕಾರಣಕ್ಕೇ ಈ ಮೇಕಪ್ ಪಟು ತನ್ನ ಮನೆಗೆ 'ಗ್ರೀನ್‌ರೂಮ್' ಎಂದೇ ಹೆಸರಿಸಿದರು.

ಕೈಲಾಸಂ ನಾಟಕಗಳೆಂದರೆ ಪ್ರಾಣ. ಪರ್ವತವಾಣಿ ತುಂಬ ಪ್ರಿಯ. ದಾಶರಥಿ ದೀಕ್ಷಿತರ ನಾಟಕವನ್ನು ನಮ್ಮ ವಿಮರ್ಶಕರು ತಾತ್ಸಾರ ಮಾಡಿದ್ದಕ್ಕೆ ದುಃಖ. ನಂ ಕಂಪ್ನಿ ಇವರ ಮಾಸ್ಟರ್ ಪೀಸ್. ಅಳಿಯದೇವರು ಆಡಿರುವುದಂತೂ ಲೆಕ್ಕವಿಲ್ಲ. ನ್ಯಾಷನಲ್ ಕಾಲೇಜ್ ಹಿಸ್ಟ್ರಿಯಾನಿಕ್ಸ್ ಕ್ಲಬ್‌ಗೆ ಹೊಸ ಉಸಿರು ತುಂಬಿ ನ್ಯಾಷನಲ್ ಕಾಲೇಜ್ ಎಂದರೆ 'ನಾಟಕದ ಕಾಲೇಜ್' ಎನ್ನುವಂಥಹ ಹೆಸರು ಬರಲೂ ಕಾರಣರಾದವರು. ನಟ–ನಿರ್ದೇಶಕ–ಸಂಘಟಕ ಎಂಥವರಿಗಾದರೂ ನಾಟಕದ ಕೆವಲು ಹಚ್ಚುವುದರಲ್ಲಿ ಸಮರ್ಥ.

ಲಂಡನ್‌ನಲ್ಲಿ ನಾಟಕಾಧ್ಯಯನ ಮಾಡಿ ಎ.ಡಿ.ಬಿ. ಡಿಪ್ಲೊಮಾ ಪಡೆದವರು. ಲಂಡನ್ ರಂಗಭೂಮಿಯಲ್ಲಿ ಕನ್ನಡ ನಾಟಕವೊಂದನ್ನು ಇಂಗ್ಲೀಷ್‌ನಲ್ಲಿ ಆಡಿಸಿದರು.

ಇಂಗ್ಲೆಂಡ್–ಅಮೇರಿಕಾದಿಂದ ಯಾವುದೇ ತಂಡ ಬರಲಿ ನಾಣಿ ಅದಕ್ಕೆ ಸ್ಟೇಜ್ ಮ್ಯಾನೇಜರ್.

ಮಾರಿಯಾಸ್ ಗೇರಿಂಗ್, ವೆಯಿನ್ ಯೂನಿವರ್ಸಿಟಿ ತಂಡ, ಆಕ್ಸ್‌ಫರ್ಡ್ ಪ್ಲೇ ಹೌಸ್, ರಾಯಲ್ ಷೇಕ್ಸ್‌ಪಿಯರ್ ಕಂಪನಿ ಹೀಗೆ ಹತ್ತಾರು ತಂಡಗಳಿಗೆ ನಾಣಿ ಬಳಗ ದುಡಿದಿದೆ.

ಬೆಂಗಳೂರು–ಮೈಸೂರು ವಿಶ್ವವಿದ್ಯಾನಿಲಯಗಳಲ್ಲಿ ಗೌರವ ಅಧ್ಯಾಪಕರಾಗಿ, ಬಹಳಷ್ಟು ಸಂಘ–ಸಂಸ್ಥೆಗಳ ಆಶ್ರಯದಲ್ಲಿ ನಾಟಕ ಶಿಬಿರಗಳನ್ನು, ನಾಟಕ ಸ್ಪರ್ಧೆಗಳನ್ನು ನಡೆಸಿಕೊಟ್ಟವರು.

ಬೆಂಗಳೂರು ಲಿಟಲ್ ಥಿಯೇಟರ್ ಹಾಗೂ ನಾಟ್ಯ ಸಂಘದ ಆರಂಭ ಸದಸ್ಯರು. ಲಯನ್ಸ್ ಕ್ಲಬ್ ಮೂಲಕವೂ ನಾಟಕಗಳನ್ನು ಆಡಿಸುತ್ತಿರುವವರು. ಸುಚಿತ್ರಾ ಫಿಲಂ ಸೊಸೈಟಿ ಅಧ್ಯಕ್ಷರು.

ಟಿ.ಟಿ. ಪ್ರೈವೇಟ್ ಲಿಮಿಟೆಡ್‌ನಲ್ಲಿ ಮಾರ್ಕೆಟಿಂಗ್ ಮ್ಯಾನೇಜರ್ ಆಗಿರುವ 'ನಾಣಿ' ಚಾವಡಿಯಲ್ಲಾಗಲಿ, ಛತ್ರದಲ್ಲಾಗಲಿ, ಕಲಾಕ್ಷೇತ್ರದಲ್ಲಾಗಲಿ ನಾಟಕಗಳು ಸದಾ ಆಗುತ್ತಿರಬೇಕು ಎನ್ನುವವರು.

ಇವರಿಗೆ ನಾಟಕ ಅಕಾಡೆಮಿ 1979–80ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ. ನಾಟಕ ರಂಗದಲ್ಲಿ ದುಡಿದು ಹೆಸರಾದ ನಾಣಿ ಚಿತ್ರರಂಗಕ್ಕೂ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ.



# 1980ರ ಪ್ರಶಸ್ತಿ ವಿಜೇತರು

## ಎಲ್.ಎಸ್. ಇನಾಂದಾರ್

19ನೇ ಶತಮಾನದ ಕೊನೆಯ ಭಾಗದಲ್ಲಿ ಅಂದರೆ 1885ರಲ್ಲಿ ಹುಟ್ಟಿದ ಲಿಂಬಾಜಿ ಶ್ರೀನಿವಾಸರಾವ್ ಇನಾಂದಾರ್, ನಮ್ಮ ವೃತ್ತಿ ನಾಟಕ ರಂಗಭೂಮಿಯಲ್ಲಿಯ ಒಂದು ದೊಡ್ಡ ಹೆಸರು. ವಿಜಾಪುರ ಜಿಲ್ಲೆಯ ಕಲಾದಗಿಯಲ್ಲಿ ಹುಟ್ಟಿದ ಇನಾಮದಾರ್ ತಮ್ಮ ಪ್ರಾಥಮಿಕ ಶಿಕ್ಷಣ ಮುಗಿಸಿಕೊಂಡು ಪ್ರಾಥಮಿಕ ಶಾಲಾ ಶಿಕ್ಷಣದ ಮೂರು ವರುಷಗಳ ತರಬೇತಿಯನ್ನು ಮುಗಿಸಿ ಶಾಲಾ ಅಧ್ಯಾಪಕರಾಗಿ ಜೀವನ ಪ್ರಾರಂಭಿಸಿದರು. ಆದರೆ ಅವರ ಅಂತರಾಳದಲ್ಲಿ ಹುದುಗಿದ ಅಭಿನಯ ಕಲೆ ಕೂಗೆಬ್ಬಿಸಿರಬೇಕು. ಅಧ್ಯಾಪಕ ವೃತ್ತಿಗೆ ಶರಣು ಹೊಡೆದು, 'ರಂಗಮಂಚ'ವನ್ನೇರಿದರು. ರಂಗಭೂಮಿಯ ಬಣ್ಣಕ್ಕೆ ಮುಖ ಕೊಟ್ಟು ನಿಂತರು.

ಶ್ರೀ ಶಾರದಾ ಸಂಗೀತ ನಾಟಕ ಮಂಡಲಿ ಗೋಕಾಕ – ಕಂಪನಿಯಲ್ಲಿ ನಟರಾಗಿ ರಂಗಭೂಮಿಯನ್ನು ಪ್ರವೇಶಿಸಿದರು. ಅಭಿನಯದ ಜೊತೆಯಲ್ಲಿ ನಾಟಕ ಬರೆಯುವ ಗೀಳು ಇವರನ್ನಂಟಿಕೊಂಡಿತು. ಈ ಕಂಪನಿಗಾಗಿ 'ಪಠಾಣಿಪಾಶ' ಸಾಮಾಜಿಕ ನಾಟಕವನ್ನು ಬರೆದು ಕೊಟ್ಟು ಅದೇ ನಾಟಕದಲ್ಲಿ ಪಠಾಣನ ಪಾತ್ರವನ್ನು ಇವರೇ ವಹಿಸಿಕೊಂಡು ಅಪಾರ ಜನಮೆಚ್ಚುಗೆ ಗಳಿಸಿದರು. 'ಪಠಾಣಿಪಾಶ'ದ ನಂತರ "ಸಿಂಧೂರ ಲಕ್ಷ್ಮಣ", "ಕಿತ್ತೂರಮಟ್ಟಿ ಸ್ಟೇಶನ ಮಾಸ್ತರ್" ಇವೆರಡು ನಾಟಕಗಳನ್ನು ಬರೆದರು. ಅಂದಿನ ಕಾಲದಲ್ಲಿ ವೃತ್ತಿ ರಂಗಭೂಮಿಗೆ ಕೇವಲ ಪೌರಾಣಿಕ ನಾಟಕಗಳಷ್ಟೇ ಬೆನ್ನೆಲುಬಾಗಿ ನಿಂತುಕೊಂಡಿದ್ದುವು. ಹೊಸ ಸಾಮಾಜಿಕ ನಾಟಕಗಳನ್ನು ಬರೆದು ಶ್ರೀ ಇನಾಮದಾರರು ವೃತ್ತಿ ನಾಟಕ ರಂಗಭೂಮಿಯ ದಿಸೆಯನ್ನೇ ಬದಲಾಯಿಸಿದರು. ಆ ದೃಷ್ಟಿಯಿಂದ ಇನಾಂದಾರ್ ವೃತ್ತಿ ನಾಟಕ ರಂಗಭೂಮಿಯ ಯುಗಪುರುಷರಾದರು.

'ಕಿತ್ತೂರಮಟ್ಟಿ ಸ್ಟೇಶನ ಮಾಸ್ತರ್' ಆಗ ನಡೆದ ಒಂದು ಸನ್ನಿವೇಶದ ಸತ್ಯ ಕಥೆಯನ್ನೇ ಆಧರಿಸಿ ಬರೆದದ್ದು, ಅಪಾರ ಜನಮೆಚ್ಚುಗೆಯಿಂದ, ನಾಟಕ ಪ್ರತಿಯೊಬ್ಬರ ಬಾಯಲ್ಲಿ ನಿಂತು ಹೋಗಿ ಒಂದು ಇತಿಹಾಸವನ್ನೇ ನಿರ್ಮಿಸಿತು. ತದನಂತರ ಇನಾಮದಾರ ತುಂಗಭದ್ರೆಯನ್ನು ದಾಟಿ ದಾವಣಗೆರೆಗೆ ಬಂದು "ವೃದ್ಧಿಪುತ್ರ ಭಾಮಾಸುರ" ನಾಟಕ ಬರೆದು ಆಡಿಸಿದರು. 'ಭಕ್ತ ದಾಮಾಜಿ' ಎಂಬ ಒಂದು ಐತಿಹಾಸಿಕ ನಾಟಕವನ್ನು ಬರೆದರು. ಮುಂದೆ ಏಣಿಗಿ ಬಾಳಪ್ಪನವರ ಜೊತೆಯಲ್ಲಿ ಕಂಪನಿ ಕಟ್ಟಿದರು – ಹೊಸ ನಾಟಕ ಬರೆದರು ಆಡಿಸಿದರು – "ದುರ್ಭಿಕ್ಷ", "ಧರ್ಮಪತ್ನಿ", "ಜಹಗೀರದಾರ" ಮುಂತಾದ ನಾಟಕಗಳು ಇನಾಂದಾರರ ಪ್ರಭಾವೀ ಲೆಕ್ಕಣಿಕೆಯಿಂದ ಹೊರಬಂದವು. ಆಮೇಲೆ ಪುನಃ ಪರ್ಯಟನ – ತಿಪ್ಪಿ ಗೌಡಪ್ಪನವರ ಕಂಪನಿ ನಾಟಕಕ್ಕಾಗಿ "ಹಳ್ಳಿಯಿಂದ ದಿಲ್ಲಿಯವರೆಗೆ" ನಾಟಕ ಬರೆದು ಕೊಟ್ಟರು. ಈ ನಾಟಕದ 200 ಪ್ರಯೋಗಗಳು ಸತತವಾಗಿ ನಡೆದವು.

ವೃತ್ತಿ ನಾಟಕ ರಂಗಭೂಮಿ ಕ್ಷೇತ್ರದಲ್ಲಿ ಇನಾಮದಾರರ ನಾಟಕಗಳು ಒಂದು ಮೈಲಿಗಲ್ಲು. ಸಮಾಜಿಕ ನಾಟಕಗಳನ್ನು ಜನ ನೋಡುವಂತೆ ಮಾಡಿದ್ದರ ಯಶಸ್ಸು ಇನಾಮದಾರರಿಗೆ ಸಲ್ಲಬೇಕು. ಒಟ್ಟು ಎಂಬತ್ತು ನಾಟಕಗಳನ್ನೂ 30 ಕಾದಂಬರಿಗಳನ್ನೂ ಬರೆದ ಲಿಂಬೋಜಿ ಇನಾಮದಾರರು ಪ್ರಚಾರ ಪ್ರಿಯರಲ್ಲವಾದುದರಿಂದ ಪ್ರಸಿದ್ಧಿಯ ಬೆಳಕಿನಲ್ಲಿ ಬರಲಿಲ್ಲ. ಆದರೆ ಎಲೆಗಳ ಮರೆಯಲ್ಲಿಯ ಹಣ್ಣಿನಂತೆ. ವೃತ್ತಿ ನಾಟಕ ರಂಗಭೂಮಿಯ ಕ್ಷೇತ್ರದಲ್ಲಿ ಅವರ ಪರಿಮಳ ಪಸರಿಸಿದ್ದನ್ನು ನಮ್ಮ ನಾಟಕ ಇತಿಹಾಸಕಾರರು ಮರೆಯುವಂತಿಲ್ಲ. ತಮ್ಮ ಜೀವನದ ಸಂಧ್ಯಾ ಕಾಲದಲ್ಲಿರುವ ಇನಾಂದಾರ್ ಈಗಲೂ ವೃತ್ತಿ ನಾಟಕ ಕ್ಷೇತ್ರಗಳ ಬೆಳವಣಿಗೆಯನ್ನು ಅಪೇಕ್ಷಿಸುತ್ತಿರುವುದು ಅವರ ಕಲಾ ಹೃದಯದ ಹಿರಿಮೆಯನ್ನು ಸಾರುತ್ತದೆ. 1980ನೇ ಸಾಲಿನ ಪ್ರಶಸ್ತಿಯನ್ನು ಶ್ರೀಯುತರಿಗೆ ನಮನ ಪೂರ್ವಕವಾಗಿ ನೀಡುತ್ತಾ ಅವರ ಮಾರ್ಗದರ್ಶನವು ನಾಟಕಕಲೆಗೆ ಇನ್ನೂ ಹೆಚ್ಚು ಹೆಚ್ಚಾಗಿ ಸಿಗುವಂತಾಗಲಿ ಎಂದು ಕರ್ನಾಟಕ ನಾಟಕ ಅಕಾಡೆಮಿಯು ಹಾರೈಸುತ್ತದೆ.



## ಪ್ರೊ॥ ಬಿ. ಚಂದ್ರಶೇಖರ

1916ನೇ ಇಸವಿಯಲ್ಲಿ ಹಾಸನದಲ್ಲಿ ಹುಟ್ಟಿದ ಪ್ರೊ. ಬಿ. ಚಂದ್ರಶೇಖರ ಅವರದು ಅಷ್ಟಪೈಲು ವ್ಯಕ್ತಿತ್ವ. ಪ್ರಸಿದ್ಧ ಅಡ್ವೋಕೇಟರಾದ ಬೆಳವಾಡಿ ರಾಮಸ್ವಾಮಯ್ಯನವರ ಮಕ್ಕಳಾದ ಪ್ರೊ. ಬಿ. ಚಂದ್ರಶೇಖರ ಅವರು 1938ರಲ್ಲಿ ಇಂಗ್ಲೀಷ್ ಅಧ್ಯಾಪಕರಾಗಿ ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ನೇಮಕವಾದರು. ಆದರೆ ಬಾಲ್ಯದಿಂದಲೂ ಅಂಟಿಕೊಂಡಿದ್ದ ನಾಟಕದ ಗೀಳು ಅವರನ್ನು ರಂಗಭೂಮಿಗೂ ಸೆಳೆದಿತ್ತು. ನಾಟಕ ಮತ್ತು ರಂಗಭೂಮಿಯ ಜತೆ ತೀವ್ರ ಆಸಕ್ತಿಯನ್ನು ಸಂಪರ್ಕವನ್ನು ಬೆಳೆಸಿಕೊಂಡಿದ್ದರು.

ಬಾಲಕರಾಗಿದ್ದಾಗಲೇ ಕೆಲವು ನಾಟಕಗಳಲ್ಲಿ ಅನೇಕ ಚಿಕ್ಕಪುಟ್ಟ ಪಾತ್ರಗಳನ್ನು ವಹಿಸಿದ್ದರು. ವರದಾಚಾರ್ ಕಂಪನಿ, ಗುಬ್ಬಿ ಕಂಪನಿ, ಶಿರಹಟ್ಟಿ ಕಂಪನಿ, ಚಾಮುಂಡೇಶ್ವರಿ ಕಂಪನಿ, ಪೀರ್ ಸಾಹೇಬ್ ಕಂಪನಿ ಮುಂತಾದವರ ನಾಟಕಗಳನ್ನು ನೋಡಿ ನಾಟಕದ ಸೌಂದರ್ಯ ಮತ್ತು ಪ್ರಭಾವಗಳನ್ನು ಮನಗಂಡರು. ಇಂಗ್ಲೀಷ್ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿರುವಾಗಲೂ ರಂಗಭೂಮಿ ಬಗೆಗೆ ತಮ್ಮ ಆಸಕ್ತಿಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದಿರುವ ಶ್ರೇಯಸ್ಸು ಅವರಿಗೆ ಸಲ್ಲಲೇಬೇಕು. ತಮ್ಮ ಕಾಲೇಜಿನಲ್ಲಿಯೇ ವಿದ್ಯಾರ್ಥಿಗಳನ್ನು ಕೂಡಿಸಿ ಕನ್ನಡದಲ್ಲಿ ಮತ್ತು ಇಂಗ್ಲೀಷಿನಲ್ಲಿ ನಾಟಕಗಳನ್ನು ಸಾದರಪಡಿಸ ತೊಡಗಿದರು.

ಕಳೆದ 25 ವರ್ಷಗಳಿಂದಲೂ ಬೆಂಗಳೂರಿನ ಹವ್ಯಾಸಿ ರಂಗಭೂಮಿ ಜೊತೆಯಲ್ಲಿ ಸಂಬಂಧವನ್ನು ಇಟ್ಟುಕೊಂಡಿದ್ದಾರೆ. ನಗರದ ಹಲವಾರು ಸಂಘಗಳ ನಾಟಕಗಳನ್ನು ನಿರ್ದೇಶಿಸಿಯೋ ಅಥವಾ ಆ ನಾಟಕಗಳಲ್ಲಿ ಪಾತ್ರ ವಹಿಸಿಯೋ ಹವ್ಯಾಸಿ ರಂಗಭೂಮಿಯ ಪ್ರಗತಿಗೆ ಕಾರಣೀಭೂತರಾಗಿದ್ದಾರೆ.

1960ರಲ್ಲಿ ಅಸ್ತಿತ್ವದಲ್ಲಿ ಬಂದ ಬೆಂಗಳೂರಿನ ಲಿಟಲ್ ಥಿಯೇಟರ್ ಸಂಸ್ಥೆಯ ಸಂಸ್ಥಾಪಕ ಸದಸ್ಯರಲ್ಲಿ ಇವರೂ ಒಬ್ಬರು. ಈ ಸಂಘದ ಅನೇಕ ನಾಟಕಗಳಲ್ಲಿ ಪಾತ್ರ ವಹಿಸಿ ಅಥವಾ ನಿರ್ದೇಶಕರಾಗಿ ಕೆಲಸ ಮಾಡಿದ್ದಾರೆ. ಕೆಲವು ಕಾಲ ನಾಟ್ಯ ಸಂಘದ ಕರ್ನಾಟಕ ಶಾಖೆಯ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಇವರು ಇದುವರೆಗೆ ಪಾಲ್ಗೊಂಡಿರುವ ನಾಟಕಗಳ ಸಂಖ್ಯೆ 75ಕ್ಕೂ ಮೀರಿವೆ. 1966ರಲ್ಲಿ ಪಿ. ಲಂಕೇಶ್ ಅವರ 'ತೆರೆಗಳು' ನಾಟಕವನ್ನು ನಿರ್ದೇಶಿಸುವ ಮೂಲಕ ಪ್ರೊ. ಚಂದ್ರಶೇಖರ್ ಅವರು ಕನ್ನಡ ನಾಟಕ ಪ್ರದರ್ಶನಕ್ಕೆ ಹೊಸ ಶೈಲಿಯನ್ನು ಹೊಸ ಮಾರ್ಗವನ್ನು ತೋರಿಸಿಕೊಟ್ಟರು.

1967ರಲ್ಲಿ ಸುಮತೀಂದ್ರ ನಾಡಿಗ ಅವರ 'ಬಕ್ಕತಲೆ ನರ್ತಕಿ'ಯ ಮೂಲಕ ಬೆಂಗಳೂರಿನ ರಂಗ ಪ್ರಿಯರಿಗೆ ಒಂದು ಅಬ್ಸರ್ಡ್ ನಾಟಕದ ಪರಿಚಯ ಮಾಡಿಕೊಟ್ಟರು. 1968ರಲ್ಲಿ ಗಿರೀಶ್ ಕಾರ್ನಾಡ್ ಅವರ 'ತುಘಲಕ್' ನಿರ್ದೇಶಿಸಿ ಕನ್ನಡ ರಂಗಭೂಮಿಗೆ ಅಖಿಲ ಭಾರತ ರಂಗ ಭೂಪಟದಲ್ಲಿ ಒಂದು ಸ್ಪಷ್ಟ ಸ್ಥಾನವನ್ನು ದೊರಕಿಸಿಕೊಟ್ಟರು. ಪ್ರೊ. ಚಂದ್ರಶೇಖರ್ ಅವರು ಕನ್ನಡದಲ್ಲಿ ಸ್ವತಂತ್ರ ನಾಟಕಗಳನ್ನು ಬರೆಯುವುದು ಅಲ್ಲದೆ ಸಂಸ್ಕೃತ ಹಾಗೂ ಇಂಗ್ಲೀಷಿನಿಂದ ಕೆಲವು ನಾಟಕಗಳನ್ನು ಅನುವಾದ ಮಾಡಿದ್ದಾರೆ. ಪ್ರೊ. ಚಂದ್ರಶೇಖರ್ ಫ್ರಾನ್ಸ್‌ನ ಯಂಗ್ ಫಿಲಂಸ್ ಅವರ 'ಟಸ್ಕ್' ಚಿತ್ರದಲ್ಲಿ ಒಂದು ಮುಖ್ಯ ಪಾತ್ರದಲ್ಲಿ ಕಾಣಿಸಿಕೊಂಡಿದ್ದಾರೆ.

1973ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದವರು ಪ್ರಾರಂಭಿಸಿದ ನೃತ್ಯ ನಾಟಕದ ವಿಭಾಗದ ಪ್ರಥಮ ಮುಖ್ಯಸ್ಥರಾಗಿ ಈ ವಿಭಾಗಕ್ಕೆ ಒಂದು ಭದ್ರ ಅಡಿಪಾಯವನ್ನು ನೀಡಿದ್ದಾರೆ. ಹತ್ತು ಮುಖವಾಗಿ ಬೆಳೆದ ಅವರ ಹವ್ಯಾಸಿ ರಂಗಭೂಮಿಗೆ ಒಂದು ವರದಾನವೆನಿಸಿದೆ. ಇವರ ಕಲಾಸೇವೆ ಇನ್ನೂ ಹೆಚ್ಚಾಗಿ ಆಗುವ ಭರವಸೆ ಮತ್ತು ಶುಭಹಾರೈಕೆಯಿಂದ 1980ನೇ ಸಾಲಿನ ಪ್ರಶಸ್ತಿಯನ್ನು ಇವರಿಗೆ ಕರ್ನಾಟಕ ನಾಟಕ ಅಕಾಡೆಮಿ ಸಂತೋಷದಿಂದ ನೀಡುತ್ತಿದೆ.

# ಎಂ. ನಾರ್ಣಪ್ಪ ಉಪ್ಪೂರ

ಯಕ್ಷಗಾನ ಕರ್ನಾಟಕದ ಕರಾವಳಿಯ ರುದ್ರರಮಣೀಯ ನೃತ್ಯ, ನಾಟಕ ಕಾವ್ಯ ಪುರಾಣಗಳಲ್ಲಿನ ಅತಿಮಾನವ ಪಾತ್ರಗಳನ್ನು ಅಂಗೈ ಅಗಲದ ರಂಗದ ಮೇಲೆ ತಂದು ಆಡಿಸುವ ಈ ಸಮಷ್ಟಿ ಕಲೆಯಲ್ಲಿ ನೃತ್ಯ, ಗೀತ, ಮುಖವರ್ಣಿಕೆ, ವೇಷಭೂಷಣ, ಶೃಂಗಾರ, ಅಲಂಕಾರಗಳು, ಅಂದಿನ ಪುರಾಣ ಪಾತ್ರಗಳ ವೀರ ವೈಭವವನ್ನು ಮೆರೆಯಿಸುವಂತಹವು.

ಕಳೆದ ಯುಗಗಳ ವಾತಾವರಣವನ್ನು ಮತ್ತೆ ದಟ್ಟವಾಗಿ ಕಟ್ಟಿ, ಅಂದಿನ ನೋವು ನಲಿವುಗಳಿಗೆ ನವರಸಗಳನ್ನು ತೊಡಗಿಸಿ, ಮಾಗಿಸಿ, ತೂಗಿತೋರುವಲ್ಲಿ ಕನ್ನಡದ ಯಕ್ಷಗಾನಕ್ಕೆ ಹೋಲುವ ರಂಗಕಲೆ ಎಂದರೆ, ಕೇರಳದ ಕಥಕ್ಕಳಿಯೊಂದೇ. ಆದರೆ ಅಲ್ಲಿ ಅಭ್ಯಾಸದಿಂದ ಪಾತ್ರದ ಮೈಯುಂಡ ಮುದ್ರಾಭಾಷೆ ಇಲ್ಲಿ ನಿಂತಕಾಲ ಮೇಲೆ ಪಾತ್ರಗಳೇ ಹುಟ್ಟಿಸಿ ಆಡುವ ನಿತ್ಯ ನವೀನ ಸಂಭಾಷಣೆಯ ಯಕ್ಷಗಾನದ ಅತಿ ರಮ್ಯ ಪ್ರಪಂಚದಲ್ಲಿ ಆಡಿದ ಅನೇಕ ಪಾತ್ರಧಾರಿಗಳು ಹಾಡಿದ ಭಾಗವತರಲ್ಲಿ, ಅಮೃತೇಶ್ವರೀ ಯಕ್ಷಗಾನ ಮೇಳದ ಶ್ರೀ ಎಂ. ನಾರ್ಣಪ್ಪ ಉಪ್ಪೂರರು ಒಬ್ಬ ಶ್ರೇಷ್ಠ–ಜ್ಯೇಷ್ಠ ಭಾಗವತರಾಗಿದ್ದಾರೆ.

1918ರಲ್ಲಿ ಜನಿಸಿದ ನಾರ್ಣಪ್ಪ ಉಪ್ಪೂರರ ಶಾಲಾ ಜೀವನ ಕೇವಲ ಐದನೇ ಕ್ಲಾಸಿನವರೆಗೆ. ಅನಿವಾರ್ಯ ಪ್ರಸಂಗದಿಂದಾಗಿ ಶಾಲಾ ಶಿಕ್ಷಣ ಅಷ್ಟಕ್ಕೆ ನಿಂತಿತಾದರೂ ಯಕ್ಷಗಾನಭಾಗವತ ಶಿಕ್ಷಣದ ಕಡೆಗೆ ಅವರ ಗಮನ ಹೊರಳಿದ್ದು ನಿಜಕ್ಕೂ ನಮ್ಮ ಯಕ್ಷಗಾನಕ್ಕೆ ಸಂದ ಸುದೈವ.

ಭಾಗವತ ವಿದ್ಯೆ ಅವರಿಗೆ ವಂಶಪಾರಂಪರ್ಯವಾಗಿ ಬಂದದ್ದು. ಇವರ ತಂದೆ ದಿವಂಗತ ಶ್ರೀನಿವಾಸ ಉಪ್ಪೂರ ಪ್ರಖ್ಯಾತ ಭಾಗವತರಾಗಿದ್ದರು. ಹೀಗಾಗಿ ನಾರ್ಣಪ್ಪ ಉಪ್ಪೂರರ ಪ್ರಥಮ ಶಿಕ್ಷಕರೇ ಅವರು. ತಂದೆ ಹಾಗೂ ವಾಸುದೇವ ಉಪ್ಪೂರರ ಜೊತೆ ಸೇರಿ ಯಕ್ಷಗಾನ ಪದ್ಯಗಳನ್ನೂ ಮದ್ದಳೆ ನುಡಿತಗಳನ್ನೂ ಚೆಂಡೆ ವಾದನವನ್ನೂ ಅಭ್ಯಾಸ ಮಾಡಿದರು. ತಮ್ಮ 25ನೇ ವಯಸ್ಸಿನಲ್ಲಿಯೇ ಅಮೃತೇಶ್ವರಿ ಯಕ್ಷಗಾನ ಮೇಳದ ಮುಖ್ಯ ಭಾಗವತರಾದರು.

ನಂತರ ಇಡಗುಂಜಿ, ಪೆರ್ಡೂರು ಯಕ್ಷಗಾನ ಮೇಳಗಳಲ್ಲಿಯೂ ಭಾಗವತರಾಗಿ ಸೇವೆ ಸಲ್ಲಿಸಿ 1972ರಲ್ಲಿ ಪುನಃ ಅಮೃತೇಶ್ವರಿ ಯಕ್ಷಗಾನ ಮೇಳಕ್ಕೆ ಮರಳಿದರು.

ನಾರ್ಣಪ್ಪ ಉಪ್ಪೂರರು ತರುಣರಾಗಿದ್ದ ಕಾಲದಲ್ಲಿ ತೆಂಕುತಿಟ್ಟು ಯಕ್ಷಗಾನ ಮೇಳಗಳು ಡೇರೆ ಹಾಕಿ ಆಟವಾಡಿ ಜನಮೆಚ್ಚುಗೆ ಪಡೆಯುವಂತಹ ಕಾಲ.

ಇಂದು ಎಂ. ನಾರ್ಣಪ್ಪ ಉಪ್ಪೂರರು 62ರ ವಯಸ್ಸನ್ನು ದಾಟಿ ನಿಂತಿದ್ದಾರೆ. ಹುಣಿಸೆ ಹಳೆಯದಾದಷ್ಟೂ ಹುಳಿ ಹೆಚ್ಚು ಎನ್ನುವ ಗಾದೆ ಮಾತು ಅಕ್ಷರಶಃ ಇವರಿಗೆ ಅನ್ವಯಿಸುತ್ತದೆ. ಅವರ ಭಾವಪೂರ್ಣ ಹಾಡುಗಾರಿಕೆಯ ಮಾಧುರ್ಯ ಹಾಗೆಯೇ ಉಳಿದುಕೊಂಡು ಬಂದಿದೆ.

ನಾರ್ಣಪ್ಪ ಉಪ್ಪೂರರು ಕೇವಲ ಭಾಗವತರಾಗಿಯೇ ದುಡಿದಿಲ್ಲ, ಭಾಗವತ ವಿದ್ಯೆಯನ್ನು ಹಲವರಿಗೆ ದಾನ ಮಾಡಿದ ಯಶಸ್ಸು ಅವರಿಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಹಂಗಾರಕಟ್ಟೆಯ ಯಕ್ಷಗಾನ ಕೇಂದ್ರದ ಪ್ರಾಚಾರ್ಯರಾಗಿ 9 ವರ್ಷಗಳ ಕಾಲ ದುಡಿದು ನೂರಾರು ಜನ ಶಿಷ್ಯರನ್ನು ಭಾಗವತ ವಿದ್ಯೆಯಲ್ಲಿ ಸಿದ್ಧಗೊಳಿಸಿ ಮೇಳಗಳಿಗೆ ಒದಗಿಸಿ ಕೊಟ್ಟಿದ್ದಾರೆ. ನಾರ್ಣಪ್ಪ ಉಪ್ಪೂರರ ಇನ್ನೊಂದು ವೈಶಿಷ್ಟ್ಯವೆಂದರೆ, ತೆಂಕುತಿಟ್ಟು–ಬಡಗುತಿಟ್ಟು ಎರಡರಲ್ಲಿಯೂ ಅವರದು ಸಿದ್ಧಹಸ್ತ. ಯಕ್ಷಗಾನ ಕಲಾಕ್ಷೇತ್ರಕ್ಕೆ ಇವರ ಸೇವೆ ಇನ್ನೂ ಹೆಚ್ಚೆಚ್ಚು ಕಾಲ ಸಿಗುವಂತಾಗಲಿ ಎನ್ನುವ ಹಾರೈಕೆ ಕನ್ನಡಿಗರದಾಗಿದೆ. ಇವರಿಗೆ 1980ನೇ ಸಾಲಿನ ಪ್ರಶಸ್ತಿಯನ್ನು ಆದರದಿಂದ ನೀಡುತ್ತಾ ಕರ್ನಾಟಕ ನಾಟಕ ಅಕಾಡೆಮಿಯು ಶುಭಹಾರೈಸುತ್ತದೆ.



## ಡಿ. ದುರ್ಗಾದಾಸ್

ಮೂಡಲಪಾಯದ ಬಯಲಾಟದ ಕುಟುಂಬದಲ್ಲಿಯೇ ಬಳ್ಳಾರಿ ಜಿಲ್ಲೆಯ ನಾರಾಯಣಕೆರೆ ಗ್ರಾಮದಲ್ಲಿ ಹುಟ್ಟಿದ ಶ್ರೀ ಡಿ. ದುರ್ಗಾದಾಸರು ವೃತ್ತಿ ನಾಟಕ ಭೂಮಿಯನ್ನು ಸೇರಿದ್ದು ಒಂದು ಯೋಗಾಯೋಗವೇ.

ಉತ್ತರ ಕರ್ನಾಟಕದಲ್ಲಿ ವೃತ್ತಿ ನಾಟಕ ರಂಗಭೂಮಿಯಲ್ಲಿ ಒಂದು ಇತಿಹಾಸವನ್ನೇ ನಿರ್ಮಿಸಿದ ದಿವಂಗತ ಸದಾಶಿವರಾವ್ ಗರೂಡರವರು ದುರ್ಗಾದಾಸರ ಅಕ್ಕ ಅಣ್ಣನನ್ನು ತಮ್ಮ ನಾಟಕಗಳಲ್ಲಿ ಅಭಿನಯಿಸಲು ಕರೆ ಇತ್ತಾಗ ಅವರ ಜತೆಯಲ್ಲಿ 7 ವರುಷದ ಬಾಲಕನಾಗಿದ್ದ ಡಿ. ದುರ್ಗಾದಾಸ ಅವರನ್ನು ಹಿಂಬಾಲಿಸಿ ಗರೂಡರ ಕಂಪನಿಯನ್ನು ಸೇರಿದರು.

ಅವರ ನಾಟಕ ಶಿಕ್ಷಣ ಅಲ್ಲಿಯೇ ಪ್ರಾರಂಭವಾಯಿತು., ಎಂದು ಹೇಳಿದರೆ ತಪ್ಪಾಗಲಾರದು. ಬೆಳೆಯುವ ಪೈರಿನ ಗುಣ ಮೊಳಕೆಯಲ್ಲಿ ಕಾಣಿಸುತ್ತದೆ. ಈ ಬಾಲಕನಲ್ಲಿ ಅಭಿಜಾತವಾಗಿ ಮೂಡಿಬಂದ ಅಭಿನಯ ಕಲೆಯನ್ನು ಗರೂಡ ಸದಾಶಿವರಾಯರು ಗುರುತಿಸಿದರು.

ತಮ್ಮ 'ಪಾದುಕಾಪಟ್ಟಾಭಿಷೇಕ'ದಲ್ಲಿ ಬಾಲ ಪಾತ್ರವನ್ನು ಕೊಡಮಾಡಿದರು. ಈ ರೀತಿಯಾಗಿ ಡಿ. ದುರ್ಗಾದಾಸರು ರಂಗಭೂಮಿಗೆ ಬಾಲನಟನಾಗಿ ಪದಾರ್ಪಣ ಮಾಡಿದರು.

ಮುಂದೆ 1928–29ನೇ ವರುಷದಲ್ಲಿ ವಾಮನರಾವ್ ಮಾಸ್ತರ ಕಂಪನಿಯನ್ನು ಸೇರಿದರು. ವಾಮನರಾವ್ ಮಾಸ್ತರ ಕಂಪನಿಗೆ ಆಗ ದೊಡ್ಡ ಹೆಸರು. ಮೈಸೂರಿನಲ್ಲಿ ನಾಲ್ಮಡಿ ಕೃಷ್ಣರಾಜ ಒಡೆಯರ್ ಆಳುತ್ತಿದ್ದ ಕಾಲವದು. ಕಲಾಪೋಷಕರಾದ ಒಡೆಯರು ವಾಮನರಾವ್ ಮಾಸ್ತರನ್ನು ಕರೆಯಿಸಿಕೊಂಡು ತಮ್ಮ ಜಗನ್ಮೋಹನ್ ಅರಮನೆಯ ರಂಗಭೂಮಿಯ ಮೇಲೆ "ಭಕ್ತ ಪುಂಡಲೀಕ", 'ಸಂತಸಖು'3 ನಾಟಕಗಳನ್ನು ಆಡಿಸಿ ತಮ್ಮ ಮೆಚ್ಚಿಕೆಯನ್ನು ಸೂಚಿಸಿ, ವಾಮನರಾವ್ ಮಾಸ್ತರರಿಗೆ ಪ್ರಶಸ್ತಿ ದಯಪಾಲಿಸಿದರು.

ಇವೆರಡೂ ನಾಟಕಗಳಲ್ಲಿ ದುರ್ಗಾದಾಸ, ಅವರ ಅಕ್ಕ ಸಂಜೀವಮ್ಮ ಹಾಗೂ ಅಣ್ಣ ಎಲ್ಲರೂ ಅಭಿನಯಿಸಿದ್ದರು. ಈ ಪ್ರಶಸ್ತಿಯಿಂದ ಉತ್ತೇಜಿತರಾದ ಇವರ ಅಕ್ಕ 1933ರಲ್ಲಿ ಹುಬ್ಬಳ್ಳಿಯಲ್ಲಿ ತಮ್ಮದೇ ಆದ ಕಂಪನಿಯನ್ನು ಹುಟ್ಟುಹಾಕಿ ಅದಕ್ಕೆ "ವಿಶ್ವಕಲಾ ದರ್ಶನ ನಾಟಕ ಕಂಪನಿ" ಎಂದು ನಾಮಕರಣ ಮಾಡಿದರು.

ಈ ಕಂಪನಿ ಸಂಚರಿಸುತ್ತಾ ಜನಮೆಚ್ಚುಗೆಯನ್ನು ಪಡೆಯುತ್ತ ಬೆಂಗಳೂರಿಗೂ ಬಂದು ಶಿವಾನಂದ ಥಿಯೇಟರಿನಲ್ಲಿ 'ಬಸವೇಶ್ವರ' ನಾಟಕವನ್ನು ಸಾದರ ಪಡಿಸಿದರು. ಆಗ ಗುಬ್ಬಿ ವೀರಣ್ಣನವರು – ಜಯಮ್ಮನವರು ಈ ನಾಟಕ ವೀಕ್ಷಿಸಿ ತಮ್ಮ ಮೆಚ್ಚುಗೆಯನ್ನು ಸೂಚಿಸಿದರು. ಮುಂದೆ ಕಂಪನಿ ಆರ್ಥಿಕ ದುರವಸ್ಥೆಗೊಳಗಾಗಿ ಕುಂದಗೋಳದಲ್ಲಿ ಕಂಪೆನಿಯನ್ನು ಮುಚ್ಚಬೇಕಾಯಿತು.

ಸುಮಾರು ಅದೇ ಸಮಯದಲ್ಲಿ ದಿವಂಗತ ಕಂದಗಲ್ ಹನುಮಂತರಾಯರ ಶ್ರೀ ಅರವಿಂದ ನಾಟ್ಯ ಸಂಘ ಅಸ್ತಿತ್ವದಲ್ಲಿ ಬಂದಿತು. "ಬಡತನದ ಭೂತ" ಕಂದಗಲ್ ಹನುಮಂತರಾಯರ ಮಾಸ್ಟರ್ ಪೀಸ್.

ಈ ಬಡತನದ ಭೂತದಲ್ಲಿ ಡಿ. ದುರ್ಗಾದಾಸ್ ಇಂದಿರಾ–ಚರಣನಾಗಿ ಅಭಿನಯಿಸಿ ಅಪಾರ ಜನ ಮೆಚ್ಚುಗೆಯನ್ನು ಗಳಿಸಿಕೊಂಡರು. ಕಂದಗಲ್‌ರವರ ಇನ್ನಿತರ ನಾಟಕಗಳಾದ "ಚಿತ್ರಾಂಗದ" "ಕುರುಕ್ಷೇತ್ರ" "ಬೆಳ್ಳಿಚುಕ್ಕಿ" ಮುಂತಾದವುಗಳಲ್ಲಿ ಮುಖ್ಯ ನಟರಾಗಿ ಕಲಾ ಸೇವೆ ಸಲ್ಲಿಸಿದ 'ದುರ್ಗಾದಾಸ್' ಅಂದಿನ ಯುವಕರಿಗೆ 'ಮಾಡೆಲ್' ನಟರಾಗಿ ನಿಂತುಕೊಂಡಿದ್ದರು.

ಕಂದಗಲ್ ಹನುಮಂತರಾಯರ ಸಹವಾಸದಲ್ಲಿ ನಾಟಕ ಬರೆಯುವ ಗೀಳೂ ಇವರನ್ನಂಟಿಕೊಂಡಿತು. 'ನಿರ್ಮಲ' ಇವರು ರಚಿಸಿದ ಪ್ರಥಮ ಸಾಮಾಜಿಕ ನಾಟಕ. ಇದನ್ನು ಗೋಕಾಕಿನ ಶ್ರೀ ಶಾರದಾ ಸಂಗೀತ ನಾಟಕ ಕಂಪನಿ ಸಾದರಪಡಿಸಿತು.

ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯ ಸಂಘವೂ ದುರ್ಗಾದಾಸ ವಿರಚಿತ ಇನ್ನಿತರ ನಾಟಕಗಳನ್ನು ಸಾದರಪಡಿಸಿದೆ. ಇವರು ಬರೆದ 5–6 ನಾಟಕಗಳು ಪ್ರಕಟಗೊಂಡಿವೆ. ಹೀಗೆ ನಟರಾಗಿ ನಾಟಕಕಾರರಾಗಿ ನಮ್ಮ ವೃತ್ತಿ ರಂಗಭೂಮಿಯ ಪ್ರಗತಿಗೆ ಡಿ. ದುರ್ಗಾದಾಸರ ಸೇವೆ ಅಪ್ರತಿಮವಾದುದು.

1980ನೇ ಸಾಲಿನ ಪ್ರಶಸ್ತಿಯನ್ನು ಇವರಿಗೆ ನೀಡಿ ಸನ್ಮಾನಿಸುವ ಭಾಗ್ಯ ಕರ್ನಾಟಕ ನಾಟಕ ಅಕಾಡೆಮಿಗೆ ದೊರಕಿದೆ.



## 1981ರ ಪ್ರಶಸ್ತಿ ವಿಜೇತರು



### ಭರತೇಶ (ಡಾ|| ಜಿ.ಎ. ರೆಡ್ಡಿ)

'ಭರತೇಶ' ಎನ್ನುವ ಹೆಸರಿನಿಂದ ಪ್ರಸಿದ್ಧರಾದ ಜಿ. ಅಶ್ವತ್ಥನಾರಾಯಣ ರೆಡ್ಡಿಯವರು 1934ರಲ್ಲಿ ಚಿತ್ರದುರ್ಗದಲ್ಲಿ ಜನಿಸಿದರು. ಇವರು ಮೈಸೂರು ವಿಶ್ವವಿದ್ಯಾನಿಲಯದ ಆಂಗ್ಲ ಸಾಹಿತ್ಯದ ಎಂ.ಎ. ಪದವೀಧರರು. ಎಂ.ಎ. ಪದವಿ ಪಡೆದುಕೊಂಡ ನಂತರ ಭರತೇಶರು ದಾವಣಗೆರೆಯ ಸರ್ಕಾರೀ ಪ್ರಥಮ ದರ್ಜೆ ಕಾಲೇಜಿನಲ್ಲಿ, ಚಿತ್ರದುರ್ಗದ ಸರ್ಕಾರೀ ಪ್ರಥಮ ದರ್ಜೆ ಕಾಲೇಜಿನಲ್ಲಿ, ಬಿಜಾಪುರದ ಖಾಸಗೀ ಕಾಲೇಜಿನಲ್ಲಿ, ಹಾಸನದ ಪ್ರಥಮ ದರ್ಜೆ ಕಾಲೇಜಿನಲ್ಲಿ ಮತ್ತು ಮಲೆನಾಡು ಇಂಜಿನಿಯರಿಂಗ್ ಕಾಲೇಜಿನಲ್ಲಿ 1970ರವರೆಗೆ ಅಧ್ಯಾಪಕರಾಗಿ ಕೆಲಸ ಮಾಡಿದರು.

ಅನಂತರ ಮೈಸೂರು ವಿಶ್ವವಿದ್ಯಾನಿಲಯದ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಅಧ್ಯಾಪಕರಾಗಿ ನೇಮಕಗೊಂಡು ಮೈಸೂರಿನ ಲಲಿತಕಲಾ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದರು. 1979ರಲ್ಲಿ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯ ಇಂಗ್ಲೀಷ್ ವಿಭಾಗದ ರೀಡರ್ ಮತ್ತು ವಿಭಾಗ ಮುಖ್ಯಸ್ಥರಾಗಿ ನೇಮಕಗೊಂಡು ಕಾರ್ಯ ನಿರ್ವಹಿಸುತ್ತಿದ್ದ ಭರತೇಶರು ಸಮ್ಮೇಳನವೊಂದರಲ್ಲಿ ಪಾಲ್ಗೊಳ್ಳಲು ಅಮೆರಿಕದ ಹ್ಯೂಸ್ಟನ್ ನಗರಕ್ಕೆ ಹೋಗಿದ್ದಾಗ 1981 ಸೆಪ್ಟೆಂಬರ್ 22ರಂದು ಹೃದಯಾಘಾತದಿಂದ ನಿಧನರಾದರು.

ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳೆರಡರಲ್ಲೂ ಭರತೇಶರು ಕೃತಿ ರಚನೆ ಮಾಡಿದ್ದಾರೆ. ಭರತೇಶರು 'ಶ್ರೀರಂಗರಾಯ', 'ತ್ರಿಶಂಕು', 'ಜೋಕೆ ತಪ್ಪಿದ ಬಳಿಕ', 'ಎಲ್ಲಾರು ಮಾಡುವುದು', 'ಮಹಾ ಸನ್ನಿಧಾನ', ನಾನಲ್ಲದ ನಾನು' ಎನ್ನುವ ನಾಟಕಗಳನ್ನೂ 'ಹೊಯಿಸಳ ವೀರಬಲ್ಲಾಳ', 'ಕಂದಕ' ಎನ್ನುವ ಕಾದಂಬರಿಗಳನ್ನೂ 'ಶ್ರೀ ಪುರಂದರದಾಸರು', 'ಪುರಂದರದಾಸರು', 'ಮಾತಿನ ಬಳ್ಳಿ', 'ಸತ್ಯಾಗ್ರಹಿ', 'ಗಾಂಧೀಜಿ' ಎನ್ನುವ ಗದ್ಯ ಕೃತಿಗಳನ್ನೂ ಬರೆದಿದ್ದಾರೆ. 'ಇಂಗ್ಲಿಷ್ ಸಾಹಿತ್ಯ ಚಿತ್ರಗಳು', 'ಒಡಿಸ್ಸಿ', 'ಇಲಿಯಡ್', 'ತೆಲುಗು ಏಕಾಂತ ನಾಟಕಗಳು' (ಶ್ರೀಮತಿ ಲಕ್ಷ್ಮಿ ಬಿ.ಎ. ರೆಡ್ಡಿ ಅವರೊಂದಿಗೆ) ಇವು ಭರತೇಶರು ಕನ್ನಡಕ್ಕೆ ಭಾಷಾಂತರಿಸಿದ ಪುಸ್ತಕಗಳು.

'ಲಿಟರೇಚರ್ ಅಂಡ್ ಪಾಪ್ಯುಲರ್ ಕಲ್ಚರ್.' 'ಇಂಡಿಯನ್ ರೈಟಿಂಗ್ ಇನ್ ಇಂಗ್ಲಿಷ್ ಅಂಡ್ ಇಟ್ಸ್ ಆಡಿಯನ್ಸ್'– ಎನ್ನುವುವು ಇವರ ಇಂಗ್ಲಿಷ್ ಪುಸ್ತಕಗಳು. ಇವುಗಳ ಪೈಕಿ 'ತ್ರಿಶಂಕು' ನಾಟಕಕ್ಕೆ ಮತ್ತು 'ಒಡಿಸ್ಸಿ' ಅನುವಾದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹಾಗೂ 'ಮಹಾಸನ್ನಿಧಾನ' ನಾಟಕಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರಕಿದೆ. 'ಅಶ್ರುಧಾರೆ' ಎನ್ನುವ ಕಾದಂಬರಿ ಅಚ್ಚಿನಲ್ಲಿದೆ. 'ಇಲ್ಲಿ ಸಲ್ಲುವವರು' ಎನ್ನುವ ನಾಟಕ ಅಚ್ಚಾಗಬೇಕಾಗಿದೆ.

ಅತಿ ಚಿಕ್ಕ ವಯಸ್ಸಿನಲ್ಲಿಯೇ ಶ್ರೀಯುತರಿಂದ ರಂಗಭೂಮಿಯು ಇನ್ನೂ ಹೆಚ್ಚಿನ ಸೇವೆಯನ್ನು ನಿರೀಕ್ಷಿಸುತ್ತಿದ್ದ ತರುಣದಲ್ಲೇ ನಮ್ಮನ್ನು ಅಗಲಿ ಅಪಾರ ನಷ್ಟಕ್ಕೀಡು ಮಾಡಿದ, ನಾಟಕ ಅಕಾಡೆಮಿ ಸದಸ್ಯರೂ ಆಗಿದ್ದ ಶ್ರೀ ಭರತೇಶ (ಜಿ.ಎ. ರೆಡ್ಡಿ) ಅವರಿಂದ ರಂಗಭೂಮಿಗೆ ಸಂದ ಮಹತ್ವಪೂರ್ಣ ಸೇವೆಗಾಗಿ ಕರ್ನಾಟಕ ರಾಜ್ಯ ನಾಟಕ ಅಕಾಡೆಮಿಯು ತುಂಬು ಗೌರವದಿಂದ 1981ನೇ ಸಾಲಿನ ಮರಣೋತ್ತರ ಪ್ರಶಸ್ತಿಯನ್ನು ನೀಡುತ್ತಲಿದೆ.



## ಕಾಸೀಬಾಯಿ ನಾಲತ್ತವಾಡ

ಬಿಜಾಪುರ ಜಿಲ್ಲೆಯ ನಾಲತ್ತವಾಡ ಎಂಬ ಹಳ್ಳಿಯಲ್ಲಿ 1910ರಲ್ಲಿ ಜನನ. ಚಿಕ್ಕಂದಿನಿಂದಲೂ ನಾಟಕ ನೋಡುವ ಹುಚ್ಚು, ಈ ನಾಟಕದ ಗೀಳಿನ ಪರಿಣಾಮ–ತಾನೂ ಯಾಕೆ ನಾಟಕಗಳಲ್ಲಿ ಅಭಿನಯಿಸಬಾರದು ಎಂಬ ಹಂಬಲ. 15ನೆಯ ಹರಯದಲ್ಲೇ ಗದುಗಿನಲ್ಲಿ 'ಹೊಂಬಳ ನಾಟ್ಯ ಸಂಘ' ಎಂಬ ನಾಟಕ ಸಂಸ್ಥೆಯ ನಾಟಕಗಳನ್ನು ನೋಡಿ ಆಕರ್ಷಿತರಾದರು.

ಮಾತೋಶ್ರೀ ಭೀಮಾಬಾಯಿಯವರ ಒಟ್ಟಿಗೆ, ಹೊಂಬಳ ನಾಟ್ಯ ಸಂಘದಲ್ಲಿ ಸಂಗೀತ ನಿರ್ದೇಶಕರಾಗಿದ್ದ ಅಥಣೀ ಭೀಮರಾಯರ ಪರಿಚಯ ಪ್ರೇರಣೆ ಶ್ರೀಮತಿ ಕಾಸೀಬಾಯಿಯವರು ರಂಗಭೂಮಿಗೆ ಪಾದಾರ್ಪಣ ಮಾಡಲು ಕಾರಣವಾಯಿತು. ರಂಗಭೂಮಿಯ ಕಲಾವಿದರಿಗೆ ಸಮಾಜದಲ್ಲಿ ಸರಿಸಮಾನ ಸ್ಥಾನಮಾನಗಳಿಲ್ಲದ ಕಾಲದಲ್ಲಿ ಪುರುಷರೇ ಸ್ತ್ರೀ ಪಾತ್ರ ವಹಿಸುತ್ತಿದ್ದ ಕಾಲದಲ್ಲಿ ನಟಿಯಾಗಿ ರಂಗಭೂಮಿಯನ್ನು ಪ್ರವೇಶಿಸಲು ತಮ್ಮಲ್ಲಿ ರಂಗಭೂಮಿಯ ಬಗೆಗೆ ಹುದುಗಿದ್ದ ಅದಮ್ಯ ಆಕಾಂಕ್ಷೇ ಕಾರಣವಾಯಿತು.

ಪ್ರಾರಂಭಕ್ಕೆ ಸಣ್ಣ ಪುಟ್ಟ ಪಾತ್ರಗಳನ್ನೇ ವಹಿಸುತ್ತಿದ್ದ ಶ್ರೀಮತಿ ಕಾಸೀಬಾಯಿಯವರಿಗೆ ತಮ್ಮ ದಿಟ್ಟತನ, ಅಭಿನಯ ಚಾತುರ್ಯ, ಮೋಹಕ ಕಂಠಶ್ರೀಯ ಸಂಗೀತ ಸಂಪತ್ತಿನಿಂದ ಬಹುಬೇಗ ನಾಯಕಿಯ ಪಾತ್ರಗಳು ದೊರಕಿದವು. ಇವರ ಪಾತ್ರಗಳು ಅಪಾರ ಜನಮೆಚ್ಚುಗೆ ಗಳಿಸಿ, ನಾಗರೀಕರೂ ಅನೇಕ ಸಂಘ–ಸಂಸ್ಥೆಗಳೂ ಸನ್ಮಾನ ಸಮಾರಂಭಗಳನ್ನು ಏರ್ಪಡಿಸಿ ಗೌರವಿಸಿದ್ದಾರೆ. ಇವರು ಪಡೆದ ಬಿರುದುಗಳಲ್ಲಿ ಕನ್ನಡದ ಖ್ಯಾತ ಸಾಹಿತಿಗಳಾಗಿದ್ದ ದಿವಂಗತ ಅನಕೃ ರವರು ನೀಡಿದ "ನಾಟ್ಯಕಲಾನಿಪುಣೆ" ಸಾರ್ವಜನಿಕ ಸಮಾರಂಭ ಒಂದರಲ್ಲಿ ಸನ್ಮಾನಿಸಿ ಜನತೆ ನೀಡಿದ 'ಅಭಿನಯ ವಿಶಾರದೆ' ಮುಖ್ಯವಾದವುಗಳು.

ರಂಗಭೂಮಿಯಲ್ಲಿ ತಮ್ಮ ಈ ಉತ್ಕರ್ಷಕ್ಕೆ ಕಾರಣರಾದ ಶ್ರೀ ಅಥಣಿ ಭೀಮರಾಯರು, ಶ್ರೀ ಕರ್ನಾಟಕ ಗಂಧರ್ವ ಗಂಗಾಧರಸ್ವಾಮಿಗಳು ಶ್ರೀ ಹಮ್ಮಿಗಿ ನೀಲಕಂಠಪ್ಪನವರೇ ಆದಿಯಾಗಿ ಅವರ ಗುರುಗಳನ್ನು ತುಂಬು ಹೃದಯದಿಂದ ನೆನೆಯುತ್ತಾರೆ.

ಹೊಂಬಾಳ ನಾಟ್ಯ ಸಂಘ, ಹುಕ್ಕೇರಿ ಬಸವಪ್ರಭು ಕಂಪೆನಿ, ಶ್ರೀಮತಿ ಗಂಗೂಬಾಯಿ ಕಂಪೆನಿ, ಅಥಣೀ ಭೀಮರಾಯರ ಭಾಗ್ಯೋದಯ ಕಂಪೆನಿ (ಸ್ವಂತ ಕಂಪೆನಿ) ಹಂದಿಗನೂರು ಸಿದ್ಧರಾಮಪ್ಪನವರ ಕಂಪೆನಿ, ಇತ್ಯಾದಿ ಅನೇಕ ಸಂಸ್ಥೆಗಳಲ್ಲಿ ಸುಮಾರು 30 ವರ್ಷಕ್ಕೂ ಮಿಕ್ಕಿ ಸೇವೆ ಸಲ್ಲಿಸಿರುವ ಶ್ರೀಮತಿ ಕಾಶೀಬಾಯಿ ನಾಲತ್ತವಾಡರವರು ತಮ್ಮ ಬಾಳಸಂಗಾತಿಯಾಗಿದ್ದು ರಂಗಭೂಮಿಯಲ್ಲಿ ಮಾರ್ಗದರ್ಶನ ನೀಡುತ್ತಿದ್ದ ಶ್ರೀ ಅಥಣೀ ಭೀಮರಾಯರನ್ನು ತುಂಬು ಹೃದಯದ ಭಕ್ತಿ ಭಾವದಿಂದ ಸ್ಮರಿಸುತ್ತಾರೆ.

ಶ್ರೀಮತಿಯವರಿಂದ ರಂಗಭೂಮಿಗೆ ಸಂದ ಅಪ್ರೋಘ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು ತನ್ನ 1981ನೇ ಸಾಲಿನ ಕರ್ನಾಟಕ ರಾಜ್ಯ ನಾಟಕ ಅಕಾಡೆಮಿಯ ಪ್ರಶಸ್ತಿಯನ್ನು ನೀಡಿ ತನ್ನ ಗೌರವವನ್ನು ವ್ಯಕ್ತಪಡಿಸುತ್ತದೆ.





## ತಿಮ್ಮಪ್ಪಾಚಾರ್ಯ

ಸೂತ್ರದ ಗೊಂಬೆ ಅಥವಾ ಪುತ್ಥಳಿಗೊಂಬೆಯಾಟದಲ್ಲಿ ಪ್ರಸಿದ್ಧಿ ಪಡೆದ ಒಬ್ಬ ಜನಪದ ಕಲಾವಿದರು. ಇವರ ಹುಟ್ಟೂರು ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕಿನ ನೆಲ್ಲಿಗೆರೆ ಎಂಬ ಗ್ರಾಮ. ಪ್ರಾಥಮಿಕ ಶಾಲೆಯವರೆಗೆ ವಿದ್ಯಾಭ್ಯಾಸ ಮಾಡಿರುವ (ಮನೆತನದ ವೃತ್ತಿ ಪೌರೋಹಿತ್ಯವಾದರೂ) ತಿಮ್ಮಪ್ಪಾಚಾರ್ಯರಿಗೆ ಸೂತ್ರದ ಗೊಂಬೆಯಾಟವನ್ನು ಪ್ರದರ್ಶಿಸುವ ಹವ್ಯಾಸ. ಈ ಕಲೆ ಕೂಡ ವಂಶಪರಂಪರೆಯಿಂದ ಇವರಿಗೆ ಬಂದುದಾಗಿದೆ. ಕಮಲಾಚಾರ್ಯ ಎಂಬ ತಮ್ಮ ಬಂಧುಗಳಿಂದ ರಾಗಜ್ಞಾನವನ್ನೂ, ತಮ್ಮ ತಂದೆ ಮಾಯಾಚಾರ್ಯರಿಂದ ಮೃದಂಗ ಬಾರಿಸುವುದು ಮತ್ತು ಹಾಡುಗಾರಿಕೆಯನ್ನೂ ಕಲಿತರು. ತಮ್ಮ ಇಪ್ಪತ್ತನೆಯ ವಯಸ್ಸಿನಿಂದಲೇ ಗೊಂಬೆಯಾಟವನ್ನು ಪ್ರದರ್ಶಿಸಲು ಪ್ರಾರಂಭಿಸಿದ ಶ್ರೀಯುತರು ಇದುವರೆಗೆ ಸುಮಾರು ನಾಲ್ಕುಸಾವಿರ ಪ್ರಯೋಗಗಳನ್ನು ನೀಡಿದ್ದಾರೆ ಎಂದರೆ ಯಾರಾದರೂ ಆಶ್ಚರ್ಯಗೊಳ್ಳಬಹುದು. ಬಯಲಾಟ ಯಕ್ಷಗಾನಗಳಂತೆಯೇ ಸೂತ್ರದ ಗೊಂಬೆಯಾಟವನ್ನು ಹಳ್ಳಿಯಿಂದ ಪಟ್ಟಣದವರೆಗೆ ತಂದು ಕರ್ನಾಟಕದಲ್ಲಿ ಜನಪ್ರಿಯಗೊಳಿಸಿದ ಕೀರ್ತಿ ಇವರದು.

ಗೊಂಬೆಯಾಟಕ್ಕೆ ಬೇಕಾದ ಗೊಂಬೆಗಳನ್ನು ತಾವೇ ಮಾಡಿಕೊಳ್ಳುತ್ತಾರೆ. ಪ್ರಯೋಗಗಳಲ್ಲಿ ಭಾಗಿಯಾಗುವ ಇವರದೇ ಆದ ಹತ್ತು ಹದಿನೈದು ಜನರ ತಂಡವಿದೆ. ಪ್ರದರ್ಶನದಲ್ಲಿ ಅವರ ಇಡೀ ಕುಟುಂಬವೇ ಪಾಲ್ಗೊಳ್ಳುವುದು ಮತ್ತೊಂದು ವಿಶೇಷ. ಕಥೆಗೆ ಬೇಕಾದ ಹಿಮ್ಮೇಳ, ಹಾಡುಗಳ ವ್ಯವಸ್ಥೆಯನ್ನು ತಾವೇ ಮಾಡಿಕೊಂಡಿದ್ದಾರೆ. ಕೃಷ್ಣಾರ್ಜುನ ಕಾಳಗ, ಭೀಮದುರ್ಯೋಧನರ ಗಧಾಯುದ್ಧ, ಕಂಸವಧೆ, ನಾಗಾರ್ಜುನ ವಿಜಯ, ರಾಮಾಯಣ, ಮಹಾಭಾರತ, ಭಕ್ತ ಮಾರ್ಕಂಡೇಯ, ಜಟಾಯು ಮೋಕ್ಷ, ವಾಲೀವಧೆ, ಇಂದ್ರಜಿತುವಧೆ, ಲವಕುಶ ಕಾಳಗ, ದುಶ್ಶಾಸನ ವಧೆ, ಕರಿಭಂಟನ ಕಥೆ – ಇವು ಇವರು ಮುಖ್ಯವಾಗಿ ಸೂತ್ರದ ಗೊಂಬೆಯಾಟದಲ್ಲಿ ಪ್ರದರ್ಶಿಸುವ ಕಥಾ ಪ್ರಸಂಗಗಳು. ಇಡೀ ರಾತ್ರಿ ಆಟವನ್ನು ನಡೆಸುವುದೂ ಉಂಟು. ದಕ್ಷಿಣ ಕರ್ನಾಟಕದ ಹಳ್ಳಿ ಪಟ್ಟಣಗಳಲ್ಲೆಲ್ಲಾ ಪ್ರದರ್ಶನಗಳನ್ನು ನೀಡಿರುವುದೇ ಅಲ್ಲದೆ ಬೆಂಗಳೂರು, ಮೈಸೂರು, ಮತ್ತು ಮಂಗಳೂರು ಆಕಾಶವಾಣಿಗಳಲ್ಲಿ ತಮ್ಮ ಕಾರ್ಯಕ್ರಮಗಳನ್ನು ಕೊಟ್ಟಿದ್ದಾರೆ. ಮೈಸೂರು ದಸರಾದಲ್ಲಿ ಮೇಳ ನಡೆಸಿದ್ದಾರೆ. ಇತ್ತೀಚೆಗೆ ನಡೆದ ಕರ್ನಾಟಕ ಪ್ರವಾಸೋದ್ಯಮ ಸಪ್ತಾಹ ಸಂದರ್ಭದಲ್ಲಿ ಕೂಡ ಇವರು ನೀಡಿದ ಸೂತ್ರದ ಗೊಂಬೆಯಾಟದ ಪ್ರದರ್ಶನ ಜನರ ಮೆಚ್ಚುಗೆಯನ್ನು ಗಳಿಸಿತು. ಸೂತ್ರದ ಗೊಂಬೆಯಾಟವಲ್ಲದೆ ಮೂಡಲಪಾಯ ಯಕ್ಷಗಾನದಲ್ಲಿ ಕೂಡ ಇವರಿಗೆ ಆಸಕ್ತಿ ಮತ್ತು ಪರಿಶ್ರಮಗಳಿವೆ. ಯಕ್ಷಗಾನವನ್ನು ಕಲಿಸುವುದಲ್ಲದೆ ಸ್ವತಃ ತಾವೂ ಅದರಲ್ಲಿ ಭಾಗವಹಿಸುತ್ತಾರೆ. 1979ರಲ್ಲಿ ಬೆಂಗಳೂರಿನ ಗಾಜಿನ ಮನೆಯಲ್ಲಿ ಜರುಗಿದ ಕರ್ನಾಟಕ ರಾಜ್ಯ ವಿಶ್ವ ಸಮ್ಮೇಳನದಲ್ಲಿ ಇವರ ಕಾರ್ಯಕ್ರಮವನ್ನು ಏರ್ಪಡಿಸಿ ಗೌರವಿಸಲಾಯಿತು. ಅದೇ ವರ್ಷ ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಜರುಗಿದ ಮಕ್ಕಳಮೇಳದ ಸಂದರ್ಭದಲ್ಲಿ ತಿಮ್ಮಪ್ಪಾಚಾರ್ಯರ ಸೂತ್ರದ ಗೊಂಬೆಯಾಟದ ಪ್ರದರ್ಶನವಿತ್ತು. ಶ್ರೀಯುತರಿಗೆ ಆದಾಯ ಸಾಕಷ್ಟಿಲ್ಲದಿದ್ದರೂ ಈ ಕಲೆಯ ಬಗೆಗಿನ ಅಭಿಮಾನ ಮತ್ತು ಛಲದಿಂದ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. "ಶ್ರೀ ಕಾಳಿಕಾಂಬ ಪ್ರಸನ್ನ ಪುತ್ಥಳಿ ಬೊಂಬೆ ಪ್ರದರ್ಶನ ಯುವಜನ ಯಕ್ಷಗಾನ ಮಂಡಳಿ" ಎಂಬುದು ಇವರ ತಂಡದ ಹೆಸರು. "ನಮ್ಮಂಥ ಕಲಾವಿದರಿಗೆ ದುಡ್ಡಿನ ಸಮಸ್ಯೆಯಲ್ಲ ಈಗಿನ ಸಿನಿಮಾ ಕಾಲದಲ್ಲಿ ನಮ್ಮ ಪ್ರದರ್ಶನಗಳನ್ನು ಯಾರೂ ನೋಡಿ ಪ್ರೋತ್ಸಾಹಿಸುತ್ತಿಲ್ಲ" ಎಂಬುದು ತಿಮ್ಮಪ್ಪಾಚಾರ್ಯರ ಕೊರಗು. ಈ ಕಲೆಗೆ ನಾವು ಏನು ಸಹಾಯ ಮಾಡಬಹುದು ಎಂದು ಕೇಳಿದರೆ ಪ್ರದರ್ಶನಕ್ಕೆ ಅವಕಾಶ ಮಾಡಿಕೊಟ್ಟು ನೀವೂ ನೋಡಿ ಸಂತೋಷಪಡಿ ನಮಗೆ ಅಷ್ಟೇ ಸಾಕು" ಎಂದು ಮಾತು ಮುಗಿಸುತ್ತಾರೆ. ನಿಸ್ವಾರ್ಥ ಸೇವೆಯಿಂದ, ಆಧುನಿಕ ಸೌಲಭ್ಯಗಳಿಂದ ಅತಿ ದೂರವಿರುವ ಹಳ್ಳಿಯೊಂದರಲ್ಲಿ ಜಾನಪದ ಕಲೆಯನ್ನು ಜೀವಂತವಾಗಿಡಲು ಶ್ರಮಿಸುತ್ತಿರುವ ಶ್ರೀ ತಿಮ್ಮಪ್ಪಾಚಾರ್ಯರವರಿಗೆ ಅವರ ಜಾನಪದ ಕಲೆಯ ಬಗೆಗಿನ ಆಸ್ಥೆಯ ಬಗ್ಗೆ ನಾಟಕ ಅಕಾಡೆಮಿಯು ಶ್ರೀಯುತರನ್ನು ಅಭಿನಂದಿಸುತ್ತಾ 1981ನೇ ಸಾಲಿನ ಕರ್ನಾಟಕ ರಾಜ್ಯ ನಾಟಕ ಅಕಾಡೆಮಿಯ ಪ್ರಶಸ್ತಿಯನ್ನು ನೀಡುತ್ತಲಿದೆ.



## ಪ್ರೊ॥ ಆರ್. ಗುರುರಾಜರಾವ್

1912ರ ನವೆಂಬರ್ 19ರಂದು ಜನಿಸಿದ ಗುರುರಾಜರಾವ್ ಅವರು ವೃತ್ತಿಯಿಂದ ಇಂಗ್ಲೀಷ್ ಅಧ್ಯಾಪಕರಾದರೂ ನಾಟಕ ಕಲಾವಿದರಾಗಿ, ನಿರ್ದೇಶಕರಾಗಿ ಹೆಚ್ಚು ಪ್ರಸಿದ್ಧಿಯನ್ನು ಗಳಿಸಿದ್ದಾರೆ. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ವ್ಯಾಸಂಗ ಮಾಡಿದ ಇವರು 1934ರಲ್ಲಿ ಬಿ.ಎ. ಆನರ್ಸ್ ಪದವಿಯನ್ನೂ, 1943ರಲ್ಲಿ ಎಂ.ಎ. ಪದವಿಯನ್ನೂ ಪಡೆದುಕೊಂಡರು. 1935ರಿಂದೀಚೆಗೆ ಮೈಸೂರಿನ ಶಾರದಾ ವಿಲಾಸ ಪ್ರೌಢಶಾಲೆಯಲ್ಲಿ ಅಧ್ಯಾಪಕರಾಗಿ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿ–ಉಪ ಪ್ರಾಧ್ಯಾಪಕರಾಗಿ–ಪ್ರಾಧ್ಯಾಪಕರಾಗಿ, ಯುವರಾಜಾ ಕಾಲೇಜಿನಲ್ಲಿ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ 1973ರಲ್ಲಿ ನಿವೃತ್ತರಾದರೂ ಮತ್ತೆ ವಿಶ್ವವಿದ್ಯಾನಿಲಯಗಳ ಧನ ಸಹಾಯ ಆಯೋಗದಿಂದ ಸಂದರ್ಶಕ ಪ್ರಾಧ್ಯಾಪಕರಾಗಿ ನೇಮಕಗೊಂಡರು. ಮೈಸೂರು ವಿಶ್ವವಿದ್ಯಾನಿಲಯದ ಲಲಿತ ಕಲೆಗಳ ಕಾಲೇಜಿನ ನಾಟಕ ವಿಭಾಗದಲ್ಲಿ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸಿದರು.

1932ರಲ್ಲಿ ರಂಗಪ್ರವೇಶ ಮಾಡಿದ ಇವರು ಕೈಲಾಸಂ, ಕುವೆಂಪು, ಎ.ಎನ್. ಮೂರ್ತಿರಾವ್, ನಾ. ಕಸ್ತೂರಿ, ಮುಂತಾದವರ ನಾಟಕಗಳಲ್ಲಿ ಅಭಿನಯಿಸಿದರು. ಬೆಂಗಳೂರಿನ ಹಲವಾರು ಹವ್ಯಾಸೀ ತಂಡದ ಚಟುವಟಿಕೆಗಳಲ್ಲಿ ಸಕ್ರಿಯ ಪಾತ್ರ ವಹಿಸಿ ತಮ್ಮ ಪ್ರತಿಭೆಯನ್ನು ಪ್ರಕಾಶಪಡಿಸತೊಡಗಿದರು. ಪರ್ವತವಾಣಿಯವರ 'ಬಹದ್ದೂರು ಗಂಡ', ಮೂರ್ತಿರಾವ್ ಅವರ 'ಆಷಾಢಭೂತಿ', ಶ್ರೀರಂಗರ 'ಜರಾಸಂಧಿ', ನಾಟಕಗಳ ವಿವಿಧ ಪಾತ್ರಗಳಲ್ಲಿ ಕಾಣಿಸಿಕೊಂಡು ಸ್ಮರಣೀಯ ಅಭಿನಯ ನೀಡಿದರು. ಮಹಾರಾಜಾ ಕಾಲೇಜಿನಲ್ಲಿ ವಿದ್ಯಾರ್ಥಿ ನಾಟಕ ಸಂಘವನ್ನು ಸ್ಥಾಪಿಸಿ ಹಲವಾರು ಯಶಸ್ವೀ ಪ್ರಯೋಗಗಳನ್ನು ನಿರ್ದೇಶಿಸಿದರು. ಹೆಸರಾಂತ ನಟ–ನಿರ್ದೇಶಕ ಸಂಪತ್ ಅವರೊಡನೆ 'ಸ್ಟಾವಸ್ ಲಿಟ್ಲ್ ಥಿಯೇಟರ್' ಲಾಂಛನದಲ್ಲಿ ಮೋಲಿಯೇರ್, ಆಪ್ಲೆಡ್ಯೂಕ್ಸ್, 'ಬರ್ನಾರ್ಡ್ ಷಾ, ಆಸ್ಕರ್ ವೈಲ್ಡ್ ಮುಂತಾದವರ ಇಂಗ್ಲಿಷ್ ನಾಟಕಗಳನ್ನು ಪ್ರಯೋಗಿಸಿ, ತಾವೂ ಅಭಿನಯಿಸಿ ಪ್ರೇಕ್ಷಕರ ಮೆಚ್ಚುಗೆ ಗಳಿಸಿದರು. 'ಸಮತೆಂತೋ' ಹವ್ಯಾಸೀ ತಂಡದೊಡನೆ ನಿಕಟ ಸಂಬಂಧವಿರಿಸಿಕೊಂಡು ಅವರ ಹಲವಾರು ನಾಟಕಗಳಲ್ಲಿ ನಟರಾಗಿ, ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದರು. 1972ರಲ್ಲಿ 'ಸಮತೆಂತೋ' ತಂಡ ಸನ್ಮಾನ ಸಮಾರಂಭವೊಂದನ್ನು ಏರ್ಪಡಿಸಿ ಜಿ.ಬಿ. ಜೋಷಿ, ಪರ್ವತವಾಣಿಯವರೊಂದಿಗೆ ಗುರುರಾಜಾರಾಯರನ್ನೂ ಗೌರವಿಸಿತು. ಕನ್ನಡದ ಪ್ರಮುಖ ನಾಟಕಕಾರರ ಹಲವಾರು ನಾಟಕಗಳನ್ನು ನಿರ್ದೇಶಿಸಿರುವ ಗುರುರಾಜಾರಾಯರಿಗೆ 'ನಟನ' ಕಲಾವಿದರು ಪ್ರಯೋಗಿಸಿದ ಬಾದಲ್ ಸರ್ಕಾರ್ ಅವರ 'ಬಾಕಿ ಇತಿಹಾಸ' ನಾಟಕದ ನಿರ್ದೇಶನ ಹೆಚ್ಚಿನ ತೃಪ್ತಿಯನ್ನು ತಂದುಕೊಟ್ಟಿತು.

ಎಪ್ಪತ್ತನೆಯ ವರ್ಷಕ್ಕೆ ಕಾಲಿರಿಸಿದ್ದರೂ ರಂಗಭೂಮಿಯ ಬಗೆಗೆ ಪ್ರಬಲವಾದ ಆಸಕ್ತಿಯಿರಿಸಿಕೊಂಡಿರುವ ಗುರುರಾಜರಾವ್ ಅವರು ಆಸಕ್ತ ಮಿತ್ರರೊಬ್ಬರ ಸಹಕಾರದಿಂದ ಇನ್ನೂ ಹಲವಾರು ಪ್ರಯೋಗಗಳನ್ನು ನಡೆಸಬೇಕೆಂದು ಹಂಬಲಿಸುತ್ತಿದ್ದಾರೆ.

ಹವ್ಯಾಸಿ ಕಲಾವಿದರಲ್ಲಿ ಹಿರಿಯರಾಗಿರುವ ನಾಟಕ ಚಳುವಳಿಗೆ ಹೊಸ ತಿರುವನ್ನು ಕೊಟ್ಟು ಹವ್ಯಾಸಿ ನಾಟಕ ರಂಗವನ್ನು ಉಳಿಸಿ ಬೆಳೆಸಿದ ತುಂಬು ಜೀವನದ ಶ್ರೀಮಂತ ಹೃದಯದ ಶ್ರೀಯುತ ಗುರುರಾಜರಾವ್‌ರವರಿಗೆ ಅವರ ರಂಗಭೂಮಿಯ ಸೇವೆಯ ಕುರುಹಾಗಿ ಕರ್ನಾಟಕ ನಾಟಕ ಅಕಾಡೆಮಿ ತನ್ನ 1981ನೇ ಸಾಲಿನ ಕರ್ನಾಟಕ ರಾಜ್ಯ ನಾಟಕ ಅಕಾಡೆಮಿಯ ಪ್ರಶಸ್ತಿ ನೀಡಿ ಗೌರವಿಸುತ್ತಲಿದೆ.

## 1982ರ ಪ್ರಶಸ್ತಿ ವಿಜೇತರು



### ಜಿ.ಬಿ. ಜೋಶಿ (ಜಡಭರತ)

ಧಾರವಾಡದ "ಮನೋಹರ ಗ್ರಂಥ ಮಾಲೆ"ಯ ಹೆಸರು ಬಂದಾಕ್ಷಣ ಶ್ರೀ ಜಿ.ಬಿ. ಜೋಶಿ (ಗೋವಿಂದ ಭೀಮಾಚಾರ್ಯ ಜೋಶಿ)ಯವರು ಕಣ್ಮುಂದೆ ನಿಲ್ಲುತ್ತಾರೆ. ಪತ್ರಿಕಾವ್ಯವಸಾಯಿಗಳಾಗಿ, ಪ್ರಕಾಶಕರಾಗಿ, ಲೇಖಕರಾಗಿ, ನಾಟಕಕಾರರಾಗಿ – ನಟರಾಗಿ, ನಿರ್ದೇಶಕರಾಗಿ ಸಂಘಟಕರಾಗಿ, ದುಡಿಮೆಯ ಹತ್ತು ಕೈಗಳನ್ನು ಹೊಂದಿದ ಜಿ.ಬಿ. 'ದಶಭುಜ'ರಾಗಿದ್ದಾರೆ. ಜುಲೈ 1904ರಲ್ಲಿ ಧಾರವಾಡ ಜಿಲ್ಲೆಯ ಗದಗ ತಾಲ್ಲೂಕಿನ ಹೊಂಬಳದಲ್ಲಿ ಹುಟ್ಟಿದ ಜಿ.ಬಿ. ತಮ್ಮ ಊರಿನಲ್ಲೇ ಪ್ರಾಥಮಿಕ ಶಿಕ್ಷಣ ಮುಗಿಸಿ ಬಾಗಲುಕೋಟೆಯ ಬಸವೇಶ್ವರ ಹೈಸ್ಕೂಲಿನಲಿಂದ 1926ರಲ್ಲಿ ಮೆಟ್ರಿಕ್ ಪರೀಕ್ಷೆಯನ್ನು ಪಾಸು ಮಾಡಿ ಧಾರವಾಡದ ಕರ್ನಾಟಕ ಕಾಲೇಜನ್ನು ಪ್ರವೇಶಿಸಿ 'ಇಂಟರ್' ವರೆಗೆ ಶಿಕ್ಷಣ ಪಡೆದರು.

ಕಾಲೇಜಿನಿಂದ ಹೊರಬಂದ 'ಜಿ.ಬಿ.' ಗೆಳೆಯರ ಗುಂಪು ನಡೆಸುತ್ತಿದ್ದ 'ಜಯ ಕರ್ನಾಟಕ' ಮಾಸಪತ್ರಿಕೆಯಲ್ಲಿ ಕೆಸಲಕ್ಕೆ ಸೇರಿಕೊಂಡರು.

ಆಗ "ಸಾಹಿತ್ಯ ಲೋಕದ" ದಿಗ್ಗಜರ ನಿಕಟ ಸಂಪರ್ಕ. ಆ ಸಂಪರ್ಕದಿಂದ ಸಾಹಿತ್ಯದಲ್ಲಿ ಅಭಿರುಚಿ. ಹೀಗಾಗಿ 'ಜಿ.ಬಿ.' ಸ್ವಂತ ಕಾಲಮೇಲೆ ನಿಲ್ಲುವ ಸಾಹಸ ಮಾಡಿದರು. ಆ ಸಾಹಸದ ಫಲವೇ 1933 ಆಗಸ್ಟ್ 15ರಂದು "ಮನೋಹರ ಗ್ರಂಥಮಾಲೆ" ಹುಟ್ಟಿಕೊಂಡಿತು. ಈ ಗ್ರಂಥಮಾಲೆ ಇದೀಗ ತನ್ನ ಅರ್ಧ ಶತಮಾನೋತ್ಸವವನ್ನು ಆಚರಿಸಲಿದೆ. ಈ ಮಾಲೆಗೆ ಇಪ್ಪತ್ತೈದು ವರ್ಷಗಳು ತುಂಬಿದಾಗ ಮೂರು ಸಂಪುಟಗಳಲ್ಲಿ "ನಡೆದು ಬಂದ ದಾರಿ" ಪ್ರಕಟವಾಯಿತು.

ಇಂದಿನ ಜ್ಯೇಷ್ಠ-ಶ್ರೇಷ್ಠ ಸಾಹಿತಿಗಳ ಕೃತಿಗಳ ಪ್ರಕಟಣೆ. ಒಪ್ಪಂದದ ಮನೋಭಾವನೆಯನ್ನೇ ಹೊಂದಿದ್ದ 'ಜಿ.ಬಿ.' ಸಂಪಾದಕರರದ್ದುದರಿಂದ ಶ್ರೇಷ್ಠ ಕೃತಿಗಳನ್ನೇ ಈ ಮಾಲೆ ನೀಡುತ್ತ ಬಂದಿದೆ. ಹಲವು ಹೊಸ ಲೇಖಕರನ್ನು ಬೆಳಕಿಗೆ ತಂದ ಶ್ರೇಯಸ್ಸು 'ಜಿ.ಬಿ.. ಜೋಶಿ' ಅವರಿಗೆ ಸಲ್ಲಬೇಕು.

ಜಡಭರತನ ಕನಸುಗಳು: ಇದು ಜಿ.ಬಿ.ಯವರ ಒಂದು ಉತ್ತಮ ಕೃತಿ. ಮುಂದೆ "ನಾಟಕಗಳ" ಗೀಳು. 1954ರಲ್ಲಿ ಬಾಗಲಕೋಟೆಯಲ್ಲಿ ವಾಸುದೇವ ವಿನೋದಿನಿ ನಾಟ್ಯ ಸಂಸ್ಥೆಯವರನ್ನು ಬೆನ್ನಿಗೆ ಹಾಕಿಕೊಂಡು ಸಂಗೀತ ಪಾರಂಗತ ಪಂಡಿತ ಭೀಮಸೇನ ಜೋಶಿಯವರನ್ನು ರಂಗದ ಮೇಲೆ ಅಭಿನಯಕ್ಕೆ ಎಳೆದರು. '1947ರಲ್ಲಿ ಧಾರವಾಡದಲ್ಲಿ "ಕಲೋಪಾಸಕ ಮಂಡಲಿ" ಎಂಬ ಹವ್ಯಾಸಿ ತಂಡವನ್ನು ಕಟ್ಟಿ "ಭಾಗ್ಯಶ್ರೀ", "ಪರಿವರ್ತನೆ", "ಹೊಸ ಸಂಸಾರ" ನಾಟಕಗಳನ್ನು ಆಡಿಸಿದರು.

1950ರಿಂದ 1955ರವರೆಗೆ ಬೇರೆ ಬೇರೆ ನಾಟಕ ಸ್ಪರ್ಧೆಗಳಲ್ಲಿ ಭಾಗವಹಿಸಿ ಪ್ರಶಸ್ತಿಗಳಿಂದ ಜಿ.ಬಿ. ಮುಂಬೈಯ ಸ್ಪರ್ಧೆಯಲ್ಲಿ ಹೀಲ್ಡು ಗಿಟ್ಟಿಸಿದರು.

ನಾಟಕವಾಡುತ್ತಿದ್ದ 'ಜಿ.ಬಿ.' ನಾಟಕ ಬರೆಯಲು ಪ್ರಾರಂಭಿಸಿದರು. ತತ್ಪರಿಣಾಮವಾಗಿ "ಮೂಕಬಲಿ", "ಆ ಊರು ಈ ಊರು", 'ಕದಡಿದ ನೀರು", "ಸತ್ತವರ ನೆರಳು", "ನಾನೇ ಬಿಜ್ಜಳ" ಎಂಬ ನಾಟಕಗಳು ಹೊರಬಂದವು.

ಬದಲಾವಣೆಯ ಪರಿಸರಕ್ಕೆ-ಜಗತ್ತಿನ ಓಟಕ್ಕೆ ಸಮವಾದ ವೇಗದಲ್ಲಿಯೇ ಧಾವಿಸುವ 'ಜಿ.ಬಿ.' ನಮ್ಮ ರಂಗಭೂಮಿಯ ದೊಡ್ಡವರು. ಅವರ ಬಾಣಕ್ಕೆ ಸವಕಲುತನ ಎಂದೂ ಬರಲಿಲ್ಲ. ತಮ್ಮ ವಯಸ್ಸು 80ರ ಹತ್ತಿರ ಸುಳಿದಾಡುತ್ತಿದ್ದರೂ ಈಗಲೂ ಧಾರವಾಡದ ಹವ್ಯಾಸಿ ತಂಡಕ್ಕೆ ದಾರಿದೀಪವಾಗಿ ನಿಂತುಕೊಂಡು ತಮ್ಮ

ರಂಗಭೂಮಿಯ ಚಟುವಟಿಕೆಗಳನ್ನು ನಡೆಸುತ್ತಲೇ ಇದ್ದಾರೆ. "ಇವರ ಸತ್ತವರ ನೆರಳು" ನಾಟಕ 100 ಪ್ರಯೋಗಗಳನ್ನು ಕಂಡಿದೆ. ಈ ವಯಸ್ಸಿನಲ್ಲಿಯೂ ಕ್ರಿಯಾಶೀಲರಾಗಿರುವುದು ಜಿ.ವಿ.ಯವರ ಹೆಚ್ಚುಗಾರಿಕೆ. ಇವರಿಗೆ 1982ನೇ ಸಾಲಿನ ಪ್ರಶಸ್ತಿಯನ್ನು ಕರ್ನಾಟಕ ನಾಟಕ ಅಕಾಡೆಮಿಯು ಗೌರವ ಪೂರ್ವಕವಾಗಿ ನೀಡುತ್ತಿದೆ.

---

## ರಾಜಯ್ಯ ಮಠಪತಿ (ಬರಗಿ ರಾಚಯ್ಯ)

ಜಾನಪದ ರಂಗಭೂಮಿ ಕರ್ನಾಟಕದ ರಂಗಪರಂಪರೆಯ ಆದಿಮ ಭಾಗ. ನಮ್ಮಲ್ಲಿ ಹಲವು ಪ್ರಕಾರದ ಬಯಲಾಟಗಳಿದ್ದು, ಅವುಗಳಲ್ಲಿ 'ಶ್ರೀ ಕೃಷ್ಣಪಾರಿಜಾತ'ಕ್ಕೆ ತನ್ನದೇ ಆದ ವೈಶಿಷ್ಟ್ಯವಿದೆ. ಪಾರಿಜಾತದ ಸಂಗೀತ, ನೃತ್ಯ ಹಾಗೂ ಮೇಳದ ಕಲ್ಪನೆಗಳು ಉತ್ತರ ಕರ್ನಾಟಕದ ಬೇರೆಲ್ಲ ಬಯಲಾಟಗಳಿಗಿಂತ ಭಿನ್ನವಾಗಿದೆ. ಇಲ್ಲಿಯ ಸಂಗೀತವಂತೂ ಅಭಿಜಾತ ಸಂಗೀತವನ್ನು ಜಾನಪದಕ್ಕೆ ಅಳವಡಿಸಿಕೊಂಡು ಬಹುದೊಡ್ಡ ಪ್ರತಿಭೆಗೆ ಸಾಕ್ಷಿಯಾಗಿದೆ.

ಶ್ರೀ ಕೃಷ್ಣಪಾರಿಜಾತ, ಹೆಸರೇ ಸೂಚಿಸಿದಂತೆ ಶ್ರೀ ಕೃಷ್ಣನ ಸುತ್ತ ಹೆಣೆಯಲಾದ ಕಥೆ. ಅಲೌಕಿಕವನ್ನು ಪ್ರತಿನಿಧಿಸುವ ರುಕ್ಮಿಣಿ, ಲೌಕಿಕವನ್ನು ಪ್ರತಿನಿಧಿಸುವ ಸತ್ಯಭಾಮೆ–ಇವರಿಬ್ಬರ ಎಳೆತದಲ್ಲಿ ಸಿಕ್ಕುವ ಕೃಷ್ಣ ಸಹಜವಾಗಿಯೇ ದ್ವಂದ್ವಕ್ರೀಡಾಗಿ, ಪಾರಮಾರ್ಥಿಕ ಪರಿಹಾರವನ್ನು ಸೂಚಿಸುತ್ತಾನೆ. ಇದು ಭಾರತೀಯರಿಗೆಲ್ಲ ತುಂಬ ಇಷ್ಟವಾದಂಥ ಭಕ್ತಿರಸಪ್ರಧಾ ನಾಟಕ. ಅಂತೆಯೇ ಶ್ರೀಕೃಷ್ಣ ಪಾರಿಜಾತದಲ್ಲಿ ಆ ಪಾತ್ರ ನಿರ್ವಹಿಸುವವನ ಪ್ರತಿಭೆ ದೊಡ್ಡದಾಗಿರಬೇಕು. ಪ್ರೇಕ್ಷಕರ ಭಕ್ತರ ದೃಷ್ಟಿಯಲ್ಲಿ ಅದೊಂದು ಪರೀಕ್ಷೆ. ಶ್ರೀ ಬರಗಿ ರಾಚಯ್ಯನವರು ಆ ಪರೀಕ್ಷೆಯಲ್ಲಿ ಗೆದ್ದು ಬಹುದೊಡ್ಡ ಹೆಸರು ಮಾಡಿದ ಕಲಾವಿದರು.

ಶ್ರೀಮತಿ ಕೌಜಲಗಿ ನಿಂಗವ್ವನಂತೂ ಈ ಪ್ರಕಾರದಲ್ಲಿ ಹೆಸರು ಮಾಡಿಕೊಂಡು ತನ್ನ ಜೀವಮಾನದಲ್ಲೇ ಕಥೆಯಾಗಿ ಹೋದ ಕಲಾವಿದೆ. ಶ್ರೀ ಬರಗಿ ರಾಚಯ್ಯನವರು ಶ್ರೀಮತಿ ನಿಂಗವ್ವನವರ ಕಂಪನಿಯಲ್ಲಿ ಇದ್ದು ಮೂವತ್ತು ವರ್ಷಗಳ ಸೇವೆ ಸಲ್ಲಿಸಿದ್ದು ಅವರ ಅಸಾಧಾರಣ ಕಲಾಪ್ರತಿಭೆಗೆ ಸಾಕ್ಷಿಯಾಗಿದೆ.

ಶ್ರೀಯುತರು ಬಿಜಾಪೂರ ಜಿಲ್ಲೆಯ ಮುಧೋಳದಲ್ಲಿ ಹುಟ್ಟಿದರು. ಇವರು ತಮ್ಮ 15ನೇ ವಯಸ್ಸಿನಲ್ಲಿಯೇ ಪಾರಿಜಾತ ನಾಟಕ ಕಂಪನಿಯನ್ನು ಸೇರಿಕೊಂಡರು. ಶ್ರೀ ಅಪ್ಪಾಲಾಲ್ ಬರಗಿ ಎಂಬುವವರ ಮಾರ್ಗದರ್ಶನದಲ್ಲಿ ಪರಿಣಿತರಾಗಿ ಅಂದಿನಿಂದ ಇಂದಿನವರೆಗೂ ಶ್ರೀಕೃಷ್ಣ ಪಾರಿಜಾತ ಬಯಲಾಟ ಮಾಡುತ್ತಿದ್ದಾರೆ. ಶ್ರೀಮತಿ ನಿಂಗವ್ವ ಮಹಾಲಿಂಗಪೂರ (ಕೌಜಲಗಿ) ಇವರ ತಂಡದಲ್ಲಿ ಸುಮಾರು ಮೂವತ್ತು ವರ್ಷಗಳ ಕಾಲ ಶ್ರೀ ಕೃಷ್ಣನ ಪಾತ್ರಧಾರಿಯಾಗಿದ್ದು, ಉತ್ತರ ಕರ್ನಾಟಕದ ತುಂಬೆಲ್ಲ ಖ್ಯಾತಿ ಗಳಿಸಿದ್ದಾರೆ. ಇವರ ಶ್ರೀಕೃಷ್ಣನ ಪಾತ್ರದ ಅಭಿನಯವನ್ನು ಉತ್ತರ ಕರ್ನಾಟಕದ ಪತ್ರಿಕೆಗಳಲ್ಲದೇ ಮುಂಬೈನ ಖ್ಯಾತ ಪತ್ರಿಕೆಗಳು ಮುಕ್ತಕಂಠದಿಂದ ಪ್ರಶಂಸೆ ಮಾಡಿವೆ. ಶ್ರೀಕೃಷ್ಣ ಎಂದರೆ ಶ್ರೀ ಬರಗಿ ರಾಚಯ್ಯನವರಂತೆಯೇ ಇದ್ದ ಎಂದು ನಂಬುವ ಹಾಗೆ ಇವರು ಈ ಪಾತ್ರವನ್ನು ಅಭಿನಯಿಸುತ್ತಿದ್ದರು.

ಇವರ ನಾಟಕ ಪ್ರಯೋಗಗಳು ಬೆಂಗಳೂರು, ಮುಂಬೈ ಇಂಥ ಸ್ಥಳಗಳಲ್ಲಿ ಅಲ್ಲದೆ, ಆಕಾಶವಾಣಿ ಮತ್ತು ದೂರದರ್ಶನದಲ್ಲೂ ಜನಪ್ರಿಯವಾಗಿವೆ.

ಉತ್ತರ ಕರ್ನಾಟಕದ ಚಿಕ್ಕ, ದೊಡ್ಡ ಸಮ್ಮೇಳನಗಳಲ್ಲಿ, ಜಾತ್ರೆ ಸಮಾರಂಭಗಳಲ್ಲಿ ತಮ್ಮ ನಾಟಕ ಪ್ರಯೋಗವನ್ನು ಮಾಡಿ ಖ್ಯಾತಿ ಗಳಿಸಿದ್ದಾರೆ. ಇತ್ತೀಚೆಗೆ ಅಪ್ಪಾಲಾಲ್ ನದಾಫ್ ಅವರ ಕಂಪನಿಯಲ್ಲಿ ಪಾತ್ರ ವಹಿಸುತ್ತಿದ್ದಾರೆ ಮತ್ತು ಎಳೆಯರಿಗೆ ಅಭಿನಯ ತರಬೇತಿಯನ್ನೂ ನೀಡುತ್ತಿದ್ದಾರೆ. ಕ್ರಿಯಾಶೀಲ ಕಲಾವಿದರಾದ ಇವರಿಗೆ 1982ನೇ ಸಾಲಿನ ಪ್ರಶಸ್ತಿಯನ್ನು ಕರ್ನಾಟಕ ನಾಟಕ ಅಕಾಡೆಮಿ ಆದರಪೂರ್ವಕವಾಗಿ ನೀಡುತ್ತಿದೆ.

---



## ಎ.ಟಿ. ಪದ್ಮನಾಭ (ಪದ್ದಣ್ಣ)

ಬೆಂಗಳೂರು ನಗರದ ಹವ್ಯಾಸಿ ತಂಡದವರಿಗೆ ಚಿರಪರಿಚಿತ ವ್ಯಕ್ತಿ ಪದ್ದಣ್ಣ. ವೃತ್ತಿಯಲ್ಲಿ ಮೆಕ್ಯಾನಿಕಲ್ ಇಂಜಿನಿಯರ್. ಆದರೆ ನಾಟಕದ ಗೀಳು ಅವರ ಜೀವನವನ್ನೇ ಸಂಪೂರ್ಣವಾಗಿ ವ್ಯಾಪಿಸಿದೆ. ಬಿ.ಎಂ.ಎಸ್. ಇಂಜಿನಿಯರಿಂಗ್ ಕಾಲೇಜಿನಿಂದ ಪದವೀಧರರಾಗಿ ಹೊರಗೆ ಬಂದ ಪದ್ದಣ್ಣ ಕೋಲಾಟ, ನಾಟಕದತ್ತ ಸಂಪೂರ್ಣವಾಗಿ ವಾಲಿದರು. ಕಾಲೇಜಿನಲ್ಲಿದ್ದಾಗ, ಹಾಕಿ, ಕ್ರಿಕೆಟ್ ಕಬಡ್ಡಿ, ಕೊಕ್ಕೋ–ಆಟಗಾರ. ಆಟಪಾಟಗಳಲ್ಲಿ ಹೆಸರುಗಳಿಸಬಹುದಾಗಿದ್ದ ಪದ್ದಣ್ಣ ರಂಗಭೂಮಿಗೆ ತಮ್ಮನ್ನು ಮೀಸಲಿರಿಸಿಕೊಂಡರು. ಪ್ರಾಥಮಿಕ ಶಾಲೆಯಲ್ಲಿರುವಾಗಲೇ ನಾಟಕವಾಡಿಸುವ, ಆಡುವ ಹವ್ಯಾಸ ಇವರಿಗೆ ಅಂಟಿಕೊಂಡಿತು.

ಶ್ರೀಯುತರು ಇತಿಹಾಸ ಪ್ರಸಿದ್ಧವಾದ ಚಿತ್ರದುರ್ಗದಲ್ಲಿ 50 ವರ್ಷಗಳ ಹಿಂದೆ ಹುಟ್ಟಿದರು. ಇವರ ತಂದೆ ದಿವಂಗತ ಅಗರಂ ತಾಂದೋಣಿರಾಯರು, ತಾಯಿ ಶ್ರೀಮತಿ ಸೋನಾಬಾಯಿ. ಬೆಂಗಳೂರಿನ, 'ನ್ಯಾಷನಲ್ ಹೈಸ್ಕೂಲ್' ನಲ್ಲಿ ಪ್ರವೇಶ. ರಾಷ್ಟ್ರೀಯ ಹೋರಾಟದಲ್ಲಿ ಭಾಗಿ. ಸೇವಾದಳದ ನಿಷ್ಠಾವಂತ ಕಾರ್ಯಕರ್ತರು. ಹಲವಾರು ದೊಡ್ಡ ಸಮಾರಂಭಗಳಲ್ಲಿ ಸ್ವಯಂಸೇವಕರಾಗಿ ದುಡಿದ ಪದ್ದಣ್ಣ ಇಂದಿಗೂ ಅದೇ ಸೇವಾ ಮನೋಭಾವನೆಯನ್ನು ಬೆಳೆಸಿಕೊಂಡು ಬಂದಿದ್ದಾರೆ.

ಆಗಿನ ರಂಗಭೂಮಿಯ ಹಲವರ ನೇರ ಸಂಪರ್ಕದಿಂದ ಪದ್ದಣ್ಣ ಕನ್ನಡ ರಂಗಭೂಮಿಯಲ್ಲಿ ಸಕ್ರಿಯವಾಗಿ ಭಾಗಿಯಾದರು. ದಿವಂಗತ ಕೆ.ವಿ. ಅಯ್ಯರ್, ನ್ಯಾಷನಲ್ ಹೈಸ್ಕೂಲಿನ ಹೆಚ್. ರಾಮರಾಯರು, ಕೆ. ನಂಜುಂಡಯ್ಯ, ಕಾಲೇಜಿನ ಡಾ. ಹೆಚ್.ಎನ್ (ಹೆಜ್ಜೆನ್), ಶ್ರೀ ಜಿ.ಎಸ್. ರಾಮರಾವ್, ನಾಣಿ, ಇವರುಗಳ ಸಂಪರ್ಕಭಾಗ್ಯ ಪದ್ದಣ್ಣನವರಿಗೆ, 'ರವಿ ಆರ್ಟಿಸ್ಟ್ಸ್' ಆಗ ಬೆಂಗಳೂರಿನ ಪ್ರಸಿದ್ಧ ಹವ್ಯಾಸಿ ತಂಡ. ತನ್ನ ಅಭಿಮಾನೀ ಸದಸ್ಯರಿಗಾಗಿ ವರ್ಷಕ್ಕೆ ಆರು ಹೊಸ ನಾಟಕಗಳನ್ನು ಸಾದರಪಡಿಸುವ ಸಂಪ್ರದಾಯದ ಆರಂಭ. ಇದರಲ್ಲಿ ಪದ್ದಣ್ಣನ ಪಾತ್ರ, ಹಾಗೇ ಆಕಾಶವಾಣಿಯ ನೇರ ಪ್ರಸಾರದ ಪ್ರಥಮ ಪ್ರಯೋಗದಲ್ಲಿ – ದಿಲ್ಲಿಯ ಅಖಿಲಭಾರತ ನಾಟಕೋತ್ಸವದಲ್ಲಿ, ಕನ್ನಡದ ನಾಟಕ ಹಿಂದೀ ಭಾಷಾ ಪ್ರಯೋಗ ದಿಲ್ಲಿಯಲ್ಲಿ – ಅಖಿಲಭಾರತ ಹವ್ಯಾಸೀ – ವಿಲಾಸೀರಂಗ ಸಮ್ಮೇಳನ ಇವೆಲ್ಲದರಲ್ಲೂ ಪದ್ದಣ್ಣನ ಪಾತ್ರ.

ಬೆಂಗಳೂರಿನ ನಾಟ್ಯ ಸಂಘ ಥಿಯೇಟರ್ ಸೆಂಟರ್ ಸಂಸ್ಥೆಯ ಜನ್ಮಕ್ಕೆ ಕಾರಣಪುರುಷರಲ್ಲಿ ಒಬ್ಬರು. ಈ ಸಂಸ್ಥೆಯ 'ಉಲ್ಲಾಳ ಪಾರಿತೋಷಕ ಸ್ಪರ್ಧೆ' ತಂಡಗಳಿಗೆ ತಾಂತ್ರಿಕ ನೆರವು – ಕಾರ್ಯಕ್ರಮಗಳಲ್ಲಿ ಪದ್ದಣ್ಣ ಭಾಗಿ. ವೃತ್ತಿ ಜೀವನದಲ್ಲಿ ಪ್ರಾಂತ್ಯದ ಹೊರಗೆ ಅಂದರೆ, ಮುಂಬಯಿಯಲ್ಲಿ ವಾಸವಾಗಿದ್ದ ಇವರಿಗೆ ಮರಾಠಿ, ಹಿಂದೀ ಭಾಷೆಗಳ ರಂಗಭೂಮಿಯ ಪರಿಚಯ. ಮುಂಬಯಿನ ಮೈಸೂರು ಅಸೋಸಿಯೇಷನ್‌ನಲ್ಲಿ ಆಗೊಮ್ಮೆ, ಈಗೊಮ್ಮೆ ನಾಟಕವಾಡುವ ಬದಲು ಪ್ರತಿ ಎರಡನೇ ಶನಿವಾರ, ಭಾನುವಾರ ನಾಟಕ ಆಡುವ ಪರಿಪಾಠದಲ್ಲಿ ಪದ್ದಣ್ಣನವರ ಪಾತ್ರ, ಮೂರು ದಿನಗಳ ಕೈಲಾಸಂ ಉತ್ಸವ ನಡೆಸಿ, ಹಿರಿಯ ನಾಟಕಕಾರರಾದ ಶ್ರೀ ಪು.ಲ. ದೇಶಪಾಂಡೆ, ಹರೀಂದ್ರನಾಥ ಚಟ್ಟೋಪಾಧ್ಯಾಯ ಮತ್ತರಿಗೆ ಕೈಲಾಸಂ ನಾಟಕಗಳ ಪರಿಚಯ. ಅವರಿಂದ ಕೈಲಾಸಂ ಹೆಗ್ಗಳಿಕೆ. ಕನ್ನಡದ ಇತರ ಗುಂಪುಗಳು ಕನ್ನಡ ನಾಟಕಗಳನ್ನು ಬಂದು ನೋಡುವ, ಸಹಕರಿಸುವ ಮನೋಭಾವ ಬೆಳೆಯಲು ಕಾರಣರಾದವರಲ್ಲಿ ಪದ್ದಣ್ಣನವರೂ ಒಬ್ಬರು.

ಮರಾಠಿಯ ಸುಪ್ರಸಿದ್ಧ ನಾಟಕಕಾರರಾದ ಶ್ರೀ ಪು.ಲ. ದೇಶಪಾಂಡೆಯವರ 'ತುಝು ಆಹೆ ತುಝು ಪಾಶಿ' ನಾಟಕವನ್ನು ಕನ್ನಡಕ್ಕೆ 'ತನುವು ನಿನ್ನದೆ ಮನವು ನಿನ್ನದೆ' ಎಂದು ಸಹಾನುವಾದ ಮಾಡಿ ರಂಗಭೂಮಿಗೆ ತರುವಲ್ಲಿ ಪದ್ದಣ್ಣನವರ ಪಾತ್ರ ಬಹು ಮುಖ್ಯ. ರಂಗಭೂಮಿಯ ಯಾವುದೇ ಕೆಲಸವಿರಲಿ, ಯಾರದೇ ಪ್ರದರ್ಶನವಿರಲಿ, ಅದು ಬೆಳಕು ಧ್ವನಿ ಕೆಲಸವೇ ಇರಲಿ – ರಂಗಭೂಮಿಗೆ ಪೊರಕೆಯನ್ನು ಹಿಡಿಯಲೂ ಹಿಂಜರಿದವರಲ್ಲ ಇವರು.

'ಸೈಕ್ಲೋಸ್ಟೈಲ್ಡ್' ಕರಪತ್ರಗಳನ್ನು ಮನೆಮನೆಗೆ ಮುಟ್ಟಿಸಿ, ಸ್ವಾತಂತ್ರ್ಯದ ಸಂದೇಶಗಳನ್ನು ತಲುಪಿಸುವ ಭೂಗತ ಚಳುವಳಿಗಾರರೂ ಆಗಿದ್ದರಿವರು. ಜವಾಬ್ದಾರೀ ಸರ್ಕಾರಕ್ಕಾಗಿ ಆದ ಆಂದೋಳನದಲ್ಲಿ ಭಾಗಿಯಾಗಿ 'ಸೈಕ್ಲೋಸ್ಟೈಲ್ಡ್' ಕರಪತ್ರಗಳನ್ನು ಮನೆಮನೆಗೆ ಮುಟ್ಟಿಸಿ, ಸ್ವಾತಂತ್ರ್ಯದ ಸಂದೇಶಗಳನ್ನು ತಲುಪಿಸುವ ಭೂಗತ ಚಳುವಳಿಗಾರರೂ ಆಗಿದ್ದರಿವರು.

ಈಗಲೂ ಎಲ್ಲ ರಂಗ ಕಲಾವಿದರ, ಎಲ್ಲ ತಂಡಗಳ ಪದ್ಮಣ್ಣನ ಕ್ರಿಯಾಶೀಲ ಸಹಾಯಹಸ್ತ ಸದಾ ಸಿದ್ಧವಾಗಿರುತ್ತದೆ. ಪ್ರಚಾರ ಎಂಬುದರಿಂದ ಇವರು ಹರದಾರಿ ದೂರ. ಸಂಕೋಚ ಸ್ವಭಾವದ ಇವರ ಕ್ರಿಯಾಶೀಲತೆ ಎಲ್ಲರಿಗೂ ಪರಿಚಯ. ಅಂತರ್ಮುಖಿಯಾದ ಪದ್ಮಣ್ಣ ಅಜಾತ ಶತ್ರು, ಕ್ರಿಯಾಶೀಲ ರಂಗ ಕಾರ್ಯಕರ್ತರಾದ ಇವರಿಗೆ 1982ನೇ ಸಾಲಿನ ಪ್ರಶಸ್ತಿಯನ್ನು ಕರ್ನಾಟಕ ನಾಟಕ ಅಕಾಡಮಿಯು ಆದರಪೂರ್ವಕವಾಗಿ ನೀಡುತ್ತಿದೆ.



## ರಹಿಮಾನವ್ವ ಕಲ್ಮನಿ

ವೃತ್ತಿ ರಂಗಭೂಮಿಯ ಬಹುದೊಡ್ಡ ಕಲಾವಿದೆ ಶ್ರೀಮತಿ ರಹಿಮಾನವ್ವ ಕಲ್ಮನಿ. 2–5–1917ರಲ್ಲಿ, ಕುಕನೂರಲ್ಲಿ ಹುಟ್ಟಿದ ರಹಮಾನವ್ವ ತನ್ನ 9ನೇ ತಿಂಗಳಲ್ಲಿಯೇ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದರು. ತಾಯಿಯ ಆಧಾರ ತಪ್ಪಿದ ಈ ಮಗು ಅಜ್ಜಿಯ ಬಳಿಯೇ ಬೆಳೆದು 10 ವರ್ಷಗಳಾದಾಗ ಬಾಲನಟಿಯಾಗಿ ಯಂಕರಡ್ಡಿಯವರ ವಿಶ್ವರಂಜನ ನಾಟಕ ಕಂಪನಿಯನ್ನು ಸೇರಿದರು. ಜೀವನೋಪಾಯಕ್ಕಾಗಿ ರಂಗಭೂಮಿ ಪ್ರವೇಶಿಸಿದ ರಹಿಮಾನವ್ವ ಮುಂದೆ ಒಳ್ಳೆಯ ಕಲಾವಿದೆಯಾಗಿ ಸ್ವಂತ ನಾಟಕ ಕಂಪನಿಯನ್ನೇ ನಡೆಸಿಕೊಂಡು ಹೋಗುವ ಸಾಮರ್ಥ್ಯ ಪಡೆದು ರಂಗಭೂಮಿ ಇತಿಹಾಸದಲ್ಲಿಯೇ ಪವಾಡ ಮಾಡಿದರು.

ವಿಶ್ವರಂಜನ ಕಂಪನಿಯ "ಹೇಮರೆಡ್ಡಿ" ಹಾಗೂ "ಹಳ್ಳಿಯ ಹುಡುಗಿ"ಯಲ್ಲಿ ಅನುಕ್ರಮವಾಗಿ "ಬಿಲ್ಲಿ" ಹಾಗೂ "ಶಿವಾನಂದ"ನ ಪಾತ್ರ ವಹಿಸುತ್ತಿದ್ದರು. ಕಾರಣಾಂತರಗಳಿಂದ ವಿಶ್ವರಂಜನ ಕಂಪನಿಯನ್ನು ಯಂಕರಡ್ಡಿಯವರು ಮುಚ್ಚಿಬಿಟ್ಟರು. ಆದರೂ ರಹಿಮಾನವ್ವ ಅವರ ಮನೆಯಲ್ಲಿಯೇ ಉಳಿದುಕೊಂಡು ಅವರ ದನಗಳನ್ನು ಮೇಯಿಸುವ ಕೆಲಸವನ್ನು ಮಾಡಿ ಬಂದ ಸಂಬಳದಲ್ಲಿ ಅಜ್ಜಿಯನ್ನು ನೋಡಿಕೊಳ್ಳುವಂತಾದಳು. ಹೀಗೆಯೇ ಮೂರು ವರ್ಷದ ನಂತರ ಯಂಕರಡ್ಡಿಯವರು ತಮ್ಮ ಕಂಪನಿಯನ್ನು ಹೊಸ ಹುರುಪಿನಿಂದ ಪ್ರಾರಂಭಿಸಿದರು. "ಕಿತ್ತೂರು ಚನ್ನಮ್ಮ" ನಾಟಕದಿಂದಲೇ ಕಂಪನಿ ಪ್ರಾರಂಭಿಸಲು ಇಚ್ಛಿಸಿದ ಯಂಕರಡ್ಡಿಯವರು, ಹುಬ್ಬಳ್ಳಿಯ ಜಮುನಾಬಾಯಿಯನ್ನು ಕರೆಸಿ ಆಕೆಗೆ 'ಚನ್ನಮ್ಮ'ನ ಪಾತ್ರ ವಹಿಸಿಕೊಟ್ಟು ತಾಲೀಮು ಶುರು ಮಾಡಿದರು. ದಿನವಿಡೀ ದನಕಾಯುವ ಕೆಲಸ ಮಾಡುತ್ತಿದ್ದ ರಹಮಾನವ್ವ ರಾತ್ರಿಯ ಹೊತ್ತು ನಾಟಕ ತಾಲೀಮನ್ನು ನೋಡುತ್ತ ಕೂಡುತ್ತಿದ್ದಳು.

ಇದರಿಂದ ಇಡೀ "ಕಿತ್ತೂರು ಚನ್ನಮ್ಮ" ನಾಟಕವೇ ಆಕೆಗೆ ಬಾಯಿಪಾಠವಾಗಿ ಹೋಯಿತು. ರಹಿಮಾನವ್ವನ ಸುದೈವದಿಂದಲೋ ಏನೋ, ನಟಿ ಜಮುನಾಬಾಯಿ ನಟಕಪ್ರದರ್ಶನ ಇನ್ನೇ ಎಂಟು ದಿನಗಳಿವೆ ಎಂದಾಗ ಕಂಪನಿಯನ್ನು ಬಿಟ್ಟು ಹೋದಳು. ಕಂಪನಿಯ ಮಾಲೀಕರು ಕಂಗಾಲಾದರು. ಆಗ ಅವರ ದೃಷ್ಟಿ ರಹಿಮಾನವ್ವನತ್ತ ಹೊರಳಿತು. ಅವಳಿಂದ 'ಚನ್ನಮ್ಮ'ನ ಮಾತುಗಳನ್ನು ಹೇಳಿಸಿದರು. ಜಮುನಾಬಾಯಿಗಿಂತಲೂ ಒಂದು ತೂಕ ಹೆಚ್ಚೇ ಎನ್ನುವಂತೆ ರಹಿಮಾನವ್ವ ಕಾಣಿಸಿಕೊಂಡಳು. 'ಚನ್ನಮ್ಮನ' ಪಾತ್ರದಲ್ಲಿ ರಹಿಮಾನವ್ವ ಅಪಾರ ಜನಪ್ರಿಯತೆಯನ್ನು ಪಡೆದಳು.

ಮುಂದೆ ಪ್ರಾರಂಭವಾಯಿತು. ರಂಗಭೂಮಿ ಪ್ರವಾಸ. ಮೊದಲು ಸಿದ್ರಾಮಪ್ಪ ಹಂದಿಗನೂರರ ಕಂಪನಿಯನ್ನು ಸೇರಿ 'ಉತ್ತರ ಭೂಪ', 'ಅಕ್ಷಯಾಂಬರ', 'ಭೀಷ್ಮ ಪ್ರತಿಜ್ಞೆ', 'ಚಿತ್ರಾಂಗದೆ', 'ಮಾತಾಂಗಕನ್ನೆ', 'ಬಡತನದ ಭೂತ',

‘ದತ್ತು ಪುತ್ರ’, ‘ರಕ್ತರಾತ್ರಿ’ ಈ ನಾಟಕಗಳಲ್ಲಿ ಅಭಿನೇತ್ರಿಯಾಗಿ ಮುಖ್ಯ ಪಾತ್ರಗಳಲ್ಲಿ ಕಾಣಿಸಿಕೊಂಡ ರಹಿಮಾನವ್ವ ಉತ್ತರ ಕರ್ನಾಟಕದ ಉಜ್ವಲ ತಾರೆ ಎನಿಸಿಕೊಂಡರು.

ಮುಂದೆ ಏಣಗಿ ಬಾಳಪ್ಪನವವರ ಕಲಾವೈಭವ ಕಂಪನಿ, ಗೋಕಾಕ ಕಂಪನಿಗಳನ್ನು ಸೇರಿ ಅಲ್ಲಿಯೂ ಪ್ರಮುಖ ಪಾತ್ರಗಳನ್ನಾಡಿ ಮುಂದೆ ಸ್ವಂತ ಕಂಪನಿಯನ್ನೇ ಪ್ರಾರಂಭಿಸಿದರು. ಒಬ್ಬ ಕಲಾವಿದೆ ಸ್ವತಃ ಕಂಪನಿಯನ್ನು ಕಟ್ಟಿ ನಾಟಕವಾಡಿಸುವ ಸಾಹಸ ಮಾಡಿದ ಬೆರಳೆಣಿಸುವಷ್ಟು ಮಹಿಳೆಯರಲ್ಲಿ ರಹಿಮಾನವ್ವ ಒಬ್ಬರು.

ತನ್ನ ಕಂಪನಿಯಿಂದಲೇ ‘ಹರಿಶ್ಚಂದ್ರ’, ‘ಸ್ತ್ರೀರತ್ನ’, ‘ಸಹೋದರ’, ‘ಮಲಮಗಳು’, ‘ಕಾಯಕರುಳು’ ಈ ನಾಟಕಗಳನ್ನು ರಂಗಭೂಮಿಗೆ ತಂದು ಅಪಾರ ಜನಮೆಚ್ಚುಗೆಯನ್ನು ಪಡೆದರು.

‘ಭಾವನೆಗಿಂತಲೂ ಕರ್ತವ್ಯ ಶ್ರೇಷ್ಠ ‘ಬದುಕಿಗಿಂತಲೂ ಕಲೆ ಮುಖ್ಯ’ ವೆಂದು ಭಾವಿಸಿ ಅದೇ ರೀತಿ ನಡೆದು ತೋರಿಸಿದವರಲ್ಲಿ ರಹಿಮಾನವ್ವ ಅಗ್ರಣಿ ಎಂದೇ ಹೇಳಬೇಕು. ಮುದಗಲ್ ಕ್ಯಾಂಪಿನಲ್ಲಿ ‘ಹರಿಶ್ಚಂದ್ರ’ ನಾಟಕ ಮಾಡುತ್ತಿದ್ದಾಗ ‘ತಾರಾಮತಿಯ’ ಪಾತ್ರ ವಹಿಸಿದ್ದ ತುಂಬು ಗರ್ಭಿಣಿ ರಹಿಮಾನವ್ವ ನಾಟಕ ಮಧ್ಯದಲ್ಲಿಯೇ ಪರದೆ ಹಾಕಿ ರಂಗಭೂಮಿಯ ಗ್ರೀನ್ ರೂಮಿನಲ್ಲಿಯೇ ಪ್ರಸವಿಸಿ ಹೆಣ್ಣುಮಗುವಿಗೆ ಜನ್ಮ ನೀಡಿದರು. ಆದರೂ ನಾಟಕವನ್ನು ಮಾತ್ರ ನಿಲ್ಲಿಸಲಿಲ್ಲ, ತನ್ನ ಹಿರಿಯ ಮಗ ಬಾಬಣ್ಣನಿಗೆ ಸೀರೆ ಉಡಿಸಿ ತನ್ನ ಪಾತ್ರವನ್ನು ಮಾಡಲು ಹೇಳಿ ನಾಟಕವನ್ನು ಮುಂದುವರೆಸಿದ ಅಗ್ಗಳಿಕೆ ಇವರದು. ಹೀಗೆ ರಂಗಭೂಮಿಯ ಮೇಲೆಯೇ ಹುಟ್ಟಿದ ಮಗಳು ಮಂಜುಳಾ ಕೂಡ ಹುಟ್ಟು ಕಲಾವಿದೆ. ಆದರೆ ದೈವ ದುರ್ವಿಲಾಸದಿಂದ ಈ ಮಂಜುಳಾ ‘ಗುಡಗೇರಿ’ ಕಂಪನಿಯಲ್ಲಿ ಕಲಾವಿದೆಯಾಗಿ ಹೆಸರುಗಳಿಸುತ್ತಿರುವ ಸಂದರ್ಭದಲ್ಲಿಯೇ ‘ಕಂಪೆನಿ’ ಪ್ರವಾಸದಲ್ಲಿ ಕಾರು ಅಪಘಾತದಲ್ಲಿ ಮೃತಳಾದಳು. ಹಿರಿಯ ಮಗಳು ಲಲಿತಾ ಕೂಡ ಅಕಾಲ ಮರಣಕ್ಕೆ ತುತ್ತಾದಳು. ಲಲಿತಾಳ ಎರಡು ಮಕ್ಕಳು ಹದಿನಾಲ್ಕು ವರ್ಷದ ‘ಮಮತಾ’; ಹನ್ನೊಂದು ವರ್ಷದ ‘ನವೀನ’ ತಬ್ಬಲಿಗಳಾಗಿ ಅಜ್ಜಿ ರಹಿಮಾನವ್ವನ ಆಸರೆಯಲ್ಲಿ ಬೆಳೆಯುತ್ತಿದ್ದಾರೆ.

ರಹಿಮಾನವ್ವ ಇಂದು ಅನೇಕ ಕಲಾವಿದರಂತೆ ನಿರಾಶ್ರಿತೆ, ಮತ್ತು ವಯಸ್ಸಾದ ಕಲಾವಿದೆ, ಕನ್ನಡ ವೃತ್ತಿ–ರಂಗಭೂಮಿಗೆ ಇವರ ಕೊಡುಗೆ ಅಪಾರ. ವೃತ್ತಿ–ರಂಗಭೂಮಿಯಲ್ಲಿ ಅವಿರತ ಸೇವೆ ಸಲ್ಲಿಸಿರುವ ಇವರಿಗೆ 1982ನೇ ಸಾಲಿನ ಪ್ರಶಸ್ತಿಯನ್ನು ಕರ್ನಾಟಕ ನಾಟಕ ಅಕಾಡೆಮಿಯು ಆದರ ಪೂರ್ವಕವಾಗಿ ನೀಡುತ್ತಿದೆ.



# 1983ರ ಪ್ರಶಸ್ತಿ ವಿಜೇತರು



## ಫಕೀರಪ್ಪಜೋಗಿ

ಸುಮಾರು 57ರ ಪ್ರಾಯದ ಫಕೀರಪ್ಪನವರು ಸೊರಬ ತಾಲ್ಲೂಕಿನ ಗುಡಿಗಿನ ಕೊಪ್ಪದವರು. ಮನೆತನದಿಂದಲೂ ಬಂದ ಜನಪದ ಕಲೆಯಾದ 'ಜೋಗೇರ ಆಟ'ದಲ್ಲಿ ಪ್ರಸಿದ್ಧರು.

ಜೋಗೇರ ಆಟ ಜನಪದ ಕಲೆಯ ವಿಶಿಷ್ಟ ಪ್ರಕಾರ. ಒಂದು ರೀತಿಯ ಕಥಾ ಕಲಾಕ್ಷೇಪ ಅಥವಾ ತೆಲುಗಿನ 'ಬುರ್ರಕಥಾ' ಮಾದರಿಯಲ್ಲಿರುವ, 'ಜೋಗೇರ ಆಟ'ವನ್ನೇ ಉಳಿಸಿ ಬೆಳಸಿಕೊಂಡು ಬಂದ ಕೆಲವು ಕುಟುಂಬಗಳು ಇನ್ನೂ ನಮ್ಮಲ್ಲಿವೆ. ಇದರಲ್ಲಿ ಬಹುಕಾಲದಿಂದ ಕುಟುಂಬವಿಡೀ ನಡೆಸಿಕೊಂಡು ಬರುವಂತೆ ಮಾಡಿ ಹಳ್ಳಿ ಹಳ್ಳಿಗಳಿಗೂ ಹರಡಿ ರಂಜಿಸಿದ ಫಕೀರಪ್ಪ ಮತ್ತು ತಂಡದವರ 'ವಸಂತ ಶೀಲಾ ಕುಸುಮ ಮಂಜರಿ', 'ಸತ್ಯ ಚೆನ್ನಮ್ಮ', 'ಲಕ್ಷಾಪತಿ' 'ಚಿತ್ರಶೇಖರ–ಸೋಮಶೇಖರ' ಮೊದಲಾದ ಕಥೆಗಳು ಅತ್ಯಂತ ಜನಪ್ರಿಯ.

ಇಂಥ ವಿಶಿಷ್ಟ ಕಲೆಯನ್ನು ಇಂದಿಗೂ ಉಳಿಸಿಕೊಂಡು ಬಂದಿರುವ ಫಕೀರಪ್ಪನವರನ್ನು ಕರ್ನಾಟಕ ನಾಟಕ ಅಕಾಡೆಮಿಯು 1983ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಹೆಚ್.ಕೆ. ಯೋಗಾನರಸಿಂಹ

ವೃತ್ತಿ ರಂಗಭೂಮಿಯಲ್ಲಿ ದೊಡ್ಡ ಹೆಸರು. ಬಹುಮುಖ ಪ್ರತಿಭೆಯ ಈತ ನಟ, ಗಾಯಕ, ಸಂಗೀತ ನಿರ್ದೇಶಕರ, ಹಾರ್ಮೋನಿಯಂ ಮಾಸ್ತರು. ಮಿಗಿಲಾಗಿ ಉತ್ತಮ ನಾಟಕಕಾರ – ಕವಿ. ಕಂಪನಿಯ ಒಡೆಯ ಕೂಡ.

ಪಾಂಡವಪುರ ತಾಲ್ಲೂಕಿನ ಹಳೇಬಿಡು ಜನ್ಮಸ್ಥಳ. ಸಂಪ್ರದಾಯಸ್ಥ ಕುಟುಂಬದವರು. ತನ್ನ ಚಿಕ್ಕಪ್ಪಂದಿರಾದ ಎಚ್. ರಾಮಚಂದ್ರ ಶಾಸ್ತ್ರಿ – ಎಚ್. ಕೃಷ್ಣ ಶಾಸ್ತ್ರಿಗಳೂ ಕಲಾವಿದರೆ.

ಬಾಲ್ಯದಿಂದಲೂ ಓದಿನ ಜೊತೆಗೆ ಸಂಗೀತದಲ್ಲೂ ಒಲವು. ಅದರದೇ ಮುಂದುವರಿಕೆ. 'ಮಂಜುನಾಥೇಶ್ವರ ನಾಟಕ ಮಂಡಳಿ'ಯ ನಾಟಕಗಳಿಂದ ರಂಗಪ್ರವೇಶ. ಹಳ್ಳಿಯಲ್ಲಿ ನಾಟಕ ಕಲಿಸಿ ನಾಟಕದ ಮೇಷ್ಟ್ರು ಆದರು. ಶ್ರೀ ಕರ್ನಾಟಕ ನಾಟಕ ಸಭಾ (ಎಡತೊರೆ ಕಂಪನಿ). ಮೇಲುಕೋಟೆಯಲ್ಲೊಂದು ಕಂಪನಿ, ಎಂ.ಸಿ. ಮಹದೇವಸ್ವಾಮಿಯವರ 'ಕನ್ನಡ ಥಿಯೇಟರ್ಸ್'ಗಳಲ್ಲಿ ದುಡಿದರು. 'ರಾಜಾವಿಕ್ರಮ', 'ಚಂದ್ರಹಾಸ' ನಾಟಕಗಳ ನಿರ್ದೇಶನದಿಂದ ಅಪಾರ ಜನಪ್ರಿಯತೆಗಳಿಸಿದರು. ರಂಗಭೂಮಿಯ ಎಲ್ಲಾ ವಿಭಾಗದ ಕೆಲಸವೂ ಅವರಿಗೆ ಪ್ರಿಯವೇ.

ಇಂದಿನ ಜನಪ್ರಿಯ ನಾಟಕ 'ಲಂಚಾವತಾರ'ದ ಹಿಂದೆ ಇವರ ಆಲೋಚನೆ, ರಚನೆಯಲ್ಲಿ ಸಹಕಾರ ಇದೆ. 'ಮಿತ್ರ ಮಂಡಲಿ'ಯ ಎಲ್ಲಾ ನಾಟಕದಲ್ಲೂ ಇವರ ಸಹಕಾರವಿತ್ತು.

'ಸರ್ವೋದಯ ನಾಟಕ ಮಂಡಲಿ' ಸ್ಥಾಪಿಸಿದರು. 'ಚಿ. ಕಳ್ಳಭಟ್ಟ' ಇವರ ಜನಪ್ರಿಯ ನಾಟಕ. ಬಿರುಗಾಳಿಗೆ ಬಲಿಯಾದ ಈ ಕಂಪನಿಯ ಅನೇಕ ನಾಟಕಗಳ ಜನಪ್ರಿಯತೆ, ವಸ್ತುವಿನ ಸಮಕಾಲೀನತೆ ಇಂದಿಗೂ ಮಾಸದ ನೆನಪು.

ರಂಗಸಂಗೀತದ ಶಾಶ್ವತ ದಾಖಲೆಗಾಗಿ 'ಗುಬ್ಬಿ ವೀರಣ್ಣ ಪೀಠ'ದಲ್ಲಿ ಸಿಂಧುವಳ್ಳಿ ಅನಂತಮೂರ್ತಿ ಅವರೊಂದಿಗೆ ಶ್ರಮಿಸುತ್ತಿದ್ದಾರೆ.

ಚಿತ್ರರಂಗದಲ್ಲೂ ಯೋಗಣ್ಣ ಮುಖ್ಯವಾದ ವ್ಯಕ್ತಿ. ಸಂಭಾಷಣೆ–ಚಿತ್ರಕಥೆ–ಸಂಗೀತ ನಿರ್ದೇಶನ–ಚಿತ್ರ ನಿರ್ದೇಶನ, ಅಭಿನಯ ಎಲ್ಲಾ ರಂಗದಲ್ಲೂ ಇಂದೂ ದುಡಿಯುತ್ತಿದ್ದಾರೆ. ಇವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1983ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಬಿ.ವಿ. ಕಾರಂತ

ದಕ್ಷಿಣ ಕನ್ನಡದ ಮಂಚಿಗ್ರಾಮದ ಬಾಬುಕೋಡಿಯಲ್ಲಿ ಹುಟ್ಟಿದವರು ಬಾಬು ಕೋಡಿ ವೆಂಕಟರಮಣ ಕಾರಂತ. ಶಾಲೆಯ ದಿನದಿಂದಲೂ ಪರಿಸರದಲ್ಲಿದ್ದ ಯಕ್ಷಗಾನ, ಅತ್ತ ಬಂದಿದ್ದ ಗುಬ್ಬಿ ಕಂಪನಿಯ ನಾಟಕಗಳು ಇವರ ಮೇಲೆ ಪ್ರಭಾವ ಬೀರಿದವು. ಕಲೆಯ ಒಲವು ಮನೆಯನ್ನು ಬಿಟ್ಟು ಹೊರಡಿಸಿತ್ತು, ನಾಟಕದ ಹಂಬಲ. ಗುಬ್ಬಿ ಕಂಪನಿಯಲ್ಲಿ 6ವರ್ಷ ಕಾಲ ದುಡಿದರು. ಹಿಂದಿಯಲ್ಲಿ ಸ್ನಾತಕೋತ್ತರ ಪದವಿ ಪಡೆಯಲು ವಾರಣಾಸಿಗೆ ತೆರಳಿದರು. ರಂಗಭೂಮಿಯ ವಿಶೇಷ ಅಧ್ಯಯನಕ್ಕೆಂದು ದೆಹಲಿಯ ರಾಷ್ಟ್ರೀಯ ರಂಗಶಾಲೆಗೆ ಹೋದರು. ಈ ಎಲ್ಲಾ ಹಂತದಲ್ಲೂ ಎಲ್ಲಿದ್ದರಲ್ಲಿ ರಂಗಭೂಮಿಗೇ ತೊಡಗಿಕೊಂಡರು.

ರಂಗಭೂಮಿಯಲ್ಲಿ ನಿರ್ದೇಶನದ ಸ್ಥಾನವನ್ನು ವಿಶಿಷ್ಟವಾಗಿ ಎತ್ತಿ ಹಿಡಿದವರು. 70ರ ದಶಕದಲ್ಲಿ ಬಯಲು ರಂಗಭೂಮಿಯ ಪ್ರದರ್ಶನ ನೀಡಿ ಐತಿಹಾಸಿಕ ಮಹತ್ವ ತಂದುಕೊಟ್ಟವರು. ಕನ್ನಡ, ಹಿಂದಿಯಲ್ಲೂ ನಾಟಕ ನಿರ್ದೇಶಿಸಿದ್ದಾರೆ. ಕೆಲವು ನಾಟಕಗಳನ್ನು ಅನುವಾದಿಸಿದ್ದಾರೆ. ಮಕ್ಕಳ ರಂಗಭೂಮಿಗೆ ಶ್ರಮಿಸಿದ್ದಾರೆ.

ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಗೆ ನಿರ್ದೇಶಕರಾಗಿ, ಭೂಪಾಲದ ಕಲಾಭವನದಲ್ಲಿ ರೆಪರ್ಟರಿ ರಂಗಭೂಮಿಯ ಮುಖ್ಯಸ್ಥರಾಗಿ ಬಹಳ ಕೆಲಸ ಮಾಡಿದ್ದಾರೆ. ಚಲನಚಿತ್ರದಲ್ಲೂ ದೊಡ್ಡ ಹೆಸರೇ. ಇವರ ನಿರ್ದೇಶನದ 'ಚೋಮನ ದುಡಿ' ಅನೇಕ ಪ್ರಶಸ್ತಿಗಳಿಸಿತು. ಕಾರ್ನಾಡರ ಜೊತೆ ನಾಟಕ, ಸಿನಿಮಾಗಳಿಗೆ ದುಡಿದವರು.

ಇವರ ಈಡಿಪಸ್, ಸಂಕ್ರಾಂತಿ, ಹಯವದನ, ಜೋಕುಮಾರಸ್ವಾಮಿ, ಸತ್ತವರ ನೆರಳು, ಸ್ವರ್ಗಕ್ಕೆ ಮೂರೇಬಾಗಿಲು, ಪಂಜರ ಶಾಲೆ, ಏವಂ ಇಂದ್ರಜಿತ್, ಮೊದಲಾದ ಅನೇಕ ನಾಟಕಗಳ ನಿರ್ದೇಶನ ಇನ್ನೂ ಕಣ್ಣಿಗೆ ಕಟ್ಟಿದಂತಿದೆ ಎನ್ನುವವರಿದ್ದಾರೆ. ಹವ್ಯಾಸೀ ರಂಗಭೂಮಿಗೂ ವೃತ್ತಿಪರತೆ ತರುವ ಹಂಬಲ ಹೊತ್ತು ದುಡಿಯುವವರು ಕಾರಂತ.

ಸಂಗೀತ ನಿರ್ದೇಶನದಲ್ಲೂ ಇವರ ಪರಿಶ್ರಮ ಅಪಾರ. ನಾಟಕಗಳನ್ನೂ ವೈವಿಧ್ಯಮಯ ಪ್ರಯೋಗಕ್ಕೆ ಅಳವಡಿಸುವ ಪ್ರಯೋಗಶೀಲ ಕಾರಂತರು.

ಯಕ್ಷಗಾನ–ಬಯಲಾಟಗಳ ರೂಪದಲ್ಲಿ ನಾಟಕ ಅಳವಡಿಸಿದ್ದೂ ಉಂಟು. ರಾಷ್ಟ್ರ ಮಾತ್ರವಲ್ಲ ಅಂತಾರಾಷ್ಟ್ರೀಯ ಮಟ್ಟದಲ್ಲೂ ಕಾರಂತರು ಚಿರಪರಿಚಿತ ಹೆಸರು. ಹಲವು ರಂಗಭೂಮಿಗೆ ಸಂಬಂಧಿಸಿದ ಸಂಸ್ಥೆಗಳಲ್ಲಿ ಪದಾಧಿಕಾರಿ. 'ಬೆನಕ' ತಂಡ ಕಟ್ಟಿದವರು. ಆದರ್ಶ ಫಿಲಂ ಇನ್ಸ್ಟಿಟ್ಯೂಟ್‌ನಲ್ಲಿ ಪ್ರಿನ್ಸಿಪಾಲರಾಗಿದ್ದವರು. ರಾಜ್ಯ ನಾಟಕ ಅಕಾಡೆಮಿಯ ಅಧ್ಯಕ್ಷರೂ ಆಗಿದ್ದರು.

ಇವರಿಗೆ ನಾಟಕ ಅಕಾಡೆಮಿಯು 1983ನೇ ಸಾಲಿನಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ, ಕೇಂದ್ರ ಸರ್ಕಾರ ಇವರಿಗೆ 'ಪದ್ಮಶ್ರೀ' ಪ್ರಶಸ್ತಿ ನೀಡಿದೆ.

---



## ಗಿರೀಶ ಕಾರ್ನಾಡ

ಮಹಾರಾಷ್ಟ್ರದಲ್ಲಿ ಜನಿಸಿದ್ದರೂ ಇಂದು ನಮ್ಮ ನಡುವೆ ಇರುವ ಶ್ರೇಷ್ಠ ನಾಟಕಕಾರ ಗಿರೀಶ್ ಕಾರ್ನಾಡ ಉತ್ತರ ಕನ್ನಡ ಜಿಲ್ಲೆಯವರು. ಧಾರವಾಡದಲ್ಲಿ ಪದವೀಧರರಾಗಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ತತ್ವಶಾಸ್ತ್ರ, ಅರ್ಥಶಾಸ್ತ್ರ, ರಾಜಕೀಯ ಶಾಸ್ತ್ರಗಳಲ್ಲಿ ವಿಶೇಷ ಅಧ್ಯಯನ ಮಾಡಿದ್ದಾರೆ.

ಕಂಪನಿ ನಾಟಕಗಳಲ್ಲಿ ಹೆಚ್ಚು ಆಕರ್ಷಿತರಾಗಿದ್ದ ಕಾರ್ನಾಡರು ಇಂಗ್ಲೆಂಡಿಗೆ ತೆರಳುವಾಗಲೇ ನಾಟಕ ಬರೆದರು. ಮುಂದೆ ಇಂಗ್ಲೆಂಡಿನಲ್ಲಿ ಕೂತು ಬರೆದ 'ತುಘಲಕ್' ಕನ್ನಡದ ಶ್ರೇಷ್ಠ ನಾಟಕವೆಂದು ಮನ್ನಣೆ ಗಳಿಸಿತು. ಅನಂತರ ಅವರು ಹೋಮಿ ಬಾಬಾ ಸ್ಕಾಲರ್‌ಷಿಪ್ ಪಡೆದ ಜನಪದ ತಂತ್ರ ಬಳಸಿ ಬರೆದ 'ಹಯವದನ' ಸಹ ಜನಪ್ರಿಯವಾಗಿದೆ. 1972ರಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ ಹಾಗೂ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಈ ನಾಟಕಕ್ಕೆ ಲಭಿಸಿದೆ. ಇವರ ನಾಟಕಗಳು ಹಲವು ಭಾಷೆಗಳಿಗೆ ಅನುವಾದಗೊಂಡಿವೆ. ಯಯಾತಿ, ಅಂಜುಮಲ್ಲಿಗೆ, ಹಿಟ್ಟಿನಹುಂಜ, ಮಾನಿಷಾದ ಇವರ ಇನ್ನಿತರ ನಾಟಕಗಳು. ಪುರಾಣ–ಇತಿಹಾಸಗಳಿಂದ ವಸ್ತುವನ್ನು ಆಯ್ದುರು ಹೊಸತಂತ್ರ, ಹೊಸ ಆಲೋಚನೆಗಳನ್ನು ತುಂಬಿ ಸಮಕಾಲೀನವಾಗಿರುವ ಇವರ ಪ್ರಯತ್ನ ಮೆಚ್ಚುಗೆ ಗಳಿಸಿದೆ. ಪುಣೆಯ ಫಿಲಂ ಇನ್ಸ್‌ಟಿಟ್ಯೂಟಿನಲ್ಲಿ ನಿರ್ದೇಶಕರಾಗಿದ್ದರು.

1974ರಲ್ಲಿ ಪದ್ಮಶ್ರೀ ಪಡೆದವರು. 1976–78ರವರೆಗೆ ಸಂಗೀತ ನಾಟಕ ಅಕಾಡೆಮಿ ಅಧ್ಯಕ್ಷರಾಗಿದ್ದರು.

ದೆಹಲಿ ನಾಟಕ ಶಾಲೆ ಮತ್ತಿತರ ಅನೇಕ ಕಲಾ ಸಂಸ್ಥೆಗಳ ಕಾರ್ಯಕಾರಿ ಸಮಿತಿಯಲ್ಲಿದ್ದವರು. ನಾಟಕ ಹಾಗೂ ಸಿನಿಮಾರಂಗದ ಅನೇಕ ರಾಷ್ಟ್ರೀಯ ಅಂತಾರಾಷ್ಟ್ರೀಯ ಸಮಿತಿಗಳಲ್ಲಿದ್ದಾರೆ. ದೇಶ–ವಿದೇಶಗಳಲ್ಲಿ ಇವರ ನಾಟಕಗಳು ಅನುವಾದಗೊಂಡು ಅಭಿನಯಿಸಲ್ಪಟ್ಟಿವೆ. ವರ್ಷದ ಶ್ರೇಷ್ಠ ನಾಟಕಕಾರರೆಂದು 1972ರಲ್ಲಿ ದೆಹಲಿಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, 'ಯಯಾತಿ'ಗೆ 1962ರಲ್ಲಿ ರಾಜ್ಯ ಪ್ರಶಸ್ತಿ, ಕುಲಾಧಿಪತಿಗಳ ಸ್ವರ್ಣಪದಕ ಲಭಿಸಿದೆ. ಕನ್ನಡ ರಂಗಭೂಮಿಯಿಂದ ಚಿತ್ರರಂಗಕ್ಕೆ ತೆರಳಿದ ಗಿರೀಶ್‌ಕಾರ್ನಾಡ್ ಕನ್ನಡ ಹಾಗೂ ಹಿಂದೀ ಚಿತ್ರರಂಗದಲ್ಲೂ ಸಾಕಷ್ಟು ಹೆಸರಾಗಿದ್ದಾರೆ. ಟಿ.ವಿ. ಮಾಧ್ಯಮ ಅವರನ್ನು ಮತ್ತಷ್ಟು ಜನಪ್ರಿಯರನ್ನಾಗಿಸಿದೆ. ಇವರ ನಿರ್ದೇಶನದ 'ಉತ್ಸವ್' ಇಂಗ್ಲಿಷ್ ಭಾಷೆಯಲ್ಲೂ ಸಿದ್ಧವಾಗಿದೆ.

1983ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಗಿರೀಶ್‌ಕಾರ್ನಾಡರಿಗೆ ಪ್ರಶಸ್ತಿ ನೀಡಿ ಗೌರವಿಸಿದೆ.

# 1984ರ ಪ್ರಶಸ್ತಿ ವಿಜೇತರು



## ಶ್ರೀಪಾದರಾವ್ ಗರೂಡ

ಕನ್ನಡ ರಂಗಭೂಮಿಯ ಪರಂಪರೆಯಲ್ಲಿ ಗರೂಡ ಸದಾಶಿವರಾಯರ ಹೆಸರನ್ನು ಕೇಳದವರಾರು? ಅವರ ಗರಡಿಯಲ್ಲೇ ಪಳಗಿದ ಅವರ ಮಗ ಶ್ರೀಪಾದರಾವ್ ಗರೂಡರು ಬೆಳೆದು ಬಂದ ಬಗೆ ಅವಿಸ್ಮರಣೀಯ.

ಗರೂಡ ಸದಾಶಿವರಾಯ–ಭೀಮವ್ವ ಇವರ ಪುತ್ರ ಶ್ರೀಪಾದರಾಯರು ಹುಟ್ಟಿದ್ದು 1917ರಲ್ಲಿ ಕುಂದಾಪುರದ ವಿಠಲಮಂದಿರದಲ್ಲಿ, ಗರೂಡರ ನಾಟ್ಯ ಸಂಸ್ಥೆ ಕುಂದಾಪುರದಲ್ಲಿ ಬೀಡು ಬಿಟ್ಟಿದ್ದಾಗ. ನಾಟ್ಯ ಸಂಸ್ಥೆ ಎಲ್ಲರಿಗೂ ಶಿಕ್ಷಣ ಒದಗಿಸುತ್ತಿದ್ದಂತೆ ಇವರಿಗೂ ಒದಗಿಸಿತು. ಕನ್ನಡ ಇಂಗ್ಲಿಷ್, ಉರ್ದು ಭಾಷೆಗಳಿಗೆ ಒಬ್ಬೊಬ್ಬ ಗುರು; ಸಂಗೀತದ ಅಭ್ಯಾಸಕ್ಕೆ ಹೆಸರಾಂತ ಗವಾಯಿಗಳು. ನಾಟಕದ ಪಾತ್ರಾಭಿನಯ ಶಿಕ್ಷಣವನ್ನು ನಿರ್ವಹಿಸುತ್ತಿದ್ದವರು ಸ್ವಯಂ ಗರೂಡರೇ; ರಂಗದಮೆಟ್ಟಿಲನ್ನು ಹತ್ತಿದ್ದು ಆರನೆಯ ವಯಸ್ಸಿಗೆ; "ಚೌತಿ ಚಂದ್ರ" ನಾಟಕದಲ್ಲಿ ನಾರದನ ಪಾತ್ರ, ಶ್ರೀಪಾದರಾಯರು ಯಶಸ್ವಿಯಾದರೆಂದು ಬೇರೆ ಹೇಳಬೇಕೆ? ಅವರ ಯಶಸ್ಸಿನ ಪರಾಕಾಷ್ಠೆ ಮುಟ್ಟಿದ್ದು ಹೀಗೆ:

1932–33ರಲ್ಲಿ ಗರೂಡರ ಕಂಪನಿ ಕುಂದಾಪುರಕ್ಕೆ ಮತ್ತೊಮ್ಮೆ ಭೇಟಿ. ಸ್ವದೇಶಿ ಚಳುವಳಿಯನ್ನು ಆಧರಿಸಿ ಸ್ವಯಂ ಗರೂಡರೇ ರಚಿಸಿದ 'ಸತ್ಯ ಸಂಕಲ್ಪ' ನಾಟಕದಲ್ಲಿ ಮಹಾತ್ಮಾಗಾಂಧಿಯವರ ಆಶ್ರಮದ ಒಂದು ದೃಶ್ಯದಲ್ಲಿ ಶ್ರೀಪಾದರು ಅನಾಥ ವಿಧವೆಯ ಮಗಳಾಗಿ ಅಭಿನಯಿಸಿದರು. ಅಷ್ಟೇ ಆಕಸ್ಮಿಕವಾಗಿ ಅಲ್ಲಿಗೆ ಆಗಮಿಸಿದ್ದ ಮಹಾತ್ಮರು ಥಟ್ಟನೇ ರಂಗಕ್ಕೆ ಏರಿಹೋಗಿ ಬಾಲನಟ ಶ್ರೀಪಾದರನ್ನು ಬಿಗಿದಪ್ಪಿ ಆಶೀರ್ವದಿಸಿದರು, ಇಂತಹ ಅಪೂರ್ವ ಅನುಭವ, ಆಶೀರ್ವಾದ ಯಾವ ನಟನಿಗೆ ತಾನೇ ದೊರಕೀತು? ಇದಕ್ಕಿಂತ ಯಶಸ್ಸು ಬೇಕೆ?

ರಂಗಭೂಮಿ ಬೆಳೆದಂತೆ ಶ್ರೀಪಾದರಾಯರೂ ಬೆಳೆದು ಹೊಸ ರಂಗ ಆಯಾಮಗಳನ್ನು ಕಂಡು ಕೊಂಡರು. ತಂದೆಯಂತೆ ತಾವೂ ನಾಟಕಕಾರರಾದರು. ಇಪ್ಪತ್ತನೆಯ ವಯಸ್ಸಿನಲ್ಲಿ ಅವರು ರಚಿಸಿದ ನಾಟಕ "ಕನ್ನಡದ ಕಿಡಿ".

ಗರೂಡ ಸದಾಶಿವರಾಯರು ವಾನಪ್ರಸ್ಥ ಸ್ವೀಕರಿಸಿದಾಗ, ಸಂಸ್ಥೆಯ ಹೊಣೆಯನ್ನು ಇವರೇ ಹೊತ್ತರು. ತಂದೆಯವರು ಬರೆಯುತ್ತಿದ್ದು ಅರ್ಧಕ್ಕೆ ನಿಲ್ಲಿಸಿದ್ದ "ಉಗ್ರ ಕಲ್ಯಾಣ" ವೆಂಬ ನಾಟಕವನ್ನು ಪೂರ್ತಿ ಬರೆದು ಮುಗಿಸಿದರು. ಜೊತೆಗೆ "ಮೇಳ" "ಶ್ರೀಗಿರಿ ರತ್ನ" "ಸಾಮ್ರಾಜ್ಯದೇವಿ" "ನಮ್ಮ ನಮ್ಮವರು" ಮುಂತಾದ ನಾಟಕಗಳನ್ನು ಶ್ರೀಪಾದರು ರಚಿಸಿದರು. ತಂದೆಯವರ ಮಹದಾಶೆಯಂತೆ "ಉಗ್ರಕಲ್ಯಾಣ" ನಾಟಕವನ್ನು ಪುಣೆ, ಬೆಳಗಾಂ, ಮುಂಬಯಿ, ದೆಹಲಿಗಳಲ್ಲಿ ಆಡಿ ಕನ್ನಡ ರಂಗಭೂಮಿಗೆ ರಾಷ್ಟ್ರೀಯ ನಿಲುವನ್ನು ತಂದುಕೊಟ್ಟ ಕೀರ್ತಿ ಶ್ರೀಪಾದರದು.

ವೃತ್ತಿರಂಗಭೂಮಿಯಲ್ಲಿ ಹಿರಿಯ ಸೇವೆ ಸಲ್ಲಿಸಿರುವ ಶ್ರೀಯುತರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1984–85ನೇ ಸಾಲಿನ ಪ್ರಶಸ್ತಿಯನ್ನು ಕೊಡಲು ಸಂತೋಷಿಸುತ್ತದೆ.



## ಎಂ. ಶಾಂತಕುಮಾರ

70 ವರುಷಗಳ ಹಿಂದೆ ಸೊರಬ ತಾಲ್ಲೂಕಿನ ಮುಡಗೋಡು ಗ್ರಾಮದಲ್ಲಿ ಜನಿಸಿದ ಶಾಂತಕುಮಾರರಿಗೆ ಬಾಲ್ಯದಲ್ಲಿ ದೊರೆತ ಶಿಕ್ಷಣವೆಂದರೆ ವೇದಾಧ್ಯಯನ. ಚಿಕ್ಕಂದಿನಲ್ಲೇ ಯಕ್ಷಗಾನ ಮೇಳಗಳ ಆಕರ್ಷಣೆಗೆ ಒಳಗಾದ ಇವರು ರಂಗಭೂಮಿಗೆ ಪಾದಾರ್ಪಣೆ ಮಾಡಿದ್ದು 12ನೆಯ ವಯಸ್ಸಿನಲ್ಲಿ. ಹುಟ್ಟಿನಿಂದಲೇ ಬಂದಿದ್ದು ಇವರ ಕಂಠಶಕ್ತಿ, ವಾಕ್-ಚಾತುರ್ಯ, ಹಾಗೂ ಹಾಸ್ಯ ಮನೋಭಾವ.

ಶಿಕ್ಷಣ, ಶಿಸ್ತು ಮತ್ತು ಸಂಯಮಗಳ ಗರೂಡರ ಗರಡಿಯಲ್ಲಿ ತಯಾರಾದ ಶಾಂತಕುಮಾರರು ವಹಿಸಿದ ಮೊಟ್ಟಮೊದಲ ಪಾತ್ರವೆಂದರೆ ಭಸ್ಮಾಸುರ ನಾಟಕದ ಭೃಂಗಿಯ ಪಾತ್ರ. ಅಷ್ಟಾವಕ್ರ ಶರೀರದ ಆ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸುವವರು ಸಿಗದೆ, ನಿಲ್ಲಿಸಿದ್ದ ನಾಟಕವನ್ನು ಗರೂಡ ಸದಾಶಿವರಾಯರು ಮತ್ತೆ ಚಾಲನೆ ಮಾಡಿ ತಮ್ಮ ಗರಡಿಯ ಕುಮಾರನಿಗೆ ಸತ್ವಪರೀಕ್ಷೆಯನ್ನೊಡ್ಡಿದರು. ಈ ಪರೀಕ್ಷೆಯಲ್ಲಿ ಶಾಂತಕುಮಾರರು ಎಷ್ಟರ ಮಟ್ಟಿಗೆ ಯಶಸ್ವಿಯಾದರೆಂದರೆ ಸ್ವಯಂ ಗರೂಡರೇ ರಂಗದ ಮೇಲೆ ತಮ್ಮ ನಗುವನ್ನು ನಿಯಂತ್ರಿಸಿಕೊಳ್ಳಲಾರದೆ ನಕ್ಕು ತಮ್ಮ ಶಿಷ್ಯನನ್ನು ಹರಸುವಂತಾಯಿತು.

ಅಲ್ಲಿಂದ ಈ ನಟನ ಹಾಸ್ಯಪಾತ್ರದ ಕೀರ್ತಿ ನಾಡಿನ ಎಲ್ಲ ದಿಕ್ಕುಗಳಲ್ಲಿ ಎಣೆಯಿಲ್ಲದೆ ಬೆಳೆಯಿತು. ಪ್ರತಿಯೊಂದು ನಾಟಕದಲ್ಲೂ ಇವರು ನೀಡುತ್ತಿದ್ದ ಹಾಸ್ಯದ ರಸಾನುಭವ ಪ್ರೇಕ್ಷಕರನ್ನು ತಣಿಸುತ್ತಿತ್ತು. ಇವರ ಪಾತ್ರಕ್ಕೆ ಸಂಯಮದಿಂದ ಕೂತು, ನಗು ತಡೆಹಿಡಿಯಬಲ್ಲವರಿಗೆ ನೂರು ರೂಪಾಯಿನ ಬಹುಮಾನವೆಂದು ಗರೂಡರೇ ಘೋಷಿಸುತ್ತಿದ್ದರು.

ದಿವಂಗತ ಬಿ.ಎಂ.ಶ್ರೀಯವರಿಂದ "ವಿನೋದ ವಿದ್ಯಾನಿಧಿ" ಎಂಬ ಬಿರುದನ್ನು ಪಡೆದ ಇವರು ಗರೂಡರ ಗುರುಕುಲದ ಆದರ್ಶವನ್ನು ಮುಂದಿಟ್ಟುಕೊಂಡು, ಆ ಕಾಲದ ಹಲವು ಹತ್ತು ಸಂಸ್ಥೆಗಳಲ್ಲಿ ವಿವಿಧ ಬಗೆಯ ಪಾತ್ರಗಳಲ್ಲಿ ತಮ್ಮ ಹಾಸ್ಯದ ಸೊಬಗನ್ನು ಮೆರೆಸಿದ ಕೀರ್ತಿ ಶ್ರೀ ಶಾಂತಕುಮಾರರದು.

ಇವರ ಅಚ್ಚುಮೆಚ್ಚಿನ ಪಾತ್ರಗಳು ನೂರಾರಾದರೂ ಅವುಗಳಲ್ಲಿ "ಪಾಣಿಗ್ರಹಣ" "ಕೋತಂಬರಿ ಸಾಹುಕಾರ", "ಮಲಮಗಳ"ನ ರಂಗಣ್ಣ, "ಹರಿಣಿ ಪಾಶ"ದ ಗೋವೆಕಾಕಾ, "ಎಚ್ಚಮ ನಾಯಕ"ದ ಕರಿಯಾಚೆಟ್ಟಿ ಹಾಗೂ "ಟಿಪ್ಪೂಸುಲ್ತಾನ"ದ ಮೀರ್ ಸಾದಕ್ ಪಾತ್ರಗಳು ಇಂದಿಗೂ ಸ್ಮರಣೀಯವೆನಿಸಿವೆ.

ಕರ್ನಾಟಕದ ಪ್ರತಿಯೊಂದು ಜಿಲ್ಲೆಯ ಜನರೂ ಒಂದಲ್ಲ ಒಂದು ರೀತಿಯಲ್ಲಿ ಶ್ರೀ ಶಾಂತಕುಮಾರರನ್ನು ಗೌರವಿಸಿದ್ದಾರೆ. ವೃತ್ತಿರಂಗಭೂಮಿಯಲ್ಲಿ ಹಾಸ್ಯಚಕ್ರವರ್ತಿಯಾಗಿ ಮೆರೆದ ಇವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1984–85ನೇ ಸಾಲಿನ ಪ್ರಶಸ್ತಿಯನ್ನು ಬಹಳ ಸಂತೋಷದಿಂದ ಕೊಡುತ್ತಿದೆ.



## ಕೆ.ವಿ. ಸುಬ್ಬಣ್ಣ

ಹೊರನೋಟಕ್ಕೆ ಒಬ್ಬ ಸಾಮಾನ್ಯ ಅಡಿಕೆ ಬೆಳೆಗಾರನಾಗಿ ಕಾಣುವ ಶ್ರೀ ಕೆ.ವಿ. ಸುಬ್ಬಣ್ಣ ಈಗ ಗ್ರಾಮೀಣ ರಂಗಭೂಮಿಯ ಚೈತನ್ಯ ಶಕ್ತಿ. ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಹೆಗ್ಗೋಡಿನ ಪ್ರಕೃತಿಯ ಮಡಿಲಲ್ಲಿ ಎಲೆಮರೆಯ ಕಾಯಿಯಂತೆ ಅಡಗಿ ಕುಳಿತಿರುವ ನೀನಾಸಂ ಥಿಯೇಟರ್ ಇವರ ಕೇಂದ್ರ ಶಕ್ತಿ. ಭಾರತಕ್ಕೆ ಸ್ವಾತಂತ್ರ್ಯ ಬಂದ ಆದಿಯಲ್ಲಿ ಆ ಕಾಲದ ಆದರ್ಶಗಳಿಗನುಗುಣವಾಗಿ ಹಳ್ಳಿಯ ಸಮಸ್ಯೆಗಳನ್ನು ಕುರಿತು ಚರ್ಚಿಸಲು ಸುಬ್ಬಣ್ಣ ಮತ್ತು ಇತರ ಕೆಲವು ಸ್ನೇಹಿತರು ಹುಟ್ಟು ಹಾಕಿಕೊಂಡ ನೀನಾಸಂ

(ನೀಲಕಂಠೇಶ್ವರ ನಾಟ್ಯ ಸಂಘ) ಇಂದು ಅಲ್ಲಿನ ಮತ್ತು ಅದರ ಸುತ್ತಮುತ್ತಲಿನ ಅನೇಕ ಗ್ರಾಮಗಳ ಜನರ ಜಾನಪದ, ಸಾಂಸ್ಕೃತಿಕ ನೆಲೆ ಮತ್ತು ಸೆಲೆಯಾಗಿ ಪರಿಣಮಿಸಿದೆ. ಮೊದಲು ನೀನಾಸಂ ಥಿಯೇಟರಿನ ರಂಗಪ್ರದರ್ಶನಗಳಿಗೆ ಸಿಕ್ಕಿದ ವಾಹನಗಳಲ್ಲಿ ದೌಡಾಯಿಸುತ್ತಿದ್ದ ಗ್ರಾಮವಾಸಿಗಳು ಈಗ ಕೆಲವು ವರ್ಷಗಳಿಂದ ನೀನಾಸಂ ಹಮ್ಮಿಕೊಂಡಿರುವ ಚಲನಚಿತ್ರ ರಸಗ್ರಹಣ ಶಿಬಿರಗಳಿಗೂ ತಮ್ಮ ಆಸಕ್ತಿಯನ್ನು ವಿಸ್ತರಿಸಿಕೊಂಡಿದ್ದಾರೆ. ಈಗ ರಂಗ ತರಬೇತಿ ಶಾಲೆಯೊಂದು ಆರಂಭವಾಗಿ ಕೆಲಸ ಮಾಡುತ್ತಿದೆ. ಜೊತೆಗೆ ಜನಸ್ಪಂದನ ಶಾಖೆಯ ಮೂಲಕ ಇತರ ಜಿಲ್ಲೆಯ ಹಳ್ಳಿಗಳಿಗೂ ಹೋಗಿ ನಾಟಕದ ಕಾರ್ಯಗಾರ ನಡೆಸಿ, ಪ್ರದರ್ಶನಗಳ ಮೂಲಕ ಗ್ರಾಮೀಣ ರಂಗಭೂಮಿಯಲ್ಲಿ ಹೊಸ ಆಸಕ್ತಿ ಚೈತನ್ಯಗಳನ್ನು ಬೆಳೆಸುತ್ತಿದ್ದಾರೆ.

ಅಕ್ಷರ ಪ್ರಕಾಶನದ ಮೂಲಕ ರಂಗಭೂಮಿ, ಚಲನಚಿತ್ರ ಕ್ಷೇತ್ರಕ್ಕೆ ಸಂಬಂಧಪಟ್ಟ ಅಭ್ಯಾಸ ಯೋಗ್ಯವಾದ ಗ್ರಂಥಗಳನ್ನು ಪ್ರಕಾಶಿಸಿರುತ್ತಾರೆ. ಅವರೇ ಹಲವಾರು ರಂಗಲೇಖನಗಳನ್ನೂ ಬರೆದಿರುತ್ತಾರೆ. ಕಾಳಿದಾಸನ ಶಾಕುಂತಲವನ್ನು ಹೊಸ ಅರ್ಥದೊಡನೆ ನಿರ್ದೇಶಿಸಿರುವವರಲ್ಲದೆ ಬೇರೆ ಭಾಷೆಯ ಹಲವಾರು ಶ್ರೇಷ್ಠ ನಾಟಕಗಳನ್ನೂ ಕನ್ನಡಕ್ಕೆ ಅವತರಿಸಿ ಕೊಟ್ಟಿರುತ್ತಾರೆ. ಕೆಲವು ಮಕ್ಕಳ ನಾಟಕಗಳನ್ನು ರಚಿಸಿರುವವರಲ್ಲದೆ (ಜೈಂಟ್ ಮಾಮಾ ಮುಂತಾದವು) ಹಲವು ನಾಟಕಗಳಿಗೆ ಹಾಡುಗಳನ್ನು ಬರೆದು ತಮ್ಮ ಸೃಜನಶೀಲತೆಯನ್ನು ಕಾಣಿಸಿದ್ದಾರೆ.

ಎಲ್ಲ ಸಮೂಹ ಮಾಧ್ಯಮಗಳೂ ಅಪಾರ ಹಣದ ಅಗತ್ಯತೆಯಿಂದ ತಮ್ಮ ಅರ್ಥಗಳನ್ನು ಕಳೆದುಕೊಂಡು ಜನರ ಜೊತೆ ಸಂವಾದವನ್ನೇ ಸಾಧಿಸದೆ, ಜನತೆಯ ಮೇಲೆ ಅಭಿಪ್ರಾಯ ಹೇರುವ ಸಾಧನಗಳಾಗಿ, ಜನೋಪಕಾರಿಯಾಗುವ ಬದಲು ಜನಕ್ಕೆ ಅಪಾಯಕಾರಿಯಾಗಿ, ಸಾಂಸ್ಕೃತಿಕ ಅಪಾಯಗಳೆನಿಸಿಕೊಂಡಿರುವಾಗ ಈಗಿನ ಸಂದರ್ಭದಲ್ಲಿ ಹಲವಾರು ಸಾಧನಗಳಿರುವ ರಂಗಭೂಮಿಯೊಂದೇ ಯಾವ ಕೇಂದ್ರೀಕರಣದ ಅಪಾಯಕ್ಕೆ ಈಡಾಗದೆ, ಜನರ ಜೊತೆ ನಿಜವಾದ ಸಂವಾದದ ಮಾಧ್ಯಮವಾಗಲು ಸಾಧ್ಯ ಎಂಬ ತಿಳಿವು ಸುಬ್ಬಣ್ಣನವರದು.

ರಂಗಭೂಮಿ ನಿಜವಾದ ಅರ್ಥದಲ್ಲಿ ಭಾಷೆಯಾಗಬೇಕೆಂದು ಸದಾ ಬಯಸುವ ಸುಬ್ಬಣ್ಣನವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1984–85ನೇ ಸಾಲಿನ ಪ್ರಶಸ್ತಿಯನ್ನು ಬಹಳ ಗೌರವದಿಂದ ಕೊಟ್ಟಿದೆ. ಆದರೆ ವೈಯಕ್ತಿಕ ನಂಬಿಕೆಗಳಿಂದಾಗಿ ಶ್ರೀಯುತರು ಪ್ರಶಸ್ತಿಯನ್ನು ಸ್ವೀಕರಿಸಲಾರೆನೆಂದು ತಿಳಿಸಿದ್ದಾರೆ.

---



## ನಿಂಗಯ್ಯ ಸಂಗಯ್ಯ ಪೂಜಾರಿ

ಜಾನಪದ ರಂಗಭೂಮಿಯ ಹಿರಿಯ ಕಲಾವಿದ ಶ್ರೀ ನಿಂಗಯ್ಯ ಸಂಗಯ್ಯ ಪೂಜಾರಿಯವರು ಹತ್ತನೆಯ ವಯಸ್ಸಿನಲ್ಲಿದ್ದಾಗ ಕೈಗೊಂಡ ರಂಗಭೂಮಿಯ ಕೈಂಕರ್ಯ ಈಗಿನ 60ನೇ ವಯಸ್ಸನ್ನೂ ಲೆಕ್ಕಿಸದೆ ಸಾಗಿದೆ. ಶ್ರೀಯುತರು ಆಡಿದ ನಾಟಕಗಳಲ್ಲಿ 'ಭಕ್ತ ಚೆಲ್ವಾಳ', 'ಕಾಲಚಕ್ರ', 'ದೀಪಾವಳಿ' ಹೆಸರುವಾಸಿಯೆನಿಸಿಕೊಂಡರೆ, ಇವರ 'ನಿಜಗುಣಶಿವಯೋಗಿ' ಕರ್ನಾಟಕ ಮತ್ತು ನೆರೆಯ ರಾಜ್ಯಗಳ ಪ್ರದರ್ಶನಗಳನ್ನು ಕಂಡು ಅದರ ಒಟ್ಟಾರೆ ಪ್ರಯೋಗಗಳು 2000ಕ್ಕೂ ಮೀರಿ ಅತ್ಯಂತ ಜನಪ್ರಿಯವೆನಿಸಿಕೊಂಡಿದೆ. ನಿಂಗಯ್ಯಪೂಜಾರಿಯವರ ನಿಜಗುಣ ಶಿವಯೋಗಿ ಸ್ಮರಣೀಯವೆನಿಸಿಕೊಂಡಿದೆ.

ಶ್ರೀಯುತರು ಪಾತ್ರದ ಅಭಿನಯದಿಂದ ಹೇಗೆ ಜನಮನವನ್ನು ಸೂರೆಗೊಂಡರೋ ಹಾಗೆಯೇ ಬದುಕಿನಲ್ಲೂ ಸಮಾಜ ಸೇವೆಗಿಳಿದು ಬದುಕಿನುದ್ದಕ್ಕೂ ದೀನದಲಿತರ ಸಂಕಷ್ಟಗಳಿಗೆ ನೆರವಾಗುತ್ತ ಬಂದು ಇಂದಿಗೂ ಸಾರ್ಥಕ ಜೀವನವನ್ನೇ ನಡೆಸುತ್ತ ಬಂದಿದ್ದಾರೆ. ಸಾರ್ವಜನಿಕ ಸೇವೆಯ ಜೊತೆಗೆ ಕಲಾ ಸೇವೆಯನ್ನೂ ಮಾಡುತ್ತಾ ಬಂದಿರುವ ಇವರು, 'ಜೋಕುಮಾರ ಸ್ವಾಮಿ', 'ಹಯವದನ', 'ಸಂಗ್ಯಾ ಬಾಳ್ಯಾ', 'ಜೈ ಸಿದ್ಧ ನಾಯ್ಕ' ಮುಂತಾದ ನಾಟಕಗಳನ್ನು ನಿರ್ದೇಶಿಸಿರುವವರಲ್ಲದೆ, ಅನೇಕ ಹವ್ಯಾಸೀ ಕಲಾವಿದರನ್ನೂ ಬೆಳಕಿಗೆ ತಂದ ಕೀರ್ತಿ ಇವರದು.

ತತ್ಫಲವಾಗಿ ಇವರಿಗೆ ಸಿಕ್ಕಿರುವ ಜನಮನ್ನಣೆ ಅಪಾರ. ಹಲವಾರು ಸಂಘ ಸಂಸ್ಥೆಗಳು ಇವರನ್ನು ಆದರಿಸಿ 'ಸಮಾಜ ಸುಧಾರಕ', 'ಬಡವರ ಬಂಧು', 'ಸಮಾಜ ಸೇವಾ ದುರಂಧರ' ಎಂಬ ಬಿರುದು ಬಾವಲಿಗಳನ್ನು ಇತ್ತಿದ್ದರೆ, ಕಲಾಸಂಸ್ಥೆಗಳು ಇವರಿಗೆ 'ನಾಟ್ಯ ಪ್ರವೀಣ', 'ನಾಟ್ಯಶ್ರೀ, 'ಕಲಾಶ್ರೀ, 'ಜಾನಪದ ನಾಟ್ಯ ಸಾರ್ವಭೌಮ'ರೆಂದು ಕರೆದು ಸತ್ಕರಿಸಿವೆ. ಗೋಕಾಕದಲ್ಲಿ ಸಾವಿರಾರು ನಿರ್ಗತಿಕರ ವಸತಿಗೆ ಇವರು ಸಹಾಯ ಮಾಡಿದ ಸ್ಥಳವೊಂದು ಹೊಸರೂಪವನ್ನೇ ಪಡೆದು, "ನಿಂಗಯ್ಯಸ್ವಾಮಿ ನಗರ" ಎನ್ನಿಸಿಕೊಂಡಿದೆ.

ಶ್ರೀಯುತರು 15 ವರ್ಷಗಳ ಕಾಲ ಗೋಕಾಕ ನಗರದ ಸಭಾಧ್ಯಕ್ಷರಾಗಿ ಸೇವೆ ಸಲ್ಲಿಸಿರುವವರಲ್ಲದೆ, ಗೋಕಾಕದ ಕರ್ನಾಟಕ ಸಂಘ, ಜ್ಯೋತಿ ಕಲಾವಿದರ ಸಂಘ, ಬಲಭೀಮ ನಾಟ್ಯಸಂಘ, ಜನಸೇವಾ ಸಂಘಗಳಿಗೆ ಅಧ್ಯಕ್ಷರಾಗಿ ಸೇವೆ ಸಲ್ಲಿಸಿರುವುದು ಇವರ ಮೇಲೆ ಜನತೆ ಇಟ್ಟಿರುವ ವಿಶ್ವಾಸದ ದ್ಯೋತಕವೆನ್ನಬಹುದು. ಜಾನಪದ ರಂಗಭೂಮಿಯಲ್ಲಿ ಉತ್ತಮ ಸೇವೆ ಸಲ್ಲಿಸುತ್ತಿರುವ ಶ್ರೀಯುತರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1984–85ನೇ ಸಾಲಿನ ಪ್ರಶಸ್ತಿಯನ್ನು ಕೊಡಲು ಸಂತೋಷಿಸುತ್ತದೆ.

---



## ಪಿ. ಲಂಕೇಶ್

ಇಂದು ಪತ್ರಿಕೋದ್ಯೋಗಿಯಾಗಿ ಹೆಸರು ಮಾಡಿರುವ ಲಂಕೇಶರು ಪ್ರಸಿದ್ಧಿ ಪಡೆದದ್ದು ನಾಟಕಕಾರರಾಗಿ. ನಾಟಕ ಕ್ಷೇತ್ರಕ್ಕೆ ಅವರು ಕೊಟ್ಟಿರುವ ನಾಟಕಗಳು ಅನೇಕ. ಗ್ರೀಕ್ ರಂಗಭೂಮಿಯ ರುದ್ರನಾಟಕ 'ಈಡಿಪಸ್' ಕಲಾಕ್ಷೇತ್ರದ ಬಯಲು ರಂಗಭೂಮಿಯಲ್ಲಿ ಅತ್ಯಂತ ಯಶಸ್ವಿಯಾಗಿದ್ದಕ್ಕೆ ಅವರ ಸಮರ್ಥ ಭಾಷಾಂತರವೂ ಒಂದು ಕಾರಣ. ಅಲ್ಲದೆ, ಅವರದೇ ಸ್ವಂತ ನಾಟಕಗಳಾದ 'ತೆರೆಗಳು', 'ಸಂಕ್ರಾಂತಿ', ಇವು ನಾಟಕ ಸಾಹಿತ್ಯದಲ್ಲಿ ಒಂದು ಮೈಲಿಗಲ್ಲು. ಶ್ರೀಯುತರ ಪ್ರತಿಭೆ ಕೇವಲ ನಾಟಕ ಕ್ಷೇತ್ರಕ್ಕೆ ಮೀಸಲಾದದ್ದಲ್ಲ. 'ಮುಸ್ಸಂಜೆಯ ಕಥಾ ಪ್ರಸಂಗ' ಹಾಗೂ 'ಬಿರುಕು' ಅವರ ಕಾದಂಬರಿಗಳು. 'ಬಿರುಕು' ನಾಟಕವೂ ಆಯಿತು. 'ಅಕ್ಷರ ಹೊಸ ಕಾವ್ಯ' ಅವರು ಸಂಪಾದಿಸಿದ ಆಧುನಿಕ ಕಾವ್ಯಗಳ ಸಂಕಲನ. 'ಪಲ್ಲವಿ', 'ಅನುರೂಪ', 'ಎಲ್ಲಿಂದಲೋ ಬಂದವರು' ಇವು ಅವರು ನಿರ್ದೇಶಿಸಿದ ಚಿತ್ರಗಳು. ಯಶಸ್ವೀ ಸಣ್ಣ ಕತೆಗಳನ್ನೂ, ಬಿಚ್ಚುಮನಸ್ಸಿನ ಹಾಗೂ ಮೊನಚಿನ ವಿಮರ್ಶಾ ಲೇಖನಗಳನ್ನೂ ಲಂಕೇಶರು ಬರೆದಿದ್ದಾರೆ. "ಪಲ್ಲವಿ" ಚಿತ್ರಕ್ಕೆ ರಾಷ್ಟ್ರ ಪ್ರಶಸ್ತಿ ಬಂದಿದೆ. 'ಅನುರೂಪ' ಕ್ಕೆ ಪ್ರಾಂತೀಯ ಪ್ರಶಸ್ತಿ ಲಭಿಸಿದೆ.

1935ರಲ್ಲಿ ಶಿವಮೊಗ್ಗೆಯಲ್ಲಿ ಹುಟ್ಟಿ ಆಂಗ್ಲಭಾಷೆಯಲ್ಲಿ ಎಂ.ಎ. ಪದವಿ ಪಡೆದು, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಹಲವಾರು ವರ್ಷ ಅಧ್ಯಾಪಕರಾಗಿದ್ದ ಇವರು ಕೆಲವು ವರುಷಗಳ ಹಿಂದೆ ರಾಜೀನಾಮೆ ನೀಡಿ ಪತ್ರಿಕೋದ್ಯಮಕ್ಕೆ ಧುಮುಕಿ ಕನ್ನಡದಲ್ಲಿ ವಾರಪತ್ರಿಕೆಯೊಂದನ್ನು ಸ್ಥಾಪಿಸಿ ಅದನ್ನು ಜಾಹೀರಾತಿನ ಸಹಾಯವಿಲ್ಲದೆ ನಡೆಸಿಕೊಂಡು ಬರುತ್ತಿರುವ ಕೀರ್ತಿ ಇವರದು. ಅವಿರತವಾದ ಇವರ ಲೇಖನಿಯಿಂದ ಇನ್ನೂ ಹೆಚ್ಚಿನ ಮಹತ್ವದ ನಾಟಕಗಳನ್ನು ಆಶಿಸುತ್ತ ಅಕಾಡೆಮಿಯು 1984–85ನೇ ಸಾಲಿನ ಪ್ರಶಸ್ತಿಯನ್ನು ಶ್ರೀ ಲಂಕೇಶರಿಗೆ ಪ್ರೀತಿಯಿಂದ ಕೊಡುತ್ತಿದೆ.

---

## 1985ರ ಪ್ರಶಸ್ತಿ ವಿಜೇತರು



### ಪರ್ವತವಾಣಿ

ಕನ್ನಡ ನವೋದಯ ಸಾಹಿತ್ಯದ ಆಧುನಿಕ ನಾಟಕಕಾರರಲ್ಲಿ ಒಂದು ಮಹತ್ವದ ಹೆಸರು. ಅಭಿನಯ, ನಿರ್ದೇಶನ, ಕಲೆ ಹಾಗೂ ಸಾಹಿತ್ಯರಚನೆ ಈ ಮೂರೂ ವಿಶೇಭವಿಸಿರುವ ಪರ್ವತವಾಣಿ ಹುಟ್ಟಿದ್ದು 1911ರ ಸೆಪ್ಟೆಂಬರ್ 2ರಂದು ಬೆಂಗಳೂರಿನಲ್ಲಿ. ಸದಾ ನಗುಮುಖಿದ ಪರ್ವತವಾಣಿ ನರಸಿಂಗರಾವ್ ಎಂಬ ಯುವಕ ಮೊದಲು ರಂಗಪ್ರವೇಶ ಮಾಡಿದ್ದು ನಟನಾಗಿ – ಅದೂ ಕೃಷ್ಣನ ಪಾತ್ರದಲ್ಲಿ. ಹೀಗೆ ಆಕಸ್ಮಿಕವಾಗಿ ರಂಗಪ್ರವೇಶ ಮಾಡಿದ ಯುವಕ ನರಸಿಂಗರಾವ್‌ಗೆ 'ನಾಟಕ ಬರೆದು ಒಂದು ಕೈ ನೋಡಿದರೆ ಹೇಗೆ ಅನ್ನಿಸಿ'ದಾಗ ನಾಟಕಕಾರ ಪರ್ವತವಾಣಿಯ ಜನನವಾಯಿತು.

ಕೈಲಾಸಂ ನಂತರ ಸಾಮಾಜಿಕ ನಾಟಕಗಳ ಸೃಷ್ಟಿಯಲ್ಲಿ ಅಗ್ರಗಣ್ಯರಾದ ಪರ್ವತವಾಣಿ ಶೇಕ್ಸ್‌ಪಿಯರ್, ಗೋಲ್ಡ್‌ಸ್ಮಿತ್, ಶೆರಿಡನ್, ಸ್ಟೀವನ್ಸನ್, ಇಬ್ಸನ್, ಚೆಕಾವ್, ಗಾರ್ಕಿ, ಗೊಗೊಲ್, ಮೋಲಿಯೇರ್ ಮೊದಲಾದವರ ಪಾತ್ರಗಳನ್ನು ಕನ್ನಡಕ್ಕೆ ತಂದು ಅವರ ಹೃದಯಕ್ಕೆ ಕನ್ನಡ ಸಂಸ್ಕೃತಿಯನ್ನು ಕಸಿ ಮಾಡಿ ಅವರನ್ನು ಗುಂಡ, ಕಿಟ್ಟಿ, ರಾಮು, ರವಿ, ಕಮಲ, ಸೀನಿ, ಭೀಮು ಆಗಿ ಅಚ್ಚ ಕನ್ನಡಿಗರನ್ನಾಗಿಸಿ ಕನ್ನಡ ನಾಟಕ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯನ್ನು ನೀಡಿದ್ದಾರೆ. ಸುಮಾರು ಎಪ್ಪತ್ತೈದಕ್ಕೂ ಹೆಚ್ಚು ನಾಟಕಗಳನ್ನು ಬರೆದಿರುವ ಪರ್ವತವಾಣಿ ರೂಪಾಂತರಗಳಿಗೆ ಹೆಸರಾದವರು. ಅವರ ರೂಪಾಂತರ ನಾಟಕಗಳಾದ ಬಹದ್ದೂರ್ ಗಂಡ, ಉಂಡಾಡಿ ಗುಂಡ, ಸುಂದ್ರೋಪ ಸುಂದ್ರು, ಹಣಹದ್ದು, ರೋಗಾಲಾಪನೆ ಮೊದಲಾದವುಗಳ ಭವ್ಯತೆ ಮತ್ತು ಜನಪ್ರಿಯತೆ ಪರ್ವತವಾಣಿಯವರ ಸ್ವತಂತ್ರ ನಾಟಕಗಳನ್ನು ಹಿಂದೆ ಸರಿಸಿದೆ ಎನ್ನಬಹುದೇನೊ? ತಪ್ಪು ಹೆಜ್ಜೆ, ಸಪ್ತಪದಿ, ಮೊರೆನ್ ಮಾಲ್ ಮೊದಲಾಗಿ ಪರ್ವತವಾಣಿಯವರು ಸುಮಾರು ಇಪ್ಪತ್ತಮೂರಕ್ಕೂ ಹೆಚ್ಚು ಸ್ವತಂತ್ರ ನಾಟಕಗಳನ್ನು ಬರೆದಿದ್ದಾರೆ. ಸಾಹಿತ್ಯಕ ಮೌಲ್ಯ ಮತ್ತು ನಾಟಕದ ಬಂಧದಲ್ಲಿ ತಮ್ಮದೇ ಆದ ವೈಶಿಷ್ಟ್ಯ ಸಾಧಿಸಿ, ಕನ್ನಡ ನಾಟಕ ಸಾಹಿತ್ಯದಲ್ಲಿ ತಮ್ಮ ವಿಶಿಷ್ಟ ಛಾಪು ಮೂಡಿಸಿರುವ ಪರ್ವತವಾಣಿಯವರು ಕನ್ನಡ ಹವ್ಯಾಸಿ ರಂಗಭೂಮಿಯ ಬೆಳವಣಿಗೆಯಲ್ಲಿ ಮುಖ್ಯ ಕೊಂಡಿಯಾಗಿದ್ದಾರೆ. ಯುವಜನರಲ್ಲಿ ರಂಗಭೂಮಿಯ ಅಭಿರುಚಿ ಹುಟ್ಟಿಸುವುದರಲ್ಲಿ ಪರ್ವತವಾಣಿಯವರ ಪಾಲು ದೊಡ್ಡದು. ನಟ–ನಟಿಯರು ಮತ್ತು ನಿರ್ದೇಶಕರನ್ನು ಹುಟ್ಟಿಸುವುದರಲ್ಲಿ ಪರ್ವತವಾಣಿಯವರ ಉಂಡಾಡಿಗುಂಡ, ಬಹದ್ದೂರ್ ಗಂಡ, ಮೀನ ಮದುವೆ, ಇಷ್ಟಾರ್ಥ ಮೊದಲಾದ ನಾಟಕಗಳ ಕೊಡುಗೆ ಹೆಚ್ಚಿನದು. ಶಾಲಾ ಕಾಲೇಜುಗಳ ಹಂತದಲ್ಲೆ ಈ ನಾಟಕಗಳ ಮೂಲಕ ನಟಿ–ನಟ–ನಿರ್ದೇಶಕರ ಹೊಸ ಜನಾಂಗ ಹುಟ್ಟಿದೆ, ಹುಟ್ಟುತ್ತದೆ.

ಕೃಷ್ಣನಿಂದ ನಾಗತ್ತೆಯವರೆಗೆ ಹಲವಾರು ಪಾತ್ರಗಳನ್ನು ಅಭಿನಯಿಸಿರುವ ಪರ್ವತವಾಣಿ ಚಲನಚಿತ್ರಗಳಲ್ಲೂ ನಟಿಸಿದ್ದಾರೆ. ಪಲ್ಲವಿ, ದಂಗೆ ಎದ್ದ ಮಕ್ಕಳು ಮೊದಲಾದವು ಪರ್ವತವಾಣಿ ನಟಿಸಿರುವ ಚಿತ್ರಗಳು. ಎಪ್ಪತ್ತೇಳು ವರ್ಷದ ಪರ್ವತವಾಣಿ ಇಂದಿಗೂ ರಂಗಭೂಮಿಯಲ್ಲಿ "ಯುವಕ". ಈಗ ನಂಕಂಪ್ನಿ ಎಂಬ ತಂಡ ಕಟ್ಟಿ ನಾಟಕಗಳನ್ನು ನಿರ್ದೇಶಿಸುತ್ತಿದ್ದಾರೆ, ಸ್ವತಃ ಪಾತ್ರಗಳನ್ನು ಮಾಡುತ್ತಿದ್ದಾರೆ, ಸುತ್ತಲ ಸಮಾಜದ ಆಗುಹೋಗುಗಳಿಗೆ ಸ್ಪಂದಿಸಿ ನಾಟಕಗಳನ್ನು ರಚಿಸುತ್ತಿದ್ದಾರೆ. ಹೀಗೆ ತಮ್ಮ ನಿವೃತ್ತಿಯನ್ನು ಪ್ರವೃತ್ತಿಗೆ ಸದುಪಯೋಗಪಡಿಸಿಕೊಳ್ಳುತ್ತಿರುವ ಪರ್ವತವಾಣಿಯವರಿಗೆ ಪ್ರಶಸ್ತಿ–ಗೌರವರ ಹೊಸತಲ್ಲ. ಕನ್ನಡ ಸಾಹಿತ್ಯ ಪರಿಷತ್ತು, ರಾಜ್ಯ ಸಾಹಿತ್ಯ ಅಕಾಡೆಮಿ, ಕೇಂದ್ರ ಸಂಗೀತ ನಾಟಕ ಅಕಾಡೆಮಿ ಹಾಗೂ ರಾಜ್ಯ ಪ್ರಶಸ್ತಿಗಳನ್ನು ಪಡೆದಿರುವ ಧೀಮಂತ ಪರ್ವತವಾಣಿಯವರಿಗೆ 1985ನೇ ಸಾಲಿನ ಪ್ರಶಸ್ತಿ ನೀಡಿ ಗೌರವಿಸುವುದರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಧನ್ಯತೆಯನ್ನು ಕಂಡುಕೊಂಡಿದೆ.



## ವಿ. ರಾಮಮೂರ್ತಿ

ರಂಗಭೂಮಿಯ ಬೆಳಕಿಗೆ ಅನ್ವರ್ಥನಾಮ ಈ ಹೆಸರು. ಕನ್ನಡ ಹವ್ಯಾಸಿ ರಂಗಭೂಮಿಯಲ್ಲಿ ಬೆಳಕೆಂದರೆ ರಾಮಮೂರ್ತಿ, ರಾಮಮೂರ್ತಿಯೆಂದರೆ ಬೆಳಕು. ಬೆಳಕಿನ ಜೊತೆ ಇಂಥ ಸಮಾನಾರ್ಥ ಗಳಿಸಿಕೊಂಡಿರುವ ರಾಮಮೂರ್ತಿ ಕಳೆದ ಮೂವತ್ತೂರು ವರ್ಷಗಳಿಂದ ರಂಗಭೂಮಿಯಲ್ಲಿ ದುಡಿಯುತ್ತಿರುವ ಬಹುಮುಖ ಪ್ರತಿಭೆಯ ಸೃಜನಶೀಲ ಕಲಾವಿದ. ಬೆಳಕಿನಷ್ಟೇ ರಂಗಭೂಮಿಯ ಇತರ ವಿಭಾಗಗಳಾದ ಅಭಿನಯ, ನಿರ್ದೇಶನ, ರಂಗವಿನ್ಯಾಸ, ಸಂಗೀತ ಸಂಯೋಜನೆ ಮೊದಲಾದವುಗಳೂ ರಾಮಮೂರ್ತಿಗೆ ಕರತಲಾಮಲಕ.

ಶಾಲಾಕಾಲೇಜಿನ ದಿನಗಳಲ್ಲೇ ರಂಗಭೂಮಿಯ ಒಲವು ಬೆಳೆಸಿಕೊಂಡ ರಾಮಮೂರ್ತಿ ಶಿಸ್ತುಪ್ರಿಯರು. ಯಾವುದನ್ನೂ ವೃತ್ತಿಪರ ಶಿಸ್ತಿನಿಂದ ಕಲಿಯಬೇಕು, ಕಾಯಕಮಾಡಬೇಕು ಎಂದು ನಂಬಿದವರು. ಈ ದೃಢನಂಬಿಕೆಯಿಂದ, ರಂಗಭೂಮಿಯಲ್ಲಿ ತಮ್ಮನ್ನು ಇಡಿಯಾಗಿ ತೊಡಗಿಸಿಕೊಳ್ಳಲು ಐ.ಟಿ.ಐ. ಕೆಲಸಕ್ಕೆ ರಾಜೀನಾಮೆ ನೀಡಿದರು. ಮುಂದೆ ರಾಷ್ಟ್ರೀಯ ನಾಟಕ ಶಾಲೆಗೆ ಹೋಗಿ ನಿರ್ದೇಶನದಲ್ಲಿ ಪದವಿ ಪಡೆದರು. 1964ರಲ್ಲಿ ಪ್ರಾರಂಭವಾದ ರಾಷ್ಟ್ರೀಯ ನಾಟಕ ಶಾಲೆಯ ರೆಪರ್ಟರಿಯ ಪ್ರಪ್ರಥಮ ರಂಗನಿರ್ವಾಹಕ (ಸ್ಟೇಜ್ ಮ್ಯಾನೇಜರ್)ರಾಗಿ ನೇಮಕಗೊಂಡರು.

ರಾಮಮೂರ್ತಿಯವರಿಗೆ ಬೆಳಕಿನ ವಿನ್ಯಾಸದ ಸ್ಫೂರ್ತಿ ಬಂದದ್ದು ರಾಷ್ಟ್ರೀಯ ನಾಟಕ ಶಾಲೆಯ ಬೆಳಕಿನ ಪ್ರಾಚಾರ್ಯ ಜಿ.ಎನ್. ದಾಸಗುಪ್ತಾ ಅವರಿಂದ. ಹೀಗೆ ಶುರುವಾದ ಬೆಳಕಿನ ಜ್ಞಾನದಾಹ ರಾಮಮೂರ್ತಿಯವರನ್ನು ಅಮೆರಿಕಕ್ಕೂ ಒಯ್ದಿತು. ಹೊನಲುಲು ನಗರದ ಈಸ್ಟ್‌ವೆಸ್ಟ್ ಸೆಂಟರಿನ ವಿದ್ಯಾರ್ಥಿವೇತನ ಪಡೆದ ರಾಮಮೂರ್ತಿ ಹವಾಯ್ ವಿಶ್ವವಿದ್ಯಾನಿಲಯದ ನಾಟಕ ವಿಭಾಗದಲ್ಲಿ ರಂಗತಂತ್ರ (ಥಿಯೇಟರ್ ಟೆಕ್ನಿಕ್)ದಲ್ಲಿ ತರಬೇತಿ ಪಡೆದರು. ನಂತರ ಯು.ಎಸ್. ಇನ್‌ಸ್ಟಿಟ್ಯೂಟ್ ಆ್ ಟೆಕ್ನಾಲಜಿ ಸಂಸ್ಥೆಯ ವಿದ್ಯಾರ್ಥಿವೇತನ ಪಡೆದು ಬೆಳಕು ಮತ್ತು ರಂಗತಂತ್ರ (ಲೈಟಿಂಗ್ ಅಂಡ್ ಥಿಯೇಟರ್ ಟೆಕ್ನಿಕ್) ದಲ್ಲಿ ವಿಶೇಷ ಅಧ್ಯಯನ ನಡೆಸಿ ಪದವಿ ಪಡೆದರು.

ನ್ಯೂಯಾರ್ಕಿನಲ್ಲಿದ್ದಾಗ ಆಫ್ ಬ್ರಾಡ್ವೆ ಮತ್ತು ಆಫ್ ಆಫ್ ಬ್ರಾಡ್ವೆಯ ನೃತ್ಯ ಮತ್ತು ನಾಟಕಗಳಿಗೆ ಬೆಳಕಿನ ವಿನ್ಯಾಸ ರೂಪಿಸಿ ಅನುಭವ ಬೆಳೆಸಿಕೊಂಡ ರಾಮಮೂರ್ತಿ ಪಾಶ್ಚಾತ್ಯ ರಂಗಭೂಮಿಯ ದಿಗ್ಗಂತಿಗಳೆನಿಸಿದ ಡಾ॥ ಜೋಲ್ ರೂಬಿನ್, ಡಾ॥ ರಿಚರ್ಡ್ ಶೆಕ್ನರ್ ಮೊದಲಾದವರ ಜೊತೆ ಕೆಲಸ ಮಾಡಿದ್ದಾರೆ. ಅಮೆರಿಕದಲ್ಲಿದ್ದಾಗ ನಮ್ಮ ಕೈಲಾಸಂ ಮತ್ತು ಶ್ರೀರಂಗರ ನಾಟಕಗಳನ್ನು ಇಂಗ್ಲಿಷ್‌ಗೆ ಅನುವಾದಿಸಿ ಅಮೆರಿನ್ನರಿಗೆ ಕನ್ನಡ ರಂಗಭೂಮಿಯ ಸಿರಿವಂತಿಕೆಯನ್ನು ತೋರಿಸಿದ ಕೀರ್ತಿ ರಾಮಮೂರ್ತಿಯವರದು.

ನೂರಾರು ನಾಟಕಗಳಿಗೆ ಬೆಳಕು ವಿನ್ಯಾಸ, ರಂಗವಿನ್ಯಾಸ, ನಿರ್ದೇಶನ, ಸಂಗೀತ ನೀಡಿರುವ ರಾಮಮೂರ್ತಿ ಉತ್ತಮ ನಟ, ಗಾಯಕ ಹಾಗೂ ಪಾಶ್ಚಾತ್ಯ ನೃತ್ಯವನ್ನೂ ಕಲಿತಿರುವ ಪ್ರಬುದ್ಧ ಕಲಾವಿದ. ಸಿನಿಮಾದಲ್ಲೂ ಕಾಲಿಟ್ಟ ರಂಗಭೂಮಿಯ ಈ 'ವಾಮನ' ಅಮೆರಿಕದ 'ದಿ ಅಸ್ಸಾಸಿನ್' ಟಿ.ವಿ. ಚಿತ್ರದಲ್ಲಿ ಹಾಗೂ 'ಒಂದಾನೊಂದು ಕಾಲದಲ್ಲಿ' ಮತ್ತು 'ಅನ್ವೇಷಣೆ' ಕನ್ನಡ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

ಭಾರತದ ವಿವಿಧ ಕಡೆಗಳಲ್ಲಿ ನಡೆದ ರಂಗ ಕಮ್ಮಟಗಳಲ್ಲಷ್ಟೇ ಅಲ್ಲದೆ ಶ್ರೀಲಂಕಾದಲ್ಲಿ ನಡೆದ ರಂಗ ಕಮ್ಮಟದಲ್ಲೂ ರಾಮಮೂರ್ತಿ ಮೌನಾಭಿನಯ, ಬೆಳಕು ಮತ್ತು ರಂಗವಿನ್ಯಾಸಗಳ ಬಗ್ಗೆ ಬೋಧಿಸಿದ್ದಾರೆ. ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರ, ಚೌಡಯ್ಯ ಸ್ಮಾರಕ ಭವನ, ಯವನಿಕಾ, ಗುರುನಾನಕ್ ಭವನ ಸೇರಿದಂತೆ ರಾಷ್ಟ್ರಾದ್ಯಂತ ಸುಮಾರು ಹದಿನೈದು ರಂಗಮಂದಿರಗಳಿಗೆ ಬೆಳಕಿನ ವ್ಯವಸ್ಥೆಯ ವಿನ್ಯಾಸ ರೂಪಿಸಿದ ಹೆಗ್ಗಳಿಕೆ ರಾಮಮೂರ್ತಿಯವರದು. ಬೆಂಗಳೂರಿನ ಹವ್ಯಾಸಿ ರಂಗಭೂಮಿಗೆ ಹೊಸ ದಿಕ್ಕು ತೋರಿದ ಬಯಲು ರಂಗಭೂಮಿಯ ಕಾರಣಪುರುಷ ಈ ರಾಮಮೂರ್ತಿ, ರಂಗಭೂಮಿಯಲ್ಲಿ ಬೆಳಕಿನ ವೈಜ್ಞಾನಿಕ ಬಳಕೆ, ರಂಗವಿನ್ಯಾಸ ಸಂಗೀತ ಮೊದಲಾದವುಗಳಲ್ಲಿ

ಯುವಪೀಳಿಗೆಯಲ್ಲಿ ಆಧುನಿಕ ಪ್ರಜ್ಞೆ ಬೆಳೆಸುತ್ತಾ, ವಿಸಿಟಿಂಗ್ ಪ್ರೊಫೆಸರ್ ಆಗಿ ಬೋಧಿಸುತ್ತಾ ಇಂದು ದೆಹಲಿ, ನಾಳೆ ಅಮೃತಸರ, ನಾಡಿದ್ದು ಮದ್ರಾಸ್, ಅದರ ಮರುದಿನ ಭೋಪಾಲ್ ಎಂದು ಹಾರುತ್ತ ಕನ್ನಡ ರಂಗಭೂಮಿ ಮಾತ್ರವಲ್ಲ ಭಾರತೀಯ ರಂಗಭೂಮಿಯ ಬೆಳವಣಿಗೆಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ತಮ್ಮ ಕಾಣಿಕೆ ಸಲ್ಲಿಸುತ್ತಿರುವ ರಾಮಮೂರ್ತಿ ನಿಷ್ಠಾವಂತ ರಂಗಕರ್ಮಿ. ಪಾದರಸದಂತೆ ಓಡಾಡುತ್ತಾ ಎಲ್ಲಿ ನಾಟಕವಾದರೆ ಅಲ್ಲಿ, ಎಲ್ಲಿ ರಂಗಭೂಮಿಯ ಕೆಲಸವಾದರೆ ಅಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಈ ಧೀಮಂತ ರಂಗಕರ್ಮಿ ರಾಮಮೂರ್ತಿಗೆ ಕರ್ನಾಟಕ ನಾಟಕ ಅಕಾಡೆಮಿ 1985ರ ಪ್ರಶಸ್ತಿಯನ್ನು ಅತ್ಯಂತ ಸಂತೋಷದಿಂದ ನೀಡಿ ಗೌರವಿಸುತ್ತಿದೆ.

## ಎಚ್.ಎನ್. ಹೂಗಾರ



ತಮ್ಮ ಹೆಸರಿನಲ್ಲೇ ಹೂವಿನ ಸುಗಂಧ ಹೊಂದಿರುವ ನಾಟಕಕಾರ ಎಚ್.ಎನ್. ಹೂಗಾರರು ಹೂವಿನಷ್ಟೇ ಕೋಮಲ ಸ್ವಭಾವದವರು, ವಿನಯಶೀಲರು. ಬಾಲ್ಯದಿಂದಲೇ ನಾಟಕದ ಗೀಳು ಹಚ್ಚಿಸಿಕೊಂಡ ಹೂಗಾರರು 1932ರಲ್ಲಿ ಜನ್ಮ ತಾಳಿದರು. ಕಲೆ ಹೂಗಾರರಲ್ಲಿ ವಂಶವಾಹಿಯಾಗಿ ಹರಿದುಬಂದಿದೆ. ತಂದೆ ನಾಗಪ್ಪನವರು, ತಾತ ಅಂದಾನಪ್ಪನವರು ಪ್ರಸಿದ್ಧ ತಬಲಾ ವಾದಕರು. ಹೂಗಾರರಲ್ಲಿ ಸಂಗೀತದ ಜೊತೆ ನಾಟ್ಯವೂ ಮೇಳೈಸಿ ನಾಟಕಕಾರ ಎಚ್.ಎನ್. ಹೂಗಾರರ ಜನನವಾಯಿತು.

ಬಾಲ್ಯದಿಂದಲೇ ಶಾಲೆಯಲ್ಲಿ ಪೌರಾಣಿಕ ಪಾತ್ರಗಳನ್ನು ಆಯ್ದುಕೊಂಡು ಏಕಪಾತ್ರಾಭಿನಯ ಮಾಡಿ ಮಾಸ್ತರರಿಂದ ಭೇಷ್ ಎನ್ನಿಸಿಕೊಳ್ಳುತ್ತಿದ್ದ ಹೂಗಾರರ ಹೃದಯದೊಳಗಿನ ಸಾಹಿತ್ಯಚೇತನ ಎಚ್ಚರಗೊಂಡದ್ದು ತನ್ನ ಸುತ್ತಲ ಸಮಾಜದ ಆಗುಹೋಗುಗಳನ್ನು ಕಂಡಾಗ. ಹುಡುಗ ಎಚ್.ಎನ್. ಹೂಗಾರ ನಾಲ್ಕನೆಯ ತರಗತಿಯಲ್ಲಿ ಓದುತ್ತಿರುವಾಗಲೇ ತಂದೆ ತೀರಿಕೊಂಡರು.

ಕುಟುಂಬದ 'ಹೂಗಾರ' ವೃತ್ತಿ ಬಾಲಕನ ಮೇಲೆ ಬಿತ್ತು, ಹೊತ್ತಾರೆ ಎದ್ದು ಹೂವು, ಪತ್ರೆಗಳನ್ನು ಸಮಾಜದ ಹತ್ತೂ ಸಮಸ್ತರ ಮನೆಗೆ ಹಂಚುವ ಕೆಲಸ. ಮನೆ ಮನೆಗೆ ಹೂ ಪತ್ರೆ ಕೊಡಲು ಹೋದಾಗ ಕಂಡ ಒಂದೊಂದು ಸಂಸಾರ ಚಿತ್ರವೂ ನಾಟಕಕಾರ ಹೂಗಾರರ ಮನಃಪಟಲದ ಮೇಲೆ ದೃಶ್ಯವತ್ತಾಗಿ ಮೂಡಿದವು. ತಾವು ಕಂಡ ಸಂಸಾರ ಚಿತ್ರಗಳನ್ನು ದೃಶ್ಯವತ್ತಾಗಿ ಕಲ್ಪಿಸಿಕೊಂಡು ಭಾವುಕರಾಗುತ್ತಿದ್ದ ಹೂಗಾರರು ಮೊದಲ ನಾಟಕ ಬರೆದದ್ದು 1950ರಲ್ಲಿ – ಭಕ್ತಿ ಜ್ಯೋತಿ ಎಂಬ ಸಾಮಾಜಿಕ. ಹೀಗೆ ನಾಟಕ ರಚನೆಯ ಹಾದಿಯಲ್ಲಿ ಹೆಜ್ಜೆ ಮೂಡಿಸಿದ ಎಚ್.ಎನ್. ಹೂಗಾರರು ಇಲ್ಲಿಯವರೆಗೆ ಹಿಂದೆ ನೋಡಿಲ್ಲ. ನಾಟಕಗಳನ್ನು ಬರೆಯುವುದರಲ್ಲಿ ಆನಂದ, ತೃಪ್ತಿ ಕಾಣುತ್ತ ಮುನ್ನಡೆದಿದ್ದಾರೆ.

ಸಂಸಾರ ಚಿತ್ರಗಳು, ಆಪ್ತ ಸಂಬಂಧಗಳು, ಸಾಮಾಜಿಕ ಸಮಸ್ಯೆಗಳು ಹೂಗಾರರ ನಾಟಕಗಳ ವಸ್ತು. ಕುಚಿ–ರುಚಿಗಳೆರಡನ್ನೂ ಕಾಪಾಡಿಕೊಂಡು ತನ್ನ ಸುತ್ತಲ ಸಮಾಜಕ್ಕೆ ಸ್ಪಂದಿಸುತ್ತಾ, ಸಮಾಜದ ಆಗುಹೋಗುಗಳನ್ನು ಮುದ್ದಾಮಾಗಿ ತಮ್ಮ ನಾಟಕಗಳ ತೆಕ್ಕೆಗೆ ಒಗ್ಗಿಸಿಕೊಂಡು ಸದಭಿರುಚಿಯ ನಾಟಕಗಳನ್ನು ಕೊಡುತ್ತಾ ಬಂದಿರುವ ಎಚ್.ಎನ್. ಹೂಗಾರರು ಇಂದು ಉತ್ತರ ಕರ್ನಾಟಕದಲ್ಲಿ ಮನೆಮಾತಾಗಿರುವ ಹೆಸರು. ಈಗೀಗ ಇವರು ಹಳೆಯ ಮೈಸೂರಿಗೂ ಪರಿಚಿತರು. ಹೂಗಾರರ ನಾಟಕವೆಂದರೆ ಜನ ಕಿಕ್ಕಿರಿದು ಸೇರುತ್ತಾರೆ. ಹೂಗಾರರು ಅರವತ್ತಕ್ಕೂ ಹೆಚ್ಚು ನಾಟಕಗಳನ್ನು ಬರೆದಿದ್ದಾರೆ. ಸಾವಿರಕ್ಕೂ ಹೆಚ್ಚು ಪ್ರಯೋಗಗಳನ್ನು ಕಂಡ ಯಶಸ್ಸು ಇವರ ನಾಟಕಗಳದು. ರಂಗದಮೇಲೆ ಸಿಲ್ವರ್ ಜ್ಯೂಬಿಲಿ, ಗೋಲ್ಡನ್ ಜ್ಯೂಬಿಲಿ, ಪ್ಲಾಟಿನಂ ಜ್ಯೂಬಿಲಿ ಕಂಡ ಕೀರ್ತಿ ಇವರ ನಾಟಕಗಳದು. ಆದುದರಿಂದಲೇ ಹುಬ್ಬಳ್ಳಿಯ ಪತ್ರಕರ್ತರ ಸಂಘ ಹೂಗಾರರ ಟೊಪ್ಪಿಗೆಗೆ 'ಜ್ಯೂಬಿಲಿ ಕವಿ' ಎಂಬ ಬಿರುದಿನ ನವಿಲುಗರಿಯನ್ನು ಸಿಕ್ಕಿಸಿ ಹೆಮ್ಮೆಪಟ್ಟಿದೆ.

ಹೂಗಾರರು ಕೇವಲ ನಾಟಕಕಾರರಷ್ಟೇ ಅಲ್ಲ. ನಟರೂ ಹೌದು. ಬಹುತೇಕ ಉತ್ತರ ಕರ್ನಾಟಕದ ಎಲ್ಲ ಕಂಪನಿಗಳಲ್ಲೂ ಪಾತ್ರ ಮಾಡಿರುವ ಹೂಗಾರರು ರಂಗದಮೇಲೆ ಒಳ್ಳೆಯ ಹಾಸ್ಯಗಾರ ಎಂದು ಹೆಸರುಮಾಡಿದ್ದಾರೆ. ಸಿನಿಮಾಗಳಲ್ಲೂ ನಟಿಸಿರುವ ಹೂಗಾರರ ಹಲವಾರು ನಾಟಕಗಳು ಸಿನಿಮಾಗಳಾಗಿವೆ. ಬಿ.ಆರ್. ಪಂತುಲು ಅವರ 'ಕಿತ್ತೂರು ಚೆನ್ನಮ್ಮ' ಚಿತ್ರಕ್ಕೆ ಹೂಗಾರರದೇ ಸಂಭಾಷಣೆ. 1970ರಲ್ಲಿ ಬಸವೇಶ್ವರ ನಾಟ್ಯ ಸಂಘ ಎಂಬ ಕಂಪನಿಯನ್ನು ಸ್ಥಾಪಿಸಿ ಅದನ್ನು ಐದು ವರ್ಷಗಳಕಾಲ ಯಶಸ್ವಿಯಾಗಿ ನಡೆಸಿದ ಸಾಹಸಿ ಹೂಗಾರರು. ಸದಭಿರುಚಿಯ ನಾಟಕಗಳನ್ನು ಕೊಡುತ್ತಾ ಪ್ರೇಕ್ಷಕರ ಪ್ರಶಂಸೆಗೆ ಪಾತ್ರರಾಗಿರುವ ಹೂಗಾರರು ಕಂಪನಿ ನಾಟಕಕಾರರಲ್ಲಿ ಅಗ್ರಪಂಕ್ತಿಯಲ್ಲಿ ನಿಲ್ಲುವವರು. ಪ್ರತಿಭಾವಂತ ನಟ, ನಾಟಕಕಾರ ಎಚ್.ಎನ್. ಹೂಗಾರರನ್ನು ಕರ್ನಾಟಕ ನಾಟಕ ಅಕಾಡೆಮಿ ಇಂದು 1985ರ ಪ್ರಶಸ್ತಿ ನೀಡುವ ಮೂಲಕ ಅತ್ಯಂತ ಸಂತೋಷ–ಹೆಮ್ಮೆಗಳಿಂದ ಗೌರವಿಸುತ್ತಿದೆ.

---



## ಅಲತಗಿ ಯಮುನವ್ವ

ಉತ್ತರ ಕರ್ನಾಟಕದ ಜಾನಪದ ರಂಗಭೂಮಿಯ ಅಭಿನೇತ್ರಿಯರ ಪಂಕ್ತಿಯಲ್ಲಿ ಒಂದು ಮಹತ್ವದ ಹೆಸರು. ಬೆಳಗಾವಿ ಜಿಲ್ಲೆಯ ಅಲತಗಿಯಲ್ಲಿ ಜನಿಸಿದ ಯಮುನವ್ವನವರಿಗೆ ಅಭಿನಯಕಲೆ ಮತ್ತು ಸಂಗೀತ ರಕ್ತಗತವಾಗಿ ಬಂದದ್ದು. ಎಂಟು ವರ್ಷದ ಬಾಲಕಿಯಾಗಿದ್ದಾಗಲೇ ಗುರುಮುಖೇನ ಶಾಸ್ತ್ರೀಯವಾಗಿ ಸಂಗೀತ, ನೃತ್ಯ, ಮತ್ತು ಅಭಿನಯಗಳಲ್ಲಿ ತರಬೇತಿ ಪಡೆದ ಯಮುನವ್ವ ಹನ್ನೆರಡು ವರ್ಷಕ್ಕೇ ಕಂಪನಿ ಸೇರಿ ನಾಯಕಿಯ ಪಾತ್ರಗಳನ್ನು ನಿರ್ವಹಿಸತೊಡಗಿದರು.

ಸುಮಾರು ಮೂರು ದಶಕಗಳಿಗೂ ಹೆಚ್ಚುಕಾಲ ತಮ್ಮ ಕಂಚಿನ ಕಂಠದ ಗಾಯನ ಮತ್ತು ತಮ್ಮದೇ ಆದ ವಿಶಿಷ್ಟ ಶೈಲಿಯ ಅಭಿನಯ ನೃತ್ಯಗಳಿಂದ ಅಸಂಖ್ಯಾತ ನಾಟಕಪ್ರಿಯರ ಹೃದಯ ಸೂರೆಗೊಂಡಿರುವ ಈ ಕಲಾವಿದೆ ಇಂದಿಗೂ 'ಅಭಿನಯ ಎಂದರೆ ಅಲತಗಿ ಯಮುನವ್ವನ ಅಭಿನಯ, ಗಾಯನ ಎಂದರೆ ಅಲತಗಿ ಯಮುನವ್ವನ ಗಾಯನ' ಎಂದು ಜನಮದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ.

ಸಂಗ್ಯಾ ಬಾಳ್ಯ, ಕಡ್ಲಿಮಟ್ಟಿ ಸ್ಟೇಷನ್ ಮಾಸ್ತರ್, ಕೃಷ್ಣಪಾರಿಜಾತ ರಾಧಾ, ಬಲವಂತ–ಬಸವಂತ ಇವು ಅಲತಗಿ ಯಮುನವ್ವನವರ ಜನಪ್ರಿಯ ನಾಟಕಗಳು. ಸಂಗ್ಯಾಬಾಳ್ಯದಲ್ಲಿ ಗಂಗೆಯಾಗಿ, ಕಡ್ಲಿಮಟ್ಟಿ ಸ್ಟೇಷನ್ ಮಾಸ್ತರಿನಲ್ಲಿ ಕಾಶಿಬಾಯಿಯಾಗಿ, ಕೃಷ್ಣಪಾರಿಜಾತದಲ್ಲಿ ಸತ್ಯಭಾಮೆಯಾಗಿ, ರಾಧಾ ನಾಟಕದಲ್ಲಿ ರಾಧೆಯಾಗಿ ಅಲತಗಿ ಯಮುನವ್ವನವರ ಅಭಿನಯ ಅವರಿಗೆ ಅಭಿಮಾನಿಗಳ ಒಂದು ದೊಡ್ಡ ಬಳಗವನ್ನೇ ಸೃಷ್ಟಿಸಿದೆ.

"ಗಂಗಾನ ಪಾತ್ರ ಯಮುನವ್ವ ಮಾಡಬೇಕು, ಅದರ ಮಜಾ ನೋಡಬೇಕು' ಎಂಬ ಪ್ರಶಂಸೆಯ ನುಡಿ ಇಂದಿಗೂಬೆಳಗಾವಿಯ ಸುತ್ತಮುತ್ತ ಜನಜನಿತವಾಗಿದೆ. ಅರವತ್ತರ ಈ ಇಳಿವಯಸ್ಸಿನಲ್ಲೂ ರಂಗಗೀತೆಗಳನ್ನು ಹಾಡಲು ಕುಳಿತರೆ ಯಮುನವ್ವನವರಿಗೆ ಪ್ರಾಯದ ಹುರುಪು ಬರುತ್ತದೆ. ಅವರ ಕಂಚಿನಕಂಠ ಎಳ್ಳಷ್ಟೂ ಕುಂದಿಲ್ಲ.

ಜನರ ಆನಂದ ಹಾಗೂ ಸ್ವಂತ ಖುಷಿಗಾಗಿ ನಿರ್ಮಲ ಅಂತಃಕರಣದಿಂಥ, ನಿಸ್ವಾರ್ಥ ಮನೋಧಾನದಿಂದ, ನಿರ್ಮಮಕಾರದಿಂದ ರಂಗಭೂಮಿ ಸೇವೆಗೆ ತಮ್ಮ ಬದುಕಿನ ಅತ್ಯಮೂಲ್ಯ ದಿನಗಳನ್ನು ಮುಡುಪಾಗಿಸಿದ ಹಿರಿಯ ಜೀವ ಅಲತಗಿ ಯಮುನವ್ವನವರದು. ಜನರ ಪ್ರಶಂಸೆಯ ಮಹಾಪೂರವನ್ನೇ ಕಂಡಿರುವ ಪ್ರತಿಭಾವಂತ ಕಲಾವಿದೆ ಅಲತಗಿ ಯಮುನವ್ವನವರನ್ನು ಕರ್ನಾಟಕ ಅಕಾಡಮಿ ಇಂದು 1985ನೇ ಸಾಲಿನ ಪ್ರಶಸ್ತಿ ನೀಡುವ ಮೂಲಕ ಅತ್ಯಂತ ಸಂತೋಷದಿಂದ ಹಾಗೂ ಧನ್ಯತೆಯ ಭಾವದಿಂದ ಗೌರವಿಸುತ್ತಿದೆ.

---



## ಟಿ.ಎನ್. ಬಾಲಕೃಷ್ಣ

ಅಭಿನಯ ಲೋಕದಲ್ಲಿ ಒಂದು ಅದ್ಭುತ ಹೆಸರು. ಪ್ರಚಂಡ ಪ್ರತಿಭೆ, ತೀಕ್ಷ್ಣಮತಿ ಹಾಗೂ ವಿನೋದಪ್ರವೃತ್ತಿ ಈ ಮೂರೂ ಹದವಾಗಿ ಬೆರೆತು ಒಬ್ಬ ಅದ್ವಿತೀಯ ನಟನಾಗಿ ರೂಪುಗೊಂಡಿರುವ ಬಾಲಕೃಷ್ಣ ಕನ್ನಡ ರಂಗಭೂಮಿಯ ಇತಿಹಾಸದ ಸುವರ್ಣ ಪುಟಗಳಲ್ಲಿ ರಾರಾಜಿಸುವಂಥ ಸರ್ವತೋಮುಖಿ ಶಕ್ತಿಯ ಕಲಾವಿದ. ಬಣ್ಣವೇ ಬದುಕಾಗಿ, ಅನುಭವವೇ ಪಾಠಶಾಲೆಯಾಗಿ ಬೆಳೆದು ಮಾಗಿರುವ ಬಾಲಕೃಷ್ಣ ಕನ್ನಡಿಗರಿಗೆ 'ಬಾಲಣ್ಣ' ಎಂದೇ ಚಿರಪರಿಚಿತರು.

ಮುನ್ನೂರಕ್ಕೂ ಹೆಚ್ಚು ಕನ್ನಡ ಚಿತ್ರಗಳಲ್ಲಿ ಅಭಿನಯಿಸಿ ಇಂದು ಅಪಾರವಾಗಿ ಜನಾನುರಾಗ ಗಳಿಸಿರುವ ಬಾಲಣ್ಣ ಝಗಝಗಿಸುವ ಬೆಡಗಿನ ಸಿನಿಮಾಕ್ಕೆ ಕನ್ನಡ ರಂಗಭೂಮಿ ನೀಡಿರುವ ಅಪೂರ್ವ ಕೊಡುಗೆ. ಬಾಲಣ್ಣನ ನಾಟಕದ ಗೀಳು ಬಾಲ್ಯದಿಂದಲೇ ಶುರುವಾದದ್ದು. ಎಲ್.ಎಸ್. ಓದುತ್ತಿದ್ದಾಗಲೇ ಬಣ್ಣ ಹಚ್ಚಿಕೊಳ್ಳುವ ಚಪಲ ಹೆಚ್ಚಾಗಿ ಗೆಳೆಯರ ಗುಂಪು ಕಟ್ಟಿ ಬಾಲಣ್ಣ ನಾಟಕ ಆಡಲು ಶುರುಮಾಡಿ ಬಣ್ಣದ ಬದುಕನ್ನು ಪ್ರವೇಶಿಸಿದರು. ಪರಿಣಾಮ: ವಿದ್ಯೆಯಲ್ಲಿ ಹಿನ್ನಡೆ. ನಾಲ್ಕು ಗೋಡೆಗಳ ಮಧ್ಯದ ಪಾಠಶಾಲೆಯ ವ್ಯಾಸಂಗ ಬಹುಶಃ ಬಾಲಣ್ಣನವರ ಬುದ್ಧಿಯ ಬೀಸಿಗೆ ಸಾಲದಾಯಿತೇನೊ.

ಶಾಲೆ ಬಿಟ್ಟು ರಂಗಭೂಮಿಗೆ ಧುಮುಕಿದರು. ರಂಗಭೂಮಿಯೇ ಅವರಿಗೆ ಬದುಕಿನ ಮುಕ್ತ ವಿಶ್ವವಿದ್ಯಾನಿಲಯವಾಯಿತು. ಸುಮಾರು ಹನ್ನೆರಡು ವರ್ಷದ ಬಾಲಕನಾಗಿದ್ದಾಗ ಹಾನಗಲ್ಲಿನ ಶ್ರೀ ತಾರಾನಾಥ ನಾಟಕ ಮಂಡಳಿ ಸೇರಿದ ಬಾಲಣ್ಣ ಸುಮಾರು ಎಂಟು ಕಂಪನಿಗಳಲ್ಲಿ ಪಾರ್ಟು ಮಾಡಿದ್ದಾರೆ. ಗುಬ್ಬಿ ವೀರಣ್ಣನವರ ಶ್ರೀ ಚನ್ನಬಸವೇಶ್ವರ ನಾಟ್ಯಸಭಾದಲ್ಲಿಯೇ ದೀರ್ಘಕಾಲದ ದುಡಿಮೆ. ಯಾವ ಕಂಪನಿಯೇ ಇರಲಿ ಬಾಲಣ್ಣನ ಪಾತ್ರವೊಂದೇ ಕಹಿಮಂಗಿ ಸಿಹಿನಗೆ ತರಿಸುವ ಹಾಸ್ಯಧಾರಿ. ಕಲೆಯ ನವರಸಗಳು ಬಾಲಣ್ಣನಿಗೆ ಕರಗತ. ಮಾತಿನ ವರಸೆ, ಅಲುಗಿನ ನೋಟ, ಲಿಂಗವಿನ್ಯಾಸಗಳಲ್ಲಿ ಶೋಕ, ಹಾಸ್ಯ, ಕರುಣ, ಭೀಭತ್ಸ ಮೊದಲಾದವುಗಳನ್ನು ಬೆಟ್ಟದ ಕೆಳಗಿನ ಝರಿಯ ಚಿಲುಮೆಯಂತೆ ಸ್ವಯಂ ಸ್ಫೂರ್ತಿಯಿಂದ ಧಾರಾಳವಾಗಿ ಪ್ರದರ್ಶಿಸಿ ನಾಟಕಪ್ರಿಯರನ್ನು ಬೆರಗುಗೊಳಿಸುವ ಪ್ರತಿಭಾವಂತ ನಟ ಈ ಬಾಲಣ್ಣ.

ಹೀಗೆ ಪಾಲಿಗೆ ಬರುತ್ತಿದ್ದ ಹಾಸ್ಯಪಾತ್ರದಲ್ಲೂ ವೈವಿಧ್ಯತೆಯನ್ನು ಮಿಂಚಿಸಿ ರಸಿಕರನ್ನು ರಂಜಿಸುತ್ತಿದ್ದ ಬಾಲಣ್ಣ ರಂಗಭೂಮಿಯ ಬದುಕಿನಲ್ಲಿ ಸಂಪಾದಿಸಿದ ದೊಡ್ಡ ನಿಧಿಯೆಂದರೆ ಜನರ ಪ್ರೀತಿ. ಚಿತ್ರರಂಗಕ್ಕೆ ಬಂದನಂತರ ಅಭಿಮಾನಿಗಳಿಗೆ ಬಾಲಣ್ಣನಾದ ಟಿ.ಎನ್. ಬಾಲಕೃಷ್ಣ ರಂಗಭೂಮಿಯ ದಿನಗಳಲ್ಲಿ ತಮ್ಮ ಅಭಿನಯ ಸಾಮರ್ಥ್ಯ ಮತ್ತು ಮಾತಿನ ಚಮತ್ಕಾರಗಳಿಂದ ಗಳಿಸಿದ ಈ 'ನಿಧಿ'ಯೇ ಅವರಿಗೆ ಶ್ರೀರಕ್ಷೆಯಾಗಿತ್ತು. ನೃತ್ಯ, ಸಂಗೀತ ಏನೆಲ್ಲ ಇದ್ದೂ ಬಾಲಕೃಷ್ಣ ಇಲ್ಲದಿದ್ದರೆ ನಾಟಕ ಬಿಕೋ ಎನ್ನುತ್ತಿದೆ ಎನ್ನುವಷ್ಟರ ಮಟ್ಟಿಗೆ ಈ ನಟ ಜನರ ಹೃದಯ ಗೆದ್ದಿದ್ದರು. ಬಾಲಕೃಷ್ಣರ ಅಭಿನಯ ಮೆಚ್ಚಿ 'ವಹವ್ವಾ, ಶಹಭಾಸ್' ಹೇಳಿ ತಮ್ಮ ಪ್ರೀತಿಯ ಸಂಕೇತವಾಗಿ ತಮ್ಮ ಮೆಚ್ಚಿನ ನಟನಿಗೆ ನೀಡಿದ ಬಹುಮಾನ ಬೇಕಾದಷ್ಟು, ಬಹುಮಾನ ರೂಪವಾಗಿ ಬಾಲಕೃಷ್ಣರಿಗೆ ಬಂದಿರುವ ಬೆಳ್ಳಿಯ ವಸ್ತುಗಳು ಅರ್ಧಮಣಕ್ಕೂ ಹೆಚ್ಚು.

ಹುಟ್ಟಿದ ತಾರೀಖು ತಿಳಿಯದ ಬಾಲಕೃಷ್ಣರಿಗೆ ಇಳಿವಯಸ್ಸೆಂಬುದಿಲ್ಲ. ಇಂದಿಗೂ ಸಿನಿಮಾದಲ್ಲಿ ಅವರು ಚಿರಯುವಕನಂತೆ ಅಭಿನಯ ಮುಂದುವರಿಸಿದ್ದಾರೆ. 'ಅಭಿಮಾನ್' ಸ್ಟುಡಿಯೋಗೆ ಬದಲು ಒಂದು ಅತ್ಯಾಧುನಿಕ ನಾಟಕದ ಕಂಪನಿ ಕಟ್ಟಿದ್ದರೆ ಚೆನ್ನಾಗಿತ್ತು ಎನ್ನುವ ಅವರ ಮಾತು ರಂಗಭೂಮಿಯಲ್ಲಿ ಬಾಲಕೃಷ್ಣನಿಗೆ ಇರುವ ಪ್ರೀತಿಯ ದ್ಯೋತಕ, ಕನ್ನಡ ರಂಗಭೂಮಿಯ ಈ ಹಿರಿಯ ಧೀಮಂತ ನಟ ಬಾಲಕೃಷ್ಣರನ್ನು ಕರ್ನಾಟಕ ಅಕಾಡೆಮಿ ಇಂದು 1985ನೇ ಸಾಲಿನ ಪ್ರಶಸ್ತಿ ನೀಡುವ ಮೂಲಕ ಸಂತೋಷ–ಸಂಭ್ರಮಗಳಿಂದ ಗೌರವಿಸುತ್ತಿದೆ.



## ಆರ್. ನಾಗೇಶ್

ಕನ್ನಡದ ಹವ್ಯಾಸಿ ರಂಗಭೂಮಿಯಲ್ಲಿ ಕ್ರಿಯಾಶೀಲತೆಗೆ ಇನ್ನೊಂದು ಹೆಸರು. ನಾಣಿ, ಪ್ರೊಫೆಸರ್ ಬಿ. ಚಂದ್ರಶೇಖರ್ ಇವರುಗಳ ಗರಡಿಯಲ್ಲಿ ಪಳಗಿದ ನಾಗೇಶ್‌ಗೆ ಕಾಲೇಜ್ ದಿನಗಳಿಂದಲೇ ರಂಗಭೂಮಿಯಲ್ಲಿ ಆಸಕ್ತಿ. ಉಲ್ಲಾಳ್‌ಶೀಲ್ಡ್ ನಾಟಕ ಸ್ಪರ್ಧೆಯಿಂದ ಬೆಳಕಿಗೆ ಬಂದ ಹಲವಾರು ಪ್ರತಿಭೆಗಳಲ್ಲಿ ನಾಗೇಶ್ ಮುಖ್ಯರು. ಬಣ್ಣದ ಬೆಡಗಿಗಿಂತ ರಂಗದ ಹಿನ್ನೆಲೆಯ ಕೆಲಸದಲ್ಲೇ ತೃಪ್ತಿ ಕಂಡು ಕೊಂಡು ನಾಗೇಶ್ ಕಳೆದ ಇಪ್ಪತ್ತೈದು ವರ್ಷಗಳ ಬೆಂಗಳೂರಿನ ಹವ್ಯಾಸಿ ರಂಗಭೂಮಿಯಲ್ಲಿ ನಿರ್ದೇಶಕರಾಗಿ, ರಂಗವಿನ್ಯಾಸಕರಾಗಿ, ಬೆಳಕು ನಿರ್ವಹಣೆಗಾರರಾಗಿ ತಮ್ಮ ಹೆಜ್ಜೆ ಗುರುತುಗಳನ್ನು ಸ್ಪಷ್ಟವಾಗಿ ಮೂಡಿಸಿದ್ದಾರೆ.

ನಾಗೇಶ್ ಅವರಲ್ಲಿರುವ ಮಹತ್ವದ ಗುಣವೆಂದರೆ ನಾಟಕದಿಂದ ನಾಟಕಕ್ಕೆ ತಾವೂ ಬೆಳೆಯುತ್ತ ತಮ್ಮ ಜೊತೆಯಲ್ಲಿರುವವರನ್ನೂ ಬೆಳೆಸಿರುವುದು. ಕನ್ನಡ ಸಾಹಿತ್ಯ ಸಂಘದಿಂದ ಹಿಡಿದು ಸೂತ್ರಧಾರ, ಸೂತ್ರಧಾರದ ರೆಪರ್ಟರಿ ಜನನಾಟ್ಯ ಮಂಡಳಿವರೆಗೆ ನಾಗೇಶ್ ಕಟ್ಟಿರುವ ತಂಡಗಳು ಹಲವಾರು. ಹೀಗೆ ತಾವು ಕಟ್ಟಿದ ತಂಡಗಳಲ್ಲಿ ನಾಗೇಶ್ ನಟ–ನಟಿಯರು, ನಿರ್ದೇಶಕರು ಮಾತ್ರವಲ್ಲ ನಿಷ್ಠಾವಂತ ರಂಗಕರ್ಮಿಗಳ ಒಂದು ಪಟಲಾಂನ್ನೇ ಬೆಳೆಸಿದ್ದಾರೆ.

ರಂಗಭೂಮಿಯ ಎಲ್ಲ ವಿಭಾಗಗಳಲ್ಲೂ ಕೆಲಸ ಮಾಡಿ ಕನ್ನಡ ರಂಗಭೂಮಿಯ 'ಗುತ್ತಿಗೆದಾರ' ಎಂದು ಗೆಳೆಯರಿಂದ ಕರೆಸಿಕೊಂಡ ನಾಗೇಶ್‌ರ ಪ್ರಥಮ ಪ್ರೀತಿ ರಂಗಭೂಮಿ. ಕೈಲಾಸಂ, ಪರ್ವತವಾಣಿಯವರ ನಾಟಕಗಳ ನಿರ್ದೇಶನದಿಂದ ರಂಗಭೂಮಿಗೆ ಅಡಿಯಿಟ್ಟ ನಾಗೇಶ್ ತಮ್ಮ ಪ್ರತಿಭೆಗೆ ಸವಾಲೊಡ್ಡುವಂಥ ಆಧುನಿಕ ನಾಟಕಗಳನ್ನು ಯಶಸ್ವಿಯಾಗಿ ನಿರ್ದೇಶಿಸಿದ್ದಾರೆ. ಕನ್ನಡ ರಂಗಭೂಮಿ ಚಳವಳಿಯ ಮುಂಚೂಣಿಯಲ್ಲಿರುವ ನಾಗೇಶ್ ಶ್ರೀರಂಗ, ಮೋಹನ ರಾಕೇಶ್, ವಿಜಯ ತೆಂಡೂಲ್ಕರ್, ಬಾದಲ್ ಸರ್ಕಾರ್ ಮೊದಲಾದವರ ನಾಟಕಗಳನ್ನು ಕನ್ನಡದ ನಾಟಕ ಪ್ರಿಯರಿಗೆ ನೀಡಿ ಅವರ ಮೆಚ್ಚುಗೆ ಗಳಿಸಿದ್ದಾರೆ.

ವೃತ್ತಿಪರ ಶಿಸ್ತು ಧೋರಣೆಯಲ್ಲಿ ಅಚಲ ನಂಬಿಕೆ ಹೊಂದಿರುವ ನಾಗೇಶ್ ವೃತ್ತಿರಂಗಭೂಮಿಯನ್ನು ಆಧುನೀಕರಿಸಲು ವೃತ್ತಿರಂಗಭೂಮಿಗೂ ಹೋಗಿ ಅಲ್ಲಿನ ನಟ–ನಟಿಯರಿಗೆ ರಂಗಕಮ್ಮಟಗಳನ್ನು ನಡೆಸಿದ್ದಾರೆ. ವೃತ್ತಿರಂಗಭೂಮಿ ಕಂಪನಿಗೆ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಶಂಭುಮಿತ್ರರ 'ಕುರುಡು ಕಾಂಚಾಣ' ಇದಕ್ಕೊಂದು ನಿದರ್ಶನ. ಕನ್ನಡದ ಖ್ಯಾತ ಕಾದಂಬರಿ ಕಾರರಾದ ಶಿವರಾಮ ಕಾರಂತ, ಪೂರ್ಣಚಂದ್ರ ತೇಜಸ್ವಿ ಇವರುಗಳ ಚೋಮನ ದುಡಿ, ತಬರನ ಕಥೆ ಮೊದಲಾದ ಸಾಹಿತ್ಯಕೃತಿಗಳನ್ನು ನಾಟಕರೂಪಕ್ಕೆ ಅಳವಡಿಸಿ ಯಶಸ್ವಿಯಾಗಿ ರಂಗಭೂಮಿಗೆ ತಂದದ್ದು ನಾಗೇಶರಲ್ಲಿನ ಸೃಜನಶೀಲ ಪ್ರತಿಭೆಗೆ ಸಾಕ್ಷಿ.

ನಟ, ನಿರ್ದೇಶಕ, ಬೆಳಕುಗಾರ, ರಂಗವಿನ್ಯಾಸಕರಾಗಿ ಆರ್. ನಾಗೇಶ್, ಕರ್ನಾಟಕದ ಹೊರಗೂ ಮದ್ರಾಸ್, ಮುಂಬೈ, ದೆಹಲಿ, ಭೋಪಾಲ್, ಕಲ್ಕತ್ತ, ಹೈದರಾಬಾದ್ ನಗರದ ರಂಗವಲಯಗಳಲ್ಲೂ ಚಿರಪರಿಚಿತರು. ಇವರ ನಾಟಕಗಳು ಈ ನಗರಗಳಲ್ಲಿ ಪ್ರದರ್ಶನಗೊಂಡು ಜಯಭೇರಿ ಬಾರಿಸಿದೆ. ನಾಂದಿ, ನಟನ ಮೊದಲಾದ ರಂಗಚಟುವಟಿಕೆಗಳಿಗೆ ವಿಲಾಸಲಾದ ರಂಗಪತ್ರಿಕೆಯ ಪರಂಪರೆಯನ್ನು ಸೂತ್ರಧಾರ ವಾರ್ತಾಪತ್ರದ ಮೂಲಕ ಮುಂದುವರಿಸಿದ ಕೀರ್ತಿ ನಾಗೇಶ್ ಅವರದು. ಕನ್ನಡ ಹವ್ಯಾಸಿ ರಂಗಭೂಮಿಯಲ್ಲಿ ಯುವ ಜನಾಂಗವನ್ನು ಪ್ರತಿನಿಧಿಸುವ ನಿಷ್ಠಾವಂತ ಯುವರಂಗಕರ್ಮಿ ಆರ್. ನಾಗೇಶ್ ಅವರನ್ನು ಕರ್ನಾಟಕ ನಾಟಕ ಅಕಾಡೆಮಿ ಇಂದು 1985ನೇ ಸಾಲಿನ ಪ್ರಶಸ್ತಿ ನೀಡುವ ಮೂಲಕ ಅತ್ಯಂತ ಸಂತೋಷದಿಂದ ಗೌರವಿಸುತ್ತಿದೆ.

## 1986ರ ಪ್ರಶಸ್ತಿ ವಿಜೇತರು



### ರಮಾನಂದ ಚೂರ್ಯ

ಅರ್ಧದಶಕಕ್ಕೂ ಹೆಚ್ಚು ಕಾಲ ನಾಟಕ ರಂಗವೆ ಬದುಕಾಗಿ ಕಲಾರಾಧನೆಯಲ್ಲಿ ಅಹುದಹುದೆನ್ನಿಸಿಕೊಂಡ ರಮಾನಂದ ಚೂರ್ಯ ಇಳಿಹರೆಯದಲ್ಲೂ ರಂಗವೆಂದರೆ ನವತರುಣರಾಗಿಬಿಡುತ್ತಾರೆ.

1934ರಲ್ಲಿ ಬಣ್ಣ ಬಳಿದು ವೇದಿಕೆಯೇರಿದ ಚೂರ್ಯ ಕಲಾವಿದ, ನಾಟಕಕಾರ, ನಿರ್ದೇಶಕ, ಸಂಪುಟ ಹೀಗೆ ಸವ್ಯಸಾಚಿ – ಆಲ್‌ರೌಂಡರ್. ಎಲ್ಲ ಬಗೆಯ ಪಾತ್ರಗಳಲ್ಲೂ ಮಿಂಚಬಲ್ಲ, ತಾದಾತ್ಮ್ಯದಿಂದ ಅಭಿನಯಿಸಬಲ್ಲ ಚೂರ್ಯರ ಪ್ರಧಾನ ಪ್ರಕಾರ ಹಾಸ್ಯ, ನಗೆ ನಟರಾಗಿ, ನಗೆನಾಟಕಕಾರರಾಗಿ ಅವರು ಕರಾವಳಿ ಕರ್ನಾಟಕದಲ್ಲಿ, ಮುಂಬಯಿಯಲ್ಲಿ ಮನೆಮಾತು.

1935 ರಿಂದ 40ರ ವರೆಗೆ ಹವ್ಯಾಸಿ ಸಂಸ್ಥೆಗಳಲ್ಲಿ ಅಭಿನಯಿಸಿದ ಚೂರ್ಯ, 1940ರಲ್ಲಿ 'ಹಂಸರಾಜ ಥಿಯೇಟರ್ಸ್' ಹೆಸರಿನಲ್ಲಿ ಸ್ವಂತ ಸಂಸ್ಥೆ ಕಟ್ಟಿ ಎಂಟು ವರ್ಷಕಾಲ ದಕ್ಷಿಣ ಕನ್ನಡ, ಕೇರಳ, ಮುಂಬಯಿಗಳಲ್ಲಿ ನಾಟಕಗಳನ್ನು ಪ್ರದರ್ಶಿಸಿ ಜನಮೆಚ್ಚುಗೆ ಗಳಿಸಿದವರು.

1948ರಲ್ಲಿ ಲಲಿತ ಕಲೆಗಳ ತರಬೇತಿಗಾಗಿ 'ಹಂಸರಾಜ ಸ್ಕೂಲ್ ಆಫ್ ಆರ್ಟ್ಸ್' ಸಂಸ್ಥೆಯನ್ನು ಪ್ರಾರಂಭಿಸಿದರು. 1950 ಚೂರ್ಯರ ಕಲಾಬದುಕಿಗೆ ಹೊಸತಿರುವು ನೀಡಿದ ಕಾಲ. 'ಕರ್ನಾಟಕ ಲಲಿತಕಲಾ ಮಧುವನ' ಸಂಸ್ಥೆ ಕಟ್ಟಿ, ದಕ್ಷಿಣ ಕನ್ನಡ ಅನೇಕ ಕಡೆ ಪ್ರಚಂಡ ಜನದಟ್ಟಣೆಯ ಪ್ರದರ್ಶನಗಳನ್ನು ನೀಡಿದ ಚೂರ್ಯರು 1958–60ರ ಅವಧಿಯಲ್ಲಿ ಬೆಂಗಳೂರಿನ ಗುಬ್ಬಿ ಥಿಯೇಟರ್ಸ್‌ನಲ್ಲಿ ತಮ್ಮ ಪ್ರಯೋಗಗಳನ್ನು ಅವ್ಯಾಹತವಾಗಿ ಪ್ರದರ್ಶಿಸಿದರು. 1960–65 ಕೇರಳ–ತಮಿಳುನಾಡುಗಳಲ್ಲಿ ಚೂರ್ಯ ಕಂಪನಿ ಪ್ರವಾಸ.

1970 ಅಕಾಡೆಮಿ ಆಫ್ ಇಂಡಿಯನ್ ಡ್ರಾಮಾಟಿಕ್ಸ್ ಸಂಸ್ಥೆ ಸ್ಥಾಪನೆ. 1985ರಲ್ಲಿ ಸ್ವಂತ ಕಲಾಕರ್ಮಶಾಲೆ 'ಶ್ರೀರಂಗ ವಿದ್ಯಾಪೀಠ' ಪ್ರಾರಂಭ. ಕನ್ನಡ, ಕೊಂಕಣಿ ಭಾಷೆಗಳಲ್ಲೂ ನಾಟಕಗಳನ್ನು ಬರೆದಿರುವ ಚೂರ್ಯ, ಇಂಗ್ಲಿಷ್ ಹಾಗೂ ಮರಾಠಿಯ ಹಲವಾರು ನಾಟಕಗಳನ್ನು ಕನ್ನಡ–ಕೊಂಕಣಿ ಭಾಷೆಗಳಿಗೆ ಅನುವಾದಿಸಿ ಜನಪ್ರಿಯಗೊಳಿಸಿದ್ದಾರೆ. ಮುಖ್ಯವಾಗಿ ನಗೆನಾಟಕಕಾರರಾದ ಚೂರ್ಯರ ಕನ್ನಡ–ನಗದೀತಗಾದೆ, ಕಂಪೌಂಡರ್ ಚಿಕ್ಕ, ನಕಲೀರಾಣಿ, ನಾವಿಲ್ಲದಾಗ, ಹೌದಾದ್ರೆ ಹೌದೆನ್ನಿ, ಗೀತಾರಹಸ್ಯ, ಚಿತ್ರನಟಿ, ಊರೆಲ್ಲ ಹೇಳ್ಬೇಡಿ ಹಾಗೂ ಕೊಂಕಣಿಯ ಹಲವು ನಾಟಕಗಳು ಅನೇಕ ಪ್ರಯೋಗ ಕಂಡಿವೆ.

1973ರಲ್ಲಿ ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗಡೆಯವರಿಂದ 'ರಂಗಯೋಗಿ' ಪ್ರಶಸ್ತಿ ಸಹಿತ ಅನೇಕ ಸಂಮಾನಗಳಿಗೆ ಪಾತ್ರರಾಗಿರುವ ಚೂರ್ಯರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1985–86ನೇ ಸಾಲಿನ ಪ್ರಶಸ್ತಿ ನೀಡಿ ಗೌರವಿಸಿದೆ.



## ಹನುಮಗೌಡ್ರು–ಗೊಂಬಿಗೌಡ್ರ (ಜೀವನಗೌಡ್ರ)

ರೈತರ ಮನೆತನಕ್ಕೆ ಸೇರಿದ ಹನುಮನಗೌಡರು ಪ್ರಾಥಮಿಕ ಐದನೇ ತರಗತಿಗೆ ಓದು ಕೈಬಿಟ್ಟು ಪರಂಪರಾಗತವಾಗಿ ಬಂದ ಸೂತ್ರದ ಬೊಂಬೆಗಳ ಕೈಹಿಡಿದರು. ತಂದೆ ಈ ರಂಗದಲ್ಲಿ ಸುವಿಖ್ಯಾತರಾಗಿದ್ದವರು. ಆ ಕಲೆ ಉಳಿಸಿ ಬೆಳೆಸಲು ಪಣತೊಟ್ಟರು ಹನುಮನಗೌಡರು. 15ನೇ ವರ್ಷದಿಂದ ಸೂತ್ರದ ಬೊಂಬೆಯಾಟ ನೀಡುವ ಕಾರ್ಯಕ್ರಮಗಳ ಆರಂಭ. ಕಲಿಕೆಗೆ ಮೊದಲು ಇವರು ಆಶ್ರಯಿಸಿದ್ದು ತಂದೆಯ ಮೇಳ. ಅನುಭವ ಪಕ್ವವಾದಂತೆ ಸ್ವಂತ ಮೇಳ. ಇದೀಗ ಮೂವರು ಮಕ್ಕಳು ಮೇಳದ ಹೊಣೆ ಹೊತ್ತಿದ್ದಾರೆ. ಉಪಜೀವಕ್ಕೆ ಕೃಷಿ ಇದೆ ನಿಜ. ಆದರೆ ಬೊಂಬೆಯಾಟ ಆ ಮನೆತನಕ್ಕೆ ಹೊಸ ಉಸಿರು. ಈ ಕಾರಣಕ್ಕೆ ಇವರನ್ನು ಜನ 'ಗೊಂಬಿಗೌಡ್ರು' ಎಂದೇ ಕರೆಯುತ್ತಾರೆ. ಇವರ ಕೈಚಳಕದ ಚಮಕಿನಿಂದಾಗಿ ಬೊಂಬೆಗಳಿಗೆ ಹೊಸ ಉತ್ಸಾಹ ಮತ್ತು ಲವಲವಿಕೆ ಮೂಡುವುದನ್ನು ಅವರ 'ಗೊಂಬಿಯಾಟ' ನೋಡಿದವರು ಬಲ್ಲರು.

ಅಕ್ಷರಸ್ಥ–ಅನಕ್ಷರಸ್ಥರಿಬ್ಬರನ್ನೂ ತಣಿಸಬಲ್ಲ ಬೊಂಬೆಯಾಟಕ್ಕೆ ಹಾಡುಗಾರಿಕೆ, ನಾಟಕೀಯಶೈಲಿಯ ಮಾತುಗಾರಿಕೆ, ಆಕರ್ಷಕ ಕಥೆಗೆ ಅರ್ಥವಂತಿಕೆ ತುಂಬಬಲ್ಲ ಜಾಣ್ಮೆಯೂ ಬೇಕು. ಇವೆಲ್ಲದವರ ಕ್ರೋಢೀಕರಣ ಗೊಂಬಿಗೌಡರಲ್ಲಿ ಕಾಣಬಹುದು. ದಕ್ಷಿಣಾದಿ ಸಂಗೀತ ಬಲ್ಲವರು, ಭಾರತ, ಭಾಗವತ, ತೊರವೆ ರಾಮಾಯಣ ಇವರಿಗೆ ಕಂಠಪಾಠ. ಅನೇಕ ಕಲಾ ಮಹೋತ್ಸವದಲ್ಲಿ ಇವರ ಗೊಂಬಿಗಳು–ರಂಭೆಯಂತೆ ಮೆರೆದಿವೆ. ಇವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1985–86ನೇ ಸಾಲಿನ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಹೊಸತೋಟ ಮಂಜುನಾಥ ಭಾಗವತ

ಭಾಗವತಿಕೆಯ ಬಗ್ಗೆ ಅಧಿಕಾರವಾಣಿಯಿಂದ ಮಾತಾಡಬಲ್ಲ ಯಕ್ಷಗಾನದ ಆಳ–ಹರಹುಗಳನ್ನು ಸಮಗ್ರವಾಗಿ ಕರತಲಾಮಲಕ ಮಾಡಿಕೊಂಡಿರುವ ವಿದ್ವಾಂಸ.

ಭಾಗವತಿಕೆಯಲ್ಲಿ ಪಾರಮ್ಯವಷ್ಟೇ ಅಲ್ಲದೆ ಕೃತಿಕರ್ತನಾಗಿಯೂ ಹೊಸತೋಟರು ಪ್ರಸಿದ್ಧ, ಹಲವಾರು ಮೇಳಗಳಿಗೆ ಅನೇಕ ಪ್ರಸಂಗಗಳನ್ನು ರಚಿಸಿಕೊಟ್ಟದ್ದು ಅವೆಲ್ಲ ಪ್ರಯೋಗದಲ್ಲಿ ತುಂಬ ಯಶಸ್ಸನ್ನು ಕಂಡಿವೆ. 'ತಾಳ ಸೂತ್ರ'ವೆಂಬ ಲಕ್ಷಣ ಗ್ರಂಥ ಬರೆದಿದ್ದಾರೆ. 'ಶ್ರೀರಾಮ ನಿರ್ಮಾಣ' ಯಕ್ಷಗಾನಪ್ರಸಂಗದ ಪರಿಷ್ಕೃತ ಹಾಗೂ ಲಂಬಿತ ಕೃತಿ, ಸಂಪೂರ್ಣ ರಾಮಾಯಣವು ಸಾವಿರದ ಐನೂರಕ್ಕೂ ಹೆಚ್ಚು ಪದ್ಯಗಳಿರುವ ಅತಿ ದೊಡ್ಡ ಕೃತಿ. ಸುಮಾರು ಇಪ್ಪತ್ತಕ್ಕೂ ಹೆಚ್ಚು ಪ್ರಸಂಗ ಇವರು ರಚಿಸಿದ್ದಾರೆ. ಪರಿಸರ–ನಿಸರ್ಗ ಕುರಿತ 'ನಿಸರ್ಗ ಸಂಧಾನ' ಕೃತಿ ರಾಜ್ಯಾದ್ಯಂತ, ದಕ್ಷಿಣ ಭಾರತವಿಡೀ ಪ್ರದರ್ಶಿಸಲ್ಪಡುತ್ತಿದೆ.

'ಶ್ರೀ ಕಮಲನಾಥೇಶ್ವರ ಯಕ್ಷಗಾನ ಮಂಡಳಿ'ಯ ಸ್ಥಾಪಕರು. ಸೋಂದೆ, ಅಳಲಗಾರ, ಕೊಳಗಿ, ಕೋಳಿಗಾರ ಮೊದಲಾದ ಮೇಳಗಳಲ್ಲಿ ಆಹ್ವಾನಿತರಾಗಿ ಭಾಗವತಿಕೆ ನಡೆಸಿ ಕೊಟ್ಟಿದ್ದಾರೆ. ಬೇರೆ ಬೇರೆ ಜಿಲ್ಲೆಗಳಲ್ಲಿ ಮಕ್ಕಳಿಗಾಗಿ ಯಕ್ಷಗಾನ ತರಬೇತಿ ನೀಡಿದ್ದಾರೆ.

ಅನೇಕ ಗೋಷ್ಠಿಗಳಲ್ಲಿ–ಚರ್ಚೆಗಳಲ್ಲಿ ಭಾಗವಹಿಸಿ ತಮ್ಮ ಪ್ರೌಢವಾದ ವಿಚಾರವನ್ನು ಮಂಡಿಸಿದ್ದಾರೆ. ಯಾವ ಮೇಳಕ್ಕೂ ಅಧಿಕೃತವಾಗಿ ಗಂಟು ಬೀಳದೆ ಹವ್ಯಾಸಿಯೆನಿಸದ ಹೊಸತೋಟರು ಶ್ರೇಷ್ಠ ಕಲಾ ಶಿಕ್ಷಕರೂ ಹೌದು. ಅನೇಕ ಪ್ರತಿಭಾವಂತರನ್ನು ಉತ್ತಮ ಕಲಾವಿದರನ್ನಾಗಿ ರೂಪಿಸಿದ್ದಾರೆ. ಹೊಸತೋಟರ ಕಲಾಸಂಪನ್ನತೆಯನ್ನು ಮನ್ನಿಸಿ ಇವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1985–86ನೇ ಸಾಲಿನ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಚನ್ನಪ್ಪ ಯಂ.ಆರ್.

ಬಿ.ಹೆಚ್. ವೀರಣ್ಣನವರ ಸೋದರಳಿಯ. ಆರು ವರ್ಷದ ಬಾಲಕನಿದ್ದಾಗಿನಿಂದ ಪ್ರಹ್ಲಾದ, ಲೋಹಿತಾಶ್ವ ಮೊದಲಾದ ಮುಖ್ಯ ಪಾತ್ರಗಳಲ್ಲಿ ಕಂಡರು.

ಕಾಲಕ್ರಮೇಣ ಕಂಪನಿಯ ಖಜಾಂಚಿಯಾಗಿ, ಆಡಳಿತ ನಡೆಸುವವರೆಗೆ ಅನೇಕ ಜವಾಬ್ದಾರಿಗಳೂ ಬಂದವು. ರಾಜ್ಯ–ನೆರೆರಾಜ್ಯಗಳಲ್ಲಿ ಜಯಭೇರಿ ಬಾರಿಸಿದ ಗುಬ್ಬಿ ಕಂಪನಿಯ ಕುರುಕ್ಷೇತ್ರ ನಾಟಕದ ಹಿಂದೆ ಇವರ ದುಡಿಮೆಯ ದೊಡ್ಡ ಪಾಲೇ ಇದೆ.

ಅನೇಕ ಹಿರಿಯ ನಟ–ನಟಿಯರನ್ನು ಸರಿದೂಗಿಸುತ್ತ ಹೊಸ ನಾಟಕಗಳನ್ನು ಬರೆಸುತ್ತ–ಹೊಸ ತಂತ್ರಗಳನ್ನು ಬಳಸುತ್ತ ನಾಟಕ ಆಡಿಸಿದವರು. ಗುಬ್ಬಿ ಕಂಪನಿಯ ವೈಭವದ ರಂಗಸಜ್ಜಿಕೆ–ಹೊಸ ತಂತ್ರಗಳು ಅಳವಡಿಸುವ ಕಾರ್ಯದಲ್ಲಿ ಚನ್ನಪ್ಪ ಎಂದೂ ಮುಂದು.

ಚನ್ನಪ್ಪನವರು ಇಂದಿನ ಅನೇಕ ಖ್ಯಾತ ರಂಗ ನಟ–ನಟಿಯರನ್ನು ಬೆಳಕಿಗೆ ತಂದವರು–ನೂರಾರು, ಸಾವಿರಾರು ರಂಗ ಸಾಧಕರ ಕಹಿ–ಸಿಹಿಗಳಲ್ಲಿ ಪಾಲುಂಡವರು. ಏಳು–ಬೀಳಿನ ಕಾರಣಗಳನ್ನ ವಿಶ್ಲೇಷಿಸಿ ಹೇಳಬಲ್ಲ, ಎಲ್ಲೋ ತತ್ವಜ್ಞಾನಿಯಾಗುತ್ತ ನಡೆದ ಸಾಧಕರು ಈತ.

ಗುಬ್ಬಿ ಕಂಪನಿಯ ಯಶಸ್ಸಿನ ಹಿಂದೆ ಇವರದು ಸಿಂಹಪಾಲಿದೆ. ಮುಂದೆ ಕಂಪನಿಯ ವಹಿವಾಟನ್ನು ವೀರಣ್ಣನವರ ಮಕ್ಕಳಿಗೆ ವಹಿಸಿ ದಾವಣಗೆರೆಯಲ್ಲಿ 'ವಿನೋದ' ಟಾಕೀಸಿಗೆ ಪಾಲುದಾರರಾಗಿ ಹೋದರು. ಅನೇಕ ಕಹಿ ಅನುಭವಗಳೂ ಇವರ ಪಾಲಿಗಿವೆ. ಇವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1985–86ನೇ ಸಾಲಿನ ಪ್ರಶಸ್ತಿ ನೀಡಿ ಗೌರವಿಸಿದೆ.



## ಸುಭದ್ರಮ್ಮ ಮನ್ಸೂರ್

ಏಣಗಿ ಬಾಳಪ್ಪನವರ 'ಕಲಾವೈಭವ ನಾಟಕ ಮಂಡಲಿ'ಯಲ್ಲಿ ಹೆಸರಾಂತ ನಾಟಕಗಳಲ್ಲಿ ಈಕೆಯದು ನಾಯಕಿಯ ಪಾತ್ರ. ಪಾತ್ರಗಳಲ್ಲಿ ತನ್ಮಯರಾಗಿ ಪ್ರೇಕ್ಷಕನ ಅಂತರಂಗವನ್ನು ಕಲಕಿಬಿಡುತ್ತಿದ್ದ ಕಲಾವಿದೆ ಈಕೆ. ಅತ್ಯುತ್ತಮ ಹಾಡುಗಾರಿಕೆಯ ಬಲ್ಲ ಈಕೆ ಆರಂಭಕ್ಕೆ ಶ್ರೀಧರರಾವ್ ಅವರ 'ಶ್ರೀ ಸರ್ವಮಂಗಳ ನಾಟ್ಯ ಸಂಘ'ದಲ್ಲಿ ದುಡಿದು, ಮುಂದೆ ಅದೇ ಅವರ ಮಾಲೀಕತ್ವದಲ್ಲಿ 'ಕಟೀಲುದುರ್ಗಾ ಪರಮೇಶ್ವರಿ ನಾಟ್ಯ ಸಂಘ' ಆದಾಗಲೂ ಅಲ್ಲಿಯ ನಾಟಕಗಳಲ್ಲಿ ನಾಯಕಿಯಾಗಿ ಬೆಳಗಿದರು. ನಟರಾದ ಶ್ರೀ ಲಿಂಗರಾಜ ಮನ್ಸೂರರ ಪತ್ನಿಯಾಗಿ ಕಲಾಸೇವೆ ಮುಂದುವರಿಸಿದರು. ಜಗಜ್ಯೋತಿ ಬಸವೇಶ್ವರದ ಕಲಾವತಿಯಾಗಿಯಂತೂ ಈಕೆ ಅತ್ಯಂತ ಜನಪ್ರಿಯರು.

ಮುಂದೆ ಹಿರಣ್ಣಯ್ಯ ಮಿತ್ರಮಂಡಲಿಯಲ್ಲಿ ಲಂಚಾವತಾರದ 'ಸೀತೆ' ಆಗಿ ಅಕ್ಕನವರ ವಚನವನ್ನು ಹಾಡುತ್ತಿದ್ದುದು ಅತ್ಯಂತ ಜನಪ್ರಿಯವಾಗಿತ್ತು. ಬಹುಭಾಷಾ ಪ್ರವೀಣೆ ಸುಭದ್ರಮ್ಮನವರು ಮುಂದೆ ಕಂಪನಿಗಳನ್ನು ಬಿಟ್ಟು ಆಹ್ವಾನವಿದ್ದಾಗ ಹೋಗಿ ಅಭಿನಯಿಸಿ ಬರತೊಡಗಿದರು. ಸುಭದ್ರಮ್ಮ ಇದ್ದರೆ ಗಲ್ಲಾಪೆಟ್ಟಿಗೆಗೆ ಯಾವ ಕಂಪನಿಗೂ ಮೋಸವಿಲ್ಲ ಎಂಬಂಥ ಗಟ್ಟಿ ಕಲಾವಿದೆ. ಇಂದೂ ಆಕೆಯ ಹಾಡುಗಾರಿಕೆ–ಅಭಿನಯಕ್ಕೆ ಜನ ಮುಗಿ ಬೀಳುತ್ತಾರೆ.

ಇವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1985–86ನೇ ಸಾಲಿನ ಪ್ರಶಸ್ತಿ ನೀಡಿ ಗೌರವಿಸಿದೆ.



## ಪಿ.ಬಿ. ಧುತ್ತರಗಿ

ಪುಂಡಲೀಕಪ್ಪ ಬಸಪ್ಪ ಧುತ್ತರಗಿ ಇವರ ಪೂರ್ಣ ಹೆಸರು. ಸಿದ್ಧಲಿಂಗೇಶ್ವರ ವಿಜಯ ನಾಟ್ಯ ಸಂಘದ ಮಾಲೀಕರು. ಮೂಲತಃ ನಾಟಕಕಾರ. ಉತ್ತರ ಕರ್ನಾಟಕದ ಕಡೆ ನಾಟಕಕಾರರನ್ನು 'ಕವಿ' ಎನ್ನುತ್ತಾರೆ.

ಇವರು ಹಾಗೆ ಹೆಸರಾಂತ ಕವಿ. ತಂದೆ ಬಸವನಗೌಡ ಸೂಳೀಭಾವಿ ಅವರೂ ನಟರು. ಅವರು ಹಂದಿಗನೂರು ಸಿದ್ಧರಾಮಪ್ಪನವರ ಕಂಪನಿಯಲ್ಲಿದ್ದಾಗ ಬಾಲಕನಾದ ಇವರೂ ಜೊತೆಗೆ ಹೋಗಿ ನೋಡುತ್ತಿದ್ದರು. ಹೀಗೆ ನಾಟಕದಲ್ಲಿ ಒಲವು ಮೂಡಿತ್ತು.

1947ರ ಭೀಕರ ಬರಗಾಲದ ದಿನದಲ್ಲಿ ಶಾಲೆ ಬಿಡಿಸಿ ಒಂದು ಜೀವದ ಊಟದ ಸಮಸ್ಯೆಯಾದರೂ ಪರಿಹಾರವಾದೀತೆಂದು ನಾಟಕದ ಕಂಪನಿಗೆ ಹಾಕಿದರು.

ಮೊದಲಿನಿಂದ ಓದುವ ಹವ್ಯಾಸ, ಅ.ನ.ಕೃ., ಪುಟ್ಟಪ್ಪ, ಕಾರಂತ ಮೊದಲಾದವರ ಬರಹದ ಸ್ಫೂರ್ತಿ, ಜಿ.ಜಿ. ಹೆಗಡೆ

ಅಂಥ ಬರಹಗಾರರ ಬಳಿ ಶಿಷ್ಯನಾಗಿ ಸೇವೆ ಮಾಡಿದ್ದು – ಅವರ ಚರ್ಚೆ ವಿಚಾರಗಳನ್ನು ಕೇಳಿ ಸಾಹಿತ್ಯದ ಒಲವೇ ಹೆಚ್ಚಾಗಿ, ತಾನೇ ನಾಟಕ ಬರೆಯತೊಡಗಿದ್ದು. 'ಕಲ್ಪನಾ ಪ್ರಪಂಚ' ಎಂಬ ನಾಟಕ 40ಕ್ಕೂ ಹೆಚ್ಚು ಪ್ರಯೋಗ ಕಂಡಿತು. ವೃತ್ತಿರಂಗಭೂಮಿಗಾಗಿಯೇ ಎಲ್ಲ ಬಗೆಯ ನಾಟಕ ಬರೆದಿದ್ದಾರೆ. 20 ವರ್ಷದಿಂದ ನಾಟಕ ತಂಡ ಕಟ್ಟಿ ನಡೆಸುತ್ತಿದ್ದಾರೆ. ಇವರ ನಾಟಕಗಳನ್ನು ಬೇರೆ ಅನೇಕ ತಂಡಗಳು ನಾಟಕಕ್ಕೆ ಆಯ್ದು ಜನಪ್ರಿಯ ಪ್ರದರ್ಶನ ನೀಡುತ್ತಿವೆ. ಇವರ 'ತಾಯಿನೆರಳು'. 'ಅತ್ತಿಗೆ' ನಾಟಕಗಳು ಬೇರೆ ಬೇರೆ ಭಾಷೆಗೂ ಅನುವಾದಗೊಂಡಿವೆ. ಇವರ ಕೆಲವು ನಾಟಕಗಳು 'ಅತ್ತೆಗೆ ತಕ್ಕ ಸೊಸೆ', 'ಸಂಪತ್ತಿಗೆ ಸವಾಲ್' ಮೊದಲಾದ ಹೆಸರಲ್ಲಿ ಜನಪ್ರಿಯ ಚಲನಚಿತ್ರಗಳೂ ಆಗಿವೆ.

ಬರಹಗಾರಿಕೆ–ನಿರ್ದೇಶನ ಮಾಡುತ್ತ ಪ್ರದರ್ಶನದ ಸೋಲು ಗೆಲುವೆಲ್ಲಕ್ಕೂ ತಾನೇ ಹೊಣೆ ಎನ್ನುವ ಇವರು ಅಶ್ಲೀಲ ಸಂಭಾಷಣೆಗೆ ಒಗ್ಗದವರು. ಇವರ ಅಭಿನಯಕ್ಕಾಗೇ–ಮಾತಿನ ಚಮತ್ಕಾರಕ್ಕಾಗೇ ಜನ ಮುಗಿ ಬೀಳುತ್ತಾರೆ ರಂಗಮಂದಿರಕ್ಕೆ. ಉತ್ತರ ಕರ್ನಾಟಕದ ಬಹು ದೊಡ್ಡ ವ್ಯಕ್ತಿ ನಾಟಕಕಾರ ಪಿ.ಬಿ. ಧುತ್ತರಗಿ. ಇವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1985–86ನೇ ಸಾಲಿನ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಸಿ.ಆರ್. ಸಿಂಹ

ಕನ್ನಡ ರಂಗಭೂಮಿಯ ಅತ್ಯುತ್ತಮ ನಟ ಸಿ.ಆರ್. ಸಿಂಹ. ಕನ್ನಡ ಹಾಗೂ ಇಂಗ್ಲಿಷ್ ನಾಟಕಗಳನ್ನು ಆಡಿದ್ದಾರೆ–ಆಡಿಸಿದ್ದಾರೆ.

ಹುಡುಗನಾಗಿದ್ದಾಗಲೆ ಅವರ ತಾತ ಬರೆದ 'ವಿಶ್ವ ವ್ಯವಸ್ಥೆ' ನಾಟಕ ರಂಗಕ್ಕೇರಿಸಲು ಗುಂಪೊಂದನ್ನು ಕಲೆ ಹಾಕಿದ ಉತ್ಸಾಹಿ. ಕಾಲೇಜು ದಿನಗಳಲ್ಲಿ ಕ್ರಿಕೆಟ್ ಮತ್ತು ಬಾಲ್‌ಬ್ಯಾಡ್‌ಮಿಂಟನ್ ಸಿಂಹರ ಮೊದಲ ಪ್ರೀತಿ. ಮೈಸೂರು ನಾಟಕ ಸ್ಪರ್ಧೆಗೆ ಬೆಂಗಳೂರಿನಲ್ಲಿ ಆಯ್ಕೆಗಾಗಿ ನಾಟಕ ಪ್ರದರ್ಶನಗಳಾದವು. ಆಗ ಸಿಂಹ ಆಯ್ಕೆಯಾಗಲಿಲ್ಲ. ಆದರೆ ಸಿಂಹರ ಅಭಿನಯ ಮೆಚ್ಚಿ ಬೆನ್ನು ತಟ್ಟಿದವರು ಆಯ್ಕೆಯಾದ ಎ. ಪದ್ಮಣ್ಣ ಮತ್ತು ಶ್ರೀಕಂಠಸ್ವಾಮಿ ಸಿಂಹರಿಗೆ ಎಲ್ಲಿಲ್ಲದ ಉತ್ಸಾಹ ಆಗ.

ನಂತರ ನಾಣಿ ಪರಿಚಯ–ಅಲ್ಲಿಂದ ನ್ಯಾಷನಲ್ ಕಾಲೇಜ್ ಹಿಸ್ಟ್ರಿಯಾನಿಕ್ ಕ್ಲಬ್ ಕಾರ್ಯ ಸದಸ್ಯ. ಸೊಹ್ರಾಬ್ ರುಸ್ತುಂ–ಬಹದ್ದೂರ್ ಗಂಡು, ಬಿ.ಎಲ್.ಟಿ. ನಾಟಕಗಳು ಸಿಂಹರ ಹೆಸರನ್ನು ಸಾಕಷ್ಟು ಜನಪ್ರಿಯ ಮಾಡಿತ್ತು. 1969ರಲ್ಲಿ ಪ್ರೊ|| ಬಿ. ಚಂದ್ರಶೇಖರ್ ನಿರ್ದೇಶನದಲ್ಲಿ ತುಘಲಕ್ ರಂಗಕ್ಕೆ ಬಂದು. ಸಿಂಹರಿಗೆ ಅತ್ಯಂತ ಹೆಚ್ಚಿನ ಖ್ಯಾತಿ ತಂದ ಪಾತ್ರ ತುಘಲಕ್.

1972ರಲ್ಲಿ 'ನಟರಂಗ'ದ ಸ್ಥಾಪನೆ. ಮಾಸ್ತಿ, ಬೆಕೆಟ್, ಷೇಕ್ಸ್‌ಪಿಯರ್, ಬ್ರೆಕ್ಟ್, ಗಿರೀಶ್ ಮುಂತಾದವರ ನಾಟಕಗಳ ನಿರ್ದೇಶನ. ಬಿ.ವಿ. ಕಾರಂತ್ ನಿರ್ದೇಶನದಲ್ಲಿ ಚೆಗೆವಾರಾ ಪಾತ್ರ. ನಾಟಕ ರಂಗದಲ್ಲಿದ್ದ ಸಿಂಹ ಚಿತ್ರರಂಗಕ್ಕೆ ಮೊದಲ ಬಾರಿ ಹಾರಿದ್ದು ಸಂಸ್ಕಾರದಿಂದ. ನಂತರ ಅನೇಕ ಚಿತ್ರಗಳಲ್ಲಿ ಅಭಿನಯ. ಕಾಕನಕೋಟೆ, ಸಿಂಹಾಸನ, ಶಿಕಾರಿ ಚಿತ್ರಗಳ ನಿರ್ದೇಶಕರೂ ಆದರು. ಸೋದರ ಶ್ರೀನಾಥ್ ಜತೆ 'ವೇದಿಕೆ' ತಂಡ ಪ್ರಾರಂಭ. ಮೀಸೆ ಬಂದೋರು, ಭೈರವಿ ರಂಗಕ್ಕೆ ಬಂದವು.

ಟಿ.ಎನ್. ನರಸಿಂಹನ್ ನಿರ್ದೇಶನದ 'ಟಿಪಿಕಲ್ ಟಿ.ಪಿ. ಕೈಲಾಸಂ'ಯಲ್ಲಿನ ಸಿಂಹರ ಏಕಪಾತ್ರಾಭಿನಯ ಅವರ ನಟನಾ ಬದುಕಿನ ಮತ್ತೊಂದು ಮಹತ್ತರ ಮಜಲು. ಇದರಿಂದಾಗಿ ಸಿಂಹ ಇಂದು ಅಮೇರಿಕಾ ರಿಟರ್ನ್ಡ್ ಕೂಡಾ ಆಗಿದ್ದಾರೆ – ಅಲ್ಲಿ ಕನ್ನಡ ನಾಟಕದ ಬಾವುಟ ಹಾರಿಸಿದ್ದಾರೆ.

ಸಿಂಹರವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 1985–86ನೇ ಸಾಲಿನ ಪ್ರಶಸ್ತಿ ನೀಡಿ ಗೌರವಿಸಿದೆ.



# 1987ರ ಪ್ರಶಸ್ತಿ ವಿಜೇತರು



## ಡಾ॥ ಚಂದ್ರಶೇಖರ ಕಂಬಾರ

ಉತ್ತರ ಕರ್ನಾಟಕದ ಘೋಡಗೇರಿಯವರಾದ ಚಂದ್ರಶೇಖರ ಕಂಬಾರರು ಅವರ ಸತ್ವಯುತ ಬರಹಗಳಿಂದ ಪ್ರಸಿದ್ಧರು. ಜನಪದದ ಸತ್ವವನ್ನು ಕಾವ್ಯಾತ್ಮಕವಾಗಿ ರೂಢಿಸಿ, ಸಮಕಾಲೀನ ಸಮಸ್ಯೆಗಳ ಜೊತೆಗೆ ಸಮೀಕರಿಸಿ ಗಂಭೀರವಾದ ಚರ್ಚೆಯ ಹಂತಕ್ಕೆ ಕೊಂಡೊಯ್ಯಬಲ್ಲರು.

ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿರುವ ಕಂಬಾರರು ರಂಗಭೂಮಿಗೆ ಹೊಸತನವನ್ನು ತಂದು ವಿಶಿಷ್ಟ ತಿರುವು ಕೊಟ್ಟವರು. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕೃತಿ ರಚಿಸಿದ್ದಾರೆ. ಸಂಶೋಧನಾ ಗ್ರಂಥಗಳು, ಸಂಗ್ರಹಗಳನ್ನು ಸಹ ಪ್ರಕಟಿಸಿದ್ದಾರೆ.

ನಾಟಕ ರಚನೆ, ನಿರ್ದೇಶನ, ಅಭಿನಯ, ಸಂಗೀತ ಹೀಗೆ ರಂಗಭೂಮಿಯ ಎಲ್ಲ ಮುಖಗಳಲ್ಲೂ ಇವರಿಗೆ ಪರಿಶ್ರಮವುಂಟು. ದೆಹಲಿಯ ನಾಟಕ ಶಾಲೆಯ ಉಪಾಧ್ಯಕ್ಷರು.

ಬೆಂಗಳೂರಿನ ಜಾನಪದ ಅಕಾಡೆಮಿ ಸದಸ್ಯರಾಗಿದ್ದರು. ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ ಸೇವೆ. ಸಾಹಿತ್ಯ ಪರಿಷತ್ತಿಗಾಗಿ ಜನಪದ ವಿಶ್ವಕೋಶವನ್ನು ಸಿದ್ಧ ಮಾಡಿದ್ದಾರೆ.

ಇವರ 'ಸಾವಿರದ ನೆರಳು' ಕಾವ್ಯಕ್ಕೆ ಕುಮರನ್ ಆಶಾನ್ ಪ್ರಶಸ್ತಿ ಸಿಕ್ಕಿದೆ. ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗಳೂ ಇವರ ಅನೇಕ ಕೃತಿಗಳಿಗೆ ಬಂದಿವೆ.

ಇವರ ಜನಪ್ರಿಯ ನಾಟಕ 'ಜೋಕುಮಾರಸ್ವಾಮಿ'ಗೆ ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ, 'ಜೈಸಿದನಾಯ್ಕ'ಕ್ಕೆ ವರ್ಧಮಾನ ಪ್ರಶಸ್ತಿ ಬಂದಿದೆ.

ಬಹಳಷ್ಟು ಭಾರತೀಯ ಭಾಷೆಗಳಿಗೆ ಅನುವಾದಿತವಾಗಿರುವ ಇವರ ನಾಟಕಗಳು ಈ ಶತಮಾನದ ಶ್ರೇಷ್ಠ ನಿರ್ದೇಶಕರಿಂದ ರಂಗಕ್ಕೆ ಬಂದಿವೆ ಎನ್ನುವುದು ಮುಖ್ಯ.

'ಕಿಟ್ಟಿಯಕಥೆ' 'ಆಲಿಬಾಬಾ..' ನಾಟಕಗಳು ಮಕ್ಕಳ ರಂಗಭೂಮಿಗೆ ಒಳ್ಳೆಯ ಕೊಡುಗೆಗಳು. ದೇಶ ವಿದೇಶ ಸುತ್ತಿ ಬಂದ ಕಂಬಾರರು ಬಹಳಷ್ಟು ಜಾನಪದ ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿದ್ದಾರೆ.

ಇವರ 'ಸಂಗೀತ' ಚಿತ್ರದ ನಿರ್ದೇಶನಕ್ಕೆ, ಕಥೆಗೆ ಸಂಭಾಷಣೆಗೆ ಹಾಗೂ ಸಂಗೀತಕ್ಕೆ ರಾಜ್ಯ ಪ್ರಶಸ್ತಿ ಬಂದಿದೆ.

ಇವರು ಬರೆದ 'ಸಿರಿ ಸಂಪಿಗೆ' ಯಕ್ಷಗಾನ ಪ್ರಸಂಗವು ಆ ಪ್ರಕಾರದಲ್ಲಿ ಹೊಸ ಪ್ರಯೋಗ. ರಾಜ್ಯಸರ್ಕಾರವು ಯೋಜಿಸಿರುವ ರೆಪರ್ಟರಿ ಯೋಜನೆಯ ಸಲಹಾ ಸಮಿತಿಯ ಸದಸ್ಯರು.

ಇವರು ಋಷ್ಯಶೃಂಗ ಅತ್ಯುತ್ತಮ ನಾಟಕ. ಸಂಗ್ಯಾ-ಬಾಳ್ಯಾ ನಾಟಕವನ್ನು ಬಯಲುಸೀಮೆಗೆ ತಂದು ಹವ್ಯಾಸಿ ರಂಗಭೂಮಿಗೆ ಹೊಸ ತಿರುವು ಕೊಟ್ಟವರು.

1987ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆಗೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



# ಎಲಿವಾಳ ಸಿದ್ದಯ್ಯ

ಕನ್ನಡನಾಡು ಕಂಡಿರುವ ಅತ್ಯಂತ ಪ್ರತಿಭಾವಂತ ನಟರಲ್ಲಿ ಒಬ್ಬರಾಗಿರುವ ಶ್ರೀ ಎಲಿವಾಳ ಸಿದ್ದಯ್ಯನವರು ಬದುಕಿರುವಾಗಲೇ ದಂತ ಕಥೆಯಾಗಿದ್ದಾರೆ. ಇಷ್ಟೊಂದು ಪ್ರಮಾಣದಲ್ಲಿ ಜನಪ್ರಿಯತೆಯನ್ನು ಪಡೆದಿರುವವರು ತೀರಾ ವಿರಳ. ನಾಟಕದವರೆಂದರೆ ಮೂಗು ಮುರಿಯುವ ಸಮಾಜದಲ್ಲಿ ನಟನೊಬ್ಬ ತಾರೆಯಾಗಿ ಜನಮನದಲ್ಲಿ ನೆಲೆನಿಲ್ಲಬಲ್ಲ–ನೆಂಬುದಕ್ಕೆ ಸಿದ್ದಯ್ಯನವರು ಉದಾಹರಣೆಯಾಗಿದ್ದಾರೆ. ತನ್ನ ಅಂತಃಸತ್ವವನ್ನು ಕಳೆದುಕೊಂಡು ಕ್ಷೀಣಿಸುತ್ತಿರುವ ನಮ್ಮ ವೃತ್ತಿರಂಗಭೂಮಿ ಇಂಥ ನಟನನ್ನು ಮತ್ತೆ ಕಂಡೀತೆಂದು ಹೇಳಲಿಕ್ಕಾಗದು.

ಎಲಿವಾಳ ಹುಬ್ಬಳ್ಳಿ ಸಮೀಪದ ಒಂದು ಹಳ್ಳಿ. (ಸುಪ್ರಸಿದ್ಧ ಸಂಗೀತಗಾರ ಪಂ. ಬಸವರಾಜ ರಾಜಗುರು ಇದೇ ಗ್ರಾಮದವರು) ಅಲ್ಲಿ 1927 ರಲ್ಲಿ ಸಿದ್ದಯ್ಯನವರ ಜನನ. ತಂದೆಯಿಂದ ಪ್ರಾಥಮಿಕ ಸಂಗೀತಾಭ್ಯಾಸ. ಒಂಭತ್ತು ವರ್ಷದ ಬಾಲಕನಾಗಿದ್ದಾಗ ಬಯಲಾಟದಲ್ಲಿ ಮಾರ್ಕಂಡೇಯನ ಪಾತ್ರವಹಿಸುವುದರ ಮೂಲಕ ರಂಗಭೂಮಿಗೆ ನೇರ ಪ್ರವೇಶ. ಬಾಲ್ಯದಲ್ಲಿಯೇ ಬಯಲಾಟ, ನಾಟಕ, ಭಜನೆ ಪದಗಳನ್ನು ಅನುಕರಣೆಯಿಂದ ಹಾಡುವ ಹುಚ್ಚು, ಶಾಲೆಯಲ್ಲಿ ಶ್ಯಾಣ್ಯಾ ಹುಡುಗ. 12ನೇ ವಯಸ್ಸಿಗೆ ತಂದೆ ತಾಯಿ ಇಬ್ಬರೂ ತೀರಿಕೊಂಡಾಗ ಸಿದ್ದಯ್ಯ ಅನಾಥರಾದರು. ದಿಕ್ಕೇಡಿಯಾಗಿ ಅಲ್ಲಿ ಇಲ್ಲಿ ಅಲೆದಾಡಿದ ನಂತರ ಗದುಗಿಗೆ ಬಂದು ಪಂಚಾಕ್ಷರಿ ಗವಾಯಿಗಳವರ ಶಿಷ್ಯತ್ವ ಸ್ವೀಕರಿಸಿದರು. ಸಿದ್ದಯ್ಯನವರ ಹಾಡುಗಾರಿಕೆ ಮತ್ತು ಸ್ಫುರದ್ರೂಪಗಳು ಅವರನ್ನು ಗವಾಯಿಗಳವರ ನಾಟಕ ಕಂಪನಿಗೆ ಕರೆತಂದವು. ಬಾಲಪಾತ್ರ ಮತ್ತು ಸ್ತ್ರೀಪಾತ್ರಗಳನ್ನು ಮಾಡುತ್ತ ರಂಗಭೂಮಿಯ ಖಾಯಂ ಸಂಬಂಧ ಬೆಳೆಸಿಕೊಂಡರು.

ಜಮಖಂಡಿಯ ಗಜಾನನ ನಾಟ್ಯ ಸಂಘದಲ್ಲಿ ಎರಡು ವರ್ಷವಿದ್ದು ಎಲ್ಲ ತರದ ಸ್ತ್ರೀಪಾತ್ರ ನಿರ್ವಹಿಸಿ ಹೆಸರು ಮಾಡಿದರು. ಅವರ ಕೀರ್ತಿ ಅವರು ಸುಪ್ರಸಿದ್ಧ ಗೋಕಾಕ ಕಂಪನಿ ಪ್ರವೇಶಿಸಲು ಕಾರಣವಾಯಿತು. ಅಂದು ಗೋಕಾಕ ಕಂಪನಿ ನಾಡಿನ ಹೆಸರಾಂತ ಕಂಪನಿಗಳಲ್ಲೊಂದಾಗಿತ್ತು. ಅಂಥ ಕಂಪನಿಯಲ್ಲಿ ಕಲಾಸೇವೆ ಮಾಡುವ ತವಕ ಸಿದ್ದಯ್ಯನವರಿಗೆ. ಲಕ್ಷ್ಮಣರಾವ್ ಪುರಿಯವರು ಆ ಕಂಪನಿಯ ಹೆಸರಾಂತ ಹಾಸ್ಯನಟರು. ಅವರ ಪಾತ್ರಾಭಿನಯ ಸಿದ್ದಯ್ಯನವರ ಪಾಲಿಗೆ ಪ್ರತ್ಯಕ್ಷ ಪಾಠ ಬೋಧನೆಯಾಯಿತು. 1948ರಲ್ಲಿ ಗೋಕಾಕ ಕಂಪನಿ ಸೇರಿ, ನಾಯಕ, ಖಳನಾಯಕ ಮತ್ತು ಹಾಸ್ಯ ಪಾತ್ರಗಳನ್ನು ಮಾಡುವುದರಲ್ಲಿ ನಿಸ್ಸೀಮರೆನಿಸಿದ್ದರು.

ಕರ್ನಾಟಕದ ಶೇಕ್ಸ್‌ಪಿಯರ್ ಎಂದು ಹೆಸರಾಗಿರುವ ಕಂದಗಲ್ಲ ಹನುಮಂತರಾಯರು ಸಿದ್ದಯ್ಯನವರ ಅಭಿನಯ ಕೌಶಲ್ಯಕ್ಕೆ ಮನಸೋತವರು. ಅವರ ಹೆಸರನ್ನು ಅಜರಾಮರವಾಗಿಸಿರುವ 'ರಕ್ತರಾತ್ರಿ' ನಾಟಕದ ರಚನೆಗೆ ಸಿದ್ದಯ್ಯನವರೇ ಪ್ರೇರಕ ಶಕ್ತಿ. 1950ರಿಂದ ಈ ನಾಟಕ ಅದೆಷ್ಟು ಸಾವಿರ ಪ್ರಯೋಗಗಳನ್ನು ಕಂಡಿದೆಯೋ ಏನೋ!

1954ರಲ್ಲಿ ಗುಬ್ಬಿ ವೀರಣ್ಣನವರು ಸಿದ್ದಯ್ಯನವರನ್ನು ತಮ್ಮ ಕಂಪನಿಗೆ ಕರೆದೊಯ್ದರು. ಕೆಲವು ದಿನ ಅವರ 'ದಶಾವತಾರ' ನಾಟಕದಲ್ಲಿ ಪರಶುರಾಮನ ಪಾತ್ರ ವಹಿಸಿದರು. ನಂತರ ಮದ್ರಾಸಿನಲ್ಲಿ ಗುಬ್ಬಿ ಕರ್ನಾಟಕ ಪ್ರೊಡಕ್ಷನ್ ಸಂಸ್ಥೆಯ ಮೂಲಕ ಸಿನಿಮಾ ಕ್ಷೇತ್ರಕ್ಕೆ ಪ್ರವೇಶ. ಶ್ರೀಕೃಷ್ಣ ಗಾರುಡಿಯಲ್ಲಿ ಸಿದ್ದಯ್ಯನವರು ಶ್ರೀಕೃಷ್ಣನ ಪಾತ್ರವನ್ನು ಮನಮೋಹಕವಾಗಿ ಅಭಿನಯಿಸಿದ್ದಾರೆ. 1960ರಲ್ಲಿ ಪುನಃ ರಂಗಭೂಮಿಗೆ ಮರಳಿದರು. ಅಲ್ಲಿಂದೀಚೆಗೆ ಸಿದ್ದಯ್ಯನವರು ಅಭಿನಯವನ್ನು ವೃತ್ತಿಯಾಗಿಸಿಕೊಂಡ ಹವ್ಯಾಸಿ ನಟರಾಗಿದ್ದಾರೆ. ಹಳ್ಳಿಗಳ ಹವ್ಯಾಸಿ ತಂಡದವರು ರಕ್ತರಾತ್ರಿ ನಾಟಕವಾಡಿದರೆ ಅದಕ್ಕೆ ಸಿದ್ದಯ್ಯನವರು ಬರಲೇಬೇಕು. ಅವರ ಬಗ್ಗೆ ಹಳ್ಳಿಗರ ಅಭಿಮಾನ ಭಕ್ತಿಗಳು ವಿಪರೀತ. ಸುಮಾರು ನೂರೈವತ್ತು ಜನ ಶಿಷ್ಯರು ಅವರಿಗಿದ್ದಾರೆ. 'ರಂಗಭೂಮಿ ನಟಚಕ್ರವರ್ತಿ', 'ವಿನೋದಪುಷ್ಪ' ಮುಂತಾದ ಬಿರುದುಗಳಿಂದ ಸನ್ಮಾನಿತರಾಗಿದ್ದಾರೆ. 1987ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆಗೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಎ.ಕೆ. ಮೂರ್ತಿ

ಶ್ರೀ ಎ.ಕೆ. ಮೂರ್ತಿಯವರು ಕಳೆದ ನಲವತ್ತು ವರ್ಷಗಳಿಗೂ ಮಿಕ್ಕು ಹೊರನಾಡಿನಲ್ಲಿ ದುಡಿಯುತ್ತಿರುವ ಹಿರಿಯ ರಂಗಕರ್ಮಿಗಳು. ಮುಂಬೈನಲ್ಲಿ, ಕನ್ನಡ ರಂಗಭೂಮಿಯ ಏಳಿಗೆಗೆ ದೀರ್ಘಕಾಲ ದುಡಿದ, 'ಕುಟ್ಟಿ' ಎಲ್ಲರಿಗೂ ಚಿರಪರಿಚಿತರು. ಆದರೆ, ನಾಡಿನಾದ್ಯಂತ ಇವರ ಹೆಸರು ಮನೆಮಾತಾಗಿರುವುದು ಚಲನಚಿತ್ರರಂಗಕ್ಕೆ ಮಾಡಿದ ದುಡಿಮೆಯಿಂದಾಗಿ. ದೇಶದ ಚಲನಚಿತ್ರ ಛಾಯಾಗ್ರಹಣ ಪಟುಗಳಲ್ಲಿ ಮೊದಲಾದ ಹೆಸರು ಮೂರ್ತಿಯವರದು. ಅವರು ದಿ. ಗುರುದತ್ತ ಅವರೊಡನೆ ತೆಗೆದ, 'ಕಾಗಜ್ ಕೆ ಫೂಲ್', 'ಸಾಹಿಬ್", 'ಬೀಬಿ ಔರ್ ಗುಲಾಮ್", 'ಚೌದವಿನ್ ಕಾ ಚಾಂದ್", 'ಪ್ಯಾಸಾ' ಎಲ್ಲವೂ ಒಂದು ಕ್ಲಾಸಿಕ್ಸ್ ಎನ್ನಿಸಿಕೊಂಡಿವೆ. ಅನೇಕ ಪ್ರಶಸ್ತಿಗಳು ಅವರಿಗಾಗಲೇ ಸಂದಿವೆ. ಮೂರ್ತಿಯವರು ಕೇವಲ ನಿರ್ದೇಶಕ ಮಾತ್ರವಲ್ಲ. ಒಳ್ಳೆಯ ನಟ ಮತ್ತು ನಾಟಕಕಾರರೂ ಹೌದು. ಅವರೇ ಬರೆದ ಹಲವಾರು ನಾಟಕಗಳಲ್ಲದೆ, ಅನೇಕ ರಂಗಕರ್ಮಿಗಳಿಗೆ ಇಂದು ಸ್ಫೂರ್ತಿಯಾಗಿ ನಿಂತಿದ್ದಾರೆ. 1987ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆಗೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.





## ಗಜಾನನ ಮಹಾಲೆ

ನಮಗೊಬ್ಬ ಜೀವಂತ ಗಜಾನನ ದೊರಕಿದ್ದಾನೆ!

"ಆಟ ಸುಸೂತ್ರವಾಗಿ ಆರಂಭವಾಗಿ, ಸುಸಂಬದ್ಧವಾಗಿ ಸಾಗಿ, ಯಶಸ್ವಿಯಾಗಿ ಮುಗಿವಂತೆ ಹರಸು" ಎಂದು ನಾವೆಲ್ಲ ಕೇಳಿಕೊಳ್ಳುವುದು ಈ ಗಜಾನನನ್ನೇ. ಈತ ಬರದಿದ್ದರೆ, ಬಂದು ಬೆನ್ನ ಹಿಂದೆ ಇರದಿದ್ದರೆ ನಮ್ಮ 'ಆಟ'ವೇ ಸಾಗದು. ಪರವೂರಿನ ನಮ್ಮ ಪ್ರಯೋಗಗಳ ಸಂದರ್ಭದಲ್ಲಿ ಈತ ನಮ್ಮೊಂದಿಗೆ ನಮ್ಮ ವ್ಯಾನಿನಲ್ಲಿಯೇ ಇರದಿದ್ದರೆ ನಮಗೆ ಹೊತ್ತೇ ಹೋಗದು. ಈತ ಕೈ ಹಚ್ಚದಿದ್ದರಂತೂ ನಮ್ಮ ಸೆಟ್ಟಿನ ಕೆಲಸ ಬೇಗ ಆಗದು. ನಮಗೆ ಬಣ್ಣಕ್ಕೆ ಈ ಗಜಾನನ ಬೇಕು.

ನಾಟಕದಲ್ಲಿ ಮುಖವಾಡ, ಪೇಟ, ಕಿರೀಟ, ವಿಗ್ ಇತ್ಯಾದಿಗಳ ಅವಶ್ಯಕತೆಯಿದ್ದರೆ ಈ ಗಜಾನನ ಬೇಕು. ಸ್ಟೇಜಿನ ಕೆಲಸ ನಡೆದಾಗ ಬೇಸರ ಕಳೆಯಲು ಈ ಗಜಾನನ ಹಾಡಲೇಬೇಕು. ನಾಟಕ ಮುಗಿದ ಮೇಲೆ ಪ್ರಯೋಗದ ಓರೆಕೋರೆಗಳನ್ನು ಅರಿಯಲು ಈ ಗಜಾನನ ಬೇಕು. ಹೀಗೆ ಹುಬ್ಬಳ್ಳಿ–ಧಾರವಾಡಗಳ ಸುತ್ತಲಿನ ಸೀಮೆಯ ಹವ್ಯಾಸಿ ತಂಡಗಳಿಗೆಲ್ಲ ಕಳೆದ ಮೂವತ್ತೈದು ವರ್ಷಗಳಿಂದ ಈ ಗಜಾನನ 'ಬೇಕಾದ' ವ್ಯಕ್ತಿ. ಸದ್ದಿಲ್ಲದೆ, ಸುದ್ದಿಯಿಲ್ಲದೆ ಬಂದು ಪಾತ್ರಗಳನ್ನು ಸಿದ್ಧಗೊಳಿಸುವ ಶುದ್ಧ–ಸಿದ್ಧಹಸ್ತ ಈ ಗಜಾನನ. ನಗುಮುಖದ, ನಯ–ನಾಜೂಕಿನ, ನಾಟಕೀಯ ವ್ಯವಹಾರಗಳಿಲ್ಲದ ನಿಗರ್ವಿ ಈ ಗಜಾನನ.

ಮೇಕಪ್ ಮಹಾಲೆ ಎಂದೇ ಹೆಸರಾಗಿರುವ ಗಜಾನನ ಮಹಾಲೆಯ ಕುರಿತು ಈ ಮೊದಲೆಲ್ಲ ಬರಿ ಸೂಪರ್‌ಲೇಟಿವ್‌ನಲ್ಲೇ ಹೇಳಿದ್ದೇನೆಂಬ ಭಾವನೆ ಬೇಡವೇ ಬೇಡ. ಯಾಕೆಂದರೆ ಸೂಪರ್‌ಲೇಟಿವ್‌ಗಳನ್ನು ಬಿಟ್ಟು ಯಾವ ರೀತಿಯಲ್ಲೂ ಯಾರಿಂದಲೂ ಹೇಳಲಾಗುವುದಿಲ್ಲ ಮಹಾಲೆ ಬಗ್ಗೆ.

ಶ್ರೀರಂಗ, ದ.ರಾ. ಬೇಂದ್ರೆ, ಜಿ.ಬಿ. ಪಂ. ಮಲ್ಲಿಕಾರ್ಜುನ ಮನಸೂರ, ಪಂ. ಬಸವರಾಜ ರಾಜಗುರು, ಗಿರೀಶ್ ಕಾರ್ನಾಡ, ಮೊದಲಾದ ಹಿರಿಯರೆಲ್ಲ ಮಹಾಲೆಯ ಕೈಯನ್ನು ಬಲ್ಲರು. ತೋಂಟದಾರ್ಯ, ಠಕ್ಕರ್, ಜಯತೀರ್ಥ ಜೋಶಿ ಮುಂತಾದ ನಿರ್ದೇಶಕರು ಮಹಾಲೆಯಲ್ಲದೇ ಬೇರೆ ಮೇಕಪ್ ಆರ್ಟಿಸ್ಟನನ್ನು ಬಲ್ಲರು. "ಮಹಾಲೆಯ ಮೇಕಪ್ಪಿಲ್ಲದಿದ್ದರೆ ನಮಗೆ ಪಾತ್ರ ವಹಿಸುವುದಕ್ಕೆ ಹುರುಪೇ ಇರುವುದಿಲ್ಲ" ಎಂಬುದು ಈ ಭಾಗದ ಕಲಾವಿದರ ಅಭಿಪ್ರಾಯ.

ಬಡತನದಲ್ಲೇ ಹುಟ್ಟಿ, ಬಡತನದಲ್ಲೇ ಬೆಳೆದು, ಬಡತನದಲ್ಲೇ ಬಾಳುತ್ತಿರುವ ಈ 'ಹೃದಯಶ್ರೀಮಂತ' ಮೇಕಪ್ ಕಲೆಯನ್ನು ತಂದೆಯಿಂದ ರೂಢಿಸಿಕೊಂಡವರು. ಸಂಗೀತದ ಬಗ್ಗೆ ಆಸ್ಥೆ ಹುಟ್ಟಿದ್ದೂ ತಂದೆಯಿಂದಲೇ. ಚಿತ್ರಕಲೆಯ ಅಭ್ಯಾಸವನ್ನು ಏಕಲವ್ಯನ ತೆರದಲ್ಲೇ ಮಾಡಿ ಸಿದ್ಧಿಗೊಳಿಸಿರುವ ಮಹಾಲೆಗೆ ಪಲ್ಪಿನಿಂದ ಕಿರೀಟ ಮುಖವಾಡ, ನಾರಿನಿಂದ ವಿಗ್, ಕಾಗದದಿಂದ ಹೂವು-ಗಿಡಮರಗಳ ಪ್ರತಿಕೃತಿ ತಯಾರಿಸುವ ಕಲೆಯಂತೂ ಅಂಗೈ ನೆಲ್ಲಿಕಾಯಿ. ಧಾರವಾಡದಲ್ಲಿದ್ದುಕೊಂಡು, ನಾಟಕಗಳಿದ್ದಲ್ಲೆಲ್ಲ ಹೋಗಿ ಬರುವ ಈತ ಬಂದದ್ದನ್ನೇ ಭಾಗ್ಯವೆಂದುಕೊಳ್ಳುವ ವ್ಯಕ್ತಿ. ಹಣದ ಮುಖ ನೋಡದೆ ಗುಣದ ಮುಖ ನೋಡುವ ವ್ಯಕ್ತಿ. "ಹಾಂಗ ಹಣದ ಮುಖಾ ನೋಡಿ ಕೆಸಲಕ್ಕ ನಿಂತಿದ್ರ ನನ್ನನ್ನ ಈ ಕ್ಷೇತ್ರ ಮರೆತಬಿಡುತ್ತಿತ್ತು" ಎಂದು ವಿನಯದಿಂದ ಹೇಳುವ ಮಹಾಲೆಯ ನಿಸ್ಪೃಹ-ನಿರಂತರ ಸೇವೆಯನ್ನು ಗಮನಿಸಿ ಕರ್ನಾಟಕ ನಾಟಕ ಅಕಾಡೆಮಿ 1987ರ ವರ್ಷದ ಪ್ರಶಸ್ತಿಯನ್ನು ಅವರಿಗೆ ಗೌರವಪೂರ್ಣವಾಗಿ ನೀಡುತ್ತಾ ತನ್ನನ್ನು ತಾನೇ ಗೌರವಿಸಿಕೊಂಡಿದೆ.

---



## ಆರ್. ನಾಗರತ್ನಮ್ಮ

ಪೌರಾಣಿಕ ನಾಟಕಗಳಲ್ಲಿ ಪ್ರಸಿದ್ಧ ರೌದ್ರ ಪಾತ್ರಗಳೆಂದರೆ ರಾವಣ, ಕಂಸ, ಭೀಮ ಮತ್ತು ಹಿರಣ್ಯಕಶ್ಯಪು. ಈ ಪಾತ್ರಗಳನ್ನು ಮಾಡಿದವರು ಹಲವು ನಟರು. ಆದರೆ ಜನ-ಮನದಲ್ಲಿ ಉಳಿದ ನಟರೆಂದರೆ ದಿವಂಗತ ನಟಸಾರ್ವಭೌಮ ಎ.ವಿ. ವರದಾಚಾರ್ಯರು ಮತ್ತು ನಟಭಯಂಕರ ಎಂ.ಎನ್. ಗಂಗಾಧರರಾಯರು. ಇವರಿಬ್ಬರ ಅನಂತರ ಅಷ್ಟೇ ಪ್ರಭಾವಪೂರ್ಣವಾಗಿ ಜನ-ಮನವನ್ನು ಗೆದ್ದು ಕಲಾಪ್ರಪಂಚದಲ್ಲಿ ಅಚ್ಚರಿಗೊಳಿಸಿದವರೆಂದರೆ ಶ್ರೀಮತಿ ಆರ್. ನಾಗರತ್ನಮ್ಮನವರು. ನಾಟಕಗಳಲ್ಲಿ ಕೋಮಲವಾದ ನಾಯಕಿ ಪಾತ್ರಗಳನ್ನು ವಹಿಸಿ ಹೆಸರು ಮಾಡಿದ್ದ ಶ್ರೀಮತಿ ನಾಗರತ್ನಮ್ಮನವರು ಪುರುಷ ಪಾತ್ರಗಳಿಗೆ ಇಳಿದದ್ದು ಒಂದು ಆಕಸ್ಮಿಕವೇ! ಅವರೇ ಹೇಳುವಂತೆ – ಅಂಜಿ-ಅಂಜಿ ಮೀಸೆ ಬಿಟ್ಟು ರಂಗದ ಮೇಲೆ ಬಂದು ಮೀಸೆಯ ಗಂಡಸರನ್ನೇ ಬೆರಗುಗೊಳಿಸಿದ ವರನಟಿ ನಾಗರತ್ನಮ್ಮನವರು.

ರಂಗಭೂಮಿಯ ಚರಿತ್ರೆಯಲ್ಲಿ ಒಂದು ವಿಶಿಷ್ಟ ರೀತಿಯ ಕೀರ್ತಿಯನ್ನು ಗಳಿಸಿದ ಇವರು ಕಲಾವಿದ ತಂದೆಯ ಮಗಳಾಗಿ ಜನಿಸಿ (21-6-1926) ನಟಿಯಾಗಿ, ಅನೇಕ ನಾಯಕಿ ಪಾತ್ರಗಳಲ್ಲಿ ಜನಮೆಚ್ಚುಗೆ ಗಳಿಸಿದ ನಾಟಕಗಳು ಹಲವಾರು. 'ಕಲಾಸೇವಾ ಮಂಡಳಿ' 'ಸಿಂಹಾಸ್‌ಸೆಲೆಕ್ಟಡ್ ಆರ್ಟಿಸ್ಟ್ಸ್ ಕಂಪನಿ' 'ಹೆಚ್. ರಾಮಚಂದ್ರ ಶಾಸ್ತ್ರಿಗಳ ಮಂಜುನಾಥೇಶ್ವರ ನಾಟ್ಯ ಕಲಾಸಂಘ' 'ಹಿರಿಯಣ್ಣಯ್ಯ ಮಿತ್ರ ಮಂಡಳಿ' 'ಶೇಷಕಮಲ ಕಲಾಮಂಡಳಿ' 'ಸುಬ್ಬಯ್ಯನಾಯ್ಡುಗಳ ಕಂಪನಿ' ಹೀಗೆ ಹಲವಾರು.

ಪ್ರಸಿದ್ಧ ಹಾಸ್ಯನಟ ಎಂ.ಆರ್. ಪಾರ್ಥಸಾರಥಿಯವರೊಡನೆ ವಿವಾಹವಾಯ್ತು. ನಂತರ ಬಳ್ಳಾರಿ ವಿರಾಮದಲ್ಲಿದ್ದ ಲಲಿತಮ್ಮನವರ ಪಾತ್ರಗಳನ್ನು ನಿರ್ವಹಿಸುವ ಸಲುವಾಗಿ ಹಿರಿಯಣ್ಣಯ್ಯ ಮಿತ್ರಮಂಡಳಿಗೆ ಬಂದರು. ಸಂಗೀತದಲ್ಲಿ ಅಷ್ಟು ಪರಿಶ್ರಮ ಪಡೆಯದ ನಾಗರತ್ನಮ್ಮ ತಮ್ಮ ಅಭಿನಯ ಸಾಮರ್ಥ್ಯದಿಂದ ಆ ಕೊರತೆಯನ್ನು ತೋರಗೊಡದೆ ನಿರ್ವಹಿಸಿ ಪತ್ರಿಕೆಗಳಿಂದಲೂ ಹೊಗಳಿಸಿಕೊಂಡ ನಟೀಮಣಿ ನಾಗರತ್ನಮ್ಮ.

ಕೃಷ್ಣಸುಧಾಮ, ರಾಧಾರಮಣ, ಸ್ತ್ರೀರತ್ನ, ಪ್ರಭುಲಿಂಗಲೀಲೆ, ಪರಸಂಗದ ಗೆಂಡೆತಿಮ್ಮ ಮುಂತಾದ ಚಲನಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಚಿತ್ರಪ್ರಪಂಚದಲ್ಲಿ ಇವರಿಗೆ ದೊರೆತ ಪಾತ್ರಗಳು ತೃಪ್ತಿ ತರಲಿಲ್ಲ. ಕಾರಣ ಇವರ ಪ್ರತಿಭೆಗೆ ಅನುಗುಣವಾದ ಪಾತ್ರಗಳು ದೊರೆಯಲಿಲ್ಲ. ತಕ್ಕ ಉತ್ತೇಜನ ಕೂಡ ದೊರೆಯಲಿಲ್ಲ. ನಂತರ ರಾಜಣ್ಣನವರೆಂಬ ಕಲಾಭಿಮಾನಿಗಳು ಸ್ತ್ರೀಯರಿಂದಲೇ ಆಡಿಸಿದ ಸುಭದ್ರಾ ಕಲ್ಯಾಣ' ನಾಟಕದಲ್ಲಿ ಅರ್ಜುನನ ಪಾತ್ರ ವಹಿಸಿ ಮೆಚ್ಚುಗೆ ಗಳಿಸಿದರೂ ಅವರಿಗೆ ಸಮಾಧಾನ ತರಲಿಲ್ಲ.

1959ರಲ್ಲಿ ಅಂಬುಜಮ್ಮ ಎಂಬುವರು 'ಶ್ರೀಕೃಷ್ಣಗಾರುಡಿ' ಎಂಬ ನಾಟಕವನ್ನು ಆಡಿಸಿದರು. ಹೆಣ್ಣು ಭೀಮನ ಪಾತ್ರ ವಹಿಸುವುದು ಸಾಮಾನ್ಯವಾಗಿರಲಿಲ್ಲ. ಧೈರ್ಯಮಾಡಿ ಮೀಸೆ ತಿರುವುತ್ತಾ ಭೀಮನಾಗಿ ರಂಗಕ್ಕೆ ನುಗ್ಗಿದರು. ಎರಡನೆಯ ದೃಶ್ಯದಲ್ಲೇ ಮೆಚ್ಚಿದ ಜನ ಚಪ್ಪಾಳೆಯಿಂದ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ನಾಟಕ ನಿರೀಕ್ಷೆ ಮೀರಿ ಯಶಸ್ವಿಯಾಯಿತು. ಅಂದಿನಿಂದ ನಾಗರತ್ನಮ್ಮನವರು ರಂಗಭೂಮಿಯ ಗಂಡಾದರು.

ಭೀಮ, ಹಿರಣ್ಯಕಶ್ಯಪು, ರಾವಣ ಮುಂತಾದ ಪಾತ್ರಗಳಲ್ಲದೆ, ಸಾಮಾಜಿಕ ನಾಟಕವಾದ 'ಸಂಸಾರನೌಕೆ'ಯಲ್ಲಿ ಮೊದಲು ಸುಂದರ ಪಾತ್ರ ವಹಿಸಿ ಹೆಸರು ಮಾಡಿದ್ದ ಬಿ.ಆರ್. ಪಂತುಲು ಅವರ ಸಮ್ಮುಖದಲ್ಲಿ, ಮದ್ರಾಸಿನಲ್ಲಿ ಸುಂದರನ ಪಾತ್ರ ವಹಿಸಿ ಯಾವ ಗಂಡಿಗೂ ಕಡಿಮೆಯಿಲ್ಲವೆಂದು ಪಂತುಲುರವರಿಂದಲೇ ಹೊಗಳಿಸಿಕೊಂಡರು.

'ಪುರುಷ ಪಾತ್ರ ಮಾಡಿಯೇ ಸೈ ಎನಿಸಿಕೊಂಡದ್ದರಿಂದ ನನಗೊಂದು ವೈಶಿಷ್ಟ್ಯಪೂರ್ಣವಾದ ಕೀರ್ತಿ, ಘನತೆ ಬಂತು. ನಾನು ಆ ಸಾಹಸ ಮಾಡದೆ ನಾಯಕಿಯ ಪಾತ್ರಗಳಲ್ಲೇ ಇದ್ದುಬಿಟ್ಟಿದ್ದರೆ ಇಂದು ಅಂದಿನ ಎಷ್ಟೋ ಜನ ನಟಿಯರು ಮುದುಕಿಯರಾಗಿ ಪಡುವ ಅವಸ್ಥೆಯೇ ನನ್ನದಾಗುತ್ತಿತ್ತು' ಎಂದು ನೊಂದು ನುಡಿಯುತ್ತಾರೆ. ಈಗ ಅವರಿಗೆ 61–62ರ ಇಳಿವಯಸ್ಸು.

ಇಂತಹ ಅಭಿನೇತ್ರಿಗೆ 1987ರ ಪ್ರಶಸ್ತಿಯನ್ನಿತ್ತು ಗೌರವಿಸುತ್ತಿರುವ ನಾಟಕ ಅಕಾಡೆಮಿ ತನ್ನನ್ನು ತಾನೇ ಗೌರವಿಸಿಕೊಂಡಿದೆ.



## 1988ರ ಪ್ರಶಸ್ತಿ ವಿಜೇತರು



### ಮಾಸ್ಟರ್ ಹಿರಣ್ಣಯ್ಯ

'ಪ್ರೇಕ್ಷಕರನ್ನು ಅನ್ನದಾತರೆಂದು ಗೌರವಿಸಿ, ಅವರು ತೆತ್ತ ಹಣಕ್ಕೆ ದುಪ್ಪಟ್ಟು ಖುಷಿಯನ್ನು ಕೊಟ್ಟು ಕಳುಹಿಸಬೇಕಾದ್ದು ನಮ್ಮ ಪರಮಧರ್ಮ' ಎಂಬ ಭಾವನೆಯ ಬುನಾದಿಯ ಮೇಲೆ 'ನಗೆಯ ನೆಲದ ತ್ರಿವಿಕ್ರಮ' ನೆಂದೇ ಪ್ರಖ್ಯಾತರಾದ ದಿ. ಹಿರಣ್ಣಯ್ಯನವರು 1941ರಲ್ಲಿ ಕಟ್ಟಿ ಬೆಳೆಸಿದ 'ಹಿರಣ್ಣಯ್ಯ ಮಿತ್ರ ಮಂಡಳಿ' ಕರ್ನಾಟಕ ರಂಗ ಚರಿತ್ರೆಯಲ್ಲಿ ಸದಾ ಹಸುರಾಗಿ ಕಂಗೊಳಿಸುವ ಹೆಸರು.

ಸಾಮಾನ್ಯವಾಗಿ ವೃತ್ತಿ / ಕಂಪನಿ ನಾಟಕಗಳು ಸಂಗೀತ ಪ್ರಧಾನವಾಗಿದ್ದು ವೇಷಭೂಷಣ, ವೈಭವಪೂರ್ಣ ಸೆಟ್ಸ್–ಸೀನರಿಗಳಿಂದ ಝಗಝಗಿಸುತ್ತಾ ಮೆರೆಯುತ್ತಿದ್ದ ಕಾಲದಲ್ಲಿ, ಆ ವೈಪೋಟಿಗೆ ಇಳಿಯಲಾಗದೆ, ಆ ವೇಷಗಳನ್ನೆಲ್ಲಾ ಕಳಚಿ, ಸಮಕಾಲೀನ ಸಾಮಾಜಿಕ ನಾಟಕಗಳನ್ನು ರಂಗಕ್ಕೆ ತಂದು ಮಾತಿನ ಮುತ್ತುಗಳಿಂದ ರಂಗಭೂಮಿಯನ್ನು ಕೊರೈಸುವಂತೆ ಮಾಡಿದ್ದು, ಎರಡನೇ ಸ್ಥಾನದಲ್ಲಿದ್ದ ಸಂಭಾಷಣೆಗೆ, ಮಾತಿಗೆ ಮನ್ನಣೆ ಕೊಟ್ಟು ಹೊಸ ಸ್ಕೂಲ್ ಒಂದರ ಅನ್ವೇಷಣೆಗೆ ನಾಂದಿ ಹಾಡಿದ ಕೀರ್ತಿಯೂ ದಿ. ಹಿರಣ್ಣಯ್ಯನವರಿಗೇ ಸೇರಿದ್ದು.

ಹಿರಣ್ಣಯ್ಯನವರ ನಂತರ ಈ ಸ್ಕೂಲಿನ ಪರಂಪರೆಯ ನಾಟಕ–ಜೀವನದ, ಜಟಕಾ ಬಂಡಿಗೆ ಹೆಗಲು ಕೊಟ್ಟು, ಇದೀಗ ತಮ್ಮ ವೃತ್ತಿ ಜೀವನದ ಐದನೇ ದಶಕದಲ್ಲೂ ಅದೇ ಶ್ರದ್ಧೆ–ಶ್ರಮಗಳಿಂದ ಅವಿರತವಾಗಿ ಸೇವೆ ಸಲ್ಲಿಸುತ್ತಿರುವ The only master of his kind ಎನಿಸಿಕೊಂಡಿರುವ ಮಾಸ್ಟರ್ ಹಿರಣ್ಣಯ್ಯನವರಿಗೆ, ಆ ಸ್ಕೂಲಿನ 'ಮಾಸ್ಟರಿ' ಸಾಧಿಸಿದ್ದು; ತಂದೆಯವರಿಂದಾಗಿ 'ಮಾಸ್ಟರ್ ಹಿರಣ್ಣಯ್ಯ'ನಾದಷ್ಟು ಸುಲಭದ 'ಮಾತು' ಆಗಿರದೆ, ದಶಕಗಳ ತಪಸ್ಸು–ಸಾಧನೆಗಳ ಫಲ ಎಂಬುದು ಮಿತ್ರ ಮಂಡಳಿಯ ಅಭಿಮಾನಿಯಗಳಿಗೆಲ್ಲಾ ತಿಳಿದ ವಿಷಯ.

ಮಿತ್ರ ಮಂಡಳಿಯ ಹಳೆಯ ನಾಟಕಗಳಾದ ದೇವದಾಸಿ, ಸದಾರಮೆ, ಪಂಗನಾಮ, ಮಕ್ಮಲ್ ಟೋಪಿ, ಹೆಜ್ ಹರಾಜ್ ನಾಟಕಗಳನ್ನು ಆಡುತ್ತಾ ತಂದೆಯವರ ಬಿಟ್ಟ ಬಾಣಗಳನ್ನು ಬಿಡುತ್ತಾ ಬಂದ ಕಾರಣವಿರಬಹುದು; ತಂದೆಯ ಖ್ಯಾತಿ ಮಗನಿಗೆ ನೆರಳಾಗೇ ಕಾಡಿತ್ತು, ನೆರಳಿಂದ ಪಾರಾಗಲು ನಡೆಸಿದ ಸತತ ಚಿಂತನೆ, ಶ್ರಮದ ಫಲ 'ಲಂಚಾವತಾರ' – ಹೊಸದೊಂದು ಅವತಾರದ ಶೋಧನೆ.

1959ರಲ್ಲಿ ಶಿವಮೊಗ್ಗದಲ್ಲಿ ರಂಗವೇರಿದ 'ಲಂಚಾವತಾರ' ಮಾಸ್ಟರ್ ಹಿರಣ್ಣಯ್ಯನವರ ಬದುಕಿಗೂ ತಿರುವಿತ್ತು, ಕಂಪನಿಯನ್ನು ಆರ್ಥಿಕ ಸಂಕಷ್ಟಗಳಿಂದ ಪಾರುಮಾಡಿತು. ನಂತರ ನಡುಬೀದಿ ನಾರಾಯಣ, ಭ್ರಷ್ಟಾಚಾರ, ಅನಾಚಾರ, ಅತ್ಯಾಚಾರ ಇತ್ಯಾದಿ ನಾಟಕಗಳು ರಂಗಕ್ಕೆ ಬಂದು ಖಾದಿ, ಖಾಕಿ ಕಾವಿಗಳ ಸಾಮ್ರಾಜ್ಯಗಳ ಕೋಟೆಗೇ ಲಗ್ಗೆಯಿಟ್ಟವು. ಮಿಂಚಿನ ವೇಗದಲ್ಲಿ 'ಮಾಸ್ಟರ್ ಹಿರಣ್ಣಯ್ಯ' ಜನಪ್ರಿಯರಾದರು.

ಪ್ರದರ್ಶನಗಳ ಸಂಖ್ಯೆಯನ್ನು ಅವಲೋಕಿಸಿದಾಗ, ಲಂಚಾವತಾರ ಎಂಟು ಸಾವಿರದತ್ತ, ನಡುಬೀದಿನಾರಾಯಣ ಐದು ಸಾವಿರದತ್ತ, ಭ್ರಷ್ಟಾಚಾರ ಮೂರು ಸಾವಿರದತ್ತ ಹೀಗೆ ಎಲ್ಲವೂ ನಾಲ್ಕು ಸಂಖ್ಯೆಗಳನ್ನು ದಾಟಿದ್ದು ಐದನೇ ಸಂಖ್ಯೆಗೆ ಅಡಿಯಿಟ್ಟರೂ ಆಶ್ಚರ್ಯವಿಲ್ಲ. ಇವು ಕನ್ನಡ ರಂಗಭೂಮಿಯ ಸಾರ್ವಕಾಲಿಕ ದಾಖಲೆಗಳು. ಹಾಗೆಯೇ ಅಂದಿನ ಹಿರಣ್ಣಯ್ಯನವರ ನಾಟಕಗಳನ್ನು ನೋಡಿದವರ ಅನಿಸಿಕೆಗಳನ್ನು ಕೇಳಿದಾಗ, ಇಂದಿನ ಮಾಸ್ಟರ್ ಹಿರಣ್ಣಯ್ಯನವರ ನಾಟಕಗಳನ್ನು ನೋಡಿದಾಗ ನಮಗೆ ಅನ್ನಿಸುವುದು; ಈ ಕಂಪನಿಯ ನಾಟಕಗಳಲ್ಲಿ ಹಿರಣ್ಣಯ್ಯ–ಮಾ. ಹಿರಣ್ಣಯ್ಯ ಇವರೇ ಮುಖ್ಯ ಆಕರ್ಷಣೆಗಳು. ನಾಟಕವಾಗಲೀ ನಾಟಕದ ಹೆಸರಾಗಲೀ ನೆಪಮಾತ್ರ, ಎಲ್ಲಾ ನಾಟಕಗಳೂ, ಅವತಾರಗಳೂ ಒಂದಿಲ್ಲೊಂದು ದುಷ್ಟತನದ ಕೋಟೆಗೆ ಎರಗುವ ದಾಳಿ, ದಿನನಿತ್ಯದ ಸಮಸ್ಯೆಗಳ,

ಸಂಘರ್ಷಗಳ ವಿಶ್ಲೇಷಣೆಗೆ ವೇದಿಕೆಯಾಗುವುದೇ ಈ ಕಂಪನಿಯ ನಾಟಕಗಳ ಗುರಿಯಾಗಿರುವಾಗ, ಹೊಸ ನಾಟಕಗಳನ್ನು ಮಾಸ್ಟರ್ ಹಿರಣ್ಣಯ್ಯ ರಂಗಕ್ಕೆ ತರಲಿಲ್ಲ ಎಂಬ ಮಾತು ಅಪ್ರಸ್ತುತ.

ಜನಪ್ರಿಯತೆ, ಹಣ ಇತ್ಯಾದಿ ಯಾವುದೇ ಮತ್ತುಗಳನ್ನು ತಲೆಗೆ ಏರಿಸಿಕೊಳ್ಳದೆ ಸರಳವಾಗಿರುತ್ತಾ, ಸದಾ ಸುತ್ತಲೂ ನಡೆಯುವ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾ, ಚಿಂತಿಸುತ್ತಾ, ವ್ಯಾಸಂಗ ಮಾಡುತ್ತಾ, ಸಾಹಿತಿಗಳ ಚಿಂತಕರ ಒಡನಾಡುತ್ತಾ, ಮುಂದಿನ ನಾಟಕಗಳಿಗಾಗಿ ಬತ್ತಳಿಕೆಗಳನ್ನು ತುಂಬಿಕೊಳ್ಳುತ್ತಾ, ನಾಟಕಗಳನ್ನಾಡುತ್ತಾ (ಅವರ ಮಾತಿನಲ್ಲಿ 'ಕಸುಬು' ಮಾಡುತ್ತಾ) ಸಾಗಿರುವ ಸಂವೇದನಾಶೀಲ ಹಿರಣ್ಣಯ್ಯನವರದು, ಅಪರೂಪದ ವ್ಯಕ್ತಿತ್ವ.

ಯಾರೇ ಆಗಲಿ ಅವರವರ ಕಸುಬುಗಳನ್ನು ಪ್ರೀತಿಸಬೇಕು, ಅದರಲ್ಲೇ ಮುಕ್ತಿ ಕಾಣಬೇಕು. 'ನಾಟಕದ ಮೂಲಕವೇ ಅಧ್ಯಾತ್ಮದ ಎಲ್ಲಾ ಮಜಲುಗಳನ್ನು ಏರಿದ್ದೇನೆ. ಇನ್ನಿರುವುದು ನಾಲ್ಕನೆಯ ಮೆಟ್ಟಿಲು. ನನ್ನ ಪ್ರೇಕ್ಷಕರಲ್ಲಿ ಒಂದಾಗಿ ಸೇರಿಕೊಂಡುಬಿಡುವ 'ಸಾಯುಜ್ಯ' ಎಂಬ ಮಾಸ್ಟರ್ ಹಿರಣ್ಣಯ್ಯ ಹೇಳುತ್ತಾರೆ.

ತುಂಬು ಗೃಹಗಳ ಅವರ ನಾಟಕಗಳಂತೆಯೇ – ಸಾರ ತುಂಬಿದ ಅವರ ಸಂಸಾರವೂ ಹೆಂಡತಿ, ಮಕ್ಕಳು, ಮೊಮ್ಮಕ್ಕಳು ನೆಂಟರಿಷ್ಟರಿಂದ ತುಂಬಿದ ಗೃಹವೇ. ಇಬ್ಬರು ಹೆಣ್ಣು ಮಕ್ಕಳು, ಗಂಡು ಮಕ್ಕಳು ಮೂವರು ವಿದ್ಯಾವಂತರು. (ಬುದ್ಧಿವಂತರೂ ಕೂಡ). ಹಿರಿಯ ಮಗ ಬಿ.ಇ. ಪದವೀಧರ, ಹೆಸರು ಹಿರಣ್ಣಯ್ಯ. ತಂದೆಯವರ ಜೊತೆಗೂಡಿದ್ದಾರೆ ಎಂದಾಗ ವೈ.ಎನ್ಕೆ ಯವರ ಮಾತುಗಳು ನೆನಪಿಗೆ

ಬರುತ್ತವೆ. 'ಮೌನ ಚಿನ್ನಾ – Silence is gold ಅನ್ನುವ ಹಳೆಯ ಹೇಳಿಕೆಯನ್ನು ಸುಳ್ಳುಪಡಿಸಿ 'ಮಾತು ಚಿನ್ನಾ; ಮಾತು ಹಿರಣ್ಯ ಎಂಬುದನ್ನು ನಿಜಪಡಿಸಿದವರು ಹಿರಣ್ಣಯ್ಯ. ಹಿರಣ್ಣಯ್ಯನವರು ಈಗಿಲ್ಲದಿದ್ದರೂ Once more ಹೇಳಿದರೆ ಪ್ರತ್ಯಕ್ಷರಾಗುವುದಿಲ್ಲ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಮಾಸ್ಟರ್ ಹಿರಣ್ಣಯ್ಯ ಇರುವವರೆಗೆ ಈ ಸಂಪ್ರದಾಯ ಮುಂದುವರಿಯುತ್ತಲೇ ಇರುತ್ತದೆ. ನವನವೋನ್ಮೇಷ ಶಾಲಿಯಾಗಿ.

ಈಗ Once more ಹೇಳಿದರೆ ಮತ್ತು ಹಿರಣ್ಣಯ್ಯ ನಮ್ಮ ಸಮಾಜದ ಹಿತವನ್ನು ಬಯಸುವ ಈ ನಮ್ಮ ಕಂಪನಿಯ ಚೈನಿನ ಕೊಂಡಿಗಳು ಸದಾ ಬೆಸೆದಿರಲಿ, ರಾಜ್ಯದ, ಅಕಾಡೆಮಿಯ ಪ್ರಶಸ್ತಿಗಳು ಮಾಸ್ಟರ್ ಹಿರಣ್ಣಯ್ಯನ ವರನ್ನು ಅರಸಿ ಬಂದಂತೆ, ರಾಷ್ಟ್ರದ ಪ್ರಶಸ್ತಿಗಳು ಅವರಿಗೆ ಲಭಿಸಲಿ ಎಂದು ಹಾರೈಸುತ್ತಾ ಮಾಸ್ಟರ್ ಹಿರಣ್ಣಯ್ಯನವರನ್ನು ಅಭಿನಂದಿಸೋಣ. 1988ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಶ್ರೀನಿವಾಸ ತಾವರಗಿರಿ

ಕಂದಗಲ್ಲ ಹನಮಂತರಾಯರು, ಕೆರೂರು ವಾಸುದೇವಾಚಾರ್ಯರು, ಆದ್ಯ ರಂಗಾಚಾರ್ಯರು (ಶ್ರೀರಂಗ) ಮುಂತಾದ ರಂಗ ಪ್ರಭೃತಿಗಳನ್ನು ನೀಡಿದ ಜಿಲ್ಲೆ ವಿಜಾಪುರ.

ಈ ಜಿಲ್ಲೆಯ ರಂಗ ಕೊಡುಗೆಗಳ ಸಾಲಿನಲ್ಲಿ ವಿರಾಜಿಸುವ ಮತ್ತೊಂದು ಹೆಸರು ಶ್ರೀನಿವಾಸ ತಾವರಗಿರಿ. ಹವ್ಯಾಸಿ ರಂಗಕರ್ಮಿಗಳಿಗೆಲ್ಲ ಚಿರ–ಪರಿಚಿತ ಆತ್ಮೀಯ ಹೆಸರಿದು. ವಿಜಾಪುರದ ಚಿಂದಾಬಾವಡಿಯ ಇವರ ಮನೆಯ (ವಾಡೆಯ) ಆತಿಥ್ಯ ಪಡೆಯದ, ವಿಜಾಪುರದಲ್ಲಿ ನಾಟಕ ಪ್ರಯೋಗಿಸದ ರಂಗ–ತಂಡಗಳು / ರಂಗಕರ್ಮಿಗಳು ಅಪರೂಪವೆಂದೇ ಹೇಳಬೇಕು.

ಶ್ರೀನಿವಾಸ ಗೋವಿಂದರಾವ ತಾವರಗಿರಿ ಇದು ಇವರ ಪೂರ್ತಿ ಹೆಸರು. ಬಸವ ಹುಟ್ಟಿದ ಬಸವ ಬಾಗೇವಾಡಿ

ಇವರ ಹುಟ್ಟೂರು. ಹುಟ್ಟಿದ ವರ್ಷ ಸಾವಿರದ ಒಂಭೈನೂರಾ ಮೂವತ್ತು ತಿಂಗಳ ಅಕ್ಟೋಬರ್ ದಿನಾಂಕ ಇಪ್ಪತ್ತೆರಡು. ಮೂಲ ಮನೆತನದ ಅಡ್ಡ ಹೆಸರು ಪದಕಿ. ತಂದೆ ಅಕ್ಕನ ಮನೆಗೆ ದತ್ತು ಹೋದ್ದರಿಂದ ಶ್ರೀನಿವಾಸ ಪದಕಿ, ಶ್ರೀನಿವಾಸ ತಾವರಗಿರಿ ಆದರು. ಪದಕಿ ಮನೆತನ ಅಷ್ಟೇನು ಸ್ಥಿತಿವಂತ ಮನೆತನವಲ್ಲ. ದತ್ತು ಹೋದ ಮನೆತನ ಅಷ್ಟೈಶ್ವರ್ಯ ಸಂಪದ್ಭರಿತ ಮನೆತನ. ಬಡತನ ಸಿರಿತನಗಳು ಲಾಭ–ನಷ್ಟಗಳು (ನಷ್ಟವೇ ಜಾಸ್ತಿ) ತಾವರಗಿರಿ ಅವರ ಬದುಕಿನಲ್ಲಿ ಹಗಲು–ರಾತ್ರಿಯಂತೆ.

ಚಿಕ್ಕಂದಿನಲ್ಲಿಯೇ ಪೇಂಟಿಂಗ್, ಮ್ಯೂಸಿಕ್ (ಕೊಳಲು ವಾದನ)ಗಳ ಆಸಕ್ತಿಯಿದ್ದ ಶ್ರೀನಿವಾಸರು ರಂಗ ಪ್ರವೇಶಿಸಿದ್ದು ಪ್ರೈಮರಿ ಸ್ಕೂಲಿನ ರಂಗ ಮಂಚದಿಂದ. ಮರಾಠಿ ಪ್ರಾಬಲ್ಯದ ಆ ದಿನಗಳಲ್ಲಿ, ಆ ಪರಿಸರದಲ್ಲಿ ಮರಾಠಿ ನಾಟಕಗಳಲ್ಲಿ ಶ್ರೀನಿವಾಸ ಸೈ ಎನಿಸಿಕೊಂಡರು.

1952ರಲ್ಲಿ ಇಂಟರ್ ಆರ್ಟ್ಸ್ ಓದುತ್ತಿದ್ದಾಗ ಗಡಕರಿ ಅವರ ಖ್ಯಾತ ನಾಟಕ 'ಏಕ, ಚ ಪ್ಯಾಲಾ'ದ ತಳೀರಾಮನ ಪಾತ್ರದಲ್ಲಿ ಶ್ರೀನಿವಾಸ ಮಿಂಚಿದರು. ರಂಗಭೂಮಿಯಲ್ಲಿ ತಮ್ಮ ಹೆಜ್ಜೆಗಳನ್ನು ಗಟ್ಟಿಗೊಳಿಸಿಕೊಂಡರು. 'ಉಸ್ನಾ ನವ್ರಾ' (ಬಾಡಿಗೆ ಗಂಡ) ಇವರು ಅಭಿನಯಿಸಿ ಹೆಸರುಗಳಿಸಿದ ಮತ್ತೊಂದು ನಾಟಕ.

ಅಭಿನಯದ ಹುಚ್ಚು ರಂಗ ಸಂಘಟನೆ, ವ್ಯವಸ್ಥಾಪನೆಗಳತ್ತಲೂ ಶ್ರೀನಿವಾಸರನ್ನು ಸೆಳೆಯಿತು 'ನೂತನ ಕಲಾ ಮಂಡಲ', 'ರಾಘವೇಂದ್ರ ಗಜಾನನ ಮಂಡಳಿ', 'ಅಭಿನವ ನಾಟ್ಯ ಮಂಡಳಿ' ಮುಂತಾದ ಹಲವು ಹತ್ತು ಸಂಸ್ಥೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ರಂಜನೀಯ ನಾಟಕಗಳನ್ನಾಡಿದ ಶ್ರೀನಿವಾಸರು ಮರಾಠಿ–ಭೂಯಿಷ್ಠವಾದ ಆ ಪ್ರದೇಶದಲ್ಲಿ ಕನ್ನಡ ನಾಟಕಗಳನ್ನು ಮರೆಸಬೇಕೆಂಬ ಉದ್ದೇಶದಿಂದ ಹುಟ್ಟುಹಾಕಿದ ಸಂಸ್ಥೆ 'ಕಲಾನಿಕೇತನ'. 'ಮೂರು ನಾಲ್ಕಲೇ ಹದಿಮೂರು' (ತಾವರಗಿರಿ ಅವರೇ ಅನುವಾದಿಸಿದ ನಾಟಕವಿದು) ನಾಟಕವನ್ನು ಸಿದ್ಧಗೊಳಿಸಿ, ಅಭಿನಯಿಸಿ ಶ್ರೀನಿವಾಸರು ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರರಾದರು. ಪೂನಾದಲ್ಲೂ ಈ ನಾಟಕವನ್ನು ಪ್ರಯೋಗಿಸಿ ಯಶಸ್ವಿಯಾದರು.

ಇವರು ಮರಾಠಿಯಿಂದ ಅನುವಾದಿಸಿ, ಅಭಿನಯಿಸಿದ, ನಿರ್ದೇಶಿಸಿರುವ 'ಬದಾಮ ರಾಣಿ ಚೌಪಟ್ ಗುಲಾಮ್', 'ಅತ್ತೆಯ ಮನೆಯಲ್ಲಿ ಮುತ್ತಾಗಿರು', 'ಸಾಪತ್ತೆ', 'ನಾಟಕ ಕೂಡಾ ಇದೆ', 'ಅಪ್ಪ–ಅಜ್ಜಿ–ಮುತ್ತಜ್ಜಿ', 'ಸಾಮೂಹಿಕ ಆತ್ಮಹತ್ಯೆ', 'ಪಾಂಡವ ಪ್ರಲಾಪ' ಮುಂತಾದ ನಾಟಕಗಳು ಸಹೃದಯ ಪ್ರೇಕ್ಷಕ ಅಭಿಮಾನಿ ವೃಂದವನ್ನು ಗಳಿಸಿಕೊಟ್ಟು ತಾವರಗಿರಿ ಅವರ ರಂಗ ಬಾಂಧವ್ಯವನ್ನು ಬಿಗಿಗೊಳಿಸಿದವು.

ಜೇಬಿ ಜೋಶಿ ಅವರ ಸಂಪರ್ಕದಿಂದ, ಕಾರಂತರ ಪರಿಚಯದಿಂದ ಅಲ್ಲದೇ ಬೆಂಗಳೂರಿನ ಹೊಸ ಅಲೆಯ ರಂಗ ಪ್ರಯೋಗಗಳ ವೀಕ್ಷಣೆಯಿಂದ ಪ್ರಭಾವಿತರಾದ ತಾವರಗಿರಿ ಸಾಂಸ್ಕೃತಿಕ ವಿನಿಮಯ, ರಂಗಯಾತ್ರೆಗಳ ಮಹತ್ವವನ್ನು ಮನಗಂಡು ಬೆಂಗಳೂರಿನ ಶಕಶೈಲೂಷರು ಪ್ರಯೋಗಿಸುತ್ತಿದ್ದ ಕಾರಂತ ನಿರ್ದೇಶಿತ 'ಸತ್ತವರ ನೆರಳು' ನಾಟಕವನ್ನು ವಿಜಾಪುರಕ್ಕೆ ಕರೆಸಿಕೊಂಡು, ಬೆಂಗಳೂರಿನ ರಂಗ–ತಂಡಗಳಿಗೆ ರಂಗ ಯಾತ್ರೆಯ ನಾಂದಿಯನ್ನು ಹಾಡಿಸಿದವರು. ಮುಂದೆ ಈ ಪರಂಪರೆ ಮುಂದುವರಿದುಕೊಂಡು ಬಂದು ವಿಭಿನ್ನ ತಂಡಗಳ, ವೈವಿಧ್ಯಮಯ ಪ್ರಯೋಗಗಳು ಬಿಜಾಪುರದ ಪ್ರೇಕ್ಷಕ ವೃಂದವನ್ನು ತಲುಪಲು ಹಾಗೆಯೇ ರಾಜಧಾನಿ ರಂಗಪ್ರಯೋಗಗಳಿಗೆ ಹೊಸ ಪ್ರೇಕ್ಷಕನ ಸ್ಪಂದನ ದೊರಕಲು ಅನುವಾದವರು ತಾವರಗಿರಿ.

ಈ ರಂಗ ಯಾತ್ರೆಯ ಪ್ರಭಾವ ಬಿಜಾಪುರದಲ್ಲಿ ಹೊಸಗಾಳಿ ಬೀಸಲು ಕಾರಣವಾಯಿತು. ಹಲವು ಉತ್ಸಾಹಿ ಯುವ ಪ್ರತಿಭೆಗಳೊಂದಿಗೆ ತಾವರಗಿರಿ 'ಕಲಾ ಮಾಧ್ಯಮ' ಹುಟ್ಟು ಹಾಕಿದರು. 'ಮನೆ', 'ವಿದೂಷಕ', 'ಅಪ್ಪ', 'ಬಂಗರ ಬುಡ್ಡಣ್ಣ', 'ಬಿರೋಬಿರ' ಹೀಗೆ ಹೊಸ ಅಲೆಯ ಸಾಲು–ಸಾಲು ನಾಟಕಗಳು ಕಲಾಮಾಧ್ಯಮದಿಂದ ಮೂಡಿ ಬಂದವು. ಅಶೋಕ ಬಾದರದಿನ್ನಿ 'ಕಲಾಮಾಧ್ಯಮ'ದ ಮೂಲಕ ತಾವರಗಿರಿ ಅವರು ನೀಡಿದ ಕೊಡುಗೆ. 'ಕಲಾಮಾಧ್ಯಮ' ರಾಜ್ಯದ ಹವ್ಯಾಸಿ ತಂಡಗಳಲ್ಲಿ ಇಂದು ಪ್ರತಿಷ್ಠಿತ ಹೆಸರು. ತಾವರಗಿರಿ ಅವರು ರಾಜ್ಯ ನಾಟಕ ಅಕಾಡೆಮಿಯ ಸದಸ್ಯರಾಗಿ (ಎರಡು ಅವಧಿಗಳಿಗಾಗಿ) ಸಲ್ಲಿಸಿದ ಸೇವೆ ಹಲವು ಹಿರಿಯ ಕಲಾವಿದರ ನೆಮ್ಮದಿಯ ಬದುಕಿಗೆ, ಹಲವು ಹೊಸ ಪ್ರತಿಭೆಗಳ ವಿಕಾಸಕ್ಕೆ ಕಾರಣವಾಗಿ, ಪ್ರಶಂಸನೀಯವಾದುದು.

ಗೋಕಾಕ್ ಚಳವಳಿಯ ದಿನಗಳಲ್ಲಿ ವರದಿ ಅನುಷ್ಠಾನವನ್ನು ಒತ್ತಾಯಿಸಿ, ಸರಕಾರ ನೀಡಿದ ಸ್ಥಾನವನ್ನು ತ್ಯಜಿಸಿ ಪ್ರತಿಭಟಿಸಿದ ಹಲವು ಪ್ರಜ್ಞಾವಂತರಲ್ಲಿ ತಾವರಗಿರಿ ಅವರೂ ಒಬ್ಬರು. 1980ರಲ್ಲಿ ಭಾರತದ ಸಾಂಸ್ಕೃತಿಕ ತಂಡದ ಸದಸ್ಯರಾಗಿ ಮಾಸ್ಕೋ, ಬಲ್ಗೇರಿಯಾ, ಹಂಗೇರಿಗಳಿಗೆ ಪ್ರವಾಸ ಮಾಡಿ ಅಲ್ಲಿನ ರಂಗಭೂಮಿಯನ್ನು ಕಂಡು ಬಂದಿರುವ ತಾವರಗಿರಿಯವರದು ಬಹುಮುಖಿ ವ್ಯಕ್ತಿತ್ವ.

'ಕವಿತಾ' ಕಿರುಚಿತ್ರ ತಯಾರಿಕೆ, 'ಸಾವಿತ್ರಿ', 'ಆ್ಯಕ್ಸಿಡೆಂಟ್', 'ಗಿದ್' (ಹಿಂದಿ) ಮುಂತಾದ ಚಲನಚಿತ್ರಗಳಲ್ಲಿ, 'ಮಾಲ್ಗುಡಿ ಡೇಸ್' ದೂರದರ್ಶನ ಧಾರಾವಾಹಿಯಲ್ಲಿ ಅಭಿನಯ; ವಿಜಾಪುರದ ಪ್ರತಿಷ್ಠಿತ ಸಂಸ್ಥೆ 'ಸೂರಸಿಂಗಾರ್'ದ ಸ್ಥಾಪಕ ಸದಸ್ಯರಾಗಿ ಹೆಸರಾಂತ ಸಂಗೀತ ಕಲಾ ಸಾಧಕರ ಕಾರ್ಯಕ್ರಮಗಳ ಸಂಯೋಜನೆ; ವಿಜಾಪುರದ ಸಹಕಾರಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಬ್ಯಾಂಕಿನ ಅಧ್ಯಕ್ಷ, ನಿರ್ದೇಶಕರಾಗಿ ಸೇವೆ ಸಲ್ಲಿಸುವಿಕೆ ಹಾಗೂ ಗೃಹರಕ್ಷಕ ದಳದ ಶಿಸ್ತಿನ ಸೇವಕನಾಗಿ ಮೂವತ್ತೇಳು ವರ್ಷ ಸಲ್ಲಿಸಿದ ಸೇವೆಗೆ ರಾಷ್ಟ್ರಪತಿಗಳ ಸ್ವರ್ಣ ಪದಕ ಪ್ರಶಸ್ತಿ – ಇವೇ ಮುಂತಾದವು ತಾವರಗಿರಿ ಅವರನ್ನು ನೆಚ್ಚಿನ 'ಶೀನಣ್ಣ'ನನ್ನಾಗಿಸಲು ಕಾರಣವಾದಂಥವು.

ಅಸಂಖ್ಯ ರಂಗ – ಬಾಂಧರನ್ನುಗಳಿಸಿಕೊಂಡಿರುವ, ಸಾಕಷ್ಟು ಹೆಸರು ಗಳಿಸಿಕೊಂಡಿರುವ ತಾವರಗಿರಿ ಆರ್ಥಿಕವಾಗಿ ಸಾಕಷ್ಟು ಕಳೆದುಕೊಂಡವರು. ಬಿಟ್ಟದಷ್ಟು ನಷ್ಟವಾದರೂ 'ರವಸ್ಟೂ' ಚಿಂತಿಸದೇ (ಚಿಂತೆಯಿಂದಲೇ ಬಿಳಿಕೂದಲು ಬಂದಿರುವಂತೆ ಕಂಡರೂ!) ರಂಗಭೂಮಿಯ ಬಗೆಗೇ ಸದಾ ಚಿಂತಿಸುತ್ತಿರುವ ಶೀನಣ್ಣ ಬಿಜಾಪುರದಲ್ಲಿ ಬಯಲಾಟ–ದೊಡ್ಡಾಟಗಳ ಬಗ್ಗೆ ಅಧ್ಯಯನ ಕೇಂದ್ರ; ಬಿಜಾಪುರದಲ್ಲಿ 'ರವಿವಾರದ ರಂಗಶಾಲೆ'ಯ ಆರಂಭ – ಈ ಕನಸುಗಳನ್ನು ಹೊತ್ತಿರುವ ಅರವತ್ತರ ಅಡಿಯಲ್ಲಿರುವ [ಇತ್ತೀಚೆಗಷ್ಟೇ ವಿಜಾಪುರದ ಮರಾಠಿ ವಿದ್ಯಾಲಯ ಕಾರಕೂನ ಹುದ್ದೆಯಿಂದ (22–10–1988) ನಿವೃತ್ತರಾಗಿರುವ] ಆಶಾವಾದಿ ಯುವಕ.

ನಟ, ಅನುವಾದಕ, ನಿರ್ದೇಶಕ ಹಾಗೂ ರಂಗ–ಸಂಘಟಕ; ಬಿಳಿ ತಲೆಯ, ದಪ್ಪ ಧ್ವನಿಯ, ಕಪ್ಪು (ಕೃಷ್ಣ)ವರ್ಣದ, ಕನ್ನಡಕಧಾರಿ ತಾವರಗಿರಿ ಅವರಿಗೆ ರಂಗಭೂಮಿ ಎಂದರೆ ಈ ಇಳಿ ವಯಸ್ಸಿನಲ್ಲೂ ಹರೆಯ ಮರುಕಳಿಸುತ್ತದೆ, ಉತ್ಸಾಹ ಉಕ್ಕೇರುತ್ತದೆ. 1988ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಸೋನೂಬಾಯಿ ದೊಡ್ಡಮನಿ



ಶ್ರೀಮತಿ ಸೋನೂಬಾಯಿ ದೊಡ್ಡಮನಿ ನಮ್ಮ ರಂಗಪರಂಪರೆಯ ಜೀವಂತ ಸಾಕ್ಷಿಯಾಗಿ ನಿಂತವರು. ರಂಗದ ಪಿಂಗಿನಲ್ಲಿಯೇ ಹುಟ್ಟಿ – ಬೆಳೆದು ಸಂಗೀತ ಸಾಧನೆಗೆ ತೊಡಗಿದವರು. ಮೂವತ್ತರ ದಶಕದಿಂದ ಅರವತ್ತರ ದಶಕದವರೆಗೂ ಗಾಯಕಿಯಾಗಿ ರಂಗನಟಿಯಾಗಿ, ರಂಗ–ಸಂಗೀತಗಳೆರಡರಲ್ಲೂ ಅಸಮಾನ ಸಾಧನೆಗೈದವರು.

'ನಾನು ಓದೂ ಬರಹಾ ಕಲತಾಕಿಲ್ಲಾ. ಸಾಲೀಗೆ ಅಂತ ಹೋದಾಕಿಲ್ಲಾ. ರಂಗಭೂಮಿ–ಸಂಗೀತ ಸಾಧನಾನ ನನ್ನ ಪಾಲಿನ ಸಾಲಿ. ನಾಟಕದಾಗ ನನಗ ನನ್ನ ದೊಡ್ಡಪ್ಪ ಬಚ್ಚಾಸಾನಿ ಗುರೂನೂ ಹೌದು, ತಾಯಿನೂ ಹೌದು. ಸಂಗೀತಕ್ಕ ಮಾತ್ರ ನನಗ ಮೂರ್‍ನಾಕ ಮಂದಿ ಗುರುಗೋಳು' ಎನ್ನುವ ಸೋನೂಬಾಯಿ ಇಂದಿಗೂ ಮಾತನಾಡಿದರೆ ಕಾವ್ಯ ಶ್ರವಣ ಮಾಡಿದ ಅನುಭವ; ಹಾಡತೊಡಗಿದರೆ ಗಂಧರ್ವಲೋಕದಲ್ಲಿ ಸಂಚರಿಸಿದ ಆನಂದ – ಕೇಳಿದವರಿಗೆ.

ಹತ್ತರೆಳೆವೆಯದಲ್ಲೇ ಬಾಲ ನಟಿಯಾಗಿ ರಂಗವನ್ನು ಪ್ರವೇಶಿಸಿದ ಸೋನೂಬಾಯಿಯ ಜೊತೆಗೆ ಆಗಿದ್ದವರು ಇಂದಿನ ವಯೋವೃದ್ಧ ಕಲಾವಿದ ಏಣಗಿ ಬಾಳಪ್ಪ, ಕೀರ್ತಿಯಾದ ಕನ್ನಡ ಕೋಗಿಲೆ ಪಿ. ಕಾಳಿಂಗರಾವ್, ಮಲ್ಲಾಡಿಹಳ್ಳಿ ರಾಘವೇಂದ್ರ ಗುರೂಜಿ ಮುಂತಾದವರು. ಕರ್ನಾಟಕವಷ್ಟೇ ಅಲ್ಲ, ನೆರೆಯ ಮಹಾರಾಷ್ಟ್ರದ

ರಂಗದಿಗ್ಗಜರಗಳೊಂದಿಗೂ ಸ್ನೇಹದಿಂದ, ಅವರೆಲ್ಲರ ಗೌರವ ಪಾತ್ರರಾದ ಸೋನೂಬಾಯಿ ರಂಗಗೀತೆಗಳಿಗೊಂದು ಅನ್ವರ್ಥವಾದವರು. ಅಬ್ಬಿಗೆರಿ ಕಂಪನಿಯಲ್ಲಿ 'ಸೀತಾ ಕಲ್ಯಾಣ'ದ ಸೀತೆ, ಅಂಬಾ ಪ್ರಸಾದಿಕಾ ನಾಟಕ ಮಂಡಳಿಯ ನಾಟಕಗಳಲ್ಲಿ ಪ್ರಮುಖ ಪಾತ್ರಗಳು, ಸ್ವಂತ ಕಂಪನಿಯ 'ಸಂದೇಹ ಸಾಮ್ರಾಜ್ಯ'ದ ಶಶಿತಾರಾ, 'ಶಿವಶರಣೆ ಅಕ್ಕಮಹಾದೇವಿ'ಯ ಅಕ್ಕ, 'ಯಮನ ಸೋಲು'ದ ಸಾವಿತ್ರಿ ಮುಂತಾದವು ಸೋನೂಬಾಯಿ ಅಭಿನಯಿಸಿದ ಪ್ರಮುಖ ಪಾತ್ರಗಳು. ಅದರಲ್ಲೂ ಅವರ 'ಅಕ್ಕಮಹಾದೇವಿ', 'ಹೇಮರೆಡ್ಡಿ ಮಲ್ಲಮ್ಮ', 'ಶಶಿತಾರಾ', ಸೀತೆ' ಪಾತ್ರಗಳನ್ನು ಅಂದು ನೋಡಿದವರು ಇಂದಿಗೂ ಮೆಚ್ಚಿ ಮೆಲುಕು ಹಾಕುತ್ತಾರೆ. ಗುಬ್ಬಿ ವೀರಣ್ಣ, ಬಿ. ಜಯಮ್ಮ, ಬಾಲಗಂಧರ್ವ, ಬಸವರಾಜ ಮನ್ಸೂರ್, ಚೆನ್ನಬಸಪ್ಪ ಕವಲಿ, ಅನಕ್ಕ, ಬಸವರಾಜ ರಾಜಗುರು, ಮಳವಳ್ಳಿ ಸುಂದರಮ್ಮ ಹೀಗೆ ಹಲವಾರು ಹಿರಿಯರೊಂದಿಗೆ ಸಂಪರ್ಕ ಪಡೆದು ರಂಗಸೇವೆ ಮಾಡಿದವರು ಸೋನೂಬಾಯಿ.

ಸ್ವಂತ ಕಂಪನಿ ಕಟ್ಟಿ ಸಂತಸದ ದಿನಗಳೆಷ್ಟೋ ಅದರ ದುಪ್ಪಟ್ಟು ಸಾಲ–ಸೋಲದ ದಿನಗಳನ್ನೂ ಕಂಡವರು ಅವರು. 'ಟ್ರಂಕ್ ತುಂಬ ರೇಶ್ಮಿ ದಡಿ ಸೀರಿ, ಪೆಟಗಿ ತುಂಬ ಬಂಗಾರದ ದಾಗೀನ' ಇಟ್ಟುಕೊಂಡ ಕಾಲವನ್ನು, ಹೇಗೋ ಹಾಗೆಯೇ ಕೊರಳ ತಾಳಿ, ಸಾದಾ ನೂಲಿನ ಸೀರೆಯಲ್ಲೇ ನೂಕಿದ ಕಾಲವನ್ನೂ ಅವರು ದಾಟಿದ್ದಾರೆ.

ರಂಗಭೂಮಿಯಷ್ಟೇ ಅವರ ಮುಖ್ಯ ಕಾಳಜಿ ಸಂಗೀತಕ್ಕಾಗಿಯೂ ಇತ್ತು. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ನೆಲಗಟ್ಟಿದ ಮೇಲೆ ಸೃಜಿತ ಇವರ ರಂಗಗೀತೆಗಳ ಹಾಡುಗಾರಿಕೆ ಅಂದಿನಿಂದ ಇಂದಿನವರೆಗೂ ಅವ್ಯಾಹತವಾಗಿ ಸಾಗಿ ಬಂದಿದೆ ರೇಡಿಯೋ ಮೂಲಕ, ಡಿಸ್ಕ್‌ಗಳ ಮೂಲಕ.

'ಅಕ್ಷಯಾಂಬರ' ನಾಟಕದ ಹಮ್ಮೀರ್ ರಂಗದ 'ಕಾಂತ ಸಮಯದಾ ವಾಣೀತವ', ಮಿಶ್ರಪಹಾಡಿಯಲ್ಲಿ 'ಸಾನಂದಕಾರಿ ಮಾಧವ ಪದಲೀಲಾ', 'ಉಷಾ ಸ್ವಯಂವರ'ದ ಗಜಲ್ ಚಾಲಿನ 'ರಂಜಿಸಳೇ ರಜನಿ, ಚಂದ್ರನ ರಮಣಿ', 'ಕುರುಕ್ಷೇತ್ರ'ದಲ್ಲಿಯ ದೇಸಕಾರ ರಾಗದ 'ಜಾ ಶುಭ ಪ್ರತಿಮಾ ಶಾಮಾ' ಮತ್ತು 'ಚಿತ್ರಾಂಗದಾ'ದ 'ವಿಜಯಾ ಮದಿಯಾ ರಾಣಾ' ಗೀತೆಗಳು ಕೇಳಿದವರ ಮನಸ್ಸಿಗೆ 'ಹಸೀ ಗ್ವಾಡಿಗೆ ಹಳ್ಳ ಒಗಧಂಗ'.

1955ರಲ್ಲಿ ಇವರು ಶ್ರೀಕಂಠಶಾಸ್ತ್ರಿಗಳ 'ಬಸವೇಶ್ವರ', 'ಅಕ್ಕ ಮಹಾದೇವಿ', ಗರೂಡರ 'ಶರಣಬಸವ', ಎನ್ಕೆ ಅವರ 'ರೇಣುಕಾ' ನಾಟಕಗಳನ್ನು ಕೊಲಂಬಿಯಾ ಗ್ರಾಮಾಫೋನ್ ಕಂಪನಿಯ ಮೂಲಕ ಧ್ವನಿಮುದ್ರಿಸಿ ಗ್ರಾಮೀಣ ಜನಕ್ಕೆ ನಾಟಕಗಳನ್ನು ತಲುಪಿಸುವಲ್ಲಿ ಪ್ರಥಮರೆನಿಸಿದರು.

ಅರವತ್ತರ ದಶಕದ ಪ್ರಾರಂಭದ ವರ್ಷಗಳಲ್ಲಿ ರಂಗ ನಿವೃತ್ತಿ ಪಡೆದರೂ ರಂಗಗೀತೆಗಳನ್ನು ಜನಪ್ರಿಯಗೊಳಿಸುವತ್ತ ತಮ್ಮ ಪೂರ್ಣ ಲಕ್ಷ್ಯ–ಶ್ರಮ ಹಾಕಿದ ಶ್ರೀಮತಿ ಸೋನೂಬಾಯಿ ಸದ್ಯ ಬೆಳಗಾವಿ ಜಿಲ್ಲೆಯ ಚಿಕ್ಕೋಡಿಯಲ್ಲಿ ಎಪ್ಪತ್ತರ ಇಳಿವಯಸ್ಸಿನ ತಮ್ಮ ಬಾಳ ಹೆಜ್ಜೆಗಳನ್ನು ಹಿಂತಿರುಗಿ ನೋಡುತ್ತಿದ್ದಾರೆ. ರಂಗಗೀತೆಗಳ ಮೂಲಕ ಜನರನ್ನು ರಂಜಿಸಿದ ಸೋನೂಬಾಯಿ ದುಃಖಿತ ಜನರ ಸಹಾಯಾರ್ಥವಾಗಿಯೂ ಸಂಗೀತ ಸಂಜೆ ನಡೆಸಿದ ಹೃದಯವಂತೆ. 1988ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಪಿ. ನಾಗೇಶರಾಯ

ಮಲೆನಾಡಿನ ಮೂಲೆಯ ಹಳ್ಳಿಯೊಂದರಲ್ಲಿ ಅರಳಿದ ಪ್ರತಿಭೆ ನಾಗೇಶರಾಯರು (59 ವರ್ಷ). ನಗರಗಳಲ್ಲಿ ಕೇಂದ್ರೀಕೃತವಾಗಿರುವ ಸಾಂಸ್ಕೃತಿಕ ಚಟುವಟಿಕೆಗಳನ್ನು ಗ್ರಾಮೀಣ ಪರಿಸರದಲ್ಲಿ ಅದಕ್ಕಿಂತ ಅರ್ಥಪೂರ್ಣವಾಗಿ ಪಸರಿಸುತ್ತಿರುವ ಹೆಗ್ಗೋಡಿನ ನೀನಾಸಮ್‌ನ ಬೆಳವಣಿಗೆಯ ಜೊತೆಯಲ್ಲಿಯೇ ತಮ್ಮನ್ನು ಗುರುತಿಸಿಕೊಳ್ಳುತ್ತಾ ರಂಗಭೂಮಿಗೆ ಪಾದಾರ್ಪಣೆ ಮಾಡಿದ ನಾಗೇಶರಾಯರು ಪರಿಣತಿಗಾಗಿ ಆಯ್ದುಕೊಂಡ ಕ್ಷೇತ್ರ ವಿಶಿಷ್ಟವಾದುದು. ನಟನೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಲೇ ತಮ್ಮ ಸೃಜನಶೀಲ

ಅಭಿವ್ಯಕ್ತಿಗಾಗಿ ರಂಗ ಪ್ರಸಾಧನ, ರಂಗ ಪರಿಕರ, ವೇಷಭೂಷಣ – ಮುಂತಾದ ರಂಗಭೂಮಿಯ ಹಿನ್ನೆಲೆ ಕೆಲಸಗಳನ್ನು ಆರಿಸಿಕೊಂಡರು. ಹೆಗ್ಗೋಡಿನ ನೀನಾಸಮ್ ತನ್ನ ಚಟುವಟಿಕೆಗಳಿಂದ ಸುತ್ತಮುತ್ತಲಿನ ಸೃಜನಶೀಲ ಮನಸ್ಸುಗಳನ್ನು ಎಳೆಯಲಾರಂಭಿಸಿದಾಗ ಹೆಗ್ಗೋಡಿನ ಸಮೀಪದ ಪುರಪ್ಪ ಮನೆಯವರಾದ ನಾಗೇಶರಾಯರಿಗೆ ಸ್ವಾಭಾವಿಕವಾಗಿಯೇ ಅಭಿವ್ಯಕ್ತಿಗಾಗಿ ತಕ್ಕಕ್ಷೇತ್ರ ಸಿಕ್ಕಿತು. ವೃತ್ತಿಯಿಂದ ಕೃಷಿಕರಾದರೂ, ಪ್ರವೃತ್ತಿಯಿಂದ ರಂಗಕರ್ಮಿಯಾದರು.

ನಾಗೇಶರಾಯರ ಮುಖ್ಯ ಆಸಕ್ತಿ ರಂಗಸಜ್ಜಿಕೆ, ರಂಗ ಪರಿಕರ, ವೇಷಭೂಷಣ – ಮುಂತಾದ ರಂಗದ ಹಿನ್ನೆಲೆ ಕೆಲಸಗಳು. ಜಾನಪದ ಪ್ರಕಾರಗಳ ತಿಳಿವಳಿಕೆ ಮತ್ತು ಸಾಂಪ್ರದಾಯಿಕ ಕರಕುಶಲತೆಯ ಅರಿವುಗಳು, ಸ್ಥಳೀಯವಾಗಿ ಲಭ್ಯವಿರುವ ಅಡಿಕೆ ಹಾಳೆ, ತೆಂಗಿನ ಗರಿ, ರೊಟ್ಟು, ಬಾಳೆ ಸಿಪ್ಪೆ – ಮುಂತಾದ ಕಚ್ಚಾ ವಸ್ತುಗಳಿಂದ ವಿವಿಧ ರಂಗ ಪರಿಕರಗಳ ನಿರ್ಮಾಣದ ಸಾಧ್ಯತೆಗಳನ್ನು ತೋರಿಸಿಕೊಟ್ಟವು. ಆಗ ನಿರ್ಮಾಣವಾದವು – ರೊಟ್ಟು ಮತ್ತು ಥರ್ಮಾಕೋಲ್‌ನಿಂದ ಮಾಡಿದ ಯಕ್ಷಗಾನದ ಶಿರೋಭೂಷಣ ಹಾಗೂ ಆಭರಣಗಳು, ಅಡಿಕೆ ಮರದ ಹಾಳೆ ಮತ್ತು ಬೆತ್ತದಿಂದ ಷೇಕ್ಸ್‌ಪಿಯರ್ ನಾಟಕಗಳ ಕಿರೀಟ ಇತ್ಯಾದಿಗಳು.

ಹಳ್ಳಿಯ ಪ್ರಶಾಂತ ಪರಿಸರದಲ್ಲಿ ಸಂತೃಪ್ತ ಜೀವನ ನಡೆಸುತ್ತಿರುವ ನಾಗೇಶರಾಯರ ಇತರೆ ಹವ್ಯಾಸಗಳು – ಮಡಿಕೆಯ ಮೇಲೆ ಚಿತ್ರ ಬಿಡಿಸುವುದು, ದಾರದಿಂದ ಗ್ರೀಟಿಂಗ್ ಕಾರ್ಡ್ ತಯಾರಿ, ಪೋಸ್ಟರ್, ಬ್ಯಾನರ್ ಬರವಣಿಗೆ ಮುಂತಾದವು. 1949ರಲ್ಲಿ ನೀನಾಸಮ್ ಪ್ರಯೋಗಿಸಿದ ಷಹಜಹಾನ್ ನಾಟಕದಿಂದ ಇತ್ತೀಚಿನ ನೀನಾಸಮ್ ತಿರುಗಾಟದವರೆಗೂ ಅವರು ತಾಂತ್ರಿಕ ನಿರ್ವಾಹಕರಾಗಿ, ನಟರಾಗಿ, ಗಾಯಕರಾಗಿ – ಹೀಗೆ ವಿವಿಧ ರೂಪಗಳಲ್ಲಿ ಪಾಲ್ಗೊಂಡಿದ್ದಾರೆ. 1980–85ರವರೆಗೆ ನೀನಾಸಮ್ ರಂಗಶಿಕ್ಷಣ ಕೇಂದ್ರದಲ್ಲಿ ಕ್ರಾಫ್ಟ್ ಶಿಕ್ಷಕರಾಗಿ ಸೇವೆ ಸಲ್ಲಿಸಿದ ನಾಗೇಶರಾಯರು ಪ್ರಸ್ತುತ ನಿವೃತ್ತರಾಗಿದ್ದರೂ ರಂಗಭೂಮಿಯ ಸಂಪರ್ಕವನ್ನು ಮಾತ್ರ ಇನ್ನೂ ಜೀವಂತವಾಗಿಟ್ಟುಕೊಂಡಿದ್ದಾರೆ, ಉತ್ಸಾಹದಿಂದ ವಿಸ್ತರಿಸಿಕೊಳ್ಳುತ್ತಿದ್ದಾರೆ. 1988ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.





## ಗೌಸು ಮಾಸ್ತರ

ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಅಭಿಮಾನಿಗಳಿಗೆ ರಾಯಚೂರಿನ 'ಗೌಸು ಮಾಸ್ತರ'ರು ಎಂದರೆ ತುಂಬ ಅಭಿಮಾನ, ಗೌರವ.

ಪೂರ್ಣ ಹೆಸರು – ಗೌಡುಮೋದಿನ ರಾಜೇಸಾಹೇಬ ನದಾಫ

ಊರು – ಪೂರತಿಪ್ಲಿ, ರಾಯಚೂರು ಜಿಲ್ಲೆ.

ನಾಟಕಕಾರರಾಗಿ, ನಟರಾಗಿ, ನಾಟಕ ನಿರ್ದೇಶಕರಾಗಿ, ರಂಗಗೀತೆಗಳನ್ನು ರಚಿಸುವುದರಲ್ಲಿ ಅಗ್ರಗಣ್ಯರಾಗಿ, ರಂಗಗೀತೆಗಳಿಗೆ ಉತ್ತಮ ಸಂಗೀತ ನೀಡಿ ಜನರ ಬಾಯಲ್ಲಿ ಉಳಿಯುವಂತೆ ಮಾಡಬಲ್ಲ ಈ ವ್ಯಕ್ತಿ ಪ್ರತಿಭಾವಂತ ಹಾರ್ಮೋನಿಯಂ ನುಡಿಸುವುದಲ್ಲದೇ ತಬಲಾವಾದನಕಾರ ಕೂಡ.

ಪೌರಾಣಿಕ, ಐತಿಹಾಸಿಕ, ಸಾಮಾಜಿಕ ವಸ್ತು – ವೈವಿಧ್ಯದ ಇಪ್ಪತ್ತೆರಡು ನಾಟಕಗಳನ್ನು ಮಾಸ್ತರರು ಬರೆದಿದ್ದು, ಮಹಾಭಾರತದ ತಾಮ್ರಧ್ವಜನ ಬಗ್ಗೆ ರಚಿಸಿದ ಪೌರಾಣಿಕ ನಾಟಕ, 'ಪಾಂಡುರಂಗ ನಾಯಕ' ಎಂಬ ಐತಿಹಾಸಿಕ ನಾಟಕ ಹಾಗೂ 'ಅನುರಾಧ', 'ದೇಶದ್ರೋಹಿ', 'ಸಾವಿತ್ರಿ ಸೌಭಾಗ್ಯ', 'ದೇವಮಾನವ', 'ನೆಲದ ಭಲ' ಮುಂತಾದ ಸಾಮಾಜಿಕ ನಾಟಕಗಳು ರಂಗದ ಮೇಲೆ ಯಶಸ್ವಿಯಾಗಿ ಗೌಸು ಮಾಸ್ತರರಿಗೆ ನಾಟಕಕಾರರೆಂದೂ ಹೆಸರು ತಂದುಕೊಟ್ಟಿವೆ. ಹಿಂದಿ ಹಾಗೂ ತೆಲುಗು ಭಾಷೆಗಳಲ್ಲೂ ನಾಟಕಗಳನ್ನು ಕೂಡಿಸಿ (ರಚಿಸಿ, ನಿರ್ದೇಶಿಸಿ) ಆಡಿಸಿರುವ ಮಾಸ್ತರರು ಒಳ್ಳೆಯ ನಟರಾಗಿಯೂ ಪ್ರಸಿದ್ಧಿ ಹೊಂದಿರುವವರು.

ಸುಮಾರು ಹನ್ನೆರಡು ವರುಷಗಳ ಕಾಲ ಚಿತ್ತರಗಿ ಗಂಗಾಧರ ಶಾಸ್ತ್ರಿಗಳ ಕಂಪನಿಯಲ್ಲಿ ನಾಟಕ ನಿರ್ದೇಶಕರಾಗಿ, ನಟರಾಗಿ, ಕಂಪನಿ ಆಡುತ್ತಿದ್ದ ನಾಟಕಗಳಿಗೆ ಹಾಡುಗಳನ್ನು ಹೊಸದಾಗಿ ರಚಿಸಿ, ಸಂಗೀತ ಸಂಯೋಜನೆ ಮಾಡಿದರು. ಅಲ್ಲದೇ ತಾವು ಬರೆದ ಅನೇಕ ನಾಟಕಗಳನ್ನೂ ಪ್ರದರ್ಶಿಸಿ ಕರ್ನಾಟಕದಾದ್ಯಂತ ಹೆಸರು ಪಡೆದರು.

ನಂತರ ಮನೆಯಲ್ಲಿ ತೊಂದರೆ ತಲೆದೋರಿದ ಪ್ರಯುಕ್ತ ಕಂಪನಿ ಬಿಟ್ಟು ಸ್ವಗ್ರಾಮ ಪೂರಕ್ಲಿಗೆ ಬಂದು ಮನೆಯ ಕೆಲಸ ನೋಡಿಕೊಳ್ಳುತ್ತ ಮತ್ತೆ ತಮ್ಮ ಹಿಂದಿನ ಕಾರ್ಯಕ್ಷೇತ್ರಕ್ಕೆ ಹೊಸರೂಪು ಕೊಟ್ಟು ನಾಟಕ ಮಾಸ್ತರಾಗಿದ್ದು ರಂಗಗೀತೆಗಳ ಹೊನಲನ್ನೇ ಹರಿಸಿ ವೃತ್ತಿರಂಗಭೂಮಿ ಮಾದರಿಯ ನಾಟಕಗಳನ್ನಾಡುವ ತಮ್ಮ ಭಾಗದ ಪ್ರತಿಯೊಂದು ಹಳ್ಳಿಗಳಲ್ಲಿ ಹವ್ಯಾಸಿ ನಾಟಕ ತಂಡಗಳ ಸೃಷ್ಟಿಗೆ ಕಾರಣರಾಗಿ ರಾಯಚೂರು, ಗುಲಬರ್ಗಾ ಹಾಗೂ ಬಳ್ಳಾರಿ ಬೀದರ ಜಿಲೆಗಳಲ್ಲಿ ಎಲ್ಲಿ ಕೇಳಿದಲ್ಲಿ ಗೌಸು ಮಾಸ್ತರರು ರಚಿಸಿದ ರಂಗ ಗೀತೆಗಳು ಪ್ರತಿಯೊಬ್ಬರ ಬಾಯಲ್ಲಿ ನಲಿಯುವಂತೆ ಮಾಡಿದರು.

1988ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



# 1989ರ ಪ್ರಶಸ್ತಿ ವಿಜೇತರು



## ಡಾ॥ ಎಚ್. ನರಸಿಂಹಯ್ಯ

ಕೋಲಾರ ಜಿಲ್ಲೆ, ಗೌರಿಬಿದನೂರು ತಾಲ್ಲೂಕಿನ ಹೊಸೂರು ಎಂಬ ಒಂದು ಹಳ್ಳಿಯಲ್ಲಿ 6–6–1920ರಂದು ಜನಿಸಿದರು. ಬಲು ಬಡತನದ ಮನೆ. ಹೇಗೋ ಏನೋ ಹೆಣಗಿ ಲೋಯರ್ ಸೆಕೆಂಡರಿ ಪರೀಕ್ಷೆ ಫಸ್ಟ್‌ಕ್ಲಾಸಿನಲ್ಲಿ ಪ್ಯಾಸು ಮಾಡಿದರು. (ಅವರು ಎಲ್ಲ ಪರೀಕ್ಷೆಗಳಲ್ಲೂ ಪಡೆದದ್ದು ಹೈಫಸ್ಟ್‌ಕ್ಲಾಸ್ ಎಂಬುದು ವಿಶೇಷ). ಹಣವಿಲ್ಲ. ಹೊಸೂರಿನಲ್ಲಿ ಹೈಸ್ಕೂಲಿಲ್ಲ. ಕೈಕಟ್ಟಿ ಕೂತರು. ಹೊಸೂರಿನಲ್ಲಿ ಹೆಡ್‌ಮಾಸ್ತರರಾಗಿದ್ದವರಿಗೆ ಬೆಂಗಳೂರಿಗೆ ವರ್ಗವಾಗಿ, ಅವರು ಚಿರಂಜೀವಿ ನರಸಿಂಹಯ್ಯನನ್ನು, 'ನೀನು ಈ ಊರಿಗೆ ಬಾ. ನಮ್ಮ ಮನೆಯಲ್ಲೇ ಇರು, ಓದು ಮುಂದುವರಿಸು' ಎಂದು ಬರೆದರಂತೆ. ಹುಡುಗ ಹೊಸೂರಿನಿಂದ 53 ಮೈಲಿ ನಡೆದು ಎರಡು ದಿನಗಳ ನಂತರ ಬೆಂಗಳೂರು ಮುಟ್ಟಿದರೆಂಬುದು ಕತೆಯಂತೆ ಕಂಡರೂ, ಕಟುಸತ್ಯವದು.

ನ್ಯಾಷನಲ್ ಹೈಸ್ಕೂಲು, ಸರ್ಕಾರಿ ಕಾಲೇಜುಗಳಲ್ಲಿ ಓದಿ ಪದವಿ ಪಡೆದು, 1946ರಲ್ಲಿ (ಭೌತಶಾಸ್ತ್ರದಲ್ಲಿ) ಎಂ.ಎಸ್.ಸಿ. ಗಿಟ್ಟಿಸಿದರು. ನಂತರ ಅಮೇರಿಕಾ ಸಂಯುಕ್ತ ರಾಷ್ಟ್ರದ ಓಹಿಯೋ ವಿಶ್ವ ವಿದ್ಯಾನಿಲಯದ ಪಿ.ಎಚ್.ಡಿ. (ನ್ಯೂಕ್ಲಿಯರ್ ಫಿಸಿಕ್ಸ್) ಪದವಿ ಗಳಿಸಿದರು – 1960ರಲ್ಲಿ.

ಪಕ್ಕಾ ಗಾಂಧಿವಾದಿ. ವಿದ್ಯಾರ್ಥಿಯಾಗಿದ್ದಾಗ ನಡುವೆ, ಓದುಬಿಟ್ಟು, ಸ್ವಾತಂತ್ರ್ಯ ಸಂಗ್ರಾಮಕ್ಕೆ ನುಗ್ಗಿ, ಬೆಂಗಳೂರಿನ ಸೆಂಟ್ರಲ್ ಜೈಲು, ಪೂನಾದ ಎರವಾಡ ಜೈಲು ವಾಸ ಅನುಭವಿಸಿದರು. ಖಾದಿ ಟೋಪಿ, ಷರಟು, ತುಂಡು ಪಂಚೆ, ಇಷ್ಟೆ, ಈವತ್ತು ಇವರ ವಾರ್ಡ್‌ರೋಬು. ಕಾಲೇಜಿನಲ್ಲಿ ಲೆಕ್ಚರರಾಗಿ ವೃತ್ತಿ ಪ್ರಾರಂಭಿಸಿ, 1972 ರಿಂದ 1977ರವರೆಗೆ ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ಉನ್ನತ ಶಿಖರವೇರಿ ಸೇವೆ ಸಲ್ಲಿಸಿದರು.

ಸ್ವಾತಂತ್ರ್ಯ ಯೋಧರೆಂದು ತಾಮ್ರಪತ್ರ, ರಾಜ್ಯಪ್ರಶಸ್ತಿ (1960) ಪದ್ಮಭೂಷಣ (ರಾಷ್ಟ್ರಪಶಸ್ತಿ) ಗುಲ್ಬರ್ಗಾ ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್ – ಇವು ನರಸಿಂಹಯ್ಯನವರು ಗಳಿಸಿದ ಪ್ರಶಸ್ತಿ ಗೌರವಗಳು.

ನಾಟಕವೆಂದರೆ ಪ್ರಾಣ. ಎಲ್ಲಿಲ್ಲದ ಉತ್ಸಾಹ. ಅಂತರ ತರಗತಿ ನಾಟಕ ಸ್ಪರ್ಧೆಗಳು, ರಂಗಮಂದಿರಗಳ ನಿರ್ಮಾಣ, ವೈಸ್‌ಛಾನ್ಸಲರಾಗಿದ್ದಾಗ ವಿಶ್ವವಿದ್ಯಾನಿಯಲದಲ್ಲಿ ನಾಟಕ (ಸಂಗೀತ, ನೃತ್ಯ ಸೇರಿ)ಕ್ಕಾಗಿ ಪ್ರತ್ಯೇಕ ವಿಭಾಗ ನಿರ್ಮಾಣ ಮಾಡಿದ ಕೀರ್ತಿ ಇವರದು. 1989ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಮುದೇನೂರು ಸಂಗಣ್ಣ

ಜಾನಪದ ತಜ್ಞರೆಂದೇ ವಿಶೇಷ ಖ್ಯಾತಿ ಪಡೆದಿರುವ ಸಂಗಣ್ಣನವರು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಚಿಗಟೇರಿಯೆಂಬ ಸಣ್ಣ ಸಾಮಾನ್ಯ ಗ್ರಾಮದಲ್ಲಿ ಜನ್ಮವೆತ್ತಿದರು. ಲಕ್ಷ್ಮಿ ಸರಸ್ವತಿ ಈರ್ವರೂ ನಲಿದು ನರ್ತಿಸುತ್ತಿದ್ದ ಮನೆತನ.

ಪ್ರಾಥಮಿಕ ಶಿಕ್ಷಣ ಹುಟ್ಟೂರಿನಲ್ಲಿ ಮುಗಿಸಿ, ಹೈಸ್ಕೂಲು ಓದಿಗೆ ಹರಪನಹಳ್ಳಿಗೆ ಹೋಗಿ, ಅಲ್ಲಿ ವಿದ್ಯಾರ್ಥಿ ದೆಸೆಯಲ್ಲಿಯೇ ಕವನ ಸೃಷ್ಟಿ ಆರಂಭಿಸಿ, ಮಾಸ್ತಿ, ಬೇಂದ್ರೆಯಂಥಹ ಹಿರಿಯರಿಂದ ಶಹಬಾಸ್‌ಗಿರಿ ಪಡೆದರೆಂದು ಮಾತು. ಮದನಪಲ್ಲಿಯಲ್ಲಿ ಕಾಲೇಜು ಶಿಕ್ಷಣ

ಪಡೆಯುತ್ತಿರುವ ಕಾಲದಲ್ಲಿ ತೆಲುಗುಭಾಷಾ ಸಾಹಿತ್ಯ ಅಧ್ಯಯನದ ಅವಕಾಶವೂ ಸಿಕ್ಕಿತಂತೆ. ಸಂಸಾರದ ನೊಗ ಕೊರಳಿಗೆ ಬಿದ್ದು ಪದವಿ ಪಡೆಯುವ ಮುನ್ನವೇ ಕಾಲೇಜು ಬಿಟ್ಟರು.

ವಿಶ್ವವಿದ್ಯಾನಿಲಯದ ಒಂದು ಡಿಗ್ರಿ ಪಡೆಯಲಾಗದಿದ್ದರೂ, ಸ್ವಂತ ಅಧ್ಯಯನದಿಂದ ನಾಡಿನ ಪ್ರಸಿದ್ಧ ಸಾಹಿತಿಗಳನೇಕರಿಗೆ ತೀರ ಹತ್ತಿರವಾದರು. ಅವರ ಮನೆಯೇ ಒಂದು ವಿದ್ಯಾಪೀಠವೆನ್ನಿಸಿಕೊಂಡಿತು. ಕನ್ನಡ, ಇಂಗ್ಲಿಷ್, ತೆಲುಗು, ಹಿಂದಿ, ಮರಾಠಿ, ಬಂಗಾಲಿ ಭಾಷೆಗಳ ವಿವಿಧ ವಿಷಯಗಳಿಗೆ ಸಂಬಂಧಪಟ್ಟ ಮಹತ್ವದ ಅಪಾರ ಗ್ರಂಥರಾಶಿ ಅವರಲ್ಲಿದೆ. ಗಮನಾರ್ಹವಾದ ಯಾವುದೇ ಕನ್ನಡ ಪುಸ್ತಕ ಪ್ರಕಟವಾದ ಅಲ್ಪಾವಧಿಯಲ್ಲೇ ಸಂಗಣ್ಣನವರ ಆಸ್ತಿ 'ಅನುಭವ'ಗಳಾಗುತ್ತದೆ.

ಜ್ಞಾನ, ಬೆಟ್ಟದಷ್ಟು ಮಾತು ಬಹು ಕಡಿಮೆ. ವಿಮರ್ಶಾ ಪ್ರಜ್ಞೆ ಚುರುಕು. ರಂಗಭೂಮಿಯ ಬಗ್ಗೆ ಹೇಳತೀರದ ಆಸಕ್ತಿ. 'ಚೌತಿಯ ಚಂದ್ರ' ಎಂಬ ಪ್ರಗತಿಪರ ಧೋರಣೆಯ ನಾಟಕ ರಚಿಸಿರುವರೆಂದು ಅದು ಬಹಳಷ್ಟು ಪ್ರಯೋಗಗಳನ್ನು ಕಂಡಿವೆಯೆಂದೂ ದಾಖಲೆಯಿದೆ. ನೇರವಾಗಿ ಬಣ್ಣಹಚ್ಚಿ ನಟಿಸದಿದ್ದರೂ, ಹಿಂದೆ ನಿಂತು 'ಆಡಿಸುವ' ಮಹದಾಸೆಯ ವ್ಯಕ್ತಿ. ಈಗ ರಂಗಭೂಮಿಯಲ್ಲಿ ಪ್ರಸಿದ್ಧವಾಗಿರುವ 'ಲಕ್ಷಾಪತಿ ರಾಜನ ಕಥೆ' ಹಾಗೂ 'ನಾಗಮಂಡಲ', 'ಸಿರಿಸಂಪಿಗೆ' ಈ ನಾಟಕ ಕರ್ತೃಗಳು, ಕಂಬಾರ, ಕಾರ್ನಾಡರಂಥ ಪ್ರಸಿದ್ಧ ನಾಟಕಕಾರರಾದರೂ ಮೂಲ ಸಾಮಗ್ರಿ ಒದಗಿಸಿ ಸಲಹೆ ಇತ್ತವರು ಸಂಗಣ್ಣನವರು.

1984 ರಿಂದ ಈವರೆಗೂ ಸಂಗಣ್ಣನವರು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ರಷ್ಯದಲ್ಲಿ ನಡೆದ ಭಾರತ ಉತ್ಸವಕ್ಕಾಗಿ ಒಂದು ಜಾನಪದ ತಂಡವನ್ನು ಕರೆದೊಯ್ದಿದ್ದರು. 1989ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಕೆ.ವಿ. ಶಂಕರೇಗೌಡ

'ಪ್ರಸಿದ್ಧ ವ್ಯಕ್ತಿಗಳೆಲ್ಲರ ಉದಯ ಅರಮನೆ–ಗುರುಮನೆಗಳಲ್ಲಲ್ಲ'ವೆಂಬ ಮಾತ ಶಂಕರೇಗೌಡರ ವಿಚಾರದಲ್ಲಿ ನೂರಕ್ಕೆ ನೂರು ಸತ್ಯ. 'ಆಧುನಿಕ ಮಂಡ್ಯ ನಗರದ ಶಿಲ್ಪಿ' ಎಂದೇ ಪ್ರಖ್ಯಾತರಾಗಿದ್ದ ಗೌಡರು ಮಂಡ್ಯ ನಗರದ ಸಮೀಪದಲ್ಲಿರುವ ಕೀಲಾರವೆಂಬ ಸಣ್ಣ ಗ್ರಾಮದಲ್ಲಿ, ಬೋಟಿ ವೀರೇಗೌಡ ಮತ್ತು ವೀರಮ್ಮ ದಂಪತಿಗಳ ಮಗನಾಗಿ 1915ರಲ್ಲಿ ಜನಿಸಿದರು. ಸುಸಂಸ್ಕೃತ ವಾತಾವರಣದ ರೈತ ಕುಟುಂಬ.

ಕೀಲಾರ, ಚೆನ್ನಪಟ್ಟಣ, ಮೈಸೂರು ಬೆಂಗಳೂರು, ಬೆಳಗಾವಿಗಳಲ್ಲಿ ವ್ಯಾಸಂಗ ಮಾಡಿ ವಿಜ್ಞಾನ ಮತ್ತು ಕಾನೂನು ಪದವಿಗಳನ್ನು ಪಡೆದರು.

ಸ್ವಲ್ಪ ಕಾಲ ವಕೀಲಗಿರಿ ನಡೆಸಿ, ಜನಸೇವೆಯತ್ತ ಮನ ತಿರುಗಿಸಿ ರಾಜ ಕಾರಣಕ್ಕೆ ಪ್ರವೇಶಿಸಿದರು. 'ಅದದ್ದಾಗಲಿ ಕುರ್ಚಿ ಬಿಡೆ' ಎನ್ನುವ ಮನೋಭಾವ ಅವರದಲ್ಲ. ಆತ್ಮಗೌರವದ ಬಗ್ಗೆ ಪೂರ್ಣ ನಂಬಿಕೆ. ಮಂಡ್ಯ ನಗರದ ಮಧ್ಯದಲ್ಲಿ ರೈತರ ಸಂಘ ಸಹಕಾರಿ ಕೇಂದ್ರ ಬ್ಯಾಂಕು, ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ, ಮಹಾತ್ಮ ಗಾಂಧಿ ಕ್ಷಯರೋಗ ನಿವಾರಣ ಆಸ್ಪತ್ರೆ ಮುಂತಾದವುಗಳ ಸ್ಥಾಪನೆಗೆ ಅಹರ್ನಿಶಿ ದುಡಿದರು.

ಗೌಡರು ಕರ್ನಾಟಕ ರಾಜ್ಯದ ವಿದ್ಯಾ ಮಂತ್ರಿಗಳಾಗಿದ್ದ ಕಾಲವಂತೂ ಕನ್ನಡ ನಾಡಿನ, ಭಾಷೆಯ ಸುವರ್ಣ ಕಾಲ. ಇವರ ಸೇವೆ ಸಾಧನೆಗಳನ್ನು ಮೆಚ್ಚಿ ಧೀಮಂತ ವಿದ್ಯಾಗುರುಗಳೂ, ರಾಷ್ಟ್ರ ಕವಿಗಳೂ ಆದ ಕುವೆಂಪು ಅವರು ಗೌಡರನ್ನು ಕರ್ನಾಟಕ ಸಚಿವ ಮಂಡಲದ ನಿತ್ಯಸಚಿವನೆಂದು ಕರೆದರು.

ಶ್ರೀಯುತರು ಅಭಿಜಾತ ಕಲಾವಿದರು. ಇವರ ಅಣ್ಣ ತಮ್ಮೇಗೌಡರೂ ರಂಗಭೂಮಿಯ ಪ್ರಸಿದ್ಧ ನಟರು. ಬಾಲ್ಯದಿಂದಲೂ ಶಂಕರೇಗೌಡರಿಗೆ ನಾಟಕದ ಗೀಳು. ನಾಟಕ ಆಡಿ, ಕಲೆಗೆ ಒಲಿದು ಬಲವಿತ್ತರು. 'ಪಾದುಕಾಕಿರೀಟ', 'ಶಿಷ್ಟಾಚಾರ', 'ಕೂಡಿ ಬಾಳೋಣ', 'ಅಪರಂಜಿ', 'ದನಿ', 'ಕೋಕಿಲಾ' ಮೊದಲಾದ ಸಮಾಜದ ಮೇಲೆ ಕ್ಷ–ಕಿರಣ ಬೀರುವ ನಾಟಕಗಳನ್ನು ಬರೆದರು. ಇಂದಿನ ಯುವಕರ ಗಮನ ಸೆಳೆದು ಸ್ವಾರ್ಥ, ಸ್ವಜನ ಪಕ್ಷಪಾತ, ಗುಂಪುಗುಳಿತನ, ಭ್ರಷ್ಟಾಚಾರ ಮೊದಲಾದವುಗಳ ವಿರುದ್ಧ ಸಮರ ಸಾರಿ, ಸಮಾನತಾ ಸಮಾಜ ನಿರ್ಮಾಣಕ್ಕೆ ಹಾತೊರೆಯುತ್ತಾ, ತಮ್ಮ ವಿಚಾರಧಾರೆ ನಿಲವು ನಂಬಿಕೆಗಳನ್ನು ನಾಟಕಗಳಲ್ಲಿ ಪಡಿ ಮೂಡಿಸಿದರು. ಗೌಡರ ಮಹತ್ಸಾಧನೆಯೆಂದರೆ ಪಿ.ಇ.ಎಸ್. ವಿಜ್ಞಾನ ಕಾಲೇಜಿನ ಆವರಣದಲ್ಲಿ ಭವ್ಯವಾದ ರಂಗಮಂದಿರವನ್ನು ನೀಡಿದರು. ಸುಮಾರು ಹತ್ತು ಲಕ್ಷ ರೂಪಾಯಿಗಳ ಈ ರಂಗಮಂದಿರಕ್ಕೆ ಸರ್ಕಾರದಿಂದ ಯಾವುದೇ ರೀತಿಯ ಸಹಾಯ ಧನ ಪಡೆದಿಲ್ಲವೆಂಬುದು ವಿಶೇಷ.

ತಮ್ಮ ಹುಟ್ಟೂರಾದ ಕೀಲಾರ ಗ್ರಾಮದಲ್ಲಿ ಸುಂದರವಾದ ಬಯಲು ರಂಗಮಂದಿರವನ್ನೂ ನಿರ್ಮಿಸಿದ್ದಾರೆ. ಮಂಡ್ಯ ನಗರದಲ್ಲಿ ಜರುಗುವ ಯಾವುದೇ ನಾಟಕ ಚಟುವಟಿಕೆಗೆ ಗೌಡರು ಪೋಷಕರಾಗಿ, ಪ್ರೇರಕರಾಗಿರುತ್ತಿದ್ದರು.

ಗೌಡರು ವಿದ್ಯಾಮಂತ್ರಿಗಳಾಗಿದ್ದ ಕಾಲದಲ್ಲಿ ಅಕಾಡೆಮಿಗಳ ಅಧ್ಯಕ್ಷರಾಗಿದ್ದುದಲ್ಲದೆ ಲಲಿತಕಲೆಗಳ ಪ್ರವರ್ಧಮಾನಕ್ಕೆ ಬಹುಪಾಲು ಕಾರಣರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಲಲಿತಕಲೆಗಳ ಕಾಲೇಜಿನ ಉಗಮಕ್ಕೆ ಅವರೂ ಕಾರಣರು.

ಅಕಾಡೆಮಿಯ ಅಲ್ಪ ಗೌರವವನ್ನು ಸ್ವೀಕರಿಸುವ ಮೊದಲು ವಿಧಿ ಅವರನ್ನು ತನ್ನ ಮಡಿಲಿಗೆ ಹಾಕಿಕೊಂಡು ವಂಚಿಸಿತು. ವ್ಯಕ್ತಿ ಇಲ್ಲವಾದರೇನು, ಕರ್ಮಕ್ಕೆ ಎಂದಿಗೂ ಮೋಸವಿಲ್ಲ.



## ಕಿಶೋರಿ ಬಲ್ಲಾಳ

ದಕ್ಷಿಣ ಕನ್ನಡದ ಮಂಗಳೂರು ನಗರದಲ್ಲಿ ಜನನ. ತಂದೆ ಆನಂದರಾಮ ಭಟ್ಟರು, ತಾಯಿ ರುಕ್ಮಿಣಿ, ತಂದೆ ತಾಯಿಯರಿಬ್ಬರಿಗೂ ಸಂಗೀತ ಬಹುಪ್ರಿಯ. ಇವರ ಸಂಗಮದ ಗುರುಗಳು ಮಹಮ್ಮದೀಯ ಸಂಗೀತ ವಿದ್ವಾಂಸರೆಂಬುದು ಕೆಲವರು ಮಾತ್ರ ಬಲ್ಲ ವಿಷಯ. ಅಪ್ಪ ಅಮ್ಮಂದಿರು ಮಗಳು ಕಿಶೋರಿಯನ್ನೂ ತಂಬೂರಿ ಶೃತಿಗೆ ದನಿ ಸೇರಿಸೆಂದು ಒತ್ತಾಯಿಸಿದರಂತೆ. ಆದರೆ ಬಾಲಕಿಯ ಒಲವು ಕಾಲ್ಗೆಜ್ಜೆಯತ್ತ. ಐದನೆ ವರ್ಷದಿಂದಲೇ ಶಾಲಾ ನೃತ್ಯ ಪ್ರದರ್ಶನಗಳಲ್ಲಿ 'ಭೇಷ್' ಎನ್ನಿಸಿಕೊಂಡಳಂತೆ. ಕ್ರಮೇಣ ರಂಗಪ್ರವೇಶವೂ ಆಯಿತಂತೆ.

1956ರಲ್ಲಿ ಮುಂಬಯಿಗೆ ಬಂದು ನೆಲೆಸಿದ ನಂತರ, ಕಳೆದ 33 ವರ್ಷಗಳಲ್ಲಿ ಅಭಿನಯಿಸಿದ್ದಲ್ಲದೆ, ಆ ನಾಟಕಗಳನ್ನು ತಾವೇ ದಿಗ್ದರ್ಶಿಸಿದರು. ಮುಂಬಯಿನ ಹೆಸರಾಂತ ದಿಗ್ದರ್ಶಕರೆಲ್ಲರೊಡನೆಯೂ ಕೆಲಸ ಮಾಡಿದ್ದಾರೆ. ಚಲನಚಿತ್ರ, ದೂರದರ್ಶನಗಳಲ್ಲೂ ಇವರ ಕಲಾ ಪ್ರದರ್ಶನ ಉನ್ನತ ಮಟ್ಟದ್ದು ನಿಜ.

ಆದರೆ ಪ್ರಸ್ತುತ ರಂಗಭೂಮಿಗಾಗಿ, ನಾಟಕ ರಚನೆ ಪ್ರಯೋಗಗಳಿಗಾಗಿ ಕೈಯಿಂದ ಹಣ ಕೊಟ್ಟು, ತಾವೇ ಅಭಿನಯಿಸಿ, ಹೊಸ ಕಲಾವಿದರನ್ನು ಆಯ್ದು ಅವರಿಗೆ ರಂಗ ಅಭಿನಯ ಕಲಿಸಿರುವುದು ಮಹತ್ವ ಸೇವೆ.

ಶ್ರೀಪತಿ ಬಲ್ಲಾಳರ ಕೈಹಿಡಿದು ಪತಿಯ ಮಾರ್ಗದರ್ಶನದಲ್ಲಿ, ಪ್ರೋತ್ಸಾಹದಲ್ಲಿ ರಂಗಭೂಮಿಗೆ ಮಾಡಿರುವ ಸಾಧನೆ ಅಪಾರ. 1989ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

## ತಾರಾಬಾಯಿ ಜಂಬಲದಿನ್ನಿ



ಶ್ರೀಮತಿ ತಾರಾಬಾಯಿ ಜಂಬಲದಿನ್ನಿಯವರು ಸಮಕಾಲೀನ ವೃತ್ತಿ ರಂಗಭೂಮಿಯ ಒಬ್ಬ ಪ್ರಮುಖ ಅಭಿನೇತ್ರಿ. ಹುಟ್ಟಿದ್ದು (ಕಮಲ ಕೆಸಲರಿನಲ್ಲಿ ಹುಟ್ಟಬೇಕೆಂಬುದು ಯಾವ ವಿಧಿಯೋ! ಕೇವಲ ಬಡತನದಲ್ಲಿ!) ನಾಲ್ಕನೇ ವರ್ಗದವರೆಗೆ ವಿದ್ಯಾಭ್ಯಾಸ ಮಾಡುವುದೂ ದುಸ್ತರವಾಗಿ ತಮ್ಮ ಒಂಬತ್ತನೇ ವಯಸ್ಸಿನಲ್ಲಿಯೇ ಬಣ್ಣದ ಲೋಕಕ್ಕೆ ಕಾಲಿಡಬೇಕಾಯಿತು. ತಂದೆ ತಾಯಿಯರಿಬ್ಬರೂ ಹಾಡುಗಾರರಾಗಿದ್ದರಿಂದ ತಾರಾಬಾಯಿ ಹುಟ್ಟು ಗಾಯಕಿ. ಹಾಡಿ ಸಂಸಾರಕ್ಕೆ ನೆರವಾಗುವ ಹೆಮ್ಮೆ ಈಕೆಯ ಪಾಲಾಯಿತು.

ಬೆಳೆಯುತ್ತ ಬಂದ ಹಾಗೆ ಅನೇಕ ವೃತ್ತಿ ಕಂಪೆನಿಗಳಲ್ಲಿ ಸೇರಿ ತಮ್ಮ ಅಭಿನಯ ಗಾಯನ ಸಾಮರ್ಥ್ಯಗಳಿಂದ ಸಾಕಷ್ಟು ಯಶಸ್ಸು ಗಳಿಸಿದರು. ಮಸ್ಕೀ ಕಂಪೆನಿ, ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯ ಸಂಘ, ಶಾರದಾ ನಾಟ್ಯ ಸಂಘ, ಗೋಕಾಕ ನಿಜಗುಣೇಶ್ವರ ನಾಟ್ಯ ಸಂಘ, ಅದೋನಿ ಕೊಟ್ಟುರುಸಪ್ಪ ನಾಟಕ ಕಂಪೆನಿ, ದಾವಣಗೇರೆ ಸಂಸ್ಥೆಗಳಲ್ಲಿ, ಬಾಲನಟಿಯಾಗಿ, ಕುಡುಕ ತಂದೆಯ ಮಗಳಾಗಿ, 'ಉತ್ತರ ಭೂಪ'ದಲ್ಲಿ ನಾಯಕಿಯಾಗಿ, 'ಬಸವೇಶ್ವರ' ನಾಟದಲ್ಲಿ ನೀಲಾಂಬಿಕೆಯಾಗಿ, 'ಹೇಮರೆಡ್ಡಿ ಮಲ್ಲಮ್ಮ'ದಲ್ಲಿ ಮಲ್ಲಮ್ಮನಾಗಿ, 'ಲಂಕಾದಹನ'ದ ಸೀತೆಯಾಗಿ–ಹೀಗೆ ಅನೇಕ ಪಾತ್ರಗಳನ್ನು ಯಶಸ್ವಿಯಾಗಿ ನಿರ್ವಹಿಸಿದರು.

ಸುಯೋಗದಿಂದ ಪ್ರಸಿದ್ಧ ಗಾಯಕ ಸಿದ್ಧರಾಮ ಜಂಬಲದಿನ್ನಿಯವರನ್ನು ವಿವಾಹವಾಗಿ ಅವರೊಡನೆ ಕಲ್ಬುರ್ಗಿಯಲ್ಲಿ ನೆಲೆಸಿದರು. ಹವ್ಯಾಸಿ ತಂಡಗಳೊಡನೆ ಸಂಪರ್ಕ ಬೆಳೆಸಿ, ಸುಗಮ ಸಂಗೀತದಲ್ಲೂ ಆಸಕ್ತಿ ತಾಳಿ–ಕೀರ್ತಿ ಪಡೆದರು. 1989ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---

## ಕೆ.ಎನ್. ಟೇಲರ್



ಶ್ರೀ ಟೇಲರ್ ದಕ್ಷಿಣ ಕನ್ನಡ ಜಿಲ್ಲೆಯ ಐವತ್ತನಾಲ್ಕು ವಯಸ್ಸಿನ ಜನಪ್ರಿಯ ನಟ, ನಾಟಕಕಾರ, ಮಹತ್ವದ ವಿಶೇಷವೆಂದರೆ ನೂರಾರು ಕನ್ನಡ ಕಲಾವಿದರ ನಡುವೆ ಕನ್ನಡದ ಉಪಭಾಷೆ ಅಥವಾ ಪ್ರಾಂತ ಭಾಷೆ (ಡಯಲೆಕ್ಟ್) ಎನ್ನಬಹುದಾದ ತುಳು ಈತನು ಬಳಸುತ್ತಿರುವ ಭಾಷೆ. ತುಳುವಿನಲ್ಲಿ ಅನೇಕರು ನಾಟಕ ರಚಿಸಿರುವುದುಂಟು. ಇತ್ತೀಚಿನ ದಿನಗಳಲ್ಲಿ ವಿಭಿನ್ನರುಚಿ ಕೃತಿಗಳು ರೂಪ ತಾಳಿರುವುದುಂಟು.

ಟೇಲರ್ ಅವರು ಬದಲಾಗುತ್ತಿರುವ ಮೌಲ್ಯಗಳ ಬಗ್ಗೆ, ಅಭಿರುಚಿಯ ಬಗ್ಗೆ ತಲೆಕೆಡಿಸಿಕೊಳ್ಳದೇ ಸಾಂಪ್ರದಾಯಕತೆಯನ್ನು ಎತ್ತಿ ಹಿಡಿಯುವ, ಪ್ರೇಕ್ಷಕರನ್ನು ಮುದಗೊಳಿಸುವ ನವುರಾದ ಹಾಸ್ಯ, ಜತೆಗೆ ತುಳುನಾಡಿನ ಸಂಸ್ಕೃತಿಯನ್ನು ಬಿಂಬಿಸುವ ಯತ್ನ–ತಮ್ಮ ನಾಟಕಗಳಲ್ಲಿ ಅಳವಡಿಸಿದ್ದಾರೆ.

ಹೀರೋ ಪಾತ್ರಗಳನ್ನು ಬಯಸಿ ಹೋದವರಲ್ಲ. ಹಾಸ್ಯ ಪಾತ್ರಗಳೇ ಅವರಿಗೆ ತೃಪ್ತಿ. ಕಳೆದ 32 ವರ್ಷಗಳಿಂದ ನಾಟಕ ರಂಗಕ್ಕೆ ಜೋತುಬಿದ್ದಿದ್ದೇನೆನ್ನುತ್ತಾರೆ. ಸೋಲು–ಗೆಲುವು ಅವರನ್ನು ಸಾಧಿಸುವುದಿಲ್ಲ.

ಶ್ರೀ ಗಣೇಶ ನಾಟಕ ಸಭಾ' ಎಂಬ ನಾಟಕ ತಂಡ ಕಟ್ಟಿ ಮುಂಬಯಿ, ಮದ್ರಾಸು, ಪುಣೆ, ದೆಹಲಿ ಮುಂತಾದ ಹೊರರಾಜ್ಯಗಳಲ್ಲಿಯೂ ಭಾರತದಾಚೆಯೂ ಹೆಸರು ಗಳಿಸಿದ್ದು ಅಸಾಧಾರಣ ಸಾಧನೆ. ಅವರ ಪ್ರತಿಭೆಯನ್ನು ಗುರುತಿಸಿ ಬೆಂಗಳೂರಿನ ತುಳುಕೂಟ, ಮದ್ರಾಸಿನ ಹೋಟೆಲ್ ಉದ್ಯಮಿಗಳ ಸಂಘ, ನವದೆಹಲಿಯ ಕನ್ನಡ ಸಂಘ ಮಾತ್ರವಲ್ಲದೆ ಅಬುದಾಭಿಯ ತುಳು ಕಲಾಕೂಟವೂ ಟೇಲರ್ ಅವರನ್ನು ಸನ್ಮಾನಿಸಿದೆ. 1989ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---

## ಭಟ್ಟಿ ಮಹದೇವಪ್ಪ



ಮೈಸೂರು ಜಿಲ್ಲೆ, ನರಸೀಪುರ ತಾಲ್ಲೂಕು. ಮುಸವನ ಕೊಪ್ಪಲು ಗ್ರಾಮ. 1924ರಲ್ಲಿ ಪುಟ್ಟು ಮಾದೇಗೌಡ ಮತ್ತು ಸಣ್ಣಮ್ಮನವರ ನಾಲ್ಕನೇ ಮಗುವೇ ಮಹದೇವಪ್ಪ. ಎಳೆಯವ ನಿರುವಾಗಲೇ ಗ್ರಾಮದ ಜನರು ತಮ್ಮ ನಾಟಕೋತ್ಸವದಲ್ಲಿ ಪ್ರಹ್ಲಾದನ ಪಾತ್ರವನ್ನು, ಬಾಲಕೃಷ್ಣನ ಪಾತ್ರವನ್ನೂ ವಹಿಸಿಕೊಟ್ಟು ಪ್ರಾಯಶಃ ಹುಡುಗನಿಗೆ ರಂಗದ ಗೀಳು ಹತ್ತಿಸಿದರೇನೋ. ಮಾಧ್ಯಮಿಕ ಶಾಲೆಯ ಮೈಸೂರಿನಲ್ಲಿದ್ದ ಚಿಕ್ಕಪ್ಪನ ಮನೆ ಸೇರಿದರು. ಆಗ ಮೈಸೂರಿನಲ್ಲಿ ಮೊಕ್ಕಾಂ ಮಾಡಿದ್ದ ಚಾಮುಂಡೇಶ್ವರಿ ಕಂಪೆನಿಯು ಪ್ರದರ್ಶಿಸುತ್ತಿದ್ದ 'ದಾನ ಶೂರ ಕರ್ಣ' ಇವರನ್ನು ಆಕರ್ಷಿಸಿತು. ಪುರಭವನದ ಆಟದ ಮೈದಾನದಲ್ಲಿ ನಾಟಕದ ಹಾಡುಗಳನ್ನು ಗುನುಗುತ್ತಿದ್ದುದನ್ನು ಕೇಳಿದ ಚಾಮುಂಡೇಶ್ವರಿ ಕಂಪೆನಿಯ ಮೇಸ್ತ್ರಿಯವರಾಗಿದ್ದ ಚಿಕ್ಕಣ್ಣನವರು ಹುಡುಗನನ್ನು ಕರೆದೊಯ್ದು ಕಂಪನಿಗೆ ಸೇರಿಸಿಕೊಂಡುಬಿಟ್ಟರು. 'ದಾನ ಶೂರ ಕರ್ಣ'ದಲ್ಲಿ ವೃಷಕೇತು ಪಾತ್ರ ಸಿಕ್ಕಿತು. ಓದು ನಿಂತು, ಮಹದೇವಪ್ಪ ನಾಟಕದಲ್ಲೇ ನಿಂತರು. 9 ವರ್ಷಗಳ ಕಾಲ ಅಲ್ಲಿ ಸೇವೆ ಸಲ್ಲಿಸಿದರು. ಸ್ವಲ್ಪ ಕಾಲಾನಂತರ ಏನೋ ಬೇಸರವಾಗಿ ಕಂಪೆನಿ ಬಿಟ್ಟು ಸ್ವಗ್ರಾಮಕ್ಕೆ ಹಿಂತಿರುಗಿದರು.

ತಮ್ಮ ಪಾಲಿನ ಆಸ್ತಿಯನ್ನು ಮಾರಿ, 'ಬೀರೇಶ್ವರ ಕೃಪಾಪೋಷಿತ ನಾಟಕ ಮಂಡಳಿ' ಹೆಸರಿನ ಸ್ವಂತ ಕಂಪೆನಿ ಸ್ಥಾಪಿಸಿದರು. ಹೆಚ್ಚು ಕಾಲ ನಡೆಯಲಿಲ್ಲ. 1958ರಲ್ಲಿ ದಸರ ಹಬ್ಬದ ಪ್ರಯುಕ್ತ ಚಾಮುಂಡೇಶ್ವರಿ ಕಂಪೆನಿ 'ದಾನ ಶೂರ ಕರ್ಣ' ನಾಟಕ ಪ್ರದರ್ಶನ ಏರ್ಪಡಿಸಿ, ಕೃಷ್ಣನ ಪಾತ್ರಕ್ಕೆ ಮಹದೇವಪ್ಪನಿಗೆ ಕರೆ ಕಳಿಸಿದರು. ಶ್ರೀ ಯೋಗಾ ನರಸಿಂಹ ಅವರು ಮಹದೇವಪ್ಪನವರನ್ನು ಕನ್ನಡ ಥಿಯೇಟರಿನ ಶ್ರೀ ಎಂ.ಸಿ. ಮಹದೇವ ಸ್ವಾಮಿಗಳಿಗೆ ಶಿಫಾರ್ಸು ಮಾಡಿ 50 ರೂ. ಸಂಬಳ ಗೊತ್ತು ಮಾಡಿಕೊಟ್ಟರು. 'ರಾಜಾವಿಕ್ರಮ'ದ ನೂರಾರು ಪ್ರದರ್ಶನಗಳಲ್ಲಿ ಭಟ್ಟಿ ಪಾತ್ರ ಮಹದೇವಪ್ಪನವರ ಹಿಂದೆ ನಿಂತಿತು. ಮುಂದೆ ಅನೇಕ ಇತರರ ಕಂಪೆನಿಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಾ, ಸುಮಾರು 186 ಚಲನಚಿತ್ರಗಳಲ್ಲೂ ವಿಭಿನ್ನ ಪಾತ್ರಗಳನ್ನು ಯಶಸ್ವಿಯಾಗಿ ನಿರ್ವಹಿಸಿ, ಈಗಲೂ 'ಭಟ್ಟಿ ಮಹದೇವಪ್ಪ ಮಿತ್ರ ಮಂಡಲಿ' ಹುಟ್ಟು ಹಾಕಿ ಮಧುರ ಕಂಠದಿಂದ ಹಾಡುತ್ತಾ, ಹೃದಯಂಗಮವಾಗಿ ಅಭಿನಯಿಸುತ್ತಾ ರಂಗಸೇವೆ ಮಾಡುತ್ತಿದ್ದಾರೆ. 1989ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---

## ಖೇಮರಾಜ ಕೆಂಧೂಳಿ



ಸೀರೆ ನೆಯ್ದು ಸರ್ವರ ಹಾಗೇ ತಾವೂ ಒಬ್ಬರೆಂದು ಜೀವನ ಸಾಗಿಸಬಹುದಾಗಿದ್ದ ಕೆಂಧೂಳಿಯವರು ಸೀನರಿಯತ್ತ ಮನಸ್ಸು ಹಾಯಿಸಿದರು. ಮಗ್ಗ ನೇಯುವುದಕ್ಕಿಂತ ರಂಗಸಜ್ಜಿಕೆ ದೊಡ್ಡ ಕಲೆಯೆನ್ನಿಸಿತು. ಇಲಕಲ್ಲಿನ ಹೊಸತೊಂದು ಗರಿ ಸೇರಿಕೊಂಡಿತು.

ಹುಡುಗನ ಬಯಕೆ ಹುಚ್ಚೆನಿಸಿತೋ. ಮೆಚ್ಚುಗೆಯಾಯಿತೋ. ಅವನ ಅಜ್ಜ ಒಮ್ಮೆ ಗಂಭೀರವಾಗಿಯೋ ಅಥವಾ ಕೆಣಕಲೋ, 'ಲೋ, ಒಂದು–ಒಂದು ಕೋತಿಯ–ಊಹು–ಆಂಜನೇಯನ ಚಿತ್ರ ಬರೆದು ತೋರಿಸು ನೋಡೋಣ' ಎಂದರಂತೆ. ಮೊಮ್ಮಗ ಸವಾಲನ್ನು ನಗುತ್ತ ಸ್ವೀಕರಿಸಿ ಚಿತ್ರ ಬರೆದು ತೋರಿಸಿ 'ಭಲೆ' ಎನ್ನಿಸಿಕೊಂಡನಂತೆ. ರಂಗಪರದೆ ಪೇಯಿಂಟರ್ ಎಂದು ಆ ಕಾಲದಲ್ಲಿ ಖ್ಯಾತಿ ಗಳಿಸಿದ್ದ ಶ್ರೀ ಬಲ್ಲಾಳರ ಶಿಷ್ಯರಾಗಿ, ಅವರ ಆಶೀರ್ವಾದ ಪಡೆದು ಕುಲ ಕಸುಬಿನಿಂದ ಚಿತ್ರಕಲೆ ಕಸುಬಿಗೆ ವರ್ಗಾಯಿಸಿಕೊಂಡು ಇಂದು ಪೇಂಟರ್ ಕೆಂಧೂಳಿಯೆಂದೇ ಕರೆಯಿಸಿಕೊಳ್ಳುತ್ತಾರೆ. ವಾಟರ್ ಪೇಯಿಂಟಾಗಲಿ, ಆಯಿಲ್ ಪೇಯಿಂಟಾಗಲಿ ಎರಡರ ರಹಸ್ಯವೂ ಬಲ್ಲವರು. ಹಿಂದೆಲ್ಲಾ ರಂಗಸಜ್ಜಿಕೆಗೆ ಬೇಕಾದ ಸೀನರಿಗಳ ತಯಾರಿಕೆಗೆ ಮದ್ರಾಸ್ ಕಡೆಯಿಂದಲೇ ಕಲಾವಿದರನ್ನು ಆಹ್ವಾನಿಸುತ್ತಿದ್ದರು.

ಕಾಡೋ, ಉದ್ಯಾನವೋ, ಅಂತಃಪುರವೋ, ರಾಜ ಸಭೆಯೋ ಯಾವುದೆಂದರದು ಕೆಂಧೂಳಿಯವರ ಕಲೆಯಲ್ಲಿ ಕಣ್ಣೆದುರಿಗೆ ಅನತಿ ವೇಗ ಪ್ರತ್ಯಕ್ಷವಾಗುತ್ತಿದ್ದ ಕೌಶಲವನ್ನು ಕಂಡ ಕಂಪೆನಿಗಳು ಹೊರಗಿನವರಿಗೆ ವಂದನಾರ್ಪಣೆ ಮಾಡಿ ಕೆಂಧೂಳಿಯವರ, 'ಕೈಹಿಡಿದ'ರೆನ್ನುವುದಕ್ಕಿತ 'ಬೆನ್ನು ಬಿದ್ದರು' ಎನ್ನುವುದೇ ಹೆಚ್ಚು ಸೂಕ್ತ. ಸುಮಾರು 50 ನಾಟಕ ಕಂಪೆನಿಗಳಿಗೆ ರಂಗಸಜ್ಜಿಕೆ ಒದಗಿಸಿದ್ದಾರೆ. ಗೋಕಾಕ ನಾಟಕ ಮಂಡಲಿ, ಕೆ.ಬಿ.ಆರ್. ಕಂಪೆನಿ, ಮಲ್ಲಿಕಾರ್ಜುನ ನಾಟ್ಯ ಸಂಘ, ಕುಮಾರೇಶ್ವರ ಕೃಪಾಪೋಷಿತ ನಾಟ್ಯ ಸಂಘ – ಹೀಗೆ ಎಲ್ಲ ಪ್ರಸಿದ್ಧ ಕಂಪೆನಿಗಳ ಮಾಲೀಕರೂ ಕೆಂಧೂಳಿಯವರ ಕಲೆಯನ್ನು ಸ್ವೀಕರಿಸಿದರು. ಅವರಿಗೆ ಹೆಚ್ಚಿನ ಕೀರ್ತಿ ಹಾಗೂ ಆನಂದ ತಂದುಕೊಟ್ಟ ಸೃಷ್ಟಿಯೊಂದರ 'ರಾಜ ಮೆಚ್ಚಿದ ದಾಸಿ' ನಾಟಕಕ್ಕೆ ಇವರು ರಚಿಸಿದ ಅರಮನೆ ಹಾಗೂ ಅಂತಃಪುರದ ಸೆಟ್ಟುಗಳು.

60 ತುಂಬಿದ ಕೆಂಧೂಳಿಯವರು ಈಗಲೂ 'ನಮ್ಮದು ಈ ನಾಟಕ, ಇಂಥ ಸೆಟ್ಟು ನಮಗೆ ಬೇಕೆಂದರೆ 'ಕೋ' ಎಂದು ಕೊಟ್ಟು ಕೃತಕೃತ್ಯರಾಗುತ್ತಿದ್ದಾರೆ. 1989ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಡಾ. ನ. ರತ್ನ

ತಮಿಳುನಾಡಿನ ರಹಸ್ಯಕ್ಕೆ ಅಂಟಿಕೊಂಡ ಚಿದಂಬರಂನಲ್ಲಿ 12–13–1934ರಂದು ರತ್ನ ಅವರು ಜನಿಸಿದರು. ವಿದ್ಯಾಭ್ಯಾಸ ಯಶಸ್ವಿಯಾಗಿ ಮುಗಿಸಿ, ಹೆಸರಾಂತ ನಟ ಡಾ. ನಟೇಶ ಮಂದಲಿಯಾರ್ (ಎ.ಎಂ. ನಟೇಶ) ಅವರ ಮಗನಾಗಿ, ಅಪ್ಪನ ಕಯಾಲಿಯನ್ನೆ ಮುಂದುವರಿಸಿ ಮೈಸೂರು ಮಹಾರಾಜಾ ಕಾಲೇಜಿನ 'ಮಿತ್ರ ಮೇಳ'ಕ್ಕೆ ಸೇರಿಕೊಂಡರು. ನಂತರ 'ಸಮತೆಂತೋ' (ಸರಸ್ವತಿಪುರದ ಮಧ್ಯದ ತೆಂಗಿನ ತೋಟ) ಗುಂಪಿನ ಒಂದು ಆಧಾರಸ್ತಂಭರಾದರು. 'ಆಷಾಡಭೂತಿ', 'ರಕ್ತಾಕ್ಷಿ', 'ಕದಡಿದ ನೀರು', 'ಜೋಕುಮಾರಸ್ವಾಮಿ', 'ಘಾಶಿರಾಂ ಕೊತ್ವಾಲ', 'ತುಘಲಕ್', 'ಸ್ವಪ್ನವಾಸವದತ್ತ', 'ಗೋಡೆ ಬೇಕೆ ಗೋಡೆ', 'ಸತ್ತವರ ನೆರಳು' ನಾಟಕ ಆಡಿಸಿ ನಟ ನಿರ್ದೇಶಕರಾಗಿ ಹೆಸರುಗಳಿಸಿದರು. ನಾಟಕ ಸಾಹಿತ್ಯದ ಅವಸ್ಥಾಂತರಗಳನ್ನು ಗಮನಿಸುತ್ತಾ, ಅಸಂಗತ ನಾಟಕಗಳು ಪ್ರಕಟವಾದಾಗ, 'ಎಲ್ಲಿಗೆ', 'ಬೊಂತೆ', 'ನಿಮ್ಮ ಓಟು ಯಾರಿಗೆ' ನಾಟಕಗಳನ್ನು ರಚಿಸಿದರು. ಆಕಾಶವಾಣಿ ಮಾಧ್ಯಮಕ್ಕೂ ನಟರಾಗಿ, ನಾಟಕಕಾರರಾಗಿ ಸೇವೆ ಸಲ್ಲಿಸಿ, ಎಲ್ಲರಂತೆಯೇ ತಾವೂ ಚಲನಚಿತ್ರ ಲೋಕಕ್ಕೂ ನುಗ್ಗಿ, ಕಾಣಿಸಿಕೊಂಡರು; ಆದರೆ ರತ್ನರ ಮೊದಲೊಲವು ರಂಗಭೂಮಿಯೇ. 1989ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಎಚ್.ವಿ. ವೆಂಕಟಸುಬ್ಬಯ್ಯ

ಮೈಸೂರು ಜಿಲ್ಲೆಯ ಹಂಪಾಪುರದಲ್ಲಿ 1936ರಲ್ಲಿ ಜನಿಸಿದರು. ಸಾಮಾನ್ಯ ವಿದ್ಯಾಭ್ಯಾಸ ಪೂರ್ಣ ಮಾಡಿ, ಸೌಂಡ್ ಇಂಜಿನಿಯರಿಂಗ್‌ನಲ್ಲಿ ಡಿಪ್ಲೊಮಾ, ನಾಟಕ ಕಲೆಯಲ್ಲಿ ಡಿಪ್ಲೊಮಾ (ಛಾಯಾ ಅಕಾಡೆಮಿ ಆಫ್ ಆರ್ಟ್ಸ್ ಅವರಿಂದ) ಪಡೆದರು.

1958ರಿಂದ ನಾಟ್ಯ ಸಂಘ ಥಿಯೇಟರ್ ಸೆಂಟರ್‌ನಲ್ಲಿ ಕಾರ್ಯಕರ್ತನಾಗಿ ಸಹಕಾರ್ಯದರ್ಶಿಯಾಗಿ ಕೆಲಸ ಮಾಡುತ್ತ ಅನೇಕ ನಾಟಕೋತ್ಸವಗಳಿಗೆ ನೆರವಾದವರು. 1976ರಿಂದ ಪ್ರತಿ ವರ್ಷ ತಪ್ಪದ ಹಾಗೆ ಒಂದೋ–ಎರಡೋ ನಾಟಕ ನಿರ್ದೇಶಿಸಿದ್ದಾರೆ. ಅದರಲ್ಲಿ 'ಸಮಗ್ರ ಮಂಥನ', 'ಉತ್ತಮ ಪ್ರಭುತ್ವ ಲೊಳಲೊಟ್ಟೆ', 'ಭಾರತ ಭಾಗ್ಯ ವಿಧಾತ', 'ಗುಲಾಮನ ಸ್ವಾತಂತ್ರ್ಯ

ಯಾತ್ರೆ', 'ಹರಿಜನ್ವಾರ', 'ಅಗ್ನಿಸಾಕ್ಷಿ' ಮುಖ್ಯವಾದವುಗಳು. ನಾಟಕ ತಂಡದೊಂದಿಗೆ ಪ್ರಮುಖ ಕೇಂದ್ರಗಳಲ್ಲಿ ಸಂಚರಿಸಿ ನಾಟಕೋತ್ಸವ ನಡೆಸಿದ್ದಾರೆ. ವಿಶ್ವಕನ್ನಡ ಸಮ್ಮೇಳನದ ಸಂದರ್ಭಕ್ಕೆ 'ಚಂದ್ರಗುಪ್ತ' ನಾಟಕವನ್ನು ನಟರಂಗ ಸಂಸ್ಥೆಗೆ ನಿರ್ದೇಶಿಸಿದ್ದರು. ಶ್ರೀರಂಗರ ನಾಟಕಗಳ ಪ್ರಯೋಗದಲ್ಲಿ ಬಹಳ ಹೆಸರಾದ ಇವರು ರಂಗದ ಹಿನ್ನೆಲೆಯಲ್ಲಿ ಅಪಾರ ಆಸಕ್ತಿ ಉಳ್ಳವರು. "ಬ್ಯಾಕ್ ಸ್ಟೇಜ್ ಯೂನಿಟ್ ಆಫ್ ನಾಟ್ಯ ಸಂಘ" (ಬಿ.ಯು.ಎನ್.ಎಸ್.) ಸ್ಥಾಪಕರಲ್ಲೊಬ್ಬರು. ಇವರ ರಂಗಸಜ್ಜಿಕೆ, ವಸ್ತ್ರವಿನ್ಯಾಸ, ಪ್ರಸಾಧನ, ಬೆಳಕು ವಿನ್ಯಾಸವಿದ್ದ ಅನೇಕ ಯಶಸ್ವೀ ನಾಟಕಗಳ ಪ್ರದರ್ಶನ ಆಗಿದೆ. ಶಾಂತಿನಾಥ ದೇಸಾಯಿಯವರು 'ಸೃಷ್ಟಿ' ಮತ್ತು 'ಒಂದು ಬೆರಳೆಯ ದುರಂತ', 'ಯದ್ಭಾವಿತದ್ಭಾ' ಇವರೇ ರಂಗಪ್ರತಿ ಸಿದ್ಧಮಾಡಿ ಪ್ರಯೋಗಿಸಿದ ನಾಟಕಗಳು. ಬೆಂಗಳೂರು–ಮೈಸೂರು ವಿಶ್ವವಿದ್ಯಾಲಯಗಳಲ್ಲಿ ನಾಟಕ ವಿಭಾಗದಲ್ಲಿ ವಿಶೇಷ ಉಪನ್ಯಾಸಕರಾಗಿ ಶಿಕ್ಷಣ ನೀಡಿದ್ದಾರೆ. ಬೆಂಗಳೂರಿನ 'ಅಭಿನಯತರಂಗ' ನಾಟಕ ತರಬೇತಿ ಶಾಲೆಯ ಪ್ರಾಂಶುಪಾಲರಾಗಿ ಶ್ರಮಿಸಿದ್ದಾರೆ – ನಾಟಕ ನಿರ್ದೇಶಿಸಿದ್ದಾರೆ.

'ರಂಗಮಂಚ' ಎಂಬ ರಂಗಭೂಮಿ ಸಂಶೋಧನೆ ಕೇಂದ್ರ ಸ್ಥಾಪಿಸಿ ಮಾಹಿತಿ ಸಂಗ್ರಹಣೆ ನಡೆಸಿದ್ದಾರೆ. ರಂಗಭೂಮಿಯ ಇತಿಹಾಸ–ತಂತ್ರಜ್ಞಾನಗಳಿಗೆ ಸಂಬಂಧಪಟ್ಟ ಗ್ರಂಥಗಳನ್ನು ರಚಿಸಿ ಪ್ರಕಟಿಸಲು ಸಿದ್ಧಮಾಡಿದ್ದಾರೆ. ವೆಂಕಟಸುಬ್ಬಯ್ಯ ತಮ್ಮ ವಿನಯ–ರಂಗಾಸಕ್ತಿಗಳಿಗೆ ಬಹಳಷ್ಟು ಹೆಸರಾದರು. 1989ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಪ್ರಸನ್ನ

ಶಿವಮೊಗ್ಗ ಜಿಲ್ಲೆಯ ಅಮರಾವತಿಯಲ್ಲಿ ದಿನಾಂಕ 22–3–1951ರಂದು ಪ್ರಸನ್ನ ಜನ್ಮ ತಾಳಿದರು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ 1970ರಲ್ಲಿ ಎಂ.ಎಸ್‌ಸಿ. ಪದವಿ ಪಡೆದರು. ದೆಹಲಿಯ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾದಲ್ಲಿ ಅಧ್ಯಯನ ಮಾಡಿ 1972ರಲ್ಲಿ ಡಿಪ್ಲೊಮಾ ಪಡೆದರು. ಯುವ ನಾಟಕಕಾರರಿಗೆ ಮೀಸಲಾದ ಸಂಗೀತ ನಾಟಕ ಅಕಾಡೆಮಿ ಫೆಲೋಶಿಪ್ಪನ್ನು ಮತ್ತು ಸಮಕಾಲೀನ ಭಾರತೀಯ ರಂಗಭೂಮಿಯ ವಸ್ತು ಅಧ್ಯಯನ ಮಾಡಲು ಭಾರತ ಭವನ ಫೆಲೋಶಿಪ್ಪನ್ನೂ ಪಡೆದರು. "ತದ್ರೂಪಿ" ನಾಟಕ ರಚನೆಯಿಂದ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದರು.

1975ರಲ್ಲಿ "ಸಮುದಾಯ"ವನ್ನು ಹುಟ್ಟು ಹಾಕಿ ಸುಮಾರು ಎಂಟು ವರ್ಷ ದುಡಿದು, ಬೆಂಗಳೂರಿನಲ್ಲಿ "ಕದಡಿದ ನೀರು", "ತಾಯಿ" "ಗೆಲಿಲಿಯೋ", "ದಂಗೆಯ ಮುಂಚಿನ ದಿನಗಳು" ನಾಟಕಗಳ ಪ್ರದರ್ಶನವಿತ್ತು ನಮ್ಮ ಪ್ರಮುಖ ನಿರ್ದೇಶಕರಲ್ಲೊಬ್ಬರಾದರು. ದೆಹಲಿಯ ಆಹ್ವಾನದ ಮೇಲೆ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾಗೆ "ತುಘಲಕ್", "ಮಾಯಾ ಬಜಾರ್" ಮತ್ತು ಭೂಪಾಲ್‌ನ ರಂಗಮಂಡಲಕ್ಕೆ "ಶಾನ್‌ಬೆಹನ್" ನಿರ್ದೇಶಿಸಿ ರಾಷ್ಟ್ರೀಯ ಮಟ್ಟದಲ್ಲಿಯೂ ಹೆಸರಾದ ನಿರ್ದೇಶಕರೆನಿಸಿದರು.

ತಮಿಳುನಾಡು, ಮಧ್ಯಪ್ರದೇಶ, ಬಿಹಾರ, ಕೇರಳಗಳಲ್ಲಿ ಅನೇಕ ನಾಟಕ ತರಬೇತಿ ಶಿಬಿರಗಳನ್ನು ನಡೆಸಿ, ಶಿಬಿರಾರ್ಥಿಗಳಿಂದ ನಾಟಕಗಳನ್ನಾಡಿಸಿ ಬಿಹಾರದ ರಾಂಚಿಯಲ್ಲಿ ಎನ್.ಎಸ್.ಡಿ.ಯ ಕಾರ್ಯಕ್ರಮ ನಿರ್ದೇಶಕರಾಗಿಯೂ ಸೇವೆ ಸಲ್ಲಿಸಿದ್ದಾರೆ.

ನಾಟಕಕಾರರೂ, ನಿರ್ದೇಶಕರೂ, ರಂಗ ತಜ್ಞರೂ, ಒಂದು ಬಗೆಯ ವಿಮರ್ಶಕರೂ ಆಗಿ ಚರ್ಚೆಗೆ ವಸ್ತುವಾಗಿ ಸದಾ ಪ್ರಸನ್ನ ಹೆಸರಾದವರು. ಜರ್ಮನಿ, ರಷ್ಯ ಸುತ್ತಿ ಬಂದು, ಈಗ ದೆಹಲಿಯಲ್ಲಿ ನೆಲೆಸಿ ರಂಗಭೂಮಿ ಸೇವೆ ಮಾಡುತ್ತಿದ್ದಾರೆ. 1989ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---

# 1990ರ ಪ್ರಶಸ್ತಿ ವಿಜೇತರು



## ಕೀರ್ತಿನಾಥ ಕುರ್ತಕೋಟಿ (ಫೆಲೋಶಿಪ್)

ಪ್ರೊ. ಕೀರ್ತಿನಾಥ ದತ್ತಾತ್ರೇಯ ಕುರ್ತಕೋಟಿ ಅವರು ಶ್ರೇಷ್ಠ ಸಾಹಿತ್ಯ ಅಧ್ಯಯನ, ಶ್ರೇಷ್ಠ ದರ್ಜೆಯ ಅಧ್ಯಾಪನ ಹಾಗೂ ವಿಶ್ವದ ಉತ್ತಮ ಸಾಹಿತ್ಯದ ವಿಶ್ಲೇಷಣೆಯಲ್ಲೇ ಬದುಕಿನ ಸಾರ್ಥಕವನ್ನು ಕಾಣುವ ವಿರಳ ವರ್ಗಕ್ಕೆ ಸೇರಿದವರು. ಕನ್ನಡ ನಾಡಿನ ಇಂದಿನ ವಿಮರ್ಶಕರ ಅಗ್ರಗಣ್ಯರಲ್ಲಿ ಒಬ್ಬರಾದ, ಕನ್ನಡ ಸಾಹಿತ್ಯಕ್ಕೆ ಅನೇಕ ರೀತಿಯ ಅಮೂಲ್ಯವಾದ ಕೊಡುಗೆಯನ್ನು ನೀಡುತ್ತ ಬಂದಿರುವ ಪ್ರೊ. ಕುರ್ತುಕೋಟಿಯವರು ಕನ್ನಡ ಸಾಹಿತ್ಯದಲ್ಲಿ ಆಗಲೇ ಸ್ಥಾಯಿ ಆಗಬಲಷ್ಟು ಕೆಲಸ ಮಾಡಿರುವರು.

1928ರಲ್ಲಿ ಗದುಗಿನಲ್ಲಿ ಹುಟ್ಟಿದರು. 1950ರಲ್ಲಿ ಪದವೀಧರರಾಗಿ ಶಿಕ್ಷಕ ವೃತ್ತಿ ಆರಂಭ. ಅಚ್ಚು ಮೆಚ್ಚಿನ ಅಧ್ಯಾಪಕ. 1958ರಲ್ಲಿ ಇಂಗ್ಲೀಷ್‌ನಲ್ಲಿ ಸ್ನಾತಕೋತ್ತರ ಪದವಿ ಪಡೆದು ಉದ್ಯೋಗ ಅರಸಿ ಗುಜರಾತಕ್ಕೆ ವಲಸೆ. ಗುಜರಾತದ ವಿಶ್ವವಿದ್ಯಾಲಯವೊಂದರಲ್ಲಿ ಇಂಗ್ಲೀಷ್ ವಿಭಾಗದ ಮುಖ್ಯಸ್ಥರಾಗಿ ನಿವೃತ್ತಿ.

ಸಜ್ಜನಿಕೆಯ ಸಾಕಾರ ಮೂರ್ತಿಯಾಗಿರುವ, ಪ್ರೊ. ಕುರ್ತಕೋಟಿಯವರು ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಸಾರಸರ್ವಸ್ವವನ್ನೇ ವಿಶ್ಲೇಷಣೆಗೊಳಪಡಿಸಿದವರು. 'ನಡೆದು ಬಂದ ದಾರಿ'ಯ ಮೂರು ಸಂಪುಟಗಳಲ್ಲಿ, 'ಮನ್ವಂತರ'ದ ಸಂಚಿಕೆಗಳಲ್ಲಿ ಹಾಗೂ 'ಪುಟ ಬಂಗಾರದ' ಐದು ಪುಟಗಳಲ್ಲಿ ಕೀರ್ತಿನಾಥರು ಆಧುನಿಕ ಕನ್ನಡ ಸಾಹಿತ್ಯ ಸಮೀಕ್ಷೆಯ ಅಗಾಧವಾದ ಹಾಗೂ ಬಹು ಬೆಲೆಯುಳ್ಳ ಕೆಲಸವನ್ನು ಸಮರ್ಥವಾಗಿ ನಡೆಸಿದ್ದಾರೆ. ಕನ್ನಡ ಸಾಹಿತ್ಯದ ಗಂಭೀರ ಅಧ್ಯಯನಕ್ಕೆ ಮೇರು ಸದೃಶ್ಯವಾದ ಆಕರ ಗ್ರಂಥಗಳಾಗಿವೆ.

ಇವರ ಚೊಚ್ಚಲ ಕೃತಿಯಾದ 'ಆ ಮನಿ'ಯೆಂಬ ನಾಟಕಕ್ಕೆ (1956) ಮುಂಬೈ ಸರಕಾರದ ಪ್ರಥಮ ಬಹುಮಾನ. ನಂತರ ಇವರ 'ಸ್ವಪ್ನದರ್ಶಿ ಮತ್ತು ಇತರ ನಾಟಕಗಳು' ಕೃತಿಗೂ ಮುಂಬೈ ಸರಕಾರದ ಬಹುಮಾನ ಬಂದಿದೆ. ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಕೊಡಬಂದಿದೆ.

ಇವರ 'ಚಂದ್ರಗುಪ್ತ' ನಾಟಕ ಗಮನ ಸೆಳೆಯುವ ಕೃತಿಯಾಗಿದ್ದರೆ, 'ಯುಗ ಧರ್ಮ ಮತ್ತು ಸಾಹಿತ್ಯ ದರ್ಶನ', 'ವಿಮರ್ಶೆಯ ವಿನಯ' ವಿಮರ್ಶಾ ಕ್ಷೇತ್ರದ ಉದ್ದಗಲಕ್ಕೂ ವ್ಯಾಪಿಸಿದ ಉತ್ತುಂಗ ಕೃತಿಗಳಾಗಿವೆ.

ಇವರು ಸದಸ್ಯ, ಸಲಹೆಗಾರ, ಸಂಪಾದಕರಾಗಿರುವ ಸಮಿತಿ ಸಂಸ್ಥೆಗಳ ಲೆಕ್ಕವಿಲ್ಲ. ಭಾರತೀಯ ಸಾಹಿತ್ಯ ಅಕಾಡೆಮಿಯ ಪ್ರಾದೇಶಿಕ ಭಾಷಾ ಸಮಿತಿ. (1975) ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ (1977–83), ಪಿ.ಇ.ಎನ್. ಇಂಡಿಯಾ (1980 ರಿಂದ) ಅಮೆರಿಕನ್ ಸ್ಟಡೀಜ್ ರಿಸರ್ಚ್ ಸೆಂಟ್ರಲ್ ಹೈದರಾಬಾದ್ (1956 ರಿಂದ) ಮೊದಲಾದವುಗಳಲ್ಲಿ ಸದಸ್ಯರಾಗಿ ಸೇವೆ. ಧಾರವಾಡದ 'ಮನೋಹರ ಗ್ರಂಥ ಮಾಲೆಯ' ಸಾಹಿತ್ಯ ಸಲಹೆಗಾರರಾಗಿ ಕೀರ್ತಿನಾಥರು ಮಾಡುತ್ತಿರುವ ಕೆಲಸ ಸರಿಸಾಟಿಯಿಲ್ಲದುದು.

ಭಾರತೀಯ ಜ್ಞಾನಪೀಠ ಪ್ರಶಸ್ತಿಯ ಪ್ರಾದೇಶಿಕ ಸಮಿತಿಯ ಸದಸ್ಯರಾಗಿ ಹಲವಾರು ವರ್ಷ ಸಲ್ಲಿಸಿದ ಸೇವೆ ಕನ್ನಡಕ್ಕೆ ಗೌರವ ತರುವಂತಹುದು. ಒಮ್ಮೆ ಜ್ಞಾನಪೀಠ ಪ್ರಶಸ್ತಿ ನೀಡುವಾಗ ಸಂದಿಗ್ಧ ಎದುರಾದಾಗ ಅದನ್ನು ಕೀರ್ತಿ ಅವರ ಪರಾಮರ್ಶೆಗೆ ಒಪ್ಪಿಸಲಾಯಿತು. ಅವರು ತೌಲನಿಕ ವಿಮರ್ಶೆ, ನಿರ್ಣಾಯಕ ಅಭಿಮತ ನೀಡುದುದು ಅಖಿಲ ಭಾರತ ಮಟ್ಟದಲ್ಲಿ ಅವರಿಗಿರುವ ಮನ್ನಣೆಯ ದ್ಯೋತಕ. ಇದು ಕನ್ನಡಿಗನಿಗೆ ಪುಳಕಿತಗೊಳಿಸುವ ಸಂಗತಿ. 'ಕನ್ನಡದ ಕೀರ್ತಿ' – ಪ್ರೊ. ಕೀರ್ತಿನಾಥ ಕುರ್ತಕೋಟಿಯವರು. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಹೆಚ್.ಎಲ್. ನಾಗೇಗೌಡ (ಫಲೋಶಿಪ್)

ಸರ್ಕಾರದ ಕಾರ್ಯಕ್ಷೇತ್ರದ ನುರಿತ ಜಾಣ್ಮೆಯ ಆಡಳಿತಗಾರರೆಂದು ಹೆಸರು ಪಡೆದುಕೊಂಡು, ಸಾಹಿತ್ಯ ಕ್ಷೇತ್ರದಲ್ಲಿಯೂ ಯಶಸ್ವಿಯಾಗಿ ಕನ್ನಡ ಭಂಡಾರವನ್ನು ಬೆಳೆಸುತ್ತಿರುವ ಕೆಲವೇ ಸಾಹಿತಿಗಳಲ್ಲಿ ನಾಗೇಗೌಡರೊಬ್ಬರು. ತಮ್ಮ 'ಕೆನಿಲ್‌ವರ್ತ್', 'ನನ್ನೂರು', 'ವೆರಿಯರ್ ಎಲ್ವಿನರ ಗಿರಿಜನ ಪ್ರಪಂಚ', 'ದೊಡ್ಡಮನೆ', 'ಭೂಮಿಗೆ ಬಂದ ಗಂಧರ್ವ" ಮುಂತಾದ ಕೃತಿಗಳಿಂದ ಕನ್ನಡ ಸಾರಸ್ವತ ಪ್ರಪಂಚಕ್ಕೆ ಚಿರಪರಿಚಿತರಾಗಿದ್ದಾರೆ. 'ಪ್ರವಾಸಿ ಕಂಡ ಇಂಡಿಯಾ' ಬೃಹತ್ ಸಂಪುಟಗಳು ಕನ್ನಡ ಸಾಹಿತ್ಯದಲ್ಲಿ ಅದ್ವಿತೀಯ ಕೃತಿಗಳಾಗಿವೆ. ಜಾನಪದ ಸಾಹಿತ್ಯದಲ್ಲಿ ಒಂದು ಧುರೀಣತ್ವವನ್ನು ವಹಿಸಿ ಜಾನಪದ ಜೀವನವನ್ನು ಸಾಕ್ಷಿರೂಪವಾಗಿ ನೋಡುವಂತಹ ಪ್ರತಿಭಾಂಶವುಳ್ಳ ನಾಗೇಗೌಡರು 1979ರಲ್ಲಿ ಕರ್ನಾಟಕ ಜಾನಪದ ಟ್ರಸ್ಟನ್ನು ಸ್ಥಾಪಿಸಿದರು. 'ಜಾನಪದ ಲೋಕ' ಎಂಬ ಗ್ರಾಮೀಣ ಸಾಂಸ್ಕೃತಿಕ ಕೇಂದ್ರ, ವಸ್ತು ಸಂಗ್ರಹಾಲಯ, ಆಡಿಯೋ ವಿಡಿಯೋ ಪ್ರದರ್ಶನ ಎಲ್ಲವನ್ನು ಒಳಗೊಂಡದ್ದು, ಜಾನಪದ ಕಲೆಯ ಬೆಳವಣಿಗೆಗೆ ಹೊಸ ಚಾಲನೆ ನೀಡುತ್ತಿದ್ದಾರೆ.ಇವರ ಪರಿಶ್ರಮದಿಂದ ಕರ್ನಾಟಕ ರಾಜ್ಯ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ 1980ರಲ್ಲಿ ಸ್ಥಾಪಿತವಾಯಿತು. ಆರು ವರ್ಷಗಳ ಕಾಲ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಇವರ 'ಸೋಬಾನೆ ಚಿಕ್ಕಮ್ಮನ ಪದಗಳು', 'ಕರ್ನಾಟಕ ಜಾನಪದ ಕಥೆಗಳು', 'ಪದವವೆ ನಮ್ಮ ಎದೆಯಲ್ಲಿ' ಎಂಬ ಜಾನಪದ ಸಂಗ್ರಹಗಳು ಅನುಪಮ ಕೃತಿಗಳೆಂದು ಹೆಸರಾಗಿವೆ.

ಜನಪದ ರಂಗ ಪ್ರದರ್ಶನ ಕಲೆಗಳಾದ ಯಕ್ಷಗಾನ, ಗೊಂಬೆ ಮೇಳ, ಮೂಡಲಪಾಯ, ದೊಡ್ಡಾಟ, ಗೊಂಬೆಯಾಟಗಳನ್ನು ಜನಪ್ರಿಯ ಮಾಡಲು ಹಲವಾರು ಯೋಜನೆ ಹಾಕಿಕೊಂಡಿದ್ದಾರೆ. ಜಾನಪದ ಜಗತ್ತು, ಜಾನಪದ ಗಂಗೋತ್ರಿ, ಜಾನಪದ ಸಮಾಚಾರ ಪತ್ರಿಕೆಗಳ ಸಂಪಾದಕರು. 1915ರಲ್ಲಿ ದಕ್ಷಿಣ ಕರ್ನಾಟಕದ ಕುಗ್ರಾಮದಲ್ಲಿ ಜನಿಸಿದ ನಾಗೇಗೌಡರು ರಾಜ್ಯದ ಉನ್ನತ ಐ.ಎ.ಎಸ್. ಅಧಿಕಾರಿಗಳಾದವರು. ಇವರು ಶಿವಮೊಗ್ಗ, ಚಿಕ್ಕಮಗಳೂರು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿಗಳಾಗಿ ಅಮೋಘವಾದ ಸೇವೆ ಸಲ್ಲಿಸಿ ದಕ್ಷರೂ, ಜನಪ್ರಿಯರೂ ಎಂದೆನಿಸಿಕೊಂಡು 1978ರಲ್ಲಿ ನಿವೃತ್ತರಾದರು.

ಶಿವಮೊಗ್ಗ ಜಿಲ್ಲೆಯಲ್ಲಿ ಇವರು ಬಹು ಶ್ರಮವಹಿಸಿ ಸ್ಥಾಪಿಸಿದ 'ಪ್ರಾಚ್ಯವಸ್ತು ಸಂಗ್ರಹಾಲಯ' ಸಾಂಸ್ಕೃತಿಕ ಹಾಗೂ ನಾಡು–ನುಡಿಗಳ ಮೇಲೆ ಇರುವ ಇವರ ಪ್ರೇಮವನ್ನು ವ್ಯಕ್ತಪಡಿಸುತ್ತದೆ. ಇವರ ನೇತೃತ್ವದಲ್ಲಿ ಮಂಗಳೂರು, ನಾಗಮಂಗಲದಲ್ಲಿ ನಡೆದ ಎರಡು ಜಾನಪದ ಸಮ್ಮೇಳನಗಳನ್ನು ಚಿರಕಾಲ ಸ್ಮೃತಿಯಲ್ಲಿ ಉಳಿಯುವ ಘಟನೆಗಳಾಗಿವೆ.ಅನುಭವಿಗಳೂ, ತಜ್ಞರೂ ಆದ ಆದರ್ಶ ಅಧಿಕಾರಿಗಳು ತಮ್ಮನ್ನು 'ಜಾನಪದ ಲೋಕ' ಸೃಷ್ಟಿಸಲು ತೊಡಗಿಸಿಕೊಂಡಿರುವುದು ಮತ್ತು ಜಾನಪದ ರಂಗಭೂಮಿಯನ್ನು ಉಳಿಸಿ–ಬೆಳೆಸುವ ಹಂಬಲ ತಾಳಿರುವುದು ಕನ್ನಡ ನಾಡಿನ ಭಾಗ್ಯವೇ ಸರಿ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.





## ಡಾ. ಪುಟ್ಟರಾಜ ಗವಾಯಿಗಳು

ತಾವು ಅಂಧರಾಗಿದ್ದರೂ ಸಹ ಡಾ. ಪುಟ್ಟರಾಜ ಗವಾಯಿಗಳು ಸಹಸ್ರಾರು ಅಂಧ, ಅನಾಥರಿಗೆ ವಿದ್ಯೆಯ ಕಣ್ಣನ್ನು ಕೊಟ್ಟು, ಅವರ ಬದುಕಿನ ಬೆಳಕಾದರು.

1914ರಲ್ಲಿ ಜನನ. ಧಾರವಾಡ ಜಿಲ್ಲೆಯ ದೇವಗಿರಿ ಜನ್ಮಸ್ಥಳ. ಹುಟ್ಟಿದ ಆರು ತಿಂಗಳಲ್ಲಿಯೇ ಸಿಡುಬು ಬೇನೆಯಿಂದ ಅಂಧರಾದರು. ಎಂಟು ವರ್ಷದ ಬಾಲಕ ಪುಟ್ಟಯ್ಯನವರ ಮೇಲೆ ಗಾನಯೋಗಿ ಪಂಡಿತ ಪಂಚಾಕ್ಷರ ಗವಾಯಿಗಳ ಕೃಪಾದೃಷ್ಟಿ,

ಶಿಷ್ಯನಾಗಿ ಅಂಗೀಕಾರ. ಪುಟ್ಟರಾಜರ ಪ್ರತಿಭೆಯ ವಿಕಾಸಕ್ಕೆ ಮುಕ್ತ ಅವಕಾಶ. ಸಂಗೀತ ಸಂಸ್ಕಾರದ ಜೊತೆಗೆ ಸಾಹಿತ್ಯ ಸಂಸ್ಕಾರವನ್ನು ಪಡೆದಿರುವ ಪಂಡಿತ ಪುಟ್ಟರಾಜ ಗವಾಯಿಗಳು ಕನ್ನಡ, ಹಿಂದಿ, ಸಂಸ್ಕೃತ ತ್ರಿಭಾಷಾ ಪಂಡಿತರು, ಕರ್ನಾಟಕ ಮತ್ತು ಹಿಂದೂಸ್ತಾನಿ ಸಂಗೀತದಲ್ಲಿ ಉಭಯ ಗಾನ ವಿಶಾರದರು. ಸಕಲ ವಾದ್ಯ ಪಾರಂಗತರು. ಪಂಚಾಕ್ಷರ ಗವಾಯಿಗಳ ಗದುಗಿನ ವೀರೇಶ್ವರ ಪುಣ್ಯಾಶ್ರಮಕ್ಕೆ ಸಮರ್ಥ ಉತ್ತರಾಧಿಕಾರಿಗಳು. ಸುಮಾರು ಐವತ್ತು ವರ್ಷಗಳಿಂದ ಗುರುತರವಾದ ಹೊಣೆಯನ್ನು ಅತ್ಯಂತ ನಿಷ್ಠೆಯಿಂದ ಮತ್ತು ದಕ್ಷತೆಯಿಂದ ನಿರ್ವಹಿಸುತ್ತಾ ಬಂದಿರುವುದು ಮಾತ್ರವಲ್ಲದೆ ಆದರ ಸೇವಾ ಕ್ಷೇತ್ರವನ್ನು ಹತ್ತು ದಿಕ್ಕುಗಳಲ್ಲಿ ವಿಸ್ತರಿಸಿರುವುದು ಹಿರಿಯ ಸಾಧನೆ. ಇವರ ವಿದ್ಯಾಸಂಸ್ಥೆಗಳಲ್ಲಿ ಎಲ್ಲ ಜಾತಿ ಧರ್ಮಗಳ ಅಂಧ, ಅಂಗವಿಕಲ, ಅನಾಥ, ಬಡ ವಿದ್ಯಾರ್ಥಿಗಳಿಗೆ ಆಶ್ರಯ ಕೊಟ್ಟಿದ್ದಾರೆ.

ವಿದ್ಯಾಸಂಸ್ಥೆಯ ನಿರ್ವಹಣೆಗಾಗಿ ಆದಾಯವನ್ನು ಕಂಡುಕೊಳ್ಳಲು ನಲವತ್ತರ ದಶಕದಲ್ಲಿಯೇ "ಶ್ರೀ ಕುಮಾರೇಶ್ವರ ಕೃಪಾಪೋಷಿತ ನಾಟ್ಯ ಸಂಘ" ಎಂಬ ನಾಟಕ ಕಂಪನಿಯೊಂದನ್ನು ನರಗುಂದದಲ್ಲಿ ಸ್ಥಾಪಿಸಿದರು. 'ಸೊಲ್ಲಾಪುರದ ಸಿದ್ಧರಾಮೇಶ್ವರ' ಮೊದಲ ನಾಟಕ. ಇಂದಿಗೂ ಸ್ತ್ರೀ ಪಾತ್ರಗಳನ್ನು ಪುರುಷರೇ ನಿರ್ವಹಿಸುತ್ತಿರುವುದು ವಿಶಿಷ್ಟವಾಗಿದೆ. ಗದುಗಿನಲ್ಲಿ 'ಹೇಮರೆಡ್ಡಿ ಮಲ್ಲಮ್ಮ' 300ಕ್ಕೂ ಹೆಚ್ಚು ಪ್ರಯೋಗಗಳನ್ನು ಕಂಡು ದಾಖಲೆ ಮಾಡಿದೆ. ಗವಾಯಿಗಳು ತಾವೇ ನಾಟಕಗಳನ್ನು ರಚಿಸಿ ಆಡಿಸಿದ್ದಾರೆ. ಇದುವರೆಗೆ 20 ನಾಟಕಗಳನ್ನು ಬರೆದಿದ್ದಾರೆ.

ಈ ಸಂಸ್ಥೆಯಿಂದ ಬಂದಮೇಲೆ ಹೆಸರು ಮಾಡಿದವರು ಬಸವರಾಜ ರಾಜಗುರು, ಅರ್ಜುನಸಾ ನಾಕೋಡ್, ಸಿದ್ಧರಾಮ ಜಂಬಲದಿನ್ನಿ, ಶೇಷಾದ್ರಿ ಗವಾಯಿಗಳು ಶಿವಯ್ಯಸ್ವಾಮಿ ಮುದೇನಗುಡಿ, ಪಂಚಾಕ್ಷರಿ ಮತ್ತಿಗಟ್ಟಿ ಇನ್ನೂ ಅನೇಕರು. ಇದಲ್ಲದೆ ಗವಾಯಿಗಳು ಕನ್ನಡ, ಹಿಂದಿ, ಸಂಸ್ಕೃತ ಸಂಗೀತ ಮತ್ತು ಬ್ರೇಲ್ ಲಿಪಿಯಲ್ಲಿ 60ಕ್ಕೂ ಮೀರಿ ಕೃತಿಗಳನ್ನು ರಚಿಸಿದ್ದಾರೆ. 'ಪಂಚಾಕ್ಷರ ವಾಣಿ' ಮಾಸಪತ್ರಿಕೆಯನ್ನು 30 ವರ್ಷಗಳಿಂದ ನಡೆಸುತ್ತಿದ್ದಾರೆ.

1961ರಲ್ಲಿ ರಾಷ್ಟ್ರಪತಿ ಬಾಬು ರಾಜೇಂದ್ರಪ್ರಸಾದ್ ಅವರು ಇವರ ಹಿಂದಿ 'ಬಸವ ಪುರಾಣ'ವನ್ನು ಸನ್ಮಾನಿಸಿ ಪ್ರಶಸ್ತಿಪತ್ರ ನೀಡಿದ್ದಾರೆ. 1975ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯವು ಗೌರವ ಡಾಕ್ಟರೇಟ್ ಪದವಿ ಕೊಟ್ಟು ಗೌರವಿಸಿದೆ. ಇವರ 'ಗಾನಸುಧಾ' ಕೃತಿಗೆ ಸಂಗೀತ ಅಕಾಡೆಮಿ ಪ್ರಶಸ್ತಿ ಬಂದಿದೆ. ಸಮಾಜ ಸೇವೆಯೇ ದಾಸೋಹವೆಂಬ ಸತ್ಯ ಶುದ್ಧ ಕಾಯಕ ಜೀವಿಗಳು ಜನಪದದ ಕಲ್ಯಾಣದಲ್ಲಿ ನಿರತರಾಗಿರುವವರು. ತಮ್ಮ ಸದ್ಭಾವ, ಸಚ್ಚಾರಿತೆಯಿಂದ ರಂಗಭೂಮಿಯಲ್ಲಿ ಎಲ್ಲರ ಗೌರವ ಗಳಿಸಿದ್ದಾರೆ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ವೀರಣ್ಣ ಜಾಲಿಹಾಳ

ಚಲನಚಿತ್ರ ತಾರೆಯೊಬ್ಬರು ತಾವು ನೋಡುತ್ತಿದ್ದ ನಾಟಕ ನಾಯಕಿಯ ಅಭಿನಯಕ್ಕೆ ಮನಸೋತು, ಮೆಚ್ಚುಗೆ ತಿಳಿಸಲು *ಗ್ರೀನ್* ರೂಂಗೆ ಬಂದಾಗಲೇ ತಿಳಿದದ್ದು ನಾಯಕಿ ಪಾತ್ರ ವಹಿಸಿದವರು ಪುರುಷನೆಂದು. ಮಹಿಳೆಯರೂ ಮೆಚ್ಚುವಂತೆ ಸ್ತ್ರೀ ಪಾತ್ರವನ್ನು ವಹಿಸಿ ಅಸಾಧಾರಣವಾಗಿ ಅಭಿನಯಿಸುತ್ತಿದ್ದವರು, ವೀರಣ್ಣ ಜಾಲಿಹಾಳ.

1931ರಲ್ಲಿ ಬಿಜಾಪುರದ ಜಾಲಿಹಾಳದಲ್ಲಿ ಜನನ. ಬಾಲ್ಯದಿಂದಲೂ ನಾಟಕದಲ್ಲಿ ಆಸಕ್ತಿ. ಹವ್ಯಾಸಿ ನಾಟಕಗಳಲ್ಲಿ ಅಭಿನಯಿಸುತ್ತಿದ್ದರು. ಒಮ್ಮೆ (1947) ಇವರ ಅಭಿನಯವನ್ನು ಚಿತ್ತರಗಿಯ 'ಕುಮಾರ ವಿಜಯ ನಾಟ್ಯ ಸಂಘ'ದ ಮಾಲೀಕರು ನೋಡಿ ಮೆಚ್ಚಿಕೊಂಡು ತಮ್ಮ ಕಂಪನಿಗೆ ಆಹ್ವಾನವಿತ್ತರು. ಇಲ್ಲಿಂದ ವೀರಣ್ಣನವರ ವ್ಯಕ್ತಿಕಂಪನಿ ನೆಂಟು ಬೆಳೆಯತೊಡಗಿತು. ಚಿತ್ತರಗಿ ಕಂಪನಿಯ ನಾಟಕಗಳಲ್ಲಿ 'ಪ್ರೇಮ ಜೋಡಿ'ಯ ಲಲಿತ 'ಯುವಕ ಶಕ್ತಿಯ ರಾಣಿ. 'ರಾಜಕುಮಾರಿ ಪದ್ಮಾ'ಳ ಪದ್ಮಾ,

'ಸೌಭಾಗ್ಯಲಕ್ಷ್ಮಿ'ಯ ಲಕ್ಷ್ಮಿ ಮುಂತಾದ ನಾಯಕಿ ಪಾತ್ರಗಳನ್ನು ನಿರ್ವಹಿಸಿ ವೀರಣ್ಣ ಜನಪ್ರಿಯರಾಗದರು. ಮುಂದೆ ಪುರುಷ ಪಾತ್ರಗಳನ್ನೂ ಯಶಸ್ವಿಯಾಗಿ ವಹಿಸಿದರು. 1970ರಲ್ಲಿ ಚಿತ್ತರಗಿ ಕಂಪನಿಯ ಸಂಪೂರ್ಣ ಜವಾಬ್ದಾರಿ ಇವರ ಪಾಲಿಗೆ ಬಂದಿತು. ಇವರ ಆಡಳಿತದಲ್ಲಿ ಕಂಪನಿಯು ಮೂರು ಶಾಖಾ ಕಂಪನಿಗಳನ್ನು ತೆರೆದು ವಿಸ್ತರಿಸಿತು. ಕಂಪನಿಯು ದೊಡ್ಡದಾಗಿ ಬೆಳೆಯಿತಲ್ಲದೆ, ಅದ್ದೂರಿಯ ಪ್ರದರ್ಶನ ನೀಡುತ್ತಿತ್ತು. ವೈಭವದಿಂದ ಕೂಡಿದ ಚಲಿಸುವ ರಂಗಸಜ್ಜಿಕೆ ಬಳಕೆಗೆ ಬಂದಿತು. ಕಲಾವಿದರನ್ನು, ರಂಗಕರ್ಮಿಗಳನ್ನು ವಿಶ್ವಾಸದಿಂದ ಕಾಣುತ್ತಿತ್ತು. ಅಂತಹ ದಿನಗಳು ಮರುಗೊಳಿಸುವುದೆ ಎನ್ನುವ ವೀರಣ್ಣ 45 ವರ್ಷದ ಬಣ್ಣದ ಬದುಕಿನಲ್ಲಿ ಬಹಳಷ್ಟು ವೈವಿಧ್ಯಗಳನ್ನು, ನೋವು-ನಲಿವುಗಳನ್ನು ಕಂಡವರು. 1980ರವರೆಗೆ ನಾಡಿನಾದ್ಯಂತ ಪ್ರದರ್ಶನ ಕೊಟ್ಟ ಕಂಪನಿಯು ಮುಂದೆ ಹಲವು ಸಮಸ್ಯೆ, ತೊಂದರೆಗಳನ್ನು ಅನುಭವಿಸಬೇಕಾಯಿತು. ಇದೀಗ ಪ್ರಮುಖ ಕಂಪನಿಯು ಒಂದು ಶಾಖೆಯೊಡನೆ ನಡೆಯುತ್ತಿದೆ. ವೀರಣ್ಣನವರ ಮಕ್ಕಳೂ ಸಹ ಕಂಪನಿಯಲ್ಲಿ ಪ್ರಮುಖ ಕಲಾವಿದರಾಗಿದ್ದಾರೆ. ಬಹಳಷ್ಟು ನೊಂದಿರುವ ವೀರಣ್ಣನವರು ಎದೆಗುಂದದೆ ತಮ್ಮನ್ನು ವೃತ್ತಿರಂಗಭೂಮಿಗೆ ಅರ್ಪಿಸಿಕೊಂಡು ರಂಗಸೇವೆಯನ್ನು ಮುಂದುವರಿಸಿದ್ದಾರೆ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಅಂಬುಜಮ್ಮ

1937ರಲ್ಲಿ ಮೈಸೂರಿನಲ್ಲಿ ಜನನ. ಬಾಲ್ಯದಿಂದಲೂ ಹಾಡು-ನೃತ್ಯದಲ್ಲಿ ಒಲವು. ತಂದೆ ತಾಯಿಯರ ಪ್ರೋತ್ಸಾಹ ಇತ್ತು. 1952ರಲ್ಲಿ ಅಂಬುಜಮ್ಮ ಅವರು ಸಂಗೀತ ಕಲಿಯಲೆಂದು "ಶಾರದಾ ಸಂಗೀತ ನಾಟಕ ಕಂಪನಿ'ಗೆ ತಂದೆ, ತಾಯಿಯರ ಒಪ್ಪಿಗೆ ಪಡೆದು ಸೇರಿದರು. ಚಿತ್ರದುರ್ಗದಲ್ಲಿ ಕ್ಯಾಂಪ್ ಮಾಡಿದ್ದಾಗ 'ರಕ್ತರಾತ್ರಿ' ನಾಟಕದಲ್ಲಿ ಚಿಕ್ಕ ಪಾತ್ರದಿಂದಾಗಿ ಬಣ್ಣ ಹಚ್ಚಿದರು. ಅವರ ಸಣ್ಣ ಪಾತ್ರ ಮೆಚ್ಚುಗೆ ಪಡೆಯಿತು. ನಂತರ ಗಂಭೀರವಾಗಿ ರಂಗ ತರಬೇತು ಪಡೆದು ಐದಾರು ತಿಂಗಳಲ್ಲಿಯೇ ಕಂಪನಿಯ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ಅಭಿನಯಿಸುತ್ತಾ ಜನಮನ ಸೆಳೆದರು.

ಕಂಪನಿಯ ನಾಟಕಗಳಲ್ಲಿ 'ಸಂಪತ್ತಿಗೆ ಸವಾಲ್'ನಲ್ಲಿ ಲಕ್ಷ್ಮಿ, 'ಚಿಕ್ಕಸೊಸೆ'ಯಲ್ಲಿ ಸುನಂದಾ, 'ಗಂಡನ ಮಾನ'ದಲ್ಲಿ ನಂದಿ, 'ಬೆಳ್ಳಿಚುಕ್ಕಿ'ಯಲ್ಲಿ ನಾಗಮಣಿ, ಮಾತಂಗ ಕನ್ಯ'ದಲ್ಲಿ ಧ್ಯಮನಾ, 'ರಕ್ತರಾತ್ರಿ'ಯಲ್ಲಿ ಉತ್ತರೆ, 'ಕುರುಕ್ಷೇತ್ರ'ದಲ್ಲಿ ರುಕ್ಮಿಣಿ ಪಾತ್ರಗಳು ಬಹಳಷ್ಟು ಹೆಸರು ಪಡೆದವು. ಪ್ರೇಕ್ಷಕರೆದುರು ನಿರಂತರವಾಗಿ ಉಳಿಯುವ ಇವರ ಪಾತ್ರಗಳು 'ಸಂಪತ್ತಿಗೆ ಸವಾಲ್" ನಾಟಕದಲ್ಲಿ ಲಕ್ಷ್ಮಿ, 'ಬೆಳ್ಳಿಚುಕ್ಕಿ' ನಾಟಕದಲ್ಲಿ ನಾಗಮಣಿ. ನಾಡಿನ ಪ್ರಮುಖ ಕಲಾವಿದರ ಜೊತೆ ಅಭಿನಯಿಸಿದ ಈ ಕಲಾವಿದೆ 1956ರಲ್ಲಿ ಮೈಸೂರು ಅರಮನೆಯಲ್ಲಿ ಪ್ರಯೋಗಿಸಿದ ಮಾನವತಿ, ಮಾತಂಗ ಕನ್ಯ ನಾಟಕಗಳಿಂದ ಅರಸರ ಮೆಚ್ಚಿಗೆ ಗಳಿಸಿ ಪ್ರಸಂಸೆಗೆ ಪಾತ್ರರಾದರು. ಗೋಕಾಕ ಕಂಪನಿಯ ಮಾಲೀಕರೂ, ರಂಗ ಮಾರ್ಗದರ್ಶಕರೂ ಆದ ಬಸವಣ್ಣೆಪ್ಪನವರ ಹಾರಾ ಪತ್ನಿಯಾಗಿ ಅವರ ಸುಖ ದುಃಖದಲ್ಲಿ ಪಾಲುಗಾರರಾಗಿ ಬಂದಿದ್ದಾರೆ. ನಾಡಿನ ಅನೇಕ ಪತ್ರಿಕೆಗಳು ಇವರ ಅಭಿನಯ ಕುರಿತು ಬರೆದಿವೆ. ಅನೇಕ ಸಂಘ ಸಂಸ್ಥೆಗಳು ಸನ್ಮಾನಿಸಿ ಗೌರವಿಸಿವೆ. ಕರ್ನಾಟಕದ ವೃತ್ತಿ ಕಲಾಪ್ರೇಮಿಗಳಿಗೆ ಅಂಬುಜಮ್ಮನವರ ಹೆಸರು ಚಿರಪರಿಚಿತ. ಬಸವಣ್ಣೆಪ್ಪನವರ ನಿಧನದಿಂದ ಗೋಕಾಕ ಕಂಪನಿ ಹಲವಾರು ಕಷ್ಟಗಳಿಗೆ ಗುರಿಯಾಯಿತು, ಅಂಬುಜಮ್ಮನವರ ಶ್ರಮದಿಂದ ಕೆಲವು ವರ್ಷಗಳವರೆಗೆ ನಡೆದು ಈಗ ನಿಂತುಹೋಗಿದೆ. ಈ ನಿವೃತ್ತಿ ವಯಸ್ಸಿನಲ್ಲಿಯೂ ಮತ್ತೆ ಮಕ್ಕಳನ್ನು ಕಟ್ಟಿಕೊಂಡು ಕಂಪನಿ ಕಟ್ಟಿ ಬಣ್ಣದ ಮಗಳಾಗಿಯೇ ಬದುಕುವ ಆಸೆ ಈ ಕಲಾವಿದೆಯದು. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

## ಸಿ.ಎನ್. ಹಿರೇಮಠ



ಚನ್ನಬಸಯ್ಯ ನೂರಂದಯ್ಯ ಹಿರೇಮಠ ಅವರು ವೃತ್ತಿ ರಂಗಭೂಮಿಯ ಹಿರಿಯ ಕಲಾವಿದರು. 1917ರಲ್ಲಿ ಧಾರವಾಡದ ನವಲಗುಂದದ ಕರ್ಲವಾಡ ಗ್ರಾಮದಲ್ಲಿ ಜನನ. 1930ರಲ್ಲಿ ಗರೂಡ ಸದಾಶಿವರಾಯ 'ಶ್ರೀ ದತ್ತಾತ್ರೇಯ ನಾಟ್ಯ ಸಂಘ'ದಲ್ಲಿ ಸ್ತ್ರೀ ಪಾತ್ರ ವಹಿಸುವ ಮೂಲಕ ರಂಗ ಪ್ರವೇಶ. ಮುಂದೆ 'ಶ್ರೀಹಾಲ ಸಿದ್ದೇಶ್ವರ ನಾಟ್ಯ ಸಂಘ' ಹಲಗೇರಿ, ಜಟ್ಟಪ್ಪನವರ ಕಂಪನಿಗೆ 1933ರಲ್ಲಿ ಸೇರಿ ಸ್ತ್ರೀ ಪಾತ್ರಗಳನ್ನು, ಪುರುಷ ಪಾತ್ರಗಳನ್ನೂ ಸಹ ನಿರ್ವಹಿಸಿ ಜನಪ್ರಿಯರಾದರು. ಹಂದಿಗನೂರ ಸಿದ್ದರಾಮಪ್ಪನವರ ಸಂಸ್ಥೆಯಲ್ಲಿ ಭೀಷ್ಮನ ಪಾತ್ರದಲ್ಲಿ ಅಭಿನಯಿಸಿ 'ಕರ್ನಾಟಕದ ಕಲಿಯುಗದ ಭೀಷ್ಮ'ನೆಂಬ ಖ್ಯಾತ ನಾಮ ಪಡೆದರು. ಮುಂದೆ ಏಣಿಗಿ ಬಾಳಪ್ಪನವರ ಕಂಪನಿ, ಚಿತ್ತರಗಿ ಗಂಗಾಧರ ಶಾಸ್ತ್ರಿಗಳ ಕಂಪನಿಗಳಲ್ಲಿ ಸೇವೆ ಸಲ್ಲಿಸಿದರು. 1951ರಲ್ಲಿ ದೊಡ್ಡವಾಡ ನಾಗರಿಕರ ಆಶ್ರಯದಲ್ಲಿ ಸೋದರನೊಡಗೂಡಿ 'ಶ್ರೀ ಸಮಾಜ ವಿಕಾಸ ನಾಟ್ಯಸಂಘ' ದೊಡ್ಡವಾಡ ಕಂಪನಿ ಕಟ್ಟಿದರು. 8 ವರ್ಷಗಳ ಕಾಲ ಚೆನ್ನಾಗಿ ನಡೆಯಿತು. ಯಶಸ್ಸು ಪಡೆದರು. ದುರದೃಷ್ಟವಶಾತ್ 1958ರಲ್ಲಿ ಹರಿಹರದ ಮೊಕ್ಕಾಂನಲ್ಲಿ ಬೆಂಕಿಗಾಹುತಿಯಾಯಿತು. ಈಗ ಹಿರೇಮಠ ಅವರು ಗೋಕರ್ಣದಲ್ಲಿರುವರು. ಈ ಇಳಿ ವಯಸ್ಸಿನಲ್ಲಿಯೂ ಇವರ ರಂಗಾಸಕ್ತಿ ಕುಂದಿಲ್ಲ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---

## ಸುಮಿತ್ರಮ್ಮ ಕುಂದಾಪೂರ



ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪೂರ ತಾಲ್ಲೂಕಿನ ಮಂಗಳೂರು ಗ್ರಾಮದಲ್ಲಿ ಜನಿಸಿದ ಸುಮಿತ್ರಮ್ಮನವರು ಆಗಿನ ಮೆಟ್ರಿಕ್ ಅಭ್ಯಾಸ ಮುಗಿಸಿ ಮುಂಬೈ ಬ್ಯಾಂಕ್ ಒಂದರಲ್ಲಿ ಸೇವೆ ಸಲ್ಲಿಸುತ್ತಿದ್ದಾಗಲೇ ರಂಗಭೂಮಿಯ ಆಸಕ್ತಿ ಹೆಚ್ಚಿದಂತೆ ನೌಕರಿಗೆ ರಾಜೀನಾಮೆ ನೀಡಿ ಪೂರ್ತಿಬಣ್ಣದ ಬದುಕಿಗೆ ಹೊಂದಿಕೊಂಡರು.

ಗುಬ್ಬಿ ಕಂಪನಿಯಲ್ಲಿ "ಕುರುಕ್ಷೇತ್ರ" ನಾಟಕದ ರುಕ್ಮಿಣಿ ಪಾತ್ರದಿಂದ ರಂಗಕಾಯಕ ಪ್ರಾರಂಭಗೊಂಡಿತು. ಶ್ರೀಕಂಠಾಚಾರ್ಯ, ಯೋಗ ನರಸಿಂಹ ಅವರ ಮಾರ್ಗದರ್ಶನದಿಂದ ಉತ್ತಮ ನಟಿಯಾಗಿ ಜನಪ್ರಿಯರಾದರು. ನಾಡಿನ ಜನ ಅದರಲ್ಲೂ ಉತ್ತರ ಕರ್ನಾಟಕದ ಪ್ರೇಕ್ಷಕ ವರ್ಗ ಈ ಕಲಾವಿದೆಯನ್ನು ಮರೆಯಲಾರರು.

ಶ್ರೀ ಶೇಷಾಚಾರ್ಯ ಅವರ ಕಂಪನಿಯಲ್ಲಿದ್ದಾಗ ಡಾ॥ ರಾಜಕುಮಾರ ಅವರ ಜೊತೆ 'ಅಪರಾಧಿ ಯಾರು', 'ಪ್ರೇಮಲೀಲಾ', 'ಕಾಳಿದಾಸ' ನಾಟಕಗಳಲ್ಲಿ ನಾಯಕಿ ನಟಿಯಾಗಿ ಅಭಿನಯಿಸಿ ಜನಮನ ಸೆಳೆದರು. 'ಗುಬ್ಬಿ ಕಂಪನಿ'ಯಿಂದ 'ಚಾಮುಂಡೇಶ್ವರಿ ಕಂಪನಿ' ಮೈಸೂರು, ಯೋಗಾನರಸಿಂಹ ಅವರ ಕಂಪನಿ, 'ಶೇಷ ಕಮಲ ಕಲಾ ಮಂಡಲಿ', 'ಶಾರದಾ ಸಂಗೀತ ನಾಟಕ ಮಂಡಲಿ' ಗೋಕಾಕ, ಗುಡಿಗೇರಿ ಬಸವರಾಜ ಅವರ 'ಶ್ರೀ ಸಂಗಮೇಶ್ವರ ನಾಟ್ಯ ಸಂಘ' ಇವು ಈ ಕಲಾವಿದೆಯ ರಂಗಭೂಮಿ ಸೇವೆಯ ಪ್ರಮುಖ ಕಂಪನಿಗಳು. 1953ರಲ್ಲಿ 'ವಿಜಯ ಮಾಲಾ ನಾಟ್ಯ ಸಂಘ' ಕುಂದಾಪೂರ ಎಂದು ಸ್ವತಂತ್ರ ಕಂಪನಿ ಮಾಡಿ ಹಲವಾರು ಕಷ್ಟನಷ್ಟ ಅನುಭವಿಸಿ ಕೆಲವೇ ದಿನಗಳಲ್ಲಿ ಮುಚ್ಚಿದರು. ಈ ಕಲಾವಿದೆಗೆ ಹೆಸರು ತಂದ ಪಾತ್ರಗಳೆಂದರೆ 'ರಕ್ತ ರಾತ್ರಿ' ನಾಟಕದಲ್ಲಿ ದ್ರೌಪದಿ, 'ಸುವರ್ಣ' ನಾಟಕದಲ್ಲಿ ನರ್ಸರೋಜಾಳ ಪಾತ್ರಗಳು. ದೀರ್ಘಸೇವೆ ಸಲ್ಲಿಸಿ ಈಗ ನಿವೃತ್ತಿ ಹೊಂದಿದ ಸುಮಿತ್ರಮ್ಮ ತಮ್ಮ ರಂಗದಿನಗಳನ್ನು ಸ್ಮರಿಸಿಕೊಳ್ಳುತ್ತ ಬಣ್ಣದ ಬದುಕು ನನಗೆ ತೃಪ್ತಿ ನೀಡಿದೆಯೆಂದು ಹೇಳುತ್ತಾರೆ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ವಾಸುದೇವ ಗಿರಿಮಾಜಿ

ವೃತ್ತಿ ರಂಗಭೂಮಿಯ ಹೆಸರಾಂತ ಹಿರಿಯ ಕಲಾವಿದರು. ಬಾಲ್ಯದಿಂದಲೂ ರಂಗಭೂಮಿಯ ಒಲವು. ಈಗ 80ರ ಇಳಿವಯಸ್ಸಿನಲ್ಲಿಯೂ ಪ್ರೀತಿಯಿಂದ ನಾಟಕದಲ್ಲಿ ಭಾಗವಹಿಸುತ್ತಾರೆ. 1912ರಲ್ಲಿ ಜನನ. ಹತ್ತನೆಯ ವಯಸ್ಸಿನಲ್ಲಿಯೇ ಮೈಸೂರಿನ 'ದಿ ಲಿಟರರಿ ಅಂಡ್ ಡ್ರಮಾಟಿಕ್ ಅಸೋಸಿಯೇಷನ್'ನಲ್ಲಿ ಬಾಲನಟನಾಗಿ ಪ್ರವೇಶ. ತಂದೆಯವರ ಪ್ರೋತ್ಸಾಹದಿಂದ ಪರಿಚಯವಾದ ರಂಗಭೂಮಿ ನೆಂಟನಾಯಿತು. ಮುಂದೆ ಓದಿನಲ್ಲಿ ಶ್ರದ್ಧೆ ಕಡಿಮೆಯಾಗಲು ತಂದೆಯವರೇ ಸ್ವತಃ ನಾಟಕ ರಂಗದಿಂದ ಮಗನನ್ನು ದೂರವಿಡಲು ಹಲವು ಬಾರಿ ಪ್ರಯತ್ನಿಸಿದರು. ಸಫಲವಾಗಲಿಲ್ಲ. 1932ರಲ್ಲಿ ಗಿರಿಮಾಜಿಯವರು ಮಹಮದ್ ಪೀರ್ ಸಾಹೇಬರ 'ಚಂದ್ರಕಲಾ ನಾಟಕ ಮಂಡಲಿ' ಸೇರಿದರು. ಚೆಲುವಿನ ಶರೀರ, ಮಧುರ ಶಾರೀರಗಳೆರಡನ್ನೂ ಪಡೆದಿದ್ದ ಇವರು ವಹಿಸುತ್ತಿದ್ದ 'ಸಂಸಾರ ನೌಕ'ದ ಸರಳ, 'ಗೌತಮ ಬುದ್ಧ'ದ ಯಶೋಧರಾ, 'ಷಾ ಜಹಾನ್'ನ ನಾದಿರ ಮತ್ತೆ ಜಹನಾರಾ, 'ಪ್ರೇಮಲೀಲಾ'ದ ಸುಶೀಲ, 'ರಾಮಾಯಣ'ದ ಸೀತೆ ಮುಂತಾದ ಮುಖ್ಯ ಸ್ತ್ರೀ ಪಾತ್ರಗಳಲ್ಲಿ ಜನಪ್ರಿಯರಾದರು. 1935ರಲ್ಲಿ 'ಗುಬ್ಬಿ ಕಂಪನಿ'ಗೆ ಬಂದ ಇವರು ಕೃಷ್ಣ, ಅರ್ಜುನ, ಗಾಂಧಾರಿ, ಸುಭದ್ರೆ, ರಾಧಾ ಹೀಗೆ ಹಲವಾರು ವೈವಿಧ್ಯಮಯ ಪಾತ್ರಗಳಲ್ಲಿ ಹೆಚ್ಚಿನ ಜನಮನ್ನಣೆ ಗಳಿಸಿದರು.

ಇವರು ರಂಗಭೂಮಿಯಲ್ಲಿಯಂತೆಯೇ ಚಿತ್ರರಂಗದಲ್ಲಿಯೂ ಕೂಡ ಹಿರಿಯ ಕಲಾವಿದರು. ಗುಬ್ಬಿ ಕಂಪನಿಯವರ ಸದಾರಮೆ, ಸುಭದ್ರ ಸಿನಿಮಾಗಳಲ್ಲಿ ನಟನಾಗಿ ಆರಂಭಿಸಿದ ಅವರು ಚಿತ್ರರಂಗದಲ್ಲಿ ನಟ, ಖಳನಟ, ಕಥೆ-ಸಂಭಾಷಣೆ ಬರಹಗಾರನಾಗಿ, ನಿರ್ದೇಶಕನಾಗಿ ಕನ್ನಡವಲ್ಲದೇ ಬಂಗಾಳಿ, ಹಿಂದಿ, ಮಲಯ, ತೆಲುಗು, ಇಂಗ್ಲಿಷ್ ಭಾಷೆಗಳಲ್ಲಿ ದುಡಿದಿದ್ದಾರೆ. ಭಾರತೀಯ ವಾಕ್ಚಿತ್ರ ಸ್ವರ್ಣ ಮಹೋತ್ಸವದಲ್ಲಿ ಸನ್ಮಾನಿತರಾಗಿದ್ದಾರೆ.

ಮಹಮದ್ ಪೀರ್, ಎಚ್.ಎಲ್.ಎನ್.ಸಿಂಹ, ಪಂತುಲು, ಡಿಕ್ಕಿ ಮಾಧವರಾವ್, ಸಿ.ಬಿ. ಜಯರಾವ್, ಹೊನ್ನಪ್ಪ ಭಾಗವತರ್, ಬಿ. ಜಯಮ್ಮ ಆ ತಲೆಮಾರಿನವರಾದ ಗಿರಿಮಾಜಿಯವರು ರಂಗಭೂಮಿಯ ಸೇವೆ ತಮ್ಮ ಬದುಕಿನ ಅತ್ಯಮೂಲ್ಯ ದಿನಗಳನ್ನು ಮುಡುಪಾಗಿಸಿದ ಹಿರಿಯ ಜೀವ. ಈ ಇಳಿ ವಯಸ್ಸಿನಲ್ಲಿಯೂ ಮೈಸೂರಿನ ವೃತ್ತಿರಂಗಭೂಮಿಯ ನಟರೊಡನೆ ಸೇರಿ ನಾಟಕ ಪ್ರದರ್ಶಿಸಲು ಎಲ್ಲಿಲ್ಲದ ಉತ್ಸಾಹ. ಕಿರಿಯ ಹವ್ಯಾಸಿ ರಂಗಭೂಮಿಯ ತಂಡದವರೊಡನೆ ಸೇರಿಬಿಡುವ ಹುಮ್ಮಸ್ಸು ಇವರಲ್ಲಿದೆ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಎಸ್. ಶಿವರಾಂ

ತಮ್ಮ ಪರಿಸರದಲ್ಲಿನ ಅರಳುವ ಪ್ರತಿಭೆಗಳಿಗೆ ಒಂದು ವೇದಿಕೆಬೇಕೆಂಬ ಅವಶ್ಯಕತೆ ಕಂಡಾಗ ತಮ್ಮ ಮನೆಯಲ್ಲಿಯೇ ಒಂದು ಪುಟ್ಟ ರಂಗಸ್ಥಳವನ್ನು ನಿರ್ಮಿಸಿ, ಅಚ್ಚುಕಟ್ಟಾದ ಪುಸ್ತಕ ಭಂಡಾರವನ್ನು ಒದಗಿಸಿದವರು ಎಸ್. ಶಿವರಾಂ. 1938ರಲ್ಲಿ ಜನನ. ಸಣ್ಣ ವಯಸ್ಸಿನಿಂದಲೇ ಬಣ್ಣದ ಕಡೆಗೆ ಒಲವು. ಶಾಲಾದಿನಗಳಲ್ಲಿ ಸಣ್ಣ, ಸಣ್ಣ ನೀತಿಬೋಧಕ ಕಥೆಗಳನ್ನು ಆರಿಸಿ ಅದಕ್ಕೆ ಸಂಭಾಷಣೆಗಳನ್ನು ಜೋಡಿಸಿ, ಆಸಕ್ತಿಯಿರುವ ಮಿತ್ರರನ್ನು ಸೇರಿಸಿ, ದೊಡ್ಡ ಆವರಣವಿರುವ ಮನೆಗಳಲ್ಲಿ ನಾಟಕ ಪ್ರದರ್ಶನ ಮಾಡುತ್ತಿದ್ದರು.

ಹಿರಣ್ಣಯ್ಯನವರ ಮಿತ್ರ ಮಂಡಲಿಯ 'ದೇವದಾಸಿ', 'ಧರ್ಮರತ್ನಾಕರ', 'ಮಕಮಲ್ ಟೋಪಿ' ಮತ್ತು ಗುಬ್ಬಿ ಕಂಪನಿಯ 'ಲವಕುಶ', 'ಅಣ್ಣತಮ್ಮ' ಹಾಗೂ ಕನ್ನಡ ಥಿಯೇಟರ್ಸ್‌ನ 'ರಾಜಾ ವಿಕ್ರಮ', ಚೆನ್ನ ನನ್ನ ಅಣ್ಣ' ಮುಂತಾದ

ನಾಟಕಗಳಲ್ಲಿ ಪಾತ್ರ ನಿರ್ವಹಣೆ. 'ಚಿತ್ರಾ ಕಲಾವಿದರು' ಹವ್ಯಾಸಿ ಸಂಸ್ಥೆಯಲ್ಲಿ ವೈವಿಧ್ಯಮಯ ಪಾತ್ರಗಳನ್ನು ವಹಿಸಿದ್ದು. 60ರ ದಶಕದಲ್ಲಿ ರಂಗ ಚಳವಳಿಯ ಸಂಘಟನೆ ಶುರುಮಾಡಿದ ನಾಟ್ಯ ಸಂಘ ಥಿಯೇಟರ್ ಸೆಂಟರ್, ಹವ್ಯಾಸಿ ತಂಡಗಳ ನಡುವೆ ಪರಸ್ಪರ ವಿಚಾರ ವಿನಿಮಯ ಸಹಕಾರ, ಸಮನ್ವಯಗಳಿಗೆ ಒಂದು ವೇದಿಕೆಯಾಯಿತು. ಅಲ್ಲಿ ಶ್ರೀರಂಗರ ಮಾರ್ಗದರ್ಶನದಲ್ಲಿ ಕೆಲ ನಿರ್ವಹಣೆ. ಬಿ.ಎಲ್.ಟಿ. ಎಂದೇ ಖ್ಯಾತವಾಗಿರುವ 'ಬೆಂಗಳೂರು ಲಿಟಲ್ ಥಿಯೇಟರ್'ನ ಸ್ಥಾಪಕ ಸದಸ್ಯನಾಗಿ ಸೇವೆ. ರಂಗಸಜ್ಜಿಕೆ, ಬೆಳಕು, ಪ್ರಸಾಧನ, ನಟ ನಿರ್ದೇಶಕನಾಗಿ ಕನ್ನಡ ಮತ್ತು ಆಂಗ್ಲ ನಾಟಕಗಳ ನಿರ್ಮಾಣದಲ್ಲಿ ಭಾಗಿ. ವಿದೇಶಿ ತಂಡಗಳು ಬೆಂಗಳೂರಿಗೆ ಬಂದಾಗ ಪ್ರದರ್ಶನದ ಹಿನ್ನೆಲೆಯಲ್ಲಿ ಸಹಕಾರ. ನ್ಯಾಷನಲ್ ಕಾಲೇಜಿನ 'ಹಿಸ್ಟ್ರಿಯಾನಿಕ್ ಕ್ಲಬ್' ರಂಗಮಂದಿರದ ನಿರ್ಮಾಣದಲ್ಲಿ ನೆರವು.

ಜನಪ್ರಿಯ ಚಿತ್ರಕಲಾವಿದರಾದರೂ ಬಿಡುವು ಸಿಕ್ಕಾಗ ವೃತ್ತಿ ನಾಟಕಗಳಲ್ಲಿ ಹೆಚ್ಚಿಗೆ ಉತ್ತರ ಕರ್ನಾಟಕ ತಂಡದಲ್ಲಿ ಪಾತ್ರವಹಿಸಿ, ನಾಡಿನಾದ್ಯಂತ ತಿರುಗಾಟ. ಚಿತ್ರರಂಗದಲ್ಲಿ ನಟ, ನಿರ್ದೇಶಕ, ನಿರ್ಮಾಪಕನಾಗಿ ಅನುಭವ. 'ಚಲನಚಿತ್ರ ಕಲಾವಿದರ ಸಂಘ'ದ ಸ್ಥಾಪಕ ಸದಸ್ಯ ಹಾಗೂ ಕಾರ್ಯದರ್ಶಿಯಾಗಿ 14 ವರ್ಷಗಳ ದುಡಿಮೆ.

ಸಮಾಜಸೇವೆಯಲ್ಲಿ ಆಸಕ್ತಿ, ಇಂಡಿಯನ್ ರೆಡ್‌ಕ್ರಾಸ್ ಸೊಸೈಟಿ, ಸೇಂಟ್ ಜಾನ್ಸ್ ಆಂಬುಲೆನ್ಸ್ ಸಂಸ್ಥೆ, ಕೃಷ್ಣ ಚಾರಿಟಬಲ್ ಆಸ್ಪತ್ರೆ ಮುಂತಾದ ಸಂಸ್ಥೆಗಳಲ್ಲಿ ಆಜೀವ ಸದಸ್ಯರು. ಇಂದಿಗೂ ಶಿವರಾಂ ಅವರಿಗೆ ರಂಗಭೂಮಿಯೇ ಪ್ರಿಯವಾದ ಮಾಧ್ಯಮ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಮಾ.ಸು. ಶ್ರೀರಾಮುಲು

ಮಾ. ಸು. ಶ್ರೀರಾಮುಲು ಎಂದರೆ ಬಹುಮಂದಿಗೆ ಪರಿಚಯವಾಗಲಿಕ್ಕಿಲ್ಲ. ಬಿ.ಇ.ಎಲ್. ಕಲಾಕ್ಷೇತ್ರದ ಶ್ರೀರಾಮುಲು ಎಂದರೆ ಥಟ್ಟನೆ ಗುರುತು ಹತ್ತುವುದು ಹಾಗೂ ಆತ್ಮೀಯತೆ ಸುಳಿದಾಡುವುದು. ಬೆಂಗಳೂರು ನಗರದಲ್ಲಿ ರವೀಂದ್ರ ಕಲಾಕ್ಷೇತ್ರ, ಚೌಡಯ್ಯ ಹಾಲ್ ಬಿಟ್ಟರೆ ಅತ್ಯಾಧುನಿಕ, ಸುಸಜ್ಜಿತ ರಂಗಮಂದಿರವೆಂದರೆ ಬಿ.ಇ.ಎಲ್. ಕಲಾಕ್ಷೇತ್ರ. ಈ ಕಲಾಕ್ಷೇತ್ರದ ಹಿಂದೆ ಶ್ರೀರಾಮುಲು ಅವರ ಅಗಾಧ ಪರಿಶ್ರಮವಿದೆ.

1935ರಲ್ಲಿ ಬೆಂಗಳೂರಿನ ಮಲ್ಲೇಶ್ವರಂನಲ್ಲಿ ಜನನ. 1956ರಲ್ಲಿ ಭಾರತ ಎಲೆಕ್ಟ್ರಾನಿಕ್ಸ್ ಕಾರ್ಖಾನೆಯಲ್ಲಿ ಸೇರಿದ್ದು, ಈಗ ಅಲ್ಲಿ ಯೋಗಕ್ಷೇಮದ ಅಧಿಕಾರಿ.

1957ರಲ್ಲಿ ಮಲ್ಲೇಶ್ವರಂನಲ್ಲಿ 'ಕಮಲ ಕಲಾಮಂದಿರ' ನಾಟಕ ತಂಡವನ್ನು ಕಟ್ಟುವ ಮೂಲಕ ರಂಗಭೂಮಿಗೆ ಪ್ರವೇಶ. ಮುಂದೆ ನಾಟ್ಯ ಸಂಘ ಥಿಯೇಟರ್ ಸೆಂಟರ್‌ನಲ್ಲಿ ಕಾರ್ಯದರ್ಶಿ, ಉಪಾಧ್ಯಕ್ಷರಾಗಿ ಸೇವೆ. ರಾಜ್ಯ ಮಟ್ಟದ ಹಾಗೂ ರಾಷ್ಟ್ರಮಟ್ಟದ ನಾಟಕೋತ್ಸವಗಳನ್ನು ಸಮರ್ಪಕವಾಗಿ ಏರ್ಪಡಿಸುವಲ್ಲಿ ಸಂಘಟನೆ. ಆಗ ಕಾಲೇಜು ವಿದ್ಯಾರ್ಥಿಗಳಿಗಾಗಿ 'ಉಲ್ಲಾಳ್ ಷೀಲ್ಡ್' ನಾಟಕ ಸ್ಪರ್ಧೆ ನಡೆಯುತ್ತಿದ್ದು ಕಾಲೇಜು ರಂಗಭೂಮಿಗೆ ಹೊಸ ಚಾಲನೆ ನೀಡಿತ್ತು. ಅದೇ ತರಹ ಹವ್ಯಾಸಿ ಕಲಾವಿದರಿಗಾಗಿ ರಾಜ್ಯಮಟ್ಟದ ನಾಟಕ ಸ್ಪರ್ಧೆ ನಡೆಯಬೇಕೆಂದು ಯೋಚಿಸಿ ಡಾ. ರಾಜಕುಮಾರ್ ಅವರನ್ನು ಸಂಪರ್ಕಿಸಿ, ಒಪ್ಪಿಸಿ ಅವರ ಹೆಸರಿನಲ್ಲಿ ಒಂದು ಪಾರಿತೋಷಕವಿರಿಸಿ ಸ್ಪರ್ಧೆ ಆರಂಭಿಸುವಲ್ಲಿ ಶ್ರೀರಾಮುಲು ಯಶಸ್ವಿಯಾದರು. ಇದರಿಂದಾಗಿ ಹವ್ಯಾಸಿ ರಂಗದಲ್ಲಿ ಹಲವು ಹೊಸ ಪ್ರತಿಭೆಗಳ ವಿಕಾಸಕ್ಕೆ ಕಾರಣವಾಯಿತು. ಪ್ರಶಂಸನೀಯ ಉತ್ಸಾಹ ಹೊಮ್ಮಿ ಬರುವಂತಾಯಿತು. ಮುಂದೆ 1979ರಲ್ಲಿ ಮಾ. ಹಿರಣ್ಣಯ್ಯನವರ ಅಧ್ಯಕ್ಷತೆಯಲ್ಲಿ ವೃತ್ತಿ ನಿರತ ಕಲಾವಿದರ ನಾಟಕೋತ್ಸವವನ್ನು ಏರ್ಪಡಿಸಿದರು. 1959ರಲ್ಲಿ ಕಾರ್ಮಿಕ ಕಲಾವಿದರಿಗಾಗಿ ಹುಟ್ಟಿದ 'ಬಿ.ಇ.ಎಲ್. ಲಲಿತ ಕಲಾ ಸಂಘ'ದ ಸ್ಥಾಪಕ ಸದಸ್ಯರು. ಸಂಘದ ಬೆಳವಣಿಗೆಗಾಗಿ ನಿರಂತರವಾಗಿ ಶ್ರಮಿಸಿದರು. ಇಂದಿಗೂ ಗೌರವ ಕಾರ್ಯದರ್ಶಿಗಳಾಗಿ ದುಡಿಮೆ.

ಕಾರ್ಮಿಕರಲ್ಲಿ ಭಾವೈಕ್ಯತೆ ತರುವಲ್ಲಿ ಯಶಸ್ವಿಯಾಗಿರುವ 'ಅಂತರ ಭಾಷಾ ನಾಟಕ ಸ್ಪರ್ಧೆ'ಯು ಸತತವಾಗಿ 25 ವರ್ಷಗಳಿಂದ ನಡೆದುಕೊಂಡು ಬಂದಿದೆ. ಇದರ ಹಿಂದಿನ ಪ್ರೇರಕ ಶಕ್ತಿ ಶ್ರೀರಾಮುಲು. ರಾಷ್ಟ್ರಮಟ್ಟದ ಕೈಗಾರಿಕಾ ನಾಟಕ ಸ್ಪರ್ಧೆಯಲ್ಲಿ ಭಾಗವಹಿಸಿ ಪ್ರಶಸ್ತಿ, ಪಾರಿತೋಷಕಗಳನ್ನು ಪಡೆದಿರುವ ಬಿ.ಇ.ಎಲ್.ನ 'ಕನ್ನಡ ಸಾಹಿತ್ಯ ಕೂಟ'ಕ್ಕೆ ಇವರು ನಿರ್ದೇಶಿಸಿ, ಅಭಿನಯಿಸಿದ ನಾಟಕಗಳಲ್ಲಿ 'ಅಂಗುಲಿ ಮಾಲ', 'ಭಾವೈಕ್ಯತೆ', 'ಮಂಡೋದರಿ', 'ವಿಗಡ ವಿಕ್ರಮರಾಯ', 'ರಕ್ತಾಕ್ಷಿ', 'ಇಷ್ಟಾರ್ಥ', 'ಗರ್ಭಗುಡಿ' ಪ್ರಮುಖವಾದವು.

ಇವರು ಚಲನಚಿತ್ರಗಳಲ್ಲಿಯೂ ಅಭಿನಯಿಸಿದ್ದಾರೆ. ಶ್ರೀರಾಮುಲು–ಕೈಗಾರಿಕಾ ರಂಗಭೂಮಿಯದು ಅವಿನಾಭಾವ ಸಂಬಂಧ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಅಶೋಕ ಬಾದರದಿನ್ನಿ

ಹವ್ಯಾಸಿ ರಂಗಭೂಮಿಯಲ್ಲಿ ನಾಟಕ ನಿರ್ದೇಶನವನ್ನು ವೃತ್ತಿಯಾಗಿ ಸ್ವೀಕರಿಸಿ, ರಾಜಧಾನಿಗೆ ಮರುಳಾಗದೆ ಗ್ರಾಮಾಂತರ ಪ್ರದೇಶಗಳಲ್ಲಿ ರಂಗಭೂಮಿಯನ್ನು ಬೆಳೆಸಲು ಪ್ರಯತ್ನಿಸುತ್ತಿರುವ ವಿರಳರಲ್ಲಿ ಒಬ್ಬರು, ಅಶೋಕ ಬಾದರದಿನ್ನಿ.

1951ರಲ್ಲಿ ಜನನ. ಬಿಜಾಪುರ ಜಿಲ್ಲೆಯ ಅಚನೂರು ಗ್ರಾಮದವರಾದ ಬಾದರದಿನ್ನಿಯವರು ಬಿ.ಎಸ್‌ಸಿ. ಪದವೀಧರರು. ಬಾಲ್ಯದಿಂದಲೂ ರಂಗಭೂಮಿಯಲ್ಲಿ ಒಲವಿದ್ದ ಇವರು ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯ ಪದವೀಧರರಾದರು.

ಬೆಂಗಳೂರಿನಲ್ಲಿ ಇವರು ನಿರ್ದೇಶಿಸಿದ 'ಹ್ಯಾಮ್ಲೆಟ್', 'ಸಂದರ್ಭ', 'ಸಂಕ್ರಾಂತಿ', ಸಿಂಗಾರೆವ್ವ ಮತ್ತು ಅರಮನೆ', 'ಶಾಕುಂತಲ' ಅತ್ಯಂತ ಜನಪ್ರಿಯವಾದ ನಾಟಕಗಳು.

ಬೆಂಗಳೂರಿನಲ್ಲಿ 'ಅಭಿನಯ ತರಂಗ', 'ಭಾನುವಾರದ ರಂಗಶಾಲೆಯನ್ನು ಗೆಳೆಯರ ಜೊತೆ ಪ್ರಾರಂಭಿಸಿದರು. ಅಲ್ಲಿ ಪ್ರಾಂಶುಪಾಲರಾಗಿ ಇವರು ನಿರ್ದೇಶಿಸಿದ 'ಕೋತಿಕತೆ', 'ಮಾನಿಷಾದ' ಬಸಲಲಾಗಿದ್ದ ಹೊಸ ತಂತ್ರಗಳಿಗಾಗಿ ಹೆಸರಾದವು.

ಇದುವರೆಗೂ 150ಕ್ಕೂ ಹೆಚ್ಚು ರಂಗ ತರಬೇತಿ ಶಿಬಿರಗಳನ್ನು ಬೆಂಗಳೂರು, ಬಿಜಾಪುರ, ದಾವಣಗೆರೆ, ಜಗಳೂರು, ಭದ್ರಾವತಿ ಉಡುಪಿ, ಮಂಗಳೂರು, ಮೈಸೂರು, ಸಿರಿಗೆರೆ, ಮಂಡ್ಯ, ಕೋಲಾರ, ಶಿವಮೊಗ್ಗ, ಧಾರವಾಡ ಹೀಗೆ ನಾಡಿನ ಉದ್ದಗಲಕ್ಕೂ ಅನೇಕ ಊರುಗಳಲ್ಲಿ ನಡೆಸಿಕೊಟ್ಟಿದ್ದಾರೆ.

ವಿಶ್ವ ಕನ್ನಡ ಸಮ್ಮೇಳನದಲ್ಲಿ ನಾಟಕ ಅಕಾಡೆಮಿಯ ಆಯ್ದ ನಿರ್ದೇಶಕರಲ್ಲಿ ಒಬ್ಬರು. ಇವರ 'ಬಾಗಿಲಾ ತೆಗಿರಪ್ಪೊ' ನಾಟಕಕ್ಕೆ ಮೊದಲ ಸ್ಥಾನ ಸಿಕ್ಕಿತು. ದೂರದರ್ಶನ, ಬಾನುಲಿಯಲ್ಲಿ ಇವರ ನಾಟಕ ಪ್ರಸಾರವಾಗಿದೆ. ಬಿಜಾಪುರದ 'ಕಲಾ ಮಾಧ್ಯಮ' ಮತ್ತು ಬೆಂಗಳೂರಿನ 'ಮಲ್ಲಿಕಾ' ತಂಡವನ್ನು ಕಟ್ಟಿದವರು. ಕೋಲಾರದ 'ಅಂತರ ಗಂಗೆ' ಗುಡ್ಡದಲ್ಲಿ 'ಬಯಲು ರಂಗಮಂದಿರ' ನಿರ್ಮಿಸಿದ್ದಾರೆ.

ಚಲನಚಿತ್ರ ರಂಗದಲ್ಲಿಯೂ ಅಭಿನಯಿಸಿ ಜನಾದರಣೆ, ಮೆಚ್ಚುಗೆ ಗಳಿಸಿದ್ದಾರೆ. ಆದರೆ ಅವರು ನೆಚ್ಚಿ ಬಂದದ್ದು ರಂಗಭೂಮಿಯನ್ನೇ, ಆದ್ದರಿಂದ ತಮ್ಮೊಲವಿನಂತೆ ಗ್ರಾಮಾಂತರ ಪ್ರದೇಶದಲ್ಲಿ ರಂಗ ಚಟುವಟಿಕೆಗಳನ್ನು ನಡೆಸಿದ್ದಾರೆ. ಅವರನ್ನು ರಂಗಾಸಕ್ತರು ಪೋಷಿಸಿದ್ದಾರೆ. ಅವರೂ ಬೆಳೆದಿದ್ದಾರೆ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಡಿ. ಮುನಿರಂಗಪ್ಪ (ಪುರಸ್ಕಾರ)

ವೃತ್ತಿ ರಂಗಭೂಮಿಯಲ್ಲಿ ಶ್ರದ್ಧೆ, ಅಚ್ಚುಕಟ್ಟು ಹಾಗೂ ಲವಲವಿಕೆಗೆ ಹೆಸರಾದ ಹಿರಿಯ 'ರಂಗಕರ್ಮಿ' ಡಿ. ಮುನಿರಂಗಪ್ಪನವರು. 1927ರಲ್ಲಿ ಬೆಂಗಳೂರಿನಲ್ಲಿ ಜನನ. 1938ರಲ್ಲಿ ನಾಟಕದ ಗೀಳಿನಿಂದ ಮನೆಯಿಂದ ದೂರವಾಗಿ ಗುಬ್ಬಿ ಕಂಪನಿಗೆ ಟ್ರಾಲಿ ಬಾಯಾಗಿ ಸೇರಿ, ಅಲ್ಲಿಯ ಹತ್ತಾರು ಬಗೆಯ ಕೆಲಸದಲ್ಲಿ ಸಹಾಯಕನಾಗಿ ಅಚ್ಚುಕಟ್ಟಾಗಿ ನಿರ್ವಹಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು. 1949ರಲ್ಲಿ ಸುಬ್ಬಯ್ಯನಾಯ್ಡುರವರ 'ಸಾಹಿತ್ಯ ಸಾಮ್ರಾಜ್ಯ ನಾಟಕ' ಕಂಪನಿಗೆ ಮೇಸ್ತ್ರಿಯಾಗಿ ಸೇರಿದರು. ಬಹಳವಾಗಿ ಹೆಸರು ಮಾಡಿದ 'ಭಕ್ತ ಅಂಬರೀಶ' ನಾಟಕದ ರಂಗಸಜ್ಜಿಕೆಯನ್ನು ರೂಪಿಸಿದವರು. ಇದರಿಂದ ಪ್ರಶಂಸೆಯೊಡನೆ ಸನ್ಮಾನ ಕೂಡ ಪಡೆದರು. ಎಂ.ಎನ್. ಗಂಗಾಧರರಾಯರ 'ಶ್ರೀ ವಿಶ್ವೇಶ್ವರ ನಾಟಕ ಸಭಾ' ಹಾಗೂ 'ಭಕ್ತ ಶಿರೋಮಣಿ' ಸಿ.ಬಿ. ಮಲ್ಲಪ್ಪನವರ 'ಚಂದ್ರ ಮೌಳೇಶ್ವರ ನಾಟಕ ಕಂಪನಿಯಲ್ಲಿ' ಕೆಲಸ ಮಾಡಿ ನಾಡಿನ ತುಂಬಾ ಹೆಸರಾದರು. ಆಂಧ್ರದ ಪ್ರಖ್ಯಾತ ಕಂಪನಿಗಳು ಇವರನ್ನು ಕರೆಯಿಸಿಕೊಂಡರು. 'ಮೈಸೂರು ಥಿಯೇಟ್ರಿಕಲ್ ಕಂಪನಿ' ಕಟ್ಟಿದರು. ಮುಂದೆ ಮಾ॥ ಹಿರಣ್ಣಯ್ಯನವರ ಜೊತೆಗೂಡಿ 'ಮಾ॥ ಹಿರಣ್ಣಯ್ಯ ಮಿತ್ರ ಮಂಡಲಿ' ಸ್ಥಾಪಿಸಿದರು. ಇಂದಿಗೂ 'ಮುನಿರಂಗಪ್ಪ' ರಂಗಭೂಮಿಯ 'ಈಡಿಯಂ' ಆಗಿ ಅನೇಕ ಕಾರ್ಯಕ್ಷೇತ್ರಗಳನ್ನು ಧ್ವನಿಸುತ್ತದೆ. ರಂಗಕರ್ಮಿಯಾಗಿರುವ ಇವರು ನಾಟಕಗಳಲ್ಲಿ ಸಣ್ಣಪುಟ್ಟ ಪಾತ್ರಗಳನ್ನೂ ನಿರ್ವಹಿಸಿದ್ದಾರೆ. ಇಂದಿಗೂ ಕ್ರಿಯಾಶೀಲರಾಗಿರುವ ಇವರು ವೃತ್ತಿರಂಗಭೂಮಿಯ 'ರಂಗಶಿಲ್ಪಿ'. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ವೈ.ಕೆ. ಮುದ್ದುಕೃಷ್ಣ (ಪುರಸ್ಕಾರ)

ವೈ.ಕೆ. ಮುದ್ದುಕೃಷ್ಣ ದಕ್ಷ ಆಡಳಿತಗಾರರೆಂದು ಹೆಸರಾಗಿ, ಈಗ ಅಬಕಾರಿ ಜಿಲ್ಲಾಧಿಕಾರಿಗಳಾಗಿದ್ದಾರೆ. ಆಡಳಿತ ಕ್ಷೇತ್ರದಲ್ಲಿದ್ದರೂ ನಾಟಕ, ಸಂಗೀತ ಹಾಗೂ ಕ್ರೀಡೆಗಳಲ್ಲಿ ಅವರ ಒಲವು ಹೆಚ್ಚು. 1947ರಲ್ಲಿ ಹಾಸನದ ಯಡಕೆರೆಯಲ್ಲಿ ಜನಿಸಿ 1970ರಲ್ಲಿ ಸರ್ಕಾರಿ ಸೇವೆಗೆ ಸೇರಿ ನಾಡಿನ ನಾನಾ ಕಡೆ ವಿವಿಧ ಹುದ್ದೆಗಳಲ್ಲಿ ಕೆಲಸ ನಿರ್ವಹಿಸಿದ್ದಾರೆ. ಎಳೆತನದಿಂದಲೂ ನಾಟಕದಲ್ಲಿ ಆಸಕ್ತಿ. ತಂದೆ ಕೃಷ್ಣೇಗೌಡರು ಹೆಸರಾಂತ ಯಕ್ಷಗಾನ ಕಲಾವಿದರು. 1957ರಲ್ಲಿ ಬಾಲನಟನಾಗಿ ರಂಗಪ್ರವೇಶ ಮಾಡಿದ ಮುದ್ದುಕೃಷ್ಣ ಶಾಲಾ–ಕಾಲೇಜು ದಿನಗಳಲ್ಲಿ ಕಲಾ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. ಕಾಲೇಜು ದಿನಗಳಲ್ಲಿ ಸಹಾಯಾರ್ಥ ನಾಟಕಗಳನ್ನು ಆಡಿ ಬಡ ವಿದ್ಯಾರ್ಥಿಗಳಿಗೆ ಓದಲು ಸಹಾಯ ಮಾಡಿದ ಸಹೃದಯವಂತರು. ಇದುವರೆಗೆ ಸುಮಾರು 80ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿ, ಹಲವಾರು ನಿರ್ದೇಶಿಸಿರುತ್ತಾರೆ. ರಕ್ತಾಕ್ಷಿ, ಬಲಿದಾನ, ಸುಂದ್ರೋಪಸುಂದ್ರು, ಸಂಸಾರನೌಕೆ, ದೇವದಾಸಿ, ಕುರುಕ್ಷೇತ್ರ, ಯಲಹಂಕ ಪ್ರಭು, ಲಾಯರ್ ಸಂಸಾರ ಕೆಲವು ಪ್ರಮುಖ ನಾಟಕಗಳು.

ಕೈಗಾರಿಕ ಕಲಾವಿದರ ಕಲಾ ಸಂಸ್ಥೆ 'ಯುವ ರಂಗ'ದ ಗೌರವ ಅಧ್ಯಕ್ಷರು. ರಾಜ್ಯಮಟ್ಟದ ನಾಟಕ ಸ್ಪರ್ಧೆ ಮತ್ತು ಕೈಗಾರಿಕಾ ನಾಟಕ ಸ್ಪರ್ಧೆಗಳನ್ನು ಪ್ರತಿವರ್ಷವು ನಡೆಸುತ್ತಿರುವ ಯುವರಂಗದ ಪ್ರೇರಕ ಶಕ್ತಿ, ನಾಟಕ, ಸಂಗೀತ, ನಾಟ್ಯ ಕಾರ್ಯಕ್ರಮಗಳ ಮೂಲಕ ಸುಮಾರು 15000ಕ್ಕೂ ಹೆಚ್ಚು ಯುವ ಕಲಾವಿದರಿಗೆ ವೇದಿಕೆ ನಿರ್ಮಿಸಿದ ಕೀರ್ತಿ 'ಯುವರಂಗ'ದ್ದು, ಕರ್ನಾಟಕದ ಪ್ರಮುಖ ಸುಗಮ ಸಂಗೀತ ಗಾಯಕರುಗಳಲ್ಲಿ ಒಬ್ಬರು. ಚಲನಚಿತ್ರ ಹಿನ್ನೆಲೆಯ ಗಾಯಕರೂ ಹೌದು. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ರಂಗನಾಯಕಮ್ಮ (ಪುರಸ್ಕಾರ)

ರಂಗಭೂಮಿಯ ಹೆಸರಾಂತ ಕಲಾವಿದೆ ರಂಗನಾಯಕಮ್ಮನವರು ತಮ್ಮ ಹತ್ತನೇ ವಯಸ್ಸಿನಿಂದಲೂ ರಂಗಭೂಮಿಯಲ್ಲಿ ತೊಡಗಿದವರು.

ಸುಬ್ಬಯ್ಯನಾಯಿಡು ಅವರ 'ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿ'ಯಲ್ಲಿ ಬಾಲನಟಿಯಾಗಿದ್ದವರು. ಮುಂದೆ ಗುಬ್ಬಿ ಕಂಪನಿಯಲ್ಲಿ 25 ವರ್ಷಗಳ ಕಾಲ ಅಭಿನೇತ್ರಿಯಾಗಿ ಮೆರೆದರು. ಹೊನ್ನಪ್ಪ ಭಾಗವತರ್, ಮಹಾಂತೇಶ ಶಾಸ್ತ್ರಿ, ಎಂ.ಸಿ. ಮಹದೇವಸ್ವಾಮಿ, ಶ್ರೀಕಂಠ ಮೂರ್ತಿ, ಯೋಗ ನರಸಿಂಹಮೂರ್ತಿ, ಎಂ.ಎನ್. ದೇಸಾಯಿ, ಲೋಕನಾಥ್, ಮಾಸ್ಟರ್ ಹಿರಣ್ಣಯ್ಯ ಇವರೆಲ್ಲರ ಬಳಿ ಕೆಲವು ವರ್ಷಗಳ ಕಾಲ ಕೆಲಸ ಮಾಡಿದ್ದಾರೆ.

ಇವರ ಕಿತ್ತೂರು ಚೆನ್ನಮ್ಮ, ಮಂಡೋದರಿ, ಕುಂತಿ ಪಾತ್ರಗಳು ಅತ್ಯಂತ ಜನಪ್ರಿಯವಾಗಿದ್ದವು. ಈಕೆಯ ಇಂಥ ಕೆಲವು ಮೆಚ್ಚಿನ ಪಾತ್ರಗಳಿಗೆ ಹಲವು ಸಂಸ್ಥೆಗಳು ಬಿರುದುಗಳನ್ನು, ಸನ್ಮಾನ ಪತ್ರಗಳನ್ನು ನೀಡಿವೆ. ಪ್ರಶಸ್ತಿ ಮಾಲೆಗಳು ರಾರಾಜಿಸಿವೆ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.





## ಧೀರೇಂದ್ರ ಗೋಪಾಲ್ (ಪುರಸ್ಕಾರ)

ಚಿತ್ರನಟರಾಗಿ ಜನಪ್ರಿಯರಾಗಿರುವ ಧೀರೇಂದ್ರ ಗೋಪಾಲರ ಪ್ರಧಾನ ವ್ಯಕ್ತಿ ರಂಗಭೂಮಿ.

1940ರಲ್ಲಿ ಹಾಸನದ ಜೋಡಿ ಗುಬ್ಬಿ ಗ್ರಾಮದಲ್ಲಿ ಜನಿಸಿದ ಇವರಿಗೆ ಎಳೆತನದಿಂದಲೂ ರಂಗಾಸಕ್ತಿ, ಮಾಧ್ಯಮಿಕ ವಿದ್ಯಾಭ್ಯಾಸಕ್ಕೇ ಓದು ನಿಲ್ಲಿಸಿ, ನಾಟಕದ ಕೆಲಸಕ್ಕೆ ಸಂಬಂಧಿಸಿದ ಕರಪತ್ರ ಹಂಚಿಕೆಯಿಂದ ಹಿಡಿದು ಎಲ್ಲವನ್ನೂ ಮಾಡಿದರು.

ಜಮಖಂಡಿಯ ಶ್ರೀ ಗಜಾನನ ನಾಟಕ ಮಂಡಲಿಯ ಪೌರಾಣಿಕ, ಸಾಮಾಜಿಕ ನಾಟಕಗಳಲ್ಲಿ ಮುಖ್ಯ ಪಾತ್ರವಹಿಸುವ ಮೂಲ ಪ್ರವೇಶ. ಪ್ರಾರಂಭದ ಪಾತ್ರ ಭರತ, ನಂತರ ಲಕ್ಷ್ಮಣ, ಕರ್ಣ, ದೇವೇಂದ್ರ, ದುರ್ಯೋಧನನಾಗಿ ಪಾತ್ರ ವಹಿಸಿದರು. ಈ ಮಧ್ಯೆ ತಮ್ಮ ಏಕಪಾತ್ರಾಭಿನಯಕ್ಕೆ ಹೆಸರಾದರು.

ಮುಂದೆ ಶ್ರೀಧರರಾಯರ 'ಸರ್ವಮಂಗಳ' ನಾಟಕ ಸಭಾದಲ್ಲಿ ಟಿಪ್ಪು ಸುಲ್ತಾನ್ ಪಾತ್ರದ ಮೂಲಕ ಅತ್ಯಂತ ಜನಪ್ರಿಯರಾದರು. 'ಹುಚ್ಚೇಶ್ವರ ನಾಟ್ಯ ಸಂಘ' 'ವಸಂತಕಲಾ ನಾಟಕ ಮಂಡಲಿ', 'ಕೆ.ಬಿ.ಆರ್. ಡ್ರಾಮ ಕಂಪನಿ', 'ಮಾಸ್ಟರ್ ಹಿರಣ್ಣಯ್ಯನವರ ಮಿತ್ರಮಂಡಲಿ', 'ಕವಲಿ ಚನ್ನಬಸಪ್ಪನವರ ಕಂಪನಿ' ಇಲ್ಲೆಲ್ಲ ತನ್ನದೇ ಆದ ವಿಶಿಷ್ಟ ಪಾತ್ರ, ವೈವಿಧ್ಯಪೂರ್ಣ ಅಭಿನಯಕ್ಕೆ ಖ್ಯಾತರಾದರು.

ನಿಜ ನಾಮ ಎಚ್.ಎನ್. ಗೋಪಾಲರಾವ್ ಆದರೂ ಧೀರೇಂದ್ರ ಗೋಪಾಲ್ ಎಂದೇ ಇಂದಿಗೂ ಆಹ್ವಾನ ನಟರಾಗಿ ನಾಡಿನಾದ್ಯಂತ ಚಿರಪರಿಚಿತರು. ನಾಟಕಗಳ ಧ್ವನಿಸುರುಳಿ ಪ್ರಪಂಚದಲ್ಲಿ ತಮ್ಮ ವಿಶಿಷ್ಟ ಸ್ಥಾನ ಪಡೆದಿದ್ದಾರೆ. 50ಕ್ಕೂ ಹೆಚ್ಚು ಧ್ವನಿಸುರುಳಿ ತಯಾರಿಸಿದ್ದಾರೆ. ಪ್ರಸ್ತುತ ಹರಿಹರದಲ್ಲಿ ನೆಲೆಸಿದ್ದಾರೆ. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.





## ಡಿ. ಸುಬ್ಬರಾವ್ (ಪುರಸ್ಕಾರ)

ಕಲಾವಿದರನ್ನು ಬಹಳ ಹತ್ತಿರದಿಂದ ಕಂಡವರು, ಅವರಿಗೆ ಊಟೋಪಚಾರವನ್ನು ಸಕಾಲಿಕವಾಗಿ ಒದಗಿಸಿದ ಸಹೃದಯರು ಡಿ. ಸುಬ್ಬರಾವ್. ವೃತ್ತಿಯಲ್ಲಿ ಉಪಾಹಾರ ಮಂದಿರದ ಗುತ್ತಿಗೆದಾರರಾದರು. ಸ್ನೇಹ-ವಿಶ್ವಾಸದಿಂದ ಕಲಾವಿದರ, ಸಂಗೀತಗಾರರ, ನೃತ್ಯಗಾರರ ಹಾಗೂ ಯಕ್ಷಗಾನ ತಂಡದ ಒಡನಾಡಿಗಳಾದರು.

ಮೈಸೂರು ಜಿಲ್ಲೆಯ ಚಾಮರಾಜನಗರ ತಾಲ್ಲೂಕಿನವರಾದ ಇವರು ಬೆಂಗಳೂರಿನ 'ಪುರಭವನ'ದ ಉಪಾಹಾರ ಮಂದಿರವನ್ನು 15 ವರ್ಷಗಳಿಗೂ ಮೇಲ್ಪಟ್ಟು ಸುವ್ಯವಸ್ಥಿತವಾಗಿ ನಡೆಸಿದರು.

ಬೆಂಗಳೂರಿನ ತಿಗಳರ ಪೇಟೆಯಲ್ಲಿ 'ಆಂಜನೇಯ ಭಕ್ತಮಂಡಲಿ' ಎಂಬ ಸಂಸ್ಥೆಯನ್ನು ಕಟ್ಟಿ 50ಕ್ಕೂ ಹೆಚ್ಚು ಪೌರಾಣಿಕ, ಸಾಮಾಜಿಕ ನಾಟಕಗಳನ್ನು ಆಡಿಸಿದ್ದಾರೆ. ಇವರು ವಿದುರ, ಭೀಷ್ಮ, ಇತ್ಯಾದಿ ಪೌರಾಣಿಕ ಪಾತ್ರಗಳಲ್ಲಿ ಕಲಾಭಿಮಾನಿಗಳ ಮೆಚ್ಚುಗೆಗಳಿಸಿದ್ದಾರೆ. ಇವರು ದೂರದರ್ಶನ ಧಾರಾವಾಹಿಗಳಲ್ಲಿ ಮತ್ತು ಚಲನಚಿತ್ರಗಳಲ್ಲಿ ನಟಿಸಿದ್ದಾರೆ. ಆದರೆ ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಾಗ ಅಮಿತಾನಂದವನ್ನು ಕಂಡುಕೊಳ್ಳುವರು. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಗೀತಾ ರಾಮಾನುಜಂ (ಪುರಸ್ಕಾರ)

ತತ್ತ್ವಶಾಸ್ತ್ರ ಮತ್ತು ಇಂಗ್ಲೀಷ್‌ನಲ್ಲಿ ಸ್ನಾತಕೋತ್ತರ ಪದವೀಧರರಾದ ಇವರು ಬೆಂಗಳೂರಿನ ಜಯನಗರ ನ್ಯಾಷನಲ್ ಕಾಲೇಜಿನ ತತ್ತ್ವಶಾಸ್ತ್ರ ವಿಭಾಗದ ಮುಖ್ಯಸ್ಥರು. ಅಂತರರಾಷ್ಟ್ರೀಯ ಸಮ್ಮೇಳನ, ವಿಚಾರ ಸಂಕಿರಣಗಳಲ್ಲಿ ವಿದ್ವತ್ಪೂರ್ಣ ಪ್ರಬಂಧಗಳನ್ನು ಮಂಡಿಸಿದ್ದಾರೆ. ಅನೇಕ ಸಣ್ಣಕತೆ, ಕಾದಂಬರಿ, ಲೇಖನಗಳನ್ನು, ನಾಟಕಗಳನ್ನು ರಚಿಸಿದರುವ ಇವರು ಸಾಮಾಜಿಕ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಮಹಿಳೆಯರ ಕಾರ್ಯಚಟುವಟಿಕೆಗಳಲ್ಲಿ ವಿಶೇಷ ಆಸಕ್ತಿ, ಕಳಕಳಿಗಳನ್ನು ಹೊಂದಿದ್ದಾರೆ. ಆಕಾಶವಾಣಿ ಮತ್ತು ದೂರದರ್ಶನದಲ್ಲಿ ಇವರು ನಿರ್ದೇಶಿಸಿದ ಅನೇಕ ಕಾರ್ಯಕ್ರಮಗಳು ಪ್ರಸಾರಗೊಂಡಿವೆ. ರಂಗಭೂಮಿ ಇವರಿಗೆ ತೀರಾ ಆಪ್ತವಾದ ಮಾಧ್ಯಮ.

ಕಾಲೇಜು ವಿದ್ಯಾರ್ಥಿಗಳಲ್ಲಿ ಸುಪ್ತವಾಗಿರುವ ಪ್ರತಿಭೆಯನ್ನು ಗುರುತಿಸಿ, ಅಭಿವ್ಯಕ್ತಗೊಳ್ಳಲು ಸೂಕ್ತ ಪರಿಸರ ಒದಗಿಸುವಲ್ಲಿ ಪ್ರಯತ್ನಿಸುವರು. ಮಹಿಳಾ ನಾಟಕಕಾರರು ಅಪರೂಪವಾಗಿರುವಾಗ ಇವರು ಸ್ವತಃ ತಾವೇ ನಾಟಕ ರಚಿಸಿ, ನಿರ್ದೇಶಿಸುವರು. ಕಾಲೇಜು ರಂಗಸ್ಪರ್ಧೆಗಳಲ್ಲಿ ಹಲವಾರು ಪ್ರಶಸ್ತಿ, ಪಾರಿತೋಷಕಗಳನ್ನು ತಮ್ಮದಾಗಿಸಿಕೊಂಡಿದ್ದಾರೆ. ಇದುವರೆಗೆ 15ಕ್ಕೂ ಹೆಚ್ಚು ನಾಟಕಗಳನ್ನು ಬರೆದಿದ್ದಾರೆ.

ತಮ್ಮ ನಾಟಕಗಳಲ್ಲಿ ಸಮಕಾಲೀನ ಸಮಾಜದ ಸಮಸ್ಯೆಗಳ, ಸಂಗತಿಗಳ ಮತ್ತು ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಸ್ಥಾನ-ಮಾನದ ಕಡೆಗೆ ಗಮನ ಸೆಳೆಯುವರು. ವಸ್ತುನಿಷ್ಠ, ವೈಚಾರಿಕತೆಯನ್ನು ಮೈಗೂಡಿಸಿಕೊಂಡಿರುವ ಇವರು ಭರವಸೆಯನ್ನು ಮೂಡಿಸಬಲ್ಲ ಬರಹಗಾರರಾಗಿ ಬೆಳೆಯುತ್ತಿದ್ದಾರೆ. ಪ್ರಗತಿಪರ ಮಹಿಳಾ ವೇದಿಕೆ, ಸಂಘ-ಸಂಸ್ಥೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಇವರು ಸಾಹಿತ್ಯ, ಕಲೆ, ಸಂಗೀತದಲ್ಲಿ ವಿಶೇಷ ಅಭಿರುಚಿಯನ್ನು ಹೊಂದಿದ್ದಾರೆ. ಇವರು ಪ್ರಗತಿಶೀಲ ಧೋರಣೆಯುಳ್ಳವರು. 1990ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

# 1991ರ ಪ್ರಶಸ್ತಿ ವಿಜೇತರು



## ಚಿ.ನ. ಮಂಗಳ (ಫೆಲೋಷಿಪ್)

ಶಿಕ್ಷಣ ಕ್ಷೇತ್ರದಲ್ಲಿ ನುರಿತ ಆಡಳಿತಗಾರರಾಗಿ, ದೂರದೃಷ್ಟಿಯ ಶಿಕ್ಷಣ ತಜ್ಞರಾಗಿ ಖ್ಯಾತರಾಗಿರುವ ಪ್ರೊ॥ ಚಿ.ನ. ಮಂಗಳ ಅವರು ಬೆಂಗಳೂರಿನ ಎನ್.ಎಂ.ಕೆ.ಆರ್.ವಿ. ಮಹಿಳಾ ಕಾಲೇಜಿನಲ್ಲಿ ಪ್ರಾಚಾರ್ಯರಾಗಿದ್ದಾರೆ.

1938ರಲ್ಲಿ ಬೆಂಗಳೂರಿನಲ್ಲಿ ಜನನ. ಇಂಗ್ಲೀಷ್‌ನಲ್ಲಿ ಸ್ನಾತಕೋತ್ತರ ಪದವಿ ಪಡೆದ ಪ್ರೊ॥ ಚಿ.ನ. ಮಂಗಳ ಅವರು 30 ವರ್ಷಗಳಿಂದ ಸಾವಿರಾರು ಮಂದಿ ವಿದ್ಯಾರ್ಥಿಗಳಿಗೆ ಬೋಧನೆ ಮಾಡಿದ್ದಾರೆ.

ಎನ್.ಎಂ.ಕೆ.ಆರ್.ವಿ. ಮಹಿಳಾ ವಿದ್ಯಾಸಂಸ್ಥೆಯ ಬೆಳವಣಿಗೆಗಾಗಿ ಅನನ್ಯವಾಗಿ ದುಡಿದ ಮಂಗಳ ಅವರು ತಮ್ಮ ಸಂಸ್ಥೆಯನ್ನು ಶ್ರೇಷ್ಠ ವಿದ್ಯಾಸಂಸ್ಥೆಗಳಲ್ಲಿ ಒಂದು ಎಂದೆನಿಸಿದ್ದಾರೆ.

ವಿದ್ಯಾಭ್ಯಾಸವೆಂದರೆ ಸಮಗ್ರ ವ್ಯಕ್ತಿತ್ವದ ವಿಕಸನ ಎಂದು ನಂಬಿರುವ ಇವರು ಮಹಿಳೆಯರಿಗೆ ಸಂಬಂಧಿಸಿದ ಅಧ್ಯಯನಗಳಿಗೆ ವಿಶೇಷ ಗಮನ ನೀಡಿದ್ದಾರೆ. ಇವರು ಕಟ್ಟಿ ಬೆಳಸಿದ 'ಶಾಶ್ವತಿ' ಸಂಸ್ಥೆ ಪ್ರಖ್ಯಾತಗೊಂಡಿದೆ.

ಇವರು ಖ್ಯಾತ ಸಾಹಿತಿಗಳು ಹೌದು. ಇವರ 'ಹೆಲನ್ ಕೆಲ್ಲರ್' ಕೃತಿಗೆ ಕರ್ನಾಟಕ ರಾಜ್ಯ ಪ್ರಶಸ್ತಿ ಬಂದಿದೆ. ಇವರ ರೂಪಾಂತರ ನಾಟಕ 'ಎಲ್ಲರೂ ನನ್ನವರೇ' ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಮಲ್ಲಿಕಾ ಪ್ರಶಸ್ತಿ ಬಂದಿದೆ.

ಇವರು ಜೀವನ ಚರಿತ್ರೆ, ಕಾವ್ಯ, ಕಾದಂಬರಿ, ಪ್ರವಾಸ ಸಾಹಿತ್ಯ, ವಿಮರ್ಶೆ, ನಾಟಕ–ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ತೋರುದತ್, ನೈಟಿಂಗೇಲ್, ಕೆನಡಾ ಕವನಗಳು, ಅಭಾಗಿ, ಅಭಗಿನಿ ಫಾರ್ ಅಕ್ರಾಸ್ ದಿ ಸೀಸ್, ಕಾವ್ಯಕಲ್ಪನೆ, ಎಲ್ಲರೂ ನನ್ನವರೆ ಮುಂತಾದ ಒಟ್ಟು 16 ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. ಸಾಹಿತ್ಯ ಸೇವೆಗೆ ಹಲವು ಗೌರವ ಪ್ರಶಸ್ತಿಗಳು ಸಂದಿವೆ.

ಪ್ರೊ॥ ಚಿ.ನ. ಮಂಗಳ ಅವರು ಫುಲ್ ಬ್ರೈಟ್ ವಿದ್ವಾಂಸರಾಗಿ ಮಲೇಷಿಯದಲ್ಲಿ ಹಾಗೂ ಇಂಡೋ ಕೆನಡಿಯನ್ ಸಂಸ್ಥೆಯ ಫೆಲೋ ಆಗಿ ಅಮೆರಿಕ, ಇಂಗ್ಲೆಂಡ್, ಯುರೋಪ್, ಕೆನಡಾಗಳಲ್ಲಿ ವ್ಯಾಪಕ ಪ್ರವಾಸ ಮಾಡಿದ್ದಾರೆ.

ಬೆಂಗಳೂರು ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ತಮ್ಮ ವಿದ್ಯಾಸಂಸ್ಥೆಯಲ್ಲಿ ರಂಗ ಸಂಸ್ಕೃತಿ ವಾತಾವರಣ ನಿರ್ಮಿಸುವಲ್ಲಿ ಯಶಸ್ವಿಯಾಗಿದ್ದಾರೆ ಅಂತರ ತರಗತಿ ನಾಟಕ ಸ್ಪರ್ಧೆ, ಪ್ರತ್ಯೇಕ ಕಾಲೇಜು ರಂಗ ತಂಡ ಇವು ಕಾಲೇಜು ರಂಗಭೂಮಿಯನ್ನು ಸಮೃದ್ಧಗೊಳಿಸಿವೆ.

ಶಿಕ್ಷಣಕ್ಷೇತ್ರ ಮತ್ತು ನಾಡು, ನುಡಿಗೆ ಸಮರ್ಪಣಾ ಮನೋಭಾವದಿಂದ ಸೇವೆ ಸಲ್ಲಿಸುತ್ತಿರುವ ಮಂಗಳ ಅವರಿಗೆ ಕರ್ನಾಟಕ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ.

1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಜಿ.ವಿ. ಮಾಲತಮ್ಮ

ನಾಟಕ ರತ್ನ ಡಾ॥ ಗುಬ್ಬಿ ವೀರಣ್ಣ ಮತ್ತು ಜಿ. ಸುಂದರಮ್ಮ ಕಲಾಪ್ರವೀಣ ದಂಪತಿಗಳ ಮಗಳಾಗಿ ರಂಗಭೂಮಿಗೆ ಸಂದ ಕೊಡುಗೆ ಮಾಲತಮ್ಮ, ಅಭಿಜಾತ ಕಲಾವಿದೆ.

ಇವರಿಗೆ ರಂಗಭೂಮಿಯೇ ಪಾಠಶಾಲೆ. ಬಾಲ್ಯದಿಂದಲೂ ಅಕ್ಕ ಸ್ವರ್ಣಮ್ಮನವರೊಡನೆ ವಿದ್ಯಾಭ್ಯಾಸ, ರಂಗಾಭ್ಯಾಸ, ಸಂಗೀತಾಭ್ಯಾಸವೆಲ್ಲವೂ ನಡೆಯಿತು. ಸ್ಪಷ್ಟ ಉಚ್ಚಾರಣೆ, ಸಹಜಾಭಿನಯ, ಸುಶ್ರಾವ್ಯ ಕಂಠ ಮತ್ತು ಚೆಲುವಾದ ರೂಪ ಇವರನ್ನು ಜನರ ಮನಃಪಟಲದಲ್ಲಿ ಅಚ್ಚಳಿಯದೆ ನಿಲ್ಲಿಸಿದವು.

ನಾಲ್ಕನೆಯ ವಯಸ್ಸಿನಲ್ಲಿ ಪುಟ್ಟ ಗೋಪಿಯಾಗಿ ರಂಗ ಪ್ರವೇಶ. ನಂತರ ಬಾಲಕೃಷ್ಣ, ಪ್ರಹ್ಲಾದ, ಉತ್ತರಕುಮಾರ ಮೊದಲಾದ ಬಾಲ ಪಾತ್ರಗಳಲ್ಲಿ ಅಭಿನಯ. ಮುಂದೆ 'ರುಕ್ಮಿಣಿ ಸ್ವಯಂವರ'ದ ರುಕ್ಮಿಣಿ, 'ಸುಭದ್ರಾ ಪರಿಣಯ'ದ ಸುಭದ್ರೆ, ಸತ್ಯಭಾಮೆ, 'ಕೃಷ್ಣಲೀಲಾ'ದ ಯಶೋಧ, ರಾಧೆ ಮುಂತಾದ ಸೌಮ್ಯ ಪಾತ್ರಗಳಲ್ಲದೇ ಖಳನಾಯಕಿ ಪಾತ್ರ ವಹಿಸಿಯೂ ಮಾಲತಮ್ಮ ತಮ್ಮ ಪ್ರತಿಭೆಯಿಂದ ಮೆರೆಯುತ್ತಿದ್ದರು.

ಹೆಸರಾಂತ ನಟ ಕೆ.ಎಸ್. ಬಸವರಾಜುರವರ ಜೀವನ ಸಂಗಾತಿಯಾಗಿ ರಂಗಸೇವೆಯನ್ನು ಅವರ ಜೊತೆಯಲ್ಲಿಯೇ ಮುಂದುವರೆಸಿದರು. 'ಲವಕುಶ' ನಾಟಕದಲ್ಲಿ ರಾಮ–ಸೀತೆಯರಾಗಿ ಇವರಿಬ್ಬರ ಅಭಿನಯ ಅವಿಸ್ಮರಣೀಯ. ಗುಬ್ಬಿ ನಾಟಕ ಮಂಡಲಿಯ ಆಧಾರ ಸ್ತಂಭವಾದರು. ಜನರ ಪ್ರಶಂಸೆಯ ಮಹಾಪೂರವನ್ನೆ ಕಂಡರು.

ರಂಗಭೂಮಿಯಲ್ಲಿಯೇ ಅಭಿನಯಿಸುತ್ತಿರುವಾಗಲೇ ವಿದ್ಯುತ್ ಅಘಾತಕ್ಕೆ ಒಳಗಾಗಿ ತಮ್ಮೆರಡೂ ಕಾಲುಗಳನ್ನು ಕಳೆದುಕೊಂಡ ಮಾಲತಮ್ಮ, ವರ್ಷದೊಳಗೆ ಪತಿ ಬಸವರಾಜ್ ಅವರನ್ನು ಆಕಸ್ಮಿಕದಿಂದ ಕಳೆದುಕೊಂಡದ್ದು ವಿಧಿಯ ಕ್ರೂರಾಟ.

ಇವೆಲ್ಲವನ್ನು ಎದೆಗುಂದದೆ ಎದುರಿಸುತ್ತಾ ಹವ್ಯಾಸಿ ರಂಗದಲ್ಲಿ ಪೋಲಿ ಕಿಟ್ಟಿ, ಕುರುಡು ಕಾಂಚಾಣ ಮುಂತಾದ ನಾಟಕಗಳಲ್ಲಿ ಅಭಿನಯಿಸಿದರು. ಸಿನಿಮಾದಲ್ಲಿ ಕೂಡ ಪಾತ್ರ ವಹಿಸಿದರು. ಈಗಲೂ ತಮ್ಮ ಮಗಳು ಬಿ. ಜಯಶ್ರೀಯ ನಾಟಕಗಳಿಗೆ ಉಡುಗೆ ತೊಡುಗೆಯ ಜವಾಬ್ದಾರಿಯನ್ನು ಹೊತ್ತು ಸಮರ್ಥವಾಗಿ ನಿರ್ವಹಿಸುವರು. ತಮ್ಮ ಹೆಣ್ಣು ಮಕ್ಕಳು ಜಯಶ್ರೀ, ಪದ್ಮಶ್ರೀ ಇಬ್ಬರಿಗೂ ರಾಷ್ಟ್ರೀಯ ನಾಟಕ ಶಾಲೆ ದೆಹಲಿಯಲ್ಲಿ ಶಿಕ್ಷಣ ಕೊಡಿಸಿ ರಂಗ ಕಲಾಸೇವೆಗೆ ಅರ್ಪಿಸಿದ ಮಹಾಮಾತೆ ಮಾಲತಮ್ಮ ಎಂದರೆ ಅತಿಶಯೋಕ್ತಿಯಾಗಲಾರದು. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಕಲ್ಯಾಣ ಕುಮಾರ್

ಅರವತ್ತರ ದಶಕದಲ್ಲಿ ಕನ್ನಡ ಚಲನಚಿತ್ರರಂಗದ ಅತ್ಯಂತ ಜನಪ್ರಿಯ ನಾಯಕನಟನಾಗಿ ವಿಜೃಂಭಿಸಿದ ಕಲ್ಯಾಣಕುಮಾರ್ ರಂಗಭೂಮಿಯ ಕಲಾವಿದರು. 1934ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಎಸ್.ಎಸ್.ಎಲ್.ಸಿ. ಮುಗಿಸಿ ಸಿರಮಿಕ್ಸ್ ತರಬೇತಿಯಲ್ಲಿ ಸ್ವಲ್ಪಕಾಲ ವ್ಯಾಸಂಗ. 'ಲಲಿತಕಲಾ ಸಂಘ' ಎಂಬ ಹವ್ಯಾಸಿ ಸಂಸ್ಥೆಯ ಮೂಲಕ ಸುಮಾರು ನಾಟಕಗಳಲ್ಲಿ ಅಭಿನಯ, ಅದರಲ್ಲೂ ಹೆಚ್ಚಾಗಿ ಸ್ತ್ರೀ ಪಾತ್ರಗಳಲ್ಲಿಯೇ ರಾರಾಜಿಸಿದ್ದಾರೆ. 1959ರಲ್ಲಿ ಎಂ.ಸಿ. ಮಹದೇವಸ್ವಾಮಿಯವರ 'ಕನ್ನಡ ಥಿಯೇಟರ್ಸ್'ನಲ್ಲಿ 'ಸದಾರಮೆ' 'ಚಿನ್ನ ನನ್ನ ಅಣ್ಣ' ನಾಟಕಗಳಲ್ಲಿ ಪ್ರಮುಖ ಪಾತ್ರಗಳ ನಿರ್ವಹಣೆ. 150ಕ್ಕೂ ಮೀರಿದ ಪ್ರದರ್ಶನಗಳಾಯಿತು. 1962–63ರಲ್ಲಿ 'ಕಲ್ಯಾಣ ಥಿಯೇಟರ್ಸ್' ಎಂಬ ಸ್ವಂತ ತಂಡವನ್ನು ಕಟ್ಟಿ

ಕರ್ನಾಟಕದಾದ್ಯಂತ ನಾಟಕ ಪ್ರದರ್ಶನ. 'ಚಿಕ್ಕಮ್ಮ', 'ರಾಮ ನನ್ನ ತಮ್ಮ', 'ರಾವ್ ರಹೀಂವ್', 'ವರನೇ ನಿನ್ನ ಬೆಲೆ ಎಷ್ಟು' – ತಂಡದ ಪ್ರಮುಖ ನಾಟಕಗಳು. ತಂಡದಲ್ಲಿ ಹಿರಿಯರಾದ ನಾಗೇಂದ್ರರಾಯರು, ಶಿವರಾಂ, ಗಣಪತಿಭಟ್ಟ, ವಂದನಾ ಮುಂತಾದವರಿದ್ದರು.

ಇತರ ವೃತ್ತಿರಂಗಭೂಮಿ ತಂಡಗಳಲ್ಲಿ ಸಹ ಭಾಗವಹಿಸಿದ್ದಾರೆ. ಚಿಂದೋಡಿ ವೀರಪ್ಪನವರ 'ಕೆ.ಬಿ.ಆರ್. ಡ್ರಾಮಾ ಕಂಪನಿ'ಯಲ್ಲಿ ಬೆಳ್ಳಿ ಬಂಗಾರ, ಇಂಡಿಕೇಟ್–ಸಿಂಡಿಕೇಟ್ ಮತ್ತು 'ಗೋಕಾಕ್ ಕಂಪನಿ'ಯಲ್ಲಿ ಸಂಪತ್ತಿಗೆ ಸವಾಲ್, 'ಹುಚ್ಚೇಶ್ವರ ನಾಟ್ಯ ಸಂಘ'ದಲ್ಲಿ ಚೆನ್ನಪ್ಪ ಚೆನ್ನಗೌಡ, ಹೀಗೆ ಹಲವಾರು ನಾಟಕಗಳಲ್ಲಿ ಪ್ರಮುಖ ಪಾತ್ರ ವಹಿಸಿ ಜನಪ್ರಿಯರಾದರು.

1954ರಲ್ಲಿ ಚಲನಚಿತ್ರರಂಗಕ್ಕೆ 'ನಟಶೇಖರ' ಚಿತ್ರದ ಮೂಲಕ ಪ್ರವೇಶ ಕನ್ನಡದ ಮೊದಲ ವರ್ಣಚಿತ್ರ 'ಅಮರ ಶಿಲ್ಪಿ ಜಕಣಾಚಾರಿ'ಯ ನಾಯಕ ನಟರು. ಸದಾರಮೆ, ಬೆಳ್ಳಿಮೋಡ, ಭೂಕೈಲಾಸ ಹೀಗೇ ನೂರಾರು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ನಟ ನಿರ್ದೇಶಕರು, ನಿರ್ಮಾಣದಲ್ಲಿ ಪರಿಶ್ರಮವಿದೆ. ಕನ್ನಡ ಚಿತ್ರರಂಗದ 'ಕುಮಾರತ್ರಯರ'ರಲ್ಲಿ ಒಬ್ಬರಾಗಿ ಮೆರೆದ ಇವರಿಗೆ ನಾಟಕಗಳಲ್ಲಿ ಅಪಾರ ಒಲವಿದೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಚಿದಂಬರ ಕೃಷ್ಣ ಜೋಷಿ

1931ರಲ್ಲಿ ಧಾರವಾಡ ಜಿಲ್ಲೆಯ ಮಾಸೂರಿನಲ್ಲಿ ಹುಟ್ಟಿದರು. ಹರಿಶ್ಚಂದ್ರ ನಾಟಕದ ಲೋಹಿತಾಶ್ವನ ಪಾತ್ರ ವಹಿಸುವ ಮೂಲಕ ರಂಗಪ್ರವೇಶ. ಭಕ್ತ ಸುಧನ್ವ, ಮಹದೇವ ಮೈಲಾರ, ಚಿತ್ರಾಂಗದ ನಾಟಕಗಳಲ್ಲಿ ಬಾಲಪಾತ್ರಗಳಲ್ಲಿ ಜನಪ್ರಿಯರಾದರು.

ತಮ್ಮ ಹದಿನೈದನೇ ವಯಸ್ಸಿನಲ್ಲಿ ಜಮಖಂಡಿಯ 'ಗಜಾನನ ನಾಟಕ ಮಂಡಲಿ' ಸೇರಿ ಬಬ್ರುವಾಹನ, ಅಶ್ವತ್ಥಾಮ, ಅಭಿಮನ್ಯು ಮೊದಲಾದ ಪಾತ್ರಗಳನ್ನು ನಿರ್ವಹಿಸಿದರು. ದೊಡ್ಡವಾಡದ 'ಸಮಾಜ ವಿಕಾಸ ನಾಟ್ಯ ಸಂಘ' ಕಂಪನಿಯಲ್ಲಿ 'ಬಸವೇಶ್ವರ' ನಾಟಕದಲ್ಲಿ ಬಿಜ್ಜಳನಾಗಿ, 'ಸ್ತ್ರೀರತ್ನ', 'ಕುಂಕುಮ' ನಾಟಕಗಳಲ್ಲಿ ಖಳನಾಯಕನಾಗಿ, 'ಬಾಣಸಿಗ ಭೀಮ'ದಲ್ಲಿ ಭೀಮನಾಗಿ ಅಭಿನಯಿಸಿದ ಇವರ ಪಾತ್ರಗಳು ಬಹುಜನಪ್ರಿಯವಾಗಿದ್ದವು. ಮುಂದೆ ಇಬ್ಬರು ಮಿತ್ರರ ಜೊತೆಯಲ್ಲಿ 'ಕಲಾ ವಿಲಾಸಿ ನಾಟ್ಯ ಸಂಘ' ಗೋಕಾಕ ಈ ಹೆಸರಿನಲ್ಲಿ ನಾಟಕ ಕಂಪನಿಕಟ್ಟಿ ಆಗಲೂ 'ಅತ್ತಿಗೆ', 'ಮಲಮಗಳು', 'ಟಿಪ್ಪು ಸುಲ್ತಾನ್' ನಾಟಕಗಳಲ್ಲಿ ಕ್ರಮವಾಗಿ ಪೋಲೀಸ್ ವೆಂಕಣ್ಣ, ರಂಗಣ್ಣ ಟಿಪ್ಪುಸುಲ್ತಾನ್ ಪಾತ್ರಗಳಲ್ಲಿ ಅತ್ಯಂತ ಜನಮನ್ನಣೆ ಗಳಿಸಿದರು.

1968ರಲ್ಲಿ 'ಕರ್ನಾಟಕ ಕಲಾ ಸಂಘ, ಎಂಕಂಚಿ, ಸ್ವಂತ ಕಂಪನಿಯೊಂದನ್ನು ಸ್ಥಾಪಿಸಿ ನಡೆಸಿಕೊಂಡು ಬಂದರು. ಕಂಪನಿಯ ಮೊದಲ ನಾಟಕ 'ಲಂಬಾಣಿ ಹುಡುಗಿ' 'ದುಡಿ–ಸುಖಪಡಿ' ನಾಟಕದ ವರದಣ್ಣನ ಪಾತ್ರದಲ್ಲಿ ಅತ್ಯಂತ ಜನಪ್ರಿಯರಾದರು. ಕರ್ನಾಟಕ ಮಾತ್ರವಲ್ಲ ನೆರೆ ರಾಜ್ಯಗಳಲ್ಲಿಯೂ ಮಹಾರಾಷ್ಟ್ರ, ಆಂಧ್ರದಲ್ಲೂ ಸುತ್ತಾಡಿ ನಾಟಕ ಪ್ರದರ್ಶಿಸಿದರು. 20 ವರ್ಷಗಳವರೆಗೆ ದೀರ್ಘವಾಗಿ ನಡೆದುಕೊಂಡು ಬಂದ ಕಂಪನಿ 1989ರಲ್ಲಿ ಹಲವಾರು ಸಮಸ್ಯೆಗಳಿಂದ ಬಂದಾಯಿತು. ಇವರ ಕಂಪನಿಯ ಪ್ರಮುಖ ಕಲಾವಿದರೆಂದರೆ ಶ್ರೀ ಬಿ.ಕೆ. ಹೆಬ್ಬಾಳಮಠ, ಬಿ. ಬಸವಲಿಂಗಪ್ಪಶಾಸ್ತ್ರಿಗಳು, ನಂದಾರಾಣಿ, ಸಣ್ಣಿಂಗಿ ಲಲಿತವ್ವ, ರಂಗಭೂಮಿಯಲ್ಲಿಯೇ ನಿವೃತ್ತಿ ಹೊಂದಿದ ಚಿದಂಬರ ಜೋಶಿ ಅವರು ಈಗ ಅನಾರೋಗ್ಯದಲ್ಲಿ ಬಳಲುತ್ತಿದ್ದರೂ ನಾಟಕ, ಕಂಪನಿ ವಿಷಯ ಬಂದಾಗ ಚೇತರಿಸಿಕೊಳ್ಳುತ್ತ ಆಸಕ್ತಿಯಿಂದ ಮಾತನಾಡುತ್ತಾರೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಕೀರ್ತಪ್ಪ ಇಳಕಲ್

ಕೀರ್ತಪ್ಪ ಇಳಕಲ್ ಉತ್ತರ ಕರ್ನಾಟಕದ ರಂಗಪ್ರಿಯರಿಗೆ ಚಿರಪರಿಚಿತವಾದ ಹೆಸರು. ಹತ್ತು ವರುಷದವರಾಗಿದ್ದಾಗಲೇ ಕೀರ್ತಪ್ಪ ಕೊಪ್ಪಳದ ಶಂಕರಪ್ಪನವರು ಬರೆದ ರಾಮಾಯಣ, ವನಕಾಂಡ, ಯುದ್ಧಕಾಂಡ, ಬಯಲಾಟಗಳಿಂದ ಬಣ್ಣದ ಬದುಕಿಗಿಳಿದರು.

ವೃತ್ತಿ ಕಂಪನಿಗಳಲ್ಲಿ ಅಭಿನಯಿಸಲು ಆರಂಭಿಸಿದ ಕೀರ್ತಪ್ಪನವರು ಬಹು ಬೇಡಿಕೆಯ ನಟರಾಗಿ – 'ಕೆ.ಬಿ.ಆರ್. ಡ್ರಾಮಾ ಕಂಪನಿ' ದಾವಣಗೆರೆ, 'ಶ್ರೀಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ' ಸೂಡಿ, 'ರಾಘವೇಂದ್ರ ಕೃಪಾ ಪೋಷಿತ ನಾಟ್ಯ ಸಂಘ' ದಾವಣಗೆರೆ, 'ಹುಚ್ಚೇಶ್ವರ ನಾಟ್ಯ ಸಂಘ' ಕಮತಗಿ, 'ಲಲಿತ ಕಲಾ ನಾಟ್ಯ ಸಂಘ' ಬಳ್ಳಾರಿ, 'ಮಹಾಕೂಟೇಶ್ವರ ನಾಟ್ಯ ಸಂಘ' ಕಾಕನೂರ, 'ಸಂಗಮೇಶ್ವರ ನಾಟ್ಯ ಸಂಘ' ಗುಡಗೇರಿ. 'ಬನಶಂಕರಿ ನಾಟ್ಯ ಸಂಘ' ಇಳಕಲ್ ಹೀಗೆ ನಾಡಿನ ಮುಕ್ಕಾಲು ಕಂಪನಿಗಳಲ್ಲಿ ನಲವತ್ತು ವರ್ಷ ವೈವಿಧ್ಯಮಯ ಪಾತ್ರಗಳನ್ನು ಮಾಡಿದ್ದಾದರೂ ಮಿಂಚಿದ್ದು ಹಾಸ್ಯ ಪಾತ್ರದಲ್ಲಿ.

ಕಂದಗಲ್ಲ ಹನುಮಂತರಾಯರ, ಎಚ್.ಎನ್. ಹೂಗಾರ, ಕೆ.ಎನ್. ಸಾಳುಂಕೆ, ಅರಿಸಿಣಗೋಡಿ ಧುತ್ತರಗಿ, ಮಾಡ್ರೆ, ಮಹಾಂತೇಶಶಾಸ್ತ್ರಿ ಮುಂತಾದ ಹೆಸರಾಂತ ನಾಟಕಕಾರರ ನಾಟಕಗಳಲ್ಲಿ ಹಾಸ್ಯಪಾತ್ರ ಮಾಡಿದ ಕೀರ್ತಪ್ಪ ಶುದ್ಧ ಅಭಿರುಚಿಯ ಕಲೆಗೆ ಹೆಸರಾದರು. ಅನೇಕ ಸಂಘ, ಸಂಸ್ಥೆಗಳು ಇವರನ್ನು ಸನ್ಮಾನಿಸಿವೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಆರ್. ಪರಮಶಿವನ್

ಅಭಿನಯ ಹಾಗೂ ಸಂಗೀತದಲ್ಲಿ ಹೆಸರಾದ ಪರಮಶಿವನ್ ಅವರಿಗೆ ರಂಗಭೂಮಿಯಲ್ಲಿ ಅಪಾರ ಒಲವು.

1936ರಲ್ಲಿ 'ಚಾಮುಂಡೇಶ್ವರಿ ಕಂಪನಿ'ಯಲ್ಲಿ ನಾಟಕಗಳಲ್ಲಿ ಪಾತ್ರವಹಿಸಲು ಆರಂಭಿಸಿದರು. ಇದಾದ ನಂತರ ಹಿಂತಿರುಗಿ ನೋಡಲೇ ಇಲ್ಲ. ಗುಬ್ಬಿ ಕಂಪನಿ, ಕೆ. ಹಿರಣ್ಣಯ್ಯ ಮಿತ್ರ ಮಂಡಲಿ, ಎ.ಎನ್. ಶೇಷಾಚಾರ್ ಕಂಪನಿ, ಮುರಾಚಾರ್ ಕಂಪನಿ, ಎಚ್.ವಿ. ಸುಬ್ಬಯ್ಯನಾಯ್ಡುರವರ ಕಂಪನಿ. ನಾಗರತ್ನಮ್ಮನವರ ಸ್ತ್ರೀ ನಾಟಕ ಮಂಡಲಿ, ಬಳ್ಳಾರಿ ಲಲಿತಮ್ಮನವರ ಕಂಪನಿ – ನಾಡಿನ ಬಹುಪಾಲು ಕಂಪನಿಗಳಲ್ಲಿ ದುಡಿಮೆ.

ನಟನಾಗಿ ಅಭಿನಯಿಸುವುದರೊಡನೆ ನಾಟಕಗಳಿಗೆ ಸಂಗೀತ ನಿರ್ದೇಶಿಸುತ್ತಿದ್ದರು. ಇದುವರೆಗೂ 50ಕ್ಕೂ ಹೆಚ್ಚು ನಾಟಕಗಳಿಗೆ ಸಂಗೀತ ನೀಡಿದ್ದಾರೆ. ಆಕಾಶವಾಣಿ ಮತ್ತು ದೂರದರ್ಶನದಲ್ಲಿ ಇವರ ಹಲವಾರು ಕಾರ್ಯಕ್ರಮಗಳು ಪ್ರಸಾರಗೊಂಡಿವೆ. ಸಂಗೀತ ನಿರ್ದೇಶಕರಾಗಿ ಖ್ಯಾತಿ ಪಡೆದಿದ್ದಾರೆ. ದೆಹಲಿಯ ಎನ್.ಸಿ.ಇ.ಆರ್.ಟಿ. ಸಾದರ ಪಡಿಸಿದ ರಾಷ್ಟ್ರೀಯ ಭಾವೈಕ್ಯತೆ ಶಿಬಿರಗಳಲ್ಲಿ ಸಂಗೀತ ತಜ್ಞನಾಗಿ ಕಾರ್ಯ ನಿರ್ವಹಣೆ. ಮಾಜಿ ಪ್ರಧಾನಿ ದಿ. ರಾಜೀವ ಗಾಂಧಿಯವರ ಸಮ್ಮುಖದಲ್ಲಿ 45 ನಿಮಿಷಗಳ ಹಾರ್ಮೋನಿಯಂ ವಾದನ.

ರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲ್ಪಟ್ಟಿರುವ ಆರ್. ಪರಮಶಿವನ್ ಇಂದಿಗೂ ರಂಗ ಕೈಂಕರ್ಯಕ್ಕೆ ಮುಂದಾಗುತ್ತಾರೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಕೃಷ್ಣಾಜಿ ದೇಶಪಾಂಡೆ

ಜಾನಪದ ರಂಗಭೂಮಿಯ ವಿಶಿಷ್ಟ ಕಲಾ ಪ್ರಕಾರವಾದ ಶ್ರೀ ಕೃಷ್ಣ ಪಾರಿಜಾತ ಬಯಲಾಟದ 'ಏಕಮೇವ ಭಾಗವತ ಬಂಟ', 'ಜಾನಪದ ಕಲಾಕೇಸರಿ' ಎಂಬ ಬಿರುದಾಂಕಿತರಾಗಿ ಧೀಮಂತ ಕಲಾವಿದರೆನಿಸಿದ್ದಾರೆ.

ಶ್ರೀ ಕೃಷ್ಣ ಪಾರಿಜಾತಕ್ಕಾಗಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟಿರುವ ದೇಶಪಾಂಡೆಯವರು, ಹಿಂದುಳಿದ ವರ್ಗದಲ್ಲಿಯೇ ಬಹಳಷ್ಟು ಅನಕ್ಷರಸ್ಥ ಮಹಿಳೆಯರನ್ನು, ಪುರುಷರನ್ನು ತಿದ್ದಿ, ನಾಟ್ಯ ಶಿಕ್ಷಣ ನೀಡಿ ಬಹಳಷ್ಟು ಉತ್ತಮ ಜಾನಪದ ಕಲಾವಿದರನ್ನು ತಯಾರು ಮಾಡಿದ ಶ್ರೇಯಸ್ಸು ಪಡೆದಿದ್ದಾರೆ. ದೇಶಪಾಂಡೆಯವರು ಬಿಜಾಪುರ ಜಿಲ್ಲೆಯ ಲೋಕಾಪೂರ ಗ್ರಾಮದಲ್ಲಿ ಸುಸಂಸ್ಕೃತ ಮನೆತನದಲ್ಲಿ ಜನಿಸಿದರು. ಅನಿವಾರ್ಯ ಕಾರಣಗಳಿಂದ ಮಾಧ್ಯಮಿಕ ಶಿಕ್ಷಣಕ್ಕೆ ಓದು ನಿಂತಿತು. 16ನೆಯ ವಯಸ್ಸಿಗೆ ಭಾರತ ಸೇನೆ ಸೇರಿದರು.

ಹೆತ್ತವರ ಒತ್ತಾಯದಿಂದಾಗಿ ಸೇನೆಯಿಂದ ಹಿಂತಿರುಗಿ ತಮ್ಮೂರಿನ ಜಮೀನುಗಳ ಒಕ್ಕಲುತನ ಮಾಡುತ್ತಿದ್ದರೂ–ಇವರೊಳಗಿನ ಕಲಾವಿದ ದೇಶಪಾಂಡೆಯವರನ್ನು ಕಾಡುತ್ತಲೇ ಇದ್ದ. ಹೀಗಾಗಿ ಬಹಳಷ್ಟು ಹವ್ಯಾಸಿ ನಾಟಕಗಳಲ್ಲಿ ಮೈಸೂರು ನಾಟಕ ಕಂಪನಿ, ಇನಾಂದರ್ ನಾಟಕ ಕಂಪನಿಗಳಲ್ಲಿ ಟಿಪ್ಪು ಸುಲ್ತಾನ, ಶ್ರೀ ಕೃಷ್ಣಲೀಲಾ, ಅಣ್ಣತಮ್ಮ, ರಕ್ತರಾತ್ರಿ ಮುಂತಾದ ನಾಟಕಗಳನ್ನು ಅಭಿನಯಿಸಿ, ನಿರ್ದೇಶಿಸಿ ಹೆಸರಾದರು.

1956ರಲ್ಲಿ ತಮ್ಮ ಮನೆಯಲ್ಲೇ ಕೃಷ್ಣ ಪಾರಿಜಾತಕ್ಕೆ ಬಾಲ ಕಲಾವಿದರನ್ನು ಆಣಿಮಾಡಿ ಅಗಸನ ಕೊಪ್ಪದಲ್ಲಿ ಪ್ರಪ್ರಥಮ ಪ್ರದರ್ಶನ ನೀಡಿದಾಗ 'ಪಾರಿಜಾತ' ಜಯಭೇರಿ ಹೊಡೆಯಿತು. ಪಾರಿಜಾತ ಕಲೆಯ ಬಗ್ಗೆ ಹೆಚ್ಚಿನ ಅಧ್ಯಯನಕ್ಕೆ ಪರಿಣತರನ್ನು ಕಂಡು ಆಶ್ರಯಿಸಿದರು. 8–10 ವರ್ಷ ಈ ಸಂಘ ಮನೆ ಮಾತಾಯಿತು. ಇವರು 'ಶ್ರೀ ಕೃಷ್ಣ ಪಾರಿಜಾತ'ವನ್ನು ಸತತವಾಗಿ 3–4 ದಿನಗಳ ಕಾಲ ಅಭಿನಯಿಸಿ ಸಹಸ್ರಾರು ಪ್ರೇಕ್ಷಕರನ್ನು ನಕ್ಕು ನಲಿಸಿ ಜಾನಪದ ಕಲಾ ಲೋಕದಲ್ಲೇ ಹೊಸ ದಾಖಲೆ ಸ್ಥಾಪಿಸಿದರು.

ದೇಶಪಾಂಡೆಯವರು ಮುಖ್ಯವಾಗಿ ಹಿಂದುಳಿದ ವರ್ಗದಲ್ಲೇ ಅನಕ್ಷರಸ್ಥರನ್ನು ಸೇರಿಸಿಕೊಂಡು ತರಬೇತಿ ನೀಡಿದ್ದಾರೆ. ಬಹಳಷ್ಟು ಕಲಾವಿದರು ಪಾರಿಜಾತದಿಂದ ಹೆಸರಾದರು. ಇಂದು ದೇಶಪಾಂಡೆಯವರ ಹೆಸರು ಹೇಳುವ ಕಲಾವಿದರನೇಕರು ನಾಡಿನಾದ್ಯಂತ ಪ್ರಸಿದ್ಧರಾಗಿದ್ದಾರೆ. ದೇಶಪಾಂಡೆಯವರು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಜಾನಪದ ರಂಗಭೂಮಿಯ ಅಗ್ರಪಂಕ್ತಿಗೆ ಸಂದಿರುವ ಶ್ರೇಷ್ಠ ಕಲಾವಿದರು. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಚಂದ್ರಕಾಂತ ಕುಸನೂರ

ನಾಟಕಕಾರ ಕುಸನೂರರು, ಅಸಂಗತ ನಾಟಕಗಳ ರಚನೆಯಲ್ಲಿ ಹೆಸರಾದವರು. 1931ರಲ್ಲಿ ಜನನ. ಊರು ಗುಲ್ಬರ್ಗ, ಎಂ.ಎ. ಮತ್ತು ಬಿ.ಇಡಿ. ಶಿಕ್ಷಣ ಪಡೆದು, ಸರ್ಕಾರಿ ಸೇವೆಗೆ ಸೇರಿದರು. ಕನ್ನಡದೊಡನೆ ಹಿಂದಿ, ಮರಾಠಿ, ಉರ್ದು, ಇಂಗ್ಲಿಷ್ ಭಾಷೆಗಳನ್ನು ಬಲ್ಲರು. ಸುಮಾರು 15 ನಾಟಕಗಳನ್ನು ಬರೆದಿದ್ದಾರೆ. ವಿದೂಷಕ, ಇದಕೆ ಸಂಶಯವಿಲ್ಲ, ಮಹಾಪುರುಷ, ಹಳ್ಳಕೊಳ್ಳ ನೀರು ಮುಂತಾದವು. ಕುಸನೂರರ ನಾಟಕಗಳು ಅಸಂಗತವಾದಂತೆ ಭಾರತೀಯ ತಾತ್ವಿಕ ಪರಂಪರೆಯ ಚಿಂತನವನ್ನು ಒಳಗೊಂಡಿವೆ.

ಕರ್ನಾಟಕ ಸಾಹಿತ್ಯ ಅಕಾಡೆಮಿಯು ಇವರ 'ನಾಲ್ಕು ಅಸಂಗತ ನಾಟಕಗಳು' ಮತ್ತು 'ಯಾತನಾ ಶಿಬಿರ' ಕಾದಂಬರಿಗೆ ಬಹುಮಾನ ನೀಡಿದೆ. ಗುಲ್ಬರ್ಗಾದಲ್ಲಿ 'ರಂಗಮಾಧ್ಯಮ' ನಾಟಕ ಸಂಸ್ಥೆಯನ್ನು ಗಿರಡ್ಡಿ ಗೋವಿಂದರಾಜರ ಜೊತೆಯಲ್ಲಿ ಸ್ಥಾಪಿಸಿದರು. ಅಲ್ಲಿ ಹವ್ಯಾಸಿರಂಗ ಕ್ರಿಯಾಶೀಲವಾಗಿಡುವಲ್ಲಿ ಸತತವಾಗಿ ಶ್ರಮಿಸಿದರು. ನಾಟಕಗಳಿಗೆ ನಿರ್ದೇಶನ ಮಾಡುವುದರೊಡನೆ, ಸಂಗೀತವನ್ನು ನೀಡಿದ್ದಾರೆ. ಸಂಗೀತ–ಚಿತ್ರಕಲೆಯಲ್ಲಿ ಅಪಾರ ಆಸಕ್ತಿಯಿದೆ. ಕೆಲವು ಕಾಲ ನಾಟಕ ಅಕಾಡೆಮಿಯ ಸದಸ್ಯರಾಗಿದ್ದರು.

ನಾಟಕ ರಚನೆಯೊಡನೆ ಕವನ, ಕಾದಂಬರಿ, ಕಲೆಗೆ ಸಂಬಂಧಿಸಿದ ಲೇಖನಗಳನ್ನು ಬರೆದಿದ್ದಾರೆ. ಇವರು ಹಿಂದಿ ಭಾಷೆಯಲ್ಲಿ ಪಾಂಡಿತ್ಯ ಗಳಿಸಿದ್ದಾರೆ. ಅನಂತಮೂರ್ತಿಯವರ 'ಸಂಸ್ಕಾರ' ಕೃಷ್ಣ ಆಲನಹಳ್ಳಿಯವರ 'ಕಾಡು' ಕಾದಂಬರಿಗಳನ್ನು ಹಿಂದಿಗೆ ಅನುವಾದಿಸಿದ್ದಾರೆ. 'ಸಂಸ್ಕಾರ'ದ ಹಿಂದಿ ಅನುವಾದಕ್ಕೆ ಕೇಂದ್ರ ಸರ್ಕಾರದ ಮತ್ತು ಉತ್ತರಪ್ರದೇಶ ಸರ್ಕಾರದ ಪ್ರಶಸ್ತಿಗಳು ದೊರೆತಿವೆ. ಹಿಂದಿ ಭಾಷೆಯಲ್ಲಿ 'ರೇಶಮ್ ಕಿ ಗುಡಿಯಾ' ಎಂಬ ಕಥಾ ಸಂಕಲನ ಹೊರತಂದಿದ್ದಾರೆ. ಈ ಕೃತಿಗೆ ಕೇಂದ್ರ ಸರ್ಕಾರದ ಪ್ರಶಸ್ತಿ ದೊರೆತಿದೆ. ಇವರ ಹಿಂದಿ ನಾಟಕಕ್ಕೆ ಬಹುಮಾನ ಬಂದಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ನಿವೃತ್ತರಾದ ಇವರು ಇಂದಿಗೂ ರಂಗಭೂಮಿಯಲ್ಲಿ ಕ್ರಿಯಾಶೀಲರು. ರಂಗಾಸಕ್ತಿಯನ್ನು ಇನ್ನೂ ಉತ್ಸಾಹದಿಂದ ವಿಸ್ತರಿಸಿಕೊಳ್ಳುತ್ತಿದ್ದಾರೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ಸಿ.ಜಿ. ಕೃಷ್ಣಸ್ವಾಮಿ

ಸಿ.ಜಿ.ಕೆ. ಎಂದೇ ಹೆಸರಾಗಿರುವ ಕೃಷ್ಣಸ್ವಾಮಿ, ಸಿ.ಜಿ. ಖ್ಯಾತ ನಿರ್ದೇಶಕರು, ಸಂಘಟಕರು, ಬೆಳಕು ತಜ್ಞರು, ರಂಗಕರ್ಮಿಗಳು ಒಂದೇ ಮಾತಿನಲ್ಲಿ ಹೇಳುವುದಾದರೆ ಆಲ್‌ರೌಂಡರ್. 1950ರಲ್ಲಿ ಜನನ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಅರ್ಥಶಾಸ್ತ್ರದ ಅಧ್ಯಾಪಕರು. ಕರ್ನಾಟಕ ರಾಜ್ಯ ಸಮುದಾಯ ಸಮನ್ವಯ ಸಮಿತಿಯ ಸ್ಥಾಪಕ ಕಾರ್ಯದರ್ಶಿಯಾಗಿ 10 ವರ್ಷ ದುಡಿದು, ನಂತರ ಎರಡು ವರ್ಷ ಅಧ್ಯಕ್ಷ ಪದವಿಯಲ್ಲಿದ್ದವರು. ಇಡೀ ಕರ್ನಾಟಕವನ್ನೇ ಎರಡು ಬಾರಿ ಸಾಂಸ್ಕೃತಿಕ ಜಾಥದಿಂದ ಸುತ್ತಿಬಂದ ಯಶಸ್ವಿನ ಸಂಘಟಕರು. ರಂಗಭೂಮಿ ಕ್ರಿಯಾ ಸಮಿತಿಯ ಸ್ಥಾಪಕ ಸದಸ್ಯ, ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ ಬಂಡಾಯ ಸಾಹಿತ್ಯ ಸಂಘಟನೆಯ ಸ್ಥಾಪಕ ಸದಸ್ಯ ಹಾಗೂ ಕಾರ್ಯದರ್ಶಿ. ರಂಗನಿರಂತರ ತಂಡ ಕಟ್ಟಿ 150 ದಿನಗಳ ಕಾಲ ಸತತ ರಂಗ ಪ್ರದರ್ಶನ ವ್ಯವಸ್ಥೆ ಮಾಡಿದ ಕೀರ್ತಿ ಸಿ.ಜಿ.ಕೆ.ಗಿದೆ.

ಸಿ.ಜಿ.ಕೆ. ನಿರ್ದೇಶಕರಾಗಿ ಹಲವು ತಂಡಗಳಿಗೆ ಬಹಳಷ್ಟು ಪ್ರಯೋಗ ಮಾಡಿದ್ದಾರೆ. 'ಸಮುದಾಯ'ಕ್ಕೆ ಬೆಲ್ಚಿ, ಪಂಚಮ, 'ಚಿತ್ರಾ ಕಲಾವಿದರಿಗೆ' ಅಲ್ಲೇ ಇದ್ದೋರು, 'ರಂಗಸಂಪದ'ಕ್ಕೆ ಸನ್ನಿವೇಶ, ಯಯಾತಿ, ಮಹಾಚೈತ್ರ, ನೀಗಿಕೊಂಡ ಸಂಸ, ಒಡಲಾಳ, 'ಮೈಕ್ರೋಫೈನ್ ಆರ್ಟ್ಸ್'ಗೆ ಜೂಲಿಯಸ್ ಸೀಸರ್, 'ಬೆಮೆಲ್ ಕೆ.ಜಿ.ಎಫ್.ಗೆ ಒಥೆಲೊ, 'ಗೆಳೆಯರ ಬಳಗ' ಮಂಡ್ಯಕ್ಕೆ ತಬರನ ಕಥೆ, 'ಪ್ರಯೋಗ ರಂಗ', 'ರಂಗ ನಿರಂತರ'ಗಳಿಗೆ ಕನಕ, ಸುಲ್ತಾನ್‌ಟಿಪ್ಪು, ಷೇಕ್ಸ್‌ಪಿಯರನ ಸ್ವಪ್ನ, ಮಹಾನೌಕೆ–ಸಿ.ಜಿ.ಕೆ. ನಿರ್ದೇಶನದ ವೈಶಿಷ್ಟ್ಯಕ್ಕೆ ಮಾದರಿಗಳು. ಇದುವರೆಗೆ ಸುಮಾರು 75 ನಾಟಕಗಳಿಗೆ ಬೆಳಕು ಸಂಯೋಜನೆ ಮಾಡಿದ್ದಾರೆ. 'ಬೆಲ್ಚಿ' 'ಅಲ್ಲೇ ಇದ್ದೋರು' ಬೀದಿ ನಾಟಕಗಳನ್ನು ರಚಿಸಿದ್ದಾರೆ. ಕನ್ನಡದ ಖ್ಯಾತ ಬರಹಗಾರರಾದ ಚಿತ್ತಾಲರ 'ಅಬೋಲಿನಾ' ಮತ್ತು ದೇವನೂರ ಮಹಾದೇವರ 'ಒಡಲಾಳ' ಕೃತಿಗಳನ್ನು ರಂಗಕ್ಕೆ ರೂಪಾಂತರಿಸಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ದೂರದರ್ಶನ ಆಯ್ಕೆ ಸಮಿತಿಯ ಸದಸ್ಯರು. ರಷ್ಯಾದಲ್ಲಿ ನಡೆದ 'ಸ್ತಾನಿಸ್ಲಾವ್‌ಸ್ಕಿ – ವಿಚಾರ ಗೋಷ್ಠಿ'ಯಲ್ಲಿ ಭಾಗವಹಿಸಿದ್ದಾರೆ. ರಂಗಚಳುವಳಿಯ ನಿರ್ಮಾಣದಲ್ಲಿ ಕಳಕಳಿ ಇರುವ ಜೀವ ಸಿ.ಜಿ.ಕೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.



## ತಿರುಕಪ್ಪ ಕಾಗಿನಲ್ಲಿ

1935ರಲ್ಲಿ ಜನನ. ಶಿವಮೊಗ್ಗ ಜಿಲ್ಲೆಯ ಕಾಗಿನಲ್ಲಿ ಗ್ರಾಮದವರು. ಎಳೆತನದಿಂದ ರಂಗ ಕಲೆಯಲ್ಲಿ ಆಸಕ್ತರು. ಹಾಗಾಗಿ ವಿದ್ಯಾಭ್ಯಾಸ ಹೈಸ್ಕೂಲಿನವರೆಗೆ ನಿಂತಿತು. ಸ್ವ ಪರಿಶ್ರಮದಿಂದ ಕಲೆಯ ಕೃಷಿ ಮಾಡಿ ಸಿದ್ಧಿ ಪಡೆದವರು. ಹೇಮರೆಡ್ಡಿ ಮಲ್ಲಮ್ಮ, ಚಿತ್ರಾಂಗದ, ಸತ್ಯಹರಿಶ್ಚಂದ್ರ, ಕೃಷ್ಣಗಾರುಡಿ ಮುಂತಾದ ಪೌರಾಣಿಕ ನಾಟಕಗಳಲ್ಲಿನ ಮುಖ್ಯ ಪಾತ್ರಗಳಲ್ಲಿ ಅಭಿನಯಿಸಿದ ಪ್ರತಿಭಾವಂತ ನಟರು.

ಸುಮಾರು ತಂಡಗಳನ್ನು ಕಟ್ಟಿ ನೂರಕ್ಕೂ ಹೆಚ್ಚು ಕಲಾವಿದರನ್ನು ತಯಾರು ಮಾಡಿ, ನಾಟಕಗಳನ್ನು ನಿರ್ದೇಶಿಸಿದ್ದಾರೆ. ಸಂಗೀತ, ಹಾರ್ಮೋನಿಯಂ ಬಲ್ಲವರು. ಸುಮಾರು ಮಂದಿಗೆ ಸಂಗೀತ ಶಿಕ್ಷಣ ನೀಡಿದ್ದಾರೆ. ಕಾಗಿನಲ್ಲಿಯ 'ಪುಟ್ಟಣ್ಣ ಕಣಗಾಲ್ ರಂಗಮಂದಿರ'ದ ನಿರ್ಮಾಣಕ್ಕೆ ಕಾರಣಕರ್ತರು. ಇತ್ತೀಚೆಗಷ್ಟೆ ಸತ್ಯಹರಿಶ್ಚಂದ್ರ ನಾಟಕದ ಪ್ರದರ್ಶನದಲ್ಲಿ ರಂಗದ ಮೇಲೆ ಅಭಿನಯಿಸುತ್ತಿರುವಾಗಲೇ ಪಾರ್ಶ್ವವಾಯುಗೆ ತುತ್ತಾದರೂ ಸಹ ಮುಕ್ತಾಯದವರೆಗೆ ಎಲ್ಲೂ ಚ್ಯುತಿ ಬರದಂತೆ ನಿರ್ವಹಿಸಿದರು. ಇದು ಅವರ ರಂಗಭೂಮಿಯ ಒಲವು. ಈಗಲೂ ಸಹ ಮಲಗಿರುವಲ್ಲೆಯೆ ರಂಗ ಗೀತೆಗಳನ್ನು ಮೆಲುಕು ಹಾಕುತ್ತಿದ್ದರು. ಪ್ರಶಸ್ತಿ ಸ್ವೀಕರಿಸಲು ಒಪ್ಪಿಗೆ ನೀಡಿದ ತಿರುಕಪ್ಪನವರನ್ನು ಇತ್ತೀಚೆಗೆ ವಿಧಿ ತನ್ನ ಮಡಿಲಿಗೆ ಹಾಕಿಕೊಂಡು ವಂಚಿಸಿದೆ. ಅಕಾಡೆಮಿಯು ವಿಷಾದದಿಂದ ಅವರಿಗೆ ಪ್ರಶಸ್ತಿಯನ್ನು ನೀಡಲಾಗುತ್ತಿದೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪ್ರಶಸ್ತಿ ನೀಡಿ ಸನ್ಮಾನಿಸಿದೆ.

---



## ಹೆಚ್.ಟಿ. ಅರಸ್ (ಪುರಸ್ಕಾರ)

ಪ್ರೇಕ್ಷಕರು ತಾವು ನೋಡುತ್ತಿರುವುದು ನಾಟಕವೆಂಬುದನ್ನು ಮರೆತು ಆತಂಕದಿಂದ ರಂಗಸ್ಥಳಕ್ಕೆ ನುಗ್ಗಿ ಆವೇಶ ಭರಿತರಾಗಿ ಖಳ ಪಾತ್ರಧಾರಿಯನ್ನು ತಡೆದು ಶಪಿಸುವ ಹಂತ ತಲುಪುವಂತಹ ಖಳನಾಗಿ ಅಭಿನಯಿಸಿ ಮೆರೆದವರು ಹೆಚ್.ಟಿ. ಅರಸ್. 1925ರಲ್ಲಿ ಜನನ. ಇವರ ಹುಟ್ಟೂರು ರಾಯಚೂರು ಜಿಲ್ಲೆಯ ಹನುಮಸಾಗರ. ಅವರ ರೂಪ, ಶಾರೀರ ಕಂಡವರು ಪಾತ್ರಗಳಿಗೆ ಚೆನ್ನ ಅಂದಾಗ ತಂದೆಯವರ ಅಪೇಕ್ಷೆಯಂತೆ 'ಕಂದಗಲ್ಲ'ರ 'ಅಕ್ಷಯಾಂಬರ' ನಾಟಕ ದ್ರೌಪದಿಯ ಪಾತ್ರದ ಮೂಲಕ ಪ್ರವೇಶ. ಕಂದಗಲ್ಲರ ಭಾಷೆ ಸುಲಭ ಸಾಧ್ಯವಲ್ಲ. ಅದು ಬಲ್ಲದುದರಿಂದಲೇ ಮುಂದೆ ಎಂಥ ಭಾಷೆಗೂ ಜಗ್ಗಲಿಲ್ಲ.

ಜಯ ಅರವಿಂದ ಸಂಗೀತ ನಾಟಕ ಮಂಡಲಿ, ಕಂದಗಲ್ಲರ ಕಂಪನಿಗಳಲ್ಲಿ ಪಾತ್ರ ನಿರ್ವಹಣೆ. ಕಂದಗಲ್ಲರ ಅಕ್ಷಯಾಂಬರ, ಕುರುಕ್ಷೇತ್ರ, ಬಾಣಸಿಗಭೀಮ, ಲಂಕಾದಹನ ಮುಂತಾದ ನಾಟಕಗಳಲ್ಲಿ ಮುಖ್ಯಪಾತ್ರಗಳಲ್ಲಿ ಸೂಕ್ತ ಅಭಿನಯಕ್ಕೆ ಹೆಸರಾದರು. ವಣಗಿ ಬಾಳಪ್ಪನವರ ಕಲಾವೈಭವ ನಾಟ್ಯಸಂಘ, ಗೋಕಾಕ ಕಂಪನಿ, ಶಾರದ ಸಂಗೀತ ನಾಟಕ ಮಂಡಲಿ, ಹಲಗೇರಿ ಜಟ್ಟಪ್ಪನವರ ಕಂಪನಿಗಳಲ್ಲಿ ದುಡಿಮೆ. ತಾವೇ ಸ್ಥಾಪಿಸಿದ ನಾಟಕದ ಕಂಪನಿಯಲ್ಲೂ ಕೆಲಸ ಮಾಡಿದರು. ಬಹುಪಾಲು ನಾಡಿನ ಹೆಸರಾಂತ ಕಂಪನಿಗಳಲ್ಲಿ ಕೆಲಸ, ಎಂ.ಸಿ. ಮಹದೇವಸ್ವಾಮಿಯವರ ಕನ್ನಡ ಥಿಯೇಟರ್ಸ್‌ಗೆ 1957ರಲ್ಲಿ ಪ್ರವೇಶ, ಇಲ್ಲಿಯ ಎಲ್ಲಾ ನಾಟಕಗಳಲ್ಲಿ ಖಳನಾಗಿ ಮಿಂಚಿದರು. 'ರಾಜಾ ವಿಕ್ರಮ'ದ ದುರ್ಜಯನಾಗಿ ಈತ ಪಂ. ಜವಾಹರಲಾಲ್ ನೆಹರು ಅವರಿಂದ 'ಗುಡ್ ವಿಲನ್' ಎಂಬ ಮೆಚ್ಚುಗೆ ಪಡೆದರು. ಪಂತುಲು, ಶಿವಾಜಿ ಗಣೇಶನ್ ಮೆಚ್ಚಿ ಚಿತ್ರರಂಗಕ್ಕೆ ಆಹ್ವಾನವಿತ್ತರು. ಚಿತ್ರರಂಗದಲ್ಲಿಯೂ ಕೆಲಸ ಮಾಡಿದ್ದಾರೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪುರಸ್ಕಾರ ನೀಡಿ ಸನ್ಮಾನಿಸಿದೆ.

---



## ಬಿ.ಎಸ್. ರಾಧಮ್ಮ (ಪುರಸ್ಕಾರ)

ಸ್ತ್ರೀ ಪಾತ್ರಗಳಲ್ಲಿ ನಟರು ಮಿಂಚಿ ಅತ್ಯಂತ ಜನಪ್ರಿಯರಾದಂತೆ ಪುರುಷ ಪಾತ್ರಗಳಲ್ಲಿ ನಟಿಯರು ಯಶಸ್ಸು ಪಡೆದದ್ದು ವಿರಳ. 'ಸಂಸಾರನೌಕ' ನಾಟಕದಲ್ಲಿ 'ಡಿಕ್ಕಿ' ಪಾತ್ರವನ್ನು ಸಹಜವಾಗಿ ನಿರ್ವಹಿಸಿ 'ಡಿಕ್ಕಿ ರಾಧಮ್ಮ' ಎಂದೇ ಚಿರಪರಿಚಿತರಾದವರು ಬಿ.ಎಸ್. ರಾಧಮ್ಮ ಕಿರಿಯ ವಯಸ್ಸಿನಲ್ಲಿ ಹೆತ್ತವರನ್ನು ಕಳೆದುಕೊಂಡು ಕಲೆಯ ಬಗ್ಗೆ ಉದಾರವಾದ ಮನಸ್ಸುಳ್ಳ ತಮ್ಮ ದೊಡ್ಡಮ್ಮನವರ ಆಶ್ರಯದಲ್ಲಿ ಬೆಳೆದರು.

ರಾಮಚಂದ್ರ ಶಾಸ್ತ್ರಿಗಳ ಕಂಪನಿಯಲ್ಲಿ ನಟ ಭಯಂಕರ ಗಂಗಾಧರರಾಯರ ಜೊತೆಯಲ್ಲಿ ಬಾಲಕೃಷ್ಣನ ಪಾತ್ರ ವಹಿಸುವ ಮೂಲಕ ರಂಗಪ್ರವೇಶ. 'ಅಭಿನಯ ವಿಶಾರದೆ' ಮಳವಳ್ಳಿ ಸುಂದರಮ್ಮ ಅವರು ರಾಧಮ್ಮನವರ ಚುರುಕುತನ ಗಮನಿಸಿ ತಮ್ಮ 'ಶ್ರೀ ಚಾಮುಂಡೇಶ್ವರಿ ನಾಟಕ ಸಭಾ' ಮಂಡಲಿಗೆ ಸೇರಿಸಿಕೊಂಡರು. ಅಲ್ಲಿ ಬಾಲನಟನಾಗಿ, ಸಖಿಯಾಗಿ ಪಾತ್ರ ನಿರ್ವಹಣೆ. ಎ.ಎಸ್. ಶೇಷಾಚಾರರವರ 'ಶೇಷ ಕಮಲ ಕಲಾ ಮಂಡಲಿ' ಮತ್ತು 'ಎಡತೊರೆ ರಾಮಶೆಟ್ಟರ ಕಂಪನಿ'ಗಳಲ್ಲಿ ದುಡಿಮೆ. ಜೆ.ವಿ. ಅಯ್ಯರ್, ಬಾಲಕೃಷ್ಣ, ಭಗವಾನ್ ಅವರುಗಳ ಮಾರ್ಗದರ್ಶನ ದೊರಕಿತು.

ಆರ್. ನಾಗರತ್ನಮ್ಮನವರ 'ಸ್ತ್ರೀ ನಾಟಕ ಮಂಡಲಿ'ಯಿಂದಾಗಿ ರಾಧಮ್ಮ ಸ್ತ್ರೀ ಪಾತ್ರಗಳನ್ನು ಬಿಟ್ಟು ಮುಂತಾದ ಪುರುಷ ಪ್ರಧಾನ ಪಾತ್ರಗಳನ್ನು ಸಹಜವಾಗಿ ನಿರ್ವಹಿಸಿ ಜನಾದರಣೆ ಗಳಿಸಿದರು. ಇಂದಿಗೂ ವೃತ್ತಿನಿರತ ಕಲಾವಿದೆಯಾಗಿದ್ದಾರೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪುರಸ್ಕಾರ ನೀಡಿ ಸನ್ಮಾನಿಸಿದೆ.



## ಬೆಳಗಲ್ ವೀರಣ್ಣ (ಪುರಸ್ಕಾರ)

ರಂಗಭೂಮಿ ಕಲಿಸಿದಷ್ಟು ಜೀವನ ಸತ್ಯವನ್ನು ಯಾವ ವಿಶ್ವವಿದ್ಯಾನಿಲಯ ಕಲಿಸೀತು? ಎನ್ನುವ ವೀರಣ್ಣ ಕಲಾಸೇವೆಯ ಹಂಬಲ ಹೊತ್ತವರು.

ಬೆಳಗಲ್ ವೀರಣ್ಣನವರು ಬಳ್ಳಾರಿ ಜಿಲ್ಲೆಯವರು. ಬಾಲ್ಯದಲ್ಲಿ ತಂದೆ, ತಾಯಿಯವರನ್ನು ಕಳೆದುಕೊಂಡು ಕರೆದವರ ಕೈ ಕೂಸಾಗಿ ಬೆಳೆದ ವೀರಣ್ಣನವರು ತಮ್ಮ ಹದಿಮೂರನೆಯ ವಯಸ್ಸಿನಲ್ಲಿ ಸಿಡಗಿನ ಮಳಿ. ವೈ.ಎಂ. ಚಂದ್ರಯ್ಯನವರನ್ನು ಗುರುವಾಗಿ ಪಡೆದು, ಅವರ ಮಾರ್ಗದರ್ಶನದಲ್ಲಿ ರಂಗ ಶಿಕ್ಷಣ ಪಡೆದರು.

ಹೊನ್ನಪ್ಪ ಭಾಗವತರ ಶ್ರೀ ಉಮಾ ಮಹೇಶ್ವರ ನಾಟ್ಯ ಸಂಘ ಶ್ರೀ ಲಲಿತ ಕಲಾಸಂಘ, ಶ್ರೀ ನಟರಾಜ ನಾಟಕ ಮಂಡಲಿ ಮುಂತಾದ ಅನೇಕ ಹೆಸರಾಂತ ಕಂಪನಿಗಳಲ್ಲಿ ಸೇವೆ ಸಲ್ಲಿಸಿ, ನಾಡಿನ ಹೆಸರಾಂತ ಕಲಾವಿದರಾದ ಜೋಳದ ರಾಶಿ ದೊಡ್ಡಣ್ಣ ಗೌಡರು, ಹೊನ್ನಪ್ಪ ಭಾಗವತರು, ಮಹಾಬಲರಾಯರು, ಎಳೆವಾಲ ಸಿದ್ದಯ್ಯ, ಈಶ್ವರಪ್ಪ ಮೊದಲಾದ ಹಿರಿಯ ಕಲಾವಿದರೊಡನೆ ಅಭಿನಯಿಸಿದ್ದಾರೆ. ಸ್ತ್ರೀ ಪಾತ್ರ, ಖಳನಾಯಕ ಪಾತ್ರಗಳಲ್ಲಿ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಸೂಕ್ತವಾಗಿ ನಿರ್ವಹಿಸಿದ್ದಾರೆ. ಸ್ವತಂತ್ರ ಪ್ರವೃತ್ತಿಯ ವೀರಣ್ಣನವರು ತಮ್ಮದೇ ಆದ 'ನಾಟಕ ಕಲಾಮಿತ್ರ ಮಂಡಲಿ'ಯನ್ನು ಬಳ್ಳಾರಿಯಲ್ಲಿ ಸ್ಥಾಪಿಸಿ 20 ವರ್ಷಗಳಿಂದಲೂ ನಾಟಕಗಳನ್ನು ಪ್ರದರ್ಶಿಸಿ ಹವ್ಯಾಸಿ ಕಲಾವಿದರಿಗೂ ಪ್ರೋತ್ಸಾಹ ನೀಡಿದ್ದಾರೆ.

ಕಮಲಾದೇವಿ ಚಟ್ಟೋಪಾಧ್ಯಾಯರ ಮಾರ್ಗದರ್ಶನದಂತೆ ನಾಟಕ ಕಲೆಯ ಜೊತೆಗೆ ಜಾನಪದ ಕಲೆಗಳಲ್ಲಿ ವೈವಿಧ್ಯಮಯವಾದ 'ತೊಗಲು ಬೊಂಬೆ' ಆಟ ಪ್ರದರ್ಶನವೀಯಲು 'ಶ್ರೀ ರಾಮಾಂಜನೇಯ ತೊಗಲು ಬೊಂಬೆ

ಮೇಳ ಬಳ್ಳಾರಿ' ಸಂಸ್ಥೆಯನ್ನು ಹುಟ್ಟು ಹಾಕಿದರು. ದೇಶದ ಪ್ರಮುಖ ಕೇಂದ್ರಗಳಲ್ಲಿಯೂ, ನಂತರ ರಾಷ್ಟ್ರಪತಿ ಭವನದಿಂದ ಅಪ್ನಾ ಉತ್ಸವವರೆಗೂ ಪ್ರದರ್ಶನವಿತ್ತಿದ್ದಾರೆ. ಇವರು ಜಾನಪದ ಕಲೆ ಮತ್ತು ರಂಗಭೂಮಿಗೆ ಇತ್ತ ಕೊಡುಗೆ ಪ್ರಶಂಸನೀಯ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪುರಸ್ಕಾರ ನೀಡಿ ಸನ್ಮಾನಿಸಿದೆ.



## ಲಕ್ಷ್ಮೀಬಾಯಿ ಏಣಗಿ (ಪುರಸ್ಕಾರ)

ಲಕ್ಷ್ಮೀಬಾಯಿ ಏಣಗಿಯವರು ಸಾತ್ವಿಕ ಮತ್ತು ಗೌರವಾನ್ವಿತ ಪಾತ್ರಗಳ ಅಚ್ಚುಕಟ್ಟು ನಿರ್ವಹಣೆಯಲ್ಲಿ ಮನೆ ಮಾತಾಗಿದ್ದಾರೆ.

1932ರಲ್ಲಿ ಶ್ರೀ ಶೈಲದ ಹತ್ತಿರವಿರುವ ಸಿದ್ದಾಪೂರದಲ್ಲಿ ಜನನ. ಅಭಿನಯ, ಸಂಗೀತ ಈಕೆಗೆ ರಕ್ತಗತವಾಗಿ ಬಂದದ್ದು. ತಂದೆ, ತಾಯಿಯವರು ಉತ್ತಮ ಕಲಾವಿದರಾಗಿದ್ದರಿಂದ ಮನೆಯೇ ಮೊದಲ ರಂಗಶಾಲೆ ಅಥಣಿಯ 'ಭಾಗ್ಯೋದಯ' ಕಂಪನಿಯಲ್ಲಿ ಸಿದ್ಧರಾಮೇಶ್ವರ ನಾಟಕದ ಮೂಲಕ ಪ್ರವೇಶ.

1949ರಲ್ಲಿ ಏಣಗಿ ಬಾಳಪ್ಪನವರು 'ಕಲಾ ವೈಭವ ನಾಟ್ಯ ಸಂಘ'ಕ್ಕೆ ಇಡೀ ಕುಟುಂಬ ಸಮೇತ ಸೇರಿದರು. ಅಭಿನಯದ ಜೊತೆಗೆ ಯಾವ ಕಾರಣಕ್ಕೂ ಒಪ್ಪಂದ ಮಾಡಿಕೊಳ್ಳದ ಸದಭಿರುಚಿಯ ಶುದ್ಧ ಕಲೆಯ ಹೆಸರಾಗಿದ್ದವರು ಏಣಗಿ ಬಾಳಪ್ಪನವರು. ಇವರು ವಹಿಸುತ್ತಿದ್ದ ಪ್ರಮುಖ ಸ್ತ್ರೀ ಪಾತ್ರಗಳನ್ನು ಲಕ್ಷ್ಮೀಬಾಯಿಯವರು ವಹಿಸಿಕೊಂಡು ಬಾಳಪ್ಪನವರು ನಾಯಕ ಪಾತ್ರಗಳಿಗೆ ತಮ್ಮನ್ನು ತಾವೇ ಅರ್ಪಿಸಿ ಕೊಳ್ಳುವಂತಾಯಿತು.

ಬಾಳಪ್ಪನವರ ನಾಯಕಿಯಾಗಿ ಸುಮಾರು 20 ವರ್ಷ ಅಭಿನಯಿಸಿದರು. ಲಕ್ಷ್ಮೀಬಾಯಿಯವರು ನಿಜ ಜೀವನದಲ್ಲಿಯೂ ಅವರ ಬಾಳ ಸಂಗಾತಿಯಾದರು. 'ಜಗಜ್ಯೋತಿ ಬಸವೇಶ್ವರ'ದ ನೀಲಾಂಬಿಕೆ, 'ಗೋರಾ ಕುಂಬಾರ'ದ ಸಂತು ಬಾಯಿ 'ಕುಂಕುಮ'ದ ಅನುರಾಧ, 'ಅಕ್ಕಮಹಾದೇವಿ'ಯ ಅಕ್ಕ, ಅಹಲ್ಯೆಯ ಅಹಲ್ಯೆ, ಕುರುಕ್ಷೇತ್ರದ ದ್ರೌಪದಿ. 'ಚಲೇಜಾವ್'ದ ಆಶಾ ಪಾತ್ರಗಳಲ್ಲದೆ ಹೊಸ ರೀತಿಯ ಪ್ರಯೋಗಗಳಾದ ಷಾಜಹಾನ, ಶಾಲಾ ಮಾಸ್ತರ ಮುಂತಾದ ನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಹೃದಯಂಗಮ ಅಭಿನಯ ನೀಡಿ ಜನರ ವಿಶ್ವಾಸ, ಅಭಿಮಾನಗಳಿಸಿಕೊಂಡರು. ವೃತ್ತಿ ರಂಗಭೂಮಿಯಲ್ಲಿ ಎಂದೆಂದೂ ಮರೆಯಲಾಗದ ಹೆಸರಾಗಿರುವ ಏಣಗಿ ಬಾಳಪ್ಪನವರ ಯಶಸ್ಸಿನ ಹಿಂದಿರುವ ಶಕ್ತಿ ಲಕ್ಷ್ಮೀಬಾಯಿ ಏಣಗಿಯವರು. ಇವರಿಬ್ಬರ ಮಗ ಏಣಗಿ ನಟರಾಜ ಹೆಸರಾಂತ ನಟರಾಗಿದ್ದಾರೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪುರಸ್ಕಾರ ನೀಡಿ ಸನ್ಮಾನಿಸಿದೆ.



## ಸುಧೀರ್ (ಪುರಸ್ಕಾರ)

ರಂಗಭೂಮಿಯಲ್ಲಿ 'ಸಿಂಧೂರ ಲಕ್ಷಣ'ನಾಗಿ ಅಪಾರ ಜನಪ್ರಿಯತೆಗಳಿಸಿದವರು ಸುಧೀರ್.

ಸುಧೀರ್ ಶಿವಮೊಗ್ಗದ ಸಾಗರದಲ್ಲಿ ಜನಿಸಿದರು. ಎಳೆತನದಿಂದಲೂ ನಾಟಕದ ಗೀಳು. ಗೋಕಾಕ ಕಂಪನಿ 'ಶ್ರೀ ಶಾರದ ಸಂಗೀತ ನಾಟಕ ಮಂಡಲಿ'ಯ 'ಸಂಪತ್ತಿಗೆ ಸವಾಲ್' ನಾಟಕದ ನಾಯಕನಾಗಿ ರಂಗ ಪ್ರವೇಶ. 'ಮನೆ ಮಗಳು', 'ರೂಪವತಿ', 'ಗುಳಿಗಿ ಗುಂಡಮ್ಮ', 'ಸಿಂಧೂರ ಲಕ್ಷಣ' ಮೊದಲಾದ ನಾಟಕಗಳಲ್ಲಿ ಮುಖ್ಯಪಾತ್ರ ನಿರ್ವಹಣೆ.

‘ಸಿಂಧೂರ ಲಕ್ಷ್ಮಣ’ ನಾಟಕದ ‘ಲಕ್ಷಣ’ನಾಗಿ ಹೆಸರಾದರು. ಈ ನಾಟಕ ಮಹಾರಾಷ್ಟ್ರದಲ್ಲಿ 150ಕ್ಕೂ ಹೆಚ್ಚು ಪ್ರದರ್ಶನ ಕಂಡಿದೆ. ‘ಇಸ್ ನಾಟಕ್ ಮೇ ಸಿಂಧೂರ’ ಲಕ್ಷಣ ಹೈ’ ಎಂದು ಪ್ರೇಕ್ಷಕರು ನಾಟಕ ನೋಡಲು ಬರುತ್ತಿದ್ದುದು ಸುಧೀರಗಳಿಸಿದ ಜನಪ್ರಿಯತೆಗೆ ಸಾಕ್ಷಿ. ಹಲವಾರು ವೃತ್ತಿ ಕಂಪನಿಗಳಲ್ಲಿ ದುಡಿದ ಸುಧೀರ್‌ರ ಮತ್ತೊಂದು ಜನಪ್ರಿಯ ನಾಟಕ ‘ಗೌಡ್ರ ಗದ್ಲ’, ಇದಲ್ಲದೆ ಖಳನಾಯಕ ಪಾತ್ರಗಳಲ್ಲಿಯೂ ಮಿಂಚಿದರು.

ಚಲನಚಿತ್ರಗಳಲ್ಲಿ ಖಳನಾಯಕರಾಗಿ, ಪೋಷಕ ನಟರಾಗಿ 150ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಸುಧೀರ್‌ರ ನಿಜವಾದ ಹೆಸರು ಕೃಷ್ಣಮೂರ್ತಿ ಚಲನಚಿತ್ರರಂಗ ಇಟ್ಟ ಹೆಸರು ಸುಧೀರ್. ಇಂದಿಗೂ ವೃತ್ತಿ ರಂಗಭೂಮಿಯಲ್ಲಿ ಆಹ್ವಾನಿತ ನಟರಾಗಿದ್ದಾರೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪುರಸ್ಕಾರ ನೀಡಿ ಸನ್ಮಾನಿಸಿದೆ.

---



## ವಿಶ್ವನಾಥ ಮಿರ್ಲೆ (ಪುರಸ್ಕಾರ)

1933ರಲ್ಲಿ ಜನನ. ಮೈಸೂರು ಮಹಾರಾಜ ಕಾಲೇಜಿನ ‘ಮಿತ್ರಮೇಳ’ವು ನಲವತ್ತರ ದಶಕದಲ್ಲಿ ಮೈಸೂರು ಹವ್ಯಾಸಿ ರಂಗಭೂಮಿಗೆ ಹೊಸ ಚಾಲನೆ ಕೊಟ್ಟಿತು. ಮುಂದೆ ‘ಸಮತೆಂತೋ’ ಸಂಸ್ಥೆ ಹುಟ್ಟಿಕೊಂಡು ಹವ್ಯಾಸಿ ರಂಗ ಚಟುವಟಿಕೆಗಳಿಗೆ ನಿರ್ದಿಷ್ಟ ಹಾದಿಯನ್ನು ಹಾಕಿಕೊಟ್ಟಿತು. ‘ಸಮತೆಂತೋ’ ತಂಡದ ಸಂಸ್ಥಾಪಕರಲ್ಲಿ ಒಬ್ಬರಾದ ಮಿರ್ಲೆ ‘ಮಿತ್ರಮೇಳ’ದಲ್ಲೂ ಇದ್ದವರು. ಮಿರ್ಲೆಯವರು ವೃತ್ತಿಯಲ್ಲಿ ಇಂಗ್ಲೀಷ್ ಅಧ್ಯಾಪಕರು. ಪ್ರವೃತ್ತಿಯಲ್ಲಿ ಉತ್ಸಾಹಿ ನಟರು, ನಿರ್ದೇಶಕರು, ಸಂಗೀತ ಸಂಯೋಜಕರು, ಬರಹಗಾರರು.

ಶಿಸ್ತಿಗೆ ಇನ್ನೊಂದು ಹೆಸರಾಗಿದ್ದ ಸಂಪತ್ ಅವರ ನಿರ್ದೇಶನದ ‘ಆಷಾಢಭೂತಿ’ ನಾಟಕದಲ್ಲಿ ಅಭಿನಯಿಸಿ ದೆಹಲಿಯ ಯುವ ಜನೋತ್ಸವದಲ್ಲಿ ಶಹಭಾಸ್‌ಗಿರಿ ಪಡೆದವರು. ಅಭಿನಯದಲ್ಲಿ ಏಕತಾನತೆ ಮೂಡುವುದು ಅವರಿಗೆ ಇಷ್ಟವಿಲ್ಲದಾಗ ಬಿ.ವಿ. ಕಾರಂತ, ಗುರುರಾಜರಾವ್, ಸಿಂಧುವಳ್ಳಿ ಅನಂತಮೂರ್ತಿ, ಎಚ್.ಎಂ. ಚೆನ್ನಯ್ಯ, ನ. ರತ್ನ, ಉಮೇಶ ಮೊದಲಾದವರ ನಿರ್ದೇಶನದಲ್ಲಿ ವಿವಿಧ ರೀತಿಯ ಪಾತ್ರಗಳಲ್ಲಿ ಜೀವ ತುಂಬಿ ವೈವಿಧ್ಯ ತರುವಲ್ಲಿ ಯಶಸ್ವಿಯಾಗಿದ್ದಾರೆ.

ಕ್ರಿಯಾತ್ಮಕ ನಿರ್ದೇಶಕನಾಗಿ ಸಮತೆಂತೋ, ಕಲಾಪ್ರಿಯ, ಸಮುದಾಯ, ಚೇತನ ಕನ್ನಡ ಸಂಘ ತಂಡಗಳಿಗೆ ಜೋಕುಮಾರ, ಹಯವದನ, ಚಿಕ್ಕದೇವ ಭೂಪ, ಕೊಡೆಗಳು ಮುಂತಾದ ನಾಟಕಗಳನ್ನು ಆಡಿಸಿದ್ದಾರೆ. ಎಂ.ಎಸ್. ಸತ್ಯು, ಪ್ರಸನ್ನ, ಚೆನ್ನಯ್ಯ, ಜಯರಾಮ ತಾತಾಚಾರ ಮುಂತಾದವರು ನಿರ್ದೇಶಿಸಿದ ನಾಟಕಗಳಿಗೆ ಸಂಗೀತ ನಿರ್ದೇಶಿಸಿದ್ದಾರೆ. ರಂಗ ವಿಚಾರ ಗೋಷ್ಠಿ ಯಾವುದೇ ನಡೆದರೂ ತಪ್ಪದೆ ಆಸಕ್ತಿಯಿಂದ ಭಾಗವಹಿಸುವ ವಿಚಾರವಂತ ಲೇಖಕರು.

ಪರಿಪಕ್ವ ಅನುಭವದಿಂದ ಹಿರಿಯ ತಲೆಮಾರಿನ ಪ್ರತಿನಿಧಿಯಾಗಿ ಕಿರಿಯರ ಒಡನಾಟದಲ್ಲಿ ಸಕ್ರಿಯರಾಗಿ ತೊಡಗಿಸಿಕೊಂಡಿರುವ ಸಹೃದಯ ಮಿರ್ಲೆ ಮೈಸೂರಿನ ಹವ್ಯಾಸಿ ರಂಗಭೂಮಿಯ ಶಕ್ತಿಯಾಗಿದ್ದಾರೆ. 1991ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಇವರ ರಂಗಸೇವೆ ಗೌರವಿಸಿ ಪುರಸ್ಕಾರ ನೀಡಿ ಸನ್ಮಾನಿಸಿದೆ.

---

# 1992ರ ಪ್ರಶಸ್ತಿ ವಿಜೇತರು



## ಡಾ॥ ರಾಜ್‌ಕುಮಾರ್ (ಕಲಾಕೌಸ್ತುಭ)

ನಮ್ಮ ಚಿತ್ರರಂಗದ ಭದ್ರ ಬುನಾದಿ ಎಂದರೆ ನಮ್ಮ ಪಾರಂಪರಿಕ ರಂಗಭೂಮಿ. ನಮ್ಮ ರಂಗಭೂಮಿಯ ದಿಗ್ಗಜಗಳು ಸಿನಿಮಾವನ್ನು ತಮ್ಮ ಪ್ರಾಯೋಗಿಕ ಕ್ಷೇತ್ರವನ್ನಾಗಿ ಮಾಡಿಕೊಳ್ಳುವ ಸಂದರ್ಭಕ್ಕೆ ನಮ್ಮ ರಂಗಭೂಮಿ ತನ್ನ ಉಚ್ಛ್ರಾಯ ಸ್ಥಿತಿಯನ್ನು ಮುಟ್ಟಿತ್ತು. ಏಕಕಾಲಕ್ಕೆ ಹಲವು ಸಾವಿರ ಜನಗಳನ್ನು ಮುಟ್ಟಬಹುದಾದ ವ್ಯಾಪಕತೆಯನ್ನು ಹೊಂದಿದ್ದ ಸಿನಿಮಾ ಆ ಕಾಲಕ್ಕೇನೂ ಇಂದಿಗೂ ಆಕರ್ಷಣೀಯ ಚುಂಬಕವಾಗಿ ಸೆಳೆಯುತ್ತಿದೆ.

ನಮ್ಮ ಚಿತ್ರರಂಗದ ಇತಿಹಾಸ ಪ್ರಾರಂಭವಾಗುವುದೇ ರಂಗಭೂಮಿಯ ಪರಾಕಾಷ್ಠತೆಯ ಹಿನ್ನೆಲೆಯಲ್ಲಿ ಎಂಬುದು, ಚಿತ್ರರಂಗಕ್ಕೆ ರಂಗಭೂಮಿಯ ಕೊಡುಗೆ ಎಷ್ಟು ಮಹತ್ವದ್ದು ಎಂದು ಅರಿವಾಗುತ್ತದೆ.

ದಿನ ಬೆಳಗಾದರೆ ಒಂದು ಹೊಸ ಚಿತ್ರದ ಮುಹೂರ್ತ, ವಾರಕ್ಕೆರಡು ಚಿತ್ರಗಳ ಬಿಡುಗಡೆಯ ಭರಾಟೆ. ಕನ್ನಡ ಚಿತ್ರರಂಗದ ಪ್ರಾರಂಭಿಕ ದಿನಗಳಲ್ಲಿ ಕನಸಿನ ದಿನವಾಗಿತ್ತು. ಸೀಮಿತ ಮಾರುಕಟ್ಟೆ, ಸಂಪನ್ಮೂಲ ಹಾಗು ಉದ್ಯಮಶೀಲ ಜನತೆಯ ಅಭಾವದ ಪರಿಸ್ಥಿತಿಯಲ್ಲಿದ್ದ ಕನ್ನಡ ಚಿತ್ರರಂಗ ಇಂದು ಲಕ್ಷಾಂತರ ಜನರಿಗೆ ಬದುಕಿನ ಭರವಸೆಯನ್ನು ಆಸರೆಯನ್ನು ನೀಡಿದೆ. ನಮ್ಮ ಚಿತ್ರರಂಗದ ಇಂದಿನ ಸ್ಥಿತಿಗೆ ನಮ್ಮ ರಂಗಭೂಮಿಯ ಕೊಡುಗೆ ಅಪಾರ. ಇಂತಹ ಕೊಡುಗೆಗಳಲ್ಲಿ ಕಳಶಪ್ರಾಯವಾಗಿ ಚಿತ್ರರಂಗವನ್ನು ಅಲಂಕರಿಸಿದವರು ಡಾ॥ ರಾಜ್‌ಕುಮಾರ್ ಅವರು.

ಮುತ್ತುರಾಜ್ – ರಾಜ್‌ಕುಮಾರ್ ಆಗುವ ಮುನ್ನ ಬಣ್ಣ ಬಳಿದಿದ್ದು ಗುಬ್ಬಿ ಕಂಪನಿಯಲ್ಲಿ ಬಾಲಕಲಾವಿದರಾಗಿ. ರಂಗಭೂಮಿಯನ್ನು ಪ್ರವೇಶಿಸಿದ ಇವರಲ್ಲಿ ಕಲೆ ರಕ್ತಗತ. ತಂದೆ ಸಿಂಗಾನೆಲ್ಲೂರು ಪುಟ್ಟಸ್ವಾಮಯ್ಯ ತಮ್ಮ ದೈತ್ಯಪಾತ್ರ ನಿರ್ವಹಣೆಯಿಂದ, ಕಂಚಿನ ಕಂಠದಿಂದ ಪ್ರಸಿದ್ಧರಾಗಿದ್ದರು. ತಮ್ಮ ದಾರಿಯಲ್ಲೇ ಮಗ ಹೆಜ್ಜೆಯಿಡಲು ಬಯಸಿದ ಅವರು ಮುತ್ತುರಾಜ್ ಅವರನ್ನು ಬಾಲ್ಯದಲ್ಲೇ ಸಂಗೀತ ಅಭ್ಯಾಸಕ್ಕೆ ಕಳಿಸಿದರು. ಸಣ್ಣೇಗೌಡರು ಹಾಗು ಹೆಣ್ಣು ಕೊಟ್ಟ ಮಾವನಾಗುವ ಮುನ್ನ ಅಪ್ಪಾಜಿಗೌಡರು ಇವರಿಗೆ ಸಂಗೀತ ಅಭ್ಯಾಸ ಮಾಡಿಸಿದರು.

ಸುಂದರ ಮುಗ್ಧ ಬಾಲಕ, ಸುಮಧುರವಾಗಿ ಹಾಡುತ್ತಿದ್ದ ಮುತ್ತುರಾಜ್ ಅವರಿಗೆ ದೊರಕಿದ್ದು ಸ್ತ್ರೀ ಪಾತ್ರಗಳೇ. ನಂತರ ಶೇಷಾಚಾರ್ ಕಂಪನಿ, ಅಲ್ಲಿಂದ ಸುಬ್ಬಯ್ಯನಾಯ್ಡು ಕಂಪನಿಗೆ ಸೇರುವ ಸಂದರ್ಭಕ್ಕೆ ತರುಣ ಮುತ್ತುರಾಜ್ ಅಭಿಮನ್ಯು, ಬಸವೇಶ್ವರ, ಶ್ರೀರಾಮ, ಭರತ, ನಾರದ ಮುಂತಾದ ಪಾತ್ರಗಳನ್ನು ಅಭಿನಯಿಸಿ ಸಾಕಷ್ಟು ಹೆಸರು ಮಾಡಿದ್ದರು.

ಕಲಾಕುಟುಂಬದಿಂದ ಬಂದಿದ್ದ ರಾಜ್ ಅವರನ್ನು ಅರಸಿಬಂದ ಪಾತ್ರ 'ಬೇಡರ ಕಣ್ಣಪ್ಪ' 1953ರಲ್ಲಿ ರಂಗಭೂಮಿಯಿಂದ ಚಿತ್ರರಂಗಕ್ಕೆ ಮೊದಲ ಮೆಟ್ಟಿಲಾಯಿತು. ದುಮ್ಮಿ ಮುರಗರಾಯಪ್ಪ, ಗುಬ್ಬಿ ವೀರಣ್ಣ, ಸಿ.ಆರ್. ಬಸವರಾಜ್ ಮುಂತಾದವರು ಸೇರಿ ಪ್ರಾರಂಭ ಮಾಡಿದ್ದ ಕರ್ನಾಟಕ ಫಿಲಂಸ್, ಮುತ್ತುರಾಜ್ ಅವರು ರಾಜ್‌ಕುಮಾರ್ ಆಗಲು ಕಾರಣವಾಯಿತು.

ನಂತರ ಜೀವನ ನಾಟಕ ರಂಗದಲ್ಲಿ ರಾಜ್‌ಕುಮಾರ್ ಅವರು ತಮ್ಮ ಯಶಸ್ಸಿನ ಮೆಟ್ಟಿಲನ್ನು ಅತಿಪರಿಶ್ರಮದಿಂದ, ಶಿಸ್ತಿನಿಂದ, ಮೇರು ಅಭಿನಯದಿಂದ ಒಂದೊಂದಾಗಿ ಹತ್ತುತ್ತಾ ಸಮಗ್ರ ಕನ್ನಡಿಗರ ಹೃದಯದಲ್ಲಿ ಶಾಶ್ವತ ನೆಲೆಯಾಗಿ ನಿಂತರು.

ಸಿನಿಮಾವನ್ನು ಸೇರಿದ ನಂತರವೂ ಜಿ.ವಿ. ಅಯ್ಯರ್, ಬಾಲಕೃಷ್ಣ, ನರಸಿಂಹರಾಜು ಅವರೊಡಗೂಡಿ ಕನ್ನಡ ಚಲನಚಿತ್ರ ಕಲಾವಿದರ ಸಂಘ-ಸ್ಥಾಪನೆ ಮಾಡಿ ಬಿಡುವಿನ ಸಮಯದಲ್ಲಿ ನಾಟಕಗಳನ್ನಾಡಿ ಕನ್ನಡ ನಾಡು, ನುಡಿ, ಸಂಸ್ಕೃತಿಗಾಗಿ ಹೋರಾಟವನ್ನು ಒಂದು ತಪಸ್ಸಿನಂತೆ ನಡೆಸುತ್ತಾ, ತಾವು ಬೆಳೆದು ಇಡೀ ಉದ್ಯಮವನ್ನು ಬೆಳೆಸಿದ ಶಕ್ತಿ ಡಾ॥ ರಾಜ್‌ಕುಮಾರ್.

ಡಾ॥ ರಾಜ್‌ಕುಮಾರ್ ಅವರ ರಂಗಭೂಮಿಯ ಪ್ರೀತಿ ನಿರಂತರವಾಗಿದೆ. ಈಗಲೂ ನಾಟಕಗಳನ್ನು ನೋಡುವ ಹವ್ಯಾಸ ಇರುವ ಡಾ॥ ರಾಜ್, ತಮ್ಮ ರಸಸಂಜೆ ಕಾರ್ಯಕ್ರಮಗಳ ಮೂಲಕ ಹಣ ಸಂಗ್ರಹಿಸಲು ನೆರವಾಗುತ್ತಾ, ಅನೇಕ ಜಿಲ್ಲಾ ರಂಗಮಂದಿರಗಳ ನಿರ್ಮಾಣಕ್ಕೆ ಕಾರಣರಾಗಿದ್ದಾರೆ.

ಇವರನ್ನು ಅರಸಿಕೊಂಡು ಬಂದ ಪ್ರಶಸ್ತಿಗಳು ಸಾವಿರಾರು. ವರನಟ, ನಟಸಾರ್ವಭೌಮ, ಡಾಕ್ಟರೇಟ್ ಪದವಿ, ಪದ್ಮಭೂಷಣ, ಕರ್ನಾಟಕ ರತ್ನ..... ಹೀಗೆ ಪ್ರಶಸ್ತಿಗಳ ಸರಮಾಲೆ ಬೆಳೆಯುತ್ತಾ ಹೋಗುತ್ತದೆ ಪಟ್ಟಿಮಾಡಿದಷ್ಟು.

ಪ್ರಸ್ತುತ ಕರ್ನಾಟಕ ನಾಟಕ ಅಕಾಡೆಮಿ ಡಾ॥ ರಾಜ್‌ಕುಮಾರ್ ಅವರಿಗೆ 'ಕಲಾಕೌಸ್ತುಭ' ಬಿರುದು ನೀಡಿ ಸನ್ಮಾನಿಸುತ್ತಿದೆ. ರಂಗಭೂಮಿಯಿಂದ ತಮ್ಮ ಕಲಾ ಸೇವೆಯನ್ನು ಆರಂಭಿಸಿ, ಸಿನಿಮಾ ಉದ್ಯಮದ ಚೈತನ್ಯಶಕ್ತಿಯಾಗಿರುವ ಡಾ॥ ರಾಜ್‌ಕುಮಾರ್ ಅವರಿಗೆ ಅತ್ಯಂತ ಪ್ರೀತಿಯ ಸನ್ಮಾನ ನಾಟಕ ಅಕಾಡೆಮಿಯಿಂದ. ಎಲ್ಲಾ ರಂಗವಲಯಗಳ ಪ್ರಾತಿನಿಧಿಕ ಸಂಸ್ಥೆಯಾದ ಕರ್ನಾಟಕ ನಾಟಕ ಅಕಾಡೆಮಿ ಡಾ॥ ರಾಜ್‌ಕುಮಾರ್ ಅವರ ಘನವ್ಯಕ್ತಿತ್ವಕ್ಕೆ ನೀಡುತ್ತಿರುವ ಗೌರವದಿಂದ ಅಕಾಡೆಮಿಯ ಘನತೆಯೂ ಹೆಚ್ಚುತ್ತದೆ.

---



## ಎನ್ಕೆ ಕುಲಕರ್ಣಿ (ಫೆಲೋಷಿಪ್)

'ಎನ್ಕೆ' ಎಂದೇ ಪ್ರಸಿದ್ಧರು ಎನ್ಕೆ. ಕುಲಕರ್ಣಿ. ಧಾರವಾಡ ಇವರ ಕಾರ್ಯ ಕ್ಷೇತ್ರ. ಕಾಲೇಜು ದಿನಗಳಲ್ಲಿ ಪ್ರಹಸನಗಳನ್ನು ರಚಿಸಿ ಸಾಹಿತ್ಯ ಲೋಕಕ್ಕೆ ಪಾದಾರ್ಪಣೆ. ವರಕವಿ ಬೇಂದ್ರೆ, ಶ್ರೀ ರಂಗ ಮುಂತಾದವರ ಸಂಪರ್ಕ. ಬಿ.ಎ. ಆನರ್ಸ್ ಕನ್ನಡದಲ್ಲಿ. ಶಂ.ಭಾ, ಬೆಟಗೇರಿ, ಗೋಕಾಕ, ಮುಗಳಿ ಮೊದಲಾದ ಸಾಹಿತಿಗಳ ಪರಿಚಯ. ಗೆಳೆಯರಾದ ಶ್ರೀನಿವಾಸ ಕುಲಕರ್ಣಿಯವರ ಮೂಲಕ 'ಗೆಳೆಯರ ಗುಂಪಿ'ನ ಸಮೀಪ ವರ್ತಿ-ಸಾಧನ ಕೇರಿಯ ಸಹವರ್ತಿ.

ಎಂ.ಎ. ಮುಗಿಸಿ ಗದಗದ ಹೈಸ್ಕೂಲಿನಲ್ಲಿ ಶಿಕ್ಷಕ. ಪತ್ರಿಕೋದ್ಯಮ, ಸಂಶೋಧನೆ ಜೊತೆಗೆ ಏಕಾಂತ ನಾಟಕಗಳ ರಚನೆ, ಪ್ರಕಟಣೆ, ಆಕಾಶವಾಣಿಗೆ ಪಾದಾರ್ಪಣೆ. ಕಾರ್ಯಕ್ರಮ ಪ್ರಸಾರ ನಿರ್ವಾಹಕರಾಗಿ ಗೀತೆಗಳು, ರೂಪಕಗಳು, ಗೀತರೂಪಕಗಳು, ನಗೆ ನಾಟಕಗಳು ಮುಂತಾದ ಕಾರ್ಯಕ್ರಮಗಳ ರಚನೆ ನಿರ್ದೇಶನ.

'ಮಂದಿರ ಪ್ರವೇಶ' ನಾಟಕಕ್ಕೆ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಬಹುಮಾನ, ನಾಟಕ ಸಾಹಿತ್ಯ ಕುರಿತಂತೆ ವಿಶೇಷವಾಗಿ ಅಧ್ಯಯನ. ವಿಶೇಷವಾಗಿ ರೇಡಿಯೋ ಜನಪ್ರಿಯವಾಗುವಲ್ಲಿ ಇವರ ಸಾಧನೆ ಉಲ್ಲೇಖಾರ್ಹ. ಅನೇಕ ಅಭಿನಂದನಾ ಗ್ರಂಥಗಳ ಸಂಪಾದನೆ. ಪತ್ರಿಕೆಗಳಲ್ಲಿ ಅಂಕಣ ಬರಹ, ಲಲಿತ ಪ್ರಬಂಧ ರಚನೆ, ಏಕಾಂಕಗಳ ಪ್ರಕಟಣೆ, ರೇಡಿಯೋ ನಾಟಕಗಳ ನಿರ್ಮಾಣ.

ಇವರ ಸಾಹಿತ್ಯ ಸೇವೆ-ನಾಟಕರಂಗಕ್ಕೆ ಸಲ್ಲಿಸಿದ ಕೊಡುಗೆಯನ್ನು ಗೌರವಿಸಿ 1990ರಲ್ಲಿ ರಾಜ್ಯಪ್ರಶಸ್ತಿ.

---



## ಕ.ವೆಂ. ರಾಜಗೋಪಾಲ (ಫೆಲೋಷಿಪ್)

ನಾಟಕ ಪ್ರದರ್ಶನವಿದ್ದಡೆ 'ಕ.ವೆಂ' ಇರುತ್ತಾರೆ. ಎಲ್ಲ ತರಹದ ನಾಟಕಗಳನ್ನು ತನ್ಮಯತೆಯಿಂದ ವೀಕ್ಷಿಸಿ ಅನಿಸಿದ್ದನ್ನು ನೇರವಾಗಿ ಹೇಳಿ, ಚೆನ್ನಾಗಿದ್ದರೆ ಬೆನ್ನು ತಟ್ಟಿ ಹುರಿದುಂಬಿಸಿ, ಕಳಪೆ ಎನಿಸಿದರೆ ತಿಳಿ ಹೇಳಿ ಉತ್ಸಾಹ ತುಂಬಿ ಹೋಗುತ್ತಾರೆ. ಕವಿಯಾಗಿ, ಕತೆಗಾರರಾಗಿ, ವಿಮರ್ಶಕರಾಗಿ, ನಾಟಕಕಾರರಾಗಿ ಕ.ವೆಂ ತಮ್ಮ ಸುತ್ತಲಿನ ಯಾವತ್ತೂ ಕ್ರಿಯೆಗಳಿಗೆ ಪ್ರಬುದ್ಧವಾಗಿ ಪ್ರತಿಕ್ರಿಯಿಸುವವರು.

'ಬಕ್ಕ ತಲೆಯ ನರ್ತಕಿ' ಯೊಂದಿಗೆ ಅಸಂಗತವನ್ನು ಕನ್ನಡಕ್ಕೆ ಪರಿಚಯಿಸಿದವರು. ಆದರೂ ಎಲ್ಲಾ ಪ್ರಕಾರಗಳ ನಾಟಕಗಳ ಬಗ್ಗೆ ಸಮಾನ ಒಲವು, ಕಾಳಜಿ ಇವರಿಗೆ.

ರಂಗ ಚಿಂತಕರಾಗಿ, ಶಿಕ್ಷಕರಾಗಿ, ವಿಮರ್ಶಕರಾಗಿ ಇಂದಿಗೂ ತಮ್ಮ ಆಸಕ್ತಿಯ ಕೇಂದ್ರವನ್ನು ರಂಗಭೂಮಿಯನ್ನಾಗಿಸಿಕೊಂಡಿರುವ ಕ.ವೆಂ ಇಂದಿನ ಪೀಳಿಗೆಯ ಹುಡುಗರನ್ನು ಆಸಕ್ತಿಯಿಂದ ಗಮನಿಸುತ್ತಾ, ಹೊಸ ರಂಗಭೂಮಿಯ ಹುಟ್ಟಿಗೆ ಕಾತರಿಸುತ್ತಿರುವವರು.

ವಿಚಾರ ಸಂಕಿರಣಗಳಲ್ಲಿ ನಾಟಕದ ಎಲ್ಲಾ ಪ್ರಕಾರಗಳಲ್ಲೂ ಅಧಿಕಾರಯುತವಾಗಿ ಮಾತನಾಡಬಲ್ಲವರು.

---



## ಸಿಂಧುವಳ್ಳಿ ಅನಂತಮೂರ್ತಿ (ಫೆಲೋಷಿಪ್)

ಸಿಂಧುವಳ್ಳಿಯವರು ರಂಗಭೂಮಿಯ ಅಜಾತಶತ್ರು. ಕರ್ನಾಟಕದಾದ್ಯಂತ ಸಾವಿರಾರು ಗೆಳೆಯರು ಅಭಿಮಾನಿಗಳು ಇವರ ಪಾಲಿಗೆ. ಮೈಸೂರು ಹವ್ಯಾಸಿ ರಂಗಭೂಮಿಯ ಬೆಳವಣಿಗೆಯಲ್ಲಿ ಇವರ ಪಾತ್ರ ಗಣನೀಯ. ಸಂಘಟಕರಾಗಿ, ನಿರ್ದೇಶಕರಾಗಿ, ನಟರಾಗಿ, ನಾಟಕಕಾರರಾಗಿ ರಂಗಭೂಮಿಯ ಸರ್ವಾಂಗೀಣ ಅಭಿವೃದ್ಧಿಗೆ ವಿಶಿಷ್ಟವಾಗಿ ದುಡಿಯುತ್ತಿರುವವರು.

ಸಮತೆಂತೋ ಸಂಸ್ಥೆ ಕಟ್ಟಿ ನಾಟಕವಾಡಿದವರು. ಸುರುಚಿಯನ್ನು ಹುಟ್ಟು ಹಾಕಿ ಅನೇಕ ರಂಗ ಕೃತಿ, ಸಾಹಿತ್ಯ ಕೃತಿ ಹಾಗು ವಿಚಾರ ಸಾಹಿತ್ಯಗಳನ್ನು ಪ್ರಕಟಿಸಿದವರು.

ಲಲಿತ ಕಲಾ ಕಾಲೇಜಿನ ಪ್ರಾಂಶುಪಾಲರಾಗಿ ರಂಗಶಿಕ್ಷಣಕ್ಕೆ ಮೌಲ್ಯ ದೊರಕಿಸಿ ಕೊಟ್ಟವರು. ಸಂಶೋಧನೆ, ಸಂಪಾದನೆಗಳಲ್ಲಿ ಸಿಂಧುವಳ್ಳಿ ಅನಂತಮೂರ್ತಿಯವರು ತೊಡಗಿಸಿಕೊಂಡು ನಾಟಕ ಸಾಹಿತ್ಯವನ್ನು ಶ್ರೀಮಂತಗೊಳಿಸಿದವರು.

ನಾಟಕ ಅಕಾಡೆಮಿಯ ಸದಸ್ಯರಾಗಿಯೂ ಕಾರ್ಯ ನಿರ್ವಹಿಸಿರುವ ಇವರು, ವೃತ್ತಿಯಿಂದ ನಿವೃತ್ತರಾಗಿದ್ದರೂ, ಪ್ರವೃತ್ತಿಯನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಮಿನಿ ರಂಗಮಂದಿರವನ್ನು ಹೊಂದಿರುವ ಇವರ ನಿವಾಸ ಸುರುಚಿಯಲ್ಲಿ ವಿಚಾರ ಗೋಷ್ಠಿಗಳು, ನಾಟಕ ಪ್ರದರ್ಶನಗಳು ನಡೆಯುತ್ತದಲ್ಲದೆ ರಂಗಚಿಂತನೆಯ ಕೇಂದ್ರವಾಗಿ ರಂಗಾಸಕ್ತರ ಅಭಿಮಾನಕ್ಕೆ ಪಾತ್ರವಾಗಿದೆ.

---



## ಡಾ॥ ಕೆ. ಮರುಳಸಿದ್ದಪ್ಪ (ಫೆಲೋಶಿಪ್)

ಕಳೆದ ಮೂರು ದಶಕಗಳಿಂದ ಬೆಂಗಳೂರಿನ ಹವ್ಯಾಸಿ ರಂಗಭೂಮಿಯೊಂದಿಗೆ ನಿಕಟ ಸಂಪರ್ಕ ಹೊಂದಿರುವ ಡಾ॥ ಕೆ. ಮರುಳಸಿದ್ದಪ್ಪ ರಂಗಭೂಮಿಯ ಬಗ್ಗೆ ಆಳವಾದ ಅಧ್ಯಯನ ನಡೆಸಿದ್ದಾರೆ. ಚಿಕ್ಕವಯಸ್ಸಿನಿಂದಲೂ ನಾಟಕದ ಬಗ್ಗೆ, ನಾಟಕ ಸಾಹಿತ್ಯದ ಬಗ್ಗೆ ಒಲವು ಹೊಂದಿದ್ದು, ವಯೋಮಾನ, ವಿದ್ಯೆ, ಅನುಭವ ಹೆಚ್ಚಿದಂತೆ ನಾಟಕ ಕ್ಷೇತ್ರದ ಬಗ್ಗೆ ಅತೀವ ಒಲವು, ವಿಷಯದ ಆಳ ಅಗಲಗಳನ್ನು ತಿಳಿಯುವ ನಿರಂತರತೆಯನ್ನು ಒಂದು ಶಿಸ್ತಾಗಿ ರೂಪಿಸಿಕೊಂಡವರು.

ಆಧುನಿಕ ಕನ್ನಡ ನಾಟಕ–ಸಂಶೋಧನೆ ಗ್ರಂಥಕ್ಕೆ ಡಾಕ್ಟರೇಟ್ ಪದವಿ ಪಡೆದು, ಕನ್ನಡ ನಾಟಕ ಸಮೀಕ್ಷೆ, ಕನ್ನಡ ನಾಟಕ ವಿಮರ್ಶೆ ಗ್ರಂಥಗಳನ್ನು, ಎಲೆಕ್ಟ್ರಾ, ಮಿಡಿಯಾ, ರಕ್ತ ಕಣಗಿಲೆ, ಅನುವಾದಿತ ನಾಟಕಗಳನ್ನು ನೀಡಿದ್ದಾರೆ.

ನಾಟಕ ಕುರಿತಂತೆ ಅನೇಕ ವಿದ್ಯಾರ್ಥಿಗಳ ಸಂಶೋಧನೆಗೆ ಮಾರ್ಗದರ್ಶಕರಾಗಿ, ಕನ್ನಡ ರಂಗಭೂಮಿ, ನಾಟಕ ಸಾಹಿತ್ಯ ಕುರಿತಂತೆ ವಿಶೇಷ ಉಪನ್ಯಾಸಗಳನ್ನು ರಾಜ್ಯದ ನಾನಾ ಕಡೆ ನೀಡಿ ಹಲವು ಶಿಬಿರಗಳಿಗೆ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ.

ಪ್ರಸ್ತುತ ಬೆಂಗಳೂರು ವಿ.ವಿ.ಯ ಕನ್ನಡ ಅಧ್ಯಯನ ಕೇಂದ್ರದಲ್ಲಿ ರೀಡರ್ ಆಗಿ ಸೇವೆಸಲ್ಲಿಸುತ್ತಿದ್ದಾರೆ.

---



## ಬಿ.ಪಿ. ರಾಜಮ್ಮ

ಕಳೆದ 52 ವರ್ಷಗಳಿಂದ ಸತತ ರಂಗಭೂಮಿ ಸೇವೆ ಸಲ್ಲಿಸುತ್ತಿರುವ ಬಿ.ಪಿ. ರಾಜಮ್ಮ ಬಾಲ್ಯದಲ್ಲೇ ಬಣ್ಣದ ಬದುಕಿನ ಹೊಸ್ತಿಲನ್ನು ಮೆಟ್ಟಿದವರು.

ಆಂಜನೇಯ ಪಾತ್ರದಲ್ಲಿ ವಿಶೇಷವಾದ ಹೆಗ್ಗಳಿಕೆಯನ್ನು ಗಳಿಸಿರುವ ಇವರು ಪುರುಷ ಪಾತ್ರಗಳಲ್ಲಿ ತಮ್ಮ ಅಭಿನಯ ವೈಭವವನ್ನು ಮೆರೆದಿದ್ದಾರೆ. ಅರ್ಜುನ, ರತ್ನಾಕರ, ರಾಮ, ಕೃಷ್ಣ, ನಾರದ ಮುಂತಾಗಿ ಹಲವು ವೈವಿಧ್ಯಮಯ ಪಾತ್ರಗಳಿಗೆ ಜೀವ ತುಂಬಿರುವ ಹುಟ್ಟು ಕಲಾವಿದೆ.

ರಾಜ್ಯದುದ್ದಗಲಕ್ಕೂ ಮೇಲಿನ ಪಾತ್ರಗಳನ್ನು ಪೈಲ್ವಾನ್ ಅಣ್ಣಯ್ಯಪ್ಪನವರ ನಾಟಕ ಮಂಡಳಿ, ಆರ್. ನಾಗರತ್ನಮ್ಮನವರ ಸ್ತ್ರೀ ನಾಟಕ ಮಂಡಳಿ, ಶ್ರೀಕಂಠೇಶ್ವರ ನಾಟಕ ಮಂಡಳಿ ಮುಂತಾದ ಕಂಪನಿಗಳ ನಾಟಕಗಳಲ್ಲಿ ಅಭಿನಯಿಸಿ ವಿವಿಧ ಸಂಘ ಸಂಸ್ಥೆಗಳಿಂದ ಅನೇಕ ರೀತಿಯ ಪುರಸ್ಕಾರಗಳನ್ನು ಪಡೆದಿದ್ದಾರೆ.

---



## ಬಸವಲಿಂಗಯ್ಯಶಾಸ್ತ್ರಿ

'ಬೆಳೆವ ಸಿರಿ ಮೊಳಕೆಯಲ್ಲಿ ನೋಡು' ಎಂಬಂತೆ ಬಾಲ್ಯದಿಂದಲೇ ಏಕಾಂಕ, ಪ್ರಹಸನ ಮುಂತಾದವುಗಳನ್ನು ಶಾಲಾ ದಿನಗಳಲ್ಲಿ ರಚಿಸಿ, ಅಭಿನಯಿಸುತ್ತಾ ಬೆಳೆದ ಶ್ರೀ ಬಸವಲಿಂಗಯ್ಯಶಾಸ್ತ್ರಿಯವರು ಉತ್ತರ ಕರ್ನಾಟಕದ ಖ್ಯಾತ ಕವಿಗಳು.

ಹವ್ಯಾಸಿ ತಂಡವನ್ನು ಕಟ್ಟಿ ಆಡಿದ ಸ್ವರಚಿತ 'ಸಮಾಜ ಸಮಾಧಿ' ಎಂಬ ನಾಟಕ ಸಹೃದಯ ಜನತೆಯ ಪ್ರಶಂಸೆಗೆ ಒಳಗಾಯಿತು. ಜೀವನ ನಿರ್ವಹಣೆಯ ಸಮಸ್ಯೆಗೆ

ಪರಿಹಾರವೆಂಬಂತೆ ಹಲಗೇರಿ ಜೆಟ್ಟೆಪ್ಪನವರ ಹಾಸಲಿದ್ದೇಶ್ವರ ನಾಟಕ ಸಂಘ ವೃತ್ತಿ ಕಂಪನಿಯನ್ನಾಶ್ರಯಿಸಿ, ಬಣ್ಣದ ಬದುಕಿನ ಪ್ರವೇಶ ಮಾಡಿದರು.

ಸಮಾಜವಿಕಾಸ ದೊಡ್ಡವಾಡ ಕಂಪನಿ, ಷಣ್ಮುಖ ವಿಜಯ ನಾಟ್ಯ ಸಂಘ, ನರೆಗಲ್, ಶ್ರೀ ಗಜಾನನ ಸಂಗೀತ ನಾಟಕ ಕಂಪನಿ ಜಮಖಂಡಿ, ಗೋಕಾಕ ಕಂಪನಿ, ಶ್ರೀ ಓಬಳೇಶ್ವರ ಕಂಪನಿ ಮುಂತಾದವುಗಳಲ್ಲಿ ಅವಿರತ ನಾಟಕ ಸಾಹಿತ್ಯ ರಚನೆಯಿಂದ ಜೀವ ನಿರ್ವಹಿಸುತ್ತಾ ಬಂದಿದ್ದಾರೆ.

ಇವರ ರೇಣುಕಾ ಮಹಾತ್ಮೆ, ಶ್ರೀ ಸಿದ್ಧಾರೂಢ ಮಹಾತ್ಮೆ, ನಮ್ಮ ಸ್ವಾತಂತ್ರ, ಶ್ರೀ ಬಸವೇಶ್ವರ ಮಹಾತ್ಮೆ ಮುಂತಾದ ನಾಟಕಗಳು ಹಲವಾರು ನಾಟಕ ಕಂಪನಿಗಳ ಖಾಯಂ ನಾಟಕಗಳಾಗಿ ಪ್ರದರ್ಶನ ಕಾಣುತ್ತಿವೆ. ಶ್ರೀ ರೇಣುಕಾ ಮಹಾತ್ಮೆ ಬಾನುಲಿಯಲ್ಲೂ ಪ್ರಸಾರವಾಗಿ ಪ್ರಸಿದ್ಧಿಯನ್ನು ಹೆಚ್ಚು ವ್ಯಾಪಕಗೊಳಿಸಿದೆ.

---



## ಬಸಯ್ಯ ಕರಬಸಯ್ಯ, ಹೆಬ್ಬಾಳಮಠ

ಎಂಟನೇ ವರ್ಷಕ್ಕೆ ಬಣ್ಣದ ಬದುಕಿನಲ್ಲಿ ಸುಖವನ್ನು ಅರಸಿ ಬಂದವರು. 52 ವರ್ಷಗಳು ಸತತ ಬಣ್ಣ ಹಾಕಿ ಕಲಾ ರಸಿಕರ ಮನಸ್ಸನ್ನು ಸಂತೋಷಪಡಿಸಿದ ಸಾರ್ಥಕ ಸೇವೆ ಇವರದು.

ಗರುಡ ಸದಾಶಿವರಾಯರ ಕಂಪನಿಯಲ್ಲಿ ರಂಗಪ್ರವೇಶ ಮಾಡಿ, ಹಲಗೇರಿ ಜಟ್ಟೆಪ್ಪನವರ ಕಂಪನಿ, ಅಥಣಿ ಭಾಗ್ಯೋದಯ ಕಂಪನಿ, ಗೋಕಾಕ ಶಾರದ ಕಂಪನಿ, ದೊಡ್ಡವಾಡ ಸಮಾಜ ವಿಕಾಸ ಕಂಪನಿಗಳಲ್ಲಿ ನಟರಾಗಿ ಸೇವೆ ಸಲ್ಲಿಸಿದ್ದಾರೆ. ಕಲಾ ವಿಲಾಸ ಕಂಪನಿ (ಗೋಕಾಕ) ಎಂಬ ಸಂಸ್ಥೆಯನ್ನು ಹುಟ್ಟು ಹಾಕಿ ಬಣ್ಣದ ಬದುಕಿನ ಎಲ್ಲಾ ಮಜಲುಗಳನ್ನು ತುಳಿದಿದ್ದಾರೆ. ವಿಶ್ರಾಂತ ಬದುಕಿನಲ್ಲೂ ಬಣ್ಣದ ಗೆರೆಗಳನ್ನು ತಮ್ಮ ಮುಖದ ನೆರಿಗೆಗಳಲ್ಲಿ ಕಾಣುತ್ತಿರುವ ಬಸಯ್ಯ ಕರಬಸಯ್ಯ ಹೆಬ್ಬಾಳ ಮಠ ಅವರದು ಸಾರ್ಥಕ ಬದುಕು.

---



## ಎಸ್.ಕೆ. ಭಗವಾನ್

ದೊರೆ ಭಗವಾನ್ ಜೋಡಿಯ ಭಗವಾನ್ ಇಂದು ಕನ್ನಡ ಚಿತ್ರರಂಗದ ಪ್ರಮುಖ ಹೆಸರು. ಬಹುತೇಕ ಕಲಾವಿದರ ಪೂರ್ವಾಶ್ರಮ ರಂಗಭೂಮಿಯಾಗಿರುವಂತೆ ಭಗವಾನರು ಕೂಡ ಬಣ್ಣದಬದುಕನ್ನು ಮೆಟ್ಟಿಲಾಗಿ ಮಾಡಿಕೊಂಡು ಮೇಲೆ ಬಂದವರು.

ರಂಗಭೂಮಿಯ ಬಗ್ಗೆ ಇಂದಿಗೂ ಕಾಳಜಿ ಹೊಂದಿರುವ ಭಗವಾನ್ ಶ್ರೀ ಹಿರಣ್ಣಯ್ಯ ಮಿತ್ರ ಮಂಡಲಿಯ ಮೂಲಕ ವೃತ್ತಿ ರಂಗಪ್ರವೇಶ ಮಾಡಿದರು. ಕಾಲೇಜು ದಿನಗಳಲ್ಲಿ ಸ್ತ್ರೀ ಪಾತ್ರಗಳನ್ನು ಅಭಿನಯಿಸುತ್ತಿದ್ದ ಇವರಿಗೆ, ಇಲ್ಲಿ ದೊರೆತಿದ್ದು ಸ್ತ್ರೀ ಪಾತ್ರಗಳೇ, ದೇವದಾಸಿ, ವಿಶ್ವಾಮಿತ್ರ, ಬೇಡರ ಕಣ್ಣಪ್ಪ, ರಾಮ-ರಾವಣ ಇತ್ಯಾದಿ ನಾಟಕಗಳಲ್ಲಿ ಮುಖ್ಯ ಸ್ತ್ರೀ ಪಾತ್ರಗಳಲ್ಲಿ ರಂಜಿಸಿದರು.

ವೃತ್ತಿ ಕಂಪನಿಗಳಲ್ಲಿ ವಿವಿಧ ಹುದ್ದೆಗಳಲ್ಲಿ ದುಡಿದ ಇವರು ಕ್ರಮೇಣ ಚಿತ್ರರಂಗದವರ ಕಣ್ಣಿಗೂ ಬಿದ್ದು ಹಲವು ವಿಭಾಗಗಳಲ್ಲಿ ಪರಿಣತಿಯನ್ನು ಸಾಧಿಸಿ, ಕನ್ನಡದ ಮುಖ್ಯ ನಿರ್ಮಾಪಕ-ನಿರ್ದೇಶಕರಲ್ಲಿ ಒಬ್ಬರೆನಿಸಿದರು. ಚಿತ್ರ ಕಲಾವಿದರು ಸೇರಿ ಸ್ಥಾಪಿಸಿದ ಕನ್ನಡ ಚಲಚಿತ್ರ ಕಲಾವಿದರ ಸಂಘದ ಸಕ್ರಿಯ ಸದಸ್ಯರಾಗಿ ಕರ್ನಾಟಕದಾದ್ಯಂತ ನಾಟಕಗಳನ್ನಾಡಿದ ಕೀರ್ತಿ ಇವರದು.

---



## ಎಂ.ಬಿ. ಮುನಿಯಪ್ಪ

ವೃತ್ತಿ ರಂಗಭೂಮಿಯಲ್ಲಿ ಪ್ರಧಾನ ಅಂಶಗಳಲ್ಲಿ ಸಂಗೀತವು ಒಂದು. ವೃತ್ತಿ ರಂಗ ಸಂಗೀತದಲ್ಲಿ ಹಲವು ವಿಶಿಷ್ಟತೆಗಳನ್ನು ಸಾಧಿಸಿದವರು ಎಂ. ಬಿ. ಮುನಿಯಪ್ಪನವರು. 10 ವರ್ಷದವರಾಗಿದ್ದಾಗಲೆ ರಂಗಭೂಮಿಯಿಂದ ಆಕರ್ಷಿತರಾಗಿ ಅನೇಕ ಕಂಪನಿಗಳಲ್ಲಿ ದುಡಿದಿದ್ದಾರೆ.

ಗುಬ್ಬಿ ಕಂಪನಿಯಲ್ಲಿ 25 ವರ್ಷಕ್ಕೂ ಹೆಚ್ಚು ಕಾಲ ದುಡಿದು ನಟನೆ, ಸಂಗೀತ ತರಬೇತಿಗಳಲ್ಲಿ ತಮ್ಮ ಬದುಕನ್ನು ಕಳೆದಿದ್ದಾರೆ. ಅನೇಕ ವಾದ್ಯಗಳನ್ನು ನುಡಿಸುವ ಇವರು ವಾದ್ಯಗೋಷ್ಠಿಗಳನ್ನು ನಿರ್ವಹಿಸಿದ್ದಾರೆ. ಅನೇಕ ನಾಟಕಗಳಿಗೆ ಸಂಗೀತ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದ್ದಾರೆ.

---



## ಮಾರುತೇಶ ಮಾಂಡ್ರೆ

ಉತ್ತರ ಕರ್ನಾಟಕದ ಪ್ರಮುಖ ನಾಟಕಕಾರರಲ್ಲಿ ಮಾರುತೇಶ ಮಾಂಡ್ರೆ ಒಬ್ಬರು. ಶಾಲೆ ಕಲಿತಿದ್ದು ಸ್ವಲ್ಪವಾದರೂ ಇವರ ಸಾಹಿತ್ಯ ಸೇವೆ ಅಪೂರ್ವವಾದುದು. ಹದಿ ವಯಸ್ಸಿಗೆ ನಾಟಕ ರಚನೆ ಮಾಡಿದ ಇವರ ಅನೇಕ ರಂಗಕೃತಿಗಳು ಬಹಳ ಮನ್ನಣೆಗಳಿಸಿವೆ. ಬಹಳ ಬೇಡಿಕೆಯನ್ನು ಹೊಂದಿವೆ. 150ಕ್ಕೂ ಮಿಕ್ಕಿ ಇವರು ನಾಟಕಗಳನ್ನು ರಚಿಸಿದ್ದಾರೆ. ಅನೇಕ ಮಹಾತ್ಮರ ಜೀವನ ಚರಿತ್ರೆಗಳು, ಭಕ್ತಿಗೀತೆಗಳನ್ನು ರಚಿಸಿದ್ದಾರೆ.

ಸೌಭಾಗ್ಯಲಕ್ಷ್ಮಿ, ಸ್ತ್ರೀರತ್ನ, ಅಮೃತಾ, ಗುರುವಿನ ಗದ್ದ, ನರಗುಂದಬಂಡಾಯ, ದೇಸಾಯರ ದರ್ಬಾರು, ಧರ್ಮದೇವತೆ ಮುಂತಾದ ನಾಟಕಗಳು ನಾಡಿನ ಖ್ಯಾತ ಕಂಪನಿಗಳಲ್ಲಿ ನೂರಾರು ಪ್ರದರ್ಶನಗಳನ್ನು ಕಂಡು ಪ್ರಖ್ಯಾತವಾಗಿವೆ. 45 ವರ್ಷಗಳಿಂದ ಸತತವಾಗಿ ನಾಟಕಗಳನ್ನು ರಚಿಸುತ್ತಿರುವ ಇವರು ಅನೇಕ ವೃತ್ತಿ ಕಂಪನಿಗಳ ಏಳಿಗೆಗೆ ಪರೋಕ್ಷವಾಗಿ ಕಾರಣರಾಗಿದ್ದಾರೆ.

ಶರಣ ಸಾಹಿತ್ಯರತ್ನ ಮಾರುತೇಶ ತುಳಜಾರಾಮ ಮಾಂಡ್ರೆ ಎಂದೇ ಪ್ರಸಿದ್ಧರಾದ ಇವರು ನಾಟಕ ಸಾಹಿತ್ಯದ ಅನೇಕ ಯಶಸ್ವಿ ಕೃತಿಗಳ ಜನಕರಾಗಿದ್ದಾರೆ.

---



## ಆರ್.ಎಂ. ಸ್ವಾಮಿ

ಕಳೆದ  ವರ್ಷಗಳಿಂದ ರಂಗಭೂಮಿಯಲ್ಲಿ ಸೇವೆ. ನಟರಾಗಿ, ನಿರ್ಮಾಪಕರಾಗಿ, ವ್ಯವಸ್ಥಾಪಕರಾಗಿ, ಸಂಘಟಕರಾಗಿ ಇವರ ಪ್ರತಿಭೆ ಪ್ರಕಟವಾಗಿದೆ. ಹವ್ಯಾಸಿ ರಂಗಭೂಮಿಯ ಸಂಪರ್ಕದಿಂದ ಇವರು ಎರಡೂ ಕ್ಷೇತ್ರದಲ್ಲಿ ಗಣನೀಯವಾಗಿ ಸೇವೆ ಸಲ್ಲಿಸಿದ್ದಾರೆ.

ಸಾಮಾಜಿಕ, ಐತಿಹಾಸಿಕ ಹಾಗು ಪೌರಾಣಿಕ ನಾಟಕಗಳಲ್ಲದೆ, ಆಧುನಿಕ ನಾಟಕಗಳಲ್ಲಿ, ದೂರದರ್ಶನದ ನಾಟಕಗಳಲ್ಲೂ ಅಭಿನಯಿಸಿ ಸೈ ಎನ್ನಿಸಿಕೊಂಡಿದ್ದಾರೆ. ಇವರಿಗೆ ಅನೇಕ ಸಂಘ ಸಂಸ್ಥೆಗಳು ಪುರಸ್ಕಾರಗಳನ್ನು ನೀಡಿ ಗೌರವಿಸಿವೆ. ಸಂಸಾರನೌಕೆ, ದೇವದಾಸಿ, ದಾನಶೂರಕರ್ಣ, ವಿರಾಟ ಪರ್ವ, ಗಿರಿಜಾ ಕಲ್ಯಾಣ ಮುಂತಾದ ನಾಟಕಗಳಲ್ಲಿ ಗಮನಾರ್ಹ ಅಭಿನಯ ನೀಡಿದ್ದಾರೆ.

---



## ಡಿ.ಬಿ. ಶಂಕರಪ್ಪ

ವೃತ್ತಿಯಿಂದ ಶಿಕ್ಷಕರಾದ ಡಿ.ಬಿ. ಶಂಕರಪ್ಪ ಚಿಕ್ಕಂದಿನಿಂದಲೂ ನಾಟಕದ ಬಗ್ಗೆ ವಿಪರೀತ ಪ್ರೀತಿ ಉಳ್ಳವರು. ಶಿವಮೊಗ್ಗ ಜಿಲ್ಲೆಯಲ್ಲಿ ನಟರೆಂದೇ ಗುರ್ತಿಸಲ್ಪಡುವ ಇವರು ತಮ್ಮ ಸುತ್ತಲಮುತ್ತಲ ಊರುಗಳಲ್ಲಿ ತಮ್ಮ ಅಭಿನಯದಿಂದ ಪ್ರಖ್ಯಾತರಾಗಿದ್ದಾರೆ.

1960ರಲ್ಲಿ ರಂಗಪ್ರವೇಶ ಮಾಡಿದ ಇವರು, ನಾಟಕದಿಂದ ನಾಟಕಕ್ಕೆ ಪ್ರತಿ ಹಂತದಲ್ಲೂ ಬೆಳೆಯುತ್ತಾ ಬಂದರು. ಒಂದೊಂದು ಪಾತ್ರ ಅಭಿನಯಿಸುವಾಗಲು 3–4 ತಿಂಗಳು ಸತತ ಅಭ್ಯಾಸ ಮಾಡಿ, ಆ ಪಾತ್ರಗಳನ್ನು ಹಿಂದೆ ಮಾಡುತ್ತಿದ್ದ ಹಿರಿಯರನ್ನು ಕಂಡು, ಅವರ ಅನುಭವ ಮಾರ್ಗದರ್ಶನದಲ್ಲಿ ಕಲಿತು ಪ್ರದರ್ಶಿಸುವ ಪರಿಪಾಠದಿಂದ ಉತ್ತಮ ನಟರಾಗಿ ಬೆಳೆದಿದ್ದಾರೆ.

ಕಂಪನಿ ನಾಟಕಗಳ ಜೊತೆಗೆ ಆಧುನಿಕ ನಾಟಕಗಳ ಪ್ರಯೋಗಗಳನ್ನು ಮಾಡಿಸುವ ಇವರು, ನಿರ್ದೇಶಕರಾಗಿ ತಮ್ಮ ಪ್ರತಿಭೆಯನ್ನು ಅನೇಕ ಬಾರಿ ತೋರಿದ್ದಾರೆ. ನಾಟಕ, ಶಿಕ್ಷಣ, ಸಾಹಿತ್ಯ ಹಾಗು ರಾಜಕೀಯ ವಲಯದಲ್ಲಿ ಡಿ.ಬಿ. ಶಂಕರಪ್ಪ ತಮ್ಮದೇ ಆದ ಒಲವು ಹೊಂದಿದ್ದು, ತಮ್ಮ ವಿದ್ಯಾರ್ಥಿಗಳಿಗೆ ಆದರ್ಶ ಶಿಕ್ಷಕರಾಗಿದ್ದಾರೆ.



## ತಿರುಮಲರಾವ್ ಅನಂತರಾವ್ ದೇಶಪಾಂಡೆ

ಹದಿಹರೆಯದಲ್ಲಿ ಓದಿದ 'ಶುಭೋದಯ' ಸಚಿತ್ರ ಭಾರತ ಪತ್ರಿಕೆಗಳ ಪ್ರಭಾವ ಮತ್ತು ಶ್ರೀ ವಾಸುದೇವಾಚಾರ್ಯ ಕೆರೂರು ನಾಟಕಗಳ ಓದಿನ ಪ್ರಭಾವದಿಂದ ರಂಗಭೂಮಿಗೆ ಆಕರ್ಷಿತರಾದವರು ತಿರುಮಲರಾವ್. ಅ. ದೇಶಪಾಂಡೆಯವರು.

1927ರಲ್ಲಿ ಅಸ್ತಿತ್ವಕ್ಕೆ ಬಂದು, ನಿರಂತರ ರಂಗಚಳವಳಿಯನ್ನು ನಡೆಸುತ್ತಿರುವ ವಾಸುದೇವ ವಿನೋದಿನಿ ನಾಟ್ಯ ಸಭೆಯ ಮೂಲಕ ರಂಗಪ್ರವೇಶ ಮಾಡಿ, ಇಂದಿನವರೆಗೂ ಸಂಸ್ಥೆಯೊಂದಿಗೆ ಟಿ.ಎ. ದೇಶಪಾಂಡೆಯವರು ರಂಗಚಟುವಟಿಕೆಯನ್ನು ಜೀವಂತವಾಗಿಟ್ಟಿದ್ದಾರೆ.

'ನಾಗರೀಕ', 'ಗೆಳೆಯ ನೀನು ಹಳೆಯ ನಾನು', 'ಧರ್ಮದುರಂತ', 'ಜರಾಸಂಧ', 'ಪತೀವಶೀಕರಣ' ಮುಂತಾದ ನಾಟಕಗಳಲ್ಲಿ ಪಾತ್ರ ಮಾಡಿ ಜನಮೆಚ್ಚುಗೆ, ಪತ್ರಿಕಾಪ್ರಶಂಸೆಯನ್ನು ಗಳಿಸಿದರು. ಬಾಗಲಕೋಟೆ, ಧಾರವಾಡ, ಬೆಂಗಳೂರು, ಮುಂಬಯಿ, ದಿಲ್ಲಿಗಳಲ್ಲಿ ನಾಟಕವಾಡಿದ ಹೆಮ್ಮೆ ಇವರದು. ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಜೈಲುವಾಸವನ್ನು ಅನುಭವಿಸಿದ ದೇಶಭಕ್ತ.



## ವಿ. ವಜ್ರಮುನಿ

'ಪ್ರಚಂಡ ರಾವಣ' ಖ್ಯಾತಿಯ ವಿ. ವಜ್ರಮುನಿ ಇಂದು ಸಿನಿಮಾ ರಂಗದಲ್ಲಿ ಚಿರಪರಿಚಿತರು. ಪ್ರಾರಂಭಿಕ ದಿನಗಳಲ್ಲಿ ರಂಗ ನಾಟಕಗಳಲ್ಲಿ ತಮ್ಮ ಅಭಿನಯ ಪ್ರೌಢಿಮೆಯಿಂದ ಹಲವಾರು ಗಣ್ಯರಿಂದ ಬೆನ್ನು ತಟ್ಟಿಸಿಕೊಂಡವರು.

'ಕನಕಭೂಷಣ ಕಲಾವಿದರು'. ಹವ್ಯಾಸಿ ತಂಡದಲ್ಲಿ ಸ್ಥಾನ ಪಡೆದು, ಕಲಾಸೇವೆ, ಸಮಾಜ ಸೇವೆಯನ್ನು ಜೊತೆ ಜೊತೆ ಮಾಡುತ್ತಾ ಬಂದವರು. ದೇವದಾಸಿ, ಕುಮಾರರಾಮ,

ಎಚ್ಚಮನಾಯಕ. ಮುಂತಾದ ನಾಟಕಗಳಿಂದ ಜನಮನ್ನಣೆ ಗಳಿಸಿದವರು. ಕಣಗಾಲ್ ಪ್ರಭಾಕರಶಾಸ್ತ್ರಿ ಅವರ 'ಪ್ರಚಂಡರಾವಣ' ಇವರ ಅಭಿನಯ ಕಲೆಗೆ ಸೂಕ್ತ ಮನ್ನಣೆ ತಂದುಕೊಟ್ಟಿತ್ತು. ನಂತರದಲ್ಲಿ ಚಿತ್ರರಂಗಪ್ರವೇಶ. ಅಲ್ಲಿಯೂ ಸಲ್ಲಿದವರು. ಈಗಲೂ ಉತ್ತರ ಕರ್ನಾಟಕದ ಕಂಪನಿಗಳಲ್ಲಿ ಪಾತ್ರ ಮಾಡುತ್ತಿದ್ದಾರೆ.

'ನಟಭೈರವ'ವೆಂಬ ಬಿರುದು ಪಡೆದ ಇವರು ಉತ್ತಮ ಅಭಿನಯಕ್ಕಾಗಿ ರಾಜ್ಯ ಸರ್ಕಾರ ಪುರಸ್ಕಾರ ಪಡೆದಿದ್ದಾರೆ. ಸಹಕಾರ ವಲಯದಲ್ಲಿ ಈಗಲೂ ದುಡಿಯುತ್ತಿರುವ ವಜ್ರಮುನಿ, ಕರ್ನಾಟಕ ಚಲನಚಿತ್ರ ಸೆನ್ಸಾರ್ ಮಂಡಳಿ ಸದಸ್ಯರಾಗಿದ್ದಾರೆ.



## ವಸಂತ್‌ರಾವ್ ವೆಂಕೋಸಾ ನಾಕೋಡ್

ಇವರ ನಾಟಕದ ಗೀಳು ತಂದೆಯವರಿಂದ ಬಂದ ಬಳುವಳಿ. ಶಾಲಾಹಂತದಲ್ಲಿ ಹವ್ಯಾಸಿನಾಟಕಗಳಲ್ಲಿ ಅಭಿನಯಿಸಿದ ವಸಂತರಾವ್, ಎರಡನೇ ಮಹಾಯುದ್ಧದಲ್ಲಿ ವಿಮಾನಯಾನದ ವೈರ್‌ಲೆಸ್ ಅಪರೇಟರ್ ಆಗಿ ಕಾರ್ಯನಿರ್ವಹಿಸಿದ್ದರು.

ಯುದ್ಧಾನಂತರ ಇವರು ಮರಳಿದ್ದು ರಂಗಭೂಮಿಗೆ. ತಮ್ಮದೇ 'ಶ್ರೀ ವಸಂತ ನಾಟಕ ಕಲಾ ಸಂಘ'ವನ್ನು ಸ್ಥಾಪಿಸಿ 50ಕ್ಕೂ ಹೆಚ್ಚು ನಾಟಕಗಳನ್ನು ಪ್ರದರ್ಶಿಸಿದರು. ಕರ್ನಾಟಕದ ಉದ್ದಗಲಕ್ಕೂ ಇವರು ತಮ್ಮ ಕಂಪನಿಯೊಂದಿಗೆ ಸಂಚರಿಸಿದರು.

ಸಿನಿಮಾ ದೂರದರ್ಶನಗಳಲ್ಲೂ ಅಭಿನಯಿಸಿರುವ ಇವರ ಮುಖ್ಯ ಚಿತ್ರಗಳು 'ಒಂದಾನೊಂದು ಕಾಲದಲ್ಲಿ' ಕಿತ್ತೂರು ಚೆನ್ನಮ್ಮ, ದಶಾವತಾರ, ಸಂಗ್ಯಾಬಾಳ್ಯ ಮುಂತಾದವು. ಇವರು ಅಭಿನಯಿಸಿದ 'ಸಬೀನಾ' ಧಾರವಾಹಿ ದೂರದರ್ಶನದಲ್ಲಿ ಅಪಾರ ಮೆಚ್ಚುಗೆ ಗಳಿಸಿದೆ.

ಇವರು ಆಕಾಶವಾಣಿ ಕಲಾವಿದರು ಹೌದು. ಕರ್ನಾಟಕ ಸರ್ಕಾರ ಇವರಿಗೆ ಗೌರವ ಧನ ನೀಡಿ ಪ್ರತಿಭಾವಂತ ನಟ ಎಂದು ಗುರುತಿಸಿದೆ.



## ಭರಮಪ್ಪ ಹನುಮಪ್ಪ ಪೂಜಾರ (ವಿಶಿಷ್ಟ ಸೇವೆ)

ಬಯಲಾಟದಲ್ಲಿ ತಮ್ಮ ಕಂಚಿನ ಕಂಠದ ಭಾಗವತಿಕೆಯಿಂದ ಪರಿಚಿತರಾದ ಭರಮಪ್ಪ ಹನುಮಪ್ಪ ಪೂಜಾರ ಅವರು ಉತ್ತರ ಕರ್ನಾಟಕದ ಜಾನಪದ ಕಲಾವಿದರಲ್ಲಿ ವಿಶಿಷ್ಟ ಸ್ಥಾನ ಗಳಿಸಿದ್ದಾರೆ.

ಬಳಿಗೇ ಶ್ರೀ ವಿರೂಪಾಕ್ಷಪ್ಪ ಮಾಸ್ತರ ಅವರ ಶಿಷ್ಯ ವೃತ್ತಿ ದೊರೆತಿದ್ದು ಪೂಜಾರರ ಪೂರ್ವ ಜನ್ಮದ ಪುಣ್ಯ. ನಾಟಕ-ಬಯಲಾಟಗಳನ್ನು ಮಾಸ್ತರರು ನಡೆಸಿ ಕೊಡುವಾಗ, ತಾಲೀಮು ನೀಡುವಾಗ ಹಗಲು ರಾತ್ರಿ ಎನ್ನದೆ ಜೊತೆಗಿದ್ದು ತಮ್ಮ ಕಂಠ ಸಿರಿಯ ಸಂಸ್ಕಾರವನ್ನು ಸಾಧಿಸಿದರು.

ಪ್ರಾರಂಭಿಕ ದಿನಗಳಲ್ಲಿ ಹೆಣ್ಣು ಪಾತ್ರಗಳನ್ನು ಅಭಿನಯಿಸುತ್ತಿದ್ದ ಪೂಜಾರರು ಕ್ರಮೇಣ ಮಾಸ್ತರರಾಗಿ ಪಾಂಡು ವಿಜಯ, ರಾಮಾಂಜನೇಯ ಯುದ್ಧ, ಬಭ್ರುವಾಹನ, ಕುರುಕ್ಷೇತ್ರ, ಭಸ್ಮಾಸುರ, ಪ್ರಮಿಳೆ, ಮುಂತಾದ 33 ಬಯಲಾಟಗಳನ್ನು ನಿರ್ದೇಶಿಸಿ, ನೂರಾರು ಊರುಗಳಲ್ಲಿ ಪ್ರದರ್ಶಿಸಿದ್ದಾರೆ.

ಹಾಡಿದರೆ ನೀರವ ರಾತ್ರಿಯಲ್ಲಿ ಹತ್ತೂರಿಗೂ ಕಂಠಸಿರಿಯನ್ನು ಹಂಚುವ ಪೂಜಾರರು 'ಕಂಚಿನ ಕಂಠ' ಎಂಬುದರ ಮಾದರಿ ಎಂದರೆ ತಪ್ಪಾಗಲಾರದು. ಲಯಬದ್ಧವಾಗಿ ಸುಲಲಿತ ರಾಗಗಳನ್ನು ಹಾಡುವ ಇವರು ಉತ್ತಮ ನಟರಾಗಿ, ಹಾರ್ಮೋನಿಯಂ ಮಾಸ್ತರಾಗಿ, ಬಯಲಾಟದ ಹಿಮ್ಮೇಳದ ಮುಖ್ಯಸ್ಥರಾಗಿ ಜನಜನಿತರಾಗಿದ್ದಾರೆ.

---



## ಕೃಷ್ಣ ಪೇಂಟರ್ (ವಿಶಿಷ್ಟ ಸೇವೆ)

ರಂಗಭೂಮಿಯಲ್ಲಿ ಅದರಲ್ಲೂ ವೃತ್ತಿ ರಂಗಭೂಮಿಯಲ್ಲಿ ತೆರೆಗಳ ಪಾತ್ರ ಮಹತ್ವವಾದರೂ ರಸ್ತೆ, ಕಾಡು, ಅರಮನೆ, ಪಟ್ಟಣ, ಮೋಡಗಳು, ಹೀಗೆ ದೃಶ್ಯ ವೈವಿಧ್ಯವನ್ನು ಬಣ್ಣದ ಬೆಳಕಲ್ಲಿ ತೋರುವಾಗ ನಿಜವಾದ ದೃಶ್ಯಗಳೇ ಎಂಬಂತೆ ಭ್ರಮೆ ತರಿಸುವಂತೆ ಪರದೆಗಳನ್ನು ಚಿತ್ರಿಸುವುದು ಕಷ್ಟಸಾಧ್ಯ.

ಇಂತಹ ಪರಿಣತಿಯನ್ನು ಪಡೆದಿರುವ ಕೃಷ್ಣ ಅವರು ಕೃಷ್ಣಾ ಪೇಂಟರ್ ಎಂದೇ ಖ್ಯಾತರಾಗಿ ತಮ್ಮ ಕಲಾಸೇವೆಯನ್ನು ಮಾಡುತ್ತಿದ್ದಾರೆ.

ಮೂಲತಃ ಕೋಲಾರ ಜಿಲ್ಲೆಯವರಾದ ಇವರು ಉತ್ತರ ಕರ್ನಾಟಕದ ಅನೇಕ ಕಂಪನಿಗಳಿಗೆ ಇವರು ಪರದೆ ಬರೆದು ಕೊಟ್ಟಿದ್ದಾರೆ. ರಂಗದ ಮೇಲೆ ತೆರೆದುಕೊಳ್ಳುವ ಪರದೆಗೆ ವಿಭಿನ್ನವಾಗಿ ತಮ್ಮ ಬದುಕನ್ನು ಎಲೆಮರೆ ಕಾಯಿಯಂತೆ ನಡೆಸುತ್ತಿದ್ದಾರೆ.

---



## ಯಮುನಾಮೂರ್ತಿ

ಪುರುಷರೇ ಸ್ತ್ರೀ ಪಾತ್ರ ಮಾಡುತ್ತಿದ್ದ ಕಾಲದಲ್ಲಿ 1949ರಲ್ಲಿ ಛಾಯಾ ಕಲಾವಿದರು ಅಭಿನಯಿಸಿದ 'ಬಹದ್ದೂರ ಗಂಡ' ನಾಟಕದ ಸ್ತ್ರೀ ಪಾತ್ರವನ್ನು ಮಾಡಿದ ಮಹಿಳೆ ಯಮುನಾಮೂರ್ತಿ. ಹಾಗಾಗಿ ಮೊದಲ ಹವ್ಯಾಸಿ ನಟಿ ಎಂಬ ಹೆಗ್ಗಳಿಕೆಗೆ ಇವರು ಪಾತ್ರರಾಗಿ ಕರ್ನಾಟಕದಾದ್ಯಂತ ಪರ್ವತವಾಣಿ–ಕೈಲಾಸಂ ಅವರ ನಾಟಕಗಳಲ್ಲಿ ಅಭಿನಯಿಸಿದರು. ಅಭಿನಯದ ಬಗ್ಗೆ ಒಲವು ಬಾಲ್ಯದಿಂದಲೇ.

ಭರತನಾಟ್ಯ, ಕಥಕ್ಕಳಿಯನ್ನು ಅಭ್ಯಾಸ ಮಾಡಿರುವ ಇವರು ಧಾರವಾಡ ಆಕಾಶವಾಣಿಯಲ್ಲಿ 23 ವರ್ಷಗಳ ಕಾಲ ನಟಿಯಾಗಿ, ನಿರ್ದೇಶಕಿಯಾಗಿ ಸೇವೆ ಸಲ್ಲಿಸಿದ್ದಾರೆ. ಸಾವಿರಾರು ನಾಟಕಗಳನ್ನು ಪ್ರಸ್ತುತ ಪಡಿಸಿ 60ಕ್ಕೂ ಹೆಚ್ಚು ಬಾನುಲಿ ನಾಟಕಗಳನ್ನು ಬರೆದಿದ್ದಾರೆ.

ಉತ್ತಮ ನಿರ್ದೇಶನ ಹಾಗೂ ಪ್ರಸಾರ ನಿರ್ವಹಣೆಗಾಗಿ 6 ಬಾರಿ ರಾಷ್ಟ್ರೀಯ ಪ್ರಶಸ್ತಿ ಇವರ ಪಾಲಾಗಿದೆ, ಉತ್ತರ ಕರ್ನಾಟಕದಲ್ಲಿ ನಾಟಕಕ್ಕೆ ಪರ್ಯಾಯವೆಂದರೆ ಯಮುನಾಮೂರ್ತಿ ಎಂಬುದು ಸಾಮಾನ್ಯವಾಗಿತ್ತು.

ವಿದೇಶಗಳಲ್ಲೂ ಪ್ರವಾಸ ಮಾಡಿ 'ಅಭಿನಯ ವೈವಿಧ್ಯ' ಎಂಬ ಕಾರ್ಯಕ್ರಮಗಳನ್ನು ನೀಡಿರುವ ಇವರು ಹಲವಾರು ಶಿಬಿರಗಳಲ್ಲಿ ಅಭಿನಯ–ಧ್ವನಿಯ ಬಗ್ಗೆ ಸೋದಾಹರಣ ಭಾಷಣ ಮಾಡಿದ್ದಾರೆ. ಆಕಾಶವಾಣಿ ಸೇವೆಯಿಂದ ನಿವೃತ್ತರಾಗಿದ್ದರೂ ನಾಟಕರಂಗದಲ್ಲಿ ಮೊದಲಿನಷ್ಟೆ ಆಸಕ್ತಿಯಿಂದ ದುಡಿಯುತ್ತಿದ್ದಾರೆ.

---



## ಶಾರದ ಉಮೇಶ ರುದ್ರ

ಬಹು ಮುಖ ಪ್ರತಿಭೆಯ ಶಾರದರುದ್ರ ನಾಟಕ ರಂಗಕ್ಕೆ ಪರಿಚಿತರಾಗುವ ಮುನ್ನ ಭರತ ನಾಟ್ಯವನ್ನು ತೀವ್ರವಾಗಿ ಅಭ್ಯಾಸ ಮಾಡಿದವರು. ಯು.ಎಸ್. ಕೃಷ್ಣರಾವ್ ದಂಪತಿಗಳು. ಕಲೈ ಮಾಮಣಿ ಮುತ್ತಯ್ಯ ಪಿಳ್ಳೆ, ಪದ್ಮಭೂಷಣ ಡಾ॥ ವೆಂಕಟಲಕ್ಷಮ್ಮ ಮುಂತಾದವರ ನೆಚ್ಚಿನ ಶಿಷ್ಯೆಯಾಗಿ ಭರತ ನಾಟ್ಯವನ್ನು ಅಭ್ಯಾಸ ಮಾಡಿ, ನಾಟ್ಯ ಕಲೆಯನ್ನು ಆರಾಧಿಸಿದವರು.

ರಂಗಭೂಮಿಯ ಖ್ಯಾತನಟ, ನಿರ್ದೇಶಕ ಉಮೇಶ ರುದ್ರ ಅವರನ್ನು ವಿವಾಹವಾದರು. ನಂತರ ತಮ್ಮ ಪತಿಯೊಂದಿಗೆ ರಂಗಭೂಮಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು, ನೃತ್ಯ ನಾಟಕಗಳ ಸಮನ್ವಯಗೊಳಿಸಿ ಅನೇಕ ಪ್ರಯೋಗಗಳನ್ನು ಮಾಡಿ ಯಶಸ್ವಿಯಾದರು.

ಕನ್ನಡದ ಬಹುತೇಕ ಎಲ್ಲ ಮುಖ್ಯ ನಾಟಕಕಾರರ ನಾಟಕಗಳಲ್ಲಿ ಅಭಿನಯಿಸಿರುವ ಶಾರದ ರುದ್ರ ಅವರು, ಅನೇಕ ಇಂಗ್ಲೀಷ್ ನಾಟಕಗಳಲ್ಲಿ, ದೂರದರ್ಶನದಲ್ಲಿ ನಟಿಸಿದ್ದಾರೆ. ಕನ್ನಡ ರಂಗಭೂಮಿಯ ಬಗ್ಗೆ 'ನಾಟ್ಯ ಸೌರ'' ಕಾರ್ಯಕ್ರಮವನ್ನು ತಮ್ಮ ಪತಿಯೊಂದಿಗೆ ವಿದೇಶಗಳಲ್ಲೂ ಪ್ರದರ್ಶಿಸಿದ್ದಾರೆ.

ಗಿರೀಶ್ ಕಾರ್ನಾಡರ ಹಯವದನ, 'ಮಾಳವಿಕಾಗ್ನಿ ಮಿತ್ರ'ವನ್ನು ಆಧರಿಸಿದ ಹೆಚ್.ಎಸ್. ಶಿವಪ್ರಕಾಶರ 'ಮಾಳವಿಕ' ಮುಂತಾದವುಗಳನ್ನು ಸಂಗೀತ, ನೃತ್ಯ, ಸಂಭಾಷಣೆಗಳನ್ನೊಳಗೊಂಡಂತೆ ವಿಶೇಷವಾಗಿ ಪ್ರಯೋಗಿಸಿದ್ದಾರೆ. ಹಾಗೆಯೇ ಅಕ್ಕ ಮಹಾದೇವಿಯ ಬಗ್ಗೆ ಇವರ ನೃತ್ಯ ರೂಪಕ ಶಾಸ್ತ್ರೀಯ ನೃತ್ಯದ ಪರಿಶ್ರಮ ಹಾಗೂ ನಾಟಕ ರಂಗದ ಸಮ್ಮಿಲನದ ವಿಶಿಷ್ಟ ಪ್ರಯೋಗವಾಗಿದೆ.





## ಕಮನಿಧರನ್

ಕೈಗಾರಿಕಾ ಕ್ಷೇತ್ರದಿಂದ ಬಂದ ಕಲಾವಿದರಲ್ಲಿ ಕಮನಿಧರನ್‌ಗೆ ಬಹುದೊಡ್ಡ ಹೆಸರು. ಬಾಲ್ಯದಲ್ಲೇ ನೃತ್ಯಾಭ್ಯಾಸ ಮಾಡಿ, ಅನೇಕ ಪ್ರಶಸ್ತಿಗಳನ್ನು ಪಡೆದಿದ್ದ ಇವರು, ತಮ್ಮ ಎಸ್.ಎಸ್.ಎಲ್.ಸಿ. ಓದಿನ ನಂತರ ಬಿ.ಇ.ಎಲ್. ಕಾರ್ಖಾನೆ ಸೇರಿದರು.

ಅಪ್ಪಟ ಕಲಾವಿದೆಯಾಗಿದ್ದ ಇವರು ಕೈಗಾರಿಕಾ ಸ್ಪರ್ಧೆ ನಾಟಕವೊಂದರಲ್ಲಿ ಅಭಿನಯಿಸಿ ಅತ್ಯುತ್ತಮ ನಟಿ ಪ್ರಶಸ್ತಿ ಪಡೆದರು. ನಂತರದಲ್ಲಿ ಅವಿರತವಾಗಿ ನಾಟಕಗಳಲ್ಲಿ ಅಭಿನಯಿಸುತ್ತಾ ಬಂದರು.

ಇದುವರೆಗೆ ಸುಮಾರು 600ಕೂ ಹೆಚ್ಚು ಕನ್ನಡ ನಾಟಕಗಳಲ್ಲಿ ಅಭಿನಯಿಸಿರುವ ಇವರು ಮಲೆಯಾಳು, ತಮಿಳು, ತೆಲುಗು, ತುಳು, ಹಿಂದಿ, ಬಂಗಾಳಿ ಭಾಷೆಗಳ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ರಾಷ್ಟ್ರದ ವಿವಿಧ ಕೇಂದ್ರಗಳಲ್ಲಿ ಅಮೆರಿಕಾದ 11 ಕೇಂದ್ರಗಳಲ್ಲಿ ಇವರು ನಾಟಕ ಪ್ರದರ್ಶನ ನೀಡಿದ್ದಾರೆ.

ಚಲನಚಿತ್ರ ಕಲಾವಿದೆಯಾಗಿ 130 ಕ್ಕೂ ಹೆಚ್ಚು ಚಲನಚಿತ್ರಗಳನ್ನು ಅಭಿನಯಿಸಿದ್ದಾರೆ. 'ಅನುಭವ' ಚಿತ್ರದ ಅಭಿನಯಕ್ಕೆ ರಾಜ್ಯ ಸರ್ಕಾರದ ಉತ್ತಮ ಪೋಷಕ ನಟಿ ಪ್ರಶಸ್ತಿ ಪಡೆದಿರುವ ಕಮನಿಧರನ್, ಕಾರ್ಮಿಕರಾಗಿ ದುಡಿಯುತ್ತಲೇ ಕಲಾರಂಗದಲ್ಲಿ ನಿರಂತರ ಸೇವೆ ಸಲ್ಲಿಸುತ್ತಿದ್ದಾರೆ.





## ಚಂದ್ರಶೇಖರ ಪಾಟೀಲ್

ಚಂಪಾ ಎಂದೇ ಖ್ಯಾತರು. ನಾಟಕ, ಕಾವ್ಯ, ಪತ್ರಿಕೋದ್ಯಮ, ರಾಜಕೀಯ ಹೀಗೆ ಹತ್ತು ಹಲವು ವಿಚಾರಗಳಲ್ಲಿ ಪ್ರಬುದ್ಧತೆಯನ್ನು ಸಾಧಿಸಿದವರು.

ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರು, ಸಂಕ್ರಮಣ, ಸಾಹಿತ್ಯ, ಸಂಕಲನಗಳ ಸಂಪಾದಕರು. ಈವರೆಗೆ 9 ಕವನ ಸಂಕಲನಗಳನ್ನು ಪ್ರಕಟಿಸಿದ್ದು 'ಬಾನುಲಿ', 'ಗಾಂಧಿಸ್ಮರಣೆ', 'ಅರ್ಧಸತ್ಯದ ಹುಡುಗಿ' ಸಂಕಲನಗಳಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಬಂದಿವೆ.

ಅಸಂಗತ ನಾಟಕ ಪರಂಪರೆಗೆ ಗಣನೀಯ ಕೊಡುಗೆ ನೀಡಿರುವ ಚಂಪಾ ಅವರ ಕೊಡೆಗಳು, ಅಪ್ಪ, ಟಿಂಗರಬುಡ್ಡಣ್ಣ, ಕುಂಟಾ ಕುಂಟಾ ಕುರವತ್ತಿ, ಗೋಕರ್ಣದ ಗೌಡಶಾನಿ, ಮುಂತಾದ ನಾಟಕಗಳು ಪ್ರಖ್ಯಾತಿ ಪಡೆದಿದೆ. ಗೋಕರ್ಣದ ಗೌಡಶಾನಿ ನಾಟಕಕ್ಕೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ದೊರೆತಿದೆ.

ಅನೇಕ ಜನಪರ ಚಳವಳಿಗಳಲ್ಲಿ, ಕನ್ನಡ ಪರ ಚಳವಳಿಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವ ಚಂಪಾ ನಮ್ಮ ಸಾಂಸ್ಕೃತಿಕ ಸಂದರ್ಭದಲ್ಲಿ ತಮ್ಮ 'ಸಂಕ್ರಮಣ' ಪತ್ರಿಕೆಯ ಮೂಲಕ ವಿಶಿಷ್ಟವಾಗಿ ಧ್ವನಿಸಿದ್ದಾರೆ.





## ತುಮಕೂರು ವೆಂಕಣ್ಣದಾಸ್ ದ್ವಾರಕಾನಾಥ್

ರಂಗ ಚಟುವಟಿಕೆ ಒಂದು ಚಳವಳಿಯಂತೆ ನಡೆಸುವ ಮಂದಿ ವಿರಳ. ಇಂತಹ ವಿರಳರಲ್ಲಿ ದ್ವಾರಕಾನಾಥ್-ಪ್ರಭಾತ್‌ನ 'ದ್ವಾರಕಿ' ಕೂಡ ಒಬ್ಬರು.

ಯಾವೊಂದು ಕಲಾಮಾಧ್ಯಮ ಪರಿಪೂರ್ಣವಾಗಿ ಬೆಳೆಯಬೇಕಾದರೆ, ಉಳಿದು ಬರಬೇಕಾದರೇ ಪೂರಕ ರಂಗ ಕಲೆಗಳು, ಸಲಕರಣೆಗಳು ಅತ್ಯಗತ್ಯ. ಇಂತಹ ಪೂರಕ ರಂಗ ಸಲಕರಣೆಗಳನ್ನು ಸಂಗ್ರಹಿಸಿ, ಅಗತ್ಯ ಬಿದ್ದವರಿಗೆ ನೀಡಿ, ಒಟ್ಟು ರಂಗಭೂಮಿಯ ಬೆಳವಣಿಗೆಯಲ್ಲಿ ಪ್ರೋತ್ಸಾಹಕರಾಗಿ ನಿಂತವರು ದ್ವಾರಕಾನಾಥ್.

ಪ್ರಭಾತ್ ಸಂಸಾರ/ಸಂಸ್ಥೆಯ ಸದಸ್ಯರಾಗಿ, ಇಡೀ ಸಂಸ್ಥೆಯ ಸೂತ್ರಧಾರರಾಗಿ ಪ್ರತಿಷ್ಠಿತ ಸಂಸ್ಥೆಯನ್ನಾಗಿ ಮುನ್ನಡೆಸಿದ ಕೀರ್ತಿ ಇವರದು. ಅವಿಭಕ್ತ ಕುಟುಂಬವೊಂದು, ಸಂಪೂರ್ಣ ಕಲಾತಂಡವಾಗಿ ರೂಪಾಂತರಗೊಳ್ಳುವಾಗ ದ್ವಾರಕಿ ಅವರು ತೋರಿದ ಶ್ರದ್ಧೆ, ಸಂಯಮ ಹಾಗೂ ರಂಗಭೂಮಿಯ ಬಗೆಗಿನ ಕಳಕಳಿ ಇಂದು ಎಲ್ಲರಿಗೂ ಮಾದರಿ.

ನಟರಾಗಿ, ನಿರ್ದೇಶಕರಾಗಿ ಎಲ್ಲಕ್ಕಿಂತ ಹೆಚ್ಚಾಗಿ ನೇಪಥ್ಯತಜ್ಞರಾಗಿ ಹೊಸರಂಗ ಪರಂಪರೆಯನ್ನು ಪೀಳಿಗೆಯಿಂದ ಪೀಳಿಗೆಗೆ ಮುನ್ನಡೆಸಿದ ವಾಹಕರು. ಹಾಗಾಗಿ ದ್ವಾರಕಿ-ಪ್ರಭಾತ್ ಹಾಗೂ ರಂಗಭೂಮಿಯ ಅವಿಭಾಜ್ಯ ಪರಂಪರೆಯ ಸಂವೇದನೆಯಾಗಿ, ಸಂವಾಹಕರಾಗಿ ಪ್ರೋತ್ಸಾಹಕರಾಗಿ ಕಂಡುಬರುತ್ತಾರೆ.



## ಎಂ.ಎಸ್. ಗುಣಶೀಲನ್



ಗ್ರಾಮೀಣ ಪ್ರತಿಭೆ, ಉತ್ಸಾಹಿ ಸಂಘಟಕ. ವಿದ್ಯಾರ್ಥಿ ದೆಸೆಯಿಂದಲೆ ನಾಡಿನ ಕಲೆ ಸಂಸ್ಕೃತಿಯ ಬಗ್ಗೆ ಪ್ರೀತಿ ಅಭಿಮಾನಗಳನ್ನು ಬೆಳೆಸಿಕೊಂಡು ಬಂದವರು. ತಮ್ಮಂಥ ಗ್ರಾಮೀಣ ಪ್ರದೇಶಗಳಲ್ಲಿರುವ ಪ್ರತಿಭೆಗಳನ್ನು ಗುರುತಿಸಿ ಸೂಕ್ತ ವೇದಿಕೆಯನ್ನು ಕೊಟ್ಟು ಅವರ ಬೆಳವಣಿಗೆಗೆ ಕಾರಣರಾದವರು.

'ನಟ ಗಂಗೋತ್ರಿ' ಎಂಬ ಕಲಾ ಸಂಸ್ಥೆಯನ್ನು ಸ್ಥಾಪಿಸಿ ರಾಜ್ಯದಾದ್ಯಂತ ನಾಟಕಗಳು, ಜಾನಪದ ಮೇಳಗಳು, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂಘಟಿಸಿ ಅನೇಕ ಪ್ರಶಸ್ತಿ, ಪ್ರಶಂಸೆಗಳನ್ನು ಗಳಿಸಿದರು. ನಾಟಕ ಸ್ಪರ್ಧೆ, ವಿಚಾರ ಸಂಕಿರಣ, ರಂಗ ತರಬೇತಿ ಶಿಬಿರಗಳನ್ನು ಸಂಘಟಿಸಿ ಅನೇಕ ತರುಣ ಪ್ರತಿಭೆಗಳನ್ನು ಬೆಳಕಿಗೆ ತಂದರು.

ರಂಗ ಚಟುವಟಿಕೆಗಳ ಜೊತೆಗೆ ಸಾಹಿತಿಗಳಿಗೆ, ಕಲಾವಿದರಿಗೆ ಸನ್ಮಾನ, ಸಮಾಜ ಸೇವೆ ಮುಂತಾದ ರಚನಾತ್ಮಕ ಕೆಲಸಗಳನ್ನು ಮಾಡುತ್ತಿದ್ದಾರೆ. ಪ್ರಸ್ತುತ ದೂರದರ್ಶನದಲ್ಲಿ ಕೆಲಸ ನಿರ್ವಹಿಸುತ್ತಿರುವ ಗುಣಶೀಲನ್ ಜನಪದ ಕ್ಷೇತ್ರದಲ್ಲಿ ಸಂಶೋಧನೆ ನಡೆಸಿ 'ಜನಪದ ಕಲಾವಿದರು' ಎಂಬ ಪುಸ್ತಕ ಪ್ರಕಟಿಸಿದ್ದಾರೆ.

---

## ಜೆ. ಲೋಕೇಶ್



ಪ್ರತಿಷ್ಠಿತ ಉಲ್ಲಾಳ್‌ಶೀಲ್ಡ್ ನಾಟಕ ಸ್ಪರ್ಧೆಯ ಕೊಡುಗೆ. ನಾಟಕ ಅಕಾಡೆಮಿಯ ರಂಗ ತರಬೇತಿ ಶಿಬಿರದಲ್ಲಿ ಶ್ರೀ ರಂಗ, ಕಾರಂತ, ಬಿ.ಎಂ.ಷಾ ಮುಂತಾದವರ ಒಡನಾಟ. ಪ್ರತಿಷ್ಠಿತ ಕನ್ನಡ ಸಾಹಿತ್ಯ ಕಲಾ ಸಂಘದಿಂದ ನಾಗೇಶ್, ಕಪ್ಪಣ್ಣ, ಸಿಂಹ ಮುಂತಾದವರ ಸಂಪರ್ಕ. ರಂಗ ತರಬೇತಿ ಶಿಬಿರದ ಮೂಲಕ 'ಶಕಶೈಲೂಷಕರು' ಸ್ಥಾಪನೆ. ನಂತರ 1972ರಲ್ಲಿ 'ರಂಗ ಸಂಪದ' ತಂಡ ಸ್ಥಾಪನೆ. ಸಂಘಟಕರಾಗಿ, ನೇಪಥ್ಯ ತಜ್ಞರಾಗಿ ರಂಗಸಂಪದ ಹಾಗೂ ವಿವಿಧ ರಂಗ ಸಂಸ್ಥೆಗಳಿಗೆ ಕೆಲಸ.

'ರಂಗ ಸಂಪದ'ದ ಮೂಲಕ 'ನಿಮ್ಮ ಮನೆಯಂಗಳದಿ ನಮ್ಮ ನಾಟಕ' ವಿನೂತನ ಯೋಜನೆಯಿಂದ ಜನರ ಬಳಿಗೆ ನಾಟಕ ಒಯ್ಯುವ ಪ್ರಯತ್ನ, ರಂಗಭೂಮಿ ಕ್ರಿಯಾ ಸಮಿತಿ ಸ್ಥಾಪನೆ.

ರಂಗ ವಿನ್ಯಾಸಕಾರರಾಗಿ, ಬೆಳಕು ವಿನ್ಯಾಸಕಾರಾಗಿ, ಸಂಘಟಕರಾಗಿ ಕಾರ್ಯ ನಿರ್ವಹಿಸಿರುವ ಲೋಕೇಶ್, ರಂಗಸಂಪದದ ಮೂಲಕ ಆರ್. ನಾಗೇಶ್, ಪ್ರಸನ್ನ, ಸಿ.ಜಿ.ಕೆ., ಹೆಚ್.ವಿ. ವೆಂಕಟಸುಬ್ಬಯ್ಯ, ಅಶೋಕ ಬಾದರದಿನ್ನಿ ಮುಂತಾದ ನಿರ್ದೇಶಕರು ಬೆಳಕು ಕಾಣಲು ಕಾರಣರಾಗಿದ್ದಾರೆ. ಕೀರಂ, ಟಿ.ವಿ. ವೈಕುಂಠರಾಜು, ಹೆಚ್.ಎಸ್. ಶಿವಪ್ರಕಾಶ್ ಮುಂತಾದ ನಾಟಕಕಾರರು 'ರಂಗ ಸಂಪದ'ದ ಮೂಲಕ ಪ್ರಖ್ಯಾತರಾಗಿದ್ದಾರೆ.

ಯಯಾತಿ, ಕದಡಿದ ನೀರು. ಜೋಕುಮಾರಸ್ವಾಮಿ, ಸಮಗ್ರ ಮಂಥನ, ಒಡಲಾಳ, ಮಹಾ ಚೈತ್ರ, ಸುಲ್ತಾನ್‌ಟಿಪ್ಪು, ಸಂದರ್ಭ ಮುಂತಾದ 75 ನಾಟಕಗಳು 'ರಂಗ ಸಂಪದ' ಸಂಸ್ಥೆಯಿಂದ ಪ್ರದರ್ಶನ ಕಂಡಿವೆ.

2 ಅವಧಿಗೆ ನಾಟಕ ಅಕಾಡೆಮಿಯ ಸದಸ್ಯರಾಗಿಯೂ ಲೋಕೇಶ್ ಕಾರ್ಯ ನಿರ್ವಹಿಸಿದ್ದಾರೆ. ಅಂತರರಾಷ್ಟ್ರೀಯ ರಂಗ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದ್ದಾರೆ.

---



## ಜಿ.ವಿ.ಎಸ್. ನಾರಾಯಣ್

ಕೈಗಾರಿಕಾ ರಂಗಭೂಮಿಯಲ್ಲಿ ದೊಡ್ಡ ಹೆಸರು. ಶಾಲಾ ಕಾಲೇಜು ದಿನಗಳಿಂದಲೇ ರಂಗಭೂಮಿಯ ಬಗ್ಗೆ ಅಪಾರ ಒಲವು ಇವರಿಗೆ. ಬಂಡ್ವಾಳವಿಲ್ಲದ ಬಡಾಯಿ, ಹಯವದನ, ದಾರಿ ಯಾವುದಯ್ಯ ವೈಕುಂಠಕೆ, ಬಾಕಿ ಇತಿಹಾಸ, ಯಮನಸೋಲು, ಜೋಕುಮಾರ ಸ್ವಾಮಿ ಮುಂತಾದ ನಾಟಕಗಳ ಯಶಸ್ವಿ ನಿರ್ದೇಶನ.

ಬಿ.ಇ.ಎಲ್. ಕಾರ್ಖಾನೆಯಲ್ಲಿ ಡೆಪ್ಯುಟಿ ಮ್ಯಾನೇಜರ್ ಆಗಿರುವ ನಾರಾಯಣ್ ಬಿ.ಇ.ಎಲ್ ಕಲಾಕ್ಷೇತ್ರ ಸ್ಥಾಪನೆಯಲ್ಲಿ ಅಪಾರ ಶ್ರಮಿಸಿದ್ದಾರೆ. ಕೈಗಾರಿಕಾ ಸ್ಪರ್ಧೆಗಳಲ್ಲಿ ಅತ್ಯುತ್ತಮ ನಟ, ನಿರ್ದೇಶಕ ಪ್ರಶಸ್ತಿಯನ್ನು ಅನೇಕ ಬಾರಿ ಪಡೆದಿದ್ದಾರೆ.

ಹಲವಾರು ಸಂಘ ಸಂಸ್ಥೆಗಳನ್ನು ಪ್ರತಿನಿಧಿಸುವ ಇವರು ಬಿ.ಇ.ಎಲ್. ಲಲಿತ ಕಲಾ ಸಂಘದ ಸದಸ್ಯರಾಗಿ, ಕಾರ್ಯದರ್ಶಿಯಾಗಿ ಉಪಾಧ್ಯಕ್ಷರಾಗಿ, ವಿವಿಧ ಹಂತಗಳಲ್ಲಿ ಸೇವೆಸಲ್ಲಿಸಿದ್ದಾರೆ. ಅನೇಕ ವಿಚಾರ ಸಂಕಿರಣಗಳಲ್ಲಿ, ನಾಟಕೋತ್ಸವಗಳಲ್ಲಿ ಸಕ್ರಿಯವಾಗಿ ಭಾಗವಹಿಸಿರುವ ಇವರು ಅತ್ಯುತ್ತಮ ತೀರ್ಪುಗಾರರಾಗಿ ಹೆಸರು ಮಾಡಿದ್ದಾರೆ.

ಕೈಗಾರಿಕಾರಂಗ ಹಾಗೂ ಹವ್ಯಾಸಿರಂಗದಲ್ಲಿ ತಮ್ಮ ಸಹಜ ಪ್ರತಿಭೆಯಿಂದ ಹೆಸರು ಮಾಡಿರುವ ನಾರಾಯಣ್ ಅವರು 'ಕಲಾಘೋಷಿಣಿ' ಸ್ಥಾಪಕರಲ್ಲಿ ಒಬ್ಬರು.





## ಬಿ.ವಿ. ರಾಜಾರಾಂ

ಹವ್ಯಾಸಿ ರಂಗ ಕಂಡ ಅತ್ಯುತ್ತಮ ನಟರಲ್ಲಿ ಒಬ್ಬರು. ನಟನೆ, ನಿರ್ದೇಶನ, ಸಂಘಟನೆ ರಂಗಚಟುವಟಿಕೆಯ ಎಲ್ಲಾ ಹಂತಗಳಲ್ಲೂ ತೊಡಗಿಸಿಕೊಂಡಿರುವ ರಾಜಾರಾಂ ರಂಗ ಶಿಕ್ಷಕರಾಗಿಯೂ ಕಾರ್ಯ ನಿರ್ವಹಿಸುತ್ತಿದ್ದಾರೆ.

ಬೆಂಗಳೂರಿನ ಹವ್ಯಾಸಿ ರಂಗ ಚಟುವಟಿಕೆಯ ಬೆಳವಣಿಗೆಗೆ ವಿವಿಧ ಪ್ರಕಾರಗಳಲ್ಲಿ ತೊಡಗಿಸಿಕೊಂಡಿರುವ ರಾಜಾರಾಂ ರಂಗ ತರಬೇತಿ, ವಾರಾಂತ್ಯ ರಂಗಭೂಮಿ. ಬಡಾವಣಾ ರಂಗಭೂಮಿ, ರಂಗಚಿಂತನೆ ಮೊದಲಾದ ಕಾರ್ಯಕ್ರಮಗಳನ್ನು ರೂಪಿಸಿ ಯಶಸ್ವಿಯಾಗಿದ್ದಾರೆ.

ಕಾಲಿಗುಲ, ಸಿರಿಪುರಂದರ, ಉತ್ತಮ ಪ್ರಭುತ್ವ ಲೊಳಲೊಟ್ಟೆ, ಒಂದು ಆಕಸ್ಮಿಕ ಸಾವು, ಲಕ್ಷಾಪತಿರಾಜನಕತೆ, ಸಿಂಗಿರಾಜ, ಅಚಲಾಯತನ, ಸಂಸ, ಸುಲ್ತಾನ್ ಟಿಪ್ಪು, ತುಘಲಕ್ ಮುಂತಾದ ನಾಟಕಗಳಲ್ಲಿ ಮೇರು ಅಭಿನಯ ನೀಡಿದ್ದಾರೆ.

ದೂರದರ್ಶನ ಧಾರವಾಹಿಗಳ ಮೂಲಕ ಕರ್ನಾಟಕದಾದ್ಯಂತ ಚಿರಪರಿಚಿತರಾಗಿರುವ ರಾಜಾರಾಂ ನಿರ್ದೇಶಕರಾಗಿಯೂ ಬಹಳ ಹೆಸರು ಮಾಡಿದ್ದಾರೆ. ಇವರು ನಿರ್ದೇಶಿಸಿದ 'ಮುಖ್ಯಮಂತ್ರಿ' 200 ಪ್ರದರ್ಶನಗಳನ್ನು ಕಂಡಿದೆ. 'ಕಲಾ ಗಂಗೋತ್ರಿ' ತಂಡದ ಸಂಘಟಕರಾಗಿ ಬಹಳ ಉತ್ಸಾಹದಿಂದ ದುಡಿಯುತ್ತಿದ್ದಾರೆ.



# 1993ರ ಪ್ರಶಸ್ತಿ ವಿಜೇತರು



## ಶಾಂತರಸ (ಫೆಲೋಶಿಪ್)

ಕನ್ನಡ ಸಾರಸ್ವತ ಲೋಕದ ಹಿರಿಯ ಸಾಹಿತಿ; ಕಥೆ, ಕವನ, ನಾಟಕ ಕ್ಷೇತ್ರಗಳಲ್ಲಿ ತಮ್ಮ ಸಾಹಿತ್ಯ ಕೃಷಿ ನಡೆಸುತ್ತಿರುವ ಶಾಂತರಸ ಅವರು, ಕನ್ನಡ, ಉರ್ದು ಹಾಗು ಹಿಂದಿ ಭಾಷೆಯಲ್ಲಿ ಪ್ರಭುತ್ವ ಸಾಧಿಸಿರುವವರು. ಶಿಕ್ಷಣ ಕ್ಷೇತ್ರದಲ್ಲಿ ಸತತ 35 ವರ್ಷಗಳ ದುಡಿಮೆ. ಹೈದರಾಬಾದ್–ಕರ್ನಾಟಕ ಪ್ರದೇಶದ ಜನಜೀವನ ದರ್ಶನವನ್ನು ಸ್ವಾತಂತ್ರ್ಯೋತ್ತರ ಕಾಲದಿಂಲೂ ತಮ್ಮ ಕೃತಿಗಳಲ್ಲಿ ಕಾಣಿಸಿ, ವರ್ತಮಾನದಲ್ಲೂ ಬದುಕಿನ ಮೌಲ್ಯವನ್ನು ಪ್ರತಿಪಾದಿಸಿರುವ ಶಾಂತರಸ, ನಾಟಕ ಕ್ಷೇತ್ರದಲ್ಲೂ ವಿಶಿಷ್ಟ ಸೇವೆ ಸಲ್ಲಿಸಿದ್ದಾರೆ. ಹಲವಾರು ನಾಟಕಗಳು, ರಂಗ ಸಂಘಗಳೊಂದಿಗೆ ನಿರಂತರ ಸಂಪರ್ಕ. ನಟರಾಗಿ–ಸಂಘಟಕರಾಗಿ–ನಾಟಕಕಾರಾಗಿ ಇವರ ಕ್ರಿಯಾಶೀಲತೆ–ರಂಗವಲಯದಲ್ಲಿ ಅವರನ್ನು ಒಬ್ಬ ವಿಶಿಷ್ಟವ್ಯಕ್ತಿಯನ್ನಾಗಿಸಿದೆ. ಸಮುದಾಯ ಸಾಂಸ್ಕೃತಿಕ ಜಾಥಾಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವ ಇವರ 'ನಾಯಿ ಮತ್ತು ಪಿಂಜಣಿ', 'ಬೇಸ್ತು', 'ನಾಯಿ, ನ್ಯಾಯ, ಉಚ್ಚೆ' – ಮುಂತಾದ ಕಥೆಗಳು ರಂಗದ ಮೇಲೆ ರೂಪಾಂತರಗೊಂಡಿವೆ. ಅನೇಕ ಪ್ರಶಸ್ತಿಗಳು, ಸಾಹಿತ್ಯ ಅಕಾಡೆಮಿ ಸದಸ್ಯತ್ವ, ಪುಸ್ತಕ ರಚನಾ ಸಮಿತಿ ಸದಸ್ಯತ್ವ ಇವರ ಪಾಲಿಗೆ ದಕ್ಕಿವೆ. ಬಹಳ ನಿಷ್ಠೂರಿಯಾದ ಶಾಂತರಸರವರು ಕನ್ನಡ ಭಾಷಾ ನೀತಿಯಲ್ಲಿ ಸರ್ಕಾರದ ಧೋರಣೆಯನ್ನು ಪ್ರತಿಭಟಿಸಿ ರಾಜ್ಯೋತ್ಸವ ಪ್ರಶಸ್ತಿಯನ್ನು ತಿರಸ್ಕರಿಸಿ, ತಾವೊಬ್ಬ ನಿಜವಾದ ಕನ್ನಡದ ಕಲಿ ಎಂಬುದನ್ನು ತೋರಿಸಿಕೊಟ್ಟವರು.

---



## ಗೊ.ರು. ಚನ್ನಬಸಪ್ಪ (ಫೆಲೋಶಿಪ್)

ವಿದ್ಯಾರ್ಥಿ ದೆಸೆಯಲ್ಲಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಯಾಗುವುದರೊಂದಿಗೆ ಸಾರ್ವಜನಿಕ ಬದುಕಿನಲ್ಲಿ ಪ್ರವೇಶ. ನಂತರದಲ್ಲಿ ಶಾಲಾ ಅಧ್ಯಾಪಕರಾದ ಗೊ.ರು.ಚ. ಅವರು ಸರ್ಕಾರದ ವಿವಿಧ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸಿದರು. ಸರ್ಕಾರಿ ಇಲಾಖೆಗಳ ಹಲವಾರು ಪತ್ರಿಕೆಗಳ ಸಂಪಾದಕರಾಗಿ ಕಾರ್ಯನಿರ್ವಹಿಸಿದ ಅವರು ಅತ್ಯುತ್ತಮ ಸಂಘಟಕರು. ಹಲವಾರು ಸಂಸ್ಥೆಗಳನ್ನು ಸ್ಥಾಪಿಸಿ, ಮುನ್ನಡೆಸಿದ ಗೊ.ರು.ಚ. ಅವರು ಪ್ರಸ್ತುತ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಜನಪದ ಹಾಗು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಅನೇಕ ಕೃತಿಗಳನ್ನು ರಚಿಸಿರುವ ಇವರಿಗೆ, ವಿದ್ಯಾರ್ಥಿ ದೆಸೆಯಿಂದಲೂ ನಾಟಕದ ಗೀಳು. 'ಸಾಕ್ಷಿಕಲ್ಲು', 'ಬೆಳ್ಳಕ್ಕಿ ಹಿಂಡು ಬೆದರ್‍ಯಾವೆ', 'ಮಹಾತ್ಮ ಕುನಾಲ' ಮುಂತಾದ ನಾಟಕಗಳನ್ನು ರಚಿಸಿ ಹಲವಾರು ನಾಟಕಗಳನ್ನು ನಿರ್ದೇಶಿಸಿದ್ದಾರೆ.

ನಾಟಕ ಅಕಾಡೆಮಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿರುವ ಗೊ.ರು.ಚ., ಪರಿಷತ್ತಿನ ಅಧ್ಯಕ್ಷರಾದ ಮೇಲೆ ನಾಟಕ–ಸಾಹಿತ್ಯ ವಲಯದಲ್ಲಿ ರಾಜ್ಯಮಟ್ಟದಲ್ಲಿ ಸಮಾವೇಶ, ವಿಚಾರ ಸಂಕಿರಣಗಳು, ನಾಟಕ ಕೃತಿಗಳ ಪ್ರಕಟಣೆ., ಮುಂತಾದ ಕೆಲಸಗಳನ್ನು ಮಾಡಿದ್ದಾರೆ. ಗುಬ್ಬಿ ಕಂಪನಿ ಶತಮಾನೋತ್ಸವ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿರುವ ಇವರು ಪರಿಷತ್ತಿನ ಆಶ್ರಯದಲ್ಲಿ 'ವೃತ್ತಿರಂಗದರ್ಶನ' ಎಂಬ ಬೃಹತ್ ಗ್ರಂಥವನ್ನು ಪ್ರಕಟಿಸಿದ್ದಾರೆ.

---



## ಪ್ರೊ. ಕೆ.ಎಸ್. ನಿಸಾರ್ ಅಹಮದ್ (ಫೆಲೋಶಿಪ್)

ಬಹುಮುಖಿ ಸಾಹಿತ್ಯ ಪ್ರತಿಭೆಯಿಂದ ಕನ್ನಡ ಸಾಹಿತ್ಯ ಲೋಕದಲ್ಲಿ ವಿಶಿಷ್ಟ ಸ್ಥಾನ ಗಳಿಸಿರುವ ಪ್ರೊ. ಕೆ.ಎಸ್. ನಿಸಾರ್ ಅಹಮದ್ ಅವರು, ತಮ್ಮ ಅನುವಾದ ನಾಟಕಗಳ ಮೂಲಕ ಕನ್ನಡ ರಂಗಭೂಮಿಯನ್ನು ಶ್ರೀಮಂತಗೊಳಿಸಿದ್ದಾರೆ.

ಭೂವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಇವರು, 34 ವರ್ಷಗಳ ಸತತ ಅಧ್ಯಾಪನ ವೃತ್ತಿಯಿಂದ ಇದೀಗ ನಿವೃತ್ತರಾಗಿದ್ದಾರೆ. ವಿದ್ಯಾರ್ಥಿ ಜೀವನದಲ್ಲೇ ಕನ್ನಡ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ನಿಸಾರರು, ಸೋವಿಯತ್ ಲ್ಯಾಂಡ್ ನೆಹರು ಅಂತರರಾಷ್ಟ್ರೀಯ ಪುರಸ್ಕಾರ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿಗಳ ಜೊತೆಗೆ, ಅನೇಕ ಸಮಿತಿಗಳಿಗೆ ಸದಸ್ಯರಾಗಿ ನೇಮಕಗೊಂಡಿದ್ದಾರೆ.

12 ಕವನ ಸಂಕಲನಗಳೂ, ಅನುವಾದ ನಾಟಕಗಳು, ಮಕ್ಕಳ ಸಾಹಿತ್ಯ ರಚನೆ, ವಿಚಾರ ಸಾಹಿತ್ಯ ಹಾಗೂ ಸಂಪಾದನಾ ಕಾರ್ಯ ನಡೆಸಿರುವ ನಿಸಾರರು, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ, ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಇವರ ಶೇಕ್ಸ್‌ಪಿಯರ್ ಮಹಾಕವಿಯ 2 ಅನುವಾದ ನಾಟಕಗಳು, ಮುಂದಿನ ದಿನಗಳಲ್ಲಿ ಅನೇಕ ಅನುವಾದಕರಿಗೆ, ಪಾಶ್ಚಾತ್ಯ ನಾಟಕಗಳನ್ನು ಕನ್ನಡಿಸಲು ಪ್ರೇರಣೆ ನೀಡಿದೆ ಎನ್ನಬಹುದು.

---



## ಡಾ॥ ಗಿರಡ್ಡಿ ಗೋವಿಂದರಾಜು (ಫೆಲೋಶಿಪ್)

ಆಧುನಿಕ ಕನ್ನಡ ರಂಗಭೂಮಿಯ ಬೆಳವಣಿಗೆಯಲ್ಲಿ ತಮ್ಮ ಮೌಲಿಕವಾದ ಚಿಂತನೆಗಳಿಂದ ವಿಶಿಷ್ಟ ಸೇವೆ ಸಲ್ಲಿಸುತ್ತಿರುವ ಗಿರಡ್ಡಿಯವರು, ವೃತ್ತಿಯಿಂದ ಇಂಗ್ಲೀಷ್ ಅಧ್ಯಾಪಕರು. ತಮ್ಮ ಅಪಾರವಾದ ಜ್ಞಾನ ಹಾಗೂ ಅನುಭವದಿಂದ ನಾಟಕ ವಿಚಾರ ಸಾಹಿತ್ಯಕ್ಕೆ ಒಂದು ನಿರ್ದಿಷ್ಟ ಸ್ಥಾನವನ್ನು ದೊರಕಿಸಿಕೊಟ್ಟರು.

ತಮ್ಮ ಇತರ ಸಾಹಿತ್ಯ ಪ್ರಕಾರಗಳೊಟ್ಟಿಗೆ ನಾಟಕ ವಿಮರ್ಶೆ. ನಾಟಕ ಚಿಂತನೆಗಳಲ್ಲಿ ಹೊಸ ಆಲೋಚನೆ ಕ್ರಮವನ್ನು ಹುಟ್ಟುಹಾಕಿದ ಗಿರಡ್ಡಿಯವರು, 'ಇಂಗ್ಲೆಂಡಿನ ರಂಗಭೂಮಿ', 'ಹವ್ಯಾಸಿ ರಂಗಭೂಮಿಯ ಸಮಸ್ಯೆಗಳು', 'ನಾಟಕ ಸಾಹಿತ್ಯ ಮತ್ತು ರಂಗಭೂಮಿ' ಮುಂತಾದ ಚಿಂತನಶೀಲ ಕೃತಿಗಳು ಕನ್ನಡ ರಂಗಭೂಮಿಗೆ ದಕ್ಕುವಂತೆ ಮಾಡಿದ್ದಾರೆ.

ರಂಗ ಸಂಘಟಕರಾಗಿ, ನಿರ್ದೇಶಕರಾಗಿ, ನಟರಾಗಿ ರಂಗಭೂಮಿಯಲ್ಲಿ ಪಡೆದ ಅನುಭವ ಹಾಗು ತಮ್ಮ ವಿದ್ವತ್ ಸಂಚಿಯಿಂದ ಇವರು ಭಾಗವಹಿಸುವ ಸಾಹಿತ್ಯ ಹಾಗು ನಾಟಕ ಕುರಿತ ವಿಚಾರ ಸಂಕಿರಣಗಳಿಗೆ ಒಂದು ರೀತಿಯ ಅನನ್ಯತೆ ಇರುತ್ತದೆ.

ಕಲಬುರ್ಗಿಯಲ್ಲಿ 'ರಂಗಮಾಧ್ಯಮ' ಸಂಸ್ಥೆಯ ಮೂಲಕ ಹೊಸ ಅಲೆಯ ನಾಟಕಗಳನ್ನು ಪ್ರಯೋಗಿಸಿ, ನಾಟಕೋತ್ಸವಗಳನ್ನು ನಡೆಸಿ, ರಂಗಸಂಸ್ಕೃತಿಯನ್ನು, ಹಾಗೆಯೆ ಪ್ರೇಕ್ಷಕ ವೃಂದವನ್ನು ಹುಟ್ಟುಹಾಕಿದ್ದು ಇವರ ವಿಶಿಷ್ಟ ಸಾಧನೆ.

---



## ಕೆ. ಜಯರಾಮ ಆಳ್ವ

ಮುಂಬಯಿ – ನವಮುಂಬಯಿ ಕನ್ನಡಿಗರ ಚಿರಪರಿಚಿತರು ಜಯರಾಮ ಆಳ್ವ ಕನ್ನಡ–ತುಳು ಭಾಷೆಗಳ ಅಭಿವೃದ್ಧಿಗೆ ದೂರದ ಮುಂಬಯಿಯಲ್ಲಿ ಕಾರ್ಯಕ್ರಮಗಳನ್ನು ಸಂಘಟಿಸಿ, ನಾಟಕಗಳನ್ನು ರಚಿಸಿ, ನಿರ್ದೇಶಿಸಿ ಕನ್ನಡ ನಾಡು–ನುಡಿಗೆ ತಮ್ಮದೇ ಆದ ರೀತಿಯಲ್ಲಿ ಸೇವೆ ಸಲ್ಲಿಸಿದ್ದಾರೆ. ಮಂಗಳೂರಿನ ಕುತ್ತಾರು ಗುತ್ತು ಮನೆತನದಲ್ಲಿ ಜನಿಸಿದ ಆಳ್ವ ತಮ್ಮ ವಿದ್ಯಾರ್ಥಿ ಜೀವನದಿಂದಲೇ ಸಂಘಜೀವಿ. 1981ರಲ್ಲಿ 'ಅಭಿನಯ ಸಾಮ್ರಾಜ್ಯ' ಎಂಬ ನಾಟಕ ತಂಡವನ್ನು ಹುಟ್ಟು ಹಾಕಿ, ರಂಗತರಬೇತಿ ಶಿಬಿರಗಳನ್ನೂ, ನಾಟಕ ಸ್ಪರ್ಧೆಗಳನ್ನೂ ನಿರಂತರವಾಗಿ ನಡೆಸುತ್ತಾ ಬಂದಿದ್ದಾರೆ. ತುಳು ಹಾಗು ಕನ್ನಡ ರಂಗಭೂಮಿಯ ಅಭಿವೃದ್ಧಿಗಾಗಿ ದುಡಿಯುತ್ತಿರುವ ಆಳ್ವ ಅವರು, ಕಳೆದ ಐದು ವರ್ಷಗಳಿಂದ ಮುಂಬಯಿ ಕರ್ನಾಟಕದ ಸಂಘದ ಸಕ್ರಿಯ ಕಾರ್ಯಕರ್ತರಾಗಿ, ಹೊರನಾಡು ಕನ್ನಡಿಗರ ಹಾಗು ಕರ್ನಾಟಕದ ನಡುವೆ ಸಾಂಸ್ಕೃತಿಕ ಸೇತುವೆಯಾಗಿ ದುಡಿಯುತ್ತಿದ್ದಾರೆ. ಪ್ರಸ್ತುತ, ಕರ್ನಾಟಕ ಸಂಘದ ಗೌರವ ಪ್ರಧಾನ ಕಾರ್ಯದರ್ಶಿಯಾಗಿ, ಅಭಿನಯ ಸಾಮ್ರಾಜ್ಯದ ಅಧ್ಯಕ್ಷರಾಗಿ ಹಾಗು ಕನ್ನಡ ಸಾಹಿತ್ಯ ಪರಿಷತ್ತು, ಮಹಾರಾಷ್ಟ್ರ ಘಟಕದ ಕೋಶಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.





## ಬಿ.ಬಿ. ಜೀವೂರ, ಸೊಲ್ಲಾಪುರ

ಶಾಲಾದಿನಗಳಿಂದಲೇ ಬಣ್ಣದ ಹುಚ್ಚು, ಸಾಹಿತ್ಯ ರಚನೆಯಲ್ಲಿ ಆಸಕ್ತಿ, ಹಾಡುಗಳು, ಭಜನೆಗಳ ರಚನೆಗಳಿಂದ ಸಾಹಿತ್ಯಲೋಕ ಪ್ರವೇಶ. ಶಾಲಾದಿನಗಳ ನಂತರ ವೃತ್ತಿಯಾಗಿ ನೇಯ್ಗೆಯ ಉದ್ಯೋಗವನ್ನು ಹಿಡಿದರೂ ಪ್ರವೃತ್ತಿಯ ಮುಂದುವರಿಕೆ.

1965ರಲ್ಲಿ ರಚಿಸಿದ 'ಕೈಗೊಂಬೆ' ನಾಟಕ ಮುಂಬಯಿ ಸರ್ಕಾರದಿಂದ ಸೆನ್ಸಾರ್ ಪಡೆದುಬಂದ ನಂತರ, ಪೂರ್ಣವಾಗಿ ನಾಟಕರಂಗದಲ್ಲಿ ತೊಡಗಿಸಿಕೊಳ್ಳುವ ಬಯಕೆ. ಹಾಗಾಗಿ ವೃತ್ತಿ ಕಂಪನಿಗಳಿಗೆ ಅಲೆದಾಟ. ಬುಕಿಂಗ್ ಕ್ಲಾರ್ಕ್, ಬೋರ್ಡು ಬರೆಯುವುದು, ನಟರ ಕೊರತೆ ಬಂದಾಗ ಅಭಿನಯ.... ಹೀಗೆ ಅಸ್ತಿತ್ವಕ್ಕಾಗಿ ಹೋರಾಡುತ್ತಿದ್ದಾಗ ಶ್ರೀ ಕೃಷ್ಣಮೂರ್ತಿ ಪುರಾಣಿಕರ ಸಂಪರ್ಕದಿಂದ ಪೂರ್ಣ ಸಾಹಿತ್ಯ ಸೇವೆಗೆ ಬದುಕು ಮೀಸಲು. ನಾಟಕಗಳ ರಚನೆ, ಕಾದಂಬರಿ, ಕತೆ, ಕವನಗಳ ರಚನೆಗಳು ಮುಂದಿನ ಗುರಿಯನ್ನು ಖಚಿತಪಡಿಸಿದವು. 10 ಪೂರ್ಣ ಪ್ರಮಾಣದ ನಾಟಕಗಳು, 2 ಏಕಾಂಕ, 2 ಕಾದಂಬರಿ, ನೂರಾರು ಕವನ, ಕತೆಗಳನ್ನು ರಚಿಸುವುದರೊಂದಿಗೆ, ಹಲವಾರು ಪತ್ರಿಕೆಗಳಲ್ಲಿ ಲೇಖನಗಳ ಮುದ್ರಣ. ಕನ್ನಡದ ಬಗ್ಗೆ ಅತೀವ ಅಭಿಮಾನ. ಹಾಗಾಗಿ ಇಡೀ ರಂಗದಲ್ಲಿ ಇನ್ನೂ ದುಡಿಯುವ ಹಂಬಲ.





## ಕಾಸರಗೋಡು ಚಿನ್ನಾ (ಶ್ರೀನಿವಾಸರಾವ್ ಎಸ್)

ಗಡಿನಾಡು ಕಾಸರಗೋಡಿನ ಅಪ್ಪಟ ರಂಗಪ್ರತಿಭೆ. ಕಾಸರಗೋಡು ಚಿನ್ನಾ ಎಂದು ಪ್ರಸಿದ್ಧರಾದ ಇವರು, ಸೃಜನಶೀಲ ನಟರು. ಹಾಗೆಯೇ ನಿರ್ದೇಶಕರೂ ಕೂಡ. ಕನ್ನಡ, ತುಳು, ಕೊಂಕಣಿ, ಮಲೆಯಾಳ, ಇಂಗ್ಲಿಷ್ ಭಾಷೆಗಳ ನಾಟಕಗಳಲ್ಲಿ ಅಭಿನಯಿಸಿರುವ ಇವರ ಪ್ರಮುಖ ನಾಟಕಗಳು ಬಂದಾ ಬಂದಾ ಸರದಾರ, ಗುಲಾಮನ ನಗು, ಮಣ್ಣಿನ ಬೊಂಬೆ, ಟಿಂಗರ ಬುಡ್ಡಣ್ಣ, ಜಾಕ್‌ಪಾಟ್ ಜನ್ನಾ, ಗಾಂಟಿ, ಧರ್ಮಂ ಶರಣಂ ಗಚ್ಛಾಮಿ

ಮುಂತಾದವು. ಕರ್ನಾಟಕ, ಕೇರಳಗಳಲ್ಲಿ ನೂರಾರು ಮೂಕಾಭಿನಯ ಪ್ರದರ್ಶನಗಳನ್ನು ತಮ್ಮ ಅಭಿವ್ಯಕ್ತಿ, ಮೂಡ್, ಎಕ್ಸ್‌ಪ್ರೆಶನ್‌ಗಳ ಮೂಲಕ ನೀಡಿದ್ದಾರೆ. ಕೊಲ್ಲಿ ರಾಷ್ಟ್ರದಲ್ಲೂ ಇವರು ಪ್ರದರ್ಶನ ನೀಡಿದ್ದಾರೆ. ದೂರದರ್ಶನ ಧಾರವಾಹಿ ಹಾಗು ಸಿನಿಮಾಗಳಲ್ಲೂ ನಟಿಸಿರುವ ಚಿನ್ನಾ ಅನೇಕ ಪ್ರಶಸ್ತಿ, ಬಹುಮಾನಗಳಿಗೆ ಪಾತ್ರರಾಗಿದ್ದಾರೆ. ಕಾಸರಗೋಡು ಯವನಿಕಾ ಸಂಸ್ಥೆಯ ಸ್ಥಾಪಕ ಸದಸ್ಯರಾದ ಇವರು ಅನೇಕ ಸಂಸ್ಥೆಗಳೊಂದಿಗೆ ಸಕ್ರಿಯವಾಗಿದ್ದಾರೆ.

---



## ಏಣಗಿ ಖಾಸೀಂ ಸಾಬ

ಬಾಲ್ಯದಿಂದಲೇ ನೋಡಿದ ಸಂಗೀತ ನಾಟಕಗಳ ಪ್ರಭಾವದಿಂದ ಸಂಗೀತಾಭಿರುಚಿಯನ್ನು ಬೆಳೆಸಿಕೊಂಡು ಬಂದವರು ಖಾಸೀಂ ಸಾಬ. ಇವರು ತಾವು ಕೇಳಿದ ಹಾಡುಗಳನ್ನು ಅಭ್ಯಾಸಮಾಡಿ ತಮ್ಮ ಹಳ್ಳಿಯಲ್ಲಿ ಹಾಡುತ್ತಿದ್ದರು. ಊರಿನ ಮಂದಿ ಇವರ ಸಂಗೀತಕ್ಕೆ ಮಾರುಹೋಗಿ ಪ್ರೋತ್ಸಾಹಿಸುತ್ತಿದ್ದರು. ಶಾಲೆಗಳಲ್ಲೂ ಇವರು ಹಾಡುತ್ತಿದ್ದರು. ಇದೇ ಸಂದರ್ಭದಲ್ಲಿ ತಮ್ಮ ಊರಿನಲ್ಲಿ ನಾಟಕಾಭ್ಯಾಸವೊಂದು ಪ್ರಾರಂಭವಾದಾಗ, ಆ ನಾಟಕದಲ್ಲಿ ಪಾತ್ರವಹಿಸುವ ಅವಕಾಶ ಸಿಕ್ಕಿತು. ಅಂದು ಆಡಿದ ಹೇಮರೆಡ್ಡಿಮಲ್ಲಮ್ಮ ನಾಟಕದ 'ಮಲ್ಲಿಕಾರ್ಜುನ'ನ ಪಾತ್ರ ಹಳ್ಳಿಯಲ್ಲಿ ಮನೆಮಾತಾಯಿತು.

ಇದರಿಂದ ಪ್ರಭಾವಿತಗೊಂಡ ಖಾಸೀಂ ಸಾಬರು ಸಂಗೀತವನ್ನು ಅಭ್ಯಾಸಮಾಡಲು ಆಸಕ್ತಿ ವಹಿಸಿದರು. ಆ ಸಂದರ್ಭಕ್ಕೆ ಅವರ ಅಭಿಲಾಶೆಯನ್ನು ಪೂರೈಸಲು ಸಹಾಯಕವಾಗಿದ್ದು ಪಂಚಾಕ್ಷರಿ ಗವಾಯಿಗಳ ಕಂಪನಿ. ಕಂಪನಿಯನ್ನು ಸೇರಲು ಖಾಸೀಂ ಅವರ ತಂದೆ ತಾಯಿ ಒಪ್ಪದ ಕಾರಣ, ಶ್ರೀ ಹಳ್ಳಿಕೇರಿ ನಾಗಭೂಷಣ ಗವಾಯಿಗಳಿಂದ ಸಂಗೀತ ಕಲಿತರು. ನಂತರ ನಾಟಕದ ಮಾಸ್ತರರಾಗಿ ಈವರೆಗೆ 300 ನಾಟಕಗಳನ್ನು ಕಲಿಸಿದ್ದಾರೆ. ಹಾಗೆಯೇ ಅನೇಕ ದೊಡ್ಡ ದೊಡ್ಡ ಕಂಪನಿಗಳಲ್ಲಿ ನಟರಾಗಿ ಕೂಡ ಅಭಿನಯಿಸಿ, ನಿರಂತರ ಕಲಾಸೇವೆಗೆ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ.

---



## ಬಿ.ಆರ್. ಪೊಲೀಸ್ ಪಾಟೀಲ

ಉತ್ತರ ಕರ್ನಾಟಕದ ರಂಗಭೂಮಿ ವಲಯದಲ್ಲಿ ಚಿರಪರಿಚಿತರು ಹೆಸರು ಬಿ.ಆರ್. ಪೊಲೀಸ್ ಪಾಟೀಲ. ನಾಟಕಕಾರರಾಗಿ, ನಟರಾಗಿ, ಸಂಘಟಕರಾಗಿ ಉತ್ತರ ಕರ್ನಾಟಕದ ವಿವಿಧ ತಂಡಗಳ ಏಳುಬೀಳುಗಳನ್ನು ಹತ್ತಿರದಿಂದ ಕಂಡವರು.

'ವಾತ್ಸಲ್ಯ ವಿಚಾರ ವೇದಿಕೆ'ಯ ಮೂಲಕ ಹತ್ತಾರು ಸಾರ್ವಜನಿಕ ಹಿತಾಸಕ್ತಿ ಕಾರ್ಯಕ್ರಮಗಳನ್ನು, ಸಾಹಿತ್ಯ-ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿರುವ ಪೊಲೀಸ್ ಪಾಟೀಲರು ಮೌಲ್ಯಕ್ಕಾಗಿ ಹೋರಾಡುವ ವಿರಳರಲ್ಲಿ ಒಬ್ಬರು.

ಸಾಹಿತ್ಯ, ಸಂಗೀತ ಹಾಗೂ ಜನಪದ ಸಂಗ್ರಹಗಳಲ್ಲಿ ಆಸಕ್ತಿ ವಹಿಸಿರುವ ಪಾಟೀಲರು, ಅನೇಕ ನಾಟಕಗಳನ್ನು ರಚಿಸಿದ್ದಾರೆ. ರೇಡಿಯೋ ನಾಟಕ ರಚನೆಯಲ್ಲಿ ವಿಶೇಷ ಪರಿಣತಿ ಪಡೆದಿರುವ ಇವರು, ಅನೇಕ ರೇಡಿಯೋ ನಾಟಕಗಳಿಗೆ ರಾಷ್ಟ್ರೀಯ ಪುರಸ್ಕಾರ ಪಡೆದಿದ್ದಾರೆ.

ಸಾಮೂಹಿಕಾ ಸಾಕ್ಷರತಾ ಆಂದೋಲನದಲ್ಲೂ ಕ್ರಿಯಾಶೀಲವಾಗಿ ತೊಡಗಿಸಿಕೊಂಡಿರುವ ಇವರು ಬೀದಿ ನಾಟಕ, ಸಾಕ್ಷರತಾ ಹಾಡುಗಳ ಮೂಲಕ ಜನಜಾಗೃತಿಗೆ ಶ್ರಮಿಸುತ್ತಿದ್ದಾರೆ.

---



## ಲಕ್ಷ್ಮಣರಾವ್

ಕೈಗಾರಿಕಾ ರಂಗಭೂಮಿ ಹಾಗು ಚಲನಚಿತ್ರಗಳಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿರುವ ಲಕ್ಷ್ಮಣರಾವ್, ಬಾಲ್ಯದಿಂದಲೇ ಸಂಗೀತ, ನಾಟಕಗಳ ಆಸಕ್ತಿಯನ್ನು ರೂಢಿಸಿಕೊಂಡವರು. ತಂದೆಯವರು ವಿಶೇಷ ಸಂದರ್ಭಗಳಲ್ಲಿ ನಡೆಸಿಕೊಡುತ್ತಿದ್ದ ಕಥಾಕಾಲಕ್ಷೇಪಗಳು ಬಾಲಕ ಲಕ್ಷ್ಮಣರಾವ್ ಅವರ ಮೇಲೆ ನೇರ ಪ್ರಭಾವ ಬೀರಿತ್ತು. ಹಾಗಾಗಿ ತಂದೆಯಿಂದ ಅಲ್ಪ ಸಂಗೀತವನ್ನು, ವಾದ್ಯ ನುಡಿಸುವುದನ್ನು ಕಲಿತರು. ಮುಂದೆ ಎಸ್.ಎಸ್.ಎಲ್.ಸಿ. ಮುಗಿಸಿ ಜೀವನ ನಿರ್ವಹಣೆಗೆ ನೌಕರಿ ಹುಡುಕುತ್ತಾ ಬಂದಾಗ, ಉದ್ಯೋಗ ಸಿಕ್ಕಿದ್ದು ಬಿ.ಇ.ಎಲ್. ಕಾರ್ಖಾನೆಯಲ್ಲಿ ನೌಕರಿಯೊಂದಿಗೆ ರಂಗಭೂಮಿಯ ನಂಟು ಪ್ರಾರಂಭಗೊಂಡಿದ್ದು, ಬಿ.ಇ.ಎಲ್. ಕಾರ್ಖಾನೆಯಲ್ಲಿ ಬಿ.ಇ.ಎಲ್. ಲಲಿತಕಲಾ ಸಂಘದ ಸಕ್ರಿಯ ಕಾರ್ಯಕರ್ತರಾಗಿ, ನಿರಂತರ ಚಟುವಟಿಕೆಗಳಲ್ಲಿ ಇರುವಾಗಲೇ, ಆಕಸ್ಮಿಕವಾಗಿ ಚಲನಚಿತ್ರವನ್ನು ಪ್ರವೇಶಿಸಿದರು. ಪ್ರಸ್ತುತ ರಂಗಭೂಮಿ ಹಾಗು ಚಿತ್ರರಂಗಗಳೆರಡರಲ್ಲೂ ತಮ್ಮ ಕಲಾಸೇವೆಯನ್ನು ಮುಂದುವರಿಸಿದ್ದಾರೆ.

---



## ಬಿ.ಎ. ಶಾಂತಾದೇವಿ

ಬಾಲ್ಯದಿಂದಲೇ ನಾಟಕದ ಗೀಳು ಗಿಟ್ಟಿಸಿಕೊಂಡ ಶಾಂತಾದೇವಿ ಅವರು, 40 ವರ್ಷಗಳ ಹಿಂದೆ ಭಕ್ತಪ್ರಹ್ಲಾದ ನಾಟಕದಲ್ಲಿ ಪ್ರಹ್ಲಾದನಾಗಿ ಅಭಿನಯಿಸುವುದರ ಮೂಲಕ ರಂಗಪ್ರವೇಶ ಮಾಡಿದರು. ಅಂದಿನಿಂದ ಇಂದಿನವರೆಗೂ ನಿರಂತರವಾಗಿ ರಂಗಭೂಮಿಯಲ್ಲಿ ವೃತ್ತಿಪರರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ತಮ್ಮದೇ ಆದ 'ಬಾಲಚಂದ್ರ ಮಿತ್ರ ಮಂಡಳಿ'ಯನ್ನು ಪ್ರಾರಂಭಿಸುವ ಮುನ್ನ ಗುಬ್ಬಿ ಕಂಪನಿ, ಕನ್ನಡ ಥಿಯೇಟರ್ಸ್, ಉದಯ ಕಲಾನಿಕೇತನ, ಯೋಗಾನರಸಿಂಹ ಮೂರ್ತಿಯವರ ಕಂಪನಿಗಳಲ್ಲಿ ಪಾತ್ರ ವಹಿಸಿದ್ದರು.

ರತ್ನ ಮಾಂಗಲ್ಯ, ದೇವದಾಸಿ, ಶಾಯಿಕರುಳು, ಮದುವೆ ಮಾರ್ಕೆಟ್... ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದ ಶಾಂತಾದೇವಿಯವರು ಇಂದಿಗೂ ಗ್ರಾಮಾಂತರ ಪ್ರದೇಶಗಳಲ್ಲಿ ನಾಟಕಗಳನ್ನು ಅಭಿನಯಿಸುತ್ತಿದ್ದಾರೆ. ಹಲವಾರು ಸಿನಿಮಾಗಳಲ್ಲೂ ಅಭಿನಯಿಸುವ ಅವಕಾಶ ದೊರೆತಿದೆ.

---



## ಶಶಿಧರ ಅಡಪ

70ರ ದಶಕದಲ್ಲಿ ಆರಂಭವಾದ ಸಮುದಾಯ ಚಳವಳಿಯ ಮೂಲಕ, ಶಶಿಧರ ಅಡಪ ಅವರು ತಮ್ಮ ಬಾಲ್ಯದ ನಾಟಕದ ಗೀಳಿಗೆ ಗಂಭೀರ ಚಾಲನೆಯನ್ನು ಪಡೆದುಕೊಂಡರು. ಪ್ರಸನ್ನ, ಸಿ.ಜಿ.ಕೆ. ಹಾಗೂ ಬಾದಲ್ ಸರ್ಕಾರ್ ಅವರ ಮಾರ್ಗದರ್ಶನ ಹಾಗೂ ವಿಚಾರಗಳು, ಸಮುದಾಯದ ಬೀದಿ ನಾಟಕಗಳು, ಜನಪರ ರಂಘಭೂಮಿಯ ಬಗ್ಗೆ ಇವರ ವಿಚಾರಗಳನ್ನು ಗಟ್ಟಿಗೊಳಿಸಿದವು. ರಂಗವಿನ್ಯಾಸ ಹಾಗೂ ರಂಗ ನಿರ್ಮಾಣದಲ್ಲಿ ಹೊಸತಾದ, ಅಸಂಪ್ರದಾಯಿಕ ವಿಧಾನಗಳನ್ನು ಅನುಸರಿಸಿ ಪಡೆದ ಪರಿಣಾಮಗಳು ಒಟ್ಟಾರೆ ರಂಗಕ್ರಿಯೆಗೆ, ರಂಗಪ್ರಯೋಗಗಳಿಗೆ ಹೊಸ ಸಾಧ್ಯತೆಗಳನ್ನು ತೆರೆದುಕೊಟ್ಟವು.

ಸಾರ್ಕ್ ಉತ್ಸವ, ಅಂತರ ರಾಷ್ಟ್ರೀಯ ಮಕ್ಕಳ ಚಿತ್ರೋತ್ಸವ, ಅಂತರ ರಾಷ್ಟ್ರೀಯ ಚಲನ ಚಿತ್ರೋತ್ಸವ ಮುಂತಾದ ಪ್ರಮುಖ ಕಾರ್ಯಕ್ರಮಗಳಿಗೆ ವೇದಿಕೆಯನ್ನು ನಿರ್ಮಾಣ ಮಾಡಿ ಅಡಪ ಅವರು ಹತ್ತಾರು ಪ್ರಮುಖ ಚಲನಚಿತ್ರಗಳಿಗೆ ಕಲಾನಿರ್ದೇಶಕರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ.

ಪ್ರಸ್ತುತ ADD-INDIAದ ಸಮೂಹ ಮಾಧ್ಯಮ ವಿಭಾಗದ ಕಾರ್ಯನಿವಾಹಕರಾಗಿ ಕೆಲಸ ನಿರ್ವಹಿಸುತ್ತಿರುವ ಇವರು ವಿದೇಶಗಳಲ್ಲಿ ನಡೆದಿರುವ ಅನೇಕ ರಂಗ ಶಿಬಿರಗಳಲ್ಲಿ ಭಾರತವನ್ನು ಪ್ರತಿನಿಧಿಸಿದ್ದಾರೆ.



## ಸಿದ್ದಪ್ಪ ಮಾಸ್ತರ, ಓಬಿನಹಳ್ಳಿ

ಸುಶ್ರಾವ್ಯವಾದ ಕಂಠಸಿರಿಯನ್ನು ಬಾಲ್ಯದಿಂದಲೇ ಹೊಂದಿದ್ದ ಸಿದ್ದಪ್ಪ ಮಾಸ್ತರ ಅವರು, ತಂದೆಯವರಲ್ಲಿದ್ದ ಜಾನಪದ ಸಂಗೀತದ ಸರಕನ್ನು ಅಭ್ಯಾಸ ಮಾಡಿದ್ದರು. ತಂದೆಯವರ ಸಂಗೀತ ಕಲೆ ಬಾಲಕ ಸಿದ್ದಪ್ಪ ಮಾಸ್ತರರ ಮುಂದಿನ ಬದುಕಿನ ದಾರಿಗೆ ಬೆಳಕನ್ನು ತೋರಿತ್ತು. ಪ್ರಾರಂಭದಲ್ಲಿ ಸ್ತ್ರೀಪಾತ್ರಗಳನ್ನು ಅಭಿನಯಿಸುತ್ತಿದ್ದ ಸಿದ್ದಪ್ಪನವರಿಗೆ, ಮುಂದಿನ ದಿನಗಳಲ್ಲಿ ಏಣಗಿ ಬಾಳಪ್ಪನವರ ಕಂಪನಿಯಲ್ಲಿ ಆಶ್ರಯ ದೊರೆಯಿತು. ಮುಂದೆ ತಂದೆಯವರ ಅಕಾಲ ಮರಣದಿಂದ ಮರಳಿ ಮನೆಗೆ ಬಂದ ಸಿದ್ದಪ್ಪನವರು, ಶ್ರೀ ಶಿವಬಸವಾರ್ಯ ಸೊಪ್ಪಿಮಠ ಇವರಲ್ಲಿ ಸಂಗೀತ ಅಭ್ಯಾಸವನ್ನು ಮಾಡಿದರು.

ಅಲ್ಲಿಂದ ಮುಂದೆ ಹಾರ್ಮೋನಿಯಂ ಮಾಸ್ತರ್ ಆಗಿ, ನಾಟಕ ನಿರ್ದೇಶಕರಾಗಿ, ವೃತ್ತಿ ಕಂಪನಿ ನಾಟಕಗಳನ್ನು ರಚಿಸುವುದರೊಂದಿಗೆ, ಹಾಡುಗಳ ರಚನೆ, ಸಂಗೀತ ನಿರ್ದೇಶನವನ್ನು ಮಾಡಿದರು. ಇವರ ರಾಗಸಂಯೋಜನೆಯಲ್ಲಿ ಖ್ಯಾತ ಗಾಯಕರಾದ ಸುಭದ್ರಮ್ಮ ಮನ್ಸೂರ್, ಜುಬೇದಾಬಾಯಿ ಸವಣೂರು, ವಿಜಯ ಕುಮಾರ್ ಹುಬ್ಬಳ್ಳಿ ಮುಂತಾದವರು ಹಾಡಿದ ಹಾಡುಗಳು ಜನಪ್ರಿಯವಾಗಿವೆ.



## ಸತ್ಯ ಮುಳಕಟ್ಟೆ

ಬಾಲ್ಯದಿಂದಲೂ ಪೌರಾಣಿಕ ನಾಟಕಗಳಲ್ಲಿ ಅಭಿನಯಿಸುವ ಹಂಬಲ. ಆರ್ಥಿಕ ಕಾರಣಗಳಿಂದ ಸಾಧ್ಯವಾಗದೆ ನಿರಾಸೆ. ಆದರೆ ಮುಂದೆ ಮೈಕೋ ಕಾರ್ಖಾನೆಯಲ್ಲಿ ನೌಕರಿ ಹಿಡಿದಮೇಲೆ. ತನ್ನೆಲ್ಲಾ ಕನಸುಗಳು ನನಸಾಯಿತು ಸತ್ಯ ಮುಳಕಟ್ಟೆಯವರಿಗೆ. ಗ್ರಾಮೀಣ ಪರಿಸರದಿಂದ ಬಂದ ಸತ್ಯ ಅವರು, ಮೈಕೋ ಲಲಿತಕಲಾ ಸಂಘದ ಮೂಲಕ ಆಧುನಿಕ ನಾಟಕ ಚಟುವಟಿಕೆಗಳ ಪರಿಚಯ ಮಾಡಿಕೊಂಡರು.

25 ವರ್ಷಗಳ ಹಿಂದೆ ಇವರು ಸ್ಥಾಪಿಸಿದ 'ರಂಗಗಂಗೋತ್ರಿ' ಇಂದು ಬೆಂಗಳೂರಿನ ಹವ್ಯಾಸಿ ರಂಗತಂಡಗಳಲ್ಲಿ ಮುಖ್ಯ ಸ್ಥಾನಗಳಿಸಿದೆ. ದೇಶದಾದ್ಯಂತ ನಾಟಕಗಳನ್ನು 'ರಂಗಗಂಗೋತ್ರಿ'ಯ ಮೂಲಕ ಪ್ರದರ್ಶಿಸಿದ್ದಾರೆ.

ಹೆಸರಾಂತ ನಾಟಕಕಾರರೆಲ್ಲರ ನಾಟಕಗಳನ್ನು ಪ್ರಯೋಗಿಸಿರುವ ತೃಪ್ತಿ, ಹಾಗೆಯೇ ಹೆಸರಾಂತ ನಿರ್ದೇಶಕರಾದ ಬಿ.ವಿ. ಕಾರಂತ, ಆರ್. ನಾಗೇಶ್, ಹೆಚ್.ವಿ. ವೆಂಕಟಸುಬ್ಬಯ್ಯ, ಸಿ.ಜಿ.ಕೆ. ಮುಂತಾದವರ ನಿರ್ದೇಶನದಲ್ಲಿ ಅಭಿನಯಿಸಿದ್ದಾರೆ. ಮೈಕೋ ಕನ್ನಡಬಳಗದ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸುತ್ತಿರುವ ಸತ್ಯ ಮುಳಕಟ್ಟೆ ಹಲವಾರು ಸಂಘ–ಸಂಸ್ಥೆಗಳಲ್ಲಿ ಸಕ್ರಿಯವಾಗಿದ್ದಾರೆ.



## ಎಸ್. ಹನುಮಂತಯ್ಯ

ಸಮಾಜ ಸೇವೆಯ ಜೊತೆ ಜೊತೆಗೇ ರಂಗಭೂಮಿಯ ಚಟುವಟಿಕೆಗಳನ್ನು ನಡೆಸುತ್ತಿರುವ ಎಸ್. ಹನುಮಂತಯ್ಯನವರು, ಚಿಕ್ಕಂದಿನ ದಿನಗಳಲ್ಲೇ ರಂಗಭೂಮಿಗೆ ಆಕರ್ಷಿತರಾಗಿದ್ದರು. ತಮ್ಮ ಹಳ್ಳಿಯಲ್ಲೇ ನಾಟಕಗಳನ್ನು ಆಡಿಸಿ, ರಂಗತಂಡಗಳನ್ನು ಸಂಘಟಿಸಿದ್ದ ಇವರು, ನಟರಾಗಿಯೂ ಒಳ್ಳೆಯ ಹೆಸರು ಮಾಡಿದ್ದಾರೆ. ಬಡಕಲಾವಿದರ ಸಹಾಯಾರ್ಥ ಪ್ರದರ್ಶನಗಳನ್ನು ಏರ್ಪಡಿಸುವುದು, ಸಂಸ್ಥೆಗಳಿಗೆ ಹಾಗು ಅಶಕ್ತರಿಗೆ ಸಂಗೀತ ಉಪಕರಣಗಳನ್ನು ಉಚಿತವಾಗಿ ವಿತರಿಸುವುದು ಮುಂತಾದ ಸಮಾಜಸೇವಾ ಕಾರ್ಯಗಳನ್ನು ನಡೆಸುತ್ತಾ ಬಂದಿದ್ದಾರೆ. ಹಲವಾರು ಸಮಾಜ ಸೇವಾ ಸಂಘಟನೆಗಳ ಸಕ್ರಿಯ ಸದಸ್ಯರೂ ಆಗಿದ್ದಾರೆ.



## ಎಂ.ವಿ. ನಾರಾಯಣರಾವ್, ದೆಹಲಿ

ದೇಶದ ರಾಜಧಾನಿ ದೆಹಲಿಯಲ್ಲಿ ಕನ್ನಡ ಕೈಂಕರ್ಯವನ್ನು ಕೈಗೊಂಡ ವಿರಳರಲ್ಲಿ ಎಂ.ವಿ. ನಾರಾಯಣರಾವ್ ಕೂಡ ಒಬ್ಬರು. ಹುಟ್ಟೂರಿನ ಭಾಷೆ, ಸಂಸ್ಕೃತಿಗಳನ್ನು, ತಾವು ಬದುಕುತ್ತಿರುವ ಅನ್ಯ ಪರಿಸರದಲ್ಲಿ ಬೆಳೆಸುವಾಗ, ಬೇಕಾಗುವ ಕಾಳಜಿ, ಆಸಕ್ತಿ, ಆಶಯಗಳನ್ನು ಹೊತ್ತು, ಸಮಾನ ಮನಸ್ಕರನ್ನು ಸೇರಿಸುವುದು ಅತಿ ಮಹತ್ವದ ಕಾರ್ಯವಾಗುತ್ತದೆ. ಇಂತಹ ಕಾರ್ಯವನ್ನು ರಂಗಭೂಮಿಯ ಮೂಲಕ ಸಾಧಿಸಿದವರು – ನಾರಾಯಣರಾವ್ ಅವರು.

ತಮ್ಮ ನೌಕರಿಯ ನಿಮಿತ್ತ ದೆಹಲಿಗೆ ಹೋದವರು ಕನ್ನಡದ ಕಂಪನ್ನೂ ತೆಗೆದುಕೊಂಡು ಹೋದರು. 'ದಕ್ಷಿಣ ಭಾರತ ನಟೀನಟ ಸಮುಖ್ಯ'ದ ಜಂಟಿ ಕಾರ್ಯದರ್ಶಿಯಾಗಿ ಕನ್ನಡ ನಾಟಕಗಳ ಚಟುವಟಿಕೆ ಪ್ರಾರಂಭ ಮಾಡಿದವರು. ಮುಂದೆ ಪ್ರಭಾಕರರಾವ್, ಬಾಲೂರಾವ್, ಎಂ.ಎಸ್. ಸತ್ಯು, ಬಿ.ವಿ. ಕಾರಂತ, ಡಿ. ರಮೇಶ್. ವಿ. ಮೂರ್ತಿ ಇವರೆಲ್ಲರ ಸಂಘಟಿತ ಮನಸ್ಸಿನಿಂದ 'ಕನ್ನಡ ಭಾರತಿ' ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಸ್ಥೆಯ ಮೂಲಕ ಹತ್ತಾರು ನಾಟಕಗಳು, ಸಾಹಿತ್ಯ ಚಟುವಟಿಕೆಗಳು, ಪುಸ್ತಕ ಪ್ರಕಟಣೆ ಮುಂತಾದ ಕಾರ್ಯಗಳನ್ನು ನಡೆಸುತ್ತಾ ಬಂದಿದ್ದಾರೆ.



## ಎ. ಸುಬ್ಬರಾವ್, ಕಲ್ಕತ್ತ

ಉನ್ನತ ತಾಂತ್ರಿಕ ಶಿಕ್ಷಣವನ್ನು ಪಡೆದು, ಕಲ್ಕತ್ತೆಯಲ್ಲಿ ವಿವಿಧ ಹುದ್ದೆಗಳಿದ್ದರೂ, ತಮ್ಮ ವೃತ್ತಿಯ ಜೊತೆ ಜೊತೆಗೆ, ನಾಟಕದ ಹವ್ಯಾಸವನ್ನು ಬೆಳೆಸಿಕೊಂಡು ಬಂದವರು – ಕಲ್ಕತ್ತದ ಮೈಸೂರು ಅಸೋಸಿಯೇಷನ್ ಸಂಸ್ಥೆಯಲ್ಲಿ ನಿರಂತರ ನಾಟಕ ಚಟುವಟಿಕೆಗಳನ್ನು ನಡೆಸುತ್ತ ಬಂದಿರುವ ಸುಬ್ಬರಾವ್ ಅವರು ಕೈಲಾಸಂ, ಪರ್ವತವಾಣಿ, ದಾಶರಥಿ ದೀಕ್ಷಿತ್, ಕೆ. ಗುಂಡಣ್ಣ ಮುಂತಾದವರ ನಾಟಕಗಳಲ್ಲಿ ಅಭಿನಯಿಸಿ ನಿರ್ದೇಶಿಸಿದ್ದಾರೆ. ಹೊರನಾಡು ಕನ್ನಡಿಗರ ಸ್ಪರ್ಧೆಗಳಲ್ಲಿ ಭಾಗವಹಿಸಿ ತಮ್ಮ ಸಂಸ್ಥೆಗೆ ಹೆಸರು ತಂದಿದ್ದಾರೆ. ಅಲ್ಲದೆ ತಾವೇ ನಾಟಕಗಳನ್ನು ಬರೆದು, ಅಲ್ಲಿನ ಕನ್ನಡದ ಮಕ್ಕಳಿಗೆ ಕಲಿಸುವುದರ ಜೊತೆಗೆ ಇಂದಿನ ಪೀಳಿಗೆಗೆ ಕನ್ನಡ ನಾಡು, ನುಡಿಯ ಪರಿಚಯವನ್ನು ರಂಗಭೂಮಿಯ ಮೂಲಕ ಮಾಡಿಕೊಡುತ್ತಿದ್ದಾರೆ.



## ಕೆ.ಜಿ. ರಾವ್. ಮುಂಬಯಿ

ದೂರದ ಮುಂಬಯಿಯಲ್ಲಿ ಕನ್ನಡದ ಕಂಪು ಬೀರುವಲ್ಲಿ ಕೆ.ಜಿ. ರಾವ್ ಅವರ ಸಾಧನೆ ಅಭಿನಂದನೀಯ. ತಮ್ಮ ವಿದ್ಯಾರ್ಥಿ ಜೀವಿತದಲ್ಲೇ ಕನ್ನಡ ನಾಟಕಗಳ ಅಭಿನಯ ಹಾಗು ನಿರ್ದೇಶನಗಳ ಮೂಲಕ ಮುಂಬಯಿಯಲ್ಲಿ ಕನ್ನಡ ಸಂಸ್ಕೃತಿ ಕಟ್ಟುವ ಕೆಲಸವನ್ನು ಪ್ರಾರಂಭಿಸಿದರು.

ಅಂತರ ಕಾಲೇಜು ನಾಟಕ ಸ್ಪರ್ಧೆಗಳಲ್ಲಿ ಕನ್ನಡ ನಾಟಕಗಳಲ್ಲಿ ಭಾಗವಹಿಸಿದ ಅನುಭವದಿಂದ, ಮುಂಬಯಿಯಲ್ಲಿ ಕನ್ನಡ ಕಲಾಕೇಂದ್ರದ ಸ್ಥಾಪನೆಯಲ್ಲಿ ಬಹುಮುಖ್ಯ ಪಾತ್ರವಹಿಸಿ, ನಿರಂತರವಾಗಿ ಸಂಸ್ಥೆಯ ಬೆಳವಣಿಗೆಗೆ ದುಡಿದಿದ್ದಾರೆ. ಎರಡು ದಶಕಗಳಿಗೂ ಹೆಚ್ಚು ಕಾಲ ಕರ್ನಾಟಕದ ಸಂಸ್ಕೃತಿಯ ಪ್ರಸಾರಕ್ಕೆ ತಮ್ಮನ್ನು ಈ ಸಂಸ್ಥೆಯ ಮೂಲಕ ತೊಡಗಿಸಿಕೊಂಡ ಕೆ.ಜಿ.ರಾವ್ ಕರ್ನಾಟಕ ಏಕೀಕರಣದ ನಂತರ ನಿರಂತರವಾಗಿ ನಾಟಕೋತ್ಸವಗಳು, ವಿಚಾರ ಸಂಕಿರಣ ಹಾಗು ಸಾಂಸ್ಕೃತಿಕ ವಿನಿಮಯ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಭಾಷಾ ಬಾಂಧವ್ಯಕ್ಕೂ ಹೆಸರಾದ ಇವರು ಅನೇಕ ಮರಾಠಿ ನಾಟಕಗಳನ್ನು ಕನ್ನಡಕ್ಕೆ ತಂದರು. ಕನ್ನಡಕ್ಕೆ ಸಂಬಂಧಿಸಿದಂತೆ, ಮುಂಬಯಿಯ ಎಲ್ಲಾ ಸಂಸ್ಥೆಗಳನ್ನು ಸಮನ್ವಯಗೊಳಿಸಿ ಇವರು ನಡೆಸುವ ಚಟುವಟಿಕೆಗಳು ಮುಂಬಯಿಯಲ್ಲಿ ಕನ್ನಡದ ಬೆಳವಣಿಗೆಗೆ ಕಾರಣವಾಗಿದೆ. ಇವರಿಗೆ ಕರ್ನಾಟಕ ರಾಜ್ಯ ಸರ್ಕಾರ ಪ್ರಶಸ್ತಿ ನೀಡಿದೆ.

## ಅಪ್ಪುರಾಜ ಮುಧೋಳ

ಕ್ರಮಬದ್ಧ ಶಿಕ್ಷಣದಿಂದ ವಂಚಿತರಾದ ಅಪ್ಪುರಾಜ ಮುಧೋಳ ಅವರು, ಸ್ವಶಕ್ತಿಯಿಂದ ಕನ್ನಡ, ತಮಿಳು, ಹಿಂದಿ, ತೆಲುಗು ಭಾಷೆಯನ್ನು ಕಲಿತರು. ತಮ್ಮ 14ನೇ ವಯಸ್ಸಿನಲ್ಲಿ ಶ್ರೀ ಶಾರದ ಸಂಗೀತ ನಾಟಕ ಮಂಡಳಿ, ಗೋಕಾಕ ಮೂಲಕ ರಂಗಪ್ರವೇಶ ಮಾಡಿದರು. ಮುಂದೆ ಸತತ 20 ವರ್ಷಗಳು ಇದೇ ಕಂಪನಿಯ ಮುಖ್ಯ ನಟರಾಗಿ ಬೆಳೆದು ನಿಂತ ಅಪ್ಪುರಾಜ ಅವರು, ಸಾಮಾಜಿಕ, ಪೌರಾಣಿಕ ಹಾಗು ಐತಿಹಾಸಿಕ ನಾಟಕಗಳ 'ಖಳನಾಯಕ' ಪಾತ್ರಧಾರಿಯಾಗಿ ಹೆಸರು ಮಾಡಿದರು. ಜೊತೆಗೆ ಶಾಸ್ತ್ರೀಯ ನೃತ್ಯವನ್ನು ಅಭ್ಯಾಸ ಮಾಡಿದರು.

ಗುಡಗೇರಿ, ಅರಿಶಿನಗೋಡಿ, ಚಿತ್ತರಗಿ, ಓಬಳೇಶ್ವರ ಹಾಗು ದೇಸಾಯಿಯವರ ಕಂಪನಿಯಲ್ಲಿ ಮುಂದಿನ ದಿನಗಳಲ್ಲಿ ನಟರಾಗಿ ಕಾರ್ಯ ನಿರ್ವಹಿಸಿದರು. ಇತ್ತೀಚೆಗೆ ಕೆಲವು ಸಿನಿಮಾಗಳಲ್ಲೂ ಅಭಿನಯಿಸಿದ್ದಾರೆ. ಶ್ರೀ ಶಕ್ತಿ ನಾಟ್ಯ ಕಲಾಸಂಘವೆಂಬ ಸ್ವಂತ ಕಂಪನಿಯನ್ನು ನಡೆಸಿದ ಅನುಭವವೂ ಇವರಿಗಿದೆ.



## ಹೆಚ್.ಎಸ್. ಉಮೇಶ್

ಮೈಸೂರು ಹವ್ಯಾಸಿ ರಂಗಭೂಮಿಯ ಸೃಜನಶೀಲ ನಿರ್ದೇಶಕರಲ್ಲಿ ಒಬ್ಬರು. ನಿರ್ದೇಶನ ಮಾಧ್ಯಮವನ್ನು ತಮ್ಮ ಅಭಿವ್ಯಕ್ತಿಯನ್ನಾಗಿಸಿಕೊಂಡಿರುವ ಉಮೇಶ, ಕಳೆದ 20 ವರ್ಷಗಳಿಂದ ತಮ್ಮ ನಾಟಕಗಳ ಮೂಲಕ ಸಾಂಸ್ಕೃತಿಕ ಹಾಗು ವೈಚಾರಿಕ ಮಹತ್ವವನ್ನು ತಿಳಿಯಲು ಪ್ರಯತ್ನಿಸಿದ್ದಾರೆ.

ಹವ್ಯಾಸಿ ರಂಗಕ್ಕೆ ಹೊಸ ಚಾಲನೆಯನ್ನು ನೀಡುವುದರಲ್ಲಿ ಉಮೇಶರ ನಾಟಕಗಳು ತಮ್ಮದೇ ಆದ ಕಾಣಿಕೆಯನ್ನು ನೀಡಿವೆ. ಗೋಕರ್ಣದ ಗೌಡಶಾನಿ, ತದ್ರೂಪಿ,

ಮುದ್ರಾರಾಕ್ಷಸ, ಈಡಿಪಸ್, ಗಾಡೋ, ದುರ್ಗಾಸ್ತಮಾನ ಮುಂತಾದ ನಾಟಕಗಳನ್ನು ಜನಮನದಲ್ಲಿ ಸದಾ ನೆನಪಿನಲ್ಲಿರುವಂತೆ ನಿರ್ದೇಶಿಸಿದ್ದಾರೆ. ಕಲಾಪ್ರಿಯ ನಾಟಕ ಸಂಸ್ಥೆಯೊಂದಿಗೆ ಮೈಸೂರಿನ ಇತರ ರಂಗತಂಡಗಳಲ್ಲಿ ನಿರ್ದೇಶಕರಾಗಿ, ನಟರಾಗಿ ತಮ್ಮ ಚಟುವಟಿಕೆಗಳನ್ನು ನಡೆಸುತ್ತಿರುವ ಉಮೇಶ್, ಸಾಕ್ಷರತಾ ಆಂದೋಲನದಲ್ಲೂ ವಿಶಿಷ್ಟವಾಗಿ ತೊಡಗಿಸಿಕೊಂಡಿದ್ದಾರೆ.

---

## ಯಲ್ಲಪ್ಪ ರಡ್ಡೇರ ತಿಮ್ಮಾಪುರ

ವೃತ್ತಿ ರಂಗಭೂಮಿಯ ಏಳು-ಬೀಳುಗಳನ್ನು ಕಂಡ ಯಲ್ಲಪ್ಪನವರು ನಟರಾಗಿ ಕಂಪನಿ ಸೇರಿದವರು. ನಂತರ ಕಂಪನಿಯ ಪಾಲುದಾರರಾಗಿ, ಹೊಸ ವೃತ್ತಿ ತಂಡವನ್ನು ಕಟ್ಟಿ, ದುರದೃಷ್ಟದ ಹೊಡತಕ್ಕೆ ಸಿಕ್ಕು ಎಲ್ಲವನ್ನು ಕಳೆದುಕೊಂಡವರು. ಹಾಗಾಗಿ ಇವರ ಬದುಕು ಅನೇಕ ವೃತ್ತಿ ಕಲಾವಿದರಂತೆ ಕಂಗಾಲಾಗಿ ಹೋಗಿದೆ.

ಚಿಕ್ಕಂದಿನಿಂದಲೇ ನಾಟಕದ ಹುಚ್ಚು ಹಿಡಿಸಿಕೊಂಡ ಇವರು ತಮ್ಮ ಪ್ರೌಢ ಶಿಕ್ಷಣ ಮುಗಿಸುತ್ತಿದ್ದಂತೆ, ಸ್ವಗ್ರಾಮದಲ್ಲೇ ಸರ್ಕಾರಿ ಕೆಲಸಕ್ಕೆ ಸೇರಿದರು. ಪಂಚಾಯಿತಿ ಕಾರ್ಯದರ್ಶಿಯಾಗಿದ್ದ ಯಲ್ಲಪ್ಪನವರು, ಅವರ ಊರಿಗೆ ಮೊಕ್ಕಾಂ ಹೂಡಲು ಬಂದ ಶ್ರೀ ಹುಚ್ಚೇಶ್ವರ ನಾಟಕ ಸಂಘ, ಕಮತಗಿ ಕಂಪನಿಯ ನಾಟಕಗಳಿಗೆ ಮಾರುಹೋಗಿ, ಕಂಪನಿಯನ್ನು ಸೇರಿ ನಟರಾದರು.

ಶ್ರೀ ಮಹಾಕೂಟೇಶ್ವರ ಕೃಪಾ ಪರಿಪೂರ್ಣ ನಾಟಕ ಸಂಘ, ರಡ್ಡೇರ ತಿಮ್ಮಾಪುರ ಎಂಬ ಕಂಪನಿಯನ್ನು ಸ್ಥಾಪಿಸಿದ ಇವರು, ಅದ್ಭುರಿ ನಾಟಕಗಳನ್ನು ಆಡಿಸಿದರು. ಕಾಲಕ್ರಮೇಣ ಅನಾರೋಗ್ಯ ಹಾಗು ಕಂಪನಿಯ ನಷ್ಟದಿಂದ ಚೇತರಿಸಿಕೊಳ್ಳಲಾಗದ ಪರಿಸ್ಥಿತಿಯನ್ನು ಮುಟ್ಟಿದರು.

---



## ಎಂ.ಎಸ್. ಕೊಟ್ರೇಶ್

ಗೆಳೆಯರ ಒತ್ತಾಯಕ್ಕೆ ಹಚ್ಚಿದ ಬಣ್ಣ, ಬಣ್ಣದ ಬದುಕಿಗೆ ಕಾರಣವಾಗುತ್ತದೆ ಎಂದು ಕೊಟ್ರೇಶ್ ಅವರಿಗೆ ತಿಳಿದಿರಲಿಲ್ಲ. ಆದರೆ ಬಣ್ಣ ಸೆಳೆತ ಅವರನ್ನು ಗುಬ್ಬಿ ನಾಟಕ ಕಂಪನಿಯವರೆಗೆ ಎಳೆದು ತಂದಿತು. ಕಲೆಯ ಹುಚ್ಚಿನಲ್ಲಿ ಬಣ್ಣವನ್ನು ಹಚ್ಚಿಕೊಂಡ ಇವರು, ಕರ್ನಾಟಕದ ಮುಖ್ಯ ಕಂಪನಿಗಳಲ್ಲಿ ಕಂಡು ಬಂದರು. ಇವರ ಜೀವನದ ಪಯಣದಲ್ಲಿ ಶ್ರೀಶೈಲದ ಮಲ್ಲಿಕಾರ್ಜುನ ನಾಟ್ಯ ಸಂಘ ಸುಳ್ಯ, ಸಂಗಮೇಶ್ವರ ನಾಟ್ಯ ಸಂಘ ಗುಡಗೇರಿ ಕಂಪನಿಗಳ ನಂತರ ನೆಲೆ ನಿಂತಿದ್ದು ಶ್ರೀ ಶಾರದಾ ಸಂಗೀತ ನಾಟಕ ಮಂಡಲಿ, ಗೋಕಾಕ ಸಂಸ್ಥೆಯಲ್ಲಿ.

ಇವರಲ್ಲಿದ್ದ ನಟನಾ ಸಾಮರ್ಥ್ಯದ ಅಭಿವ್ಯಕ್ತಿಗೆ ಈ ಮಂಡಲಿಯ ನಾಟಕಗಳು ಕಾರಣವಾದವು. ನಾಯಕ, ಖಳನಾಯಕ, ಹಾಸ್ಯ ಪಾತ್ರಗಳೆಲ್ಲದರಲ್ಲೂ ಮಿಂಚಿದ ಈ ಕಲಾವಿದರಿಗೆ 'ಸಂಪತ್ತಿಗೆ ಸವಾಲ್'ದ 'ಭದ್ರ'ನ ಪಾತ್ರ ಬಹಳ ಹೆಸರು ತಂದುಕೊಟ್ಟಿತು.

ತಮ್ಮಲ್ಲಿದ್ದ ಪ್ರತಿಭೆ ಬೆಳಕಿಗೆ ಬರಲು ಕಾರಣವಾದ ಶ್ರೀ ಶಾರದಾ ಸಂಗೀತ ನಾಟಕ ಮಂಡಲಿ, ಗೋಕಾಕ್ ಸಂಸ್ಥೆಗೆ ಸದಾ ಋಣಿ ಎಂದು ಹೇಳುವ ಇವರು, ಕಲಾವಿದನಿಗೆ ಪುರಸ್ಕಾರ ದೊರೆತಂತೆ ಬೆಳೆಯುತ್ತಾನೆ, ಬೆಳಗುತ್ತಾನೆ ಎಂದು ಹೇಳುತ್ತಾರೆ.

---



## ಗುಬ್ಬಿ ಪ್ರಭಾವತಮ್ಮ

ಸತತವಾಗಿ 37 ವರ್ಷಗಳ ಕಾಲ ಶ್ರೀ ಗುಬ್ಬಿ ಬಸವೇಶ್ವರ ಥಿಯೇಟರ್ಸ್ ಕಂಪನಿಯಲ್ಲಿ ಮುಖ್ಯ ಭೂಮಿಕೆಯಲ್ಲಿದ್ದ ಪ್ರಭಾವತಮ್ಮ ಅವರು ತಮ್ಮ ಹದಿನೈದು ವರ್ಷದಲ್ಲೇ ರಂಗಪ್ರವೇಶ ಮಾಡಿದರು. 1955ನೇ ಇಸವಿಯಲ್ಲಿ ಗುಬ್ಬಿ ಕಂಪನಿಗೆ ಸೇರಿದ ಇವರು ತಮ್ಮ ವೃತ್ತಿ ಜೀವನದ ಮಹತ್ವದ ನಾಟಕಗಳಾದ ದಶಾವತಾರ, ಲವಕುಶ, ಎಡೆಯೂರು ಸಿದ್ಧಲಿಂಗೇಶ್ವರ ಮಾಹಾತ್ಮೆ, ಅಣ್ಣ–ತಮ್ಮ, ಮಾವನ ಮನೆ.... ಮುಂತಾದವುಗಳಲ್ಲಿ ನಾಯಕಿ ಪಾತ್ರಗಳಲ್ಲಿ ಅಭಿನಯಿಸಿದರು. ತಮ್ಮ ಅಭಿನಯದ ಮೂಲಕ ಅಪಾರ ಪ್ರಶಂಸೆಯನ್ನು ಗಳಿಸಿದ್ದರು. ಶ್ರೀ ಬಿ.ವಿ. ಚನ್ನಬಸವಪ್ಪ ಅವರ ಪತ್ನಿಯವರಾದ ಪ್ರಭಾವತಮ್ಮನವರು ಅನೇಕ ಚಲನಚಿತ್ರಗಳಲ್ಲೂ ಅಭಿನಯಿಸಿದ್ದಾರೆ. ಸದ್ಯ ಮೈಸೂರಿನಲ್ಲಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ.

---



## ಕೆ. ಜಯಲಕ್ಷ್ಮಿ ಪಾಟೀಲ

ಕಲಾವಿದ ಕುಟುಂಬದಿಂದ ಕೆ. ಜಯಲಕ್ಷ್ಮಿ ಪಾಟೀಲ ಅವರು ಸಹಜವಾಗಿಯೇ ರಂಗಭೂಮಿಗೆ ತಮ್ಮನ್ನು ಅರ್ಪಿಸಿಕೊಂಡವರು. ತಂದೆಯವರಿಂದಲೇ ನೃತ್ಯ, ಸಂಗೀತ ಹಾಗು ನಟನೆಯ ಪ್ರಾಥಮಿಕ ಶಿಕ್ಷಣವನ್ನು ಪಡೆದ ಜಯಲಕ್ಷ್ಮಿ ಅವರು, ಅವರದೇ ಆದ ಕಂಪನಿ ಕಲಾ ಪ್ರಕಾಶ ನಾಟ್ಯ ಸಂಘ, ಬ್ಯಾಡಗಿ ಮೂಲಕ ರಂಗ ಪ್ರವೇಶ ಮಾಡಿದರು.

ತಂದೆ, ತಾಯಿ, ಇಬ್ಬರ ಮಾರ್ಗದರ್ಶನ ಮುಂದೆ ಈಕೆ ನವಜಾತ ಕಲಾವಿದೆ ಎಂಬ ಬಿರುದಿಗೆ ಕಾರಣವಾಯಿತು. ಸ್ವಂತ ಕಂಪನಿಯನ್ನು ತಂದೆಯ ನಂತರ ಜಯಲಕ್ಷ್ಮಿ ಪಾಟೀಲ ಅವರು ಕೆಲವು ವರ್ಷ ನಡೆಸಿದರು. ನಂತರ ಜಮಖಂಡಿ ಕಂಪನಿ, ಗುಬ್ಬಿ ಕಂಪನಿ, ಕಮತಗಿ ಕಂಪನಿ, ಗುಡಗೇರಿ ಕಂಪನಿಗಳಲ್ಲಿ ನಟಿಯಾಗಿ ರಂಗಭೂಮಿಯ ಸೇವೆಯಲ್ಲಿ ನಿರಂತರ ತೊಡಗಿಕೊಂಡರು.

ಮೂರು ತಲೆಮಾರುಗಳ ರಂಗಭೂಮಿ ಸೇವೆ ಸಲ್ಲಿಸಿರುವ ಕುಟುಂಬದ ಸದಸ್ಯರಾಗಿ, ಜಯಲಕ್ಷ್ಮಿ ಪಾಟೀಲ ಅವರ ಸೇವೆಯ ಬಗ್ಗೆ ಅನೇಕ ಸನ್ಮಾನಗಳು, ಪ್ರಶಸ್ತಿಗಳು ಲಭಿಸಿವೆ. ಇಂದಿಗೂ ಕಂಪನಿಗಳಲ್ಲಿ ಮಾತ್ರ ಅಭಿನಯಿಸುತ್ತಿದ್ದಾರೆ.

---



## ಥೆರೇಸಮ್ಮ ಡಿಸೋಜಾ

ತಾಯಿಯ ಪ್ರೋತ್ಸಾಹದಿಂದ 15 ವರ್ಷಕ್ಕೆ ರಂಗಭೂಮಿಯನ್ನು ಬದುಕಿಗೆ ನೆಲೆಯನ್ನಾಗಿ ಆರಿಸಿಕೊಂಡಿರುವ ಥೆರೇಸಮ್ಮ, ಗುಬ್ಬಿ ಕಂಪನಿಯ ಮೂಲಕ ಇವರ ರಂಗಪ್ರವೇಶ. ಪೌರಾಣಿಕ, ಸಾಮಾಜಿಕ ಹಾಗು ಐತಿಹಾಸಿಕ ಪಾತ್ರಗಳನ್ನು ಇದೇ ಕಂಪನಿಯಲ್ಲಿ ಇವರು ಕಲಿತಿದ್ದು, ಈ ಕಲಿಕೆಗೆ ಪ್ರೋತ್ಸಾಹ ನೀಡಿದರು ಕೆ. ನಾಗೇಶರಾಯರು ಹಾಗು ಸುಬ್ಬರಾಯರು. ದಶಾವತಾರದ 'ಮಂಡೋದರಿ', ಲವಕುಶದ 'ಕೌಸಲ್ಯ' ಮುಂತಾದ ಪಾತ್ರಗಳು ಈ ಕಂಪನಿಯಲ್ಲಿ ದೊರೆತಿದ್ದವು.

ಮುಂದೆ ಎಂ.ಸಿ. ಮಹದೇವಸ್ವಾಮಿಯವರ ಶ್ರೀ ಕನ್ನಡ ಥಿಯೇಟ್ರಿಕಲ್ಸ್ ಕಂಪನಿಯಲ್ಲಿ ಪಾತ್ರಮಾಡಿ ಒಳ್ಳೆಯ ಹೆಸರು ಗಳಿಸಿದರು. ನಾಟಕ ರಂಗವಲ್ಲದೆ ಚಲನಚಿತ್ರರಂಗದಲ್ಲಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಜೊತೆಗೆ ಇವರ ಕುಟುಂಬದ ನಾಲ್ಕು ಮಂದಿ ರಂಗಭೂಮಿ ಸೇವೆಯಲ್ಲಿ ತೊಡಗಿದ್ದಾರೆ.

---

## ಪ್ರಮೀಳಾ ಗುಡೂರು (ಇಟಗಿ)



ಬಡ ನೇಕಾರರ ಕುಟುಂಬದಲ್ಲಿ ಜನಿಸಿದ ಪ್ರಮೀಳಾ ಅವರು, ಪರಿಸ್ಥಿತಿಯ ಒತ್ತಡದಿಂದ ಹವ್ಯಾಸಿ ರಂಗಭೂಮಿಯಲ್ಲಿ ಪಾತ್ರಗಳನ್ನು ಮಾಡಲು ಪ್ರಾರಂಭಿಸಿದರು. ಸಂಗೀತವನ್ನು ಅಭ್ಯಾಸ ಮಾಡುವ ಗುರಿಯಿಂದ ವಸಂತ ಕಲಾ ನಾಟ್ಯ ಸಂಘ, ಗದಗ ಕಂಪನಿಗೆ ಸೇರಿದರು. ಎರಡು ವರ್ಷಗಳ ನಂತರ ಕಂಪನಿಯಿಂದ ಹೊರಬರಬೇಕಾಯಿತು. ಆರ್ಥಿಕ ಕಾರಣಗಳಿಂದ ಸಂಗೀತವನ್ನು ಕಲಿಯುವ ಆಸಕ್ತಿಯನ್ನು ಬಿಟ್ಟು, ಉತ್ತಮ ನಟಿಯಾದರೂ ಆಗಬೇಕೆಂಬ ಹಂಬಲದಿಂದ ಎಡೆಯೂರು ಸಿದ್ಧಲಿಂಗೇಶ್ವರ ನಾಟ್ಯ ಸಂಘ, ನಂತರ ಕಮತಗಿ ಶ್ರೀ ಹುಚ್ಚೇಶ್ವರ ನಾಟ್ಯ ಸಂಘದಲ್ಲಿ ಸತತವಾಗಿ 18–19 ವರ್ಷಗಳ ಸೇವೆ ಸಲ್ಲಿಸಿದರು. ಮುಂದಿನ ವರ್ಷಗಳಲ್ಲಿ ಶ್ರೀಶೈಲ ನಾಟ್ಯಸಂಘ, ಸುಳ್ಯ, ಶ್ರೀ ಸಂಗಮೇಶ್ವರ ನಾಟ್ಯ ಸಂಘ ಗುಡಗೇರಿ ಕಂಪನಿಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ವೃತ್ತಿ ಕಂಪನಿಗಳಿಂದ ನಿವೃತ್ತರಾಗಿದ್ದರೂ, ಆರ್ಥಿಕ ಅನುಕೂಲತೆಗಾಗಿ ಹವ್ಯಾಸ ತಂಡಗಳಲ್ಲಿ ಪಾತ್ರ ಮಾಡುತ್ತಾ ಇದ್ದಾರೆ.

---

## ಪುಷ್ಪಾರಾಣಿ ಮುನಿವೆಂಕಟಪ್ಪ



ಬಾಲನಟಿಯಾಗಿ ರಂಗಪ್ರವೇಶ ಮಾಡಿದ ಪುಷ್ಪಾರಾಣಿಯವರು ಈವರೆಗೆ ಸಹಸ್ರಾರು ನಾಟಕಗಳಲ್ಲಿ ಪಾತ್ರಾಭಿನಯ ಮಾಡಿ ಜನಮೆಚ್ಚುಗೆ ಗಳಿಸಿದ್ದಾರೆ. ಮಹಂತೇಶ್ವರಿ ನಾಟ್ಯ ಸಂಘ ಹಾಗು ನಾಗರತ್ನಮ್ಮ ಸ್ತ್ರೀ ನಾಟಕ ಮಂಡಲಿಗಳಲ್ಲೂ ಸಕ್ರಿಯವಾಗಿ ದುಡಿದಿದ್ದಾರೆ. ಪುಷ್ಪ ಕಲಾವೃಂದ ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಉತ್ತಮ ನಾಟಕಗಳ ಪ್ರಯೋಗಕ್ಕೆ ಕಾರಣರಾಗಿದ್ದಾರೆ. ಆ ಮೂಲಕ ಹಲವಾರು ಪ್ರಶಸ್ತಿ, ಪಾರಿತೋಷಕಗಳನ್ನು ಗಳಿಸಿದ್ದಾರೆ. ಮಹಿಳೆಯರನ್ನು ಅದರಲ್ಲೂ ದಲಿತ ಮಹಿಳೆಯರನ್ನು ಜಾಗೃತಗೊಳಿಸಲು, ತಮ್ಮ ಸಂಸ್ಥೆಗೆ ಮಹೇಶ್ವರ ಸ್ತ್ರೀ ಕಲಾನಿಕೇತನ ಎಂದು ನಾಮಕರಣಮಾಡಿ ಹಲವಾರು ನಾಟಕಗಳನ್ನು ಕರ್ನಾಟಕದ ಎಲ್ಲಾ ಭಾಗಗಳಲ್ಲೂ ಪ್ರದರ್ಶಿಸಿದ್ದಾರೆ. ಕರ್ನಾಟಕ ರಂಗಭೂಮಿ ಕಲಾವಿದರ ಮತ್ತು ರಂಗಕರ್ಮಿಗಳ ಶ್ರೇಯೋಭಿವೃದ್ಧಿ ಸಂಘದ ಮಹಿಳಾ ಕಲಾ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅನೇಕ ಸಹಾಯಾರ್ಥ ಪ್ರದರ್ಶನಗಳಿಂದ ಅಶಕ್ತ ಕಲಾವಿದರ ಮತ್ತು ದುರ್ಬಲ ವರ್ಗದವರ ಸಾಮೂಹಿಕ ವಿವಾಹಕ್ಕೆ ಈ ಸಂಸ್ಥೆಯ ಮೂಲಕ ನೆರವಾಗುತ್ತಿದ್ದಾರೆ. ಇವರ ಕಲಾಸೇವೆ ಹಾಗು ಸಮಾಜ ಸೇವೆಯನ್ನು ಗುರುತಿಸಿ 1993ರ 'ಪ್ರಿಯದರ್ಶಿನಿ ಇಂದಿರಾ ಪ್ರಶಸ್ತಿ'ಯನ್ನು ಅಂತರರಾಷ್ಟ್ರೀಯ ಸಮಗ್ರತಾ ಹಾಗು ಶಾಂತಿ ಸ್ನೇಹತ್ವ ಸಮಾಜದವರು ನೀಡಿ ಪುರಸ್ಕರಿಸಿದ್ದಾರೆ.

---

## ಎಂ.ಪಿ. ಬಾಬು



ಬಾಬು ಮೇಸ್ತ್ರಿ ಎಂದೇ ವೃತ್ತಿರಂಗದ ಪರಿಚಿತರಾಗಿರುವ ಬಾಬು ಅವರು ವೃತ್ತಿರಂಗದಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದವರು. ತಮ್ಮ 17ನೇ ವಯಸ್ಸಿಗೆ ಗುಬ್ಬಿ ಕಂಪನಿಯನ್ನು ಸೇರಿದವರು, ಮುಂದೆ ಕೆ. ಹಿರಣ್ಣಯ್ಯನವರೊಂದಿಗೆ ಸಿನಿಮಾ ತಯಾರಿಕೆಯಲ್ಲಿ ಸಹಕರಿಸಲು ಹೋದರು. ಮತ್ತೆ ಗುಬ್ಬಿ ಕಂಪನಿಗೆ ಪ್ರವೇಶಮಾಡಿದಾಗ, ಮೇಸ್ತ್ರಿ ಕೆಲಸವನ್ನು ಗುಬ್ಬಿ ವೀರಣ್ಣನವರು ನೀಡಿದರು. ದಶಾವತಾರ ನಾಟಕದ ತಯಾರಿಕೆಯಲ್ಲಿ ಮೇಸ್ತ್ರಿಯಾಗಿ

ಇವರು ನಿರ್ವಹಿಸಿದ ಕಾರ್ಯದಿಂದ ಜನಪ್ರಿಯರಾದರು. ಹೊಸ ಹೊಸ ಕಂಪನಿಗಳನ್ನು ಆರಂಭಿಸುವಾಗ, ವೀರಣ್ಣನವರ ಅನುಮತಿಯನ್ನು ಪಡೆದು ಬಾಬು ಅವರ ಸೇವೆಯನ್ನು ಬೇರೆ ಮಾಲೀಕರು ಎರವಲು ಪಡೆಯುತ್ತಿದ್ದರು. ಅಷ್ಟರ ಮಟ್ಟಿಗೆ ಬಾಬು ಪ್ರಸಿದ್ಧರಾಗಿದ್ದರು. ಶ್ರೀ ನಟರಾಜ ನಾಟ್ಯ ಸಂಘ, ಗದಗ, ಶ್ರೀ ಶೈಲ ನಾಟಕ ಸಂಘ, ಸುಳ್ಯ, ಶ್ರೀ ಉಮಾಮಹೇಶ್ವರ ನಾಟಕ ಮಂಡಲಿಗಳ ಪ್ರಾರಂಭಕ್ಕೆ ಬಾಬು ಮೇಸ್ತ್ರಿಯವರು ದುಡಿದಿದ್ದರು. ನಂತರದಲ್ಲಿ ಮತ್ತೆ ಗುಬ್ಬಿ ಕಂಪನಿಯಲ್ಲಿ ಕಾರ್ಯ ನಿರ್ವಹಿಸಿದರು.

ನಾಟಕರಂಗದಲ್ಲಿ ಸತತ 55 ವರ್ಷಗಳ ಸೇವೆ ಹಾಗು ಅಭಿಮಾನ್ ಸ್ಟೂಡಿಯೋದಲ್ಲಿ ಸೇವೆ ಸಲ್ಲಿಸಿದ ನಂತರ ವಿಶ್ರಾಂತಿ ಪಡೆಯುತ್ತಿದ್ದಾರೆ.

---



## ಬಾಬಣ್ಣ ಹಾವೇರಿ

ತಮ್ಮ ವ್ಯಕ್ತಿ ಜೀವನದಲ್ಲಿ ಹಲವಾರು ಅನಿರೀಕ್ಷಿತಗಳನ್ನು ಎದುರಿಸಿ, ಗಟ್ಟಿಯಾಗಿ ನಿಂತವರು ಬಾಬಣ್ಣ. ಉತ್ತಮ ನಟನೆಂದು ಹೆಸರು ಗಳಿಸುವಲ್ಲಿ ಅವರು ಕ್ರಮಿಸಿದ ದಾರಿ ಬಹಳ ದೂರ. ಬಾಲಪಾತ್ರಗಳನ್ನು ಮಾಡುತ್ತಾ ಕಂಪನಿ ಪ್ರವೇಶಿಸಿದ ಬಾಬಣ್ಣ ಅವರು ಶ್ರೀ ಶಾರದ ಕಂಪನಿ (ಗೋಕಾಕ)ಗೆ ಸೇರುವವರೆಗೆ ತಮ್ಮ ವೃತ್ತಿಯಲ್ಲಿ ಹಿನ್ನಡೆಯನ್ನು ಅನುಭವಿಸಿದರು. ಈ ಕಂಪನಿಯಲ್ಲಿ ಅನಿರೀಕ್ಷಿತವಾಗಿ 'ರಕ್ತರಾತ್ರಿ' ನಾಟಕದ ಅಶ್ವತ್ಥಾಮನ ಪಾತ್ರ ದೊರೆತಿದ್ದು, ಇವರ ನಟನಾ ಜೀನದಲ್ಲಿ ದೊಡ್ಡ ತಿರುವು. ಮುಂದಿನ ದಿನಗಳಲ್ಲಿ ಅನೇಕ ಪೌರಾಣಿಕ ಪಾತ್ರಗಳು, ಹಾಸ್ಯಪಾತ್ರಗಳು ಇವರ ಪಾಲಿಗೆ ಬಂದವು. ಎಲ್ಲ ನಾಟಕಗಳಲ್ಲೂ ಸಮರ್ಥವಾಗಿ ಅಭಿನಯಿಸುತ್ತಾ, ಜನ ಮೆಚ್ಚುಗೆಯನ್ನು ಗಳಿಸುತ್ತಾ ಬಂದರು.

ಗುಡಿಗೇರಿ ಕಂಪನಿಯ 'ವರನೋಡಿ ಹೆಣ್ಣು ಕೊಡು' ನಾಟಕದ ಹಾಸ್ಯ ಪಾತ್ರ ಬಹಳ ಯಶಸ್ವಿಯಾದುದಲ್ಲದೆ, ಸತತ 585 ಪ್ರಯೋಗಗಳನ್ನು ಈ ನಾಟಕ ಕಂಡಿತು. ಹಲವಾರು ಹಿರಿಯ ಕಲಾವಿದರೊಂದಿಗೆ ನಟಿಸಿರುವ ಇವರು ಚಲನಚಿತ್ರರಂಗದ ಮೆಟ್ಟಿಲನ್ನೂ ಹತ್ತಿದ್ದಾರೆ.

---



## ಬಾಬಣ್ಣ ಕಲ್ಮನಿ, ಕುಕನೂರ

ಬಾಬಣ್ಣ ಅಭಿನೇತ್ರಿ ದಿ॥ ರಹಿಮಾನವ್ವ ಕುಕನೂರ ಅವರ ಮಗನಾದ ಬಾಬಣ್ಣ ಕಲ್ಮನಿಯವರು ಬಾಲ್ಯದಿಂದಲೇ ಬಣ್ಣದ ಬದುಕನ್ನು ಅರಿಸಿಕೊಂಡವರು. ತಾಯಿಯ ಮಾರ್ಗದರ್ಶನದಿಂದ, ಪ್ರತಿಭೆಯಿಂದ ಹಾಗೂ ಸಮಕಾಲೀನ ಹಿರಿಯ ನಟರ ಕಿವಿಮಾತುಗಳಿಂದ ಉತ್ತಮ ನಟರಾಗಿ ರೂಪುಗೊಂಡರು ಬಾಬಣ್ಣ.

ಎಲ್ಲಾ ಪ್ರಕಾರದ ನಾಟಕಗಳಲ್ಲಿ, ಎಲ್ಲಾ ವಿಧದ ನಟನೆಯನ್ನು ಮಾಡಿದರೂ, ಹಾಸ್ಯ ಪಾತ್ರಗಳಲ್ಲಿ ಇವರ ಸಾಮರ್ಥ್ಯ ಪ್ರಖರವಾಗಿತ್ತು. ಬಾಬು ಅವರ ಹಾಸ್ಯ ಪಾತ್ರದಿಂದಾಗಿಯೇ ಅನೇಕ ನಾಟಕಗಳು ಹೆಸರು ಮಾಡಿವೆ.

ಕಳೆದ ನಾಲ್ಕು ದಶಕಗಳಿಂದ ರಂಗಭೂಮಿಯೊಂದಿಗೆ ಉಸಿರಾಡುತ್ತಿರುವ ಬಾಬಣ್ಣ ಅವರ ಅಭಿನಯದ ಉತ್ಸಾಹ, ಚೇತನಗಳು ಕುಂದಿಲ್ಲ. ಶಿಸ್ತು, ಸಂಯಮ, ಶುದ್ಧ ಚಾರಿತ್ರ್ಯಗಳನ್ನು ಬೆಳೆಸಿಕೊಂಡಿರುವ ಬಾಬಣ್ಣ ಅವರಿಗೆ ಅನೇಕ ಪ್ರಶಸ್ತಿಗಳು, ಸನ್ಮಾನಗಳು ಸಂದಿವೆ.

---



## ಬೇಲೂರು ಕೃಷ್ಣಮೂರ್ತಿ

ಕನ್ನಡ ರಂಗಭೂಮಿಯ ಸಂದರ್ಭದಲ್ಲಿ ತ್ಯಾಗಿ, ಲಕ್ಷ್ಮಿ, ಬಲಿದಾನ ಮುಂತಾದ ನಾಟಕಗಳು ಕರ್ನಾಟಕದಲ್ಲಿ ಪ್ರದರ್ಶನವಾಗದ ಸ್ಥಳವೇ ಇಲ್ಲ ಎನ್ನಬಹುದು. ಇಂತಹ ನಾಟಕ ಕೃತಿಗಳನ್ನು ಕೊಟ್ಟವರು ಬೇಲೂರು ಕೃಷ್ಣಮೂರ್ತಿ. ಜನಸಮಾನ್ಯರ ಭಾಷೆಯಲ್ಲಿ ಯಾವುದೇ ಒಂದು ಹಣೆಪಟ್ಟಿ ಹಾಕಿಕೊಳ್ಳದೆ 60ಕ್ಕೂ ಹೆಚ್ಚು ಕೃತಿಗಳನ್ನು ಕೊಟ್ಟಿದ್ದಾರೆ. ಈ ನಾಟಕಗಳು ಪುಸ್ತಕರೂಪದಲ್ಲಿ ಪ್ರಕಟಗೊಂಡಿರುವುದರ ಜೊತೆಗೆ ಪ್ರಯೋಗ ಭಾಗ್ಯವನ್ನು ಕಂಡಿರುವುದು, ಕೆಲವು ನಾಟಕಗಳು ಮರು ಮುದ್ರಣಗಳನ್ನು ಕಂಡಿರುವುದು ಇವರ ಜನಪ್ರಿಯತೆಗೆ ಸಾಕ್ಷಿ. ಮೂಲತಃ ಶಿಕ್ಷಕರಾದ ಇವರು ನಾಟಕಕಾರರಾಗಿದ್ದು ಆಕಸ್ಮಿಕವಾಗಿ. ಇವರ ಪ್ರಥಮ ನಾಟಕ ಬಲಿದಾನ. ಇವರು ಕೆಲವು ಕಾದಂಬರಿಗಳನ್ನು ಬರೆದಿದ್ದಾರೆ. ಚಲನಚಿತ್ರದ ಅನುಭವವೂ ಇದೆ. ಬಹುಮುಖ ಅಭಿರುಚಿಯನ್ನು ಬೆಳೆಸಿಕೊಂಡಿರುವ ಇವರು ಪರಿಸರಪ್ರಿಯರು, ಛಾಯಾಗ್ರಾಹಕರು, ಸರ್ಪ ಚಿಕಿತ್ಸಕರು, ಮೂಢನಂಬಿಕೆಯ ವಿರುದ್ಧ ಕಾರ್ಯಕ್ರಮ ಪ್ರಚಾರಕರೂ ಹೌದು.

---



## ಮಾರ್ತಾಂಡರಾವ್ ನಾಡಿಗೇರ್

'ಚಲೇಜಾವ್' ಚಳವಳಿಯಲ್ಲಿ ಭಾಗವಹಿಸಿ, ವಿದ್ಯಾಭ್ಯಾಸವನ್ನು ಅರ್ಧಕ್ಕೆ ಬಿಡಬೇಕಾದ ಸಂದರ್ಭದಲ್ಲಿ ಶ್ರೀ ಅರವಿಂದ ನಾಟಕ ಮಂಡಳಿಯನ್ನು ಪ್ರವೇಶಿಸಿದವರು ಮಾರ್ತಾಂಡ ರಾವ್ ಅವರು.

ದೇಶಭಕ್ತಿಯೊಂದಿಗೆ, ಸಾಂಸ್ಕೃತಿಕ ಅಭಿರುಚಿಯನ್ನು ಬೆಳೆಸಿಕೊಂಡು ಇವರು, ಸಹಜವಾಗಿ ಅಂದು ಪ್ರಖ್ಯಾತವಾಗಿದ್ದ ಹಲವು ಕಂಪನಿಗಳಲ್ಲಿ ನಟರಾಗಿ, ನಿರ್ದೇಶಕರಾಗಿ ಅನುಭವವನ್ನು ಪಡೆದರು. ಶ್ರೀ ಪರಿಮಳ ನಾಟಕ ಕಲಾಸಂಘ ಎಂಬ ಸಂಸ್ಥೆಯನ್ನು ಸ್ವತಂತ್ರವಾಗಿ ಪ್ರಾರಂಭಿಸಿ, 3–4 ವರ್ಷಗಳ ಕಾಲ ನಡೆಸಿ, ಆರ್ಥಿಕವಾಗಿ ತುಂಬಾ ನಷ್ಟ ಅನುಭವಿಸಿದರು. ಶ್ರೀಕರಿಬಸವೇಶ್ವರ ನಾಟಕ ಮಂಡಲಿ, ಶ್ರೀ ಚಿಂದೋಡಿ ವೀರಪ್ಪನವರ ಕಂಪನಿ, ಗೋಕಾಕ ಶ್ರೀ ಶಾರದಾ ನಾಟಕ ಮಂಡಲಿ ಜಮಖಂಡಿ, ಶ್ರೀ ಗಜಾನನ ನಾಟಕ ಮಂಡಲಿ ಮುಂತಾದ ಸಂಸ್ಥೆಗಳಲ್ಲಿ 40 ವರ್ಷಕ್ಕೂ ಮಿಕ್ಕಿ ದುಡಿದರು.

ನಂತರದ ದಿನಗಳಲ್ಲಿ ಹವ್ಯಾಸಿ ನಾಟಕ ಸಂಸ್ಥೆಗಳಿಗೆ ನಾಟಕಗಳನ್ನು ನಿರ್ದೇಶಿಸಿದರು. ಹೀಗೆ ತಮ್ಮ ಇಳಿವಯಸ್ಸಿನವರೆಗೂ ತಮ್ಮನ್ನು ರಂಗಭೂಮಿ ಸೇವೆಯಲ್ಲಿ ತೊಡಗಿಸಿಕೊಂಡಿದ್ದಾರೆ.

---



## ಮನೋರಮಾ ನಂಜಪ್ಪ

ವೃತ್ತಿ ನಾಟಕ ಪರಂಪರೆಯಲ್ಲಿ ಮನೋರಮಾ ನಂಜಪ್ಪ ಅವರದು ವಿಶಿಷ್ಟ ಹೆಸರು. 18ನೇ ವರ್ಷದಲ್ಲಿ ರಂಗಪ್ರವೇಶ, ಶ್ರೀ ಜಯಲಕ್ಷ್ಮಿ ನಾಟ್ಯ ಸಂಘದ ಮೂಲಕ ಇವರು ರಂಗನಟಿಯಾಗಿ ಪ್ರಸಿದ್ಧಿಗೆ ಬಂದರು. 'ಮಲಮಗಳು' ನಾಟಕದ 'ಕಾವೇರಿ' ಇವರ ಮೊದಲ ಪಾತ್ರ, ನಂತರ ಗುಡಿಗೇರಿ ಶ್ರೀ ಸಂಗಮೇಶ್ವರ ನಾಟ್ಯಸಂಘದಲ್ಲಿ 3–4 ವರ್ಷಗಳ ಅನುಭವ. 'ತಾಯಿಕರುಳು' ನಾಟಕದ 'ಹನುಮಂತಿ' ಪಾತ್ರದಿಂದ ಪ್ರಸಿದ್ಧಿ, ನಂತರ ಶ್ರೀ ಶಾರದ ಸಂಗೀತ ನಾಟಕ ಮಂಡಲಿ, ಹೆಚ್.ಕೆ. ಯೋಗನರಸಿಂಹ ಮೂರ್ತಿಗಳ

ಕಂಪನಿ, ಕೊನೆಗೆ ಕೆ.ಬಿ.ಆರ್. ಡ್ರಾಮಾ ಕಂಪನಿಯಲ್ಲಿ ಪಾತ್ರ ವಹಿಸಿದರು. 17 ವರ್ಷಗಳು ಸತತವಾಗಿ ಕೆ.ಬಿ.ಆರ್. ಡ್ರಾಮಾ ಕಂಪನಿಯ ನಟಿಯಾಗಿ ಕಾರ್ಯ ನಿರ್ವಹಿಸಿ ಈಗ ಅನಾರೋಗ್ಯದಿಂದ ರಂಗಭೂಮಿಯ ವೃತ್ತಿಯಿಂದ ದೂರವಾಗಿದ್ದಾರೆ.

---

## ಎ.ಎಸ್. ಮೂರ್ತಿ

'ಕಲಾಮಂದಿರ'ದಲ್ಲಿ ಅರಳಿದ ಬಹುಮುಖಿ ಪ್ರತಿಭೆ ಎ.ಎಸ್. ಮೂರ್ತಿ. 'ಚಿತ್ರಾ' ತಂಡ ಸ್ಥಾಪನೆ–ಬೆಳವಣಿಗೆಯೊಂದಿಗೆ ತಾವೂ ನಟ, ನಿರ್ದೇಶಕ, ನಾಟಕಕಾರರಾಗಿ ಬೆಳೆದರು. ಮೂರ್ತಿ. ತನ್ಮೂಲಕ ಆಧುನಿಕ ರಂಗಭೂಮಿಯಲ್ಲಿ ತಮ್ಮದೇ ಆದ ಇತಿಹಾಸವನ್ನು ಬರೆಯುತ್ತಾ ಇರುವವರು. ಕರ್ನಾಟಕದಲ್ಲಿ ಬೀದಿ ನಾಟಕಕ್ಕೆ, ರಂಗ ತರಬೇತಿಗೆ, ರಂಗಶಿಕ್ಷಣಕ್ಕೆ ಹಾಗು 'ಮೂರ್ತಿ ಮಾದರಿ'ಯ ವಿಶಿಷ್ಟ ನಾಟಕಗಳಿಗೆ ಕಾರಣರಾದವರು ಎ.ಎಸ್. ಮೂರ್ತಿ.

ಆಕಾಶವಾಣಿಯ 'ಈರಣ್ಣ'ನಾಗಿ, 'ಒಂದು ಮಾತಿನ' ಧ್ವನಿಯಾಗಿ, ಈ ಶ್ರವ್ಯ ಮಾಧ್ಯಮದಲ್ಲಿ ಇವರ ಸಾಧನೆ ಅಪೂರ್ವ, ಆಕಾಶವಾಣಿ ಕೇಳುವುದನ್ನು ಒಂದು ನಿರಂತರ ಹವ್ಯಾಸಕ್ಕೆ ಶ್ರೋತೃಗಳನ್ನು ಹಚ್ಚಿದ ಖ್ಯಾತಿ ಇವರದು. ನೂರಾರು ಪ್ರಹಸನಗಳ ರಚನೆ, ನಿರಂತರ ಚಿಂತನೆಯ ಮೂಲಕ ಸಮಾಜಕ್ಕೆ ಮಾತಿನ ಚಿಕಿತ್ಸೆಯನ್ನು ನೀಡುವ ಪರಿ ಕೂಡ ರಂಗಭೂಮಿಯ ಒಂದು ಮಾದರಿಯಲ್ಲವೇ? ಇಂತಹ ಸಾಧನೆ, ಪರಿಶ್ರಮವಿದೆ ಮೂರ್ತಿಯವರ ಆಲೋಚನೆಯಲ್ಲಿ, ಅವರ ಕೃತಿಯಲ್ಲಿ, ಬೀದಿ ನಾಟಕಗಳಲ್ಲಿ ಹಾಗು ರಂಗನಾಟಕಗಳಲ್ಲಿ.

ಮಕ್ಕಳಿಗಾಗಿ 'ಬಿಂಬ' ನಾಟಕ ತಂಡ, ಭಾನುವಾರದ ರಂಗಶಾಲೆ, ಕಲಾಮಂದಿರ ಚಿತ್ರ ಶಾಲೆಗಳ ಮೂಲಕ ಹೊಸ ಪ್ರತಿಭೆಗಳನ್ನು ಹೆಕ್ಕಿ ನಿರಂತರ ರಂಗಚಟುವಟಿಕೆಗಳಿಗೆ ಪ್ರೇರೇಪಿಸುತ್ತಾ, ರಂಗಭೂಮಿಗೆ ಹೊಸತನ್ನು ನೀಡುವಲ್ಲಿ ಇಂದಿಗೂ ಕ್ರಿಯಾಶೀಲರಾಗಿದ್ದಾರೆ.

---

## ಯೋಗೇಂದ್ರ ಸಿಂಗ್

ಆಧುನಿಕ ನಾಟಕ ಪ್ರಯೋಗಗಳಲ್ಲಿ ಬೆಳಕು ವಿನ್ಯಾಸಕ್ಕೆ ಮಹತ್ವದ ಸ್ಥಾನವಿದೆ. ಬೆಳಕು ವಿನ್ಯಾಸ ಮಾಡುವುದೆಂದರೆ ಇಡೀ ಪ್ರಯೋಗದ ಅರ್ಥವಂತಿಕೆಯನ್ನು ಹೆಚ್ಚು ಗಟ್ಟಿಗೊಳಿಸುವುದು ಹಾಗು ಹೆಚ್ಚು ಸ್ಪಷ್ಟಗೊಳಿಸುವುದು. ಈ ಕಾರ್ಯ ಮಾಡಲು ಮೂರನೇ ಕಣ್ಣಿನ ಅಗತ್ಯವಿರುತ್ತದೆ. ಅಂತಹ ಸೂಕ್ಷ್ಮತೆಗಳನ್ನು ಬೆಳೆಸಿಕೊಂಡವರು ಅತಿ ವಿರಳ. ಇಂತಹ ವಿರಳರಲ್ಲಿ ಯೋಗೇಂದ್ರ ಸಿಂಗ್ ಅವರು ಕೂಡ ಒಬ್ಬರು.

ಬೆಳಕು ವಿನ್ಯಾಸದಲ್ಲಿ ಕರ್ನಾಟಕದ ಅನೇಕ ಮಂದಿ ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದ್ದಾರೆ. ಇಂತಹ ಮಂದಿಯ ಸಾಲಿಗೆ ಹಾತೊರೆಯುತ್ತಿರುವ ಯೋಗೇಂದ್ರ ಸಿಂಗ್, 500ಕ್ಕೂ ಹೆಚ್ಚು ನಾಟಕಗಳಿಗೆ ಬೆಳಕು ವಿನ್ಯಾಸ ಮಾಡಿದ್ದಾರೆ. ಹೈದರಾಬಾದ್–ಕರ್ನಾಟಕದ ವಲಯದಲ್ಲಿ ಬೆಳಕು ವಿನ್ಯಾಸಕರಲ್ಲಿ ಪ್ರಥಮ ಸಾಲಿಗೆ ಸೇರುವ ಇವರು ನಿರಂತರ ಪರಿಶ್ರಮದಿಂದ, ಹೊಸ ಹೊಸ ನಿರ್ದೇಶಕರ ಆಲೋಚನೆಗಳಿಗೆ ತಮ್ಮ ಬೆಳಕಿನ ಸ್ಪರ್ಶ ನೀಡುತ್ತಾ ಬೆಳೆಯುತ್ತಿದ್ದಾರೆ. ರಾಷ್ಟ್ರದ ಧೀಮಂತ ನಿರ್ದೇಶಕರ ಕೆಳಗೆ ಕೆಲಸ ಮಾಡುವ ಕನಸು ಹೊತ್ತಿರುವ ಯೋಗೇಂದ್ರಸಿಂಗ್ ಅನೇಕ ರಾಜ್ಯಮಟ್ಟದ, ರಾಷ್ಟ್ರಮಟ್ಟದ ನಾಟಕೋತ್ಸವಗಳಲ್ಲಿ ಬೆಳಕು ನಿರ್ವಹಿಸಿದ್ದಾರೆ.

---



## ಜಿ.ಹೆಚ್. ರಾಘವೇಂದ್ರ

ಕಳೆದ 2 ದಶಕಗಳಿಂದ ಪತ್ರಕರ್ತರಾಗಿ ಕಾರ್ಯನಿರ್ವಹಿಸುತ್ತಿರುವ ಜಿ.ಹೆಚ್. ರಾಘವೇಂದ್ರ ಅವರು ನಾಟಕಕಾರರಾಗಿ ಬಹಳ ಹೆಸರು ಮಾಡಿದ್ದಾರೆ. 'ಬಂಗಾರದ ಕೊಡ', 'ಬೇಲಿ ಮತ್ತು ಹೊಲ', 'ಬಾಗ್ಲಾ ತೆಗಿರೋ ಬಾಗ್ಲಾ', 'ದೇವರ ಮಗು', 'ಸುದ್ದಿ ಸುದ್ದಿ ಸುದ್ದಿ', 'ಕರುಣಾಳು ಬಾ ಬೆಳಕೆ', 'ಭಾರತ ಸುಂದರಿ', ಮುಂತಾದ ವಿನೂತನ ನಾಟಕಗಳನ್ನು ರಚಿಸಿದ್ದಾರೆ. ಹುಬ್ಬಳ್ಳಿ ಹವ್ಯಾಸಿ ರಂಗದಲ್ಲಿ ನಾಟಕ ರಚನೆ ಜೊತೆಗೆ ನಟರಾಗಿ, ನಿರ್ದೇಶಕರಾಗಿ ಪರಿಚಿತರಾಗಿದ್ದಾರೆ. ಬಂಡಾಯ ಸಾಹಿತ್ಯ ಸಂಘಟನೆ ಸಂಚಾಲಕತ್ವ, ಜೊತೆಗೆ ಅನೇಕ ಜನಪದ ಬೀದಿ ನಾಟಕಗಳನ್ನು ರಚಿಸಿ ಆಡುವುದರ ಮೂಲಕ ಜಿಲ್ಲೆಯಾದ್ಯಂತ ಪರಿಚಿತರಾಗಿದ್ದಾರೆ.



## ಬೊ.ನ. ರಾಮಮೂರ್ತಿ

ಕೈಗಾರಿಕಾ ರಂಗಭೂಮಿಯಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ ಬೊ.ನ. ರಾಮಮೂರ್ತಿಯವರು, ಭಾರತೀಯ ದೂರವಾಣಿ ಕಾರ್ಖಾನೆಯಲ್ಲಿ ಸಹಾಯಕ ಸಿಬ್ಬಂದಿ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಹಾಗೆಯೆ ಕಳೆದ 30 ವರ್ಷಗಳಿಂದ ಐ.ಟಿ.ಐ. ಲಲಿತ ಕಲಾ ಸಂಘದ ಸದಸ್ಯರಾಗಿ, ಖಜಾಂಚಿಯಾಗಿ, ಉಪಾಧ್ಯಕ್ಷರಾಗಿ ಸಂಘದ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಕಾರ್ಮಿಕರನ್ನು ರಂಗಭೂಮಿಗೆ ಪರಿಚಯಿಸುವಲ್ಲಿ ಮೊದಲ ಸಾಲಿನಲ್ಲಿ ನಿಲ್ಲುವ ಇವರು, ರಾಜ್ಯಮಟ್ಟದ ಕೈಗಾರಿಕಾ ಕನ್ನಡ ಹಾಸ್ಯನಾಟಕ ಸ್ಪರ್ಧೆಯನ್ನು ವ್ಯವಸ್ಥೆಗೊಳಿಸಿದ ಕೀರ್ತಿ ಪಡೆದಿದ್ದಾರೆ. ಅನೇಕ ಸನ್ಮಾನ ಸಮಾರಂಭಗಳು, ಸಮಾಜಸೇವಾ ಕಾರ್ಯಗಳನ್ನು ನಡೆಸಿರುವ ಬೊ.ನ. ರಾಮಮೂರ್ತಿ ಕಳೆದ ಒಂದು ದಶಕದಿಂದ ಕರ್ನಾಟಕ ಕೈಗಾರಿಕಾ ಕ್ರೀಡಾ ಮತ್ತು ಲಲಿತಕಲಾ ಸಂಘದ ಕಾರ್ಯದರ್ಶಿಯಾಗಿ, ಕೈಗಾರಿಕೆಯಲ್ಲಿ ರಂಗದ ಬೆಳವಣಿಗೆಗೆ ದುಡಿಯುತ್ತಿದ್ದಾರೆ.



## ಸಿ.ಹೆಚ್. ಲೋಕನಾಥ್

ಬೆಂಗಳೂರು ರಂಗಾಸಕ್ತರಿಗೆ 'ಅಂಕಲ್' ಎಂದೇ ಬಳಕೆಯಲ್ಲಿರುವ ಸಿ.ಹೆಚ್. ಲೋಕನಾಥ್ ಕನ್ನಡದ ಮೇರು ನಟರಲ್ಲಿ ಒಬ್ಬರು. ನಟನೆ ಕೇವಲ ಕಸರತ್ತಾಗದೆ, ಮನದಲ್ಲಿ, ದೇಹದಲ್ಲಿ ಅಂತರ್ಗತವಾಗಿ ಹೊರಹೊಮ್ಮಬೇಕು ಎಂದು ಬಾವಿಸುವ ಲೋಕನಾಥ್ ಅವರು, ಸಮುದಾಯ, ನಟರಂಗ, ಸೂತ್ರಧಾರ, ಬೆನಕ ಮುಂತಾದ ಖ್ಯಾತ ರಂಗತಂಡಗಳ ನಾಟಕಗಳಲ್ಲಿ ಅಭಿನಯಿಸಿ, ಆಧುನಿಕ ರಂಗ ಚಳುವಳಿಯ ಬೆಳವಣಿಗೆಯಲ್ಲಿ ಪರಿಶ್ರಮಿಸಿದ್ದಾರೆ. ಆಕಸ್ಮಿಕವಾಗಿ ಬಣ್ಣ ಹಚ್ಚಿದ ಲೋಕನಾಥ್ ಅವರು, ಪ್ರೊ॥ ಕೆ.ವಿ. ಅಯ್ಯರ್, ಬಿ.ಎಸ್. ನಾರಾಯಣರಾವ್ ಮುಂತಾದವರೊಂದಿಗೆ 'ರವಿಕಲಾವಿದರು' ತಂಡದಲ್ಲಿ ಸತತ 25 ವರ್ಷಗಳ ರಂಗ ಚಳುವಳಿಗೆ ಕಾರಣರಾಗಿದ್ದಾರೆ. ನಾಟಕ ತಾಲೀಮು, ಸಮಯಪಾಲನೆಗೆ ಬಹಳ ಮಹತ್ವ ನೀಡುವ ಇವರು, ಸಣ್ಣ ಕೈಗಾರಿಕೆಯನ್ನು ನಡೆಸುತ್ತಿದ್ದಾರೆ. ಅವಕಾಶ ಬಂದಾಗ ಸಿನಿಮಾಗಳಲ್ಲಿ ನಟಿಸುವ ಲೋಕನಾಥ್, ಕನ್ನಡ ರಂಗಭೂಮಿ ಕಂಡ ಉತ್ತಮ ನಟರಲ್ಲಿ ಒಬ್ಬರು.



## ಲಲಿತಾ ಪಾತ್ರೋಟ

ಉತ್ತರ ಕರ್ನಾಟಕದ ಜನಪದ ಕಲಾ ಕುಟುಂಬದಲ್ಲಿ ಜನಿಸಿದ ಲಲಿತ ಪಾತ್ರೋಟ ಅವರು ಶಾಲಾ ಶಿಕ್ಷಕಿಯಾಗಲು ಬಯಸಿದ್ದವರು. ಆದರೆ ಪ್ರೌಢಶಿಕ್ಷಣಕ್ಕೆ ಓದು ನಿಂತಾಗ, ಅನಿವಾರ್ಯವಾಗಿ ಮನೆತನದಲ್ಲಿ ಒಡಮೂಡಿ ಬಂದಿದ್ದ ಕಲೆಯ ಅಭ್ಯಾಸಕ್ಕೆ ಮನಸ್ಸು ಕೊಟ್ಟರು.

ತಾಯಿ ಬಸವಣ್ಣೆವ್ವ, ಭಾಗೀರಥವ್ವ, ಕಾಶಪ್ಪಗೆಜ್ಜಿ ವರಪ್ಪ ಬಳಿಗಾರ, ಸವಿತಾಬಾಯಿ ಪಾತ್ರೋಟ ಇವರಿಂದ ಜನಪದ ಕಲೆಗಳ ತರಬೇತಿ ಪಡೆದು 16ನೇ ವಯಸ್ಸಿನಲ್ಲಿ ರಂಗಭೂಮಿಯಲ್ಲಿ ತಮ್ಮ ಪ್ರತಿಭೆಯನ್ನು ತೋರಿದರು.

ತನ್ನ ಊರಿನ ಸುತ್ತಮುತ್ತಲ ಗ್ರಾಮಗಳಲ್ಲದೆ ಬೆಳಗಾವಿ, ಧಾರವಾಡ, ವಿಜಾಪುರ, ಕಾರವಾರ ಹಾಗು ಕೊಲ್ಹಾಪುರ ಜಿಲ್ಲೆಯ ಅನೇಕ ಗ್ರಾಮಗಳಲ್ಲಿ 'ಸಂಗ್ಯಾಬಾಳ್ಯ'ದ ಗಂಗೆಯಾಗಿ, 'ರಾಧಾನಾಟಕ'ದ ರಾಧೆಯಾಗಿ, 'ಬಲವಂತ ಬಸವಂತ'ದ ತಾರಾ, 'ಶ್ರೀಕೃಷ್ಣ ಪಾರಿಜಾತ'ದ ರುಕ್ಮಿಣಿ ಮುಂತಾದ ಪಾತ್ರಗಳಲ್ಲಿ ಮನಸೂರೆಗೊಂಡು, ಮುಂದೆ ರಾಜ್ಯವ್ಯಾಪಿಯಾಗಿ ತಮ್ಮ ಕಾರ್ಯಕ್ರಮದ ಮೂಲಕ ಖ್ಯಾತರಾದರು. ಸ್ಥಳೀಯ ಜನರ ಪ್ರೋತ್ಸಾಹಗಳಿಂದ ಅವಿರೋಧವಾಗಿ ಮಂಡಲ ಪಂಚಾಯಿತಿ ಸದಸ್ಯರಾಗಿ ಕೂಡ ಸಾರ್ವಜನಿಕ ಸೇವೆಯನ್ನು ಮಾಡಿದ್ದಾರೆ.

---



## ಪಿ. ವಜ್ರಪ್ಪ

ನಾಟಕ ಸಾಹಿತ್ಯ ಹಾಗು ರಂಗ ಸಂಗೀತದಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ ವಜ್ರಪ್ಪನವರು ವೃತ್ತಿ ರಂಗಭೂಮಿ ಕಂಡ ವಿಶಿಷ್ಟ ವ್ಯಕ್ತಿ. ನೂರಾರು ಕಲಾವಿದರಿಗೆ ಮಾರ್ಗದರ್ಶನ ನೀಡಿ, ನಾಟಕಗಳನ್ನು ನಿರ್ದೇಶಿಸಿರುವ ಇವರು ಇಂದಿನ ಪೀಳಿಗೆಗೆ ಸರಿಹೊಂದುವಂತೆ ಅನೇಕ ನಾಟಕಗಳನ್ನು ರಚಿಸಿ ನಿರ್ದೇಶಿಸಿದ್ದಾರೆ.

ಕೌರವೇಶ್ವರ, ವೀರ ಬಬ್ರುವಾಹನ, ಚಕ್ರವ್ಯೂಹ, ತ್ರಿಪುರ ಸಂಹಾರ, ದುರಂತ ಕರ್ಣ, ಧರ್ಮದುರಂತ ಮುಂತಾದ ನಾಟಕಗಳ ರಚನೆ, ಸಂಗೀತ ಸಂಯೋಜನೆ, ನಿರ್ದೇಶನಗಳ ಮೂಲಕ ಜನಪ್ರಿಯರಾಗಿದ್ದಾರೆ.

ಗುಬ್ಬಿ ಕಂಪನಿ ಹಾಗು ಕೆ. ಹಿರಣ್ಣಯ್ಯ ಮಿತ್ರ ಮಂಡಲಿಗಳಿಗೆ ಸಂಗೀತ ಸಂಯೋಜಕರಾಗಿ ಕೆಲಸ ಮಾಡಿದ್ದಾರೆ. ವೃತ್ತಿ ನಾಟಕಗಳ ಜೊತೆಗೆ ಹಲವಾರು ಸಿನಿಮಾಗಳಿಗೂ ಸಂಗೀತ ನಿರ್ದೇಶನ ಮಾಡಿರುವ ವಜ್ರಪ್ಪನವರು ಕಳೆದ 55 ವರ್ಷಗಳಿಂದ ಕಲಾಸೇವೆಯಲ್ಲಿ ತೊಡಗಿದ್ದಾರೆ.

---



## ಎಸ್. ವೀರಭದ್ರಾಚಾರ್

ರಂಗಸಜ್ಜಿಕೆ, ದೀಪಾಲಂಕಾರ, ವರ್ಣಾಲಂಕಾರ ಹಾಗು ವಸ್ತ್ರಾಲಂಕಾರಗಳಲ್ಲಿ ದೀರ್ಘಕಾಲದ ಅನುಭವದಿಂದ, ವೃತ್ತಿಪರ ಸಂಸ್ಥೆಯ ಸಂಸ್ಥಾಪಕರಾಗಿ ಎಲೆ ಮರೆ ಕಾಯಿಯಂತೆ ಸೇವೆ ಸಲ್ಲಿಸುತ್ತಿರುವ ವೀರಭದ್ರಾಚಾರ್ ಅವರು ಕಲಾಮನೆತನದಿಂದ ಬಂದವರು.

ಖ್ಯಾತ ಯಕ್ಷಗಾನ ಶಿಕ್ಷಕರಾದ ಶ್ರೀ ಸಾವಂದಾಚಾರ್ ಅವರ ಪುತ್ರರಾಗಿ ಜನಿಸಿ, ಅವರಿಂದಲೇ ಶಿಕ್ಷಣ ಪಡೆದ ಇವರು ಬಾಲನಟನಾಗಿ ರಂಗಪ್ರವೇಶ ಮಾಡಿದರು. ಶ್ರೀ ರವೀಂದ್ರ ನಾಟಕ ಸಭಾ ಎಂಬ ವೃತ್ತಿಮಂಡಲಿಯನ್ನು ನಡೆಸುತ್ತಿರುವ ಇವರು 5 ದಶಕಗಳ ಸಾರ್ಥಕ ಸೇವೆ ಸಲ್ಲಿಸಿದ್ದಾರೆ.

ಅನೇಕ ಕಲಾವಿದರಿಗೆ ಆಸರೆಯಾಗಿ ನಿಂತ ವೀರಭದ್ರಾಚಾರ್ ಅವರ ಅಭಿಮನ್ಯು, ಭಕ್ತ ಮಾರ್ಕಂಡೇಯ, ಪ್ರಹ್ಲಾದ, ನಾರದ, ಆದಿಮೂರ್ತಿಯ ಪಾತ್ರಗಳು ಅವರ ಬಣ್ಣದ ಬದುಕಿನ ಜನಪ್ರಿಯತೆಗೆ ಕಾರಣವಾದವು. ಇತ್ತೀಚೆಗಷ್ಟೇ ಇವರ ಶ್ರೀ ರವೀಂದ್ರ ನಾಟಕ ಸಭಾ ಸುವರ್ಣ ಮಹೋತ್ಸವವನ್ನು ಆಚರಿಸಿದೆ.

---



## ಎಸ್. ಶಾಮಮೂರ್ತಿ

ನಗರ ಪರಿಸರದಿಂದ ದೂರವಾದ ಪುಟ್ಟ ತಾಲ್ಲೂಕು ಕೇಂದ್ರವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡಿರುವ ಶಾಮಮೂರ್ತಿಯವರು ರಂಗಭೂಮಿಯ ಎಲ್ಲಾ ಪ್ರಕಾರಗಳಲ್ಲಿಯೂ ಸಿದ್ಧಹಸ್ತರು. ವೇದಿಕೆ ನಿರ್ಮಾಣದಿಂದ ಹಿಡಿದು, ಒಟ್ಟು ಒಂದು ಪ್ರಯೋಗದ ಎಲ್ಲಾ ವಿಭಾಗಗಳಲ್ಲೂ ಪರಿಣಿತರಾಗಿರುವ ಶಾಮಮೂರ್ತಿ ಭದ್ರಾವತಿಯ ಕಾಗದ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದಾರೆ.

ಬಾಲ್ಯದ ಬಣ್ಣದ ಗೀಳು, ಇಂದು ಶಿವಮೊಗ್ಗ ಜಿಲ್ಲೆಯೇ ಏಕೆ, ಇಡೀ ರಾಜ್ಯದಲ್ಲಿ ಖ್ಯಾತಿಗಳಿಸುವಂತೆ ಮುನ್ನಡೆಸಿದೆ. ನಟರಾಗಿ, ನಿರ್ದೇಶಕರಾಗಿ, ರಂಗವಿನ್ಯಾಸಕರಾಗಿ, ಬೆಳಕು ಸಂಯೋಜಕರಾಗಿ.... ಹೀಗೆ ಶಾಮಮೂರ್ತಿಯವರ ಸೃಜನಶೀಲ ಕಾರ್ಯಗಳು ಪಟ್ಟಿ ಮಾಡಿದಷ್ಟೂ ಬೆಳೆಯುತ್ತದೆ.

ಭದ್ರಾವತಿಯ ಸುತ್ತಮುತ್ತಲಲ್ಲಿ, ಪಕ್ಕದ ಚಿಕ್ಕಮಗಳೂರು ಜಿಲ್ಲೆಯಲ್ಲಿ ನಿರಂತರ ರಂಗಚಟುವಟಿಕೆಯ ಪ್ರೇರಕ ಶಕ್ತಿಯಾಗಿರುವ ಶಾಮಮೂರ್ತಿ ಕನ್ನಡದ ಎಲ್ಲಾ ಮಹತ್ವದ ನಾಟಕಗಳನ್ನು ರಂಗಕ್ಕೆ ತಂದಿದ್ದಾರೆ. ಅನೇಕ ಪ್ರಶಸ್ತಿಗಳನ್ನು ಗಿಟ್ಟಿಸಿದ್ದಾರೆ. ರಾಜ್ಯದ ಗಡಿಯನ್ನು ದಾಟಿ ಮುಂಬಯಿ, ದೆಹಲಿಗಳಲ್ಲಿ ತಮ್ಮ ಸಾಮರ್ಥ್ಯದ ಪರಿಯನ್ನು ತೋರಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ.

---



## ಶಿರಗಂಬಿ ರುದ್ರಪ್ಪ

ವೃತ್ತಿರಂಗದ ಹಿರಿಯ ಚೇತನಗಳಲ್ಲಿ ಒಬ್ಬರಾದ ಶಿರಗಂಬಿ ರುದ್ರಪ್ಪನವರು ಅಭಿನಯದಲ್ಲಿ ತಮ್ಮ ವೃತ್ತಿಜೀವನದ ಮೇರುಗತಿಯನ್ನು ಕಂಡವರು. ಬಾಲ್ಯದಲ್ಲೇ ಕಂಪನಿಗಳನ್ನು ಅರಸಿ ಹೊರಟ ಇವರು, 12ನೇ ವರ್ಷದಲ್ಲೇ ಶ್ರೀರಾಮ ಪಾದುಕಾ ಪಟ್ಟಾಭಿಷೇಕದಲ್ಲಿ ಪಾತ್ರವಹಿಸಿದರು.

ಹಲಗೇರಿ ಜಟ್ಟಪ್ಪನವರ ಕಂಪನಿ, ಶಿರಹಟ್ಟಿ ಕಂಪನಿ, ಗೋಕಾಕ ಕಂಪನಿ, ಜಮಖಂಡಿ ಕಂಪನಿ, ಗರೂಡ ಸದಾಶಿವರಾಯರ ಕಂಪನಿ, ಏಣಗಿ ಬಾಳಪ್ಪನವರ ಕಂಪನಿ ಹೀಗೆ ಹಲವಾರು ಕಂಪನಿಗಳಲ್ಲಿ ವಿವಿಧ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ.

ಸ್ತ್ರೀಪಾತ್ರವೂ ಸೇರಿದಂತೆ ನಾಯಕ, ಹಾಸ್ಯಪಾತ್ರ, ಪೋಷಕಪಾತ್ರಗಳಲ್ಲೆಲ್ಲಾ ತಮ್ಮ ಅಭಿನಯದಿಂದ ಜನಮನ ಸೂರೆಗೊಂಡಿರುವ ರುದ್ರಪ್ಪನವರು 1938ರಲ್ಲಿ ಮೈಸೂರು ಮಹಾರಾಜರಿಂದ 'ಚತುರನಟ' ಎಂಬ ಬಿರುದು ಪಡೆದಿದ್ದರು. ರಾಜ್ಯೋತ್ಸವ ಪ್ರಶಸ್ತಿಗೂ ಪಾತ್ರರಾಗಿರುವ ಇವರು ಕನ್ನಡ ರಂಗಭೂಮಿಯ ಅಪರೂಪದ ಪ್ರತಿಭೆ.

---



## ಕಾ.ನಾ. ಶ್ರೀನಿವಾಸ್

ರಂಗಭೂಮಿ ಹಾಗು ಸಾಹಿತ್ಯ ಚಟುವಟಿಕೆಗಳನ್ನು ಜೊತೆಜೊತೆಯಾಗಿ ನಿರ್ವಹಿಸುತ್ತಿರುವ ಕಾ.ನಾ. ಶ್ರೀನಿವಾಸ್ ಗ್ರಾಮೀಣ ಪ್ರತಿಭೆ. ತಮ್ಮ ಸೀಮಿತ ಪ್ರದೇಶವನ್ನು ಮೀರಿ, ಅನೇಕ ಸಾಂಘಿಕ, ಸಾಂಸ್ಕೃತಿಕ ಚಟುವಟಿಕೆಗಳ ಹರಿಕಾರರಾಗಿದ್ದಾರೆ.

ಸಾಹಿತ್ಯ ಸಮ್ಮೇಳನಗಳು, ನಾಟಕೋತ್ಸವಗಳು, ರಂಗತರಬೇತಿ ಶಿಬಿರಗಳು, ವಿಚಾರಗೋಷ್ಠಿಗಳನ್ನು ಆಗ್ಗಿಂದಾಗ್ಗೆ ನಡೆಸುತ್ತಾ, ಸಾಂಸ್ಕೃತಿಕ ಪರಿಸರವನ್ನು ತಮ್ಮ ಕಾರ್ಯಕ್ಷೇತ್ರವಾದ ಗೌರಿಬಿದನೂರಿನಲ್ಲಿ ನಿರ್ಮಾಣ ಮಾಡಿದ್ದಾರೆ.ಕನ್ನಡ ಯುವಕ ಸಂಘವನ್ನು ಸ್ಥಾಪಿಸಿ ಮೇಲಿನ ಚಟುವಟಿಕೆಗಳನ್ನು ನಡೆಸುತ್ತಿರುವ ಕಾ.ನಾ.ಶ್ರೀ. ಅವರು ಪುಸ್ತಕ ಪ್ರಕಟಣೆ, ನಾಗರೀಕ ವಿಚಾರವೇದಿಕೆಗಳ ಮೂಲಕ ಅನೇಕ ಜನಪರ ಕಾರ್ಯಗಳನ್ನು ಮಾಡುತ್ತಿದ್ದಾರೆ. ನೆರೆ, ಭೂಕಂಪ, ಬರ ಪರಿಹಾರ ನಿಧಿ ಸಂಗ್ರಹಣೆ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಕನ್ನಡದ ಅತ್ಯುತ್ತಮ ನಿರ್ದೇಶಕರನ್ನು ತಮ್ಮಲ್ಲಿಗೆ ಕರೆಸಿ ಉತ್ತಮ ನಾಟಕಗಳು ಪ್ರಯೋಗವಾಗಲು ಕಾರಣರಾಗಿದ್ದಾರೆ. ಬೀದಿ ನಾಟಕಗಳಲ್ಲೂ ವಿಶೇಷ ಕಾರ್ಯ ನಿರ್ವಹಿಸಿದ್ದಾರೆ. ಅನೇಕ ಪ್ರಗತಿಪರ ಸಂಘಟನೆಗಳ ನಿಕಟ ಸಂಪರ್ಕ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಗೌರಿಬಿದನೂರು ಶಾಖೆಯಲ್ಲಿ ವಿಶೇಷ ಸಹಾಯಕರಾಗಿ ದುಡಿಯುತ್ತಿದ್ದಾರೆ.



## ಶಿವಶಂಕರ ಬ್ಯಾಳಿ

ವೃತ್ತಿಯಿಂದ ಶಿಕ್ಷಕರಾದ ಶಿವಶಂಕರ ಬ್ಯಾಳಿಯವರು ಪ್ರವೃತ್ತಿಯಿಂದ ಕವಿಗಳು. ಆದರ್ಶ ಶಿಕ್ಷಕರಾಗಿ ತಮ್ಮ ವೃತ್ತಿಯನ್ನು ಅತೀವ ಪ್ರೀತಿಯಿಂದ ಮಾಡುವ ಇವರು ಶೈಕ್ಷಣಿಕ ಕ್ಷೇತ್ರವಲ್ಲದೆ ಸಾಂಸ್ಕೃತಿಕ ರಂಗದಲ್ಲಿಯೂ ಅಪಾರ ಪ್ರತಿಭೆಯನ್ನು ತೋರಿದ್ದಾರೆ.

ಇವರು ಸಾಮಾಜಿಕ, ಐತಿಹಾಸಿಕ ಹಾಗು ಪೌರಾಣಿಕ ನಾಟಕಗಳನ್ನು, ಜಾನಪದ, ಹಾಸ್ಯ ವಿಡಂಬನಾತ್ಮಕ ನಾಟಕಗಳನ್ನು ರಚಿಸಿದ್ದಾರೆ. 30 ಕೃತಿಗಳನ್ನು ರಚಿಸಿ, ವೃತ್ತಿ ಹಾಗು ಹವ್ಯಾಸಿ ರಂಗಭೂಮಿಯ ಪ್ರಮುಖ ಕವಿಯಾಗಿರುವ ಶಿವಶಂಕರಬ್ಯಾಳಿ ಅವರು ಅನೇಕ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಹಾಗೆಯೇ ನಟನೆಯಲ್ಲೂ ತಮ್ಮ ಪ್ರತಿಭೆ ತೋರಿದ್ದಾರೆ.

ಇವರು ಶ್ರೀ ಮಲೆಮಾದೇಶ್ವರ ನಾಟಕ ರಚಿಸಿ 'ಶರಣಸಾಹಿತ್ಯಚತುರ' ಎಂಬ ಅಭಿದಾನವನ್ನು ಪಡೆದಿದ್ದಾರೆ. ರಂಗ ವಿನ್ಯಾಸ, ಹಾಡುಗಳ ರಚನೆ, ಧ್ವನಿ ಸುರಳಿಗಳ ನಿರ್ಮಾಣ ಮುಂತಾದ ಕಾರ್ಯಗಳಲ್ಲಿ ಪರಿಣತಿ ಸಾಧಿಸಿದ್ದಾರೆ. ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.



## ಕೆ. ಶ್ರೀಧರರಾವ್

ತಮ್ಮ ಶೈಕ್ಷಣಿಕ ಜೀವಿತದ ಮಧ್ಯಭಾಗದಲ್ಲಿ, ತಾರುಣ್ಯದಲ್ಲಿಯೇ ಸರಸವಿನೋದಿನಿ ನಾಟಕ ಸಂಘವನ್ನು ಕಟ್ಟಿದ ಶ್ರೀಧರರಾವ್ ಅವರಿಗೆ, ಮೂಲಪ್ರೇರಣೆ ಅವರ ಸೋದರ ಮಾವ. ನಾಟಕದ ಗೀಳಿನಿಂದ ವಿದ್ಯೆಯಲ್ಲಿ ಹಿಂದೆ ಬಿದ್ದಾಗ, ಮನೆಯಿಂದ ಹೊರಬರಬೇಕಾಯಿತು. ಪ್ರಾಥಮಿಕ ಶಾಲಾ ಶಿಕ್ಷಕರ ಹುದ್ದೆಯನ್ನು ಪಡೆದುಕೊಂಡ ಇವರು, ಕ್ರಮೇಣ ಓದನ್ನು ಮುಂದುವರಿಸಿ, ಇಂಗ್ಲಿಷ್‌ನಲ್ಲಿ ಎಂ.ಎ. ಮಾಡಿ, ಕಾಲೇಜು ಅಧ್ಯಾಪಕರಾದರು. ತಮ್ಮ

ಶಿಕ್ಷಕ ವೃತ್ತಿಯ ಜೊತೆ ಜೊತೆಗೇ ನಾಟಕ ಪ್ರವೃತ್ತಿಯನ್ನು ಬೆಳೆಸಿಕೊಂಡು ಬಂದರು. ಹೋದಲ್ಲೆಲ್ಲಾ ನಾಟಕ ಮಾಸ್ತರರೆಂದೇ ಪರಿಚಿತರಾದ ಶ್ರೀಧರರಾವ ಅವರು ಕಲಬುರ್ಗಿಯಲ್ಲಿ ಆರಂಭಗೊಂಡ 'ರಂಗಮಾಧ್ಯಮ'ದ ಚೈತನ್ಯ ಶಕ್ತಿಯಾದರು. ನಟನೆ, ನಿರ್ದೇಶನ, ಸಂಘಟನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಇವರು ಶ್ರೀರಂಗರ ನಾಟಕಗಳಲ್ಲಿ ಸ್ಮರಣೀಯ ಅಭಿನಯವನ್ನು ನೀಡಿದ್ದಾರೆ.

ಕಲಬುರ್ಗಿಯ ರಂಗಚಳವಳಿಯಲ್ಲಿ ತಮ್ಮ ಪಾದರಸದಂಥ ವ್ಯಕ್ತಿತ್ವ ಹಾಗೂ ವಿದ್ವತ್ ಪ್ರೌಢಿಮೆಯಿಂದ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ.



## ಕೆ. ಶ್ರೀಧರ್

ಕಾರ್ಮಿಕ ಸಂಘಟನೆಗಳ ಮೂಲಕ ಬೆಳಕಿಗೆ ಬಂದ ಶ್ರೀಧರ್ ಕೆ. ಮಂಗಳೂರು ಹಾಗೂ ಬೆಂಗಳೂರು ರಂಗಭೂಮಿ ವಲಯದಲ್ಲಿ ಎಸ್ಕೆ ಎಂದೇ ಪರಿಚಿತರಾಗಿದ್ದಾರೆ. ಮಂಗಳೂರಿನ ಅಭಿವ್ಯಕ್ತಿ ತಂಡವನ್ನು ಹುಟ್ಟುಹಾಕಿದ ಇವರು. ಕರಾವಳಿಯ ರಂಗಚಟುವಟಿಕೆಗಳಿಗೆ ಪ್ರೇರಕ ಶಕ್ತಿಯಾಗಿದ್ದಾರೆ.

ಜನಪರ ಮೌಲ್ಯಗಳನ್ನು ಎತ್ತಿ ಹಿಡಿಯಲು ತುರ್ತು ಪರಿಸ್ಥಿತಿಯನ್ನು ರಂಗಮಾಧ್ಯಮಗಳು ವಿರೋಧಿಸಿದಾಗ ಎಸ್ಕೆ ಕೂಡ ಚಿಕ್ಕಮಗಳೂರಿನಲ್ಲಿ ರಂಗಕಾರ್ಮಿಕರ ಪರ ನಿಂತರು. ಬೆಲ್ಚಿ, ಟ್ಯಾಕ್ಸಿಡ್ರೈವರ್, ಪತ್ರ ಸಂಗಪ್ಪ ಮೊದಲಾದ ಬೀದಿ ನಾಟಕಗಳ ಜೊತೆ, ಸಮುದಾಯ ಸಂಘಟನೆಯ ಒಡನಾಟವೂ ಇವರಿಗಿತ್ತು. ಅಭಿವ್ಯಕ್ತ ತಂಡದ ಆಶ್ರಯದಲ್ಲಿ ಅನೇಕ ನಾಟಕಗಳನ್ನು ನಿರ್ದೇಶಿಸುವುದರ ಜೊತೆಗೆ, ರಂಗತರಬೇತಿ ಶಿಬಿರ, ನಾಟಕೋತ್ಸವಗಳನ್ನು ನಿರಂತರವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಮಕ್ಕಳ ರಂಗಭೂಮಿಗೂ ಮೌಲಿಕವಾದ ಕೊಡುಗೆಯನ್ನು ನೀಡಿರುವ ಎಸ್ಕೆ, ತಮ್ಮ ಪತ್ನಿ ಲೂಸಿ ಶ್ರೀಧರ್ ಅವರೊಂದಿಗೆ ರಂಗ ಚಟುವಟಿಕೆಗಳನ್ನು ನಡೆಸುತ್ತಿದ್ದಾರೆ. ರಂಗಭೂಮಿ ಅಧ್ಯಯನ ಕುರಿತಂತೆ ಕೇಂದ್ರವೊಂದನ್ನು ಸ್ಥಾಪಿಸುವತ್ತ ಎಸ್ಕೆ ಕಾರ್ಯೋನ್ಮುಖರಾಗಿದ್ದಾರೆ.



## ಡಂಬಳ ಸಂಕಣ್ಣ

ಹಳ್ಳಿಯಲ್ಲಿ ಬಯಲಾಟ ಕಲಿಸುವ ಸೋದರಮಾವನ ಪ್ರಭಾವದಿಂದ ಓದಿಗೆ ಶರಣು ಹೇಳಿದ ಡಂಬಳ ಸಂಕಣ್ಣ ಅವರು ತಮ್ಮ 10ನೇ ವಯಸ್ಸಿನಲ್ಲೇ ಬಣ್ಣ ಹಚ್ಚಿದರು. ವಿರಾಟಪರ್ವದ ಕೃಷ್ಣನ ಪಾತ್ರದಿಂದ ರಂಗವೇರಿದ ಇವರು, ಶ್ರೀಕೃಷ್ಣ ಪಾರಿಜಾತ ತಂಡವೊಂದು ಅವರ ಹಳ್ಳಿಗೆ ಬಂದಾಗ, ಅದರ ಜೊತೆಗೂಡಿದರು.

ಗದಗದ ವಸಂತ ಕಲಾ ನಾಟ್ಯ ಸಂಘ, ಸಿಂಧನೂರು, ಶ್ರೀ ಸಂಗಮೇಶ್ವರ ನಾಟ್ಯ ಸಂಘ, ಗುಡಿಗೇರಿ ಇನ್ನೂ ಹಲವಾರು ಸಂಘಗಳಲ್ಲಿ ಬಹುಬೇಡಿಕೆಯ ನಟರಾಗಿ ಮೇಲೆ ಬಂದರು. ಕೆಲವು ಪಾತ್ರಗಳಿಗೆ ಡಂಬಳ ಸಂಕಣ್ಣ ಅವರು ಅನಿವಾರ್ಯವೆಂಬ ಸ್ಥಿತಿ ಅಂದು ನಿರ್ಮಾಣವಾಗಿತ್ತು.

ಅಭಿನಯದಲ್ಲಿ ತಮ್ಮದೇ ಆದ ಸ್ವಂತಿಕೆಯನ್ನು ಸಾಧಿಸಿದ್ದ ಇವರು ಹಾಸ್ಯ, ವೀರ, ಕರುಣ, ಶೃಂಗಾರ, ಭಕ್ತಿ, ರೌದ್ರ ರಸಗಳನ್ನು ಅನಾಯಾಸವಾಗಿ ಅಭಿನಯಿಸುತ್ತಿದ್ದರು. ರಂಗಸ್ಥಳದಲ್ಲಿ ಪಾತ್ರ ಮಾಡುತ್ತಲೇ ಅಸ್ವಸ್ಥರಾದ ಡಂಬಳ ಸಂಕಣ್ಣ ಅವರು ಭವ್ಯ ಪರಂಪರೆಯ ಕೊಂಡಿಯಾಗಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ.

## ಸುಮಿತ್ರಾ ಶಿವಣ್ಣ ಕುಸುಬಿ



ವೃತ್ತಿ ರಂಗಭೂಮಿಯ ಹಿರಿಯ ನಟ ಶ್ರೀ ಚೆನ್ನಬಸವಣ್ಣ ಕವಲಿಯವರ ಪುತ್ರಿಯಾಗಿ ಜನಿಸಿದ ಸುಮಿತ್ರಾ ಅವರು ಬಾಲ್ಯದಲ್ಲೇ ಕಲಾಸೇವೆಗೆ ತಮ್ಮನ್ನು ತೊಡಗಿಸಿಕೊಂಡವರು. ತಮ್ಮ ತಂದೆಯ ಸ್ವಂತ ಕಂಪನಿ ಕಲಾಪ್ರಕಾಶ ನಾಟ್ಯ ಸಂಘ, ಬ್ಯಾಡಗಿಯಲ್ಲಿ ಇವರ ವೃತ್ತಿಜೀವನ ಪ್ರಾರಂಭವಾಯಿತು. ತಂದೆಯವರಿಂದ ನಾಟ್ಯ, ಅಭಿನಯ ಹಾಗೂ ಸಂಗೀತದ ಶಿಕ್ಷಣ ದೊರೆತು, ಉತ್ತಮ ಅಭಿನೇತ್ರಿಯಾಗುವ ಅವಕಾಶ ಅನಾಯಾಸವಾಗಿ ದೊರೆಯಿತು. 35 ವರ್ಷಗಳಿಗೂ ಹೆಚ್ಚು ಕಾಲ ಇದೇ ಕಂಪನಿಯ ಮುಖ್ಯ ನಟಿಯಾಗಿ ರಂಗಸೇವೆ ಮಾಡಿದರು. ಈ ಇಳಿ ವಯಸ್ಸಿನಲ್ಲೂ ತಾಯಿ ಪಾತ್ರವನ್ನು ಮಾಡಲು ಕಂಪನಿಗಳಿಗೆ ಹೋಗುತ್ತಾರೆ. ತಂದೆಯವರ ಕಂಪನಿಯ ಸಂಚಾಲಕರಾಗಿದ್ದ ಶ್ರೀ ಶಿವಣ್ಣ ಕುಸುಬಿಯವರನ್ನು ಮದುವೆಯಾದ ಇವರ ಕುಟುಂಬದ ಕಲಾತಪಸ್ಸು ಮೂರು ತಲೆಮಾರುಗಳಿಂದ ನಡೆದುಬರುತ್ತಿದೆ. ಗುಬ್ಬಿ ಕಂಪನಿ, ಕಮತಗಿ ಕಂಪನಿ, ಕೆ.ಬಿ.ಆರ್. ಡ್ರಾಮಾ ಕಂಪನಿಗಳಲ್ಲೂ ಇವರು ಮುಖ್ಯ ನಟಿಯಾಗಿ ಅಭಿನಯಿಸಿದ್ದಾರೆ.

---

## ಎಂ. ಸಂಪಂಗಿ



ತಂದೆಯವರಿಂದ ರಕ್ತಗತವಾಗಿ ಹರಿದುಬಂದ ನಾಟಕಾಭಿರುಚಿ, ಸಂಪಂಗಿಯವರನ್ನು ಕಲಾಕ್ಷೇತ್ರಕ್ಕೆ ಎಳೆದು ತಂದಿತು ಎನ್ನಬಹುದು. ಪ್ರೌಢಶಿಕ್ಷಣವನ್ನು ಮುಗಿಸಿ ಸಂಪಂಗಿಯವರು ಜೀವನೋಪಾಯಕ್ಕಾಗಿ ಎನ್.ಜಿ.ಇ.ಎಫ್. ಸಂಸ್ಥೆ ಸೇರಿದರು. ಉತ್ತಮ ಮೈಕಟ್ಟು, ಶಾರೀರವನ್ನು ಹೊಂದಿದ್ದ ಇವರನ್ನು ವಜ್ರಪ್ಪನವರು ಕಲಾಪ್ರಪಂಚಕ್ಕೆ ಪರಿಚಯಿಸಿದರು. ಅಂದಿನಿಂದ ನಿರಂತರವಾದ ರಂಗಭೂಮಿಯ ನಿಕಟ ಸಂಪರ್ಕಗಳನ್ನು ರೂಢಿಸಿಕೊಂಡು, ಸಿಕ್ಕ ಅವಕಾಶಗಳನ್ನು ಚೆನ್ನಾಗಿ ಬಳಸಿಕೊಂಡರು. ಉತ್ತಮ ನಟನಾಗಬೇಕೆಂಬ ಅಕಾಂಕ್ಷೆಯಿಂದ, ವೈವಿಧ್ಯಮಯ ಪಾತ್ರಗಳನ್ನು ಅರಿತುಕೊಂಡು ಅಭಿನಯಿಸಿದರು. ಇವರ ನಟನೆ ಚಲನಚಿತ್ರರಂಗಕ್ಕೂ ಬೇಕಾಯಿತು. ಡಾ॥ ರಾಜ್‌ಕುಮಾರ್ ಅವರ ಕ್ಯಾಂಪ್ ಸೇರಿದ ಸಂಪಂಗಿ ಸುಮಾರು 65 ಚಿತ್ರಗಳಲ್ಲಿ ನಟಿಸಿದ್ದಾರೆ. ಅಲ್ಲದೆ, ದೂರದರ್ಶನ ಧಾರಾವಾಹಿಗಳಲ್ಲೂ ಪಾತ್ರವಹಿಸಿದ್ದಾರೆ. ಪೌರಾಣಿಕ ನಾಟಕಗಳ ಜೊತೆ ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸಿರುವ ಇವರು ಕೈಗಾರಿಕಾ ನಾಟಕ ಸ್ಪರ್ಧೆಗಳಲ್ಲಿ ಅನೇಕ ಪ್ರಶಸ್ತಿಗಳನ್ನು ಗಳಿಸಿದ್ದಾರೆ.

---

## ಸಾರಂಗಯ್ಯ ಸಂಗಯ್ಯ ಸಾರಂಗ ಮಠ



ಐಹೊಳೆ ದೇಸಾಯಿಯವರು 1955ರಲ್ಲಿ ಸ್ಥಾಪಿಸಿದ ರಾಮಲಿಂಗೇಶ್ವರ ನಾಟ್ಯಸಂಘದ ಮೂಲಕ ಸಾರಂಗಯ್ಯ ಸಂಗಯ್ಯ ಸಾರಂಗ ಮಠ ಅವರು ರಂಗಪ್ರವೇಶ ಮಾಡಿದರು. ಆಗ ಅವರಿಗೆ 18 ವರ್ಷ. ಸಾಹಿತ್ಯ ಸೇವೆ, ಕಲಾಸೇವೆಯನ್ನು ಏಕಕಾಲಕ್ಕೆ ಪ್ರಾರಂಭಿಸಿದ ಸಾರಂಗಮಠ ಅವರು ಶಾರದಾ ಸಂಗೀತ ನಾಟಕ ಮಂಡಲಿ, ಗೋಕಾಕ, ಹೊಳಿ ಹುಚ್ಚೇಶ್ವರ ನಾಟ್ಯ ಸಂಘ ಕಮತಗಿ, ಬಸವೇಶ್ವರ ನಾಟ್ಯ ಸಂಘ ವೇಲಾನಪುರ ಮುಂತಾದ ಕಂಪನಿಗಳಲ್ಲಿ ಅಭಿನಯಿಸಿದ್ದಾರೆ. ಇವರು ರಚಿಸಿದ ಹಲವಾರು ನಾಟಕಗಳು ಪ್ರದರ್ಶನ ಯೋಗವನ್ನು ಕಂಡಿವೆ. ಅನೇಕ ಸಂಘ ಸಂಸ್ಥೆಗಳು ಇವರ ಕಲಾಸೇವೆಯನ್ನು ಗುರುತಿಸಿ ಪ್ರಶಸ್ತಿ, ಸನ್ಮಾನಗಳನ್ನು ಮಾಡಿವೆ.

---



## ಹೊನ್ನಯ್ಯ

ವಿದ್ಯಾರ್ಥಿ ಜೀವನದ ಜೊತೆಯಲ್ಲೇ ಪ್ರಾರಂಭವಾದ ನಟನೆಯ ಗೀಳು, ಹೊನ್ನಯ್ಯನವರು ತಮ್ಮ ಜೀವನದುದ್ದಕ್ಕೂ ಅಭಿನಯಿಸುವಂತೆ ಪ್ರೇರೇಪಿಸಿತು. ಐ.ಟಿ.ಐ. ಕಾರ್ಖಾನೆಗೆ ಸೇವೆಗೆಂದು ಸೇರಿದಮೇಲೂ, 30 ವರ್ಷಗಳು ಸತತವಾಗಿ ರಂಗಭೂಮಿಯಲ್ಲಿ ತೊಡಗಿಸಿಕೊಂಡವರು ಹೊನ್ನಯ್ಯ.

ಸ್ಪರ್ಧಾತ್ಮಕವಾಗಿ ರಂಗಭೂಮಿಯಲ್ಲಿ ನಿರ್ದೇಶನ, ನಟನೆಯನ್ನು ನಿರ್ವಹಿಸಿದ ಇವರು, ಪೋಲಿಕಿಟ್ಟಿ, ಕಾಡ್ನನ್ನ, ಸೂಳೆ, ಹೋಂರೂಲ್, ಅಂಗುಲಿಮಾಲಾ, ರಕ್ತಾಕ್ಷಿ ಮುಂತಾದ ನಾಟಕಗಳಿಗೆ ಉತ್ತಮ ನಿರ್ದೇಶನ ಪ್ರಶಸ್ತಿ ಪಡೆದಿದ್ದಾರೆ.

ಹುತ್ತವ ಬಡಿದರೆ, ಕಾಡ್ನನ್ನ, ಅಂಗುಲಿಮಾಲಾ, ಬಹದ್ದೂರ್ ಗಂಡ ನಾಟಕಗಳಿಗೆ ಉತ್ತಮ ನಟ ಪ್ರಶಸ್ತಿ ಗೆದ್ದಿದ್ದಾರೆ.

ಸಮಕಾಲೀನ ರಂಗಭೂಮಿಯ ಎಲ್ಲರ ಒಡನಾಟವನ್ನು ಗಳಿಸಿರುವ ಇವರು ಅನೇಕ ಸಂಸ್ಥೆಗಳನ್ನು ಹುಟ್ಟುಹಾಕಿದ್ದಾರೆ. ಅನೇಕ ಪ್ರಶಸ್ತಿ ವಿಜೇತ ಚಲನಚಿತ್ರಗಳಲ್ಲಿ, ಕಿರುತೆರೆಯ ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ.





## ಹೂಲಿ ಶೇಖರ್

ಕನ್ನಡ ರಂಗಭೂಮಿಯಲ್ಲಿ ತಮ್ಮ ವಿನೂತನ ನಾಟಕಗಳಿಂದ ಪರಿಚಿತರಾಗಿರುವ ಹೂಲಿಶೇಖರ್ ಅವರು ನಟರಾಗಿ, ನಿರ್ದೇಶಕರಾಗಿ, ಸಂಘಟಕರಾಗಿ, ನಿರಂತರ ರಂಗಚಿಂತಕರಾಗಿದ್ದಾರೆ. ಕಥೆ, ಕವನ, ಕಾದಂಬರಿ ಮುಂತಾದ ಸಾಹಿತ್ಯ ಪ್ರಕಾರಗಳಲ್ಲೂ ಹೂಲಿಶೇಖರ್ ತೊಡಗಿಸಿಕೊಂಡು ಹಲವಾರು ಸಾಂಸ್ಕೃತಿಕ, ಸಾಹಿತ್ಯಕ ಸಂಘಟನೆಗಳನ್ನು ಹುಟ್ಟುಹಾಕಿದ್ದಾರೆ.

ಕರ್ನಾಟಕ ವಿದ್ಯುತ್ ನಿಗಮ, ಅಂಬಿಕಾನಗರದಲ್ಲಿ ಉದ್ಯೋಗಿಯಾಗಿರುವ ಹೂಲಿಶೇಖರ್ ಅವರ 'ಅರಗಿನ ಬೆಟ್ಟ', 'ಹಾವು ಹರಿದಾಡುತಾವ', 'ಕಲ್ಯಾಣದಲ್ಲಿ ಒಂದು ಕ್ರಾಂತಿ', 'ಸೆರಗಿನ ಕೆಂಡ', 'ಒಂದು ದಂಗೆಯ ಪ್ರಕರಣ', ಮುಂತಾದ ನಾಟಕಗಳು ಕರ್ನಾಟಕದಾದ್ಯಂತ ರಂಗಪ್ರಯೋಗಗೊಂಡು ರಂಗಾಸಕ್ತರ ಮೆಚ್ಚುಗೆಗೆ ಪಾತ್ರವಾಗಿವೆ.

ಕಥಾಲೇಖಕರಾಗಿ, ನಾಟಕಕಾರರಾಗಿ, ಅನೇಕ ಪ್ರಶಸ್ತಿ, ಪುರಸ್ಕಾರಗಳು ಇವರ ಪಾಲಿಗೆ ದಕ್ಕಿವೆ. ರೇಡಿಯೋ ನಾಟಕಗಳನ್ನು ರಚಿಸಿದ್ದಾರೆ. ಅನೇಕ ವಿಚಾರ ಸಂಕಿರಣಗಳು, ಸಾಹಿತ್ಯ ರಂಗಕಮ್ಮಟಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವ ಹೂಲಿಶೇಖರ್, ದೇಶದ ವಿವಿಧೆಡೆಗಳಲ್ಲೂ ತಮ್ಮ ಚಟುವಟಿಕೆಗಳನ್ನು ವಿಸ್ತರಿಸಿಕೊಂಡಿದ್ದಾರೆ.



# 1994ರ ಪ್ರಶಸ್ತಿ ವಿಜೇತರು



## ಡಾ. ಶ್ರೀರಾಮ ಇಟ್ಟಣ್ಣನವರ್ (ಫೆಲೋಶಿಪ್)

ಉತ್ತರ ಕರ್ನಾಟಕದ ಜಾನಪದ ಪ್ರಕಾರಗಳಾದ ಶ್ರೀಕೃಷ್ಣ ಪಾರಿಜಾತ, ರಾಧಾನಾಟ, ಬಯಲಾಟಗಳ ಬಗ್ಗೆ ಸಂಶೋಧನೆಗಳನ್ನು ನಡೆಸಿರುವ ಡಾ. ಶ್ರೀರಾಮ ಇಟ್ಟಣ್ಣನವರ್, ಈ ಜಾನಪದ ರಂಗಕಲೆಗಳ ಬಗ್ಗೆ ಅನೇಕ ವಿದ್ವತ್‌ಪೂರ್ಣ ಲೇಖನಗಳನ್ನು ರಚಿಸಿದ್ದಾರೆ.

ಕಾವ್ಯ ಹಾಗೂ ನಾಟಕ ಕ್ಷೇತ್ರಗಳಲ್ಲಿ ಇವರು ತಮ್ಮ ಪ್ರತಿಭೆಯನ್ನು ತೋರಿದ್ದಾರೆ. ಅನೇಕ ವಿಚಾರ ಸಂಕಿರಣಗಳಲ್ಲಿ ಹಾಗು ಕವಿಗೋಷ್ಠಿಗಳಲ್ಲಿ ಪಾಲ್ಗೊಂಡಿರುವ ಇವರು ಶ್ರೀ ಸಿದ್ಧೇಶ್ವರ ಪದವಿಪೂರ್ವ ಕಾಲೇಜು, ಬೀಳಗಿ ಇಲ್ಲಿ ಉಪನ್ಯಾಸಕರಾಗಿದ್ದಾರೆ.

ಸಣ್ಣಾಟ ವಿಶ್ಲೇಷಣಾ ಗ್ರಂಥ, ಶ್ರೀಕೃಷ್ಣ ಪಾರಿಜಾತ, ಪಿಹೆಚ್.ಡಿ. ಗ್ರಂಥಗಳ ಜೊತೆಗೆ ಬಯಲಾಟದ ವಸ್ತು ತೊಗಲು ಗೊಂಬೆಯಾಟ, ದೊಡ್ಡಾಟ–ಸಣ್ಣಾಟ–ಶ್ರೀಕೃಷ್ಣ ಪಾರಿಜಾತ ಕುರಿತಂತೆ ತೌಲನಿಕ ಅಧ್ಯಯನ ಮುಂತಾದ ಅತ್ಯುತ್ತಮ ಗ್ರಂಥಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ್ದಾರೆ.

ಅನೇಕ ಕವನ ಸಂಕಲನಗಳು, ನಾಟಕ, ವಿಚಾರ ಸಾಹಿತ್ಯ, ಗ್ರಂಥ ಸಂಪಾದನೆ ಜೊತೆಗೆ ಧ್ವನಿಸುರುಳಿಗಳನ್ನು ನಿರ್ಮಿಸಿ ಕ್ಯಾಸೆಟ್ ಲೋಕದಲ್ಲಿ ತಮ್ಮ ಕೊಡುಗೆ ನೀಡಿದ್ದಾರೆ.



## ಡಾ. ಜಿ.ಎಸ್. ಕಾಪಸೆ (ಫೆಲೋಶಿಪ್)

ಬಹುಮುಖಿ ಪ್ರತಿಭೆಯ ಡಾ. ಗುರುಲಿಂಗ ಕಾಪಸೆ ಅವರು ತಮ್ಮ ಸಂಶೋಧಕ ಹಾಗು ವಿಮರ್ಶಾಗ್ರಂಥಗಳಿಂದ ಕನ್ನಡ ಸಾರಸ್ವತ ಲೋಕಕ್ಕೆ ವಿಶಿಷ್ಠ ಕಾಣಿಕೆ ಸಲ್ಲಿಸಿದ್ದಾರೆ.

ವಿದ್ಯಾರ್ಥಿ ದೆಸೆಯಿಂದಲೇ ತಮ್ಮ ಜ್ಞಾನದ ಹಸಿವನ್ನು ಹೆಚ್ಚಿಸಿಕೊಳ್ಳುತ್ತಾ, ಅರಿವಿನ ಭಂಡಾರವನ್ನು ತಮ್ಮದಾಗಿಸಿಕೊಂಡು ಬೆಳೆದ ಡಾ. ಕಾಪಸೆ ಅವರು ತಮ್ಮ ವೃತ್ತಿಬದುಕಿನಲ್ಲಿ ಬಹು ಎತ್ತರಕ್ಕೆ ಏರಿದವರು. ಇಷ್ಟೆಲ್ಲಾ ಚಿಂತನೆಯ ನಡುವೆ ಅವರು ರಂಗಭೂಮಿಗೂ ಸಾಕಷ್ಟು ಸಮಯವನ್ನು ಮೀಸಲಿಟ್ಟಿರುವುದು, ತಮ್ಮ ಸಂಶೋಧನಾ ಪ್ರವೃತ್ತಿಯನ್ನು ಈ ರಂಗದಲ್ಲಿಯೂ ರೂಢಿಸಿಕೊಂಡಿರುವುದು ಈ ಪ್ರಕಾರಕ್ಕೇ ವಿಶಿಷ್ಠ ಮಹತ್ವವನ್ನು ತಂದುಕೊಟ್ಟಿದೆ.

ಹವ್ಯಾಸಿ ಕಲಾವಿದರಾಗಿ, ವಿಮರ್ಶಕರಾಗಿ ರಂಗಭೂಮಿಯೊಂದಿಗೆ ಸಕ್ರಿಯವಾಗಿರುವ ಇವರು ಮರಾಠಿ ಮತ್ತು ಕನ್ನಡ ನಾಟಕಗಳ ಕೊಳು–ಕೊಡುಗೆ, ರಾಧನಾಟ–ಚಿಮಣಾನಾಟಗಳ ಸಂಬಂಧ ಮುಂತಾದ ವಿಷಯಗಳಲ್ಲಿ ಚಿಂತನೆ ನಡೆಸಿ ಸಂಶೋಧನಾ ಗ್ರಂಥಗಳ ಪ್ರಕಟಣೆಯಲ್ಲಿ ತೊಡಗಿದ್ದಾರೆ.

ಪ್ರಸ್ತುತ ಹಂಪಿ ವಿಶ್ವವಿದ್ಯಾಲಯದ ಸಂದರ್ಶಕ ಪ್ರಾಧ್ಯಾಪಕರಾಗಿರುವ ಇವರು ಮಧುರಚೆನ್ನ, ಅಕ್ಕಮಹಾದೇವಿ ಕುರಿತಂತೆ ಸಂಶೋಧನೆ, ಮಕ್ಕಳ ಸಾಹಿತ್ಯ ಹಾಗು ಹಲವಾರು ಸಂಪಾದಿತ ಕೃತಿಗಳನ್ನು ನೀಡಿದ್ದಾರೆ.



## ಸಿ. ಅಶ್ವತ್ಥ್ (ಫೆಲೋಶಿಪ್)

ಇಂದು ಸುಗಮ ಸಂಗೀತ ಹಾಗು ಚಿತ್ರರಂಗದಲ್ಲಿ ಖ್ಯಾತರಾಗಿರುವ ಸಿ. ಅಶ್ವತ್ಥ್ ಮೂಲತಃ ರಂಗಭೂಮಿಯವರು. ರಂಗಸಂಗೀತಕ್ಕೆ ತಮ್ಮದೇ ಆದ ವಿಶಿಷ್ಟ ಶೈಲಿಯನ್ನು ಕಂಡುಕೊಂಡಿರುವ ಇವರು ಶ್ರೀ ಬಿ.ವಿ. ಕಾರಂತ ಹಾಗು ಡಾ. ಚಂದ್ರಶೇಖರ ಕಂಬಾರ ಅವರಿಂದ ಭಿನ್ನವಾದ ರಂಗಸಂಗೀತ ನಿರ್ದೇಶಕರಾಗಿದ್ದಾರೆ.

ನಾದ ಮಾಧುರ್ಯಕ್ಕೆ ಹೆಚ್ಚು ಒತ್ತುಕೊಡುವ ಇವರು ಸಾಹಿತ್ಯದ ನಾದಲಾಲಿತ್ಯವನ್ನು ಮನಮುಟ್ಟುವಂತೆ ವಿನ್ಯಾಸಗೊಳಿಸುತ್ತಾರೆ. ಕಾಲೇಜು ದಿನಗಳಿಂದಲೇ ನಾಟಕಗಳಿಗೆ ಸಂಗೀತ ಸಂಯೋಜನೆಯ ಗೀಳನ್ನು ಅಂಟಿಸಿಕೊಂಡ ಇವರು ಈವರೆಗೆ 34 ನಾಟಕಗಳಿಗೆ ಸಂಗೀತ ನೀಡಿದ್ದಾರೆ.

ಪ್ರಯೋಗಶೀಲತೆಯಲ್ಲಿ ಇವರು ಎತ್ತಿದ ಕೈ. ಕಾಕನಕೋಟೆ, ಹಯವದನ, ನಾಗಮಂಡಲದ ಜಾನಪದ ಶೈಲಿ, ತೊಘಲಕ್‌ಗೆ ವಿಭಿನ್ನ ಮಾದರಿ, ಭೈರವಿಯ ಶಾಸ್ತ್ರೀಯ ಧಾಟಿ, ಚಾಕ್ ಸರ್ಕಲ್‌ಗೆ ಪಾಶ್ಚಾತ್ಯ ಮಾದರಿ ಅಳವಡಿಕೆ – ಹೀಗೆ ಹತ್ತಾರು ಧ್ವನಿಪೂರ್ಣ ಸಂಗೀತ ಸಂಯೋಜನೆ, ಇವರು ಮುಂದಿನ ದಿನಗಳಲ್ಲಿ ಸುಗಮ ಸಂಗೀತ ಹಾಗು ಚಿತ್ರ ಸಂಗೀತಗಳಲ್ಲಿ ಸಾಧಿಸಿದ ಮೇಲ್ಮೆಗೆ ಬುನಾದಿಯಾಗಿದೆ. ರಂಗ ಸಂಗೀತ, ಸುಗಮ ಸಂಗೀತ ಹಾಗು ಚಿತ್ರ ಸಂಗೀತಗಳಲ್ಲಿ ಏಕಕಾಲದಲ್ಲಿ ಇವರಂತೆ ಕ್ರಿಯಾಶೀಲರಾಗಿರುವ ಇನ್ನೊಬ್ಬರು ಅಪರೂಪ ಎಂದೇ ಹೇಳಬಹುದು.

---



## ಕೀ.ರಂ. ನಾಗರಾಜ್ (ಫೆಲೋಶಿಪ್)

ಕನ್ನಡ ಸಾರಸ್ವತಲೋಕದ ಚಿಂತಕರಾದ ಕೀ.ರಂ. ನಾಗರಾಜ್ ಸಾಹಿತ್ಯ ಹಾಗು ರಂಗಭೂಮಿ ವಲಯದಲ್ಲಿ ಕೀ.ರಂ. ಎಂದೇ ಪರಿಚಿತರು. ತಮ್ಮ ಕಾವ್ಯ ಚಿಂತನೆಯ ಜೊತೆಯಲ್ಲಿ ಕನ್ನಡ ನಾಟಕಗಳ ಹಾಗು ಪ್ರಯೋಗಗಳ ಬಗ್ಗೆ ತೀವ್ರವಾಗಿ ಸ್ಪಂದಿಸಿ, ಅರ್ಥೈಸುವ ಇವರು, ಕಾವ್ಯ ಹಾಗು ರಂಗಭೂಮಿಯ ಸಂಬಂಧಾಂತರಗಳ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಈ ರೀತಿಯ ರಂಗಪ್ರಯೋಗಗಳನ್ನು ವಿಶ್ಲೇಷಿಸಿದ್ದಾರೆ.

ರಂಗಚಟುವಟಿಕೆಗಳ ಬಗ್ಗೆ ನಿರಂತರ ಆಸಕ್ತಿ ಹೊಂದಿರುವ ಇವರು ಕನ್ನಡದ ಮಹತ್ವ ನಾಟಕಗಳ ಬಗ್ಗೆ, ನಾಟಕಕಾರರ ಬಗ್ಗೆ, ಪ್ರಯೋಗಗಳ ಬಗ್ಗೆ ಅನೇಕ ಲೇಖನಗಳನ್ನು ಬರೆದಿದ್ದಾರೆ. 'ನೀಗಿಕೊಂಡ ಸಂಸ', 'ಕಾಲಜ್ಞಾನಿ ಕನಕ', ಇವರ ಮಹತ್ವದ ನಾಟಕಗಳು. 'ಅಭಿಮಾನ ಪುತ್ರ' ಮಕ್ಕಳ ನಾಟಕ, ಭಾಸಕವಿಯ 'ಮಧ್ಯಮ ವ್ಯಾಯೋಗ' ಅನುವಾದ. ಇವರ ಈ ಎಲ್ಲಾ ನಾಟಕಗಳು ರಂಗದ ಮೇಲೆ ಯಶಸ್ವಿಯಾಗಿ ಪ್ರದರ್ಶಿತವಾಗಿವೆ.

---



## ಕೆ.ಆರ್. ನಾಗರಾಜ್ (ಫೆಲೋಶಿಪ್)

ಶಾಲಾಕಾಲೇಜುಗಳಲ್ಲಿ ನಾಟಕದ ಹುಚ್ಚನ್ನು ಅಂಟಿಸಿಕೊಂಡಿದ್ದ ನಾಗರಾಜ್ ಕಷ್ಟಜೀವಿ. ತಮ್ಮ ಶೈಕ್ಷಣಿಕ ದಿನಗಳಲ್ಲಿ ಬಹು ಕಷ್ಟ ಪರಂಪರೆಯೊಂದಿಗೆ ಹೆಣಗಾಡುತ್ತಾ, ರಂಗಭೂಮಿಯ ನಿಕಟ ಸಂಪರ್ಕವನ್ನು ಇಟ್ಟುಕೊಂಡೇ ಬೆಳೆದರು. ವಕೀಲಿ ವೃತ್ತಿಯನ್ನು ಹಿಡಿದು ದೆಹಲಿಗೆ ಬಂದ ಇವರು ದೆಹಲಿ ಕರ್ನಾಟಕ ಸಂಘಕ್ಕೆ ಹೊಸ ಚೈತನ್ಯ ತುಂಬಿದರು. ದೂರದ ದೆಹಲಿಯಲ್ಲಿ ಕನ್ನಡಿಗರನ್ನು ಸಂಘಟಿಸಿ, ಕರ್ನಾಟಕದಿಂದ

ಪ್ರಖ್ಯಾತ ಕಲಾವಿದರು, ತಂಡಗಳನ್ನು ಆಹ್ವಾನಿಸಿ, ನಿರಂತರ ಸಾಂಸ್ಕೃತಿಕ ಅಭಿವ್ಯಕ್ತಿಯ ಕೇಂದ್ರವನ್ನಾಗಿ ಸಂಘವನ್ನು ಪರಿವರ್ತಿಸಿದರು. ಮೂಲತಃ ಸಾಗರ ತಾಲ್ಲೂಕಿನ ಕುಗ್ವೆ ಗ್ರಾಮದ ನಾಗರಾಜ್ ಅವರು ಇಂದು ತಮ್ಮ ವ್ಯಕ್ತಿಯಲ್ಲಿ ಎತ್ತರದ ಸ್ಥಾನ ತಲುಪಿದ್ದಾರೆ. ಹಾಗೆಯೆ ತಮ್ಮ ಪ್ರವೃತ್ತಿಯಲ್ಲಿ ನಿರಂತರ ಕ್ರಿಯಾಶೀಲ ಸಂಘಟಕರಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗು ಕರ್ನಾಟಕದ ಅಕಾಡೆಮಿಗಳೊಂದಿಗೆ ನಿಕಟ ಸಂಪರ್ಕ ಹೊಂದಿ ಸಾಂಸ್ಕೃತಿಕ ವಿನಿಮಯದ ಕೇಂದ್ರ ವ್ಯಕ್ತಿಯಾಗಿ ರೂಪುಗೊಂಡಿದ್ದಾರೆ.



## ವ್ಯಾಸರಾವ್ ನಿಂಜೂರ್ (ಫೆಲೋಶಿಪ್)

ಭಾರತ ಸರ್ಕಾರದ ಅಣುಶಕ್ತಿ ಇಲಾಖೆಯ ಬಾಬಾ ಪರಮಾಣು ಶಕ್ತಿ ಸಂಶೋಧನಾ ಕೇಂದ್ರದಲ್ಲಿ ಹಿರಿಯ ಅಣುವಿಜ್ಞಾನಿಯಾಗಿ, ಸಂಶೋಧಕರಾಗಿ ಸುದೀರ್ಘ ಸೇವೆ ಸಲ್ಲಿಸಿರುವ ಶ್ರೀ ವ್ಯಾಸರಾವ್ ನಿಂಜೂರ್ ಅವರು ಮೂಲತಃ ಉಡುಪಿಯವರು. ಎಂ.ಎಸ್.ಸಿ., ಪಿಹೆಚ್.ಡಿ.ಗಳನ್ನು ಪಡೆದಿರುವ ಇವರು ಅನೇಕ ಸಂಶೋಧನಾ ಲೇಖನಗಳನ್ನು ಪ್ರಕಟಪಡಿಸಿದ್ದಾರೆ. ಅನೇಕ ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಭಾರತವನ್ನು ಪ್ರತಿನಿಧಿಸಿದ್ದಾರೆ.

ವೈಜ್ಞಾನಿಕ ಲೇಖನ, ಜೊತೆಜೊತೆಗೆ ಇನ್ನಿತರ ಸಾಹಿತ್ಯ ಪ್ರಾಕಾರದಲ್ಲಿ ದುಡಿದಿರುವ ನಿಂಜೂರ್ ಅವರು, 70ಕ್ಕೂ ಹೆಚ್ಚು ಸಣ್ಣಕತೆಗಳನ್ನು ಬರೆದಿದ್ದಾರೆ. ಉಸಿರು, ಪ್ರವರ, ಚಾಮುಂಡೇಶ್ವರಿ ಭವನ ಮುಂತಾದ ಬಹುಮಾನಿತ ಕೃತಿಗಳನ್ನು ರಚಿಸಿದ್ದಾರೆ.

ನಾಟಕ ಸಾಹಿತ್ಯಕ್ಕೆ, ಡೊಂಕುಬಾಲದ ನಾಯಕರು, ನಲ್ವತ್ತರ ನಲುಗು, ಸಂಚು, ಪ್ರೇಮಾಂತರಿಕ್ಷ, ರೇಡಿಯೋ ನಾಟಕ ವರಪರೀಕ್ಷೆ, ಅರಣ್ಯಕ್ಕೊಬ್ಬ ಅರಸ – ಮಕ್ಕಳ ನಾಟಕ – ಹೀಗೆ ಅನೇಕ ಪ್ರಕಾರಗಳಲ್ಲಿ ತಮ್ಮ ಕೊಡುಗೆ ಇತ್ತಿದ್ದಾರೆ.

ಆಹಾರ ತಂತ್ರಜ್ಞಾನದಲ್ಲಿ ಸಲಹೆಗಾರರಾಗಿ, ಜಾಹಿರಾತು ಕ್ಷೇತ್ರದಲ್ಲಿ ಬರಹಗಾರರಾಗಿ, ಗೌರವ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.



## ಅಜುಂಬಾಯಿ ಹುಕ್ಕೇರಿ

ಕಿರಾನಾ ಘರಾನ ಪದ್ಧತಿಯ ಖ್ಯಾತ ಗಾಯಕಿ ಶ್ರೀಮತಿ ಅಜುಂಬಾಯಿ ಹುಕ್ಕೇರಿ ಅವರು ಖ್ಯಾತ ಹಿಂದೂಸ್ತಾನಿ ಸಾರಂಗಿವಾದಕ ದಿ. ಮೊಹಿದ್ದೀನ್ ಸಾಹೇಬರ ಮಗಳು. ಆಕಾಶವಾಣಿ ಕಲಾವಿದೆಯಾಗಿ ಈಗಲೂ ಉತ್ತರ ಕರ್ನಾಟಕದವರ ಮನೆಮಾತಾಗಿದ್ದಾರೆ.

ಹದಿಮೂರನೇ ವಯಸ್ಸಿನಲ್ಲಿ ಮಹಮ್ಮದ್ ಪೀರ್ ಕಂಪನಿಯಲ್ಲಿ ನಟಿಯಾಗಿ ರಂಗ ಪ್ರವೇಶ ಮಾಡಿದ ಇವರು, ಸಂಸಾರನೌಕೆ, ರಾಮಾಯಣ, ಸದಾರಮೆ ನಾಟಕಗಳಲ್ಲಿ ಪಾತ್ರವಹಿಸಿ, ತಮ್ಮ ಅಭಿನಯಚಾತುರ್ಯ ಹಾಗು ಸಂಗೀತ ಪ್ರತಿಭೆಯಿಂದ ಜನಪ್ರಿಯರಾದರು.

ದಾವಣಗೆರೆಯ ಚಂದ್ರಕಲಾ ನಾಟಕ ಕಂಪನಿಯಲ್ಲೂ ತಮ್ಮ ಸೇವೆ ಸಲ್ಲಿಸಿದ್ದಾರೆ.



## ಲಾಲಾಮೊಹ್ಮದ್ ಬಂದೇನವಾಬ್ ಖಲೀಫ್ ಅಲ್ಲಾಳ್

ಕಳೆದ 30 ವರ್ಷಗಳಿಂದ ನಾಟಕ ರಚನೆ ಹಾಗು ನಿರ್ದೇಶನಗಳಿಂದ ರಂಗಭೂಮಿ ಸೇವೆ ಸಲ್ಲಿಸುತ್ತಿರುವ ಎಲ್.ಬಿ.ಕೆ. ಅಲ್ಲಾಳ್ ಅವರು ವೃತ್ತಿರಂಗಭೂಮಿ ಹಾಗು ಹವ್ಯಾಸಿ ರಂಗಭೂಮಿಗಳೆರಡಕ್ಕೂ ಅನಿವಾರ್ಯವೆನಿಸಿದ್ದಾರೆ.

30ಕ್ಕೂ ಹೆಚ್ಚು ನಾಟಕಗಳನ್ನು ರಚಿಸಿರುವ ಇವರು 10 ನಾಟಕಗಳನ್ನು ಪ್ರಕಟಿಸಿದ್ದಾರೆ. ನಾಟಕ ರಚನೆಯ ಜೊತೆಜೊತೆಗೇ ತತ್ವಪದಗಳು, ಜೀವನ ಚರಿತ್ರೆಗಳನ್ನು ರಚಿಸಿದ್ದಾರೆ.

ಪತಿಭಕ್ತಿ, ಕಲಿಯುಗದ ಕನ್ಯೆ, ನನ್ನದೇವರು, ಕಡಕೋಳ ಮಡಿವಾಳೇಶ್ವರ, ವಿಶ್ವಾರಾಧ್ಯರ ಮಹಾತ್ಮೆ ಮುಂತಾದ ನಾಟಕಗಳು ಜನಪ್ರಿಯವಾಗಿವೆ. ಶ್ರೀಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ, ರಾಘವೇಂದ್ರ ನಾಟ್ಯ ಸಂಘ, 1008 ರೇಣುಕಾರ್ಯ ನಾಟ್ಯ ಸಂಘ ಮುಂತಾದ ವೃತ್ತಿ ತಂಡಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದಾರೆ.

---



## ಆರ್. ಅಶ್ವತ್ಥನಾರಾಯಣ

ಆರ್. ಅಶ್ವತ್ಥನಾರಾಯಣ ಸುಮಾರು ಹತ್ತು ವರ್ಷದ ಹುಡುಗನಿಂದ ದಿವಂಗತ ಸಿ.ಬಿ. ಮಲ್ಲಪ್ಪನವರ ಕಂಪನಿಯಲ್ಲಿ, ಚಂದ್ರಮೌಳೇಶ್ವರ ನಾಟಕ ಕಂಪನಿಯಲ್ಲಿ ಕೆಲವು ವರ್ಷಗಳ ಕಾಲ ಸೇವೆ ಮಾಡಿದರು. ತದನಂತರ ಇವರು ತಮ್ಮ ತಂದೆಯೊಂದಿಗೆ 1942ರಲ್ಲಿ ಶ್ರೀ ಗುಬ್ಬಿ ವೀರಣ್ಣನವರ ಕಂಪನಿಯಲ್ಲಿ ಹತ್ತಾರು ವರ್ಷಗಳ ಕಾಲ ಕಲಾ ಸೇವೆ ಮಾಡಿದರು. ದಿವಂಗತ ಎಂ.ವಿ. ಸುಬ್ಬಯ್ಯನಾಯ್ಡುರವರ ಕಂಪನಿಯಲ್ಲೂ ಕೂಡ ಹತ್ತಾರು ವರ್ಷಗಳ ಕಾಲ ಪಾತ್ರ ವಹಿಸಿದ್ದರು. 1962ನೇ ಇಸವಿಯಲ್ಲಿ ಡಾ. ರಾಜ್‌ಕುಮಾರ್‌ರವರು ಇವರನ್ನು ಕನ್ನಡ ಚಿತ್ರರಂಗಕ್ಕೆ ಪರಿಚಯಿಸಿದರು. ಈವರೆಗೆ ಸುಮಾರು ಅಂದಾಜು 160 ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಪ್ರಸ್ತುತ ಆರೋಗ್ಯ ನಿಮಿತ್ತ ವೃತ್ತಿಯಿಂದ ದೂರವಾಗಿದ್ದಾರೆ.

---



## ಬಸವನಗೌಡ್ರು ಬಣ್ಣಗೇರಿ

ಹಿರಿಯ ರಂಗಭೂಮಿ ಕಲಾವಿದ ಬೆಳಗೇರಿ ಸಿದ್ದಪ್ಪನವರಿಂದ ಪ್ರಭಾವಿತರಾಗಿ ರಂಗಭೂಮಿಗೆ ಬಂದ ಬಸವನಗೌಡರು ಶಿವಮೊಗ್ಗಾ ಜಿಲ್ಲೆಯವರು.

'ಸತ್ಯಹರಿಶ್ಚಂದ್ರ'ದ ಲೋಹಿತಾಶ್ವನ ಪಾತ್ರದೊಂದಿಗೆ ಇವರ ಬಣ್ಣದ ಬದುಕು ಆರಂಭವಾಯಿತು. ಗ್ರಾಮೀಣ ಪ್ರದೇಶದಲ್ಲಿ ತಮ್ಮ ರಂಗಭೂಮಿ ಕಾಯಕವನ್ನು ನಿರಂತರವಾಗಿ ಮಾಡಿಕೊಂಡು ಬಂದ ಇವರು ಎಂದೂ ಹಣಕ್ಕಾಗಿ ಕಲೆಯನ್ನು ಮಾರಿಕೊಳ್ಳಲಿಲ್ಲ.

ಸತ್ಯಹರಿಶ್ಚಂದ್ರ, ಹೇಮರೆಡ್ಡಿ ಮಲ್ಲಮ್ಮ, ಚಿತ್ರಾಂಗದ, ಕುರುಕ್ಷೇತ್ರ, ರಾಮಾಯಣ ಮುಂತಾದ ನಾಟಕಗಳ ಮುಖ್ಯ ಪಾತ್ರಗಳಲ್ಲಿ ಯಶಸ್ವಿಯಾಗಿ ನಟಿಸುತ್ತಿದ್ದಾರೆ. ಅಲ್ಲದೆ ನಾಟಿ ವೈದ್ಯರಾಗಿಯೂ 33 ವರ್ಷಗಳಿಂದ ಜನತೆಗೆ ಸೇವೆ ಸಲ್ಲಿಸುತ್ತಿದ್ದಾರೆ.

---



## ಎಂ. ಚಂದ್ರಶೇಖರ, ಶ್ಯಾಡಗುಪ್ಪಿ

ಸಂಗೀತವಿಲ್ಲದೆ ವೃತ್ತಿ ನಾಟಕಗಳಿಲ್ಲ, ಸಂಗೀತಕ್ಕೂ ಪಕ್ಕವಾದ್ಯಗಳಿಗೂ ಅವಿನಾಭಾವ ಸಂಬಂಧ. ತಬಲ ಹಾಗು ಹಾರ್ಮೋನಿಯಂ ವಾದನಗಳೆರಡರಲ್ಲೂ ಪರಿಣಿತರಾದ ಎಂ. ಚಂದ್ರಶೇಖರ ಶ್ಯಾಡಗುಪ್ಪಿ ಅವರಿಗೆ ವಂಶಪಾರಂಪರ್ಯ ಕೊಡುಗೆ ಸಂಗೀತ.

ಚಿಕ್ಕಂದಿನಿಂದಲೇ ತಂದೆಯವರ ಸಂಗೀತದ ಮೋಡಿಯಲ್ಲಿ ಅವರ ಕಲೆ ಚಿಗುರೊಡೆಯಿತು. ಮುಂದೆ ಶಾಲಾ ವಿದ್ಯಾಭ್ಯಾಸದ ಜೊತೆಜೊತೆಗೇ ಸಂಗೀತವನ್ನೂ ಶಾಸ್ತ್ರೀಯವಾಗಿ ಕಲಿತರು. ತಮ್ಮ ವೃತ್ತಿ ಜೀವನದಲ್ಲಿ ಶಿಕ್ಷಕರಾಗಿದ್ದರೂ, ಪ್ರವೃತ್ತಿಯಾಗಿ ಸಂಗೀತ ಕಛೇರಿಗಳನ್ನು ನೀಡುತ್ತಾ, ರಂಗಭೂಮಿಗೂ ಬಂದರು. ವೃತ್ತಿ ಹಾಗು ಹವ್ಯಾಸಿ ನಾಟಕಗಳ ಸಾವಿರಾರು ಪ್ರಯೋಗಗಳಿಗೆ ತಮ್ಮ ವಾದ್ಯಗಳ ಸಹಕಾರ ನೀಡುವುದರೊಂದಿಗೆ, ಜನಮನರಂಜನೆಯ ಜೊತೆಗೆ ಜನ ಜಾಗೃತಿಯ ಕಾರ್ಯದಲ್ಲೂ ತೊಡಗಿಸಿಕೊಂಡಿದ್ದಾರೆ.

ಅನೇಕ ಸಾಮಾಜಿಕ ಕಾರ್ಯಗಳಲ್ಲಿ, ಸಾಕ್ಷರತಾ ಆಂದೋಲನದಲ್ಲೂ ತೊಡಗಿಸಿಕೊಂಡಿದ್ದಾರೆ.



## ಜಿ.ಎಂ. ದೇವನ್

ಬಾಲನಟರಾಗಿ ರಂಗಪ್ರವೇಶ ಮಾಡಿದ ಜಿ. ಮಹದೇವ ಅವರು ದೇವನ್ ಎಂದೇ ಖ್ಯಾತರು. ಮೈಸೂರು ರಂಗವಲಯದಲ್ಲೇ ಏಕೆ, ಕರ್ನಾಟಕದ ರಂಗಭೂಮಿಯಲ್ಲಿ ಚಿರಪರಿಚಿತರಾದ ಇವರು ಖಳನಾಯಕ ಹಾಗು ನಾಯಕ ಪಾತ್ರಗಳಿಗೆ ಪ್ರಸಿದ್ಧಿ.

'ಗೌತಮ ಬುದ್ಧ' ನಾಟಕ ಅಭಿನಯಕ್ಕೆ ರಾಜ್ಯಮಟ್ಟದ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದ ಇವರು ಕೋಹಿನೂರು ರತ್ನ, ಟಿಪ್ಪುಸುಲ್ತಾನ್, ಗೌಡರ ಗಮ್ಮತ್ತು, ಅಯ್ಯಪ್ಪಸ್ವಾಮಿ ಅವತಾರ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

1961 ಮಯೂರ ಆರ್ಟಿಸ್ಟ್ ಸಂಸ್ಥೆಯನ್ನು ಹುಟ್ಟುಹಾಕಿದ ಇವರು ಕುಲಪುತ್ರ, ದೇವದಾಸಿ, ಮಿತ್ರದ್ರೋಹಿ, ಮಕ್ಕಲ್ ಟೋಪಿ, ಎಚ್ಚಮನಾಯಕ ಮುಂತಾದ ನಾಟಕಗಳಲ್ಲಿ ಅಭಿನಯಿಸಿದರು.

ಚಲನಚಿತ್ರ ನಟರಾದ ಎಂ.ಪಿ. ಶಂಕರ್, ರಾಜೇಶ್, ಬಿ. ಶಕ್ತಿಪ್ರಸಾದ್, ಬಿ. ಜಯ, ರಾಜ್ಯಲಕ್ಷ್ಮಿ, ಶೈಲಶ್ರೀ, ಬಾಲಕೃಷ್ಣ, ದಿ. ನರಸಿಂಹರಾಜು ಮುಂತಾದವರೊಂದಿಗೆ ಅನೇಕ ನಾಟಕಗಳನ್ನು ಕರ್ನಾಟಕದಾದ್ಯಂತ ಅಭಿನಯಿಸಿ ಖ್ಯಾತರಾಗಿದ್ದಾರೆ.



## ಜಯಬಾಲು

ಅನಿರೀಕ್ಷಿತವಾಗಿ ಶಾಲಾವಾರ್ಷಿಕೋತ್ಸವದಲ್ಲಿ ಬಣ್ಣ ಹಚ್ಚಿದ ಜಯಬಾಲು ಅವರು, ಹವ್ಯಾಸಿ ರಂಗಕಲಾವಿದೆಯಾಗಿ ಎತ್ತರಕ್ಕೆ ಬೆಳೆದವರು. ಅಭಿನಯ ಚತುರತೆಯಿಂದ ಹಲವಾರು ತಂಡಗಳಲ್ಲಿ, ಅನೇಕ ನಿರ್ದೇಶಕರ ಮಾರ್ಗದರ್ಶನದಲ್ಲಿ ಅನೇಕ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿದ್ದಾರೆ.

ಹೆಸರಾಂತ ರಂಗತಂಡಗಳಾದ 'ರಂಗಸಂಪದ' ಮಯೂರ ಕಲಾಸಂಘ, ರಂಗತರಂಗ, ಕನ್ನಡ ಸಾಹಿತ್ಯ ಕೂಟ, ಬಿ.ಇ.ಎಲ್. ಲಲಿತ ಕಲಾ ಸಂಘ ಮುಂತಾದ ತಂಡಗಳಲ್ಲಿ ಅಭಿನಯಿಸಿದ್ದಾರೆ. ನಟನೆಯಲ್ಲದೆ ನೇಪಥ್ಯದಲ್ಲೂ ಪರಿಣತಿಯನ್ನು ಪಡೆಯುವಲ್ಲಿ ಆಸಕ್ತಿ ವಹಿಸಿರುವ ಇವರು ರಾಷ್ಟ್ರೀಯ ನಾಟಕೋತ್ಸವ, ಅಖಿಲ ಭಾರತ ಕೈಗಾರಿಕಾ ನಾಟಕ ಸ್ಪರ್ಧೆಗಳಲ್ಲಿ ಭಾಗವಹಿಸಿ ತಮ್ಮ ಅನುಭವ ಹೆಚ್ಚಿಸಿಕೊಂಡಿದ್ದಾರೆ.

ಅನೇಕ ಪ್ರಶಸ್ತಿ, ಬಹುಮಾನಗಳು ಇವರನ್ನು ಹುಡುಕಿಕೊಂಡು ಬಂದಿವೆ. ಇವರ ಇಡೀ ಕುಟುಂಬವೇ ಕಲಾಕುಟುಂಬವಾಗಿ, ರಂಗಭೂಮಿಯಲ್ಲಿ ತೊಡಗಿಸಿಕೊಂಡಿರುವುದು ಇವರ ಹೆಗ್ಗಳಿಕೆ.

## ಜ್ಯೋತ್ಸ್ನಾರಾವ್

ಬಾಲ್ಯದಲ್ಲಿ ಪಡೆದುಕೊಂಡ ನೃತ್ಯ ಶಿಕ್ಷಣ ಹಾಗು ಶಾಲಾ ಕಾಲೇಜುಗಳಲ್ಲಿ ಅಂಟಿಕೊಂಡ ನಾಟಕದ ಗೀಳು ದೂರದ ದೆಹಲಿಯಲ್ಲೂ ಮುಂದುವರಿಯಿತು ಜ್ಯೋತ್ಸ್ನಾರಾವ್ ಅವರಿಗೆ.

ಮದುವೆಯಾಗಿ, ಪತಿ ಶ್ರೀ ರಘುನಾಥರಾಯರೊಂದಿಗೆ ದೆಹಲಿಗೆ ಹೋಗುತ್ತಿದ್ದಂತೆ 'ದಕ್ಷಿಣ ಭಾರತ ನಟೀನಟ ಸಮಷ್ಟಿ'ದವರ 'ಆಷಾಢಭೂತಿ' ನಾಟಕದಲ್ಲಿ ಅಭಿನಯ. ನಂತರ 'ಕನ್ನಡ-ಭಾರತಿ' ಅಸ್ತಿತ್ವಕ್ಕೆ ಬರುತ್ತಿದ್ದಂತೆ, ಮೊದಲ ಪ್ರಯೋಗ 'ಬಂಡ್ವಾಳಿಲ್ಲದ ಬಡಾಯಿ'ಯಲ್ಲಿ ಅಭಿನಯ.

ಹೀಗೆ ಅಭಿನಯದ ಅವಕಾಶವನ್ನು ಪಡೆದ ಇವರು ಕಳೆದ 30 ವರ್ಷಗಳಿಂದ 'ಕನ್ನಡ-ಭಾರತಿ'ಯ ನಿಕಟ ಸಂಪರ್ಕ ಹೊಂದಿದ್ದಾರೆ.

ಹಯವದನ, ದಹನ ಚಿತ್ರ, ಯಯಾತಿ, ನಾನೇ ಬಿಜ್ಜಳ, ಮೋಟೇರಾಮ ಸತ್ಯಾಗ್ರಹ, ಸಾಯೋ ಆಟ, ಮೊದಲಾದ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ನಿರ್ವಹಿಸಿದ್ದಾರೆ.



## ಸಿ.ಎಸ್. ನಾಗೇಶ್

ಬಡ ನೇಕಾರರ ಕುಟುಂಬದಿಂದ ಬಂದ ನಾಗೇಶ್, ಬಾಲ್ಯದಿಂದಲೂ ಕಲೆಯ ಬಗ್ಗೆ ಆಸಕ್ತಿ ಹೊಂದಿದ್ದರು. ಶಾಲಾ ಕಾಲೇಜು ದಿನಗಳಲ್ಲಿ ಇವರು ಸಾಹಿತ್ಯ ಸೃಷ್ಟಿ ಹಾಗು ರಂಗಾಭಿನಯದಲ್ಲಿ ತಮ್ಮ ಪ್ರಥಮ ಹೆಜ್ಜೆಗಳನ್ನು ಊರಿದರು.

ಅಖಿಲ ಕರ್ನಾಟಕ ರಾಜ್ಯಮಟ್ಟದ ಏಕಪಾತ್ರಾಭಿನಯದಲ್ಲಿ ಪ್ರಥಮ ಸ್ಥಾನಗಳಿಸಿದ ಇವರು, ಸರ್ಕಾರಿ ನೌಕರಿಯನ್ನು ಬಯಸದೆ ಕಲೆಯ ಸೇವೆಯಲ್ಲಿ ತೊಡಗಿದರು.

ಶ್ರೀ ಓಂಕಾರೇಶ್ವರ ನಾಟಕ ಮಂಡಲಿ, ಗುಬ್ಬಿ ಕಂಪನಿ, ಜಿ.ವಿ. ಕೃಷ್ಣ ನಾಟಕ ಮಂಡಲಿಗಳಲ್ಲಿ ಪಾತ್ರ ವಹಿಸಿದ ಇವರು ಜೀವನೋಪಾಯಕ್ಕೆ ಹಳ್ಳಿಗಳಲ್ಲಿ ನಾಟಕ ಕಲಿಸುವ ಮಾಸ್ತರರಾಗಿ ನಿರಂತರ ರಂಗಭೂಮಿಯ ನಿಕಟ ಸಂಬಂಧ ಹೊಂದಿದ್ದಾರೆ.

ತುಮಕೂರು ಜಿಲ್ಲೆಯವರಾದ ನಾಗೇಶ್ ಕರ್ನಾಟಕದ ವಿವಿಧ ಕಡೆ ಈಗಲು ಪಾತ್ರವಹಿಸುತ್ತಾರೆ.



## ಬಿ. ಚೆನ್ನಪ್ಪ ಕತ್ತಿಗೆ

ಸ್ನಾತಕೋತ್ತರ ಪದವೀಧರ ಚೆನ್ನಪ್ಪ ಕತ್ತಿಗೆ ಅವರದು ಬಹುಮುಖಿ ಪ್ರತಿಭೆ. ನಾಟಕಕಾರರಾಗಿ, ನಟರಾಗಿ, ಸಮಾಜ ಸೇವಾಕರ್ತರಾಗಿ ಶಿವಮೊಗ್ಗ ಜಿಲ್ಲೆಯಲ್ಲಿ ವಿಶೇಷ ಮನ್ನಣೆ ಗಳಿಸಿದ್ದಾರೆ.

ಅನೇಕ ಸಂಘ ಸಂಸ್ಥೆಗಳ ಹುಟ್ಟಿಗೆ ಕಾರಣವಾಗಿರುವ ಚೆನ್ನಪ್ಪ, ತ್ಯಾಗಿ, ದಸರಾ, ವಾತ್ಸಲ್ಯ, ಧರ್ಮದೇವತೆ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಕಾವ್ಯ, ನಾಟಕ ರಚನೆಯಲ್ಲೂ ತಮ್ಮನ್ನು ತೊಡಗಿಸಿಕೊಂಡಿರುವ ಇವರು ಸಾಹಿತ್ಯ ಸಮ್ಮೇಳನ, ಸಾಂಸ್ಕೃತಿಕ ಮೇಳಗಳ ನಿರ್ವಾಹಕರಾಗಿ ದುಡಿದಿದ್ದಾರೆ. ಇವರ ಪರಿಶ್ರಮದಿಂದ ಕತ್ತಿಗೆ ಗ್ರಾಮದಲ್ಲಿ ಲಂಕೇಶ್ ಬಯಲು ರಂಗಮಂದಿರವನ್ನು ನಿರ್ಮಿಸಿದ್ದಾರೆ.





## ಕೆ.ಎಂ. ಕುರುಂಬಯ್ಯ

ಭಾರತ್ ಎಲೆಕ್ಟ್ರಾನಿಕ್ಸ್ ಲಿ. ನ ಹಲವಾರು ಜವಾಬ್ದಾರಿ ಸ್ಥಾನಗಳಲ್ಲಿ ಸೇವೆ ಸಲ್ಲಿಸುತ್ತಾ, ಕಾರ್ಮಿಕರ ಕಲ್ಯಾಣಕ್ಕೆ ದುಡಿಯುತ್ತಿರುವ ಕುರುಂಬಯ್ಯನವರು ರಂಗಭೂಮಿ ಪ್ರೇಮಿ. ತಮ್ಮ ಸಂಸ್ಥೆಯಲ್ಲಿ ಸಾಂಸ್ಕೃತಿಕ ಹಾಗು ಕ್ರೀಡಾ ಚಟುವಟಿಕೆಗಳಿಗೆ ಹೆಚ್ಚು ಅವಕಾಶವನ್ನು ನೀಡಿದ ಕೀರ್ತಿ ಇವರಿಗೆ ಸಲ್ಲಬೇಕು.

ಯಾಂತ್ರಿಕತೆಯ ಏಕತಾನತೆಯ ನಡುನಡುವೆ ಸಾಂಸ್ಕೃತಿಕ ಪರಿಸರದ ಜೀವಂತಿಕೆಯನ್ನು ಹುಟ್ಟುಹಾಕಿದ ಕುರುಂಬಯ್ಯನವರು ಕಾರ್ಮಿಕರ ಕ್ಷೇಮಾಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ರೂಪಿಸಿ, ಜಾರಿಗೆ ತಂದರು.

ಬಿ.ಇ.ಎಲ್. ದಲಿತ ಕಲಾಸಂಘದ ಚಟುವಟಿಕೆಗಳಲ್ಲಿ ನಿರಂತರ ಸಂಬಂಧವನ್ನು ಹೊಂದಿರುವ ಇವರು, ಲಲಿತಕಲಾ ಸಂಘದ ಮಾರ್ಗದರ್ಶಕರಾಗಿಯೂ ಸೇವೆ ಸಲ್ಲಿಸಿದ್ದಾರೆ.





## ಶೇಖ್ ಮೋಹಿದ್ದೀನ್ ಖೇಡಗಿ

ಬಿಜಾಪುರದ ಎಸ್.ಎಮ್. ಖೇಡಗಿ ರಂಗಕಲಾವಿದರು. ಅದಕ್ಕಿಂತ ಮುಖ್ಯವಾಗಿ ನಾಟಕಕಾರರು. 'ತಂಗಿ ಕೊಟ್ಟ ಕಾಣಿಕೆ', 'ರೀತಿ ತಪ್ಪಿದರು ನೀತಿ ಬಿಟ್ಟಿಲ್ಲ', 'ಕೆಚ್ಚೆದೆಯ ವೀರ', 'ಪಾಪದ ದೇಹ', 'ಪುಣ್ಯದ ಜೀವ', ಮುಂತಾದ ಸಾಮಾಜಿಕ ನಾಟಕಗಳನ್ನು ರಚಿಸಿದ್ದಾರೆ.

28ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿರುವ ಇವರು ತಮ್ಮ ನಾಟಕಗಳಲ್ಲಿ ಸಾಮಾಜಿಕ, ಬದಲಾವಣೆಗೆ ಹೆಚ್ಚಿನ ಮಹತ್ವ ನೀಡಿದ್ದಾರೆ. ವೃತ್ತಿ ಕಂಪನಿಗಳಲ್ಲಿ ಇವರ ನಾಟಕಗಳು ಪ್ರದರ್ಶಿತವಾಗಿ ಅಪಾರ ಜನಪ್ರಿಯತೆ ಗಳಿಸಿದೆ. ಇವರು ಅನೇಕ ನಾಟಕ ತಂಡಗಳಲ್ಲಿ ನಟರಾಗಿಯೂ ಪಾತ್ರ ನಿರ್ವಹಿಸಿದ್ದಾರೆ. ನಾಟಕ, ಸಾಹಿತ್ಯ ಹಾಗು ನಟನೆಗೆ ಇವರು ಜಿಲ್ಲೆಯಾದ್ಯಂತ ಪ್ರಸಿದ್ಧರಾಗಿದ್ದಾರೆ. ವೃತ್ತಿರಂಗಭೂಮಿ ಕಲಾವಿದರ ಸಂಘ, ವಿಜಾಪುರ ಇದರ ಕಾರ್ಯದರ್ಶಿಯಾಗಿಯೂ ದುಡಿಯುತ್ತಿದ್ದಾರೆ.





## ಕೆ. ಮೌನೇಶ್ವರಾಚಾರ್

ವೃತ್ತಿಯಿಂದ ಅಧ್ಯಾಪಕರಾದ ಮೌನೇಶ್ವರಾಚಾರ್ ಅವರು ಹಿರಿಯ ತರಳಬಾಳು ಜಗದ್ಗುರು ಶ್ರೀ ಶ್ರೀ ಶಿವಕುಮಾರ ಶಿವಾಚಾರ್ಯ ಸ್ವಾಮಿಗಳ ಪ್ರೋತ್ಸಾಹದಿಂದ ರಂಗಭೂಮಿಯ ಸಕ್ರಿಯ ಅನುಭವ ಪಡೆದಿದ್ದಾರೆ.

ತರಳಬಾಳು ಕಲಾಸಂಘದಿಂದ ಪ್ರಯೋಗಿಸಿದ ಎಲ್ಲಾ ನಾಟಕಗಳಲ್ಲೂ ಅಭಿನಯಿಸಿರುವ ಇವರು ಬಾಲ್ಯದಿಂದಲೇ ರಂಗಮಾಧ್ಯಮದ ಬಗ್ಗೆ ಒಲವನ್ನು ಹೊಂದಿದವರು.

ಸಿರಿಗೆರೆಯ ಶ್ರೀ ನೀಲಾಂಬಿಕಾ ಬಾಲಿಕಾ ಪ್ರೌಢಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸುತ್ತಿರುವ ಇವರು 25 ವರ್ಷಗಳಿಂದ ನಟರಾಗಿ, ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ.

ಸಾಯೋಆಟ, ಕೆರೆಗೆ ಹಾರ, ಕಿತ್ತೂರ ಚೆನ್ನಮ್ಮ, ಮುಖವಿಲ್ಲದವರು, ಮಿಡ್ ಸಮ್ಮರ್ ನೈಟ್ಸ್ ಡ್ರೀಮ್ಸ್ ಮುಂತಾದ ನಾಟಕಗಳ ನಿರ್ದೇಶನ ಮಾಡಿದ್ದಾರೆ. ಮರುಳಸಿದ್ಧ, ಉದ್ಧವ, ಶರಣಸತಿ ಲಿಂಗಪತಿ, ತಲೆದಂಡ, ದುರ್ಗಾಸ್ತಮಾನ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

---



## ಪಿ. ಮುನಿರೆಡ್ಡಿ

ಸಾಮಾನ್ಯ ರೈತ ಕುಟುಂಬದ ಹಿನ್ನೆಲೆಯ ಮುನಿರೆಡ್ಡಿಯವರು ಕೋಲಾರ ಜಿಲ್ಲೆಯವರು. 12ನೇ ವಯಸ್ಸಿನಿಂದ ಸಾಮಾಜಿಕ, ಪೌರಾಣಿಕ ನಾಟಕಗಳಲ್ಲಿ ಅಭಿನಯಿಸುತ್ತಾ ಬಂದಿದ್ದಾರೆ. ಜಾನಪದ ಗೀತೆ ಹಾಗು ಹರಿಕಥೆಗಳನ್ನು ಮಾಡುವ ಅಭಿರುಚಿ ಹಾಗು ಪರಿಶ್ರಮವನ್ನು ಪಡೆದುಕೊಂಡಿದ್ದಾರೆ. ಹಳ್ಳಿಗಾಡುಗಳಲ್ಲಿ ದಾನಶೂರ ಕರ್ಣ, ದ್ರೌಪದಿ ವಸ್ತ್ರಾಪಹರಣ, ರಾಮಾಯಣ, ಕುರುಕ್ಷೇತ್ರ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ವಾರ್ತಾ ಮತ್ತು ಪ್ರಚಾರ ಇಲಾಖೆಯ ನಾಟಕಗಳಲ್ಲೂ ಭಾಗವಹಿಸಿದ್ದಾರೆ.

---



## ಎಲ್. ನಾಗಪ್ಪ

ಹದಿಹರೆಯದಲ್ಲೇ ರಂಗಭೂಮಿಯನ್ನು ನೆಚ್ಚಿ ಬಂದ ನಾಗಪ್ಪ, ನಂಜನಗೂಡಿನವರು. 1948ರಲ್ಲಿ ಗುಬ್ಬಿ ಕಂಪನಿಯನ್ನು ಸೇರಿದ ನಂಜಪ್ಪನವರು ವರನಟ ಡಾ. ರಾಜಕುಮಾರ್ ಅವರ ತಂದೆ ಸಿಂಗಾನೆಲ್ಲೂರು ಪುಟ್ಟಸ್ವಾಮಯ್ಯನವರ ಸಮಕಾಲೀನರು. ಅವರ ಸ್ನೇಹದಿಂದ ಪ್ರೇರಿತರಾದ ನಾಗಪ್ಪನವರು ಸ್ವಂತ ಕಂಪನಿಯ ಕನಸು ಕಂಡವರು. ನನಸು ಮಾಡಲು ಹೊರಟು ಪ್ರಾರಂಭದಲ್ಲೇ ಕಷ್ಟನಷ್ಟಗಳನ್ನು ಅನುಭವಿಸಿದರು.

ಹಾಕಿದ ಹಣ ಹಿಂದಕ್ಕೆ ಬಾರದೆ, ಕಪಿಲೆಯ ಪ್ರವಾಹದಲ್ಲಿ ರಂಗಮಂದಿರ ಕೊಚ್ಚಿಹೋಯಿತು. ಮುಂದೆ ಗುಬ್ಬಿ ಕಂಪನಿ, ಚಾಮುಂಡೇಶ್ವರಿ ಕಂಪನಿ, ಮಾ. ಹಿರಣ್ಣಯ್ಯ ಕಂಪನಿ, ಶೇಷಕಲಾಮಂಡಳಿ ಮುಂತಾದವುಗಳಲ್ಲಿ ಮುಖ್ಯ ಪಾತ್ರ ವಹಿಸಿದ್ದಾರೆ. ಮೈಸೂರು ಸಂಸ್ಥಾನದ ಅಂದಿನ ರಾಜರಾದ ಚಾಮರಾಜೇಂದ್ರ ಒಡೆಯರ್ ಅವರಿಂದ ಪ್ರಶಂಸಿಸಲ್ಪಟ್ಟು 'ಕಲಾರತ್ನ' ಬಿರುದು ಪಡೆದರು. ಸ್ವಂತ ರಂಗಮಂದಿರವನ್ನು ಕಟ್ಟಿಸಲು ಕಾತರರಾಗಿ, ಶಂಕುಸ್ಥಾಪನೆ ನೆರವೇರಿಸಿದ್ದಾರೆ.

---



## ರೇವಣ ಸಿದ್ದಯ್ಯ ರುದ್ರಸ್ವಾಮಿ ಮಠ

ಗುಲ್ಬರ್ಗಾ ಜಿಲ್ಲೆಯ ರಂಗ ಪ್ರತಿಭೆ, ರಂಗನಾಟಕ ಹಾಗು ಬಾನುಲಿ ನಾಟಕಗಳ ರಚನೆಯಲ್ಲಿ ಸಿದ್ಧಹಸ್ತರು. ಈವರೆಗೆ ಐದು ರಂಗನಾಟಕಗಳನ್ನು ರಚಿಸಿ, ರಂಗಮಂಚದ ಮೇಲೆ ಯಶಸ್ವಿಗೊಳಿಸಿದ್ದಾರೆ. ಈ ಎಲ್ಲಾ ನಾಟಕಗಳೂ ಪ್ರಕಟವಾಗಿ ಕನ್ನಡ ರಂಗ ಸಾಹಿತ್ಯಕ್ಕೆ ಕೊಡುಗೆಗಳಾಗಿವೆ. ಸುರಪುರದ ಸಿಂಹ, ವಾಗೀಣಗೇರಿ ಕಾಳಗ, ರಕ್ತಾಭಿಷೇಕ, ಬಿದರಕೋಚಿ, ಹಾಲಾಹಲ ಮುಂತಾದವು ಇವರ ಯಶಸ್ವಿ ನಾಟಕಗಳು.

ಬಾನುಲಿ ನಾಟಕದಲ್ಲಿ ವಿಶೇಷ ಪರಿಣತಿ ಪಡೆದಿರುವ ಇವರು 1987ರಲ್ಲಿ ಅಖಿಲ ಭಾರತ ಆಕಾಶವಾಣಿ ಪ್ರಶಸ್ತಿ, ಬೆಂಗಳೂರು ಆಕಾಶವಾಣಿಯ ನಾಟಕ ರಚನಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಗಳಿಸಿದ್ದಾರೆ. 16ಕ್ಕೂ ಹೆಚ್ಚು ಬಾನುಲಿ ನಾಟಕಗಳು ಹಾಗು ರೂಪಕಗಳು ಆಕಾಶವಾಣಿಯಲ್ಲಿ ಪ್ರಸಾರವಾಗಿ ಜನಮನ್ನಣೆ ಗಳಿಸಿವೆ.

---



## ಡಿ.ಆರ್. ರಾಜಗೋಪಾಲ್

ಇವರು ರಂಗಭೂಮಿಯ ಹೆಸರಾಂತ ಕಲಾವಿದರು. ಇವರದು ಕಲಾವಿದರ ಮನೆತನವಾಗಿದೆ. ಡಿ.ಆರ್. ರಾಜಗೋಪಾಲ್‌ರವರು ಬಾಲ್ಯದಿಂದಲೂ ತಬಲ ವಾದಕರಾಗಿ, ನಾಟಕ ನಿರ್ದೇಶಕರಾಗಿ ನಾಡಿನ ಮೂಲೆ ಮೂಲೆಗಳಲ್ಲಿಯೂ ಹೆಸರು ಗಳಿಸಿದ್ದಾರೆ. ಇವರು ಮೃದಂಗ ವಿದ್ಯಾಭ್ಯಾಸವನ್ನು ನಾಡಿನ ಖ್ಯಾತ ದಿ. ಹೆಚ್. ಪುಟ್ಟಾಚಾರ್, ಸಿ. ಸುಬ್ಬು, ಟಿ.ಎಸ್. ಮಣಿ, ಕೆ.ಎನ್. ಕೃಷ್ಣಮೂರ್ತಿ, ಕಣ್ಣನ್ (ಶೇಷಾದ್ರಿ) ಅವರಲ್ಲಿ ಮಾಡಿದರು. ನಾಟಕದ ನಿರ್ದೇಶಕನಾಗಿ ಸಹ ಕೆಲಸ ನಿರ್ವಹಿಸುತ್ತಿದ್ದಾರೆ. ಮಕ್ಕಳಿಗೆ ತಬಲ, ಮೃದಂಗ ಹಾಗು ನಾಟಕ ಅಭ್ಯಾಸ ಮಾಡಿಸುತ್ತಿದ್ದಾರೆ.

ಇವರು ನಾಟಕರಂಗದಲ್ಲಿ ಕಲಾವಿದನಾಗಿರುವುದಲ್ಲದೆ ಕೆಲವು ಚಲನಚಿತ್ರಗಳಲ್ಲಿ ಹಾಗು ಟಿ.ವಿ. ಯಲ್ಲಿಯೂ ಸಹ ಅಭಿನಯಿಸಿ ಜನಮೆಚ್ಚುಗೆ ಗಳಿಸಿದ್ದಾರೆ. ಇವರಿಗೆ ನಾಡಿನ ಹಲವಾರು ಸಂಘ–ಸಂಸ್ಥೆಗಳು ಬಿರುದುಗಳನ್ನು ಕೊಟ್ಟು ಸನ್ಮಾನ ಪತ್ರಗಳನ್ನು ನೀಡಿವೆ.

---



## ರಾಜೇಶ್

ರಂಗಭೂಮಿಯ ಚಟುವಟಿಕೆಯಿಂದ ಬೆಳ್ಳಿತೆರೆಗೆ ಬಂದು, ಜನಮನದಲ್ಲಿ ನಾಯಕ ನಟರಾಗಿ ನೆಲೆಯೂರಿದವರು ರಾಜೇಶ್, ಸುದರ್ಶನ ಕಲಾಸಂಘದ ಮೂಲಕ ರಂಗಭೂಮಿಗೆ ಬಂದ ಇವರು, ಕರ್ನಾಟಕ ಕಲಾಸಂಘದ ಮೂಲಕ 'ಎಚ್ಚಮ ನಾಯಕ'ನಾಗಿ ತಮ್ಮ ಅಭಿನಯದ ಶೈಲಿಯಿಂದ ಪ್ರಖ್ಯಾತರಾದರು. ಮುಂದೆ, ಸಂಸಾರ ನೌಕದಲ್ಲೂ ಇವರು 'ಸುಂದರ್'ನ ಪಾತ್ರದಲ್ಲಿ ಹೆಸರು ಗಳಿಸಿದರು. ಭಾರತಮಾತ ಥಿಯಟ್ರಿಕಲ್ ಕಂಪನಿ, ನಂತರದಲ್ಲಿ ತಮ್ಮದೇ ನೇತೃತ್ವದ ಶಕ್ತಿ ನಾಟಕ ಮಂಡಳಿಗಳಲ್ಲಿ ತಮ್ಮದೇ ಸ್ವಂತ ರಚನೆಯ 10 ಸಾಮಾಜಿಕ ನಾಟಕಗಳನ್ನು ನಿರ್ದೇಶಿಸಿ ನಟಿಸಿದರು. ದಿ. ಸುಬ್ಬಯ್ಯ ನಾಯ್ಡು ಅವರ ಶ್ರೀ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಲಿಯಲ್ಲೂ ಅಭಿನಯಿಸಿದ ಇವರು 1936ರಲ್ಲಿ 'ನಮ್ಮ ಊರು' ಚಿತ್ರದಲ್ಲಿ ನಾಯಕ ನಟರಾಗಿ ಚಿತ್ರರಂಗ ಪ್ರವೇಶಿಸಿದರು.

ಚಲನಚಿತ್ರದ ಅಭಿನಯದ ಜೊತೆಜೊತೆಗೇ ಉತ್ತರ ಕರ್ನಾಟಕದ ವೃತ್ತಿ ಕಂಪನಿಗಳಲ್ಲಿ, ಬೆಂಗಳೂರಿನ ಹವ್ಯಾಸಿ ರಂಗದಲ್ಲಿ ನಿರಂತರವಾಗಿ ಅಭಿನಯಿಸುತ್ತಾ ಬಂದಿದ್ದು, ತಮ್ಮ ಕಲಾಸೇವೆಯನ್ನು ಮುಂದುವರಿಸಿದ್ದಾರೆ.

---



## ಎಂ.ಇ. ಗುಂಡಪ್ಪ (ಅಂಕೇಗೌಡ)

ಬೆಂಗಳೂರು ಜಿಲ್ಲೆ ಚೆನ್ನಪಟ್ಟಣ ತಾಲ್ಲೂಕಿನವರಾದ ಗುಂಡಪ್ಪನವರು ಸಿ.ಐ.ಡಿ. ಗುಂಡಪ್ಪ ಅಥವಾ 'ರಂಗಸಿಂಹ ಗುಂಡಪ್ಪ' ಎಂದೇ ಹೆಸರಾದವರು.

ಕರ್ನಾಟಕ ಪೊಲೀಸ್ ಇಲಾಖೆಯ ಸಬ್‌ಇನ್ಸ್‌ಪೆಕ್ಟರಾಗಿ ನಿವೃತ್ತರಾಗಿರುವ ಶ್ರೀಯುತರು ತಮ್ಮ ವೃತ್ತಿಯ ಜೊತೆಗೆ ನಾಟಕಾಭಿನಯ ಪ್ರವೃತ್ತಿಯನ್ನು ಬೆಳೆಸಿಕೊಂಡವರಾಗಿದ್ದಾರೆ.

ಮೊದಲಿಗೆ ಹಳ್ಳಿಯಲ್ಲಿ 'ದಾನಶೂರ ಕರ್ಣ' ನಾಟಕದ ಸೋಮಪ್ರಭೆಯಾಗಿ ರಂಗಪ್ರವೇಶ ಮಾಡಿದ ಗುಂಡಪ್ಪನವರು, ನಂತರ ಮಹಾಭಾರತ, ಕುರುಕ್ಷೇತ್ರ, ದಾನಶೂರಕರ್ಣ, ಶ್ರೀಕೃಷ್ಣ ಗಾರುಡಿ, ವಿರಾಟಪರ್ವ, ಈ ನಾಟಕಗಳಲ್ಲಿ ಅರ್ಜುನ, ಕೃಷ್ಣ ಮುಂತಾದ ಪಾತ್ರಗಳನ್ನು ಮಾಡುತ್ತಿದ್ದರು. ನಂತರ ಬೆಂಗಳೂರಿನಲ್ಲಿ ಉದ್ಯೋಗ ಸ್ಥಿರವಾದ ಮೇಲೆ ಖ್ಯಾತ ನಾಟಕ ಮಾಸ್ತರರುಗಳಾದ ಟೋಪಿ ಮುನಿಸ್ವಾಮಪ್ಪ, ಶಂಕರಾಚಾರ್ಯ ಹಾಗೂ ದೊಡ್ಡಮುನಿಸ್ವಾಮಪ್ಪ ಅವರುಗಳ ನಿರ್ದೇಶನದಲ್ಲಿ ಭೀಮ, ದುರ್ಯೋಧನ, ಕಂಸ ಮುಂತಾದ 'ಗಂಡು' ಪಾತ್ರಗಳನ್ನು ನಿರ್ವಹಿಸಿದರು.

ಕೀರ್ತಿಶೇಷರಾದ ಹಿರಣ್ಣಯ್ಯನವರ 'ಎಚ್ಚಮ ನಾಯಕ' ನಾಟಕದಲ್ಲಿ ಗುಂಡಪ್ಪನವರು ಎಚ್ಚಮನಾಯಕ, ಚಾಂದ್‌ಖಾನ್ ಹಾಗೂ ಬಾದಶಹ ಪಾತ್ರಗಳಲ್ಲಿ ಹೆಸರಾಗಿದ್ದರು. ನಾಟಕ ಹಾಗೂ ಚಲನಚಿತ್ರಗಳಲ್ಲಿ ಖ್ಯಾತರಾದ ಉದಯಕುಮಾರ್, ನರಸಿಂಹರಾಜು, ಬಾಲಕೃಷ್ಣ, ಭದ್ರಾಚಲಂ ಇವರುಗಳ ಸಹ ನಟರಾಗಿದ್ದರು.

---



## ಶಾರದ ಶೇಷಾದ್ರಿ

ಬಿ.ಇ.ಎಂ.ಎಲ್., ಕೆ.ಜಿ.ಎಫ್. ನ ಕೇಂದ್ರೀಯ ವಿದ್ಯಾಲಯದಲ್ಲಿ ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀಮತಿ ಶಾರದ ಶೇಷಾದ್ರಿಯವರದು ಬಹುಮುಖ ಪ್ರತಿಭೆ. ಉತ್ತಮ ಶಿಕ್ಷಕಿಯಾಗಿರುವ ಜೊತೆಗೆ ಕೆ.ಜಿ.ಎಫ್. ನ ಸಾಂಸ್ಕೃತಿಕ ರಂಗದಲ್ಲಿ ಉತ್ತಮ ನಟಿಯಾಗಿ, ನಿರ್ದೇಶಕರಾಗಿ 20 ವರ್ಷಕ್ಕಿಂತಲೂ ಹೆಚ್ಚು ಕಾಲದಿಂದ ಕ್ರಿಯಾಶೀಲರಾಗಿದ್ದಾರೆ. ರಾಜ್ಯಮಟ್ಟದ ನಾಟಕ ಸ್ಪರ್ಧೆಗಳಲ್ಲಿ, ಕೈಗಾರಿಕಾ ನಾಟಕ ಸ್ಪರ್ಧೆಗಳಲ್ಲಿ 1972ರಿಂದ ಬಹುತೇಕ ಎಲ್ಲಾ ವರ್ಷಗಳಲ್ಲೂ ಉತ್ತಮ ನಟನೆ ಬಹುಮಾನ ಪಡೆದಿದ್ದಾರೆ.

ಜೋಕುಮಾರಸ್ವಾಮಿ, ಸಂಗ್ಯಾ ಬಾಳ್ಯ, ಬಾಕಿ ಇತಿಹಾಸ, ಅಶ್ವತ್ಥಾಮನ್, ಸಾಕ್ರಟೀಸ್, ಒಡಲಾಳ, ಅಧೆ ಅಧೂರೆ, ಹುಲಿಯ ನೆರಳು ಹೀಗೆ 30ಕ್ಕೂ ಹೆಚ್ಚು ನಾಟಕಗಳಲ್ಲಿ ನಟಿಸಿ ಜನಮೆಚ್ಚುಗೆ ಗಳಿಸಿರುವ ಇವರು, ಮಹಿಳಾ ತಂಡಗಳನ್ನು ಕಟ್ಟಿ, ನಾಟಕಗಳನ್ನು ಯಶಸ್ವಿಯಾಗಿ ನಿರ್ದೇಶಿಸಿದ್ದಾರೆ.

---



## ಶ್ರೀನಾಥಬಾಬು ಎಸ್.ಆರ್.

ಶಾಲಾದಿನಗಳಿಂದಲೇ ರಂಗಭೂಮಿಯತ್ತ ಆಕರ್ಷಣೆ. ರಾಜ್ಯ ಮಟ್ಟ ಹಾಗು ರಾಷ್ಟ್ರಮಟ್ಟದ ಸ್ಪರ್ಧೆಗಳಲ್ಲಿ ಭಾಗಿಯಾಗಿ ಪ್ರಶಸ್ತಿ ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ ಶ್ರೀನಾಥಬಾಬು ಅವರು.

ಕಲ್ಚರಲ್ ಅಕಾಡೆಮಿ, ಬೆಂಗಳೂರು ಇದರ ಸಂಘಟನಾ ಕಾರ್ಯದರ್ಶಿಯಾದ ಇವರು ರಕ್ತಾಂಜಲಿ, ಕಿತ್ತೂರು ರಾಣಿ ಚೆನ್ನಮ್ಮ, ರಣಕಹಳೆ, ಟಿಪ್ಪು, ಎಚ್ಚಮನಾಯಕ, ಶಿವಶಕ್ತಿ, ಭೂಕೈಲಾಸ ಮುಂತಾಗಿ ಐತಿಹಾಸಿಕ ಹಾಗು ಪೌರಾಣಿಕ ನಾಟಕಗಳಲ್ಲಿ ವಿಶೇಷ ಭಾಗಿಯಾಗಿದ್ದಾರೆ. ಕಾರ್ಮೋಡ, ನಂದಾದೀಪ, ಹಂಬಲ, ಪಿತೃದರ್ಶನ ಮುಂತಾದ ಸಾಮಾಜಿಕ ನಾಟಕಗಳಲ್ಲೂ ಬಾಗಿಯಾಗಿರುವ ಇವರು ಎಲೆಮರೆಕಾಯಿಯಂತೆ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ.



## ಎನ್.ಈ. ಶ್ರೀಕಂಠಯ್ಯ

ಬೆಂಗಳೂರು ಕಲಾಕ್ಷೇತ್ರದಲ್ಲಿ ಚಿರಪರಿಚಿತರು ಶ್ರೀಕಂಠಯ್ಯ. ನಾಟಕದ ರಿಹರ್ಸಲ್ ನೋಡುತ್ತಾ, ನೋಡುತ್ತಾ ನಟರಾಗುವ ಆಸೆ ಮೂಡಿತು ಇವರಿಗೆ. ಜೊತೆಜೊತೆಗೆ ಹಿರಿಯರ ಒತ್ತಾಸೆಯೂ ಕೂಡಿತು.

20 ವರ್ಷಗಳ ಹಿಂದೆ ಬಣ್ಣ ಹಚ್ಚಿದ ಶ್ರೀಕಂಠಯ್ಯ ಇಂದು ಹವ್ಯಾಸಿ ಹಾಗೂ ವೃತ್ತಿ ರಂಗಭೂಮಿಯ ನಟರಲ್ಲಿ ವಿಶಿಷ್ಟ ಸ್ಥಾನ ಗಳಿಸಿದ್ದಾರೆ.

ಜೋಕುಮಾರಸ್ವಾಮಿ, ಕತ್ತಲೆ ಬೆಳಕು, ಕಾಡು, ಸಪ್ನ ನೌಕೆ, ತಬ್ಬಲಿ, ಸಂದರ್ಭ ಮುಂತಾದ 60ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಹಲವಾರು ಬಾರಿ ಉತ್ತಮ ನಟ ಪ್ರಶಸ್ತಿ ಪಡೆದಿರುವ ಇವರು, ನಾಟಕ ರಚನೆ, ಚಿತ್ರ ಸಂಭಾಷಣೆ ಹಾಗು ನಿರ್ದೇಶನದಲ್ಲೂ ಪರಿಣತಿ ಸಾಧಿಸಿದ್ದಾರೆ. ತಮ್ಮ ಅಭಿನಯ ಚಾತುರ್ಯ ಹಾಗು ಧ್ವನಿಯಿಂದ ಮೋಡಿಮಾಡಿರುವ ಶ್ರೀಕಂಠಯ್ಯ ಅಪರೂಪದ ಪ್ರತಿಭೆ.



## ಎಸ್. ಲಕ್ಷ್ಮಿದೇವಿ

ಬಾಲ್ಯದಿಂದ ಬೆಳೆದು ಬಂದ ಸಂಗೀತದ ಅಭಿರುಚಿ ಲಕ್ಷ್ಮಿದೇವಿಯವರನ್ನು ವೃತ್ತಿರಂಗದ ಪ್ರಸಿದ್ಧ ಗಾಯಕಿಯಾಗುವಂತೆ ಪ್ರೇರೇಪಿಸಿತು.

ಶಾಸ್ತ್ರೀಯ ಸಂಗೀತದ ಕಲಿಕೆಯ ಜೊತೆಜೊತೆಗೇ ರಂಗಭೂಮಿಯ ನಂಟನ್ನು ಬೆಳೆಸಿಕೊಂಡ ಇವರು ನಾಟ್ಯಾಚಾರ್ಯ ಶ್ರೀನಿವಾಸ ಕುಲಕರ್ಣಿಯವರಲ್ಲಿ ನೃತ್ಯಾಭಿನಯ, ಮದ್ರಾಸಿನ ಗೋಟುವಾದ್ಯ ವಿದ್ವಾಂಸರಾದ ಶ್ರೀ ಶ್ರೀನಿವಾಸ ಅಯ್ಯಂಗಾರ್, ಮೈಸೂರಿನ ಆಸ್ಥಾನವಿದ್ವಾನ್ ದೇವೇಂದ್ರಪ್ಪ ಚಿಕ್ಕಕೋಡಿ ನಾರಾಯಣ ಶಾಸ್ತ್ರಿಗಳಲ್ಲಿ ಹಾಗು ದಾವಣಗೆರೆಯ ಶ್ರೀ ರಾಯಣ್ಣ ಮತ್ತು ಶ್ರೀ ನಾಗೇಶ್ವರರಾವ್ ಅವರಲ್ಲಿ ಸಂಗೀತ ಅಭ್ಯಾಸ ಮಾಡಿದರು.

ಗುಬ್ಬಿ ಕಂಪನಿ, ಗರೂಡ ಸದಾಶಿವರಾಯರ ಕಂಪನಿ, ಕೆ.ಬಿ.ಆರ್. ಡ್ರಾಮಾ ಕಂಪನಿಯಲ್ಲಿ ಪ್ರಮುಖ ಗಾಯಕಿಯಾಗಿ ಸೇವೆ ಸಲ್ಲಿಸಿರುವ ಇವರು ಪ್ರಸ್ತುತ, ತಮ್ಮ ಗುರುಗಳು ನಡೆಸುತ್ತಿದ್ದ ದಾವಣಗೆರೆಯ ನಾಟ್ಯ ಭಾರತಿ ಕಲಾಕೇಂದ್ರದ ನೇತೃತ್ವವನ್ನು ವಹಿಸಿಕೊಂಡು ಭರತನಾಟ್ಯ ತರಗತಿಗಳನ್ನು ನಡೆಸುತ್ತಿದ್ದಾರೆ.

ಕನ್ನಡ ವೃತ್ತಿರಂಗಭೂಮಿ ಕಂಡ ಅಪರೂಪದ ಗಾಯಕಿ ಇವರು. ಅನೇಕ ವೃತ್ತಿ ಕಂಪನಿಗಳ ನಾಟಕಗಳಿಗೆ ಇವರು ನೃತ್ಯಸಂಯೋಜನೆಯನ್ನು ವಿಶಿಷ್ಟವಾಗಿ ಮಾಡಿ ಖ್ಯಾತರಾಗಿದ್ದಾರೆ.



## ಸೋಮಶೇಖರಯ್ಯ ಶಿವಲಿಂಗಯ್ಯ ಹಿರೇಮಠ

ರಂಗ ಸಂಗೀತದಲ್ಲಿ ತಮ್ಮ ಹಿರಿಮೆಯನ್ನು ಸಾಧಿಸಿರುವ ಎಸ್.ಎಸ್. ಹಿರೇಮಠ ಅವರು ಬಾಲ್ಯದಿಂದಲೇ ಶಾಸ್ತ್ರೀಯ ಸಂಗೀತವನ್ನು ಆಳವಾಗಿ ಅಭ್ಯಾಸ ಮಾಡಿದವರು.

ತಮ್ಮ 6ನೇ ವಯಸ್ಸಿಗೆ ಸಂಗೀತ ಶಿಕ್ಷಣಕ್ಕೆ ಅರ್ಪಿಸಿಕೊಂಡ ಇವರು 16 ವರ್ಷಗಳ ಸಾಧನೆ ಮಾಡಿದರು. ಶ್ರೀ ರಂಗೋ ನಾರಾಯಣಮೊಸಳಿ ಇವರ ಗುರುಗಳು. ಸಂಗೀತದ ಉನ್ನತ ಪದವಿಗಳನ್ನು ಪಡೆದ ಇವರು ಆಕಾಶವಾಣಿ ಕಲಾವಿದರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಶ್ರೀ ಸಂಗಮೇಶ್ವರ ನಾಟ್ಯ ಸಂಘ ಗುಡಗೇರಿ, ಶ್ರೀ ಕೆ.ಬಿ.ಆರ್. ಡ್ರಾಮ ಕಂಪನಿ ದಾವಣಗೆರೆ ಹಾಗು ಗುಬ್ಬಿ ಕಂಪನಿಯಲ್ಲಿ 33 ವರ್ಷಗಳಿಂದಲೂ ಹೆಚ್ಚುಕಾಲ ಸಂಗೀತ ನಿರ್ದೇಶಕರಾಗಿ ಹಾಗು ಗಾಯಕರಾಗಿ ಸೇವೆ ಸಲ್ಲಿಸಿದ್ದಾರೆ. ಪ್ರಸ್ತುತ ತಮ್ಮ ಸ್ವಂತ ಊರಾದ ಕಿತ್ತೂರಿನಲ್ಲಿ ಸಂಗೀತ ಶಾಲೆಯನ್ನು ನಡೆಸುತ್ತಿದ್ದಾರೆ.



## ವಿರೂಪಾಕ್ಷ ನಾಯಕ

ನಾಟಕ ಚಟುವಟಿಕೆಯ ಜೊತೆಜೊತೆಗೆ, ಈ ಮಾಧ್ಯಮದ ಪ್ರಚಾರ ಹಾಗು ದಾಖಲಾತಿಗಾಗಿ ಒಂದು ರಂಗಪತ್ರಿಕೆಯನ್ನು ನಡೆಸುತ್ತಿರುವ ಸಾಹಸಿ ವಿರೂಪಾಕ್ಷ ನಾಯಕ. ಧಾರವಾಡ ಜಿಲ್ಲೆಯವರಾದ ಇವರು 4 ದಶಕಗಳಿಂದ ಧಾರವಾಡದ ರಂಗತಂಡಗಳೊಂದಿಗೆ ನಿಕಟ ಸಂಪರ್ಕ ಹೊಂದಿ ಚಟುವಟಿಕೆ ನಡೆಸುತ್ತಿದ್ದಾರೆ. ರಂಗಭೂಮಿಗೆ ಸಂಬಂಧಿಸಿದ ಪತ್ರಿಕೆಯೊಂದು ಉತ್ತರ ಕರ್ನಾಟಕದಲ್ಲಿ ಇಲ್ಲದಿರುವ ಕೊರತೆಯನ್ನು ನೀಗಲು 1985ರಲ್ಲಿ 'ರಂಗತೋರಣ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿ, ನಿರಂತರವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಹಲವಾರ ಸಂಘಸಂಸ್ಥೆಗಳ ಪದಾಧಿಕಾರಿಯಾಗಿಯೂ ಕಾರ್ಯ ನಿರ್ವಹಿಸುತ್ತಿರುವ ಇವರಿಗೆ, ಕನ್ನಡ ರಂಗಭೂಮಿಯ ಖ್ಯಾತ ನಾಮರ ಜೊತೆ ಕಾರ್ಯ ಮಾಡಿದ ಅನುಭವವಿದೆ. ರಂಗಾಯಣದ ಮಾದರಿ ರಂಗಶಿಕ್ಷಣ ಕೇಂದ್ರದ ಕನಸನ್ನು ಹೊತ್ತಿರುವ ಇವರು ಅನೇಕ ಪ್ರಶಸ್ತಿ ಗೌರವಗಳಿಗೆ ಪಾತ್ರರಾಗಿದ್ದಾರೆ.



## ಎಂ.ಎಸ್. ನರಸಿಂಹಮೂರ್ತಿ

ಶ್ರೀರಂಗರ ರಂಗ ತರಬೇತಿ ಶಿಬಿರದ ಮೂಲಕ ನಾಟಕ ರಂಗಕ್ಕೆ ಬಂದ ಶ್ರೀಯುತರು ದಿ. ಹೆಚ್.ಎಲ್. ಸಿಂಹ, ಕು.ರಾ.ಸಿ. ಅವರೊಂದಿಗೆ ನಾಟಕಗಳನ್ನಾಡಿದರು. ಭಾರತೀಯ ವಿದ್ಯಾಭವನದ ಸಂಪರ್ಕ ಹಾಗು ಹತ್ತಾರು ವಿದ್ವಾಂಸರ ಒಡನಾಟದಿಂದ ಪ್ರೇರಿತರಾಗಿ ಸಾಹಿತ್ಯ ಕೃಷಿಯಲ್ಲಿ ತೊಡಗಿದರು. ನಾಟಕ, ಶಾಸ್ತ್ರ, ಹಾಗು ನಾಟಕಮಾಧ್ಯಮದ ಬಗ್ಗೆ ಕೃತಿಗಳನ್ನು ರಚಿಸಲು ಇವರಿಗೆ ಪ್ರೇರಣೆ ದೊರೆತು, ಭಾರತೀಯ ರಂಗಭೂಮಿಯ ಬಗ್ಗೆ

ಕೃತಿಯನ್ನು ಬರೆದರೂ, ಪ್ರಕಟಣೆಯ ಭಾಗ್ಯ ಕಾಣದೆ ಇನ್ನೂ ಹಸ್ತಪ್ರತಿಯಲ್ಲಿದೆ. 'ದಶರೂಪಕ' ಇವರು ರಚಿಸಿರುವ ಫಲಕಗಳು ನಾಟಕ ಶಿಕ್ಷಣಾರ್ಥಿಗಳಿಗೆ ಹಾಗು ಭರತನಾಟ್ಯ ವಿದ್ಯಾರ್ಥಿಗಳಿಗೆ ಉತ್ತಮ ಮಾರ್ಗದರ್ಶನ ಗ್ರಂಥವಾಗಿವೆ. ತಾವು ಚಿತ್ರಿಸಿರುವ ಫಲಕಗಳನ್ನು ರಾಷ್ಟ್ರದ ಮುಖ್ಯ ಕೇಂದ್ರಗಳಲ್ಲಿ ಪ್ರದರ್ಶಿಸಿರುವ ಇವರು ಹತ್ತಾರು ನಾಟಕಗಳನ್ನು ರಚಿಸಿದ್ದಾರೆ. ಅನೇಕ ವಿದ್ವತ್ ಕೃತಿಗಳನ್ನು ರಚಿಸಿದ್ದರೂ, ಎಲ್ಲವೂ ಹಸ್ತಪ್ರತಿಯಲ್ಲಿವೆ. ರಂಗಭೂಮಿಯಲ್ಲಿ ಅತೀವ ಆಸಕ್ತಿ ಹೊಂದಿರುವ ಇವರು, ದಶರೂಪಕ, ಭಾರತೀಯ ಸಂಪ್ರದಾಯಿಕ ರಂಗಭೂಮಿ ಕುರಿತಂತೆ 162 ವಿವರಣಾ ಫಲಕಗಳನ್ನು ರಚಿಸಿದ್ದಾರೆ.



## ಬಿ.ಜಿ. ರಾಮಕೃಷ್ಣ

ಕಿರಿವಯಸ್ಸಿನಲ್ಲೇ ಹಿರಿಯ ಸಾಧನೆ ಮಾಡಲು ನಿರಂತರ ರಂಗಚಟುವಟಿಕೆಯಿಂದ ಶ್ರಮಿಸುತ್ತಿರುವ ರಾಮಕೃಷ್ಣ ಅವರದು ಬಹುಮುಖಿ ಸಾಧನೆ. ನಾಟಕ ರಚನೆ, ಅಭಿನಯ, ನಿರ್ದೇಶನದೊಂದಿಗೆ ಬೆಂಗಳೂರಿನ ಹತ್ತಾರು ರಂಗತಂಡಗಳಲ್ಲಿ ಸಕ್ರಿಯ ಸದಸ್ಯರಾಗಿದ್ದಾರೆ. ಅನೇಕ ನಾಟಕಗಳ ನಿರ್ದೇಶನಕ್ಕೆ ಹಾಗು ನಟನೆಗೆ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿರುವ ಇವರು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಬೀದಿ ನಾಟಕವನ್ನು ಆರಿಸಿಕೊಂಡಿದ್ದಾರೆ.

ಹಸಿವು ನಿದ್ರೆಗಳನ್ನು ದೂರಮಾಡಿ, 24 ಗಂಟೆಗಳ ಸತತ ನಾಟಕ ಪ್ರದರ್ಶನವನ್ನು ಇದೇ ವರ್ಷದ (1994) ವಿಶ್ವರಂಗಭೂಮಿ ದಿನಾಚರಣೆಯ ಸಂದರ್ಭದಲ್ಲಿ ನೀಡಿರುವುದು ಇವರ ವಿಶಿಷ್ಟ ಸಾಧನೆಯಾಗಿದೆ. ಗೆಳೆಯ ಶಿವಶಂಕರ ಅವರೊಂದಿಗೆ ಈ ಸಾಧನೆ ಗೈದಿರುವ ರಾಮಕೃಷ್ಣ 'ಮಯೂರ ವೇದಿಕೆ'ಯ ಮೂಲಕ ಸಾಮಾಜಿಕ ಕಳಕಳಿಯ ಪ್ರಯೋಗಗಳನ್ನು ಮಾಡುತ್ತಿದ್ದಾರೆ.



## ಎಂ. ಶಿವಶಂಕರ್

ಬಾಲ್ಯದ ರಂಗಾಸಕ್ತಿ, ಶಾಲಾದಿನಗಳಲ್ಲಿ ಪ್ರೋತ್ಸಾಹದಿಂದ ಶಿವಶಂಕರ್ ಚಿಕ್ಕ ವಯಸ್ಸಿನಲ್ಲೇ ಹಿರಿಯ ಸಾಧನೆ ಮಾಡಿದ್ದಾರೆ.

ಅಭಿನಯ, ಪ್ರಸಾಧನ, ನಿರ್ದೇಶನ, ಉಡುಪು ವಿನ್ಯಾಸ ಮುಂತಾದ ವಿಭಾಗಗಳಲ್ಲಿ ಪರಿಣತಿಯನ್ನು ಪಡೆದಿರುವ ಇವರು ಕುರಿದೊಡ್ಡಿಕ್ಷೇತ್ರ, ಫಾದರ್, ದೊಡ್ಡಪ್ಪ, ತಲೆದಂಡ, ಜೋಕುಮಾರಸ್ವಾಮಿ, ಬಂದರೋ ಬಂದರು, ದೇವರ ಹೆಣ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

ಇವರ ಮುಖ್ಯ ಸಾಧನೆ ಎಂದರೆ ಗೆಳೆಯ ಬಿ.ಜಿ. ರಾಮಕೃಷ್ಣ ಇವರೊಂದಿಗೆ ಸೇರಿ ನಿರಂತರ, ಸತತ 24 ಘಂಟೆಗಳು ರಾತ್ರಿ ಹಗಲೆನ್ನದೆ ನಾಟಕ ಪ್ರದರ್ಶನ ನೀಡಿ ದಾಖಲೆ ನಿರ್ಮಿಸಿದ್ದಾರೆ.

ದೇಶದ ಅನೇಕ ನಗರಗಳಲ್ಲಿ ಇವರು ಬೀದಿ ನಾಟಕ ಹಾಗು ರಂಗ ನಾಟಕಗಳನ್ನು ಪ್ರದರ್ಶಿಸಿದ್ದಾರೆ.



## ಕೆ. ಆನಂದ ಗಾಣಿಗ

ನಾಲ್ಕು ದಶಕಗಳಿಂದ ನಿರಂತರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಆನಂದ ಗಾಣಿಗ ಅವರು ತಮ್ಮ ವೃತ್ತಿಯಲ್ಲಿ ಬಂದ ಬಡ್ತಿಗಳನ್ನೆಲ್ಲಾ ರಂಗಚಟುವಟಿಕೆಯ ಕಾರಣದಿಂದ ಬಿಟ್ಟುಕೊಟ್ಟು ಬೆಳೆದಿದ್ದಾರೆ.

ನಿರ್ದೇಶಕ, ನಟ, ನಾಟಕಕಾರ ಹಾಗೂ ಸಂಘಟಕರಾಗಿ ನಿರಂತರ ರಂಗಚಟುವಟಿಕೆಯ ಚೈತನ್ಯದ ಬುಗ್ಗೆಯಾಗಿರುವ ಇವರು ಯಕ್ಷಗಾನದಲ್ಲೂ ಪರಿಣತಿ ಸಾಧಿಸಿದ್ದಾರೆ.

ಉಡುಪಿಯನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡು 'ರಂಗಭೂಮಿ' ಸಂಸ್ಥೆಯ ಮೂಲಕ ಇವರು ನಡೆಸಿರುವ ಚಟುವಟಿಕೆಗಳು ಅಗಣಿತ, ನಾಟಕ ರಚನಾ ಸ್ಪರ್ಧೆಗಳು, ನಾಟಕೋತ್ಸವಗಳು, ಕನ್ನಡ, ಕೊಂಕಣಿ ಭಾಷೆಗಳ ನಾಟಕ ಸ್ಪರ್ಧೆಗಳು, ಹಿರಿಯ ರಂಗ ಚೇತನಗಳಿಗೆ ಸನ್ಮಾನ, ರಂಗತರಬೇತಿ ಶಿಬಿರ, ವಿಚಾರ ಸಂಕಿರಣ ಹೀಗೆ ಇವರ ಚಟುವಟಿಕೆಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

ಕರ್ನಾಟಕದಾದ್ಯಂತವಲ್ಲದೆ ಹೊರರಾಜ್ಯಗಳಲ್ಲಿ, ಕೊಲ್ಲಿ ರಾಷ್ಟ್ರಗಳಲ್ಲಿ ಇವರ ಸಂಸ್ಥೆಯ ನಾಟಕ ಪ್ರದರ್ಶನ ನಡೆದಿವೆ.



## ಅಬ್ದುಲ್‌ಸಾಬ ಅಣ್ಣಿಗೇರಿ

ತಮ್ಮ ಪ್ರೌಢಶಿಕ್ಷಣವನ್ನು ಮುಗಿಸುತ್ತಿದ್ದಂತೆ, ರಂಗಭೂಮಿಯಿಂದ ಆಕರ್ಷಿತರಾಗಿ ಸಮಾಜವಿಕಾಸ ನಾಟ್ಯ ಸಂಘ ದೊಡ್ಡವಾಡದಲ್ಲಿ ಸ್ತ್ರೀ ಪಾತ್ರಧಾರಿಯಾಗಿ ರಂಗಪ್ರವೇಶ ಮಾಡಿದವರು ಅಬ್ದುಲ್‌ಸಾಬ ಅಣ್ಣಿಗೇರಿ. ಇವರ ಪೂರ್ಣ ಹೆಸರು ಅಬ್ದುಲ್‌ಖಾದರ್ ಮದಾಸನ ಸಾಹೇಬ ಥಾಲಾಯತ್, ಮುಂದೆ ಅಮರೇಶ್ವರ ನಾಟ್ಯಸಂಘ, ಗವಾಯಿಗಳ ಕಂಪನಿಯಲ್ಲಿ, ಎ.ಎಸ್. ಪೇಟಾರ ಕಂಪನಿ, ಸೂಳ್ಯದೇಸಾಯಿರ ಕಂಪನಿಗಳಲ್ಲಿ ತಮ್ಮ ರಂಗಭೂಮಿ ಅನುಭವವನ್ನು ಹೆಚ್ಚಿಸಿಕೊಂಡರು.

ಸಾಮಾಜಿಕ, ಐತಿಹಾಸಿಕ, ಪೌರಾಣಿಕ ನಾಟಕಗಳಲ್ಲಿ ಮುಖ್ಯಪಾತ್ರವನ್ನು ಮಾಡಿದ್ದ ಇವರು ಮುಂದೆ ಗುಬ್ಬಿಕಂಪನಿಯಲ್ಲೂ ತಮ್ಮ ಸೇವೆ ಸಲ್ಲಿಸಿದರು. ಇವರ ರಾಮ, ಸಿದ್ಧಲಿಂಗೇಶ್ವರ ಪಾತ್ರಗಳು ಮನೆಮಾತಾಗಿದ್ದವು.

ಕಂಪನಿ ಕಲಾವಿದರನ್ನು ಸಂಘಟಿಸುವಲ್ಲಿ ಕಲಾವಿದರ ಜಾಥದ ಪ್ರಮುಖ ಪಾತ್ರಧಾರಿಯಾಗಿ ಕರ್ನಾಟಕಾದ್ಯಂತ ಸಂಚರಿಸಿದ ಇವರು ಸಂಗೀತವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದ್ದಾರೆ... ರಂಗಭೂಮಿಯ ಅನುಭವದೊಟ್ಟಿಗೆ ಅನೇಕ ಚಲನಚಿತ್ರಗಳಲ್ಲೂ ಅಭಿನಯಿಸಿ ಮೆಚ್ಚುಗೆಗಳಿಸಿದ್ದಾರೆ.



## ಅನಂತ ಕಲ್ಲೋಳ

ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಅದರಲ್ಲೂ ಹಾಸ್ಯ ಲೇಖನಗಳಲ್ಲಿ ಸಿದ್ಧಹಸ್ತರಾದ ಅನಂತಕಲ್ಲೋಳ ಅವರು. ಅನೇಕ ನಾಟಕಗಳನ್ನು ರಚಿಸಿದ್ದಾರೆ. ಪ್ರಮುಖ ಪತ್ರಿಕೆಗಳ ವಿಶೇಷಾಂಕಗಳಲ್ಲಿ ತಮ್ಮ ನಾಟಕಗಳನ್ನು ಪ್ರಕಟಪಡಿಸುವುದರ ಜೊತೆಗೆ ಅನೇಕ ಪ್ರಶಸ್ತಿಗಳನ್ನು ಪಡೆದಿದ್ದಾರೆ.

ಆದೇದಾರಿ, ಅದಲು ಬದಲು ಕಂಚೀಕದಲು, ಕುಂಟುಕಾಲಿನ ವೈದ್ಯ, ಮುಂತಾದ ನಾಟಕಗಳಿಗೆ ಪ್ರಶಸ್ತಿಗಳನ್ನು ಗಳಿಸಿರುವ ಇವರು. ಅನೇಕ ನಗೆಬರಹಗಳ ಸಂಕಲನಗಳನ್ನು, ಕಥಾಸಂಕಲನಗಳನ್ನು ಹೊರ ತಂದಿದ್ದಾರೆ. ನಿರಂತರವಾಗಿ ಪತ್ರಿಕೆಗಳಿಗೆ ನಾಟಕ ಸಾಹಿತ್ಯ ಹಾಗೂ ಇನ್ನಿತರ ಪ್ರಾಕಾರ ಕುರಿತು ಲೇಖನಗಳನ್ನು ಬರೆಯುತ್ತಾ ಖ್ಯಾತರಾಗಿರುವ ಇವರು ಬೆಳಗಾವಿಯವರು.

---



## ಹರಿಕಥೆ ವೆಂಕಟೇಶಮ್ಮ

ಕರ್ನಾಟಕವು ಸೇರಿದಂತೆ ಆಂಧ್ರ, ರಾಜಸ್ತಾನ್ ಹಾಗೂ ರಾಜಧಾನಿ ದೆಹಲಿಯಲ್ಲಿ ತಮ್ಮ ಹರಿಕಥೆಗಳ ಮೂಲಕ ಸಾಂಸ್ಕೃತಿಕ ಹರಿಕಾರರಾಗಿ ಕರ್ನಾಟಕದ ಪರಂಪರೆಯನ್ನು ಬೆಳೆಸುವಲ್ಲಿ ಶ್ರಮಿಸಿರುವ ಹರಿಕಥೆ ವೆಂಕಟೇಶಮ್ಮ ಬಾಲ್ಯದಿಂದಲೇ ಹರಿಕಥೆ ಕಾರ್ಯಕ್ರಮ ನೀಡುತ್ತಾ ಬಂದಿದ್ದಾರೆ.

ಇವರ ಪ್ರತಿಭೆಯನ್ನು ಕಂಡ ನಾಟಕರತ್ನ ಗುಬ್ಬಿ ವೀರಣ್ಣನವರು ತಮ್ಮ ಕಂಪನಿಗೆ ಸೇರಿಸಿಕೊಂಡರು. 30 ವರ್ಷಗಳ ಸತತ ರಂಗನಟನೆಯ ಅಪಾರ ಅನುಭವ ಇವರದಾಗಿದೆ. ಉತ್ತರ ಕರ್ನಾಟಕದ ಅನೇಕ ಕಂಪನಿಗಳಲ್ಲೂ ನಟಿಸಿರುವ ವೆಂಕಟಮ್ಮ ಹಲವಾರು ಚಲನಚಿತ್ರಗಳಲ್ಲೂ ಪಾತ್ರವಹಿಸಿದ್ದಾರೆ.

---



## ಬಸನಗೌಡ ಮಣ್ಣೇರಿ

ವಿಜಾಪುರ ಜಿಲ್ಲೆಯ ಬಾದಾಮಿ ತಾಲೂಕಿನ ಬಸನಗೌಡ ಮಣ್ಣೇರಿ ಅವರು 3 ದಶಕಕ್ಕೂ ಹೆಚ್ಚುಕಾಲದ ರಂಗಭೂಮಿಯ ಅನುಭವ ನಡೆದಿದ್ದಾರೆ. 'ಗಾಯನ ಚತುರ'ನೆಂಬ ಅಭಿದಾನದೊಂದಿಗೆ ರಾಮ, ಕೃಷ್ಣ, ಬಲರಾಮ ಮುಂತಾದ ಪಾತ್ರಗಳಲ್ಲಿ ಬಹಳ ಹೆಸರು ಮಾಡಿದವರು. ಶಿರಹಟ್ಟಿ ವೆಂಕೋಬರಾಯರ ಕಂಪನಿಯಿಂದ ವೃತ್ತಿ ಜೀವನ ಪ್ರಾರಂಭಿಸಿ, ಕೊಟ್ಟೂರು ಬಸಪ್ಪನವರ ಕಂಪನಿ, ಕೆ.ಬಿ.ಆರ್. ಡ್ರಾಮಾಕಂಪನಿಗಳಲ್ಲಿ ಮುಖ್ಯನಟರಾಗಿ ಸೇವೆ ಸಲ್ಲಿಸಿದ್ದಾರೆ. ಪಾದುಕಾಪಟ್ಟಾಭಿಷೇಕ, ಕೃಷ್ಣಲೀಲೆ, ದಶಾವತಾರ, ಹಳ್ಳಿಹುಡುಗಿ, ಬೆಳ್ಳಿಬಂಗಾರ ಮುಂತಾದವು ಇವರಿಗೆ ಹೆಸರು ತಂದುಕೊಟ್ಟ ನಾಟಕಗಳು. ಪ್ರಸ್ತುತ ಇವರು ವಿಶ್ರಾಂತ ಜೀವನವನ್ನು ಸಾಗಿಸುತ್ತಿದ್ದು ಅನೇಕ ಪ್ರಶಸ್ತಿ ಮನ್ನಣೆಗಳಿಸಿದ್ದಾರೆ.

---



## ಕೃಷ್ಣಚಂದ್ರ ವಿರೂಪಾಕ್ಷಪ್ಪ ಬಳ್ಳಾರಿ

ಪ್ರಾಥಮಿಕ ಶಿಕ್ಷಣವನ್ನು ಮುಗಿಸುತ್ತಿದ್ದಂತೆ, ಬಾಲ ನಟರಾಗಿ ರಂಗ ಪ್ರವೇಶ. ಶ್ರೀ ಕುಮಾರ ವಿಜಯ ನಾಟ್ಯ ಸಂಘ ಚಿತ್ತರಾಗಿ, ಶ್ರೀ ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯಸಂಘ ಹಾಗೂ ಶ್ರೀ ಶಾರದಾ ಸಂಗೀತ ನಾಟಕ ಮಂಡಲಿ ಗೋಕಾಕ ಕಂಪನಿಗಳಲ್ಲಿ ಪಾತ್ರವಹಿಸಿ ಜನಮನ್ನಣೆಗಳಿಸಿದರು.

ತಮ್ಮ ಕಲಾಜೀವನದ ಬಹು ಪಾಲನ್ನು ಶ್ರೀ ಏಣಗಿ ಬಾಳಪ್ಪನವರ ಕಂಪನಿಯಲ್ಲಿ ಕಳೆದ ಇವರು, ತಮ್ಮ ಇಳಿವಯಸ್ಸಿನಲ್ಲೂ ಶ್ರೀ ಕೆ.ಬಿ.ಆರ್. ಡ್ರಾಮಾ ಕಂಪನಿಯಲ್ಲಿ ಸೇವೆ

ಸಲ್ಲಿಸುತ್ತಿದ್ದಾರೆ. 'ಸಂಪತ್ತಿಗೆ ಸವಾಲ್' ನಾಟಕದ 'ಭದ್ರಿ' ಪಾತ್ರ ಇವರ ಜೀವನದ ಮುಖ್ಯ ತಿರುವು. ಚಲನಚಿತ್ರ ಕ್ಷೇತ್ರದಲ್ಲಿ ಇವರ ಕಾಣಿಕೆ ಸಂದಿದೆ. ರಾಜಾ ಹರಿಶ್ಚಂದ್ರ, ರಾಣೀ ಪದ್ಮಾವತಿ ಕಥಾ ಮುಂತಾದವು ಇವರ ಪ್ರಮುಖ ನಾಟಕಗಳು.



## ಡಾ. ಧೀರೇಂದ್ರ ಕುಲಕರ್ಣಿ

ವೃತ್ತಿಯಿಂದ ಪ್ರಾಧ್ಯಾಪಕರಾದ ಡಾ. ಧೀರೇಂದ್ರ ಕುಲಕರ್ಣಿಯವರು, ತಮ್ಮ ಅಧ್ಯಾಪನದ ಜೊತೆ ಜೊತೆಗೇ ಧಾರವಾಡದ ಹವ್ಯಾಸಿ ರಂಗದಲ್ಲಿ ಸಕ್ರಿಯರಾಗಿದ್ದವರು. 40 ವರ್ಷಗಳ ಇವರ ರಂಗಭೂಮಿ ಅನುಭವದಲ್ಲಿ ಧಾರವಾಡದ ಹವ್ಯಾಸಿರಂಗದ ಬೆಳವಣಿಗೆಯ ಇತಿಹಾಸವನ್ನು ಕಾಣಬಹುದು.

ಕರ್ನಾಟಕ ಕಲೋದ್ಧಾರಕ ಸಂಘದ ಸಂಸ್ಥಾಪಕ ಸದಸ್ಯರಾಗಿ, ತಂಡವನ್ನು ಮುನ್ನಡೆಸಿದವರಲ್ಲಿ ಇವರು ಪ್ರಮುಖರು.

ಶೋಕಚಕ್ರ, ವರಪರೀಕ್ಷೆ, ಏಕಲವ್ಯ, ಸಂಧ್ಯಾಕಾಲ, ಹರಿಜನ್ವಾರ, ಕತ್ತಲೆ ದಾರಿದೂರ ಮುಂತಾದ ನಾಟಕಗಳಲ್ಲಿ ಅಭಿನಯಿಸಿರುವ ಇವರು ಹಲವಾರು ನಿರ್ದೇಶನಗಳನ್ನು ಮಾಡಿದ್ದಾರೆ. ರಂಗನಾಟಕ, ಬಾನುಲಿ ನಾಟಕಗಳ ರಚನೆಯಲ್ಲಿ ಬಹಳ ಯಶಸ್ಸು ಸಾಧಿಸಿರುವ ಕುಲಕರ್ಣಿಯವರು ಸಿನಿಮಾ ಪ್ರಪಂಚದಲ್ಲೂ ಅನುಭವ ಪಡೆದಿದ್ದಾರೆ.



## ಧ್ರುವರಾಜ ವೆಂಕಟರಾವ್ ದೇಶಪಾಂಡೆ

ಚಿಕ್ಕಂದಿನ ರಂಗ ಅಭಿನಯದ ಆಸಕ್ತಿ, ಶಾಲಾ, ಕಾಲೇಜುಗಳಲ್ಲಿ, ಹಬ್ಬಹರಿದಿನಗಳಲ್ಲಿ ನಡೆಯುತ್ತಿದ್ದ ನಾಟಕಗಳನ್ನು ಭಾಗವಹಿಸಲು ಧ್ರುವರಾಜ ದೇಶಪಾಂಡೆಯವರಿಗೆ ಪ್ರೇರಣೆ ನೀಡಿತು. ಹೀಗೆ ಸ್ಥಳೀಯ ಪರಿಸರದಲ್ಲಿ ಚಿಗುರಿದ ಇವರ ರಂಗಾಭಿರುಚಿ ಮುಂದಿನ ದಿನಗಳಲ್ಲಿ ತರಬೇತಿ ಶಿಸ್ತು-ಹೆಚ್ಚಿನ ತಿಳುವಳಿಕೆಗಾಗಿ ನಿನಾಸಂ ರಂಗಶಿಕ್ಷಣಾ ಕೇಂದ್ರಕ್ಕೂ ಎಳೆದು ತಂದಿತು.

ಬಾಲ್ಯದ ಅನುಭವ ಮತ್ತು ಹಾಗೂ ಶಿಕ್ಷಣದ ಶಿಸ್ತು ಇವರನ್ನು ಪ್ರತಿಭಾವಂತ ನಟ, ನಿರ್ದೇಶಕ ಹಾಗೂ ನಾಟಕಕಾರರನ್ನಾಗಿ ಬೆಳೆಸಿತು. ಇಂದು ಉತ್ತರ ಕರ್ನಾಟಕದ ರಂಗಭೂಮಿಯಲ್ಲಿ 'ಧ್ರುವರಂಗ' ಚೈತನ್ಯದ ಸಂಕೇತ ವಾಗಲು ದೇಶಪಾಂಡೆಯವರ ಕ್ರಿಯಾಶೀಲತೆ, ಸತತ ಆಸಕ್ತಿ ಎರಡೂ ಕಾರಣವಾಗಿವೆ.

ಹತ್ತು ಹಲವು ಪುರಸ್ಕಾರಗಳನ್ನು ತಮ್ಮ ಬಹುಮುಖ ಪ್ರತಿಭೆಗೆ ದಕ್ಕಿಸಿಕೊಂಡಿರುವ ಇವರು ಅನೇಕ ಕನ್ನಡದ ಹಿರಿಯರ ನಿರ್ದೇಶಕರ ಗರಡಿಯಲ್ಲಿ ಪಳಗಿದ್ದಾರೆ.

88ರ ನಿನಾಸಂ ತಿರುಗಾಟದ ಮುಖ್ಯ ನಟರಾಗಿಯೂ ಕರ್ನಾಟಕವನ್ನುಸುತ್ತಿರುವ ಇವರು ಧ್ರುವರಂಗ ಸಂಚಾರಿ ರಂಗತರಬೇತಿ ಘಟಕದ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.



## ಗಂಗಯ್ಯ ಶಿರೂರ

ಬಾಲ್ಯದಲ್ಲೇ ತಮ್ಮ ಮಧುರ ಗಾಯನದಿಂದ ಶ್ರೀ ಬಸವರಾಜ ಮನ್ಸೂರರ ಗಮನ ಸೆಳೆದು, ಅವರ ಸಂಸ್ಥೆಯನ್ನು ಸೇರಿದ ಗಂಗಯ್ಯ ಶಿರೂರ ಅವರು, ಮನ್ಸೂರರ ಮಾರ್ಗದರ್ಶನದಲ್ಲಿ ಸಂಗೀತ ಹಾಗೂ ನಟನೆಯನ್ನು ಕಲಿತರು. ನಟರಾಗಿ ತರಬೇತಿ ಹೊಂದುತ್ತಿದ್ದಂತೆ ಮನ್ಸೂರರ ಕಂಪನಿಯಲ್ಲಿ ಬಾಲ ಸಿದ್ಧರಾಮೇಶ್ವರನಾಗಿ ಬಣ್ಣದ ಬದುಕನ್ನು ಪ್ರಾರಂಭಿಸಿದರು. ಈ ನಾಟಕದಲ್ಲಿ ಇವರ ಸಂಗೀತಕ್ಕೆ ಜನ ಮಾರುಹೋದರು. ಮುಂದೆ ಬಹಳ ವರ್ಷಗಳವರೆಗೆ ಮನ್ಸೂರರ ಕಂಪನಿಯಲ್ಲಿದ್ದು, ಅಲ್ಲಿಂದ ಶ್ರೀ ಏಣಗಿ ಬಾಳಪ್ಪನವರ ಕಂಪನಿ ಸೇರಿದರು. ತಮ್ಮ ವೃತ್ತಿ ಜೀವನದ ಮೇರುತನವನ್ನು ಮೆರೆದಿದ್ದು ಈ ಕಂಪನಿಯಲ್ಲಿಯೇ. ಸಂಗೀತ ಪ್ರಧಾನವಾದ ನಾಟಕಗಳಲ್ಲಿ ಪುರುಷ ಹಾಗೂ ಸ್ತ್ರೀ ಪಾತ್ರಗಳೆರಡಲ್ಲೂ ಸೈ ಎನ್ನಿಸಿಕೊಂಡ ಇವರು ಸಮಾಜ ವಿಕಾಸ ನಾಟ್ಯ ಸಂಘದಲ್ಲಿಯೂ ಸೇವೆ ಸಲ್ಲಿಸಿದ್ದಾರೆ. ಈಗ ನಿವೃತ್ತರಾಗಿ ವಿಶ್ರಾಂತ ಜೀವನವನ್ನು ಸಾಗಿಸುತ್ತಿದ್ದಾರೆ.



## ಎ.ಜಿ. ಚಿದಂಬರರಾವ್ ಜಂಬೆ

ರಾಷ್ಟ್ರೀಯ ನಾಟಕ ಶಾಲೆ ಪದವೀಧರ. ತಮ್ಮ ಅಧ್ಯಯನ ಮುಗಿಯುತ್ತಿದ್ದಂತೆ ಹೆಗ್ಗೋಡಿನ ನೀನಾಸಂ ರಂಗಶಿಕ್ಷಣಾ ಕೇಂದ್ರದ ಸಾರಥ್ಯ ಇವರನ್ನು ಕರೆಯಿತು. ನೀನಾಸಂನ ಪ್ರಾಂಶುಪಾಲರಾಗಿ ಕಳೆದ 10 ವರ್ಷಗಳಿಂದ ಕಾರ್ಯನಿರ್ವಹಿಸುತ್ತಿರುವ ಇವರು ಕರ್ನಾಟಕದ ನೂರಾರು ರಂಗಪ್ರತಿಭೆಗಳು ಬೆಳಕಿಗೆ ಬರಲು ಕಾರಣರಾಗಿದ್ದಾರೆ.

ಪ್ರಯೋಗಶೀಲತೆಗೆ ಹೆಸರಾದ ಜಂಬೆಯವರು ಉತ್ತರ ಕನ್ನಡದ ಸಿದ್ಧಿ ಜನಾಂಗದವರೊಂದಿಗೆ ಕಲೆತು, ಕಲಿತು ಸಿದ್ಧಜನಾಂಗದವರೊಂದಿಗೆ ಸಿದ್ಧಪಡಿಸಿದ 'ಕಪ್ಪುಜನ ಕೆಂಪು ರಕ್ತ' ಕರ್ನಾಟಕದಾದ್ಯಂತ ಜನಪ್ರಿಯತೆ ಸಾಧಿಸಿತ್ತು.

ನಿನಾಸಂ ತಿರುಗಾಟದ ಮೂಲಕ ಜಂಬೆಯವರು ನೀಡಿರುವ ನಾಟಕಗಳು ಕನ್ನಡ ರಂಗಭೂಮಿಗೆ ಉನ್ನತ ಕೊಡುಗೆಗಳಾಗಿವೆ. (ಪ್ರಶಸ್ತಿ ಸ್ವೀಕರಿಸಿರುವುದಿಲ್ಲ)



## ಕೆ.ಬಿ. ಶಿವರಾಜ

ವೃತ್ತಿ ರಂಗಭೂಮಿಯ ಇತಿಹಾಸದಲ್ಲಿ 'ಕಂಚಿಕೆರೆ' ವಿಶಿಷ್ಟ ಸ್ಥಾನಗಳಿಸಿದೆ. ಈ ಕಂಚಿಕೆರೆ ಕೊಟ್ರಬಸಪ್ಪನವರ ಮಗನಾದ ಶಿವರಾಜ ಅವರು, ತಮ್ಮ ಓದಿನ ದಿನಗಳು ಮುಗಿದ ನಂತರ ರಂಗಭೂಮಿಗೆ ಪಾದಾರ್ಪಣೆ ಮಾಡಿದರು.

ಜಯಲಕ್ಷ್ಮಿ ನಾಟ್ಯ ಸಂಘವನ್ನು ಬಹಳ ಸಂಕಷ್ಟದಿಂದ ಈಗಲೂ ನಡೆಸಿಕೊಂಡು ಬರುತ್ತಿದ್ದಾರೆ. ಖಾದಿಸೀರೆ, ಮುಂಡೆಮಗ, ದೇವದಾಸಿ, ಭೌಮಾಸುರ ಮುಂತಾದವು ಇವರ ಕಂಪನಿಯ ಹೆಸರಾಂತ ನಾಟಕಗಳು.



## ಡಾ. ಬಿ.ಆರ್. ಮಂಜುನಾಥ್

ಮುಂಬಯಿನಗರದಲ್ಲಿ ಕನ್ನಡದ ಕಂಪನ್ನು ನಿರಂತರಗೊಳಿಸುವಲ್ಲಿ ಡಾ. ಬಿ.ಆರ್. ಮಂಜುನಾಥ್ ಅವರ ಪಾತ್ರ ಹಿರಿದಾದುದು. ಮುಂಬಯಿ ಕನ್ನಡಿಗರನ್ನು ಸಂಘಟಿಸಿ, ಕನ್ನಡ ಸಂಸ್ಕೃತಿಯ ಮುಖ್ಯವಾಹಿನಿಯಲ್ಲಿ ಬೆರೆತು. ಒಡನಾಡುವಂತೆ ಕ್ರಿಯಾಶೀಲ ಕಾರ್ಯಕ್ರಮಗಳನ್ನು ತಮ್ಮ 'ಮೈಸೂರು ಅಸೋಸಿಯೇಶನ್' ಸಂಘಟನೆಯ ಮೂಲಕ ಮಾಡುತ್ತಾ ಬಂದಿರುವ ಡಾ. ಮಂಜುನಾಥ್ ಅವರು ವೃತ್ತಿಯಿಂದ ಭೌತ ವಿಜ್ಞಾನಿ.

ಮೂಲತಃ ತುಮಕೂರಿನವರಾದ ಇವರು ಬಾಲ್ಯದಿಂದಲೇ ನಾಟಕ, ಸಂಗೀತ, ನೃತ್ಯಪ್ರಾಕಾರಗಳಲ್ಲಿ ಒಲವು ಹೊಂದಿದವರು ಹಾಗೂ ಶಾಸ್ತ್ರೀಯವಾಗಿ ಅಭ್ಯಸಿಸಿದವರು.

ನಾಟಕಕರರಾಗಿ, ನಿರ್ದೇಶಕರಾಗಿ, ರಂಗಪ್ರಯೋಗದ ವಿವಿಧ ತಾಂತ್ರಿಕ ಅಂಶಗಳ ಪರಿಣಿತರಾಗಿ ರೂಪುಗೊಂಡಿರುವ ಇವರು ಕಳೆದ 25 ವರ್ಷಗಳಿಂದ 12 ನಾಟಕಗಳನ್ನು ಬರೆದಿರುವುದಲ್ಲದೆ, 35 ನಾಟಕಗಳ ರಂಗಪ್ರಯೋಗಗಳಿಗೆ ಕಾರಣರಾಗಿದ್ದಾರೆ.

ಬೆಳ್ಳಿಬೈಲು, ಬತ್ತಿಬೆಳೆದಿದ್ದು, ಚೆಂಡಾಕಾಳೂರು, ಹೂಗಿಡದಲಿ ಹೂವರಳಿವುದು ಮುಂತಾದವು ಇವರ ರಚನೆಗಳು. ಕನ್ನಡ ಸಾಂಸ್ಕೃತಿಕ ರಾಯಭಾರಿಯಾಗಿ ಮುಂಬಯಿಯಲ್ಲಿ ತಮ್ಮ ಸೃಜನಶೀಲ ಬದುಕನ್ನು ನಡೆಸುತ್ತಿರುವ ಇವರು ನಾಟಕ ಅಕಾಡೆಮಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ.



## ಹಣ್ಣೆ ವೀರಭದ್ರಪ್ಪ

ಬಳ್ಳಾರಿ ಜಿಲ್ಲೆಯವರಾದ ವೀರಭದ್ರಪ್ಪನವರು ತಮ್ಮ ಸುದೀರ್ಘ ವೃತ್ತಿರಂಗಭೂಮಿಯ ಬದುಕಿನಲ್ಲಿ ಹತ್ತಾರು ಕಂಪನಿಗಳಲ್ಲಿ ಮುಖ್ಯ ನಟರಾಗಿ ಸೇವೆ ಸಲ್ಲಿಸಿದವು. ಬಾಲ್ಯದ ಸಂಕಷ್ಟದ ಬದುಕು ಇವರನ್ನು ರಂಗಭೂಮಿಯ ತೆಕ್ಕೆಗೆ ತಂದಿತು. ದಿ. ಕೈಲಾಸ, ಡಾ. ರಾಘವಾಚಾರ್, ದಿ. ಬಸವರಾಜ ಮನ್ಸೂರ್, ದಿ. ಮಲ್ಲಿಕಾರ್ಜುನ ಮನ್ಸೂರ್, ಶ್ರೀಮತಿ ಹೆಚ್.ಪಿ. ಸರೋಜ, ಶ್ರೀಮತಿ ಆದವಾನಿ ಲಕ್ಷ್ಮೀದೇವಿ ಮುಂತಾದ ರಂಗದಿಗ್ಗಜಗಳೊಂದಿಗೆ ನಟಿಸಿದ ಹೆಗ್ಗಳಿಕೆ ಇವರದು.

1992ರ ರಾಜ್ಯೋತ್ಸವ ಪ್ರಶಸ್ತಿಗೆ ಪಾತ್ರರಾಗಿರುವ ಇವರು ಟಿಪ್ಪುಸುಲ್ತಾನ್, ಕಿತ್ತೂರು ಚೆನ್ನಮ್ಮ ನಾಟಕಗಳ ಪಾತ್ರಗಳಿಗೆ ವಿಶಿಷ್ಠ ಪ್ರಶಸ್ತಿಗಳನ್ನು ಪಡೆದಿದ್ದಾರೆ.

1992ರಲ್ಲಿ ಯರಾಸಿ ಧರ್ಮಪ್ಪನವರ ವಾಣಿವಿಲಾಸ ನಾಟಕ ಕಂಪನಿಯಿಂದ ಇವರು ವೃತ್ತಿ ಜೀವನ ಆರಂಭಿಸಿ, ವಿಶ್ವರಂಜನಿ ನಾಟಕ ಕಂಪನಿ, ಕಲಾಕಾಶ ನಾಟಕ ಕಂಪನಿ, ಹಾಲಸಿದ್ದೇಶ್ವರ ಕಂಪನಿ ಮುಂತಾದ ಖ್ಯಾತ ವೃತ್ತಿ ಮಂಡಲಿಗಳಲ್ಲಿ ಸೇವೆ ಸಲ್ಲಿಸಿ, 1936ರಲ್ಲಿ ಶಾಂತಿಕಲಾ ನಾಟಕ ಕಂಪನಿ ಎಂಬ ಸ್ವಂತ ಕಂಪನಿಯನ್ನು ಪ್ರಾರಂಭಿಸಿ ಕಲಾಸೇವೆ ಮಾಡಿದ್ದಾರೆ.



## ಟಿ.ಎಸ್. ನಾಗಾಭರಣ

ಶ್ರೀರಂಗರು 1969ರಲ್ಲಿ ನಡೆಸಿಕೊಟ್ಟ ರಂಗತರಬೇತಿ ಶಿಬಿರದ ಮೂಲಕ ಬೆಳಕಿಗೆ ಬಂದವರು ನಾಗಾಭರಣ. ಶ್ರೀ ಬಿ.ವಿ. ಕಾರಂತರ ಪರಿಚಯದೊಂದಿಗೆ ಅವರ ಸಹಾಯಕರಾಗಿ ಅನುಭವವನ್ನು ಪಡೆದ ಇವರು, ಬೆಂಗಳೂರು ವಿ.ವಿ.ಯ ನಾಟಕ ಡಿಪ್ಲೊಮೋದ ವಿದ್ಯಾರ್ಥಿ.

ಕಲಾಕ್ಷೇತ್ರ, ಬೆನಕ, ರಂಗಸಂಪದ ಹಾಗು ನಟರಂಗದ ಸ್ಥಾಪಕ ಸದಸ್ಯರಾದ ನಾಗಾಭರಣ ಅನೇಕ ಕಾಲೇಜುಗಳಿಗೆ, ಹವ್ಯಾಸಿ ತಂಡಗಳಿಗೆ ಶಿಬಿರಗಳನ್ನು ನಡೆಸಿದವರು.

ಬಕ, ಬ್ಲಡ್‌ವೆಡ್ಡಿಂಗ್, ಏವಂ ಇಂದ್ರಜಿತ್, ಕತ್ತಲೆ ಬೆಳಕು, ಸಂಗ್ಯಾಬಾಳ್ಯ, ಕಾರನ ಸಾರೋಟು ಮುಂತಾದ ನಾಟಕಗಳನ್ನು ನಿರ್ದೇಶಿಸಿದ್ದಾರೆ. ತುಘಲಕ್, ಕತ್ತಲೆ ಬೆಳಕು, ಸದ್ದು ವಿಚಾರಣೆ ನಡೆದಿದೆ, ಹಯವದನ, ಜಸ್ಮಾಓಡನ್, ಸಂಗ್ಯಾಬಾಳ್ಯಾ, ಸತ್ತವರ ನೆರಳು, ನೀಗಿಕೊಂಡ ಸಂಸ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

---



## ಎನ್. ನಾಗರಾಜ್

ಹವ್ಯಾಸಿ ರಂಗದಲ್ಲಿ ಡೈರೆಕ್ಟರ್ ನಾಗರಾಜ್ ಎಂದೇ ಖ್ಯಾತರಾದ ನಾಗರಾಜ್ ಎನ್.ಜಿ.ಇ.ಎಫ್ ಕಾರ್ಖಾನೆ ಪ್ರತಿಭೆ. 'ಕಾಡು' ಕಾದಂಬರಿಯ ನಿರ್ದೇಶನ ಇವರ ನಿರ್ದೇಶನ ಸಾಮರ್ಥ್ಯಕ್ಕೆ ಹೊಸ ಮೆರುಗನ್ನು ನೀಡಿತು. ಉತ್ತಮ ನಟರೂ ಆಗಿರುವ ಇವರಿಗೆ ನಿರ್ದೇಶನ ಮಾಧ್ಯಮ ಅತಿಖುಷಿ ಕೊಡುತ್ತದೆ.

ಬಣ್ಣದ ಗೀಳು ಬಾಲ್ಯದ ಬಳುವಳಿ, ಎಳೆ ವಯಸ್ಸಿನ ಮೇಲೆ ಪುರಾಣ–ಇತಿಹಾಸಗಳ ಪ್ರಭಾವ ಅಪಾರ. ಹಾಗಾಗಿ ಕಲ್ಪನೆಗೆ ದೃಶ್ಯದ ಚೌಕಟ್ಟು ಹಾಕುವ ನಿರ್ದೇಶನ ಮಾಧ್ಯಮ ಇವರಿಗೆ ಅತಿಪ್ರಿಯ. 50 ನಾಟಕಗಳಿಗೂ ಹೆಚ್ಚು ನಾಟಕದ ನಿರ್ದೇಶನ. ಶ್ರೀರಂಗ ಮುಂತಾದ ಹಿರಿಯರ ನಾಟಕಗಳಿಂದ ಹಿಡಿದು ಇತ್ತೀಚಿನ ಅನೇಕ ಕಿರಿಯರ ನಾಟಕಗಳನ್ನು ನಿರ್ದೇಶಿಸಿದ್ದಾರೆ.

ಸಣ್ಣ ಕಥೆಗಳನ್ನು ರಂಗದ ಮೇಲೆ ಅರ್ಥಪೂರ್ಣವಾಗಿ ನಿರ್ದೇಶಿಸಿದವರಲ್ಲಿ ಇವರು ಪ್ರಥಮರು. ತೇಜಸ್ವಿ, ಗೊರೂರು ಮುಂತಾದವರ ಕಥೆಗಳ ನಿರ್ದೇಶನ. ಹಲವಾರು ಸ್ಪರ್ಧೆಗಳಲ್ಲಿ ಬಹುಮಾನ, ಶ್ರೇಷ್ಠ ನಿರ್ದೇಶನ ಪ್ರಶಸ್ತಿಯನ್ನು 27 ಬಾರಿ ರಾಜ್ಯಮಟ್ಟದಲ್ಲಿ ಸಾಧಿಸಿದ್ದಾರೆ.

---



## ಕೆ. ನಾಗರತ್ನ ಮರಿಯಮ್ಮನಹಳ್ಳಿ

ಮರಿಯಮ್ಮನ ಹಳ್ಳಿಯ ಲಲಿತ ಕಲಾರಂಗ ವೃತ್ತಿರಂಗಭೂಮಿ ಬದ್ಧತೆ, ಹವ್ಯಾಸಿ, ಪ್ರಯೋಗಶೀಲತೆಯನ್ನು ಮೈಗೂಡಿಸಿಕೊಂಡಿರುವ ಕಲಾಸಂಸ್ಥೆ. ಇದನ್ನು ಸಂಘಟಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿರುವ ಕೆ. ನಾಗರತ್ನ ಅವರು ವೃತ್ತಿ ಕಲಾವಿದೆಯಾಗಿ ವಿಶಿಷ್ಟ ಹೆಸರು ಗಳಿಸಿದ್ದಾರೆ. ಬಾಲ್ಯದಿನಗಳಿಂದಲೇ ರಂಗಭೂಮಿಯ ಆಕರ್ಷಣೆಗೆ ಬಲಿಯಾದ ಇವರು ತನ್ನ ಕುಟುಂಬದವರ ಪ್ರೋತ್ಸಾಹದೊಂದಿಗೆ ಇಂದು ಮೇರು ನಟಿಯಾಗಿ ಎತ್ತರಕ್ಕೆ ಬೆಳೆದಿದ್ದಾರೆ. ಈವರೆಗೆ 200ಕ್ಕೂ ಹೆಚ್ಚು ನಾಟಕಗಳಲ್ಲಿ

ಭಾಗವಹಿಸಿರುವ ಇವರು ಪ್ರಯೋಗಶೀಲ ನಾಟಕಗಳಲ್ಲೂ ಅಭಿನಯಿಸಿ ಪ್ರಶಂಸೆ ಗಳಿಸಿದ್ದಾರೆ. ಅನೇಕ ರಂಗತರಬೇತಿ ಶಿಬಿರಗಳಲ್ಲಿ ಭಾಗವಹಿಸಿ ಅಭಿನಯದ ಹಾಗು ವಿವಿಧ ತಾಂತ್ರಿಕ ಅಂಶಗಳ ತಿಳುವಳಿಕೆ ಪಡೆದಿದ್ದಾರೆ. ಜೋಕುಮಾರ ಸ್ವಾಮಿ, ಕಾಡುಕುದುರೆ, ದೊಡ್ಡಪ್ಪ, ರಕ್ತರಾತ್ರಿ ಮುಂತಾದ ನಾಟಕಗಳ ಜೊತೆಗೆ ವೃತ್ತಿನಾಟಕಗಳಲ್ಲಿ ತನ್ಮಯತೆಯಿಂದ ಅಭಿನಯಿಸಿ ಜನಪ್ರಿಯತೆ ಗಳಿಸಿದ್ದಾರೆ. ತಮ್ಮ ಲಲಿತ ಕಲಾರಂಗದ ಮೂಲಕ ಇತ್ತೀಚೆಗೆ ಪ್ರಯೋಗಿಸಿದ 'ಶೀಲಾವತಿ' ಬಹಳ ಪ್ರಸಿದ್ಧವಾಗಿದೆ.



## ಶಂಕ್ರಪ್ಪ ಅಡವೆಪ್ಪ ನರಗುಂದ

ಬಾಲ್ಯದಲ್ಲೇ ತಾಯಿತಂದೆಯನ್ನು ಕಳೆದುಕೊಂಡು, ಅನಾಥರಾಗಿ ಬೆಳೆದ ಶಂಕ್ರಪ್ಪ ನರಗುಂದ ಅವರು ಬಯಸಿದ್ದು ಬಣ್ಣದ ಬದುಕು. ರಂಗಭೂಮಿಯ ಆಕರ್ಷಣೆಯಿಂದ ಚಿಕ್ಕ ವಯಸ್ಸಿನಲ್ಲೇ ಶ್ರೀ ಶಿವಾನಂದ ಸಂಗೀತ ನಾಟಕ ಮಂಡಲಿ, ಧಾರವಾಡದ ಮೂಲಕ ರಂಗಪ್ರವೇಶ. ನಂತರದ ದಿನಗಳಲ್ಲಿ ಶ್ರೀ ಮಹೇಶ ನಾಟ್ಯಸಂಘ ಮೈಸೂರು (ನ್ಯಾಮತಿ) ಕಂಪನಿ ಸೇರಿ, ಅಂದಿನ ಹೆಸರಾಂತ ಕಲಾವಿದರಾದ ಫುರಿಲಕ್ಷ್ಮಣರಾಯರ ಮಾರ್ಗದರ್ಶನದಲ್ಲಿ ರಂಗ ಅನುಭವ ಪಡೆದರು. ಮುಂದೆ ವಸಂತ ನಾಟಕ ಕಲಾಸಂಘ, ಸಮಾಜ ವಿಕಾಸ ನಾಟ್ಯ ಸಂಘ, ಸಿದ್ಧಲಿಂಗೇಶ್ವರ ನಾಟ್ಯ ಸಂಘ ಮುಂತಾದವುಗಳಲ್ಲಿ ಸೇವೆ ಸಲ್ಲಿಸಿದರು. ವೃತ್ತಿರಂಗಭೂಮಿಯ ವಯೋವೃದ್ಧ ಕಲಾವಿದರಾದ ಇವರು ಈಗ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ.



## ತುಮಕೂರು ನಂಜಪ್ಪ

ಬಣ್ಣದ ಬದುಕಿಗೆ ಮನಸೋತು 1960ರಲ್ಲಿ ತುಮಕೂರು ತೊರೆದು ನಾಟಕರಂಗ ಪ್ರವೇಶ. ಶ್ರೀ ಸೂಡಿ ಶೇಖರಯ್ಯ ಅವರ ಕಂಪನಿಯಲ್ಲಿ ತಮ್ಮ ವೃತ್ತಿ ಜೀವನವನ್ನು ಆರಂಭಿಸಿದ ಇವರು, ಪದ್ಮಶ್ರೀ ಚಿಂದೋಡಿಲೀಲಾ ಮಾಲಿಕತ್ವದ ಶ್ರೀ ಕೆ.ಬಿ.ಆರ್. ಡ್ರಾಮಾ ಕಂಪನಿಯನ್ನು ಸೇರಿದರು. ಈ ಕಂಪನಿಯಲ್ಲಿ 8 ವರ್ಷಗಳು ಸೇವೆ ಸಲ್ಲಿಸಿದರು. ನಂತರ ಗುಡಗೇರಿ ಕಂಪನಿಯಲ್ಲಿ 1 ವರ್ಷದ ಸೇವೆ ಸಲ್ಲಿಸಿದ ನಂಜಪ್ಪನವರು ಶ್ರೀ ಹುಚ್ಚೇಶ್ವರ ನಾಟ್ಯಸಂಘ, ಕಮತಗಿಯಲ್ಲಿ ತಮ್ಮ ಬಣ್ಣದ ಬದುಕನ್ನು ಮುಂದುವರಿಸಿದ್ದಾರೆ.

ಸಿಡಿದೆದ್ದ ಬಡವ, ಸಿಂಧೂರ ಲಕ್ಷ್ಮಣ, ಚೆನ್ನಪ್ಪ ಚೆನ್ನಗೌಡ, ಗರೀಬಿ ಹಟಾವೊ, ಬಸ್‌ಕಂಡಕ್ಟರ್, ಧರ್ಮದ ದೌರ್ಜನ್ಯ ಇವರ ಮುಖ್ಯ ನಾಟಕಗಳು.



## ಪ್ರೇಮಾಕಾರಂತ್

ಕನ್ನಡ ಆಧುನಿಕ ರಂಗಭೂಮಿಯಲ್ಲಿ ವಿಶಿಷ್ಟ ಸ್ಥಾನ ಪಡೆದಿರುವ ಪ್ರೇಮಾಕಾರಂತ್ ಅವರು ನಿರ್ದೇಶನ, ಉಡುಪು ವಿನ್ಯಾಸ ಹಾಗು ಅನುವಾದಕಗಳಿಂದ ಕನ್ನಡ ರಂಗಭೂಮಿಯನ್ನು ಶ್ರೀಮಂತಗೊಳಿಸಿದ್ದಾರೆ. ವಿಶೇಷ, ಮಕ್ಕಳ ರಂಗಭೂಮಿಯ ಬಗ್ಗೆ ಚಿಂತಿಸುವ ಇವರು ಪ್ರತಿವರ್ಷ ನಡೆಸುವ ಮಕ್ಕಳ ಶಿಬಿರ ಉದಯೋನ್ಮುಖ ಪ್ರತಿಭೆಗಳಿಗೆ ಸೂಕ್ತ ವೇದಿಕೆಯನ್ನು ಒದಗಿಸುತ್ತಿದೆ.

ರಾಷ್ಟ್ರೀಯ ನಾಟಕ ಶಾಲೆಯಿಂದ ಪದವಿ ಪಡೆದಿರುವ ಇವರು ದೇಶದಾದ್ಯಂತ ಅನೇಕ ರಂಗಶಿಬಿರಗಳನ್ನು ನಡೆಸಿದ್ದಾರೆ. ನೂರಕ್ಕೂ ಹೆಚ್ಚು ನಾಟಕಗಳಿಗೆ ವಸ್ತ್ರ ವಿನ್ಯಾಸ ಮಾಡಿದ್ದಾರೆ. ರಾಷ್ಟ್ರದ ಪ್ರಖ್ಯಾತ ನಿರ್ದೇಶಕರೊಂದಿಗೆ ದುಡಿದಿದ್ದಾರೆ. ಹಿಂದಿ, ಗುಜರಾಥಿ ಹಾಗು ಇಂಗ್ಲೀಷ್ ನಾಟಕಗಳ ರೂಪಾಂತರ, ಅನುವಾದಗಳ ಮೂಲಕ ಕನ್ನಡ ರಂಗಭೂಮಿಗೆ, ಮಕ್ಕಳ ರಂಗಭೂಮಿಗೆ ಹೊಸ ಸಾಧ್ಯತೆಗಳ ಪರಿಚಯ ಮಾಡಿಕೊಟ್ಟಿದ್ದಾರೆ.

ದೇಶವಿದೇಶಗಳನ್ನು ಸಂಚರಿಸಿರುವ ಇವರು ತಮ್ಮ ನಿರ್ದೇಶನ ಪ್ರೌಢಿಮೆಯನ್ನು ಚಿತ್ರರಂಗದಲ್ಲಿಯೂ ತೋರಿದ್ದಾರೆ. ಇವರ ಫಣಿಯಮ್ಮ ಅಂತರ ರಾಷ್ಟ್ರೀಯ ಖ್ಯಾತಿಗಳಿಸಿದೆ. ಇವರು ಅನೇಕ ಚಿತ್ರಗಳಿಗೆ ವಸ್ತ್ರ ವಿನ್ಯಾಸ ಮಾಡಿದ್ದಾರೆ.

---



## ಎಂ.ಬಿ. ಪಾಟೀಲ

ವೃತ್ತಿಯಿಂದ ಪತ್ರಕರ್ತರಾದ ಎಂ.ಬಿ. ಪಾಟೀಲರು ಪ್ರವೃತ್ತಿಯಲ್ಲಿ ರಂಗಸಂಘಟಕರು ಹಾಗು ನಟರು. ಶಾಲಾ ದಿನಗಳಿಂದ ನಾಟಕಾಭಿನಯದಲ್ಲಿ ತೊಡಗಿಸಿಕೊಂಡ ಪಾಟೀಲರು ಕರ್ನಾಟಕ ಸಂಘ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್, ಗೋಕಾಕ ವರದಿ ಚಳವಳಿ ಸಂಘಟನೆ, ಸಮುದಾಯ ಸಂಘಟನೆ ಮುಂತಾದವುಗಳಲ್ಲಿ ಹಲವಾರು ಜವಾಬ್ದಾರಿಗಳನ್ನು ನಿರ್ವಹಿಸಿ, ಸಾರ್ವಜನಿಕ ರಂಗದ ನಿರಂತರ ಸಂಪರ್ಕ ಹೊಂದಿದ್ದಾರೆ.

ಎರಡು ಅವಧಿಗೆ ನಾಟಕ ಅಕಾಡೆಮಿಯ ಸದಸ್ಯರು ಆಗಿದ್ದ ಇವರು ರಾಯಚೂರು ಜಿಲ್ಲೆಯ ರಂಗಪ್ರಕ್ರಿಯೆಗೆ, ರಂಗತರಬೇತಿ ಶಿಬಿರ, ನಾಟಕೋತ್ಸವಗಳ ಮೂಲಕ ಕಾರಣರಾಗಿದ್ದಾರೆ.

ರಾಷ್ಟ್ರೀಯ ನಾಟಕ ಶಾಲೆಯ ಪದವೀಧರರನ್ನು ರಾಯಚೂರಿಗೆ ಕರೆಸಿ, ಹಲವಾರು ಶಿಬಿರಗಳನ್ನು ನಡೆಸಿರುವ ಇವರು ಸಮುದಾಯದ ಹುತ್ತವ ಬಡಿದರೆ, ಸಂಕ್ರಾಂತಿ, ಚಿಕ್ಕದೇವ ಭೂಪ, ಕುರಿ, ಮುಂತಾದ ನಾಟಕಗಳ ಪ್ರಯೋಗಕ್ಕೆ ಕಾರಣರಾಗಿದ್ದಾರೆ. 'ನಿತ್ಯ ನೂತನ' ದಿನ ಪತ್ರಿಕೆಯ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

---



## ಹೆಚ್. ಫ್ಲೋರಿನಾ

ಸಹೃದಯ ರಸಿಕರಿಂದ 'ಪಾರಿವಾಳ'ವೆಂದೇ ಕರೆಸಿಕೊಳ್ಳುತ್ತಿದ್ದ ಶ್ರೀಮತಿ ಫ್ಲೋರಿನಾ, ಕನ್ನಡ ವೃತ್ತಿರಂಗ ಕಂಡ ಅಪರೂಪದ ಪ್ರತಿಭೆಯಲ್ಲಿ ಒಬ್ಬರು. ಅಭಿಮಾನಿಗಳು ನೀಡಿದ ಅಭಿದಾನಕ್ಕೆ ತಕ್ಕಹಾಗೆ ಇವರು ರಂಗದ ಮೇಲೆ ಮಿಂಚು ಹರಿಸುತ್ತಿದ್ದರು ತಮ್ಮ ಚುರುಕು ಅಭಿನಯದಿಂದ.

ಪ್ರಸ್ತುತ ಗದಗಿನಲ್ಲಿ ಹಾಸಿಗೆ ಹಿಡಿದಿರುವ ಇವರು 40 ವರ್ಷಗಳ ಸುದೀರ್ಘ ಅಭಿನಯವನ್ನು, ಅನುಭವವನ್ನು ಮೆಲುಕು ಹಾಕುತ್ತಾ ಇದ್ದಾರೆ.

ಶ್ರೀ ಗುರು ಪಂಚಾಕ್ಷರಿ ವಿಜಯ ನಾಟ್ಯ ಸಂಘದಿಂದ ಇವರ ವೃತ್ತಿ ಜೀವನ ಪ್ರಾರಂಭವಾಗಿ, ಉತ್ತರ ಕರ್ನಾಟಕದ ಮಹತ್ವದ ಕಂಪನಿಗಳಾದ ಶ್ರೀಶೈಲ ಮಲ್ಲಿಕಾರ್ಜುನ, ಶ್ರೀ ಶರಣ ಬಸವೇಶ್ವರ, ಶ್ರೀ ಸಂಗಮೇಶ್ವರ ಶ್ರೀ ಶಾರದಾ ಸಂಗೀತ ಮಂಡಲಿಗಳಲ್ಲಿ ಅಭಿನಯಿಸಿದ್ದಾರೆ. ಹಾಸ್ಯ ಪಾತ್ರಗಳಿಗೆ ತಮ್ಮ ಅಭಿನಯದಿಂದ ಜೀವ ತುಂಬುತ್ತಿದ್ದ ಇವರು, ಅನೇಕ ಕಂಪನಿಗಳ ವರಮಾನದ ಆಕರ್ಷಣೆಯಾಗಿದ್ದರು.

---



## ಯು. ಪ್ರಭಾಕರ ರಾವ್

ಇವರ ನಾಟಕದ ಗೀಳು ಆರಂಭವಾದದ್ದು ಇನ್ನೂ ಬಾಲಕನಾಗಿದ್ದಾಗಲೇ, ಬೊಂಬಾಯಿಯಲ್ಲಿ ಓದುತ್ತಿದ್ದಾಗ. ಸುಮಾರು 36 ವರ್ಷಗಳ ಹಿಂದೆ ದೆಹಲಿ ಸೇರಿದ್ದು ಸಾಹಿತ್ಯ ಅಕಾಡೆಮಿಯಲ್ಲಿ ಕೆಲಸ ಮಾಡಲು. ನಾಟಕ ಆಡಲು, ಆಡಿಸಲು, ರಂಗವಿನ್ಯಾಸ, ಬೆಳಕಿನ ಸಜ್ಜಿಕೆ, ಪ್ರಸಾಧನ ಮೊದಲಾದ ವಿಭಾಗಗಳನ್ನು ಅಧ್ಯಯನ ಮಾಡಲು ಇವರಲ್ಲಿ ಅದಮ್ಯ ಉತ್ಸಾಹಕ್ಕೆ ದೆಹಲಿಯ ವಾತಾವರಣ ಪ್ರೋತ್ಸಾಹ ನೀಡಿತು.

ಹಿಂದೂಸ್ಥಾನೀ ಥಿಯೇಟರ್ಸ್‌ನ ಬೇಗಂ ಜೈದಿ ಅವರು ನಡೆಸುತ್ತಿದ್ದ ನಾಟಕ ಶಿಬಿರಗಳಲ್ಲಿ ತರಬೇತಿ; 1963ರಲ್ಲಿ ಸಹೃದಯಿ–ಮಿತ್ರರುಗಳಾದ ಶಾ. ಬಾಲುರಾವ್ ಆರ್.ಜಿ ಪದಕಿ, ಡಿ. ರಮೇಶ್, ಬಿ.ವಿ. ಕಾರಂತ್, ಎಂ.ಎಸ್. ಸತ್ಯು ಮೊದಲಾದವರೊಡನೆ ಕನ್ನಡ–ಭಾರತೀ ಸಂಸ್ಥೆಯ ಸ್ಥಾಪಕ ಸದಸ್ಯನಾಗಿ ನಾಟಕದ ಕೆಲಸ ಆರಂಭ.

ಇದಕ್ಕೆ ಮೊದಲೇ 'ದಕ್ಷಿಣ ಭಾರತ ನಟಿ–ನಟ ಸಮಾಖ್ಯ' ಸಂಸ್ಥೆಯ ಆಶ್ರಯದಲ್ಲಿ 'ವೀರಯೋಧ' ನಾಟಕದ ನಿರ್ದೇಶನ. ಕನ್ನಡ–ಭಾರತೀ ಜನ್ಮ ತಾಳಿದ ಮೇಲೆ 1963ರಿಂದ ಸತತವಾಗಿ ನಾಟಕಗಳ ನಿರ್ದೇಶನ, ರಂಗವಿನ್ಯಾಸ, ಬೆಳಕಿನ ಸಜ್ಜಿಕೆ, ರಂಗಪರಿಕರ ಇತ್ಯಾದಿ ವಿಭಾಗಗಳಲ್ಲಿ ಪಾಲ್ಗೊಳ್ಳುವಿಕೆ.

ಡಿವಿಜಿ ಅವರ "ಮ್ಯಾಕ್‌ಬೆತ್", ಕಾರ್ನಾಡರ "ಹಯವದನ", "ಯಯಾತಿ" ಮತ್ತು "ಹಿಟ್ಟಿನ ಹುಂಜ", "ದಹನ ಚಿತ್ರ", "ಕೊನೆಗೂ ಕೊಂದದ್ದು ಆಕೃತಿಯನ್ನೇ", "ಮನವೆಂಬ ಮರ್ಕಟ", ಜಡಭರತರ ಹೆಸರಾಂತ "ನಾನೇ ಬಿಜ್ಜಳ", "ಕಳ್ಳ ಬಳ್ಳಳ್ಳ", "ಕೊಡೆಗಳು", "ಚಾಳೇಶ" ಇತ್ಯಾದಿ ನಾಟಕಗಳ ನಿರ್ದೇಶನ ಹಾಗು ಅವುಗಳ ರಂಗವಿನ್ಯಾಸ ಮತ್ತು ಬೆಳಕಿನ ವ್ಯವಸ್ಥೆ. 1963ರಿಂದ ಇಂದಿನವರೆಗೆ ಕನ್ನಡ–ಭಾರತೀಯ ಎಲ್ಲಾ ಕಾರ್ಯಕ್ರಮಗಳಲ್ಲೂ ಸಕ್ರಿಯವಾಗಿ ಪಾಲ್ಗೊಳ್ಳುವಿಕೆ.

ಇವರು ದೆಹಲಿಯ NCERT ಯಲ್ಲಿ ಚೀಫ್ ಪ್ರೊಡಕ್ಷನ್ ಆಫೀಸರ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ.

---



## ಟಿ.ಎಸ್. ರಂಗ

ಆಧುನಿಕ ಹವ್ಯಾಸಿರಂಗಭೂಮಿಯಲ್ಲಿ ಕಾಲೇಜು ದಿನಗಳಿಂದಲೇ ತೊಡಗಿಸಿಕೊಂಡ ಟಿ.ಎಸ್. ರಂಗಾ, ಶ್ರೀ ಬಿ.ವಿ. ಕಾರಂತರ ಮಾರ್ಗದರ್ಶನದಲ್ಲಿ ಬೆನಕ ತಂಡದ ಅನೇಕ ನಾಟಕಗಳಲ್ಲಿ ಅಭಿನಯಿಸಿದರು;

ನಟರಾಗಿ ಹಾಡುಗಾರರಾಗಿ ಹಾಗು ಸಂಘಟಕರಾಗಿ ರಂಗ ತಮ್ಮ ಅಭಿರುಚಿಯನ್ನು ಬೆಳೆಸಿಕೊಂಡರು. ಬಿ. ಜಯಶ್ರೀ, ಎನ್.ಎಸ್. ವೆಂಕಟರಾವ್, ಪಿ. ಲಂಕೇಶ್ ಮುಂತಾದವರ ನಿರ್ದೇಶನದಲ್ಲೂ ಅನುಭವ ಪಡೆದ ಇವರಿಗೆ ಸಿಕ್ಕ ಒಂದು ದೊಡ್ಡ ಅವಕಾಶ ಖ್ಯಾತ ಜರ್ಮನಿ ನಿರ್ದೇಶಕ ಫಿಟ್ಜ್‌ಬೇವಿಟ್ಜ್‌ರೊಂದಿಗೆ ಸಹಾಯಕರಾಗಿ ದುಡಿಯುವುದು.

ಸ್ವರ್ಗಕ್ಕೆ ಮೂರೇ ಬಾಗಿಲು, ಏವಂ ಇಂದ್ರಜಿತ್, ಜೋಕುಮಾರಸ್ವಾಮಿ, ಸತ್ತವರ ನೆರಳು, ಸಂಕ್ರಾಂತಿ, ಈಡಿಪಸ್ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ ಇವರು ನಿರ್ದೇಶನ ಮಾಧ್ಯಮದ ಬಗ್ಗೆ ಅಪಾರ ಅನುಭವ ಪಡೆದರು. ಆದರೆ ನಾಟಕ ನಿರ್ದೇಶನಕ್ಕೆ ಇಳಿಯದೆ ಇವರು ಪ್ರತಿಭೆಯನ್ನು ಸಿನಿಮಾ, ಡಾಕ್ಯುಮೆಂಟರಿ ತಯಾರಿಕೆಯಲ್ಲಿ ತೋರಿಸಿಕೊಟ್ಟರು.

---



## ರೇಣುಕಾದೇವಿ ಮುರಗೋಡ

ಕನ್ನಡ ವೃತ್ತಿರಂಗಭೂಮಿ ಹಿರಿಯ ಕಲಾವಿದೆಯರಲ್ಲಿ ಒಬ್ಬರಾದ ಶ್ರೀಮತಿ ರೇಣುಕಾದೇವಿಯವರು ರಂಗಪ್ರವೇಶ ಮಾಡಿದ್ದು ಹಲಗೇರಿ ಜಟ್ಟಪ್ಪನವರ ಕಂಪನಿಯ ಮೂಲಕ. ಬಾಲನಟರಾಗಿ ಮೆಚ್ಚುಗೆ ಗಳಿಸುತ್ತಿದ್ದಂತೆ, ಶ್ರೀ ಏಣಗಿ ಬಾಳಪ್ಪನವರ ಕಂಪನಿಯಿಂದ ಆಹ್ವಾನ. ಮುಂದೆ ಐದಾರು ವರ್ಷಗಳ ಕಾಲ ಸೇವೆ ಶ್ರೀ ಅಪ್ಪಾರಾಜ ಮುಧೋಳ ಇವರ ಕಂಪನಿಯಲ್ಲಿ 'ತವರು ಮನೆ', 'ಕುರುಕ್ಷೇತ್ರ', 'ಅಕ್ಷಯಾಂಬರ', 'ರೂಪವತಿ', 'ಮಾನವತಿ' ಮುಂತಾದ ನಾಟಕಗಳ ಮೂಲಕ ಖ್ಯಾತಿಗೆ ಬಂದರು.

ಕರ್ನಾಟಕದ ವಿವಿಧ ಕಂಪನಿಗಳಲ್ಲಿ ನಾಡಿನಾದ್ಯಂತ ತಮ್ಮ ಅಭಿನಯ ಪ್ರತಿಭೆಯನ್ನು ತೋರಿದ ಇವರು, ತಮ್ಮದೇ ಆದ ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ ನೇಸರಗಿ ವೃತ್ತಿಮಂಡಲಿಯನ್ನು ಕಟ್ಟಿ ಆರು ವರ್ಷಗಳ ಕಾಲ ನಡೆಸಿದರು.

ಅನೇಕ ನಾಟಕಗಳಲ್ಲಿ ಗಂಡು ಪಾತ್ರಗಳನ್ನು ಅಭಿನಯಿಸುತ್ತಿದ್ದ ಇವರು 'ಹೇಮರೆಡ್ಡಿ ಮಲ್ಲಮ್ಮ' ನಾಟಕದ ಮಲ್ಲಿಕಾರ್ಜುನನ ಪಾತ್ರಕ್ಕೆ ಬಹು ಜನ ಮನ್ನಣೆ ಗಳಿಸಿದರು. 35 ವರ್ಷಗಳ ಸತತ ರಂಗಭೂಮಿ ಅನುಭವದ ನೆನಪಿನಲ್ಲಿ ಈಗ ವಿಶ್ರಾಂತ ಜೀವನ ಸಾಗಿಸುತ್ತಿದ್ದಾರೆ.

---



## ಶ್ರೀಪತಿ ಮಂಜನಬೈಲು

ಯಕ್ಷಗಾನದ ಪರಿಸರದಲ್ಲೇ ಬೆಳೆಯುತ್ತಿದ್ದ ಬಾಲಕ ಶ್ರೀಪತಿಗೆ ದೊರೆತಿದ್ದುದು ಸ್ತ್ರೀಪಾತ್ರಗಳೇ. 5ನೇ ತರಗತಿಯಲ್ಲಿದ್ದಾಗಲೇ 'ಕುಶಲವ' ನಾಟಕದ ಸೀತೆ ಪಾತ್ರಾಭಿನಯಕ್ಕೆ ಬಂಗಾರದ ಪದಕವನ್ನು ಪಡೆದು, ನಂತರ ಯಕ್ಷಗಾನ, ನಾಟಕ ಎರಡು ಪ್ರಾಕಾರಗಳಲ್ಲೂ ಪಾಲ್ಗೊಳ್ಳುತ್ತಾ ರಂಗಾನುಭವ ಪಡೆದುಕೊಂಡವರು ಶ್ರೀಪತಿ ಮಂಜನಬೈಲು.

ಜೀವನೋಪಾಯಕ್ಕೆ ನೌಕರಿಯನ್ನು ಹಿಡಿದಮೇಲೆ ಆಧುನಿಕ ರಂಗಭೂಮಿಯತ್ತ ಇವರ ಆಸಕ್ತಿ. ಹುಬ್ಬಳ್ಳಿ, ಧಾರವಾಡಗಳಲ್ಲಿ ಗೆಳೆಯ ಚನ್ನಕೇಶವ ಮೂರ್ತಿಯೊಂದಿಗೆ 'ರಂಗ ಸಂಪದ' ಕಟ್ಟಿ, ಬೆಳಗಾವಿಯ ಮಂದಿಗೆ ಹೊಸ ಅಲೆಯ ನಾಟಕಗಳನ್ನು ಮೊದಲ ಬಾರಿಗೆ ಪರಿಚಯಿಸಿದ ಕೀರ್ತಿ ಇವರದು. ಮರಾಠಿ ಜನಗಳಿಗೂ ಆಧುನಿಕ ಕನ್ನಡ ನಾಟಕಗಳನ್ನು ಪರಿಚಯಿಸಿದ ಇವರು ವಿವಿಧ ರಂಗತಂಡಗಳಿಗೆ 50ಕ್ಕೂ ಹೆಚ್ಚಿನ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಅನೇಕ ನಾಟಕೋತ್ಸವಗಳ ನಿರ್ವಾಹಕರಾಗಿ ದುಡಿದಿರುವ ಇವರಿಗೆ ರಂಗವಲಯದ ಗೆಳೆಯರ ಬಳಗ ಅತಿ ಹೆಚ್ಚು. ನಾಟಕ ಅಕಾಡೆಮಿ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ.

---



## ಕೆ. ಶಾಂತ

ಕಲಾವಿದ ಕುಟುಂಬದ ಕುಡಿಯಾಗಿ ಚಿಗುರೊಡೆದ ಶಾಂತ ಅವರಿಗೆ, ತಾತ ಹಾಗು ತಂದೆಯವರಿಂದ ನಾಟಕಕಲೆ ರಕ್ತಗತವಾಗಿ ಬಂದಿದೆ. ತಾಯಿ ಹಾಗು ಅಜ್ಜಿಯವರಿಂದ ಸಂಗೀತದಲ್ಲಿ ಮಾರ್ಗದರ್ಶನ ದೊರೆಯಿತು. ಹಾಗಾಗಿ ನಟನೆ ಮತ್ತು ಸಂಗೀತ ಇವರ ಮೆಚ್ಚಿನ ಹವ್ಯಾಸಗಳಾದವು.

29 ವರ್ಷಗಳ ಸುದೀರ್ಘ ಅನುಭವ ಶಿಕ್ಷಕಿಯಾಗಿ, ಶಾಲೆಗಳಲ್ಲಿ ಪಠ್ಯೇತರ ಚಟುವಟಿಕೆಗಳಲ್ಲಿ ಬಹು ಆಸಕ್ತಿದಾಯಕವಾಗಿ ತೊಡಗಿಸಿಕೊಂಡ ಶಾಂತ ಅವರು ಅನೇಕ

ಮಕ್ಕಳ ಪ್ರತಿಭಾಶೋಧಕ್ಕೂ ಕಾರಣರಾಗಿದ್ದಾರೆ. ಶಕಶೈಲೂಶರು ರಂಗತಂಡದೊಂದಿಗೆ ಶ್ರೀರಂಗ, ಬಿ.ವಿ. ಕಾರಂತ ಮುಂತಾದವರ ಸಂಪರ್ಕದಿಂದ ಅನೇಕ ನಾಟಕಗಳಲ್ಲಿ ಅಭಿನಯ. ಈ ಸಂಸ್ಥೆಯ ಅಧ್ಯಕ್ಷರಾಗಿ 9 ವರ್ಷಗಳ ಸೇವೆ.

ಬೆಂಗಳೂರಿನ ಅನೇಕ ಪ್ರಮುಖ ರಂಗತಂಡಗಳಲ್ಲಿ ಪ್ರಮುಖ ಪಾತ್ರಗಳಲ್ಲಿ ಕಾಣಿಸಿಕೊಂಡಿದ್ದಾರೆ. ಕಳೆದ 25 ವರ್ಷಗಳಲ್ಲಿ 70ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಅನೇಕ ಸ್ಪರ್ಧೆಗಳಲ್ಲಿ ತೀರ್ಪುಗಾರರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಬಾನುಲಿ, ದೂರದರ್ಶನ ಹಾಗೂ ಸಿನಿಮಾ ರಂಗದಲ್ಲೂ ತಮ್ಮ ಪ್ರತಿಭೆಯಿಂದ ಜನಮನ್ನಣೆ ಗಳಿಸಿದ್ದಾರೆ.

---



## ಶಂಕ್ರಯ್ಯ ಬಸಯ್ಯ ಕಲ್ಯಾಣಮಠ

ವಿಜಾಪುರ ಜಿಲ್ಲೆಯ ಶಂಕ್ರಯ್ಯ ಬಸಯ್ಯ ಕಲ್ಯಾಣಮಠ ಇವರು 1933ರಲ್ಲಿ ಜನಿಸಿದರು. ಜೀವನೋಪಾಯಕ್ಕೆ ನೇಕಾರಿಕೆ ಕಾರ್ಯದಲ್ಲಿ ತೊಡಗಿದರು. ಹವ್ಯಾಸಿ ನಾಟಕಗಳಲ್ಲಿನ ಇವರ ಅಭಿನಯವನ್ನು ನೋಡಿದ ಪಂಡಿತ ಗಂಗಾಧರ ಶಾಸ್ತ್ರಿ ತಮ್ಮ ವೃತ್ತಿ ಕಂಪನಿಗೆ ಆಹ್ವಾನಿಸಿದರು.

ಸ್ತ್ರೀ ಪಾತ್ರಗಳನ್ನು ಬಹಳ ಸಹಜವಾಗಿ ಮಾಡುತ್ತಿದ್ದ ಇವರಿಗೆ ಕಂಪನಿಗಳಲ್ಲಿ ಸ್ತ್ರೀ ಪಾತ್ರಗಳೇ ಕಟ್ಟಿಟ್ಟ ಬುತ್ತಿ. ಚಿತ್ತರಗಿ ನಾಟಕ ಮಂಡಲಿಯಲ್ಲಿ 41 ವರ್ಷ ನಿರಂತರ ದುಡಿದಿದ್ದಾರೆ. ಗುಡಗೇರಿ ಬಸವರಾಜು ಹಾಗೂ ಅಂಕನಗೌಡ ಒಡೆತನದ ಸಂಸ್ಥೆಯಲ್ಲೂ ಪಾತ್ರ ನಿರ್ವಹಿಸಿ ಕರ್ನಾಟಕದ ಜನಮನ ರಂಜಿಸಿದ್ದಾರೆ.

---



## ಎನ್.ಎಸ್. ಜೋಷಿ

ಸಾಹಿತ್ಯ-ಕಲೆಗಳ ಅಭಿರುಚಿಯನ್ನು ಬಾಲ್ಯದಿಂದಲೇ ರೂಢಿಸಿಕೊಂಡ ಜೋಷಿಯವರು, ಶಾಲಾದಿನಗಳಲ್ಲೇ ನಾಟಕ ರಚನೆಗೆ ತೊಡಗಿದರು. ಶಿಕ್ಷಕ ಸಮುದಾಯ ಹಾಗೂ ಊರ ಹಿರಿಯರ ಪ್ರೋತ್ಸಾಹದ ನಿರಂತರತೆ ಇವರ ಸಾಹಿತ್ಯ ಕೃಷಿಗೆ ನೀರೆರೆಯಿತು.

ಶಾಲಾ ಕಾಲೇಜುಗಳಲ್ಲಿ ಸಾಂಸ್ಕೃತಿಕ ಚಟುವಟಿಕೆಗಳ ಮುಖ್ಯ ಕೇಂದ್ರವಾಗಿದ್ದ ಇವರು ಕಾರಣಾಂತರದಿಂದ ಕಾಲೇಜು ಓದನ್ನು ಮೊಟಕುಗೊಳಿಸಿದರೂ. ನಾಟಕ ಕಂಪನಿಯ ಕೈಂಕರ್ಯವನ್ನು ಕೈಬಿಡಲಿಲ್ಲ.

ವೃತ್ತಿರಂಗಭೂಮಿಯಲ್ಲಿ ಖ್ಯಾತವಾಗಿರುವ ರತ್ನಮಾಂಗಲ್ಯ, ಚನ್ನಪ್ಪ ಚೆನ್ನೇಗೌಡ, ಬಂಜೆತೊಟ್ಟಿಲು, ಸಿಂಧೂರ ಸಿಂಹಲಕ್ಷ್ಮಣ, ಕಾನೂನಿಗೆ ಸವಾಲ್, ಸಂಗ್ಯಾ ಬಾಳ್ಯಾ ಹುಚ್ಚೇಶ್ವರ ಮಹಾತ್ಮೆ ಮುಂತಾದ 18ಕ್ಕೂ ಹೆಚ್ಚು ಕೃತಿಗಳನ್ನು ನೀಡಿದ್ದಾರೆ.

ಅಲ್ಲದೆ ಅನೇಕ ಧಾರ್ಮಿಕ ಗ್ರಂಥಗಳ ರಚನಾಕಾರರು ಇವರಾಗಿದ್ದಾರೆ. ಕೆಲವು ಕಲಾವಿದರನ್ನು ಕಲೆ ಹಾಕಿ ಸ್ವಂತ ಕಂಪನಿಯನ್ನು ನಡೆಸಿದ ಅನುಭವವೂ ಇವರಿಗಿದೆ.

---



## ಗೌಸ್ ಮೊಹಿದ್ದೀನ್ ಶಿರಹಟ್ಟಿ

ಕಳೆದ ಮೂರು ದಶಕಗಳಿಂದ ನಾಟಕಕಾರನಾಗಿ, ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿರುವ ಜಿ. ಎಂ. ಶಿರಹಟ್ಟಿಯವರು ರಂಗನಾಟಕ ಹಾಗೂ ಬಾನುಲಿ ನಾಟಕಗಳೆರಡನ್ನು ಬರೆದಿದ್ದಾರೆ. ರಂಗಭೂಮಿಯ ಅನೇಕ ವಿಷಯಗಳ ಬಗ್ಗೆ ಹಲವಾರು ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ, ಪ್ರಬಂಧಗಳನ್ನು ಮಂಡಿಸಿರುವ ಇವರು, ರಂಗಸಾಹಿತ್ಯಕ್ಕೂ ತಮ್ಮ ಕಾಣಿಕೆ ಸಲ್ಲಿಸಿದ್ದಾರೆ.

ಉತ್ತಮ ಪ್ರಭುತ್ವ ಲೊಳಲೊಟ್ಟೆ, ಜೋಕುಮಾರ ಸ್ವಾಮಿ, ಜೋಗಿ ಬಾವಿ, ಸಿಕ್ಕಿದ ಉಂಗುರ ಇವರ ಪ್ರಮುಖ ನಾಟಕಗಳು. ಮಕ್ಕಳ ನಾಟಕಗಳು, ಬಾನುಲಿ ಹಾಗೂ ದೂರದರ್ಶನ ನಾಟಕಗಳನ್ನು ರಚಿಸಿ, ಅವುಗಳ ನಿರ್ದೇಶನವನ್ನು ಮಾಡಿದ್ದಾರೆ. ಧಾರವಾಡ, ಗುಲ್ಬರ್ಗಾ, ಹೈದರಾಬಾದುಗಳಲ್ಲಿ ಇವರು ಕ್ರಿಯಾಶೀಲರಾಗಿದ್ದಾರೆ. ಇವರ ಅನೇಕ ನಾಟಕಗಳಿಗೆ ಆಕಾಶವಾಣಿ ಪುರಸ್ಕಾರ ಹಾಗೂ ಮೆಚ್ಚುಗೆ ದೊರೆತಿದೆ.

---



## ಸರೋಜಮ್ಮ ಧುತ್ತರಗಿ

ಸಂಗೀತ ಮತ್ತು ನೃತ್ಯ ಇವರಿಗೆ ದೈವದತ್ತವಾಗಿ ಒಲಿದ ಕಲೆ. ಚಿಕ್ಕಂದಿನಲ್ಲೆ ಶಾಲೆಗಳಲ್ಲಿ ಇವರು ತಮ್ಮ ಪ್ರತಿಭೆಯಿಂದ ಹಲವಾರು ಪಾರಿತೋಷಕಗಳನ್ನು ಪಡೆದಿದ್ದರು. ಇದಕ್ಕೆ ಪಾಲಕರಿಂದ ನಿರಂತರ ಪ್ರೋತ್ಸಾಹ. ಇದೇ ಪ್ರೋತ್ಸಾಹ ಇವರು ರಂಗಭೂಮಿ ಪ್ರವೇಶಿಸಲು ಕಾರಣವಾಯಿತು. 'ಚಿತ್ರಾಂಗದ' ನಾಟಕದ 'ಕೃಷ್ಣ'ನಾಗಿ ಬೆಳಗಾವಿ ಕಂಪನಿಯಲ್ಲಿ ಅಭಿನಯಿಸಿದ ಇವರು ಉತ್ತರ ಕರ್ನಾಟಕದ ಖ್ಯಾತ ರಂಗತಂಡಗಳಾದ ಹಲಗೇರಿ ಜಟ್ಟಪ್ಪ, ಚಿಂದೋಡಿ ಕಂಪನಿಗಳಲ್ಲಿ ಹಾಗೂ ಮಾಸ್ತರ್ ಹಿರಣ್ಣಯ್ಯನವರ ಕಂಪನಿಯಲ್ಲಿ ಅಭಿನಯಿಸಿದರು. ಗುಬ್ಬಿ ಕಂಪನಿಯಲ್ಲಿನ ತರಬೇತಿ ಇವರನ್ನು ಉತ್ತಮ ನಟಿ, ನಿರ್ದೇಶಕಿಯನ್ನಾಗಿಸಿತು.

ಖ್ಯಾತಬರಹಗಾರ, ಕವಿ ಪಿ.ಬಿ. ಧುತ್ತರಗಿಯವರ ಧರ್ಮಪತ್ನಿಯಾಗಿ, ಸ್ವಂತ ಕಂಪನಿಯನ್ನು ಕಟ್ಟಿ ಸತತ 17 ವರ್ಷಗಳ ಕಾಲ ಕಂಪನಿ ನಡೆಸಿದರು. ಶ್ರೀ ಸಿದ್ಧಲಿಂಗ ವಿಜಯ ನಾಟ್ಯ ಸಂಘದ ರೂವಾರಿಯಾದ ಸರೋಜಮ್ಮ ತಮ್ಮ ಕಂಪನಿಯ ಮೂಲಕ ಅನೇಕ ನಟ ನಟಿಯರನ್ನು ಬೆಳಕಿಗೆ ತಂದಿದ್ದಾರೆ. ಶ್ರೀ ಧುತ್ತರಗಿಯವರು ಬರೆದ 'ಸಿಂಧೂರಲಕ್ಷ್ಮಣ'ವನ್ನು ರಂಗದ ಮೇಲೆ ಹಾಗೂ ಆಕಾಶವಾಣಿಗಾಗಿ ನಿರ್ದೇಶಿಸಿ ಯಶಸ್ವಿಯಾದರು. ಕರ್ನಾಟಕದ ವಿವಿದೆಡೆ ಇವರು ತಮ್ಮ ಅಭಿನಯ ಚಾತುರ್ಯವನ್ನು ಪ್ರದರ್ಶಿಸಿದ್ದಾರೆ.

---



## ಎನ್. ಶಿಲ್ಪಾಚಾರಿ

ಬಾಲ್ಯದ ಚಿತ್ರಕಲಾ ಆಸಕ್ತಿಯನ್ನು ಹೆಮ್ಮರವಾಗಿ ಬೆಳೆಸಿ, ಇಂದು ವೃತ್ತಿರಂಗ ತಂಡಗಳಿಗೆ ದೃಶ್ಯ ವಿನ್ಯಾಸಗಳನ್ನು ಚಿತ್ರಿಸುವ ಮೇರು ಕಲೆಯನ್ನಾಗಿಸಿ, ಕಲೆಯನ್ನು ಕಾಯಕವನ್ನಾಗಿಸಿಕೊಂಡು ಬದುಕುತ್ತಿರುವವರು ಎನ್. ಶಿಲ್ಪಾಚಾರಿ.

ತಮ್ಮ ಊರಿನ ಸುತ್ತಮುತ್ತ ಬರುತ್ತಿದ್ದ ನಾಟಕ ಕಂಪನಿಗಳ ಸೀನರಿಗಳನ್ನು ನೋಡಿ, ತಾವೇ ಒಂದು ರಂಗಸಜ್ಜಿಕೆಯನ್ನು ನಿರ್ಮಿಸಿದರು. ನಂತರ ಸಿರಿಗೆರೆಯ ಶಿವಮೂರ್ತಿ ಸ್ವಾಮಿಗಳ

ಸಾನ್ನಿಧ್ಯದಲ್ಲಿ ಅವರ ರಂಗಮಂದಿರದ ಸೀನರಿಗಳನ್ನು ಬರೆದುಕೊಟ್ಟರು. ನಂತರದಲ್ಲಿ ಬಳ್ಳಾರಿಯ ಶ್ರೀಮತಿ ಲಲಿತಮ್ಮನವರ ಕಂಪನಿಯಲ್ಲಿ ಸೇರಿದರು. ಮುಂದಿನ ದಿನಗಳಲ್ಲಿ ಉತ್ತರ ಕರ್ನಾಟಕದ ಬಹುತೇಕ ಎಲ್ಲಾ ಕಂಪನಿಗಳಿಗೂ ರಂಗಸಜ್ಜಿಕೆಯನ್ನು ನಿರ್ಮಿಸಿಕೊಟ್ಟ ಕೀರ್ತಿ ಇವರದು. ಇಂದಿಗೂ ಕರ್ನಾಟಕದ ರಂಗಮಂಡಳಿಗಳಿಗೆ ಸೀನರಿಗಳನ್ನು ನಿರ್ಮಿಸಿಕೊಡುತ್ತಿರುವ ಶಿಲ್ಪಾಚಾರಿಯವರು ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನವರು.

---



## ಎಂ. ಷಣ್ಮುಖಯ್ಯ ಸ್ವಾಮಿ

ಬಳ್ಳಾರಿ ಜಿಲ್ಲೆಯ ಷಣ್ಮುಖಸ್ವಾಮಿ, ತಮ್ಮ ಪ್ರೌಢ ಶಿಕ್ಷಣವನ್ನು ಮುಗಿಸಿ, ಜೀವನೋಪಾಯಕ್ಕಾಗಿ ರಂಗಭೂಮಿಗೆ ಬಂದರು. ಗಜಾನನ ನಾಟಕ ಮಂಡಲಿಯಲ್ಲಿ ಪ್ರಥಮವಾಗಿ ಬಣ್ಣ ಹಚ್ಚಿದ ಇವರು ಜಯಲಕ್ಷ್ಮಿ ನಾಟ್ಯ ಸಂಘ, ಅಮರೇಶ್ವರ ನಾಟ್ಯ ಸಂಘ, ಮೃತ್ಯುಂಜಯ ನಾಟ್ಯ ಸಂಘ, ಕೆ.ಬಿ.ಆರ್. ಡ್ರಾಮಾಕಂಪನಿಯಲ್ಲೂ ನಿರಂತರವಾಗಿ ತಮ್ಮ ಕಲಾಸೇವೆಯನ್ನು ಮಾಡುತ್ತಾ ಬಂದಿದ್ದಾರೆ. ಕಲಾಬದುಕಿನ ಬಗ್ಗೆ ಸಾರ್ಥಕತೆಯನ್ನು ಪಡೆದಿರುವ ಇವರು ನೆಮ್ಮದಿಯ ಜೀವನ ಸಾಗಿಸುತ್ತಿದ್ದಾರೆ. ಗ್ರಾಮೀಣ ಪ್ರದೇಶದಿಂದ ಬಂದು, ಬಡತನದ ಬೇಗೆಯನ್ನು ರಂಗಭೂಮಿಯನ್ನು ಅವಲಂಬಿಸಿದ ಇವರಿಗೆ ತಮ್ಮ ಜೀವತದ ಕೊನೆ ಉಸಿರಿರುವವರೆಗೂ ಕಲಾಸೇವೆಯೇ ಗುರಿಯಾಗಿದೆ.

---



## ಶಿವಪ್ಪ ಶೇಷಪ್ಪ ಶಿಂಗೆ

ನಾಲ್ಕು ದಶಕಗಳಿಗೂ ಹೆಚ್ಚುಕಾಲ ರಂಗಭೂಮಿ ಸೇವೆ ಸಲ್ಲಿಸಿರುವ ಶಿವಪ್ಪಶಿಂಗೆಯವರು ಉತ್ತರಕರ್ನಾಟಕ ವೃತ್ತಿರಂಗದಲ್ಲಿ ವಿಶೇಷ ಹೆಸರುಗಳಿಸಿದ್ದಾರೆ. ಜೀವನೋಪಾಯಕ್ಕಾಗಿ ಬಾಲ್ಯದಲ್ಲೇ ಬಣ್ಣದ ಬದುಕನ್ನು ಅರಿಸಿಕೊಂಡು ಬಂದವರು, ವೃತ್ತಿಕಂಪನಿಯ ಪ್ರಚಾರದಿಂದ ಹಿಡಿದು ಎಲ್ಲಾ ವಿಭಾಗಗಳಲ್ಲೂ ದುಡಿದು ಮೇಲೆ ಬಂದವರು.

ನಟರಾಗಿ ಇವರು ಚಿಂದೋಡಿ ಕಂಪನಿ, ಬೆಳಗಾವಿ ಕಂಪನಿ, ಧುತ್ತರಗಿ ಕಂಪನಿಗಳಲ್ಲಿ ಸೇವೆಸಲ್ಲಿಸಿರುವ ಇವರು ಜಾನಪದ ಕಲಾವಿದರಾಗಿ ಹೇಮರೆಡ್ಡಿ ಮಲ್ಲಮ್ಮ, ಶ್ರೀ ಕೃಷ್ಣಪಾರಿಜಾತ, ಲೋಕ ನಾಟ್ಯತಮಾಶದಲ್ಲಿ ವಿಶೇಷ ಪರಿಣತಿ ಸಾಧಿಸಿದ್ದಾರೆ. ಬೆಳಗಾವಿ ಜಿಲ್ಲೆಯ ಚಿಕ್ಕೋಡಿನ ತಾಲ್ಲೂಕಿನ ಶಿವಪ್ಪ ಶಿಂಗೆ ಪ್ರಸ್ತುತ ವಿಶ್ರಾಂತಿ ಜೀವನ ಸಾಗಿಸುತ್ತಿದ್ದಾರೆ.

---



## ಪಿ. ಶೇಷಗಿರಿ

ಹಳೆಯ ತಲೆಮಾರಿನ ನಾಯಕ ನಟರ ಸಾಲಿನಲ್ಲಿ ಪಿ. ಶೇಷಗಿರಿ ಅವರದು ಪ್ರಮುಖ ಹೆಸರು. ವೃತ್ತಿಯಿಂದ ದೂರವಾಣಿ ಕಾರ್ಖಾನೆಯ ನೌಕರರಾಗಿದ್ದರು ಹತ್ತಾರು ಕಂಪನಿಗಳ ಖಾಯಂ ನಟರಾಗಿ ತಮ್ಮ ರಂಗ ಸೇವೆಯನ್ನು ಸಲ್ಲಿಸಿದ್ದಾರೆ.

ಹಾರ್ಮೋನಿಯಂ ವಾದನದಲ್ಲಿ ಪರಿಶ್ರಮ ಪಡೆದಿರುವ ಇವರು ಶ್ರೀ ಸುಬ್ಬಯ್ಯ ನಾಯ್ಡು ಕಂಪನಿ, ಶ್ರೀ ಹೊನ್ನಪ್ಪ ಭಾಗವತರ್, ಶ್ರೀ ನಾರಾಯಣದಾಸರು, ಶ್ರೀ ಯೋಗನರಸಿಂಹ

ಮುಂತಾದವರ ಕಂಪನಿಗಳಲ್ಲಿ ಹಾರ್ಮೋನಿಯಂ ವಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಅರ್ಜುನ, ಕರ್ಣ, ರಾಮ, ಆಂಜನೇಯ ಮುಂತಾದವು ಇವರ ಸಿದ್ಧಪಾತ್ರಗಳು.



## ಎಂ.ಎಸ್. ಉಮೇಶ್

ಖ್ಯಾತ ಕೆ. ಹಿರಣ್ಣಯ್ಯ ಮಿತ್ರಮಂಡಲಿಯಲ್ಲಿ ಅ.ನ.ಕೃ. ಅವರ 'ಜಗಜ್ಯೋತಿ ಬಸವೇಶ್ವರ' ನಾಟಕದಲ್ಲಿ ಬಾಲ ನಟರಾಗಿ ರಂಗಪ್ರವೇಶ ಮಾಡಿದ ಭಾಗ್ಯವಂತ ಎಂ.ಎಸ್. ಉಮೇಶ್.

ನಂತರದ ವರ್ಷಗಳಲ್ಲಿ ಗುಬ್ಬಿ ಕಂಪನಿಯನ್ನು ಸೇರಿ, ಯುವ ಪಾತ್ರಗಳಿಗೆ ಜೀವ ತುಂಬತೊಡಗಿದರು. ಕನ್ನಡ ಥಿಯೇಟರ್ಸ್‌ನಲ್ಲಿ ಇವರು ಮಾಡಿದ 'ಚಂದ್ರಹಾಸ' ನಾಟಕದ ಚಂದ್ರಹಾಸ ಪಾತ್ರ ಇವರನ್ನು ಚಲನಚಿತ್ರಕ್ಕೆ ಎಳೆದು ತಂದಿತು. 'ಚಂದ್ರಹಾಸ' ಪಾತ್ರವನ್ನು ನೋಡಿದ ಪುಟ್ಟಣ್ಣಕಣಗಾಲ್‌ರವರು, ಬಿ.ಆರ್. ಪಂತಲು ಅವರು ತಯಾರಿಸಿದ ಮಕ್ಕಳ ಚಿತ್ರ 'ಮಕ್ಕಳ ರಾಜ್ಯ'ದ ನಾಯಕನ ಪಾತ್ರಕ್ಕೆ ಪರಿಚಯಿಸಿದರು.

ಮುಂದಿನ ದಿನಗಳಲ್ಲಿ ಮತ್ತೆ ಹಿರಣ್ಣಯ್ಯ ಮಿತ್ರಮಂಡಲಿಯಲ್ಲಿ ಪಿಯಾನೋ ವಾದಕರಾಗಿ ಕಾರ್ಯ ನಿರ್ವಹಿಸಿದರು. ಯೋಗಾನರಸಿಂಹ ಅವರ ಕಂಪನಿ, ಎನ್. ಶ್ರೀಕಂಠಮೂರ್ತಿಗಳ ಕಂಪನಿಯಲ್ಲಿ ವೃತ್ತಿ ಜೀವನವನ್ನು ಮುಂದುವರಿಸಿದ ಉಮೇಶ್ ಮತ್ತೆ ಕಣಗಾಲ್ ಪುಟ್ಟಣ್ಣನವರ 'ಮುನಿತಾಯಿ' ಚಿತ್ರದ ಮೂಲಕ ಬೆಳ್ಳಿತೆರೆಗೆ ಬಂದರು. ಅಂದಿನಿಂದ ಚಲನಚಿತ್ರ ದೂರದರ್ಶನ ಹಾಗೂ ರಂಗಭೂಮಿಯಲ್ಲಿ ನಟರಾಗಿ ಕಲಾಸೇವೆ ಸಲ್ಲಿಸುತ್ತಾ ಇದ್ದಾರೆ.



## ಎಂ.ಪಿ. ವೆಂಕಟರಾವ್

ಬೆಂಗಳೂರು ಹವ್ಯಾಸಿ ರಂಗಭೂಮಿ ಕಂಡ ಉತ್ತಮ ನಟರಲ್ಲಿ ವೆಂಕಟರಾವ್ ಕೂಡ ಒಬ್ಬರು. ಖ್ಯಾತ 'ನಟರಂಗ' ತಂಡದ ಎಲ್ಲಾ ನಾಟಕಗಳಲ್ಲೂ ವೆಂಕಟರಾವ್ ನೀಡಿರುವ ಅಭಿನಯ ಆದರ್ಶಪ್ರಾಯವಾಗಿದೆ.

ಕಾಕನಕೋಟೆ, ತುಘಲಕ್, ಮಿಡ್ ಸಮ್ಮರ್ ನೈಟ್ಸ್ ಡ್ರೀಮ್, ಒಥೆಲೋ, ಗಾಡೋ, ಚಾಕ್‌ಸರ್ಕಲ್, ಚಿಕವೀರ ರಾಜೇಂದ್ರ, ನಮ್ಮೊಳಗೊಬ್ಬ ನಾಜೂಕಯ್ಯ.... ಹೀಗೆ ನೂರಾರು ನಾಟಕಗಳ ಸಾವಿರಾರು ಪ್ರಯೋಗಗಳಲ್ಲಿ ನಾಡಿನ ಎಲ್ಲೆಡೆ ಅಭಿನಯಿಸಿ ಜನಮೆಚ್ಚುಗೆ, ಮಾಧ್ಯಮದ ಮೆಚ್ಚುಗೆ ಗಳಿಸಿದ್ದಾರೆ.

ಕಾಲೇಜು ದಿನಗಳಲ್ಲಿ ಅಂಟಿಸಿಕೊಂಡ ರಂಗದನಂಟು ಗಟ್ಟಿಗೊಂಡಿದ್ದು ಮೇಕಪ್ ನಾಣಿಯವರ ಮಾರ್ಗದರ್ಶನದಿಂದ. ಖಾಸಗಿ ಸಂಸ್ಥೆಯಲ್ಲಿ ಉದ್ಯೋಗಿಯಾಗಿರುವ ವೆಂಕಟರಾವ್ ಸಿನಿಮಾ, ಕಿರುತೆರೆಯಲ್ಲೂ ಅಭಿನಯಿಸಿದ್ದಾರೆ.

ಆಷಾಢ್‌ಕಾ ಏಕ್‌ದಿನ್, ಮೋಟೇರಾಮ್ ಕಾ ಸತ್ಯಾಗ್ರಹ್ ಹಿಂದಿ ನಾಟಕಗಳನ್ನು ಅನುವಾದಿಸಿ, ಕನ್ನಡ ರಂಗಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.



## ಆರ್.ಎಸ್. ವಾಸುದೇವ ಮೂರ್ತಿ (ವಾಸು)

ಮೈಸೂರು ರಂಗಭೂಮಿಯ ಪರಿಚಿತರಿಗೆ ವಾಸು–ಅಮರ ಕಲಾಸಂಘ ವಾಸು ಎಂದೇ ಪರಿಚಿತರಾಗಿದ್ದಾರೆ. ಶಾಲಾ ಕಾಲೇಜು ದಿನಗಳಿಂದ ಇವರಿಗೆ ಅಂಟಿದ ಗೀಳು, ಇಂದಿಗೂ ನಿರಂತರವಾಗಿ, ಇವರ ಹಾಗೂ ಗೆಳೆಯರ ಬಳಗದ ಕ್ರಿಯಾಶೀಲತೆಗೆ ಕಾರಣವಾಗಿದೆ.

ನಾಟಕ ಮಾಧ್ಯಮದ ಮೇಲೆ ಹಿಡಿತ ಸಾಧಿಸಲು ರಾಷ್ಟ್ರೀಯ ನಾಟಕ ಶಾಲೆಯ ಮೆಟ್ಟಿಲನ್ನು ಏರಿದರೂ, ಅನಿವಾರ್ಯ ಕಾರಣವಾಗಿ ಅರ್ಧಕ್ಕೆ ಹಿಂತಿರುಗಿದರು. ಆದರೆ ನಾಟಕದ ಮೇಲಿನ ಪ್ರೇಮವನ್ನು ಅವರು ಕಳೆದುಕೊಳ್ಳಲಿಲ್ಲ.

ಜೀವನೋಪಾಯಕ್ಕಾಗಿ ಮುದ್ರಣಾಲಯವನ್ನು ಸ್ಥಾಪಿಸಿಕೊಂಡು, ಮೈಸೂರು ಹವ್ಯಾಸಿ ರಂಗದ ಬೆಳವಣಿಗೆಗೆ ತಮ್ಮ ಸಂಸ್ಥೆಯ ಮೂಲಕ ಇವರು ನೀಡಿದ ಕೊಡುಗೆ ಗಣನೀಯ. ನಟನೆಯಲ್ಲಿ ಆಸಕ್ತಿ ಇದ್ದರೂ, ಉತ್ತಮ ನಟರಾಗಿದ್ದರೂ, ನೇಪಥ್ಯಕಲೆ ಹಾಗೂ ರಂಗವ್ಯವಸ್ಥಾಪಕರಾಗಿ ಅನೇಕರಿಗೆ ಮಾದರಿಯಾದ ಇವರು ಮೈಸೂರಿನಲ್ಲಿ ಹೊಸ ಪ್ರತಿಭೆಗಳನ್ನು ಪ್ರೋತ್ಸಾಹಿಸಲು ವಾರ್ಷಿಕ ಸ್ಪರ್ಧೆಗಳನ್ನು ನಡೆಸುತ್ತಾ, ಎಳೆಯರಿಂದ ತರುಣರವರೆಗೆ ಹೊಸ ಕ್ರಿಯಾಶೀಲರನ್ನು ಹುಡುಕಿ ತಂದರು.

ಅನೇಕ ಖ್ಯಾತ ನಾಮ ನಿರ್ದೇಶಕರನ್ನು ತಮ್ಮ ತಂಡದ ಮೂಲಕ ಮೈಸೂರಿಗೆ ಕರೆತಂದು, ಮೈಸೂರು ರಂಗಭೂಮಿಯನ್ನು ವೈವಿಧ್ಯಮಯಗೊಳಿಸುವಲ್ಲಿ ಶ್ರಮಿಸುತ್ತಿದ್ದಾರೆ ವಾಸು.





## ಸಿ. ವಿಶ್ವನಾಥರಾವ್

ಹವ್ಯಾಸಿ ರಂಗದಲ್ಲಿ ನಟ, ನಿರ್ದೇಶಕರಾಗಿ ಅಪಾರ ಅನುಭವ ಪಡೆದಿರುವ ಸಿ. ವಿಶ್ವನಾಥ್‌ರಾವ್, ಬೆಂಗಳೂರಿನ ಹಿರಿಯ ರಂಗಚೇತನಗಳಲ್ಲಿ ಒಬ್ಬರು. ಎಲೆಮರೆಕಾಯಿಯಂತೆ ಸತತವಾಗಿ 4 ದಶಕಗಳಿಗೂ ಹೆಚ್ಚು ಕಾಲದಿಂದ ಸಕ್ರಿಯವಾಗಿರುವ ಇವರು, ಹವ್ಯಾಸಿ ತಂಡಗಳು ಹೆಚ್ಚು ಇಲ್ಲದಿದ್ದ ಕಾಲದಲ್ಲಿ ಹುಟ್ಟಿಕೊಂಡ 'ರವಿಕಲಾವಿದರು' ಸ್ಥಾಪಕರಲ್ಲಿ ಒಬ್ಬರು.

ಭಾರತ ಎಲೆಕ್ಟ್ರಾನಿಕ್ ಲಿ. ದಲ್ಲಿ ತಮ್ಮ ವೃತ್ತಿ ಜೀವನವನ್ನು ಕಳೆದ ಇವರು, ಬಿ.ಇ.ಎಲ್. ಲಲಿತ ಕಲಾಸಂಘದ ಪ್ರಾರಂಭದಲ್ಲಿ ಬಹುಮುಖ್ಯ ಪಾತ್ರವಹಿಸಿದ್ದಾರೆ.

ಆಕಾಶವಾಣಿ, ದೂರದರ್ಶನಗಳಲ್ಲೂ ಕಲಾವಿದರಾಗಿ ಸೇವೆ ಸಲ್ಲಿಸಿದ್ದಾರೆ. ಈವರೆಗೆ ಸುಮಾರು 100 ರಂಗನಾಟಕಗಳಲ್ಲಿ ಅಭಿನಯಿಸುವುದರೊಂದಿಗೆ ಅನೇಕ ನಾಟಕಗಳ ರಚನೆ, ನಿರ್ದೇಶನಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಬೆಂಗಳೂರಿನ ಖ್ಯಾತರಂಗತಂಡಗಳಲ್ಲಿ ಪಾಲ್ಗೊಂಡಿದ್ದಾರೆ. ಪ್ರಸ್ತುತ 'ಪರಸ್ಪರ' ಎಂಬ ರಂಗತಂಡವನ್ನು ಹುಟ್ಟುಹಾಕಿ ಸಕ್ರಿಯರಾಗಿದ್ದಾರೆ.





## ಎನ್. ವಸಂತ ಕುಮಾರ್

ಸತತ 40 ವರ್ಷಗಳ ರಂಗಭೂಮಿಯ ಅನುಭವವಿರುವ ಎನ್. ವಸಂತ ಕುಮಾರ್ ಬೆಂಗಳೂರಿನವರು. ಬಾಲ್ಯದಲ್ಲೇ ರಂಗಪ್ರವೇಶ ಮಾಡಿದ ಇವರು ಕುಶನ ಪಾತ್ರದೊಂದಿಗೆ ಪ್ರಶಂಸೆ, ಪ್ರಶಸ್ತಿಗಳನ್ನು ಪಡೆದರು.

ಇದುವರೆಗೂ 4000ಕ್ಕೂ ಹೆಚ್ಚು ನಾಟಕ ಪ್ರಯೋಗಗಳಲ್ಲಿ ನಟಿಸಿರುವ ಇವರು ಪ್ರಸಾಧನ ವಿಭಾಗದಲ್ಲಿ ಗಣನೀಯ ಸೇವೆ ಸಲ್ಲಿಸಿದ್ದಾರೆ. ತಮ್ಮದೇ ಆದ ಚಿತ್ರಭಾರತಿ ಕಲಾವಿಲಾಸಿ ತಂಡವನ್ನು ಕಳೆದ 34 ವರ್ಷಗಳಿಂದ ನಡೆಸಿಕೊಂಡು ಬಂದಿರುವ ವಸಂತ ಕುಮಾರ್, ಹಿರಣ್ಣಯ್ಯ ಮಿತ್ರಮಂಡಲಿ, ಸಂಗಮೇಶ್ವರ ನಾಟಕ ಮಂಡಲಿಗಳಲ್ಲಿ ಅಭಿನಯಿಸಿದ್ದಾರೆ.

ನೂರಾರು ನಾಟಕಗಳಿಗೆ ರಂಗಸಜ್ಜಿಕೆಯನ್ನು ನಿರ್ಮಿಸಿಕೊಟ್ಟಿರುವ ಇವರು ನಿರ್ದೇಶನ ಮಾಧ್ಯಮದಲ್ಲೂ ಅನುಭವಗಳಿಸಿದ್ದಾರೆ.

---



## ಟಿ. ವೆಂಕಟನರಸಯ್ಯ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಂಗಪ್ರತಿಭೆ ವೆಂಕಟನರಸಯ್ಯ ಅವರು ಶಾಲಾದಿನಗಳಿಂದಲೇ ರಂಗಭೂಮಿಯ ರುಚಿ ಕಂಡವರು. ಸ್ನೇಹರಾಗ ನಾಟಕ ತಂಡವನ್ನು ಕಟ್ಟಿ, ರಾಜ್ಯಮಟ್ಟದ ನಾಟಕ ಸ್ಪರ್ಧೆಗಳಲ್ಲಿ ಭಾಗವಹಿಸಿ ಅನೇಕಬಾರಿ ಪ್ರಶಸ್ತಿ ಗಳಿಸಿದ್ದಾರೆ. ಪೌರಾಣಿಕ ನಾಟಕಗಲಲ್ಲಿ ದುರ್ಯೋಧನ, ಭೀಮ, ಲಕ್ಷ್ಮಣ, ಕೃಷ್ಣ ಮುಂತಾದ ಪಾತ್ರಗಳಲ್ಲಿ ಅಭಿನಯಿಸಿ ಉತ್ತಮ ನಟರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಹಲವಾರುಬಾರಿ ನಾಟಕಗಳನ್ನು ಪ್ರದರ್ಶಿಸಿ, ಅಶಕ್ತ ಕಲಾವಿದರಿಗೆ ಹಣ ಸಂಗ್ರಹಿಸಿ ಕೊಟ್ಟಿದ್ದಾರೆ.

---

## 1995ರ ಪ್ರಶಸ್ತಿ ವಿಜೇತರು



### ಗೋವಿಂದರಾವ್ ಜಿ.ಕೆ. (ಫೆಲೋಶಿಪ್)

ಹೆಸರಾಂತ ನಟರೂ, ವಿಮರ್ಶಕರೂ ಆಗಿರುವ ಗರ್ಗೇಶ್ವರಿ ಕೃಷ್ಣಮೂರ್ತಿ ಗೋವಿಂದರಾವ್ ಇಂಗ್ಲಿಷ್ ಪ್ರಾಧ್ಯಾಪಕರಾಗಿ ನಿವೃತ್ತರಾಗಿದ್ದರೂ ಅವರ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಂಗಭೂಮಿಯ ಕಾಳಜಿಗಳು ಇನ್ನೂ ನಿವೃತ್ತಿ ಹೊಂದಿಲ್ಲ ಹಾಗೂ ಹೊಂದುವುದೂ ಇಲ್ಲ.

1956ರಷ್ಟು ಹಿಂದೆಯೇ ಕನ್ನಡ ಸಾಹಿತ್ಯ ಪರಿಷತ್ತಿನ ರಾಜ್ಯಮಟ್ಟದ ಸ್ಪರ್ಧೆಯಲ್ಲಿ ಇವರ ನಾಟಕಕ್ಕೆ ಬಹುಮಾನ ಬಂದಿತ್ತು. ಇವರ ಕಿರುಕಾದಂಬರಿ 'ಈಶ್ವರ ಅಲ್ಲಾ' ಎರಡು ಮುದ್ರಣ ಕಂಡಿದೆಯಲ್ಲದೆ ರಂಗಕೃತಿಯಾಗಿ ರಂಗವೇರಿದೆ. 'ಅಯ್ನು ಲೇಖನಗಳು' ವಿಮರ್ಶಾಕೃತಿಯಾಗಿದೆ. ಇವರ ಅನುವಾದಿತ ನಾಟಕಗಳಿಂದ 'ಚೆಗೆವಾರ', 'ನನಗೆ ಯಾರ ಹಂಗು' ನಟರಂಗದವರಿಂದ ಮತ್ತು 'ಕಗ್ಗತ್ತಲೆಯಲ್ಲಿ ಕೋಲ್ಮಿಂಚು' ಸಿಂಹ ಅವರ ವೇದಿಕೆಯವರಿಂದ ಯಶಸ್ವೀ ಪ್ರಯೋಗಗಳಾಗಿವೆ. 1967ರಲ್ಲಿ ಸಾಗರದಲ್ಲಿ 'ತುಘಲಕ್' ನಾಟಕ ನಿರ್ದೇಶಿಸಿ, ಅಭಿನಯಿಸಿದರು. ಸಮುದಾಯ ಸಂಸ್ಥೆಯ ಪದಾಧಿಕಾರಿಗಳಾಗಿ ಬಹಳಷ್ಟು ಅರ್ಥಪೂರ್ಣ ನಾಟಕಗಳು ರಂಗಕ್ಕೆ ಬರಲು ಕಾರಣರಾದರು. ಅಂಕುರ್ ನಿರ್ದೇಶನದ 'ಸಂಸ್ಕಾರ', ಪ್ರಸನ್ನರ 'ಮ್ಯಾಕ್‌ಬೆತ್', ಬಿ.ವಿ. ಕಾರಂತರ 'ಚೆಗೆವಾರ' ನಾಟಕಗಳಲ್ಲಿ ಇವರ ಅಭಿನಯ ಎಂದೂ ನೆನಪಿನಲ್ಲಿ ಉಳಿಯುವಂಥದ್ದು.

ರಂಗಚಳವಳಿಯ ಜೀವಂತಿಕೆಗಾಗಿ ವಿದ್ಯಾರ್ಥಿ ಸಮುದಾಯಕ್ಕೆ ರಂಗಭೂಮಿಯಲ್ಲಿ ಉತ್ತಮವಾದುದನ್ನು ನೀಡಿ ಅವರ ಅಭಿರುಚಿಯನ್ನು ಬೆಳೆಸಬೇಕೆಂಬ ಗುರಿಯಿಂದ ಮೊದಲು ಸಾಗರದಲ್ಲಿ ನಂತರ ಬೆಂಗಳೂರಲ್ಲಿ ನೆಲೆಸಿದಾಗ ವಿದ್ಯಾರ್ಥಿ ಸಮುದಾಯದಲ್ಲಿ ಶ್ರೀರಂಗರ, ಲಂಕೇಶರ, ಕೈಲಾಸಂರ ಮತ್ತು ಇಂಗ್ಲಿಷ್ ನಾಟಕಗಳನ್ನು ಆಡಿಸಿದರು. ಹವ್ಯಾಸಿ ತಂಡಗಳ ಪ್ರಯೋಗಶೀಲತೆ, ಅಚ್ಚುಕಟ್ಟುತನ ಈ ಪ್ರದರ್ಶನಗಳಲ್ಲಿ ಕಾಣಬಹುದಿತ್ತು. ವಿದ್ಯಾರ್ಥಿ ಸಮುದಾಯದಲ್ಲಿ ರಂಗಚಳವಳಿಗಳ ಬಗ್ಗೆ ಅರಿವು ತಂದುಕೊಟ್ಟವರಲ್ಲಿ ಪ್ರಮುಖರು.

ಚಲನಚಿತ್ರರಂಗ ಕಂಡ ಕೆಲವು ಉತ್ತಮ ಚಿತ್ರಗಳಲ್ಲಿ ಜಿಕೆಜಿ ಅಭಿನಯಿಸಿದ್ದಾರೆ. ಕಥಾಸಂಗಮ, ಅರಿವು, ಗ್ರಹಣ ಮುಂತಾದವು. ಇವರ ಶ್ರೀಮತಿಯವರಾದ ಮಂಜುಳಾ ಗೋವಿಂದರಾವ್ ಅವರು ಸಹ ರಂಗಭೂಮಿಯ ಪ್ರತಿಭಾವಂತ ಅಭಿನೇತ್ರಿಯಾಗಿದ್ದು ಸಂಸಾರದ ನಂಟು ರಂಗಭೂಮಿಗೂ ವಿಸ್ತರಿಸಿದೆ. ಸಾಮಾಜಿಕ ಸಾಂಸ್ಕೃತಿಕ ಮತ್ತು ರಾಜಕೀಯ ವಲಯಗಳಲ್ಲಿ ನಡೆಯುತ್ತಿರುವ ಭ್ರಷ್ಟತೆ, ಮತಾಂಧತೆಯನ್ನು ಕಂಡು ಹೇಸುವ ಜಿಕೆಜಿ ಆಗಾಗ್ಗೆ ವೇದಿಕೆಗಳಲ್ಲಿ ಪತ್ರಿಕೆಗಳಲ್ಲಿ ಬಹು ನಿಷ್ಠುರವಾಗಿ ಮಾತನಾಡಿ, ಬರೆದು ತಮ್ಮ ನೋವನ್ನು ಖೇದವನ್ನು ತೋಡಿಕೊಳ್ಳುತ್ತಿರುತ್ತಾರೆ. ಸಾಮಾಜಿಕ ಕಳಕಳಿಗೆ ಮಿಡಿಯುವ ದನಿಯಾಗಿದ್ದಾರೆ.

---



### ಡಾ. ನಾ. ದಾಮೋದರಶೆಟ್ಟಿ (ಫೆಲೋಶಿಪ್)

ರಂಗಭೂಮಿ ವಲಯದಲ್ಲಿ 'ನಾದಾ' ಎಂದೇ ಪರಿಚಿತರಾಗಿರುವ ಡಾ. ದಾಮೋದರಶೆಟ್ಟಿ ದಕ್ಷಿಣ ಕನ್ನಡ ಜಿಲ್ಲೆಯ ರಂಗಭೂಮಿಗೆ ರೆಕ್ಕೆ ನೀಡಿದವರು. ಅವರೊಳಗೆ ರಂಗಭೂಮಿಗಾಗಿ ಸೈಕಲ್ ಹೊಡೆಯುವ ಒಬ್ಬ 'ಮುನಿರಂಗಪ್ಪ' ಇರುವ ಕಾರಣದಿಂದಲೇ ದ.ಕ. ರಂಗಭೂಮಿಯಲ್ಲಿ ಅವರದ್ದು ಮೊದಲ ಹೆಸರು. ತುಳು ನಾಟಕಗಳಲ್ಲಿ ಹಾಸ್ಯದ ಅಲೆಯ ವಿರುದ್ಧ ಈಜಿ, ಕನ್ನಡ ಹವ್ಯಾಸಿ ರಂಗಭೂಮಿ ಕಟ್ಟಿದ ಯಶಸ್ಸು ಖಂಡಿತವಾಗಿ

ಇವರಿಗೆ, ಇವರು ಹುಟ್ಟು ಹಾಕಿದ 'ಭೂಮಿಕಾ' ತಂಡಕ್ಕೆ ಸಲ್ಲುತ್ತದೆ. ಯಕ್ಷಗಾನ ಬಲ್ಲ ಮನೆಯ ವಾತಾವರಣದಲ್ಲಿ ಬೆಳೆದ ನಾದಾ ಮಾತ್ರ ಒಲಿದದ್ದು ನಾಟಕ ರಂಗಕ್ಕೆ. ಪ್ರಸನ್ನ ನಿರ್ದೇಶಿಸಿದ 'ಮಾರೀಚನ ಬಂಧುಗಳು' ನಾಟಕದಿಂದ ಪ್ರಭಾವಿತರಾಗಿ ಹವ್ಯಾಸಿ ರಂಗಕ್ಕೆ ಪ್ರವೇಶಿಸಿ ಭೂಮಿಕಾ ತಂಡ ಹುಟ್ಟುಹಾಕಿ ಕನ್ನಡದ ಮಹತ್ವದ ನಾಟಕಗಳನ್ನು ನಿರ್ದೇಶಿಸಿ, ಅಭಿನಯಿಸಿ, ಸಂಘಟಿಸಿದರು. ಜಿಲ್ಲೆಯಾದ್ಯಂತ ರಂಗಚಳವಳಿ ಬೆಳೆಸಿದರು. ಹವ್ಯಾಸಿ ತಂಡಗಳ ಚಟುವಿಕೆಗಳನ್ನು ಹುರುದುಂಬಿಸಿ ಜೀವ ತುಂಬಿದರು, ಜಿಲ್ಲೆಯ ರಂಗಚಟುವಟಿಕೆಗಳ ಕೈಹಿಡಿಯಾದರು.

ಅರ್ಪಣೆ, ಪ್ರಶ್ನೆ, ಹೂ ಮನಸು, ಅವಮಾನಿತರು ಮುಂತಾದ ಮೌಲಿಕ ನಾಟಕಗಳನ್ನು ರಚಿಸಿರುವ ಇವರು ಮಲೆಯಾಳಂನಿಂದ ನಾಟಕಗಳನ್ನು ಭಾಷಾಂತರಿಸುವುದರ ಮೂಲಕ ಈ ಎರಡೂ ಭಾಷೆಯ ರಂಗಭೂಮಿಯ ನಡುವಣ ಸೇತುವೆಯಾಗಿದ್ದಾರೆ.

ಬೀದಿನಾಟಕ ಎಂದರೆ ಮೂಗು ಮುರಿಯುತ್ತಿದ್ದ ದಿನಗಳಲ್ಲಿ ಗೆಳೆಯರೊಂದಿಗೆ ಕೂಡಿ ಕಾಸರಗೋಡಿನಲ್ಲಿ ವಠಾರ ನಾಟಕಗಳನ್ನು ಹುಟ್ಟುಹಾಕಿದರು. ರಂಗಭೂಮಿಯ ಹೊಸ ಸಾಧ್ಯತೆಗಳನ್ನು ತೋರಿಸಿಕೊಟ್ಟಿದ್ದಾರೆ. ಎರಡು ಬಾರಿ ಯಕ್ಷಗಾನವನ್ನು ವಿದೇಶಕ್ಕೆ ಕೊಂಡೊಯ್ದ ಹೆಮ್ಮೆ ಇವರದ್ದು. ಅಡೂರು ಗೋಪಾಲಕೃಷ್ಣನ್ ಅವರ ಪ್ರಶಸ್ತಿ ವಿಜೇತ ಚಿತ್ರ 'ವಿಧೇಯನ್'ನ ಸಹಾಯಕ ನಿರ್ದೇಶಕರೂ ಕೂಡ. ಕರ್ನಾಟಕ ನಾಟಕ ಅಕಾಡೆಮಿ ಸದಸ್ಯರಾಗಿ ಸೇವೆ ಸಲ್ಲಿಸಿರುತ್ತಾರೆ.

ಹೀಗೆ ನಾದಾ ಪ್ರತಿಭೆಗಳ ಸಂಗಮ, ಆದರೆ ಇವರ ಬೇರುಗಳಿರುವುದು ರಂಗಭೂಮಿಯಲ್ಲಿ. ಮೊದಲ ನೋಟಕ್ಕೆ ಆತ್ಮೀಯವಾಗಿ ಬಿಡುವ ನಾದಾ ಕೈಗೊಳ್ಳುವ ನಾಟಕ–ಸಾಹಿತ್ಯ ಕುರಿತ ಯಾವುದೇ ಕೆಲಸವಿರಲಿ ಅದರ ಹಿಂದೆ ಗೆಳೆಯರ ಹಿಂಡೇ ಇರುತ್ತದೆ. ಯಶಸ್ವಿಗೊಳಿಸುವ ಒಂದು ತಂಡ ಇರುತ್ತದೆ.





## ಹಾಲಪ್ಪ ಎಸ್. (ಫೆಲೋಶಿಫ್)

ಸದಾ ವ್ಯಾಪಾರ ವಹಿವಾಟುಗಳ ತೇಜಿ ಮಂದಿಯಲ್ಲಿ ತಲೆ ಕೆಡಿಸಿಕೊಳ್ಳುವ ಪಕ್ಕಾ ವರ್ತಕರ ನೆಲೆಯಾದ ದಾವಣಗೆರೆಗೆ ಸಾಂಸ್ಕೃತಿಕ ನೆಲೆಗಟ್ಟನ್ನು ತಂದುಕೊಟ್ಟವರು ಪ್ರೊ. ಎಸ್. ಹಾಲಪ್ಪನವರು. ಚಿಕ್ಕವರಿದ್ದಾಗ ಹಳ್ಳಿಯಲ್ಲಿ ದೊಡ್ಡಾಟ ಹಾಗೂ ಗೊಂದಲಿಗರ ಕಥೆ ಮುಂತಾದವುಗಳಿಂದ ಪ್ರಭಾವಿತರಾಗಿ, ಚಿಕ್ಕಂದಿನಿಂದಲೇ ನಾಟಕ ಆಡುವ, ಅಭಿನಯಿಸುವ ಪರಿಪಾಠ ಇಟ್ಟುಕೊಂಡು ಬಂದವರು. ಮುಂದೆ ದಾವಣಗೆರೆಯಲ್ಲಿ ಭೌತಶಾಸ್ತ್ರದ ಅಧ್ಯಾಪಕರಾಗಿ ಸೇವೆಯಲ್ಲಿರುವಾಗ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆ ನಡೆಸುವುದಕ್ಕಾಗಿ ಅರವತ್ತರ ದಶಕದ ಕೊನೆಯಲ್ಲಿ ಅನೇಕ ಸ್ನೇಹಿತರೊಡಗೂಡಿ ಪ್ರತಿಮಾ ಸಭಾ ಸ್ಥಾಪಿಸಿದರು. ಹವ್ಯಾಸಿ ರಂಗಚಳವಳಿ ನಡೆಯಲು ನಾಂದಿಯಾಯಿತು. 1972ರಲ್ಲಿ ಬಿ.ವಿ. ಕಾರಂತರಿಂದ ನಾಟಕಗಳನ್ನು ಪ್ರತಿಮಾ ಸಭಾ ಆಶ್ರಯದಲ್ಲಿ ಪ್ರದರ್ಶಿಸಲಾಗಿ ಹೊಸ ಅಲೆಯ ನಾಟಕ ಪ್ರದರ್ಶನಕ್ಕೆ ವಿಶೇಷ ಸ್ಫೂರ್ತಿ ನೀಡಿತು. ಪ್ರತಿಮಾ ಸಭಾದ ಚುಕ್ಕಾಣಿ ಹಿಡಿದಿದ್ದ ಪ್ರೊ. ಹಾಲಪ್ಪನವರು ನಾಡಿನ ಅನೇಕ ತಂಡಗಳನ್ನು ಬರಮಾಡಿಕೊಂಡು ನಾಟಕೋತ್ಸವ ಪ್ರದರ್ಶನ ವ್ಯವಸ್ಥೆ ಮಾಡಿದ್ದು ಒಂದು ಕಡೆಯಾದರೆ ಹತ್ತಾರು ರಂಗತರಬೇತಿ ಶಿಬಿರ, ವಿಚಾರಗೋಷ್ಠಿಗಳನ್ನು ನಡೆಸುತ್ತ ಯುವಪೀಳಿಗೆಯಲ್ಲಿ ಸಾಂಸ್ಕೃತಿಕ ಕಲೆಗಳ ಬಗ್ಗೆ ಆಸಕ್ತಿ ಕೆರಳಿಸುವಲ್ಲಿ ಯಶಸ್ವಿಯಾದರು. ಸುಮಾರು ಎಂಬತ್ತರ ದಶಕದಲ್ಲಿ ಪ್ರತಿಮಾ ಸಭಾ ಸದಸ್ಯತ್ವ ಪಡೆಯುವುದು ಒಂದು ಪ್ರತಿಷ್ಠೆಯ ವಿಷಯವಾಗಿತ್ತು.

ಇವರ ಸಂಚಾಲಕತ್ವದಲ್ಲಿ ಕೊಂಡಜ್ಜಿಯಲ್ಲಿ ನಡೆದ ನಾಟಕ ರಚನಾ ಶಿಬಿರದಲ್ಲಿ ಪಾಲ್ಗೊಂಡಿದ್ದ ನಿಸರ್ಗಪ್ರಿಯ ಮತ್ತು ಹೂಲಿಶೇಖರ ಅವರುಗಳು ಪರಿಣಾಮಕಾರಿಯಾಗಿ ರಂಗಭೂಮಿಯಲ್ಲಿ ನೆಲೆಯೂರಿದವರು ಎಂಬುದು ಹೆಮ್ಮೆಯ ಸಂಗತಿ.

ಪ್ರತಿಮಾ ಸಭಾದೊಡನೆ, ಪ್ರತಿಮಾ ಚಿತ್ರಕೂಟ, ಫೆಡರೇಷನ್ ಆಫ್ ಫಿಲ್ಮ್ ಸೊಸೈಟಿ ಗೌರ್ನಿಂಗ್ ಕೌನ್ಸಿಲ್ ಸದಸ್ಯರಾಗಿ ಮತ್ತು ನಾಟಕ ಅಕಾಡೆಮಿ ಸದಸ್ಯರಾಗಿ ಕೆಲಸ ಮಾಡಿರುವವರು. ವೇದಿಕೆ, ಭಾಷಣ ಅಂದರೆ ಮಾರುದ್ದ ದೂರ ನಿಲ್ಲುವ ಇವರು ಸಭೆಗೆ ಕುರ್ಚಿ ಜೋಡಿಸುವುದಕ್ಕೆ ಮುಂದಾಗುವ ವ್ಯಕ್ತಿತ್ವ ಇವರದು.

ಹಾಲಪ್ಪ ಅವರು ಹಾಗೂ ಅವರ ಒಡನಾಡಿಗಳು ಹುಟ್ಟುಹಾಕಿದ ಸಾಂಸ್ಕೃತಿಕ ಚಟುವಟಿಕೆ ಸ್ಫೂರ್ತಿಯಿಂದ ದಾವಣಗೆರೆಯಲ್ಲಿ, ಚಿತ್ರದುರ್ಗ, ಸಿರಿಗೆರೆ, ಸಾಣೇಹಳ್ಳಿ ಮುಂತಾದ ಕಡೆ ಹತ್ತಾರು ಇಂಥ ಹವ್ಯಾಸಿ ತಂಡಗಳು ಹುಟ್ಟಿಕೊಂಡು ಸದ್ದಿಲ್ಲದೆ ಸಾಂಸ್ಕೃತಿಕ ಪರಿಸರ ನಿರ್ಮಾಣ ಮಾಡುತ್ತಿರುವುದು ಒಂದು ಸಾಧನೆ.



## ಉಳೇಬೀಡು ರಂಗಮ್ಮ

ಆಂಧ್ರ ಪ್ರದೇಶದ ಆದವಾನಿ ಸುತ್ತಲಿನ ಅನೇಕ ಹಳ್ಳಿಗಳಲ್ಲಿ ಕನ್ನಡ ನಾಟಕಗಳನ್ನು ಕಲಿಸುತ್ತಿದ್ದ ರಂಗಪ್ಪ ಎಂಬ ಹಾರ್ಮೋನಿಯಂ ಮೇಷ್ಟ್ರು ತಮ್ಮ ಮಗಳು ರಂಗಮ್ಮನಿಗೂ ಗಾಯನ, ಅಭಿನಯ ಕಲಿಸಿ ಮುಖಕ್ಕೆ ಬಣ್ಣ ಹಚ್ಚಿದರು. ದಕ್ಷಿಣಾದಿ ಸಂಗೀತದಲ್ಲಿ ವಿದ್ವಾಂಸರೂ ಆಗಿದ್ದ ರಂಗಪ್ಪನವರ ವಿದ್ಯೆಯ ಪೂರ್ಣ ಪ್ರಯೋಜನ ಪಡೆಯುವ ಮುನ್ನ 11 ವರ್ಷದ ಬಾಲ್ಯದಲ್ಲೇ ತಂದೆ ತೀರಿಕೊಂಡರು. ತಂದೆಯ ಅಕಾಲಿಕ ನಿಧನದಿಂದ ಶಾಲೆ ಓದು ನಿಂತಿತಾದರೂ, ತಂದೆಯ ಗೆಳೆಯರಾದ ಗಂಗಣ್ಣ ವೀರಾಪುರ, ತಬಲಾಜಿ ಶಂಕರಣ್ಣ ರಂಗಮ್ಮನಿಗೆ ರಂಗಶಿಕ್ಷಣ ನೀಡಿದರು. 50ರ ದಶಕದಲ್ಲಾಗಲಿ ಅಥವಾ ಈಗ ಕೂಡ ಈ ಭಾಗದಲ್ಲಿ ತೆಲುಗಿಗಿಂತ ಕನ್ನಡ ನಾಟಕಗಳ ಪ್ರದರ್ಶನಗಳೇ ಹೆಚ್ಚು. ಹಳ್ಳಿಗಳ ನಾಟಕಗಳ ಪ್ರದರ್ಶನಗಳು ಕಳೆದ 5–6 ದಶಕಗಳಿಂದಲೂ ವೃತ್ತಿ ನಟಿಯರನ್ನೇ ಅವಲಂಬಿಸಿವೆ. ತುತ್ತಿನ ಚೀಲ ತುಂಬಲೆಂದು ಬಣ್ಣ ಹಚ್ಚಿದ ರಂಗಮ್ಮನಿಗೆ ಅಭಿನಯ ವೃತ್ತಿಯೇ ಆಯಿತು.

ಆ ಕಾಲಕ್ಕೆ ಹಳ್ಳಿಗಳ ನಾಟಕಗಳಲ್ಲಿ ಪ್ರಸಿದ್ಧರಾಗಿದ್ದ ಆದವಾನಿ ಲಕ್ಷ್ಮೀದೇವಿ, ಆಲೂರು ಸುಶೀಲಾರಂತಹ ರಂಗ ಕಲಾವಿದೆಯರ ಒಡನಾಟ ರಂಗಮ್ಮ ಬೆಳೆಯಲು ಸಹಕಾರಿಯಾಯಿತು. ವೃತ್ತಿ ಮತ್ತು ಜೀವನದ ಸಮರ್ಪಣೆ – ಎರಡೂ ರಂಗಭೂಮಿಯೇ ಆದ ರಂಗಮ್ಮನವರು ಆಂಧ್ರದ ಗಡಿಭಾಗ, ರಾಯಚೂರು–ಬಳ್ಳಾರಿ ಜಿಲ್ಲೆಗಳ ನೂರಾರು ಹಳ್ಳಿಗಳಲ್ಲಿ ಬೇಡಿಕೆಯ ಪ್ರಸಿದ್ಧ ನಟಿಯಾದರು. ಹಳ್ಳಿಯ ನಾಟಕಗಳಿಗೆ ಡಿಸೆಂಬರ್‌ನಿಂದ ಏಪ್ರಿಲ್‌ವರೆಗೆ ಮಾತ್ರ ಸೀಜನ್. ಪೂರ್ಣವೃತ್ತಿಯೇ ಆದ ರಂಗಮ್ಮನಿಗೆ ವರ್ಷದ 12 ತಿಂಗಳೂ ನಡೆಯುವ ನಾಟಕ ಕಂಪನಿ ಸೇರಬೇಕೆನಿಸಿತು. ಬೆಳವಣಿಕೆ ಸಂಗಪ್ಪನವರ ನಾಟಕ ಕಂಪನಿಯಲ್ಲಿ ನಾಲ್ಕು ವರ್ಷ, ಪಟ್ಟದಕಲ್ಲು ಬಸಯ್ಯನವರ ಕಂಪನಿಯಲ್ಲಿ ಕೆಲಕಾಲ ನಟಿಸಿದರು. ಕಂಪನಿ ಜೀವನದ ಅನಿಶ್ಚಿತತೆ ಮತ್ತೆ ತಮ್ಮ ಊರಿಗೆ ಮರಳುವಂತೆ ಮಾಡಿತು. ಹಳ್ಳಿಗಳಲ್ಲಿ ಕರೆ ಬಂದಾಗ ಹೋಗಿ ಅಭಿನಯಿಸುವ ವೃತ್ತಿ ನಟಿಯಾಗಿ ಮುಂದುವರಿದರು. 'ಹೆಣ್ಣಿನ ಜೀವನ', 'ರತ್ನಮಾಂಗಲ್ಯ', 'ಮಲ ಮಗಳು', 'ಅಣ್ಣ–ತಂಗಿ' ಮುಂತಾದ ಸಾಮಾಜಿಕ ನಾಟಕಗಳಲ್ಲಿ ನೂರಾರು ಬಾರಿ ಅಭಿನಯಿಸಿರುವ ಈ ಹಳೇ ಕಾಲದ ನಟಿಗೆ ಪೌರಾಣಿಕ ನಾಟಕಗಳಲ್ಲಿಯೇ ಹೆಚ್ಚು ಅವಕಾಶ. ಬಿ. ಪುಟ್ಟಸ್ವಾಮಯ್ಯನವರ 'ಕುರುಕ್ಷೇತ್ರ' ವಾಮನರಾವ್ ಮಾಸ್ತರ್ ಅವರ 'ವೀರ ಅಭಿಮನ್ಯು' ನಾಟಕಗಳ ಉತ್ತರೆ ಪಾತ್ರ ರಂಗಮ್ಮನಿಗೆ ಅಪಾರ ಖ್ಯಾತಿ ತಂದಿತು. ಕೆಲವು ತೆಲುಗು ನಾಟಕಗಳಲ್ಲೂ ಅಭಿನಯಿಸಿದ್ದಾರೆ. ವೈಯಕ್ತಿಕ ಜೀವನದಲ್ಲಿ ಅನೇಕ ಕಷ್ಟ–ಕಾರ್ಪಣ್ಯಗಳನ್ನು ಸಹಿಸಿಕೊಳ್ಳಬೇಕಾಗಿ ಬಂದರೂ, ರಂಗಭೂಮಿಯಿಂದ ಸಾಕಷ್ಟು ತೃಪ್ತಿಯೇ ಸಿಕ್ಕಿದೆಯಂತೆ. ಶೃಂಗಾರ, ವೀರ, ದುಃಖ, ವಿರಹ ರಸಗಳಿಗೆ ಅವಕಾಶವಿರುವ ಉತ್ತರೆ ಪಾತ್ರದ ಸವಾಲು ಪುಲಕಿತಗೊಳಿಸುತ್ತದೆ. ಚಿರ ವಿರಹಿ ಉತ್ತರೆ ಪಾತ್ರದಲ್ಲಿ ರಂಗಮ್ಮ ಪ್ರೇಕ್ಷಕರ ಹೃದಯಗಳಲ್ಲಿ ಚಿರಸ್ಥಾಯಿಯಾಗಿದ್ದಾರೆ.



## ಎರಿಂಗಳಗಿ ಶಿವಣ್ಣ

ಮುಖಕ್ಕೆ ಧರಿಸಿರುವ ದಪ್ಪಕನ್ನಡಕ ಹೊರತೆಗೆದರೆ ಹೊರಜಗತ್ತು ಪೂರಾ ಮಬ್ಬು, ಪದ್ಮವ್ವ, ಚಿತ್ತರಂಜನಿ, ಛಾಯಾ ಪಾತ್ರಗಳಲ್ಲಿ ಈತನನ್ನು ರಂಗದ ಮೇಲೆ ನೋಡಿದರವರು ಅಂತಹ ಊನವೊಂದಿದೆ ಎಂದು ಹೇಳಲು ಸಾಧ್ಯವೇ ಇಲ್ಲ.

ಬಳ್ಳಾರಿ ತಾಲ್ಲೂಕು ಎರಿಂಗಳಗಿಯ ಬಡಕುಟುಂಬದಲ್ಲಿ ಜನಿಸಿದ ಶಿವಣ್ಣ 4ನೇ ತರಗತಿಯವರೆಗೆ ಓದಿದ್ರೇ ಹೆಚ್ಚು. ಬಾಲಕ ಶಿವಣ್ಣ ಒಮ್ಮೆ ತಮ್ಮೂರಿನಲ್ಲಿ ಅಭಿನಯಿಸಿದ 'ಮಾರ್ಕಂಡೇಯ' ನಾಟಕದ ಸ್ತ್ರೀ ಪಾತ್ರ ನೋಡಿದ ಜನ ಬೆಕ್ಕಸ ಬೆರಗಾದರು. ಗದುಗಿನ ಪಂಚಾಕ್ಷರಿ ಗವಾಯಿಗಳ ಕಂಪನಿಗೆ ಕಳಿಸಿದರು. ಕಂಪನಿ ಸೇರಿದ ಶಿವಣ್ಣ ಪಾತ್ರ ಗಿಟ್ಟಿಸಲು ಮೂರು ವರ್ಷ ಕಾಯಬೇಕಾಯಿತು. ಅವಕಾಶ ಒಮ್ಮೆ ಸಿಕ್ಕನಂತರ ಶಿವಣ್ಣ ಹಿಂತಿರುಗಿ ನೋಡಲಿಲ್ಲ. 'ಕೃಷ್ಣಗಾರುಡಿ' 'ಸಿದ್ಧರಾಮೇಶ್ವರ' 'ಸತಿಸುಕನ್ಯಾ' 'ಅಕ್ಕಮಹಾದೇವಿ' ನಾಟಕಗಳಲ್ಲಿ ಮಹಿಳಾ ಪಾತ್ರಗಳಲ್ಲಿ ಶಿವಣ್ಣ ಪ್ರಸಿದ್ಧರಾದರು. ಮಲ್ಲಮ್ಮ ನಾಟಕದ ಚಿತ್ತರಂಜನಿ ಪಾತ್ರ ನೋಡಿದ ಯುವಕರಂತೂ ಈತ ಹೆಣ್ಣೇ ಎಂದು ಭ್ರಮಿಸಿ ಗ್ರೀನ್ ರೂಂ ಬಳಿ ಬಂದು ಪೀಡಿಸುತ್ತಿದ್ದರಂತೆ. ಲಕ್ಷ್ಮಮ್ಮನಾಗಿ ಅಭಿನಯಿಸಿದ 'ಆದವಾನಿ ಲಕ್ಷ್ಮಮ್ಮ' ಆಂಧ್ರದಲ್ಲಿ 3–4 ವರ್ಷ ಕಾಲ ಜಯಭೇರಿ ಭಾರಿಸಿತು. ದಂತಕತೆಯಾಗಿಬಿಟ್ಟರು ಶಿವಣ್ಣ.

ಈ ಮಧ್ಯೆ ಕಂಪನಿ ತೊರೆದು ಕರೀಂಸಾಬ್ ಎಂಬುವರೊಂದಿಗೆ ಸ್ವಂತ ಕಂಪನಿ ಕಟ್ಟಿದರು. ವ್ಯವಹಾರ ಗೊತ್ತಿಲ್ಲದ ಶಿವಣ್ಣ ವಿಫಲರಾದರು. ಮರಳಿ ಗವಾಯಿ ಕಂಪನಿಗಳಿಗೆ.

83ರಲ್ಲಿ ಕಂಪನಿಯನ್ನು ಬಿಟ್ಟು ಊರಿಗೆ ಮರಳಿದರು. ಬರಿಗೈನ ಶಿವಣ್ಣ ಕೂಲಿ ಹೋಗಬೇಕಾದ ಪ್ರಸಂಗ ಬಂದಾಗ ಕೀರ್ತನೆ ಕಲಿತು ಜೀವ ಹಿಡಿದರು. ಹೇಮರೆಡ್ಡಿ ಮಲ್ಲಮ್ಮ ನಾಟಕವಾಡಲೆಂದೇ ಚಿಕ್ಕೇನಕೊಪ್ಪ ಶರಣರು ಬಳ್ಳಾರಿಯಲ್ಲಿ ಆರಂಭಿಸಿದ ಕಲಾ ಬಳಗದಲ್ಲಿ ಕಳೆದ 10 ವರ್ಷಗಳಿಂದಲೂ ಅತ್ತೆ ಪಾತ್ರ ಮಾಡುತ್ತಿದ್ದಾರೆ.

ಈಗಲೂ ಮಹಿಳೆಯರಿಗೆ ಪ್ರವೇಶವಿಲ್ಲದ ಗವಾಯಿಗಳ ಕಂಪನಿಯಿಂದ ಇಂತಹ ಕಲಾವಿದರು ಸೃಷ್ಟಿಯಾದರೋ ಅಥವಾ ಮಹಿಳಾ ಪಾತ್ರಗಳನ್ನು ಅದ್ಭುತವಾಗಿ ಅಭಿನಯಿಸುವ ಇಂತಹ ಪುರುಷರಿರುವುದರಿಂದಲೇ ಗವಾಯಿಗಳು ತಮ್ಮ ಕಂಪನಿಯಲ್ಲಿ ಮಹಿಳೆಯರನ್ನು ಬಿಟ್ಟುಕೊಂಡಿಲ್ಲವೋ ? ಏನೋ ?



## ಏಕನಾಥ

ಏಕನಾಥ ತಂದೆ ಗಂಗಪ್ಪಾ ಬಹುರೂಪಿ ಬೀದರ ಅವರು ಉತ್ತಮ ಕಲಾವಿದರು, ನಿರ್ದೇಶಕರು, ಹಾಡುಗಾರರು, ಸಂಗೀತ ನಿರ್ದೇಶಕರು, ಸಮರ್ಥ ವ್ಯವಸ್ಥಾಪಕರು ಒಂದೇ ಮಾತಿನಲ್ಲಿ ಹೇಳುವುದಾದರೆ ಬಹುರೂಪಿಯೇ.

ಬಾಲ್ಯದಿಂದಲೇ ಬಾಲ ಪಾತ್ರಗಳನ್ನು ಮಾಡುತ್ತಾ, ಸುಶ್ರಾವ್ಯವಾದ ಕಂಠದಿಂದ ಹಾಡುತ್ತಾ ಮನೆತನದ ಕಸುಬಾದ 'ಬಹುರೂಪಿ' ವೇಷಗಾರಿಕೆಯ ವೃತ್ತಿಯಲ್ಲಿ ಪಳಗಿದರು. ಇವರು ತೊಟ್ಟ ವೇಷ, ಕಟ್ಟಿದ ಪಾತ್ರ ಅಷ್ಟಿಷ್ಟಲ್ಲ. ವಿಶ್ವಾಮಿತ್ರ ಭೀಮ, ಭಸ್ಮಾಸುರ, ಪರಶುರಾಮ ಮೊದಲಾದ ಪೌರಾಣಿಕ ಪಾತ್ರಗಳಲ್ಲದೆ ಸೂರದಾಸ, ಸಿಂಧೂರ ಲಕ್ಷ್ಮಣನಂತಹ ಸಾಮಾಜಿಕ ಚಾರಿತ್ರಿಕ ಪಾತ್ರಗಳು ಬಹಳವಾಗಿ ಜನಮೆಚ್ಚುಗೆ ಪಡೆದವು. ಪಾತ್ರಕ್ಕೆ ತಕ್ಕಂತೆ ಹಾಡು, ಹಾಡಿಗೆ ತಕ್ಕಂತೆ ಕುಣಿತ, ಕುಣಿತಕ್ಕೆ ಹೊಂದಿಕೊಳ್ಳುವ ಮಾತುಗಳು ಇವೆಲ್ಲವುಗಳೊಡನೆ ತಾಳ, ದಮಡಿ, ಏಕ್ಕ ವಾದ್ಯಗಳು ಇವರ ಕಲೆಗೆ ಕಳಸವಿಟ್ಟಂತೆ ಮೆರಗು ಕೊಡುವುವು.

ನಾಡಿನ ಉತ್ತರದ ತುದಿ ಬೀದರ್‌ನಲ್ಲಿ ನಾಟಕ ಕಂಪನಿಯೊಂದನ್ನು ಕಟ್ಟಿ ರಂಗಪ್ರದರ್ಶನ ನೀಡುತ್ತಿರುವ ಸಾಹಸ ಅವರ ರಂಗಕಳಕಳಿಗೆ ಸಾಕ್ಷಿಯಾಗಿದೆ. ತಮ್ಮ ಇಡೀ ಕುಟುಂಬದ ಮೂವತ್ತೈದು ಸದಸ್ಯರನ್ನು ತೊಡಗಿಸಿಕೊಂಡು 'ಕಂಪನಿಯೇ ಕುಟುಂಬವೋ, ಕುಟುಂಬವೇ ಕಂಪನಿಯೋ' ಎಂಬಂತೆ ನಡೆಸಿಕೊಂಡು ಬರುತ್ತಿದ್ದು, ಹಳ್ಳಿ ಹಳ್ಳಿಗೂ ಸಂಚರಿಸಿ ಅನೇಕ ಸಾಮಾಜಿಕ, ಪೌರಾಣಿಕ ನಾಟಕಗಳನ್ನು ಪ್ರದರ್ಶಿಸುತ್ತಾ ಜನರ ವಿಶ್ವಾಸ, ಅಭಿಮಾನ ಗೆದ್ದಿದ್ದಾರೆ. ವಿಶೇಷವಾಗಿ ಸತ್ಯಹರಿಶ್ಚಂದ್ರ ಹೆಚ್ಚಿನ ಮೆಚ್ಚಿಗೆಗೆ ಪಾತ್ರವಾಗಿದೆ.

ಕಂಪನಿ ನಡೆಯದ ದಿನಗಳಲ್ಲಿ ಕೂಲಿ ಜೀವನ ಮಾಡಿ ಬದುಕು ಸಾಗಿಸುವ ಈ ಕುಟುಂಬದ ರಂಗಪ್ರೀತಿ ಮನ ಕಲಕುವುದು. ಐದು ದಶಕಗಳ ಕಾಲ ಮೀರಿದ ಏಕನಾಥರ ವೃತ್ತಿಪರ ಕಲಾಸೇವೆ ಅಪ್ಪವಾಗುತ್ತದೆ.

---



## ಕುಮಾರಸ್ವಾಮಿ ಬಿ.

ಚಿತ್ರದುರ್ಗದ ಹನುಮವ್ವ ಮತ್ತು ಬೋರಪ್ಪ ಎಂಬ ಬುಡಕಟ್ಟು ಜನಾಂಗದ ಕೂಲಿಕಾರರ ಹೊಟ್ಟೆಯಲ್ಲಿ ಹುಟ್ಟಿದ ಕುಮಾರಸ್ವಾಮಿ ಕಲ್ಲು–ಮಣ್ಣುಗಳೊಂದಿಗೆ ಬೆವರಿಳಿಸುತ್ತಿರುವಾಗಲೇ ನಾದದ ಅಭಿನಯದ ಗುಂಗು ಹತ್ತಿಸಿಕೊಂಡವರು. ಸುಪ್ರಸಿದ್ಧ ಹಾಸ್ಯನಟ ದಿ॥ ಓಬಳೇಶ್ ಅವರ ನಾಟಕ ಕಂಪನಿ ತುಮಕೂರಿನಲ್ಲಿ ಬೀಡು ಬಿಟ್ಟಿದ್ದಾಗ ನಾಟಕ ನೋಡಲೆಂದು ಹೋದ ಕುಮಾರಸ್ವಾಮಿ, ಓಬಳೇಶ್ ಅವರ ಸ್ನೇಹ ಗಳಿಸಿ ಕಂಪನಿ ಸೇರಿದರು. ಕಂಪನಿಯಲ್ಲೇ ಬೆಳೆದ ಓಬಳೇಶ್ ತಂಗಿ ಸುಧಾ ಅವರನ್ನು ವಿವಾಹವಾದರು. 1972ರಲ್ಲಿ ಸ್ವಂತ ಕುಮಾರೇಶ್ವರ ನಾಟ್ಯ ಸಂಘ ಕಟ್ಟಿದರು. ಆರಂಭದಲ್ಲಿ ಕುಂಟುತ್ತಾ ನಡೆದರೂ, ಕ್ರಮೇಣ ಚೇತರಿಸಿಕೊಂಡಿತು. ಓಬಳೇಶ್ವರ 'ಖಾದಿ ಸೀರೆ', 'ಮುಂಡೇ ಮಗ', ಧುತ್ತರಗಿ ಅವರ 'ತಾಯಿಕರುಳು', 'ಮುದುಕನ ಮದುವೆ', ಸಾಳುಂಕೆ ಅವರ 'ವರ ನೋಡಿ ಹೆಣ್ಣುಕೊಡು', 'ನೀನೂ ಸಾಹುಕಾರನಾಗು' – ಇವರ ಕಂಪನಿಯ ಪ್ರಸಿದ್ಧ ನಾಟಕಗಳು.

ಮೈಸೂರಿನಲ್ಲಿ 82–83ರಲ್ಲಿ ಸತತ ಒಂದು ವರ್ಷ 'ಮುದುಕನ ಮದುವೆ' ನಾಟಕ ಪ್ರದರ್ಶಿಸಿದರು. ಸಂಜೆ 6ಕ್ಕೆ ಮೈಸೂರಿನಲ್ಲಿ ಪ್ರದರ್ಶನ ಕೊಟ್ಟು 2ನೇ ನಾಟಕ ರಾತ್ರಿ 10.30ಕ್ಕೆ ಶ್ರೀರಂಗಪಟ್ಟಣ, ಬನ್ನೂರು, ನಂಜನಗೂಡು, ಟಿ. ನರಸೀಪುರ ಮುಂತಾದ ಕಡೆ ಪ್ರದರ್ಶಿಸಿ ಹೊಸ ದಾಖಲೆ ಸೃಷ್ಟಿಸಿದರು.

ಸಂತ, ವಿಕ್ಷಿಪ್ತ ಜೀವಿ ಶಿಷ್ಪೇಸ್ವಾಮಿ ಕುರಿತು 1986ರಲ್ಲಿ ರಂಗವೇರಿದ ನಾಟಕ ಕರ್ನಾಟಕದಾದ್ಯಂತ ಜಯಭೇರಿ ಹೊಡೆಯಿತು. 2 ಕಂಪನಿಗಳಾದವು. ಉ.ಕ.ದಲ್ಲಿ ಒಂದು ಕಂಪನಿ, ದ.ಕ.ದಲ್ಲಿ ಮತ್ತೊಂದು ಕಂಪನಿ ಏಕಕಾಲಕ್ಕೆ ಶಿಷ್ಪೇಸ್ವಾಮಿ ನಾಟಕವನ್ನು ವರ್ಷಗಟ್ಟಲೆ ಪ್ರದರ್ಶಿಸಿದವು. ಅದೇ ಹುರುಪಿನಲ್ಲಿ ಕುಮಾರಸ್ವಾಮಿ ಅವರು ಮತ್ತೆ ನಾಲ್ಕು ಶಾಖೆ ತೆರೆದು ತೊಂದರೆಗೆ ಸಿಲುಕಿದರು. ಹಾಸ್ಯ ನಟನ ತಮ್ಮ ಪ್ರತಿಭೆಯನ್ನೇ ಪಣಕ್ಕಿಟ್ಟು ಹಳೆಯ ಸುಪ್ರಸಿದ್ಧ ನಾಟಕಗಳನ್ನು ಪ್ರಯೋಗಿಸುತ್ತ ಜೀವ ಹಿಡಿದಿದ್ದಾರೆ.

ಪ್ರತಿ ಜಿಲ್ಲೆಯಲ್ಲಿ ಲಕ್ಷಾಂತರ ರೂ. ವೆಚ್ಚದ ರಂಗಮಂದಿರ ನಿರ್ಮಾಣದಿಂದ ಕಂಪನಿಗಳಿಗೆ ಏನೂ ಪ್ರಯೋಜನವಿಲ್ಲ. ಬದಲಾಗಿ ಪ್ರತೀ ಪಟ್ಟಣಗಳಲ್ಲಿ ಅತ್ಯಂತ ಕಡಿಮೆ ವೆಚ್ಚದ ತಗಡಿನ ರಂಗಮಂದಿರ, ಲೈಸೆನ್ಸ್ ಸರಳೀಕರಣ ಮಾಡಿದರೆ ಸಾಕು ಮತ್ತು ಕಂಪನಿ ಜೀವ ಹಿಡಿಯುತ್ತವೆ ಎನ್ನುವ ಕುಮಾರಸ್ವಾಮಿ 25 ವರ್ಷದ ತಮ್ಮ ವೃತ್ತಿ ಜೀವನದಲ್ಲಿ ಆಯಾಸಗೊಂಡಿಲ್ಲ. ಮಕ್ಕಳನ್ನು ಈ ರಂಗಕ್ಕಿಳಿಸಿರುವ ಅವರಿಗೆ ತಮ್ಮ ಅನನ್ಯತೆಯ ಬದುಕಿನ ಶೋಧನೆ ಕೂಡ ರಂಗಭೂಮಿಯೇ ಆಗಿದೆ.

---



## ಕೃಷ್ಣೋಜಿ ಚವ್ಹಾಣ್

ಮನೆಯಲ್ಲಿ ಸದಾ ಸಂಗೀತ ಸಾಹಿತ್ಯದ ವಾತಾವರಣ ಕೃಷ್ಣೋಜಿರಾವ್ ಚವ್ಹಾಣರ ರಂಗಪ್ರವೇಶದ ಅಂಕುರಾರ್ಪಣೆಗೆ ಕಾರಣವಾಯ್ತು. ಬಾಲ್ಯದಲ್ಲಿ ಚಿತ್ರಕಲೆಯ ಗೀಳು ನಾಟಕದ ವರ್ಣಾಲಂಕಾರ. ವಸ್ತ್ರಾಲಂಕಾರದ ಕಡೆಗೆ ಹರಿದು, ನಾಟಕದಲ್ಲಿ ಆಸ್ತಕಿ ಕುದುರಿ, ಮುಂದೆ ರಂಗಭೂಮಿ ನೆಂಟನಾಯಿತು. 1950ರಲ್ಲಿ 'ಕಲಾ ಸೇವಾ ಸಂಘ' ಹವ್ಯಾಸ ನಾಟಕ ಸಂಸ್ಥೆಯನ್ನು ತಮ್ಮ ಹುಟ್ಟೂರಾದ ಅಜ್ಜಂಪುರದಲ್ಲಿ ಆರಂಭಿಸಿ, ಅದರ ಆಶ್ರಯದಲ್ಲಿ ಯುವಕರನ್ನು ಸಂಘಟಿಸಿ ರಂಗಶಿಕ್ಷಣ ನೀಡಿದರು. ಸಂಸ್ಥೆಯಿಂದ ನರಹರಿ ಶಾಸ್ತ್ರಿಯವರ ಜಗಜ್ಯೋತಿ ಬಸವೇಶ್ವರ, ಪುಟ್ಟಸ್ವಾಮಯ್ಯನವರ ಅಕ್ಕಮಹಾದೇವಿ, ಗದಾಯುದ್ಧ, ಎಚ್ಚಮನಾಯಕ, ಶ್ರೀರಾಮ ಪಾದುಕಾ ಪಟ್ಟಾಭಿಷೇಕ, ಕುವೆಂಪು ಅವರ ಬೆರಳ್‌ಗೆ–ಕೊರಳ್ ಮುಂತಾದ ನಾಟಕಗಳನ್ನು ಪ್ರಯೋಗಿಸಿದರು. ಶ್ರೀರಾಮಚಂದ್ರ, ಮಧುವರಸ, ಕೌಶಿಕ, ಅರ್ಜುನ ಮುಂತಾದ ವೈವಿಧ್ಯಮಯ ಪಾತ್ರಗಳಲ್ಲಿ ಹೆಚ್ಚಿನ ಜನಮನ್ನಣೆ ಗಳಿಸಿದರು. ಜಗಜ್ಯೋತಿ ಬಸವೇಶ್ವರ 125ಕ್ಕೂ ಮೀರಿದ ಯಶಸ್ವೀ ಪ್ರದರ್ಶನವಾಗಿ ಜನಮನದಲ್ಲಿ ಚಿರಸ್ಮರಣೀಯವಾಯಿತು.

ಕಳೆದ ಇಪ್ಪತ್ತು ವರ್ಷಗಳಿಂದಲೂ ನಿರಂತರವಾಗಿ ರಾಷ್ಟ್ರಮಟ್ಟದ ಸಂಗೀತ, ನಾಟಕ ಸ್ಪರ್ಧೆಗಳನ್ನು ನಡೆಸಿಕೊಂಡು ಬಂದು ರಂಗಕಲೆಯ ಅಭಿರುಚಿ ಉಳಿಯುವಂತೆ ಮಾಡಿದ್ದಾರೆ.

ಗ್ರಾಮಾಂತರ ಪ್ರದೇಶಗಳಲ್ಲಿ ರಂಗ ಚಟುವಟಿಕೆಗಳಿಗಾಗಿಯೇ ಮೀಸಲಾದ ವ್ಯವಸ್ಥಿತ ರಂಗಮಂದಿರವನ್ನು ನಿರ್ಮಿಸಿದ್ದಾರೆ.

ಸ್ವಾತಂತ್ರ್ಯ ಹೋರಾಟದ ಕರೆಗೆ ಓಗೊಟ್ಟು ಜೈಲುವಾಸ ಅನುಭವಿಸಿರುವ ಅಪ್ಪಟ ಗಾಂಧೀವಾದಿ, ಖಾದಿಧಾರಿ, ಮೂರು ಬಾರಿ ಪುರಸಭಾಧ್ಯಕ್ಷರಾಗಿ ಆಯ್ಕೆಯಾಗಿ ಮತ್ತು ಇಪ್ಪತ್ತೈದು ವರ್ಷಗಳ ಪುರಸಭಾ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಇವರ ಸಾಮಾಜಿಕ ಕಳಕಳಿ, ದೇಶಪ್ರೇಮಗಳಿಗೆ ಮಾರುಹೋಗದವರೇ ಇಲ್ಲ.





## ನರಸಿಂಹಾಚಾರ್ ಎಂ.ಆರ್.

ಡಾ॥ ಮಾಗಡಿ ರಾಮಚಂದ್ರ ಲಕ್ಷ್ಮಿನರಸಿಂಹಾಚಾರ್ ಅವರಿಗೆ ಹದಿಹರೆಯದ ದಿನಗಳಿಂದಲೂ ರಂಗಭೂಮಿಯ ಒಲವು. 1935ರಲ್ಲಿ ರಂಗಭೂಮಿ ಮತ್ತು ಚಲನಚಿತ್ರರಂಗದ ಖ್ಯಾತ ಕಲಾವಿದರಾದ ಆರ್. ನಾಗೇಂದ್ರರಾಯರ ಎಸ್.ಎಸ್.ಎಸ್. ನಾಟಕ ಮಂಡಳಿ ಮೈಸೂರಿನಲ್ಲಿ ಕ್ಯಾಂಪ್ ಮಾಡಿತ್ತು. ಅವರ 'ರಾಜಾಸಿಂಹ' ನಾಟಕದಲ್ಲಿ 'ಸಖೀ' ಸ್ತ್ರೀ ಪಾತ್ರವೊಂದರ ಮೂಲಕ ರಂಗವನ್ನೇರಿದವರು ನರಸಿಂಹಾಚಾರ್. ಮುಂದೆ ಕೆ.ಎಸ್. ಅಶ್ವತ್ಥ್, ಎನ್.ಎಸ್. ವಾಮನ್‌ರಾವ್ ಮತ್ತು ಎಚ್.ಎಲ್. ನಾರಾಯಣರಾವ್ ಸ್ನೇಹಿತರ ಜೊತೆಗೂಡಿ ನಾ. ಕಸ್ತೂರಿ, ಕೈಲಾಸಂರವರ ನಾಟಕಗಳನ್ನು ಆಡಿದರು. ಎ.ಎನ್. ಮೂರ್ತಿರಾಯರ 'ಆಷಾಢಭೂತಿ' ಅಪಾರ ಯಶಸ್ಸು ಕಂಡಿತು.

ತಾವು ಮಾಡುತ್ತಿದ್ದ ಉದ್ಯೋಗವನ್ನು ಅನುಸರಿಸಿಕೊಂಡೇ ಊರೂರು ಅಲೆಯುತ್ತಾ, ಹೋದಲೆಲ್ಲಾ ನಾಟಕದ ನರಸಿಂಹಾಚಾರ್ ಆಗಿ ಅಭಿಮಾನಗಳಿಸಿದರು. ಹುಬ್ಬಳ್ಳಿ, ಹೊಸಪೇಟೆ, ಕೊಪ್ಪಳದಲ್ಲಿದ್ದಾಗ ದಾವಣಗೆರೆ ಕೊಟ ಶಾಂತಪ್ಪನವರ 'ಬಿ.ಎ.' ನಾಟಕದ ಚಂಚಲೆಯ ಪಾತ್ರ ನಿರ್ವಹಿಸಿ ಜನಮನದಲ್ಲಿ ಅಚ್ಚಳಿಯದೆ ನೆನಪಿನಲ್ಲಿ ಉಳಿದರು. 1947ರಲ್ಲಿ ಮದ್ರಾಸಿನಲ್ಲಿದ್ದಾಗ ರೇಡಿಯೋ ನಾಟಕ ಕಲಾವಿದರಾದರು. 1952ರಲ್ಲಿ ಬೆಂಗಳೂರಿಗೆ ಬಂದಾಗ ತಮ್ಮ ಸಹೋದ್ಯೋಗಿಗಳೊಡನೆ ಮೆಡಿಕಲ್ ರೆಪ್ರೆಸೆಂಟೇಟೀವ್ ಸಂಸ್ಥೆ ಕಟ್ಟಿ ರಕ್ತರಾತ್ರಿ, ಆಷಾಢಭೂತಿ

ಮುಂತಾದ ನಾಟಕಗಳನ್ನು ಪ್ರಯೋಗಿಸಿದರು. ಅರವತ್ತರ ದಶಕದಲ್ಲಿ ಎಸ್.ಜಿ. ರಾಮಚಂದ್ರ, ಡಾ. ಎಚ್.ಕೆ. ರಂಗನಾಥ, ಡಾ. ರಂಗಾಚಾರ್, ಸತ್ಯು ಮುಂತಾದವರೊಡನೆ ಹಾಗೂ ಎಪ್ಪತ್ತರ ದಶಕದನಂತರ ರಂಗಸಂಪದ, ಸೂತ್ರಧಾರ, ಕಲಾ ಗಂಗೋತ್ರಿ, ಸ್ಫೂರ್ತಿ ಮುಂತಾದ ತಂಡಗಳಲ್ಲಿ ರಂಗ ಪ್ರಯೋಗಗಳಲ್ಲಿ ಮುಂದುವರೆದರು. ಕನ್ನಡ, ಹಿಂದಿ ಸಿನಿಮಾಗಳಲ್ಲಿ ಮತ್ತು ರಾಷ್ಟ್ರೀಯ ಪ್ರಸಾರ ಜಾಲದ ದೂರದರ್ಶನ ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ. ಇಳಿ ಹರೆಯದಲ್ಲೂ ರಂಗಭೂಮಿಗೆ ಭಾಗವಹಿಸುವ ಇವರ ಪ್ರೀತಿಗೆ ಯಾರೂ ಬೆರಗಾಗಬೇಕು.

---



## ನಂಜುಂಡಯ್ಯ ಬಿ.ವಿ.

ಕನ್ನಡ ರಂಗಭೂಮಿಯ ಹೆಸರಾಂತ ಶ್ರದ್ಧಾವಂತ ನಟ ಬಿ.ವಿ. ನಂಜುಂಡಯ್ಯನವರು ತೋರುವ ಅಚ್ಚುಕಟ್ಟು ಮತ್ತು ಶಿಸ್ತು ಅನುಕರಣೀಯ.

ಎಳೆತನದಿಂದ ಬಯಲಾಟದ ಆಕರ್ಷಣೆ. ಅಂದೇ 'ಸಂಪೂರ್ಣ ರಾಮಾಯಣ'ದಲ್ಲಿ ಬಾಲ ರಾಮನಾಗಿ, ಲವನಾಗಿ ರಂಗಕ್ಕೆ ತನ್ನ ಏಳೆಂಟು ವಯಸ್ಸಿನಿಂದಲೇ ಬಂದರು. ಶಾಲಾ ದಿನಗಳಲ್ಲಿ ಸ್ಕೌಟ್ ಗ್ರೂಪಿಗೆ ಸೇರಿ, ಅಲ್ಲಿ ರಾಜರತ್ನಂರ, ಕಸ್ತೂರಿ, ದಾಶರಥಿ ದೀಕ್ಷಿತರ ನಾಟಕಗಳನ್ನು ಆಡಿಸುತ್ತಿದ್ದರು. ಮುಂದೆ ಕಾಲೇಜಿನ ದಿನಗಳಲ್ಲಿ ಕೈಲಾಸಂ ನಾಟಕಗಳನ್ನು ಪ್ರಯೋಗಿಸಿದರು. ಕರ್ನಾಟಕ ಸಂಘದಲ್ಲಿ ಜಿ.ಪಿ. ರಾಜರತ್ನಂರವರು ಏರ್ಪಡಿಸುತ್ತಿದ್ದ ನಾಟಕಗಳನ್ನು ಓದುವ ಸ್ಪರ್ಧೆಯಲ್ಲಿ ಭಾಗವಹಿಸಿ ತಮ್ಮ ಗಂಭೀರ ಪರಿಣಾಮಕಾರಿ ಓದಿಗೆ ಹೆಸರಾದರು.

1951ರಲ್ಲಿ ಬೆಂಗಳೂರಿನಲ್ಲಿ ಬ್ರಿಟಿಷರ ಆಡಳಿತದಲ್ಲಿ ಇದ್ದ ಬಿನ್ನಿ ಗಿರಣಿಯ ಥಿಯೇಟರ್‌ನಲ್ಲೇ ಬ್ರಿಟಿಷರ ಶೋಷಣೆ ವಿರುದ್ಧ ದನಿಯೆತ್ತಿ ನಿಲ್ಲುವ ಅಹಮದ್ ಅಬ್ಬಾಸ್ ಅವರ ಇಂಗ್ಲಿಷ್ ನಾಟಕವನ್ನು ನಿರ್ದೇಶಿಸಿದ ಕ್ರಿಯಾಶೀಲರು. ತಮಿಳು ಕಾರ್ಮಿಕರೊಂದಿಗೆ ಬೆರೆತು ತಮಿಳು ನಾಟಕಗಳನ್ನು ಮಾಡಿದ್ದಾರೆ.

ಹವ್ಯಾಸಿ ರಂಗಭೂಮಿಯಲ್ಲಿ ಆ ತಂಡ, ಈ ತಂಡವೆನ್ನದೆ ತಮ್ಮನ್ನು ಕರೆದ ಎಲ್ಲಾ ತಂಡಗಳಲ್ಲಿಯೂ ತಮಗೆ ಕೊಟ್ಟ ಪಾತ್ರವನ್ನು ಚೊಕ್ಕವಾಗಿ ಮಾಡುತ್ತಾ ಬಂದಿರುವವರು. ಸೂರ್ಯಶಿಕಾರಿಯ ಕಲ್ಲಣ್ಣ, ಮುಖ್ಯಮಂತ್ರಿಯ ದುರ್ಗಾಬಾಯಿ ಮುಂತಾದ ಪಾತ್ರಗಳು ನೆನೆಯುವಂತಹುದು. ಅವಕಾಶ ಬಂದಾಗ ಸಿನಿಮಾಗಳಲ್ಲಿ ನಟಿಸುವ ನಂಜುಂಡಯ್ಯನವರು ಸುಮಾರು ಎಪ್ಪತ್ತು ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

ವೃತ್ತಿಯಿಂದ ನಿವೃತ್ತರಾಗಿದ್ದರೂ ವಿಶ್ರಾಂತಿ ಜೀವನ ಬದಿಗಿರಿಸಿ ರಂಗಭೂಮಿಯಲ್ಲಿ ಎಂದಿಗಿಂತ ಹೆಚ್ಚಾಗಿ ತೊಡಗಿಸಿಕೊಂಡು ಹೊಸ ಪೀಳಿಗೆಯ ರಂಗಮಿತ್ರರ ಬಳಗವನ್ನೇ ಕಟ್ಟಿಕೊಂಡಿದ್ದಾರೆ.

---



## ನಾಗೇಶ್ ಬಿ.ಆರ್.

ದಕ್ಷಿಣ ಕನ್ನಡ ಜಿಲ್ಲೆಯ ಹವ್ಯಾಸಿ ರಂಗದಲ್ಲಿ ಶಿಸ್ತು ಸ್ವಂತಿಕೆಯಲ್ಲಿ ಯಾವ ಕಾರಣಕ್ಕೂ ಒಪ್ಪಂದ ಮಾಡಿಕೊಳ್ಳದ ಅಪ್ಪಟ ಪ್ರತಿಭೆ. ನಿರ್ದೇಶನದಲ್ಲಿ ಪರಿಣತಿಗೆ ಹೆಸರಾದವರು ನಾಗೇಶ್ ಬಿ.ಆರ್. ಹವ್ಯಾಸಿ ರಂಗದಲ್ಲಿ ನಿರ್ದೇಶಕನ ಸ್ಥಾನ ಎತ್ತಿ ಹಿಡಿದವರು. ಇವರಿಗೆ ನಾಟಕ ಒಂದು ಗಂಭೀರ ಕಲಾ ಪ್ರಕಾರವಾಯಿತು.

ಕಲೆ, ಸಂಗೀತ ನಾಟಕವನ್ನು ತೀರಾ ಆಪ್ತವಾಗಿ ಕಾಣುತ್ತಿದ್ದ ತಮ್ಮ ತಂದೆಯವರ ಪ್ರಭಾವದಿಂದಾಗಿ ಎಳೆತನದಲ್ಲಿ ರಂಗಾಸಕ್ತಿ ಮೂಡಿತು. ಬಾಲ್ಯದಲ್ಲಿ ನೋಡಿದ ಕಂಪನಿ

ನಾಟಕಗಳಿಂದಾಗಿ ರಂಗಭೂಮಿಯ ಬಗ್ಗೆ ಆಕರ್ಷಣೆ ತೀವ್ರವಾಯಿತು. ಹವ್ಯಾಸಿ ರಂಗದ ಒಡನಾಟ ಮುಂದೆ 1966ರಲ್ಲಿ ಇಂಗ್ಲಿಷ್ ಉಪನ್ಯಾಸಕರಾಗಿ ಸೇವೆ ಸಲ್ಲಿಸುವಾಗ ತಮ್ಮ ರಂಗಾಸಕ್ತಿಯನ್ನು ಒಂದು ಶಿಸ್ತಾಗಿ ರೂಪಿಸಿಕೊಂಡರು. ಹವ್ಯಾಸಿ ರಂಗಭೂಮಿ ಉಳಿಯಬೇಕಾದರೆ ಕಾಲೇಜುಗಳಲ್ಲಿ ರಂಗ ಚಟುವಟಿಕೆಗಳು ನಿರಂತರವಾಗಿ ನಡೆಯಬೇಕೆಂಬ ಹಂಬಲದಿಂದ ಉಡುಪಿಯ ಪೂರ್ಣಪ್ರಜ್ಞ ಕಾಲೇಜಿನಲ್ಲಿ ರಂಗಪರಿಸರ ಕಟ್ಟಿ ಬೆಳೆಸಿದರು.

ಹವ್ಯಾಸಿ ರಂಗಕರ್ಮಿಯಾಗಿ ತಮ್ಮದೇ ಆದ ಒಂದು ತಂಡವನ್ನು ಕಟ್ಟಿಕೊಳ್ಳದೆ 'ಫ್ರೀ ಲಾನ್ಸ್' ನಿರ್ದೇಶಕರಾಗಿ ಕನ್ನಡದ ಮಹತ್ವದ ನಾಟಕಗಳನ್ನು ರಂಗದ ಮೇಲೆ ಯಶಸ್ವಿಯಾಗಿ ತಂದಿದ್ದಾರೆ. ಲಂಕೇಶ್, ಶ್ರೀರಂಗ, ಕಾರ್ನಾಡ್, ಪ್ರಸನ್ನ, ಟಿ.ಎನ್. ಸೀತಾರಾಮ್, ಕುಸನೂರ್, ಎಂ.ಎಸ್.ಕೆ. ಪ್ರಭು, ರಾಮಚಂದ್ರದೇವ, ಅ.ರಾ. ಮಿತ್ರ, ವ್ಯಾಸದೇಶಪಾಂಡೆ..... ಹೀಗೆ ಪ್ರತಿಭಾನ್ವಿತರ ನಾಟಕಗಳನ್ನು ವೈವಿಧ್ಯಮಯ ಪ್ರಯೋಗಗಳಿಗೆ ಅಳವಡಿಸುವ ಪ್ರಯೋಗಶೀಲತೆಯಿಂದ ಒಬ್ಬ ಪರಿಪೂರ್ಣ ನಿರ್ದೇಶಕರಾಗಿ ಬೆಳೆದರು.

ನಾಟಕ ನಿರ್ದೇಶನ ಮಾತ್ರವಲ್ಲದೆ ಇವರು 'ಸಚಿಕೇತ' ಎಂಬ ಹೆಸರಿನಲ್ಲಿ ಸಣ್ಣಕತೆ, ನಗೆ ಬರಹ, ಕಾದಂಬರಿ, ಬಾನುಲಿ ನಾಟಕ, ನಾಟಕ ವಿಮರ್ಶೆ – ಸಾಹಿತ್ಯದ ಪ್ರಕಾರಗಳಲ್ಲಿ ಕೃತಿ ರಚಿಸಿದ್ದಾರೆ. ಇವರ ಕತೆಗಳು ಹಿಂದಿಗೆ ಅನುವಾದಗೊಂಡಿವೆ. ವೃತ್ತಿಯಿಂದ ನಿವೃತ್ತರಾದರೂ ತಮ್ಮ ಪ್ರವೃತ್ತಿಯನ್ನು ದೂರ ಸರಿಸದೆ 'ಈಗಲೂ ನಿಜವಾದ ಥ್ರಿಲ್ ಕೊಡುವುದು ರಂಗಭೂಮಿ' ಅನ್ನುತ್ತಾರೆ.

---



## ಡಾ॥ ಚೆನ್ನಣ್ಣ ವಾಲೀಕಾರ

ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿರುವ ಡಾ. ಚೆನ್ನಣ್ಣ ವಾಲೀಕಾರ ಅವರು ಕಾವ್ಯ, ವಿಮರ್ಶೆ, ನಾಟಕ, ಬಯಲಾಟ, ಸಂಶೋಧನೆ, ಸಂಪಾದನೆ, ಕಾದಂಬರಿ ಇತ್ಯಾದಿ ಪ್ರಕಾರಗಳಲ್ಲಿ ನಲವತ್ತೈದಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ.

ಸಾಮಾಜಿಕ ಕಳವಳಿ ಹೊಂದಿರುವ ವಾಲೀಕಾರ ಅವರು ದಲಿತ, ಶೋಷಿತ ಜನ ಜಾಗೃತಿಯ ಸಂಘಟನೆಯಲ್ಲಿ ಸಕ್ರಿಯವಾಗಿದ್ದಾರೆ. ಪ್ರಗತಿಪರ ಧೋರಣೆಯುಗಳನ್ನುಳ್ಳ ವಿಚಾರವಾದಿ. ಜಾನಪದ ಕ್ಷೇತ್ರದಲ್ಲಿ ಆಳವಾದ ಅಧ್ಯಯನ ಮಾಡಿದ್ದು ವಿಶ್ವವಿದ್ಯಾಲಯಗಳು, ಅಕಾಡೆಮಿ ಹಾಗೂ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವೂ ಒಳಗೊಂಡಂತೆ ಹಲವಾರು ವಿಚಾರ ಗೋಷ್ಠಿಗಳಲ್ಲಿ ಭಾಗವಹಿಸಿ, ಮೌಲಿಕ ಪ್ರಬಂಧಗಳನ್ನೂ ಮಂಡಿಸಿದ್ದಾರೆ.

ಅಗ್ನಿರಾಜ, ಟೊಂಕದ ಕೆಳಗಿನ ಜನ, ತಲೆ ಹಾಕುವವರು ಮುಂತಾದ ನಾಟಕಗಳಲ್ಲದೆ 'ಸೋಮ್ರಾಯಾ ಭೀಮ್ರಾಯಾ ದಪ್ಪಿನಾಟ', ಐದು ಸಮಾಜವಾದಿ ಬಯಲಾಟಗಳು ಜಾನಪದ ರೂಪ–ತಂತ್ರಗಳನ್ನೊಳಗೊಂಡ ವಿಶಿಷ್ಟ ಕೃತಿಗಳನ್ನು ರಚಿಸಿದ್ದಾರೆ. ಜಾನಪದವನ್ನು ಸಮಕಾಲೀನ ಸಂದರ್ಭಕ್ಕೆ ಹೊಂದಿಸಿಕೊಳ್ಳಬಹುದಾದ ಸಾಧ್ಯತೆಯನ್ನು ತೋರಿಸಿಕೊಟ್ಟಿದ್ದಾರೆ. ಪ್ರಸಿದ್ಧರಾಗಿದ್ದಾರೆ, ರಂಗದ ಮೇಲೆ ಇವರ ನಾಟಕಗಳು ಯಶಸ್ವಿಯಾಗಿ ಪ್ರಯೋಗಗಳನ್ನು ಕಂಡಿವೆ.

ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿರುತ್ತಾರೆ.

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುರಸ್ಕಾರ, ಕಾಸರಗೋಡಿನ ನಾಟಕ ಪುರಸ್ಕಾರ, ಗುಲಬರ್ಗಾ ವಿಶ್ವವಿದ್ಯಾಲಯ ಪುರಸ್ಕಾರ, ಇತರ ಬಹುಮಾನಗಳನ್ನು ಪಡೆದಿರುತ್ತಾರೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ದೊರಕಿದೆ.

---



## ರಾಮಚಂದ್ರ ಬಿ.ಎಂ.

ನಟನಾದರೆ ತನ್ನ ಪಾತ್ರ ಬಂದಾಗ ಮಾತ್ರ ಚುರುಕಾಗಿದ್ದರೆ ಸಾಕು, ನೇಪಥ್ಯದಲ್ಲಿರುವವರು ಹಾಗಲ್ಲ. ನಾಟಕ ಆರಂಭವಾದಾಗಿನಿಂದ ಹಿಡಿದು ಮುಗಿಯುವವರೆಗೆ ಪ್ರತಿಕ್ಷಣವೂ ಎಚ್ಚರಿಕೆಯಿಂದಿರಬೇಕು. ಎಲ್ಲವನ್ನು ಹೊಸದಾಗಿ ಹುಡುಕಬೇಕು, ಎದುರಿಸಬೇಕು. ಈ ಸವಾಲಿನಲ್ಲಿ 'ಸೈ' ಎನಿಸಿಕೊಂಡವರು ರಾಮಚಂದ್ರ. ನಟನೆ, ವರ್ಣಾಲಂಕಾರ, ವಸ್ತ್ರಾಲಂಕಾರ, ರಂಗಸಜ್ಜಿಕೆ ತೆರೆಯ ಹಿಂದಿನ ಹತ್ತಾರು ಕೆಲಸಗಳು, ನಿರ್ದೇಶನ ಹೀಗೆ ರಾಮಚಂದ್ರರ ಪ್ರತಿಭೆ ವ್ಯಾಪಕವಾಗಿ ಹರಡಿಕೊಂಡಿದ್ದರೂ ಅವರನ್ನು ಗುರುತಿಸುವುದು 'ಮೇಕಪ್' ರಾಮಚಂದ್ರರನ್ನಾಗಿಯೇ.

ಹತ್ತನೇಯ ವಯಸ್ಸಿನಿಂದಲೇ ರಂಗಭೂಮಿಗೆ ಅಂಟಿಕೊಂಡ ರಾಮಚಂದ್ರ ಶಾಲಾ ಕಾಲೇಜು ನಾಟಕಗಳು, ಜಾತ್ರೆಗಳಲ್ಲಿ ನಡೆಯುವ ನಾಟಕಗಳು, ಹವ್ಯಾಸಿ ನಾಟಕಗಳು, ರಾಜ್ಯ ಮತ್ತು ರಾಷ್ಟ್ರಮಟ್ಟದ ರಂಗಭೂಮಿಯ ಪ್ರಯೋಗಗಳು ಹೀಗೆ ಎಲ್ಲ ರೀತಿಯ ನಾಟಕಗಳಲ್ಲಿ ತೆರೆಮರೆಯ ಕಾರ್ಯಕರ್ತರಾಗಿ, ಯೋಗಾನರಸಿಂಹ, ಹಂಸಲೇಖಾ, ಪ್ರೇಮಾಕಾರಂತ, ಬಿ.ವಿ. ಕಾರಂತ, ಗ್ರೀಕ್‌ನ ವಶೀಲಿ, ಜರ್ಮನಿಯ ಫ್ರಿಟ್ಜ್ ಬೆನವಿಟ್ಜ ಹೀಗೆ ವಿಭಿನ್ನ ವ್ಯಕ್ತಿಗಳೊಂದಿಗೆ, ಪ್ರತಿಭಾವಂತರೊಂದಿಗೆ ಕೆಲಸ ಮಾಡಿದ್ದಾರೆ. ರಾಮಚಂದ್ರ ಬೆಂಗಳೂರಿನಲ್ಲಿ 'ಚೌಡೇಶ್ವರಿ ವಸ್ತ್ರಾಲಂಕಾರ'ದ ಶಿವಣ್ಣ ಅವರಲ್ಲಿ ಕೆಲಸ ಮಾಡುವಾಗ ವರ್ಣಾಲಂಕಾರ ಮತ್ತು ವಸ್ತ್ರಾಲಂಕಾರಗಳಲ್ಲಿ ಪರಿಣಿತಿ ಪಡೆದುಕೊಂಡರು. ಮುಂದೆ ತಮ್ಮ ಮಿತ್ರರೊಡನೆ 'ವಿವೇಕ ವೇದಿಕೆ' ಎಂಬ ವೃತ್ತಿ ತಂಡಕಟ್ಟಿ ನೇಪಥ್ಯಕ್ಕಾಗಿಯೇ ಮೀಸಲಾಗಿ ನಿರ್ವಹಿಸಿದರು. ನಂತರ ಮೈಸೂರಿನಲ್ಲಿ ನೆಲಸಿ 'ಶ್ರೀ ರಾಜೇಶ್ವರಿ ವಸ್ತ್ರಾಲಂಕಾರ'ದ ಮಾಲೀಕರಾಗಿ ತಮ್ಮ ವೃತ್ತಿ ಮತ್ತು ಹವ್ಯಾಸಗಳಿಗೆ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ದೂರದರ್ಶನ ಮತ್ತು ಚಲನಚಿತ್ರಗಳಿಗೆ ಕಾಲಿರಿಸಿದ್ದರೂ ಅವರ ಮೊದಲ ಪ್ರೀತಿ ರಂಗಭೂಮಿಯೇ.

---



## ಎಚ್.ಜಿ. ರಾಮಲಿಂಗೇಗೌಡ

ಬಾಲ್ಯದಿಂದಲೂ ನಾಟಕದಲ್ಲಿ ಆಸಕ್ತಿ, ತಂದೆ ತಾಯಿಯವರ ಪ್ರೋತ್ಸಾಹವಿತ್ತು. ಒಮ್ಮೆ ಇವರ ಗ್ರಾಮಕ್ಕೆ ದೊಂಬಿದಾಸರ ನಾಟಕ ತಂಡವೊಂದು ಕ್ಯಾಂಪು ಮಾಡಿತ್ತು. ಬಾಲಕ ರಾಮಲಿಂಗೇಗೌಡರಿಗೆ ಅಲ್ಲಿನ ಬಣ್ಣ ಬಣ್ಣದ ಪರದೆ, ಇಂಪಾದ ಹಾಡುಗಳು ಆಕರ್ಷಿಸಿದವು. ನಾಟಕದ ಗೀಳು ಚೆನ್ನಾಗಿಯೇ ಹಚ್ಚಿಕೊಂಡಿತು. ಮುಂದೆ ದೊಂಬಿದಾಸರ ನಾಟಕ ಮೇಳದಲ್ಲಿ ಪ್ರಹ್ಲಾದನ ಪಾತ್ರ ಹಾಕಿದರು. ಜನರ ಪ್ರೀತಿ, ಮೆಚ್ಚುಗೆ ಪಡೆದರು. ಇಲ್ಲಿಂದ ವೃತ್ತಿ ಕಂಪನಿ ನಂಟು ಬೆಳೆಯತೊಡಗಿತು. ಮುಂದೆ 'ಕುರುಕ್ಷೇತ್ರ' ನಾಟಕದಲ್ಲಿ ಜನಪ್ರಿಯತೆಯ ಶಿಖರವನ್ನೇರಿದರು. ಸುಮಾರು ಹತ್ತು ವರ್ಷಗಳ ಕಾಲ 'ಕೃಷ್ಣ'ನಾಗಿ ಅಭಿನಯಿಸಿ ಹಾಸನದ ಸುತ್ತಮುತ್ತನ ಹಳ್ಳಿ-ಹಳ್ಳಿಯಲ್ಲೂ ಮನೆ ಮಾತಾದರು. ಹಿರಣ್ಣಯ್ಯ ಮಿತ್ರಮಂಡಳಿಯಲ್ಲಿ ವೃತ್ತಿಕಲಾವಿದರಾಗಿ ವೈವಿಧ್ಯಮಯ ಪಾತ್ರಗಳನ್ನು ನಿರ್ವಹಿಸಿದರು.

ಕೃಷಿಕರಾದ ಗೌಡರು ತಮ್ಮ ಹುಟ್ಟೂರು ಹಾಲುವಾಗಿಲು ಗ್ರಾಮದಲ್ಲಿಯೇ ವಿಜಯಲಕ್ಷ್ಮೀ ಕಲಾತಂಡ ಕಟ್ಟಿ ಬೆಳೆಸಿದರು. ಅವರೇ ರಚಿಸಿ ನಿರ್ದೇಶಿಸಿದ 'ಸಾರ್ವಭೌಮ ಸುಯೋಧನ' ನಾಟಕ ಯಶಸ್ವೀ ಪ್ರಯೋಗಗಳನ್ನು ಕಂಡಿತು. ಕೃಷ್ಣಲೀಲೆ, ಜೋಕುಮಾರಸ್ವಾಮಿ, ವಿಷಜ್ವಾಲೆ, ಎಚ್ಚಮನಾಯಕ, ಗ್ರಾಮ ಪಂಚಾಯಿತಿ, ಅಂಗುಲಿಮಾಲ ಮುಂತಾದ ನಾಟಕಗಳನ್ನು ಪ್ರದರ್ಶಿಸಿದ್ದಾರೆ. ಅನೇಕ ಸಂಘ-ಸಂಸ್ಥೆಗಳು ಸನ್ಮಾನಿಸಿ ಗೌರವಿಸಿದೆ. ಹಾಸನ ಜಿಲ್ಲೆಯ ರಂಗಕಲಾವಿದರ ಸಂಘಟನೆಯಲ್ಲಿ ತೊಡಗಿಸಿಕೊಂಡಿದ್ದಾರೆ.

---



## ವೇಣುಗೋಪಾಲ ಕಾಸರಗೋಡು

ಕರ್ನಾಟಕದ ಮುಖ್ಯ ರಂಗವಾಹಿನಿಯಲ್ಲಿ ಕಾಸರಗೋಡು ಸಮರಸವಾಗಿ ಸಮನೆಲೆಯಿಂದ ಬೆರೆಯುವಲ್ಲಿ ಪ್ರೊ. ವೇಣುಗೋಪಾಲ ಕಾಸರಗೋಡು ಅವರು ನಟನಾಗಿ, ನಿರ್ದೇಶಕನಾಗಿ, ನಾಟಕಕಾರನಾಗಿ, ರಂಗಕರ್ಮಿಯಾಗಿ, ಕುಶಲ ಸಂಘಟಕನಾಗಿ ಮೂರು ದಶಕಗಳ ಕಾಲ ಎಡೆಬಿಡದೆ ತೊಡಗಿಸಿಕೊಂಡಿದ್ದರಿಂದ ಸಾರ್ಥಕತೆ ಕಂಡಿದೆ.

ಚಿಕ್ಕಂದಿನಲ್ಲೇ ಬಣ್ಣ ಹಚ್ಚಿ ಕುಣಿಯುವ ಹುಚ್ಚು, ಶಾಲಾದಿನಗಳಲ್ಲಿ ನಾಟಕಾಭಿನಯದ ಬಗ್ಗೆ ಆಸಕ್ತಿ, ಮುಂದೆ ತ್ರಿಚ್ಚೂರಿನ ಜಿ. ಶಂಕರ್‌ಪಿಳ್ಳೆಯವರ ಸ್ಕೂಲ್ ಆಫ್ ಡ್ರಾಮಾದಲ್ಲಿ ತರಬೇತಿ. ವಿಶೇಷ ಕಾಳಜಿಯಿಂದ ತಮ್ಮ ಗೆಳೆಯರೊಂದಿಗೆ ಯವನಿಕಾ ರಂಗಸಂಸ್ಥೆ ಕಟ್ಟಿದರು. ಇದರ ಫಲವಾಗಿ ರಂಗಚಟುವಟಿಕೆಗಳು ನಿರಂತರವಾಗಿ ನಡೆದು ಕರಾವಳಿ ರಂಗಭೂಮಿಗೆ ಹೊಸ ಆಯಾಮ ದೊರಕಿತು. ಯವನಿಕಾ ಆಶ್ರಯದಲ್ಲಿ ಅಖಿಲ ಭಾರತ ನಾಟಕ ರಚನಾ ಸ್ಪರ್ಧೆಗಳು, ನಾಟಕೋತ್ಸವಗಳು, ವಿಚಾರಸಂಕಿರಣಗಳು ನಡೆದು ರಂಗಭೂಮಿಗೆ ವಿಶಿಷ್ಟ ಕೊಡುಗೆ ಸಂದಿದೆ.

ಪ್ರೊ. ವೇಣುಗೋಪಾಲ ಕಾಸರಗೋಡು ಅವರು ಕಾವ್ಯ, ಕಾದಂಬರಿ, ನಾಟಕ, ವಿಮರ್ಶೆ, ಅನುವಾದ, ಸಂಪಾದನೆ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಸೇರಿದಂತೆ ಹದಿನೈದು ಕೃತಿಗಳನ್ನು ಪ್ರಕಟಿಸಿದ್ದಾರೆ. ತಮ್ಮ ಕೃತಿಗಳಿಗಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ, ಮುದ್ದಣ್ಣ ಸ್ಮಾರಕ ಪ್ರಶಸ್ತಿ, ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಸ್ಮಾರಕ ಸುವರ್ಣ ಪದಕ ಗಳಿಸಿರುತ್ತಾರೆ. ಕನ್ನಡ ಸಾಹಿತ್ಯ ಪರಿಷತ್ತು, ಅಕಾಡೆಮಿ, ಕೇಂದ್ರ ಸಾಹಿತ್ಯ ಅಕಾಡೆಮಿ ಸೇರಿದಂತೆ ಹಲವಾರು ಸಂಘ ಸಂಸ್ಥೆಗಳು ಏರ್ಪಡಿಸಿದ್ದ ಐವತ್ತಕ್ಕೂ ಹೆಚ್ಚು ವಿಚಾರಗೋಷ್ಠಿ ಕಮ್ಮಟಗಳಲ್ಲಿ ಭಾಗವಹಿಸಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತು ಕರ್ನಾಟಕ ನಾಟಕ ಅಕಾಡೆಮಿಗಳಲ್ಲಿ ಸದಸ್ಯರಾಗಿ ಕಾರ್ಯನಿರ್ವಹಿಸಿರುವ ಹೆಗ್ಗಳಿಕೆ ಇವರದಾಗಿದೆ.

---



## ವೈಕುಂಠರಾಜು ಬಿ.ವಿ.

ಕನ್ನಡದಲ್ಲಿ ನಾಟಕಗಳಿಲ್ಲ ಎಂಬ ಕೊರಗು ಕೇಳಿ ಬರುತ್ತಿರುವ ದಿನಗಳಲ್ಲಿ ಸಮಕಾಲೀನ ಸಾಮಾಜಿಕ ಮತ್ತು ರಾಜಕೀಯ ವಸ್ತುಗಳನ್ನೊಳಗೊಂಡ ನಾಟಕಗಳ ಉತ್ಕರ್ಷತೆಗೆ ಕಾರಣರಾದ ವಿರಳರಲ್ಲಿ ಒಬ್ಬರು, ವೈಕುಂಠರಾಜು ಬಿ.ವಿ. ಹತ್ತಾರು ವರುಷಗಳಿಂದ ನಾಡಿನ ರಾಜಕೀಯದ ಆಗುಹೋಗುಗಳನ್ನು, ಏರುಪೇರುಗಳನ್ನು, ಆ ವಲಯದ ಕೋಟೆ ಕೊತ್ತಲೊಳಗೆ ನಡೆಯುವ ವಿದ್ಯಮಾನಗಳನ್ನು ಅತ್ಯಂತ ಸರಳವಾಗಿ ಶ್ರೀ ಸಾಮಾನ್ಯನಿಗೂ ಮನಮುಟ್ಟುವಂತೆ ವಾರಪತ್ರಿಕೆಯ ಸಂಪಾದಕರ ಡೈರಿಯಲ್ಲಿ ಹೇಳುತ್ತ ಬಂದಿರುವ ವೈಕುಂಠರಾಜು ಅವರು ಕಾಲೇಜು ದಿನಗಳಲ್ಲಿ ಮಹಾರಾಜ ಕಾಲೇಜು ಶತಮಾನೋತ್ಸವ ಸ್ವರ್ಣಪದಕವನ್ನು ಕನ್ನಡ ರಂಗಭೂಮಿಯನ್ನು ಕುರಿತ ಪ್ರಬಂಧಕ್ಕೆ ಪಡೆದು ರಂಗಭೂಮಿಯ ಬಗೆಗೆ ತಮ್ಮ ಕಾಳಜಿ ದಾಖಲಿಸಿದವರು.

1964 ರಿಂದ 1983ರವರೆಗೆ ಪ್ರಜಾವಾಣಿಯ ಸಾಪ್ತಾಹಿಕ ಸಂಪಾದಕರಾಗಿದ್ದಾಗ ರಂಗ ಚಟುವಟಿಕೆಗೆ, ವಿಮರ್ಶೆಗೆ ಉನ್ನತ ಸ್ಥಾನ ನೀಡಿ ರಂಗಭೂಮಿಯಲ್ಲಿ ಹೊಚ್ಚ ಹೊಸತನದ ಗಾಳಿ ಬೀಸಲು ಕಾರಣರಾದವರು. 84ರಲ್ಲಿ ತಮ್ಮದೇ ಪತ್ರಿಕೆ ಪ್ರಾರಂಭಿಸಿ 'ವಾರಪತ್ರಿಕೆ'ಯ ಸಂಪಾದಕತ್ವ ಮತ್ತು ಅದೇ ಬಳಗದ 'ರಾಜು ಕ್ರೀಡಾ ಪತ್ರಿಕೆ'ಯ ಮುಖ್ಯ ಸಂಪಾದಕರಾದರು. ಕೆಲವು ಕಾಲ ಕರ್ನಾಟಕ ರಾಜ್ಯದ ವೃತ್ತಿನಿರತ ಪತ್ರಕರ್ತರ ಸಂಘದ ಪ್ರಧಾನ ಕಾರ್ಯದರ್ಶಿ ಮತ್ತು ಅಧ್ಯಕ್ಷರೂ ಆಗಿ ಸೇವೆ ಸಲ್ಲಿಸಿದರು.

ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ, ವ್ಯಕ್ತಿಚಿತ್ರ, ಪತ್ರಿಕಾ ಲೇಖನ ಹೀಗೆ ಹತ್ತು ಹಲವು ಪ್ರಕಾರಗಳಲ್ಲಿ ಹೆಸರಾದವರು. ಇವರ 'ಸಂದರ್ಭ' ನಾಟಕ ಕನ್ನಡದ ಕೆಲವೇ ಉತ್ತಮ ರಾಜಕೀಯ ನಾಟಕಗಳ ಸಾಲಿಗೆ ಸೇರುತ್ತದೆ. ರಂಗಭೂಮಿಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿದ್ದವರು, 'ಸಂದರ್ಭ' ನಾಟಕದಲ್ಲಿ ನಾಯಕನಾಗಿ ನಟಿಸಿದ್ದರು, ಸಿ.ಜಿ.ಕೆ. ಅವರೊಂದಿಗೆ 'ಸನ್ನಿವೇಶ' ನಿರ್ದೇಶಿಸಿದರು. ಇವರ 'ಉದ್ಭವ' ಶ್ರೀನಿವಾಸ ಪ್ರಭು ಅವರಿಂದ ನಾಟಕವಾಗಿ ರಂಗದ ಮೇಲೆ ಯಶಸ್ವಿಯಾಗಿ ಪ್ರದರ್ಶನ ಕಂಡಿದೆ.

1987 ರಿಂದ 1989ರವರೆಗೆ ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ ರಂಗಭೂಮಿಯ ಸರ್ವಾಂಗೀಣ ಅಭಿವೃದ್ಧಿಗಾಗಿ ಗಣನೀಯ ಸೇವೆ ಸಲ್ಲಿಸಿದ್ದಾರೆ. ಕನ್ನಡ ರಂಗಭೂಮಿಯ ಬಗ್ಗೆ ಇವರ ಒಲವು ಅನುಪಮವಾದದ್ದು.

---



## ಶಿವಪ್ರಕಾಶ್ ಎಚ್.ಎಸ್.

ಎಚ್.ಎಸ್. ಶಿವಪ್ರಕಾಶ್ ಅವರ ಹೆಸರು ಇಂದಿನ ಕನ್ನಡ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕೇಳಿ ಬರುವಂತಾಗಿದೆ. ಕವಿಯಾಗಿ, ನಾಟಕಕಾರರಾಗಿ, ಅನುವಾದಕರಾಗಿ, ವಿಮರ್ಶಕರಾಗಿ ತಮ್ಮದೇ ಆದ ಮಾರ್ಗವೊಂದನ್ನು ಕಂಡುಕೊಂಡಿದ್ದು, ಈಗಾಗಲೇ ಇಪ್ಪತ್ತಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ನೀಡಿದ್ದಾರೆ.

ಜನಪದ ರಂಗಭೂಮಿಯ ಪ್ರೇರಣೆಯಿಂದ ಆಧುನಿಕ ಕನ್ನಡ ರಂಗಭೂಮಿಯನ್ನು ಪುನರ್‌ರೂಪಿಸುವ ಪ್ರಕ್ರಿಯೆಯಲ್ಲಿ ಗಮನಾರ್ಹವಾದ ಕೃತಿಗಳನ್ನು ನೀಡಿದ್ದಾರೆ. ಇವರ ಕೃತಿಗಳಲ್ಲಿ ಪುರಾಣ–ಚರಿತ್ರೆ ಸಮಕಾಲೀನ ಸಂದರ್ಭ, ಸಾಮಾಜಿಕ ಚಳವಳಿ, ರಾಜಕಾರಣ ಒಂದುಗೂಡಿ ಸಂಕೇತವಾಗಿರುವ ಒಂದು ವಿಶಿಷ್ಟ ಸಾಧನೆಯನ್ನು ಕಾಣಬಹುದಾಗಿದೆ. ಇವರ ಹಲವಾರು ಕೃತಿಗಳು ಈಗಾಗಲೇ ಹಲವು ಭಾಷೆಗಳಿಗೆ ಅನುವಾದಗೊಂಡಿವೆ. 'ಮಳೆ ಬಿದ್ದ ನೆಲದಲ್ಲಿ' ಕವನ ಸಂಕಲನ, 'ಮಹಾಚೈತ್ರ' ನಾಟಕ ಹಾಗೂ 'ಕಿಂಗ್‌ಲಿಯರ್' ಅನುವಾದ ಕೃತಿಗಳಿಗೆ ಸಾಹಿತ್ಯ ಅಕಾಡೆಮಿ ಪುರಸ್ಕಾರ ದೊರಕಿದೆ. ಇವರು ಬರೆದ ಮಹಾಚೈತ್ರ, ಮಂಟೇಸ್ವಾಮಿ ಕಥಾಪ್ರಸಂಗ, ಸುಲ್ತಾನ ಟಿಪ್ಪು, ಮಾದಾರಿ ಮಾದಯ್ಯ, ಷೇಕ್ಸ್‌ಪಿಯರ್ ಸ್ವಪ್ನನೌಕೆ, ಮಧುರೆ ಕಾಂಡ ಮುಂತಾದ ನಾಟಕಗಳು ರಂಗದ ಮೇಲೆ ಯಶಸ್ವಿಯಾಗಿ ಅನೇಕ ಪ್ರಯೋಗಗಳನ್ನು ನಾಡಿನಾದ್ಯಂತ ಕಂಡಿವೆ.

ಪ್ರಸ್ತುತ ಇಂಗ್ಲಿಷ್ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿರುವರು. ಭಾರತೀಯ ಭಾಷೆಗಳ ಇಂದಿನ ಕಾವ್ಯ, ನಾಟಕಗಳ ಪರಿಚಯವುಳ್ಳವರಾಗಿದ್ದಾರೆ. ರಾಷ್ಟ್ರೀಯ, ಅಂತರರಾಷ್ಟ್ರೀಯ ವಿಚಾರಸಂಕಿರಣಗಳಲ್ಲಿ, ಕವಿಗೋಷ್ಠಿಗಳಲ್ಲಿ ಕನ್ನಡವನ್ನು ಪ್ರತಿನಿಧಿಸಿರುವ ಶಿವಪ್ರಕಾಶ್ ತಮ್ಮ ಗಂಭೀರ ಅಧ್ಯಯನದೊಂದಿಗಿನ ಹೊಳಹುಗಳನ್ನು ನಿಖರವಾದ ರೀತಿಯಲ್ಲಿ ಮಂಡಿಸುತ್ತಾರೆ. ಅನುಭಾವ ಸಾಹಿತ್ಯದ ಬಗ್ಗೆ ಸ್ಪಷ್ಟವಾಗಿ ಮಾತನಾಡಬಲ್ಲ ವಿರಳರಲ್ಲಿ ಒಬ್ಬರು.

---



## ಶಿವಪ್ಪ ಎನ್.

ವಸ್ತ್ರಾಲಂಕಾರ ತಜ್ಞ, ಪ್ರಸಾಧನಪಟು, ಚೌಡೇಶ್ವರಿ ವಸ್ತ್ರಾಲಂಕಾರ ಮಾಲೀಕರು. ಇವರ ಸರಳತೆ ಆತ್ಮೀಯತೆಗೆ ಮನಸೋಲದವರಿಲ್ಲ, ಹವ್ಯಾಸಿ ಮತ್ತು ವೃತ್ತಿಕಲಾವಿದರು ಪ್ರೀತಿಯಿಂದ ಶಿವಣ್ಣ ಎಂದೇ ಕರೆಯುವರು.

ಎಳೆಯ ವಯಸ್ಸಿನಿಂದಲೂ ರಂಗಭೂಮಿಯಲ್ಲಿ ಒಲವು, ಕಲೆಯ ಒಡನಾಟದಲ್ಲಿ ಬೆಳೆದರು. ಬಡತನದಿಂದಾಗಿ ಶಾಲೆ ಮುಂದುವರಿಸಲಾಗಲಿಲ್ಲ. ತಂದೆಯವರ ಪ್ರೋತ್ಸಾಹದಿಂದ ಪ್ರಸಾಧನ ಕಲೆಯಲ್ಲಿ ಪರಿಣತರಾದರು. ಪರಿಸ್ಥಿತಿಯ ಒತ್ತಡದಿಂದ,

ತನ್ನ ಕಾಲ ಮೇಲೆ ತಾನು ನಿಲ್ಲುವ ಛಲದಿಂದ 1965ರಲ್ಲಿ ಚೌಡೇಶ್ವರಿ ವಸ್ತ್ರಾಲಂಕಾರದ ಸ್ಥಾಪನೆ. ನಾಟಕದ ಖಯಾಲಿ ಅಂಟಿಸಿಕೊಂಡು, ನಟಿಸುವುದಕ್ಕೆ ಸೀಮಿತಗೊಳ್ಳದೆ ವಸ್ತ್ರಾಲಂಕಾರ, ರಂಗಸಜ್ಜಿಕೆ, ಪ್ರಸಾಧನಗಳಲ್ಲಿ ಪರಿಶ್ರಮ ಗಳಿಸಿ, ಅದರ ಮೂಲಕವೇ ಜೀವನ ನಿರ್ವಹಣೆಯ ದಾರಿ ಕಂಡುಕೊಂಡವರು.

ಅಂದು ಕೇವಲ ಮುನ್ನೂರು ರೂ.ಗಳ ಬಂಡವಾಳದಿಂದ ಆರಂಭವಾದ ಚೌಡೇಶ್ವರಿ ವಸ್ತ್ರಾಲಂಕಾರ–ಉಡುಗೆ ತೊಡುಗೆ, ರಂಗಪರಿಕರ, ಬೆಳಕು ಇತ್ಯಾದಿ ಪೂರಕ ತಾಂತ್ರಿಕ ಸಲಕರಣೆಗಳೊಂದಿಗೆ ಇಂದು ಒಂದು ಯಶಸ್ವಿ ಉದ್ಯಮವಾಗಿ ಬೆಳೆದುಬರಲು ಕಾರಣರಾಗಿದ್ದಾರೆ. ಬೆಂಗಳೂರಿನ ಕಬ್ಬನ್‌ಪೇಟೆಯಲ್ಲಿ ರವೀಂದ್ರ ಕಾಲಕ್ಷೇತ್ರಕ್ಕೆ ಸಮೀಪದಲ್ಲಿರುವ ಈ ಸಂಸ್ಥೆ ವ್ಯಕ್ತಿ ಕಲಾವಿದರಿಗೆ, ಹವ್ಯಾಸಿ ತಂಡಗಳಿಗೆ ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ಅಗತ್ಯ ಸಾಮಗ್ರಿಗಳನ್ನು ನೀಡುತ್ತಾ, ಎಲ್ಲರಿಗೂ ಬೇಕಾದ ಸಂಸ್ಥೆಯಾಗಿದೆ.

ತಾವು ಗಳಿಸಿ, ನಾಲ್ಕಾರು ಮಂದಿಯ ಜೀವನೋಪಾಯಕ್ಕೆ ಕಾರಣರಾಗಿರುವ ಶಿವಣ್ಣ ಅಜಾತಶತ್ರು, ಹಿರಿಕಿರಿಯರೆನ್ನದೆ ಎಲ್ಲರ ಅಭಿಮಾನಯದ ವ್ಯಕ್ತಿಯಾಗಿ ಬೆಳೆದು ನಿಂತಿದ್ದಾರೆ. ಅನೇಕ ಶಿಷ್ಯರನ್ನೂ ತಯಾರಿಸಿರುವ ಶಿವಣ್ಣ, ತಮ್ಮ ಕಲೆ ಹಲವರ ಬದುಕಿಗೆ ಊರುಗೋಲಾಗಿರಲಿ ಎಂಬ ಹಂಬಲವುಳ್ಳವರು.

ಹಲವಾರು ಸಂಘ–ಸಂಸ್ಥೆಗಳು ಶಿವಣ್ಣನವರನ್ನು ಆದರದಿಂದ ಗೌರವಿಸಿ, ಸನ್ಮಾನಿಸಿವೆ. ಆದರೆ ತಮಗೆ ಸಲ್ಲುವ ಪ್ರಶಸ್ತಿ, ಸಂಸ್ಥೆಯ ಏಳಿಗೆಗೆ ದುಡಿಯುವ ಎಲ್ಲರಿಗೂ ಮತ್ತು ತನ್ನನ್ನೂ ಬೆಳೆಸಿದ ಕಲಾವಿದರ ಬಳಗಕ್ಕೆ ಸಂದ ಗೌರವ–ಎನ್ನುವ ಶಿವಣ್ಣನವರ ಸಹೃದಯತೆಯನ್ನು ಮರೆಯಲಾಗದು.



## ಶ್ರೀಮಂತ ಕಣಬೂರ

ಬಯಲಾಟಗಳಲ್ಲಿ ಅನೇಕ ಪ್ರಕಾರಗಳಿದ್ದರೂ ಪಾರಿಜಾತ ಕಲೆಗೆ ತನ್ನದೇ ಆದ ಒಂದು ಪರಂಪರೆಯಿದೆ. ಮೇಲುನೋಟಕ್ಕೆ ಪುರಾಣ ಕಥೆಯಾದರೂ ಬದುಕಿಗೆ ಹತ್ತಿರವಾದ ವಸ್ತುವನ್ನು ಹೊಂದಿರುವುದಲ್ಲದೇ ಲೋಕಪ್ರಿಯವಾದ ಹಾಸ್ಯ, ಶೃಂಗಾರ, ಮಧುರವಾದ ಹಾಡುಗಳೊಡನೆ ಭಕ್ತಿಯ ಉದ್ದೇಶ ಹೊಂದಿ ಸಾಮಾನ್ಯ ಜನತೆಗೆ ಆಕರ್ಷಿತವಾಗಿವೆ. ಪಾರಿಜಾತದ ಕಂಪನ್ನು ಹಳ್ಳಿಯಿಂದ ದಿಲ್ಲಿಗೆ ಹಬ್ಬಿಸಿದ ವಿರಳರಲ್ಲಿ ಒಬ್ಬರು, ಶ್ರೀಮಂತ ಕಣಬೂರ ರನ್ನ ಬೆಳಗಲಿ.

ಪ್ರಾಥಮಿಕ ಶಾಲಾದಿನಗಳಲ್ಲಿಯೇ ಬಾಲನಟರಾಗಿ ರಂಗ ಪ್ರವೇಶಿಸಿದ ಶ್ರೀಮಂತ ಕಣಬೂರ ಕಂಸವಧಾ ನಾಟಕದಲ್ಲಿ ಕೃಷ್ಣನ ಪಾತ್ರವನ್ನು ಲೀಲಾಜಾಲವಾಗಿ ಅಭಿನಯಿಸಿದರು. ಮಹಾಲಿಂಗಪೂರದ ಮುರಿಗೆಪ್ಪ ಸೋರಗಾಂವಿಯವರಲ್ಲಿ ಶಿಷ್ಯವೃತ್ತಿ ಕೈಗೊಂಡು ತಬಲವಾದನ, ಹಾರ್ಮೋನಿಯಂ, ತಾಳವಾದನ, ದಮಡಿ, ಡೋಲಕಾ – ಈ ಪಂಚವಾದ್ಯಗಳನ್ನು ಸಮರ್ಥವಾಗಿ ನುಡಿಸಬಲ್ಲ ಪರಿಣತರಾದರು. ಹದಿನೈದು ವರ್ಷ ಸೇವೆ ಸಲ್ಲಿಸಿದರು. ನಂತರ ಹದಿಮೂರು ವರ್ಷಗಳ ಕಾಲ ಧಾರವಾಡದ ಶಿವನಗೌಡ ಕೋಟಿ ಅವರ ಪಾರಿಜಾತ ಕಂಪೆನಿಯಲ್ಲಿ ತಮ್ಮ ಬಹುಮುಖಿ ಪ್ರತಿಭೆಯನ್ನು ತೋರಿದರು. ಇದೀಗ ಮಹಾಲಿಂಗಪೂರದ ಕನ್ನಡದ ಕಬೀರನೆಂದು ಹೆಸರಾಗಿರುವ ಇಬ್ರಾಹಿಂ ಸುತಾರ ಅವರ ಭಜನಾ ಸಂಘದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ನಾಡಿನಾದ್ಯಂತ ಆಕಾಶವಾಣಿಯ ವಿವಿಧ ಕೇಂದ್ರಗಳಿಂದ ಹಲವಾರು ಬಾರಿ ಇವರ ಕಾರ್ಯಕ್ರಮ ಪ್ರಸಾರವಾಗಿದೆ. ತಮ್ಮ ಹುಟ್ಟೂರಾದ ರನ್ನ ಬೆಳಗಲಿಯಲ್ಲಿ ಶಿಷ್ಯಪರಂಪರೆಯನ್ನೇ ತಯಾರಿಸಿ ತಮ್ಮ ಕಲಾ ಪರಂಪರೆಯನ್ನು ಮುಂದುವರೆಸಿದ್ದಾರೆ.



## ಶಿವಾನಂದ ಜಿ.ವಿ.

ಕನ್ನಡ ರಂಗಭೂಮಿಯಲ್ಲಿ ವಿವಾದಗಳಿಲ್ಲದ, ಎಲ್ಲ ಬಗೆಯ ರಂಗಭೂಮಿಗೂ ಸಲ್ಲುವ ಅತ್ಯಂತ ಸಭ್ಯ ಹಾಗೂ ಸಹೃದಯವಂತರು. ನಾಟಕರತ್ನ ಗುಬ್ಬಿ ವೀರಣ್ಣನವರ ಪತ್ನಿ ರಂಗಕಲಾವಿದೆ ಜಿ. ಸುಂದರಮ್ಮನವರ ಮಕ್ಕಳಾದ ಶಿವಾನಂದ ನಾಲ್ಕನೆಯ ವಯಸ್ಸಿನಲ್ಲೇ ತೊಟ್ಟಿಲು ಕೃಷ್ಣನಾಗಿ ರಂಗಪ್ರವೇಶ. ಇವರಲ್ಲಿ ಕಲೆ ಅಭಿಜಾತ, ಪ್ರಹ್ಲಾದ 'ಚಲ್ತಿ ದುನಿಯಾ'ದ ರಾಜಶೇಖರನ ಪಾತ್ರಗಳಲ್ಲಿ ಬಾಲನಟನಾಗಿ ಜನಪ್ರಿಯರು.

ರಂಗಭೂಮಿಯಲ್ಲಿ ತೊಡಗಿಸಿಕೊಂಡಿದ್ದೂ ಬಿ.ಎಸ್ಸಿ. ಪದವೀಧರರಾಗಿ, 1958ರಲ್ಲಿ ದೆಹಲಿಯ ಏಷಿಯನ್ ಥಿಯೇಟರ್ ಇನ್‌ಸ್ಟಿಟ್ಯೂಟ್‌ನಲ್ಲಿ ಮಕ್ಕಳ ರಂಗಭೂಮಿ ತರಬೇತಿ ಪಡೆದರು. ನಂತರ ರಾಷ್ಟ್ರೀಯ ನಾಟಕ ಶಾಲೆಯ ಮೊಟ್ಟಮೊದಲನೆ ತಂಡದಲ್ಲಿ ಡಿಪ್ಲೋಮಾ ಪದವಿ ಗಳಿಸಿದರು.

ಬೆಂಗಳೂರಿನಲ್ಲಿ 'ಕಲಾಕುಂಜ' ಸಂಸ್ಥೆ ಸ್ಥಾಪಿಸಿ ಅನೇಕ ನಾಟಕಗಳನ್ನು ನಿರ್ದೇಶಿಸಿದರು, ಅಭಿನಯಿಸಿದರು. ಇವರು ನಿರ್ದೇಶಿಸಿದ ಜೋಮ, ಶ್ರೀರಂಗರಾಯ, ಮೊಟ್ಟಮೊದಲು ರಂಗವೇರಿದ ಯಯಾತಿ, ಹಯವದನ ಪ್ರಯೋಗ ವೈವಿಧ್ಯದಿಂದಾಗಿ ಹೆಸರಾದವು. ಪ್ರಾಯಶಃ ಸೆಟ್ಟುಗಳನ್ನು ಹವ್ಯಾಸಿಗಳಲ್ಲಿ ಬಳಸಿದ ಮೊದಲಿಗರು.

ಬೆಂಗಳೂರಿನ ಅನೇಕ ಹವ್ಯಾಸಿ ನಾಟಕ ಪ್ರಯೋಗಗಳಲ್ಲಿ ಬಹುಪಾಲು ಎಲ್ಲ ನಿರ್ದೇಶಕರ ಬಳಿಯೂ ಅಭಿನಯಿಸಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ನಾಟಕದ ವಿಭಾಗದಲ್ಲಿ, ಮದ್ರಾಸಿನ ಫಿಲಂ ಛೇಂಬರ್‌ನ ಅಭಿನಯ ತರಬೇತಿ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ ಬೆಂಗಳೂರಿನ ಆದರ್ಶ ಫಿಲಂ ಇನ್‌ಸ್ಟಿಟ್ಯೂಟ್‌ನಲ್ಲಿ ಡೀನ್ ಆಗಿ ಹಲವು ರಂಗಕರ್ಮಿಗಳನ್ನು – ನಟರನ್ನು ರಂಗಭೂಮಿಗೆ ಕೊಟ್ಟಿದ್ದಾರೆ. ಬೆಂಬಿಡದ ಭೂತ, ಯಾರ ಸಾಕ್ಷಿ, ಭ್ರಮೆ, ಸರ್ವೇಜನಾಃ ಸುಖಿನೋಭವಂತು ನಾಟಕಗಳು, ಅನುವಾದ ನಾಟಕ, ಮಕ್ಕಳ ನಾಟಕ ರಚಿಸಿದ್ದಾರೆ. ಗುಬ್ಬಿ ಕಂಪನಿಯ ಹಲವಾರು ನಾಟಕಗಳನ್ನು ಬಾನುಲಿಗಾಗಿ ನಿರ್ದೇಶಿಸಿದ್ದಾರೆ. ಹೆಸರಾಂತ ಸ್ಪಂದನ ತಂಡದ ಅಧ್ಯಕ್ಷರಾಗಿರುವ ಶಿವಾನಂದ ಐವತ್ತಕ್ಕೂ ಹೆಚ್ಚಿನ ಸಿನಿಮಾಗಳಲ್ಲಿ ನಟಿಸಿರುತ್ತಾರೆ. ಕನ್ನಡ ರಂಗಭೂಮಿಯನ್ನು ಶ್ರೀಮಂತಗೊಳಿಸುವಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಶಿವಾನಂದ ರಂಗಾಸಕ್ತರ ಮನದಲ್ಲಿ ನೆಲೆಯೂರಿದ್ದಾರೆ.



## ಸಂಪಿಗೆ ತೋಂಟದಾರ್ಯ

ನಟ, ನಾಟಕಕಾರ, ನಿರ್ದೇಶಕ, ಸಂಘಟಕ ತೋಂಟದಾರ್ಯ ಹತ್ತು ಹಲವು ಯೋಚನೆ–ಯೋಜನೆಗಳ ಸಂಚಾರಿ ಭಂಡಾರ. ಸದ್ದಿಲ್ಲದೆ ಏನೆಲ್ಲಾ ಸಾಧಿಸಿಬಿಡುವ ಮಹಾ ಕನಸುಗಾರ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಭೌತಶಾಸ್ತ್ರದಲ್ಲಿ ಪ್ರೊಫೆಸರ್ ಆಗಿರುವ ಇವರು ರಂಗಭೂಮಿಯ ವಿಷಯದಲ್ಲಿ ಕಲಿಯಬಯಸುವವರಿಗೆ ನಟನೆಯಿಂದ ನೇಪಥ್ಯದವರೆಗೆ ಎಲ್ಲವನ್ನೂ ತಿಳಿಸಿಕೊಟ್ಟು ಮುನ್ನಡೆಸುವಂಥವರು.

ಶಾಲಾ ದಿನಗಳಲ್ಲೇ ನಾಟಕ, ಚರ್ಚಾಗೋಷ್ಠಿ, ಸಾಹಿತ್ಯಗಳಲ್ಲಿ ಒಲವು. ತಾರುಣ್ಯದಲ್ಲಿ ಅನಕೃ ಅವರ 'ಕನ್ನಡ ಯುವಜನ ಸಭಾ'ದ ಸದಸ್ಯ. ಜನವಿರೋಧಿ ಪ್ರತಿಗಾಮಿ ಶಕ್ತಿಯನ್ನು ವಿರೋಧಿಸಿ ಜನಜಾಗೃತಿ ಮಾಡುವಲ್ಲಿ ಮುಂದು. ಧಾರವಾಡದಲ್ಲಿ 1967ರಲ್ಲಿ ಡಾ. ಬಿ.ಎನ್. ವಿಶ್ವನಾಥರೊಡನೆ ಕೂಡಿ 'ಕಲಾ ದೇಗುಲ' ತಂಡ ಸ್ಥಾಪಿಸಿದರು. ಕೈಲಾಸಂ ಸ್ಮಾರಕ ಮತ್ತು ಸ್ನೇಹಲತಾರೆಡ್ಡಿ ಸ್ಮಾರಕ ನಾಟಕ ಸ್ಪರ್ಧೆಗಳನ್ನು ನಿರಂತರವಾಗಿ ಬಹಳಷ್ಟು ವರ್ಷ ಯಶಸ್ವಿಯಾಗಿ ನಡೆಸಿದರು. ಬಿ.ವಿ. ಕಾರಂತರ ರಂಗತರಬೇತಿ ಶಿಬಿರವನ್ನು ಸಂಘಟಿಸಿದರು. ಚಂದ್ರಶೇಖರ ಪಾಟೀಲ, ಸಿದ್ಧಲಿಂಗ ಪಟ್ಟಣಶೆಟ್ಟಿಯವರ 'ಅಂತರಂಗ ನಾಟಕ ಕೂಟ'ದಲ್ಲಿ ನಿರ್ದೇಶಿಸುವ ಹೊಣೆ ಹೊತ್ತರು. ಬಾಕಿ ಇತಿಹಾಸ, ತೆರೆಗಳು, ಗೋಕರ್ಣದ ಗೌಡಶಾನಿ, ಯಮಳ ಪ್ರಶ್ನೆ, ನಾಯಕ ಮುಂತಾದ ನಾಟಕಗಳ ಪರಿಣಾಮಕಾರಿ

ಪ್ರಯೋಗಗಳಿಗೆ ಹೆಸರಾದರು. ತೋಂಟದಾರ್ಯ ಐವತ್ತಕ್ಕೂ ಹೆಚ್ಚು ರೇಡಿಯೋ ನಾಟಕಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವವರು. ಎಂ.ಎಸ್. ಸತ್ಯುರವರ 'ಬರ' ಸೇರಿದಂತೆ ಮೊದಲಾದ ಚಲನಚಿತ್ರಗಳಿಗೆ ಸಂಭಾಷಣೆ ಬರೆದಿದ್ದಾರೆ. ನಾಡಿನ ಪ್ರಸಿದ್ಧ ಜಾನಪದ ಪ್ರಕಾರವಾದ 'ದೊಡ್ಡಾಟ' ಕಲೆ ಉಳಿಸಿ ಬೆಳೆಸುವ–ಸಂವರ್ಧನದ ಸಲುವಾಗಿ ಶಿಗ್ಗಾಂವಿಯಲ್ಲಿ ತಮ್ಮ ಗೆಳೆಯರೊಡನೆ ಕೂಡಿ 'ಕರ್ನಾಟಕ ದೊಡ್ಡಾಟ ಗುಂಪು' ಟ್ರಸ್ಟ್ ಮಾಡಿದ್ದಾರೆ. ಶಿಗ್ಗಾಂವಿಯ ಬಳಿಯಿರುವ ಹುಲಸೋಗಿಯನ್ನು ಗ್ರಾಮೀಣ ರಂಗಕಲೆಯ ಕೇಂದ್ರವನ್ನಾಗಿಸಲು ಸತತ ಪ್ರಯತ್ನವಾಗುತ್ತಿದೆ. ರಂಗಕಲೆಯನ್ನು ಸಾಮಾಜಿಕವಾಗಿ ಕೂಡ ದುಡಿಸಿಕೊಳ್ಳಬಹುದೆಂಬುದಕ್ಕೆ ಜಿಲ್ಲಾದ್ಯಂತ ನಲವತ್ತು ದಿನಗಳವರೆಗೆ ನಡೆಸಿದ ಜನ ವಿಜ್ಞಾನ ಜಾಥಾ ಇವರ ಜನಪರ ಕಾಳಜಿಗೆ ಸಾಕ್ಷಿಯಾಗಿದೆ.



## ಟಿ.ಎನ್. ಸೀತಾರಾಮ್

ನಾಟಕ ರಚನೆಕಾರರಾಗಿ, ನಟರಾಗಿ, ನಿರ್ದೇಶಕರಾಗಿ ಅಲ್ಲದೆ ಕತೆಗಾರರಾಗಿ, ಲಂಕೇಶ್ ಪತ್ರಿಕೆಯಲ್ಲಿ ವಿನೋದ ಲೇಖನ ಅಂಕಣಕಾರರಾಗಿ ಕೂಡ ಯಶಸ್ವಿಯಾಗಿರುವ, ಜನಪ್ರಿಯರಾಗಿರುವ ಟಿ.ಎನ್. ಸೀತಾರಾಮ್ ಕರಿಕೋಟು ತೊಟ್ಟು ಕೋರ್ಟಿಗೆ ಹಾಜರಾಗಿದ್ದಕ್ಕೆ ಸಾಕ್ಷ್ಯ ಆಧಾರಗಳೇ ಇಲ್ಲದ ಕಾನೂನು ಪದವೀಧರ. ಸಮಕಾಲೀನ ವಸ್ತು ಮತ್ತು ವಾಸ್ತವವಾದಿ ರಂಗಭೂಮಿಯನ್ನು ಕನ್ನಡ ಸಂದರ್ಭದಲ್ಲಿ ಪುನಶ್ಚೇತನಗೊಳಿಸಿದ ಮುಖ್ಯ ನಾಟಕಕಾರರಲ್ಲಿ ಒಬ್ಬರು.

'ಬದುಕು ಮನ್ನಿಸು ಪ್ರಭುವೆ', 'ಆಸ್ಫೋಟ', 'ನಮ್ಮೊಳಗೊಬ್ಬ ನಾಜೂಕಯ್ಯ' – ಇವರ ಮಹತ್ವದ ನಾಟಕಗಳು. ಮಧ್ಯಮ ವರ್ಗದ ಕುಪಿತ ಯುವಕ ಮತ್ತು ಸಮಕಾಲೀನ ರಾಜಕೀಯ, ಸಾಮಾಜಿಕ ವ್ಯವಸ್ಥೆಯ ಸೋಗಲಾಡಿತನಗಳ ನಡುವಿನ ಸಂಘರ್ಷವೇ ಇವರ ನಾಟಕಗಳ ಮೂಲವಸ್ತು. ಇವರ ನಾಟಕಗಳು ಯಶಸ್ವಿಯಾಗಿ ರಂಗದ ಮೇಲೆ ಪ್ರದರ್ಶನಗೊಂಡಿವೆ. 'ನಮ್ಮೊಳಗೊಬ್ಬ ನಾಜೂಕಯ್ಯ' ನಾಟಕ ಕರ್ನಾಟಕ ಸಾಹಿತ್ಯ ಮತ್ತು ನಾಟಕ ಅಕಾಡೆಮಿಗಳ ಪುರಸ್ಕಾರಗಳನ್ನು ಪಡೆದಿದೆ.

ಅನೇಕ ಚಲನಚಿತ್ರಗಳಿಗೆ ಸಂಭಾಷಣೆ ಹಾಗೂ ಚಿತ್ರಕಥೆಯನ್ನು ರಚಿಸಿರುವ ಸೀತಾರಾಮ್ ಅವರು ಚಲನಚಿತ್ರ ಕ್ಷೇತ್ರದಲ್ಲಿ ನೀಡುವ ಪ್ರಶಸ್ತಿಯನ್ನು ತಮ್ಮದಾಗಿಸಿಕೊಂಡಿದ್ದಾರೆ. ಮನೆಮಂದಿಯೆಲ್ಲ ಕುಳಿತು ನೋಡುವಂತಹ ದೂರದರ್ಶನ ಧಾರಾವಾಹಿಗಳನ್ನು ನಿರ್ದೇಶಿಸುವುದರ ಮೂಲಕ ಮನೆಮಾತಾಗಿದ್ದಾರೆ. ಬಹುಮುಖಿ ಪ್ರತಿಭೆಯ ಸೃಜನಶೀಲಕಾರ, ಟಿ.ಎನ್. ಸೀತಾರಾಮ್ ಅವರ ಸಣ್ಣ ಕತೆಯಾಧಾರಿತ ಚಿತ್ರ 'ಕ್ರೌರ್ಯ'ವನ್ನು ಗಿರೀಶ್ ಕಾಸರವಳ್ಳಿ ನಿರ್ದೇಶಿಸಿದ್ದಾರೆ.



## ಹೀರಾಬಾಯಿ ಶಂಕರಗೌಡ ಪಾಟೀಲ

ಬಾಲನಟಿಯಾಗಿ ರಂಗಪ್ರವೇಶ ಮಾಡಿದ ಹೀರಾಬಾಯಿ ಶಂಕರಗೌಡ ಪಾಟೀಲ ಅವರು ತಮ್ಮ ನಲವತ್ತು ವರ್ಷಗಳಿಗೂ ಮೀರಿದ ರಂಗಭೂಮಿಯ ಸೇವೆಯಲ್ಲಿ ತೊಂಬತ್ತು ನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳನ್ನು ನಿರ್ವಹಿಸಿದ್ದಾರೆ.

ರಂಗಕಲೆಯ ಪ್ರಾಥಮಿಕ ಸಂಸ್ಕಾರ ರಾವಸಾಹೇಬರ ಅಮ್ಮಿಣಗಿ ಕಂಪನಿಯಲ್ಲಿ ಸಿಕ್ಕಿತು. ಹಾಡುಗಾರಿಕೆಯ ಅಭ್ಯಾಸ ಬಾಬಯ್ಯ ಸ್ವಾಮಿಗಳಿಂದ ದೊರೆಯಿತು. ಮುಂದೆ ಹುಕ್ಕೇರಿ ದುಂಡಪ್ಪನವರ ಕಂಪನಿ, ಶ್ರೀ ಸಿದ್ಧೇಶ್ವರ ನಾಟ್ಯಸಂಘ ಅಂಕಲಿ ಮುಂತಾದವರುಗಳಲ್ಲಿ

ಅಭಿನಯಿಸಿದರು. 1950ರಲ್ಲಿ ರಂಗಕಲಾವಿದ ಶಂಕರಗೌಡ ಪಾಟೀಲರ ಜೀವನ ಸಂಗಾತಿಯಾದರು. ದಂಪತಿಗಳಿಬ್ಬರೂ ರಾಮದುರ್ಗದಲ್ಲಿ ಸ್ವಂತ ಕಂಪನಿ ಕಟ್ಟಿದರು. ಹಲವಾರು ಕಷ್ಟನಷ್ಟಗಳನ್ನು ಅನುಭವಿಸಿ 1954ರಲ್ಲಿ ಮುಚ್ಚಲಾಯಿತು.

ಏಣಗಿ ಬಾಳಪ್ಪನವರ 'ಕಲಾವೈಭವ ಕಂಪನಿ'ಗೆ ಪ್ರವೇಶಿಸಿದ ದಂಪತಿಗಳು ಮೂವತ್ತು ವರ್ಷಗಳ ಕಾಲ ಒಂದೇ ಕಂಪನಿಗೆ ನಿಷ್ಠೆಯಿಂದ ನಡೆದುಕೊಂಡರು. ಕಲಾವೈಭವದ ಗರಡಿಯಲ್ಲಿ 'ಆಲ್‌ರೌಂಡ್' ನಟಿಯಾಗಿ ಬೆಳೆದರು. ಸಂಪೂರ್ಣ ರಾಮಾಯಣದ ಅಂಜನೇಯ ಪಾತ್ರ, ಕುರುಕ್ಷೇತ್ರದ ಬುದ್ಧಿಮತಿ, ಚಿತ್ರಾಂಗದಲ್ಲಿ ಕೇತಕಿ, ಹೇಮರೆಡ್ಡಿ ಮಲ್ಲಮ್ಮನ ನಾಗಮ್ಮ, ಜಗಜ್ಯೋತಿ ಬಸವೇಶ್ವರ ಕಲಾವತಿ, ಕಿತ್ತೂರು ಚೆನ್ನಮ್ಮ ಬಂಗಾರಿ ಮುಂತಾದ ಪಾತ್ರಗಳನ್ನು ನಿರ್ವಹಿಸಿದರೂ ವಿಶೇಷವಾಗಿ ಸೊಸೆಗೆ ಕಿರುಕುಳ ಕೊಡುವ ಧೂರ್ತ ಸ್ವಭಾವದ ಗಯ್ಯಾಳಿ ಅತ್ತೆಯಾಗಿ ಪ್ರೇಕ್ಷಕರ ಸಿಟ್ಟು ಆಕ್ರೋಶಗಳಿಗೆ ಗುರಿಯಾಗಿ ಮುಂದೆ ಪಶ್ಚಾತ್ತಾಪ ಪಡುವ ಅದೇ ಪಾತ್ರದಿಂದಾಗಿ ರಂಗಭೂಮಿಯ 'ಒಳ್ಳೆಯ ಖಳನಾಯಕಿ' ಎಂದೇ ಚಿರಪರಿಚಿತರಾದರು. ಜನಮನ್ನಣೆ ಪಡೆದರು. ಇವರ ಮಕ್ಕಳು ಕಂಪನಿಯಲ್ಲಿ ಬಾಲನಟರಾಗಿಯೇ ಬೆಳೆದರು. ಇಡೀ ಕುಟುಂಬವೇ ಬಣ್ಣದ ಬದುಕಿನಲ್ಲಿ ತೊಡಗಿಸಿಕೊಂಡಿದೆ.



## ಹೆಗಡೆ ವಿ.ತಿ.

ಉತ್ತರ ಕನ್ನಡ ಜಿಲ್ಲೆಯ ಶಿರಸಿ ಬರೀ ಅಡಿಕೆ ವ್ಯಾಪಾರಕ್ಕಷ್ಟೇ ಅಲ್ಲದೆ ಸಾಹಿತ್ಯ–ಯಕ್ಷಗಾನ ಸಂಗೀತಗಳ ಕೇಂದ್ರವೂ ಹೌದು. ಶಿರಸಿಯ ಪಕ್ಕದ ಶೀಗೇಹಳ್ಳಿಯವರಾದ ವಿಘ್ನೇಶ್ವರ ತಿಮ್ಮಪ್ಪ ಹೆಗಡೆಯವರ ತಂದೆಯವರು ಶ್ರೀಮಂತ ವ್ಯಾಪಾರಸ್ಥರು. ಜತೆಗೆ ನಾಟಕಗಳನ್ನು ಆಡಿಸುವ ಗೀಳು. ಶಿರಸಿಗೆ ಬರುವ ಕಲಾಮೇಳಗಳಿಗೆ ಆಶ್ರಯದಾತರು. ಬಾಲಕನಾಗಿದ್ದಾಗಲೇ ಇಂಥ ನಾಟಕ ತಂಡಗಳ ನಟರ ಸಾನ್ನಿಧ್ಯ ವಿ.ತಿ. ಹೆಗಡೆಯವರನ್ನು ರಂಗಭೂಮಿಯತ್ತ ಸೆಳೆಯಿತು. ಕೊಟ್ಟೂರು ಬಸಪ್ಪನವರ ಕಂಪನಿ, ಮಹಮ್ಮದ್ ಪೀರರ ಕಂಪನಿ, ಗರೂಡ ಸದಾಶಿವರಾಯರ ಕಂಪನಿ ಮುಂತಾದ ಖ್ಯಾತ ಕಂಪನಿಗಳು ಶಿರಸಿಗೆ ಬಂದಾಗ ಅವರೊಡನೆ ಒಡನಾಟ, ಮಾತುಕತೆ, ಪರಿಸರದ ಪ್ರೇರಣೆಯಿಂದಾಗಿ ಆಗಲೇ ತರುಣರ ಕೂಟ 'ಸಿದ್ಧಿ ವಿನಾಯಕ ಮಿತ್ರಮಂಡಳಿ'ಯನ್ನು ಕಟ್ಟಿದರು. ಮಾಜಿ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ಇವರ ಸಹಪಾಠಿ–ಸಹವರ್ತಿ, ಅಲ್ಲದೆ ಪಾತ್ರವನ್ನು ಹಾಕಿ ಅಭಿನಯಿಸಿದ್ದರು. ಕನ್ನಡದ ಮಹತ್ವದ ನಾಟಕಕಾರ ಗಿರೀಶ ಕಾರ್ನಾಡರು ರಂಗಪ್ರವೇಶ ಮಾಡಿದ್ದು ವಿ.ತಿ. ಹೆಗಡೆಯವರ ನಿರ್ದೇಶನದ ನಾಟಕದಲ್ಲೇ

ಯಕ್ಷಗಾನದಲ್ಲಿ ವಿ.ತಿ.ಯವರು ಅರ್ಥಧಾರಿ, ವೇಷಧಾರಿ, ಭಾಗವತ ಈ ಮೂರು ನೆಲೆಗಳಲ್ಲೂ ಪರಿಣತರು. ಕರ್ಣ, ಭೀಮ, ದುರ್ಯೋಧನ, ಶೂರ್ಪನಖಿ, ಸತ್ಯಭಾಮ, ಕೃಷ್ಣ ಅನೇಕ ಪಾತ್ರಗಳಿಂದಾಗಿ ಜನಪ್ರಿಯತೆ ಗಳಿಸಿದರು. ತಾಳಮದ್ದಲೆಯಲ್ಲೂ ಪ್ರಸಿದ್ಧರು.

ಹೊಸ ತಲೆಮಾರಿನ ನಾಟಕಗಳಲ್ಲಿ ವಿ.ತಿ.ಯವರು ಗಮನಾರ್ಹ ಕೆಲಸ ಮಾಡಿದ್ದಾರೆ. 1960ರಲ್ಲಿ ಉ.ಕ. ಜಿಲ್ಲಾ ಸಾಂಸ್ಕೃತಿಕ ಸಂಘ ಹಾಗೂ ಶಿರಸಿ ಕಲಾಬಳಗ ಸ್ಥಾಪಿಸಿ ಈಡಿಪಸ್, ತುಘಲಕ್, ನಾಯೀಕತೆ ಮುಂತಾದ ಸುಮಾರು ಐದುನೂರು ನಾಟಕ–ಯಕ್ಷಗಾನಗಳನ್ನೂ ಪ್ರಯೋಗಿಸಿದ್ದಾರೆ.

ಸಾಹಿತ್ಯ, ಪ್ರಕಾಶನಗಳಲ್ಲಿ ಪ್ರವೇಶಿಸಿದವರು ಜಿಲ್ಲೆಯಲ್ಲಿ ಪ್ರಥಮವಾಗಿ ಯಕ್ಷಗಾನ ಪತ್ರಿಕೆ ತಂದರು. ನಾಲ್ಕು ಕವನ ಸಂಗ್ರಹ ಎರಡು ಕಥಾಸಂಗ್ರಹ, ನಾಟಕ ಪ್ರಕಟಿಸಿದ್ದಾರೆ. ಇವರ 'ಬೇಡರ ವೇಷ' ನಾಟಕಕ್ಕೆ ಡಾ. ಶಿವರಾಮ ಕಾರಂತರ ಪ್ರಶಸ್ತಿ ಲಭಿಸಿದೆ. ಅಚ್ಚರಿಗೊಳಿಸುವ ಅಪರೂಪದ ಪ್ರತಿಭೆ ವಿಘ್ನೇಶ್ವರ ತಿಮ್ಮಪ್ಪ ಹೆಗಡೆಯವರದು.

## 1996ರ ಪ್ರಶಸ್ತಿ ವಿಜೇತರು



### ಡಾ. ವಿಜಯಾ (ಫೆಲೋಶಿಪ್)

ಪ್ರಜಾಮತ ವಾರಪತ್ರಿಕೆಯ ಮೂಲಕ ಪತ್ರಿಕಾರಂಗಕ್ಕೆ ಪ್ರವೇಶ ಮಾಡಿ ವೃತ್ತಿ ಜೀವನ ಆರಂಭಿಸಿ, ಇಂದು ನುರಿತ ಪತ್ರಿಕೋದ್ಯಮಿಯಾಗಿದ್ದಾರೆ. ವೃತ್ತಿನಿಷ್ಠುರತೆಗೆ ಹೆಸರಾಗಿ ಮೂರು ದಶಕಗಳ ಕಾಲ ಮಲ್ಲಿಗೆ, ತುಷಾರ, ರೂಪತಾರ, ಉದಯವಾಣಿ, ಅರಗಿಣಿ, ಹೀಗೆ ವಿವಿಧ ಪತ್ರಿಕೆಗಳಲ್ಲಿ ಜವಾಬ್ದಾರಿಯುತವಾಗಿ ಕರ್ತವ್ಯ ನಿರ್ವಹಿಸುವ ಡಾ. ವಿಜಯಾ ಸದ್ಯ 'ಸಂಕುಲ' ಮತ್ತು 'ನಕ್ಷತ್ರಲೋಕ' ಪತ್ರಿಕೆಗಳ ಸಂಪಾದಕಿಯಾಗಿ ಬಹಳ ಜನರ ಮೆಚ್ಚುಗೆಯನ್ನು ಪಡೆದಿದ್ದಾರೆ. ವೃತ್ತಿ ಪತ್ರಿಕೋದ್ಯಮ, ಪ್ರವೃತ್ತಿಯಾಗಿ ಸ್ವೀಕರಿಸಿದ ರಂಗಭೂಮಿಯಲ್ಲಿ ಅಪಾರ ಒಲವು. ರಂಗಚಳುವಳಿಯನ್ನು ಜೀವಂತವಾಗಿ ಉಳಿಸಿ ಬೆಳೆಸಿಕೊಂಡು ಬರುವಲ್ಲಿ ತಮ್ಮ ಕಾಳಜಿಯಿಂದ ರಂಗಭೂಮಿಯಲ್ಲಿ ದಾಖಲಾದರು.

ಕರ್ನಾಟಕದಲ್ಲಿ ಬೀದಿ ನಾಟಕ ಚಳುವಳಿಗೆ ಚಾಲನೆ ಕೊಟ್ಟವರಲ್ಲಿ ಪ್ರಮುಖರು. ಸಂಘಟನೆಯಲ್ಲಿ ಕ್ರಿಯಾಶೀಲರಾಗಿದ್ದುಕೊಂಡು ಬೀದಿ ನಾಟಕ ಬರೆದು, ಆಡಿಸಿದ್ದಾರೆ. ಸಮಕಾಲೀನ ಜ್ವಲಂತ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಸಾಧ್ಯತೆಯನ್ನು ಚೆನ್ನಾಗಿ ದುಡಿಸಿಕೊಂಡು 'ಬಂದರೊ ಬಂದರು', 'ಧನ್ವಂತರ ಚಿಕಿತ್ಸೆ', 'ಮುಖವಿಲ್ಲದವರು', 'ಎಲ್ಲಿದ್ದೇವೆ ನಾವು ಎಲ್ಲದ್ದೇವೆ', – ಮುಂತಾದ ಪರಿಣಾಮಕಾರಿ ಬೀದಿನಾಟಕಗಳನ್ನು ರಚಿಸಿದ್ದಾರೆ. ಇವರ 'ಬಂದರೊ ಬಂದರು' ಬೀದಿನಾಟಕ ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯು ಪ್ರಶಸ್ತಿ ನೀಡಿದೆ. ಸೃಜನಶೀಲ ಸಾಹಿತ್ಯ, ವಿಮರ್ಶನ ಸಾಹಿತ್ಯಗಳೆರಡರಲ್ಲೂ ಗಣನೀಯ ಸಾಧನೆ ಮಾಡಿದ್ದಾರೆ. 'ಇಂದಿನ ರಂಗ ಕಲಾವಿದರು', 'ರಂಗ ಚಿಂತನೆ'. ಇವರು ಸಂಪಾದಿಸಿರುವ ರಂಗ ಕೃತಿಗಳಲ್ಲಿ ಮಹತ್ವವಾದವು. ಕರ್ನಾಟಕ ಚಲನಚಿತ್ರ ಪತ್ರಕರ್ತರ ಪರಿಷತ್ತಿಗೆ ಕಾರ್ಯದರ್ಶಿಯಾಗಿ ಅನಂತರ ಅಧ್ಯಕ್ಷರಾಗಿ, ರಾಜ್ಯ ಚಲನಚಿತ್ರ ಪ್ರಶಸ್ತಿ ಸಮಿತಿ ಹಾಗೂ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ ಸಮಿತಿಯಲ್ಲಿ ತೀರ್ಪುಗಾರರಾಗಿ, ಕೇಂದ್ರ ಸಾಹಿತ್ಯ ಅಕಾಡೆಮಿಯ ಸಲಹಾ ಸದಸ್ಯರಾಗಿ, ಸುಚಿತ್ರಾ ಕಲಾ ಕೇಂದ್ರ ಅಧ್ಯಕ್ಷರಾಗಿ, ಗುಬ್ಬಿ ಶತಮಾನೋತ್ಸವ ಸಮಿತಿಯ ಸದಸ್ಯರಾಗಿ, ಕಲಾಮಂದಿರ ಕಲಾಶಾಲೆಯ ಉಪಾಧ್ಯಕ್ಷರಾಗಿ, ಅಭಿನಯ ತರಂಗ ನಾಟಕ ಶಾಲೆಯ ಸಲಹೆಗಾರರಾಗಿ, ಸಾಹಿತ್ಯ ಲೋಕದ ವಿವಿಧ ಚಟುವಟಿಕೆಗಳಲ್ಲಿ ಇವರ ಕಾರ್ಯಬಾಹುಳ್ಯ ಬಹುರೂಪದ್ದು. ಸಮಾಜಕ್ಕೆ ಮೌಲಿಕವಾದದ್ದು. ಶ್ರೀರಂಗರ ನಾಟಕಗಳ ಕುರಿತ ಅಧ್ಯಯನಕ್ಕೆ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿ.ಎಚ್.ಡಿ. ಪದವಿ ಗಳಿಸಿದ್ದಾರೆ.

---



### ಸಿ. ಬಸವಲಿಂಗಯ್ಯ (ಫೆಲೋಶಿಪ್)

ನಾಡಿನಾದ್ಯಂತ ರಂಗಭೂಮಿ ಚಳುವಳಿ ಸದೃಢವಾಗಿ ವ್ಯಾಪಿಸುವ ನಿಟ್ಟಿನಲ್ಲಿ ಇವರ ಪಾತ್ರ ಗಣನೀಯ. ಸಂಘಟಕರಾಗಿ, ನಿರ್ದೇಶಕರಾಗಿ, ನಟರಾಗಿ, ನಾಟಕಕಾರರಾಗಿ, ರಂಗಭೂಮಿಯ ಸಮಗ್ರ ಅಭಿವೃದ್ಧಿಗೆ ವಿಶಿಷ್ಟವಾಗಿ ತೊಡಗಿಸಿಕೊಂಡಿರುವರು. ಕನ್ನಡ ರಂಗಭೂಮಿಗೆ ರಾಷ್ಟ್ರೀಯ ನಿಲುವನ್ನು ತಂದು ಕೊಟ್ಟ ಪ್ರಮುಖರಲ್ಲಿ ಒಬ್ಬರು. ಕನ್ನಡ ಸ್ನಾತಕೋತ್ತರ ಪದವೀಧರರಾದ ಇವರು ರಾಷ್ಟ್ರೀಯ ನಾಟಕ ಶಾಲೆ ದೆಹಲಿಯಲ್ಲಿ ನಿರ್ದೇಶನದಲ್ಲಿ ವಿಶೇಷ ಅಧ್ಯಯನ ಮಾಡಿ 1984ರಲ್ಲಿ ಪದವೀಧರರಾದರು. ರಾಷ್ಟ್ರೀಯ ನಾಟಕ ಶಾಲೆ ದೆಹಲಿಯ ಫೆಲೋಶಿಪ್ ಅಡಿಯಲ್ಲಿ ಉತ್ತರ ಕರ್ನಾಟಕದ ಜಾನಪದ ರಂಗಕಲೆಗಳ ಅಧ್ಯಯನ ಮಾಡಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿ ಸದಸ್ಯರಾಗಿ, ನಾಟಕ ಕರ್ನಾಟಕ ರಂಗಾಯಣದ ರೆಪರ್ಟರಿಯಲ್ಲಿ

ರಂಗ ಪ್ರಮುಖರಾಗಿ ಕಾರ್ಯನಿರ್ವಹಿಸಿದ್ದಾರೆ. ಎನ್.ಎಸ್.ಡಿ. ಪ್ರಾದೇಶಿಕ ಸಂಪನ್ಮೂಲ ಹಾಗೂ ಸಂಶೋಧನ ಕೇಂದ್ರ ಬೆಂಗಳೂರಿನಲ್ಲಿ ಸಹಾಯಕ ನಿರ್ದೇಶಕರಾಗಿದ್ದರು. 1977ರಿಂದ ರಂಗ ಚಟುವಟಿಕೆಗಳಲ್ಲಿ ಸಕ್ರಿಯರಾಗಿರುವವರು. ಸಮುದಾಯ ಸಾಂಸ್ಕೃತಿಕ ಚಳುವಳಿಯ ಎಲ್ಲಾ ರಾಜ್ಯಮಟ್ಟದ ಸಾಂಸ್ಕೃತಿಕ ಜಾಥಾಗಳ ಸಂಯೋಜಕರಲ್ಲಿ ಒಬ್ಬರಾಗಿ ಜಾಥಾದಲ್ಲಿ ಕಲಾವಿದ ನಿರ್ದೇಶಕರಾಗಿ ದುಡಿದಿದ್ದಾರೆ. ಸುಮಾರು 30ಕ್ಕೂ ಹೆಚ್ಚು ರಂಗ ತರಬೇತಿ ಶಿಬಿರಗಳನ್ನು ರಾಜ್ಯಾದ್ಯಂತ ಸಂಘಟಿಸಿ ನಿರ್ದೇಶಿಸಿದ್ದಾರೆ. ತಿರುವನಂತಪುರದಲ್ಲಿ ನಡೆದ ರಾಷ್ಟ್ರಮಟ್ಟದ ಜನ ವಿಜ್ಞಾನ ಜಾಥಾ ಸಾಂಸ್ಕೃತಿಕ ಶಿಬಿರಕ್ಕೆ ನಿರ್ದೇಶಕರಾಗಿದ್ದರಲ್ಲದೆ ದೇಶದ ಪ್ರಮುಖ ಕೇಂದ್ರಗಳಲ್ಲಿ ರಂಗ ಕಮ್ಮಟಗಳನ್ನು ಯಶಸ್ವಿಯಾಗಿ ನಡೆಸಿ ರಾಷ್ಟ್ರದ ರಂಗಾಸಕ್ತರೆಲ್ಲರ ಅಭಿಮಾನಕ್ಕೆ ಪಾತ್ರರಾಗಿದ್ದಾರೆ. ಸುಮಾರು 30ಕ್ಕೂ ಹೆಚ್ಚು ನಾಟಕಗಳನ್ನು ಕನ್ನಡ, ಹಿಂದಿ, ತೆಲುಗು, ಮಲೆಯಾಳಂ ಸೇರಿದಂತೆ ವಿನ್ಯಾಸಗೊಳಿಸಿ ಸಂಗೀತ ನೀಡಿ ನಿರ್ದೇಶಿಸಿದ್ದಾರೆ. 'ಮಾದಾರಿ ಮಾದಯ್ಯ', 'ಸಂಕ್ರಾಂತಿ', 'ಹುಲಿಯ ನೆರಳು', 'ಮ್ಯಾಕ್‌ಬೆತ್', 'ಸಂತ್ಯಾಗ ನಿಂತಾನ ಕಬೀರ', 'ಅಂಧಯುಗ', 'ಉಚಲ್ಯ', 'ಕುಸುಮ ಬಾಲೆ' ಮೊದಲಾದವು ಇವರು ನಿರ್ದೇಶಿಸಿದ ಪ್ರಮುಖ ನಾಟಕಗಳು. ಇವರ ನಾಟಕಗಳು ದೂರದರ್ಶನದಲ್ಲಿಯೂ ಪ್ರಸಾರಗೊಂಡಿವೆ. ನಾಟಕ ರಂಗಕ್ಕೆ ಇವರು ಸಲ್ಲಿಸಿದ ಸೇವೆ ಕೊಡುಗೆ ಮಹತ್ತರವಾದುದು. ಇವರ ರಂಗಪ್ರೀತಿ ಅತೀತವಾದುದು.

---



## ಡಾ. ಸಿದ್ದಲಿಂಗ ಪಟ್ಟಣಶೆಟ್ಟಿ (ಫೆಲೋಶಿಪ್)

ಉತ್ತರ ಕರ್ನಾಟಕದ ರಂಗ ಚಳುವಳಿಯಲ್ಲಿ ಕೇಳಿ ಬರುವ ಪ್ರಮುಖ ಹೆಸರು ಸಾಹಿತ್ಯ-ನಾಟಕಗಳಲ್ಲಿ ಅಪಾರ ಆಸಕ್ತಿ ಹೊಂದಿರುವ ಪ್ರೊ. ಪಟ್ಟಣಶೆಟ್ಟರು ನಾಟಕ ಕ್ಷೇತ್ರವನ್ನು ಆರಿಸಿಕೊಂಡು 'ಮೋಹನ ರಾಕೇಶ್ ಮತ್ತು ಗಿರೀಶ್ ಕಾರ್ನಾಡ್ ನಾಟಕಗಳ ತೌಲನಿಕ ಅಧ್ಯಯನ' ಮಾಡಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿ.ಎಚ್.ಡಿ. ಪದವಿ ಪಡೆದಿರುವವರು. ಎಪ್ಪತ್ತರ ದಶಕದಲ್ಲಿ ಹೊಸತನದ ಹಂಬಲಿಕೆಯಿಂದ ಧಾರವಾಡದಲ್ಲಿ 'ಅಂತರಂಗ ನಾಟಕ ಕೂಟ'ದ ಸ್ಥಾಪಕ ಸದಸ್ಯರಾಗಿ ನಂತರ ನಾಲ್ಕು ವರುಷ ಕಾರ್ಯದರ್ಶಿಯಾಗಿ ಸಂಘಕ್ಕೆ ಲವಲವಿಕೆ ಮೂಡಿಸಿದರು. ಧಾರವಾಡದ ಕರ್ನಾಟಕ ಕಾಲೇಜಿನ ನಾಟಕ ಚಟುವಟಿಕೆಗಳಿಗೆ ಸ್ಫೂರ್ತಿಯ ಕೇಂದ್ರವಾದರು. ಅನೇಕ ನಾಟಕಗಳಲ್ಲಿ ಅಭಿನಯಿಸಿದ ಹಿರಿಮೆಯೂ ಅವರದು. 1972-73ರಲ್ಲಿ ಶ್ರೀರಂಗರ ಅವಧಿಯಲ್ಲಿ ಸಂಗೀತ ನಾಟಕ ಅಕಾಡೆಮಿಯ ಸದಸ್ಯರಾಗಿ ಸಕ್ರಿಯ ಪಾತ್ರವಹಿಸಿದರು. 1981ರಲ್ಲಿ 'ರಂಗಭೂಮಿಕಾ' ಹುಟ್ಟುಹಾಕಿ ಅನೇಕ ನಾಟಕಗಳು ಆಡಿಸಿದ್ದುದಲ್ಲದೆ ಬಹಳಷ್ಟು ಹೊರ ಊರಿನ ತಂಡಗಳನ್ನು ಆಹ್ವಾನಿಸಿ ಗೌರವಿಸುವ ಸತ್ಸಂಪ್ರದಾಯ ಹಾಕಿ ಕೊಟ್ಟರು. ಕರ್ನಾಟಕ ನಾಟಕ ಅಕಾಡೆಮಿ ಸದಸ್ಯರಾಗಿ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಪ್ರೊ. ಪಟ್ಟಣಶೆಟ್ಟರು ಕನ್ನಡ, ಹಿಂದಿ, ಸಾಹಿತ್ಯವಲಯದಲ್ಲಿ ಇಂದು ವಿಶಿಷ್ಟ ಸ್ಥಾನಮಾನ ಗಳಿಸಿರುವವರು. ಕನ್ನಡ ಹಿಂದಿ ಎರಡೂ ಭಾಷೆಗಳಲ್ಲಿ ರಚಿಸಿರುವ ಗ್ರಂಥಗಳ ಸಂಖ್ಯೆ ಭಾಷಾಂತರವೂ ಸೇರಿ 50ಕ್ಕೆ ಹತ್ತಿರವಾಗುತ್ತದೆ. ನಾಟಕ, ಕಾದಂಬರಿ, ಕವನ, ಸಂಗ್ರಹ, ವಿಮರ್ಶಾ ಗ್ರಂಥ, ಕಥಾ ಸಂಕಲನ, ಹಿಂದಿಯಲ್ಲಿಯೂ ಕೃತಿಗಳು – ಹೀಗೆ ಅವರ ಸಾಹಿತ್ಯ ಕೃಷಿ ಹಲವು ಬಗೆ. ವಿಶೇಷವಾಗಿ ನಾಟಕ ಸಾಹಿತ್ಯವನ್ನು ಶ್ರೀಮಂತಗೊಳಿಸಿರುವವರು. ತಮ್ಮ ಸಾಹಿತ್ಯ ಬರಹಗಳಿಗೆ ಅನುವಾದಕ್ಕಾಗಿ ಅನೇಕ ಪುರಸ್ಕಾರಗಳನ್ನು ಪಡೆದಿದ್ದಾರೆ. 1980ರಲ್ಲಿ 'ಅಲೆಗಳಲ್ಲಿ ರಾಜ ಹಂಸಗಳು' ಕರ್ನಾಟಕ ಶಿಕ್ಷಣ ಇಲಾಖೆಯಿಂದ ಶ್ರೇಷ್ಠ ಅನುವಾದಕ್ಕೆ ಪ್ರಶಸ್ತಿ ಮತ್ತು 1983ರಲ್ಲಿ 'ಅಂಜಿ' ಮತ್ತು 1989ರಲ್ಲಿ 'ಮೂರು ನಾಟಕಗಳು' ಸಾಹಿತ್ಯ ಅಕಾಡೆಮಿಯಿಂದ ಸೃಜನಾತ್ಮಕ ಅನುವಾದಕ್ಕೆ ಪ್ರಶಸ್ತಿ ಅವುಗಳಲ್ಲಿ ಪ್ರಮುಖವಾದವು. ತಮ್ಮ 'ಚಹಾದ ಜೋಡಿ ಚೂಡಾದ್ಹಾಂಗ' ಪ್ರಜಾವಾಣಿಯಲ್ಲಿ ವಾರದ ಅಂಕಣದ ಮೂಲಕ ನಾಡಿನಾದ್ಯಂತ ಚಿರಪರಿಚಿತರಾಗಿದ್ದಾರೆ.

---



## ಪದ್ಮಶ್ರೀ ಚಿಂದೋಡಿ ಲೀಲಾ

ವೃತ್ತಿರಂಗ ಕಂಪನಿಯನ್ನು ನಾಡಿನುದ್ದಗಲಕ್ಕೂ ಸಂಚರಿಸಿ ಲಕ್ಷಾಂತರ ಜನರನ್ನು ರಂಜಿಸುತ್ತ, ಜನಪ್ರಿಯ ನಾಟಕಗಳನ್ನು ನೀಡಿರುವ ಪದ್ಮಶ್ರೀ ಚಿಂದೋಡಿ ಲೀಲಾ ಅವರು ರಾಜಧಾನಿಯಲ್ಲಿ ಒಂದೇ ನಾಟಕವನ್ನು ಸತತವಾಗಿ 900 ಪ್ರದರ್ಶನಗಳನ್ನಿತ್ತು 1000 ಪ್ರದರ್ಶನದ ದಾಖಲೆಯತ್ತ ದಾಪುಗಾಲು ಹಾಕುತ್ತಾ ಇತ್ತೀಚಿನ ದಿನಗಳಲ್ಲಿ ವೃತ್ತಿರಂಗಭೂಮಿಯಲ್ಲಿ ಅಚ್ಚರಿ ಮೂಡಿಸಿದ್ದಾರೆ.

1930ರಲ್ಲಿ ಆರಂಭವಾಗಿ, 66 ವರ್ಷಕ್ಕೂ ಹೆಚ್ಚು ಕಾಲದಿಂದ ಯಶಸ್ವಿಯಾಗಿ ನಡೆದುಬಂದ ಕರಿಬಸವರಾಜ ನಾಟಕ ಕಂಪನಿ (ಕೆ.ಬಿ.ಆರ್.)ಯ ಸ್ಥಾಪಕರು ದಿ॥ ಚಿಂದೋಡಿ ವೀರಪ್ಪನವರು. ಮುಮ್ಮಡಿ ಕೃಷ್ಣರಾಜ ಒಡೆಯರು ವೀರಪ್ಪನವರ ಅಭಿನಯ ಮೆಚ್ಚಿ ಗೌರವಿಸಿ. 'ಚಿನ್ನದ ತೋಡ' ತೊಡಿಸಿದಾಗಲಿಂದಲೇ 'ಚಿಂದೋಡಿ' ಎನ್ನುವ ಅನ್ವರ್ಥಕ ನಾಮ ಬಂದಿದೆ. ಅವರ ಪುತ್ರಿ ಲೀಲಾ ಅವರು ಚಲನಚಿತ್ರರಂಗದಲ್ಲಿ ದೊರಕಿದ್ದ ಅವಕಾಶಗಳನ್ನೂ ತೊರೆದು ರಂಗಭೂಮಿಗೇ ತನ್ನನ್ನು ಒಪ್ಪಿಸಿಕೊಂಡರು. ಇಂದು ಅಸಾಧಾರಣ ಪ್ರತಿಭೆ – ಸಾಮರ್ಥ್ಯಗಳಿಗೆ ಬಹು ದೊಡ್ಡ ಹೆಸರಾಗಿದ್ದಾರೆ. ನಾಡಿನ ಅಭಿಮಾನದ ಮಾತಾಗಿದ್ದಾರೆ.

ಕರ್ನಾಟಕ – ಮಹಾರಾಷ್ಟ್ರ ಗಡಿ ಪ್ರದೇಶದ ಬೆಳಗಾವಿಯಲ್ಲಿ ತನ್ನ ಕಂಪನಿಯನ್ನು ಉಳಿಸಲು ದಿಟ್ಟವಾಗಿ ಹೋರಾಡಿ. ನಿವೇಶನ ದೊರಕಿಸಿಕೊಂಡು ರಂಗಮಂದಿರ ಕಟ್ಟಿಸಿ ಕನ್ನಡದ ನಾಟಕಗಳು ಮರಾಠಿ ಅಬ್ಬರದ ಜೊತೆಗೂ ಅಂಜದೆ ಉಳಿದು ಬರುವಂತೆಮಾಡಿದ ದಿಟ್ಟೆ. ಇವರ ಕಂಪನಿಯಲ್ಲಿ ಸಾಮಾಜಿಕ, ಪೌರಾಣಿಕ, ಹೀಗೆ ಎಲ್ಲ ಪ್ರಕಾರದ ನಾಟಕಗಳೂ ಆಗುತ್ತವೆ. ರಂಗದ ಮೇಲೆ ಲೀಲಾ ಅವರದು ಅದ್ವಿತೀಯ ಪ್ರತಿಭೆ. 'ಹಳ್ಳಿ ಹುಡುಗಿ', 'ದೇಸಾಯರ ದರ್ಬಾರ', 'ಪೋಲೀಸನ ಮಗಳು', ಮುಂತಾದ ನಾಟಕದಲ್ಲಿ ಇವರ ಪಾತ್ರಗಳು ತನ್ನ ಭಾವ ವೈವಿಧ್ಯಕ್ಕೆ ಹೆಸರಾದವು. ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ಸರ್ಕಾರ ಗೌರವಿಸಿ ಪ್ರಶಸ್ತಿ ನೀಡಿವೆ. ಇವಕ್ಕೆಲ್ಲ ಮಕುಟ ಪ್ರಾಯವಾಗಿ ಭಾರತ ಸರ್ಕಾರದ 'ಪದ್ಮಶ್ರೀ' ಪ್ರಶಸ್ತಿ ಸಂದಿದೆ. ಇವೆಲ್ಲಾ ವೃತ್ತಿರಂಗಭೂಮಿಗೆ ಸಂದ ಶ್ರೇಯಸ್ಸೆನ್ನಬಹುದು. ನಾಟಕ ಅಕಾಡೆಮಿಯ ಅಧ್ಯಕ್ಷರಾಗಿ ರಂಗಭೂಮಿಯ ಸರ್ವಾಂಗೀಣ ಅಭಿವೃದ್ಧಿಗಾಗಿ ಮೌಲಿಕ ಸೇವೆ ಸಲ್ಲಿಸಿದ್ದಾರೆ. ಒಬ್ಬ ಮಹಿಳೆ ಕಂಪನಿ ಕಟ್ಟಿಕೊಂಡು ನೂರಾರು ಕಲಾವಿದರ ಜವಾಬ್ದಾರಿ ನಿರ್ವಹಿಸುತ್ತಾ ರಂಗಭೂಮಿ ಸೇವೆಯಲ್ಲಿ ಸಾಗಿ ಬಂದಿರುವುದು ವೃತ್ತಿರಂಗಭೂಮಿಯ ಇತಿಹಾಸದಲ್ಲಿಯೇ ಅಪೂರ್ವವಾದುದು. ಅವಿಸ್ಮರಣೀಯವಾದುದಾಗಿದೆ.

---



## ಬಿ. ಜಯಶ್ರೀ

ವೃತ್ತಿ ರಂಗಭೂಮಿಯ ಬೆರಗಿನಿಂದ ಕಂಡ ಮಹಾಕಲಾವಿದರಾದ ಡಾ॥ ಗುಬ್ಬಿ ವೀರಣ್ಣನವರ ಮೊಮ್ಮಗಳು. ಶ್ರೇಷ್ಠ ನಟನಟಿಯರಾದ ಬಸವರಾಜ ಮತ್ತು ಜಿ.ವಿ. ಮಾಲತಮ್ಮನವರ ಮಗಳಾಗಿ ಇವರಿಗೆ ಅಭಿನಯ ಕಲೆ ಅಭಿಜಾತ. ತನ್ನ ಐದನೆಯ ವರ್ಷದಿಂದಲೇ ಗುಬ್ಬಿ ಕಂಪನಿಯಲ್ಲಿ ಪ್ರಹ್ಲಾದ. ಕುಶ ಮೊದಲಾದ ಬಾಲಪಾತ್ರಗಳಲ್ಲಿ ಅಭಿನಯಿಸುತ್ತಿದ್ದು. ಸಂಗೀತವನ್ನು ಅಭ್ಯಾಸಮಾಡಿ ನಂತರ 1970–73ರಲ್ಲಿ ದೆಹಲಿಯಲ್ಲಿನ ರಾಷ್ಟ್ರೀಯ ನಾಟಕ ಶಾಲೆಯಲ್ಲಿ ನಾಟಕ ಪದವೀಧರಳಾಗಿ ಉತ್ತೀರ್ಣರಾದರು. ಖ್ಯಾತ ನಿರ್ದೇಶಕರಾದ ಅಲ್ಕಾಜಿ, ಬಿ.ವಿ. ಕಾರಂತ, ಪ್ರಸನ್ನ, ನಾಗಾಭರಣ, ಜಿ.ವಿ. ಶಿವಾನಂದ. ಎನ್.ಎಸ್. ವೆಂಕಟರಾಂ, ಶಂಕರನಾಗ್ ಮತ್ತು ಶ್ರೀನಿವಾಸಪ್ರಭು ಮೊದಲಾದವರ ನಿರ್ದೇಶನದಲ್ಲಿ – ಕಲಾಕುಂಜ. ಬೆನಕ, ರಂಗಸಂಪದ, ನಟರಂಗ, ಸ್ಪಂದನ ಮೊದಲಾದ ಹವ್ಯಾಸಿತಂಡಗಳಲ್ಲಿ ಅಭಿನಯಿಸಿದ್ದಾರೆ. ಜೋಕುಮಾರಸ್ವಾಮಿಯ 'ಶಾರಿ', ಬ್ಯಾರಿಸ್ಟರ್‌ನ 'ಜಕ್ಕಮ್ಮ' ಬಸವ ಕಲ್ಯಾಣದ 'ಅಕ್ಕಮಹಾದೇವಿ' ಮತ್ತು 'ತಾಯಿ'

ಹಾಗೂ 'ನಾಗಮಂಡಲ' ದಲ್ಲಿ ಇವರ ಪಾತ್ರ ನಿರ್ವಹಣೆ ಅನನ್ಯವಾದದ್ದು. ಪ್ರತಿಭೆಯನ್ನು ಮಿಂಚಿಸಿದ ಶ್ರೇಷ್ಠ ಅಭಿನೇತ್ರಿ, ಸುಮಾರು ಎರಡು ದಶಕಗಳಿಂದ ಸ್ಪಂದನ ತಂಡಕ್ಕಾಗಿ ಜಯಶ್ರೀ ಅವರು ನಿರ್ದೇಶಿಸಿದ 'ಘಾಸಿರಾಮ ಕೊತ್ವಾಲ್' 'ಜಸ್ಮ ಓಡನ್' 'ಕರಿಮಾಯಿ' 'ನೀಲಿಕುದುರೆ' 'ಲಕ್ಷಾಪತಿ ರಾಜನ ಕಥೆ' 'ಅಗ್ನಿಪಥ' ಇವುಗಳು ಅತ್ಯಂತ ಜನಪ್ರಿಯ ನಾಟಕಗಳು. ಕೈರೊ ಮತ್ತು ತಾಷ್ಕೆಂಟಿನಲ್ಲಿ ನಡೆದ ಪ್ರತಿಷ್ಠಿತ ಅಂತರ ರಾಷ್ಟ್ರೀಯ ನಾಟಕೋತ್ಸವದಲ್ಲಿ 'ಲಕ್ಷಾಪತಿ ರಾಜನ ಕಥೆ' ನಾಟಕವನ್ನು ಭಾರತದ ಪರವಾಗಿ ಪ್ರದರ್ಶಿಸಿ ಯಶಸ್ಸು ಸಾಧಿಸಿದ್ದಾರೆ.

ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ರಾಷ್ಟ್ರೀಯ ನಾಟಕ ಶಾಲೆಯ ಪ್ರಾದೇಶಿಕ ಕೇಂದ್ರದ ನಿರ್ದೇಶಕಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ಉತ್ತರ ಪ್ರದೇಶ ಸರ್ಕಾರದ ಸಂಗೀತ ನಾಟಕ ಅಕಾಡೆಮಿಯು 'ಸಫ್ದರ್ ಹಶ್ಮಿ' ಪ್ರಶಸ್ತಿಯನ್ನು 1991ರಲ್ಲಿ ಕೊಟ್ಟು ಗೌರವಿಸಿದೆ. ಯುರೋಪಿನ ಸ್ವೀಡನ್‌ನಲ್ಲಿ ನಡೆದ ಭಾರತ ಉತ್ಸವದಲ್ಲಿ ಸಹಾಯಕ ನೃತ್ಯ ಸಂಯೋಜಕಿಯಾಗಿ ಸಂಪರ್ಕಾಧಿಕಾರಿಯಾಗಿ ಕಾರ್ಯ ನಿರ್ವಹಿಸಿರುವ ಈಕೆಯನ್ನು ಮಾಸ್ಕೋದಲ್ಲಿ ಗಿರೀಶ ಕಾರ್ನಾಡರ 'ನಾಗಮಂಡಲ' ನಾಟಕವನ್ನು ಭಾರತ–ರಷ್ಯ ಸಹಯೋಗದಲ್ಲಿ ನಿರ್ದೇಶಿಸಲು ಆಹ್ವಾನಿಸಲ್ಪಟ್ಟಿದ್ದಾರೆ. ಕನ್ನಡ ರಂಗ ಭೂಮಿಯ ಸೌರಭವನ್ನು ರಾಷ್ಟ್ರೀಯ – ಅಂತರಾಷ್ಟ್ರೀಯ ಮಟ್ಟದಲ್ಲಿ ಹರವುತ್ತಿರುವ ಬೆರಗುಗೊಳಿಸುವ ಪ್ರತಿಭೆ ಬಿ. ಜಯಶ್ರೀ ಅವರು.

---

## ಸೈಯದ ಸಾಬ್ ಕೊಲ್ಲಾಪುರೆ

ನಾಡಿನ ಗಡಿ ಪ್ರದೇಶದ ಕೊಲ್ಲಾಪುರ ಜಿಲ್ಲೆಯ ಹಾತಕಣಂಗಲೆ ತಾಲ್ಲೂಕಿನ ಕೆಂದಾಳ ಗ್ರಾಮದಲ್ಲಿನ ಕೃಷಿಕ ಕುಟುಂಬದಲ್ಲಿ ಜನಿಸಿದ ಶ್ರೀಯುತರಿಗೆ ಬಾಲ್ಯದ ದಿನಗಳಿಂದ ರಂಗ ಸಂಗೀತದಲ್ಲಿ ಒಲವು. ಎಳತನದಲ್ಲಿಯೇ ಮರಾಠಿ ರಂಗಭೂಮಿಯ ಸಂಗೀತಕ್ಕೆ ಮನಸೋತು ಕೆಂದಾಳದಲ್ಲಿ ವಾಸಿಸುತ್ತಿದ್ದ ಖ್ಯಾತ ಗಾಯಕರಾದ ಶ್ರೀ ಅಬ್ದುಲ್ ರಜಾಕ್ ಸಾಹೇಬರಲ್ಲಿ ಶಾಸ್ತ್ರೀಯ ಸಂಗೀತ ಶಿಕ್ಷಣ ಪಡೆದರು. ಹಾರ್ಮೋನಿಯಂ ವಾದನವನ್ನು ಆರು ವರ್ಷಗಳ ಕಾಲ ಸತತವಾಗಿ ಅಭ್ಯಸಿಸಿದರಲ್ಲದೆ ಗುರುಗಳ ಕೂಡ ಸಂಗೀತ ಕಾರ್ಯಕ್ರಮದಲ್ಲಿ ಸಾಥಿಯಾಗಿ ಭಾಗವಹಿಸುತ್ತಿದ್ದರು.

1957ರಲ್ಲಿ ಹಿರಿಯ ಕಲಾವಿದ ಶ್ರೀ ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯಸಂಘವು ಇಚಲಕರಂಜಿಯಲ್ಲಿ ಬೀಡುಬಿಟ್ಟಾಗ ಜಗಜ್ಯೋತಿ ಬಸವೇಶ್ವರ ನಾಟಕದಲ್ಲಿ ಜಂಬಲದಿನ್ನಿ ಸಿದ್ಧರಾಮಣ್ಣನವರ ನೂತನ ಶೈಲಿಯಲ್ಲಿ ಜೋಡಣೆಗೊಂಡ ಚಾಲುಗಳು ಮರಾಠಿ ರಂಗ ಗೀತೆಗಳಿಗಿಂತಲೂ ಮಧುರವಾಗಿರುವುದನ್ನು ಕೇಳಿ ಅದರಲ್ಲಿಯೇ ತಲ್ಲೀನರಾಗಿ ಆಕರ್ಷಿತರಾದರು. ರಂಗ ಗೀತೆಗಳ ವಿಸ್ತಾರವನ್ನು ಬೆಳೆಯಿಸಿ ಕೊಳ್ಳಬೇಕೆಂಬ ಹಂಬಲದಿಂದ ಶ್ರೀ ಬಾಳಪ್ಪನವರಲ್ಲಿ ಬಂದು ಪ್ರಾರ್ಥಿಸಿಕೊಂಡರು. ಕಂಪನಿಗೆ ಸೇರಿ ನೆಲೆನಿಂತರು. ರಂಗ ಸಂಗೀತದ ಅಭ್ಯಾಸದೊಡನೆ 'ಪತಿ ಭಕ್ತಿ', 'ಕುಂಕುಮ', ನಾಟಕದಲ್ಲಿ ಸಹಾಯಕ ಪಾತ್ರಗಳನ್ನು ಮಾಡುತ್ತಾ ಅಭಿನಯದಲ್ಲೂ ಗಮನ ಸೆಳೆದರು. ತಮ್ಮ ಸುಶ್ರಾವ್ಯ ಹಾಡುಗಾರಿಕೆ ಹಾಗೂ ಪಿಯಾನೊ ವಾದನ ನೈಪುಣ್ಯತೆಯಿಂದ ಸಂಗೀತ ನಿರ್ದೇಶಕರಾಗಿ, ಹಲವು ವಾದ್ಯಗಳ ವಾದಕರಾಗಿ ಸೇವೆಸಲ್ಲಿಸಿದರು. ಅಪಾರ ಪ್ರೇಕ್ಷಕರವರ್ಗಕ್ಕೆ ಮನಮುಟ್ಟುವಲ್ಲಿ ಯಶಸ್ವಿಯಾದರು. ಇವರಿಗೆ ಸಂದ ಮೆಚ್ಚುಗೆ, ಪ್ರಶಸ್ತಿಗಳು ಕೂಡ ಅಪಾರ.

ಸದ್ಯ ಹುಬ್ಬಳಿಯಲ್ಲಿ ನೆಲೆಸಿ ತನ್ನಸುತ್ತಲ ಗ್ರಾಮೀಣ ಕಲಾವಿದರಿಗೆ ರಂಗ ಸಂಗೀತ ಶಿಕ್ಷಣಕೊಟ್ಟು ತಯಾರುಮಾಡುತ್ತಿರುವರು. ಇತ್ತೀಚೆಗೆ ಎಲೆಕ್ಟ್ರಿಕ್ ಆರ್ಗನ್ ನುಡಿಸುವುದರಲ್ಲಿಯೂ ಸಿದ್ಧಹಸ್ತರಾಗಿ ಹವ್ಯಾಸಿ ತಂಡಗಳಲ್ಲಿ ಸಂಗೀತ ನಿರ್ದೇಶಿಸುತ್ತಾ, ಖ್ಯಾತ ವಾದಕರಾಗಿ ನೇಪಥ್ಯ ಗಾಯಕರಾಗಿ ಚಿರಪರಿಚಿತರಾಗಿದ್ದಾರೆ. ಇಂದಿಗೂ ಕಿರಿಯ ತಲೆಮಾರಿಗೆ ಸಹೃದಯ ಮಾರ್ಗದರ್ಶನ ನೀಡುವರಲ್ಲಿ ಹೆಸರಾಗಿದ್ದಾರೆ.

---



## ಮದಿರೆ ಮರಿಸ್ವಾಮಿ

ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಆದವಾನಿ ತಾಲೂಕಿನ ಮದಿರೆ ಗ್ರಾಮ ಇವರ ಹುಟ್ಟೂರು. ತಂದೆ ಶ್ರೀ ವೀರಯ್ಯನವರು ಖ್ಯಾತ ದಕ್ಷಿಣಾದಿ ಪಿಟೀಲುವಾದಕರು. ತಂದೆಯವರ ಪ್ರೋತ್ಸಾಹದಿಂದ ಮರಿಸ್ವಾಮಿಯವರಿಗೆ ಎಳೆಯತನದಿಂದಲೇ ಸಂಗೀತದೊಡನೆ ಬಿಡದ ನಂಟು. ವಾದ್ಯಸಂಗೀತಗಳನ್ನೂ ಆಕ್ಕರೆಯಿಂದ ಕಲಿಯಲು ಬಹುಮಟ್ಟಿಗೆ ಕಾರಣವಾಯಿತು.

ಹನ್ನೊಂದನೆಯ ವಯಸ್ಸಿನಲ್ಲಿಯೇ ಗದುಗಿನ ವೀರೇಶ್ವರ ಪುಣ್ಯಾಶ್ರಮದಲ್ಲಿ ಡಾ॥ ಪಂಡಿತ ಪುಟ್ಟರಾಜು ಗವಾಯಿಗಳವರಲ್ಲಿ ಶಿಷ್ಯವೃತ್ತಿ ಸ್ವೀಕಾರ. ಸುಮಾರು ಎಂಟು ವರ್ಷಗಳ ಕಾಲ ಸಂಗೀತ ಅಭ್ಯಾಸ ಮಾಡಿದರು. ಹಾರ್ಮೋನಿಯಂ ವಾದನದಲ್ಲಿ ಪರಿಣಿತರಾದರು. ನಂತರ ಗುರು ಪಂಚಾಕ್ಷರಿ ಗವಾಯಿಗಳ ನಾಟಕ ಕಂಪನಿಗಳಲ್ಲಿ ಎರಡು ವರ್ಷಗಲ ಕಾಲ ಸೀ ಪಾತ್ರಗಳಲ್ಲಿ ಸಮರ್ಥರಾಗಿ ಅಭಿನಯಿಸಿದರಲ್ಲದೆ ನಾಟಕಗಳಿಗೆ ಸಂಗೀತ ನಿರ್ದೇಶಕರಾಗಿ ಮೆಚ್ಚುಗೆ ಪಡೆದರು. ಮುಂದೆ ನರೇಗಲ್ ಕಂಪನಿ, ಶ್ರೀಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ ಸುಳ್ಳ ಮುಂತಾದ ಕಂಪನಿಗಳಲ್ಲಿ ಸಂಗೀತ ನಿರ್ದೇಶಕರಾಗಿ, ಕಥಾ ನಿರ್ದೇಶಕರಾಗಿ ಹಾರ್ಮೋನಿಯಂ ವಾದಕರಾಗಿ ಬಹು ಕಾಲ ಕೆಲಸ ಮಾಡಿದರು. 1976ರಲ್ಲಿ ಶ್ರೀ ಚೆನ್ನೆಗೌಡ ಸೀದರಗಡ್ಡೆಯವರ ಸಹಕಾರದಲ್ಲಿ ಶ್ರೀ ಮಧುಕೇಶ್ವರ ನಾಟ್ಯ ಸಂಘ ಕಂಪನಿಯನ್ನು ಸ್ಥಾಪಿಸಿದರು. ಉತ್ತರ ಕರ್ನಾಟಕ ಮತ್ತು ಹೈದರಾಬಾದ ಕರ್ನಾಟಕ ಹಾಗೂ ಆಂಧ್ರಪ್ರದೇಶದ ಗಡಿನಾಡು ಪ್ರದೇಶಗಳಲ್ಲಿ ಹಲವಾರು ಕಡೆ ಪೌರಾಣಿಕ, ಐತಿಹಾಸಿ, ಜಾನಪದ ಮತ್ತು ಸಾಮಾಜಿಕ ನಾಟಕಗಳನ್ನೂ ಕಲಿಸುತ್ತಾ ಸಂಗೀತ ನಿರ್ದೇಶನದೊಂದಿಗೆ ಅಲ್ಲಲ್ಲಿನ ಪ್ರೇಕ್ಷಕ ಸಮುದಾಯದ ಪ್ರೀತಿ ಅಭಿಮಾನಕ್ಕೆ ಪಾತ್ರರಾದರು. ಹಲವಾರು ಪ್ರಶಸ್ತಿ ಗೌರವಗಳು ಇವರನ್ನು ಅರಸಿಕೊಂಡು ಬಂದಿವೆ. ಸಂಗೀತ 'ನಿಧಿ' 'ಸಂಗೀತ ಸಾಮ್ರಾಟ' ಎಂಬ ಬಿರುದುಗಳಿಸಿದ್ದಾರೆ. ಹವ್ಯಾಸಿ ಕಲಾವಿದರಿಗೆ ಅಭಿನಯ, ಸಂಗೀತ ಶಿಕ್ಷಣ ನೀಡಿ ನಾಟಕ ಕಲಿಸುವಲ್ಲಿ ತೊಡಗಿಸಿಕೊಂಡಿರುವ ಶ್ರೀಯುತರು ರಂಗಭೂಮಿಯಲ್ಲಿ ಹೊಸ ಪೀಳಿಗೆ ನೆಲೆಯೂರುವುದನ್ನು ಹಂಬಲಿಸುವ ರಂಗಜೀವಿ.



## ರತ್ನಮ್ಮ ಬ್ರಹ್ಮಾವರ

ಸದ್ದುಗದ್ದಲವಿಲ್ಲದೆ ರಂಗಭೂಮಿಯ ಹಾದಿಯಲ್ಲಿ ನಡೆದುಬಂದ, ದುಡಿದ ರತ್ನಮ್ಮ ಬ್ರಹ್ಮಾವರ ರಂಗಭೂಮಿಯನ್ನು ಚೇತನಗೊಳಿಸಿದವರು. ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ ಹೇರೂರ ಎಂಬ ಚಿಕ್ಕ ಹಳ್ಳಿಯ ಬಡ ಕುಟುಂಬದಲ್ಲಿ ಜನಿಸಿದರು. ಹತ್ತನೆಯ ವಯಸ್ಸಿನಲ್ಲಿಯೇ ಅವರಲ್ಲಿ ಹುದುಗಿದ್ದ ರಂಗ ಪ್ರತಿಭೆಯನ್ನು ಗುರುತಿಸಿ ಮಾರ್ಗದರ್ಶಿಸಿದವರು ಗೌರಿ ಪ್ರಾಸದಿತ ನಾಟ್ಯ ಸಂಘ ದೊಡ್ಡಗುಬ್ಬಿ ಕಂಪನಿಯ ಮಾಲೀಕರು ಗುರುಗಳಾದ ಶ್ರೀ ಮುದವೀಡಾಚಾರ್ಯರವರು.

'ಶ್ರೀ ಕೃಷ್ಣಲೀಲ' ನಾಟಕದಲ್ಲಿ ನಾರದನ ಪಾತ್ರ ಕನ್ನಡದ ಷೇಕ್ಸ್‌ಪಿಯರ್ ಎಂಬ ಗೌರವಕ್ಕೆ ಪಾತ್ರರಾದ ಕಂದಗಲ್ಲ ಹನುಮಂತರಾಯರ ನಾಟಕಗಳಾದ 'ಚಿತ್ರಾಂಗದ' 'ಅಕ್ಷಯಾಂಬರ' 'ಬಡತನ ಭೂತ' 'ಮಾತಂಗ ಕನ್ಯ' ಮುಂತಾದ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ವಹಿಸಿದ್ದರು. ನಂತರ ಶಾರದ ಸಂಗೀತ ನಾಟ್ಯ ಮಂಡಲಿ ಗೋಕಾಕ ಕಂಪನಿಯಲ್ಲಿ ಶ್ರೀ ಬಸವಣ್ಣೆಪ್ಪ ಹೊಸ ಮನೆಯವರ ನಿರ್ದೇಶನದಲ್ಲಿ 'ರಕ್ತರಾತ್ರಿ', 'ಕುರುಕ್ಷೇತ್ರ', 'ಬೆಳ್ಳಿಚುಕ್ಕಿ', 'ಪಠಾಣಿ ಪಾಷಾ', 'ದತ್ತು ಪುತ್ರ' ಮುಂತಾದ ನಾಟಕಗಳಲ್ಲಿ ಅಭಿನಯಿಸಿ ಜನಪ್ರಿಯರಾಗಿದ್ದರು. ಮುಂದೆ ಪದ್ಮಭೂಷಣ ಶ್ರೀ ಏಣಗಿ ಬಾಳಪ್ಪನವರ ಕಲಾವೈಭವ ನಾಟಕ ಕಂಪನಿಗೆ ಪ್ರವೇಶಿಸಿದರು. ಶ್ರೀ ಬಾಳಪ್ಪ ನಿರ್ದೇಶನದಲ್ಲಿ

ಶ್ರೀ ಮಹಾಂತೇಶ ಶಾಸ್ತ್ರಿಗಳ 'ಕುಂಕುಮ' 'ವಧುವರ' ಮುಂತಾದುವುಗಳಲ್ಲಿ 'ಜಗಜ್ಯೋತಿ ಬಸವೇಶ್ವರ' 'ಕರ್ನಾಟಕ ಏಕೀಕರಣ' 'ಮಾವ ಬಂದ್ನೆಪ್ಪ ಮಾವ', ಮುಂತಾದ ನಾಟಕಗಳಲ್ಲಿ ಅಭಿನಯಿಸಿದರು. ಯಾವುದೇ ಪಾತ್ರವನ್ನೂ ಔಚಿತ್ಯಕ್ಕನುಗುಣವಾಗಿ ಮನಕಲಕುವಂತೆ ಅಭಿನಯಿಸಬಲ್ಲ ಪ್ರಬುದ್ಧ ಕಲಾವಿದೆಯಾಗಿ ಮನೆಮಾತಾದರು. ಆಕಾಶವಾಣಿ, ಚಲನಚಿತ್ರ ರಂಗದಲ್ಲಿಯೂ ಕಲಾವಿದೆಯಾಗಿ ಯಶಸ್ವಿಯೆನಿಸಿಕೊಂಡಿರುವ ಇವರು ಐವತ್ತು ವರ್ಷಗಳ ಸುದೀರ್ಘ ರಂಗ ಸೇವೆಯ ನಂತರ ಈಗ ವಿಶ್ರಾಂತ ಜೀವನದಲ್ಲಿದ್ದಾರೆ. ನೇಪಥ್ಯದಿಂದ ಹಿಂದೆ ಸರಿದಿದ್ದರೂ ರಂಗ ಮಿಡಿತಕ್ಕೆ ಹಾತೊರೆಯುವ ಜೀವ ರಂಗಮ್ಮ ಬ್ರಹ್ಮಾವರ ಅವರು.

---



## ಕಾಶೀಬಾಯಿ ಬೂತಪ್ಪಗೋಳ

ಲಯಬದ್ಧ ಹಾಡುಗಾರಿಕೆ ಜನಪ್ರಿಯ ರಾಗಾಲಾಪ, ಮಾತಿನ ವೈಖರಿ ಮೋಹಕ ಕುಣಿತ ಇವುಗಳನ್ನೊಳಗೊಂಡ 'ಶ್ರೀಕೃಷ್ಣ ಪಾರಿಜಾತ' 'ಸಣ್ಣಾಟ' ಜನಪದ ರಂಗಭೂಮಿಯಲ್ಲಿ ವಿಶಿಷ್ಟವಾದದ್ದು. ಈ ಜನಪದ ರಂಗಭೂಮಿಗೆ ತನ್ನನ್ನು ತಾನೆ ತೊಡಗಿಸಿಕೊಂಡ ಪ್ರತಿಭಾವಂತೆ ಕಾಶೀಬಾಯಿ ಬೂತಪ್ಪಗೋಳ.

ಬಿಜಾಪುರ ಜಿಲ್ಲೆಯ ಮುಧೋಳ ತಾಲ್ಲೂಕಿನ ದಾದನಟ್ಟಿ ಗ್ರಾಮದಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣ ಕಲಿಯುತ್ತಿದ್ದಾಗ ತಮ್ಮ ಎಂಟನೆಯ ವಯಸ್ಸಿನಲ್ಲೇ ರಂಗಭೂಮಿಗೆ ಪ್ರವೇಶಿಸಿದರು. ಸಂಗ್ಯಾ-ಬಾಳ್ಯ ನಾಟಕದ 'ಗಂಗಾ' ಪಾತ್ರದಲ್ಲಿ ಗಮನ ಸೆಳೆದರು. ಸಾಮಾಜಿಕ ನಾಟಕಗಳಲ್ಲಿ ಪಾತ್ರಗಳನ್ನು ನಿರ್ವಹಿಸುತ್ತಿದ್ದ ಇವರು ಹನ್ನೆರಡನೆಯ ವಯಸ್ಸಿನಲ್ಲಿಯೇ ಶ್ರೀಕೃಷ್ಣಪಾರಿಜಾತದಲ್ಲಿ ತನ್ಮಯತೆಯಿಂದ ತೊಡಗಿಸಿಕೊಂಡರು. ತಮ್ಮ ಹುಟ್ಟೂರಿನಲ್ಲಿಯೇ ಶ್ರೀ ಸಿದ್ದಪ್ಪ ಕೃಷ್ಣಗೌಡರ ಹಾಗೂ ಶ್ರೀ ಸಗರಪ್ಪ ಯಾದವಾಡ ಅವರ ಸಮರ್ಥ ಮಾರ್ಗದರ್ಶನ ದೊರಕಿತು. ನಂತರ ಗೋಕಾಕದ ಪುಲಗಡ್ಡಿ ಗ್ರಾಮದಲ್ಲಿ, ಬಿಜಾಪುರದ ಶ್ರೀ ಲೋಕಪೂರಾ ಕೃಷ್ಣಾಜಿ ದೇಶಪಾಂಡೆಯವರ ಪಾರಿಜಾತ ಕಂಪನಿಯಲ್ಲಿ ಗೌಳಗಿತ್ತಿ ಸತ್ಯಭಾಮ, ಕೊರವಂಜೀ, ರುಕ್ಮಿಣಿ ಮುಂತಾದ ಪಾತ್ರಗಳಲ್ಲಿ ಜನಮನ ಸೂರೆಗೊಂಡರು.

ಕಳೆದ ಐದು ವರ್ಷಗಳಿಂದೀಚೆಗೆ ಶ್ರೀ ಮಂಜುನಾಥ ಕೃಷ್ಣಪಾರಿಜಾತ ಕಂಪನಿಯನ್ನು ದಾದನಟ್ಟಿಯಲ್ಲಿಯೇ ಸ್ವತಃ ಕಟ್ಟಿಕೊಂಡು ಗೌಳಗಿತ್ತಿ ಸತ್ಯಭಾಮ ಕೊರವಂಜಿ ಪಾತ್ರವಲ್ಲದೆ ಕೃಷ್ಣ ನಾರದ ಪುರುಷ ಪಾತ್ರಗಳಲ್ಲಿಯೂ ಅಭಿನಯಿಸುತ್ತಿರುವರು. ನಾಡಿನ ಗಡಿ ಪ್ರದೇಶಗಳಲ್ಲಿ ಪಾರಿಜಾತ ಪ್ರದರ್ಶಿಸಿದ್ದಾರೆ. ಆಕಾಶವಾಣಿಯಲ್ಲಿ ಅನೇಕ ಬಾರಿ ಇವರ ಪಾರಿಜಾತ ಪ್ರಸಾರಗೊಂಡಿದೆ. ಸೂಕ್ಷ್ಮ ಅಭಿವ್ಯಕ್ತಿಗೆ ಇವರ ಭಾವಪೂರ್ಣ ಅಭಿನಯ ಸಂಗೀತ ಮಾಧುರ್ಯಕ್ಕೆ ಕಲಾಭಿಮಾನಿಗಳ ಪ್ರೀತಿ ಅಭಿಮಾನ ಮಹಾಪೂರದಂತೆ ಹರಿದಿದೆ. 'ಪಾರಿಜಾತ ಅಭಿಜಾತೆ' 'ಪಾರಿಜಾತ ಕೋಗಿಲೆ' ಎಂಬ ಬಿರುದುಗಳನ್ನಿತ್ತು ಗೌರವಿಸಿತು.

---



## ಪಿ. ರಾಮಚಂದ್ರಯ್ಯ (ಕಳ್ಳ)

ಬೆಂಗಳೂರು ಜಿಲ್ಲೆಯ ತ್ಯಾಮಗೊಂಡ್ಲು ಹುಟ್ಟಿದೂರು. ಚಿಕ್ಕಂದಿನಿಂದಲೂ ನಾಟಕ ಹರಿಕತೆ, ಬಯಲಾಟಗಳಲ್ಲಿ ಇವರ ಆಸಕ್ತಿ. ನೋಡಿದ ನಾಟಕಗಳನ್ನು ಅನುಕರಿಸಿ ಏಕಪಾತ್ರಾಭಿನಯ ಮಾಡುವ ಗೀಳು. ಮನೆಯವರಿಂದ ಉತ್ತೇಜನ. 1952ರಲ್ಲಿ ಜಿ. ಸದಾಶಿವಯ್ಯನವರ 'ಸಂಶಯ' ನಾಟಕದಿಂದ ರಂಗ ಪ್ರವೇಶ. ತ್ಯಾಮಗೊಂಡ್ಲುವಿನಲ್ಲಿ 'ಜೈಹಿಂದ್ ಮಿತ್ರವೃಂದ' ಕಟ್ಟಿಕೊಂಡು ನಾಟಕಗಳನ್ನಾಡಿದರು. 1960ರಲ್ಲಿ ಆನೇಕಲ್‌ನಲ್ಲಿ

ನೆಲಸಿದಾಗ ಅಲ್ಲಿ 'ಗೆಳೆಯರ ಬಳಗ' ತಂಡ ಕಟ್ಟಿ ನಾಟಕವಾಡತೊಡಗಿದರು. 1963ರಲ್ಲಿ ಬೆಂಗಳೂರಿನಲ್ಲಿ ಹಿಂದೂಸ್ತಾನ್ ವಿಮಾನ ಕಾರ್ಖಾನೆಯಲ್ಲಿ ಸೇರಿದ್ದು ಅವರ ರಂಗ ಚಟುವಟಿಕೆಗಳಿಗೆ ಹೊಸ ಆಯಾಮವೇ ಸಿಕ್ಕಿತು. ಮುಂದೆ ಅಭಿನಯ ನೇಪಥ್ಯ, ಬೆಳಕು, ಪ್ರಸಾದನ, ವಸ್ತ್ರ ವಿನ್ಯಾಸ, ನಿರ್ದೇಶನ – ಹೀಗೆ ವಿವಿಧ ಪ್ರಕಾರದಲ್ಲಿ ನಿಪುಣತೆ ಗಳಿಸಿದರು. ಹೆಸರಾದರು. 1964ರಲ್ಲಿ ಜೀವನ ಸಂಗಾತಿಯಾಗಿ ಬಂದ ಕಮಲರವರು ರಂಗಸಂಗಾತಿಯೂ ಆದರು, 'ಚಂದ್ರಕಮಲ' ನಾಟಕ ತಂಡ ಕಟ್ಟಲು ಸ್ಫೂರ್ತಿಯಾದರು. ನೆರವಾದರು.

1969ರಲ್ಲಿ ಪ್ರೊ. ಬಿ.ಸಿ. ಯವರು ಕನ್ನಡ ಸಾಹಿತ್ಯ ಕಲಾಸಂಘಕ್ಕಾಗಿ ನಿರ್ದೇಶಿಸಿದ 'ಮಣ್ಣಿನ ಬಂಡಿ' (ವಸಂತ ಸೇನೆ) ನಾಟಕದಲ್ಲಿ 'ಕಳ್ಳ'ನ ಪಾತ್ರಾಭಿನಯಿಸಿದ್ದು, ಅದೇ ನಿಕ್ ನೇಮ್ ಆಯಿತು. ಕಾರಂತರ 'ಸಂಕ್ರಾಂತಿ', 'ಈಡಿಪಸ್', 'ಜೋಕುಮಾರ', ಪ್ರಸನ್ನರ 'ಕದಡಿದ ನೀರು', ಕಂಬಾರರ 'ಸಂಗ್ಯಾಬಾಳ್ಯಾ', ಸಿ.ಜಿ.ಕೆ.ಯವರ 'ಒಡಲಾಳ' ಮುಂತಾದ ನಾಟಕಗಳಲ್ಲಿ ಪಾತ್ರ ಕಾಸ್ಟೂಂ ನಿರ್ವಹಣೆಯಲ್ಲಿ ಪಳಗಿದರು. 1971ರಲ್ಲಿ ಆರ್. ನಾಗೇಶ ನೇತೃತ್ವದಲ್ಲಿ 'ರಂಗ ಸಂಪದ' ಹವ್ಯಾಸಿ ತಂಡದ ಸ್ಥಾಪಕ ಸದಸ್ಯರಲೊಬ್ಬರಾದರು. ಪ್ರಸ್ತುತ ಅದರ ಅಧ್ಯಕ್ಷರಾಗಿರುವರು. ತಮ್ಮ ಕಾರ್ಖಾನೆಯ ಲಲಿತ ಕಲಾಸಂಘಕ್ಕಾಗಿ ಹಲವಾರು ನಾಟಕಗಳನ್ನು ನಿರ್ದೇಶಿಸಿ ರಾಜ್ಯ ಪ್ರಶಸ್ತಿಗಳಲ್ಲದೇ ಅಖಿಲ ಭಾರತ ನಾಟಕ ಸ್ಪರ್ಧೆಯಲ್ಲಿಯೂ, ಪುರಸ್ಕಾರ, ಮನ್ನಣೆ ಪಡೆದರು. ದೂರದರ್ಶನ ಧಾರಾವಾಹಿ, ಕಿರುಚಿತ್ರ, ಸಾಕ್ಷ್ಯಚಿತ್ರಗಳಲ್ಲಿ ಮತ್ತು ಚಲನಚಿತ್ರಗಳಲ್ಲಿ ಅಭಿನಯಿಸಿ ಚಿರಪರಿಚಿತರಾಗಿರುವರು. ಮಕ್ಕಳ ರಂಗಭೂಮಿಯಲ್ಲಿಯೂ ಸಹ ಶ್ರಮಿಸಿದ್ದು, ಆರು ಮಕ್ಕಳ ನಾಟಕಗಳನ್ನು ಬರೆದು ಆಡಿಸಿದ್ದಾರೆ. ಇವರ ಮಕ್ಕಳೂ ಸಹ ರಂಗಪ್ರವೇಶ ಮಾಡಿದ್ದು ನಾಟಕದವರ ಮನೆಯೆಂದು ಗುರುತಿಸುವಂತಾಗಿದ್ದಾರೆ. ರಂಗಚಳುವಳಿ ವ್ಯಾಪಕವಾಗಬೇಕೆಂಬ ಹಿರಿಯಾಸೆ ಇವರದು.



## ಶಿವಮೂರ್ತಿ ಕುಂದೂರು ಮಠ

ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಕುಂದೂರು ಇವರ ಹುಟ್ಟೂರು. ರಂಗಭೂಮಿಯ ಒಲವು. ಇವರಿಗೆ ರಕ್ತಗತವಾಗಿ ಬಂದದ್ದು, ತಂದೆ, ಚಿಕ್ಕಪ್ಪ, ಅಜ್ಜ, ಎಲ್ಲರೂ ಮೂಡಲಪಾಯ (ದೊಡ್ಡಾಟ) ಆಟಗಳಲ್ಲಿ ಸ್ತ್ರೀಪಾತ್ರ ಹಾಕುವುದರಲ್ಲಿ ನಿಸ್ಸೀಮರು. ಕುತೂಹಲ ಕಂಗಳಿಂದ ನೋಡುತಿದ್ದ ತೀರ ಎಳು ವರ್ಷದ ಬಾಲಕನಾಗಿದ್ದಾಗಲೇ ತಂದೆಯ ಮಾರ್ಗದರ್ಶನದಲ್ಲಿ ಬಣ್ಣ ಹಚ್ಚಿದ್ದು, 1950ರಲ್ಲಿ ದಾಗಿನಕಟ್ಟೆ ಶ್ರೀ ರಂಗನಾಥ ನಾಟಕ ಮಂಡಳಿಗೆ ಸೇರಿದರು. ಬಡತನಭೂತ ನಾಟಕದಲ್ಲಿ 'ನೀಲಾ' ಕಥಾ ನಾಯಕಿಯ ಪಾತ್ರ ವಿಶೇಷ ಖ್ಯಾತಿ ತಂದುಕೊಟ್ಟಿತು. ಮುಂದೆ ಹಲವಾರು ನಾಟಕಗಳಲ್ಲಿ ಅಭಿನಯಿಸಿದ ಸ್ತ್ರೀ ಪಾತ್ರಗಳು ಅನೇಕ ಪ್ರಶಸ್ತಿ, ಪುರಸ್ಕಾರ ತಂದು ಕೊಟ್ಟವು. ನಂತರ ಹಾಸ್ಯ ಪಾತ್ರಗಳನ್ನು ನಿರ್ವಹಿಸುವುದರಲ್ಲಿ ಕೂಡ ಜನಪ್ರಿಯರಾದರು. ಮುಂದೆ ನೃತ್ಯಕಲೆ ಅಭ್ಯಾಸಮಾಡಿ ನಾಡಿನಾದ್ಯಂತವಲ್ಲದೆ ಮಹಾರಾಷ್ಟ್ರದ ಜತ್ತದಿಂದ ಆಂಧ್ರದ ಆದವಾನಿ, ಗುಂತಕಲ್ಲು, ಶ್ರೀಶೈಲದವರೆಗೂ ಶಿವತಾಂಡವ ಲಾಸ್ಯ ನೃತ್ಯ ಪ್ರದರ್ಶನ ನೀಡಿದರು. ಹಲವಾರು ವರ್ಷಗಳ ಪರಿಶ್ರಮ ಅನುಭವಗಳಿಂದ ವಿಭಿನ್ನರಸಭಾವ ಪಾತ್ರಗಳನ್ನು ಲೀಲಾಜಾಲವಾಗಿ ನಿರ್ವಹಿಸುವುದೇ ಪ್ರೇರಕ ಶಕ್ತಿಯಾಗಿ ಏಕ ಪಾತ್ರಾಭಿನಯದ ಪ್ರದರ್ಶನವನ್ನು ಅಡೆತಡೆ ಇಲ್ಲದೆ ಮಾಡತೊಡಗಿದ್ದರು. 'ದೈವ ದುರಂತ ಕರ್ಣ', 'ಬುದ್ಧನ ಮಹಾರಾತ್ರಿ', 'ವಾಲ್ಮೀಕಿ ಭಾಗ್ಯ', 'ರೇಣುಕ ಎಲ್ಲಮ್ಮ', 'ಹೇಮರೆಡ್ಡಿ ಮಲ್ಲಮ್ಮ', ಕಲ್ಯಾಣ ಕ್ರಾಂತಿ ಹೀಗೆ ಹತ್ತಾರು ನಾಟಕಗಳಿಂದ ಹಲವು ಸನ್ಮಾನ, ಸತ್ಕಾರಗಳಿಗೆ ಪಾತ್ರರಾಗಿದ್ದಾರೆ. 'ಏಕಪಾತ್ರಾಭಿನಯ ವಿಶಾರದ' 'ಏಕಪಾತ್ರಾಭಿನಯ ಸಾರ್ವಭೌಮ' 'ಏಕಪಾತ್ರಾಭಿನಯ ಸಾಮ್ರಾಟ' ಹೀಗೆ ಬಿರುದುಗಳ ಸುರಿಮಳೆಯೇ ನಡಿದಿದೆ. ರಂಗಪ್ರೀತಿಗೆ ಹೆಸರಾದ ಇವರು ರಂಗಭೂಮಿಯಲ್ಲಿ ಹೊಸ ಪೀಳಿಗೆಯವರನ್ನು ಸಜ್ಜುಗೊಳಿಸುವ ಆಶಯ ಹೊಂದಿದ್ದಾರೆ.



## ಪರಮೇಶ್ವರ ಹೆಗಡೆ

ರಂಗಭೂಮಿಯ ಹಲವು ಪ್ರಕಾರಗಳಲ್ಲಿ ಸೈ ಎನಿಸಿಕೊಂಡಿರುವ ಕಲಾವಿದ. ಈ ಎಪ್ಪತ್ತರ ಇಳಿ ವಯಸ್ಸಿನಲ್ಲಿಯೂ ಬಣ್ಣ ಹಚ್ಚಿ ನಿಲ್ಲುವ ಹುಮ್ಮಸ್ಸು ಕುಗ್ಗಿಲ್ಲ.

ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕು ಕಂಪ್ಲಿ ಗ್ರಾಮದಲ್ಲಿ ಹುಟ್ಟಿದರು. ಹದಿನಾಲ್ಕರ ಪ್ರಾಯದಲ್ಲೇ ಊರಿನ ಯಕ್ಷಗಾನ ಮೇಳದಲ್ಲಿ ಸೇರಿಕೊಂಡು ಅಭ್ಯಾಸ ಮಾಡಿ ಮುಖ್ಯ ಪಾತ್ರಗಳನ್ನು ನಿರ್ವಹಿಸಿ ಜನಮೆಚ್ಚುಗೆ ಪಡೆದರು. ಮುಂದೆ 1948ರಲ್ಲಿ ಶ್ರೀ ಗುಬ್ಬಿ ಚೆನ್ನಬಸವೇಶ್ವರ ನಾಟಕ ಸಭಾ ಬೆಂಗಳೂರಿನಲ್ಲಿ ಸೇರಿದರು. ಡಾ॥ ಗುಬ್ಬಿ ವೀರಣ್ಣನವರ ಮಾರ್ಗದರ್ಶನದಲ್ಲಿ 'ದಶಾವತಾರ', 'ಕುರುಕ್ಷೇತ್ರ', ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿ ಮೆಚ್ಚುಗೆ ಪಡೆದಿರುತ್ತಾರೆ. ನಂತರ ಶ್ರೀ ಗಜಾನನ ನಾಟಕ ಮಂಡಲಿ ಜಮಖಂಡಿಯಲ್ಲಿ ಸೇರಿದರು. ಇಲ್ಲಿ ಸುಮಾರು ಮೂರು ದಶಕಗಳಿಗೂ ಮೀರಿದ ನಂಟಿನಿಂದಾಗಿ ಈ ಕಂಪನಿಯ ಎಲ್ಲಾ ನಾಟಕಗಳಲ್ಲಿಯೂ ಮುಖ್ಯ ಪಾತ್ರಗಳನ್ನು ಅಭಿನಯಿಸಿ ಚಿರಪರಿತರಾದರು. ಹಲವಾರು ಸನ್ಮಾನ ಗೌರವಗಳಿಗೆ ಪಾತ್ರರಾದರು.

ಚಲನಚಿತ್ರದಿಂದ ಬಂದ ಕರೆಗೆ ಓಗೊಟ್ಟು ಧರ್ಮಸ್ಥಳ ಮಹಾತ್ಮೆ, ಪಂಚಾಮೃತ, ಭಕ್ತ ಚೇತ ಮುಂತಾದ ಚಿತ್ರಗಳಲ್ಲಿ ಅಭಿನಯಿಸಿ ಚಿತ್ರರಂಗದಲ್ಲಿಯೂ ಇವರ ಹೆಸರು ದಾಖಲಾಯಿತು.

ವೃತ್ತಿರಂಗಭೂಮಿಯಿಂದ ನಿವೃತ್ತಿ ಪಡೆದ ಮೇಲೂ ರಂಗತುಡಿತ ತಾಳಲಾರದೇ ರಾಜ್ಯದ ಎಲ್ಲೆಡೆ ಶಾಲೆ ಕಾಲೇಜುಗಳಲ್ಲಿ ಇನ್ನೂರಕ್ಕೂ ಅಧಿಕ ಸಂಖ್ಯೆಯ 'ಟಿಪ್ಪುಸುಲ್ತಾನ', 'ಸದಾರಮೆ' ನಾಟಕಗಳಲ್ಲಿನ ಕೆಲವು ಭಾಗಗಳನ್ನು ಆಯ್ದುಕೊಂಡು ಏಕಪಾತ್ರಾಭಿನಯ ಪ್ರದರ್ಶನಗಳನ್ನು ನೀಡಿದ್ದಾರೆ. ನಾಡಿನ ಎಲ್ಲೆಡೆಗಳಲ್ಲೂ ರಸಿಕ ಜನರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದಾರೆ.





## ರಾ. ಕ. ನಾಯಕ

ರಾ. ಕಾ. ನಾಯಕರು ಮೂಲತಃ ಶಿಕ್ಷಕರು. ನಾಟಕ ಹಾಗೂ ಸಾಹಿತ್ಯ ಚಟುವಟಿಕೆಗಳಲ್ಲಿ ಮುಂಚಿನಿಂದಲೂ ಅಪಾರ ಒಲವು ಬಾಲ್ಯದಲ್ಲಿ ಹಳ್ಳಿಯಲ್ಲಿ ನಡೆಯುತ್ತಿದ್ದ ಪೌರಾಣಿಕ ನಾಟಕಗಳಿಂದ ಪ್ರಭಾವಿತರಾದರೂ ಮುಂದೆ ತನ್ನದೇ ಸ್ವಂತಿಕೆಯನ್ನು ಛಾಪಿಸುವಲ್ಲಿ ರಂಗಭೂಮಿಯಲ್ಲಿ ಯಶಸ್ವಿಯಾದವರು.

1950ರಲ್ಲಿ ವೃತ್ತಿ ರಂಗಭೂಮಿಯ ದೊಡ್ಡ ಹೆಸರಾದ ಶ್ರೀ ಏಣಗಿ ಬಾಳಪ್ಪನವರ ಕಲಾವೈಭವ ನಾಟಕ ಸಂಘದಲ್ಲಿ ಸೇರಿದರು. ಶ್ರೀ ಬಾಳಪ್ಪನವರ ಮಾರ್ಗದರ್ಶನದಲ್ಲಿ ಬಹಳಷ್ಟು ನಾಟಕಗಳಲ್ಲಿ ಕೆಲಸಮಾಡಿದರು. ಆಚಾರ ಅತ್ರೇಯವರ 'ಲಗ್ನ ಬೇಡಿ' ನಾಟಕವನ್ನು 'ಲಗ್ನ ಬಂಧನ' ಎಂಬ ಹೆಸರಿನಲ್ಲಿ ರಂಗಕ್ಕೆ ತಂದರು. 'ಧರ್ಮ ಸಂಕಟ' 'ರೈತ' ಮುಂತಾದ ನಾಟಕಗಳನ್ನು ಯಶಸ್ವಿಯಾಗಿ ಆಡಿದರು.

1963ರಲ್ಲಿ ನಾಟಕ ಸಾಹಿತ್ಯ ಪ್ರಕಟಣದ ಉದ್ದೇಶಕ್ಕಾಗಿಯೇ ನಾಟಕ ಗ್ರಂಥ ಮಾಲೆ ಪ್ರಾರಂಭಿಸಿದರು. ತಮ್ಮ 'ಸಂತಾಪ' ಎಂಬ ನಾಟಕವನ್ನು ಆಗಲೇ ಪ್ರಕಟಿಸಿದರು. 1985–86ರಲ್ಲಿ ಕರ್ನಾಟಕ ನಾಟಕ ಅಕಾಡೆಮಿಯವರು ಏರ್ಪಡಿಸಿದ್ದ ನಾಟಕ ರಚನಾ ಸ್ಪರ್ಧೆಯಲ್ಲಿ ಗ್ರೀಕ್ ಮಹಾಕವಿ ಹೋಮರನ್ 'ಒಡಿಸ್ಸಿ' ಮಹಾಕಾವ್ಯ ಆಧರಿಸಿ ಬರೆದ ಇವರ 'ಒಡಿಸ್ಸಿ' ನಾಟಕವು ಪ್ರಥಮ ಬಹುಮಾನ ಗಳಿಸಿತು. ಇವರ ಹಲವಾರು ಏಕಾಂತ ನಾಟಕಗಳು ಪತ್ರಿಕೆಯಲ್ಲಿ ಪ್ರಕಟಗೊಂಡಿವೆ. ಬಾನುಲಿ ನಾಟಕಗಳು ಪ್ರಸಾರವಾಗಿದೆ. ಬೆಂಗಾಡು, ಆಲ, ಆಹ್ವಾನ, ಮುಂತಾದ ಕಾದಂಬರಿಗಳನ್ನು

ಬರೆದಿರುವ ಇವರು ನ್ಯಾಷನಲ್ ಬುಕ್ ಟ್ರಸ್ಟ್‌ನವರಿಗೆ ಅನುವಾದಕ ಕೆಲಸ ಮಾಡಿದ್ದಾರೆ. ಕಸ್ತೂರಿ ಮಾಸಿಕಕ್ಕೆ ಉಪಸಂಪಾದಕರಾಗಿಯೂ ಕಾರ್ಯನಿರ್ವಹಿಸಿದ್ದಾರೆ. ಸಂಕೇಶ್ವರದ ಶ್ರೀ ದುರದುಂಡೀಶ್ವರ ವಿದ್ಯಾಸಂಸ್ಥೆಯಲ್ಲಿ ಮೂವತ್ತೊಂದು ವರ್ಷಗಳ ಕಾಲ ಶಿಕ್ಷಕರಾಗಿ ಸೇವೆಸಲ್ಲಿಸಿ ಈಗ ನಿವೃತ್ತರಾಗಿದ್ದಾರೆ. ವೃತ್ತಿ ರಂಗಭೂಮಿ ಮತ್ತು ಹವ್ಯಾಸಿ ರಂಗಭೂಮಿಗಳ ನಡುವೆ ಕಂದರ ಅಳಿಯಬೇಕೆಂದು, ಕೊಳುಕೊಡೆಯ ಸಂಬಂಧಕ್ಕಾಗಿ ವಿಶೇಷವಾಗಿ ಶ್ರಮಿಸಿರುವವರು.

---



## ಗಂಗಾಧರ ಸ್ವಾಮಿ

ಕನ್ನಡದ ಎಲ್ಲ ಸ್ತರದ ರೀತಿಯ ಚಳುವಳಿಗಳಲ್ಲಿ ಎಪ್ಪತ್ತರ ದಶಕದಿಂದಲೂ ಸಕ್ರಿಯವಾಗಿ ತೊಡಗಿಸಿಕೊಂಡಿರುವ ಕ್ರಿಯಾಶೀಲ ನಟ, ನಿರ್ದೇಶಕರು. ತಮ್ಮ ವಿದ್ಯಾರ್ಥಿ ದೆಸೆಯಿಂದಲೂ ರಂಗಭೂಮಿಯಲ್ಲಿ ಒಲವು ತೋರುತ್ತ ಬಂದವರು. ಬೆಂಗಳೂರು ವಿಶ್ವವಿದ್ಯಾಲಯದ ನಾಟಕ ವಿಭಾಗದಲ್ಲಿ ಕಲಿತು ಪದವೀಧರರಾದರು ನಾಟಕ ರಂಗವನ್ನೇ ವೃತ್ತಿಯಾಗಿ ಸ್ವೀಕರಿಸಿದರು.

ನಾಡಿನ ಖ್ಯಾತ ನಿರ್ದೇಶಕರರಾದ ಬಿ.ವಿ. ಕಾರಂತ, ಪ್ರಸನ್ನ, ಕಂಬಾರ, ಸಿ.ಜಿ. ಕೃಷ್ಣಸ್ವಾಮಿ ಮೊದಲಾದವರೊಡನೆ ನಟರಾಗಿ ಕೆಲಸಮಾಡಿದ್ದಾರೆ. 'ಮಾರೀಚನ ಬಂಧುಗಳು' 'ಕತ್ತಲೆ ದಾರಿ ದೂರ', 'ಪಂಚಮ' 'ಮೆರವಣಿಗೆ', 'ದೊಡ್ಡಪ್ಪ', 'ಚಿಕ್ಕದೇವಭೂಪ', 'ಕದಡಿದ ನೀರು' ಇವರು ನಿರ್ದೇಶಿಸಿದ ಜನಪ್ರಿಯ ನಾಟಕಗಳು. ಮಾನವ ಹಕ್ಕುಗಳ ಬಗ್ಗೆ, ಸಾಕ್ಷರತೆ ಬಗ್ಗೆ ಜಾಗೃತಿ ಮೂಡಿಸುವ ಅನೇಕ ಬೀದಿನಾಟಕಗಳನ್ನು ತಯಾರು ಮಾಡಿದ್ದಾರೆ. ಸಾಕ್ಷರತಾ ಕಾರ್ಯಕ್ರಮದ ರಂಗ ತರಬೇತಿ ಶಿಬಿರದ ನಿರ್ದೇಶಕರಾಗಿ ವಿಶೇಷವಾಗಿ ಸೇವೆ ಸಲ್ಲಿಸಿದ್ದಾರೆ. ಮೈಸೂರಿನ 'ರಂಗಾಯಣ' ತಂಡವು ನ್ಯೂಯಾರ್ಕಿನಲ್ಲಿ 'ಹಿಪ್ಪೋಲೀಟಸ್' ನಾಟಕವನ್ನು ಪ್ರದರ್ಶಿಸಿದಾಗ ಅದಕ್ಕೆ ತಾಂತ್ರಿಕ ನಿರ್ದೇಶಕರಾಗಿದ್ದರು. ನೀನಾಸಂ ರಂಗಶಿಕ್ಷಣ ಕೇಂದ್ರ ಹೆಗ್ಗೋಡು. ಇಲ್ಲಿ ಉಪನ್ಯಾಸಕರಾಗಿ ನಂತರ ಪ್ರಾಚಾರ್ಯರಾಗಿ ಕೆಲಸ ಮಾಡಿರುವ ಇವರು ಆದರ್ಶ ಫಿಲ್ಮ ಇನ್‌ಸ್ಟಿಟ್ಯೂಟ್‌ನಲ್ಲಿ ಹಲವು ಕಾಲ ಉಪನ್ಯಾಸಕರಾಗಿದ್ದರು. ಚಲನಚಿತ್ರರಂಗದಲ್ಲಿಯೂ. ದೂರದರ್ಶನ ಮಾಧ್ಯಮದದಲ್ಲಿಯೂ ಹಲವಾರು ನಾಟಕಗಳನ್ನು ನಿರ್ದೇಶಿಸಿದ್ದಾರೆ. 'ಸಮುದಾಯ' ಹಾಗೂ ಅನೇಕ ಹವ್ಯಾಸಿ ನಾಟಕ ಸಂಘಟನೆಗಳು ಮತ್ತು ನಾಟಕ ಅಕಾಡೆಮಿ ಇವುಗಳ ಸಹಯೋಗದೊಂದಿಗೆ ಸುಮಾರು ಐವತ್ತಕ್ಕೂ ಮೀರಿದ ರಂಗ ತರಬೇತಿ ಶಿಬಿರಗಳನ್ನು ನಾಡಿನಾದ್ಯಂತ ನಡೆಸಿದ್ದಾರೆ. ರಂಗ ತರಬೇತಿ ಶಿಬಿರಗಳ 'ಸರದಾರ' ಎಂದೆನ್ನಿಸಿದ್ದಾರೆ. ಪ್ರಸ್ತುತ ನಾಟಕ–ಕರ್ನಾಟಕ 'ರಂಗಾಯಣದಲ್ಲಿ' ಬೆಳಕು ವಿನ್ಯಾಸಕಾರ ಹಾಗೂ ಪ್ರಶಿಕ್ಷಕ (ನೇಪಥ್ಯ) ರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ರಂಗ ಚಳುವಳಿ ವ್ಯಾಪಕವಾಗಬೇಕೆಂದು ಹಾತೊರೆಯುತ್ತಾ ದುಡಿವ ರಂಗ ಕರ್ಮಿ ಇವರು.

---



## ಕನಕಗಿರಿ ವಾದಿರಾಜ

ರಂಗ ಸಂಗೀತ ಕ್ಷೇತ್ರದಲ್ಲಿ ಸುಮಾರು ಐನೂರಕ್ಕೂ ಮೀರಿದ ರಂಗ ಗೀತೆಗಳಿಗೆ ರಾಗ ಸಂಯೋಜಿಸಿ ಹೆಗ್ಗಳಿಕೆ ಗಳಿಸಿದವರು. ಎಳೆಯ ವಯಸ್ಸಿನಿಂದಲೂ ಸಂಗೀತದಲ್ಲಿ ಒಲವು. ರಾಯಚೂರು ಜಿಲ್ಲೆಯ ಗಂಗಾವತಿಯ ಕನಕಗಿರಿಯಲ್ಲಿ ಜನಿಸಿದರೂ. ನೆಲೆಸಿದ್ದು ಬಳ್ಳಾರಿ ಜಿಲ್ಲೆಯ ಕಂಪ್ಲಿಯಲ್ಲಿ. ಇವರಿಗೆ ಸಂಗೀತಕ್ಕೆ ಮನೆಯೇ ಮೊದಲ ಪಾಠ ಶಾಲೆಯಾಯಿತು. ತಂದೆ ಶ್ರೀ ವೆಂಕೋಬಾಚಾರ್ಯರವರಿಂದ ಕರ್ನಾಟಕ ಸಂಗೀತ ಶಿಕ್ಷಣ ಮತ್ತು

ತಾಯಿಯವರಿಂದ ಜನಪದ ಗೀತೆ, ದಾಸರ ಪದಗಳ ಕಂಠ ಅಭ್ಯಾಸ–ಎರಡು ಸೇರಿ ವಾದಿರಾಜರನ್ನು ಹಾಡುಗಾರರಾಗಿ ರೂಪುಗೊಳಿಸಿತು. ಗದಗದ ಕೀರ್ತನ ಕೇಸರಿ ಶ್ರೀ ದಾಸಚಾರ್ಯ ತಂಗೊಡ ಇವರಲ್ಲಿ ಹಿಂದೂಸ್ಥಾನಿ ಸಂಗೀತದಲ್ಲಿಯೂ ಹೆಚ್ಚಿನ ಸಾಧನೆ ಮಾಡಿದರು. ಸಂಗೀತದೊಡನೆ ಸಾಹಿತ್ಯದಲ್ಲಿಯೂ ಅಭಿರುಚಿ ಬೆಳೆಯಿತು. 1954ರಿಂದ ವಿವಿಧ ವೃತ್ತಿ ಹಾಗೂ ಹವ್ಯಾಸಿ ಸಂಘಗಳ ಮೂಲಕ ಬಹಳಷ್ಟು ನಾಟಕಗಳಲ್ಲಿ ಅಭಿನಯಿಸಿ ಹೆಸರಾದರು. ಅನೇಕ ಪ್ರಮುಖ ಕೇಂದ್ರಗಳಲ್ಲಿ ಸಂಚರಿಸಿರುವ ಇವರು 'ಕಲಾವಿದ' 'ಕುಮಾರ ರಾಮ', 'ಶ್ರೀ ಕೃಷ್ಣ ತುಲಾಭಾರ', 'ವಿಷಕನ್ಯೆ', 'ಸಮಾಜಕ್ಕೆ ಕಣ್ಣಿದೆಯೇ?', 'ತೀರ್ಪು ನಿಮ್ಮದು' – ಇನ್ನು ಮುಂತಾದ ಒಟ್ಟು ಹದಿನೆಂಟು ನಾಟಕಗಳನ್ನು ರಚಿಸಿ ರಂಗದ ಮೇಲೆ ಸಮರ್ಥವಾಗಿ ಪ್ರಯೋಗಿಸಿದ್ದಾರೆ. ಹಲವಾರು ನೃತ್ಯ ರೂಪಕಗಳನ್ನು ನಿರ್ದೇಶಿಸಿದ್ದಾರೆ. ರಂಗ ಸಂಗೀತದಲ್ಲಿ ವೈವಿಧ್ಯತೆ ತಂದು ನಾಟಕದವರಿಗೆ ಹಾಗೂ ಪ್ರೇಕ್ಷರಿಗೆ ತುಂಬಾ ಪ್ರಿಯರಾಗಿದ್ದಾರೆ.

---



## ಹೆಚ್.ಎನ್. ನಕ್ಕತ್ತಾಯ

ಶಾಲಾದಿನಗಳಿಂದಲೂ ನಾಟಕದ ಬಗ್ಗೆ ನಿರಂತರ ಆಸಕ್ತಿ, ಕುಂದಾಪುರದಲ್ಲಿ ತಮ್ಮ ಆರಂಭದ ಶಿಕ್ಷಣ ಮುಗಿಸಿ, ಮಂಗಳೂರಿನಲ್ಲಿ ಬಿ.ಎ. ಪದವೀಧರರಾಗಿ, ಪೂನದಲ್ಲಿ ಎಲ್.ಎಲ್.ಬಿ. ಪದವಿಗಾಗಿ ಶಿಕ್ಷಣ ಮುಂದುವರೆಸುವಾಗ ಮರಾಠೀ ರಂಗಭೂಮಿಯ ನಿರಂತರ ಒಡನಾಟದಿಂದ ಅವರಲ್ಲಿದ್ದ ರಂಗಭೂಮಿಯ ಒಲವು ಹೆಮ್ಮರವಾಗಿ ಬೆಳೆಯಿತು. ಮುಂದೆ ತಮ್ಮ ಮಂಗಳೂರು ಟೈಲ್ಸನ ಹೆಂಚಿನ ಕಾರ್ಖಾನೆಯ ಜವಾಬ್ದಾರಿ ವಹಿಸಿಕೊಂಡಾಗ ತಮ್ಮ ಇತರ ಗೆಳೆಯರೊಡನೆ ಸೇರಿ ಕುಂದಾಪುರದಲ್ಲೇ 'ರೂಪರಂಗ' ನಾಟಕ ಸಂಸ್ಥೆ ಹುಟ್ಟುಹಾಕಿದ್ದರು. ಇದು ನಲ್ವತ್ತೈದು ವರ್ಷಗಳ ಹಿಂದಿನ ಕಥೆ.

ಮೂರು ದಶಕಗಳಿಗೂ ಮೀರಿ ತಂಡದ ಹಿರಿತನವನ್ನು ವಹಿಸಿಕೊಂಡು ಅನೇಕ ನಾಟಕಗಳನ್ನು ರಾಜ್ಯದಾದ್ಯಂತ ಪ್ರದರ್ಶಿಸಿದರು. ಪ್ರಯೋಗಶೀಲತೆಗೆ ಹೆಸರಾದರು. ಇವರು ನಿರ್ದೇಶಿಸಿದ ನಾಟಕಗಳು ಸಾವಿರಕ್ಕೂ ಮಿಕ್ಕಿ ಪ್ರದರ್ಶನಗೊಂಡಿದೆ. ಪ್ರಶಸ್ತಿ, ಚಿನ್ನದ ಪದಕಗಳು ರೂಪರಂಗಕ್ಕೆ ಲಭಿಸಿದೆ. ಶ್ರೀ ನಕ್ಕತ್ತಾಯ ಅವರಿಗೆ ವೈಯುಕ್ತಿಕವಾಗಿ ಸಂದ ಮನ್ನಣೆ, ಪುರಸ್ಕಾರಗಳು ಅಪಾರ. ಡಾ. ಶಿವರಾಮ ಕಾರಂತರ 'ಮಲೆಯಮಕ್ಕಳು' ಚಿತ್ರದಲ್ಲಿನ ಅವರ ಅಭಿನಯ ಸ್ಮರಣೀಯವಾದುದು. ನಾಟಕ–ಪ್ರೇಕ್ಷಕರ ಸಂವಹನದಲ್ಲಿಯೇ ನಾಟಕದ ಸಿದ್ಧಿ ಇದೆ. ಪ್ರೇಕ್ಷಕರೇ ನಿಜವಾದ ವಿಮರ್ಶಕರು ಎಂಬುದು ಅವರ ಅಚಲ ವಿಶ್ವಾಸ. ಅವರ ಗರಡಿಯಲ್ಲಿ ಪಳಗಿ ರೂಪುಗೊಂಡವರು ಹಲವಾರು ಮಂದಿ ಇಂದು ನಾಡಿನಾದ್ಯಂತ ಚಲನಚಿತ್ರ ಹಾಗೂ ರಂಗಭೂಮಿಯಲ್ಲಿದ್ದಾರೆ. ಎಪ್ಪತ್ತರ ಇಳಿವಯಸ್ಸಿನಲ್ಲಿ ಅವರಲ್ಲಿರುವ ರಂಗಶ್ರದ್ಧೆ – ಪ್ರೀತಿಗೆ ಮಣೆಯದವರಿಲ್ಲ.

---



## ಆರ್.ಕೆ. ಹುಡಗಿ

ಗುಲಬುರ್ಗಾ ರಂಗಭೂಮಿಯಲ್ಲಿ ಚಿರಪರಿಚಿತ ಹೆಸರು. ವಿದ್ಯಾರ್ಥಿ ದೆಸೆಯಿಂದಲೇ ರಂಗಭೂಮಿಯಲ್ಲಿ ಅವರ ಆಸಕ್ತಿ, ಸಕ್ರಿಯ ಪಾತ್ರ, ವೃತ್ತಿಯಿಂದ ಆಂಗ್ಲ ಉಪನ್ಯಾಸಕ, ಪ್ರವೃತ್ತಿಯಿಂದ ನಿರಂತರ ಚಟುವಟಿಕೆಯ ರಂಗಕರ್ಮಿ. ರೈತ ಮತ್ತು ಯುವಜನ ಸಂಘಟನೆಯಲ್ಲಿ ಗಂಭೀರವಾಗಿ ತೊಡಗಿಸಿ ಕೊಂಡಿದ್ದಾರೆ. ರಂಗ ಚಳುವಳಿ ವ್ಯಾಪಕವಾಗಿಸುವಲ್ಲಿ ಕಾರಣರಾದರು. ಸಮಕಾಲೀನ ಬದುಕನ್ನು ಗಾಢವಾಗಿ ಬಿಂಬಿಸುವ ವಸ್ತುಗಳನ್ನೊಳಗೊಂಡ ನಾಟಕಗಳನ್ನು ರಚಿಸಿ ರಂಗಪ್ರಯೋಗಕ್ಕೆ ಸಿದ್ಧಗೊಳಿಸಿರುವವರು.

'ಸಂಸ್ಕಾ', 'ಬಾಯಿಬಂದ ಬಾಧಷಹಾನ ಪುರಾಣ', 'ನರಗುಂದ ರೈತನ ಬಂಡಾಯ', 'ಬರದ ಬಯಲಾಟ', 'ಬತ್ತಲೆ ಯಲ್ಲವ್ವನ', 'ವಸ್ತ್ರಾಪಹರಣ', 'ಹೆಮ್ಮಾರಿಯಾ ರಸಪುರಾಣ ಧರ್ಮಗಳು', ಮುಂತಾದ ನಾಟಕಗಳನ್ನು ಬರೆದರು. ಅವುಗಳು ರಂಗದಲ್ಲಿ ಪ್ರಯೋಗ ಜನ್ಮತೆಗೆ ಹೆಸರಾದವು. 'ಅಕ್ಷರ ಒರೆಗಲ್ಲು' ಎಂಬ ಬೀದಿನಾಟಕಗಳ ಸಂಕಲನ ಪ್ರಕಟಿಸಿದ್ದಾರೆ. ರಂಗ ಕೃತಿಗಳಲ್ಲದೆ ವಿಚಾರ ಸಾಹಿತ್ಯದಲ್ಲಿಯೂ ಪರಿಣತರು.

ಕನ್ನಡ ಸಾಹಿತ್ಯ ಸಂಸ್ಕೃತಿ ಪ್ರಸಾರ ಚಟುವಟಿಕೆಗಳಲ್ಲಿಯೂ ಗಮನಾರ್ಹ ಹೆಸರಾಗಿರುವವರು. ತನಗೆ ಸಂದ ಅಕಾಡೆಮಿಯ ಗೌರವ ತನ್ನೊಡಗೂಡಿ ಕಲಬುರ್ಗಿಯಲ್ಲಿ ರಂಗ ಚಟುವಟಿಕೆಗಳಲ್ಲಿ ತೊಡಗಿರುವ ಎಲ್ಲ ಗೆಳೆಯರಿಗೆ ಸಂದ ಗೌರವ ಎನ್ನುವ ವಿನಯ ಹುಡಗಿಯವರದು.

---



## ಗುಂಡಣ್ಣ ಸಿ.ಕೆ.

ಎಲ್ಲರಂತೆ ನಟನಾಗಬೇಕೆಂಬ ಕನಸು ಹೊತ್ತು ರಂಗಭೂಮಿಗೆ ಬಂದ ಗುಂಡಣ್ಣ ಮಿಂಚಿದ್ದು ನೇಪಥ್ಯ ಕಲಾವಿದರಾಗಿ 'ಬೆನಕ'ದ ಮೂಲಕ ಹವ್ಯಾಸಿ ರಂಗಕ್ಕೆ ಬಂದ ಇವರು 'ಸಮುದಾಯ'ದ ತೆಕ್ಕೆಗೆ ಬಂದಿದ್ದು 'ತಾಯಿ' ನಾಟಕದ ಮೂಲಕ.

ಖ್ಯಾತ ನಿರ್ದೇಶಕ ಪ್ರಸನ್ನ ಹಾಗೂ ಸಮುದಾಯ ತನ್ನ ಹುಟ್ಟಿನಿಂದಲೇ ಬಂದಿದ್ದ ಸಾಮಾಜಿಕ, ಸಾಂಸ್ಕೃತಿಕ ಜವಾಬ್ದಾರಿಗಳಿಂದ ಆಕರ್ಷಿತರಾಗಿ ತಂಡ ಸೇರಿದ ಗುಂಡಣ್ಣ ಇಂದಿಗೂ ಅದೇ ಅತೋತ್ತರಗಳಿಗೆ ಸಮುದಾಯದ ಅವಿಭಾಜ್ಯ ಅಂಗವಾಗಿ 'ಸಮುದಾಯ ಗುಂಡಣ್ಣ' ಆಗಿದ್ದಾರೆ.

ಸಮುದಾಯದ 'ತಾಯಿ' 'ಗೆಲಿಲಿಯೋ', 'ಮ್ಯಾಕ್‌ಬೆತ್', 'ದಂಗೆಯ ಮುಂಚಿನ ದಿನಗಳು', 'ಕುರಿ', 'ಕೊಂದು ಕೂಗಿತ್ತು ನೋಡಾ', 'ಮಾದಾರಿ ಮಾದಯ್ಯ', 'ಮಹಾಚೈತ್ರ', 'ಸಂಕ್ರಾಂತಿ' ಮುಂತಾದ ನಾಟಕಗಳಲ್ಲಿ ರಂಗದ ಹಿಂದೆ ಇವರು ನಿರ್ವಹಿಸಿರುವ ಪಾತ್ರ ಬಹು ಮುಖ್ಯವಾದುದು. 1977ರಲ್ಲಿ 'ಕತ್ತಲೆದಾರಿ ದೂರ' 'ಕುರಿ' 1980ರಲ್ಲಿ 'ಕೊಂದು ಕೂಗಿತ್ತು ನೋಡಾ' ಹಾಗೂ ಇತ್ತೀಚಿನ 'ಈ ಕೆಳಗಿನವರು' ನಾಟಕಗಳಲ್ಲಿ ನಟರಾಗಿಯೂ ಹೆಸರು ಮಾಡಿದ್ದಾರೆ.

ಬೀದಿನಾಟಕಗಳಲ್ಲಿ ಹಾಗೂ ಸಮುದಾಯದ ಚಾರಿತ್ರಿಕ, ಸಾಂಸ್ಕೃತಿಕ ಜಾಥಾಗಳಲ್ಲಿ ಬಹು ಮುಖ್ಯ ಜವಾಬ್ದಾರಿಗಳನ್ನು ನಿರ್ವಹಿಸಿ, ಯಶಸ್ವಿ ಸಂಘಟಕರೆನಿಸಿಕೊಂಡಿದ್ದಾರೆ. ಸಾಂಸ್ಕೃತಿಕ ಬದ್ಧತೆಯ ಜೊತೆಗೆ ಕಾರ್ಮಿಕರ ಹಿತರಕ್ಷಣೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದಾರೆ. ಕೇಂದ್ರ ಸರ್ಕಾರದ ದೂರ ಸಂಪರ್ಕ ಇಲಾಖೆಯ ನೌಕರರಾದ ಇವರು ಕಾರ್ಮಿಕ ಸಂಘಟನೆಯಲ್ಲಿ ಪ್ರಮುಖ ಪಾತ್ರ ವಹಿಸಿ ವಿಶ್ವಾಸ ಪ್ರೀತಿಗೆ ಪಾತ್ರರಾಗಿದ್ದಾರೆ.

ಸಾಂಸ್ಕೃತಿಕ ಸಾಹಿತ್ಯ ಚಟುವಟಿಕೆಗಳ ಜೊತೆಗೆ ಸಾಮಾಜಿಕ ಜೀವನವನ್ನು ಉತ್ತಮ ಪಡಿಸುವ ನಿಟ್ಟಿನಲ್ಲಿ ದುಡಿಯುತ್ತಿರುವ ಕೆಲವೇ ವ್ಯಕ್ತಿಗಳ ಸಾಲಿನಲ್ಲಿ ನಿಲ್ಲುವ ಗುಂಡಣ್ಣ ಸ್ಪಷ್ಟ ಸೈದ್ಧಾಂತಿಕ ನೆಲೆಯಲ್ಲಿ ತಮ್ಮ ವ್ಯವಸ್ಥೆಯನ್ನು ಸಮರ್ಪಕವಾಗಿ ಅರ್ಥೈಸುವ ಮನೋಸ್ಥೈರ್ಯ ಹಾಗೂ ತಿಳುವಳಿಕೆ ಪಡೆದಿದ್ದಾರೆ.

ತೆರೆಯ ಹಿಂದೆ ಕ್ರಿಯಾಶೀಲವಾಗಿ ಶಿಸ್ತಿನಿಂದ ಗುಂಡಣ್ಣನಂತೆ ದುಡಿಯುತ್ತಿರುವವರು ಇತ್ತೀಚೆಗೆ ಅಪರೂಪವಾಗುತ್ತಿದ್ದಾರೆ. ಸಮುದಾಯ ನಾಟಕ ಶಾಲೆ ಹಾಗೂ ವೃತ್ತಿಪರ ತಂಡವನ್ನು ಕಟ್ಟುವ ಕನಸು ಕಂಡು, ನನಸಾಗಿಸುವತ್ತ ಕ್ರಿಯಾಶೀಲರಾಗಿದ್ದಾರೆ.

---



## ಯು.ಆರ್. ನಾರಾಯಣಯ್ಯ

ಮಂಡ್ಯ ಜಿಲ್ಲೆಯ ಕೊಡಿಯಾಲ ಗ್ರಾಮದಲ್ಲಿ ಜನಿಸಿದರು. ತಂದೆ ಶ್ರೀ ಎನ್. ರಂಗಯ್ಯನವರು ಕಲಾವಿದರಾಗಿದ್ದರು. ಮಗನಿಗೆ ತಂದೆಯವರಿಂದಲೇ ಸ್ಫೂರ್ತಿ. ಎಂಟನೆಯ ವಯಸ್ಸಿನಿಂದಲೇ ಕೊಳ್ಳೆಗಾಲದ ಶ್ರೀ ಪೂಸಲುಬ್ಬಯ್ಯ ಭಾಗವತರಿಂದ ಸುಮಾರು ಹನ್ನೆರಡು ವರ್ಷಗಳ ಕಾಲ ಶಾಸ್ತ್ರೀಯ ಶಿಕ್ಷಣ ಪಡೆದರು. ಹಾರ್ಮೋನಿಯಂ ವಾದ್ಯವನ್ನು ಶಾಸ್ತ್ರೀಯವಾಗಿ ಅಭ್ಯಸಿಸಿದರು ಮತ್ತು ಖ್ಯಾತ ಸಂಗೀತಗಾರರಿಗೆ ಪಕ್ಕವಾದ್ಯ ನುಡಿಸಿ ಜನ ಮನ್ನಣೆ ಪಡೆದರು.

1933ರಲ್ಲಿ ಹುಟ್ಟೂರಿನಲ್ಲಿಯೇ ನಾಟಕ ಸಂಸ್ಥೆಯನ್ನು ಕಟ್ಟಿದರು. ಅನೇಕ ನಾಟಕಗಳಲ್ಲಿ ಸ್ತ್ರೀ ಪಾತ್ರವನ್ನು ಅಭಿನಯಿಸಿ ಜನಮನಗೆದ್ದರು. ಅಂದಿನ ರಂಗಭೂಮಿಯ ಹೆಸರಾಂತ ಕಲಾವಿದರಾದ ಪಿಟೀಲು ವಿಶ್ವನಾಥಯ್ಯ ಮಿರ್ಲೆ ಶ್ರೀನಿವಾಸರಾಯರು, ಕಾಲಕಿಲಪ್ಪ ಮುಂತಾದವರಿಂದ ತರಬೇತಿ ಪಡೆದು ಶ್ರೇಷ್ಠ ನಟರಾಗಿ ರೂಪುಗೊಂಡರು. ಇವರ ನಾರದ, ಕೃಷ್ಣನ ಪಾತ್ರಗಳನ್ನು ನೋಡಲು ಹಾಗೂ ಸುಮಧುರ ಹಾಡುಗಾರಿಕೆ ಕೇಳಲು ಪ್ರೇಕ್ಷಕರು ಮುಗಿಬೀಳುತ್ತಿದ್ದರು. 1937ರಲ್ಲಿ ಮಂಡ್ಯದ ಬಾಲಕಿಯರ ಮಾಧ್ಯಮಿಕ ಶಾಲೆಯಲ್ಲಿ ಸಂಗೀತ ಶಿಕ್ಷಕರಾಗಿ ಸೇವೆಸಲ್ಲಿಸಿದ್ದಾರೆ.

1938ರಿಂದ 1958ರವರೆಗೆ ಶ್ರೀ ಬಿ.ಆರ್. ಪಂತುಲು ರವರ ಕಲಾಸೇವ ನಾಟಕ ಮಂಡಳಿ, ಶ್ರೀಮತಿ ಲಕ್ಷ್ಮೀಸಾನಿ ಕಂಪನಿ, ಕೊಡಿಯಾಲದ ಬಾಲಕಲಾವಿದರ ನಾಟಕ ಸಂಸ್ಥೆ, ಕೀರಳಾಪುರ ಶ್ರೀ ನಾರಾಯಣಾ ಅಯ್ಯಂಗಾರ ನಾಟಕ ಸಂಸ್ಥೆ, ಶ್ರೀ ಎಂ.ವಿ. ಸುಬ್ಬಯ್ಯನಾಯ್ಡುರವರ ಎಸ್.ಎಸ್.ಎಸ್. ನಾಟಕ ಸಂಸ್ಥೆ, ಶ್ರೀ ಎ.ಎನ್. ಶೇಷಾಚಾರ್ಯರ ಶೇಷಕಮಲ ನಾಟಕ ಸಂಸ್ಥೆ, ಡಾ. ಗುಬ್ಬಿವೀರಣ್ಣನವರ ನಾಟಕ ಸಂಸ್ಥೆ, ಕರ್ನಾಟಕ ಕಲಾಸೇವ ನಾಟಕ ಮಂಡಳಿ – ಹೀಗೆ ಖ್ಯಾತ ನಾಟಕ ಸಂಸ್ಥೆಗಳಲ್ಲಿ ಸಾರ್ಥಕ ಸೇವೆ ಸಲ್ಲಿಸಿದ್ದಾರೆ. ಡಾ॥ ರಾಜ್‌ಕುಮಾರ್ ಅವರೇ ಮೊದಲಾಗಿ ಅನೇಕ ನಟರಿಗೆ ನಾಟಕ ಕಂಪನಿಗಳ ದಿವಸಗಳಲ್ಲಿ ಸಂಗೀತ ಶಿಕ್ಷಣ ಕೊಟ್ಟಿದ್ದಾರೆ ಶ್ರೀ ಕೊಟ್ಟೂರು ಬಸಪ್ಪ, ಶ್ರೀ ಎನ್.ಎನ್. ಗಂಗಾಧರ ರಾಯರು, ಶ್ರೀ ಶ್ರೀಕಂಠಮೂರ್ತಿ, ಶ್ರೀ ಹೊನ್ನಪ್ಪ ಭಾಗವತರ್, ಶ್ರೀ ಚಿಂತನಪಲ್ಲಿ ರಾಮಚಂದ್ರರಾಯರು – ಹೀಗೆ ಅಂದಿನ ರಂಗಭೂಮಿಯ ಮತ್ತು ಸಂಗೀತ ಕ್ಷೇತ್ರದ ದಿಗ್ಗಜರೊಡನೆ ದುಡಿದಿದ್ದಾರೆ. ಆಕಾಶವಾಣಿಯ ಕಲಾವಿದರಾಗಿರುವವರು. ವಾಣಿ ಸಂಗೀತ ಶಾಲೆಯನ್ನು ನಡೆಸುತ್ತಾ 'ಸಂಗೀತ ಕಲಾ ಕೇಸರಿ' ಎಂಬ ಬಿರುದನ್ನು ಹೊಂದಿದ್ದಾರೆ.

---



## ಸಿ.ಪಿ. ಪರಮೇಶ್ವರಪ್ಪ

ಹನ್ನೆರಡನೆಯ ವಯಸ್ಸಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ದಿನಗಳಲ್ಲೇ ಶಾಲೆಯಲ್ಲಿ ಏರ್ಪಡಿಸುತ್ತಿದ್ದ ನಾಟಕಗಳಲ್ಲಿ ಪಾತ್ರವಹಿಸಿ ಅಧ್ಯಾಪಕ ವೃಂದ ಪೋಷಕ ವರ್ಗದವರಿಂದ ಮೆಚ್ಚುಗೆ ಪಡೆಯುತ್ತಿದ್ದರು. ಎಳೆತನದ ರಂಗನಂಟನ್ನು ಮುಂದೆ ಗಂಭೀರ ಪ್ರವೃತ್ತಿಯಾಗಿ ಸ್ವೀಕರಿಸಿದ ಶ್ರೀಯುತರು ಶಾಲಾ ಅಧ್ಯಾಪಕರಾಗಿ ಸೇವೆ ಮಾಡಿದ ಅವಧಿಯಲ್ಲಿ ಶಾಲಾ ಮಕ್ಕಳಿಗಾಗಿಯೇ ನಾಟಕಗಳನ್ನು ಬರೆದು, ಆಡಿಸಿ ಮಕ್ಕಳಲ್ಲಿ ರಂಗಾಸಕ್ತಿ ಮೂಡಿಸುತ್ತಿದ್ದು ಮಕ್ಕಳಿಗೆ ಅಕ್ಕರೆಯ 'ನಾಟಕದ ಮೇಷ್ಟು' ಎಂದೇ ಹೆಸರಾದರು.

1949ರಿಂದ ಮಾಧ್ಯಮಿಕ ಶಾಲಾ ಅಧ್ಯಾಪಕರಾಗಿ ಸಾರ್ಥಕ ಸೇವೆ ಸಲ್ಲಿಸಿ 1988ರಲ್ಲಿ ನಿವೃತ್ತರಾದ ಶ್ರೀಯುತರು ಉತ್ತಮ ಬೋಧಕರೆಂಬ ಗೌರವಕ್ಕೆ ಪಾತ್ರರಾಗಿದ್ದಾರೆ. ಮಕ್ಕಳ ನಾಟಕ ರಚನಾಕಾರರಾಗಿ ರಂಗ ಶಿಕ್ಷಣ ಕೊಟ್ಟು ಮಕ್ಕಳ ರಂಗಭೂಮಿ ಜೀವಂತಿಕೆಗೆ ಬಹುಮಟ್ಟಿಗೆ ಶ್ರಮಿಸಿದ್ದರು. ಹವ್ಯಾಸಿ ರಂಗಭೂಮಿ ನಟರಾಗಿ ಈವರೆವಿಗೆ ಸಾಮಾಜಿಕ

ಐತಿಹಾಸಿಕ, ಪೌರಾಣಿಕ ಹೀಗೆ ಹಲವಾರು ಪ್ರಕಾರಗಳ 250 ನಾಟಕಗಳಲ್ಲಿ ಅಭಿನಯಿಸಿರುವರು. ರಾಜ್ಯ ಮಟ್ಟದ ನಾಟಕ ಸ್ಪರ್ಧೆಯಲ್ಲಿ ಭಾಗವಹಿಸಿ ಅನೇಕ ಪ್ರಶಸ್ತಿಗಳ ಸರಮಾಲೆ ತಮ್ಮದಾಗಿಸಿಕೊಂಡಿದ್ದಾರೆ. ಸರ್ಕಾರದವತಿಯಿಂದಲೂ ರಾಜ್ಯೋತ್ಸವ ಸನ್ಮಾನ ಮತ್ತು ಪ್ರಶಸ್ತಿಗಳಿಸಿದ್ದಾರೆ. 1944ರಲ್ಲಿ ಚಿಕ್ಕಮಗಳೂರಿನಲ್ಲಿ ಸ್ಥಾಪಿತವಾದ ಕಲಾಸೇವಾ ಸಂಘದಲ್ಲಿ 1946ರಿಂದ ಸದಸ್ಯರಾಗಿ ಪದಾಧಿಕಾರಿಯಾಗಿ ಈಗ ಪ್ರಧಾನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿರುವರು. ಸಂಘದ ಸುವರ್ಣ ಮಹೋತ್ಸವವನ್ನು 1996ರಲ್ಲಿ ಸಾರ್ವಜನಿಕರ ನೆರವಿನಿಂದ ಅರ್ಥಪೂರ್ಣವಾಗಿ ಯೋಜಿಸಿ ಆಚರಿಸಿದರು.

'ನಾವು ಕಂಡ ಬದುಕು', 'ಬಾಳರಂಗದ ಮೇಲೆ' ಮುಂತಾದ ಕಥಾ ಸಂಕಲನಗಳನ್ನು ತಂದಿದ್ದಾರೆ. ತಮ್ಮ ಕಥೆಗೆ ಪ್ರತಿಷ್ಠಿತ 'ನಿರಂಜನ' ಪ್ರಶಸ್ತಿ ಗಳಿಸಿದ್ದಾರೆ. ಸಿನಿಮಾ ದೂರದರ್ಶನ ಧಾರಾವಾಹಿಯಲ್ಲಿ ಕಲಾವಿದರಾಗಿ ಚಿರಪರಿಚಿತರಾಗಿದ್ದಾರೆ. ಗ್ರಾಮಾಂತರ ಪ್ರದೇಶದಲ್ಲಿ ರಂಗಾಸಕ್ತಿ ರಂಗಾಭಿರುಚಿ ಬೆಳೆಸುವಲ್ಲಿ ಗಂಭೀರವಾಗಿ ತೊಡಗಿಸಿಕೊಂಡಿರುವ ಶ್ರೀಯುತರು ರಂಗಾಭಿಮಾನಿಗಳಿಗೆ ತುಂಬ ಅಚ್ಚುಮೆಚ್ಚು.





## ರಮೇಶ್ ಎಸ್.ಆರ್.

ಆಂಗ್ಲ ಭಾಷೆಯಲ್ಲಿ ಪದವಿಯನ್ನು ಪಡೆದು ಉಪನ್ಯಾಸಕರಾಗಿರುವ ಬಿಡುವಿನ ವೇಳೆಯ ಹವ್ಯಾಸವನ್ನಾಗಿ ರಂಗಭೂಮಿಯ ಗೀಳನ್ನು ಅಂಟಿಸಿಕೊಂಡು ಕೊನೆಗೆ ಅದೇ ವ್ಯಕ್ತಿ ಎನ್ನುವಂತೆ ರಂಗಭೂಮಿಯಲ್ಲಿ ತೊಡಗಿಸಿಕೊಂಡರು. ಪ್ರಸನ್ನ, ಬಾದಲ್ ಸರ್ಕಾರ, ಬಿ.ವಿ. ಕಾರಂತ, ಮುಂತಾದವರಿಂದ ರಂಗಭೂಮಿಯ ಪ್ರಶಿಕ್ಷಣ ಪಡೆದುಕೊಂಡು ಪ್ರಾರಂಭದಲ್ಲಿ ಸ್ಪಂದನ ಸೆಂಟರ್ ಮೂಲಕ ಕೊಡಗಿನಾದ್ಯಂತ ರಂಗ ಚಟುವಟಿಕೆಯನ್ನು ಪಸರಿಸಿದ್ದಾರೆ. ನಂತರ ಎಡ ಪ್ರಜಾಪ್ರಭುತ್ವವಾದಿ ಚಿಂತನೆಯಲ್ಲಿ ಆಸಕ್ತಿ ಮೂಡಿ ಸಮುದಾಯ ಸಾಂಸ್ಕೃತಿಕ ಸಂಘಟನೆಯಲ್ಲಿ ಕ್ರಿಯಾಶೀಲ ವ್ಯಕ್ತಿಯಾಗಿ ರಾಜ್ಯದಾದ್ಯಂತ ನಡೆದ ಜಾಥಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ.

ಮೈಸೂರು ಸಮುದಾಯದ ಪ್ರಮುಖ ನಾಟಕಗಳ ನಿರ್ದೇಶನ ರಮೇಶರವರದು. 'ಡಾ. ಬೆಥೂನ್', 'ಅಂತಿಗೊನೆ' 'ನೆರಳಿಲ್ಲದ ಮನುಷ್ಯರು', ಭೋನು', 'ಧರ್ಮಪುರಿಯ ದೇವದಾಸಿ', 'ಚೆಲ್ಲಾಟದ ಚದುರೆಯರು', 'ರಾವಿನದಿಯ ದಂಡೆಯಲ್ಲಿ' ರಮೇಶ್ ನಿರ್ದೇಶಿಸಿರುವ ಪ್ರಮುಖ ನಾಟಕಗಳು. ಮನುಷ್ಯ ಸಂಬಂಧಗಳ ಒಳತೋಟಿಯನ್ನು ಸಂದರ್ಭ ಸನ್ನಿವೇಶಗಳ ಓರೆಕೋರೆಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸುವ ನಾಟಕಗಳ ಆಯ್ಕೆಯನ್ನು ಇವರ ಪ್ರಯತ್ನದಲ್ಲಿ ಕಾಣಬಹುದು.

ಸಂಪೂರ್ಣ ಸಾಕ್ಷರತಾ ಆಂದೋಲನದ ವಾತಾವರಣ ನಿರ್ಮಾಣದಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಬೀದಿ ನಾಟಕ ತರಬೇತಿ ಶಿಬಿರ ನಡೆಸಿ ಹಲವಾರು ಬೀದಿ ನಾಟಕಗಳನ್ನು ರಚಿಸಿದ್ದಾರೆ. ದೇವಲೋಕದಲ್ಲಿ 'ಮೀಟಿಂಗ್', 'ಹನುಮ', 'ಮುಂಗೋಳಿ ಕೂಗಿದಾಗ', 'ಹಂಸ ಹಂಸಿ', ಇವರ ರಂಗಭೂಮಿಗೆ ಅನುವಾದಿಸಿರುವ ನಾಟಕಗಳು. ಸಾರ್ತ್ರೆಯ ನೆರಳಿಲ್ಲದ ಮನುಷ್ಯರು ಮತ್ತು 'ಮೆಕ್ಕಾದ ಹಾದಿಯಲ್ಲಿ', 'ಅಬೋಲಿನ', 'ಕುಬಿ ಮತ್ತು ಇಯಾಲ', 'ವೆಂಕಟ ಶಾಮಿ ಪ್ರಣಯ', 'ಡಾಂಬರು ಬಂದರು' ಮುಂತಾದ ಕಥೆಗಳನ್ನು ರೂಪಾಂತರಿಸಿದ್ದಾರೆ.

ನಿರ್ದೇಶನದೊಂದಿಗೆ ಸಂಘಟನೆಯ ಚಾಲನ ಸ್ವರೂಪವನ್ನು ಮನಗೊಂಡಿರುವ ರಮೇಶ್ ಹೊಸಬರಿಗೆ ಅಗತ್ಯವಾಗುವ ರಂಗಚಿಂತನೆಯನ್ನು, ಸಾಮಾಜಿಕ ಜವಾಬ್ದಾರಿಗಳನ್ನು ತರಬೇತಿ ಶಿಬಿರಗಳ ಮೂಲಕ ಪರಿಚಯಿಸುವಲ್ಲಿ ತೊಡಗಿಸಿಕೊಂಡಿದ್ದಾರೆ.





## ನಾಗನಗೌಡ ಸಿರಿಗೇರಿ

ಬಳ್ಳಾರಿ ಜಿಲ್ಲೆ, ಸಿರುಗುಪ್ಪ ತಾಲೂಕಿನ ಸಿರಿಗೇರಿ ಗ್ರಾಮದಲ್ಲಿ ಜನನ. ಪ್ರಾಥಮಿಕ ಶಿಕ್ಷಣ ಸಿರಿಗೇರಿಯಲ್ಲಿ ಪೂರೈಸಿ ತನ್ನ ಬಾಲ್ಯದಲ್ಲಿಯೇ (12ನೇಯ ವಯಸ್ಸಿನಲ್ಲಿ) ಗದುಗಿನ ಗಾನಯೋಗಿ ಪಂಚಾಕ್ಷರಿ ಗವಾಯಿಗಳ ವೀರೇಶ್ವರ ಪುಣ್ಯಾಶ್ರಮವನ್ನು ಸೇರಿದರು. ಅಲ್ಲಿ ಡಾ. ಪುಟ್ಟರಾಜ ಗವಾಯಿಗಳಿಂದ ಸಂಗೀತ ಹಾಗೂ ಹಾರ್ಮೋನಿಯಂ ವ್ಯಾಸಂಗದಲ್ಲಿ ಹೆಚ್ಚಿನ ರೀತಿಯ ತರಬೇತಿ ಹೊಂದಿ, ಸಂಗೀತ ವಿಶಾರದಾ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಿದರು. ನಾಡಿನ ಹಿರಿಯ ಪರಿಣಿತ ಹಾರ್ಮೋನಿಯಂ ವಾದಕರಲ್ಲಿ ಒಬ್ಬರಾಗಿದ್ದಾರೆ.

ಆಕಾಶವಾಣಿಯ ಕಲಾವಿದರಾಗಿ, ಸುಪ್ರಸಿದ್ಧ, ಹಿಂದೂಸ್ತಾನಿ ಗಾಯಕರಿಗೆ ಸಹವಾದಕರಾಗಿ ಸುಮಾರು 30 ವರ್ಷಗಳ ಸೇವೆಗೈದ ಹೆಗ್ಗಳಿಕೆ ಇವರದು. ಇವರು ಹಾಗೂ ಮದಿರೆ ಮರಿಸ್ವಾಮಿಯವರು ಹಾರ್ಮೋನಿಯಂ ಜುಗಲ್ ಬಂದಿ ಕಾರ್ಯಕ್ರಮ ಮದ್ರಾಸ್, ಬೆಂಗಳೂರು, ರಾಯಚೂರು, ಗುಲ್ಬರ್ಗ, ಬಿಜಾಪುರ, ಮೈಸೂರು ಹಾಗೂ ಗದಗ ಇನ್ನೂ ಅನೇಕ ಪ್ರಮುಖ ಕೇಂದ್ರಗಳಲ್ಲಿ ಮೆಚ್ಚುಗೆಗೆ ಪಾತ್ರವಾಗಿದೆ. ಅನೇಕ ಸಂಘ ಸಂಸ್ಥೆಗಳು ಇವರಿಗೆ 'ಸಂಗೀತ ರತ್ನ', 'ಹಾರ್ಮೋನಿಯಂ ಚತುರ' ಮುಂತಾದ ಬಿರುದುಗಳನ್ನು ನೀಡಿ ಸನ್ಮಾನಿಸಿವೆ. ಅದಲ್ಲದೆ ಪಂಚಾಕ್ಷರಿ ಗವಾಯಿಗಳ ನಾಟ್ಯ ಸಂಘದಲ್ಲಿ ಹಾರ್ಮೋನಿಯಂ ವಾದಕರಾಗಿ, ಹಾಗೂ ಕರ್ನಾಟಕದ ಅನೇಕ ಸಂಘಗಳಿಗೆ ಸಂಗೀತ ನಿರ್ದೇಶನ ನೀಡಿದ ಗರಿಮೆ ಇವರದು.

ಗೆಳೆಯ ಮದಿರೆ ಮರಿಸ್ವಾಮಿ ಇವರೊಂದಿಗೆ 1976ರಲ್ಲಿ ಮಧುಕೇಶ್ವರ ನಾಟ್ಯ ಸಂಘವನ್ನು ಕಟ್ಟಿ, ಕೊನೆಗೆ ಕೈ ಸುಟ್ಟುಕೊಂಡರು. ಇವರು ಪ್ರತಿಭಾನ್ವಿತ ಅಭಿನಯ ಕಲಾವಿದರು. ರಂಗ ನಿರ್ದೇಶಕರು ಹಾಗೂ ರಂಗ ಗೀತೆಯ ರಚನೆಕಾರರು ಹೌದು. ಇವರ ಅನೇಕ ಪೌರಾಣಿಕ ಪಾತ್ರಗಳು ಅತ್ಯಂತ ಜನಪ್ರಿಯ ಹೊಂದಿವೆ.

---



## ಎಸ್.ಕೆ. ಮಾಧವರಾವ್

ಬಣ್ಣ ಹಚ್ಚಿಕೊಳ್ಳುವ ಗೀಳು ಶಾಲಾಹಂತದಲ್ಲೇ ಬೆಳೆದು ಬಂದದ್ದು. ಹುಟ್ಟಿದ್ದು ಮೈಸೂರಿನಲ್ಲಿಯಾದರೂ ವೃತ್ತಿಯಿಂದ ನೆಲೆಸಿದ್ದು ಬೆಂಗಳೂರಿನಲ್ಲಿ. ರಂಗಭೂಮಿಗೆ ಮಾರುಹೋದ ಶ್ರೀಯುತರು ಬೆಂಗಳೂರು ನಗರದ ಎಲ್ಲಾ ಹವ್ಯಾಸಿ ರಂಗತಂಡಗಳಲ್ಲಿಯೂ ನಟರಾಗಿ, ನಿರ್ದೇಶಕರಾಗಿ ಶ್ರಮಿಸಿದ್ದಾರೆ.

ಶಾಲಾದಿನಗಳಲ್ಲಿ ಸ್ನೇಹಿತರೆಲ್ಲಾ ಕೂಡಿಕೊಂಡು ನಗೆ ನಾಟಕಗಳನ್ನು ಆಡುವ ಅಭ್ಯಾಸ ಮೊದಲಾಯಿತು. ಪರ್ವತವಾಣಿ, ಕೆ. ಗುಂಡಣ್ಣ, ಎ.ಎಸ್. ಮೂರ್ತಿ, ನವರತ್ನರಾಯರು, ದಾಶರಥಿ ದೀಕ್ಷಿತ್ – ಇವರ ನಾಟಕಗಳನ್ನು ನಟರಾಗಿ ನಿರ್ದೇಶಕರಾಗಿ ಪ್ರದರ್ಶಿಸಿದರು.

ಎಪ್ಪತ್ತರ ದಶಕದಲ್ಲಿ ನಾಣಿ, ಪ್ರಸನ್ನ, ಆರ್. ನಾಗೇಶ್, ಸಿ.ಜಿ.ಕೆ., ಗಂಗಾಧರ ಸ್ವಾಮಿ, ಎಂ.ಎಸ್. ಸತ್ಯು, ಬಿ.ವಿ. ಕಾರಂತ, ಮೊದಲಾದ ಖ್ಯಾತ ನಿರ್ದೇಶಕರ ನಿರ್ದೇಶನದಲ್ಲಿ ಅಭಿನಯಿಸಿದರು. ಪ್ರಬುದ್ಧ ಕಲಾವಿದರೆನಿಸಿಕೊಂಡರು. ಸಮುದಾಯ, ಬೆನಕ, ರಂಗ ಸಂಪದ, ಸೂತ್ರಧಾರ, ಕಲಾಗಂಗೋತ್ರಿ, ಗ್ರೀನ್ ರೂಂ, ಅಭಿನವ ಕಲಾವೃಂದ, ಮೈಕೋ ಲಲಿತ ಕಲಾ ಸಂಘ, ಸಂಚಯ – ಹೀಗೆ ಪ್ರಮುಖ ಹವ್ಯಾಸಿ ತಂಡಗಳ ಒಡನಾಡಿಯಾದರು. ಆಡು ಮುಟ್ಟದ ಸೊಪ್ಪಿಲ್ಲ ಎಂಬಂತೆ ಎಲ್ಲಾ ಹವ್ಯಾಸಿ ತಂಡಗಳಲ್ಲೂ ಒಂದಲ್ಲ ಒಂದು ರೀತಿ ನೆರವಾದರು. 'ಹುತ್ತವ ಬಡಿದರೆ', 'ತಾಯಿ', 'ಕುರಿ', 'ಸನ್ನಿವೇಶ', 'ತಬರನ ಕಥೆ', 'ಆಸ್ಫೋಟ', 'ತಾಮ್ರಪತ್ರ', 'ಮುಖ್ಯಮಂತ್ರಿ', 'ನಂ ಕಂಪ್ನಿ',

ಅಂತಿಗೊನೆ – ಮೊದಲಾದ ನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳ ನಿರ್ವಹಣೆಯಿಂದ ಜನಪ್ರಿಯರಾದರು. ನಟನೆಯೊಂದೇ ಅಲ್ಲದೆ ಸಂಗೀತ ನಿರ್ದೇಶನದಲ್ಲಿಯೂ ಸೈ ಎನಿಸಿಕೊಂಡರು. ದೂರದರ್ಶನ ಚಲನಚಿತ್ರರಂಗದಲ್ಲಿಯೂ ನಟರಾಗಿ ಚಿರಪರಿಚಿತರು. ಮಕ್ಕಳ ರಂಗಭೂಮಿಯ ಕ್ಷೇತ್ರದಲ್ಲಿ ವಿಶೇಷವಾಗಿ ದುಡಿದಿದ್ದಾರೆ. ಶಾಲೆ, ಕಾಲೇಜುಗಳಲ್ಲಿ, ಅನೇಕ ಶಿಬಿರಗಳನ್ನು ಹಮ್ಮಿಕೊಂಡು ರಂಗ ಪ್ರಜ್ಞೆ ಮಕ್ಕಳಲ್ಲಿ ಬೆಳೆಸುವಲ್ಲಿ ಕಾರಣರಾಗಿದ್ದಾರೆ. ಮಕ್ಕಳಿಗಾಗಿ ಇಪ್ಪತ್ತೈದಕ್ಕೂ ಹೆಚ್ಚಿನ ನಾಟಕಗಳನ್ನು ಬರೆದು ಆಡಿಸಿದ್ದಾರೆ. ಇವರ ಮೊದಲ ಪ್ರೀತಿ ಮಕ್ಕಳ ರಂಗಭೂಮಿಯೇ.

---



## ನ. ಕೃಷ್ಣಶೆಟ್ಟಿ

ಕೈಗಾರಿಕಾ ರಂಗಭೂಮಿಯಲ್ಲಿಂದ ಹವ್ಯಾಸಿ ರಂಗಕ್ಕೆ ಸಂದ ಪ್ರತಿಭೆಗಳು ಅನೇಕ. ಅಂತಹ ಪ್ರತಿಭೆಗಳಲ್ಲಿ ಒಂದಾದ ನ. ಕೃಷ್ಣಶೆಟ್ಟಿ ವಿದ್ಯಾರ್ಥಿ ಜೀವನದಿಂದಲೇ ರಂಗಭೂಮಿಯತ್ತ ಒಲವು ಬೆಳೆಸಿಕೊಂಡವರು. ಶಾಲಾ ದಿನಗಳಲ್ಲಿ ವಿವಿಧ ವೇಷ ಸ್ಪರ್ಧೆ, ಏಕಪಾತ್ರಾಭಿನಯದಲ್ಲಿ ಪಾಲ್ಗೊಂಡು ಹಲವಾರು ಬಹುಮಾನ ಗಳಿಸಿದ್ದಾರೆ. 1972ರಲ್ಲಿ ಕೆ.ಜಿ.ಎಫ್.ನ ಬೆಮೆಲ್‌ನಲ್ಲಿ ತಾಂತ್ರಿಕ ಹುದ್ದೆಗೆ ಸೇರಿಕೊಂಡಾಗಿನಿಂದಲೇ ಬೆಮೆಲ್‌ನ ಹವ್ಯಾಸಿ ರಂಗಭೂಮಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಕೆ.ಜಿ.ಎಫ್. ಕನ್ನಡ ಸಂಘದ ಕಾರ್ಯಕರ್ತರಾದರು. 1970ರಲ್ಲಿ ಸ್ನೇಹಿತರೊಂದಿಗೆ ಸೇರಿ 'ರಂಗವರ್ಷ' ಎಂಬ ಹವ್ಯಾಸಿ ರಂಗ ಕಟ್ಟಿಕೊಂಡು – 'ಈಡಿಪಸ್', 'ದಾರಿಯಾವುದಯ್ಯ ಮುಂದೆ', 'ಬೆನಕನ ಕೆರೆ', 'ಸಿರಿಸಂಪಿಗೆ', 'ಥ್ಯಾಂಕ್ಯು ಮಿಸ್ಟರ್ ಗ್ಲಾಡ್', 'ಮಾರನಾಯಕ', 'ಅಂಧಯುಗ' ಇನ್ನೂ ಮುಂತಾದ ನಾಟಕಗಳನ್ನು ಪ್ರದರ್ಶಿಸಿದರು. ಇವುಗಳಲ್ಲಿ ಮಹತ್ವದ ಪಾತ್ರವಹಿಸಿ ಪ್ರಸಾಧನವನ್ನು ಮಾಡಿ ಹಲವಾರು ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿರುವರು. ಕರ್ನಾಟಕ ಗಡಿಭಾಗವಾದ ಕೆ.ಜಿ.ಎಫ್.ನಲ್ಲಿ ಕನ್ನಡದ ಕಂಪನ್ನು ಉಳಿಸಿ ಬೆಳೆಸಿಕೊಂಡು ಬರಲು ಕಾರಣರಾದ ಸಂಸ್ಥೆ 'ಕನ್ನಡ ಮಿತ್ರರು', ಇಲ್ಲಿ ಹದಿನೈದು ವರ್ಷಗಳಿಂದಲೂ ಒಡನಾಡಿಯಾಗಿ ಪದಾಧಿಕಾರಿಯಾಗಿಯೂ ಅಲ್ಲದೆ ಪ್ರದರ್ಶಿಸಿದ ಪ್ರಮುಖ ನಾಟಕಗಳಲ್ಲಿ ಅಭಿನಯಿಸಿರುವರು. ಇತರ ಹವ್ಯಾಸಿ ತಂಡಗಳಲ್ಲಿಯೂ ಭಾಗವಹಿಸಿದ್ದಾರೆ. 'ಕನ್ನಡ ಮಿತ್ರರು' ಸಂಸ್ಥೆ ಶ್ರೀ ಗುಬ್ಬಿವೀರಣ್ಣ ರಂಗ ಮಂದಿರ ನಿರ್ಮಾಣಕ್ಕಾಗಿ ಸರ್ಕಾರದಿಂದ ಅನುದಾನ ಪಡೆಯಲು ಮತ್ತು ಉಳಿದ ಸಂಪನ್ಮೂಲಗಳನ್ನು ಸಂಗ್ರಹಿಸುವಲ್ಲಿ ಇವರ ಕಾರ್ಯತತ್ಪರತೆ ಯಾರೂ ಮೆಚ್ಚುವಂತದ್ದು. ಗಡಿನಾಡಿನ ರಂಗಭೂಮಿಯ ಹಿತಾಸಕ್ತಿಗಳನ್ನು ಕಾಪಾಡಲು ಮತ್ತು ಅಭಿವೃದ್ಧಿಪಡಿಸಲು ಎಲ್ಲಾ ಕಲಾವಿದರ ಸಂಘಟನೆ ಕಾರ್ಯ ತೊಡಗಿಸಿಕೊಂಡಿರುವ ಇವರು ಪ್ರಸ್ತುತ ಕೋಲಾರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿರುವರು.

---



## ಕೆ.ಆರ್. ಶ್ರೀನಿವಾಸ್

ಇಪ್ಪತ್ತೈದು ವರ್ಷಗಳಿಂದ ಕನ್ನಡ ಹವ್ಯಾಸಿ ರಂಗಭೂಮಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವ ಶ್ರೀನಿವಾಸ್ ಅವರು ಇದುವರೆಗೆ ನೂರಾಹತ್ತು ನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳನ್ನು ನಿರ್ವಹಿಸಿದ್ದಾರೆ. 1968ರಲ್ಲಿ 'ಮನವೆಂಬ ಮರ್ಕಟ' ನಾಟಕದ ಮೂಲಕ ರಂಗಪ್ರವೇಶ. ಅನಂತರ ಕನ್ನಡ ಹವ್ಯಾಸಿ ರಂಗಭೂಮಿಯ ಉತ್ತಮ ನಿರ್ದೇಶಕರಾದ ಎಂ.ಎಸ್. ಸತ್ಯು, ನಾಗೇಶ್, ಬಿ. ಜಯಶ್ರೀ, ಶ್ರೀನಿವಾಸ್ ಪ್ರಭು, ಹಲವಾರು ನಿರ್ದೇಶಕರ ನಾಟಕಗಳಲ್ಲಿ ಅಭಿನಯಿಸಿದ ಅನುಭವ. 'ಗೆಲಿಲಿಯೋ',

'ಹುತ್ತವ ಬಡಿದರೆ', 'ಷೇಕ್ಸ್‌ಪಿಯರ್ ಸ್ವಪ್ನ ನೌಕೆ', 'ಈ ಮುಖದವರು', 'ಮುಖ್ಯಮಂತ್ರಿ', 'ಉದ್ಧವ', 'ಗುಳ್ಳೆನರಿ', 'ಮಂಟೇಸ್ವಾಮಿ ಕಥಾ ಪ್ರಸಂಗ', 'ಕರಿಮಾಯಿ', 'ಲಕ್ಷಾಧಿಪತಿರಾಜನ ಕಥೆ', 'ಷಾಜಹಾನ್', ಇವುಗಳು ಅವರು ಅಭಿನಯಿಸಿರುವ ಪ್ರಮುಖ ನಾಟಕಗಳು. ಅಭಿನಯದೊಡನೆ ನಾಟಕಗಳಿಗೆ ವಸ್ತ್ರ ವಿನ್ಯಾಸ ಹಾಗೂ ಹಿನ್ನೆಲೆ ಕೆಲಸಗಳಲ್ಲಿ ಪರಿಣಿತರು.

'ಪ್ರಯೋಗ ರಂಗ' ಖ್ಯಾತ ಹವ್ಯಾಸಿ ತಂಡದ ಕಾರ್ಯಕಾರಿ ಅಧ್ಯಕ್ಷರಾಗಿರುವರು. ಕಾಲೇಜು ಪುನರುಜ್ಜೀವಿತಕ್ಕೆ ಕಾರಣವಾದ ಪ್ರಯೋಗ ರಂಗದ 'ಜ್ಞಾನಭಾರತಿ' ಪಾರಿತೋಷಕ ನಾಟಕ ಸ್ಪರ್ಧೆಯ ರೂವಾರಿಗಳಲ್ಲಿ ಪ್ರಮುಖರು. ಸಮುದಾಯ ತಂಡದ ಅನೇಕ ನಾಟಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು 1988ರಲ್ಲಿ ನಡೆದ ವಿಶ್ವ ಕನ್ನಡ ಸಮ್ಮೇಳನದಲ್ಲಿ ಕರ್ನಾಟಕದ ಅಧಿಕೃತ ಪ್ರತಿನಿಧಿಯಾಗಿ ಇಂಗ್ಲಂಡಿನ ಮ್ಯಾಂಚೆಸ್ಟರ್‌ನಲ್ಲಿ ಪ್ರದರ್ಶಿಸಿದ 'ಸಿಕ್ಕು' ನಾಟಕದಲ್ಲಿ ಅಭಿನಯಿಸಿದ್ದಾರೆ. ಭಾರತದ ಹಲವಾರು ಕಡೆ ಅಖಿಲಭಾರತ ನಾಟಕೋತ್ಸವಗಳಲ್ಲಿ ಭಾಗವಹಿಸಿದ್ದಾರೆ.

ನಾಟಕ ರಂಗದಲ್ಲಷ್ಟೇ ಅಲ್ಲದೆ ಕಿರುತೆರೆ ಹಾಗೂ ಬೆಳ್ಳಿ ತೆರೆ ಎರಡು ಕ್ಷೇತ್ರಗಳಲ್ಲೂ ಹೆಸರಾಗಿದ್ದಾರೆ. ಅನೇಕ ದೂರದರ್ಶನ ಧಾರವಾಹಿಗಳಲ್ಲಿ ಅಲ್ಲದೇ ಇವರು ಐವತ್ತಕ್ಕೂ ಹೆಚ್ಚು ಕಿರುಚಿತ್ರಗಳಲ್ಲಿ, ಇಪ್ಪತ್ತೈದು ಚಲನಚಿತ್ರಗಳಲ್ಲಿಯೂ ಅಭಿನಯಿಸಿರುವರು. ಅಸಾಧಾರಣ ಕಲಾಪ್ರತಿಭೆಯ ಇವರು ರಂಗಕರ್ಮಿಗಳಲ್ಲಿ ಅತಿ ಮುಖ್ಯರು.

---



## ನ. ಮಾರಪ್ಪ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರ ತಾಲ್ಲೂಕಿನ ಬಿಡದಿ ಹೋಬಳಿ ಕೆಂಪಾಪುರ ಹಳಿಗ್ರಾಮದಲ್ಲಿ ಜನಿಸಿದ ಶ್ರೀ ನ. ಮಾರಪ್ಪ ಬಡತನದ ಕುಟುಂಬದಿಂದ ಬೆಳೆದುಬಂದವರು. ಬಾಲ್ಯದಲ್ಲಿಯೇ ನಾಟಕದ ಗೀಳನ್ನು ಬೆಳೆಸಿಕೊಂಡರು.

ಬಯಲಾಟಗಳಲ್ಲಿ ಸ್ತ್ರೀ ಪಾತ್ರಗಳಲ್ಲಿ ಗಮನ ಸೆಳೆಯುವ ಅಭಿನಯ ನೀಡಿದರು. ನಂತರದ ದಿನಗಳಲ್ಲಿ ರಾಮಾಯಣದಲ್ಲಿ ರಾಮನಾಗಿ, ಸುಭದ್ರ ಪರಿಣಯದಲ್ಲಿ ಅರ್ಜುನನಾಗಿ ಹೆಸರುಗಳಿಸಿದರು. ಇದಕ್ಕೆಲ್ಲ ಮಿಗಿಲಾಗಿ ಇವರು ಅಭಿನಯಿಸುತ್ತಿದ್ದ 'ದಾನಶೂರ ಕರ್ಣ' ನಾಟಕದ ಕರ್ಣನ ಪಾತ್ರ ಬೆಂಗಳೂರಿನ ಗ್ರಾಮಾಂತರ ಜಿಲ್ಲೆಯಿಂದ ಹಾಸನ, ತುಮಕೂರು, ಮಂಡ್ಯ, ಮೈಸೂರುಗಳವರೆಗೂ ಪ್ರೇಕ್ಷಕರನ್ನು ಸೂರೆಗೊಂಡಿತ್ತು. ಹೆಚ್ಚು ಕಡಿಮೆ ಈ ಜಿಲ್ಲೆಗಳಲ್ಲಿ ಎಲ್ಲೆ 'ಕುರುಕ್ಷೇತ್ರ' ಅಥವಾ 'ದಾನಶೂರ ಕರ್ಣ' ನಾಟಕ ಇದ್ದರೆ ಅಲ್ಲಿ ಖಾಯಂ 'ಕರ್ಣ' ಶ್ರೀಮಾರಪ್ಪ. ಅಂದಿನ ದಿನಗಳಲ್ಲಿ ಆಗಲೆ ಕರ್ಣನ ಪಾತ್ರಗಳಲ್ಲಿ ಹೆಸರು ಮಾಡಿದ ಶ್ರೀ ಕೊಟ್ಟೂರಪ್ಪನವರ ಸಮಾನಾಂತರವಾಗಿ ಅಭಿನಯ ಮಾಡುತ್ತಿದ್ದರು. ಇದನ್ನು ಕಂಡುಕೊಂಡ ಅಭಿಮಾನಿಗಳು ಇವರು ಜ್ಯೂನಿಯರ್ ಕೊಟ್ಟೂರಪ್ಪ ಎಂದು ಪ್ರೀತಿಯಿಂದ ಅಭಿನಂದಿಸಿದರು. ಸಾವಿರಾರು ನಾಟಕಗಳಲ್ಲಿ ಅಭಿನಯಿಸಿರುವ ಶ್ರೀ ಮಾರಪ್ಪ 1962ರಲ್ಲಿ ಮಾರಪ್ಪ ಮಿತ್ರ ಮಂಡಳಿ ವೃತ್ತಿ ನಾಟಕ ಸಂಸ್ಥೆಯನ್ನು ಸ್ಥಾಪಿಸಿದರು. ಆದರೆ ಅಲ್ಲಿ ಹೆಸರು ಗಳಿಸಿದ್ದು ಬಿಟ್ಟರೆ ಆರ್ಥಿಕ ನಷ್ಟವನ್ನು ಅನುಭವಿಸಿದರು.

ನಂತರದ ದಿನಗಳಲ್ಲಿ ನೂರಾರು ಹವ್ಯಾಸಿ ರಂಗ ಕಲಾವಿದರನ್ನು ರಂಗಭೂಮಿಗೆ ತಂದ ಮಾರಪ್ಪನವರು ಇಂದಿಗೂ ಈ ಇಳಿವಯಸ್ಸಿನಲ್ಲಿ ಅಭಿನಯದ ಗೀಳನ್ನು ಕಳೆದುಕೊಂಡಿಲ್ಲ.

---



## ಶ್ರೀನಿವಾಸ್ ಜಿ.

ಸಮಕಾಲೀನ ಸಾಂಸ್ಕೃತಿಕ ಸಂದರ್ಭದಲ್ಲಿ ಚಿರಪರಿಚಿತ ಹೆಸರು ಶ್ರೀನಿವಾಸ್ ಜಿ. ಉರುಫ್ ಕಪ್ಪಣ್ಣ. ನಾಟಕೋತ್ಸವ, ಸಾಹಿತ್ಯೋತ್ಸವ, ಸುಗಮ ಸಂಗೀತೋತ್ಸವ, ನೃತ್ಯೋತ್ಸವ, ಇಲ್ಲೆಲ್ಲಾ ಅರ್ಥಪೂರ್ಣ ಸುಂದರ ರಂಗ ಸಜ್ಜಿಕೆ ನೋಡಿದಾಗ ಇವರ ಕೈವಾಡದ ಛಾಪನ್ನು ಕಾಣಬಹುದಾಗಿದೆ.

ಶಾಲಾ ಕಾಲೇಜಿನ ದಿನಗಳಿಂದ ನಾಟಕದಲ್ಲಿ ಒಲವು. ಉತ್ತಮ ನಟ ಪ್ರಶಸ್ತಿ ಗಳಿಸಿದ್ದಾರೆ. ಬೆಳಕು ವಿನ್ಯಾಸದ ಒಲವು ಅಧಿಕವಾದಾಗ ನಮ್ಮ ಶ್ರೇಷ್ಠ ಬೆಳಕು ತಜ್ಞರ ಬಳಿ ಕೆಲಸ ಮಾಡಿ, ಶ್ರೇಷ್ಠ ನಿರ್ದೇಶಕರ ನಾಟಕಗಳಿಗೆ ವಿನ್ಯಾಸ ನೀಡಿ ಇಂದು ಶ್ರೇಷ್ಠ ಬೆಳಕು ತಜ್ಞರಲ್ಲಿ ಒಬ್ಬರಾಗಿದ್ದಾರೆ. ನಟ, ನಿರ್ದೇಶಕ, ರಂಗ ಸಂಘಟಕ, ಬೆಳಕು ತಜ್ಞ, ನೇಪಥ್ಯ ರಂಗ ಕರ್ಮಿಯಾಗಿ ಕಳೆದ ಮೂರು ದಶಕಗಳಿಂದ ನಾಡಿನ ಹವ್ಯಾಸಿ ರಂಗದ ಮೇರು ಪ್ರತಿಭೆಗಳಲ್ಲಿ ಒಬ್ಬರಾಗಿದ್ದಾರೆ.

ಪ್ರಮುಖ ಹವ್ಯಾಸಿ ತಂಡ 'ನಟರಂಗ'ದ ಸ್ಥಾಪಕ ಸದಸ್ಯ ಕಾರ್ಯದರ್ಶಿಯಾಗಿದ್ದಾರೆ. ಈಗ ನಟರಂಗ ಬೆಳ್ಳಿಹಬ್ಬದ ಸಂಭ್ರಮದಲ್ಲಿದೆ. ಭಾರತೀಯ ನಾಟ್ಯ ಸಂಘ ಕರ್ನಾಟಕ ಶಾಖೆ ಪ್ರಧಾನ ಕಾರ್ಯದರ್ಶಿಯಾಗಿ ನಾಟ್ಯ ಸಂಘದ ಆಶ್ರಯದಲ್ಲಿ 'ಉಲ್ಲಾಳ ಶೀಲ್ಡ್' ಮತ್ತು 'ಡಾ. ರಾಜಕುಮಾರ್ ಪರ್ಯಾಯ ಪಾರಿತೋಷಕ, ಮುಂತಾದ ಪ್ರತಿಷ್ಠಿತ ನಾಟಕ ಸ್ಪರ್ಧೆಗಳಿಂದ ಹಲವು ರಂಗ ತಾರೆಗಳನ್ನು ರಂಗಕ್ಕೆ ತಂದವರು. ಕಾಲೇಜುಗಳಿಗೆ, ನಟರಂಗ, ನಾಟ್ಯಸಂಘ, ವಾರ್ತಾ ಇಲಾಖೆಗಳಿಗಾಗಿ ಹಲವು ನಾಟಕಗಳನ್ನು ನಿರ್ದೇಶಿಸಿದ್ದಾರೆ. ಹಲವು ರಂಗ ಚಳುವಳಿಗೆ ನೇತಾರರಾಗಿದ್ದಾರೆ. 1981ರಲ್ಲಿ ಅಖಿಲ ಭಾರತ ನಾಟಕೋತ್ಸವದ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಜನಪದ ನೃತ್ಯತಂಡಗಳ ನಾಯಕರಾಗಿ ದೆಹಲಿಗೆ ರಿಪಬ್ಲಿಕ್ ದಿನಾಚರಣೆಗಳಲ್ಲಿ ಭಾಗವಹಿಸಿದ್ದಾರೆ. 1981ರಲ್ಲಿ ಭಾರತದ ಪ್ರತಿನಿಧಿಯಾಗಿ ದಕ್ಷಿಣ ಕೋರಿಯಾ, ಬರ್ಲಿನ್‌ಗಳಲ್ಲಿ ನಡೆದ ರಂಗಭೂಮಿಯ ಚರ್ಚೆ ಉತ್ಸವಗಳಲ್ಲಿ ಪಾಲ್ಗೊಂಡಿದ್ದಾರೆ.

ನಾಟಕ ಅಕಾಡೆಮಿಯ ಸದಸ್ಯರಾಗಿ, ಮುಂದೆ ಅಕಾಡೆಮಿಯ ರಿಜಿಸ್ಟ್ರಾರ್‌ರಾಗಿ ಸಾರ್ಥಕ ರೀತಿಯಲ್ಲಿ ಸೇವೆಸಲ್ಲಿಸಿದ್ದಾರೆ. ರಂಗಭೂಮಿಯ ಎಲ್ಲಾ ಮಜಲುಗಳಲ್ಲಿ ಆಳವಾದ ಅನುಭವ ಹೊಂದಿರುವ ಇವರ ರಂಗನಿಷ್ಠೆ ಅನುಕರಣೀಯವಾದುದು.



## 1997ರ ಪ್ರಶಸ್ತಿ ವಿಜೇತರು



### ಪ್ರೊ. ಎಚ್.ಎಂ. ಚೆನ್ನಯ್ಯ (ಫೆಲೋಶಿಪ್)

ಕನ್ನಡ ಸಾಹಿತ್ಯ ವಿಮರ್ಶೆಗೆ ವಿಶಿಷ್ಟವೆನ್ನಬಹುದಾದ ಒಳನೋಟದೊಂದಿಗೆ, ನಮ್ಮ ಸಾಹಿತ್ಯದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುವ ಪ್ರೊ. ಚೆನ್ನಯ್ಯನವರು ಜನಿಸಿದ್ದು 1935ರಲ್ಲಿ, ಶಿವಮೊಗ್ಗ ಜಿಲ್ಲೆಯ ಆನವಟ್ಟಿಯಲ್ಲಿ. ಇಂಟರ್ ಮೀಡಿಯಟ್‌ವರೆಗೆ ವಿಜ್ಞಾನ ಕಲಿತರೂ ನಂತರ ಸಾಹಿತ್ಯದ ಸೆಳೆತದಿಂದ ತಪ್ಪಿಸಿಕೊಳ್ಳಲಾರದೇ ಅದರಲ್ಲೇ ಸ್ನಾತಕೋತ್ತರ ಪದವಿಯನ್ನು ಪಡೆದರು. ಪ್ರೊ. ತೀ.ನಂ.ಶ್ರೀ ಡಾ.ಡಿ.ಎಲ್.ಎನ್. ಸುಜನಾ, ಡಾ. ಜೆ.ಎಸ್.ಎಸ್. ಹಾಗೂ ಡಾ. ಪ್ರಭುಶಂಕರ್ ಇವರುಗಳ ಶಿಷ್ಯರಾಗಿ ರೂಪುಗೊಂಡ ಚೆನ್ನಯ್ಯನವರು ಶೈಕ್ಷಣಿಕ ಕ್ಷೇತ್ರದ ಹಲವು ಪದಗಳನ್ನು ನಿರ್ವಹಿಸಿ, ಕೊನೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ಕಾರ್ಯನಿರ್ವಹಿಸಿ, 1995ರಲ್ಲಿ ನಿವೃತ್ತಿ ಹೊಂದಿದ್ದಾರೆ.

ಎಚ್.ಎಂ. ಚೆನ್ನಯ್ಯನವರು ತಮ್ಮ ಅಭಿವ್ಯಕ್ತಿಗಾಗಿ ಕಾವ್ಯದ ಜೊತೆಗೆ ಆಯ್ದುಕೊಂಡಿದ್ದು ನಾಟಕ. ನಾಟಕ ರಚನೆ, ನಿರ್ದೇಶನ, ಅಭಿನಯದೊಂದಿಗೆ ಹಲವು ದಶಕಗಳ ಕಾಲ ಇವರು ತಮ್ಮನ್ನು ರಂಗಭೂಮಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಮೈಸೂರಿನ 'ಸಮತೆಂತೋ' ಹವ್ಯಾಸೀ ನಾಟಕ ತಂಡದ ಸ್ಥಾಪಕ ಸದಸ್ಯರಲ್ಲೊಬ್ಬರಾದ ಚೆನ್ನಯ್ಯನವರು ನಲವತ್ತಕ್ಕೂ ಹೆಚ್ಚು ನಾಟಕಗಳಲ್ಲಿ ನಟಿಸಿದ್ದಾರೆ. ಕುವೆಂಪು ಅವರ 'ರಕ್ತಾಕ್ಷಿ'ಯ ನಿಂಬಯ್ಯ, ತೇಜಸ್ವಿಯವರ 'ಯಮಳ ಪ್ರಶ್ನೆ'ಯ ಪೋಲೀಸ, ನ. ರತ್ನರ 'ಎಲ್ಲಿಗೆ?'ಯ ಚಿಕ್ಕವನು, 'ಮೃಚ್ಛಕಟಿಕ'ದ ಶಕಾರ ಇವರು ಚೆನ್ನಯ್ಯನವರ ಕೆಲವು ನೆನಪುಳಿಯುವ ವಿಶಿಷ್ಟ ಪಾತ್ರಗಳು. ಇವರಿಂದ ರೂಪುಗೊಂಡು ರಂಗವೇರಿದ ಎಲ್ಲರಂಥವನಲ್ಲ ನನ ಗಂಡ, 'ತಾಯಿ', 'ಕೋಡೆಗಳು', 'ಯಯಾತಿ' ಮುಂತಾದ ನಾಟಕಗಳ ಪ್ರಯೋಗಗಳು ಇವರ ವಿಶಿಷ್ಟ ನಿರ್ದೇಶನ ಸಾಮರ್ಥ್ಯಕ್ಕೆ ಸಾಕ್ಷಿಯಾಗಿವೆ. ಚೆನ್ನಯ್ಯನವರು ಪಿ. ಲಂಕೇಶರ 'ಎಲ್ಲಿಂದಲೋ ಬಂದವರು' ಚಿತ್ರದಲ್ಲಿ ಹಲಗಪ್ಪನೆಂಬ ಒಂದು ವಿಶಿಷ್ಟ ಪಾತ್ರದಲ್ಲೂ ಮಿಂಚಿದ್ದಾರೆ.

ಪ್ರೊ. ಚೆನ್ನಯ್ಯನವರ ಕೃತಿ 'ಎಲ್ಲರಂಥವನಲ್ಲ ನನ ಗಂಡ' ಕನ್ನಡದ ಎಪಿಕ್ ಥಿಯೇಟರನ್ನು ಪ್ರತಿನಿಧಿಸುವ ನಾಟಕ ಎಂಬ ಪ್ರಶಂಸೆಗೆ ಪಾತ್ರವಾಗಿದೆ. 'ಹುಯ್ಯಲವೋ ಡಂಗುರವ', 'ಅಯಾಸ್' (ಅನುವಾದ) ಇವು ಚೆನ್ನಯ್ಯನವರ ಇತರ ನಾಟಕ ಕೃತಿಗಳು. ಕಾವ್ಯ, ವಿಮರ್ಶೆ ಕ್ಷೇತ್ರಗಳಲ್ಲಿ ಹಲವು ಮಹತ್ವದ ಕೃತಿಗಳನ್ನು ರಚಿಸಿದ ಫಲವಾಗಿ '1994ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿಯಿಂದಲೂ ಪುರಸ್ಕೃತರಾಗಿದ್ದಾರೆ.

---



### ಪ್ರೊ. ಎಂ.ಎಸ್. ನಾಗರಾಜ್ (ಫೆಲೋಶಿಪ್)

ಇಂಗ್ಲೀಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಹಾಗೂ ಕಾನೂನು ಪದವಿಯನ್ನು ಪಡೆದು. ಇಂಗ್ಲೀಷ್ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿರುವ ಎಪ್ಪತ್ತೈದರ ಹರೆಯದ ಪ್ರೊ. ಎಂ.ಎಸ್. ನಾಗರಾಜರವರು ರಂಗಭೂಮಿಯ ಮೇಲೆ ಮೂಡಿಸಿದ ಹೆಜ್ಜೆಗಳು ಹಲವು. ಹಲವು ಬಗೆಯವು. ನಾಟಕ ರಚನೆ, ನಿರ್ದೇಶನಗಳಲ್ಲದೇ ನಾಟಕ ವಿಮರ್ಶೆ, ರಂಗಭೂಮಿಯ ಕುರಿತು ಸೈದ್ಧಾಂತಿಕ ಕೃತಿಗಳ ರಚನೆ – ಹೀಗೆ ವಿವಿಧ ರೀತಿಯಲ್ಲಿ ಇವರು ಸೇವೆಗೈದಿದ್ದಾರೆ.

ಹೊನ್ನಪ್ಪ ಭಾಗವತ್, ಗುಬ್ಬಿ ವೀರಣ್ಣ, ಬಿ. ಜಯಮ್ಮರಂಥ ಶ್ರೇಷ್ಠ ಕಲಾವಿದರನ್ನು ಭೂಮಿಕೆಯಲ್ಲಿ ಹೊಂದಿದ್ದ ಇವರ 'ಪತಿತೋದ್ಧಾರಕ ಬಸವೇಶ್ವರ' ನಾಟಕ 120ಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡಿದೆ. ಜಾನಪದ ಶೈಲಿಯ ಇವರ 'ಲಕ್ಷಾಪತಿ ರಾಜನ ಕಥೆ' ದಕ್ಷಿಣ ಭಾರತ ಹಾಗೂ ಅಖಿಲ ಭಾರತ ಜಾನಪದ ನಾಟಕ ಸ್ಪರ್ಧೆಗಳಲ್ಲಿ ಪ್ರಥಮ ಪ್ರಶಸ್ತಿಗಳನ್ನು ಗಳಿಸಿದೆ. ಭಾರತದ ಎಲ್ಲಾ ಪ್ರಮುಖ ನಗರಗಳಲ್ಲದೇ, ಈಜಿಪ್ಟಿನ ಕೈರೋ, ರಷ್ಯಾದ ತಾಷ್ಕೆಂಟ್‌ಗಳಲ್ಲೂ ಯಶಸ್ವಿಯಾಗಿ ಪ್ರಯೋಗಗೊಂಡಿದೆ. ಇದಲ್ಲದೇ ಮಹಿಳೆಯರಿಗಾಗಿ ಹದಿನೈದು, ರೇಡಿಯೋಕ್ಕಾಗಿ ಹತ್ತು ನಾಟಕಗಳನ್ನೂ ಇವರು ರಚಿಸಿದ್ದಾರೆ. ಕಾಲೇಜುರಂಗದಲ್ಲಿ ಮತ್ತು ಹವ್ಯಾಸಿ ರಂಗದಲ್ಲಿ ಸುಮಾರು ನೂರಕ್ಕೂ ಹೆಚ್ಚು ನಾಟಕಗಳಿಗೆ ನಿರ್ದೇಶನವನ್ನೂ ನೀಡಿದ್ದಾರೆ.

ಇವರ 'ನಾಂದಿ' ಎಂಬ ಪ್ರೌಢ ಕೃತಿ, ನಾಟಕದ ಸಿದ್ಧಾಂತ – ಅಭಿನಯ – ಪ್ರಯೋಗಗಳ ಕುರಿತಾಗಿ. ಕನ್ನಡದಲ್ಲಿ ಬಂದ ಪ್ರಥಮ ರಂಗಶಾಸ್ತ್ರ ಗ್ರಂಥವೆಂದು ಅನೇಕ ವಿದ್ವಾಂಸರಿಂದ ಪ್ರಶಂಸೆಗೆ ಒಳಗಾಗಿದೆ. 'ಟ್ರೆಂಡ್ಸ್ ಅ್ಯಂಡ್ ಟೆಕ್ನೀಕ್ಸ್ ಇನ್ ಕನ್ನಡ ಡ್ರಾಮಾ ಡ್ಯೂರಿಂಗ್ ದ ಲಾಸ್ಟ್ ಡಿಕೇಡ್', 'ನಾಟಕ ಸಮೀಕ್ಷೆ', 'ಕನ್ನಡ ರಂಗಭೂಮಿಯ ಇತಿಹಾಸ' ಇವು ನಾಗರಾಜರ ಇತರ ಕೃತಿಗಳು. ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಗಾಗಿ ಸುಮಾರು ಹನ್ನೆರಡು ವರ್ಷಗಳ ಕಾಲ ಇವರು ದೂರದರ್ಶನ ಕಾರ್ಯಕ್ರಮಗಳ ವಿಮರ್ಶೆಯನ್ನೂ ಬರೆದಿದ್ದಾರೆ.

ನಾಗಾಭರಣ, ಟಿ.ಎನ್. ಸೀತಾರಾಂ, ಆರ್.ಎನ್. ಜಯಗೋಪಾಲ್, ಜೆ. ಲೋಕೇಶ್, ವಿ. ರಾಮಮೂರ್ತಿ, ಮೋಹನ್ ರಾಮ್, ಸೂರಿ, ರಾಮಕೃಷ್ಣ ಮುಂತಾದವರು ಈ ವೈವಿಧ್ಯಮಯ ವಿದ್ವತ್ತಿನ ಗುರುವಿನ ಗರಡಿಯಲ್ಲಿ ರೂಪುಗೊಂಡ ಕೆಲವು ಪ್ರಮುಖ ರಂಗಭೂಮಿ ಪ್ರತಿಭೆಗಳು. ರಾಜಾಜಿನಗರ ಕೋ ಆಪರೇಟಿವ್ ಸೊಸೈಟಿಯ ಒಂದು ದಶಕ ಅವಧಿಯ ಅಧ್ಯಕ್ಷ ಪದವು ಸೇರಿದಂತೆ ಪ್ರೊ. ನಾಗರಾಜರು ಸಹಕಾರೀ ಕ್ಷೇತ್ರಕ್ಕೂ ತಮ್ಮದೇ ಆದ ರೀತಿಯಲ್ಲಿ ವಿಶಿಷ್ಟ ಸೇವೆಯನ್ನು ಸಲ್ಲಿಸಿದ್ದಾರೆ.

---



## ಡಾ. ಎಚ್.ಕೆ. ರಂಗನಾಥ್ (ಫೆಲೋಶಿಪ್)

ಕರ್ನಾಟಕ ರಂಗಭೂಮಿಯ ಆಳ ಅಗಲಗಳನ್ನು ಅರಿತು ಅದರ ಸತ್ವವನ್ನು ಇಡೀ ಜಗತ್ತಿಗೇ ಸಾರಿದ ರಂಗವಿದ್ವಾಂಸ ಡಾ. ಎಚ್.ಕೆ. ರಂಗನಾಥ್ ಜನಿಸಿದ್ದು 1924ರಲ್ಲಿ. 1954ರಲ್ಲಿ 'ಕರ್ನಾಟಕ ಥಿಯೇಟರ್' ಎಂಬ ವಿಷಯದ ಕುರಿತು ಸಂಶೋಧನಾತ್ಮಕ ಪ್ರೌಢ ಪ್ರಬಂಧ ಬರೆದು ಪಿ.ಎಚ್.ಡಿ. ಪದವಿಯನ್ನು ಪಡೆಯುವ ಮುನ್ನವೇ ರಂಗನಾಥರು, ಕರ್ನಾಟಕ ನಾಟಕ ಸಭಾ ಎಂಬ ವೃತ್ತಿ ಕಂಪನಿಯಲ್ಲಿ ಬಾಲನಟರಾಗಿ, ನಂತರ ಕೈಲಾಸಂ, ಕಾರಂತ, ಕಸ್ತೂರಿಯವರಂಥವರ ಜೊತೆಗೆ ಅನೇಕ ಹವ್ಯಾಸೀ ನಾಟಕಗಳಲ್ಲಿ ಅಭಿನಯಿಸಿಯಾಗಿತ್ತು; ಆಕಾಶವಾಣಿಯ ನಾಟಕ ಲೇಖಕ ಹಾಗೂ ನಿರ್ದೇಶಕರಾಗಿ ಐದಾರು ವರ್ಷ ಸೇವೆ ಸಲ್ಲಿಸಿಯೂ ಆಗಿತ್ತು.

'ಜಾಗೃತ ಭಾರತಿ', 'ಅಮೃತ ವರ್ಷ' ಮೊದಲಾದ 50ಕ್ಕೂ ಮೀರಿ ರಂಗ ಹಾಗೂ ಬಾನುಲಿ ನಾಟಕಗಳನ್ನು ರಚಿಸಿದ್ದಾರೆ. ಅನೇಕ ಪ್ರತಿಷ್ಠಿತ ಪುರಸ್ಕಾರಗಳನ್ನೂ ಪಡೆದಿದ್ದಾರೆ. ಲಂಡನ್ ರಂಗಶಾಲೆಯಲ್ಲಿ ಕಾರಂತ, ಮಾಸ್ತಿ, ರಾಜರತ್ನಂ ಮತ್ತು ವಿ.ಸೀ.ಯವರ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಇವರು ಕರ್ನಾಟಕ ನಾಟಕ ಅಕಾಡೆಮಿ, ಕೇಂದ್ರ ಸಂಗೀತ ನಾಟಕ ಅಕಾಡೆಮಿ, ಐ.ಸಿ.ಸಿ.ಆರ್., ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಮಾಸ್ ಕಮ್ಯೂನಿಕೇಶನ್, ಯು.ಜಿ.ಸಿ., ಫಿಲ್ಮ್ ಸೆನ್ಸಾರ್ ಮಂಡಳಿ – ಇಂಥ ಹಲವಾರು ಸಂಸ್ಥೆ, ಸಮಿತಿಗಳ ಸದಸ್ಯರಾಗಿ ದುಡಿದಿದ್ದಾರೆ. ಅನೇಕ ರಾಷ್ಟ್ರೀಯ, ಅಂತಾರಾಷ್ಟ್ರೀಯ ಸಮ್ಮೇಳನ, ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ, ನಾಡಿನ ಕಲಾವಿದರ ತಂಡಗಳನ್ನು ದೇಶವಿದೇಶಗಳ ಪ್ರವಾಸಕ್ಕೆ ಕರೆದೊಯ್ದು ಕರ್ನಾಟಕದ, ಭಾರತದ ರಂಗಭೂಮಿ ಮತ್ತು ಸಾಂಪ್ರದಾಯಿಕ ಕಲೆಗಳ ವೈಭವವನ್ನು ಜಗತ್ತಿನಾದ್ಯಂತ ಬಿಂಬಿಸಿದ್ದಾರೆ. ಇಪ್ಪತ್ತು ವರ್ಷಗಳ ಕಾಲ ಆಕಾಶವಾಣಿಯಲ್ಲಿ ನಾಟಕ ಮತ್ತು

ರೂಪಕಗಳ ನಿರ್ಮಾಪಕ, ನಂತರವೂ ಆಕಾಶವಾಣಿ ಮತ್ತು ದೂರದರ್ಶನಗಳಲ್ಲಿ ಗೌರವ ನಿರ್ಮಾಪಕ, ಹತ್ತು ವರ್ಷಗಳ ಕಾಲ ಸಾಂಗ್ ಆ್ಯಂಡ್ ಡ್ರಾಮಾ ವಿಭಾಗದ ಪ್ರಾದೇಶಿಕ ನಿರ್ದೇಶಕ, ವಿವಿಧ ದೇಶೀಯ ಮತ್ತು ವಿದೇಶೀಯ ವಿಶ್ವವಿದ್ಯಾಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕ – ಹೀಗೆ ಸಾಂಪ್ರದಾಯಿಕ ಮತ್ತು ಆಧುನಿಕ ರಂಗಕಲೆಗಳ ಕುರಿತ ಚಿಂತನೆ, ಅಭಿವೃದ್ಧಿಯಲ್ಲಿ ತನ್ನನ್ನು ಅಹರ್ನಿಶಿ ತೊಡಗಿಸಿಕೊಂಡರು. ಆ ನೆಲೆಯಲ್ಲೇ 1982ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯಿಂದ ಪುರಸ್ಕೃತ ಜ್ಞಾನವೃದ್ಧ, ಡಾ. ಎಚ್.ಕೆ. ರಂಗನಾಥ್ ಪ್ರಸ್ತುತ ಭಾರತೀಯ ವಿದ್ಯಾಭವನದ ಅಂಗ ಸಂಸ್ಥೆಯಾದ 'ಗಾಂಧಿ ಸೆಂಟರ್ ಆಫ್ ಸೈನ್ಸ್ ಆ್ಯಂಡ್ ಹ್ಯೂಮನ್ ವ್ಯಾಲ್ಯೂಸ್' ಸಂಸ್ಥೆಯ ಗೌರವ ನಿರ್ದೇಶಕರಾಗಿದ್ದಾರೆ.

---



## ಜಿ.ಎನ್. ರಂಗನಾಥರಾವ್ (ಫೆಲೋಶಿಪ್)

ನಾಟಕ ರಂಗಭೂಮಿಯ ಮೇಲೆ ನಾಟಕ ಒಂದು ಆಯಾಮ ಪಡೆದು ಪ್ರೇಕ್ಷಕರನ್ನು ಮುಟ್ಟಿದರೆ, ಅದರ ಕುರಿತಾದ ಬರಹದಲ್ಲಿ ಅದು ಇನ್ನೊಂದು ಆಯಾಮ ಪಡೆದು ಲಕ್ಷಾಂತರ ಓದುಗರನ್ನು ಮುಟ್ಟುತ್ತದೆ. ಇಂಥ ಸಾರ್ಥಕ ಕೆಲಸವನ್ನು ಮಾಡುತ್ತಾ ಬಂದವರಲ್ಲಿ ಪ್ರಮುಖರು ಜಿ.ಎನ್. ರಂಗನಾಥರಾವ್. ಕಳೆದ ಮೂವತ್ತೈದು ವರ್ಷಗಳಿಂದ ಪತ್ರಿಕೋದ್ಯಮದಲ್ಲಿ ದುಡಿದು ಪಕ್ವವಾದ ಇವರು 1942ರಲ್ಲಿ ಹುಟ್ಟಿದ್ದು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹಾರೋಹಳ್ಳಿಯಲ್ಲಿ. ಬಾಲ್ಯದಿಂದಲೂ ರಂಗಭೂಮಿಯ ನಂಟು, ಅಭಿಯನ, ಮೇಕಪ್ ಮತ್ತು ರಂಗಸಜ್ಜಿಕೆ ಮುಖ್ಯ ಕಾಳಜಿಗಳು. ಬೆಂಗಳೂರಿನ 'ಚಿತ್ರ ಕಲಾವಿದರು' ಹವ್ಯಾಸಿ ತಂಡದಲ್ಲಿ ದಾಶರಥಿ ದೀಕ್ಷಿತ್, ಎ.ಎಸ್. ಮೂರ್ತಿ, ನವರತ್ನರಾಮ್, ಎ.ಎಲ್. ಶ್ರೀನಿವಾಸಮೂರ್ತಿ ಮುಂತಾದವರೊಂದಿಗೆ 1960–67ರ ವರೆಗೆ ಸಕ್ರಿಯವಾಗಿ ದುಡಿದಿದ್ದಾರೆ. ರಂಗನಾಥ ರಾವ್‌ರವರ ವೈಶಿಷ್ಟ್ಯವಿರುವುದು ರಂಗಸಾಹಿತ್ಯ ಕ್ಷೇತ್ರದಲ್ಲಿ. 'ಸಿದ್ಧಾರ್ಥ' ಮತ್ತು 'ಹಾವು ಹೊಕ್ಕ ಮನೆಗಳು' ಇವರ ಸ್ವತಂತ್ರ ನಾಟಕ ಕೃತಿಗಳು. ಇವಲ್ಲದೆ ಬ್ರೆಕ್ಟನ ಕಕೇಸಿಯನ್ ಚಾಕ್ ಸರ್ಕಲ್' ಹಾಗೂ ಜೀನ್ ಅನ್ವಿಯ 'ಅಂತಿಗೊನೆ' ಇವುಗಳ ಅನುವಾದವನ್ನೂ ಮಾಡಿದ್ದಾರೆ. ಇವರು ಬೆಂಗಳೂರು ವಿಶ್ವವಿದ್ಯಾನಿಲಯಕ್ಕಾಗಿ ಬರೆದ 'ಮಾಸ್ತಿಯವರ ನಾಟಕಗಳು' ಎಂಬ ಕೃತಿ ಕನ್ನಡದಲ್ಲಿ ಪ್ರಪ್ರಥಮವಾಗಿ ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರರನ್ನು ನಾಟಕಕಾರರಾಗಿ ಗುರುತಿಸುವ ವಿಮರ್ಶಾತ್ಮಕ ಗ್ರಂಥ. ಇದಲ್ಲದೇ 'ಹೊಸ ತಿರುವು', 'ಒಳನೋಟ', 'ಸೃಜನಶೀಲ', 'ಹಿಂದಣ ಹೆಜ್ಜೆ' ಇವು ವಿಮರ್ಶಾ ಕ್ಷೇತ್ರಕ್ಕೆ ಅವರು ನೀಡಿದ ಕೊಡುಗೆಗಳು. ರಂಗನಾಥ ರಾವ್ ಅವರು ಫ್ರಾನ್ಸ್ ಕಾಫ್ಕಾನ ಏಳು ಕಥೆಗಳನ್ನು ಹಾಗೂ ಅಲೆಕ್ಸಾಂಡರ್ ಸೋಲ್ಜೆ ನಿಟ್ಸಿನ, 'ಇವಾನ್ ಡೆನಿಸೋವಿಚ್‌ನ ಜೀವನದಲ್ಲಿ ಒಂದು ದಿನ' ಕಾದಂಬರಿಯನ್ನೂ ಅನುವಾದಿಸಿದ್ದಾರೆ.

ಕಳೆದ ಮೂವತ್ತೈದು ವರ್ಷಗಳಿಂದ ಪತ್ರಿಕೋದ್ಯಮದಲ್ಲಿ ತೊಡಗಿರುವ ಜಿ.ಎನ್. ರಂಗನಾಥರಾವ್‌ರವರು ಆಗಿನಿಂದಲೂ 'ಪ್ರಜಾವಾಣಿ', 'ಸುಧಾ' ಪತ್ರಿಕೆಗಳಲ್ಲಿ ನಾಟಕ ವಿಮರ್ಶೆ, ರಂಗಭೂಮಿ ಕುರಿತು ಲೇಖನಗಳನ್ನು ಬರೆಯುತ್ತಲಿದ್ದಾರೆ. ಪತ್ರಿಕೋದ್ಯಮ ಮತ್ತು ಸಾಹಿತ್ಯದಲ್ಲಿ ಮೂರು ದಶಕಗಳಿಗೂ ಹೆಚ್ಚು ಕಾಲ ಸಲ್ಲಿಸಿರುವ ಸೇವೆಯನ್ನು ಗುರ್ತಿಸಿ, ಮಂಗಳೂರಿನ ಸಂದೇಶ ಫೌಂಡೇಶನ್ ಫಾರ್ ಕಲ್ಚರ್ ಆ್ಯಂಡ್ ಎಜುಕೇಶನ್ ಪ್ರತಿಷ್ಠಾನ ನೀಡಿದ 1995ರ 'ಸಂದೇಶ' ಪ್ರಶಸ್ತಿ ಪುರಸ್ಕೃತರಾದ ಜಿ.ಎನ್. ರಂಗನಾಥ ರಾವ್‌ರವರು ಪ್ರಸ್ತುತ 'ಪ್ರಜಾವಾಣಿ', 'ಸುಧಾ', 'ಮಯೂರ' ಪತ್ರಿಕೆಗಳ ಕಾರ್ಯನಿರ್ವಾಹಕ ಸಂಪಾದಕರಾಗಿದ್ದಾರೆ.

---



## ಡಾ. ವೀರಣ್ಣ ರಾಜೂರ (ಫೆಲೋಶಿಪ್)

ಸಂಗ್ರಹ, ದಾಖಲೀಕರಣ, ವಿಮರ್ಶೆ, ಅಕಾಡೆಮಿಕ್ ವಲಯದ ಚರ್ಚೆಗಳಿಂದ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಕನ್ನಡ ವೃತ್ತಿ ರಂಗಭೂಮಿಯ ಕಡೆಗೆ ವಿದ್ವಾಂಸರು ಗಮನ ಹರಿಸಿದ್ದು ತೀರಾ ಇತ್ತೀಚೆಗೆ. ಇಂಥವರ ಪೈಕಿ ಒಬ್ಬರು ಡಾ. ವೀರಣ್ಣ ರಾಜೂರ. ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕು ಬೆನಕನಾಳದಲ್ಲಿ 1947ರಲ್ಲಿ ಜನಿಸಿದ ವೀರಣ್ಣನವರು ಬಾಲ್ಯದಿಂದಲೇ ಹಳ್ಳಿಯ ನಾಟಕಗಳಲ್ಲಿ ಪಾತ್ರ ವಹಿಸುತ್ತಿದ್ದರು.

ತಮ್ಮ ಹುಟ್ಟೂರಿನಲ್ಲಿ 'ಶ್ರೀ ಜಗಜ್ಯೋತಿ ಬಸವೇಶ್ವರ ನಾಟ್ಯ ಸಂಘ' ಸ್ಥಾಪಿಸಿ ಪ್ರತಿ ವರ್ಷ ಸುಗ್ಗಿಯಲ್ಲಿ ರಜೆಗೆ ಊರಿಗೆ ಹೋದಾಗ ಒಂದಾದರೂ ನಾಟಕವನ್ನು ನಿರ್ದೇಶಿಸಿ ಪಾಲ್ಗೊಳ್ಳದಿದ್ದರೆ ಅವರಿಗೆ ತೃಪ್ತಿಯೇ ಇಲ್ಲ. ಇವುಗಳಲ್ಲಿ ಹಲವು ತಾವೇ ರಚಿಸಿದ ನಾಟಕಗಳು. ಈಗಲೂ ಹಳ್ಳಿಯಲ್ಲಿ ನಾಟಕ ಸಂಘಟನೆ, ನಿರ್ದೇಶನದ ಗೀಳು ಅವರನ್ನು ಬಿಟ್ಟಿಲ್ಲ.

ಧಾರಾವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಮೇಲೇರುತ್ತಾ ಹೋದಂತೆ ವೃತ್ತಿ ರಂಗಭೂಮಿ, ಹಳ್ಳಿಗಾಡಿನ ನಾಟಕಗಳಲ್ಲಿ ಅವರ ಆಸಕ್ತಿ ಕಡಿಮೆಯಾಗಲಿಲ್ಲ, ಬದಲಿಗೆ ಹೆಚ್ಚುತ್ತಾ ಹೋಯಿತು. ತಮ್ಮ ಬಳಿ ಪಿ.ಎಚ್.ಡಿ. ಅಧ್ಯಯನಕ್ಕಾಗಿ ಬಂದ ವಿದ್ಯಾರ್ಥಿಗಳಿಗೆಲ್ಲಾ ಅವರು ರಂಗಭೂಮಿ ಹುಚ್ಚು ಹಿಡಿಸಿದರು. ಅವರು ಮಾರ್ಗದರ್ಶನ ನೀಡಿದ ಬಹುತೇಕ ಪ್ರಬಂಧಗಳು ನಿರ್ಲಕ್ಷಿತ ರಂಗಭೂಮಿ ಕುರಿತಾಗಿವೆ ಎಂಬುದೊಂದು ವಿಶೇಷ.

ಎಂಟು ನಾಟಕಗಳು, ಒಂಭತ್ತು ಏಕಾಂಕ, ಮೂರು ಬಾನುಲಿ ನಾಟಕಗಳನ್ನು ಇದುವರೆಗೆ ಪ್ರಕಟಿಸಿದ್ದಾರೆ. 11 ಬಾನುಲಿ ನಾಟಕಗಳು ಪ್ರಸಾರಗೊಂಡಿವೆ. 5 ನಾಟಕಗಳು ಹಸ್ತಪ್ರತಿಯಲ್ಲಿವೆ. ಇವುಗಳಲ್ಲಿ ಐದು ನಾಟಕಗಳನ್ನು ಹಳ್ಳಿ ಜನರಿಗಾಗಿ ರಚಿಸಿದ್ದಾರೆ. ರಂಗಭೂಮಿಗೆ ಸಂಬಂಧಪಟ್ಟ 20 ಲೇಖನಗಳನ್ನು ಪ್ರಕಟಿಸಿರುವ ಡಾ. ವೀರಣ್ಣ ಈ ಕುರಿತ 25 ವಿಚಾರ ಸಂಕಿರಣಗಳಲ್ಲಿ ಉಪನ್ಯಾಸ ನೀಡಿದ್ದಾರೆ.

ಧಾರವಾಡದ 'ಅಂತರಂಗ', 'ರಂಗಭೂಮಿ' ಎಂಬ ಪ್ರತಿಷ್ಠಿತ ರಂಗ ಸಂಸ್ಥೆಗಳ ಸಕ್ರಿಯ ಸದಸ್ಯರಾಗಿ ದುಡಿದಿರುವುದರ ಜೊತೆಗೆ ಧಾರವಾಡದಲ್ಲಿ 'ಕಲಾನುಭವ ಮಂಟಪ' ಸ್ಥಾಪಿಸಿ ರಂಗ ಚಟುವಟಿಕೆಗಳಲ್ಲಿ ನಿರತರಾಗಿದ್ದಾರೆ. ಇದುವರೆಗೆ ಸುಮಾರು 25 ನಾಟಕಗಳಲ್ಲಿ ಅಭಿನಯಿಸಿದ ಡಾ. ರಾಜೂರರು 30 ನಾಟಕಗಳನ್ನು ನಿರ್ದೇಶಿಸಿದ್ದಾರೆ.

---



## ಅಬ್ಬಾಸ್ ಅಲಿ

'ಅಬ್ಬಾಸಲಿ', ಅಬ್ಬಾಸಣ್ಣ' – ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯಲ್ಲಿ, 'ನಗೆ ಗಾರುಡಿಗ' ಎಂದೇ ಪ್ರಸಿದ್ಧಿಯಾಗಿರುವ, ಮೋಡಿಹಾಕುವ ಒಂದು ಪ್ರೀತಿಯ ಹೆಸರು. ಇಳಕಲ್ಲಿನ ಬಡಕುಟುಂಬದಲ್ಲಿ 1924ರಲ್ಲಿ ಜನಿಸಿದ ಅಬ್ಬಾಸಲಿ ಬಾಲ್ಯದಲ್ಲಿಯೇ ತಮ್ಮ ತಂದೆ ಹುಸೇನ್ ಸಾಬ್ ಅಳವಾಡಿ ಅವರನ್ನು ಕಳೆದುಕೊಂಡರು. ಮುದ್ದೇಬಿಹಾಳದ ತಮ್ಮಣ್ಣನವರ ಆಶ್ರಮದಲ್ಲಿ ಬೆಳೆದರು.

ಹುಡುಗನ ಬಯಲಾಟದ ಆಸಕ್ತಿ ಗಮನಿಸಿದ ತಬಲಾಜಿ ಸೋಮಣ್ಣ ಲಿಂಗಸೂರ ಅವರು 15 ವರ್ಷದ ಬಾಲಕ ಅಬ್ಬಾಸನನ್ನು ದಾವಣಗೆರೆಯ ಜಯಲಕ್ಷ್ಮಿ ನಾಟಕ ಸಂಘಕ್ಕೆ ಸೇರಿಸಿದರು. ಅಲ್ಲಿ ಅಬ್ಬಾಸಲಿ 'ಭೌಮಾಸುರ', 'ಹೇಮರೆಡ್ಡಿ ಮಲ್ಲಮ್ಮ', 'ದೇವದಾಸಿ' ನಾಟಕಗಳ ಸ್ತ್ರೀ ಪಾತ್ರಗಳಿಂದ ಎಲ್ಲ ಬಗೆಯ ಪಾತ್ರಗಳಲ್ಲೂ

ಅಭಿನಯಿಸುವ ಅವಕಾಶ ಪಡೆದರು 5–6 ವರ್ಷಗಳ ನಂತರ ಇಳಕಲ್ಲಿಗೆ ವಾಪಾಸಾದರೂ ನಾಟಕದ ಸೆಳೆತ ಅವರನ್ನು ಬಿಡಲಿಲ್ಲ. ಇಳಕಲ್ಲಿನ ಬನಶಂಕರಿ ನಾಟ್ಯ ಸಂಘ, ಹೆಡಸೂರ ಕಂಪನಿ, ಸಂಗಪ್ಪನವರ ಕಂಪನಿಗಳಲ್ಲಿ ಹತ್ತಾರು ವರ್ಷ ಬಗೆಬಗೆಯ ಪಾತ್ರಗಳಲ್ಲಿ ವಿಶೇಷವಾಗಿ ಹಾಸ್ಯ ಪಾತ್ರಗಳಲ್ಲಿ ಎತ್ತಿದ ಕೈ ಎನಿಸಿಕೊಂಡರು. ಇದೇ ವಿಶ್ವಾಸವನ್ನು ಆಧರಿಸಿ ಗೆಳೆಯರೊಂದಿಗೆ ಸೇರಿ ಮಹಾಕೂಟೇಶ್ವರ ನಾಟ್ಯಸಂಘ, ಕಾಕನೂರು ಮತ್ತು ಕುಮಾರೇಶ್ವರ ನಾಟ್ಯಸಂಘ, ಶಿವಯೋಗ ಮಂದಿರ ಆರಂಭಿಸಿದರು. ಸಿಂಧನೂರು, ಹೊಸಪೇಟೆ, ಬಾದಾಮಿಗಳಲ್ಲಿ ಕ್ಯಾಂಪು ಮಾಡಿದ ಕಂಪನಿ ದಾವಣಗೆರೆಯಲ್ಲಿ ಹಲವು ವರ್ಷಗಳ ಕಾಲ ನಾಟಕ ಪ್ರದರ್ಶನ ನಡೆಸಿ ಹೊಸ ದಾಖಲೆಯನ್ನೇ ಸ್ಥಾಪಿಸಿತು. ವಿಠಲ ಸಾ ಖಟವಟೆ, ಯಲಿವಾಳ ಸಿದ್ಧಯ್ಯ ಸ್ವಾಮಿ, ದುರ್ಗಾದಾಸ, ಎಚ್.ಟಿ. ಅರಸು, ಕುಕನೂರು ರಹಿಮಾನವ್ವರಂತಹ ಘಟಾನುಘಟಿಗಳ ಜೊತೆ ಅಭಿನಯಿಸಿ ಬೆನ್ನು ತಟ್ಟಿಸಿಕೊಂಡ ಅಬ್ಬಾಸಲಿ ಪಾತ್ರವನ್ನು ಕೃತಕವಾಗಿಸದೇ, ಅತಿರಂಜಿಸದೇ ಸಮರ್ಥವಾಗಿ ಅಭಿನಯಿಸುವ ಮೇರು ನಟ.

ಅಬ್ಬಾಸಲಿಯವರ ಹಾಸ್ಯಪಾತ್ರ ನೋಡಿದ ಸತ್ಯಕಾಮರು 'ಹಾಸ್ಯ ಇವರಿಂದಲೇ ಜನ್ಮತಾಳಿರಬೇಕು' ಎಂದು ಉದ್ಗಾರ ತೆಗೆದರು: 'ಇವರು ಬರೀ ನಡೆಗಾರರಲ್ಲ, ನಗೆಯ ದೊರೆ' ಎಂದು ಜಯತೀರ್ಥ ರಾಜಪುರೋಹಿತರು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

---



## ಉಮಾಶ್ರೀ

ತಮ್ಮ 20ನೇ ವಯಸ್ಸಿನಿಂದಲೇ ಹಳ್ಳಿಗಳ ನಾಟಕಗಳಲ್ಲಿ ಅಭಿನಯಿಸಲಾರಂಭಿಸಿ ಇಂದಿನ ಕನ್ನಡ ರಂಗಭೂಮಿ, ಚಲನಚಿತ್ರ, ದೂರದರ್ಶನದ ಪ್ರಖ್ಯಾತ ನಟಿ ಎನಿಸಿಕೊಂಡಿರುವ ಉಮಾಶ್ರೀ ಸ್ವಾತಂತ್ರ್ಯ ಹೋರಾಟಗಾರ ದಿ॥ ಡಿ. ಮುನಿನರಸಪ್ಪನವರ ದತ್ತು ಪುತ್ರಿ, ತುಮಕೂರು ಜಿಲ್ಲೆ ನೊಣವಿನಕೆರೆಯಲ್ಲಿ 1957ರಲ್ಲಿ ಜನನ. ಹಿಂದುಳಿದ ವರ್ಗದಿಂದ ಬಂದ ಇವರು ಬಡತನದಿಂದಾಗಿ ಪಿ.ಯು.ಸಿ.ಗೇ ವಿದ್ಯಾಭ್ಯಾಸವನ್ನು ಮೊಟಕುಗೊಳಿಸಿ ನಟನೆಯನ್ನೇ ವೃತ್ತಿಯಾಗಿ ಸ್ವೀಕರಿಸಿದರು. ಹಳ್ಳಿ ನಾಟಕಗಳಿಂದ ಆರಂಭಿಸಿದ ಉಮಾಶ್ರೀ ಮುಂದೆ ಬೆಂಗಳೂರಲ್ಲಿ ನೆಲೆ ನಿಂತು, ನಗರದ ಹವ್ಯಾಸಿ ಕ್ರೈಸ್ತಾರಿಕಾ ರಂಗಭೂಮಿ, ವೃತ್ತಿ ನಾಟಕ – ಹೀಗೆ ಎಲ್ಲ ಕ್ಷೇತ್ರಗಳ ಅಭಿನಯದ ಗರಡಿಯಲ್ಲಿ ಪಳಗುತ್ತಾ ಹೋದರು.

ಹವ್ಯಾಸಿ ರಂಗಭೂಮಿಯ ಸಂಗ್ಯಾಬಾಳ್ಯ, ತೊಘಲಕ್, ಹರಕೆಯ ಕುರಿ, ಯಯಾತಿ ನಾಟಕಗಳಲ್ಲಿ ಹೆಸರು ಮಾಡಿದ ಉಮಾಶ್ರೀ ಸಿಜಿಕೆಯವರ ಒಡಲಾಳದ ಸಾಕವ್ವನಾಗಿ ತನ್ನೆಲ್ಲಾ ಪ್ರತಿಭೆಯನ್ನು ಧಾರೆ ಎರೆದು ನಟಿಸಿದರು. ಸ್ಪರ್ಧಾ ನಾಟಕಗಳಲ್ಲಿ ಭಾಗವಹಿಸಿ ಹತ್ತಾರು ಬಹುಮಾನ ಗಿಟ್ಟಿಸಿದ ಉಮಾಶ್ರೀ 1980ರಲ್ಲಿ ಚಿತ್ರರಂಗ ಸೇರಿ ಗಮನ ಸೆಳೆದರೂ ಇವರ ಪ್ರಮುಖ ಒಲವು ರಂಗಭೂಮಿಯೇ ಆಗಿತ್ತು. ಚಿತ್ರರಂಗದಿಂದ ಹಿಂತಿರುಗಿ ನೋಡಿದಾಗ ನಗರದ ಹವ್ಯಾಸಿ ನಾಟಕಗಳು ಹೆಚ್ಚು ಕಡಿಮೆ ಸ್ಥಗಿತವಾಗಿದ್ದವು. ವೃತ್ತಿ ನಾಟಕ ಕಂಪನಿ ಕಡೆ ಮುಖ ಮಾಡಿದಾಗ ಅವಕಾಶಗಳು ಕೈಬೀಸಿ ಕರೆದು, ಬಸ್ ಕಂಡಕ್ಟರ್, ಚಿನ್ನದ ಗೊಂಬೆ, ನನ್ನ ಗಂಡನ ಹೆಂಡತಿ, ಬದುಕು ಬಂಗಾರವಾಯ್ತು, ಮಲಮಗಳು ನಾಟಕಗಳ ಮೂಲಕ ಉಮಾಶ್ರೀ ಜನಪ್ರಿಯ ನಟಿಯಾದರು.

'ಸಂಸಾರದಲ್ಲಿ ಸರಿಗಮ' ಹಗಲಿನ ಪ್ರದರ್ಶನದಲ್ಲಿ ಅಭಿನಯಿಸಿ, ಸಂಜೆ ರವೀಂದ್ರ ಕಲಾಕ್ಷೇತ್ರದ ಪ್ರೇಕ್ಷಕರಿಗೆ 'ಒಡಲಾಳ'ದ ಸಾಕವ್ವನಾಗಿ, ಅದೇ ರಾತ್ರಿ ಯಾವುದಾದರೂ ಹಳ್ಳಿಯ ಪೌರಾಣಿಕ ನಾಟಕದಲ್ಲಿ ದ್ರೌಪದಿಯಾಗಿ ಅಭಿನಯಿಸುವಷ್ಟು 'ಬಿಜಿ'ಯಾದ ಈ ನಟಿ ವೈವಿಧ್ಯಪೂರ್ಣವಾದ ಕನ್ನಡ ರಂಗಭೂಮಿ ಸೃಷ್ಟಿಸಿದ ಒಂದು ಅಪೂರ್ವ ಪ್ರತಿಭೆ.

---



## ಎಚ್.ಕೆ. ಕರ್ಕೇರ

ಸುಮಾರು ವರ್ಷಗಳಿಂದ ಮುಂಬಯಿಯಲ್ಲಿ ನೆಲೆಸಿ ಅಲ್ಲಿ ಕನ್ನಡ ರಂಗಭೂಮಿಯನ್ನು ಪ್ರತಿ-ದೃಷ್ಟಿಸುತ್ತಿರುವ, 68ರ ವಯಸ್ಸಿನ ದಣಿವರಿಯದ ಕಾರ್ಯಕರ್ತ ಎಚ್.ಕೆ. ಕರ್ಕೇರ ಮೂಲತಃ ದಕ್ಷಿಣ ಕನ್ನಡದ ಹೊಸಬೆಟ್ಟುವಿನವರು. ಮುಂಬಯಿ ವಿಶ್ವವಿದ್ಯಾಲಯದಿಂದ ಎಂ.ಎ. ಪದವಿ. ನಂತರ ಪ್ರಯಾಗ ವಿಶ್ವವಿದ್ಯಾಲಯದಿಂದ ಹಿಂದಿಯಲ್ಲಿ ಸಾಹಿತ್ಯ ವಿಶಾರದ. ಕರ್ಕೇರ ಅವರು ಉತ್ತಮ ಸಂಘಟಕರು ಎಂಬುದಕ್ಕೆ ಅವರು ಕಟ್ಟಿ ಬೆಳೆಸಿದ 'ಪ್ರೇರಣಾ' ಒಂದು ಸಕ್ರಿಯ ಸಾಕ್ಷಿ. ಆರಂಭದಿಂದಲೂ ನಿರಂತರವಾಗಿ ಕನ್ನಡ ನಾಟಕಗಳೂ ಸೇರಿದಂತೆ ವಿವಿಧ ರಂಗ ಚಟುವಟಿಕೆಗಳನ್ನು ನಡೆಸುತ್ತಾ ಬಂದಿರುವ ಈ ಸಂಸ್ಥೆ 1996ರಲ್ಲಿ ತನ್ನ ಬೆಳ್ಳಿ ಹಬ್ಬವನ್ನು ಆಚರಿಸಿದೆ. ಕರ್ನಾಟಕ ನಾಟಕ ಅಕಾಡೆಮಿಯೊಂದಿಗೆ, ರಾಜ್ಯದ ರಂಗಭೂಮಿಯೊಂದಿಗೆ ಸಕ್ರಿಯ ಸಹಯೋಗ ಹೊಂದಿರುವ ಕರ್ಕೇರ ಅವರು ಇಲ್ಲಿನ ಅನೇಕ ನಾಟಕ ತಂಡಗಳನ್ನು, ಕಲಾವಿದರನ್ನು ಮುಂಬಯಿಗೆ ಕರೆಸಿಕೊಂಡು ಅಲ್ಲಿನ ಹೊರನಾಡ ಕನ್ನಡಿಗರಿಗೆ ತಾಯ್ನಾಡಿನ ಧ್ವನಿ ದೃಶ್ಯಗಳ ಮುದವನ್ನು ಉಣಬಡಿಸಿದ್ದಾರೆ. ಅವರಿಗೂ ಕನ್ನಡ ನಾಟಕಗಳಲ್ಲಿ ಅಭಿನಯಿಸುವ, ನೇಪಥ್ಯದಲ್ಲಿ ಕೆಲಸಮಾಡುವ ಅನೇಕ ಅವಕಾಶಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಬಿಡುವಿಲ್ಲದ ಸಂಘಟನಾ ಕಾರ್ಯದಲ್ಲೂ ಕರ್ಕೇರ ಅವರು ಒಂದಷ್ಟು ಸಮಯ ಮಾಡಿಕೊಳ್ಳುವುದು ಸಾಹಿತ್ಯ ರಚನೆಗಾಗಿ. ಬದುಕು ಜಟಕಾ ಬಂಡಿ, ಅಗ್ನಿ ಸಂಸ್ಕಾರ ಇಂಥವರೂ ಇದ್ದಾರೆ, ಪ್ರಗತಿ ಏನು ಗತಿ, ಬೆಂಬಿಡದ ಭೂತ, ಉದರ ನಿಮಿತ್ತಂ ಮುಂತಾದ ನಾಟಕಗಳನ್ನು ಏಕಾಂಕಗಳನ್ನು ಇವರು ರಚಿಸಿದ್ದಾರೆ. ಇವೆಲ್ಲವೂ ರಂಗದ ಮೇಲೆ ಪ್ರದರ್ಶನ ಕಂಡಿವೆ. ಮರಾಠಿ ಭಾಷೆಯಲ್ಲೂ ಸಮಸಮ ಪರಿಣತಿ ಉಳ್ಳ ಕರ್ಕೇರ ಅವರು ಆ ಭಾಷೆಯಿಂದ ಕನ್ನಡಕ್ಕೆ ತಂದ ನಾಟಕಗಳೆಂದರೆ, ಪುರುಷ, ಕಾಲಚಕ್ರ, ರಕ್ತಸಂಬಂಧ, ಲಗ್ನ, ಇದಲ್ಲದೇ ಕನ್ನಡದಲ್ಲಿ ಇವರ ಲೇಖನಗಳು, ಕತೆಗಳು ಜನಪ್ರಿಯ ನಿಯತಕಾಲಿಕಗಳಲ್ಲಿ ಪ್ರಕಟವಾಗಿವೆ. ಕಥಾಸಂಕಲನ ಹೊರಬಂದಿವೆ. ಇವರ ಕತೆಗಳು ಮರಾಠಿ, ಗುಜರಾತಿ, ತೆಲುಗು ಭಾಷೆಗಳಲ್ಲಿಯೂ ಅನುವಾದವಾಗಿ ಪ್ರಕಟಗೊಂಡಿವೆ. ಹೀಗೆ ನಿರಂತರವಾಗಿ ಚಟುವಟಿಕೆಯಿಂದಿದ್ದು ಮುಂಬಯಿಯ ನೆಲದಲ್ಲಿಯೂ ಕನ್ನಡ ರಂಗಭೂಮಿಯನ್ನು ಜೀವಂತವಾಗಿರಿಸಿದ ಖ್ಯಾತಿ ಸಲ್ಲುತ್ತದೆ ಎಚ್.ಕೆ. ಕರ್ಕೇರ ಅವರಿಗೆ.

---



## ಟಿ.ಎಚ್. ಗಣೇಶ್

ಸುಪ್ರಸಿದ್ಧ ಸಂಗೀತ ವಾದ್ಯ ಕಲಾವಿದರ ವಂಶದಲ್ಲಿ ದಿ. ಹನುಮಂತಾಚಾರರ ಹಿರಿಯ ಪುತ್ರನಾಗಿ ಜನಿಸಿದ ಟಿ.ಎಚ್. ಗಣೇಶ್ ಬಾಲ್ಯದ ತಮ್ಮ ಸಂಗೀತಾಭ್ಯಾಸವನ್ನು ತಮ್ಮ ತಂದೆಯವರಿಂದಲೇ ಪಡೆದರು. ನಂತರ ಕೀರ್ತನ ಸುಧಾಂಬುಧಿ ವಿದ್ವಾನ್ ಎನ್. ಸಂಬಂಧಮೂರ್ತಿ, ಎಸ್.ಬಿ. ಕೇಶವಮೂರ್ತಿ, ಎಸ್.ಬಿ. ಮರಿಯಪ್ಪನರಂಥ ಹಿರಿಯ ಶ್ರೇಣಿಯ ವಿದ್ವಾಂಸರುಗಳ ಶಿಷ್ಯರಾಗಿ ಹಾಡುಗಾರಿಕೆ ಕಲೆಯನ್ನು ಮೈಗೂಡಿಸಿಕೊಂಡರು. ಗುಬ್ಬಿ ಶ್ರೀ ಚನ್ನಬಸವೇಶ್ವರಸ್ವಾಮಿ ಥಿಯೇಟ್ರಿಕಲ್ ಕಂಪನಿಯಲ್ಲಿ ಹದಿನೆಂಟು ಇಪ್ಪತ್ತು ವರ್ಷಗಳ ಕಾಲ ಉತ್ತಮ ಹಾರ್ಮೋನಿಯಂ ವಾದಕರಾಗಿ ಹಿನ್ನೆಲೆ ಗಾಯಕರೂ ಆಗಿ ಪ್ರಸಿದ್ಧಿ ಪಡೆದರು. ಈ ಕಂಪನಿಯ ನಾಟಕಗಳಲ್ಲಿ ಹಲವು ಪಾತ್ರಗಳನ್ನೂ ಗಣೇಶ್ ಅವರು ನಿರ್ವಹಿಸಿದ್ದಾರೆ. ತಮ್ಮ ಕಲಾಸೇವೆಯನ್ನು ಹೆಚ್ಚು ಅರ್ಥಪೂರ್ಣಗೊಳಿಸುವ ಪ್ರಯತ್ನವಾಗಿ, ಟಿ.ಎಚ್. ಗಣೇಶ್ ಅವರು ತಮ್ಮ ಸ್ವಂತ ಊರಿನಲ್ಲೇ 'ಚೇತನ ಸಂಗೀತ ಪಾಠಶಾಲೆ'ಯನ್ನು ಸ್ಥಾಪಿಸಿದರು. ಕಳೆದ ಇಪ್ಪತ್ತು ವರ್ಷಗಳಿಂದ ನಡೆದಿರುವ ಈ ಬೋಧನೆಯಿಂದಾಗಿ ಗ್ರಾಮೀಣ ಪ್ರದೇಶದಲ್ಲಿನ ಅನೇಕ ಸಂಗೀತ ಪ್ರತಿಭೆಗಳು ಬೆಳಕಿಗೆ ಬರಲು, ಉತ್ತಮಿಕೆಯನ್ನು ಪಡೆಯಲು ಸಹಾಯಕರಾಗಿದ್ದಾರೆ ಶ್ರೀ ಟಿ.ಎಚ್. ಗಣೇಶ್ ಅವರು.

---



## ಡಿ.ವಿ.ಎಸ್. ಗುಪ್ತ

ದಂಡಾ ವೆಂಕಟೇಶಯ್ಯ ಸೂರ್ಯನಾರಾಯಣ ಗುಪ್ತ ತಿಪಟೂರಿನ ವಣಿಕ ವೃತ್ತಿಯ ಕುಟುಂಬದಲ್ಲಿ ಜನಿಸಿದರೂ ಪ್ರವೃತ್ತಿಯಲ್ಲಿ ನಾಟಕ ಕ್ಷೇತ್ರದಲ್ಲಿಯೇ ತಮ್ಮನ್ನು ತೊಡಗಿಸಿಕೊಂಡವರು. ತಮ್ಮ ಹನ್ನೆರಡನೇ ವಯಸ್ಸಿಗೆ ರಂಗಪ್ರವೇಶ ಮಾಡಿದ ಗುಪ್ತರವರು ಮೊದಮೊದಲು ಪರ್ವತವಾಣಿಯವರ ನಾಟಕಗಳಲ್ಲಿ ಅಭಿನಯಿಸುವುದರೊಂದಿಗೆ ಆರಂಭಿಸಿಕೊಂಡರು. ನಂತರ ತಾನು ಓದಿದ ಶ್ರೀ ರೇಣುಕಾಚಾರ್ಯ ಕಾಲೇಜಿನಲ್ಲಿ ಪ್ರತಿ ವರ್ಷವೂ ಶ್ರೇಷ್ಠ ನಟ ಪುರಸ್ಕಾರವನ್ನು ಪಡೆದರು. ಪರ್ವತವಾಣಿಯವರು 'ಮುಕುತಿ–ಮೂಗುತಿ', 'ಪದ್ಮಾವತಿ ಪರಿಣಯ' ನಾಟಕಗಳಿಗೆ ನಿರ್ದೇಶನ ಮಾಡಿ ಹೆಸರು ಗಳಿಸಿದರು. ರಾಜ್ಯ ಮಟ್ಟದ ನಾಟಕ ಸ್ಪರ್ಧೆಯಲ್ಲಿ 'ಮುಕುತಿ–ಮೂಗುತಿ' ನಾಟಕ ಎಂಟು ವರ್ಗಗಳಲ್ಲಿ ಪ್ರಥಮ ಬಹುಮಾನವನ್ನು ಗಳಿಸಿತು. ನಂತರದ ದಿನಗಳಲ್ಲಿ ಗುಪ್ತ ನಟನೆ, ನಿರ್ದೇಶನಕ್ಕಿಂತ ರಂಗಭೂಮಿ ಸಂಘಟನೆಯಲ್ಲೇ ತಮ್ಮ ಹೆಚ್ಚಿನ ಒಲವನ್ನು ತೋರಿದರು. ತಾನೊಬ್ಬ ಉತ್ತಮ ನಿರ್ವಾಹಕ ಎಂಬುದನ್ನು ನಿಸ್ಸಂದಿಗ್ಧವಾಗಿ ಸಾಬೀತು ಪಡಿಸಿದರು. ರಾಜ್ಯದ ಹವ್ಯಾಸೀ ರಂಗಭೂಮಿಯ ಪಟುಗಳಾದ ಸಿ.ಜಿ.ಕೆ. ಶ್ರೀನಿವಾಸ್, ಜಿ. ಕಪ್ಪಣ್ಣ, ಕಾಸರಗೋಡು ಚಿನ್ನಾ, ಕೆ.ವಿ. ನಾಗರಾಜಮೂರ್ತಿ, ಬಿ.ವಿ. ರಾಜಾರಾಂ, ನಾಗೇಶ್, ಬಿ.ವಿ. ವೈಕುಂಠರಾಜು ಮುಂತಾದವರ ಅನುಭವದಿಂದ, ಎಂ.ಎಸ್. ನಾಗರಾಜ್‌ರಂಥ ಹಿರಿಯರ ಮಾರ್ಗದರ್ಶನದಿಂದ ಲಾಭ ಪಡೆದರು. ತಿಪಟೂರಿನಲ್ಲಿ 'ಅಭಿನಯ' ಎಂಬ ರಂಗಸಮೂಹವನ್ನು ಕಟ್ಟಿದರು. ಪುರುಷರ ತಂಡ. ಮಹಿಳೆಯರ ತಂಡ. ಮಕ್ಕಳ ತಂಡ ಹೀಗೆ ಮೂರು ಪ್ರತ್ಯೇಕ ತಂಡಗಳ ಒಂದು ಸಮನ್ವಯವಾದ 'ಅಭಿನಯ'ದ ಮೂಲಕ ಅನೇಕ ನಾಟಕ ಶಿಬಿರಗಳನ್ನು ಮಾಡಿಸಿದರು. ನಾಟಕಗಳನ್ನು ಆಡಿಸಿದರು. ಸುಮಾರು ಎಂಟು ನಾಟಕಗಳನ್ನು ಪ್ರಯೋಗಿಸಿದ ಇವರ ಮಹಿಳಾ ತಂಡದ 'ಕರಿಬಂಟ' ಅಖಿಲ ಭಾರತ ನಾಟಕ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಗಳಿಸಿತು. ಪುರುಷರ ತಂಡದಿಂದ ನಾಲ್ಕು, ಮಕ್ಕಳ ತಂಡದಿಂದ ಮೂರು ನಾಟಕಗಳು ಈಗಾಗಲೇ ಪ್ರಯೋಗಗೊಂಡಿವೆ. ಮಂಗಳೂರಿನ ಅಭಿವ್ಯಕ್ತಿ, ಬೆಂಗಳೂರಿನ ಸ್ಪಂದನ, ಹುಚ್ಚಪ್ಪ ಮಾಸ್ತರಅವರ ತಂಡ. ತುಮಕೂರಿನ ನಾಟಕ ಸಭಾ. ಶ್ರೀರಂಗರಂಗ, ಸಮ್ಮುಖ ಮುಂತಾದ ತಂಡಗಳನ್ನೂ ಕರೆಸಿಕೊಂಡು ಉತ್ತಮ ನಾಟಕ ಪ್ರಯೋಗಗಳ ರಸದೌತಣವನ್ನು ತಿಪಟೂರಿನ ಜನತೆಗೆ ಉಣಬಡಿಸುತ್ತಲೇ ಬಂದಿದ್ದಾರೆ ಡಿ.ವಿ.ಎಸ್.ಗುಪ್ತಾ.

---



## ವಿ.ಎಂ. ಗುರುಸ್ವಾಮಿ

ಮಂಡ್ಯ ಜಿಲ್ಲೆಯ ಸುಪ್ರಸಿದ್ಧ ತಬಲ ವಿದ್ವಾಂಸರಾದ ವಿ.ಎಂ. ಗುರುಸ್ವಾಮಿಯವರು ರಾಜ್ಯಾದ್ಯಂತ ನಾಟಕಗಳಿಗೆ ತಬಲ ವಾದನ ನೀಡಿ ಹೆಸರು ಗಳಿಸಿದವರು. ಇವರ ತಂದೆ ತಮಿಳುನಾಡಿನ ವಡಾರ್ಕಾಟ್ ಜಿಲ್ಲಾ ರಾಣಿಪೇಟೆಯ ವಾಣಾಪಾಡಿ ಗ್ರಾಮದ ಯಕ್ಷಗಾನ ಪಟು. ಮೃದಂಗವಾದಕ ಗುಂಡು ಮುನಿಸ್ವಾಮಿಯವರು. ಗುರುಸ್ವಾಮಿಯವರು ಬಾಲ್ಯದಲ್ಲಿ ಮೃದಂಗವಾದನವನ್ನು ತಂದೆಯಿಂದಲೇ ಕಲಿತು. ನಂತರ ಸಂಬಂಧಮೂರ್ತಿ ಭಾಗವತರ್ ಅವರ ಹತ್ತಿರ ಹೆಚ್ಚಿನ ವಿದ್ವತ್ತನ್ನು ಪಡೆದರು. ಚಿಕ್ಕವರಿರುವಾಗಲೇ ಬೆಂಗಳೂರು ನಗರದ ಶ್ರೀ ನೆಹರು ವಾದ್ಯಗೋಷ್ಠಿಯಲ್ಲಿ ತಬಲ ನುಡಿಸಲು ಪ್ರಾರಂಭಿಸಿ ಬೆಂಗಳೂರಷ್ಟೇ ಅಲ್ಲದೇ ತುಮಕೂರು ಜಿಲ್ಲೆಯಲ್ಲೂ ಹಲವಾರು ನಾಟಕಗಳಿಗೆ ತಬಲವಾದನ ಮಾಡಿದರು. ಪುಟ್ಟನ ಪಾಳ್ಯದ ಶ್ರೀ ಶನಿದೇವರ ನಾಟಕ ಮಂಡಳಿಯಲ್ಲಿ ಕೆಲವಾರು ವರ್ಷ ನಾಟಕಕ್ಕೆ ಸಹಕಾರ ನೀಡಿ ಹೆಸರು ಗಳಿಸಿದರು.

ನಂತರ ಕ್ಲಾ'ರಿಯೋನೆಟ್ ವಿದ್ವಾಂಸರಾದ ಮುನಿಸ್ವಾಮಪ್ಪನವರ ಮುಖಾಂತರ ಮಂಡ್ಯ ಜಿಲ್ಲೆಗೆ ಆಗಮಿಸಿದರು. ಮಂಡ್ಯದ ಸಕ್ಕರೆ ಕಂಪನಿಯ ಕೆಲಸಗಾರರ ಸಂಘದವರು. ಮಹಾರಾಜರಾದ ಶ್ರೀ ಜಯಚಾಮರಾಜೇಂದ್ರ

ಒಡೆಯರ್‌ರ ಸಮ್ಮುಖದಲ್ಲಿ ಪ್ರದರ್ಶನ ನೀಡಿದ 'ಅಮರಪ್ರೇಮ' ನಾಟಕಕ್ಕೆ ಗುರುಸ್ವಾಮಿಯವರು ನೀಡಿದ ವಾದ್ಯಸಹಕಾರ ವಿಶೇಷ ಮೆಚ್ಚುಗೆಯನ್ನು ಪಡೆಯಿತು.

ತದನಂತರ ಹೆಸರಾಂತ ನಾಟಕ ಕಂಪನಿಗಳಾದ ಶ್ರೀ ಚಾಮುಂಡೇಶ್ವರಿ ಮತ್ತು ಬ್ರಾಂಚ್ ಕಂಪನಿಯವರಾದ ಗುಂಡುರಾಯರು. ಕೊಟ್ಟೂರು ಬಸವಪ್ಪ, ವಿದ್ವಾನ್ ಸುಬ್ಬರಾಯರು, ಗಂಗಾಧರ ರಾಯರು. ಹೊಳಲು ಸುಬ್ರಹ್ಮಣ್ಯಶಾಸ್ತ್ರಿಗಳು ಮುಂತಾದವರ ಸಮ್ಮುಖದಲ್ಲಿ ಹಲವಾರು ವರ್ಷ ತಬಲ ನುಡಿಸಿ ಅವರ ಮೆಚ್ಚುಗೆಗೆ ಪಾತ್ರರಾಗಿದ್ದರು. ಮೈಸೂರು ಜಿಲ್ಲೆಯ ನೂರಾರು ಗ್ರಾಮಗಳಲ್ಲಿ ಗುರುಸ್ವಾಮಿಯವರು ಕಲಾವಿದರ ಮನೆಮಾತಾಗಿದ್ದಾರೆ.

---



## ಗೋಪಾಲ ವಾಜಪೇಯಿ

ನಾಟಕ ರಚನೆ, ಅನುವಾದ, ರೂಪಾಂತರ, ನಿರ್ದೇಶನ, ಸಂಘಟನೆ ಹೀಗೆ ರಂಗಭೂಮಿಯ ವಿವಿಧ ಆಯಾಮಗಳಲ್ಲಿ ಸರಾಗವಾಗಿ. ಸಮರ್ಥವಾಗಿ ತೊಡಗಿಸಿಕೊಂಡು ಯಶಸ್ವಿಯಾಗಬಲ್ಲ ಪ್ರತಿಭೆ. ಗೋಪಾಲ ವಾಜಪೇಯಿ ಹುಟ್ಟಿದ್ದು 1951ರಲ್ಲಿ. ಲಕ್ಷ್ಮೇಶ್ವರದಲ್ಲಿ. ಬೇಂದ್ರೆಯವರ ಗೆಳೆಯರ ಗುಂಪಿನ ಪ್ರಹ್ಲಾದ್ ನರೇಗಲ್ ಮತ್ತು ಬಂಗಾಳಿ ಕನ್ನಡಿಗ ಚಿತ್ತರಂಜನ ಚಟರ್ಜಿ ಇವರುಗಳ ಗರಡಿಯಲ್ಲಿ ಪಳಗಿದ ವಾಜಪೇಯಿ ನೀಡಿದ ಅಪೂರ್ವ ಕೊಡುಗೆಯೆಂದರೆ ಇತರ ಭಾಷೆಗಳ ಶ್ರೇಷ್ಠ ನಾಟಕ ಕೃತಿಗಳನ್ನು ಕನ್ನಡ ರಂಗಭೂಮಿಗೆ ಪರಿಚಯಿಸಿದ್ದು. ಉತ್ಪಲ್‌ದತ್, ಭೀಷ್ಮ ಸಹಾನಿ, ಮೋಹಿತ್ ಚಟರ್ಜಿ. ಪ್ರಭಾಕರ ರಾಣೆ, ಇವರಲ್ಲದೇ ಶೇಕ್ಸ್‌ಪಿಯರ್, ನಿಕೊಲಾಯ್ ಗಗೋಲ್, ಬರ್ಟೋಲ್ಟ್ ಬ್ರೆಕ್ಟ್‌ರಂಥ ಉದ್ದಾಮ ನಾಟಕಕಾರರ ಕೃತಿಗಳನ್ನು ಇವರು ಕನ್ನಡಕ್ಕೆ ರೂಪಾಂತರಿಸಿದ್ದಾರೆ.

ಗೋಪಾಲ್ ವಾಜಪೇಯಿಯರು ಹಲವು ಸ್ವತಂತ್ರ ನಾಟಕಗಳನ್ನೂ ರಚಿಸಿದ್ದಾರೆ. ಇವರ ಮೊದಲ ಸ್ವತಂತ್ರ ಕೃತಿ 'ದೊಡ್ಡಪ್ಪ'ಕ್ಕೆ ಕರ್ನಾಟಕ ನಾಟಕ ಅಕಾಡೆಮಿಯ 1958ರ ಸಾಲಿನ ಅತ್ಯುತ್ತಮ ನಾಟಕ ಪ್ರಶಸ್ತಿ ಲಭಿಸಿದ್ದಲ್ಲದೆ. ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಹುಬ್ಬಳ್ಳಿಯ ಮೂರು ಸಾವಿರ ಮಠದಿಂದಲೂ ಶ್ರೇಷ್ಠನಾಟಕವೆಂಬ ಶ್ಲಾಘನೆ ದೊರೆತಿದೆ. ಇವರ 'ಪ್ರುಲಪೇಡಿ' ಮತ್ತು 'ನಾ ಬೆಳೆದ ಬಾಳೀಯ ಸುಳಿಯಾಗ' ನಾಟಕಗಳಿಗೂ ವಿವಿಧ ಪ್ರಶಸ್ತಿ, ಪುರಸ್ಕಾರಗಳು ದೊರೆತಿವೆ.

ವಾಜಪೇಯಿ ಉತ್ತಮ ರಂಗಸಂಘಟಕರೂ. ಬೋಧಕರೂ ಹೌದು. ಕರ್ನಾಟಕ ನಾಟಕ ಅಕಾಡೆಮಿ ನೆರವಿನೊಂದಿಗೆ ವಿವಿಧ ಸಂಸ್ಥೆಗಳಿಗಾಗಿ ರಂಗ ತರಬೇತಿ, ಪ್ರಸಾಧನ ಶಿಬಿರ, ನೇಪಥ್ಯ ಶಿಬಿರಗಳನ್ನು ಏರ್ಪಡಿಸಿದ್ದಾರೆ. ಹಲವು ನಾಟಕೋತ್ಸವಗಳನ್ನೂ ನಡೆಸಿದ್ದಾರೆ.

ಆಕಾಶವಾಣಿಯ 'ಎ' ಶ್ರೇಣಿಯ ಕಲಾವಿದರಾದ ವಾಜಪೇಯಿ ಸುಮಾರು 70ಕ್ಕೂ ಹೆಚ್ಚು ಬಾನುಲಿ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಆರು ಬಾನುಲಿ ನಾಟಕಗಳನ್ನು ರಚಿಸಿದ್ದಾರೆ ಕೂಡ. ಇವರ 'ನಿಮಗಾದರೆ ಇರಲಿ, ನಮಗಾದರೆ ಬೇಡ' ನಾಟಕ ಸಾಗರೋತ್ತರ ಪ್ರಸಾರಕ್ಕಾಗಿ ಆಯ್ಕೆಯಾಗಿ ಇಂಗ್ಲೀಷ್‌ನಲ್ಲಿ ಅನುವಾದಗೊಂಡು ಪ್ರಸಾರವಾಗಿದೆ. ಶಂಕರ್‌ನಾಗ್ ಪ್ರಯೋಗದ 'ನಾಗಮಂಡಲ'ಕ್ಕಾಗಿ ಬರೆದ ಹಾಡುಗಳು. ಜಾನಪದ ಕಥಾನಕ ರೂಪದಲ್ಲಿ ರಚಿಸಿದ 'ಜೋಡಿಜೀವ', ಇವು ಸಿ. ಅಶ್ವತ್ಥ್ ಸಂಗೀತ ನಿರ್ದೇಶನದಲ್ಲಿ ಧ್ವನಿಸುರುಳಿ ರೂಪವನ್ನೂ ಪಡೆದಿವೆ. 1987–1990ರ ಅವಧಿಯಲ್ಲಿ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರೂ ಆಗಿದ್ದ ಬಹುಮುಖಿ ಪ್ರತಿಭಾವಂತ, ಗೋಪಾಲ ವಾಜಪೇಯಿ.

---

## ಗೋಪಾಲಕೃಷ್ಣ ನಾಯಿರಿ



ನಮ್ಮದೇ ಆದ ನಾಟಕ ಪರಂಪರೆಯ ಅಂಶದೊಂದಿಗೆ ಆಧುನಿಕ ಸಂವೇದನೆಯನ್ನು ಒಗ್ಗಿಸುವ ಸವಾಲನ್ನು ಕೈಗೆತ್ತಿಕೊಂಡಿರುವ ವಿಶಿಷ್ಟ ಪ್ರತಿಭೆಯ ರಂಗ ನಿರ್ದೇಶಕ ಗೋಪಾಲಕೃಷ್ಣ ನಾಯಿರಿ. ಯಾವುದೇ ಆಯೋಗದ ಪಟ್ಟಿಗೂ ನಿಲುಕದ ದಕ್ಷಿಣ ಕನ್ನಡ ಜಿಲ್ಲೆಯ 'ನಾಯಿರಿ' ಎಂಬ ಬುಡಕಟ್ಟು ಜನಾಂಗದಿಂದ ಬಂದು ಬೆಂಗಳೂರು ವಿಶ್ವವಿದ್ಯಾನಿಲಯದ ಬಿ.ಕಾಂ., ದೆಹಲಿಯ ರಾಷ್ಟ್ರೀಯ ನಾಟಕಶಾಲೆಯ ಪದವಿ ಪಡೆದದ್ದೇ ಒಂದು ಸಾಹಸ. ಇಷ್ಟಕ್ಕೇ ನಾಯಿರಿ ತೃಪ್ತರಲ್ಲ. ಪರಿಶಿಷ್ಟರ ಒಂದು ರಂಗ ರೆಪರ್ಟರಿ ಕಟ್ಟಬೇಕು, ಸಮಾನತೆ ಮಾನವೀಯತೆ ರಂಗಭೂಮಿಯಲ್ಲಿ ಸಾಕಾರಗೊಳ್ಳಬೇಕು. ಭಾರತೀಯರಿಗೆ ನಿಲುಕುವ ರಂಗಚಳುವಳಿ ರೂಪಿಸಬೇಕು ಎಂಬ ಕನಸುಗಳನ್ನು ತುಂಬಿಕೊಂಡಿರುವ ನಾಯಿರಿ ವ್ಯವಸ್ಥೆಯ ಭಾಗವಾಗಲೊಪ್ಪದವರು. ಆದ್ದರಿಂದಲೇ ದಕ್ಷಿಣ ಮಧ್ಯ ವಲಯ ಸಾಂಸ್ಕೃತಿಕ ಕೇಂದ್ರದ ಪ್ರಕಲ್ಪಾಧಿಕಾರಿಯಂಥ ಉನ್ನತ ಹುದ್ದೆಗೆ ರಾಜಿನಾಮೆ ಸಲ್ಲಿಸಿ ಬಂದವರು.

ಕಳೆದ 20 ವರ್ಷಗಳಿಂದ ರಂಗಭೂಮಿಯನ್ನು ಉಸಿರಾಗಿಸಿಕೊಂಡಿರುವ ನಾಯಿರಿ, ಕರ್ಣಭಾರ, ಊರುಭಂಗ, ಗುರುವಿನ ಗುಲಾಮ, ಬಾಕಿ ಇತಿಹಾಸ ಮುಂತಾದ 30ಕ್ಕೂ ಹೆಚ್ಚು ನಾಟಕಗಳನ್ನು ರಾಜ್ಯದ ವಿವಿದೆಡೆ ಹಲವು ತಂಡಗಳಿಗೆ ನಿರ್ದೇಶಿಸಿದ್ದಾರೆ. ನಾಯಿರಿ ಒಬ್ಬ ಅತ್ಯುತ್ತಮ ರಂಗಶಿಕ್ಷಕ ಹಾಗೂ ನಟರೂ ಹೌದು. 25ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿರುವ ನಾಯಿರಿ ಹತ್ತಾರು ಶಿಬಿರಗಳ ಮೂಲಕ ರಂಗಾಸಕ್ತರಿಗೆ ಮಾರ್ಗದರ್ಶನ ಮಾಡಿದ್ದಾರೆ. ರಂಗಶಿಬಿರಗಳಲ್ಲಿ ಇವರಷ್ಟು ಪರಿಣಾಮಕಾರಿಯಾಗಿ ಕಲಿಸುವವರು ಅಪರೂಪ.

ವಿದೇಶಗಳಿಗೆ ಭೇಟಿ ನೀಡಿ ಅಲ್ಲಿಯೂ ತಮ್ಮ ರಂಗ ಪ್ರಾತ್ಯಕ್ಷಿಕೆಗಳನ್ನು ನಾಯಿರಿ ನೀಡಿದ್ದಾರೆ. ಇವರ ಪ್ರತಿಭೆಯನ್ನು ಗುರ್ತಿಸಿ ಕೇಂದ್ರ ಸರಕಾರದ ಸಂಸ್ಕೃತಿ ಇಲಾಖೆಯು ಇವರನ್ನು 1984-85ರ ಅವಧಿಯಲ್ಲಿ ಪುರಸ್ಕರಿಸಿದೆ. ಇದರೊಂದಿಗೆ ಇವರು ನಿರ್ದೇಶಿಸಿದ ನಾಟಕಗಳೂ ಹಲವು ಪ್ರಶಸ್ತಿಗಳನ್ನು ಪಡೆದಿವೆ.

ರಂಗತಂಡಗಳ ಎಲ್ಲ ಕಷ್ಟ, ನೋವುಗಳೊಂದಿಗೆ ಮಿಡಿಯುತ್ತಾ, ಅನ್ಯಾಯ ಕಂಡಲ್ಲೆಲ್ಲಾ ರಂಗಭೂಮಿಗೆ ಕುತ್ತು ಬಂದಾಗಲೆಲ್ಲಾ ಒಬ್ಬಂಟಿಯಾಗಿಯಾದರೂ ಹೋರಾಡುವ ಕೆಚ್ಚು ಉಳಿಸಿಕೊಂಡಿರುವ ಧೀಮಂತ ಗೋಪಾಲಕೃಷ್ಣ ನಾಯಿರಿ.

---

## ಕೆ. ಚಂದ್ರಕುಮಾರ್ ಸಿಂಗ್



ರಂಗಭೂಮಿಯ ವಿವಿಧ ವಿಭಾಗಗಳಲ್ಲಿ ಸೇವೆ ಸಲ್ಲಿಸಿದ್ದರೂ ಚಂದ್ರಕುಮಾರ್ ಸಿಂಗ್ ಹೆಸರು ಮಾಡಿರುವುದು ಪ್ರಮುಖವಾಗಿ ಒಬ್ಬ ಸಮರ್ಥ ರಂಗಕರ್ಮಿ ಹಾಗೂ ಬೆಳಕು ವಿನ್ಯಾಸಕನಾಗಿಯೇ. 1949ರಲ್ಲಿ ಜನಿಸಿದ ಇವರು ಬಿ.ಎಸ್ಸಿ. ಪದವೀಧರರು. ಬಿ.ವಿ. ಕಾರಂತ್, ಗಿರೀಶ್ ಕಾರ್ನಾಡ್, ಶಂಕರನಾಗ್, ನಾಗಾಭರಣ, ಆರ. ನಾಗೇಶ್, ಪ್ರೇಮಾ ಕಾರಂತ್ ಮುಂತಾದ ಹೆಸರಾಂತ ನಿರ್ದೇಶಕರೊಂದಿಗೆ ದುಡಿದ ಚಂಕು ಸಿಂಗ್ ಅವರ ನಾಟಕಗಳಿಗೆ ಬೆಳಕುವಿನ್ಯಾಸ ನಿರ್ವಹಿಸಿದ್ದಾರೆ. ಹಾಗೂ ನೇಪಥ್ಯದಲ್ಲೂ ನೆರವಾಗಿದ್ದಾರೆ. ಹಯವದನ, ಸತ್ತವರ ನೆರಳು, ಸಂಕ್ರಾಂತಿ, ಹ್ಯಾಮ್ಲೆಟ್, ತಬರನ ಕಥೆ, ಅಂಜುಮಲ್ಲಿಗೆ, ಸದ್ದು ವಿಚಾರಣೆ ನಡೆಯುತ್ತಿದೆ – ಇವೇ ಮುಂತಾದ ನಾಟಕಗಳಿಗೆ ಇವರು ಸಮರ್ಥ ಬೆಳಕು ವಿನ್ಯಾಸಗೈದಿದ್ದಾರೆ.

ಉತ್ತಮ ಸಂಘಟಕರೂ ಆದ ಚಂದ್ರಕುಮಾರ್ ನಾಟ್ಯಸಂಘ ಥಿಯೇಟರ್ ಸೆಂಟರ್‌ನ ವತಿಯಿಂದ ನಡೆದ ರಾಷ್ಟ್ರ ಮಟ್ಟದ ನಾಟಕೋತ್ಸವದಲ್ಲಿ ನೇಪಥ್ಯ ಹಾಗೂ ಸಂಘಟನೆಯ ಕಾರ್ಯ ನಿರ್ವಹಿಸಿದ್ದಲ್ಲದೇ, ಸೋಮನಾಥಪುರ,

ಪಟ್ಟದಕಲ್ಲು, ಬೇಲೂರು ಹಳೇಬೀಡುಗಳಲ್ಲಿ ನಡೆದ ರಾಷ್ಟ್ರೀಯ ಸಾಂಸ್ಕೃತಿಕ ಉತ್ಸವ ಮತ್ತು ಸಾರ್ಕ್ ಹಾಗೂ ರಷ್ಯಾ ಸಾಂಸ್ಕೃತಿಕ ಉತ್ಸವಗಳು, ಲಂಡನ್ ಥಿಯೇಟರ್‌ಗಳು ಬೆಂಗಳೂರಲ್ಲಿ ನಡೆಸಿದ ನಾಟಕ ಪ್ರದರ್ಶನಗಳು – ಹೀಗೆ ಅನೇಕ ಅಂತಾರಾಷ್ಟ್ರೀಯ ಮಟ್ಟದ ಪ್ರದರ್ಶನ, ಉತ್ಸವಗಳಲ್ಲಿ ರಂಗಸಂಯೋಜನೆ, ಬೆಳಕಿನ ವಿನ್ಯಾಸದ ಹೊಣೆಯನ್ನು ಹೊತ್ತಿದ್ದಾರೆ. ತಮ್ಮ ಪರಿಣಿತಿಯ ವಿಷಯದ ಕುರಿತು ನಾಟಕ ಕಾರ್ಯಶಿಬಿರಗಳಲ್ಲಿ ಉಪನ್ಯಾಸ, ಪ್ರಾತ್ಯಕ್ಷಿಕೆಗಳನ್ನೂ ನಡೆಸಿಕೊಟ್ಟಿದ್ದಾರೆ.

ಅಭಿನಯ, ಮೂಕಾಭಿನಯದಲ್ಲೂ ಚೆಂಕು ಪಳಗಿದ್ದಾರೆ. ಕರ್ನಾಟಕದಲ್ಲಿ ಕಿನ್ನರ ಎಂಬ ಹೆಸರಿನಲ್ಲಿ ಮೂಕಾಭಿನಯದ ಶಿಬಿರ ಹಾಗೂ ನೂರಾರು ಪ್ರದರ್ಶನಗಳನ್ನು ನೀಡಿದ್ದಾರೆ. ಹಾಗೆಯೇ ಜಸ್ಮ ಓಡನ್, ಬಕ, ಬೂರ್ಜ್ವ ದಿ ಜಂಟಲ್‌ಮನ್, ರಸಗಂಧರ್ವ ಮುಂತಾದ ಮಹತ್ವದ ನಾಟಕಗಳಲ್ಲಿ ಅಭಿನಯಿಸಿದ ಚಂದ್ರಕುಮಾರ್ ಸಿಂಗ್ ಬೀದಿ ನಾಟಕಗಳ ಅಭಿವೃದ್ಧಿಗೂ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ.

---



## ಚಂದ್ರಗುಪ್ತ ಶಿ. ಚಾಂದಕವಠೆ

ದೂರವಾಣಿಯ ಮೇಲ್ವಿಚಾರಕರಾಗಿ ಸೇವೆ ಸಲ್ಲಿಸುತ್ತಿದ್ದರೂ ತಮ್ಮ ಉಳಿದೆಲ್ಲ ಸಮಯವನ್ನು ರಂಗಭೂಮಿಗೇ ಮೀಸಲಿರಿಸಿದ ರಂಗಾಸಕ್ತ ಚಂದ್ರಗುಪ್ತ ಶಿ. ಚಾಂದಕವಠೆ, ಜನಿಸಿದ್ದು 1955ರಲ್ಲಿ, ಶಾಲೆ ಕಾಲೇಜು ಶಿಕ್ಷಣದ ಅವಧಿಯಲ್ಲೇ ಹತ್ತಾರು ನಾಟಕಗಳಲ್ಲಿ ಅಭಿನಯಿಸುವುದರ ಮೂಲಕ ರಂಗಭೂಮಿಯ ನಂಟಿನ ಆರಂಭ. ನಂತರವೂ ಇಲಾಖೆಯ ಮನರಂಜನಾ ಕೂಟವಲ್ಲದೇ, ಕಲ್ಬುರ್ಗಿಯ ರಂಗ ಮಾಧ್ಯಮ, ನೃಪತುಂಗ ಕಲಾವಿದರು, ಬೀದರಿನ ಅಭಿನಯ ಗಂಗೋತ್ರಿ, ಸಮುದಾಯ, ಜನಪರ ಅಧ್ಯಯನ ವೇದಿಕೆ – ಮುಂತಾದ ಸಂಸ್ಥೆಗಳಿಗಾಗಿ ನಲವತ್ತಕ್ಕೂ ಹೆಚ್ಚು ನಾಟಕಗಳಲ್ಲಿ ವಿಭಿನ್ನ ಪಾತ್ರಗಳನ್ನು ನಿರ್ವಹಿಸಿದ್ದಾರೆ. ಹಾಗೆಯೇ ಕೊಡೆಗಳು, ಜಾತ್ರೆ, ಕುಂಟಾ ಕುಂಟಾ ಕುರುವತ್ತಿ, ತೆರೆಗಳು, ಬೆಳೆದವರು ಮುಂತಾದ ಸುಮಾರು 16 ನಾಟಕಗಳ ನಿರ್ದೇಶನವನ್ನೂ ಮಾಡಿದ್ದಾರೆ. ಅಭಿನಯ ಗಂಗೋತ್ರಿಯ ಅಧ್ಯಕ್ಷರಾಗಿ 1985ರಿಂದಲೂ ಕಾರ್ಯ ಮಾಡುತ್ತಿರುವ ಇವರು ಬೀದರ್ ಸಮುದಾಯದ ಸಕ್ರಿಯ ಕಾರ್ಯಕರ್ತರೂ ಆಗಿದ್ದಾರೆ.

ನಾಟಕ ಮಾಧ್ಯಮವನ್ನು ಪ್ರಗತಿಪರ ಸಂದೇಶ ವಾಹಕವಾಗಿ ಬಳಸುವ ಕುರಿತು ಕಾಳಜಿ ತೋರುವ ಚಂದ್ರಗುಪ್ತ ಬೀದರ್ ಜಿಲ್ಲೆಯಲ್ಲಿ ನಡೆದ ಸಂಪೂರ್ಣ ಸಾಕ್ಷರತಾ ಆಂದೋಲನದ ಸಂದರ್ಭದಲ್ಲಿ ನಡೆದ ಕಲಾ ಜಾಥಾದಲ್ಲಿ ಅನೇಕ ಬೀದಿ ನಾಟಕಗಳಲ್ಲಿ ಭಾಗವಹಿಸಿದ್ದಾರೆ. ಭಾರತ ಜನವಿಜ್ಞಾನ ಜಾಥಾದಲ್ಲಿ ಕಲಾವಿದನಾಗಿ ಭಾಗವಹಿಸಿ ವೈಜ್ಞಾನಿಕ ಮನೋಭಾವನೆ ಪ್ರಸಾರದಲ್ಲೂ ಪಾಲುಗಾರರಾಗಿದ್ದಾರೆ. ಹಾಗೆಯೇ ಭಾರತೀಯ ಕುಟುಂಬ ಯೋಜನಾ ಸಂಘದ ಬೀದರ್ ಶಾಖೆಯೊಂದಿಗೆ ತೊಡಗಿ ನಾಟಕ, ಬೀದಿ ನಾಟಕ, ಹಾಡು ಮುಂತಾದುವುಗಳ ಮೂಲಕ ಜನಸಾಮಾನ್ಯರಲ್ಲಿ ಸುಖೀ ಕುಟುಂಬದ ಮಹತ್ವವನ್ನು ಸಾರಿದ್ದಾರೆ. 1977ರಿಂದಲೇ ಆಕಾಶವಾಣಿಯ ಕಲಾವಿದರಾದ ಚಂದ್ರಗುಪ್ತ ಹಲವಾರು ರೇಡಿಯೋ ನಾಟಕಗಳಲ್ಲಿಯೂ ಅಭಿನಯಿಸಿದ್ದಾರೆ.

ಸ್ವತಃ ಸರಕಾರಿ ನೌಕರರಾಗಿರುವ ಕಾರಣಕ್ಕೂ ಇರಬಹುದು. ಹವ್ಯಾಸೀ ಕಲಾ ತಂಡಗಳೊಂದಿಗೆ ಹವ್ಯಾಸಕ್ಕಾಗಿ ನಾಟಕಗಳನ್ನು ಮಾಡುವುದು, ಮಾಡಿಸುವುದರ ಜೊತೆಗೆ ಅಭಿವೃದ್ಧಿ ಸಂವಹನದಲ್ಲಿ ತೊಡಗಿರುವ ಸರಕಾರೀ ಮತ್ತು ಸ್ವಾಯತ್ತ ಸಂಸ್ಥೆಗಳ ನೆರವಿಗೂ ತಮ್ಮ ನಾಟಕ ರಚನೆ, ನಿರ್ದೇಶನ, ನಟನೆಯ ಪ್ರತಿಭೆಯನ್ನು ಮೀಸಲಿಟ್ಟಿದ್ದಾರೆ ಚಂದ್ರಗುಪ್ತ ಚಾಂದಕವಠೆ.

---



## ತರೀಕೆರೆ ತಿಮ್ಮಣ್ಣ

ಈ ವರೆಗೆ ನೂರಕ್ಕೆ ಒಂದೇ ಒಂದು ಕಡಿಮೆ ಸಂಖ್ಯೆಯ ನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಅಭಿನಯಿಸಿರುವ ತರೀಕೆರೆ ತಿಮ್ಮಣ್ಣ ಜನಿಸಿದ್ದು 1936ರಲ್ಲಿ. ಶಾಲಾದಿನಗಳಿಂದಲೇ ರಂಗವನ್ನು ಪ್ರವೇಶಿಸಿದ ಇವರು ಕಾಲೇಜಿಗೆ ಬರುವಷ್ಟರಲ್ಲಿ ಎಷ್ಟೊಂದು ನಾಟಕಗಳಲ್ಲಿ ಸ್ತ್ರೀ ಪಾತ್ರ ಮಾಡಿದ್ದರೆಂದರೆ ಇವರನ್ನು ಜನ 'ಕಾಲೇಜ್ ಕ್ವೀನ್' ಎಂದೇ ಕರೆಯುತ್ತಿದ್ದರು. ತಿಮ್ಮಣ್ಣನವರು ಕುಮಾರೇಶ್ವರ ನಾಟ್ಯ ಸಂಘ, ಬಾಳೇಶ್ವರ ಕೃಪಾ ನಾಟ್ಯ ಸಂಘ, ಶೇಷ ಕಮಲ ಕಲಾ ನಾಟಕ ಸಂಘ, ಸಿದ್ಧರಾಮೇಶ್ವರ ನಾಟ್ಯ ಸಂಘ – ಈ ಕಂಪನಿಗಳಲ್ಲಿದ್ದುಕೊಂಡು ಸುಮಾರು ಇಪ್ಪತ್ತಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಹಾಗೆಯೇ ತರೀಕೆರೆ ಲಲಿತಾ ಕಲಾ ಸಂಘ, ಉದಯ ಕಲಾ ಸಂಘ, ಜನಪದ ಸಾಹಿತ್ಯ ಕಲಾ ಸಂಘಗಳಲ್ಲದೇ ಬಾಳೆಹೊನ್ನೂರು, ಚಿಕ್ಕಮಗಳೂರು, ಕಲ್ಕೆರ ಇಲ್ಲಿನ ವಿವಿಧ ಹವ್ಯಾಸೀ ತಂಡಗಳಿಗಾಗಿ ಸುಮಾರು 35ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಹಲವು ನಾಟಕಗಳಿಗೆ ನಿರ್ದೇಶನವನ್ನು ಒದಗಿಸಿದ್ದಾರೆ. ಇದರಲ್ಲಿ ಹದಿನಾಲ್ಕು ಮಕ್ಕಳ ನಾಟಕಗಳೂ ಸೇರಿವೆ.

ಕೇಂದ್ರ ಮತ್ತು ರಾಜ್ಯ ಸರಕಾರಗಳ ಅಭಿವೃದ್ಧಿ ಸಂದೇಶ ಪ್ರಸಾರದ ಸಂಸ್ಥೆಗಳ ಸಹಯೋಗದಲ್ಲಿ ತಿಮ್ಮಣ್ಣನವರು ಸಾಕ್ಷರತೆ, ಸ್ವಾವಲಂಬನೆ, ಆರೋಗ್ಯ ಮುಂತಾದ ಜನಹಿತದ ವಿಷಯಗಳ ಕುರಿತು ಜನಜಾಗೃತಿ ಮೂಡಿಸುವ ಕಾರ್ಯಕ್ಕಾಗಿ ನಾಟಕ, ಬೀದಿ ನಾಟಕದ ಮಾಧ್ಯಮವನ್ನು ದುಡಿಸಿಕೊಂಡಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿಯ ನೆರವಿನೊಂದಿಗೆ, ಸ್ಥಳೀಯರ ಪ್ರೋತ್ಸಾಹದೊಂದಿಗೆ ಜಿಲ್ಲಾ ಮತ್ತು ರಾಜ್ಯ ಮಟ್ಟದ ನಾಟಕೋತ್ಸವಗಳನ್ನು, ನಾಟಕ ಸ್ಪರ್ಧೆಗಳನ್ನು ಇವರು ಸಂಘಟಿಸಿದ್ದಾರೆ.

ಅರ್ಧ ಶತಕಕ್ಕೂ ಹೆಚ್ಚಿನ ಕಾಲ ಸಕ್ರಿಯವಾಗಿ ದುಡಿದು ದೈಹಿಕವಾಗಿ ದಣಿದಿದ್ದರೂ ರಂಗಭೂಮಿಯ ನಂಟನ್ನು ಪೂರ್ಣ ಕಳೆದುಕೊಳ್ಳಲು ಒಪ್ಪದೇ ನಾಟಕಗಳ ಪಾತ್ರಗಳಿಗೆ ವಸ್ತ್ರಾಲಂಕಾರ, ವರ್ಣಾಲಂಕಾರವನ್ನಾದರೂ ನೀಡುತ್ತಾ ರಂಗಭೂಮಿಯ ಹತ್ತಿರವೇ ಇರುತ್ತೇನೆ ಎಂದು ಹಟ ತೊಟ್ಟಿರುವ ಕಲಾವಿದ, ತರೀಕೆರೆ ತಿಮ್ಮಣ್ಣ.



## ಪಿ.ಐ. ನಾಗಭೂಷಣ ಸ್ವಾಮಿ

ಎಪ್ಪತ್ತು ವಯಸ್ಸಿನ ಪತ್ರಿಮಠದ ಇಳಕಲ್ ನಾಗಭೂಷಣಸ್ವಾಮಿಯವರು ಕಳೆದ 60 ವರ್ಷಗಳಿಂದ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ನರ್ತಿಸಿದ್ದಾರೆ. ನೂರಾರು ನಾಟಕಗಳನ್ನು ಕಲಿಸಿದ್ದಾರೆ. ಶಾಲೆಯಲ್ಲಿ ಓದುತ್ತಿರುವಾಗಲೇ ಅಣಕ, ಮಿಮಿಕ್ರಿ, ಮೂಲಕ ಇವರು ಗಮನ ಸೆಳೆದರು. 7ನೇ ತರಗತಿಗೇ ಶಾಲೆಗೆ ಶರಣು ಹೊಡೆದು ಕಂಚಿಕೆರೆ ಕೊಟ್ರಬಸಪ್ಪನವರ ಜಯಲಕ್ಷ್ಮಿ ನಾಟ್ಯಸಂಘ (ದಾವಣಗೆರೆ) ಸೇರಿ ಬಾಲಪಾತ್ರಗಳಲ್ಲಿ ಅಭಿನಯಿಸಲಾರಂಭಿಸಿದರು. 2 ವರ್ಷಗಳ ನಂತರ ಕನ್ನಡ ರಂಗಭೂಮಿಯ ಕಲಾವಿದರನ್ನು ತಯಾರಿಸುವ ಕಾರ್ಖಾನೆ ಎಂದು ಪ್ರತೀತಿಯಾಗಿದ್ದ ಗೋಕಾಕ ಬಸವಣ್ಣೆಪ್ಪನವರ ಕಂಪನಿ ಸೇರಿದರು. ಇದೇ ಕಂಪನಿಯಲ್ಲಿ ಶ್ರೀನಿವಾಸ ಕುಲಕರ್ಣಿಯವರು ನಟಿಯರಿಗೆ ನೃತ್ಯ ಕಲಿಸುತ್ತಿದ್ದರು. ಇದನ್ನು ನೋಡಿಯೇ ಆಸಕ್ತಿ ಮೂಡಿಸಿಕೊಂಡ ಸ್ವಾಮಿ ಅವರಿಂದಲೇ ನೃತ್ಯ ಕಲಿತರು. ಮುಂದೆ ಸ್ತ್ರೀ ಪಾತ್ರ ಅಭಿನಯ, ನೃತ್ಯ – ಎರಡರಲ್ಲೂ ಮಿಂಚಿದರು.

ಒಂಭತ್ತು ವರ್ಷಗಳ ಕಾಲ ಈ ನಾಟಕ ಕಾರ್ಖಾನೆಯಲ್ಲಿ ಅಭಿನಯ ಪರಿಣತಿ ಪಡೆದ ನಂತರ ಕಂದಗಲ್ಲರ ನಾಟಕಗಳಿಗೆಂದೇ ಆರಂಭಿಸಲಾಗಿದ್ದ ವಾಗ್ಮಯ ನಾಟ್ಯಸಂಘ ಸೇರಿ ಕಂದಗಲ್ಲರ ಎಲ್ಲ ಪೌರಾಣಿಕ ನಾಟಕಗಳ

ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿದರು. 2 ವರ್ಷಗಳ ನಂತರ ಕಂಪನಿ ತೊರೆದು ಕುಲಕೋಟಿ ಚನ್ನಬಸಯ್ಯ ಎಂಬುವರಿಂದ ಹಾರ್ಮೋನಿಯಂ, ತಬಲಾ ನುಡಿಸುವುದನ್ನು ಕಲಿತು ರಾಯಚೂರಿನಲ್ಲಿ ನೆಲೆನಿಂತರು.

ಇಲ್ಲಿಂದ ಮುಂದೆ ಸುಮಾರು 40 ವರ್ಷಗಳ ಕಾಲ ಹಳ್ಳಿಗಾಡಿನ ನಾಟಕಗಳ ಮಾಸ್ತರ್ ಆಗಿ ಸ್ವಾಮಿಯವರು ತಮ್ಮ ವೃತ್ತಿ ಜೀವನದ ಪ್ರಮುಖ ಅಧ್ಯಾಯ ಆರಂಭಿಸಿದರು. ರಕ್ತರಾತ್ರಿ, ಚಿತ್ರಾಂಗದಾ, ಉತ್ತರ ಭೂಪ, ಅಕ್ಷಯಾಂಬರ, ಬಸವೇಶ್ವರ ಮದುಮಗಳು, ಆದರ್ಶಪ್ರೇಮ, ಅಣ್ಣ ತಂಗಿ ಮುಂತಾದ ಅನೇಕ ನಾಟಕಗಳನ್ನು ರಾಯಚೂರು, ಬಳ್ಳಾರಿ, ಆಂಧ್ರದ ಗಡಿಭಾಗದ ಹಳ್ಳಿಗಳಲ್ಲಿ ಇದುವರೆಗೂ ಕಲಿಸಿದ್ದಾರೆ. ನಾಟಕಗಳಿಗೆ ವಿಭಿನ್ನ ರೀತಿಯ ಹಾಡುಗಳು ಬೇಕೆನಿಸಿದಾಗ ತಾವೇ ರಚಿಸಿ ರಾಗ ಸಂಯೋಜಿಸಿದ ಬಹುಮುಖ ಪ್ರತಿಭಾವಂತ ನಾಗಭೂಷಣ ಸ್ವಾಮಿಯವರು ಹಾಲಿ ಮಾನ್ವಿಯಲ್ಲಿ ನೆಲೆಸಿದ್ದು, ಪಂಚಾಕ್ಷರಿ ಸಂಗೀತ ವಿದ್ಯಾಲಯ ಆರಂಭಿಸಿ ಸಂಗೀತ ಶಿಕ್ಷಣ ನೀಡುತ್ತಿದ್ದಾರೆ.

---



## ವಿ.ಜೆ. ನಾಯಕ ವಂದಿಗೆ

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಕೃಷಿಕ ಕುಟುಂಬವೊಂದರಲ್ಲಿ 1931ರಲ್ಲಿ ಜನಿಸಿದ ವಿಠೋಬ ಜೋಗಿ ನಾಯಕ ಎಂ.ಎ., ಬಿ.ಎಡ್. ಪದವೀಧರರು. ಸುಮಾರು 33 ವರ್ಷ ಶಾಲಾ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸಿದ ಇವರಿಗೆ 1987ರಲ್ಲಿ 'ಅತ್ಯುತ್ತಮ ಮುಖ್ಯೋಪಾಧ್ಯಾಯ'ನೆಂದು ರಾಷ್ಟ್ರ ಪ್ರಶಸ್ತಿ ದೊರೆತಿದೆ.

1969ರಿಂದಲೇ ಗುಂಡಣ್ಣ, ಪರ್ವತವಾಣಿ, ದಾಶರಥಿ ದೀಕ್ಷಿತ್ ಮೊದಲಾದವರ ಪ್ರಹಸನಗಳಿಂದ ಆರಂಭವಾದ ನಾಟಕಗಳ ಹವ್ಯಾಸ ಮುಂದೆ ಗಂಭೀರ ನಾಟಕ ಪ್ರವೃತ್ತಿಯಾಗಿ ಬೆಳೆಯಿತು. ವಿವಿಧ ಶಾಲೆಗಳ ರಂಗವೇದಿಕೆಗಳು ಅಂಕೋಲದ ಕರ್ನಾಟಕ ಸಂಘ ಇವುಗಳ ಮೂಲಕ ಕುವೆಂಪು, ಶಿವರಾಮ ಕಾರಂತ, ಹಿರಣ್ಣಯ್ಯ, ಮಾಸ್ತಿ, ಕೃಷ್ಣಮೂರ್ತಿ ಪುರಾಣಿಕರ ಪ್ರಮುಖ ನಾಟಕಗಳನ್ನು ನಿರ್ದೇಶಿಸಿದರಲ್ಲದೇ, ಪ್ರಮುಖ ಪಾತ್ರಗಳಲ್ಲಿ ಅಭಿನಯವನ್ನೂ ಮಾಡಿದರು. ಕಾವ್ಯ ನಾಟಕಗಳ ಇವರ ಪ್ರಯೋಗಗಳು ವಿಶೇಷ ಜನಮೆಚ್ಚುಗೆ ಗಳಿಸಿದವು. ಇದಲ್ಲದೇ ಕಂಪನಿ ನಾಟಕಗಳಾದ ಶಹಜಹಾನ್, ಸತ್ಯಹರಿಶ್ಚಂದ್ರ, ಬಾಣಸಿಗ ಭೀಮ, ಚಿತ್ರಾಂಗದ ಮುಂತಾದ ನಾಟಕಗಳಲ್ಲಿಯೂ ಪ್ರಮುಖ ಪಾತ್ರಗಳನ್ನು ವಹಿಸಿದ್ದಾರೆ. ಅಂಕೋಲ, ಮಂಜಕೇರಿ ಮುಂತಾದ ಕಡೆ ನಾಟಕೋತ್ಸವಗಳು, ರಂಗತರಬೇತಿಗಳು, ವಿಚಾರಸಂಕಿರಣಗಳನ್ನೂ ನಾಯಕರು ಸಂಘಟಿಸಿದ್ದಾರೆ. 1970ರಿಂದ ಶೆಟಗೇರಿಯಲ್ಲಿ ರಂಗತರಬೇತಿ ಕೇಂದ್ರವನ್ನೂ ಸ್ಥಾಪಿಸಿದ ಕೀರ್ತಿ ಇವರದು.

1945ರಲ್ಲಿಯೇ ನಾಯಕರ ರಂಗ ಪ್ರವೇಶವಾಗಿದ್ದು ಯಕ್ಷಗಾನದ ಮೂಲಕ. ಮುಂದೆಯೂ ಯಕ್ಷಗಾನದ ಸಹವಾಸ. ಅನೇಕ ಪ್ರಸಂಗಗಳಲ್ಲಿ ಕರ್ಣ, ಕೀಚಕ, ಕೃಷ್ಣ, ರಾಮ ಹೀಗೆ ವೈವಿಧ್ಯಮಯ ಪಾತ್ರಗಳನ್ನು ವಹಿಸಿದ್ದಾರೆ. ಲೇಖನ ಕೃಷಿಯಲ್ಲೂ ಪಳಗಿದ ನಾಯಕರು, ಯಕ್ಷಗಾನ, ನಾಟಕ ಮತ್ತು ಶಿಕ್ಷಣ ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಲೇಖನಗಳನ್ನು ನಿಯತಕಾಲಿಕಗಳಲ್ಲಿ ಪ್ರಕಟಿಸಿದ್ದಾರೆ. ಇವರ 'ಯಕ್ಷಗಾನ' ಎಂಬ ಗ್ರಂಥಕ್ಕೆ 1997ರ ಸಾಲಿನ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಬಹುಮಾನ ಸಂದಿದೆ. ಇವರು 1981–86ರ ಅವಧಿಗೆ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿದ್ದರು.

---



## ಪ್ರತಿಭಾ ನಾರಾಯಣ

ಕರ್ನಾಟಕ, ಆಂಧ್ರ, ತಮಿಳುನಾಡು ರಾಜ್ಯಗಳಲ್ಲಿ ಸಾವಿರಾರು ನಾಟಕ ಪ್ರದರ್ಶನಗಳನ್ನು ನೀಡಿದ ಬಾಲಸರಸ್ವತಿ ನಾಟಕ ಮಂಡಳಿಯ ಯಜಮಾನರಾದ ಆನೇಕಲ್ ತಿಮ್ಮರಾಯಪ್ಪನವರ ಮೊಮ್ಮಗಳು ಪ್ರತಿಭಾ ಜನಿಸಿದ್ದು 1960ರಲ್ಲಿ ಬೆಂಗಳೂರಿನಲ್ಲಿ. ಬಾಲ್ಯದಲ್ಲಿಯೇ ಶಾಸ್ತ್ರೀಯ ಸಂಗೀತ ಅಭ್ಯಾಸ, ಹೈಸ್ಕೂಲಿನಲ್ಲಿರುವಾಗಲೇ ತಂದೆ ನಾಟಕ ಮಾಸ್ತರಾದ ಎಂ.ಬಿ. ಕೃಷ್ಣರಾವ್‌ರವರ ಆಸಕ್ತಿಯಿಂದಾಗಿ ರಂಗಭೂಮಿ ಪ್ರವೇಶ. ಸದಾರಮೆ ನಾಟಕದ ವೆಂಕಟಸುಬ್ಬಿ ಪಾತ್ರದ ಮೂಲಕ. ನಂತರ ಇದೇ ಪ್ರವೃತ್ತಿ ಮತ್ತು ವೃತ್ತಿ. ಅಂಜನರಾವ್ ಯಜಮಾನಿಕೆಯ ಶೇಷಾದ್ರಿ ನಾಟಕ ಮಂಡಳಿಯಲ್ಲಿ ಪೂರ್ಣ ಪ್ರಮಾಣದ ರಂಗಭೂಮಿ ನಟಿಯಾಗಿ ಸಾವಿರಾರು ಪ್ರದರ್ಶನ ನೀಡಿದ ಪ್ರತಿಭಾ ನಾರಾಯಣರವರ ಪ್ರಧಾನ ಭೂಮಿಕೆಯ 'ವೀರಬ್ರಹ್ಮೇಂದ್ರ ಚರಿತಾ' ನಾಟಕ ಜನಪ್ರಿಯತೆಯ ದಾಖಲೆಯನ್ನು ನಿರ್ಮಿಸಿತು. ಧರ್ಮ ವಿಜಯ, ಕೃಷ್ಣ ಸಂಧಾನ ನಾಟಕಗಳ ದ್ರೌಪದಿ, ಕುಂತಿ, ಗಾಂಧಾರಿ, ಪ್ರಚಂಡ ರಾವಣದ ಸೀತೆ. ಮಂಡೋದರಿ. ಭಕ್ತ ಪ್ರಹ್ಲಾದದ ಕಯಾದು ಹೀಗೆ ವೈವಿಧ್ಯಮಯ ಪಾತ್ರಗಳ ಸಮರ್ಥ ನಿರ್ವಹಣೆಯ ಮೂಲಕ ಅಪಾರ ಜನ ಮೆಚ್ಚುಗೆಯನ್ನು ಗಳಿಸಿದ್ದಾರೆ. ಅಭಿನಯದೊಂದಿಗೆ ಹಾಗೂ ಸ್ವತಂತ್ರವಾಗಿ ಇವರು ಹಾಡುವ ರಂಗಗೀತೆಗಳು ಸುಶ್ರಾವ್ಯ. ಭಾವಪೂರ್ಣ.

ಅಭಿನಯವನ್ನೇ ವೃತ್ತಿಯಾಗಿಸಿಕೊಂಡ ಪ್ರತಿಭಾ ವರ್ಷಕ್ಕೆ ಮುನ್ನೂರು ದಿನವಾದರೂ ರಂಗದ ಮೇಲಿರುತ್ತಾರೆ. ಆದರಿಂದ ಬಿಡುವು ಸಿಕ್ಕಾಗ ಒಂದಷ್ಟು ಚಲನಚಿತ್ರ ಅಭಿನಯ. ರಂಗನಾಯಕಿ, ದೇವರ ತೀರ್ಪು, ಪ್ರೇಮ ಪಲ್ಲವಿ, ನಾನೆಂದೂ ನಿಮ್ಮವನೇ ಮುಂತಾದ ಜನಪ್ರಿಯ ಚಿತ್ರಗಳಲ್ಲಿ ಅಭಿನಯ. ಜೊತೆಗೆ ದೂರದರ್ಶನದ ಹಲವು ರಂಗಗೀತೆಗಳ ಕಾರ್ಯಕ್ರಮಗಳಲ್ಲೂ ಭಾಗವಹಿಸಿದ್ದಾರೆ. ಅನಾಥ, ಅಂಗವಿಕಲ ಮಕ್ಕಳ ಬಗ್ಗೆ ವಿಶಿಷ್ಟ ಕಾಳಜಿ ಈ ಕಲಾವಿದೆಗೆ. ತನ್ನ ಆದಾಯದಲ್ಲಿಯೇ ಒಂದಷ್ಟು ಭಾಗವನ್ನು ಅವರ ಪುರೋಭಿವೃದ್ಧಿಗಾಗಿ ಮೀಸಲಿಡುವುದರ ಮೂಲಕ ತನ್ನ ಸಾಮಾಜಿಕ ಕಳಕಳಿಯನ್ನು ಅಭಿವ್ಯಕ್ತಿಸುತ್ತಾರೆ ರಂಗ ಪ್ರತಿಭೆ ಪ್ರತಿಭಾ ನಾರಾಯಣ್.

---



## ಎಚ್.ಎಂ. ಪ್ರಭಾಕರ್

ಪ್ರಸಾದನವನ್ನು ಹವ್ಯಾಸಕ್ಕಾಗಿ ಮಾಡುವ. ಅದರಲ್ಲೂ ಉಚಿತವಾಗಿ ಕಳೆದ ನಾಲ್ಕು ದಶಕಗಳಿಂದ ಸಾವಿರಾರು ಮುಖಗಳಿಗೆ ವೈವಿಧ್ಯಮಯ ವರ್ಣಿಕೆ ನೀಡಿರುವ ರಾಜ್ಯದ ಏಕೈಕ ವ್ಯಕ್ತಿ ಎಚ್.ಎಂ. ಪ್ರಭಾಕರ್. ವೃತ್ತಿಯಲ್ಲಿ ಶಿಕ್ಷಕರು. 1942ರಲ್ಲಿ ಜೋಯಿಸರ ಕುಟುಂಬದಲ್ಲಿ ಜನಿಸಿದ ಪ್ರಭಾಕರ್. ಈ ವರೆಗೆ ನಂಕಂಪ್ನಿ, ಕಾಶೀಯಾತ್ರೆ, ಸಾಹೇಬರು ಬರ್‍ತಾರೆ ಮುಂತಾದ ಸುಮಾರು ಹದಿಮೂರು ನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳನ್ನು ಅಭಿನಯಿಸಿದ್ದಾರೆ. ಕತ್ತೆ ಮತ್ತು ಧರ್ಮ. ಪಂಚಕನ್ಯಾಸರೇನ್ನಿತ್ಯಂ, ನಮ್ಮನ್ನು ಹುಡುಕಬೇಡಿ. ಸ್ವತಂತ್ರ ಭಾರತಿ ಮುಂತಾದ ಸುಮಾರು ಹದಿನೈದು ನಾಟಕಗಳನ್ನು ರಚಿಸಿದ್ದಾರೆ. ಸ್ವರಚಿತ ನಾಟಕಗಳಲ್ಲದೇ ಸಾಯೋ ಆಟ, ಕಿಸಾ ಗೌತಮಿ, ಅಂಗುಲಿ ಮಾಲಾ ಮುಂತಾದ ಒಟ್ಟು ಇಪ್ಪತ್ತಾರು ಕನ್ನಡ ನಾಟಕಗಳನ್ನೂ, ಎರಡು ಸಂಸ್ಕೃತ ನಾಟಕಗಳನ್ನೂ ಇವರು ನಿರ್ದೇಶಿಸಿದ್ದಾರೆ.

ಆದರೂ ಶಿವಮೊಗ್ಗ ಜಿಲ್ಲೆಯ ಜನ ಇವರನ್ನು ಗುರ್ತಿಸುವುದು. 'ಪ್ರಸಾದನಾ ಪುರುಷೋತ್ತಮ' ನಾಗಿ. ಕಾರಣ ಪ್ರಭಾಕರರು ಕಳೆದ ನಲವತ್ತು ವರ್ಷಗಳಿಂದ ಪ್ರಸಾದನ ಕಲೆಯಲ್ಲಿ ಮಾಡಿದ ಪ್ರಯೋಗಗಳು. ಸಾಧನೆಗಳು. ನೇರವಾಗಿ ತಾವೇ ಪ್ರಸಾದನ ಮಾಡಿದ ನೂರಾರು ಪ್ರಯೋಗಗಳಿದ್ದರೂ ಇತರರಿಗೂ ಪ್ರಸಾದನ ಕಲೆಯನ್ನು ಹೇಳಿಕೊಡುವುದರಲ್ಲೇ ಇವರಿಗೆ ಹೆಚ್ಚಿನ ತೃಪ್ತಿ. ಇವರು ಹವ್ಯಾಸಿಗಳಿಗಾಗಿ, ಶಾಲಾ ಉಪಾಧ್ಯಾಯರಿಗಾಗಿ ಅನೇಕ ಪ್ರಸಾದನ. ರಂಗಪರಿಕರ, ರಂಗ ವಸ್ತ್ರವಿನ್ಯಾಸ ಶಿಬಿರಗಳನ್ನು ನಡೆಸಿದ್ದಾರೆ.

ವಿಭಿನ್ನ ಶೈಲಿಯ ಮುಖವಾಡಗಳನ್ನು ರೂಪಿಸುವುದರಲ್ಲಿಯೂ ಪ್ರಭಾಕರ್ ನುರಿತವರು. ಇವರ ಹತ್ತಿ, ಪಲ್ಪ್, ಕ್ಯಾನ್‌ವಾಸ್‌ಗಳಿಂದ ಮಾಡಿದ ಮುಖವಾಡಗಳು ಬಹಳ ಜನಪ್ರಿಯ. ಕೈಗೊಂಬೆಯಾಟ ಇವರ ವಿಶಿಷ್ಟ ಕೊಡುಗೆ. ಇದಕ್ಕಾಗಿ ಗೊಂಬೆಗಳನ್ನು ರೂಪಿಸುವುದು. ತರಬೇತಿ ನೀಡುವುದು. ಪ್ರದರ್ಶನ ಏರ್ಪಡಿಸುವುದು ಇವರ ನೆಚ್ಚಿನ ಹವ್ಯಾಸ. ಕೈಗೊಂಬೆಯಾಟವನ್ನು ಬರೀ ರಂಜನೆಗಲ್ಲದೇ. ಮಕ್ಕಳಲ್ಲಿ, ಪ್ರೌಢರಲ್ಲಿ ಪ್ರಗತಿಪರ ವಿಚಾರಗಳನ್ನು ಬಿತ್ತುವ ಉದ್ದೇಶದಿಂದಲೂ ಪರಿಣಾಮಕಾರಿಯಾಗಿ ಉಪಯೋಗಿಸಿದ ಬಹುಮುಖ ಪ್ರತಿಭೆಯ ಪರಿಪೂರ್ಣ ಕಲಾವಿದ.

---



## ಬನಹಟ್ಟಿ ವಾಸಣ್ಣ

ಸುಮಾರು ಐದು ದಶಕಗಳ ಕಾಲ ಕರ್ನಾಟಕ ವೃತ್ತಿರಂಗಭೂಮಿಗೆ ಅಭೂತಪೂರ್ವ ಸೇವೆ ಸಲ್ಲಿಸಿದ ವಾಸಣ್ಣ 1938ರಲ್ಲಿ ಜನಿಸಿದ್ದು ಬಿಜಾಪುರ ಜಿಲ್ಲೆಯ ಬನಹಟ್ಟಿಯಲ್ಲಿ; ಆದರೆ ನಂತರ ನೆಲೆ ನಿಂತಿದ್ದು ವೃತ್ತಿ ರಂಗಭೂಮಿಯ ತವರಾದ ದಾವಣಗೆರೆಯಲ್ಲಿ. ಕರೂರು ಶಾನುಬೋಗರ ಕಂಪನಿ ಹರಿಹರ ತಾಲ್ಲೂಕಿನ ಭಾನುವಳ್ಳಿಯಲ್ಲಿ ನೊಕ್ಕಾಂ ಮಾಡಿದ್ದಾಗ ಬಾಲಕೃಷ್ಣನ ಪಾತ್ರ, ಎಂಟು ವರ್ಷದ ಬಾಲಕ ವಾಸುದೇವನನ್ನು ಕಲಾವಿದನೆಂದು ಗುರ್ತಿಸಿತು. ತಂದೆಯವರಿಗೋ ಮಗನನ್ನು ಹಿಂದೂಸ್ತಾನೀ ಸಂಗೀತದ ವಿದ್ವಾಂಸನನ್ನಾಗಿಸುವ ಕನಸು: ಆದರೆ ವಾಸುದೇವನಿಗೆ ಬಣ್ಣದ ಬದುಕಿನತ್ತ ತೀವ್ರ ಸೆಳೆತ. ಪರಿಣಾಮ ಹತ್ತಾರು ಕಂಪನಿಗಳಲ್ಲಿ ಈತನಿಗೆ ಹತ್ತಾರು ಉತ್ತಮ ಪಾತ್ರಗಳು ಹುಡುಕಿಕೊಂಡು ಬಂದವು. ಬಸವರಾಜ ಮನ್ಸೂರ ಕಂಪನಿ, ಹುಲಿಮನಿ ಸೀತಾರಾಮಶಾಸ್ತ್ರೀ ಕಂಪನಿ, ಸೂಡಿ ಹುಚ್ಚಪ್ಪನವರ ಕಂಪನಿ, ಗಜಾನನ ನಾಟಕ ಕಂಪನಿ, ದೊಡ್ಡಗುಬ್ಬಿ ಮುದುವೀರಾಚಾರ್ ಕಂಪನಿ. ಗೋಕಾಕ ಕಂಪನಿ. ಹೀಗೆ ಹತ್ತಾರು ಕಂಪನಿಗಳಲ್ಲಿ ಪೌರಾಣಿಕ, ಸಾಮಾಜಿಕ ಹಾಗೂ ಕೌಟುಂಬಿಕ ಪಾತ್ರಗಳಲ್ಲಿ ಅಭಿನಯಿಸಿ ವಾಸಣ್ಣ ಪರಿಪೂರ್ಣ ನಟರಾದರು.

ಜೊತೆಜೊತೆಗೆ ಹಿಂದೂಸ್ತಾನೀ ಸಂಗೀತದ ಪಂಡಿತರೂ ಆಗಿದ್ದ ಅರ್ಜುನ್‌ಸಾ ನಾಕೋಡ್‌ರ ಬಳಿ ವಾಸಣ್ಣ ಹನ್ನೊಂದು ವರ್ಷಗಳ ಸುದೀರ್ಘ ಕಾಲ ಉತ್ತರಾದಿ ಸಂಗೀತ ಕಲಿತರು. ಕಿರಾಣಾ ಘರಾಣೆಯಲ್ಲಿ ವಾಸಣ್ಣ ತನ್ನನ್ನು ಗುರುತಿಸಿಕೊಳ್ಳುವಷ್ಟು, ಕಛೇರಿ ನೀಡುವಷ್ಟು ಪಾಂಡಿತ್ಯ ಪಡೆದರು. ಆದರೂ ವಾಸಣ್ಣ ತಮ್ಮ ಇಡೀ ಜೀವನವನ್ನು ರಂಗಭೂಮಿಯ ನಟನೆ ಹಾಗೂ ರಂಗ ಸಂಗೀತಕ್ಕೆ ಮೀಸಲಾಗಿಟ್ಟರು. ಹಾಸ್ಯ ನಟರಾಗಿಯೇ ಅವರು ಅತ್ಯಂತ ಜನಪ್ರಿಯ. ವೈಯಕ್ತಿಕವಾಗಿ ಬದುಕಿನಲ್ಲಿ ಕಷ್ಟ ಕಾರ್ಪಣ್ಯಗಳಿದ್ದರೂ ಅವರು ಸದಾ ವಿನೋದ ಪ್ರಿಯರಾಗಿಯೇ ಸಮಾಜದಲ್ಲಿ ತಮ್ಮನ್ನು ಗುರ್ತಿಸಿಕೊಂಡರು. ಮಾರುತಿ ವಿಜಯ ಎಂಬ ಸ್ವಂತ ಕಂಪನಿ ಕಟ್ಟಿ ಕೈಸುಟ್ಟುಕೊಂಡ ಬನಹಟ್ಟಿ ವಾಸಣ್ಣ ಇಂದಿಗೂ ತಮ್ಮ ಜೀವನವನ್ನು ರಂಗಭೂಮಿಗಾಗಿಯೇ ಮೀಸಲಿಟ್ಟಿದ್ದಾರೆ.

---



## ಭವಾನಿ ದೇವಿ

ಕಳೆದ ನಾಲ್ಕು ದಶಕಗಳಿಂದ ಬಳ್ಳಾರಿ, ರಾಯಚೂರು, ಚಿತ್ರದುರ್ಗ, ಆಂಧ್ರದ ಗಡಿ ಜಿಲ್ಲೆಗಳ ಹಳ್ಳಿಗಳಲ್ಲಿ ನಾಟಕಗಳಲ್ಲಿ ಹೆಸರಾಂತ ನಟಿಯಾಗಿರುವ ಭವಾನಿ ದೇವಿಯವರು ಬಳ್ಳಾರಿಯ ನಿವಾಸಿ. ಬೆಂಗಳೂರಿನ ಮುದ್ದು ನಂಜಪ್ಪ–ರಂಗನಾಯಕಮ್ಮನವರ ಮಗಳಾದ ಭವಾನಿ. 3ನೇ ತರಗತಿ ಓದುತ್ತಿರುವಾಗಲೇ ಮುಕುಂದರಾವ್ ಎಂಬ ಶಿಕ್ಷಕರಿಂದ ನೃತ್ಯ ಕಲಿತರು. ತಂದೆ ಸಂಸಾರ ತೊರೆದು ಹೋದಾಗ ಇಬ್ಬರು ತಮ್ಮಂದಿರು. ತಂಗಿ ಹಾಗೂ ತಾಯಿಯನ್ನು ಸಾಕಲು ಇದೇ ನೃತ್ಯಕಲೆ ಅವರಿಗೆ ಆಸರೆಯಾಯಿತು. ಆ ಕಾಲಕ್ಕೆ 15 ರೂಪಾಯಿ ಸಂಭಾವನೆ ನೀಡಿ ನಾಟಕಗಳ ದೃಶ್ಯಗಳ ಮಧ್ಯೆ ನರ್ತಿಸಲು ಕರೆದೊಯ್ಯುತ್ತಿದ್ದರಂತೆ.

ಭವಾನಿಯವರಿಗೆ ಇಂಥ ಹಲವಾರು ಅವಕಾಶ ದೊರಕಿದವು. ಮುಂದೆ ಶಾಲೆ ತೊರೆದು ಚಾಮುಂಡೇಶ್ವರಿ ನಾಟಕ ಮಂಡಳಿ ಸೇರಿದಾಗ, ನಾಗರತ್ನಮ್ಮ, ಕೊಟ್ಟೂರಪ್ಪ, ಬಸವರಾಜ–ಇವರಂತಹ ಆ ಕಂಪನಿಯ ಘಟಾನುಘಟಿಗಳೊಂದಿಗೆ ಅಭಿನಯಿಸುವ ಅವಕಾಶವನ್ನೂ ಪಡೆದರು. ನಂತರ 1957ರಲ್ಲಿ ಬಳ್ಳಾರಿ ಲಲಿತಮ್ಮನವರ ನಾಟಕ ಕಂಪನಿ ಸೇರಿ ಆ ಕಂಪನಿ ನಿಲ್ಲುವ (1967)ವರೆಗೆ ಲಲಿತಮ್ಮ ಅವರೊಂದಿಗೆ ಪ್ರಮುಖ ನಟಿಯಾಗಿದ್ದರು. ನಂತರ ಕಂಪನಿ ಬದುಕನ್ನು ನಿಲ್ಲಿಸಿ, ಬಳ್ಳಾರಿಯಲ್ಲಿ ನೆಲೆನಿಂತು ಹಳ್ಳಿ ನಾಟಕಗಳ ಕಡೆ ಮುಖ ಮಾಡಿದಾಗ ಅಪಾರ ಬೇಡಿಕೆ ಇವರಿಗೆ. ಅಲ್ಲಿಂದ ಇಲ್ಲಿಯವರೆಗೆ ಪೌರಾಣಿಕ, ಐತಿಹಾಸಿಕ, ಸಾಮಾಜಿಕ – ಹೀಗೆ ಎಲ್ಲ ಪ್ರಕಾರದ ನೂರಾರು ನಾಟಕಗಳ ಸಾವಿರಾರು ಪ್ರದರ್ಶನಗಳನ್ನು ನೀಡಿದ್ದಾರೆ. ಆಂಧ್ರದ ಕೆಲವು ತೆಲುಗು ನಾಟಕಗಳಲ್ಲೂ ಅಭಿನಯಿಸಿರುವ ಭವಾನಿ ದೇವಿ ಚಿತ್ರನಟಿ ಕಲ್ಪನಾ (ಕಂಪನಿಯಲ್ಲಿದ್ದಾಗ), ಸುಭದ್ರಮ್ಮ ಮನ್ಸೂರು (ಹಳ್ಳಿಗಾಡಿನಲ್ಲಿ ಅಭಿನಯಿಸುವಾಗ) ಅವರ ಸಮಸಮ ಖ್ಯಾತಿ ಪಡೆದವರು.



## ಭಾರ್ಗವಿ ನಾರಾಯಣ

ಇಂಗ್ಲೀಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು ನಂತರ ಇ.ಎಸ್.ಐ. ನಿಗಮದಲ್ಲಿ ಉನ್ನತ ಅಧಿಕಾರಿಯಾಗಿ 31 ವರ್ಷಗಳ ಕಾಲ ಸೇವೆಯನ್ನೂ ಸಲ್ಲಿಸಿದ ಭಾರ್ಗವಿನಾರಾಯಣ್‌ರವರು ಹುಟ್ಟಿದ್ದು ಬೆಂಗಳೂರಿನಲ್ಲಿ.

1938ರಲ್ಲಿ ತನ್ನ ಹತ್ತನೇ ವರ್ಷದಿಂದಲೇ ರಂಗಭೂಮಿಯನ್ನು ಪ್ರವೇಶಿಸಿದ ಭಾರ್ಗವಿಯವರು. ಶಾಲಾ ಕಾಲೇಜು ಹಂತಗಳಲ್ಲಿ ಪರ್ವತವಾಣಿ, ಕೈಲಾಸಂ, ಶ್ರೀರಂಗ ಇವರುಗಳ ಅನೇಕ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ವಹಿಸಿ ಎಲ್ಲರ ಪ್ರಶಂಸೆಗೆ ಪಾತ್ರರಾಗಿದ್ದರು. ಪರಂಪರೆ ಮುಂದುವರಿದು ಪ್ರೌಢಾವಸ್ಥೆಯಲ್ಲಿ ಬಿ.ವಿ. ಕಾರಂತ, ಪ್ರಸನ್ನ, ಶ್ರೀನಿವಾಸ್, ಬಿ.ವಿ. ರಾಜಾರಾಂ, ಸಿ.ಆರ್. ಸಿಂಹ ಮುಂತಾದವರ ನಿರ್ದೇಶನದ ಹಲವಾರು ಖ್ಯಾತನಾಟಕ ಪ್ರಯೋಗಗಳಲ್ಲಿ ಅಭಿನಯಿಸಿದ್ದಾರೆ. 'ಹುತ್ತದ ಬಡಿದರೆ', 'ಕದಡಿದ ನೀರು', 'ಗೆಲಿಲಿಯೋ', 'ಘೋಸ್ಟ್', 'ಆ ಊರು, ಈ ಊರು' ಮುಂತಾದ ನಾಟಕಗಳಲ್ಲಿ ಅವರ ಅಭಿನಯ ಪ್ರಶಂಸನೀಯ. ಶ್ರೇಷ್ಠ ನಟನೆಗಾಗಿ ಅನೇಕ ರಾಜ್ಯ ಮಟ್ಟದ ಪುರಸ್ಕಾರಗಳೂ ಸಂದಿವೆ.

ಇವರು ಮಕ್ಕಳಿಗಾಗಿ ರಚಿಸಿ ನಿರ್ದೇಶಿಸಿದ, 'ಭೂತಣ್ಣನ ಪೇಚಾಟ' ನಾಟಕಕ್ಕೆ 1975ರಲ್ಲಿ ರಾಜ್ಯ ಮಟ್ಟದ ಪ್ರಶಸ್ತಿಯೂ ಲಭಿಸಿದೆ. 1955ರಷ್ಟು ಹಿಂದಿನಿಂದಲೇ ಆಕಾಶವಾಣಿಯ ನಾಟಕಗಳಲ್ಲಿ ಅಭಿನಯಿಸುತ್ತಾ ಬಂದಿರುವ ಭಾರ್ಗವಿಯವರು ಇತ್ತೀಚೆಗೆ ದೂರದರ್ಶನದ ನಾಟಕ. ಧಾರಾವಾಹಿಗಳಲ್ಲೂ ತಮ್ಮ ಅಭಿನಯ ಚಾತುರ್ಯವನ್ನು ಮೆರೆದಿದ್ದಾರೆ. ಜನ ಮೆಚ್ಚುಗೆಯನ್ನು ಪಡೆದಿದ್ದಾರೆ. ಇವರು ಕಥೆ, ಸಂಭಾಷಣೆ ಬರೆದಿದ್ದ 'ಕವಲೊಡೆದ ದಾರಿ' ಧಾರಾವಾಹಿಗೆ 1996ರಲ್ಲಿ ಪ್ರತಿಷ್ಠಿತ "ಸಂದೇಶ" ಪ್ರಶಸ್ತಿ ಲಭಿಸಿದೆ. ಅಭಿನಯದ ಗೀಳು ಬೆಳ್ಳಿ ತೆರೆಗೂ ಪಸರಿಸಿ ಭಾರ್ಗವಿಯವರು ಸಂಸ್ಕಾರ, ವಂಶವೃಕ್ಷಗಳಂಥ ವಿಭಿನ್ನ ಶೈಲಿಯ ಹಲವು ಚಲನಚಿತ್ರಗಳಲ್ಲೂ ನಟಿಸಿದ್ದಾರೆ. 'ಪ್ರೊ!! ಹುಚ್ಚೂರಾಯ'ದಲ್ಲಿಯ ಇವರ ಪಾತ್ರಕ್ಕೆ ರಾಜ್ಯ ಸರಕಾರದ, 1974ರ ಸಾಲಿನ 'ಶ್ರೇಷ್ಠ ಪೋಷಕ ನಟಿ' ಪ್ರಶಸ್ತಿ ಲಭಿಸಿದೆ. ಭಾರ್ಗವಿನಾರಾಯಣ್‌ರವರು 1979–80ರ ಸಾಲಿನಲ್ಲಿ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿದ್ದರು.



## ಡಾ॥ ಎಂ. ಮೋಹನ್ ಆಳ್ವ

ಡಾ॥ ಎಂ. ಮೋಹನ್ ಆಳ್ವ ಅವರು ವೃತ್ತಿಯಲ್ಲಿ ವೈದ್ಯರು. ಪ್ರವೃತ್ತಿಯಲ್ಲಿ ಕಲಾವಿದರು. ವೈದ್ಯನ ಚಿಕಿತ್ಸಕ ಬುದ್ಧಿ ಕಲಾವಿದನ ಸಹೃದಯತೆ – ಇವುಗಳ ಹಿತವಾದ ಸಂಗಮವಾಗಿರುವ ಡಾ. ಆಳ್ವರು ಉತ್ತಮ ನಟರು. ವೈದ್ಯಕೀಯ ವಿದ್ಯಾರ್ಥಿಯಾದಾಗಿನಿಂದಲೂ ನಾಟಕದ ನಟರಾಗಿ ಅವರು ಇಡೀ ಜಿಲ್ಲೆಯಲ್ಲಿ ಪ್ರಸಿದ್ಧರು. ಶ್ರೀರಂಗ, ಲಂಕೇಶರ ಅನೇಕ ನಾಟಕಗಳನ್ನು ವಿನೂತನವಾಗಿ ನಟಿಸಿ ತಾವು ಅದ್ವಿತೀಯ ಪ್ರತಿಭಾವಂತ ನಟರೆಂದು ಸಾಬೀತುಪಡಿಸಿದ್ದಾರೆ. ಆಗಲೇ ರಾಜ್ಯ ಮಟ್ಟದ ಪ್ರಶಸ್ತಿಗಳನ್ನು ಅವರು ನಾಟಕಕ್ಕೆ ಪಡೆದರು. ಡಾ॥ ಆಳ್ವರು ಅತ್ಯುತ್ತಮ ಸಂಘಟಕರು. ಅಪ್ರತಿಮ ಕಲಾಪ್ರೇಮಿಗಳು. ಮೂಡುಬಿದಿರೆಯಲ್ಲಿ 'ರಂಗಸಂಗಮ' ಸಂಸ್ಥೆಯನ್ನು ಸ್ಥಾಪಿಸಿಕೊಂಡು ಅದರ ನೇತಾರರಾಗಿ ಜಿಲ್ಲೆಗೆ ಬರುವ ಎಲ್ಲ ನಾಟಕ ತಂಡಗಳನ್ನು ಮೂಡುಬಿದಿರೆಗೆ ಆಹ್ವಾನಿಸಿ ಕಲಾ ಪೋಷಕರಾಗಿದ್ದಾರೆ. ಅವರು ವರ್ಷಕ್ಕೆ ಸುಮಾರು 28 ನಾಟಕಗಳನ್ನು 'ರಂಗಸಂಗಮ'ದ ಮೂಲಕ ಸಹೃದಯರಿಗೆ ನೀಡಿ, ದಾಖಲೆಯನ್ನು ನಿರ್ಮಿಸಿದವರು. ನಿರಂತರವಾಗಿ ರಂಗ ತಂಡದವರನ್ನು ವಿಶೇಷವಾಗಿ ಆಹ್ವಾನಿಸಿ ಮೂಡುಬಿದಿರೆಗೆ ಸಾಂಸ್ಕೃತಿಕ ಔತಣವನ್ನು ಉಣಬಡಿಸಿದ ಧೀಮಂತ. ಡಾ॥ ಮೋಹನ್ ಆಳ್ವ.

ಸ್ವತಃ ನಟರಾಗಿ, ನೃತ್ಯಗಾರರಾಗಿ, ಸಂಘಟಕರಾಗಿ, ಕಲಾ ಪೋಷಕರಾಗಿ, ಸಾಂಸ್ಕೃತಿಕ ಎಚ್ಚರವನ್ನು ಇಟ್ಟುಕೊಂಡು ನಿರಂತರವಾಗಿ ಯಾವ ಪ್ರತಿಫಲಾಪೇಕ್ಷೆ ಇಲ್ಲದೇ ಶ್ರದ್ಧಾ ಭಕ್ತಿಯಿಂದ ದುಡಿಯುತ್ತಾ ಬಂದಿರುವ ರಂಗಪ್ರೇಮಿ ಡಾ॥ ಮೋಹನ್ ಆಳ್ವ.

---



## ಮೋಹನಚಂದ ಕಿರಣಗಿ

'ಆದರ್ಶ ಪ್ರೇಮ' 'ಅಣ್ಣ ತಂಗಿ' ನಾಟಕಗಳೆಂದರೆ ಸಾಕು. ಈ ನಾಟಕಕಾರನ ಬಗ್ಗೆ ಹೆಚ್ಚಿಗೆ ಏನೂ ಹೇಳುವುದು ಬೇಡ. ಮೋಹನಚಂದ ಕಿರಣಗಿಯವರ ಈ ಎರಡು ನಾಟಕಗಳ ಪೈಕಿ ಒಂದನ್ನಾದರೂ ಆಡದ ಹಳ್ಳಿಗಳಿಲ್ಲ. ನೋಡದ ಹಳ್ಳಿಗರಿಲ್ಲ ಎಂಬಷ್ಟು ಪ್ರಸಿದ್ಧಿ ಈ ನಾಟಕಗಳು. ಅದೆಷ್ಟು ಪ್ರಯೋಗಗಳಾಗಿವೆಯೋ! ವೃತ್ತಿ ಹಾಗೂ ಹಳ್ಳಿ ನಾಟಕಗಳ ದಾಖಲೆ ಎಲ್ಲಿದೆ?

ಗುಲ್ಬರ್ಗ ಜಿಲ್ಲೆಯ ಜೇವರ್ಗಿ ತಾಲ್ಲೂಕು ಮಳ್ಳಿಗ್ರಾಮದಲ್ಲಿ 1934ರಲ್ಲಿ ಜನಿಸಿದ ಮೋಹನ್‌ಚಂದ್ ಅವರು ಮೆಟ್ರಿಕ್ಯುಲೇಟಿಶನ್‌ವರೆಗೆ ಶಿಕ್ಷಣ ಪಡೆದು 1957 ರಿಂದ 1992 ರವರೆಗೆ ರಾಯಚೂರು, ಗುಲ್ಬರ್ಗ ಜಿಲ್ಲೆಗಳಲ್ಲಿ ಶಿಕ್ಷಕರಾಗಿ ಸೇವೆಸಲ್ಲಿಸಿ ರಾಜ್ಯ, ರಾಷ್ಟ್ರ ಮಟ್ಟಗಳಲ್ಲಿ ಶಿಕ್ಷಕ ಪ್ರಶಸ್ತಿಗೆ ಪಾತ್ರರಾಗಿದ್ದಾರೆ. ಒಂದು ಪ್ರಹಸನ, ಒಂದು ರೂಪಕ, ಮೂರು ಏಕಾಂತ ಸೇರಿದಂತೆ ಎಂಟು ನಾಟಕಗಳು, ಕವನ ಸಂಕಲನ, ಸಂಪಾದನಾ ಗ್ರಂಥ, ಜೀವನ ಚರಿತ್ರೆ ಇವು ಸೇರಿದಂತೆ ಒಟ್ಟು 16 ಪುಸ್ತಕಗಳನ್ನು ಹೊರತಂದಿದ್ದಾರೆ.

ತಮ್ಮ ಮೊದಲ ನಾಟಕಕ್ಕೆ, 1960ರಲ್ಲಿ, ಕಂದಗಲ್ಲರು ಹಾಗೂ ನಲವಡಿ ಶ್ರೀಕಂಠಶಾಸ್ತ್ರಿಗಳಿಂದ ಮೆಚ್ಚುಗೆ ಪಡೆದು ಎಲ್ಲರ ನಿರೀಕ್ಷೆಯನ್ನು ನಿಜವಾಗಿಸಿದರು. ಆ ಕಾಲಕ್ಕೆ ಅಂತರ್ಜಾತಿ ವಿವಾಹ, ರಾಷ್ಟ್ರಪ್ರೇಮ, ಅಸ್ಪೃಶ್ಯತೆ ನಿವಾರಣೆ, ಸರ್ವೋದಯದಂತಹ ತತ್ವಗಳನ್ನು ನಾಟಕಗಳಲ್ಲಿ ಅಳವಡಿಸಿ ಜನಪ್ರಿಯಗೊಳಿಸಿದ ನಾಟಕಕಾರರಿವರು. ಜ್ವಲಂತ ಸಮಸ್ಯೆಗಳನ್ನು ಕೈಗೆತ್ತಿಕೊಂಡು ನಾಟಕ ರಚಿಸಿದ ಕವಿಯ ಕೃತಿಗಳ ಕಡೆ ಕಣ್ಣು ಹಾಯಿಸದ ಪಂಡಿತವರ್ಗದ ಮೌನವು ಕನ್ನಡ ಸಾಹಿತ್ಯ ಲೋಕದ ಮಿತಿಗಳನ್ನು ಹೇಳಿದರೆ, ಈ ನಾಟಕಕಾರ ಮುಂದೆಯೂ ಅಂತಹದೇ ನಾಟಕಗಳನ್ನು ರಚಿಸಲಿಲ್ಲ ಎಂಬುದೂ ಸಹ ಅಚ್ಚರಿಗೆ ಕಾರಣವಾಗುತ್ತದೆ.

ಆದರೆ 'ಅಣ್ಣ ತಂಗಿ', 'ಹೆಣ್ಣು ಬಾಳಿನ ಕಣ್ಣು', 'ಆದರ್ಶ ಪ್ರೇಮ' ನಾಟಕಗಳು ಆಡುವವರಿಗೆ ಕೃತಿಕಾರನ ಹೆಸರು ಗೊತ್ತಿರಲಿಲ್ಲ. ಆದರೂ ಈಗಲೂ ಯಾವುದಾದರೂ ಹಳ್ಳಿಯಲ್ಲಿ ಪ್ರಯೋಗಗೊಳ್ಳುತ್ತಲೇ ಇರುತ್ತವೆ. ಕಿರಣಗಿಯವರು ಈಗ ವಿಜಾಪೂರ ಜಿಲ್ಲೆಯ ಇಂಡಿಯಲ್ಲಿ ನಿವೃತ್ತ ಜೀವನ ಸಾಗಿಸಿದ್ದಾರೆ.

---



## ರಾಜೇಂದ್ರ ಬಾಬು ಟಿ. ಅಲೆಗಾಂವ

ವೃತ್ತಿಯಿಂದ ಸರಕಾರೀ ಖಜಾನೆಯ ಅಧಿಕಾರಿ. ಪ್ರವೃತ್ತಿಯ ಮಟ್ಟಿಗೆ ಅನುಸರಿಸಿದ್ದು ರಂಗಭೂಮಿಯ ದಾರಿ. ನಾಟಕದ ಸಾಹೇಬನೆಂದೇ ಹೆಸರುವಾಸಿಯಾದ ರಾಜೇಂದ್ರಬಾಬು ತೇಜಪ್ಪ ಅಲೆಗಾಂವ ಅವರು ಗುಲ್ಬರ್ಗಾ ಜಿಲ್ಲೆಯ ಮಾತಾ ಎಂಬ ಗ್ರಾಮದಲ್ಲಿ ಹುಟ್ಟಿದ್ದು 1940ರಲ್ಲಿ. ಬೆಳೆದದ್ದು ಹಸಲಂಗಿಯಲ್ಲಿ. ತಾಯಿ ಕಡೆಯಿಂದ ಮಾವನವರಾದ ಮಧುರಚೆನ್ನರ ಒಟಿನಾಟದಲ್ಲಿ. ಬಾಲ್ಯದಲ್ಲಿಯೇ ಶಿಕ್ಷಣ ಮುಗಿಯುವ ಹೊತ್ತಿಗೆ ವಿವಿಧ ರೀತಿಯ ಅನೇಕ ನಾಟಕಗಳಲ್ಲಿ ಅಭಿನಯ. ಹಲವು ಬಹುಮಾನಗಳ ಗಳಿಕೆ. ಪದವಿ ಪಡೆದು ಖಜಾನೆಯ ನೌಕರಿ ಹಿಡಿದರೂ ರಂಗಭೂಮಿಯ ಸಹವಾಸ ದೂರವಾಗಲಿಲ್ಲ. ಮತ್ತೆ ಮತ್ತೆ ವರ್ಗಾವಣೆಯಾಗುವ ಸಂದರ್ಭವನ್ನೇ ಬಂಡವಾಳವಾಗಿಸಿಕೊಂಡ ಬಾಬು ಅವರು. ದಾಂಡೇಲಿ, ಬನಹಟ್ಟಿ, ಬಸವನ ಬಾಗೇವಾಡಿ ಮುಂತಾದ ಕಡೆಗಳಲ್ಲೆಲ್ಲಾ ಗಣೇಶ ಚತುರ್ಥಿ, ನಾಡಹಬ್ಬಗಳನ್ನು ಸಾಂಸ್ಕೃತಿಕ ಉತ್ಸವಗಳನ್ನಾಗಿ ಮಾರ್ಪಡಿಸಿ. ನೂರಾರು ನಾಟಕಗಳ ಪ್ರದರ್ಶನಕ್ಕೆ ಕಾರಣರಾದರು.

ಅಭಿನಯದಲ್ಲಿ ಬಾಬು ಅವರ ಆರಂಭದ ಒಲವು ಕಂಪನಿ ನಾಟಕಗಳಲ್ಲೇ. ಕುಂಕುಮ, ಗಂಡನ ಆಜ್ಞೆ, ಪುತ್ಥಳಿ ಮುಂತಾದ ಇಪ್ಪತ್ತೈದಕ್ಕೂ ಹೆಚ್ಚಿನ ಜನಪ್ರಿಯ ಕಂಪನಿ ನಾಟಕಗಳಲ್ಲಿ ಇವರ ಅಭಿನಯ ಮನೋಜ್ಞ. ನಂತರ ಪೋಲೀಸ್ ಪಾಟೀಲರಂಥ ಗೆಳೆಯರ ಪ್ರಭಾವದಿಂದಾಗಿ ಬೀದಿನಾಟಕಗಳ ಕಡೆಗೆ ಇವರ ಗಮನ. ರಾಜ್ಯಾದ್ಯಂತ ಆದರಲ್ಲೂ ಪ್ರಮುಖವಾಗಿ ಬಿಜಾಪುರ ಜಿಲ್ಲೆಯಲ್ಲಿ ಸುತ್ತಾಡಿ, ತತ್ವಾಂತರ ಪವನ, ಕೊನೇ ನಮಸ್ಕಾರ. ರಾಯ ನಿನಮ್ಮಾಲ ಸಿಟ್ಟೀನ ಮುಂತಾದ ನಾಟಕಗಳ ಹಲವಾರು ಪ್ರದರ್ಶನಗಳನ್ನು ನೀಡಿದರು. 'ಬೇಲಿ ದಾಟೋಣ', 'ಹುಶಾರಿ ಹೇಳತೇವ'ದಂಥ ನಾಟಕಗಳ ಮೂಲಕ ಸಾಕ್ಷರತೆಯ ಮಹತ್ವವನ್ನು ಸಾರಿದರು. ಹವ್ಯಾಸಿ ರಂಗಭೂಮಿಯ ಮೇಲೂ ಸೂರ್ಯಶಿಕಾರಿ. ನಮಗ ಯಾರೂ ಇಲ್ಲೋ ಯಪ್ಪಾ ಸಾಕ್ಷಿ, ರೊಟ್ಟಿಯ ಋಣ ಮುಂತಾದ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ಅಭಿನಯಿಸಿದ್ದಾರೆ.

---



## ಕೆ. ರಾಮಕೃಷ್ಣ ಬಾಬು

ವಿಜ್ಞಾನ ಪದವಿಯ ಜೊತೆಗೆ ರಾಷ್ಟ್ರಭಾಷಾ ವಿಶಾರದರಾದ ರಾಮಕೃಷ್ಣ ಬಾಬು ಜನಿಸಿದ್ದು 1944ರಲ್ಲಿ. ತಮ್ಮ ರಂಗಭೂಮಿಯ ನಂಟು ಅಂಟಿಕೊಂಡ ಆರಂಭದಿಂದಲೇ ಸಂಘಟನೆಯ ಕಾರ್ಯವನ್ನು ಅಚ್ಚುಮೆಚ್ಚಾಗಿ ಮಾಡಿಕೊಂಡ ಇವರು, ಇಪ್ಪತ್ತನೇ ವಯಸ್ಸಿನಲ್ಲೇ ಕಾಲೇಜು ವಿದ್ಯಾರ್ಥಿಗಳನ್ನು ಒಳಗೊಂಡ 'ಸ್ಫೂರ್ತಿ ಕಲಾವಿದರು' ಕಟ್ಟಿ ಬೆಳೆಸಿದರು. ಪರಿಣಾಮವಾಗಿ ಈ ಸಂಸ್ಥೆ 1998ರಲ್ಲಿ ತನ್ನ ಬೆಳ್ಳಿ ಹಬ್ಬವನ್ನು ಆಚರಿಸುತ್ತಲಿದೆ. ಅಂತರಾಷ್ಟ್ರೀಯ ಯುವ ಸಂಸ್ಥೆಯ ಬೆಂಗಳೂರು ಜೆ.ಸಿ.ಯ ಮತ್ತು ಕಲ್ಚರಲ್ ಕಾರ್ನರ್ ಸಂಸ್ಥೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಇದಲ್ಲದೇ ಬಾಬು ಅವರು ವಿವಿಧ ಕಲಾಸಂಸ್ಥೆಗಳ ಕಾರ್ಯಕರ್ತರು, ನಿರ್ವಾಹಕರೂ ಆಗಿದ್ದಾರೆ. ರಾಜ್ಯಮಟ್ಟದ ಹಲವು ನಾಟಕ ಸ್ಪರ್ಧೆಗಳಲ್ಲಿ ತೀರ್ಪುಗಾರರಾಗಿದ್ದಾರೆ. ಅಭಿನಯ ಮತ್ತು ರಂಗತಂತ್ರ ಎರಡರಲ್ಲೂ ಸಮಾನ ಆಸಕ್ತಿ ತೋರುವ ಬಾಬು ಈವರೆಗೆ ಸುಮಾರು

83 ನಾಟಕಗಳಲ್ಲಿ ಅಭಿನಯಿಸಿದ್ದಾರಲ್ಲದೇ, 29 ನಾಟಕಗಳಿಗೆ ಬೆಳಕು, ಪ್ರಸಾದನ, ಧ್ವನಿ ಸೇವೆಗೈದಿದ್ದಾರೆ. ಇಷ್ಟರಿಂದಲೇ ತೃಪ್ತಿಪಡದ ಇವರು ಸುಮಾರು 47 ನಾಟಕಗಳಿಗೆ ನಿರ್ದೇಶನವನ್ನು ಒದಗಿಸಿದ್ದಾರೆ. ಬೆರಳ್‌ಗೆ ಕೊರಳ್, ಬಂಡ್ವಾಳವಿಲ್ಲದ ಬಡಾಯಿ, ಅಕ್ಕಮಹಾದೇವಿ, ಸಂಸಾರ ನೌಕೆ, ಸ್ವಪ್ನ ವಾಸವದತ್ತ ಹೀಗೆ ವೈವಿಧ್ಯಮಯ ಇವರ ನಿರ್ದೇಶನದ ನಾಟಕಗಳ ಯಾದಿ.

ಕಳೆದೊಂದು ದಶಕದಿಂದ ರಾಮಕೃಷ್ಣಬಾಬು, ಮಕ್ಕಳ ನಾಟಕಗಳ ಬಾಬು ಆಗಿದ್ದಾರೆ. ತಮ್ಮ ಸಂಸ್ಥೆಯ ವತಿಯಿಂದ ಸುಮಾರು ಹತ್ತು ವರ್ಷಗಳಿಂದ ಸತತವಾಗಿ ರಾಜ್ಯಮಟ್ಟದ ನಾಟಕ ಸ್ಪರ್ಧೆಯನ್ನು ನಡೆಸುತ್ತಾ ಬಂದಿದ್ದಾರೆ. ಸ್ವತಃ ಆರು ಮಕ್ಕಳ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಕಳೆದೆರಡು ವರ್ಷದಿಂದ ಮಕ್ಕಳ ರಂಗ ತರಬೇತಿ ಶಿಬಿರಗಳನ್ನೂ ನಡೆಸಿದ್ದಾರೆ. ಅಭಯಾಶ್ರಮದ ಮಕ್ಕಳಿಗಾಗಿ ಇವರು ಆಯೋಜಿಸಿದ ರಂಗ ತರಬೇತಿ ಶಿಬಿರ ಒಂದು ವಿಶಿಷ್ಟ ಪ್ರಯತ್ನ. ಪ್ರಸ್ತುತ ರಂಗಭೂಮಿಗೆ ಬೆಳಕು (ಸಲಕರಣೆ) ನೀಡುವುದನ್ನೇ ವೃತ್ತಿಯಾಗಿಸಿಕೊಂಡಿದ್ದಾರೆ, ರಾಮಕೃಷ್ಣ ಬಾಬುರವರು.

---



## ರಾಮೇಶ್ವರಿ ವರ್ಮ

ಅರವತ್ತೊಂದು ವರ್ಷ ವಯಸ್ಸಿನಲ್ಲೂ ನಾಟಕದ ಮಾತೆತ್ತಿದರೆ ಹರೆಯದವರೂ ನಾಚುವಷ್ಟು ಉತ್ಸಾಹ ತೋರುವ ಅಪ್ಪಟ ರಂಗಕಲಾವಿದೆ ರಾಮೇಶ್ವರಿ ವರ್ಮ. ಹವ್ಯಾಸದ ಆರಂಭ ಅಭಿನಯದಿಂದಲೇ. ಬಿ.ವಿ. ಕಾರಂತ, ನ. ರತ್ನ, ಪ್ರಸನ್ನ, ಸತ್ಯು, ಮಿರ್ಲೆ, ವರ್ಮರಂಥ ನುರಿತ ನಿರ್ದೇಶಕರ ಗರಡಿಯಲ್ಲಿ ನಿರಂತರ ಪಳಗಿದ ರಾಮೇಶ್ವರಿಯವರು, ಆವಾಹನೆ, ಹುಚ್ಚು ಕುದುರೆ, ಮನವೆಂಬ ಮರ್ಕಟ, ತಾಯಿ, ತುಘಲಕ್, ಸಾಯೋ ಆಟ ಇಂತ ಇಪ್ಪತ್ತಕ್ಕೂ ಹೆಚ್ಚಿನ ನಾಟಕಗಳಲ್ಲಿ ಅಭಿನಯಿಸಿದ ಪಾತ್ರಗಳು ಸ್ಮರಣೀಯ. ಮೈಸೂರಿನ ಸಮತೆಂತೋ, ಸಮುದಾಯ, ಕಲಾಪ್ರಿಯ ಮುಂತಾದ ತಂಡಗಳೊಂದಿಗೆ ಭಾಗವಹಿಸುತ್ತಾ ಬಂದ ಇವರು ಮಿಡಿಯಾ, ಮ್ಯಾಕ್‌ಬೆತ್, ರಾಜಕುಮಾರಿ ಮತ್ತು ಮಂತ್ರವಾದಿ ಮುಂತಾದ ನಾಟಕಗಳ ನಿರ್ದೇಶನವನ್ನೂ ಮಾಡಿದ್ದಾರೆ. ಹಲವು ನಾಟಕಗಳಿಗೆ ನೇಪಥ್ಯದಲ್ಲಿ ಉಡುಪು ವಿನ್ಯಾಸ, ರಂಗಸಜ್ಜಿಕೆಗಳನ್ನೂ ಮಾಡಿದ್ದಾರೆ, ಜೊತೆಗೆ, "ಕಿನಾರ" ಎಂಬ ಕಿರಿಯರ ನಾಟಕ ರಂಗವನ್ನೂ ಹುಟ್ಟುಹಾಕಿ ಮಕ್ಕಳ ರಂಗಭೂಮಿಯ ಪುರೋಭಿವೃದ್ಧಿಗಾಗಿ ದುಡಿಯುತ್ತಿದ್ದಾರೆ. ಆಕಾಶವಾಣಿಯಲ್ಲೂ ಉತ್ತಮ ಅಭಿನೇತ್ರಿಯಾಗಿ ಹೆಸರು ಮಾಡಿರುವ ರಾಮೇಶ್ವರಿಯವರು ಬಾನುಲಿಗಾಗಿ ನಾಟಕಗಳನ್ನೂ ರಚಿಸಿದ್ದಾರೆ.

1983–89 ಅವಧಿಗಾಗಿ ನಾಟಕ ಅಕಾಡೆಮಿಯ ಸದಸ್ಯರೂ ಆಗಿದ್ದ ರಾಮೇಶ್ವರಿ ವರ್ಮ ಜಿಲ್ಲಾ ಮಟ್ಟದ ನಾಟಕೋತ್ಸವವನ್ನು, ಕಾಲೇಜು ಶಿಕ್ಷಕರಿಗಾಗಿ ರಂಗತರಬೇತಿ ಶಿಬಿರ, ಮಕ್ಕಳಿಗೆ ಜಿಲ್ಲಾ ಮಟ್ಟದ ನಾಟಕ ಶಿಬಿರ ಮುಂತಾದವುಗಳನ್ನು ಆಯೋಜಿಸಿದ್ದಾರೆ.

ಎಂ.ಎ., ಬಿ.ಎಡ್. ಪದವೀಧರೆಯಾಗಿದ್ದು, ಮೈಸೂರು ವಿಶ್ವವಿದ್ಯಾಲಯದಲ್ಲಿ ಇಪ್ಪತ್ತೊರು ವರ್ಷಗಳ ಕಾಲ ಅಧ್ಯಾಪನ ಮಾಡಿರುವ, ಗಾಂಧಿ ಅಧ್ಯಯನ, ಅಭಿವೃದ್ಧಿ ಅಧ್ಯಯನ, ಮಹಿಳಾ ಅಧ್ಯಯನ ಮುಂತಾದ ವಿಭಾಗಗಳ ಮುಖ್ಯಸ್ಥರಾಗಿ ದುಡಿದ ಪ್ರತಿಭಾವಂತೆ ರಾಮೇಶ್ವರಿ ವರ್ಮ ರಂಗಭೂಮಿಯಲ್ಲಿ ನಟಿಯಾಗಿ, ನಿರ್ದೇಶಕಿಯಾಗಿ, ನೇಪಥ್ಯ ಪಟುವಾಗಿ ರಂಗಸಂಚಾಲಕಿಯಾಗಿ ದಶಕಗಳ ಸಾರ್ಥಕ ಸೇವೆಯನ್ನು ಸಲ್ಲಿಸಿದ್ದಾರೆ.

---



## ಲಿಂಗದೇವರು ಹಳೆಮನೆ

ಅದಮ್ಯ ಪ್ರಗತಿಪರ ಕಾಳಜಿಯ ತುಡಿತ, ಜನಸಮುದಾಯದೊಂದಿಗೆ ಅದನ್ನು ಹಂಚಿಕೊಳ್ಳಬೇಕು ಎಂಬ ಹಂಬಲದ ಲಿಂಗದೇವರು ಹಳೆಮನೆಯವರಿಗೆ ಅತ್ಯನುಕೂಲಕರ ಅಭಿವ್ಯಕ್ತಿ ಸಾಧನವಾಗಿ ಒದಗಿದ್ದು ನಾಟಕ. ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹಾಲುಗೊಣ ಎಂಬ ಪುಟ್ಟಗ್ರಾಮದಲ್ಲಿ 1949ರಲ್ಲಿ ಜನನ. ಅಂತರ್ ಒತ್ತಾಸೆ ಇದ್ದರೆ ಎಂಥ ಕಲೆಯನ್ನೂ ನಂತರವೂ ರೂಢಿಸಿಕೊಳ್ಳಲು ಸಾಧ್ಯ ಎಂಬ ವಾಸ್ತವಕ್ಕೆ ಉತ್ತಮ ನಿದರ್ಶನವಾದ ಹಳೆಮನೆ ನಾಟಕ ಕ್ಷೇತ್ರದಲ್ಲಿ ಗಂಭೀರವಾಗಿ ತನ್ನನ್ನು ತೊಡಗಿಸಿಕೊಂಡಿದ್ದು ಒಂದಿಪ್ಪತ್ತೈದು ವರ್ಷ ವಯಸ್ಸಿನ ನಂತರವೇ.

'ಸಮುದಾಯ' ಸಂಘಟನೆಯ ಜೊತೆ 1975ರಿಂದ ಹೊಂದಿದ ಸಂಬಂಧದೊಂದಿಗೆ ಇವರ ಮತ್ತು ರಂಗಭೂಮಿಯ ನಡುವಿನ ನಂಟು ಆರಂಭ. 'ಮೈಸೂರು ಸಮುದಾಯ'ವನ್ನು ಕಟ್ಟಿ ಬೆಳೆಸಿದವರಲ್ಲಿ ಪ್ರಮುಖರಾದ ಹಳೆಮನೆ, ಅನೇಕ ರಂಗಕಾರ್ಯಾಗಾರಗಳನ್ನು ಸಂಘಟಿಸಿ ಹೊಸಹೊಸ ಪ್ರತಿಭೆಗಳನ್ನು ರೂಪಿಸಲು ಪ್ರೇರಕರಾಗಿದ್ದಾರೆ. ಸಾಕ್ಷರತಾ ಆಂದೋಲನದಲ್ಲಿ ಬೀದಿ ನಾಟಕ ಮಾಧ್ಯಮವನ್ನು ಅತ್ಯಂತ ವ್ಯಾಪಕವಾಗಿ ಬಳಸಿದ ಖ್ಯಾತಿ ಇವರಿಗಿದೆ.

ಇವರ 'ಚಿಕ್ಕದೇವ ಭೂಪ', 'ಹೈದರ್', 'ಅಂತೆಂಬರ ಗಂಡ', 'ತಸ್ಕರ' ನಾಟಕಗಳು ಇವರನ್ನು ಕನ್ನಡದ ಅತ್ಯಂತ ಸೃಜನಶೀಲ ನಾಟಕಕಾರರಲ್ಲಿ ಒಬ್ಬರನ್ನಾಗಿಸಿವೆ. 'ದುರ್ಯೋಧನನ ಆತ್ಮಹತ್ಯೆ', 'ಶೇಕ್ಸ್‌ಪಿಯರನ ಪುಣ್ಯ' ಮುಂತಾದ ಏಳೆಂಟು ಕಿರುನಾಟಕಗಳನ್ನೂ ರಚಿಸಿದ್ದಾರೆ. 'ಡಾ॥ ಬೆಥೂನ್', 'ಧರ್ಮಪುರಿಯ ದೇವದಾಸಿ' ಮತ್ತು 'ಮದರ್ ಕರೇಜ್' ಇವರ ಅನುವಾದಿತ ನಾಟಕಗಳು. ಆಧುನಿಕ ಹವ್ಯಾಸೀ ರಂಗಭೂಮಿಗಾಗಿ ಅತ್ಯಂತ ಪರಿಣಾಮಕಾರಿ ಗೀತೆಗಳನ್ನು ಬರೆದ ಕೀರ್ತಿಯೂ ಇವರಿಗೆ ಸಲ್ಲುತ್ತದೆ. ಇವರ ಕೃತಿಗಳನ್ನು ಅಳವಡಿಸಿಕೊಂಡು 'ಆಧುನಿಕ ರಂಗ ಗೀತೆಗಳು', 'ನೀಲಿ ತಾರೆ', 'ಮನುಕುಲದ ಹಾಡು' ಎಂಬ ಆಡಿಯೋ ಕ್ಯಾಸೆಟ್ಟುಗಳೂ ಬಂದಿವೆ. ಉನ್ನತ ಮಟ್ಟದ ವಿದ್ವಾಂಸ ಹಳೆಮನೆ ಭಾಷಾಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿರುವರಲ್ಲದೇ, ಮೈಸೂರು ವಿಶ್ವವಿದ್ಯಾಲಯದಿಂದ ಕನ್ನಡ ಎಂ.ಎ. ಪದವಿಯನ್ನು ಪ್ರಥಮ ರ‍್ಯಾಂಕಿನೊಂದಿಗೆ ಪಡೆದಿದ್ದಾರೆ. ರಾಜ್ಯ ಸಂಪನ್ಮೂಲ ಕೇಂದ್ರದ ನಿರ್ದೇಶಕರ ಹುದ್ದೆಯನ್ನು 1987–91ರ ಅವಧಿಯಲ್ಲಿ ಸಮರ್ಥವಾಗಿ ನಿರ್ವಹಿಸಿದ ಇವರು ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದಲ್ಲಿ ದೊಡ್ಡ ಹೆಸರು. ತಮ್ಮ ಶೈಕ್ಷಣಿಕ ಪರಿಣತಿಯ ಹಲವು ಕ್ಷೇತ್ರಗಳ ಅನುಭವ ಸಾರವನ್ನು ಕನ್ನಡ ರಂಗಭೂಮಿಗೆ ಧಾರೆಯೆರೆದ ಸೃಜನಶೀಲ, ಸ್ನೇಹ ಜೀವಿ, ಲಿಂಗದೇವರು ಹಳೆಮನೆ.



## ಟಿ.ಎಸ್. ಲೋಹಿತಾಶ್ವ

ಇಂಗ್ಲೀಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು ಅಧ್ಯಾಪನ ವೃತ್ತಿಯಲ್ಲಿ ತೊಡಗಿದ್ದು ತನ್ನೆಲ್ಲಾ ವಿದ್ವತ್ಪೂರ್ಣ ಪ್ರತಿಭೆಯನ್ನು ರಂಗಭೂಮಿಗೂ ಧಾರೆಯೆರೆದ ಟಿ.ಎಸ್. ಲೋಹಿತಾಶ್ವ ಹುಟ್ಟಿದ್ದು, 1942ರಲ್ಲಿ, ತುಮಕೂರು ತಾಲ್ಲೂಕು ತೊಂಡಗೆರೆಯಲ್ಲಿ ತುಮಕೂರಿನ 'ಸಮುದಾಯ'ವನ್ನು ಸ್ಥಾಪಿಸಿ, 1972ರಿಂದ 1981ರವರೆಗೆ ಆ ಮೂಲಕ ರಂಗಚಟುವಟಿಕೆಯಲ್ಲಿ ತೊಡಗಿದ್ದ ಲೋಹಿತಾಶ್ವ ನಂತರ ಬೆಂಗಳೂರು ಸಮುದಾಯದೊಂದಿಗೆ ಬೆರೆತು, ಹುತ್ತವ ಬಡಿದರೆ, ಕತ್ತಲೆ ದಾರಿ ದೂರ, ಪಂಚಮ, ಕುಬಿ ಮತ್ತು ಇಯ್ಯಾಲ ಮುಂತಾದ ಯಶಸ್ವೀ ನಾಟಕಗಳ ಮೂಲಕ ರಾಜ್ಯದ ರಂಗಭೂಮಿಯ ಅವಿಭಾಜ್ಯ ಅಂಗವಾದರು. ಸ್ವಾನುಭವದಿಂದಲೇ ಉತ್ತಮ ನಟರಾದ ಲೋಹಿತಾಶ್ವ ನಂತರ ಬಾದಲ್ ಸರಕಾರ್‌ಅವರ ರಂಗತರಬೇತಿ ಶಿಬಿರದಲ್ಲಿ ಪಳಗಿದರು.

ಶೈಕ್ಷಣಿಕ ಒಳನೋಟ ಇರುವ ಹೆಚ್ಚಿನ ಅನುಕೂಲದಿಂದಾಗಿ ಇವರು ದೆಹಲಿ, ಮದ್ರಾಸ್, ಮುಂಬಯಿಗಳಲ್ಲಿ ನಡೆದ ವಿಚಾರಸಂಕಿರಣಗಳಲ್ಲಿ, ನಾಟಕೋತ್ಸವಗಳಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸಿದರು. ಅಲ್ಲದೇ ಭೀಷ್ಮ ಸಹಾನಿಯವರ 'ಕಬೀರ್ ಖಡಾ ಬಾಜಾರ್‌ಮೆ', 'ಹಾನೂಷ್', ತೆಂಡೂಲ್ಕರ್‌ರ 'ಜಾತಿ ಹೀ ಪೂಛೋ ಸಾಧೂಕಿ', ರಣಜೀತ್ ಕಪೂರ್ 'ಮುಖ್ಯಮಂತ್ರಿ', ಮೋಲಿಯರ್‌ನ 'ದಿ ಫಿಸಿಶಿಯನ್ ಇನ್‌ಸ್ಪೈಟ್ ಆಫ್ ಹಿಮ್‌ಸೆಲ್ಫ್' ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿ, ಪ್ರಯೋಗಿಸಿದರು. 'ಗದ್ದುಗೆ' ನಾಟಕವಲ್ಲದೇ, ಚಾರ್ಲಿ ಚಾಪ್ಲಿನ್‌ನ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಬರೆದಿದ್ದಾರೆ.

ಸಂಘಟನಾ ಕಾರ್ಯದಲ್ಲೂ ನಿಪುಣರು ಲೋಹಿತಾಶ್ವ. ಅನೇಕ ರಂಗತರಬೇತಿ ಶಿಬಿರಗಳನ್ನು ಸಂಘಟಿಸಿದ್ದಲ್ಲದೇ, ಸಾಹಿತ್ಯ ಪರಿಷತ್ತಿನ ನಾಟಕ ಸಲಹಾ ಸಮಿತಿಯ ಸದಸ್ಯರಾಗಿದ್ದರು. ಜನಪದ ರಿಪರ್ಟರಿಯ ಖಜಾಂಚಿಯಾಗಿದ್ದರು. 'ಭದ್ರ ಹವೇಲಿ' ಕಲಾಸಂಸ್ಕೃತಿ ಕೇಂದ್ರವನ್ನು ಹುಟ್ಟುಹಾಕಿ, ಅಖಿಲ ಭಾರತ ಕಲೆ ಮತ್ತು ಶಿಲ್ಪಕಲೆಯ 24 ಜನ ತಜ್ಞರಿಂದ ಶಿಬಿರವನ್ನು ಆಯೋಜಿಸಿದ್ದರು. ರಂಗಭೂಮಿಯ ಆಗುಹೋಗುಗಳಿಗೆ ಸಂಬಂಧಿಸಿದ ಅನೇಕ ವಿಚಾರ ಸಂಕಿರಣಗಳು, ಆಂದೋಲನಗಳು ಇತ್ಯಾದಿಗಳಲ್ಲಿ ಇವರು ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ರಂಗಭೂಮಿಯಲ್ಲದೇ, ದೂರದರ್ಶನದಲ್ಲೂ ಮಿಂಚಿದರು; 250ಕ್ಕೂ ಹೆಚ್ಚು ಚಲನಚಿತ್ರಗಳಲ್ಲಿ ನಟಿಸಿದರು. ಹೀಗೆ ವೈವಿಧ್ಯಮಯ ಕಲಾಸಕ್ತಿ, ಕ್ರಿಯಾಶಕ್ತಿ ತೋರುವ ಕಲಾವಿದ. ಪ್ರಾಧ್ಯಾಪಕ ಟಿ.ಎಸ್. ಲೋಹಿತಾಶ್ವ.



## ವಜೀರಾ ಬಾಯಿ ಸೌದತ್ತಿ

ಶಿರಹಟ್ಟಿ ವೆಂಕೋಬರಾಯರ ಅಣ್ಣನ ಮಗ ಅಣ್ಣಾರಾವ್ ಅವರು ಆರಂಭಿಸಿದ ನಾಟಕ ಕಂಪನಿಯಲ್ಲಿ ತಮ್ಮ ಬಾಲ್ಯದಲ್ಲಿಯೇ ಸೇರಿದ ವಜೀರಾಬಾಯಿ, 'ಉತ್ತರಭೂಪ', 'ಬಡತನದ ಭೂತ' ನಾಟಕಗಳ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿ ತರಬೇತಿ ಹೊಂದಿದರು. ಒಂದು ವರ್ಷದ ನಂತರ ಹಳ್ಳಿಗುಡಿ ಸದಾಶಿವಪ್ಪನವರ ನಾಟಕ ಕಂಪನಿ ಸೇರಿ, 'ಪತಾಣಿ ಪಾಶ'ದಲ್ಲಿ ವೃಂದಾ, 'ಪ್ರಪಂಚ ಪರೀಕ್ಷೆ' ನಾಟಕದಲ್ಲಿ ದೇವರಾಣಿ, 'ಬಡತನದ ಭೂತ'ದ ಮಲಿಕ, 'ಹೇಮರೆಡ್ಡಿ ಮಲ್ಲಮ್ಮ' ನಾಟಕದ ಮಹಾದೇವಿ ಮತ್ತು ಚಿತ್ತರಂಜಿನಿ ಪಾತ್ರಗಳಲ್ಲಿ ಹೆಸರುವಾಸಿಯಾದರು. ಎರಡೂವರೆ ವರ್ಷದ ನಂತರ ಕಲಕೋಟಿ ಚನ್ನಬಸವಯ್ಯನವರ ನಾಟಕ ಕಂಪನಿ ಸೇರಿ ರಂಗ ಗೀತೆಗಳನ್ನು ಶಾಸ್ತ್ರೀಯವಾಗಿ ಕಲಿತು, 'ಕುರುಕ್ಷೇತ್ರ' ನಾಟಕದ ದ್ರೌಪದಿ, 'ಸ್ತ್ರೀ' ನಾಟಕದ ಕಮಲಾ ಪಾತ್ರಗಳನ್ನು ಮತ್ತಷ್ಟು ಕಳೆಗಟ್ಟಿಸಿದರು. ಸಂಗೀತವೇ ನಾಟಕದ ಜೀವಾಳವಾಗಿದ್ದ ಆ ದಿನಗಳು ವಜೀರಾಬಾಯಿಯಂಥ ಸಂಗೀತ ಪ್ರತಿಭೆಗೆ ಉತ್ತಮ ಅವಕಾಶ ನೀಡಿದವು. ಮೂರು ವರ್ಷದ ನಂತರ ಕಂಚಿಕೇರಿ ಕೊಟ್ರಬಸಪ್ಪನವರ ನಾಟಕ ಕಂಪನಿ ಸೇರಿ 'ಚಿತ್ರಾಂಗದ', 'ಭೌಮಾಸುರ', 'ಮೋಹಿನಿ 'ಭಸ್ಮಾಸುರ' ನಾಟಕಗಳ ನಾಯಕಿ ಪಾತ್ರದಲ್ಲಿ ಅಭಿನಯಿಸಿದರು. ನಂತರ ಜಮಖಂಡಿಯ ಗಜಾನನ ನಾಟಕ ಕಂಪನಿ ಕರೆಯ ಮೇರೆಗೆ ಆ ಕಂಪನಿ ಸೇರಿ, 'ಟಿಪ್ಪು ಸುಲ್ತಾನ', 'ರಾಮಾಯಣ' ಸೇರಿದಂತೆ ಎಲ್ಲ ಬಗೆಯ ನಾಟಕಗಳ ಪ್ರಮುಖ ಪಾತ್ರಗಳನ್ನು ನಿರ್ವಹಿಸಿದರು. ಮುಂದೆ ಮುನ್ನೂರು ಬಸವಣ್ಣೆಪ್ಪನವರ ನಾಟಕ ಕಂಪನಿಯ ಪೌರಾಣಿಕ ಪಾತ್ರಗಳಿಂದ ಜನಪ್ರಿಯತೆಯ ತುತ್ತತುದಿಗೆ ಏರಿದರು. ಅಪಾರ ಬೇಡಿಕೆಯ ಈ ನಟಿಗೆ ಒಂದರಿಂದ ಮತ್ತೊಂದು ಕಂಪನಿಗೆ ಕರೆ ಬರುತ್ತಲೇ ಇತ್ತು. ಮುಂದೆ ನ್ಯಾಮತಿ ಶಾಂತಪ್ಪನವರ ಕಂಪನಿಯ 'ಸೌಭಾಗ್ಯ ಲಕ್ಷ್ಮಿ', 'ಸ್ತ್ರೀರತ್ನ' ನಾಟಕಗಳ ಕಥಾನಾಯಕಿ ಪಾತ್ರದಲ್ಲಿ ಅಭಿನಯಿಸಿದರು. ಗುಳೇದಗುಡ್ಡದ ಯಜ್ಞರಪ್ಪ ಕೋಪರ್ಡೆ, ವಸಂತ ಸಾ ನಾಕೋಡರ ನಾಟಕ ಕಂಪನಿ – ಹೀಗೆ ಕರ್ನಾಟಕದ ಹಲವು ಪ್ರಮುಖ ನಾಟಕ ಕಂಪನಿಗಳಲ್ಲಿ ಮೂವತ್ತು ವರ್ಷಕ್ಕೂ ಹೆಚ್ಚು ಕಾಲ ಅಬಾಧಿತವಾಗಿ ನಟಿಯಾಗಿ ಮೆರೆದ ಅನನ್ಯ ಪ್ರತಿಭೆ. ವಜೀರಾ ಬಾಯಿ.



## ವಾಲ್ಟರ್ ಡಿ'ಸೋಜಾ

ಜನಪ್ರಿಯ ನೆಲೆಯಲ್ಲಿ ಮೂಕಾಭಿನಯ ಪಟುವಾಗಿಯೇ ಎದ್ದು ಕಾಣುವ ವಾಲ್ಟರ್ ಡಿ'ಸೋಜಾ ರಂಗಕಲೆಯ ವಿವಿಧ ಆಯಾಮಗಳಲ್ಲಿ ಪಳಗಿದ ಪ್ರತಿಭೆ. ವಿಜ್ಞಾನದಲ್ಲಿ ಪದವಿಯ ನಂತರ ದೆಹಲಿಯ ಪ್ರತಿಷ್ಠಿತ ರಾಷ್ಟ್ರೀಯ ನಾಟಕ ಶಾಲೆಯಲ್ಲಿ ಸ್ನಾತಕೋತ್ತರ ಡಿಪ್ಲೋಮಾ ಪಡೆದಿದ್ದಾರೆ. ಜೊತೆಗೆ ಛಾಯಾಗ್ರಹಣ ಕಲೆಯಲ್ಲಿ ಒಂದು ವರ್ಷ ಅವಧಿಯ ಡಿಪ್ಲೋಮಾವನ್ನು ಮಾಡಿದ್ದಾರೆ. ಮೈಮ್ ಕಲೆಯ ವಿಕಾಸಕ್ಕೆಂದೇ ವಾಲ್ಟರ್ ಕಟ್ಟಿಬೆಳೆಸಿದ ತಂಡ. 'ಕಿನ್ನರ', ರಾಜ್ಯಾದ್ಯಂತ 350ಕ್ಕೂ ಹೆಚ್ಚು ಪ್ರದರ್ಶನಗಳನ್ನು ನೀಡಿದೆ. ಇವರು ಮೈಮ್ ಕಲೆಯಲ್ಲಿ ಹಲವಾರು ಕಾರ್ಯ ಶಿಬಿರಗಳನ್ನೂ ನಡೆಸಿದ್ದಾರೆ. ವಾಲ್ಟರ್ ಡಿ'ಸೋಜಾ ರಾಜ್ಯದ ಹದಿಮೂರು ಜಿಲ್ಲೆಗಳಲ್ಲಿ ಓಡಾಡಿ. ಅನೇಕ ತಂಡಗಳಿಗಾಗಿ ರಂಗತರಬೇತಿ ಶಿಬಿರಗಳನ್ನು ನಡೆಸಿಕೊಟ್ಟಿದ್ದಾರೆ. ಇವರು ನಡೆಸಿದ ಶಿಬಿರಗಳಲ್ಲಿ ರಿಮ್ಯಾಂಡ್ ಹೋಂನಲ್ಲಿರುವ ಮಕ್ಕಳಿಗಾಗಿ, ಸ್ಪಾಸ್ಟಿಕ್ ಸೊಸೈಟಿಯ ಮಕ್ಕಳಿಗಾಗಿ ನಡೆಸಿದ ರಂಗತರಬೇತಿ ಶಿಬಿರಗಳು, ಮತ್ತು ವಿಮೆನ್ಸ್ ಲಿಬರೇಶನ್ ಆರ್ಗನೈಜೇಶನ್‌ಗಾಗಿ ನಡೆಸಿದ ಬೀದಿ ನಾಟಕ ಶಿಬಿರಗಳು ಬಹಳ ವಿಶಿಷ್ಟವಾದುವು. ಮನಿಲಾ, ಸಿಂಗಾಪೂರ್ ಮತ್ತು ಮಲೇಶಿಯಾದಂಥ ವಿದೇಶಗಳಲ್ಲೂ ರಂಗತರಬೇತಿ ಶಿಬಿರಗಳನ್ನು ನಡೆಸಿದ ಹೆಗ್ಗಳಿಕೆ ಇವರದು. ಇವರು ಅಭಿನಯ ತರಂಗ. ಆದರ್ಶ ಫಿಲ್ಮ್ ಇನ್‌ಸ್ಟಿಟ್ಯೂಟ್, ನೀನಾಸಂ, ರಾಷ್ಟ್ರೀಯ ನಾಟಕ ಶಾಲೆ, ಪ್ರಾದೇಶಿಕ ಸಂಪನ್ಮೂಲ ಕೇಂದ್ರ ಮುಂತಾದ ಸಂಸ್ಥೆಗಳಿಗೆ ಸಂದರ್ಶಕ ಬೋಧಕರಾಗಿ ಹೋಗುತ್ತಾರೆ. ನಿರ್ದೇಶನದಲ್ಲಿಯೂ ಹಿಂದುಳಿಯದ ವಾಲ್ಟರ್ ಈ ವರೆಗೆ ಸುಮಾರು 30ಕ್ಕೂ ಹೆಚ್ಚು ನಾಟಕಗಳನ್ನು ವಿವಿಧ ತಂಗಳಿಗಾಗಿ ನಿರ್ದೇಶಿಸಿದ್ದಾರೆ. ಕನ್ನಡದಲ್ಲಿ ಅಲ್ಲದೇ ಕೊಂಕಣಿ, ತುಳು, ಹಿಂದಿ ಮತ್ತು ಇಂಗ್ಲೀಷ್ ಭಾಷೆಗಳಲ್ಲೂ ನಾಟಕಗಳನ್ನು ನಿರ್ದೇಶಿಸಿದ್ದು ಇವರ ವಿಶೇಷ ಸಾಧನೆ. ಒಂದೆರಡು ಚಲನಚಿತ್ರಗಳಿಗೆ ಸಹನಿರ್ದೇಶನ, ಸಾರ್ವಜನಿಕ ಸಂಪರ್ಕ ಕ್ಷೇತ್ರದಲ್ಲಿ ಪರಿಣತಿ. ಇವು ವಾಲ್ಟರ್ ಡಿ'ಸೋಜಾರ ಇನ್ನಿತರ ವೈಶಿಷ್ಟ್ಯಗಳು.

---



## ಶಂಕ್ರಯ್ಯಾ ರುದ್ರಯ್ಯಾ ಘಂಟಿ

ಪ್ರಗತಿಪರ ಜನಜಾಗೃತಿಗಾಗಿ ನಾಟಕ ಮಾಧ್ಯಮವನ್ನು ಪರಿಣಾಮಕಾರಿ ಸಾಧನವನ್ನಾಗಿ ಬಳಸಿಕೊಂಡ ಶಂಕರಯ್ಯಾ ರುದ್ರಯ್ಯಾ ಘಂಟಿ ವಿಜ್ಞಾನ ಪದವಿಯೊಂದಿಗೆ ಸೂಕ್ಷ್ಮಜೀವಶಾಸದಲ್ಲಿ ಸ್ನಾತಕೋತ್ತರ ಡಿಪ್ಲೋಮಾ ಕೂಡ ಪಡೆದಿದ್ದಾರೆ. ಇವರು ಗೋದಾನ, ಕಿಂಗ್‌ಲಿಯರ್, ಸಾಹೇಬರು ಬರುತ್ತಾರೆ. ಮಹಿಮಾಪುರ ಮುಂತಾದ ಸುಮಾರು 20 ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಸುಮಾರು ಹದಿನೈದು ನಾಟಕಗಳನ್ನು ನಿರ್ದೇಶಿಸಿದ್ದಾರೆ. 1988–89ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಬೀದರ್ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ನಡೆಸಿದ ಕಲಾವಿದರ ಕಮ್ಮಟಗಳಲ್ಲಿ ನಾಟಕ ನಿರ್ದೇಶಕರಾಗಿ, ಮಹಿಮಾಪುರ, ಬಾದಶಾಹ್ ಪುರಾಣ ನಾಟಕಗಳನ್ನು ನಿರ್ದೇಶಿಸಿದ್ದಾರೆ. 1993ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ನಡೆಸಿದ ನಾಟಕ ರಚನಾ ಕಮ್ಮಟದಲ್ಲಿ ರಚಿಸಿದ ಇವರ 'ಅನಾಮಿಕ' ನಾಟಕವನ್ನು ಪರಿಷತ್ತು ಪ್ರಕಟಿಸಿದೆ. ವೈಜ್ಞಾನಿಕ ಮನೋವೃತ್ತಿ, ಸಾಕ್ಷರತೆ ಮುಂತಾದುವುಗಳ ಪ್ರಸಾರದಲ್ಲಿ ತಮ್ಮನ್ನು ಸೃಜನಶೀಲವಾಗಿ ತೊಡಗಿಸಿಕೊಂಡ ಶಂಕ್ರಯ್ಯಾ ಘಂಟಿ ಭಾರತ ಜ್ಞಾನ ವಿಜ್ಞಾನ ಸಮಿತಿಯ ರಾಜ್ಯ ಸಂಚಾಲಕರಲ್ಲಿ ಒಬ್ಬರಾಗಿದ್ದಾರೆ. ಸಮುದಾಯ ಗುಲ್ಬರ್ಗಾ ಘಟಕದ ಕಾರ್ಯದರ್ಶಿಯಾಗಿಯೂ ದುಡಿದಿದ್ದಾರೆ. ಭಾರತ ಜ್ಞಾನ ವಿಜ್ಞಾನ ಸಮಿತಿಯು ಯೋಜಿಸಿದ್ದ ಬೀದಿನಾಟಕಗಳ ಕಮ್ಮಟದಲ್ಲಿ 2 ಬೀದಿ ನಾಟಕಗಳನ್ನು ರಚಿಸಿ ನಿರ್ದೇಶಿಸಿದ್ದಾರೆ. ಇದೇ ಸಮಿತಿ 1997ರಲ್ಲಿ ಗುಲ್ಬರ್ಗಾದಲ್ಲಿ ಆಯೋಜಿಸಿದ್ದ ಮಕ್ಕಳ 'ಚಿಣ್ಣರ ಮೇಳ'ದ ಮುಖ್ಯ ನಿರ್ದೇಶಕರಾಗಿದ್ದರಲ್ಲದೇ, ಈ ಸಂದರ್ಭದಲ್ಲಿ ಮೂರು ಮಕ್ಕಳ ನಾಟಕಗಳನ್ನು ನಿರ್ದೇಶಿಸಿದ್ದಾರೆ ಕೂಡ. 1997ರಲ್ಲಿ ಮೈಸೂರಿನ ರಂಗಾಯಣ ಆಯೋಜಿಸಿದ್ದ 'ಚಿಣ್ಣರ ಮೇಳ'ದಲ್ಲಿ

ಸಂಪನ್ಮೂಲ ವ್ಯಕ್ತಿಯಾಗಿಯೂ ಭಾಗವಹಿಸಿದ್ದಾರೆ. ಇವರ ನಿರ್ದೇಶನದ ಬೀದಿನಾಟಕಗಳಾದ 'ಅಕ್ಷರ' 170 ಮತ್ತು 'ಒರೆಗಲ್ಲು' 160 ಪ್ರಯೋಗಗಳನ್ನು ಕಂಡಿರುವುದು ಒಂದು ಹೆಗ್ಗಳಿಕೆ. 1990ರ ಅಂತರ ರಾಷ್ಟ್ರೀಯ ಸಾಕ್ಷರತಾ ವರ್ಷದಲ್ಲಿ ಬೀದರ ಮತ್ತು ಗುಲ್ಬರ್ಗ ಜಿಲ್ಲೆಗಳಲ್ಲಿ ನೂರಾರು ಕಲಾವಿದರ ಜಾಥಾ ಸಂಘಟನೆ ಹಾಗೂ ಬೀದಿ ನಾಟಕಗಳ ಮೂಲಕ ಜನಜಾಗೃತಿ ಮೂಡಿಸುವ ಕೆಸಲವನ್ನು ಮಾಡಿದ ಛಾಂಟಿ. ಕಳೆದ ವರ್ಷ ನವೆಂಬರ್ ತಿಂಗಳಲ್ಲಿ ಗುಲ್ಬರ್ಗಾ ದೂರದರ್ಶನ ಕೇಂದ್ರವು ಯೋಜಿಸಿದ್ದ 'ಸ್ವರ್ಣ ದೀಪ್ತಿ' ಅಂಗವಾಗಿ ಸ್ವಾತಂತ್ರ್ಯ ಸಂಗ್ರಾಮದ ಕುರಿತಾದ 'ಸೋಲರಿಯದ ಶೂರರು' ನಾಟಕವನ್ನು ನಿರ್ದೇಶಿಸಿದ್ದರು.

## ಶಿವಬಾಯವ್ವ ಹುಕ್ಕೇರಿ



ಸುಮಾರು 65 ವರ್ಷ ವಯಸ್ಸಿನ ಹುಕ್ಕೇರಿಯ ಶಿವಬಾಯವ್ವ ಬಾಲ್ಯದಲ್ಲಿಯೇ ಭಜನೆ, ದಾಸರ ಪದಗಳು, ಶರಣರ ವಚನಗಳನ್ನು ಭಾವ ತುಂಬಿ ಹಾಡುವುದನ್ನು ರೂಢಿ ಮಾಡಿಕೊಂಡವರು. ಕಂಚಿನಂಥ ಕಂಠ ಬೇರೆ. 15 ವರ್ಷದವಳಿರುವಾಗಲೇ ಬಾಲಕಿಯ ಅಗಾಧ ಪ್ರತಿಭೆಗೆ ಮನಸೋತ ಜ್ಯೋತಿರ್ಲಿಂಗ ನಾಟ್ಯ ಸಂಘದ ಮಾಲೀಕ ದುಂಡಪ್ಪ 1948ರಲ್ಲಿ ತಮ್ಮ ಸಂಘಕ್ಕೆ ಸೇರಿಸಿಕೊಂಡು ಇವರನ್ನು ನಟಿಯಾಗಿ ರೂಪಿಸಿದರು. ನಟ–ನಟಿಯರಿಗೆ ಕಡ್ಡಾಯವಾಗಿ ಹಾಡಲು ಬರಬೇಕಿದ್ದ ಕಂಪನಿ ನಾಟಕಗಳ ವೈಭವದ ಕಾಲವನ್ನು ಗಾಯನ, ಅಭಿನಯ ಎರಡರಲ್ಲೂ ಪಳಗಿದ ಶಿವಬಾಯವ್ವ ಯಶಸ್ಸಿನ ಮೆಟ್ಟಲೇರುತ್ತಾ ಸಾಗಿದರು. ಮುಂದೆ ಹಲಗೇರಿ ಜಟ್ಟೆಪ್ಪನವರ ನಾಟಕ ಕಂಪನಿಯಲ್ಲಿ ಸೇರಿ ಎಲ್ಲ ಬಗೆಯ ಪಾತ್ರಗಳಲ್ಲೂ ಸೈ ಎನಿಸಿಕೊಂಡರು. ಚೆಂದಾಗಿ ಹಾಡುತ್ತಿದ್ದ ಈ ನಟಿ ಸಂಗೀತ ಪ್ರಧಾನವಾದ ಪುರುಷ ಪಾತ್ರಗಳಾದ ಕೃಷ್ಣ, ನಾರದ ಪಾತ್ರಗಳಲ್ಲೂ ಅಭಿನಯಿಸಿದ್ದಾರೆ. ಐದು ವರ್ಷಗಳ ನಂತರ ಚಿಂದೋಡಿ ವೀರಪ್ಪನವರ ನಾಟಕ ಕಂಪನಿ ಸೇರಿ ಪೌರಾಣಿಕ, ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸಿದರು. ಕಲಾವಿದರನ್ನು ತಯಾರಿಸುವ ಪ್ರಯೋಗಶಾಲೆ ಎಂದು ಪ್ರತೀತಿಯಾದ ಕನ್ನಡ ರಂಗಭೂಮಿಯ ಪ್ರತಿಷ್ಠಿತ ಗೋಕಾಕ ಬಸವಣ್ಣೆಪ್ಪನವರ ನಾಟಕ ಕಂಪನಿ ಸೇರಿ 12 ವರ್ಷಗಳ ಕಾಲ ಈ ಕಂಪನಿಯ ಪ್ರಮುಖ ನಟಿಯರಲ್ಲೊಬ್ಬರಾದರು. ಗುಣಸಾಗರಿ, ಹಳ್ಳಿ ಹುಡುಗಿ ಇವು ಅವರ ಅಭಿನಯದ ಅತ್ಯಂತ ಜನಪ್ರಿಯ ನಾಟಕಗಳಾಗಿದ್ದವು. ಪ್ರಬುದ್ಧ ನಟಿಯಾಗಿ ಬೆಳೆದ ನಂತರ ಏಣಗಿ ಬಾಳಪ್ಪನವರ ಕಲಾವೈಭವ ಸೇರಿ ಅಲ್ಲಿಯ ಎಂಟು ವರ್ಷಗಳ ಅನುಭವದಲ್ಲಿ ತಮ್ಮ ಕಲಾ ನೈಪುಣ್ಯಕ್ಕೆ ಮತ್ತಷ್ಟು ಹೊಳಪು ಪಡೆದು, ಭಾವಪೂರ್ಣ ಅಭಿನಯ ಮತ್ತು ಸುಶ್ರಾವ್ಯ ಗಾಯನ – ಎರಡರಿಂದಲೂ ಪ್ರಖ್ಯಾತರಾದ ಪ್ರತಿಭೆ, ಶಿವಬಾಯವ್ವ.

## ಸಿದ್ದರಾಜ ಗವಾಯಿ ಕಾಚಾಪುರ



ಈ ಅಪ್ಪಟ ರಂಗ ಪ್ರತಿಭೆಯ ಸಿದ್ದರಾಮಪ್ಪ ದೊಡ್ಡಪ್ಪ ತಳವಾರ. ಮೂಲ ಸೌಲಭ್ಯಗಳೂ ಇಲ್ಲದ ಗುಲ್ಬರ್ಗಜಿಲ್ಲೆ ಜೇವರ್ಗಿ ತಾಲ್ಲೂಕು ಕಾಚಾಪುರದ ಬಡ, ಹಿಂದುಳಿದ ಕುಟುಂಬದಲ್ಲಿ 1936ರಲ್ಲಿ ಜನಿಸಿದರು. ಆ ಕಾಲಕ್ಕೆ ಮುಲ್ಕಿ ಪರೀಕ್ಷೆವರೆಗೆ ಓದಿದ್ದು ಒಂದು ಸಾಹಸವೇ ಸರಿ. ಶಾಲೆಯಲ್ಲಿದ್ದಾಗಲೇ ಹುಡುಗನಿಗೆ ಭಜನೆ. ಹಂತಿ ಹಾಡು. ಬಯಲಾಟ, ಪಾರಿಜಾತಗಳೆಂದರೆ ಪಂಚಪ್ರಾಣ. ತನ್ನ ಸುತ್ತಲಿನ ಪರಿಸರದಲ್ಲಿ ಇದ್ಯಾವುದಕ್ಕೂ ಪ್ರೋತ್ಸಾಹ ಇಲ್ಲ, ಹಾಗಾಗಿ ದೂರದ ರಾಣೆಬೆನ್ನೂರಿನ ಮನ್ನೂರು ಬಸವಣ್ಣೆಪ್ಪನವರ ಬಳಿ ಹೋಗಿ 15 ವರ್ಷ ತಪಸ್ಸಿನಂತೆ ಉತ್ತರಾದಿ ಸಂಗೀತ ಕಲಿತು ಗಾನ ವಿಶಾರದರಾದರು. ರಂಗಭೂಮಿ ಪ್ರವೇಶಕ್ಕೆ ಸಂಗೀತವೇ ಮಾರ್ಗವಾಗಿದ್ದ ಆ ಕಾಲದಲ್ಲಿ ನ್ಯಾಮತಿ ನಾಟಕ ಕಂಪನಿ ಸೇರಿ 'ಜೀವನ ಯಾತ್ರೆ', 'ಬಸವೇಶ್ವರ', 'ಮೂಲಾನಕ್ಷತ್ರ' ನಾಟಕಗಳ ಪ್ರಮುಖ ಪಾತ್ರಗಳಲ್ಲಿ ಅವಕಾಶ ಗಿಟ್ಟಿಸಿಕೊಂಡರು. ನಂತರ ನರೇಗಲ್ಲ

ಚೆನ್ನಬಸವಯ್ಯನವರ ಕಂಪನಿ, ಮೃಡದೇವ ಗವಾಯಿಗಳ ಕಂಪನಿ, ಬೆಳವಣಿಕೆ ಸಂಗಪ್ಪನವರ ಕಂಪನಿ, ಸುಳ್ಳದ ದೇಸಾಯಿಯವರ ಕಂಪನಿ ಹೀಗೆ ವಿವಿಧ ಕಂಪನಿಗಳೊಂದಿಗೆ ಮಾಡಿದ ಅಭಿನಯ ಈ ನಟನಿಗೆ ತಾರಾ ಮೌಲ್ಯಗಳಿಸಿಕೊಟ್ಟವು. ಮೂರು ದಶಕಗಳ ಕಾಲ ಅನ್ಯರ ಕಂಪನಿಗಳಲ್ಲಿ ಹೆಸರು ಮಾಡಿದ ನಂತರ ಊರಿನ ಗೆಳೆಯರೊಂದಿಗೆ ಸೇರಿ ತಮ್ಮ ಪ್ರತಿಭೆಯನ್ನೇ ಪಣಕ್ಕಿಟ್ಟು, ಅಮರೇಶ್ವರ ನಾಟಕ ಕಂಪನಿ ಕಟ್ಟಿದರು. ಈ ಕಂಪನಿಯ 'ಕಡಕೋಳ' ಮಡಿವಾಳೇಶ್ವರ' ನಾಟಕ ಹೋದಲ್ಲೆಲ್ಲ ಜಯಭೇರಿ ಬಾರಿಸಿತು. ಬೀದರ, ಗುಲ್ಬರ್ಗಾ, ವಿಜಾಪುರ ಜಿಲ್ಲೆಗಳಲ್ಲಿ ಬಹುದೊಡ್ಡ ಹೆಸರು ಸಂದಿತು. ಹಣದ ಅಡಚಣೆಯಿಂದ ನಿಂತ ನಂತರ ಸಗರ ನಾಡಿನ (ಗುಲ್ಬರ್ಗ ಜಿಲ್ಲೆ) ಹಳ್ಳಿ ಹಳ್ಳಿಗಳಲ್ಲಿ ನೂರಾರು ನಾಟಕಗಳನ್ನು ಕಲಿಸಿ ನಾಟಕ ಮಾಸ್ತರರಾದರು. ಉರುಸು, ಜಾತ್ರೆಗಳ ಭಜನಾ ಮೇಳವಿರಲಿ, ದೊಡ್ಡಾಟವಿರಲಿ, ಸಂಗೀತ ಕಛೇರಿಯೇ ಇರಲಿ ಅಲ್ಲಿ ಸಿದ್ರಾಮಪ್ಪನವರ ಬಾಯಿಂದ ಕಡಕೋಳ ಮಡಿವಾಳಪ್ಪನವರ ಕೃತಿ ಹೊರಹೊಮ್ಮುತ್ತಿರುತ್ತದೆ. ಅಭಿಮಾನಿಗಳು ಇವರನ್ನು 'ಸಿದ್ಧರಾಜ ಗವಾಯಿ' ಎಂದೇ ಗುರುತಿಸುತ್ತಾರೆ. ಸಿದ್ಧರಾಜ ಗವಾಯಿ ಹಾರ್ಮೋನಿಯಂ ನುಡಿಸುತ್ತಾರೆಂದರೆ ಶ್ರೋತೃಗಳ ಮೈಯೆಲ್ಲಾ ಕಿವಿಯಾಗುತ್ತದೆ. ಬಣ್ಣ ಹಚ್ಚಿ ಒಂದೇ ಒಂದು ನಗೆಯ ಝಳಕು ಚಿಮ್ಮಿದರೆ ಎಂಥದರೂ ಮರುಳಾಗುತ್ತಾರೆ.

---

## ಸುರೇಂದ್ರನಾಥ್ ಎಸ್.



ಪ್ರದರ್ಶನ ಮತ್ತು ಲೇಖನ ಕಲೆಯ ಹಲವು ಆಯಾಮಗಳಲ್ಲಿ ತಮ್ಮ ವಿಶಿಷ್ಟ ಅಚ್ಚನ್ನು ಪಡಿಮೂಡಿಸಿದ ಸುರೇಂದ್ರನಾಥ್ ವಿಶೇಷವಾಗಿ ಗುರ್ತಿಸಲ್ಪಡುವುದು ರಂಗಭೂಮಿಗೆ ಅವರು ನೀಡಿದ ಕೊಡುಗೆಯಿಂದಾಗಿ. ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯಿಂದ ಡಿಪ್ಲೋಮಾ ಪಡೆದು ಬಂದ ಇವರು ಕೆಲವು ಕಾಲ ಹೆಗ್ಗೋಡಿನ ನೀನಾಸಂ ರಂಗಶಾಲೆಯ ಪ್ರಿನ್ಸಿಪಾಲರಾಗಿದ್ದರು. ಅನೇಕ ವಿಶ್ವವಿಖ್ಯಾತ ಕೃತಿಗಳನ್ನು ಆಧರಿಸಿ ಸುರೇಂದ್ರನಾಥ್ ರೂಪಿಸಿ ನಿರ್ದೇಶಿಸಿದ ಹಲವಾರು ನಾಟಕಗಳು ರಾಜ್ಯಾದ್ಯಂತ ಅನೇಕ ಪ್ರದರ್ಶನಗಳನ್ನು ಕಂಡು ಜನಪ್ರಿಯವಾಗಿವೆ. 'ಹುಲಗೂರ ಹುಲಿಯವ್ವ', 'ರಣಹದ್ದುಗಳು', 'ಮುಖಾಮುಖಿ', 'ಜನತೆಯ ಶತ್ರು', 'ಒಂದು ಆಕಸ್ಮಿಕ ಸಾವು', 'ಉರಿಯ ಉಯ್ಯಾಲೆ' – ಇವು ಇಂತಹ ಕೆಲವು ಉದಾಹರಣೆಗಳು. ಇದಲ್ಲದೇ ಇನ್ನೂ ಹಲವಾರು ನಾಟಕಗಳನ್ನೂ ನಿರ್ದೇಶಿಸಿದ್ದಾರೆ. ಸುರೇಂದ್ರನಾಥ್ ನಿರ್ದೇಶಿಸಿದ ಎಚ್.ಎಸ್. ವೆಂಕಟೇಶಮೂರ್ತಿ ವಿರಚಿತ 'ಒಂದು ಸೈನಿಕ ವೃತ್ತಾಂತ' ಕೇಂದ್ರ ಸಂಗೀತ ನಾಟಕ ಅಕಾಡೆಮಿ 1993ರಲ್ಲಿ ಆಯೋಜಿಸಿದ್ದ ರಾಷ್ಟ್ರೀಯ ರಂಗೋತ್ಸವದಲ್ಲಿ 'ಅತ್ಯುತ್ತಮ ಪ್ರಯೋಗ' ಎಂಬ ಪ್ರಶಂಸೆಗೆ ಪಾತ್ರವಾಯಿತು. ಜೊತೆಗೆ ಗ್ರಿಪ್ಸ್ ನಾಟಕಗಳನ್ನು ಕನ್ನಡಕ್ಕೆ ರೂಪಾಂತರಿಸಿ ಪ್ರಯೋಗಿಸುತ್ತಾ, ಭಾರತದಲ್ಲಿ 'ಗ್ರಿಪ್ಸ್ ಆಂದೋಲನ'ದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದಾರೆ. ಬರ್ಲಿನ್‌ನಲ್ಲಿರುವ ಗ್ರಿಪ್ಸ್ ಥಿಯೇಟರ್‌ನೊಂದಿಗೆ ಪ್ರತ್ಯಕ್ಷ ಅನುಭವ ಪಡೆಯಲು ಜರ್ಮನಿಯ ಇಂಟರ್‌ನ್ಯಾಷನಲ್ ಥಿಯೇಟರ್ ಇನ್ಸ್‌ಟಿಟ್ಯೂಟ್‌ನಿಂದ ಸ್ಕಾಲರ್‌ಷಿಪ್ಪನ್ನೂ ಪಡೆದಿದ್ದರು. ಕೇರಳದ ಸಾಂಪ್ರದಾಯಿಕ ಕಲೆಗಳ ಕುರಿತು ಅಧ್ಯಯನ ನಡೆಸಲು ಕೇಂದ್ರ ಸಂಗೀತ ನಾಟಕ ಅಕಾಡೆಮಿಯಿಂದ ಫೆಲೋಷಿಪ್ ಪಡೆದ ಸುರೇಂದ್ರನಾಥ್ ಉತ್ತಮ ಸಂಶೋಧಕರೂ ಕೂಡ. ಸುರೇಂದ್ರನಾಥ್ ಉತ್ತಮ ಬೆಳಕು ವಿನ್ಯಾಸಕಾರರೂ ಆಗಿದ್ದಾರೆ. ಯಯಾತಿ, ನೆರಳಿಲ್ಲದ ಜೀವಗಳು, ಭೈರವಿ, ದಿನಕರನ ದಿನಚರಿ ಮುಂತಾದ ನಾಟಕಗಳಲ್ಲದೇ, ವಿವಿಧ ರಾಷ್ಟ್ರೀಯ ಮಟ್ಟದ ರಂಗಕಾರ್ಯಕ್ರಮಗಳಿಗೆ ವಿಶಿಷ್ಟ ರೀತಿಯಲ್ಲಿ ಬೆಳಕನ್ನು ಸಂಯೋಜಿಸಿದ್ದಾರೆ. ಇವರು ಚಲನಚಿತ್ರ, ಟೆಲಿವಿಷನ್ ಮಾಧ್ಯಮಗಳಲ್ಲೂ ವಿಶಿಷ್ಟ ಸಾಧನೆಗೈದಿದ್ದಾರೆ. ಇವರು 'ಆತಂಕ' ಚಿತ್ರಕ್ಕಾಗಿ ಬರೆದ ಕಥೆ, ಚಿತ್ರಕಥೆಗೆ 1993ರ ಕರ್ನಾಟಕ ರಾಜ್ಯ ಪ್ರಶಸ್ತಿ ದೊರಕಿದೆ. ಗಿರೀಶ್ ಕಾರ್ನಾಡ್ ನಿರ್ದೇಶನದ 'ಕಾನೂರು ಹೆಗ್ಗಡತಿ ಸುಬ್ಬಮ್ಮ' ದೂರದರ್ಶನ ಧಾರಾವಾಹಿಗೆ ಚಿತ್ರಕಥೆಯನ್ನು ರಚಿಸಿದ್ದಾರೆ. 1977ರ ಪ್ಯಾನೋರಮಾಕ್ಕಾಗಿ ಆಯ್ಕೆಯಾಗಿದ್ದ 'ನಾಗಮಂಡಲ'ಕ್ಕಾಗಿ ಸಿ. ಅಶ್ವತ್‌ರೊಂದಿಗೆ ಚಿತ್ರಕಥೆ ರಚಿಸಿದ್ದಾರೆ. ವಿವಿಧ ಮಾಧ್ಯಮಗಳ ಅಂಗಳಗಳಲ್ಲಿ ಸರಾಗವಾಗಿ ಓಡಾಡಿ ಹೆಜ್ಜೆಗುರ್ತುಗಳನ್ನು ಮೂಡಿಸಬಲ್ಲ ಪ್ರತಿಭೆ.

---

# 1998ರ ಪ್ರಶಸ್ತಿ ವಿಜೇತರು



## ಚಿತ್ರರಂಜನ ಚಟರ್ಜಿ (ಫೆಲೋಶಿಪ್)

ಪಶ್ಚಿಮ ಬಂಗಾಳದ 24 ಪರಗಣ ಜಿಲ್ಲೆ ಅಶೋಕನಗರದಲ್ಲಿ 1939ರಲ್ಲಿ ಜನಿಸಿದ ಶ್ರೀ ಚಿತ್ರರಂಜನ ಚಟರ್ಜಿಯವರು ಈಗ ಕರ್ನಾಟಕದಲ್ಲಿ ರಂಗಭೂಮಿ ಸೇವೆ ಮಾಡುತ್ತಾ ಬಂಗಾಲಿ ಕನ್ನಡಿಗರಾಗಿ ವಾಸಿಸುತ್ತಿದ್ದಾರೆ.

1960ರಲ್ಲಿ ಉದ್ಯೋಗವನ್ನು ಹುಡುಕಿಕೊಂಡು ಹುಬ್ಬಳ್ಳಿಗೆ ಬಂದ ಚಟರ್ಜಿಯವರು ಅಲ್ಲಿಂದಾಚೆಗೆ ಹುಬ್ಬಳ್ಳಿಯಲ್ಲಿ ನೆಲೆಸಿದರು. ಹುಬ್ಬಳ್ಳಿಯಲ್ಲಿ ನೆಲೆಸಿದ ಮೊದಲ ದಿನಗಳಲ್ಲೇ 'ಯಾರವ ಹುಬ್ಬಳ್ಳಿಯಾಂವ' ಗುನುಗು ಚಟರ್ಜಿಯವರನ್ನು ಆಕರ್ಷಿಸಿತು. 1962ರಲ್ಲಿ ದ.ರಾ. ಬೇಂದ್ರೆಯವರನ್ನು ಕಂಡು ಅವರ ಪ್ರಭಾವಕ್ಕೊಳಗಾದರು. ಅವರ ಮಾರ್ಗದರ್ಶನ ಪಡೆದರು. ಆದರೆ ಚಟರ್ಜಿಯವರು ಕಾವ್ಯದತ್ತ ಆಕರ್ಷಿತರಾಗದೆ, ರಂಗಭೂಮಿಯತ್ತ ಆಕರ್ಷಿತರಾದರು.

ಬಂಗಾಳಿ, ಕನ್ನಡ, ಇಂಗ್ಲಿಷ್, ಹಿಂದಿ ಭಾಷೆಗಳಲ್ಲೂ ಪ್ರಭುತ್ವ ಪಡೆದಿರುವ ಚಟರ್ಜಿಯವರು ಹುಬ್ಬಳ್ಳಿಗೆ ಬಂದ ತಕ್ಷಣ ರಂಗಭೂಮಿ ಕೃಷಿ ಆರಂಭಿಸಿದರು. 1962ರಲ್ಲಿ ಧಾರವಾಡ ಆಕಾಶವಾಣಿಯವರು, ಚಟರ್ಜಿಯವರು ರಚಿಸಿದ್ದ 'ರವೀಂದ್ರ ಠಾಕೂರರ ಬಹುಮುಖ ಪ್ರತಿಭೆ' ಕುರಿತ ಪ್ರಾತ್ಯಕ್ಷಿಕೆಯನ್ನು ಪ್ರಸಾರ ಮಾಡಿದರು. 1965ರಲ್ಲಿ 'ಕಾಬೂಲಿವಾಲ' ನಾಟಕ ಪ್ರದರ್ಶನ ಕಂಡಿತು. 1968ರಲ್ಲಿ 'ಪ್ರಗತಿ ಕಲಾವೃಂದ' ಕಟ್ಟಿ ರಂಗಭೂಮಿಯ ಚಟುವಟಿಕೆಗಳಿಗೆ ಚಾಲನೆ ನೀಡಿದರು.

'ಕ್ರಾಂತಿ ಬಂತು ಕ್ರಾಂತಿ', 'ಜೈಸಿದ್ದನಾಯ್ಕ', 'ವಿಷವರ್ತುಲ', 'ಕತ್ತಲು ಮೂಲೆಯ ಕೆಂಡ', 'ದುರಗವ್ವನ ಮಗ', 'ಶೂರ ಸಂಗೊಳ್ಳಿ ರಾಯಣ್ಣ', 'ನಗೆಯು ಬರುತಿದೆ ಎನಗೆ', 'ನಾನೇ ಬಿಜ್ಜಳ' ಮುಂತಾದ ಕನ್ನಡದ ನಾಟಕಗಳನ್ನು ನಿರ್ದೇಶಿಸಿರುವ ಶ್ರೀ ಚಿತ್ತರಂಜನ ಚಟರ್ಜಿಯವರು ಕನ್ನಡ ರಂಗಭೂಮಿಯನ್ನು ಬೆಳೆಸಿದ್ದಾರೆ. ಹಿಂದಿಯಲ್ಲೂ ಇದೇ ರೀತಿಯ ನಿರ್ದೇಶನಗಳನ್ನು ಮಾಡಿದ್ದಾರೆ. ನಾಟಕಗಳ ನಿರ್ದೇಶನದ ಜೊತೆಗೆ ಕನ್ನಡ ನಾಟಕಗಳ ರಚನೆ, ಅನುವಾದ ಮಾಡಿರುವ ಚಟರ್ಜಿಯವರು, ಕನ್ನಡ ಭಾಷೆಯ ಜೊತೆಗೆ ಅನ್ಯ ಭಾಷೆಗಳ ಸ್ನೇಹಸೇತು ಏರ್ಪಡಿಸಿದ್ದಾರೆ. ಅಪರೂಪದ ಸಂಘಟನಕಾರರಾಗಿರುವ ಚಿತ್ತರಂಜನ ಚಟರ್ಜಿಯವರು ತಮ್ಮ ತನುಮನವನ್ನು ಕನ್ನಡ ರಂಗಭೂಮಿಗಾಗಿ ಮೀಸಲಿರಿಸಿದ್ದಾರೆ.

---



## ಎಂ.ಪಿ. ಪ್ರಕಾಶ್ (ಫೆಲೋಶಿಪ್)

ರಾಜ್ಯದಲ್ಲಿ ಸಂಸ್ಕೃತಿಯ ಪ್ರಜ್ಞೆ ಮೂಡಿಸಿ, ಸಾಂಸ್ಕೃತಿಕ ವಲಯವೊಂದನ್ನು ರೂಪಿಸಲು ಪ್ರಯತ್ನಿಸಿದ ಕೀರ್ತಿ ಶ್ರೀ ಎಂ.ಪಿ. ಪ್ರಕಾಶ್‌ರವರಿಗೆ ಸಲ್ಲುತ್ತದೆ.

ಬಳ್ಳಾರಿ ಜಿಲ್ಲೆಯ ನಾರಾಯಣದೇವರಕೆರೆ ಎಂಬ ಹಳ್ಳಿಯಲ್ಲಿ 1940ರಲ್ಲಿ ಜನಿಸಿದ ಎಂ.ಪಿ. ಪ್ರಕಾಶ್‌ರವರು ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದು, ಅನಂತರ ಕಾನೂನಿನಲ್ಲಿ ಪದವಿ ಗಳಿಸಿ ವಕೀಲ ವೃತ್ತಿಯನ್ನು ಆರಂಭಿಸಿದರು. ಶಾಲಾ ದಿನಗಳಿಂದಲೇ ಅತ್ಯುತ್ತಮ ಚರ್ಚಾಪಟುವಾಗಿದ್ದ ಎಂ.ಪಿ. ಪ್ರಕಾಶ್‌ರವರು ಮುಂದೆ ಉತ್ತಮ ವಾಗ್ಮಿಗಳಾಗಿ ಪರಿವರ್ತಿತಗೊಂಡರು. ಕಲೆ, ಸಾಹಿತ್ಯ, ಸಂಸ್ಕೃತಿ ಬಗ್ಗೆ ಅಪಾರ ಕಾಳಜಿಗಳನ್ನು ಹೊಂದಿರುವ ಶ್ರೀಯುತರು, ಅವುಗಳ ಸರ್ವತೋಮುಖ

ಬೆಳವಣಿಗೆಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಉತ್ಪಲ್ ದತ್ ಅವರ ಸೂರ್ಯಶಿಕಾರಿ ನಾಟಕವನ್ನು ಕನ್ನಡಕ್ಕೆ ಅನುವಾದ ಮಾಡಿ ಪ್ರದರ್ಶಿಸಿದ್ದಲ್ಲದೆ, ಸಂಗ್ಯಾ ಬಾಳ್ಯಾ, ಜೋಕುಮಾರಸ್ವಾಮಿ, ಆಷಾಢದ ಒಂದು ದಿನ, ಯಯಾತಿ ನಾಟಕಗಳನ್ನು ನಿರ್ದೇಶನ ಮಾಡಿದ್ದಾರೆ. ನಾಗಮಂಡಲ, ಅಗ್ನಿ ಮತ್ತು ಮಳೆ ಈ ನಾಟಕಗಳ ಪ್ರದರ್ಶನಗಳ ರೂವಾರಿಯಾಗಿದ್ದಾರೆ. ಹಾಗೂ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಅನೇಕ ಪ್ರದರ್ಶನಗಳನ್ನು ನಡೆಸಲು ಕಾರಣರಾಗಿದ್ದಾರೆ. 'ರಂಗಭಾರತಿ' ಎಂಬ ತಂಡವನ್ನು ಕಟ್ಟಿ ಸುಡುಬಿಸಿಲಿನ ಬಳ್ಳಾರಿ ಜಿಲ್ಲೆಗೆ ರಂಗಭೂಮಿಯ ಕಂಪನ್ನೆರೆದರು. ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಆರಂಭಗೊಳ್ಳಲು ಮಹತ್ತರ ಪಾತ್ರ ವಹಿಸಿರುವ ಶ್ರೀಯುತರು, ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ನಿರಂತರವಾಗಿ ಶ್ರಮಿಸುತ್ತಿದ್ದಾರೆ. ಅಧಿಕೃತವಾಗಿ ಸಂಸ್ಕೃತಿಯ ವಕ್ತಾರರಾಗಿದ್ದಾರೆ ಎಂದರೆ ಅತಿಶಯೋಕ್ತಿಯಾಗಲಾರದು. ಹಡಗಲಿಯಿಂದ ಏಳು, ಎಂಟನೇ ಮತ್ತು ಹತ್ತನೇ ವಿಧಾನಸಭೆಗೆ ಆಯ್ಕೆಯಾದ ಎಂ.ಪಿ. ಪ್ರಕಾಶ್‌ರವರು ರಾಜ್ಯದ ವಿಭಿನ್ನ ಖಾತೆಗಳ ಸಚಿವರಾಗಿ ನಾಡಿನ ಏಳಿಗೆಗಾಗಿ ದುಡಿದಿದ್ದಾರೆ. ಈ ಹಿಂದೆ ಕಾರ್ಮಿಕ ಖಾತೆ, ಸಾರಿಗೆ ಖಾತೆ, ಕೃಷಿ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್, ಪ್ರವಾಸೋದ್ಯಮ, ಬೆಂಗಳೂರು ನಗರಾಭಿವೃದ್ಧಿ, ವಾರ್ತಾ ಮತ್ತು ಪ್ರಚಾರ ಖಾತೆ ಸಚಿವರಾಗಿ ತಮ್ಮದೇ ಆದ ಛಾಪನ್ನು ಒತ್ತಿದ್ದಾರೆ. ಪ್ರಸ್ತುತ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಖಾತೆಯ ಸಚಿವರಾಗಿರುವ ಎಂ.ಪಿ. ಪ್ರಕಾಶ್‌ರವರು 'ನಿರ್ಮಲ' ಗ್ರಾಮೀಣ ಕಲ್ಪನೆಯ ರೂವಾರಿಯಾಗಿದ್ದಾರೆ.

---



## ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು (ಫೆಲೋಶಿಪ್)

ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು 1951ರಲ್ಲಿ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲೂಕಿನ ಹೆಡಿಯಾಲದಲ್ಲಿ ಜನಿಸಿದರು. ತತ್ತ್ವಶಾಸ್ತ್ರದಲ್ಲಿ ಎಂ.ಎ. ಪದವಿ ಪಡೆದು ಶ್ರೀಯುತರು 1977ರಲ್ಲಿ ಸಾಣೇಹಳ್ಳಿ ಶ್ರೀ ಮಠಕ್ಕೆ ಪಟ್ಟಾಧ್ಯಕ್ಷರಾಗಿ ಧರ್ಮದೀಕ್ಷೆ ಸ್ವೀಕರಿಸಿದರು. ರಂಗಾಸಕ್ತಿ, ಪರಿಸರ ಕಾಳಜಿ, ಪುಸ್ತಕ ಪ್ರೇಮ, ಬರಹ... ಹೀಗೆ ಇವರ ಆಸಕ್ತಿಯ ವಲಯಗಳು ಬೆಳೆಯುತ್ತಾ ಸಾಗುತ್ತವೆ. ವೈಚಾರಿಕ ಪ್ರಬಂಧಕಾರರಾಗಿ, ವಚನಕಾರರಾಗಿ, ವಾಗ್ಮಿಗಳಾಗಿ ಅಪಾರ ಜನಮನ್ನಣೆಗಳಿಸಿದ್ದಾರೆ. ವಚನ ಸಾಹಿತ್ಯದ ಸಮಕಾಲೀನತೆ, ಹುಟ್ಟು ಸಾವುಗಳ ಮಧ್ಯೆ, ಒಲಿದಂತೆ ಹಾಡುವೆ, ಹುತ್ತ ಮತ್ತು ಹಾವು, ಕೈದೀವಿಗೆ, ಬದುಕು, ಸಮರಸ, ಬದುಕು ಹೀಗೇಕೆ ?, ಜಾಗೃತವಾಣಿ ಇನ್ನೂ ಮುಂತಾದ 22 ಕೃತಿಗಳನ್ನು ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ರಚಿಸಿದ್ದಾರೆ.

ಸಾಣೇಹಳ್ಳಿಯ 'ಶ್ರೀ ಶಿವಕುಮಾರ ಕಲಾಸಂಘ', ಸಿರಿಗೆರೆಯ 'ತರಳಬಾಳು ಕಲಾಸಂಘ'ಗಳ ರೂವಾರಿಯಾಗಿರುವ ಶ್ರೀಗಳು, ಆ ಕಲಾಸಂಘಗಳು ಅತ್ಯುತ್ತಮ ನಾಟಕಗಳನ್ನು ಪ್ರದರ್ಶಿಸಲು ಕಾರಣವಾಗಿದ್ದಾರೆ. 1997ರಲ್ಲಿ 'ಶಿವಸಂಚಾರ' ಎಂಬ ಹೆಸರಿನಲ್ಲಿ ವಿನೂತನ ಸಂಚಾರಿ ನಾಟಕ ತಂಡವನ್ನು ಕಟ್ಟಿ, ಗ್ರಾಮೀಣ ಜಗತ್ತಿನ ಪ್ರತಿಭೆಗಳು ರಂಗಭೂಮಿಯನ್ನೇರಲು ಅವಕಾಶ ಕಲ್ಪಿಸಿಕೊಟ್ಟರು. ಶ್ರೀಯುತರು ಧರ್ಮಪ್ರಸಾರದ ಜೊತೆಗೆ ಅನೇಕ ಶಿಕ್ಷಣ ಸಂಸ್ಥೆಗಳ ಪೋಷಕರಾಗಿ, ಶಿವಸಂಚಾರದ ಸಂಸ್ಥಾಪಕರಾಗಿ ಅನೇಕ ಜನಪರ ಕಾರ್ಯಗಳಲ್ಲಿ ತೊಡಗಿಕೊಂಡಿದ್ದಾರೆ. ಕಾಯಕ ಮತ್ತು ಶಿಸ್ತನ್ನು ಉಸಿರಿನಂತೆ ಪರಿಭಾವಿಸಿರುವ ಶ್ರೀಗಳು ನ್ಯಾಯನಿಷ್ಠುರರು. ಜನಸಾಮಾನ್ಯರ ಸಮಸ್ಯೆಗಳನ್ನು ಆಲಿಸಿ, ಪರಿಹಾರ ಸೂಚಿಸಲು ಪ್ರತಿ ಭಾನುವಾರವನ್ನು ಮುಡುಪಾಗಿಟ್ಟಿದ್ದಾರೆ. ಅಂಧಶ್ರದ್ಧೆ, ಕಂದಾಚಾರಗಳ ಕಡುವೈರಿಗಳಾಗಿ ವೈಚಾರಿಕ ನೆಲೆಗಟ್ಟಿನ ಮೇಲೆ ಬದುಕುತ್ತಾ, ಸಹಸ್ರಾರು ಜನರಿಗೆ ಮಾರ್ಗದರ್ಶಕರಾಗಿದ್ದಾರೆ. ಧರ್ಮ, ಸಮಾಜ, ಸಂಸ್ಕೃತಿ, ಕಲಾಮಾಧ್ಯಮಗಳ ಸೇತುಬಂಧವೆನಿಸಿರುವ ವೈಜ್ಞಾನಿಕ ಮನೋಭಾವದ ಶ್ರೀಗಳು ನೇರಮಾತಿನ, ದಿಟ್ಟ ನಿಲುವಿನ ಮನೋಧರ್ಮದವರು. ರಂಗಭೂಮಿಯ ಆಯಾಮಗಳನ್ನು ವಿಸ್ತರಿಸಲು ಕಂಕಣಬದ್ಧರಾಗಿರುವ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ಸ್ತುತ್ಯರ್ಹರು, ಅಭಿನಂದನಾರ್ಹರು. ಶ್ರೀಗಳು ರಂಗಭೂಮಿಗೆ ವರವಾಗಿದ್ದಾರೆ.

---



## ಡಾ. ಎಚ್.ಎ. ಪಾರ್ಶ್ವನಾಥ್ (ಫೆಲೋಶಿಪ್)

ಡಾ. ಎಚ್.ಎ. ಪಾರ್ಶ್ವನಾಥ್ ಜನಿಸಿದ್ದು 1947ರಲ್ಲಿ, ಹುಟ್ಟೂರು ಹಾಸನ. ತಂದೆ ಅನಂತರಾಜಯ್ಯ ಮತ್ತು ತಾಯಿ ಪ್ರಭಾವತಮ್ಮ. ಹವ್ಯಾಸಿ ನಟರಾಗಿ, ಲೇಖಕರಾಗಿ, ವಿಮರ್ಶಕರಾಗಿ, ವರದಿಗಾರರಾಗಿ, ಸಂಘಟಕರಾಗಿ, ಸಂಶೋಧಕರಾಗಿ ರಂಗಭೂಮಿಯ ವಲಯದಲ್ಲಿ ಪಾರ್ಶ್ವನಾಥರು ಚಿರಪರಿಚಿತರು. ವೃತ್ತಿಯಿಂದ ವೈದ್ಯರಾಗಿರುವ ಪಾರ್ಶ್ವನಾಥರು ಪ್ರವೃತ್ತಿಯಿಂದ ರಂಗಭೂಮಿ ಕಲಾವಿದರು.

'ಗಾಂಪರ ಗುಂಪು', 'ಸೂರ್ಯ ಶಿಕಾರಿ', 'ಅರಗಿನ ಬೆಟ್ಟ', 'ನಾನೇ ಬಿಜ್ಜಳ', 'ಬೇಲಿ ಮತ್ತು ಹೊಲ', ಮದರ್ ಕರೇಜ್', 'ಗಾಂಧೀನಗರ', 'ಹೆಜ್ಜಾಲ' ಮುಂತಾದ 80 ನಾಟಕಗಳಲ್ಲಿ ಅಭಿನಯಿಸಿರುವ ಡಾ. ಪಾರ್ಶ್ವನಾಥರವರು 'ಮುಖವಿಲ್ಲದವರು', 'ಜನತೆ', 'ಅವಾಂತರ', 'ದೊಡ್ಡಮನೆ', 'ಒಂದು ಬೀದಿಯ ಕತೆ' ಮುಂತಾದ ಬೀದಿನಾಟಕಗಳಲ್ಲೂ ಅಭಿನಯಿಸಿದ್ದಾರೆ.

ರಂಗಪತ್ರಿಕೆಗಳಾದ 'ರಂಗತೋರಣ', 'ಸೂತ್ರಧಾರ', 'ರಂಗವಾಣಿ', 'ರಂಗವೇಷ', ಪತ್ರಿಕೆಗಳಲ್ಲಿ ಆರಂಭದಿಂದಲೂ ಬರವಣಿಗೆ ನಡೆಸಿಕೊಂಡು ಬಂದಿರುವ ಡಾ. ಪಾರ್ಶ್ವನಾಥರವರು ರಂಗಭೂಮಿಯ ವೈಭವವನ್ನು ವಿವರಿಸುತ್ತಾ ಬಂದಿದ್ದಾರೆ. ರಂಗಭೂಮಿಯ ವೈವಿಧ್ಯವನ್ನು ಸಮಾಜಕ್ಕೆ ಮುಟ್ಟಿಸಲು ಅನೇಕ ಜನಪ್ರಿಯ ಪತ್ರಿಕೆಗಳಲ್ಲಿ ಡಾ. ಪಾರ್ಶ್ವನಾಥರು ಲೇಖನಗಳನ್ನು ಬರೆದಿದ್ದಾರೆ. ನಾಡಿನ ಬೇರೆ ಬೇರೆ ಕಡೆ ನಡೆದ ವಿಚಾರಗೋಷ್ಠಿಗಳಲ್ಲಿ ಪ್ರಬಂಧಗಳನ್ನು ಮಂಡಿಸಿ ರಂಗಭೂಮಿಯ ವಿರಿಳಿತಗಳನ್ನು ತೋರಿಸಿಕೊಟ್ಟಿದ್ದಾರೆ.

ಅಭಿನಯ ಭಾರತಿ, ಪ್ರಗತಿ ಕಲಾವೃಂದ, ಸಮುದಾಯ ಸುರುಚಿ, ಕದಂಬ ರಂಗ ವೇದಿಕೆ, ಕಲಾಪ್ರಿಯ ಮುಂತಾದ ಸಂಘ ಸಂಸ್ಥೆಗಳೊಂದಿಗೆ ಕೆಲಸ ಮಾಡಿರುವ ಶ್ರೀಯುತರು ರಂಗಭೂಮಿಯ ಚಟುವಟಿಕೆಗಳಲ್ಲಿ ಸದಾ ಉತ್ಸಾಹಶಾಲಿಗಳಾಗಿರುತ್ತಾರೆ. ದೂರದರ್ಶನ ಚಲನಚಿತ್ರಗಳಲ್ಲೂ ನಟಿಸಿರುವ ಡಾ. ಪಾರ್ಶ್ವನಾಥರು ಸಂಘಟನಾ ಸಿದ್ಧಹಸ್ತರು. 'ಸನ್ನಿಧಿ', 'ರಂಗಸಂಗ', 'ವ್ಯಕ್ತಿ ಶಕ್ತಿ' ಮುಂತಾದ ಕೃತಿಗಳನ್ನು ಹೊರತಂದಿರುವ ಪಾರ್ಶ್ವನಾಥರು ರಂಗಭೂಮಿಯ ಉಜ್ವಲತೆಗಾಗಿ ತಮ್ಮನ್ನು ಸವೆಸಿಕೊಂಡಿದ್ದಾರೆ. ಬಳ್ಳಾರಿ, ಹುಬ್ಬಳ್ಳಿ, ಧಾರವಾಡ ಮತ್ತು ಮೈಸೂರು ಸ್ಥಳಗಳಲ್ಲಿ ವೃತ್ತಿಯೊಂದಿಗೆ ರಂಗಕಾರ್ಯ ನಿರ್ವಹಿಸಿದ್ದಾರೆ.

ಕೈಲಾಸಂರವರ ವ್ಯಕ್ತಿತ್ವ ಮತ್ತು ಕೃತಿಗಳಿಂದ ಸ್ಫೂರ್ತಿ ಪಡೆದವರು ಹಾಗೂ ಇಂಗ್ಲೆಂಡ್ ಮತ್ತು ಡೆನ್ಮಾರ್ಕ್ ದೇಶಗಳಲ್ಲಿ ಸಂಚರಿಸಿ ಅಲ್ಲಿಯ ರಂಗಭೂಮಿಯನ್ನು ಅಭ್ಯಾಸ ಮಾಡಿದ್ದಾರೆ.

---



## ಎಚ್.ಎಸ್. ಪಾರ್ವತಿ (ಫೆಲೋಶಿಪ್)

ಆಕಾಶವಾಣಿ ಮೂಲಕ ನಾಟಕದ ಗೀಳನ್ನು ಸಾವಿರಾರು ಶ್ರೋತೃಗಳಿಗೆ ಹಬ್ಬಿಸಿದ ಕೀರ್ತಿ ಶ್ರೀಮತಿ ಎಚ್.ಎಸ್. ಪಾರ್ವತಿಯವರಿಗೆ ಸಲ್ಲುತ್ತದೆ. ಎಚ್.ಎಸ್. ಪಾರ್ವತಿಯವರು ಶ್ರೀನಿವಾಸರಾವ್ ಮತ್ತು ಮಹಾಲಕ್ಷ್ಮಮ್ಮನವರ ಪುತ್ರಿಯಾಗಿ 1934ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಕಾಶಿ ವಿಶ್ವವಿದ್ಯಾಲಯದಿಂದ ಹಿಂದಿಯಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಅವರ ತುಡಿತವೆಲ್ಲಾ ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಕಡೆಗಿತ್ತು. ಆದ್ದರಿಂದಲೇ ಕನ್ನಡ ಸಾಹಿತ್ಯ ಪರಿಷತ್ತಿನ ಆಡಿಯಲ್ಲಿ ಕನ್ನಡವನ್ನು ವಿಶೇಷವಾಗಿ ಅಧ್ಯಯನ ಮಾಡಿದರು.

1958ರಲ್ಲಿ ಬೆಂಗಳೂರು ಆಕಾಶವಾಣಿಯಲ್ಲಿ ಕಲಾವಿದೆಯಾಗಿ ಉದ್ಯೋಗಕ್ಕೆ ಸೇರಿದ ಶ್ರೀಮತಿ ಎಚ್.ಎಸ್. ಪಾರ್ವತಿಯವರು 32ವರ್ಷ ಭಾಷಾಂತರಕಾರ್ತಿಯಾಗಿ, ಕಾರ್ಯಕ್ರಮ ನಿರ್ವಾಹಕಿಯಾಗಿ ಸೇವೆ ಸಲ್ಲಿಸಿದ್ದಾರೆ.

ಈ ಅವಧಿಯಲ್ಲೇ 100ಕ್ಕೂ ಹೆಚ್ಚಿನ ರಾಷ್ಟ್ರೀಯ ನಾಟಕಗಳನ್ನು ಹಾಗೂ ಶಬ್ದಚಿತ್ರಗಳನ್ನು ಹಿಂದಿಯಿಂದ ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಈ ಎಲ್ಲಾ ನಾಟಕಗಳನ್ನು ಕರ್ನಾಟಕದ ಎಲ್ಲಾ ನಿಲಯಗಳು ಪ್ರಸಾರ ಮಾಡಿವೆ. ಕನ್ನಡದ 65ಕ್ಕೂ ಹೆಚ್ಚಿನ ಪ್ರಸಿದ್ಧ ಕತೆಗಳನ್ನು ರೇಡಿಯೋ ನಾಟಕಗಳನ್ನಾಗಿ ರೂಪಾಂತರಿಸಿದ್ದಾರೆ. ರಾಷ್ಟ್ರೀಯ ನಾಟಕಗಳನ್ನು, ಕಥಾ ತರಂಗಗಳನ್ನು ಸ್ವತಃ ತಾವೇ ನಿರ್ದೇಶಿಸಿದ್ದಾರೆ. ಕರ್ನಾಟಕ ಲೇಖಕಿಯರ ಸಂಘದ ಸ್ಥಾಪಕ ಕಾರ್ಯದರ್ಶಿಯಾಗಿ ತಿರುಮಲಾಂಬ ಪ್ರಶಸ್ತಿಯ ಆಯ್ಕೆ ಸಮಿತಿ ಅಧ್ಯಕ್ಷೆಯಾಗಿ, ಕರ್ನಾಟಕ ಚಲನಚಿತ್ರ ಪ್ರಶಸ್ತಿ ಆಯ್ಕೆ ಸಮಿತಿಯ ಸದಸ್ಯೆಯಾಗಿ, ಕರ್ನಾಟಕ ಚಲನಚಿತ್ರ ಸೆನ್ಸಾರ್ ಬೋರ್ಡ್ ಸದಸ್ಯೆಯಾಗಿ ಶ್ರೀಮತಿ ಎಚ್.ಎಸ್. ಪಾರ್ವತಿಯವರು ಸಾಂಸ್ಕೃತಿಕ ಜಗತ್ತಿನ ಜವಾಬ್ದಾರಿಗಳನ್ನು ನಿರ್ವಹಿಸಿದ್ದಾರೆ. ಆಕಾಶವಾಣಿ ಉದ್ಯೋಗದಿಂದ ನಿವೃತ್ತರಾದ ನಂತರ ಸುಖೀ ಸಂಸಾರದೊಂದಿಗಿರುವ ಶ್ರೀಮತಿ ಎಚ್.ಎಸ್. ಪಾರ್ವತಿಯವರು ರಂಗಭೂಮಿಯ ಆಯಾಮಗಳನ್ನು ಇನ್ನಷ್ಟು ವಿಸ್ತರಿಸಲೆಂದು ಆಶಿಸುತ್ತೇವೆ.



## ಅಡ್ಡಂಡ ಸಿ. ಕಾರ್ಯಪ್ಪ

1961ರಲ್ಲಿ ಪೊನ್ನಂಪೇಟೆ ಹುದೂರು ಗ್ರಾಮದಲ್ಲಿ ಜನಿಸಿದ ಶ್ರೀ ಅಡ್ಡಂಡ ಸಿ. ಕಾರ್ಯಪ್ಪನವರು ಬಿ.ಎ. ಪದವೀಧರರು ಹಾಗೂ ನೀನಾಸಂ ರಂಗಶಿಕ್ಷಣ ಪದವೀಧರರು. ಅಡ್ಡಂಡ ಸಿ. ಕಾರ್ಯಪ್ಪನವರ ತಂದೆ ಶ್ರೀ ಅಡ್ಡಂಡ ಚಂಗಪ್ಪ, ತಾಯಿ ಶ್ರೀಮತಿ ತಂಗಮ್ಮ. ಕಾಲೇಜು ದಿನಗಳಲ್ಲಿ ರಂಗಭೂಮಿ ಬಗ್ಗೆ ವಿಶೇಷವಾದ ಆಕರ್ಷಣೆ ಹೊಂದಿದ್ದ ಕಾರ್ಯಪ್ಪನವರು, 'ಉಲ್ಲಾಳ್ ಶೀಲ್ಡ್' ನಾಟಕ ಸ್ಪರ್ಧೆಗಳಲ್ಲಿ ಭಾಗವಹಿಸುವ ಮೂಲಕ ರಂಗ ಪ್ರವೇಶ ಮಾಡಿದರು. ಆರಂಭದ ದಿನಗಳಲ್ಲಿ ಕಾಲೇಜು ನಾಟಕಗಳನ್ನು ನಿರ್ದೇಶಿಸುತ್ತಿದ್ದ ಕಾರ್ಯಪ್ಪನವರು, ಕಾಲೇಜು ದಿನಗಳ ನಂತರ ಮಹತ್ತರವಾದುದರ ಕಡೆಗೆ ಹೆಜ್ಜೆಗಳನ್ನಿಟ್ಟರು. 1980ರಲ್ಲಿ ಕೊಡಗಿನಲ್ಲಿ 'ಸೃಷ್ಟಿ' ನಾಟಕ ಸಂಸ್ಥೆಯನ್ನು ಸ್ಥಾಪಿಸಿ ರಂಗ ಚಟುವಟಿಕೆಗಳಿಗೆ ವೇದಿಕೆಯನ್ನು ರೂಪಿಸಿಕೊಟ್ಟರು. ಅನೇಕ ಕನ್ನಡ, ಕೊಡವ ನಾಟಕಗಳನ್ನು ರಚಿಸಿ, ನಿರ್ದೇಶಿಸಿದರು. 1984ರಲ್ಲಿ ನೀನಾಸಂ ತಿರುಗಾಟದಲ್ಲಿ ಭಾಗವಹಿಸಿದರು. 1985ರಲ್ಲಿ ಕೊಡಗಿನಲ್ಲಿ 'ಸೃಷ್ಟಿ ಕೊಡುಗು ರಂಗ' ಎಂಬ ರೆಪರ್ಟರಿ ಸ್ಥಾಪಿಸಿ, ಭಾರತದ ಮೊಟ್ಟಮೊದಲ ಪ್ರಾದೇಶಿಕ ರೆಪರ್ಟರಿ ಸ್ಥಾಪಿಸಿದ ಹೆಗ್ಗಳಿಕೆಯನ್ನು ಹೊಂದಿದರು.

ಸುಮಾರು 25ಕ್ಕೂ ಹೆಚ್ಚು ನಾಟಕಗಳನ್ನು ರಚಿಸಿರುವ, 50ಕ್ಕೂ ಹೆಚ್ಚು ನಾಟಕಗಳನ್ನು ನಿರ್ದೇಶಿಸಿರುವ ಕಾರ್ಯಪ್ಪನವರು, 1987 ಮತ್ತು 1992ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಸದಸ್ಯರಾಗಿ, 1995ರಲ್ಲಿ ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ ಸದಸ್ಯರಾಗಿ, ಸೇವೆ ಸಲ್ಲಿಸಿದ್ದಾರೆ. ತಮ್ಮ ಕಲಾಸೇವೆಗೆ ಅನೇಕ ಸಂಸ್ಥೆಗಳಿಂದ ಅಭಿನಂದಿತರಾಗಿರುವ ಕಾರ್ಯಪ್ಪನವರು ಅತ್ಯಂತ ಕ್ರಿಯಾಶೀಲ ವ್ಯಕ್ತಿತ್ವವುಳ್ಳವರು ಹಾಗೂ ಚಿಂತನಶೀಲರು. ರಂಗಭೂಮಿ ಅವರಿಗೆ ಋಣಿಯಾಗಿದೆ.



## ಟಿ.ವಿ. ಗುರುಮೂರ್ತಿ

1951ರಲ್ಲಿ ಜನಿಸಿದ ಶ್ರೀ ಟಿ.ವಿ. ಗುರುಮೂರ್ತಿಯವರು ಮೈಸೂರು ಬ್ಯಾಂಕಿನಲ್ಲಿ ಉದ್ಯೋಗಿಗಳಾಗಿದ್ದಾರೆ. ತಂದೆ ವೆಂಕೋಬರಾವ್, ತಾಯಿ ನರಸಮ್ಮ. ವ್ಯಾಸಂಗವನ್ನು ತಿಪಟೂರಿನಲ್ಲಿ ಮುಗಿಸಿದ ಶ್ರೀಯುತರು 1970ರಲ್ಲಿ ಉದ್ಯೋಗಕ್ಕೆ ಸೇರಿದರು. 1975ರಲ್ಲಿ ಬೆಂಗಳೂರಿಗೆ ವರ್ಗವಾಗಿ ಬಂದ ನಂತರ ರಂಗಭೂಮಿಯಲ್ಲಿ ತೀವ್ರವಾಗಿ ತೊಡಗಿಸಿಕೊಂಡರು. ಟಿ.ವಿ. ಗುರುಮೂರ್ತಿಯವರು ಬ್ಯಾಂಕಿನ ನಾಟಕ ತಂಡದಲ್ಲಿ

25 ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಮೈಸೂರು ಬ್ಯಾಂಕಿನಲ್ಲಿ ಉತ್ತಮ ನಾಟಕ ತಂಡವೊಂದು ಹುಟ್ಟಿಕೊಳ್ಳಲು ಪ್ರಮುಖ ಪಾತ್ರ ವಹಿಸಿದ್ದಾರೆ. ಅಭಿನಯಕ್ಕಷ್ಟೇ ಸೀಮಿತಗೊಳ್ಳದ ಟಿ.ವಿ. ಗುರುಮೂರ್ತಿಯವರು ನೇಪಥ್ಯದಲ್ಲೂ ದುಡಿದಿದ್ದಾರೆ. ಮೈಸೂರು ಬ್ಯಾಂಕ್ ತಂಡ, ಇಂಡಿಯನ್ ಬ್ಯಾಂಕ್ ಆಶ್ರಯದಲ್ಲಿ ನಡೆಯುವ ಅನೇಕ ಪ್ರಶಸ್ತಿ ವಿಜೇತ ನಾಟಕಗಳಲ್ಲಿ ಅಭಿನಯಿಸಿರುವ ಶ್ರೀಯುತರು 'ವಸ್ತು ವಿನ್ಯಾಸ'ಕ್ಕೆ ಸಂಬಂಧಿಸಿದಂತೆ ಪರಿಣತಿ ಹೊಂದಿದ್ದು ಅನೇಕ ಪುರಸ್ಕಾರಗಳನ್ನು ಪಡೆದಿದ್ದಾರೆ. 'ಸ್ಪಂದನ' ನಾಟಕ ತಂಡದ ಸ್ಥಾಪಕ ಸದಸ್ಯರಾದ ಗುರುಮೂರ್ತಿಯವರು ಸಂಕೇತ್, ಕಲಾಗಂಗೋತ್ರಿ, ಪ್ರಯೋಗರಂಗ ಮುಂತಾದ ಹವ್ಯಾಸಿ ತಂಡಗಳ ನಾಟಕಗಳಲ್ಲೂ ಅಭಿನಯಿಸಿದ್ದಾರೆ. ಲಕ್ಷಾಪತಿ ರಾಜನ ಕತೆ, ಉತ್ತಮ ಪ್ರಭುತ್ವ ಲೊಳಲೊಟ್ಟೆ, ಬ್ಲಾಕ್ ಟಿಟ್, ಕರಿಮಾಯಿ, ಘಾಶಿರಾಂ ಕೊತ್ವಾಲ್ ಮುಂತಾದ ನಾಟಕಗಳಲ್ಲಿ ಅಭಿನಯಿಸಿ ಪ್ರಸಿದ್ಧರಾಗಿದ್ದಾರೆ. ಬಹುಮುಖಿ ಪ್ರತಿಭೆಯ ಗುರುಮೂರ್ತಿಯವರು ನಾಡಿನ ನೆಲ, ಜನ, ಭಾಷೆ, ಸಂಸ್ಕೃತಿ ಬಗ್ಗೆ ಅಪಾರ ಕಾಳಜಿಯುಳ್ಳವರು. 'ಕನ್ನಡ ಬಳಗ' ಎಂಬ ಸಂಘದ ರೂವಾರಿಯಾಗಿರುವ ಗುರುಮೂರ್ತಿಯವರು ಹೋರಾಟದ ವೇದಿಕೆಯನ್ನು ರೂಪಿಸಿಕೊಂಡಿದ್ದಾರೆ. ಕನ್ನಡ ಪರ ಹೋರಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಗುರುಮೂರ್ತಿಯವರು ಕನ್ನಡ ನಾಡಿನ ಸಾಂಸ್ಕೃತಿಕ ಜಗತ್ತಿನ ಪ್ರತಿನಿಧಿಯಾಗಿದ್ದಾರೆ. ಅವಕಾಶ ಸಿಕ್ಕಾಗಲೆಲ್ಲಾ ದೂರದರ್ಶನದ ಧಾರಾವಾಹಿಗಳಲ್ಲಿ ಅಭಿನಯಿಸುವ ಗುರುಮೂರ್ತಿಯವರು ಈ ಹಿಂದೆ 'ಆಕ್ಸಿಡೆಂಟ್', 'ಗಳಿಗೆ', 'ಶೌರ್ಯ' ಮುಂತಾದ ಚಲನಚಿತ್ರಗಳಲ್ಲೂ ನಟಿಸಿದ್ದಾರೆ. ಇಷ್ಟೆಲ್ಲಾ ಚಟುವಟಿಕೆಗಳ ಮಧ್ಯೆಯೂ ರಂಗಭೂಮಿಯ ಬಗೆಗಿನ ತಮ್ಮ ಕಾಳಜಿಯನ್ನು ಉಳಿಸಿಕೊಂಡಿದ್ದಾರೆ. ರಂಗಭೂಮಿಗಾಗಿ ದುಡಿಯಲು ಸದಾ ಉತ್ಸುಕರಾಗಿದ್ದಾರೆ.

---



## ಗುರುರಾಜ ನಗರ್ ಜಿ.ಆರ್.

ಶಿವಮೊಗ್ಗ ಜಿಲ್ಲೆ ಸಾಗರದವರಾದ ಶ್ರೀ ಗುರುರಾಜ ನಗರ್ ಜಿ.ಆರ್. 1929ರಲ್ಲಿ ಜನಿಸಿದರು. ತಂದೆ ಎಸ್. ರಾಮಚಂದ್ರಾಚಾರ್ ಅವರು. ಚಿಕ್ಕವಯಸ್ಸಿನಿಂದಲೇ ರಂಗಚಟುವಟಿಕೆಗಳ ಬಗ್ಗೆ ಆಸಕ್ತಿ ಬೆಳೆಸಿಕೊಂಡ ಗುರುರಾಜ ನಗರ್ ಅವರ ರಂಗಭೂಮಿಗೆ ಪ್ರವೇಶಿಸಿದರು. ಸಾಗರದಲ್ಲಿ ಎಲ್ಲೇ ರಂಗಭೂಮಿಯ ಸದ್ದು ಕೇಳಿದರೂ ಗುರುರಾಜರು ಅಲ್ಲಿ ಹಾಜರಾಗುತ್ತಿದ್ದರು. ತಮ್ಮ ಕೈಲಾದ ಕೆಲಸಗಳನ್ನು ಸ್ವಇಚ್ಛೆಯಿಂದಲೇ ಮಾಡುತ್ತಿದ್ದರು. ಹೀಗೆ ರಂಗಭೂಮಿಯ ಸೇವೆ ಮಾಡುತ್ತಲೇ ರಂಗಭೂಮಿಯ ಅವಶ್ಯಕತೆಗಳನ್ನು ಅರಿತುಕೊಂಡ ಗುರುರಾಜ್ ಅವರು 1960 ರಲ್ಲಿ ಸಾಗರದಲ್ಲಿ 'ಶ್ರೀ ಕಮಲಾ ಕಲಾ ಸಂಘ'ವನ್ನು ಕಟ್ಟಿದರು. ಶ್ರೀ ಕಮಲಾಕಲಾ ಸಂಘದ ಮೂಲಕ ನೂರಾರು ನಾಟಕಗಳನ್ನು ಕರ್ನಾಟಕದ ಮೂಲೆ ಮೂಲೆಗಳಿಗೂ ಕೊಂಡೊಯ್ದು ಆಡಿಸಿದ್ದಾರೆ. ಗುರುರಾಜ ನಗರ್‌ರವರು ಸಂಪೂರ್ಣ ಜವಾಬ್ದಾರಿಗಳನ್ನು ವಹಿಸಿಕೊಂಡು ಅನೇಕ ಕಷ್ಟನಷ್ಟಗಳ ಮಧ್ಯೆ ತಂಡವನ್ನು ಮುನ್ನಡೆಸಿದರು.

ಭಜಗೋವಿಂದ, ರಾಧಾರಮಣ, ದೇವದಾಸಿ, ಎಚ್ಚಮ್ಮ ನಾಯಕ ನಾಟಕಗಳಲ್ಲಿ ಅಭಿನಯಿಸಿ ಗುರುರಾಜ್ ನಗರ್‌ರವರು ಜನ ಮೆಚ್ಚುಗೆಯನ್ನು ಪಡೆದಿದ್ದಾರೆ. ಶ್ರೀ ಗುರುರಾಜ ಮಿತ್ರ ಮಂಡಳಿ ಎಂಬ ತಂಡವನ್ನು ರೂಪಿಸಿ ಕರ್ನಾಟಕದ ಎಲ್ಲಾ ಭಾಗಗಳಲ್ಲಿ ನಾಟಕಗಳನ್ನು ಆಡಿ, ಆರ್ಥಿಕವಾಗಿ ನಷ್ಟವನ್ನು ಅನುಭವಿಸಬೇಕಾಯಿತು. ಜೀವನ ನಿರ್ವಹಣೆಗೆ ನಟರಾಗಿ ಪ್ರಸಿದ್ಧ ವೃತ್ತಿಪರ ಸಂಸ್ಥೆಗಳಾದ ದಿವಂಗತ ಮಹದೇವಸ್ವಾಮಿಯವರ ಕನ್ನಡ ಥಿಯೇಟರ್ ಮತ್ತು ಗುಬ್ಬಿ ಕಂಪನಿ, ಸಿದ್ದಯ್ಯನವರ ಕಂಪನಿ, ಸರ್ವಮಂಗಳ ಕಂಪನಿಗಳಲ್ಲಿ ನಟರಾಗಿ ದುಡಿದಿದ್ದಾರೆ. ಜಿ.ಆರ್.ಜಿ. ನಗರ್ ಎಂದೇ ಚಿರಪರಿಚಿತರಾಗಿರುವ ಗುರುರಾಜರವರು ತಮ್ಮ ಎಪ್ಪತ್ತನೇ ಇಳಿವಯಸ್ಸಿನಲ್ಲಿಯೂ ಕೂಡ ಸಾಗರದಲ್ಲಿ ನಿರಂತರವಾದ ರಂಗ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

---

## ಗಿರಿಜಾ ಲೋಕೇಶ್



ಶ್ರೀಮತಿ ಗಿರಿಜಾ ಲೋಕೇಶ್‌ರವರು ರಂಗಭೂಮಿ, ಬೆಳ್ಳಿತೆರೆ, ಕಿರುತೆರೆಯ ಪ್ರತಿಭಾನ್ವಿತ ನಟಿ. ಗಿರಿಜಾರವರ ತಂದೆ ಶ್ರೀ ಪುಟ್ಟಸ್ವಾಮಯ್ಯ ಮತ್ತು ತಾಯಿ ಶ್ರೀಮತಿ ಪೂರ್ಣಿಮಾ. ಪತಿ ಲೋಕನಾಥ್ ನಾಯ್ಡು ಉರುಫ್ ಪ್ರಸಿದ್ಧ ನಟ ಲೋಕೇಶ್‌ರವರು.

ತಮ್ಮ ಹದಿನಾಲ್ಕನೇ ವಯಸ್ಸಿನಲ್ಲಿ ಶಾಸ್ತ್ರೀಯ ನೃತ್ಯ ಕಲಾವಿದೆಯಾಗಿ ರಂಗಭೂಮಿ ಪ್ರವೇಶಿಸಿದ ಶ್ರೀಮತಿ ಗಿರಿಜಾರವರು ತರುವಾಯ ನಾಟಕಗಳಲ್ಲಿ ಅಭಿನಯವನ್ನು ಆರಂಭಿಸಿದರು. ಕ್ರಮೇಣ ನಾಡಿನ ಅನೇಕ ವೃತ್ತಿ ಮತ್ತು ಹವ್ಯಾಸಿ ತಂಡಗಳ ನಾಟಕಗಳಲ್ಲಿ ಅಭಿನಯಿಸಿದರು. ಐತಿಹಾಸಿಕ, ಪೌರಾಣಿಕ, ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸಿ ಅಪಾರವಾದ ಪರಿಣತಿಯನ್ನು ಗಳಿಸಿಕೊಂಡಿರುವ ಗಿರಿಜಾರವರು ತಮ್ಮ ಕಲಾ ಜೀವನದ ಬೆಳವಣಿಗೆಯನ್ನು ಅತ್ಯಂತ ಮುತುವರ್ಜಿಯಿಂದ ರೂಪಿಸಿಕೊಂಡರು. ಪ್ರಸನ್ನರವರು ನಿರ್ದೇಶಿಸಿದ 'ಆಷಾಢದ ಒಂದು ದಿನ' ನಾಟಕದಲ್ಲಿ ಗಿರಿಜಾರವರು ಅಭಿನಯಿಸಿದ ಮಲ್ಲಿಕಾ ಪಾತ್ರ ಕಲಾಭಿಮಾನಿಗಳ ಮನದಲ್ಲಿ ಇನ್ನೂ ಬೆಚ್ಚಗೆ ಕುಳಿತಿದೆ. ರಂಗಭೂಮಿಯಲ್ಲಿ ಅಭಿನಯಿಸುತ್ತಿರುವಾಗಲೇ, ಚಲನಚಿತ್ರಗಳಲ್ಲಿ ಮತ್ತು ದೂರದರ್ಶನದಲ್ಲಿ ಅಭಿನಯಿಸುವ ಅವಕಾಶವನ್ನು ಪಡೆದ ಗಿರಿಜಾರವರು ಆ ಜವಾಬ್ದಾರಿಗಳನ್ನು ಅತ್ಯಂತ ಸಮರ್ಥವಾಗಿ ನಿಭಾಯಿಸಿ ಕೀರ್ತಿ ಗಳಿಸಿದರು. ಸುಮಾರು 75 ಚಲನಚಿತ್ರಗಳಲ್ಲಿ ಅಭಿನಯಿಸಿರುವ ಗಿರಿಜಾರವರು, ತಾವು ಅಭಿನಯಿಸಿರುವ ಎಲ್ಲಾ ಪಾತ್ರಗಳಿಗೂ ನ್ಯಾಯ ಸಲ್ಲಿಸಿದ್ದಾರೆ. ಅವರು ಅಭಿನಯಿಸಿರುವ ಅನೇಕ ಚಿತ್ರಗಳು ರಾಜ್ಯ ಹಾಗೂ ರಾಷ್ಟ್ರೀಯ ಪ್ರಶಸ್ತಿಗಳನ್ನು ಗಳಿಸಿವೆ. ಭುಜಂಗಯ್ಯನ ದಶಾವತಾರ ಚಿತ್ರದಲ್ಲಿನ ಅಭಿನಯಕ್ಕಾಗಿ ರಾಜ್ಯ ಪ್ರಶಸ್ತಿ ಪಡೆದಿರುವ ಗಿರಿಜಾರವರು ಆ ಚಿತ್ರದ ನಿರ್ಮಾಪಕರಲ್ಲೊಬ್ಬರು. ಕಲಾ ಜೀವನದಲ್ಲಿ ಜನಪ್ರಿಯತೆಯನ್ನು ಗಳಿಸಿರುವ ಗಿರಿಜಾರವರು, ಇಂದಿಗೂ ರಂಗಭೂಮಿಯ ಬಗ್ಗೆ ಅತೀವವಾದ ಒಲವನ್ನು ಹೊಂದಿದ್ದಾರೆ. ರಂಗಭೂಮಿಯ ಬೆಳವಣಿಗೆಯ ಬಗ್ಗೆ ತೀವ್ರವಾದ ಕಾಳಜಿಗಳನ್ನು ಹೊಂದಿದ್ದಾರೆ.

---

## ಗವೀಶ ವೀರಭದ್ರಯ್ಯ ಹಿರೇಮಠ



ಕೊಪ್ಪಳ ಜಿಲ್ಲೆಯಲ್ಲಿ 1946ರಲ್ಲಿ ಜನಿಸಿದ ಶ್ರೀ ಗವೀಶ ವೀರಭದ್ರಯ್ಯ ಹಿರೇಮಠರವರು ರಂಗಭೂಮಿ ಕಂಡ ಅಪರೂಪದ ಲೇಖಕರಲ್ಲಿ ಒಬ್ಬರು. ನಾಲ್ಕು ಸಂಪಾದಿತ ಕೃತಿಗಳು, ಹನ್ನೊಂದು ಸ್ವತಂತ್ರ ಕೃತಿಗಳನ್ನು ಹೊರತಂದು ರಂಗಭೂಮಿಯನ್ನು ಶ್ರೀಮಂತಗೊಳಿಸಿದ್ದಾರೆ. ನಾಡಿನ ಸಭೆ, ಸಮಾರಂಭಗಳಲ್ಲಿ ದೂರದರ್ಶನ, ಆಕಾಶವಾಣಿ, ಮುಂತಾದ ಸಮೂಹ ಮಾಧ್ಯಮಗಳಲ್ಲಿ ತಮ್ಮ ರಂಗಭೂಮಿಯ ಬಗೆಗಿನ ಚಿಂತನೆಗಳನ್ನು ಮಂಡಿಸಿದ್ದಾರೆ.

1972 ರಿಂದ ವೃತ್ತಿ ರಂಗಭೂಮಿಯ ಬಗ್ಗೆ ವಿಶೇಷ ಅಧ್ಯಯನ ನಡೆಸಿದ ಶ್ರೀಯುತರು, ವೃತ್ತಿ ರಂಗಭೂಮಿಯ ವೈಶಿಷ್ಟ್ಯಗಳನ್ನು ವಿಮರ್ಶೆ ಮಾಡಿ ಅನೇಕರ ಮೆಚ್ಚುಗೆಗೆ ಪಾತ್ರರಾದರು. 1982ರಲ್ಲಿ ದೂರದರ್ಶನದಲ್ಲಿ ಅಭಿನಯಕ್ಕೆ ತೊಡಗಿ ಯಶಸ್ವಿಯಾದರು. ಅದೇ ವರ್ಷ ಗುಲ್ಬರ್ಗದ ನೃಪತುಂಗ ಕಲಾವಿದರ ಸಂಘದ ಅಧ್ಯಕ್ಷರಾಗಿ ಆಯ್ಕೆಗೊಂಡುದೇ ಶ್ರೀಯುತರ ರಂಗಭೂಮಿಯ ಬಗೆಗಿನ ಕಾಳಜಿಗೆ ಸಾಕ್ಷಿಯಾಗಿದೆ. ಗುಲ್ಬರ್ಗಾ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವೃತ್ತಿ ಸೇವೆ ಸಲ್ಲಿಸುತ್ತಿರುವ ಹಿರೇಮಠರು ನೃಪತುಂಗ ಕಲಾವಿದರ ಸಂಘದ ಅಧ್ಯಕ್ಷ ಪದವಿಯನ್ನು ಸೂಕ್ತವಾಗಿ ಬಳಸಿಕೊಂಡು ರಂಗಭೂಮಿಯ ಚಟುವಟಿಕೆಗಳನ್ನು ಸಂಘಟಿಸಲು ದುಡಿದರು. ಇದೇ ಸಂದರ್ಭದಲ್ಲಿ ಕೆಲವು ಉತ್ತಮ ನಾಟಕಗಳ ನಿರ್ದೇಶನವನ್ನು ಸಹ ಮಾಡಿದರು.

1990 ರಿಂದ 1991ರ ವರೆಗೆ ಜೇವರ್ಗಿಯ ಸ್ವಯಂಜ್ಯೋತಿ ಸಂಘವನ್ನು ಮುನ್ನಡೆಸಿ ಆ ಸಂಘಕ್ಕೆ ಪುನಶ್ಚೇತನ ನೀಡಿದರು. ಇವರ 'ರಂಗ ಕುಸುಮಗಳು' ಕೃತಿ ಮೌಲಿಕವಾದುದು. ವ್ಯಕ್ತಿ ರಂಗ ಕಲಾವಿದರ ಬಗ್ಗೆ ಆಳವಾದ ಅಧ್ಯಯನ ಮಾಡಿದ್ದಾರೆ. ಗತಿಸಿ ಹೋದ ವ್ಯಕ್ತಿ ರಂಗಭೂಮಿಯ ವೈಭವವನ್ನು ನಮ್ಮೆದುರಿಗೆ ತಂದಿಟ್ಟು ವರ್ತಮಾನಕ್ಕೆ ಅರ್ಥ ತುಂಬಿದ ಹಿರೇಮಠರ ಪ್ರಯತ್ನ ಶ್ಲಾಘನೀಯ.



## ದೊಡ್ಡ ಹನುಮಂತಪ್ಪ ಪಂಪಣ್ಣ ಹೂಗಾರ

ಶ್ರೀ ದೊಡ್ಡ ಹನುಮಂತಪ್ಪ ಪಂಪಣ್ಣ ಹೂಗಾರ ಅವರು ಗಂಗಾವತಿ ತಾಲ್ಲೂಕು ಗುಂಡೂರ ಗ್ರಾಮದವರು. 1933ರಲ್ಲಿ ಜನಿಸಿರುವ ಹೂಗಾರರು 65 ವಸಂತಗಳನ್ನು ಕಂಡಿದ್ದಾರೆ. ಐದನೇ ತರಗತಿಗೆ ತಮ್ಮ ವಿದ್ಯಾಭ್ಯಾಸವನ್ನು ನಿಲ್ಲಿಸಿದ ಹೂಗಾರರು ಬೇಸಾಯಕ್ಕೆ ಇಳಿದರು. ಬೇಸಾಯವನ್ನು ಇಂದಿಗೂ ಆಶ್ರಯಿಸಿರುವ ಶ್ರೀಯುತರು, ರಂಗಭೂಮಿಯಲ್ಲಿ ಬೇಸಾಯ ಮಾಡಲು ಇಳಿದದ್ದು ಆಕಸ್ಮಿಕವೇ, ಇಂತಹ ಆಕಸ್ಮಿಕಗಳಿಂದಲೇ ರಂಗಭೂಮಿ ಶ್ರೀಮಂತಗೊಂಡಿದೆ.

ತಮ್ಮ 12ನೇ ವಯಸ್ಸಿನಲ್ಲಿ ಬಯಲಾಟದ ರಂಗದ ಮೂಲಕ ಬೆಳಕಿಗೆ ಬಂದ ಹೂಗಾರರು ದೊಡ್ಡಾಟ, ಸಣ್ಣಾಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಪರಿಣತಿ ಪಡೆಯಲೆತ್ನಿಸಿದರು. ಅಭಿನಯಕ್ಕೆ ತಮ್ಮನ್ನು ಸೀಮಿತಗೊಳಿಸಿಕೊಂಡಿದ್ದ ಹೂಗಾರರು ಕ್ರಮೇಣ ಹಾಡಲು ಆರಂಭಿಸಿದರು. ತಮ್ಮ ಕಂಠಸಿರಿಯನ್ನು ಸಾದರಪಡಿಸಿದರು. ಸಾಮಾಜಿಕ ಮತ್ತು ಭಕ್ತಿಪ್ರಧಾನ ನಾಟಕಗಳನ್ನು ನಿರ್ದೇಶಿಸಿದರು. ಹೀಗೆ ತಮ್ಮ ಚೈತನ್ಯವನ್ನೆಲ್ಲಾ ಹೂಗಾರರು ರಂಗಭೂಮಿಗೆ ಧಾರೆಯೆರೆದಿದ್ದಾರೆ. ಯಾವುದೇ ಪಾತ್ರವಿರಲಿ ಲೀಲಾಜಾಲವಾಗಿ ಸಹಜವಾಗಿ ಆ ಪಾತ್ರವೇ ತಾವಾಗಿ ಪರಕಾಯ ಪ್ರವೇಶ ಮಾಡುವ ಶ್ರೀಯುತರು ಅಪ್ರತಿಮ ಕಲಾವಿದರು. ಸರಳ ವ್ಯಕ್ತಿಯಾಗಿ, ನೇರ ಮಾತುಗಾರರಾಗಿ ಈ ಇಳಿಯವಯಸ್ಸಿನಲ್ಲಿ ಸದಾ ಚಟುವಟಿಕೆಯಿಂದ ಇರುವ ಶ್ರೀ ದೊಡ್ಡ ಹನುಮಂತಪ್ಪ ಪಂಪಣ್ಣ ಹೂಗಾರರ ರಂಗಭೂಮಿಯ ಸೇವೆ ಅನನ್ಯವಾದುದು.



## ಎನ್. ನರಸಿಂಹಯ್ಯ

ಶ್ರೀ ಎನ್. ನರಸಿಂಹಯ್ಯನವರು ತುರುವೇಕೆರೆ ತಾಲ್ಲೂಕು ಬೈತರ ಹೊಸಹಳ್ಳಿಯಲ್ಲಿ 1942ರಲ್ಲಿ ಜನಿಸಿದರು. ಇಂಟರ್‌ಮಿಡಿಯೆಟ್ ವರೆವಿಗೂ ವ್ಯಾಸಂಗ ಮಾಡಿ 1962ರಲ್ಲಿ ರಾಜ್ಯದ ಆರೋಗ್ಯ ಇಲಾಖೆಯಲ್ಲಿ ಕೆಲಸಕ್ಕೆ ಸೇರಿದರು. ಸ್ಕೂಲು ದಿನಗಳಿಂದಲೂ ನಾಟಕದಲ್ಲಿ ಆಸಕ್ತಿ ಹೊಂದಿದ್ದ ನರಸಿಂಹಯ್ಯನವರು ಕೆಲಸಕ್ಕೆ ಸೇರಿದ ನಂತರ ರಂಗಭೂಮಿಯಲ್ಲಿ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡರು. ಶ್ರೀ ವೀರಭದ್ರಾಚಾರ್, ಶ್ರೀ ಪೈಂಟರ್ ಮರಿಯಣ್ಣ ಮತ್ತು ಮಾಸ್ಟರ್ ಪಿ. ವಜ್ರಪ್ಪನವರಲ್ಲಿ ಶಿಷ್ಯತ್ವ ಸ್ವೀಕರಿಸಿ ಹಾರ್ಮೋನಿಯಂ ಮತ್ತು ಅಭಿನಯವನ್ನು ಕಲಿತರು. ಸುಮಾರು 1965 ರಿಂದಲೇ ಪೌರಾಣಿಕ ನಾಟಕಗಳಲ್ಲಿ ಅಭಿನಯಿಸುತ್ತಾ ಜನಪ್ರಿಯತೆಯನ್ನು ಗಳಿಸಿಕೊಂಡರು. ಕೆಲವು ನಾಟಕಗಳಿಗೆ ಹಾರ್ಮೋನಿಯಂ ನುಡಿಸತೊಡಗಿದರು. 1970 ರಿಂದಾಚೆಗೆ ಪೌರಾಣಿಕ ನಾಟಕಗಳನ್ನು ನಿರ್ದೇಶನ ಮಾಡಲು ಮುಂದಾದರು. ಕ್ರಮೇಣ ನಾಟಕಗಳಿಗೆ ನಿರ್ದೇಶನ, ಸಂಗೀತ ನಿರ್ದೇಶನ ಮಾಡುವುದರಲ್ಲಿ ಹೆಚ್ಚಾಗಿ ತೊಡಗಿಸಿಕೊಂಡರು. ನಿರ್ದೇಶನ ಮತ್ತು ಸಂಗೀತ ನಿರ್ದೇಶನದಲ್ಲಿ ಮನಸ್ಸನ್ನು ಕೇಂದ್ರೀಕರಿಸಿದ್ದರಿಂದ ನರಸಿಂಹಯ್ಯನವರು ಇದುವರೆಗೂ ಸುಮಾರು 1885 ನಾಟಕಗಳಿಗೆ ನಿರ್ದೇಶನ ಮತ್ತು ಸಂಗೀತ ನಿರ್ದೇಶನ ನೀಡಿ ಪ್ರಸಿದ್ಧರಾಗಿದ್ದಾರೆ.

'ಡ್ರಾಮಾ ಮಾಸ್ಟರ್' ಎಂದೇ ಜನಪ್ರಿಯಗೊಂಡಿರುವ ಎನ್. ನರಸಿಂಹಯ್ಯನವರು ಉತ್ಸಾಹಶಾಲಿಗಳು. ಅನೇಕ ಯುವಕರನ್ನು ಪ್ರೋತ್ಸಾಹಿಸಿ ರಂಗಭೂಮಿಗೆ ಕರೆತಂದಿದ್ದಾರೆ. ರಂಗಭೂಮಿಯನ್ನು ಬೆಳೆಸಿದ್ದಾರೆ. ಅನೇಕ ಸಂಘ ಸಂಸ್ಥೆಗಳಿಂದ ಸನ್ಮಾನಿತರಾಗಿರುವ ಶ್ರೀಯುತರು ರಂಗಭೂಮಿಯಲ್ಲಿ ಇನ್ನಷ್ಟು ತೊಡಗಿಸಿಕೊಳ್ಳಲು ಕನವರಿಸುತ್ತಿದ್ದಾರೆ.

---



## ಕೆ.ಎಲ್. ನಾಗರಾಜಶಾಸ್ತ್ರಿ

ಶ್ರೀ ಕೆ.ಎಲ್. ನಾಗರಾಜಶಾಸ್ತ್ರಿಗಳು ಬೆಂಗಳೂರು ಜಿಲ್ಲೆ ಮಾಗಡಿ ತಾಲ್ಲೂಕು, ಕುದೂರು ಗ್ರಾಮದಲ್ಲಿ 1926ರಲ್ಲಿ ಜನಿಸಿದರು. ತಂದೆ ಲಕ್ಷ್ಮೀನರಸಿಂಹಶಾಸ್ತ್ರಿ, ತಾಯಿ ಗೌರಮ್ಮ, ಬಾಲ್ಯದಲ್ಲಿಯೇ ತಾಯಿಯಿಂದ ಸಂಗೀತವನ್ನು ಅಭ್ಯಸಿಸಿ, ಬೆಂಗಳೂರು ಶ್ರೀ ಜಯಚಾಮರಾಜೇಂದ್ರ ವೇದಮಹಾಪಾಠಶಾಲೆಯಲ್ಲಿ ಸಂಸ್ಕೃತವನ್ನು ಅಧ್ಯಯನ ಮಾಡಿ, ಮುಂದೆ ಕರ್ನಾಟಕದ ಹೆಸರಾಂತ ಮೃದಂಗ ವಿದ್ವಾನ್ ಶ್ರೀಮಾನ್ ಸುಬ್ಬಯ್ಯ ಭಾಗವತರ್ ಅವರಿಂದ ಮಾಧ್ಯಮಿಕ ಸಂಗೀತ ಶಿಕ್ಷಣ ಕಲಿತರು. ಜೊತೆಯಲ್ಲಿಯೇ ಕೊಳಲು, ಪಿಟೀಲು ಮತ್ತು ಹಾರ್ಮೋನಿಯಂನಲ್ಲಿ ಪರಿಣತಿ ಪಡೆದರು.

1942 ರಿಂದ ರಂಗ ಕಲಾಸೇವೆಯನ್ನು ಪ್ರಾರಂಭಿಸಿ, ಹವ್ಯಾಸಿ ನಾಟಕ ಕಂಪನಿಗಳಿಗೆ ಕೊಳಲು ವಾದನ ನುಡಿಸುತ್ತಿದ್ದರು. ಜೊತೆಗೆ ಚಾಮರಾಜಪೇಟೆಯಲ್ಲಿದ್ದ ಸ್ವರವಾಣಿ ಆರ್ಕೆಸ್ಟ್ರಾದಲ್ಲಿ ಕೊಳಲು ನುಡಿಸಿ ಪ್ರಖ್ಯಾತರಾದರು, 1954ರಲ್ಲಿ ಮಂಡ್ಯಕ್ಕೆ ಬಂದು ನೆಲೆಸಿದರು. ಕೊಳಲುವಾದನದಿಂದ ಬರವಣಿಗೆಗೆ ಇಳಿದ ಶ್ರೀಯುತರು ಶ್ರೀನಿವಾಸ ಕಲ್ಯಾಣ, ಅಹಿಮಹಿರಾವಣ, ರಾಜಾ ಸತ್ಯವ್ರತ, ಐರಾವತ, ಅಥವಾ ಗಜಗೌರೀವ್ರತ, ದಿವ್ಯಭಾರತ, ಜೀವರತ್ನಾಪಹರಣ ನಾಟಕಗಳನ್ನು ಸ್ವತಃ ತಾವೇ ಬರೆದು ರಂಗ ಕಲಾವಿದರಿಗೆ ತರಬೇತಿ ನೀಡಿ ಪ್ರದರ್ಶಿಸಿದರು.

ಐದು ದಶಕಗಳಿಂದ ಮಂಡ್ಯದಲ್ಲಿ ನೆಲೆಸಿ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳನ್ನು ಆಡಿಸಿ ಸಂಗೀತ ಕ್ಷೇತ್ರದಲ್ಲಿಯೂ ಪರಿಣತಿ ತೋರಿ ತಮ್ಮ ಕಲಾಸೇವೆ ಅತ್ಯದ್ಭುತ ಎಂಬುದನ್ನು ಸಾಬೀತು ಪಡಿಸಿದ್ದಾರೆ. ಶ್ರೀಯುತರನ್ನು ಕರ್ನಾಟಕ ಮುಸ್ಲಿಂ ಕನ್ನಡ ಕಲಾ ಕೇಂದ್ರ, ಜಿಲ್ಲಾ ಗಣರಾಜ್ಯೋತ್ಸವ ಸಮಿತಿಗಳು ಸನ್ಮಾನಿಸಿವೆ, ಗೌರವಿಸಿವೆ. ಎಪ್ಪತ್ತರ ಇಳಿವಯಸ್ಸಿನಲ್ಲೂ ರಂಗಭೂಮಿಗಾಗಿ ಸೇವೆಗೈಯುವ ಅದಮ್ಯ ಬಯಕೆಯನ್ನು ಶ್ರೀಯುತರು ಹೊಂದಿದ್ದಾರೆ.

---



## ಬಿ.ಆರ್. ಜಯರಾಂ

ಶ್ರೀ ಬಿ.ಆರ್. ಜಯರಾಂರವರು 1934ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ತಂದೆ ಟಿ.ಪಿ. ಕೈಲಾಸಂರವರ ಒಡನಾಡಿ ಶ್ರೀ ಬಿ.ಎಸ್. ರಾಮರಾವ್‌ರವರು.

ನ್ಯಾಷನಲ್ ಕಾಲೇಜಿನಲ್ಲಿ ಇಂಟರ್‌ಮಿಡಿಯಟ್ ಓದಿ, ನಂತರ ರೇಡಿಯೋ ಇಂಜಿನಿಯರಿಂಗ್ ಅಧ್ಯಯನ ಮಾಡಿ 1955ರಲ್ಲಿ ನಗರದ ದೂರವಾಣಿ ಕಾರ್ಖಾನೆಯಲ್ಲಿ ಇಂಜಿನಿಯರ್ ಆಗಿ ಸೇವೆಗೆ ಸೇರಿದರು.

ಬಿ.ಆರ್. ಜಯರಾಂರವರು ತಮ್ಮ 10ನೇ ವಯಸ್ಸಿನಲ್ಲಿಯೇ ಕೈಲಾಸಂರವರ 'ತಾಳೀಕಟ್ಟೋಕ್ಕೂಲೀನೇ' ನಾಟಕದಲ್ಲಿ 'ಮಗೂ' ಪಾತ್ರದಲ್ಲಿ ಅತ್ಯುತ್ತಮವಾಗಿ ಅಭಿನಯಿಸಿ ಗಮನ ಸೆಳೆದರು. ತಂದೆ ಬಿ.ಎಸ್. ರಾಮರಾವ್‌ರವರು ಕೈಲಾಸಂರವರ ನಾಟಕಗಳ ಹಸ್ತಪ್ರತಿ ಸಿದ್ಧಪಡಿಸಿ ಮುದ್ರಿಸಿ, ಪ್ರಕಾಶಿಸುವ, ಪ್ರಚಾರ ಮಾಡುವ ಹೊಣೆ ಹೊತ್ತಿದ್ದರು. ಆದ್ದರಿಂದ ಜಯರಾಂರವರ ಕಲಾ ಆಸಕ್ತಿಗೆ ಪ್ರೋತ್ಸಾಹ ದೊರೆಯಿತು. ತಾಳೀಕಟ್ಟೋಕ್ಕೂಲೀನೇ ನಾಟಕದ 'ಮಗೂ' ಪಾತ್ರವನ್ನು ಸ್ವತಃ ಕೈಲಾಸಂರವರೇ ಕೊಂಡಾಡಿ, ಬಿ.ಎಸ್. ಜಯರಾಂರವರನ್ನು ಅಭಿನಂದಿಸಿದ್ದು, ಜಯರಾಂರವರಲ್ಲಿ

ರಂಗಭೂಮಿ ಬಗೆಗಿನ ಆಸಕ್ತಿಯನ್ನು ಇನ್ನಷ್ಟು ಹೆಚ್ಚಿಸಿತು. ತಂದೆ ಮತ್ತು ಕೈಲಾಸಂರವರ ಉತ್ತೇಜನದಿಂದ ರಂಗಭೂಮಿ ಪ್ರವೇಶಿಸಿದ ಬಿ.ಎಸ್. ಜಯರಾಂರವರು ಅಂದಿನಿಂದ ಇಂದಿನವರೆಗೆ ಅಭಿನಯದ ಜೊತೆಗೆ ರಂಗವ್ಯವಸ್ಥೆ, ಬೆಳಕು, ಪ್ರಸಾಧನ... ಹೀಗೆ ರಂಗಭೂಮಿಯ ವಿಭಿನ್ನ ವಿಭಾಗಗಳಲ್ಲಿ ಸೇವೆ ಸಲ್ಲಿಸಿದ್ದಾರೆ.

'ನ್ಯಾಶನಲ್ ಕಾಲೇಜ್ ಹಿಸ್ಟ್ರಿಯಾನಿಕ್ ಕ್ಲಬ್', 'ಐಟಿಐ ಲಲಿತ ಕಲಾ ಸಂಘ', 'ಛಾಯಾ ಕಲಾವಿದರು', 'ರವಿ ಕಲಾವಿದರು', 'ಕಲಾಜ್ಯೋತಿ' ಮುಂತಾದ ಅನೇಕ ಹವ್ಯಾಸಿ ನಾಟಕ ಸಂಸ್ಥೆಗಳಲ್ಲಿ ಅಭಿನಯಿಸಿರುವ ಜಯರಾಂರವರು ಆ ಸಂಸ್ಥೆಗಳ ರಂಗ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದಾರೆ. ಕೈಲಾಸಂ, ಪರ್ವತವಾಣಿ, ದಾಶರಥಿದೀಕ್ಷಿತ್, ಕುವೆಂಪು, ದ.ರಾ. ಬೇಂದ್ರೆ, ಶ್ರೀರಂಗ ಮುಂತಾದ ಪ್ರಸಿದ್ಧ ನಾಟಕಕಾರರ ನಾಟಕಗಳಲ್ಲಿ ಅಭಿನಯಿಸಿದ್ದಾರೆ. 'ಸಂಸ್ಕಾರ' ಚಲನಚಿತ್ರದಲ್ಲಿ ಜಯರಾಂರವರು ನಟಿಸಿದ ಪಾತ್ರಕ್ಕಾಗಿ ಕರ್ನಾಟಕ ಸರ್ಕಾರ ಅತ್ಯುತ್ತಮ ಪೋಷಕ ನಟ ಪ್ರಶಸ್ತಿ ನೀಡಿ ಗೌರವಿಸಿದೆ. ಕಿರುತೆರೆಯಲ್ಲೂ ನಟಿಸಿ ಮೆಚ್ಚುಗೆ ಸಂಪಾದಿಸಿರುವ ಶ್ರೀಯುತರು ಅನೇಕ ಸಂಸ್ಥೆಗಳಿಂದ ಸನ್ಮಾನಿತರಾಗಿದ್ದಾರೆ. ಸೇವೆಯಿಂದ ನಿವೃತ್ತರಾಗಿರುವ ಜಯರಾಂರವರು, ರಂಗಭೂಮಿಯ ಪ್ರವೃತ್ತಿಯನ್ನು ಮುಂದುವರಿಸಿಕೊಂಡು ನಡೆದಿದ್ದಾರೆ.

---



## ಪಿ. ಪದ್ಮಾ

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿಯಿಂದ ಉದಯಿಸಿದ ಕಲಾವಿದೆ ಶ್ರೀಮತಿ ಪಿ. ಪದ್ಮಾರವರು. ಐವರು ಸಹೋದರರು ಮತ್ತು ಮೂವರು ಸಹೋದರಿಯರ ಜೊತೆ ಬೆಳೆದ ಪದ್ಮಾರವರು ರಂಗಭೂಮಿ ಪ್ರವೇಶಿಸಿದ್ದು ಒಂದು ಆಕಸ್ಮಿಕ. ಸ್ವಾತಂತ್ರ್ಯ ಬಂದ ಆಸುಪಾಸಿನಲಿ ಭಕ್ತಿಪೂರ್ಣ ಚಲನಚಿತ್ರಗಳು ಜನರನ್ನು ಆಕರ್ಷಿಸತೊಡಗಿದವು. ಆದರೆ ಕೂಡ್ಲಿಗಿ, ಬಳ್ಳಾರಿ, ಕೊಪ್ಪಳ, ದಾವಣಗೆರೆ ಸುತ್ತಮುತ್ತಲಿನ ಹಳ್ಳಿಗಳಲ್ಲಿ ವೃತ್ತಿ ರಂಗಭೂಮಿಯಿಂದ ಪ್ರೇರಿತವಾದ ನಾಟಕಗಳ ವೈಭವ ಮಾತ್ರ ಹಾಗೆಯೇ ಮುಂದುವರಿದಿತ್ತು. ಆಗಷ್ಟೇ ತಮ್ಮ ವ್ಯಾಸಂಗವನ್ನು 7ನೇ ತರಗತಿಗೆ ನಿಲ್ಲಿಸಿಬಿಟ್ಟಿದ್ದ ಪದ್ಮಾರವರು ರಂಗಭೂಮಿಯ ಅಕ್ಷರಗಳನ್ನು ಕಲಿತರು. ಹಳ್ಳಿಗಳ ನಾಟಕಗಳಲ್ಲಿ ಅಭಿನಯಿಸುವ ರಂಗ ಕಲಾವಿದರಾದರು. ಅದನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡರು. ಸೋದರ, ಸೋದರಿಯರು ವಿವಾಹದ ಮೂಲಕ ಕೌಟುಂಬಿಕವಾಗಿ ನೆಲೆಗೊಳ್ಳುತ್ತಿದ್ದರೂ, ಪದ್ಮಾರವರು ಯಾವುದೇ ರೀತಿಯ ಆತುರಕ್ಕೂ ಒಳಗಾಗದೆ ರಂಗಭೂಮಿಯೊಂದಿಗಿನ ತಮ್ಮ ಒಡನಾಟವನ್ನು ಮುಂದುವರಿಸಿದರು. ಆಗಿನ್ನೂ ದಿಲ್ಲಿಯನ್ನು ನೋಡಿರದ ಪದ್ಮಾರವರು ತಮ್ಮ ಹನ್ನೆರಡನೇ ವಯಸ್ಸಿನಲ್ಲಿಯೇ 'ಹಳ್ಳಿಯಿಂದ ದಿಲ್ಲಿಗೆ' ಎಂಬ ನಾಟಕದಲ್ಲಿ ಅಭಿನಯಿಸಿದರು. 1968ರಲ್ಲಿ ಆರಂಭವಾದ ಅಭಿನಯದ ಕಾಯಕ, ಮೂರು ದಶಕಗಳನ್ನು ಮೀರಿ ರೆಕ್ಕೆ ಬಿಚ್ಚಿ ಸಾಗಿದೆ. ಕೃಷಿಕ ತಂದೆಯವರಿಂದ ದೊರೆತ ಪ್ರೋತ್ಸಾಹವನ್ನು ಸ್ಮರಿಸಿಕೊಳ್ಳುವ ಪದ್ಮಾರವರು, ಸದ್ಯಕ್ಕೆ ತಮ್ಮ ಕುಟುಂಬದಿಂದ ಸಿಗುತ್ತಿರುವ ಬೆಂಬಲವನ್ನು ಕೊಂಡಾಡುತ್ತಾರೆ. 'ಸಂಗ್ಯಾಬಾಳ್ಯಾ', 'ಟಿಪ್ಪುಸುಲ್ತಾನ್', 'ರಕ್ತರಾತ್ರಿ', 'ಅಕ್ಷಯಾಂಬರ', 'ರಾಜವೀರ ಮದಕರಿ ನಾಯಕ' 'ಅಣ್ಣತಂಗಿ', 'ಸ್ತ್ರೀರತ್ನ', 'ಮಲಮಗಳು', 'ದಾರಿದೀಪ' ಹೀಗೆ ನೂರಾರು ನಾಟಕಗಳಲ್ಲಿ ಅಭಿನಯಿಸಿರುವ ಪದ್ಮಾರವರು, ತಾವು ಅಭಿನಯಿಸುವ ಪಾತ್ರಗಳಿಗೆ ಜೀವ ತುಂಬುತ್ತಾರೆ. ಹೂವಿನಹಡಗಲಿ ತಂಡ, ರಂಗ ಕಲಾವಿದ ಏಣಿಗಿ ಖಾಸೀಂಸಾಬ್, ಮನಸೂರು ಸುಭದ್ರಮ್ಮ, ಕೆ.ನಾಗರತ್ನಮ್ಮ, ಉಲವತ್ತಿ ವೀರಣ್ಣ ಮುಂತಾದವರ ಮಾರ್ಗದರ್ಶನವನ್ನು ಪದ್ಮಾರವರು ನೆನಪಿಸಿಕೊಳ್ಳುತ್ತಾರೆ. ಕಲಾಭಿಮಾನಿಗಳ ಅಪಾರವಾದ ಮನ್ನಣೆ ಗಳಿಸಿರುವ ಪದ್ಮಾರವರು ಬಡತನದಲ್ಲಿ ಬೆಂದು ರಂಗಭೂಮಿಯನ್ನು ಶ್ರೀಮಂತಗೊಳಿಸಿದ್ದಾರೆ. ರಂಗಭೂಮಿ ಉತ್ತುಂಗಕ್ಕೆ ಏರಲು ತಮ್ಮ ಕೈಲಾದ ಕೊಡುಗೆ ನೀಡಲು ಪದ್ಮಾರವರು ಕಂಕಣಬದ್ಧರಾಗಿದ್ದಾರೆ.

---



## ಬಸವರಾಜಪ್ಪ

ಕೋಲಾರ ತಾಲ್ಲೂಕು, ವೇಮಗಲ್ ಹೋಬಳಿ, ಸೀತಿಹೊಸೂರು ಗ್ರಾಮದಲ್ಲಿ ಜನಿಸಿದ ಬಸವರಾಜಪ್ಪನವರು ತಮ್ಮ ಜೀವನದ 68 ವರ್ಷಗಳನ್ನು ಸವೆಸಿದ್ದಾರೆ. ತಂದೆ ಮರಿಬಸಪ್ಪ, ತಾಯಿ ಬಸಮ್ಮನವರ ಒಬ್ಬನೇ ಮಗನಾಗಿ ಜನಿಸಿದ ಬಸವರಾಜಪ್ಪನವರು ರಂಗಭೂಮಿಯತ್ತ ನಡೆದದ್ದು ಆಶ್ಚರ್ಯವೇ. ಚೆಂಜಿಮಲೆ ಗ್ರಾಮದ ನಾರಾಯಣಪ್ಪ ಸ್ವಾಮಿಯವರ ಹತ್ತಿರ ಶಿಷ್ಯತ್ವ ಸ್ವೀಕರಿಸಿ ಪೌರಾಣಿಕ ನಾಟಕಗಳ ಬಗ್ಗೆ ಜ್ಞಾನವನ್ನು ಬೆಳೆಸಿಕೊಂಡರು.

ಊರೂರು ಸುತ್ತಿ ಸಂಘಟಿಸಿ ನಾಟಕಗಳನ್ನು ಆಡಿಸತೊಡಗಿದರು. ಗ್ರಾಮದ ಜನರೆಲ್ಲ ಬಸವರಾಜಪ್ಪನವರನ್ನು 'ನಾಟಕದ ಮೇಷ್ಟ್ರು' ಎಂದೇ ಕರೆಯತೊಡಗಿದರು. ನಾಟಕ ಕಲಿಸುವುದರ ಜೊತೆಗೆ ಊರೂರಿನ ಉತ್ಸವಗಳಲ್ಲಿ ಆಚರಣೆಗಳಲ್ಲಿ ಬಸವರಾಜಪ್ಪನವರು ನಾಟಕಗಳನ್ನು ಆಡಿಸತೊಡಗಿದರು. ಜನರ ಪ್ರೀತಿ ಸಿಕ್ಕುತ್ತಿದ್ದರೂ ಯಾವುದೋ ಕೊರಗು ಬಸವರಾಜಪ್ಪನವರನ್ನು ದಿನವೂ ಕಾಡುತಿತ್ತು.

ಮುಂದೊಂದು ದಿನ ನಾಗನಾಳ ಕೃಷ್ಣಮೂರ್ತಿಯವರ ಪರಿಚಯವಾಗಿ ಬಸವರಾಜಪ್ಪನವರ ಅದೃಷ್ಟದ ಬಾಗಿಲು ತೆರೆಯಿತು. ನಾಗನಾಳ ಕೃಷ್ಣಮೂರ್ತಿಯವರು ಬಸವರಾಜಪ್ಪನವರನ್ನು ಗುಬ್ಬಿ ಕಂಪನಿ ಮತ್ತು ಮಲ್ಲಪ್ಪನವರ ಕಂಪನಿಗಳಿಗೆ ಪರಿಚಯಿಸಿದರು. ಆ ಕಂಪನಿಗಳಲ್ಲಿ ಅಭಿನಯ ಮತ್ತು ಹಾರ್ಮೋನಿಯಂ ಕಲಿತ ಬಸವರಾಜಪ್ಪನವರು ಮರಳಿ ಸ್ವಗ್ರಾಮಕ್ಕೆ ಬಂದು ನಾಟಕಗಳನ್ನು ಆಡಿಸತೊಡಗಿದರು. ನಾಟಕ ಆಡಿಸುವುದನ್ನೇ ಕಸುಬಾಗಿ ಸ್ವೀಕರಿಸಿರುವ ಶ್ರೀಯುತರು ಇಂದಿಗೂ ಅದೇ ಕಸುಬನ್ನೇ ಅವಲಂಬಿಸಿದ್ದಾರೆ. ಗ್ರಾಮೀಣ ಜಗತ್ತಿನ ರಂಗಭೂಮಿಯನ್ನು ಜೀವಂತವಾಗಿಟ್ಟಿದ್ದಾರೆ. ಅವರು ಅಭಿನಂದನಾರ್ಹರು.

---



## ಮಚ್ಛೇಂದ್ರನಾಥ್ ಪಾಂಡೇಶ್ವರ

ಮಚ್ಛೇಂದ್ರನಾಥ್ ಪಾಂಡೇಶ್ವರರವರು 1935ರಲ್ಲಿ ಮಂಗಳೂರಿನಲ್ಲಿ ಜನಿಸಿದರು. ತಂದೆ ಸುಬ್ಬಪ್ಪ, ತಾಯಿ ಲಲಿತ, ಮಂಗಳೂರಿನ ಪಾಂಡೇಶ್ವರ ಪ್ರಾಥಮಿಕ ಶಾಲೆ ಮತ್ತು ರುಜ್ಜಾರಿಯೋ ಹೈಸ್ಕೂಲುಗಳಲ್ಲಿ ವಿದ್ಯಾಭ್ಯಾಸ ಮಾಡಿದ ಮಚ್ಛೇಂದ್ರನಾಥ್‌ರವರು ಎಸ್.ಎಸ್.ಎಲ್.ಸಿ. ವರೆಗೆ ಮಾತ್ರ ಓದಲು ಸಾಧ್ಯವಾಯಿತು. ಕೌಟುಂಬಿಕ ಕಾರಣಗಳಿಂದ ಉದ್ಯೋಗಕ್ಕೆ ಸೇರಬೇಕಾದ ಅನಿವಾರ್ಯತೆ ಉಂಟಾದ್ದರಿಂದ, 1952ರಲ್ಲಿ ಮಂಗಳೂರಿನ ವಾಲ್ಕಾಟ್ ಬ್ರದರ್ಸ್ ಕಾಫಿ ಲಿಮಿಟೆಡ್‌ಗೆ ಉದ್ಯೋಗಕ್ಕೆ ಸೇರಿದರು. 1995ರ ವರೆಗೆ ಅಲ್ಲೇ ಉದ್ಯೋಗದಲ್ಲಿ ನಿರತರಾಗಿದ್ದ ಶ್ರೀಯುತರು 1996 ರಿಂದಾಚೆಗೆ ಚಿಕ್ಕಮಗಳೂರಿನ ಚಾಮುಂಡಿ ಕ್ಯೂರಿಂಗ್ ವರ್ಕ್ಸ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ತಮ್ಮ 14ನೇ ವಯಸ್ಸಿನಲ್ಲೇ ನಾಟಕ ರಚನೆ ಆರಂಭಿಸಿದ ಮಚ್ಛೇಂದ್ರನಾಥ್ ಪಾಂಡೇಶ್ವರರು ಕನ್ನಡ ಮತ್ತು ತುಳು ಭಾಷೆಯಲ್ಲಿ ನಾಟಕರಚನೆಗಳನ್ನು ಮಾಡಿದ್ದಾರೆ. ಕನ್ನಡ ಮತ್ತು ತುಳು ಭಾಷೆಗಳಲ್ಲಿ ಸುಮಾರು 58 ನಾಟಕಗಳನ್ನು ರಚಿಸಿರುವ ಮಚ್ಛೇಂದ್ರನಾಥ್ ಪಾಂಡೇಶ್ವರರವರು, ಪ್ರಕಟ ಮಾಡಿರುವ ಏಕೈಕ ನಾಟಕ 'ಕೌನ್ಸಿಲರ್ ಕೊಗ್ಗಣ್ಣೆ'. ದಕ್ಷಿಣ ಕನ್ನಡದ ಶಾಲೆ ಶಾಲೆಗಳಲ್ಲಿ, ಹಳ್ಳಿಹಳ್ಳಿಗಳಲ್ಲಿ ಪ್ರದರ್ಶನ ಕಂಡಿರುವ ಮಚ್ಛೇಂದ್ರನಾಥ್ ಪಾಂಡೇಶ್ವರರವರ ನಾಟಕಗಳು ಅಪಾರ ಜನಮನ್ನಣೆ ಗಳಿಸಿವೆ.

ತುಳು ಸಿನಿಮಾ ಕ್ಷೇತ್ರದಲ್ಲೂ ಜನಪ್ರಿಯರಾಗಿರುವ ಮಚ್ಛೇಂದ್ರನಾಥ್ ಪಾಂಡೇಶ್ವರರು 'ಬದ್ಕೆರೆ ಬುಡ್ಲೆ', 'ಭಾಗ್ಯವಂತೆರ್', 'ತಾಡರ್ ತುಳು', ಚಿತ್ರಗಳಿಗೆ ಕತೆ, ಸಂಭಾಷಣೆ, ಚಿತ್ರಕತೆ, ಗೀತರಚನೆ ಮಾಡಿದ್ದಾರೆ. ಕೆಲವು ಸಿನಿಮಾಗಳಲ್ಲಿ

ನಟನೆಯನ್ನು ಸಹ ಮಾಡಿದ್ದಾರೆ. ನಾಟಕ ರಚನೆಯನ್ನೇ ಕೇಂದ್ರವಾಗಿರಿಸಿಕೊಂಡಿರುವ ಮಚ್ಛೇಂದ್ರನಾಥ್ ಪಾಂಡೇಶ್ವರರು ಅದಕ್ಕಾಗಿಯೇ ತಮ್ಮ ಆಯುಷ್ಯವನ್ನು ಸವೆಸಿದ್ದಾರೆ. ಕನ್ನಡ ಭಾಷೆಯ ಸೊಬಗಿಗೆ ತುಳು ಭಾಷೆಯ ಸೊಗಡನ್ನು ಬೆರೆಸಿ ಕನ್ನಡ ರಂಗಭೂಮಿಯ ಭಾಷೆಯನ್ನು ಶ್ರೀಮಂತಗೊಳಿಸಿದ್ದಾರೆ.

---

## ಎ.ಎಸ್. ಮೂರ್ತಿ

1963ರಲ್ಲಿ ಬೆಂಗಳೂರಿನ ಸಾಂಪ್ರದಾಯಿಕ ವಾಣಿಜ್ಯೋದ್ಯಮಿಗಳ ಕುಟುಂಬದಲ್ಲಿ ಜನಿಸಿದ ಶ್ರೀ ಎ.ಎಸ್.ಮೂರ್ತಿಯವರ ತಂದೆ ಶ್ರೀ ವೆಂಕಟರಾಮಯ್ಯ ಶೆಟ್ಟಿ ಮತ್ತು ತಾಯಿ ಶ್ರೀಮತಿ ಧನಲಕ್ಷ್ಮಮ್ಮನವರು. ಶ್ರೀ ಎ.ಎಸ್. ಮೂರ್ತಿಯವರು 1956ರಲ್ಲಿ ಬಿ.ಕಾಂ ಪದವೀಧರರಾಗಿ, 1969ರಲ್ಲಿ ಕಾನೂನು ಪದವೀಧರರಾಗಿ, ನಂತರ ಸ್ನಾತಕೋತ್ತರ ಪದವಿ ಪಡೆದು, ಮುಂದೆ ಎಫ್.ಎಸ್.ಎ.ಎ. ಮತ್ತು ಡಿ.ಎಲ್.ಐ.ಎಮ್. ಪಡೆದು ಲೆಕ್ಕ ಪರಿಶೋಧಕ ವೃತ್ತಿಯನ್ನು ಅವಲಂಬಿಸಿದರು.

ಕೇವಲ ಹತ್ತು ವರ್ಷದ ಬಾಲಕನಾಗಿದ್ದಾಗಲೇ ಪೋಲಿ ಕಿಟ್ಟಿ ನಾಟಕದ ಮೂಲಕ ರಂಗಭೂಮಿಗೆ ಪಾದಾರ್ಪಣೆ ಮಾಡಿದ ಎ.ಎಸ್. ಮೂರ್ತಿಯವರು ಕೈಲಾಸಂರವರ ಮೆಚ್ಚುಗೆಗೆ ಪಾತ್ರರಾದರು. 'ಊಲ್ಲಾಳ್ ಶೀಲ್ಡ್' ನಾಟಕ ಸ್ಪರ್ಧೆಗಳಲ್ಲಿ ಭಾಗವಹಿಸಿ ಉತ್ತಮ ನಟರಾಗಿ ಹೊರಹೊಮ್ಮಿದರು. ಅಭಿನಯದ ಜೊತೆಗೆ, ಹವ್ಯಾಸಿ ರಂಗಭೂಮಿಯಲ್ಲಿ ನಿರ್ಮಾಣ ಕಾರ್ಯಕ್ಕೂ ಮುಂದಾದರು. ಟಿ.ಪಿ. ಕೈಲಾಸಂರವರ ಎಲ್ಲಾ ನಾಟಕಗಳನ್ನು ವೇದಿಕೆಯ ಮೇಲೆ ತಂದು, ಹೆಸರು ಗಳಿಸಿದ್ದಲ್ಲದೇ ಅತ್ಯಂತ ಕಷ್ಟಕರವಾದ 'ತಾವರೆಕೆರೆ' ನಾಟಕವನ್ನು ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ 139 ಬಾರಿ ಪ್ರದರ್ಶಿಸಿದ ಹೆಗ್ಗಳಿಕೆ ಹೊಂದಿದ್ದಾರೆ. ಆಕಾಶವಾಣಿ ಮೂಲಕವೂ ನಾಟಕಗಳನ್ನು ಎ.ಎಸ್.ಮೂರ್ತಿಯವರು ನಡೆಸಿಕೊಟ್ಟಿದ್ದಾರೆ. ಎ.ಎಸ್. ಮೂರ್ತಿಯವರು ಅಭಿನಯಿಸಿರುವ ನಾಟಕಗಳು ದೂರದರ್ಶನದಿಂದ ಪ್ರಸಾರಗೊಂಡಿವೆ. ಹೀಗೆ ರಂಗಭೂಮಿ ಸೇವೆ ಎಂದಾಕ್ಷಣ ಅತಿ ಉತ್ಸಾಹದಿಂದ ಮುಂದಾಗುವ ಎ.ಎಸ್. ಮೂರ್ತಿಯವರು ಅಭಿನಂದನಾರ್ಹರು.

---

## ಮೌಲಾಸಾಬ್ ಇಮಾಮ್‌ಸಾಬ್ ನದಾಫ್

ಮೌಲಾಸಾಬ್ ಇಮಾಮ್‌ಸಾಬ್ ನದಾಫ್ ಅವರು ಧಾರವಾಡ ಜಿಲ್ಲೆ ಕುಂದಗೋಳ ತಾಲ್ಲೂಕು ಗುಡಿಗೇರಿಯಲ್ಲಿ 1941ರಲ್ಲಿ ಜನಿಸಿದರು. ಸದ್ಯಕ್ಕೆ ದಾವಣಗೆರೆಯಲ್ಲಿ ನೆಲೆಸಿದ್ದಾರೆ. ಉರ್ದು ಶಾಲೆಯಲ್ಲಿ 5ನೇ ತರಗತಿಯವರೆಗೆ ಓದಿರುವ ಮೌಲಾಸಾಬ್ ಕನ್ನಡ ರಂಗಭೂಮಿಗೆ ಬಂದದ್ದು ಅನಿರೀಕ್ಷಿತವಾಗಿ. ಗುಡಿಗೇರಿ ಹಳ್ಳಿಯಲ್ಲಿ 'ರತ್ನಮಾಂಗಲ್ಯ' ನಾಟಕದ ತಾಲೀಮು ನಡೆಯುತ್ತಿತ್ತು. ಪ್ರತಿದಿನ ತಾಲೀಮನ್ನು ನೋಡುತ್ತಿದ್ದ ಮೌಲಾಸಾಬ್ ನಾಟಕದ ಬಗ್ಗೆ ಆಸಕ್ತಿಯನ್ನು ಬೆಳೆಸಿಕೊಂಡರು. ನಾಟಕದ ಪ್ರದರ್ಶನದ ದಿನ ಪಾತ್ರಧಾರಿಯೊಬ್ಬರು ಬರಲಿಲ್ಲ. ಆಗ ಅಲ್ಲಿ ಇದ್ದ ಮೌಲಾಸಾಬ್‌ಗೆ ಅಭಿನಯಿಸುವ ಅವಕಾಶ ದೊರೆಯಿತು. ಪ್ರೇಕ್ಷಕನಾಗಲು ಹೋಗಿದ್ದ ಮೌಲಾಸಾಬ್ ನಟರಾಗಿ ಪರಿವರ್ತಿತರಾದರು.

.... ಹೀಗೆ 42 ವರ್ಷಗಿಂದ ರಂಗಭೂಮಿ ಸೇವೆ ಮಾಡಿಕೊಂಡು ಬಂದಿರು ಮೌಲಾಸಾಬ್‌ರು 'ನಟನೆ'ಗೆ ಮಾತ್ರ ಒತ್ತು ನೀಡಿದರು. ಅಭಿನಯವನ್ನೇ ಆಶ್ರಯಿಸಿದ್ದ ಮೌಲಾಸಾಬ್‌ರು ಅನೇಕ ಕಂಪನಿಗಳಲ್ಲಿ ಅಭಿನಯಿಸುವುದು ಅನಿವಾರ್ಯವಾಯಿತು. ಅನೇಕ ಕಂಪನಿಗಳು ಮೌಲಾಸಾಬ್‌ರ ಪ್ರತಿಭೆಯನ್ನು ಗುರುತಿಸಿ ಅವಕಾಶ ನೀಡಿದರು. ಮೌಲಾಸಾಬ್ ನಟಿಸಿದ ಮುಖ್ಯ ಕಂಪನಿಗಳೆಂದರೆ ಶ್ರೀ ಪುಟ್ಟರಾಜ ವಿಜಯ ನಾಟಕ ಸಂಘ, ಸಂಗಮೇಶ್ವರ ನಾಟ್ಯ

ಸಂಘ, ಹುಕ್ಕೇರಿಶ್ವರ ನಾಟ್ಯ ಸಂಘ, ಮಲ್ಲಿಕಾರ್ಜುನ ನಾಟ್ಯ ಸಂಘ, ಕೆ.ಬಿ.ಆರ್. ಡ್ರಾಮಾ ಕಂಪನಿ ಮತ್ತು ಇತರ ಕಂಪನಿಗಳಲ್ಲಿ ಪಾತ್ರ ವಹಿಸಿದ್ದಾರೆ. ಮೌಲಾಸಾಬ್ ಅಭಿನಯಿಸಿದ ಮುಖ್ಯ ನಾಟಕಗಳು, ಪೋಲೀಸನ ಮಗಳು, ಕಿವುಡ ಮಾಡಿದ ಕಿತಾಪತಿ, ಏಳಿಯ ಕೈವಾಡ, ಸಂಪನ್ನರು ಸಿಟ್ಟಿಗೆದ್ದಾಗ, ಸತ್ಯ ಸತ್ತಿತು, ದುಡ್ಡಿನ ದರ್ಪ, ಸಾಕ್ಷಿಗೆ ಬಂದ ಸಾವಿತ್ರಿ, ನೀತಿ ನಾಡಿನ ಜ್ಯೋತಿ, ಕಣ್ಣಿದ್ದರೂ ಬುದ್ಧಿ ಬೇಕು ಇನ್ನೂ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಮೌಲಾಸಾಬ್ ಕಿವುಡ ಮಾಡಿದ ಕಿತಾಪತಿ, ಪೋಲೀಸನ ಮಗಳು ನಾಟಕಗಳಲ್ಲಿನ ಅಭಿನಯಕ್ಕಾಗಿ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಅನೇಕ ಸಂಘ ಸಂಸ್ಥೆಗಳಿಂದ ಸನ್ಮಾನಿತರಾಗಿರುವ ಮೌಲಾಸಾಬ್‌ರವರು ಅಪಾರ ಜನಮೆಚ್ಚುಗೆಯನ್ನು ಗಳಿಸಿದ್ದಾರೆ. ವೃತ್ತಿರಂಗಭೂಮಿಗೆ ಜೀವ ತುಂಬಿದ್ದಾರೆ.

---



## ಮಹಬೂಬ ಅಲಿ

ಶ್ರೀ ಮಹಬೂಬ ಅಲಿಯವರು ಬಳ್ಳಾರಿ ಜಿಲ್ಲೆ ಹೂವಿನಹಡಗಲಿ ತಾಲ್ಲೂಕು ಹಿರೇಹಡಗಲಿ ಗ್ರಾಮದಲ್ಲಿ 1938ರಲ್ಲಿ ಜನಿಸಿದರು. ತಂದೆ ದೊಡ್ಡಾಟದ ಕಲಾವಿದ ಶ್ರೀ ಫಕೀರಸಾಹೇಬ.

ಎರಡನೇ ತರಗತಿಯ ವರೆಗೂ ಓದಿಕೊಂಡಿರುವ ಮಹಬೂಬ ಅಲಿಯವರು ತಮ್ಮ ಹದಿನೈದನೇ ವಯಸ್ಸಿನಲ್ಲಿ ಹಿರೇಹಡಗಲಿಯ ಉದಯಕಲಾ ನಾಟ್ಯ ಸಂಘದವರು ಅಭಿನಯಿಸುತ್ತಿದ್ದ 'ಸ್ತ್ರೀರತ್ನ' ನಾಟಕದಲ್ಲಿ ಬಾಲಶಂಕರನ ಪಾತ್ರದಲ್ಲಿ ಅಭಿನಯಿಸುವ ಮೂಲಕ ರಂಗಪ್ರವೇಶ ಮಾಡಿದರು. ತಂದೆ ಫಕೀರಸಾಹೇಬ ಕಲಾವಿದರಾದ್ದರಿಂದ ಮಹಬೂಬ ಅಲಿಯವರಿಗೆ ನಿರೀಕ್ಷೆಗೂ ಮೀರಿದ ಪ್ರೋತ್ಸಾಹ ದೊರೆಯಿತು. ಮುಂದೆ ವಿನಾಯಕ ಸೇವಾ ನಾಟ್ಯಸಂಘ, ಸಿದ್ಧರಾಜ ಉಜ್ಜಿನಿಮಠ ಸಂಘ, ಶಾಂತಣ್ಣನವರ ಕಂಪನಿಗಳಲ್ಲಿ ಸ್ತ್ರೀ ಪಾತ್ರಗಳನ್ನು ಹೆಚ್ಚಾಗಿ ನಿರ್ವಹಿಸಿದರು.

ಇವರ ಸ್ತ್ರೀ ಪಾತ್ರದ ಖ್ಯಾತಿ ಎಷ್ಟಿತ್ತೆಂದರೆ, ಗುಲ್ಬರ್ಗ ಜಿಲ್ಲೆ ಚಿತ್ತಾಪುರದ ಕ್ಯಾಂಪಿನಲ್ಲಿ ಒಮ್ಮೆ 'ತಾಯಿ ಕರುಳು' ನಾಟಕ ನಡೆದಿದ್ದಾಗ ತಾಯಿ ಗೌರಮ್ಮನ ಪಾತ್ರಮಾಡಿದ್ದ ಮಹಬೂಬ ಅಲಿ ಅಭಿನಯವನ್ನು ಆಗಿನ ಮುಖ್ಯ ಮಂತ್ರಿ ವೀರೇಂದ್ರ ಪಾಟೀಲರು ಮೂರು ತಾಸು ಕುಳಿತು ನೋಡಿ ಆ ಕಾಲಕ್ಕೆ ಒಂದು ಸಾವಿರ ರೂಪಾಯಿ ಆಯೇರಿ ನೀಡಿದ್ದರಂತೆ. ಇನ್ನೂ ಹೆಚ್ಚಿನ ಬೆಳವಣಿಗೆಗೆ ಕಾತರಿಸುತ್ತಿದ್ದ ಮಹಬೂಬ ಅಲಿಯವರಿಗೆ ಅಮರೇಶ್ವರ ನಾಟ್ಯ ಸಂಘ, ಕೊಟ್ರೇಶ್ವರ ನಾಟ್ಯ ಸಂಘ, ಹೊಳೆಹಡಗಲಿ ಉಮಾಮಹೇಶ್ವರ ನಾಟ್ಯಸಂಘಗಳಲ್ಲಿ ನಾಯಕ, ಖಳನಾಯಕ ಪಾತ್ರ ವಹಿಸಲು ಅವಕಾಶ ದೊರೆತು ಜನಾದರವನ್ನು ಗಳಿಸಿಕೊಟ್ಟಿತು. ಮುಂದೆ ಖಳನಾಯಕನಾಗಿ ಹೆಚ್ಚು ಪ್ರಸಿದ್ಧಿ ಗಳಿಸಿದರು.

ಕಂಚಿಕೇರಿ ಕೊಟ್ರ ಬಸಪ್ಪನವರ ಶ್ರೀ ಜಯಲಕ್ಷ್ಮಿ ನಾಟಕ ಸಂಘದಲ್ಲೂ ರಂಗಭೂಮಿಯಲ್ಲಿ ಸೇವೆಗೈದು, ಕೊನೆಗೆ ಕೆ.ಬಿ.ಆರ್ ಡ್ರಾಮಾ ಕಂಪನಿಯಲ್ಲಿ 10 ವರ್ಷ ಸೇವೆ ಸಲ್ಲಿಸಿ ಅನೇಕ ಸಂಘ ಸಂಸ್ಥೆಗಳಿಂದಲೂ ಸನ್ಮಾನಿತರಾಗಿದ್ದಾರೆ. ದಾವಣಗೆರೆಯಲ್ಲಿ 1996ರಲ್ಲಿ ಜರುಗಿದ ರಾಜ್ಯ ಮಟ್ಟದ ವೃತ್ತಿರಂಗ ಕಲಾವಿದರ ಸಮ್ಮೇಳನದ ಯಶಸ್ಸಿನ ಹಿಂದೆ ಮಹಬೂಬ ಅಲಿಯವರ ಶ್ರಮವಿದೆ. ಅವರ ಸೇವೆಯನ್ನು ರಂಗಭೂಮಿ ವಿಶೇಷವಾಗಿ ಸ್ಮರಿಸುತ್ತದೆ. ಸೌಮ್ಯ ಸ್ವಭಾವದ ಈತ ಖಳನಾಯಕ ಪಾತ್ರದಲ್ಲಿ ಭಾರಿ ಹೆಸರು ಮಾಡಿದ್ದಾರೆ.

---



## ಕೆ. ಮೋಹನ ಶೆಟ್ಟಿ

ಪ್ರಸಾಧನ ಕಲೆಗೆ ಘನತೆಯನ್ನು ತಂದುಕೊಟ್ಟ ಕಲಾವಿದರು ನಾಡಿನಲ್ಲಿದ್ದಾರೆ. ಅಂತಹ ಕೆಲವರಲ್ಲಿ ಶ್ರೀ ಕೆ. ಮೋಹನ ಶೆಟ್ಟಿಯವರು ಒಬ್ಬರು.

ಎಪ್ಪತ್ತೇಳು ವರ್ಷ ವಯಸ್ಸಿನ ಸುಮಾರು ಐದು ದಶಕಗಳಿಗೂ ಮೀರಿದ ರಂಗಭೂಮಿ ಸೇವೆ ಸಲ್ಲಿಸಿರುವ ಶ್ರೀಯುತರು ಜನಿಸಿದ್ದು 1922ರಲ್ಲಿ. ತಂದೆ ಪಕ್ಕೀರ ಶೆಟ್ಟಿ, ತಾಯಿ ದುಗ್ಗಮ್ಮ, ಪ್ರಾಥಮಿಕ ವಿದ್ಯಾಭ್ಯಾಸದ ಬಳಿಕ ಮಂಗಳೂರಿನ ಪ್ರಸಿದ್ಧ ಕಲಾವಿದ ಶ್ರೀ ಎಲ್ಲೂರು ಉಮೇಶ್‌ರಾವ್ ಅವರಿಂದ ಪ್ರಸಾಧನ ಕಲೆಯಲ್ಲಿ ತರಬೇತಿ ಹೊಂದಿ 1947 ರಿಂದ 1953ರ ತನಕ ಅವರ ಗರಡಿಯಲ್ಲಿ ಪಳಗಿದರು. 1954ರಲ್ಲಿ ಕಾಸರಗೋಡಿನ ನಿತ್ಯಾನಂದ ಕಲಾಸದನ ಸೇರಿದ ಮೋಹನಶೆಟ್ಟರು, ತಮ್ಮ ಪ್ರತಿಭಾ ವಿಕಾಸಕ್ಕೆ ಅವಕಾಶ ಕಲ್ಪಿಸಿಕೊಂಡರು. ಸುಮಾರು ದಶಕದ ಕಾಲ ಮೋಹನಶೆಟ್ಟರು ಕಲಾಸದನದ ಅವಿಭಾಜ್ಯ ಅಂಗವಾಗಿದ್ದರು. ಕಲಾಸದನದಲ್ಲಿ ಪ್ರಸಾಧನ ಮಾಡುತ್ತಿದ್ದುದರ ಜೊತೆಗೆ 'ಯವನಿಕಾ' ತಂಡಕ್ಕೂ ತಮ್ಮ ಸೇವೆಯನ್ನು ವಿಸ್ತರಿಸಿದರು. ಕ್ರಮೇಣ ಕಾಸರಗೋಡಿನ ಎಲ್ಲಾ ಶಾಲಾ ಕಾಲೇಜುಗಳ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಮೋಹನ ಶೆಟ್ಟರು ಖಾಯಂ ಆಗಿ ಪ್ರಸಾಧನ ಮಾಡತೊಡಗಿದರು. ಮೋಹನ ಶೆಟ್ಟಿಯವರು ಜಿಲ್ಲೆಯಾದ್ಯಂತ ಪ್ರವಾಸ ಮಾಡಿ ಪ್ರಸಾಧನ ಕಲೆಯನ್ನು ಪ್ರಚಾರ ಮಾಡಿದರು.

ಕರಾವಳಿಯ ಶ್ರೀಮಂತ ಕಲೆಯಾದ ಯಕ್ಷಗಾನ, ಬಯಲಾಟಗಳ ಬಗ್ಗೆಯೂ ಕುತೂಹಲ ಹೊಂದಿದ್ದ ಮೋಹನಶೆಟ್ಟರು ಗೋಪಾಲಕೃಷ್ಣ ಶ್ಯಾನುಭೋಗರ ವಿನ್ಯಾಸಗಳಿಗೆ ಸ್ಫೂರ್ತಿ ನೀಡಿದ್ದಾರೆ. ಅವಕಾಶ ಸಿಕ್ಕಾಗ ವಸ್ತ್ರಾಲಂಕಾರ ಮಾಡುವ ಮೋಹನಶೆಟ್ಟರು ಅನೇಕ ಗೌರವಾದರಗಳಿಗೆ ಪಾತ್ರರಾಗಿದ್ದಾರೆ.

---



## ಎಚ್.ಎಂ. ರಂಗಯ್ಯ

ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಹೊಸಕೆರೆಹಳ್ಳಿಯಲ್ಲಿ 1955ರಲ್ಲಿ ಜನಿಸಿದ ಎಚ್.ಎಂ.ರಂಗಯ್ಯನವರು ಹುಟ್ಟಿನಿಂದಲೇ ಜಾನಪದ ಸೊಗಡನ್ನು ಮೈಗೂಡಿಸಿಕೊಂಡು ಬಂದವರು. ತಂದೆ ಮಾರಯ್ಯ, ತಾಯಿ ಲಕ್ಕಮ್ಮ, ತಂದೆ ಮಾರಯ್ಯ ಯಕ್ಷಗಾನ ಕಲಾವಿದರಾದ್ದರಿಂದ, ಎಚ್.ಎಂ. ರಂಗಯ್ಯನವರಿಗೆ ಬಾಲ್ಯದಿಂದಲೇ ರಂಗಭೂಮಿಯ ಒಡನಾಟ ದೊರೆಯಿತು. ಅಜ್ಜಿ ಸಂಜೀವಮ್ಮನವರ ಜನಪದ ಹಾಡುಗಳ ಗುನುಗು, ಕಥೆಗಳ ಸೊಬಗು, ಒಗಟುಗಳ ಸರಣಿ, ಸೋಬಾನೆ ಪದಗಳ ಶೈಲಿ ರಂಗಯ್ಯನವರ ಮೇಲೆ ಗಾಢ ಪ್ರಭಾವ ಬೀರಿತು.

ಬಿ.ಎ. ಪದವಿ ಮತ್ತು ಕಾನೂನು ಪದವೀಧರರಾಗಿರುವ ಎಚ್.ಎಂ. ರಂಗಯ್ಯನವರು ತುಮಕೂರಿನ ಎಚ್.ಎಂ.ಟಿ. ಕಾರ್ಖಾನೆಯಲ್ಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಎಚ್.ಎಂ. ರಂಗಯ್ಯನವರು ಬಾಲ್ಯ ಕಳೆದದ್ದು ಮತ್ತು ವಿದ್ಯಾಭ್ಯಾಸ ಪಡೆದದ್ದು ತುಮಕೂರು ಜಿಲ್ಲೆಯಲ್ಲಿ. ಉದ್ಯೋಗ ಪಡೆದದ್ದು ಕೂಡ ಅದೇ ಜಿಲ್ಲೆಯಲ್ಲೇ. ಇಷ್ಟೆಲ್ಲಾ ನೀಡಿದ ತವರು ಜಿಲ್ಲೆಗೆ ನಾಟಕ ತಂಡವೊಂದನ್ನು ಕಟ್ಟಿ ಸೇವೆ ಸಲ್ಲಿಸುವ ತೀರ್ಮಾನವನ್ನು ರಂಗಯ್ಯನವರು ಕೈಗೊಂಡರು.

ತುಮಕೂರು ಜಿಲ್ಲೆಯಲ್ಲಿ ವೃತ್ತಿ ರಂಗಭೂಮಿಯ ಪ್ರಖ್ಯಾತ ಕಲಾವಿದರಾದ ಶ್ರೀ ಗುಬ್ಬಿ ವೀರಣ್ಣ, ಕೆ. ಹಿರಣ್ಣಯ್ಯ, ಮಾಸ್ಟರ್ ಹಿರಣ್ಣಯ್ಯ ಮನೆಮಾತಾಗಿದ್ದಾರೆ. ತುಮಕೂರು ಜಿಲ್ಲೆಯಲ್ಲಿ ವೃತ್ತಿ ರಂಗಭೂಮಿ ಹುಲುಸಾಗಿ ಬೆಳೆದು ಅಂತಾರಾಷ್ಟ್ರೀಯ ಖ್ಯಾತಿಯನ್ನು ಹೊಂದಿದೆ. ಆದರೆ ಇದೇ ಸಂದರ್ಭದಲ್ಲಿ ಹವ್ಯಾಸಿ ರಂಗಭೂಮಿ ಅಷ್ಟೇನೂ

ಪ್ರಗತಿ ಹೊಂದದೆ ಕುಂಟುತ್ತಾ ಸಾಗಿತ್ತು. ಈ ಕೊರತೆಯನ್ನು ಅರಿತ ರಂಗಯ್ಯನವರು ಹವ್ಯಾಸಿ ರಂಗಭೂಮಿ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ತುಮಕೂರಿನ ಹವ್ಯಾಸ ರಂಗಭೂಮಿ ಚಟುವಟಿಕೆಗಳನ್ನು ಚುರುಕುಗೊಳಿಸುವ ಉದ್ದೇಶದಿಂದ 'ಸಾಂಸ್ಕೃತಿಕ ರಂಗ ಶಿಕ್ಷಣ ಕೇಂದ್ರ'ವನ್ನು ಪ್ರಾರಂಭಿಸಿದ ರಂಗಯ್ಯನವರು ಅನೇಕ ಶಿಬಿರಗಳನ್ನು ಸಂಘಟಿಸಿದ್ದಾರೆ. ಮಕ್ಕಳಿಗಾಗಿಯೇ ಅನೇಕ ಶಿಬಿರಗಳನ್ನು ನಡೆಸಿಕೊಟ್ಟಿದ್ದಾರೆ. ಹವ್ಯಾಸಿ ರಂಗಭೂಮಿಯ ಚಟುವಟಿಕೆಗಳನ್ನು ಸದಾ ಜಾಗೃತವಾಗಿಟ್ಟಿರಬೇಕು ಎನ್ನುವ ತುಡಿತ ಎಚ್.ಎಂ. ರಂಗಯ್ಯನವರದು.



## ಕೆ. ರಂಗಸ್ವಾಮಿ

ಶ್ರೀ ಕೆ. ರಂಗಸ್ವಾಮಿಯವರು ರಂಗಭೂಮಿಯಲ್ಲಿ ನಟರಾಗಿ, ನಿರ್ದೇಶಕರಾಗಿ, ನಾಟಕಕಾರರಾಗಿ ರಂಗತಜ್ಞರಾಗಿ ಹೆಸರು ಗಳಿಸಿದ್ದಾರೆ. 1950ರಲ್ಲಿ ಜನಿಸಿದ ರಂಗಸ್ವಾಮಿಯವರು 6 ವರ್ಷದ ಬಾಲಕನಾಗಿರುವಾಗಲೇ 'ಭಕ್ತ ಧ್ರುವ'ನಾಗಿ ನಟಿಸಿ ರಂಗಭೂಮಿಯ ನಂಟನ್ನು ಬೆಳೆಸಿಕೊಂಡರು. ಮುಂದೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಸಂಸ್ಥೆಯಲ್ಲಿ ಉದ್ಯೋಗಕ್ಕೆ ಸೇರಿದ ಶ್ರೀಯುತರು, ರಂಗಭೂಮಿಯಲ್ಲಿ ಸೇವೆ ಸಲ್ಲಿಸಲು ಪಣತೊಟ್ಟರು. ಸುಮಾರು 30 ವರ್ಷಗಳಿಂದ ರಂಗ ಚಟುವಟಿಕೆಗಳಲ್ಲಿ ತೊಡಗಿರುವ ರಂಗಸ್ವಾಮಿಯವರು, ಬ್ಯಾಂಕಿನಲ್ಲಿ ಮತ್ತು ಅನೇಕ ಸಂಘ ಸಂಸ್ಥೆಗಳ ವತಿಯಿಂದ ನಾಟಕ ಮತ್ತು ನಾಟಕೋತ್ಸವಗಳನ್ನು ಏರ್ಪಡಿಸಿದ್ದಾರೆ. ರಾಷ್ಟ್ರ ಮಟ್ಟದ ಅನೇಕ ನಾಟಕ ಸ್ಪರ್ಧೆಗಳನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

1989 ರಿಂದ ಮೈಸೂರು ಬ್ಯಾಂಕಿನ ಕನ್ನಡ ಬಳಗದ ಆಶ್ರಯದಲ್ಲಿ ನಡೆಯುವ ದಿ॥ ನವರತ್ನ ರಾಜು ಸ್ಮಾರಕ ರಾಜ್ಯಮಟ್ಟದ ನಾಟಕ ಸ್ಪರ್ಧೆಗಳ ಸೂತ್ರಧಾರರಾಗಿದ್ದಾರೆ. ಅವುಗಳನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿಕೊಂಡು ಬಂದಿದ್ದಾರೆ. ಸರ್.ಎಂ.ವಿ. ರಂಗಮಂದಿರ ಮತ್ತು ಇಂಟಿಮೇಟ್ ಥಿಯೇಟರ್‌ನ ವಿನ್ಯಾಸ ಮತ್ತು ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಬ್ಯಾಂಕಿಂಗ್ ಕ್ಷೇತ್ರದಲ್ಲಿ ಚದುರಿ ಹೋಗಿದ್ದ ನಾಟಕ, ಸಾಹಿತ್ಯ, ನೃತ್ಯ... ಈ ಎಲ್ಲ ಪ್ರಕಾರಗಳನ್ನು ಒಗ್ಗೂಡಿಸಿ ಅವುಗಳ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿದ್ದಾರೆ. ಪ್ರತಿಭೆಗಳನ್ನು ಗುರುತಿಸಲು ಸ್ಥಾಪಿತವಾದ ಬ್ಯಾಂಕಿಂಗ್ 'ಕಲ್ಚರಲ್ ಅಕಾಡೆಮಿ' ಸ್ಥಾಪಕ ಸದಸ್ಯರಾಗಿರುವ ಶ್ರೀಯುತರು ರಂಗಭೂಮಿಯ ಏಳಿಗೆಗಾಗಿ ದುಡಿಯುತ್ತಿದ್ದಾರೆ.

ಸುಳಿ, ನಾಯಕತೆ, ದೊಡ್ಡಪ್ಪ, ನಾಗಶೇಷ ನಾಟಕಗಳಲ್ಲಿ ರಂಗಸ್ವಾಮಿಯವರು ವಹಿಸಿದ ಜವಾಬ್ದಾರಿಗಳಿಗಾಗಿ ರಾಷ್ಟ್ರೀಯ ಪುರಸ್ಕಾರಗಳು ದೊರೆತಿವೆ. ಕತ್ತಲಮಿಂಚು, ದ್ವಿಮುಖಿ, ಸಂಗ್ರಾಮ, ಸುಳಿ, ಭಾಗ್ಯಜ್ಯೋತಿ ಮುಂತಾದ ರಂಗಸ್ವಾಮಿಯವರೇ ಬರೆದಿರುವ ನಾಟಕಗಳು ಮೆಚ್ಚುಗೆಗೆ ಪಾತ್ರವಾಗಿವೆ.

ದೂರದರ್ಶನ ಧಾರಾವಾಹಿಗಳಾದ ಆಫೀಸಾಯಣ, ತಿರುಗುಬಾಣ, ಶ್ರೀಮಾನ್ ಶ್ರೀಸಾಮಾನ್ಯ, ನಮ್ಮ ನಮ್ಮಲ್ಲಿ, ಮುಸ್ಸಂಜೆ ಕಣ್ಣುಗಳು, ಮುಂತಾದವುಗಳಿಗೆ ಸಹ ನಿರ್ದೇಶನ ಮಾಡಿದ್ದಾರೆ. ರಂಗಸ್ವಾಮಿಯವರು ಪ್ರಖ್ಯಾತ ನಿರ್ದೇಶಕರ ಗರುಡಿಯಲ್ಲಿ ಪಳಗಿದ ಹೆಗ್ಗಳಿಕೆ ಹೊಂದಿದ್ದಾರೆ.

ಶ್ರೀ ಕೆ. ರಂಗಸ್ವಾಮಿಯವರ ರಂಗಭೂಮಿ ಬಗೆಗಿನ ಕಳಕಳಿ ಅಪಾರ. ಅವರಿಗೆ ರಂಗಭೂಮಿ ಋಣಿಯಾಗಿದೆ.



## ರವೀಶ್

ನಟನೆ, ರಂಗಸಜ್ಜಿಕೆ, ಬೆಳಕು ಸಂಯೋಜನೆ, ರಂಗ ಸಂಗೀತ, ನಿರ್ದೇಶನ ಹೀಗೆ ರಂಗಭೂಮಿಯ ನಾನಾ ವಲಯಗಳಲ್ಲಿ ಚುರುಕಿನಿಂದ ದುಡಿಯುತ್ತಿರುವ ವ್ಯಕ್ತಿ ಶ್ರೀ ರವೀಶ್‌ರವರು.

ಮೈಸೂರಿನಲ್ಲಿ 1952 ರಲ್ಲಿ ಜನಿಸಿದ ರವೀಶ್ ಅವರ ತಂದೆತಾಯಿಗಳು ಶ್ರೀ ರಾಮಚಂದ್ರ ಮತ್ತು ಶ್ರೀಮತಿ ಶಾರದಮ್ಮ, ಮೈಸೂರಿನಲ್ಲಿ ಬಾಲ್ಯವನ್ನು ಕಳೆದ ಶ್ರೀಯುತರು ಬೆಂಗಳೂರಿನಲ್ಲಿ ವ್ಯಾಸಂಗ ಮಾಡಿದರು. ಪ್ರಿಂಟಿಂಗ್ ಟೆಕ್ನಾಲಜಿಯಲ್ಲಿ ಡಿಪ್ಲೋಮಾ ಪದವಿ ಗಳಿಸಿರುವ ರವೀಶ್ ಚಿಕ್ಕ ವಯಸ್ಸಿನಲ್ಲಿಯೇ ಶಾಲೆಯಲ್ಲಿ ನಡೆದ ಭಾಸನ 'ಪಂಚರಾತ್ರ' ನಾಟಕದಲ್ಲಿ ಪುಟ್ಟ ಪಾತ್ರ ವಹಿಸುವುದರೊಂದಿಗೆ ರಂಗ ಪ್ರವೇಶ ಮಾಡಿದರು.

ಸಮುಯಕ್ಕೊಂದು ಸುಳ್ಳು, ಶಂಬಿವಾದ್ಯ, ಗಾಂಪರ ಗುಂಪು, ವಿಷಜ್ವಾಲೆ ನಾಟಕಗಳಲ್ಲಿ ಅಭಿನಯಿಸಿದ್ದ ರವೀಶ್ ಉಲ್ಲಾಳ್ ನಾಟಕೋತ್ಸವದಲ್ಲಿ ಭಾಗವಹಿಸಿ ಎಲ್ಲರ ಗಮನ ಸೆಳೆದರು. ಶಬ್ದಗ್ರಹಣ ಸಹಾಯಕರಾಗಿ ಕೆಲವು ಕಾಲ ದುಡಿದ ರವೀಶ್‌ರವರು ಅರುಣ್ ಮುಖ್ಯೋಪಾಧ್ಯಾಯರ ಬಂಗಾಳಿ ನಾಟಕ 'ಮಾರೀಚನ ಬಂಧುಗಳು' ನಾಟಕಕ್ಕೆ ಬೆಳಕಿನ ವಿನ್ಯಾಸಕರಾಗಿ ಕೆಲಸ ಪ್ರಾರಂಭಿಸಿದರು. ಖ್ಯಾತ ಬೆಳಕು ವಿನ್ಯಾಸಕಾರರಾದ ವಿ. ರಾಮಮೂರ್ತಿ ಮತ್ತು ವೆಂಕಟಸುಬ್ಬಯ್ಯರಂತಹವರಿಂದ ಅಭಿನಂದಿಸಲ್ಪಟ್ಟರು. ಅವರ ಮಾರ್ಗದರ್ಶನ ಪಡೆದ ನಂತರ ಇನ್ನೂ ಹೆಚ್ಚಿನ ಪರಿಣತಿ ಹೊಂದಿದರು. ಇಷ್ಟಕ್ಕೆ ತೃಪ್ತರಾಗದ ರವೀಶ್ ರಂಗಸಜ್ಜಿಕೆ, ಉಡುಗೆ ತೊಡುಗೆ ವಿನ್ಯಾಸದ ಕಡೆ ಗಮನ ಹರಿಸತೊಡಗಿದರು.

1977ರಲ್ಲಿ ಮೈಸೂರಿಗೆ ಬಂದು ನೆಲೆಸಿದ ಶ್ರೀಯುತರು ನಿರ್ದೇಶನಕ್ಕೂ ಕೈಹಾಕಿದರು. ವಿಜಯ ತೆಂಡೂಲ್ಕರ್‌ರ 'ಹಕ್ಕಿ ಹಾರುತಿದೆ ನೋಡಿದಿರಾ', ಕಾರ್ನಾಡ್‌ರ 'ಯಯಾತಿ', ಉಮೇಶ್‌ರ ಅನುವಾದಿತ 'ಗುಲಾಮ ಮತ್ತು ಅವನ ನಗು', ಗಿರಿಯವರ 'ಗುಮಾನಿ', ನಾಟಕಗಳನ್ನು ಯಶಸ್ವಿಯಾಗಿ ಪ್ರದರ್ಶಿಸಿದ್ದಾರೆ.

ರವೀಶ್‌ರವರ ಮತ್ತೊಂದು ಆಸಕ್ತಿಯ ವಲಯ ರಂಗಸಂಗೀತ ಮತ್ತು ಗಾಯನ. ಹಲವಾರು ನಾಟಕಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ. ಶ್ರೀರಂಗರ, 'ಕೇಳು ಜನಮೇಜಯ', ಕುವೆಂಪುರವರ 'ಬಿರುಗಾಳಿ', ಠಾಕೂರರ 'ರಕ್ತ ಕಣಗಿಲೆ', ನಾಟಕಗಳಿಗೆ ಸಂಗೀತ ನಿರ್ದೇಶನ ಮಾಡಿ ಸದಭಿರುಚಿ ಮೂಡಿಸಿದ್ದಾರೆ. ಮಹತ್ತರವಾದುದನ್ನು ಸಾಧಿಸುವ ಹಂಬಲ ಹೊಂದಿರುವ ರವೀಶ್‌ರವರ ಬೆಂಬಲಕ್ಕೆ ಸಕಲವೂ ಕೂಡಿಬರಲೆಂದು ಹಾರೈಸೋಣ.

---



## ಪಿ. ರಾಮಕೃಷ್ಣ ಕಲ್ಯಾಣಿ

ಉಡುಪಿ ಜಿಲ್ಲೆಯ ಪೆರ್ಡೂರು ಪಿ. ರಾಮಕೃಷ್ಣ ಕಲ್ಯಾಣಿಯವರು ಜನಿಸಿದ್ದು 1930ರಲ್ಲಿ. ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಶ್ರೀಯುತರು ರಂಗಭೂಮಿಗಾಗಿ ತಮ್ಮನ್ನು ತಾವೇ ಚಿಕ್ಕಂದಿನಿಂದಲೂ ತೆತ್ತುಕೊಂಡಿದ್ದಾರೆ.

ಸುಮಾರು ನೂರಕ್ಕೂ ಹೆಚ್ಚು ನಾಟಕಗಳಲ್ಲಿ ಹಾಸ್ಯ ಪಾತ್ರಧಾರಿಯಾಗಿ ಅಭಿನಯಿಸಿರುವ ಪೆರ್ಡೂರು ರಾಮಕೃಷ್ಣರವರು ಯಕ್ಷಗಾನ ಮತ್ತು ತಾಳಮದ್ದಳೆಗಳಲ್ಲಿ ಸಕ್ರಿಯ ಪಾತ್ರ ವಹಿಸಿದ್ದಾರೆ. ಏಳನೇ ತರಗತಿಯಲ್ಲಿರುವಾಗಲೇ ಮುಖಕ್ಕೆ ಬಣ್ಣ ಹಚ್ಚಿಕೊಂಡ ಶ್ರೀಯುತರು, ಸುಮಾರು ಮೂನ್ನೂರಕ್ಕೂ ಮೀರಿ ಕನ್ನಡ ತುಳು ನಾಟಕಗಳಲ್ಲಿ ಅಭಿನಯಿಸಿದ್ದಾರೆ ಮತ್ತು ನಿರ್ದೇಶಿಸಿದ್ದಾರೆ.

ತಾವು ರಂಗಭೂಮಿ ಪ್ರವೇಶಿಸಲು ಪ್ರೇರಣೆ ನೀಡಿದ ಅಣ್ಣ ಎ.ಪಿ. ಕಲ್ಯಾಣಿಯವರನ್ನು ಪೆರ್ಡೂರು ರಾಮಕೃಷ್ಣರವರು ನೆನೆಸಿಕೊಳ್ಳುತ್ತಾರೆ. 1950ರಲ್ಲಿ 'ಕಲಾ ಸೇವಾ ಮಂಡಳಿ' ಎಂಬ ನಾಟಕ ಸಂಸ್ಥೆಯನ್ನು ಆರಂಭಿಸಿ, ತಮ್ಮ ಸುತ್ತಮುತ್ತಲ ಸಮಾನ ಮನಸ್ಕರನ್ನು ರಂಗಭೂಮಿಯತ್ತ ಸೆಳೆದುಕೊಂಡ ಕೀರ್ತಿ ಶ್ರೀಯುತರಿಗೆ ಸಲ್ಲುತ್ತದೆ.

ಉಡುಪಿ ಜಿಲ್ಲೆಯ ಶಾಲಾ ಕಾಲೇಜುಗಳಲ್ಲಿ ನಾಟಕದ ತರಬೇತಿ ನೀಡಿ, ನಾಟಕದ ಬಗ್ಗೆ ಅಭಿರುಚಿಯನ್ನು ಬೆಳೆಸಲು ದಶಕಗಳನ್ನೇ ವಿನಿಯೋಗಿಸಿದ್ದಾರೆ. ಪೆರ್ಡೂರು ರಾಮಕೃಷ್ಣರವರು ಸುತ್ತದ ಶಾಲೆಯಿಲ್ಲ. ಇದರ ಜೊತೆಜೊತೆಗೆ ಅವಕಾಶ ದೊರೆತಾಗಲೆಲ್ಲ ಮಂಗಳೂರು ಆಕಾಶವಾಣಿ ಮೂಲಕ ನಾಟಕದ ಬಗ್ಗೆ ಭಾಷಣ ಮಾಡಿ ಶ್ರೋತೃಗಳಲ್ಲಿ ನಾಟಕ ಕುರಿತ ಅಭಿರುಚಿ ಹೆಚ್ಚಿಸಿದ್ದಾರೆ. ಚೋಮನ ದುಡಿ, ಅಖಂಡ ಬ್ರಹ್ಮಚಾರಿಗಳು, ಜನುಮದಾತ, ಜಾತಿಯೇ ಜಾತಿ, ಕೊಟ್ಟ ಮುಂತಾದ ಕನ್ನಡ ಸಿನಿಮಾಗಳಲ್ಲಿ, ಕೋಟಿ ಚೆನ್ನಯ, ಕರಿಯಣಿ ಕಟ್ಟಂದಿ ಕಂಡನಿ ಮುಂತಾದ ತುಳು ಚಿತ್ರಗಳಲ್ಲಿ ನಟಿಸಿರುವ ಪೆರ್ಡೂರು ರಾಮಕೃಷ್ಣರವರ ಮೂಲ ಬೇರುಗಳು ರಂಗಭೂಮಿಯಲ್ಲಿವೆ. 'ವಿನೋದ ರತ್ನಾಕರ' ಬಿರುದಿನ ಶ್ರೀಯುತರು ಅನವರತ ರಂಗಭೂಮಿಗಾಗಿ ಶ್ರಮಿಸುತ್ತಿದ್ದಾರೆ.

---



## ರೋಹಿದಾಸ ಮಹಾಲೆ

ಅರವತ್ತೈದು ವರ್ಷ ವಯಸ್ಸಿನ ಶ್ರೀ ರೋಹಿದಾಸ ಮಹಾಲೆ ಜನಿಸಿದ್ದು 1934ರಲ್ಲಿ. ಊರು ಉತ್ತರ ಕನ್ನಡದ ಕೂಜಳ್ಳಿ, ತಂದೆ ಗೋಪಾಲಕೃಷ್ಣ, ತಾಯಿ ಪಾರ್ವತಿ. ಬಡತನದ ಕಾರಣದಿಂದ ಹೆಚ್ಚಿಗೆ ಓದಲಾಗದ ರೋಹಿದಾಸ ಮಹಾಲೆಯವರು ಎರಡನೆ ತರಗತಿಯವರೆಗೆ ಮಾತ್ರ ಓದಲು ಸಾಧ್ಯವಾಯಿತು. ತಮ್ಮ ಹದಿನೆಂಟನೆಯ ವಯಸ್ಸಿನಲ್ಲಿ ಮುಖಕ್ಕೆ ಬಣ್ಣ ಹಚ್ಚಿಕೊಂಡ ರೋಹಿದಾಸ ಮಹಾಲೆಯವರು ಹಿಂದಿರುಗಿ ನೋಡಲಿಲ್ಲ.

'ಮಧ್ಯಾಹ್ನದವರೆಗೆ ದುಡಿತ, ಉಳಿದ ವೇಳೆ ನಾಟಕದ ಹವ್ಯಾಸಕ್ಕೆ ಮೀಸಲು...' ಎಂದು ನುಡಿದು ಅದರಂತೆ ನಡೆಯುತ್ತಿರುವ ರೋಹಿದಾಸ ಮಹಾಲೆಯವರು, ತಮ್ಮ ಶಕ್ತಿಗೂ ಮೀರಿದ ಕಾಣಿಕೆಯನ್ನು ರಂಗಭೂಮಿಗೆ ನೀಡಿದ್ದಾರೆ.

ಸುಮಾರು ಹದಿನಾಲ್ಕು ನಾಟಕಗಳನ್ನು ರಚಿಸಿರುವ ಶ್ರೀ ರೋಹಿದಾಸ ಮಹಾಲೆಯವರು ನೂರಾರು ನಾಟಕಗಳನ್ನು ನಿರ್ದೇಶಿಸಿದ್ದಾರೆ ಎರಡು ನೂರು ನಾಟಕಗಳಿಗೂ ಮಿಕ್ಕು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಮಹಾಲೆ ರಚಿಸಿರುವ 'ಕೈ ಹಿಡಿದವಳು', 'ಮುಳ್ಳಿನ ಹಾಸಿಗೆ' ನಾಟಕಗಳು ಪುರಸ್ಕಾರಗಳನ್ನು ಪಡೆದಿದೆ. ಮಹಾಲೆಯವರ ನಾಟಕಗಳ ವಸ್ತುವೂ ವೈವಿಧ್ಯಮಯವಾಗಿದೆ. ಮಹಾರಾಷ್ಟ್ರ ಮತ್ತು ಕೇರಳ ರಾಜ್ಯಗಳಲ್ಲಿಯೂ ಪ್ರದರ್ಶನ ಕಂಡಿವೆ.

ಕುಮಟಾದ ಕ್ಷೌರದಂಗಡಿಯಲ್ಲಿ ಮಧ್ಯಾಹ್ನದವರೆಗೆ ಕೆಲಸವನ್ನು ಮಾಡಿ ಉಳಿದರ್ಧ ದಿನದಲ್ಲಿ ರಂಗಭೂಮಿಯ ಚಟುವಟಿಕೆಗಳನ್ನು ಮಾಡುವ ಮಹಾಲೆಯವರು ಇಂದಿಗೂ ಬಡತನದ ವಿಷವೃತ್ತದಿಂದ ಹೊರಬರಲಾಗಿಲ್ಲ. ತನ್ನ ಕುಟುಂಬ ಒಪ್ಪೊತ್ತಿನ ಊಟ ಮಾಡಿ ಬದುಕು ಸಾಗಿಸುತ್ತಿದ್ದರೂ, ರೋಹಿದಾಸ ಮಹಾಲೆಯವರು ರಂಗಭೂಮಿಯ ನಂಟನ್ನು ಕಡಿದುಕೊಂಡಿಲ್ಲ. ಹೀಗೆ ಸಾಗುತ್ತಿದೆ ಬದುಕಿನ ಜಟಕಾಬಂಡಿ.

---



## ವಸಂತ ಕುಲಕರ್ಣಿ

1930ರಲ್ಲಿ ಜನಿಸಿದ ಶ್ರೀ ವಸಂತ ಕುಲಕರ್ಣಿಯವರು 69 ವಸಂತಗಳನ್ನು ಕಂಡಿದ್ದಾರೆ. ಶ್ರೀಯುತರು ಬಾದಾಮಿ ತಾಲ್ಲೂಕಿನ ಹೆಬ್ಬಳ್ಳಿ ಗ್ರಾಮದವರು. ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯ ಇರವು ಹರವುಗಳ ಬಗ್ಗೆ ಅಪಾರವಾದ ಅರಿವಿರುವ ವಸಂತ ಕುಲಕರ್ಣಿಯವರನ್ನು ಕಲಾಭಿಮಾನಿಗಳು ರಂಗಭೂಮಿಯ 'ಅರ್ಥಕೋಶ' ಎಂದೇ ಕರೆಯುತ್ತಾರೆ.

ದೇವಿಗೆ ಉಡಿ ತುಂಬುವ ಕಾರ್ಯಕ್ರಮದಲ್ಲಿ ವೇಷಧಾರಿಯಾಗಿ ಪಾಲ್ಗೊಳ್ಳುತ್ತಲ್ಲಿದ್ದ ವಸಂತ ಕುಲಕರ್ಣಿಯವರು 14ನೇ ವಯಸ್ಸಿನಲ್ಲಿ ಬೆಳವಲಕೊಪ್ಪದಲ್ಲಿ ಕುರುಕ್ಷೇತ್ರ ದೊಡ್ಡಾಟದಲ್ಲಿ ಅಭಿಮನ್ಯು ಆಗಿ ಅಭಿನಯಿಸಿದರು. 17ನೇ ವಯಸ್ಸಿನಲ್ಲಿ ಹೆಬ್ಬಳ್ಳಿಯಲ್ಲಿ ಕಂದಗಲ್‌ರ 'ಅಕ್ಷಯಾಂಬರ' ನಾಟಕದಲ್ಲಿ ಕೃಷ್ಣನಾಗಿ ಅಭಿನಯಿಸಿ ಗ್ರಾಮೀಣ ಜನರಲ್ಲಿ ಮೆಚ್ಚುಗೆ ಗಳಿಸಿ ವೃತ್ತಿ ರಂಗಭೂಮಿಗೆ ಪಾದಾರ್ಪಣೆ ಮಾಡಿದರು.

ಕಂದಗಲ್ ಹನುಮಂತರಾಯರ ಸರಳ ರಗಳೆಯ ಭಾಷೆಗೆ ಮಾರುಹೋಗಿ, ಅವರ ಮಾರ್ಗದರ್ಶನ ಪಡೆದ ವಸಂತ ಕುಲಕರ್ಣಿಯವರು ಬರವಣಿಗೆ ಮಾಡುವ ಆಕಾಂಕ್ಷೆಯನ್ನು ಹೊತ್ತರು. ಮುಂದೆ ನಲವಡಿ ಶ್ರೀ ಕಂಠಶಾಸ್ತ್ರಿಗಳ ಸಾನ್ನಿಧ್ಯ ದೊರೆತು ಲೇಖನಗಳನ್ನು ಬರೆಯುವ ಒತ್ತಾಸೆಯನ್ನು ಆರಂಭಿಸಿದರು. ಉತ್ತರ ಕರ್ನಾಟಕದ ಎಲ್ಲ ನಾಟಕಕಾರರು ಹಾಗೂ ಶ್ರೇಷ್ಠ ಕಲಾವಿದರ ಬಗ್ಗೆ ಅಧ್ಯಯನ ಮಾಡಿ ಪತ್ರಿಕೆಗಳಲ್ಲಿ ಬರೆದು ಎಲೆಮರೆಯ ಕಲಾವಿದರನ್ನು ಬೆಳಕಿಗೆ ತಂದರು.

ಕಂದಗಲ್ ಹನುಮಂತಾರಯರ ಶಿಷ್ಯರನ್ನೆಲ್ಲಾ ಒಂದು ಕಡೆ ಸೇರಿಸಿ ಅದ್ಭೂರಿಯಾದ ಕಾರ್ಯಕ್ರಮವೊಂದರನ್ನು ಸಂಘಟಿಸಿದ್ದ ವಸಂತ ಕುಲಕರ್ಣಿಯವರು, ಆ ಕಾರ್ಯಕ್ರಮವನ್ನು ಇನ್ನ ಜನರ ಮನಸ್ಸಿನಲ್ಲಿ ಉಳಿಸಿದ್ದಾರೆ.

ನಾಡಿನ ಹಿರಿಯ ಕಲಾವಿದರ, ನಾಟಕಕಾರರ ಭಾವಚಿತ್ರಗಳನ್ನು ಸಂಗ್ರಹಿಸಿ ಹೊತ್ತಿಗೆಯೊಂದನ್ನು ಹೊರತರಲು ತಿರುಗಾಡುತ್ತಿರುವ ವಸಂತ ಕುಲಕರ್ಣಿಯವರ ರಂಗಭೂಮಿ ಸೇವೆಗೆ ವೃದ್ಧಾಪ್ಯ ಅಡ್ಡಿಯಾಗಿಲ್ಲ.

---



## ಎಸ್.ವಿ. ವೆಂಕಟರಂಗಾಚಾರ್ಯ

ಬೆಂಗಳೂರು ಜಿಲ್ಲೆ ಬ್ಯಾತ ಗ್ರಾಮದಲ್ಲಿ 1923ರಲ್ಲಿ ಜನಿಸಿದ ಶ್ರೀ ಎಸ್.ವಿ. ವೆಂಕಟರಂಗಾಚಾರ್ಯ ರಂಗಭೂಮಿಯ ಸೇವೆ ಮಾಡುವುದನ್ನೇ ವೃತ್ತಿಯನ್ನಾಗಿ ಸ್ವೀಕರಿಸಿದ್ದಾರೆ. ತಂದೆ ವೆಂಕಟಾಚಾರ್ಯರು ಯಕ್ಷಗಾನ ಗಾಯಕರಾಗಿದ್ದುದರಿಂದ ವೆಂಕಟರಂಗಾಚಾರ್ಯರಿಗೆ ಅನುಕೂಲಕರವಾದ ವಾತಾವರಣವೇ ಲಭಿಸಿತು. ತಂದೆಯವರ ದಾರಿಯಲ್ಲೇ ಸಾಗಿದ ವೆಂಕಟರಂಗಾಚಾರ್ಯರು ಬೇರೆ ಬೇರೆ ಕವನಗಳನ್ನು ಹುಡುಕಿಕೊಂಡರು. ತಮಗೆ ಆಸಕ್ತಿಯುಳ್ಳ ನೆಲೆಗಳನ್ನಷ್ಟೇ ಶೋಧಿಸಿಕೊಂಡರು. ಆದ್ದರಿಂದಲೇ ತಮ್ಮ 16ನೇ ವಯಸ್ಸಿನಲ್ಲಿಯೇ ಶ್ರೀ ಬಚ್ಚಾಖಾನ್ ಸಾಹೇಬರಿಂದ ತಬಲಾ ನುಡಿಸುವುದನ್ನು ಕಲಿತರು. ಸಂಗೀತ ವಿದ್ವಾನ್ ಶ್ರೀ ಕೃಷ್ಣಪ್ಪನವರಿಂದ ಸಂಗೀತ ಮತ್ತು ಹಾರ್ಮೋನಿಯಂ ಕಲಿತರು. ಮುಂದೆ ಶ್ರೀ ರಂಗಪ್ಪ ಡ್ರಾಮಾ ಕಂಪನಿಯಲ್ಲಿ 'ಅಭಿನಯ' ಕ್ಕೂ ತೊಡಗಿದರು. ಹೀಗೆ ಎಸ್.ವಿ. ವೆಂಕಟರಂಗಾಚಾರ್ಯರು ಕಲಾ ಜೀವನದ ಬೇರೆ ಬೇರೆ ಘಟ್ಟಗಳನ್ನು ಕಂಡರು, ಉಂಡರು. ಮುಂದೆ ನಾಟಕಗಳ ನಿರ್ದೇಶನಗಳಿಗೂ ತೊಡಗಿದ ವೆಂಕಟರಂಗಾಚಾರ್ಯರು ಅಲ್ಲೇ ಕುದುರಿಕೊಂಡರು. ಹಾರ್ಮೋನಿಯಂ ಮತ್ತು ನಾಟಕ ನಿರ್ದೇಶನದ ವಲಯಗಳಲ್ಲಿ ತೀವ್ರವಾಗಿ ತೊಡಗಿಕೊಂಡರು. ಮೊದಮೊದಲ ಬೆಂಗಳೂರು ನಗರ ಮತ್ತು

ಬೆಂಗಳೂರು ಜಿಲ್ಲೆಗೆ ಸೀಮಿತಗೊಳಿಸಿಕೊಂಡಿದ್ದ ತಮ್ಮ ರಂಗಭೂಮಿ ಚಟುವಟಿಕೆಗಳನ್ನು ಕ್ರಮೇಣ ತುಮಕೂರು, ಮೈಸೂರು, ಮಂಡ್ಯ ಜಿಲ್ಲೆಗಳಿಗೆ ವಿಸ್ತರಿಸಿಕೊಂಡರು. ಸತ್ಯಹರಿಶ್ಚಂದ್ರ, ಸಂತ ರಾಮದಾಸ, ಸಂತ ತುಕಾರಾಂ, ಕಬೀರದಾಸ, ರುಕ್ಮಿಣಿ, ಕಲ್ಯಾಣ, ದಾನಶೂರ ಕರ್ಣ, ಶ್ರೀ ಕೃಷ್ಣಪಾರಿಜಾತ, ದೇವದಾಸಿ, ಶ್ರೀ ಕೃಷ್ಣಗಾರುಡಿ, ಕುರುಕ್ಷೇತ್ರ, ಗದಾಯುದ್ಧ ಮುಂತಾದ ನಾಟಕಗಳನ್ನು ನಿರ್ದೇಶಿಸಿ ಖ್ಯಾತಿ ಹೊಂದಿರುವ ವೆಂಕಟರಂಗಾಚಾರ್ಯರು ಪ್ರಸಿದ್ಧ ಹರಿಕಥೆ ನಿರೂಪಕರು. ಅನೇಕ ಸಂಘ ಸಂಸ್ಥೆಗಳಿಗೆ ನಾಟಕಗಳನ್ನು ಕಲಿಸಿರುವ ವೆಂಕಟರಂಗಾಚಾರ್ಯರು 'ಕೆರೆಯ ನೀರನ್ನು ಕೆರೆಗೆ ಚೆಲ್ಲುತ್ತಾ' ರಂಗಭೂಮಿಗೆ ದುಡಿದಿದ್ದಾರೆ.

---



## ಎಲ್.ಬಿ. ಶೇಖ ಮಾಸ್ತರ

'ನಾಟಕದ ಮೇಷ್ಟು' ಎಂದೇ ಹೆಸರು ಗಳಿಸಿರುವ ಶ್ರೀ ಎಲ್.ಬಿ. ಶೇಖ ಮಾಸ್ತರ ಹುಟ್ಟಿದ ಊರು ವಿಜಾಪುರ ಜಿಲ್ಲೆಯ ಲಿಂಗದಳ್ಳಿ. ಎಸ್.ಎಸ್.ಎಲ್.ಸಿ. ವರೆಗೆ ವಿದ್ಯಾಭ್ಯಾಸ ಮಾಡಿದ್ದಾರೆ. ತಮ್ಮ ಹದಿನೇಳನೇ ವಯಸ್ಸಿನಲ್ಲಿಯೇ ತಾಳೀಕೋಟೆ ಸಾಲಿಮಠ ಗವಾಯಿಗಳ ಮಾರ್ಗದರ್ಶನದಲ್ಲಿ ಸಂಗೀತ ಅಭ್ಯಾಸ ಮಾಡಿದರು. ಶಾಸ್ತ್ರೀಯವಾಗಿ ಹಾರ್ಮೋನಿಯಂ ಕಲಿತರು. ತಾವು ಕಲಿತದ್ದನ್ನು ರಂಗಭೂಮಿಗೆ ನೀಡಲು ತೀರ್ಮಾನಿಸಿದರು.

ತಾವು ಕಲಿತದ್ದನ್ನು ಜನತೆಗೆ ಕಲಿಸುವುದರ ಜೊತೆಗೆ ಗ್ರಾಮೀಣ ಪ್ರದೇಶದಲ್ಲಿ ಜನರನ್ನು ಸಂಘಟಿಸಿ ರಂಗಭೂಮಿಯನ್ನು ಬೆಳೆಸುವ ಯೋಚನೆ ಮಾಡಿದರು. ಆದ್ದರಿಂದ ಊರೂರು ಸುತ್ತಿ ಜನರನ್ನು ಒಂದೆಡೆ ಸೇರಿಸಿ ನಾಟಕವನ್ನು ಆಡಿಸುವ ಪ್ರಯತ್ನ ಮಾಡಿದರು. ಶೇಖ ಮಾಸ್ತರರು ಮಾಡಿದ ಪ್ರಯತ್ನ ಫಲಿಸಿತು. ಶೇಖ ಮಾಸ್ತರರು ಹೋದ ಕಡೆಯಲ್ಲೆಲ್ಲ ಸಾಂಸ್ಕೃತಿಕ ವಲಯ ರೂಪುಗೊಂಡಿತು. ರಂಗ ತಂಡಗಳನ್ನು ಕಟ್ಟಿ ಬೆಳೆಸಿದರು. ನಾಟಕ ಕಲಿಸುವುದನ್ನು ಆರಂಭಿಸಿದ ಶೇಖ ಮಾಸ್ತರರು ರಂಗಕರ್ಮವನ್ನು ವೃತ್ತಿಯನ್ನಾಗಿ ಸ್ವೀಕರಿಸಿದರು. ನೂರಾರು ಕಲಾವಿದರನ್ನು ರೂಪಿಸಿದರು. ನಾಟಕಗಳಿಗೆ ನೆರವು ಕೋರಿ ಅನೇಕರ ಬಳಿಗೆ ಓಡಾಡಿದರು. ಶೇಖ ಮಾಸ್ತರರ ಉತ್ಸಾಹವನ್ನು ಕಂಡು ಅನೇಕರು ನಾಟಕಗಳನ್ನು ಆಡಿಸಲು ಉದಾರ ನೆರವು ನೀಡಿದರು.

ಜನರ ಪ್ರೋತ್ಸಾಹಕ್ಕೆ ಮಾರುಹೋದ ಶೇಖ ಮಾಸ್ತರರು ಗೋಕಾಕದ ಅಡವಿ ಸಿದ್ಧೇಶ್ವರ ನಾಟ್ಯಸಂಘ, ಲಕ್ಷ್ಮೇಶ್ವರದ ರವಿಕಲಾ ನಾಟ್ಯ ಸಂಘ ಮುಂತಾದ ಸಂಘಗಳಲ್ಲಿ ಹಾರ್ಮೋನಿಯಂ ವಾದಕರಾಗಿ ತೊಡಗಿಕೊಂಡರು. ಮುಂದೆ 1983ರಲ್ಲಿ ಕುಮಾರೇಶ್ವರ ನಾಟ್ಯ ಸಂಘವನ್ನು ಕಟ್ಟಿ ವೃತ್ತಿರಂಗಭೂಮಿಗೆ ಮೆರುಗನ್ನು ತಂದರು. ಹೀಗೆ ಎಲ್ಲಿಯೂ ನಿಲ್ಲದೆ ವಿಶ್ರಾಂತಿ ಪಡೆಯದೆ ರಂಗಭೂಮಿಗಾಗಿ ದುಡಿಯುತ್ತಿರುವ ಶೇಖ ಮಾಸ್ತರರಿಗೆ ರಂಗಭೂಮಿ ಋಣಿಯಾಗಿದೆ.

---



## ಸುಧಾಮಣಿ

ಚಿತ್ರದುರ್ಗ ಜಿಲ್ಲೆಯ ಸಿರಿಗೆರೆಯಲ್ಲಿ ಜನಿಸಿದ ಶ್ರೀಮತಿ ಸುಧಾಮಣಿಯವರು ಬಡತನವನ್ನು ವರವಾಗಿ ಪಡೆದುಕೊಂಡು ಬಂದವರು. ತಂದೆ ಚೆನ್ನಪ್ಪ, ತಾಯಿ ತಿಪ್ಪಮ್ಮ ಕಡುಬಡತನದಲ್ಲೂ ಮಗಳನ್ನು 5ನೇ ತರಗತಿಯವರೆಗೂ ಓದಿಸಿ ಅಕ್ಷರದ ಬೆಳಕನ್ನು ತೋರಿಸಿದರು. ಹಸಿವಿನ ಯಾತನೆ ತಾಳಲಾರದೆ ಅಣ್ಣನ ಆಶ್ರಯಕ್ಕೆ ಹೋದ ಸುಧಾಮಣಿಯವರು ಮುಂದೆ ಕಲಾಜಗತ್ತಿಗೆ ಪ್ರವೇಶಿಸಿದರು. ಅಣ್ಣ ಓಟಲೇಶ್ವರರು ಆಗಲೇ ಕಲಾವಿದರಾಗಿ ಖ್ಯಾತರಾಗಿದ್ದರು. ಅಣ್ಣನನ್ನೇ ಮಾದರಿಯಾಗಿ, ಗುರುವಾಗಿ

ಸ್ವೀಕರಿಸಿದ ಸುಧಾಮಣಿಯವರು ರಂಗಭೂಮಿಯನ್ನೇರಿದರು. ಹೀಗೆ ಮನೆ ತೊರೆದು ಕಲೆಯ ಮನೆಯನ್ನು ಸೇರಿದ ಸುಧಾಮಣಿಯವರು ತವರುಮನೆಗಾಗಿ ಕನವರಿಸಲಿಲ್ಲ. ರಂಗಭೂಮಿಯನ್ನೇ ಮನೆಯನ್ನಾಗಿ ಸ್ವೀಕರಿಸಿದರು.

ಸುಮಾರು ಹತ್ತು ವರ್ಷಗಳ ಕಾಲ ರಂಗಭೂಮಿಯಲ್ಲಿ ಸೇವೆಗೈದ ನಂತರ ವಿನೂತನ ರೀತಿಯಲ್ಲಿ ಬಾಳ ಸಂಗಾತಿಯನ್ನು ಕೂಡಿದರು. ಸುಧಾಮಣಿಯವರ ಸ್ಥಿತಿಯನ್ನು ಅರಿತಿದ್ದ ಕಲಾವಿದರು ಎಲ್ಲರ ಬಳಿ ಹಣವನ್ನು ಸಂಗ್ರಹಿಸಿ, ಸಂಗ್ರಹವಾದ ಹಣದಿಂದ ಸುಧಾಮಣಿಯವರ ಮದುವೆ ಮಾಡಿದರು. ಅತ್ಯಂತ ಸರಳವಾಗಿ ನಡೆದ ಮದುವೆಯಲ್ಲಿ ಬಿ. ಕುಮಾರಸ್ವಾಮಿ ಸುಧಾಮಣಿಯವರ ಪತಿಯಾದರು. ಬಿ. ಕುಮಾರಸ್ವಾಮಿ ಆಗಲೇ ರಂಗ ಕಲಾವಿದರಾಗಿ ಪ್ರಸಿದ್ಧರಾಗಿದ್ದರು. ಸಮಾನಾಸಕ್ತಿಯ ಪತಿ ಸುಧಾಮಣಿಯವರ ಕಲಾಜೀವನಕ್ಕೆ ಪ್ರೇರಣೆಯಾಗಿ ನಿಂತರು. ಮುಂದೆ ಇಬ್ಬರೂ ಗುಬ್ಬಿ ಕಂಪನಿ ಸೇರಿ ಕಲಾಸೇವೆಗೆ ತೊಡಗಿದರು. ಕೊನೆಗೆ ದಂಪತಿಗಳಿಬ್ಬರೂ ನಿಶ್ಚಯಿಸಿ ತಮ್ಮದೇ ಆದ ಸ್ವಂತ 'ಶ್ರೀ ಕುಮಾರೇಶ್ವರ ನಾಟಕ ಸಂಘ' ಎಂಬ ನಾಟಕ ಕಂಪನಿ ಕಟ್ಟಿದರು. ಕಷ್ಟದಲ್ಲಿ ಮುನ್ನುಗ್ಗುತ್ತಾ ಹಳ್ಳಿಹಳ್ಳಿಗಳಲ್ಲಿ ರಂಗಭೂಮಿ ಸೇವೆಗಾಗಿ ಜೋಡೆತ್ತಿನಂತೆ ದುಡಿದು ಕಳೆದ ಇಪ್ಪತ್ತೇಳು ವರ್ಷಗಳಿಂದ ಕಂಪನಿಯನ್ನು ನಡೆಸಿಕೊಂಡು ಬರುತ್ತಿದ್ದಾರೆ. 'ಮುದುಕನ ಮದುವೆ', 'ರಾಜಾವೀರ ಮದಕರಿನಾಯಕ', 'ಖಾದಿ ಸೀರೆ', 'ಬಸ್ ಕಂಡಕ್ಟರ್', 'ನಾಯಕನ ಹಟ್ಟಿ ತಿಪ್ಪೆಸ್ವಾಮಿ' ಮುಂತಾದ ಸದಭಿರುಚಿಯ ನಾಟಕಗಳನ್ನು ರಂಗ ಜಗತ್ತಿಗೆ ನೀಡಿದರು. ಇಷ್ಟೆಲ್ಲಾ ದುಡಿದರೂ ದಣಿವರಿಯದಂತೆ ಮುನ್ನುಗ್ಗುತ್ತಿರುವ ಬಿ. ಸುಧಾಮಣಿಯವರು ರಂಗಭೂಮಿಯ ಉಸಿರು. ಅವರಿಗೆ ರಂಗಭೂಮಿ ಋಣಿಯಾಗಿದೆ.

---



## ಸುರೇಶ್ ಆನಗಳ್ಳಿ

ಶ್ರೀ ಸುರೇಶ್ ಆನಗಳ್ಳಿಯವರು ಕನ್ನಡದ ಪ್ರಮುಖ ರಂಗ ನಿರ್ದೇಶಕರಲ್ಲಿ ಒಬ್ಬರು. ಪ್ರಮುಖ ವಿನ್ಯಾಸಕಾರರು. ಕುಂದಾಪುರದ ಆನಗಳ್ಳಿಯಲ್ಲಿ 1961ರಲ್ಲಿ ಜನಿಸಿದ ಸುರೇಶ್‌ರವರು ಭಂಡಾರ್‌ಕರ್ಸ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮುಗಿಸಿದರು. ಹೆಗ್ಗೋಡಿನ ನೀನಾಸಂ ರಂಗ ಶಿಕ್ಷಣ ಕೇಂದ್ರ ಹಾಗೂ ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯಲ್ಲಿ ರಂಗಕಲೆಯ ಶಾಸ್ತ್ರೀಯ ಅಭ್ಯಾಸ ನಡೆಸಿದರು. ರಂಗವಿನ್ಯಾಸದ ಹೆಚ್ಚಿನ ಅಧ್ಯಯನಕ್ಕಾಗಿ ಸುರೇಶ್ ಆನಗಳ್ಳಿಯವರು ಎನ್.ಎಸ್.ಡಿ.ಯಿಂದ ಒಂದು ವರ್ಷದ ಫೆಲೋಶಿಪ್ ಪಡೆದರಲ್ಲದೆ ರಾಷ್ಟ್ರದ ಪ್ರಸಿದ್ಧ ರಂಗಸಂಸ್ಥೆ ಭೋಪಾಲ್‌ನ ರಂಗಮಂಡಲ್ ರೆಪರ್ಟರಿ ಕಂಪನಿಯಲ್ಲಿ ತಾಂತ್ರಿಕ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದರು. ಪ್ರಸ್ತುತ ಬೆಂಗಳೂರಿನಲ್ಲಿರುವ ರಾಷ್ಟ್ರೀಯ ನಾಟಕ ಶಾಲೆಯ ಪ್ರಾದೇಶಿಕ ಸಂಪನ್ಮೂಲ ಕೇಂದ್ರದಲ್ಲಿ ಮುಖ್ಯಸ್ಥರಾಗಿದ್ದಾರೆ.

ಸಮುದಾಯದ ರಂಗ ಚಳವಳಿಯ ಮೂಲಕ ರಂಗಭೂಮಿ ಪ್ರವೇಶಿಸಿದ ಸುರೇಶ್ ಆನಗಳ್ಳಿಯವರು ಮುಂದೆ ರಂಗಭೂಮಿಯನ್ನೇ ತಮ್ಮ ವೃತ್ತಿಯನ್ನಾಗಿ, ಸಂವಹನಾ ಮಾಧ್ಯಮವನ್ನಾಗಿ ಸ್ವೀಕರಿಸಿದರು. ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ರಂಗ ಪ್ರಮುಖರೊಂದಿಗೆ ಕೆಲಸ ಮಾಡಿದ ಅನುಭವ ಇರುವ ಸುರೇಶ್ ಆನಗಳ್ಳಿಯವರು ಕರ್ನಾಟಕದ ಹಾಗೂ ಗಡಿಯಾಚೆಗಿನ ಅನೇಕ ರಂಗ ತಂಡಗಳಿಗೆ ನಾಟಕಗಳನ್ನು ನಿರ್ದೇಶಿಸಿದ್ದಾರೆ. ವಿನ್ಯಾಸಗೊಳಿಸಿದ್ದಾರೆ. ರಂಗ ತರಬೇತಿ ನೀಡಿದ್ದಾರೆ. ಸುರೇಶ್ ಆನಗಳ್ಳಿಯವರು ನಿರ್ದೇಶಿಸಿರುವ ಪ್ರಮುಖ ನಾಟಕಗಳೆಂದರೆ ಪ್ರೋಸ್ಪರ್, ಹೀಗೂ ಒಬ್ಬ ರಾಜ, ಸಂಕ್ರಾಂತಿ, ಅಂತಿಗೊನೆ, ತಾಯಿ, ಅಲಾಮನ ಅದ್ಭುತ ನ್ಯಾಯ, ಸಿರಿಸಂಪಿಗೆ, ಮಧುರೆ ಕಾಂಡ, ಕೆರೆಗೆ ಹಾರ, ಮತ್ತೊಬ್ಬ ದ್ರೋಣ, ಚೋರ ಚರಣದಾಸ, ಏಕಲವ್ಯ, ಬೇಲಿ ಮತ್ತು ಹೊಲ, ಕಬೀರ, ಮಂಟೇಸ್ವಾಮಿ ಕಥಾ ಪ್ರಸಂಗ, ಜಗದೇಕವೀರನ ಕಥೆ, ಹಾಗೂ ತುಳು ನಾಟಕ ಪಿಲಿ ಪತ್ತಿಗಡಸ್ ಇತ್ಯಾದಿ ನಾಟಕಗಳು.

ಅನ್ಯಭಾಷಾ ನಾಟಕಗಳನ್ನು ಕನ್ನಡಕ್ಕೆ ಅಳವಡಿಸಿ ಯಶಸ್ವಿಯಾಗಿರುವ ಸುರೇಶ್ ಆನಗಳ್ಳಿಯವರು, ಸೂರ್ಯನ ಮಕ್ಕಳು, ಕಿಂದರಿಜೋಗಿ, ಗುಂಡನ ಸಾಹಸಯಾತ್ರೆ ನಾಟಕಗಳನ್ನು ರಚಿಸಿದ್ದಾರೆ. ಚಿತ್ರರಂಗದಲ್ಲೂ ಆಸಕ್ತರಾದ ಶ್ರೀಯುತರು ಪ್ರಸ್ತುತ ಕರ್ನಾಟಕ ಚಲನಚಿತ್ರ ತಾಂತ್ರಿಕ ತರಬೇತಿ ಕೇಂದ್ರದಲ್ಲಿ ಗೌರವ ಪ್ರಾಂಶುಪಾಲರಾಗಿದ್ದಾರೆ. ಅನೇಕ ಪ್ರಶಸ್ತಿ ವಿಜೇತ ಚಿತ್ರಗಳಿಗೆ ಕಲಾನಿರ್ದೇಶಕರಾಗಿದ್ದಾರೆ. 'ನಮ್ಮ ಭಾರತ ಮಹಾನ್' ರೂಪಕವನ್ನು ದೂರದರ್ಶನಕ್ಕಾಗಿ ನಿರ್ಮಿಸಿದ್ದಾರೆ.

ಶ್ರಮದಲ್ಲಿ ನಂಬಿಕೆಯಿಟ್ಟಿರುವ ಸುರೇಶ್ ಆನಗಳ್ಳಿಯವರು ಮಹತ್ತರವಾದುದನ್ನು ಸಾಧಿಸಲು ಅವಿರತವಾಗಿ ಶ್ರಮಿಸುತ್ತಿದ್ದಾರೆ.



## ಸೋಮಶೇಖರಯ್ಯ ಶಿವಲಿಂಗಯ್ಯ ಹಿರೇಮಠ

ಅರವತ್ತೈದು ವರ್ಷ ವಯಸ್ಸಿನ ಶ್ರೀ ಸೋಮಶೇಖರಯ್ಯ ಶಿವಲಿಂಗಯ್ಯ ಹಿರೇಮಠರವರು ಬೆಳಗಾಂವ ಜಿಲ್ಲೆ, ಬೈಲಹೊಂಗಲ ತಾಲೂಕಿನ ಕಿತ್ತೂರಿನವರು. ತಂದೆ ವೇದಮೂರ್ತಿ ಶಿವಲಿಂಗಯ್ಯ ಸ್ವಾಮಿಗಳು ಶಾಲಾ ಶಿಕ್ಷಕರಾಗಿದ್ದರು. ಹಿರೇಮಠರಲ್ಲಿನ ಸಂಗೀತದ ಬಗೆಗಿನ ಆಸಕ್ತಿಯನ್ನು ಗಮನಿಸಿದ ತಂದೆ ವೇದಮೂರ್ತಿಯವರು ಮಗನನ್ನು ಸಂಗೀತ ಕಲಿಯಲು ಕಳುಹಿಸಿದರು. ಶ್ರೀ ರಂಗೇನಾರಾಯಣ ಮಸಳಿ ಎಂಬ ಸಂಗೀತ ವಿದ್ವಾಂಸರ ಬಳಿ ಸಂಗೀತ ಕಲಿಯಲು ಆರಂಭಿಸಿದ ಹಿರೇಮಠರು ಹಿಂದೂಸ್ತಾನಿ ಸಂಗೀತದಲ್ಲಿ ಪ್ರೌಢತೆಯನ್ನು ಗಳಿಸಿಕೊಳ್ಳಲು ತೀರ್ಮಾನಿಸಿದರು. ಮನೆಯಲ್ಲಿ ಪ್ರೋತ್ಸಾಹ ಇದ್ದುದರಿಂದ ಹಗಲಿರುಳು ಸಂಗೀತ ಕಲಿಯುವ ತೀವ್ರ ಪ್ರಯತ್ನದಲ್ಲಿ ತೊಡಗಿಕೊಂಡರು. ಹೀಗೆ ಸುಮಾರು ಹದಿನಾರು ವರ್ಷಗಳ ಕಾಲ ನಿರಂತರವಾದ ಸಂಗೀತದ ಅಭ್ಯಾಸದಲ್ಲಿ ಹಿರೇಮಠರು ತಲ್ಲೀನರಾದರು.

ಹಿರೇಮಠರ ಸಂಗೀತದ ಅಭ್ಯಾಸ ಮುಂದೆ ಸಾಕಷ್ಟು ಅವಕಾಶಗಳನ್ನು ರೂಪಿಸಿಕೊಟ್ಟಿತು. ಧಾರವಾಡದ ಆಕಾಶವಾಣಿಯಲ್ಲಿ ಹಾಡುವ ಅವಕಾಶವನ್ನು ಪಡೆದರು. ಸಹಸ್ರಾರು ಶ್ರೋತೃಗಳ ಅಭಿಮಾನವನ್ನು ಗಳಿಸಿದರು. ಇದರ ಜೊತೆಗೆ ಶಿಷ್ಯ ಬಳಗವನ್ನು ರೂಪಿಸಿಕೊಂಡರು. ಸಂಗಮೇಶ್ವರ ನಾಟ್ಯ ಸಂಘ, ಕೆ.ಬಿ.ಆರ್. ಡ್ರಾಮಾ ಕಂಪನಿ, ಗುಬ್ಬಿ ಕಂಪನಿಗಳಲ್ಲಿ ಸಂಗೀತ ನಿರ್ದೇಶಕರಾಗಿ, ಗಾಯಕರಾಗಿ, ಹಾರ್ಮೋನಿಯಂ ವಾದಕರಾಗಿ ಪ್ರಸಿದ್ಧರಾಗಿರುವ ಹಿರೇಮಠರು ವೃತ್ತಿ ರಂಗಭೂಮಿಯ ಭಾಗವಾಗಿ ಬೆಳೆದು ಬಂದಿದ್ದಾರೆ. ಕರ್ನಾಟಕ ಸರ್ಕಾರ, ಭಾರತ ಸರ್ಕಾರದಿಂದ ಸನ್ಮಾನಿತರಾಗಿರುವ ಹಿರೇಮಠರು ತಮ್ಮ ಮುಪ್ಪಿನಲ್ಲೂ ರಂಗಭೂಮಿಯ ಏಳಿಗೆಗಾಗಿ ಕನವರಿಸುತ್ತಿದ್ದಾರೆ. ಪ್ರಸ್ತುತ 'ಸ್ವರ ಸಂಗಮ' ಎಂಬ ಸಂಗೀತ ಪಾಠಶಾಲೆಯನ್ನು ನಡೆಸುತ್ತಿರುವ ಶ್ರೀಯುತರು ರಂಗಭೂಮಿಯ ಜೀವಂತಿಕೆಗೆ ಶ್ರಮಿಸುತ್ತಿದ್ದಾರೆ.



## ಹಂಸಲೇಖ (ಪ್ರಶಸ್ತಿ ಸ್ವೀಕರಿಸಿರುವುದಿಲ್ಲ)

1951ರಲ್ಲಿ ಗೋವಿಂದರಾಜುರವರ ಮಗನಾಗಿ ಜನಿಸಿದ ಶ್ರೀ ಜಿ. ಗಂಗರಾಜು 'ಹಂಸಲೇಖ' ರಾಗಿ ಪ್ರಖ್ಯಾತರಾದರು. ಸಂಗೀತದ ಗುಣಗಳನ್ನು ವಂಶಪಾರಂಪರ್ಯವಾಗಿ ಪಡೆದುಕೊಂಡರು. ಚಿಕ್ಕಂದಿನಿಂದಲೂ ಸಾಹಿತ್ಯ ಮತ್ತು ಸಂಗೀತದ ವಾತಾವರಣದಲ್ಲಿ ಹಂಸಲೇಖರವರು ಬೆಳೆದುಬಂದರು. ಶಾಲಾ ವ್ಯಾಸಂಗಕ್ಕಿಂತಲೂ ಸಂಗೀತ, ಸಾಹಿತ್ಯದ ಕಡೆ ಹೆಚ್ಚಿನ ಒಲವನ್ನು ಬೆಳೆಸಿಕೊಂಡ ಹಂಸಲೇಖರವರು ತಂದೆಯವರ ಜೊತೆ ಮುದ್ರಣ

ಕೆಲಸಗಳಲ್ಲಿ ನೆರವಾಗುತ್ತಿದ್ದರು. ಆಗಲೇ ಪುಸ್ತಕಗಳನ್ನು, ಹಸ್ತಪ್ರತಿಗಳನ್ನು ಅಭ್ಯಸಿಸುವ ಅಭಿರುಚಿಯನ್ನು ಬೆಳೆಸಿಕೊಂಡರು. ಸೋದರ ಬಾಲಕೃಷ್ಣರವರ ಸಂಗೀತಗೋಷ್ಠಿಗಳಲ್ಲಿ ವಾದ್ಯಗಳನ್ನು ನುಡಿಸುವುದಕ್ಕೂ ಹೋಗುತ್ತಿದ್ದರು. ಇಷ್ಟಕ್ಕೆ ತೃಪ್ತರಾಗದ ಹಂಸಲೇಖರವರು, ಗುರು ಶ್ರೀ ಶಿವರಾಂರವರಿಂದ ಕರ್ನಾಟಕ ಸಂಗೀತವನ್ನು, ಗುರು ಶ್ರೀ ದಾಸ್‌ರವರಿಂದ ಹಿಂದೂಸ್ತಾನಿ ಸಂಗೀತವನ್ನು, ಗುರು ಶ್ರೀ ಜೋಸರವರಿಂದ ಪಾಶ್ಚಾತ್ಯ ಸಂಗೀತವನ್ನು ಕಲಿತರು.

1970ರಲ್ಲಿ 'ತ್ರಿವೇಣಿ' ಚಿತ್ರಕ್ಕಾಗಿ ರಚಿಸಿದ ಹಾಡು ಅನೇಕರ ಮೆಚ್ಚುಗೆ ಗಳಿಸಿತು. 1974ರಲ್ಲಿ 'ವಿವೇಕ ರಂಗ' ತಂಡ ಕಟ್ಟಿ ಅನೇಕ ಸಂಗೀತ ಪ್ರಧಾನ ನಾಟಕಗಳನ್ನು ಆಡಿಸಿದರು. ಎಲ್ಲ ಸದಭಿರುಚಿಯ ಸ್ನೇಹಿತರು ಸೇರಿ ಒಂದು ವಿನೂತನ ರಂಗಮಂದಿರವನ್ನು ಕಟ್ಟಿದರು. ಅದು ಹಂಸಲೇಖರವರ ಕನಸಾಗಿತ್ತು. ಅಲ್ಲೇ ಅವರು ಸಂಗೀತಕ್ಕೆ ಸಂಬಂಧಿಸಿದ ತಮ್ಮ ಬೇರುಗಳನ್ನು ಗಟ್ಟಿಗೊಳಿಸಿಕೊಳ್ಳಲು ಪ್ರಶಿಕ್ಷಣವನ್ನು ಬಳಸಿಕೊಳ್ಳುತ್ತಿದ್ದರು. ಬೆಂಕಿ ಆಕಸ್ಮಿಕವೊಂದು ಹಂಸಲೇಖರು ಕಟ್ಟಿದ ರಂಗಮಂದಿರವನ್ನು ಸುಟ್ಟು ಭಸ್ಮ ಮಾಡಿತು. ಆದರೆ ಹಂಸಲೇಖರ ರಂಗಭೂಮಿಯ ಬಗೆಗಿನ ಕನಸುಗಳನ್ನು ಸುಟ್ಟು ಭಸ್ಮ ಮಾಡಲಾಗಲಿಲ್ಲ. ಅವರ ಸಂಗೀತ ಲಹರಿಯನ್ನು ಬೂದಿ ಮಾಡಲಾಗಲಿಲ್ಲ.

ರಂಗಭೂಮಿಯಿಂದ ಸಿನಿಮಾ ಜಗತ್ತಿನ ಕಡೆ ಪಯಣ ಬೆಳೆಸಿದ ಹಂಸಲೇಖ ಇತಿಹಾಸವನ್ನು ನಿರ್ಮಾಣ ಮಾಡಿದ್ದಾರೆ. 'ರಾಹು ಚಂದ್ರ'ದಲ್ಲಿ ತಮ್ಮ ಪ್ರತಿಭೆಯ ಮಿಣುಕು ಮಿಂಚಿಸಿ, 'ನಾನು ನನ್ನ ಹೆಂಡ್ತಿ'ಯಲ್ಲಿ ಸ್ಫೋಟಿಸಿ, 'ಪ್ರೇಮಲೋಕ'ದಲ್ಲಿ ಗುಡುಗು ಸಿಡಿಲಿನಂತೆ ಲೋಕದ ಮುಂದೆ ಪ್ರತ್ಯಕ್ಷರಾದರು. ಹೊಸತನದ ಮಳೆಗರೆದರು. ಭೂಮಿ ನೆನೆದು, ಸೊಸ ಚಿಗುರು ಮಾಡಿತು. ಹಂಸಲೇಖರ ಶಕೆ ಆರಂಭಗೊಂಡಿತು.

ಶಾಂತಿ ಕ್ರಾಂತಿ, ಚೈತ್ರದ ಪ್ರೇಮಾಂಜಲಿ, ರಾಮಾಚಾರಿ, ಹಾಲುಂಡ ತವರು, ಆಕಸ್ಮಿಕ, ಗಾನಯೋಗಿ ಪಂಚಾಕ್ಷರಿ ಗವಾಯಿ ಚಿತ್ರಗಳ ಮೂಲಕ ಮೈಲಿಗಲ್ಲುಗಳನ್ನು ಸೃಷ್ಟಿಸಿರುವ ಹಂಸಲೇಖ, ಅಪರೂಪದ ಪ್ರತಿಭೆ. ರಂಗಭೂಮಿಯಿಂದ ನಡಿಗೆ ಆರಂಭಿಸಿ ಶ್ರೇಯಸ್ಸಿನ ಶಿಖರ ಮುಟ್ಟಿರುವ ಶ್ರೀಯುತರು ರಂಗಭೂಮಿ ಏಳಿಗೆಗೆ ಪ್ರತಿಕ್ಷಣವೂ ಕಾತರಿಸುತ್ತಾರೆ. ರಂಗಭೂಮಿಯಲ್ಲಿ ಹೊಸತನ್ನು ಮೂಡಿಸುವ ಕನಸನ್ನು ಹೊಂದಿದ್ದಾರೆ.

---



## ಕಾಶೀಮಸಾಬ ಜಮಾದಾರ (ಪದ್ದಣ್ಣ ಶ್ರಮ ಪ್ರಶಸ್ತಿ)

'ಜಮಾದಾರ ಮಾಸ್ತರ' ಎಂದೇ ಪ್ರಖ್ಯಾತಗೊಂಡಿರುವ ಶ್ರೀ ಕಾಶೀಮಸಾಬ ಜಮಾದಾರ ಬಿಜಾಪುರ ಜಿಲ್ಲೆಯ ಬೈಲಹೊಂಗಲದ ಕೃಷಿಕ ಕುಟುಂಬದಲ್ಲಿ 1937ರಲ್ಲಿ ಜನಿಸಿದರು. ಚಿಕ್ಕ ವಯಸ್ಸಿನಲ್ಲಿಯೇ ತಬಲಾ ಕಲೆಯ ಕಡೆಗೆ ಆಕರ್ಷಿತರಾದ ಕಾಶೀಮಸಾಬ ಜಮಾದಾರ ಶಾಲೆಯ ಕಡೆಗೆ ಒಲಿಯಲಿಲ್ಲ. ಶಾಲಾ ಮಾಸ್ತರರನ್ನು ಒಲ್ಲದ ಕಾಶೀಮಸಾಬ ಜಮಾದಾರ ತಬಲಾ ಮಾಸ್ತರರನ್ನು ಹುಡುಕಿಕೊಂಡು ಹೊರಟರು. ಅಕ್ಷರಕ್ಕೆ ಒಲಿಯದ ಮಗನನ್ನು ತಂದೆ ತಾಯಿಗಳು ಅಕ್ಕರೆಯಿಂದ ಕಾಣಲಿಲ್ಲ. ಪರಿಣಾಮವಾಗಿ ಪ್ರಾಥಮಿಕ ಶಾಲೆಯ ವ್ಯಾಸಂಗಕ್ಕಷ್ಟೆ ಓದನ್ನು ನಿಲ್ಲಿಸಿದ ಕಾಶೀಮಸಾಬ ಜಮಾದಾರ, ತಂದೆ ತಾಯಿಯರ ಮನೆಯನ್ನು ತೊರೆದು ಹೊರಟರು. ತಮ್ಮ 11ನೇ ವಯಸ್ಸಿನಲ್ಲಿಯೇ ಸಾಹಸಕ್ಕಿಳಿದ ಕಾಶೀಮಸಾಬ ಜಮಾದಾರ ತಬಲಾ ಮಾಸ್ತರರಿಗಾಗಿ ಹುಡುಕಾಟ ಆರಂಭಿಸಿದರು.

ತಬಲಾ ಕಲಿಯಲು ಹೆಚ್ಚು ಕಡಿಮೆ ಅಲೆಮಾರಿಯಂತೆ ಊರೂರು ತಿರುಗಾಡತೊಡಗಿದ ಕಾಶೀಮಸಾಬ ಜಮಾದಾರರು ಕೊನೆಗೂ ಬೈಲಹೊಂಗಲದ ತಬಲಾ ಪಂಡಿತರಾದ ಶ್ರೀ ಎ.ಪಿ. ಚಿನ್ನಯಶಾಸ್ತ್ರಿಯವರ ಬಳಿ ಶಿಷ್ಯತ್ವವನ್ನು ಸ್ವೀಕರಿಸಿದರು. ಭಾರತಕ್ಕೆ ಸ್ವಾತಂತ್ರ್ಯ ಬಂದ ಮರುವರ್ಷದಲ್ಲೆ ಕಾಶೀಮಸಾಬ ಜಮಾದಾರರು ತಮ್ಮ ಕಲಾಜೀವನದ ಆರಂಭಿಕ ಹೆಜ್ಜೆಯನ್ನಿಟ್ಟರು. ತಾವು ಕಲಿತ ತಬಲಾ ಜೊತೆಗೂಡಿ ರಂಗಭೂಮಿ ಏರಿದರು. ವೃತ್ತಿ ರಂಗಭೂಮಿಗೆ ತಬಲಾ ನುಡಿಸುತ್ತಲೇ, ಕಲೆಯನ್ನು ಇನ್ನಷ್ಟು ಕಲಿಯಲು ಯೋಚಿಸಿದರು. ಒಂದೆರಡು ವರ್ಷಗಳ

ನಂತರ ಕಾಶೀಮಸಾಬ ಜಮಾದಾರರು ತಬಲಾ ಕಲೆಯಲ್ಲಿ ತೀವ್ರವಾಗಿ ತೊಡಗಿಸಿಕೊಂಡರು. ಗುರುಕುಲ ಪರಂಪರೆಯ ರೀತಿ ಉಸ್ತಾದ ಬಾಬಾಸಾಹೇಬ ಮಿರಜಕರರ ಬಳಿ ಶಿಷ್ಯರಾಗಿ ನೆಲೆ ನಿಂತರು. ತಬಲಾದ ಜೊತೆಗೆ ಕಥಕ್ ನೃತ್ಯ, ಸಂಗೀತಗಳನ್ನು ಕಲಿತರು.

1957ರಲ್ಲಿ ಧಾರವಾಡ ಆಕಾಶವಾಣಿಯಲ್ಲಿ ಕಲಾವಿದರಾಗಿ ಸೇರಿದ ಕಾಶೀಮಸಾಬ ಜಮಾದಾರರು ನಿಂತ ನೀರಾಗದೆ ನಿರಂತರವಾಗಿ ಹರಿಯತೊಡಗಿದರು. ದಾಂಡೇಲಿಯಲ್ಲಿ ಸತತ 52 ಗಂಟೆಗಳ ಕಾಲ ತಬಲಾ ನುಡಿಸಿ ದಾಖಲೆ ನಿರ್ಮಿಸಿದ್ದಾರೆ. ಕಾಶೀಮಸಾಬರೆಂಬ ಶ್ರಮಜೀವಿಯ ಆಸ್ತಿ ತಬಲ. ಸರ್ಕಾರ ನೀಡುವ ಮಾಸಾಶನವೇ ಜೀವನಕ್ಕೆ ಆಧಾರ. ಕಾಶೀಮಸಾಬರಂತಹ ನೂರಾರು ಶ್ರಮಜೀವಿಗಳೇ ರಂಗಭೂಮಿಗೆ ಸರ್ವ ರೀತಿಯ ಆಧಾರ.

---



## ಎಲ್. ಗುರು (ವರ್ದ್ಯಣ್ಣ ಶ್ರಮ ಪ್ರಶಸ್ತಿ)

ಶ್ರೀ ಎಲ್. ಗುರು ಅವರು 1946ರಲ್ಲಿ ಮೈಸೂರಿನಲ್ಲಿ ಜನಿಸಿದರು. ತಂದೆ ಶ್ರೀ ಲಿಂಗಪ್ಪನವರು, ಅರಮನೆಯಲ್ಲಿ ನೌಕರರಾಗಿದ್ದರು. ಗುರು ಅವರು ಐದನೇ ತರಗತಿಯವರೆಗೆ ಮಾತ್ರ ಓದಲು ಸಾಧ್ಯವಾಗಿ ಬಡತನದ ಕಾರಣದಿಂದ ಮುಂದೆ ಓದಲಾಗದೆ ಅಂಗಡಿಯೊಂದರಲ್ಲಿ ಕೆಲಸಕ್ಕೆ ಸೇರಿದರು. ಕಲೆಯ ಬಗ್ಗೆ ಬಹಳ ಆಸಕ್ತಿಯಿದ್ದುದರಿಂದ, ತಾವೇ ಹುಡುಕಿಕೊಂಡು ಹೋಗಿ ಪ್ರೀಮಿಯರ್ ಸ್ಟುಡಿಯೋಗೆ ಕೆಲಸಕ್ಕೆ ಸೇರಿದರು. ಜಿ.ವಿ. ಅಯ್ಯರ್‌ರವರು 'ಪೋಸ್ಟ್ ಮಾಸ್ಟರ್' ಚಿತ್ರವನ್ನು ಪ್ರೀಮಿಯರ್ ಸ್ಟುಡಿಯೋದಲ್ಲಿ ಚಿತ್ರೀಕರಿಸುತ್ತಿದ್ದ ಸಂದರ್ಭದಲ್ಲಿ, ಆ ತಂಡದಲ್ಲಿದ್ದ ಗುಬ್ಬಿ ಕಂಪನಿಯ ಕೆಲವು ನಟರು ಗುರು ಅವರಿಗೆ ಪರಿಚಯವಾದರು. ಅವರ ಮೂಲಕ ಗುಬ್ಬಿ ವೀರಣ್ಣನವರ ಹಿರಿಯ ಪುತ್ರರಾದ ಶ್ರೀ ಚೆನ್ನಬಸವಣ್ಣನವರನ್ನು ಪರಿಚಯ ಮಾಡಿಕೊಂಡರು. ಅವರು ನೀಡಿದ ಅವಕಾಶದ ಮೇರೆಗೆ ಗುರು ಅವರು ಗುಬ್ಬಿ ಕಂಪನಿಗೆ ಸೇರಿಕೊಂಡರು. ಗುಬ್ಬಿ ಕಂಪನಿಯಲ್ಲಿ ಹತ್ತು ವರ್ಷಗಳ ಕಾಲ ಸ್ಟೇಜ್ ಕೆಲಸವನ್ನು ಮಾಡಿ ಅಪಾರವಾದ ಅನುಭವ ಗಳಿಸಿಕೊಂಡರು. ಗುಬ್ಬಿ ಕಂಪನಿಯಲ್ಲಿ ಸಲ್ಲಿಸಿದ ಸೇವೆ ಗುರು ಅವರಲ್ಲಿ ಧೈರ್ಯವನ್ನು, ಹುಮ್ಮಸ್ಸನ್ನು ಹುಟ್ಟು ಹಾಕಿತು. ಕೆಲವು ಅನಿವಾರ್ಯ ಕಾರಣಗಳಿಂದ ಗುಬ್ಬಿ ಕಂಪನಿಯನ್ನು ಬಿಟ್ಟು ಬೆಂಗಳೂರಿನ ಪ್ರಭಾತ್ ಕಲಾ ಸಂಸ್ಥೆಯಲ್ಲಿ ಸ್ಟೇಜ್ ಕೆಲಸ ಮಾಡಲು ಸೇರಿದ ಗುರು ಅವರು ಅಲ್ಲಿಯೂ ಐದು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಈ ಮಧ್ಯೆ ಜೀವನಕ್ಕೆ ಭದ್ರ ನೆಲೆಯಿಲ್ಲದೆ ತೊಳಲಾಡುತ್ತಿದ್ದಾಗ, ಖ್ಯಾತ ನಿರ್ದೇಶಕರಾದ ಶ್ರೀ ಆರ್. ನಾಗೇಶ್‌ರವರ ಮೂಲಕ 1975ರಲ್ಲಿ ಕಲಾಕ್ಷೇತ್ರದಲ್ಲಿ ಹಂಗಾಮಿ ಸ್ಟೇಜ್ ನೌಕರನಾಗಿ ಸೇರಿಕೊಂಡರು. ಮುಂದೆ ಗುರು ಅವರು ಖಾಯಂ ನೌಕರರಾದರು.

1991ರಲ್ಲಿ ಗುರು ಅವರು ಮೈಸೂರಿನ ರಂಗಾಯಣಕ್ಕೆ ನಿಯೋಜಿತರಾದರು. ರಂಗಾಯಣದಲ್ಲಿಯೂ ಎರಡು ವರ್ಷಗಳ ಕಾಲ ಸ್ಟೇಜ್ ಕೆಲಸ ಮಾಡಿ ಪ್ರಸ್ತುತ ಮೈಸೂರಿನ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಉಪನಿರ್ದೇಶಕರ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಗುರು ಅವರು ಹೋದ ಕಡೆಯಲ್ಲೆಲ್ಲಾ ಸ್ಟೇಜನ್ನು ಬೆನ್ನಿಗೆ ಕಟ್ಟಿಕೊಂಡೇ ಸಾಗಿ ರಂಗಭೂಮಿಯನ್ನು ಕಟ್ಟಿದ್ದಾರೆ. ರಂಗಭೂಮಿಯ ಬೆಳವಣಿಗೆಗೆ ಶ್ರಮಿಸಿದ್ದಾರೆ.

---



## ಗೋಪಿನಾಥ ಭಟ್ ಗುಲ್ವಾಡಿ (ಪದ್ಮಣ್ಣ ಶ್ರಮ ಪ್ರಶಸ್ತಿ)

1918ರಲ್ಲಿ ಜನಿಸಿದ ಗೋಪಿನಾಥ ಭಟ್ ಗುಲ್ವಾಡಿ ಅವರು ಸುಮಾರು 75 ವರ್ಷಗಳಿಂದಲೂ ರಂಗಭೂಮಿಯಲ್ಲಿ ಸೇವೆ ಸಲ್ಲಿಸುತ್ತಾ ಬಂದಿರುವ ಆಲದ ಮರ. ಈ ಹಿರಿಯ ಚೇತನ ತಮ್ಮ 6ನೇಯ ವಯಸ್ಸಿನಿಂದಲೇ ನಾಟಕದಲ್ಲಿ ಅಭಿನಯಿಸುವುದನ್ನು ಆರಂಭಿಸಿದರು. ಮರಾಠಿ ರಂಗಭೂಮಿಯ ನಂಟಿನೊಂದಿಗೆ ತಮ್ಮ ನಟನೆಯನ್ನು ಆರಂಭಿಸಿದ ಗೋಪಿನಾಥ ಭಟ್ ಗುಲ್ವಾಡಿಯವರು ಕನ್ನಡ ರಂಗಭೂಮಿಯ ಧಾರೆಯಲ್ಲಿ ಬೆರೆತರು.

ನಟನೆಯಲ್ಲದೆ ಪ್ರಸಾಧನ (ಮುಖಾಲಂಕಾರ), ರಂಗಸಜ್ಜಿಕೆ, ತಬಲಾ ಸಾಥಿ, ಹಾರ್ಮೋನಿಯಂ ವಾದಕರಾಗಿ ಇವರು ರಂಗಭೂಮಿಯಲ್ಲಿ ದುಡಿದಿದ್ದಾರೆ. ಈ ಎಲ್ಲಾ ವಲಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಗೋಪಿನಾಥ ಭಟ್ ಗುಲ್ವಾಡಿಯವರು ಎತ್ತರಕ್ಕೆ ಬೆಳೆದಿದ್ದಾರೆ. ರಂಗಭೂಮಿಯನ್ನು ಬೆಳೆಸಿದ್ದಾರೆ.

ಯಕ್ಷಗಾನದ ಸುಧಾರಕ ಡಾ॥ ಶಿವರಾಮ ಕಾರಂತ, ಉಳ್ಳಾಲ ಮಂಗೇಶರಾಯರೊಡನೆ ರಂಗಭೂಮಿ ಕೆಲಸಗಳನ್ನು ಮಾಡಿ ಪಳಗಿದ ಗೋಪಿನಾಥ ಭಟ್ ಗುಲ್ವಾಡಿಯವರು 1948ರಲ್ಲೇ ರಂಗಭೂಮಿಯ ಪರಿಕರಗಳನ್ನು ಎಲ್ಲಾ ಕಡೆ ಪೂರೈಸುತ್ತಾ ನಡೆದಾಡುವ ರಂಗದ ಅಂಗಡಿಯಾಗಿದ್ದರು. ಮಂಗಳೂರಿನ ಸಂಗೀತ ಕಲಾ ಪ್ರಸಾರಕ ಸ್ಥಾಪಕ ಕಾರ್ಯದರ್ಶಿಯಾಗಿದ್ದ ಗುಲ್ವಾಡಿಯವರು ಅನೇಕ ಸಂಸ್ಥೆಗಳನ್ನು ಬೆಳೆಸಿದ್ದಾರೆ. ಅನೇಕ ಸಂಘ ಸಂಸ್ಥೆಗಳಿಂದ ಸನ್ಮಾನಿತರಾಗಿದ್ದಾರೆ. ಸ್ವಂತ ಶ್ರಮದಿಂದ ಬೆಳೆದಿರುವ ಗುಲ್ವಾಡಿಯವರು ಶತಾಯುಷಿಗಳಾಗಲೆಂದು ಹಾರೈಸೋಣ.

---



## ದುಂಡಪ್ಪ ಅವ್ವಣ್ಣೆಪ್ಪ ಮುತ್ತಗಿ (ಪದ್ಮಣ್ಣ ಶ್ರಮ ಪ್ರಶಸ್ತಿ)

ಶ್ರೀ ದುಂಡಪ್ಪ ಅವ್ವಣ್ಣೆಪ್ಪ ಮುತ್ತಗಿ ಅವರು ಬಾಗಲಕೋಟೆ ಜಿಲ್ಲೆಯ ಗಿರಿಸಾಗರದಲ್ಲಿ ಜನಿಸಿದರು. ಭಜನಾ ಕಲಾವಿದರಾಗಿದ್ದ ತಂದೆಯವರಿಂದ ಪ್ರಭಾವಿತರಾದ ದುಂಡಪ್ಪ ಅವ್ವಣ್ಣೆಪ್ಪ ಮುತ್ತಗಿಯವರು, ಮೆಟ್ರಿಕ್ಯುಲೇಷನ್‌ವರೆಗೆ ವ್ಯಾಸಂಗ ಮಾಡಿ ರಂಗ ಏರಿದರು. ನಾಟಕ ಆಡುವ, ಹಾಡು ಹೇಳುವ ಎಂದರೆ ಎಲ್ಲಿಗಾದರೂ ಸೈ ಎನ್ನುತ್ತಿದ್ದ ದುಂಡಪ್ಪ ಮುತ್ತಗಿಯವರನ್ನು ರಂಗಭೂಮಿ ಅಪ್ಪಿಕೊಂಡಿತು.

ಹಳ್ಳಿಯಲ್ಲಿ ರಂಗ ಚಟುವಟಿಕೆ ಆರಂಭವಾದರೆ ಸಾಕು, ನಾಟಕ ತಾಲೀಮು ನಡೆಯುವ ಕಡೆ ದುಂಡಪ್ಪ ಮುತ್ತಗಿ ಠಿಕಾಣಿ ಹಾಕುತ್ತಿದ್ದರು. ಇನ್ನೊಂದು ರೀತಿ ಹೇಳುವುದಾದರೆ ಮುತ್ತಿಗೆ ಹಾಕುತ್ತಿದ್ದರು. ದುಂಡಪ್ಪ ಮುತ್ತಗಿಯವರ ರಂಗಾಸಕ್ತಿ ಗಮನಿಸಿ ನಾಟಕ ಕಲಿಸುವ ಮಾಸ್ತರರು ಸಣ್ಣ ಪುಟ್ಟ ಪಾತ್ರ ನೀಡುವುದು, ಹಿನ್ನೆಲೆಯಾಗಿ ಹಾಡು ಹೇಳಿಸುವುದರ ಮೂಲಕ ರಂಗ ಪ್ರವೇಶಕ್ಕೆ ಪ್ರೋತ್ಸಾಹ ನೀಡಿದರು.

ಕಾಂಚನ ಮೃಗ, ಅಣ್ಣ ತಂಗಿ, ಬಸ್ ಕಂಡಕ್ಟರ್ ಮುಂತಾದ ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸಿರುವ ದುಂಡಪ್ಪ ಮುತ್ತಗಿ ಸಣ್ಣಾಟ, ದೊಡ್ಡಾಟಗಳಲ್ಲಿ ನುರಿತವರಾಗಿದ್ದಾರೆ. ಅಭಿನಯದ ಜೊತೆಗೆ ಹಾರ್ಮೋನಿಯಂ ಕಲೆಯನ್ನು ರೂಢಿಸಿಕೊಂಡಿರುವ ದುಂಡಪ್ಪ ಮುತ್ತಗಿಯವರು ಅನೇಕ ನಾಟಕಗಳಿಗೆ ರಂಗ ಸಂಗೀತ ಸಂಯೋಜಿಸಿದ್ದಾರೆ. ರಂಗಸಜ್ಜಿಕೆಯಲ್ಲಿಯೂ ಹಿಂದೆ ಬೀಳದ ದುಂಡಪ್ಪ ಮುತ್ತಗಿಯವರು ರಂಗಭೂಮಿಗೆ ತಮ್ಮಿಂದಾದುದನ್ನು ನೀಡಲು ತವಕಿಸುತ್ತಿದ್ದಾರೆ. ತಮ್ಮದೆ ಆದ ವಿಶಿಷ್ಟ ರೀತಿಯಲ್ಲಿ ರಂಗಸಜ್ಜಿಕೆ ರೂಪಿಸುವ ದುಂಡಪ್ಪ ಅವ್ವಣ್ಣೆಪ್ಪ ಮುತ್ತಗಿ, ರಂಗಸಜ್ಜಿಕೆಗೆ ದೇಶೀಯ ಆಕರಗಳನ್ನು ಅವಲಂಬಿಸುವುದೊಂದು ವಿಶೇಷ. ಶ್ರೀಯುತರ ಕಾಳಜಿಯನ್ನು ರಂಗಭೂಮಿ ಗೌರವಿಸುತ್ತದೆ.

---



## 'ನಾದೇ' ನರಸಿಂಹಮೂರ್ತಿ (ಪದ್ದಣ್ಣ ಶ್ರಮ ಪ್ರಶಸ್ತಿ)

'ನಾದೇ' ಎಂದೇ ಹೆಸರು ಗಳಿಸಿರುವ ಚಾಮರಾಜನಗರ ಜಿಲ್ಲೆಯ ನಾಗವಳ್ಳಿಯ ದೇವಯ್ಯ ನರಸಿಂಹಮೂರ್ತಿಯವರು ಮೂರು ದಶಕಗಳಿಗೂ ಹೆಚ್ಚು ಕಾಲ ವೃತ್ತಿ ರಂಗಭೂಮಿಯಲ್ಲಿ ಬರಹಗಾರರಾಗಿ, ನಟರಾಗಿ, ನಿರ್ದೇಶಕರಾಗಿ ದುಡಿದಿದ್ದಾರೆ. ವೃತ್ತಿ ರಂಗಭೂಮಿಗಾಗಿ ತಮ್ಮನ್ನು ತಾವು ತೆತ್ತುಕೊಂಡಿರುವ ನಾಗವಳ್ಳಿ ದೇವಯ್ಯ ನರಸಿಂಹಮೂರ್ತಿಯವರು ವೃತ್ತಿ ರಂಗಭೂಮಿಯ ಮಜಲುಗಳನ್ನು ಹಿಗ್ಗಿಸಲು ಶ್ರಮಿಸಿದ್ದಾರೆ.

ಶ್ರೀ ನರಸಿಂಹರಾಜು ಮತ್ತು ಜಯಲಕ್ಷ್ಮಿ ಎಂಬ ದಂಪತಿಗಳಿಗೆ ಹಿರಿಯ ಮಗನಾಗಿ 1947ರಲ್ಲಿ ಜನಿಸಿದ ನರಸಿಂಹಮೂರ್ತಿ ಬಡತನದ ದವಡೆಗೆ ಬಿದ್ದರು. ಎಸ್.ಎಸ್.ಎಲ್.ಸಿ.ವರೆಗೆ ಮಾತ್ರ ವ್ಯಾಸಂಗ ಮಾಡಲು ಸಾಧ್ಯವಾಗಿ ಜೀವನವೆಂಬ ವಿಶ್ವವಿದ್ಯಾಲಯಕ್ಕೆ ಹೆಜ್ಜೆಯಿಟ್ಟರು. 1967ರಲ್ಲಿ ದಿವಂಗತ ಮಹದೇವಸ್ವಾಮಿಯವರ ಮಗ ಗುರುರಾಜ್ ಕಂಪನಿಯಲ್ಲಿ ರಂಗಭೂಮಿ ಸೇವೆಯನ್ನು ಆರಂಭಿಸಿದ ನರಸಿಂಹಮೂರ್ತಿಯವರು ಹಿಂದಿರುಗಿ ನೋಡಲಿಲ್ಲ. ವೃತ್ತಿ ರಂಗಭೂಮಿಗೆ ಪ್ರವೇಶಿಸಿದ ಆರಂಭದಲ್ಲಿ ಹಾಸ್ಯ ಪಾತ್ರಗಳನ್ನು ಅಭಿನಯಿಸುತ್ತಿದ್ದ ನರಸಿಂಹಮೂರ್ತಿಯವರು ಕ್ರಮೇಣ ಬರವಣಿಗೆಯತ್ತ ತಿರುಗಿದರು.

'ಎಚ್ಚರ ತಂಗಿ ಎಚ್ಚರ' ನಾಟಕದ ಮೂಲಕ ಬರವಣಿಗೆಯನ್ನು ಆರಂಭಿಸಿದ ನರಸಿಂಹಮೂರ್ತಿಯವರು ಕೌಟುಂಬಿಕ ಸಮಸ್ಯೆಗಳನ್ನು ತಮ್ಮ ನಾಟಕಗಳ ಕೇಂದ್ರವನ್ನಾಗಿ ಅಳವಡಿಸಿಕೊಂಡರು. ವ್ಯಂಗ್ಯ, ವಿಡಂಬನೆ, ಮನರಂಜನೆ.... ಹೀಗೆ ನಾನಾ ಧ್ಯೇಯಗಳನ್ನಿಟ್ಟುಕೊಂಡು ರಚನೆಗೆ ಹೊರಟ ನರಸಿಂಹಮೂರ್ತಿಯವರು ಜನರ ಬದಲಾಗುತ್ತಿದ್ದ ಅಭಿರುಚಿಯನ್ನು ಗಮನಿಸಬೇಕಾಯಿತು. ಈ ಸವಾಲುಗಳ ಮಧ್ಯೆ ರಚಿಸಿದ 'ಪೋಲೀಸನ ಮಗಳು' ನಾಟಕ ಕೃತಿ ವಿಕ್ರಮವಾಗಿ ಸ್ಥಾಪಿಸಿದೆ. ಒಂದು ಸಾವಿರಕ್ಕೂ ಹೆಚ್ಚು ಪ್ರದರ್ಶನ ಕಂಡಿರುವ ಪೋಲೀಸನ ಮಗಳು ನಾಟಕದಲ್ಲಿ ನರಸಿಂಹಮೂರ್ತಿಯವರಂಥ ಸಾವಿರಾರು ಜನರ ಶ್ರಮವಿದೆ. ಅಂತಹವರ ಶ್ರಮದಿಂದ ವೃತ್ತಿ ರಂಗಭೂಮಿ ಬದುಕುಳಿದಿದೆ. ಆದ್ದರಿಂದಲೇ ನರಸಿಂಹಮೂರ್ತಿಯವರ ಶ್ರಮಕ್ಕೆ ಸಾರ್ಥಕ್ಯ ಬಂದಿದೆ.

---



## ಪುಟ್ಟಯ್ಯ (ಪದ್ದಣ್ಣ ಶ್ರಮ ಪ್ರಶಸ್ತಿ)

'ನನ್ನ ಕೊನೆಯ ಉಸುರಿರುವವರೆಗೂ ಕಲಾ ಸೇವೆ ಮಾಡುತ್ತಿರಬೇಕೆಂಬುದೇ ನನ್ನ ಅಭಿಲಾಷೆ' ಎಂದು ತಮ್ಮ ಬಾಳ ಆಸೆಯನ್ನು ಸಾರುವ ಶ್ರೀ ಪುಟ್ಟಯ್ಯ ಮಂಡ್ಯ ಜಿಲ್ಲೆಯ ಅಂಕನಹಳ್ಳಿ ಗ್ರಾಮದವರು. ತಂದೆ ಕುಳ್ಳೇಗೌಡ, ತಾಯಿ ಕೆಂಪಮ್ಮ.

1949ರಲ್ಲಿ ಬಡ ರೈತ ಕುಟುಂಬದಲ್ಲಿ ಜನಿಸಿದ ಪುಟ್ಟಯ್ಯ ಹೆಚ್ಚಿಗೆ ಓದಲು ಸಾಧ್ಯವಾಗಲಿಲ್ಲ. ನಾಟಕ ತಂತ್ರಜ್ಞನಾಗಿ ಪ್ರಭಾತ್ ಶಿಶು ವಿಹಾರಕ್ಕೆ ಸೇರಿದ್ದು ಪುಟ್ಟಯ್ಯನವರ ಜೀವನದಲ್ಲಿ ಹೊಸ ತಿರುವು ಮೂಡಿತು. ರಂಗಭೂಮಿಯೊಂದಿಗೆ ಬಾಂಧವ್ಯ ಏರ್ಪಟ್ಟಿತು. 1968ರಲ್ಲಿ ಪ್ರಭಾತ್‌ಗೆ ಸೇರಿ, ಅಲ್ಲಿಂದ 1969ರಲ್ಲಿ ನ್ಯಾಷನಲ್ ಕಾಲೇಜಿನ ರಂಗ ಹತ್ತಿದರು. ನ್ಯಾಷನಲ್ ಕಾಲೇಜಿನ ಅಂದಿನ ಪ್ರಖ್ಯಾತ ರಂಗ ಚಟುವಟಿಕೆಗಳಲ್ಲಿ ಬೆಳಕು ವಿನ್ಯಾಸದ ವಿಭಾಗದಲ್ಲಿ ಕೆಲಸ ಮಾಡುವ ಅವಕಾಶ ಒದಗಿತು.

1970ರಲ್ಲಿ ಸಂಗೀತ ನಾಟಕ ಅಕಾಡೆಮಿಯಲ್ಲಿ ಲೈಟ್ ಆಪರೇಟರ್ ಆಗಿ ಕೆಲಸ ಸಿಕ್ಕಾಗ ಪುಟ್ಟಯ್ಯನವರು ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ತೀರ್ಮಾನಿಸಿದರು. ಕಲಿಯಬೇಕಾದ್ದು ಬಹಳ ಇತ್ತು. ಸಿಕ್ಕ ಎಲ್ಲಾ ಅವಕಾಶಗಳನ್ನು ಬಳಸಿಕೊಂಡು ಬೆಳಕಿನ ವಿನ್ಯಾಸದಲ್ಲಿರುವವರ ಜೊತೆ ಪಳಗಿದರು.

ತುಘಲಕ್, ಒಡಲಾಳ, ಪೋಲೀ ಕಿಟ್ಟಿ, ಕಾಕನಕೋಟೆ, ಒಥೆಲೊ, ಸಂಕ್ರಾಂತಿ, ಸಿರಿಸಂಪಿಗೆ, ಕತ್ತಲೆ ಬೆಳಕು, ತಲೆದಂಡ, ಕುರುಡು ಕಾಂಚಾಣ.... ಹೀಗೆ ಹಲವಾರು ನಾಟಕಗಳಿಗೆ ಬೆಳಕು ವಿನ್ಯಾಸ ಮಾಡಿದ್ದಾರೆ. ಅನೇಕ ಸಂಘ ಸಂಸ್ಥೆಗಳೊಂದಿಗೆ ಗುರುತಿಸಿಕೊಂಡು ಬೆಳಕಿನ ವಿನ್ಯಾಸದಲ್ಲಿ ಭಾಗಿಯಾಗಿರುವ ಪುಟ್ಟಯ್ಯನವರು ರಂಗಭೂಮಿ ಕಂಡ ಚುರುಕಿನ ವ್ಯಕ್ತಿಗಳಲ್ಲೊಬ್ಬರು.

---



## ಮುದ್ದಣ್ಣ (ವರ್ದಣ್ಣ ಶ್ರಮ ಪ್ರಶಸ್ತಿ)

ಹಾವೇರಿ ಜಿಲ್ಲೆ ಹಿರೇಕೆರೂರು ತಾಲ್ಲೂಕಿನ ರಟ್ಟೀನಹಳ್ಳಿಯಲ್ಲಿ 1960ರಲ್ಲಿ ಜನಿಸಿದ ಮುದ್ದಣ್ಣ ವೀರಪ್ಪ ಶಿರಹಟ್ಟಿ ರಂಗಭೂಮಿಯಲ್ಲಿ 'ಲೈಟ್ ಮುದ್ದ' ಎಂದೇ ಪ್ರಖ್ಯಾತರು. ಬದುಕಿನ ಜಟಕಾ ಬಂಡಿಯಲ್ಲಿ ಕುಳಿತ ಮುದ್ದಣ್ಣ ಪಯಣ ಬೆಳೆಸಿದ್ದು ಎಲ್ಲಿಗೋ, ತಲುಪಿದ್ದು ಇನ್ನೆಲ್ಲಿಗೊ.

ಅನೇಕ ಕಲಾವಿದರಿಗೆ ಹುಟ್ಟು ಬಳುವಳಿಯಾಗಿ ಬರುವ ಬಡತನ ಮುದ್ದಣ್ಣನವರಿಗೂ ಒಲಿದು ಬಂತು. ಒಲಿದು ಬಂದದ್ದನ್ನು ಒಲ್ಲೆ ಎಂದು ವೈರಾಗ್ಯ ತಾಳದ ಮುದ್ದಣ್ಣ ವೀರಪ್ಪ ಶಿರಹಟ್ಟಿ ಬಡತನದೊಟ್ಟಿಗೆ ಜಟಾಪಟಿಗಿಳಿದರು. ತಾನು ಹುಟ್ಟಿದ ಹಟ್ಟಿ ತೊರೆದು ದಾವಣಗೆರೆಯ ಬೀದಿಗಳಲ್ಲಿ ಕೆಲಸ ಬೇಡತೊಡಗಿದರು. ಬೇಡಿದ ಕೈಗಳಿಗೆ ಸಿಕ್ಕಿದ್ದು ಮೆಕಾನಿಕ್ ಕೆಲಸ. ಮುದ್ದು ಮುದ್ದಾಗಿದ್ದ ಮುದ್ದಣ್ಣ ವೀರಪ್ಪ ಶಿರಹಟ್ಟಿಯವರ ರೂಪ ಬದಲಾಯಿತು. ಆಗಿನ್ನೂ ಮುದ್ದಣ್ಣನ ಹಾಲುಗೆನ್ನೆಗೆ ಹೆರೆ ಮೆತ್ತಿಕೊಂಡಿತು. ಬೆಳೆಚಿ ಕುಳಿತಿ. ದಾವಣಗೆರೆಯ ಬೀದಿಗಳಲ್ಲಿ ನಡೆಯುತ್ತಿದ್ದ ನಾಟಕಗಳತ್ತ ದಾಪುಗಾಲು ಹಾಕಿದ. ರಂಗಭೂಮಿ ಕಂಡಿತು. ಪಾತ್ರಗಳು ಕಂಡವು. ಆದರೆ ಮುದ್ದಣ್ಣನ ಎಲ್ಲಾ ನಿಗಾ ಬೆಳಕಿನತ್ತ. ರಂಗಭೂಮಿ ಮೇಲಾಡುತ್ತಿದ್ದ ಬೆಳಕಿನಾಟ, ಬೆಳಕಿನುಯ್ಯಾಲೆ ಮುದ್ದಣ್ಣನ ಚಿತ್ತದ ಸುತ್ತ ಕನಸಿನ ರಂಗೋಲೆ ಬಿಡಿಸಿತು.

1978ರಲ್ಲಿ ಕರ್ನಾಟಕದ ಸಾಂಸ್ಕೃತಿ, ಸಾಮಾಜಿಕ ಪ್ರಗತಿಪರ ಸಂಘಟನೆಯಾದ ಸಮುದಾಯದ ಮಡಿಲಿಗೆ ಬಿದ್ದ ಮುದ್ದಣ್ಣ ಅನೇಕ ಪ್ರತಿಭಾವಂತರ ಮೋಡಿಯನ್ನು ಕಣ್ಣಾರೆ ಕಂಡು ಪುಳಕಿತರಾದರು. ಸಮುದಾಯ ಕಾರ್ಯಕ್ರಮಗಳಲ್ಲಿ ನಿರಂತರವಾಗಿ ತೊಡಗಿಸಿಕೊಂಡರು. ಮುದ್ದಣ್ಣ ಇಷ್ಟಕ್ಕೇ ಸೀಮಿತಗೊಳ್ಳದೆ 1980 ರಿಂದಾಚೆ ಬೆಳಕು ವಿನ್ಯಾಸದಲ್ಲಿ ತೊಡಗಿಸಿದರು. ತಮ್ಮ ಪ್ರಯತ್ನಕ್ಕೆ ಆರಂಭದಲ್ಲಿ ಅಶೋಕ್ ಬಾದರದಿನ್ನಿಯವರು ನೀಡಿದ ಪ್ರೋತ್ಸಾಹವನ್ನು ಮುದ್ದಣ್ಣ ಇಂದಿಗೂ ನೆನಪಿಸಿಕೊಳ್ಳುತ್ತಾರೆ. ನಾಡಿನ ಪ್ರಖ್ಯಾತ ನಿರ್ದೇಶಕರ ನಾಟಕಗಳಿಗೆ ಬೆಳಕಿನ ವಿನ್ಯಾಸ ಮಾಡಿರುವ ಹೆಗ್ಗಳಿಕೆ ಮುದ್ದಣ್ಣನವರಿಗಿದೆ. ಇದಿಷ್ಟೇ ಅಲ್ಲದೆ ನಾಡಿನ ಯಾವುದೇ ಭಾಗದಲ್ಲೇ ಆಗಲಿ ಅನ್ಯಾಯಗಳು ನಡೆದರು ಅದನ್ನು ವಿರೋಧಿಸಲು ಮುದ್ದಣ್ಣ ರೆಡಿ. ಅನ್ಯಾಯ ನಡೆದ ಕಡೆ ಕುಪ್ಪೆಯಂತೆ ಕುಳಿತು ಗುಡುಗುಡನೆ ಓಡಾಡುತ್ತಾ ಪ್ರತಿಭಟಿಸುತ್ತಾರೆ ಮುದ್ದಣ್ಣ. ಹೀಗೆ ಸರ್ವಾಂತರ್ಯಾಮಿಯಾಗಿ ಮುದ್ದಣ್ಣ ತಮ್ಮ ಬೆಳವಣಿಗೆಯ ಹೆಜ್ಜೆಗಳನ್ನಿಡುತ್ತಾ ಸಾಗಿದ್ದಾರೆ. ಸ್ನೇಹಜೀವಿಯಾದ ಮುದ್ದಣ್ಣ ಶ್ರಮಜೀವಿ ಎಂಬುದು ಅವರನ್ನು ಬಲ್ಲ ಎಲ್ಲರಿಗೂ ತಿಳಿದಿರುವ ಹಗಲು ಸತ್ಯ. ತಮ್ಮ ಹುಟ್ಟೂರಿನಲ್ಲಿ ರಂಗಭೂಮಿಯನ್ನು ಪ್ರತಿಷ್ಠಾಪಿಸಲು ಹೆಣಗುತ್ತಿರುವ ಮುದ್ದಣ್ಣ ವೀರಪ್ಪ ಶಿರಹಟ್ಟಿ ಎರಡು ದಶಕಗಳ ಅಮೂಲ್ಯವಾದ ಸೇವೆಯನ್ನು ರಂಗಭೂಮಿಗೆ ನೀಡಿದ್ದಾರೆ. ರಂಗಭೂಮಿ ಅವರನ್ನು ಸ್ಮರಿಸುತ್ತದೆ.

---



## ಬಿ.ಎನ್. ಲಕ್ಷ್ಮೀನರಸಿಂಹಮೂರ್ತಿ (ಪದ್ದಣ್ಣ ಶ್ರಮ ಪ್ರಶಸ್ತಿ)

ಬಂಗಾರಿ ನರಸಿಂಹಯ್ಯ ಮತ್ತು ತೊಳಸಮ್ಮ ದಂಪತಿಗಳ ಮಗನಾಗಿ 1945ರಲ್ಲಿ ಜನಿಸಿದ ಬಿ.ಎನ್. ಲಕ್ಷ್ಮೀನರಸಿಂಹಮೂರ್ತಿ, ತಾತಾ ನರಸಯ್ಯನವರಿಂದ ತಂದೆ ನರಸಿಂಹಯ್ಯನವರಿಂದ ನಾಟಕ ಕಲೆಯನ್ನು ಬಳುವಳಿಯಾಗಿ ಪಡೆದರು. 1958 ರಿಂದ ಹೈಸ್ಕೂಲಿನಲ್ಲಿ ಓದುತ್ತಿರುವಾಗಲೇ 'ಪ್ರಸಾಧನ' ಕಲೆಯನ್ನು ಕಲಿಯಲು ಪ್ರಾರಂಭಿಸಿದರು. ಓದು ಮತ್ತು ನಾಟಕ ಕಲೆಯ ಕಲಿಕೆಯನ್ನು ಒಟ್ಟೊಟ್ಟಿಗೆ ಮಾಡಿದ ಲಕ್ಷ್ಮೀನರಸಿಂಹಮೂರ್ತಿಯವರು ಮಹತ್ವವನ್ನು ಸಾಧಿಸುವ ಗುರಿ ಹೊಂದಿದ್ದರು. ಲಕ್ಷ್ಮೀನರಸಿಂಹಮೂರ್ತಿ ಹೊಂದಿದ್ದ ಆಕಾಂಕ್ಷೆಗಳಿಗೆ ಅವರಿದ್ದ ಊರು ಕೊಡಿಯಾಲದ ವಾತಾವರಣವೂ ನೆರವಾಯಿತು. ಮಂಡ್ಯ, ಮೈಸೂರು ಮತ್ತು ಇತರ ಕಡೆಗಳ ಹಳ್ಳಿಗಳಿಗೆ ನಾಟಕದ ಸೀನರಿಗಳನ್ನು ಕಳುಹಿಸಿಕೊಡುವುದರಲ್ಲಿ 'ಕೊಡಿಯಾಲ' ಪ್ರಖ್ಯಾತವಾಗಿತ್ತು. ಲಕ್ಷ್ಮೀನರಸಿಂಹಮೂರ್ತಿಯವರ ತಾತ ನರಸಯ್ಯ 'ಸೀನರಿ'ಗಳನ್ನು ನೀಡುವುದರಲ್ಲಿ ಸಾಕಷ್ಟು ಖ್ಯಾತರಾಗಿದ್ದರು. ಮುಂದೆ ತಾತ ನಡೆದ ಹಾದಿಯಲ್ಲೇ ನಡೆದ ಲಕ್ಷ್ಮೀನರಸಿಂಹಮೂರ್ತಿಯವರು ಕೇವಲ ಪ್ರಸಾಧನ ಕಲೆಗೆ ಸೀಮಿತವಾಗದೆ ಲೈಟಿಂಗ್, ವಸ್ತ್ರಾಲಂಕಾರ ಕ್ಷೇತ್ರಗಳಿಗೂ ಪ್ರವೇಶಿಸಿದರು. 1964 ರಿಂದ ನಾಟಕಗಳಲ್ಲಿ ಅಭಿನಯಿಸಲು ಆರಂಭಿಸಿದ ಲಕ್ಷ್ಮೀನರಸಿಂಹಮೂರ್ತಿಯವರು ಮುಂದೆ ಸಿನಿಮಾ ಕ್ಷೇತ್ರಕ್ಕೂ ಪ್ರವೇಶಿಸಿದರು. ಕೃಷ್ಣನ ಪಾತ್ರವನ್ನು ಅಭಿನಯಿಸುವ ಲಕ್ಷ್ಮೀನರಸಿಂಹಮೂರ್ತಿಯವರು ರಾವಣನ ಪಾತ್ರದಲ್ಲೂ ಮಿಂಚಬಲ್ಲರು. ಟಿಪ್ಪು ಪಾತ್ರಕ್ಕೂ ಜೀವ ತುಂಬಬಲ್ಲರು. ಲಾರಿಯಲ್ಲಿ ಸೀನರಿಗಳನ್ನು ತುಂಬಿಕೊಂಡು ಊರಿಂದೂರಿಗೆ ಹೋಗಿ ಬರಡು ನೆಲದಲ್ಲಿ ಭವ್ಯವಾದುದನ್ನು ರೂಪಿಸಬಲ್ಲರು. ಹಳ್ಳಿಹಳ್ಳಿಗಳ ಮೂಲೆಯಲ್ಲಿ ನಾಟಕವನ್ನು ಜೀವಂತವಾಗಿಡಲು ಲಕ್ಷ್ಮೀನರಸಿಂಹಮೂರ್ತಿಯವರು ದಣಿದಿದ್ದಾರೆ. ಡಿಪ್ಲೊಮಾ ಓದಿದ್ದರೂ ಕೂಡ ಸರ್ಕಾರಿ ಕೆಲಸವನ್ನು ಅವಲಂಬಿಸದೆ, ಬಣ್ಣದ ಬದುಕಿನಿಂದಲೇ ಜೀವಿಸುತ್ತಾ, ಆ ಬದುಕನ್ನೇ ಆರಾಧಿಸುತ್ತ ರಂಗಭೂಮಿಗೆ ಹೆಗಲು ನೀಡಿದ್ದಾರೆ. ನರಸಿಂಹಮೂರ್ತಿಯವರ ಶ್ರಮ ಅಮೂಲ್ಯವಾದುದು.

---



## ಜಿ. ಮೈಲಾರಪ್ಪ (ಪದ್ದಣ್ಣ ಶ್ರಮ ಪ್ರಶಸ್ತಿ)

ಶ್ರೀ ಜಿ. ಮೈಲಾರಪ್ಪ 1933ರಲ್ಲಿ ನಾರಾಯಣದೇವರಕೆರೆಯಲ್ಲಿ ಜನಿಸಿದರು. ತುಂಗಭದ್ರಾ ಅಣೆಕಟ್ಟು ಕಟ್ಟುವಾಗ ನಾರಾಯಣದೇವರಕೆರೆ ಮುಳುಗಡೆಯಾದ್ದರಿಂದ, ಮೈಲಾರಪ್ಪನವರ ಕುಟುಂಬ ಮರಿಯಮ್ಮನಹಳ್ಳಿಗೆ ಸ್ಥಳಾಂತರಗೊಂಡಿತು. ತಂದೆ ಗೌಳೇರು ಲಿಂಗಪ್ಪ, ತಾಯಿ ಶಿವಮ್ಮ. ಮೈಲಾರಪ್ಪ ವ್ಯಾಸಂಗ ಮಾಡಲು ಸಾಧ್ಯವಾದದ್ದು ಮೂರನೇ ತರಗತಿಯವರೆಗೆ ಮಾತ್ರ. ಮೈಲಾರಪ್ಪನವರ ತಂದೆಯವರು ನಾಟಕದಲ್ಲಿ ವಿಶೇಷವಾದ ಆಸಕ್ತಿ ಹೊಂದಿದ್ದರು. ಆದ್ದರಿಂದ ಮೈಲಾರಪ್ಪನವರು ತಂದೆಯವರ ಹಾದಿಯನ್ನೇ ತುಳಿದರು. ತಮ್ಮ ಎಂಟನೇ ವಯಸ್ಸಿನಲ್ಲಿಯೇ 'ಕೃಷ್ಣಾರ್ಜುನರ ಕಾಳಗ'ದಲ್ಲಿ ಅಭಿನಯಿಸಿದ ಮೈಲಾರಪ್ಪನವರು ಮುಂದೆ 'ದೇವರ ದುಡ್ಡು' ನಾಟಕದಲ್ಲಿ ಅಭಿನಯಿಸಿ ಜನರ ಮೆಚ್ಚುಗೆಯನ್ನು ಸಂಪಾದಿಸಿದರು. ಅಭಿನಯವನ್ನು ಮೀರಿ ಬೆಳೆಯಬೇಕೆಂದು ಬಯಸಿದ ಮೈಲಾರಪ್ಪನವರು ನಾಟಕಗಳಿಗೆ ಸೀನರಿಗಳನ್ನು ಒದಗಿಸುವ ಯೋಜನೆಯನ್ನು ಮಾಡಿದರು. ತಂದೆಯವರ ಸ್ನೇಹಿತರಿಂದ ಹಳೆಯ ಪರದೆಗಳನ್ನು ಕಲೆಹಾಕಿ ಹಿಕ್ಕೈಪಿಗಳಾ ಚಿಂತಪ್ಪನವರಿಂದ ಪರದೆಗಳಿಗೆ ಹೊಸ ರೂಪ ನೀಡಿದರು. ಗ್ಯಾಸ್‌ಲೈಟ್, ಮೈಕು ಖರೀದಿಸಿ ಎತ್ತಿನ ಚಕ್ಕಡಿಯಲ್ಲಿ ಸೀನರಿಗಳನ್ನು ತುಂಬಿಕೊಂಡು ಹಳ್ಳಿ ಹಳ್ಳಿಗಳಿಗೂ ಪಯಣ ಬೆಳೆಸಿದರು. ಊರೂರು ನಂಟು ಬೆಳೆಯಿತು. ರಂಗಭೂಮಿಗೆ ಚಿಗುರು ಮೂಡಿತು. 1963ರಲ್ಲಿ ಮೈಲಾರಪ್ಪನವರು ಮರಿಯಮ್ಮನ ಹಳ್ಳಿಯಲ್ಲಿ 'ಮಹಿಳಾ ನಾಟಕ ತಂಡ'ವನ್ನು ಕಟ್ಟಿ ಮಹಿಳೆಯರಿಂದಲೇ 'ಕಪಟ ಕಾರಸ್ಥಾನ' ಮತ್ತು 'ಸಂಸಾರ' ನಾಟಕಗಳನ್ನು ಆಡಿಸಿದರು. ಇದೇ

ಸಂದರ್ಭದಲ್ಲೇ ಮೈಲಾರಪ್ಪನವರು ನಾಟಕಗಳ ನಿರ್ದೇಶನದ ಜವಾಬ್ದಾರಿಯನ್ನು ಹೊತ್ತುಕೊಂಡರು. ಮರಿಯಮ್ಮನಹಳ್ಳಿ ಮಹಿಳಾ ತಂಡವನ್ನು ಬೇರೆ ಊರುಗಳಿಗೆ ಕೊಂಡೊಯ್ದು ನಾಟಕಗಳನ್ನು ಆಡಿಸಿದರು. ತಮ್ಮ ಮಕ್ಕಳು ಬೆಳೆದ ನಂತರ ಮರಿಯಮ್ಮನಹಳ್ಳಿಯ ನಾಟಕ ಚಟುವಟಿಕೆ ಜವಾಬ್ದಾರಿಗಳನ್ನು ವಹಿಸಿಕೊಟ್ಟು ಮೈಲಾರಪ್ಪನವರು ರಾಯಚೂರು ಜಿಲ್ಲೆಯ ಹೊಸಹಳ್ಳಿಗೆ ಹೋಗಿ ನೆಲೆಸಿ ತಮ್ಮ ನಾಟಕ ಚಟುವಟಿಕೆಗಳನ್ನು ಮುಂದುವರಿಸಿದರು. ಕೊಪ್ಪಳ ಜಿಲ್ಲೆ, ಶಿವಮೊಗ್ಗ ಜಿಲ್ಲೆ, ಆಂಧ್ರದ ಕೆಲವು ಹಳ್ಳಿಗಳಿಗೆ ಮೈಲಾರಪ್ಪನವರು ಸೀನರಿಗಳನ್ನು ಒದಗಿಸಿ ಸಾವಿರಾರು ಜನರಲ್ಲಿ ನಾಟಕದ ಬಗ್ಗೆ ಪ್ರೀತಿ ಮೂಡಿಸಿ ರಂಗಭೂಮಿಯನ್ನು ಬೆಳೆಸಿದರು.

---



## ಎಂ.ಎಸ್. ರಮೇಶ್ (ಪದ್ಮಣ್ಣ ಶ್ರಮ ಪ್ರಶಸ್ತಿ)

ಮೂರುವರೆ ದಶಕಗಳನ್ನು ರವೀಂದ್ರ ಕಲಾಕ್ಷೇತ್ರದಲ್ಲಿ ಕಳೆದಿರುವ ಶ್ರೀ ಎಂ.ಎಸ್. ರಮೇಶ್‌ರವರು ಶ್ರಮಜೀವಿ ಹಾಗೂ ಸ್ನೇಹ ಜೀವಿ. ಶ್ರೀಕಂಠಯ್ಯ ಮತ್ತು ನಂಜಮ್ಮ ದಂಪತಿಗಳಿಗೆ 1944ರಲ್ಲಿ ಜನಿಸಿದ ರಮೇಶ್, ತಾವು ಹುಟ್ಟಿದ ಮೈಸೂರಿನ ಹಳೆಯ ಅಗ್ರಹಾರದ ನಂಟನ್ನು ಬಹಳ ದಿನ ಉಳಿಸಿಕೊಳ್ಳಲಾಗಲಿಲ್ಲ. ತಂದೆ ಶ್ರೀಕಂಠಯ್ಯನವರು ರಂಗಭೂಮಿ ಕಲಾವಿದರಾದ್ದರಿಂದ ರಮೇಶ್‌ರವರಿಗೆ ರಂಗಭೂಮಿ ನಂಟು ಬಯಸಿದ್ದಕ್ಕಿಂತ ಬೇಗ ದೊರೆಯಿತು. 'ಸತಿ ಅನಸೂಯ' ನಾಟಕದಲ್ಲಿ ಬಾಲ ನಟನಾಗಿ ಅಭಿನಯಿಸಿದ ರಮೇಶ್ ಮುಂದೆ ದೊಡ್ಡ ನಟನಾಗುವ ಕನಸು ಕಂಡರು. ಸೋದರರಾದ ಎಂ.ಎಸ್. ಸತ್ಯ, ಎಂ.ಎಸ್. ಉಮೇಶ್ ಉತ್ತಮ ನಟರಾದ್ದರಿಂದ ರಂಗಭೂಮಿ ವಾತಾವರಣ ರಮೇಶರಿಗೆ ಸಿಕ್ಕಿತು. ಇದರ ಜೊತೆ ಜೊತೆಗೆ ರಮೇಶ್‌ರವರು ಹಿರಣ್ಣಯ್ಯ ಮಿತ್ರ ಮಂಡಳಿ, ಗುಬ್ಬಿ ಕಂಪನಿ, ಚಾಮುಂಡೇಶ್ವರಿ ಕಂಪನಿ ಮತ್ತು ಯೋಗಣ್ಣನವರ ಕಂಪನಿಗಳಲ್ಲಿ ಸೇರಿ ಅನುಭವಗಳಿಸತೊಡಗಿದರು. ಬರಬರುತ್ತ ನಟನೆಯ ಬಗ್ಗೆ ಪ್ರೀತಿ ಕಡಿಮೆಯಾಗಿ, ತಾಂತ್ರಿಕತೆಯ ಕಡೆ ಗಮನ ಹರಿಯತೊಡಗಿತು. ಕೊನೆಗೆ ತಾಂತ್ರಿಕತೆಯನೇ ನೆಚ್ಚಿ, ಮೆಚ್ಚಿ, ಆ ಕ್ಷೇತ್ರದಲ್ಲಿ ನೆಲೆಯೂರಿದರು. ರಂಗಭೂಮಿಗಾಗಿ ದುಡಿಯಲು ಕಂಕಣಬದ್ಧರಾದರು. ರಮೇಶ್‌ರವರಿಂದ ರಂಗಭೂಮಿಗೆ ಒಳಿತಾಗಿದೆ. ಅವರಿಗೆ ರಂಗಭೂಮಿ ಋಣಿಯಾಗಿದೆ.

---



## ಶಿವಣ್ಣ ಕುಸುಬಿ (ಪದ್ಮಣ್ಣ ಶ್ರಮ ಪ್ರಶಸ್ತಿ)

ಶ್ರೀ ಶಿವಣ್ಣ ಕುಸುಬಿಯವರು ಧಾರವಾಡ ಜಿಲ್ಲೆ ಕುಂದಗೋಳ ತಾಲ್ಲೂಕು ಗುಡಿಗೇರಿ ಗ್ರಾಮದಲ್ಲಿ 1931ರಲ್ಲಿ ಜನಿಸಿದರು. ತಂದೆ ಬಸಪ್ಪ ಕುಸುಬಿಯವರು, ತಾಯಿ ಸಾವಕ್ಕನವರು. 1947ರಲ್ಲಿ ಕನ್ನಡ ಮುಲ್ಕೀ ಪರೀಕ್ಷೆಯನ್ನು ಪಾಸು ಮಾಡಿ ಇಂಗ್ಲೀಷಿನ 3ನೇ ಇಯತ್ತೆಯನ್ನು ಪೂರೈಸಿದರು. ಕೃಷಿಕ ಕುಟುಂಬದಿಂದ ಬಂದ ಶ್ರೀ ಶಿವಣ್ಣ ಕುಸುಬಿಯವರು ವಿದ್ಯಾಭ್ಯಾಸದ ನಂತರ ಉದ್ಯೋಗವನ್ನು ಹುಡುಕುವ ಯೋಚನೆ ಮಾಡಿದರು. ಕೆಲವು ದಿನ ಹಂಗಾಮಿಯಾಗಿ ಅಲ್ಲಿ ಇಲ್ಲಿ ಕೆಲಸ ಮಾಡತೊಡಗಿದರು. ಈ ಮಧ್ಯೆ ಗುಡಿಗೇರಿಯಲ್ಲಿ ಮೊದಲಿನಿಂದಲೂ ನಾಟಕಗಳನ್ನು ಆಡುತ್ತಿದ್ದರು. ಗುಡಿಗೇರಿ ಗ್ರಾಮದ ಕಲಾವಿದರು ನಾಟಕಗಳನ್ನು ಆಡಲು ಸೀನರಿ ಮುಂತಾದ ಸಂಗತಿಗಳಿಗೆ ಸಂಬಂಧಿಸಿದಂತೆ ಪಡುತ್ತಿದ್ದ ಕಷ್ಟ ಕಾರ್ಪಣ್ಯಗಳನ್ನು ನಿವಾರಿಸಲು ಶಿವಣ್ಣ ಕುಸುಬಿಯವರು ಮುಂದಾಳತ್ವ ವಹಿಸಿಕೊಂಡರು. ಅಲ್ಲಿಂದ ಶಿವಣ್ಣ ಕುಸುಬಿಯವರು ರಂಗಭೂಮಿಯಲ್ಲಿ ಸಕ್ರಿಯ ಪಾತ್ರ ವಹಿಸತೊಡಗಿದರು. 1960ರಲ್ಲಿ ಗುಡಿಗೇರಿಗೆ ಕವಲಿ ಚೆನ್ನಬಸಪ್ಪನವರ ಕಲಾ ಪ್ರಕಾರ ನಾಟ್ಯ ಸಂಘ ಆಗಮಿಸಿತು. ಆ ನಾಟ್ಯ ಸಂಘಕ್ಕೆ ಶಿವಣ್ಣನವರನ್ನು ಆಹ್ವಾನಿಸಿದರು. ಸಂತೋಷದಿಂದ ಕವಲಿ

ಚೆನ್ನಬಸಪ್ಪನವರ ನಾಟ್ಯ ಸಂಘವನ್ನು ಸೇರಿಕೊಂಡರು. ಮುಂದೆ ದುರವಸ್ಥೆಗೀಡಾಗಿದ್ದ ಕವಲಿ ಕಂಪನಿಯ ಉಸ್ತುವಾರಿ ವಹಿಸಿಕೊಂಡರು. ಕವಲಿ ಕಂಪನಿಯನ್ನು 14 ವರ್ಷ ನಡೆಸಿದರು. ಕವಲಿ ಕಂಪನಿ ನಿಂತ ನಂತರ ಪತ್ನಿ ಸಮೇತ ಶಿವಣ್ಣನವರು ಯೋಗಾನರಸಿಂಹ ಅವರ ಕಂಪನಿಯಲ್ಲಿ ಮ್ಯಾನೇಜರ್ ಆಗಿ ಕಾರ್ಯ ನಿರ್ವಹಿಸಿದರು. 6 ವರ್ಷಗಳ ಕಾಲ ಗುಬ್ಬಿ ಕಂಪನಿಯಲ್ಲಿ ಸೇವೆ ಸಲ್ಲಿಸುವ ಅವಕಾಶವನ್ನು ಶಿವಣ್ಣನವರು ಪಡೆದುಕೊಂಡರು. ಕ್ರಮಶಃ ಹುಚ್ಚೇಶ್ವರ ನಾಟ್ಯ ಕಂಪನಿ ಮತ್ತು ದಾವಣಗೆರೆ ಕೆ.ಬಿ.ಆರ್. ಕಂಪನಿಗಳಲ್ಲೂ ತಲಾ 4 ವರ್ಷಗಳ ಕಾಲ ಶಿವಣ್ಣ ಕುಸುಬಿಯವರು ಸೇವೆ ಸಲ್ಲಿಸಿದ್ದಾರೆ. ರಂಗಭೂಮಿಯ ಸೇವೆಯಲ್ಲಿ ತಮ್ಮನ್ನು ಸವೆಸಿಕೊಂಡಿರುವ ಶಿವಣ್ಣ ಕುಸುಬಿಯವರು ರಂಗಭೂಮಿಯ ಏಳಿಗೆಗಾಗಿ ಅವಿಶ್ರಾಂತರಾಗಿ ದುಡಿದಿದ್ದಾರೆ.



## ರಾಮು (ಪದ್ಮಣ್ಣ ಶ್ರಮ ಪ್ರಶಸ್ತಿ)

ಬೆಂಗಳೂರು ಜಿಲ್ಲೆ ಕನಕಪುರದ ಎಡವನಹಳ್ಳಿಯಲ್ಲಿ 1952ರಲ್ಲಿ ಜನಿಸಿದ ರಾಮು ಅವರು ರಂಗಭೂಮಿಯಲ್ಲಿ ದುಡಿಯುತ್ತಿರುವ ಅತ್ಯಂತ ಚುರುಕಿನ ವ್ಯಕ್ತಿ. ಎರಡೂವರೆ ದಶಕಗಳಿಂದಲೂ ಶ್ರಮ ವಹಿಸಿ ರಂಗಭೂಮಿಗೆ ತನ್ನದೇ ಆದ ರೀತಿಯಲ್ಲಿ ಸೇವೆ ಸಲ್ಲಿಸುತ್ತಿರುವ ರಾಮು ಉತ್ತಮ ಅವಕಾಶಗಳಿಗಾಗಿ ಎದುರು ನೋಡುತ್ತಿದ್ದಾರೆ. ರಂಗಭೂಮಿಗಾಗಿ ತಾಂತ್ರಿಕ ನಿರ್ವಹಣೆ, ವ್ಯವಸ್ಥಾಪನೆ, ಮೇಲ್ವಿಚಾರಣೆ, ಧ್ವನಿ ಹಾಗೂ ಬೆಳಕಿನ ವ್ಯವಸ್ಥೆಯನ್ನು ಮಾಡುವ ರಾಮುರವರು ಧ್ವನಿ ಹಾಗೂ ಬೆಳಕಿನ ವ್ಯವಸ್ಥೆಯನ್ನು ಮಾಡುವುದರಲ್ಲಿ ಎತ್ತಿದ ಕೈ. ಬೆಂಗಳೂರು, ಮಂಗಳೂರು, ಹಾಸನ, ಮಡಿಕೇರಿ, ಶಿವಮೊಗ್ಗ ಕಡೆಗಳಲ್ಲಿ ಜರುಗಿದ ಚಲನಚಿತ್ರ ಸಮಾರಂಭಗಳಿಗೆ ಧ್ವನಿ ಹಾಗೂ ಬೆಳಕಿನ ವ್ಯವಸ್ಥೆಯನ್ನು ಮಾಡಿರುವ ರಾಮು ಬೆಂಗಳೂರಿನಲ್ಲಿ ನಡೆದ ರಾಷ್ಟ್ರೀಯ ಕ್ರೀಡೋತ್ಸವಕ್ಕೆ ಧ್ವನಿ ವ್ಯವಸ್ಥೆ ಮಾಡಿ ಹೆಗ್ಗಳಿಕೆ ಸಂಪಾದಿಸಿದ್ದಾರೆ. ಹಂಪಿಯ ಪ್ರತಿಷ್ಠಿತ ಉತ್ಸವಗಳಿಗೂ ರಾಮುರವರು ತಮ್ಮದೇ ಆದ ಅಮೋಘ ಸೇವೆ ಸಲ್ಲಿಸಿದ್ದಾರೆ. ನಾಡಿನ ಎಲ್ಲಾ ಸಾಂಸ್ಕೃತಿಕ ಸಂಸ್ಥೆಗಳಿಗೂ ತಮ್ಮ ಸೇವೆಯನ್ನು ಕಾಯ್ದಿರಿಸಿರುವ ರಾಮುರವರು ರಂಗಭೂಮಿಗಾಗಿ ದುಡಿಯುವ ಉತ್ಸಾಹವನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ. ರಾಮುರವರ ಸೇವೆ ಕಿರಿದಂತೆ ಕಂಡರೂ, ಅವರ ಮನಸ್ಸು ಹಿರಿದು.



## ಶ್ರೀದರ್ಶನ್ (ಪದ್ಮಣ್ಣ ಶ್ರಮ ಪ್ರಶಸ್ತಿ)

1949ರಲ್ಲಿ ಕಲಾವಿದರ ಕುಟುಂಬದಲ್ಲಿ ಜನಿಸಿದ ಶ್ರೀದರ್ಶನ್ ರಂಗಭೂಮಿಗೆ ಪಾದಾರ್ಪಣೆ ಮಾಡಲು ಹೆಚ್ಚಿಗೆ ಶ್ರಮ ಪಡಬೇಕಾಗಿರಲಿಲ್ಲ. ತಂದೆ ವೆಂಕಟರಂಗಪ್ಪ ಗುಬ್ಬಿ ಕಂಪನಿಯಲ್ಲಿ ನಟರಾಗಿದ್ದರು. ತಾಯಿ ಸುಮಿತ್ರಮ್ಮ ಮಗನ ಅಭಿಲಾಷೆಗೆ ಎಂದೂ ಅಡ್ಡಬಂದವರಲ್ಲ. ಕುಟುಂಬದ ಹಿನ್ನೆಲೆಯನ್ನು ತಮ್ಮ ಬೆಳವಣಿಗೆಗೆ ಬಳಸಿಕೊಂಡು ಶ್ರೀದರ್ಶನ್‌ರವರು ಮೊದಮೊದಲು ಅಭಿನಯಕ್ಕೆ ಆದ್ಯತೆ ನೀಡಿದರು. ಕ್ರಮೇಣ ನಿರ್ದೇಶನ, ರಚನೆ.... ಹೀಗೆ ಬೇರೆ ಬೇರೆ ವಲಯಗಳತ್ತ ತಿರುಗಿದರು. ಇದುವರೆಗೆ ಸುಮಾರು 1600 ಪ್ರದರ್ಶನಗಳನ್ನು ಕಂಡಿರುವ 'ಗೌಡ್ರ ಗದ್ಲ' ನಾಟಕದಲ್ಲಿ ಅಭಿನಯಿಸಿರುವ ಹೆಗ್ಗಳಿಕೆ ಶ್ರೀದರ್ಶನ್‌ರವರದು. ನಾಟಕದ ಮೂಲಕ ಚಲನಚಿತ್ರಕ್ಕೂ ಪ್ರವೇಶಿಸಿದ ಶ್ರೀದರ್ಶನ್‌ರವರು ಅಲ್ಲಿಯೂ ನಟನೆ, ನಿರ್ದೇಶನ, ರಚನೆಗೆ ಯತ್ನಿಸಿ ಸ್ವಲ್ಪ ಮಟ್ಟಿಗೆ ಯಶಸ್ವಿಯಾದರು. ಚಲನಚಿತ್ರದಲ್ಲಿ ಏನೇ ಗಳಿಸಿದರೂ ರಂಗಭೂಮಿಯ ನಂಟನು ಶ್ರೀದರ್ಶನ್ ಕಡಿದುಕೊಳ್ಳಲಿಲ್ಲ. ದೂರದರ್ಶನದ ತೆರೆಯ ಮೇಲೂ ಟೆಲಿಚಿತ್ರಗಳನ್ನು ಮೂಡಿಸಿರುವ ಶ್ರೀದರ್ಶನ್ ರಂಗಭೂಮಿಯನ್ನು ಶ್ರೀಮಂತಗೊಳಿಸಬೇಕೆಂಬ ಹಂಬಲ ಉಳ್ಳವರು. ಅವರ ಹಂಬಲ, ಕಾಳಜಿ ರಂಗಭೂಮಿಗೆ ವರದಾನ.

# 1999ರ ಪ್ರಶಸ್ತಿ ವಿಜೇತರು

## ಬಾಬುರಾವ ಬಿ. ದೇಸಾಯಿ (ಫೆಲೋಶಿಪ್)

ಎಂಬತ್ತೂರು ವಸಂತಗಳನ್ನು ಕಂಡಿರುವ ಬಾಬುರಾವ ಬಿ. ದೇಸಾಯಿಯವರು ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಅಮ್ಮಣಗಿಯವರು. ಅವರಿಗೆ ಬಾಲ್ಯದಲ್ಲಿಯೇ ಅಭಿನಯದಲ್ಲಿ ಆಸಕ್ತಿ, ತರಗತಿಯಲ್ಲಿದ್ದಾಗ ಆಶು ನಾಟಕ ಪ್ರವೀಣರೆಂದೇ ಅವರಿಗೆ ಖ್ಯಾತಿ. ನಾನಾ ಫಡ್ನವೀಸನ ಪಾತ್ರದಲ್ಲಿ ಎಲ್ಲರಿಂದ ಭಲೇ ಅನ್ನಿಸಿಕೊಂಡವರು. ಶಾಲಾ ಶಿಕ್ಷಕರಾಗಿ ವೃತ್ತಿ ಜೀವನ ಆರಂಭಿಸಿದ ದೇಸಾಯಿಯವರ ಮೇಲೆ ಪಂಡಿತ ತಾರಾನಾಥ ಹಾಗೂ ಶೇಕ್ಸ್‌ಪಿಯರನ ಪ್ರಭಾವ ಅಧಿಕ. ಆ ಕಾರಣಕ್ಕಾಗಿ ನಾಟಕ ರಚನೆಯಲ್ಲಿ ಉತ್ಸಾಹ. ಮಧುವನ, ಸ್ವಯಂವರ, ಭಕ್ತ ಸುಧನ್ವ, ನಿಜಲಿಂಗೇಶ್ವರ ಲೀಲೆ, ಉಮಾಜಿ ನಾಯಿಕ ಅಲ್ಲದೆ ಇನ್ನೂ ಹಲವು ನಾಟಕಗಳ ರಚನೆ.

ರಂಗ ಕಲಾವಿದರು ಹಾಗೂ ನಾಟಕ ಕಂಪನಿಗಳ ವಿವರ ಸಂಗ್ರಹಿಸುವುದು ಇವರ ವಿಶೇಷ ಹವ್ಯಾಸ. ಹಾಗೆಂದೇ ಇವರ ಸಂಗ್ರಹದಲ್ಲಿ ಅನೇಕ ಕಲಾವಿದರ ಅಪರೂಪದ ಭಾವಚಿತ್ರಗಳು ಮತ್ತು ಅವರ ಕುರಿತ ಅನೇಕ ವಿವರಗಳು ಲಭ್ಯ. ಕರ್ನಾಟಕದ ಮೊಟ್ಟ ಮೊದಲ ವೃತ್ತಿನಾಟಕ ಕಂಪನಿಯಾದ ಕೊಣ್ಣೂರು ಕಂಪನಿಯ ಬಗ್ಗೆ ಪುಸ್ತಕ ರಚನೆ. ಕೊಣ್ಣೂರು ಕಂಪನಿ ಹಾಗೂ ಅದರ ಮಾಲೀಕ ಶಿವಮೂರ್ತಿ ಸ್ವಾಮಿ ಕಣಬರ್ಗಿಮಠರ ಬಗ್ಗೆ ಅಲ್ಲಿ ರಂಗಾಭ್ಯಾಸಿಗಳಿಗೆ ಮನ ತುಂಬುವ ವಿವರಗಳ ಸಂಗ್ರಹ. ನಟನೆ, ಬರವಣಿಗೆಯಾಚೆ ಆಸಕ್ತಿಯ ವಿಸ್ತರಣೆ. ಶಿಕ್ಷಕ ವೃತ್ತಿಗೆ ರಾಜೀನಾಮೆ ನೀಡಿ ಸ್ವಂತ ಕಂಪನಿ ಕಟ್ಟಿ ರಂಗ ಸಮುದ್ರಕ್ಕೆ ಲಂಘನ. ಪಠಾಣ ಪಾಶ, ರಾಜಾ ಹರಿಶ್ಚಂದ್ರ, ಕಿತ್ತೂರು ಚೆನ್ನಮ್ಮ, ಚಿತ್ರಾಂಗದಾ, ಬೆಳವಡಿ ಮಲ್ಲಮ್ಮ ಮುಂತಾದ ನಾಟಕಗಳಿಂದ ಜನರಿಗೆ ಹಾಕಿದ್ದು ಪ್ರಚ್ಛನ್ನ ಮೋಡಿ. ಪಠಾಣ ಪಾಶ ನಾಟಕದ ಅಭಿನಂದನದ ಗುಂಗಿಗೆ ಸಿಲುಕಿದ ಜನರಿಂದ 'ಪಾಶಾ ಸಾಬ್' ಎಂದೇ ಅಭಿಧಾನ. ದೇಸಾಯಿಯವರಿಗೆ ಅಭಿನಯದ ಜೊತೆಗೆ ದಕ್ಕಿದ್ದು ಸರಾಗ ನಿರ್ವಹಣೆ. ಹಾಗೆಂದೇ ಹಲವು ಕಂಪನಿಗಳ ಮ್ಯಾನೇಜರ್ ಆಗಿ ಸುಸೂತ್ರ ಆಡಳಿತ ನೀಡಿಕೆ.

ನಲವಡಿ ಶ್ರೀಕಂಠ ಶಾಸ್ತ್ರಿಗಳ ಸಾಹ ಚರ್ಯದಲ್ಲಿ ಮತ್ತಷ್ಟು ನಾಟಕಗಳ ರಚನೆ. ಆಸಕ್ತಿಗೆ ಕೊನೆಯಿಲ್ಲ. ಈ ಎಲ್ಲದರ ನಡುವೆ 'ಶ್ರೀ ಮಲ್ಲಿಕಾರ್ಜುನ ಸಂಗೀತ ವಿದ್ಯಾಲಯ'ದ ಸ್ಥಾಪನೆ. ದೇಸಾಯಿಯವರ ದೇಹಕ್ಕೆ ವಯಸ್ಸಿಗೆ ಹೈರಾಣವಿದ್ದರೂ ಚೈತನ್ಯಕ್ಕೆ ಅದರ ಸೋಂಕಿಲ್ಲ. ಈಗಲೂ ಬರುವ ವಿದ್ಯಾರ್ಥಿಗಳಿಗೆ ಅಭಿನಯದ ಜತೆಗೆ ಸಂಗೀತವನ್ನೂ ಕಲಿಸುತ್ತಾರೆ.

---

## ಎಚ್.ಎಸ್. ಕೃಷ್ಣಮೂರ್ತಿ (ಹಾ.ಸಾ.ಕೃ.) (ಫೆಲೋಶಿಪ್)

ಎಚ್.ಎಸ್. ಕೃಷ್ಣಮೂರ್ತಿಯವರು ಕನ್ನಡ ರಂಗಭೂಮಿಯ ಸಂದರ್ಭದಲ್ಲಿ ಹಾ.ಸಾ.ಕೃ. ಎಂದೇ ಪ್ರಸಿದ್ಧರು. ಹುಟ್ಟಿದ್ದು ಮೈಸೂರು ಜಿಲ್ಲೆಯ ಹುಣಸೂರಿನಲ್ಲಿ. ತಂದೆ ಶ್ರೀ ಎಚ್.ಎಸ್. ಶ್ರೀಕಂಠಯ್ಯನವರು. ಹಾ.ಸಾ.ಕೃ. ವಿಜ್ಞಾನ ಶಾಸ್ತ್ರದಲ್ಲಿ ಪದವೀಧರರು. ರಂಗಭೂಮಿ ಇವರ ಅತ್ಯಂತ ಪ್ರೀತಿಯ ಆಸಕ್ತಿ. 1972ರಿಂದ ಹವ್ಯಾಸಿ ರಂಗಭೂಮಿಯಲ್ಲಿ ಸಕ್ರಿಯ. ನಟನೆ ಮೊದಲ ಆಕರ್ಷಣೆ. ಎಪ್ಪತ್ತರ ದಶಕ ಕನ್ನಡ ರಂಗಭೂಮಿಗೆ ಉಚ್ಛ್ರಾಯ ಕಾಲ. ಅನೇಕ ಮಹತ್ವದ ನಾಟಕಗಳು ಈ ಸಂದರ್ಭದಲ್ಲೇ ಪ್ರದರ್ಶನ ಕಂಡಿದ್ದು,

ರಂಗನಿರ್ದೇಶಕರಿಗೆ ಮಹತ್ವ ಬಂದದ್ದೂ ಈ ಅವಧಿಯಲ್ಲೇ. ಕಾರಂತ, ಕಂಬಾರ, ಕಾರ್ನಾಡ, ಲಂಕೇಶ, ಬಿ. ಚಂದ್ರಶೇಖರ್, ಶ್ರೀರಂಗ ಮುಂತಾದವರು ಕನ್ನಡ ರಂಗಭೂಮಿಗೆ ಸಾರ್ವತ್ರಿಕ ಮಹತ್ವ ತಂದುಕೊಟ್ಟರು. ಇವರೆಲ್ಲರ ಜೊತೆಯಲ್ಲೇ ಹಾ.ಸಾ.ಕೃ. ರಂಗ ಮನುಷ್ಯನಾಗಿ ಬೆಳೆದದ್ದು. ಕಾರಂತರ ನೆರಳಲ್ಲೇ ಇದ್ದು ಅವರ ಎಲ್ಲಾ ನಾಟಕಗಳಲ್ಲಿ ರೇಖೆಗಳಂತೆ ಇದ್ದವರು. ಪಾತ್ರ, ಸಂಭಾಷಣೆ, ಹಾಡು, ವ್ಯವಸ್ಥೆ ಎಂದಲ್ಲ ಓಡಾಡಿಕೊಂಡವರು. ರಂಗಸಂಗದಲ್ಲೇ ಅನುಭವದ ಸಾರ ಹೀರಿದುದರಿಂದ ವಿಮರ್ಶೆಯತ್ತ ಒಲವು, ರಂಗ ವಿಮರ್ಶೆಗೊಂದು ದಿಕ್ಕು ತೋರಿಸುವ ಯತ್ನ. ಆ ನಿಟ್ಟಿನಲ್ಲಿ ಪ್ರಯೋಗಗೊಳ್ಳುವ ನಾಟಕಗಳು ಇವರ ವಿಮರ್ಶೆಯ ಜಾಳೀಸಿನಲ್ಲಿ, ಪತ್ರಿಕೆಗಳ ಮೂಲಕ ಅವುಗಳಿಗೆ ಆತ್ಮಾವಲೋಕನದ ದಾರಿಯತ್ತ ಸನ್ನೆ. ನಾಟಕ ಕಲೆಯ ಬಗ್ಗೆ ಹತ್ತಾರು ಲೇಖನಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟ. ಬಿ.ವಿ. ಕಾರಂತರ ಬಗ್ಗೆ ಪರಿಚಯಾತ್ಮಕ ಹೊತ್ತಿಗೆ ನಾಟಕ ಅಕಾಡೆಮಿಯಿಂದ ಪ್ರಕಟ.

ಮೈಸೂರಿನ ರಂಗಾಯಣಕ್ಕೆ ವಿಶೇಷ ಅಧಿಕಾರಿಯಾಗಿ ನಾಲ್ಕು ವರ್ಷ ಸೇವೆ. ನಾಟಕ ಅಕಾಡೆಮಿಗೂ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಹಲವು ದಿನ. ಕನ್ನಡ, ಹಿಂದಿ ಸಿನಿಮಾಗಳಲ್ಲೂ ನಟನೆ. ಪ್ಯಾಸೇಜ್ ಟು ಇಂಡಿಯಾ ಇಂಗ್ಲಿಷ್ ಸಿನಿಮಾದಲ್ಲಿ ಪಾತ್ರ. ಉತ್ತಮ ವಾಗ್ಮಿ. ಗೋಷ್ಠಿಗಳಲ್ಲಿ ಇವರಿರದಿದ್ದರೆ ಪೂರ್ಣವಾಗುವದಿಲ್ಲ. ಹೊಸ ನೋಟಗಳಿಗೆ ದಿಕ್ಕು ತೋರಿಸುವ ಮಾತುಗಾರಿಕೆ. ಎಲ್ಲರ ಜತೆ ಸಂಪ್ರೀತರು.

---



## ಹೆಚ್.ಎಸ್. ಕುಲಕರ್ಣಿ (ಫಲೋಶಿಪ್)

ದೆಹಲಿಯ ರಂಗಭೂಮಿಗೆ ಕನ್ನಡದ ಕಂಪನ್ನು ತೀಡಿದ ಶ್ರೀ ಎಚ್.ಎಸ್. ಕುಲಕರ್ಣಿಯವರು ಈಗ ದೆಹಲಿ ವಾಸಿ. ಕೇಂದ್ರ ಸರಕಾರದ ಗೃಹ ಮಂತ್ರಾಲಯದಲ್ಲಿ ಅಧಿಕಾರಿಯಾಗಿ ಇದೀಗ ನಿವೃತ್ತಿ. 69 ವರ್ಷದ ಶ್ರೀಯುತರು ಕಳೆದ ನಲವತ್ತು ವರ್ಷಗಳಿಂದ ದೆಹಲಿಯಲ್ಲಿ ಕನ್ನಡ ರಂಗಭೂಮಿಯ ರಾಯಭಾರಿ. ಅಲ್ಲಿಯ ಹಿಂದಿಗರಿಗೆ ಕನ್ನಡ ನಾಟಕಗಳ ಪರಿಚಯ ಮತ್ತು ಹೊರನಾಡ ಕನ್ನಡಿಗರಿಗೆ ನಾಟಕದ ಗೀಳು ಹುಟ್ಟಿಸಿದ ವಾಯುಪುತ್ರ. ದೆಹಲಿಯಲ್ಲಿದ್ದವರು ಲಕ್ಷ ಲಕ್ಷ ಕನ್ನಡಿಗರು. ಎಲ್ಲರದು ಕೇವಲ ಹೊಟ್ಟೆಪಾಡಿನ ಆಸಕ್ತಿ. ಇವರದು ಹಾಗಲ್ಲ. ನೌಕರಿ ಬರೀ ಉದರ ಪೋಷಣೆಗೆ. ರಂಗಭೂಮಿ ಆಸಕ್ತಿಗೆ. ಮಡದಿ ಲಲಿತಾ ಅದಕ್ಕೆ ಪೂರಕ. ಅವರ ಒಲವೂ ನಾಟಕದತ್ತ. ದೆಹಲಿ ರಂಗಭೂಮಿಯಲ್ಲಿ ಇಬ್ಬರಿಗೂ ವಿಶಿಷ್ಟ ಸ್ಥಾನ. 1956ರಲ್ಲಿ ದೆಹಲಿಯ ಸರೋಜಿನಿ ನಗರದಲ್ಲಿ ಕನ್ನಡಿಗರದೇ ನಾಟಕ ತಂಡ ಸೃಷ್ಟಿ. ಆರು ವರ್ಷ ಅಲ್ಲಿ ಕನ್ನಡ ನಾಟಕಗಳ ಸುಗ್ಗಿ. ಬಹುತೇಕ ನಾಟಕಗಳ ದಿಗ್ದರ್ಶನ. ನಾಟಕಾಭಿನಯಕ್ಕೆ ಸಂದ ಪ್ರಶಸ್ತಿಗಳು ಅನೇಕ. ದೆಹಲಿಯ ಕನ್ನಡ ಭಾರತಿ ತಂಡದ ಸದಸ್ಯ. ಮ್ಯಾಕ್ ಬೆಥ್, ಹಯವದನ, ತುಘಲಕ, ಕುರಿ, ಚಾಳೇಶ, ನಾನೇ ಬಿಜ್ಜಳ, ಸದ್ದು... ವಿಚಾರಣೆ ನಡೀತಾ ಇದೆ.... ಮುಂತಾದವುಗಳಲ್ಲಿ ಅಭಿನಯ.

ಹಿಂದೀ ರಂಗಭೂಮಿಯಲ್ಲೂ ಅಪರೂಪದ ರಂಗೋತ್ಸಾಹ. ಅಲ್ಲಿನ "ಅಭಿಯಾನ" ತಂಡದ ಸದಸ್ಯರು. ಜಾತಿಹೀ ಪೂಛೋ ಸಾಧೂಕೀ... ನಾಟಕದ 175 ಪ್ರಯೋಗಗಳಲ್ಲಿ ಸಕ್ರಿಯ ಭಾಗಿ. ಇವರೇ ಬರೆದು ದಿಗ್ದರ್ಶಿಸಿದ ಹಿಂದೀ ನಾಟಕಗಳೂ ಅನೇಕ. ಆ ಭಾಷೆಯಲ್ಲೂ ಜನಪ್ರಿಯ. ದೆಹಲಿಯ ವಿವಿಧ ಪ್ರದೇಶಗಳಲ್ಲಿ ಇವರ ನಾಟಕಗಳ ಸುಗ್ಗಿ, ದೂರದ ಕನ್ನಡಿಗರಿಗೆ ಮಾತೃಭಾಷೆಯ ರೋಮಾಂಚನ. ಸಿನಿ, ಟೆಲಿ, ಧಾರಾವಾಹಿಗಳಲ್ಲೂ ವಿಜೃಂಭಣೆ. ಗಾಂಧೀ, ಮೌಂಟ ಬ್ಯಾಟನ್ ಇಂಗ್ಲಿಷ್ ಚಿತ್ರಗಳಲ್ಲೂ ಅಭಿನಯ. ಕನ್ನಡದಲ್ಲೂ ನಾಟಕಗಳ ರಚನೆ. ಸಾವಿತ್ರಿ, ಯಮನ ಸಾವು, ಮುದುಕನ ಗುಟ್ಟು, ಮಹಿಪತಿ ಕ್ವಾಣನ ತಂಬಿಗಿ ಇವು ಮುಖ್ಯ ನಾಟಕಗಳು. ಸಮಾಜ ಸೇವೆಯಲ್ಲೂ ಆಸಕ್ತಿ. ದೆಹಲಿ ಕನ್ನಡ ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷ, ಅಲ್ಲಿನ ಕರ್ನಾಟಕ ಸಂಘದ ಕಾರ್ಯ ಸಮಿತಿಯ ಸದಸ್ಯ. ದೆಹಲಿಯಲ್ಲಿ ಕನ್ನಡ ರಂಗಭೂಮಿಗೆ ವಿಶೇಷ ಘನತೆ ತಂದುಕೊಟ್ಟ ಗೌರವ ಇವರಿಗೆ.

---



## ಡಾ. ಬಿ.ಎಸ್. ಪರೇಶ್ ಕುಮಾರ (ಫೆಲೋಶಿಪ್)

ರಂಗಭೂಮಿಗೆ ಹತ್ತಾರು ಮುಖಗಳು. ಅವರವರ ಭಕುತಿಗೆ ಅವರಂತೆ ಒಲಿವ ಭಗವಂತ. ಇಲ್ಲಿ ಡಾ. ಪರೇಶ್ ಕುಮಾರಗೆ ಒಲಿದದ್ದು ಬೆಳಕು ವಿನ್ಯಾಸ. ಅದೂ ಅಪರೂಪವೆನಿಸುವಂಥ ಕೆಲಸ. ಸೃಜನಶೀಲ ಅಭಿವ್ಯಕ್ತಿಗೆ ರಂಗಭೂಮಿಯಲ್ಲೂ ಹೇರಳ ಅವಕಾಶ. ಅದನ್ನು ಸಾಬೀತು ಮಾಡಿದವರು ಬೆಳಕಿನ ನಮ್ಮ ಡಾ. ಪರೇಶ್. ಸದ್ದಿಲ್ಲದೆ ದುಡಿದು ಗಮನ ಸೆಳೆದು ಬೆಳಕು ವಿನ್ಯಾಸ ಮಾಡುವವರಲ್ಲಿ ಇವರು ಗಣ್ಯರು.

ಬಿಜ್ಜಹಳ್ಳಿ ಸಿದ್ಧಲಿಂಗಯ್ಯ ಪರೇಶ್ ಕುಮಾರ ಹುಟ್ಟಿದ್ದು ಬೆಂಗಳೂರಲ್ಲಿ. ಸಮಾಜಶಾಸ್ತ್ರದಲ್ಲಿ ಎಂ.ಎ. ಈಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಈ ವಿಭಾಗದಲ್ಲಿ ರೀಡರ್. ಎಳೆಯ ವಯಸ್ಸಿನಲ್ಲೇ ರಂಗಭೂಮಿಯ ಬಗ್ಗೆ ಆಸಕ್ತಿ. ಅಲ್ಲಿ ಚಿದಂಬರಮೂರ್ತಿ ಅವರಿಂದ ತರಬೇತಿ. ಬೆಳಕಿನ ಬಗ್ಗೆ ಪ್ರಾಥಮಿಕ ಪಾಠ ಹೇಳಿದವರು ಬಿ.ಎನ್. ನಾಣಿ. ಮುಂದೆ ಜಿ. ಶ್ರೀನಿವಾಸರೊಂದಿಗೆ ಬೆಳಕು ಸಹಾಯಕರಾಗಿ ಹೆಗಲು ನೀಡಿಕೆ. ಬಿ.ವಿ. ಕಾರಂತ ನಿರ್ದೇಶನದ ನೀ ಕೊಡೆ ನಾ ಬಿಡೆ ನಾಟಕಕ್ಕೆ ಸಹಾಯಕ ಬೆಳಕು ವಿನ್ಯಾಸಕಾರ. ಅಲ್ಲಿಂದ ರಂಗಭೂಮಿಯ ಗಣ್ಯರ ಕಣ್ಣು ಪರೇಶ್‌ರ ಮೇಲೆ. ಪ್ರೊ. ಬಿ. ಚಂದ್ರಶೇಖರ ನಿರ್ದೇಶನದ ತುಘಲಕ ನಾಟಕಕ್ಕೆ ದೀಪ ವಿನ್ಯಾಸ. ಆರ್. ನಾಗೇಶ್‌ರ ಪ್ರೋತ್ಸಾಹ ಬೆನ್ನ ಮೇಲೆ. ಹೆಗಲಿಗೇರಿಸಿದ ಸ್ಪಾಟ್‌ನ್ನು ಕೆಳಗಿಳಿಸಲಿಲ್ಲ. ಮುಂದೆ ನಾಟ್ಯ ಸಂಘ ಥಿಯೇಟರ್ ಸೆಂಟರ್‌ನವರ ಉಲ್ಲಾಳ ನಾಟಕ ಸ್ಪರ್ಧೆಗೂ ಇವರದೇ ದೀಪ ವಿನ್ಯಾಸ. ಅಲ್ಲಿಂದ ರಾಷ್ಟ್ರೀಯ ನಾಟಕ ಸ್ಪರ್ಧೆಯ ರಂಗ ಮಂಚಕ್ಕೆ ಆಹ್ವಾನ ಇಷ್ಟರಲ್ಲಿ ರಂಗಸಮುದಾಯದಲ್ಲಿ ಪರೇಶ್ ಸುಪರಿಚಿತರು. ನಟರಂಗದ ಕಾಕನಕೋಟೆ, ತುಘಲಕ, ವೈಟಿಂಗ ಫಾರ್ ಗೋಡೋ, ಮಿಡ್ ಸಮರ್ ನೈಟ್ಸ್ ಡ್ರೀಮ್, ಮೊದಲಾದ ಪ್ರಯೋಗಗಳಿಗೆ ಚೆಲ್ಲಿದ ಬೆಳಕು. ಪ್ರಸನ್ನರ ಬಯಲು ಸೀಮೆ ಸರದಾರ, ಹುತ್ತವ ಬಡಿದರೆ, ತಾಯಿ ನಾಟಕಗಳಿಗೆ ವಿಶೇಷ ಬೆಳಕಿನ ಮುತುವರ್ಜಿ. ಕಲಾಗಂಗೋತ್ರಿಯಿಂದಲೂ ಕರೆ. ಇವರ ಕಾಲಿಗುಲ, ಮುಖ್ಯಮಂತ್ರಿಗಳಿಗೆ ಬೆಳಕು. ಇಂಗ್ಲಿಷ್ ರಂಗಭೂಮಿಗೂ ಡಾ. ಪರೇಶ್ ಪರಿಚಿತರು. ಅಲ್ಲಿಯೂ ಬೆಳಕು. ವಿದೇಶೀ ಬ್ಯಾಲೇಗಳಿಗೆ, ನಾಟಕಗಳಿಗೆ ಆಡಿದ ಬೆಳಕಿನ ಬೆರಳುಗಳು. ಆಧುನಿಕ ಕನ್ನಡ ರಂಗಭೂಮಿಗೆ ಡಾ. ಪರೇಶ್ ನೀಡಿದ ಸೇವೆ ಅಪ್ರತಿಮ.

---



## ಕೆ.ಎಸ್. ಸಚ್ಚಿದಾನಂದ (ಫೆಲೋಶಿಪ್)

ಸಕ್ಕರೆ ನಾಡಿನ ಮಂಡ್ಯ ಕನ್ನಡ ರಂಗಭೂಮಿಯಲ್ಲಿ ಪಡೆದ ಸ್ಥಾನ ವಿಶಿಷ್ಟ ವ್ಯಕ್ತಿ ಮತ್ತು ಹವ್ಯಾಸಿ ರಂಗಭೂಮಿ ಅರಳಿದ ನೆಲವಿದು. ಇಂಥ ಸಶಕ್ತ ನಾಡಿನಿಂದ ಬಂದವರು ಶ್ರೀ ಕೆ.ಎಸ್. ಸಚ್ಚಿದಾನಂದ ಅವರು. ತಂದೆ ಕಲಾರಾಧಕ ಹಾಗೂ ಸ್ವಚ್ಛ ರಾಜಕಾರಿಣಿ ಕೆ.ವಿ. ಶಂಕರಗೌಡರು.

ಆರಂಭದಲ್ಲಿ ಹೆಚ್ಚಿದ ರಂಗನಂಟು. ಕಾಲೇಜು ದಿನಗಳಲ್ಲಿ ರಂಗಸಂಗಿಗಳ ಒಡನಾಟ. ಕಲಾವಿದರು ಅಂದರೆ ಅಕ್ಕರೆ, ಅಭಿಮಾನ. ಇವರೆಂದರೆ ಕಲಾವಿದರಿಗೂ ಪ್ರೀತಿ. ಈ ಭಾಗದ ರಂಗ 'ಭೂಮಿ'ಗೆ ಹದ ನೀಡಿದ ರಂಗ 'ಬೇಸಾಯ'. ಅವರ ಪಾಲಿಗೆ ಇವರು ಅಕ್ಷಯ ಪಾತ್ರೆ. ಅಂತಲೇ ಸಚ್ಚಿದಾನಂದರಿಂದ ರಂಗಸಮೂಹದ ಸೃಷ್ಟಿ, ಮಂಡ್ಯ ಕಲಾವಿದರ ಸಂಘದ ಸಂಸ್ಥಾಪನೆ. ಜೊತೆಗೆ 'ಗೆಳೆಯರ ಬಳಗ'ದ ಪೋಷಣೆ. ಈ ತಂಡಗಳ ಆರಂಭದ ದಿನಗಳಲ್ಲಿ ರಂಗಮಂಚದಲ್ಲಿ ಗಟ್ಟಿ ಹೆಜ್ಜೆಗಳು. ಪ್ರಮುಖ ಪಾತ್ರಗಳ ಮೂಲಕ ಮೊಳಗಿಸಿದ ರಂಗ ದುಂದುಭಿ. ಪಾದುಕಾ ಕಿರೀಟದಲ್ಲಿ ದಶರಥ, ಮೃಚ್ಛಕಟಿಕದಲ್ಲಿ ಚಾರುದತ್ತ, ಬೆರಳ್‌ಗೆ ಕೊರಳ್‌ದಲ್ಲಿ ಅರ್ಜುನ, ಸ್ಮಶಾನ ಕುರುಕ್ಷೇತ್ರದಲ್ಲಿ ಧರ್ಮರಾಯ, ಜಲಗಾರದಲ್ಲಿ ರೈತ, ರಕ್ತಾಕ್ಷಿಯಲ್ಲಿ ಹೊನ್ನಯ್ಯ. ಅಭಿನಯದಲ್ಲಿ ಮೆರೆದ ವೈವಿಧ್ಯತೆ.

ಚಲನಚಿತ್ರರಂಗದಲ್ಲೂ ಆಸಕ್ತಿಯ ಓಟ. ಹಲವು ಚಿತ್ರಗಳ ನಿರ್ಮಾಣ. ಎರಡು ಚಿತ್ರಗಳಿಗೆ ಪ್ರಥಮ ರಾಜ್ಯ ಪ್ರಶಸ್ತಿ, 63ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಸೇವೆ ಸಲ್ಲಿಕೆ. ಶೈಕ್ಷಣಿಕ ರಂಗದಲ್ಲೂ ಧೀಮಂತ ಸಾಧನೆ. ಪ್ರತಿಷ್ಠಿತ ಜನತಾ ಶಿಕ್ಷಣ ಟ್ರಸ್ಟಿನ ಪ್ರಧಾನ ಕಾರ್ಯದರ್ಶಿ. ಮೈಸೂರು ವಿಶ್ವವಿದ್ಯಾಲಯದ ಸೆನೇಟ ಮತ್ತು ಸಿಂಡಿಕೇಟ್ ಸದಸ್ಯ, ಸದ್ಯ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರು. ಹಾವಿದ್ದಲ್ಲಿ ಜನ ಮೆಚ್ಚಿದ ಕಾರ್ಯವೈಖರಿ. ಸಾಮಾಜಿಕ ಕ್ಷೇತ್ರದಲ್ಲಿ ಅನುನಯದ ಸೇವೆ. ಹಲವಾರು ಸಂಸ್ಥೆಗಳಲ್ಲಿ ಪಾದರಸದ ಚಟುವಟಿಕೆ. ಅಲ್ಲೆಲ್ಲ ಅರಳಿದ ಅಭಿವೃದ್ಧಿ. ಎಲ್ಲದರಲ್ಲೂ ಇವರ ಶ್ರಮದ ಪಾಲು. ಮಂಡ್ಯದ ಶಂಕರಗೌಡ ಪ್ರತಿಷ್ಠಾನದ ಸಲಹೆಗಾರರು. ಯುವ ಸಂಘಟನೆಯಲ್ಲೂ ಎತ್ತಿದ ಕೈ, ಯುವಜನೋತ್ಸವಗಳ ಯಶಸ್ವಿ ನಿರ್ವಹಣೆ.

ರಾಜಕಾರಣದಲ್ಲಿ ಘಟಾನು-ಘಟಿಗಳೊಂದಿಗೆ ಒಡನಾಟ. ವೀರೇಂದ್ರ ಪಾಟೀಲ, ರಾಮಕೃಷ್ಣ ಹೆಗಡೆ, ಜೆ.ಹೆಚ್. ಪಟೇಲ, ಜಿ. ಮಾದೇಗೌಡ, ಎಂ.ಪಿ. ಪ್ರಕಾಶ, ಮುಂತಾದವರ ಸಹಚರ. ಹಾಗೇ ಸಾಹಿತ್ಯ ದಿಗ್ಗಜಗಳೂ ಇವರೊಂದಿಗೆ ಚಂದ್ರಶೇಖರ ಕಂಬಾರ, ದೇಜಗೌ, ಚದುರಂಗ, ಅನಂತಮೂರ್ತಿ, ಬೆಸಗರಹಳ್ಳಿ ರಾಮಣ್ಣ, ಸಿ.ಜಿ.ಕೆ., ಪ್ರಸನ್ನ ಮುಂತಾದವರು. ರಾಜಕಾರಣ ಮತ್ತು ರಂಗಕಾರಣಗಳ ಸಮ್ಮಿಲನದ ವ್ಯಕ್ತಿ ಸಚ್ಚಿದಾನಂದರು.

---



## ಬಿ. ಸಿದ್ದಗಂಗಯ್ಯ (ನಿಸರ್ಗಪ್ರಿಯ) (ಫೆಲೋಶಿಪ್)

ಹವ್ಯಾಸಿ ರಂಗಭೂಮಿಯ ನಾಟಕಕಾರರಲ್ಲಿ 'ನಿಸರ್ಗ ಪ್ರಿಯ' ಪ್ರಸಿದ್ಧರು. ಜಾನಪದೀಯ ಗುಣ ಇವರ ನಾಟಕಗಳದು. ಕಾವ್ಯಾತ್ಮಕ ಭಾಷೆಯಿಂದಾಗಿ ನಾಟಕಗಳ ಸತ್ವ ಇಮ್ಮಡಿ. ಜತೆಗೆ ವೈಚಾರಿಕ ನೋಟ. ಅಂತಲೇ ಇವರ ನಾಟಕಗಳು ರಂಗಭೂಮಿಯಲ್ಲಿ ಯಶಸ್ವಿ. ಹವ್ಯಾಸಿಗರಿಗೆ ಹತ್ತಿರದವರು ಈ ಪ್ರಿಯ.

ಬಿ. ಸಿದ್ದಗಂಗಯ್ಯ ಇವರ ಮೂಲ ಹೆಸರು. ಬೆಂಗಳೂರು ಗ್ರಾಮಾಂತರದ ಕಂಬಾಳು ಹುಟ್ಟಿದೂರು. ನಟನೆ ಮೊದಲ ಆಸಕ್ತಿ, ಶಾಲಾ ದಿನಗಳಲ್ಲೇ ಮುಖಕ್ಕೆ ಬಣ್ಣ, ಪೌರಾಣಿಕ, ಐತಿಹಾಸಿಕ ನಾಟಕಗಳಲ್ಲಿ ಅಭಿನಯ. ಇವರಿಲ್ಲದ ಪ್ರಸಂಗಗಳೇ ಊರಲ್ಲಿಲ್ಲ, ಒಂದಿಲ್ಲೊಂದು ಪಾತ್ರ, 'ಬಲಲಲೇ...' ಅನ್ನುವ ಅಭಿನಯ. ಅಲ್ಲಿ ಕಡುಕನಾದ ಹುಡುಗ ಪ್ರಹಸನ. ಇಲ್ಲಿಂದಲೇ ಮೊದಲ ಸಂಭಾಷಣೆ. ತುಮಕೂರಿನಲ್ಲಿ ಕಾಲೇಜು ಓದು. ಅಲ್ಲಿ ಗುಬ್ಬಿ ಕಂಪನಿಯ ನಾಟಕಗಳು. ಒಳಗೇ ಸುಳಿಗಟ್ಟಿದ ಪ್ರದರ್ಶನದ ಪ್ರಭಾವ. ಅದೇ ಸಂದರ್ಭದಲ್ಲಿ 'ಜಗಜ್ಯೋತಿ ಬಸವಣ್ಣ' ನಾಟಕದಲ್ಲಿ ಗುಬ್ಬಿ ವೀರಣ್ಣನವರೊಂದಿಗೆ ಅಭಿನಯಿಸುವ ಭಾಗ್ಯ, ಅದೊಂದು ಆಕಸ್ಮಿಕ. ಅಲ್ಲಿಂದ ಮನಸ್ಸಿಗಂಟಿದ ರಂಗಜ್ವರ. ತಿಪಟೂರು ಬಳಿಯ ರಂಗಾಪುರದಲ್ಲಿ ಶಿಕ್ಷಕ ವೃತ್ತಿ, ಗುಡ್ಡ ಹತ್ತುವವನಿಗೆ ಮೆಟ್ಟಿಲುಗಳಿರುವುದಿಲ್ಲ, ದಾರಿ ಮಾತ್ರ ಏರುಮುಖ. ಹ್ಯಾಸದಿಂದಾಗಿ ಬೆಂಗಳೂರಿನ ರಂಗಾಸಕ್ತರ ಪರಿಚಯ. ಕಂಬಾರ, ಲಂಕೇಶ, ಕೆ. ಮರುಳಸಿದ್ಧಪ್ಪ ಇನ್ನೂ ಅನೇಕರು. ಎಪ್ಪತ್ತರ ದಶಕ. ಕಂಬಾರರು ಮೊದಲು ನಿರ್ದೇಶಿಸಿದ 'ಸಂಗ್ಯಾ-ಬಾಳ್ಯಾ' ನಾಟಕದಲ್ಲಿ ಬಾಳ್ಯಾನ ಪಾತ್ರ. ದಿಢೀರೆಂದು ಬಂದ ರಂಗಖ್ಯಾತಿ.

ಈ ನಡುವೆ ಎಂ.ಎ. ಪದವಿ. ಅದು ಕಾರಣ ಸಾಹಿತ್ಯದಲ್ಲಿ ಆಸಕ್ತಿ. ಪತ್ರಿಕೆಗಳಿಗೆ ಲೇಖನದ ಹವ್ಯಾಸ. ಬೆಂಗಳೂರು ಕವಿವಲಯದಲ್ಲಿ ಜಾಗ. ಈ ಸಂದರ್ಭದಲ್ಲೇ ಬೆನಕನ ಕೆರೆ ನಾಟಕ ರಚನೆ. ಅದರ ಯಶಸ್ಸು ಬೆನ್ನು ತಟ್ಟಿತು. ವೃತ್ತಿಯಲ್ಲಿ ಬದಲಾವಣೆ. ಉಪನ್ಯಾಸಕನಾಗಿದ್ದುಕೊಂಡೇ ಬಾಚಿದ ರಂಗದ ಒಲವು. ಸ್ವರ್ಗಸ್ಥ, ಹುನಶ್ಶೇಪ, ವ್ಯವಸ್ಥೆ, ಚೋರಪುರಾಣ, ತಿರುಕ ರಾಜ, ಕರಿಭಂಟ, ಯಶೋಧರ ಇತ್ಯಾದಿ ನಾಟಕಗಳ ರಚನೆ. ನೃತ್ಯ ನಾಟಕಗಳಲ್ಲಿ ಪಳಗಿದ ಕೈ, ಬೆಂಗಳೂರಿನ ಅರುಣ ಕಲಾವಿದರಾಗಿ ಅನೇಕ ಪ್ರಸಂಗಗಳು. ಪ್ರಾಂಶುಪಾಲರಾಗಿ, ಶಿಕ್ಷಣ ಇಲಾಖೆಯ ಸಹಾಯಕ ನಿರ್ದೇಶಕರಾಗಿ, ನಾಟಕ ಅಕಾಡೆಮಿಯ ರಿಜಿಸ್ಟ್ರಾರ್ ಆಗಿ ಸೇವೆ. ಸದ್ಯ ಸೌಧದಲ್ಲಿರುವ ಪತ್ರಾಗಾರ ಇಲಾಖೆಯಲ್ಲಿ ಪತ್ರಪಾಲಕರು.

---

## ಅತ್ತಿಗುಪ್ಪೆ ಕೃಷ್ಣಮೂರ್ತಿ



ಬೆಂಗಳೂರು ತಾಲ್ಲೂಕಿನ ಅತ್ತಿಗುಪ್ಪೆ ಶ್ರೀ ಕೃಷ್ಣಮೂರ್ತಿ ಯವರ ಹುಟ್ಟಿದೂರು. ಸ್ವಾತಂತ್ರ್ಯ ಸಿಕ್ಕ ವರ್ಷ ಜನನ. ತಂದೆ ವೆಂಕಟಪ್ಪ ಹಾರ್ಮೋನಿಯಂ ನುಡಿಸುವುದರಲ್ಲಿ ಸಿದ್ಧ ಹಸ್ತ ಕೃಷ್ಣಮೂರ್ತಿಗೂ ಅದೇ ಕನಸು. ಆದರೆ ಆದದ್ದೇ ಬೇರೆ, ಹಾಡಿನಲ್ಲಿ ಆಸಕ್ತಿ, ಅದರಲ್ಲೇ ಜನಪ್ರಿಯತೆ, ಹುಟ್ಟಿದೂರು ಕಲೆಗಳ ಕಣಜ. ಅಲ್ಲೇ ಬೆಳೆದ ಕೃಷ್ಣಮೂರ್ತಿಗೆ ನಾಟಕದ ಸೆಳೆತ. ನಟನಾಗಬೇಕೆಂಬ ವಾಂಛೆ. ಅದರ ಫಲವೇ ಗೆಳೆಯರ ರಂಗ ತಾಲೀಮು. 'ಹನುಮದ್ವಿಲಾಸ' ಯಕ್ಷಗಾನದ ಮೊದಲ ಪ್ರಯೋಗ. ಅದರಲ್ಲಿ ಇವರಿಗೆ ಮೂರು ಸ್ತ್ರೀ ಪಾತ್ರಗಳು. ಹ್ಯಾಟ್ರಿಕ್ ನಲ್ಲೇ ರಂಗ ಪ್ರವೇಶ. ಕೃಷ್ಣಲೀಲೆಯಲ್ಲಿ ರಾಧೆಯ ಪಾತ್ರ, ನೋಡುಗರನ್ನು ಬೆರಗುಗೊಳಿಸಿದ ಅಭಿನಯ. ಮುಂದೆ ಉದರಪೋಷಣೆಯ ಅನಿವಾರ್ಯತೆ. 'ರಂಕೋ' ದಲ್ಲಿ ಒಂದು ಉದ್ಯೋಗ.

ಹಿರಿಯ ಕಲಾವಿದ ಭಟ್ಟಿ ಮಹಾದೇವಪ್ಪನವರ ಸಹಕಾರದ ಬೆಂಬಲ. ದಾನಶೂರ ಕರ್ಣ ನಾಟಕದಲ್ಲಿ ಕೃಷ್ಣನ ಪಾತ್ರಕ್ಕೆ ಭಡ್ತಿ, ಅಲ್ಲಿಂದ ಮುಂದೆ ರಂಗಭೂಮಿಯಲ್ಲಿ ನಡೆದಷ್ಟೂ ಯಶಸ್ಸು ಹರಿಕಥಾ ವಿದ್ವಾನ್ ಆರ್. ಗುರುರಾಜುಲು ನಾಯ್ಡು ಅವರ ಶಿಷ್ಯತ್ವ ಸ್ವೀಕಾರ. ಅವರ ಕಂಪನಿಯ ಎಲ್ಲಾ ನಾಟಕಗಳಲ್ಲಿ ಅಭಿನಯ. ಜತೆಗೆ ಹಾಡಿನಲ್ಲಿ ವಿಶೇಷ ಪರಿಶ್ರಮ. ಸಂಗೀತದ ಶ್ರುತಿ–ಲಯಗಳಲ್ಲಿ ತನ್ಮಯತೆ. ಸಂಗೀತ ಸ್ಪರ್ಧೆಗಳಲ್ಲಿ ಬಹುಮಾನಗಳ ಸರಮಾಲೆ ಸಂಗೀತ–ನಾಟಕಗಳ ಸಮ್ಮಿಲನ. ಜನಪ್ರಿಯ ರಂಗ ನಿರ್ದೇಶಕರಿಂದ ಅವಕಾಶಗಳ ಮಹಾಪೂರ, ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಹಾಗೂ ಪ್ರಯೋಗಾತ್ಮಕ ನಾಟಕಗಳಲ್ಲಿ ಹೊರ ಹೊಮ್ಮಿದ ಪ್ರತಿಭೆ. ಅಭಿನಯ ಮತ್ತು ಗಾಯನಗಳಿಂದ ಪ್ರೇಕ್ಷಕರಿಗೆ ಇನ್ನಿಲ್ಲದ ಮೋಡಿ. ಹೆಸರಾಂತ ಹವ್ಯಾಸಿ ರಂಗ ತಂಡಗಳೊಡನೆ ದೇಶದ ಪ್ರಮುಖ ಭಾಗಗಳಲ್ಲಿ ಅಭಿನಯದ ಅವಕಾಶ.

ಆಕಾಶವಾಣಿ, ದೂರದರ್ಶನಗಳಿಗೂ ಲಗ್ಗೆ, ಜೊತೆಗೆ ಧ್ವನಿಸುರುಳಿ ನಾಟಕಗಳಲ್ಲೂ ಪ್ರತಿಭೆಯ ಪ್ರವಾಹ. ಇವರಿಗೆ ಸಂದ ಪ್ರಶಸ್ತಿಗಳೂ ಅನೇಕ. ರಾಜ್ಯ ಮಟ್ಟದ ಸಂಗೀತ ಶಾಲೆಯ ಗಾಯನ ಸ್ಪರ್ಧೆಯಲ್ಲಿ ಚಿನ್ನದ ಪದಕ, ಕನ್ನಡ ಚಳುವಳಿ ಪಕ್ಷದಿಂದ ಸನ್ಮಾನ. ರಾಜ್ಯೋತ್ಸವದ ಹಲವಾರು ಕಾರ್ಯಕ್ರಮಗಳಲ್ಲಿ ಭಾಗಿ. ಕೃಷ್ಣಮೂರ್ತಿಯವರಿಗೆ ನಿಲ್ಲದ ಉತ್ಸಾಹ.

## ಜಿ.ಎನ್. ಅಂಜಲೀದೇವಿ



ಶ್ರೀಮತಿ ಜಿ.ಎನ್. ಅಂಜಲೀದೇವಿ ಯವರು ಹುಟ್ಟಿದ್ದು ಆಂಧ್ರ ಪ್ರದೇಶದ ಆದೋನಿಯಲ್ಲಿ, ದೊಡ್ಡ ಕುಟುಂಬ. ತಂದೆ ಶ್ರೀ ಶಿವಣ್ಣ ಪ್ರಸಿದ್ಧ ಮೃದಂಗ ಪಟು. ತಾಯಿ ನರಸಮ್ಮ ಅಷ್ಟೇ ಹೆಸರು ಗಳಿಸಿದ ನಾಟ್ಯ ಕಲಾವಿದೆ. ಸೋದರ–ಸೋದರಿಯರೆಲ್ಲ ರಂಗ ನಟನೆಯಲ್ಲಿ ನಿಸ್ಸೀಮರು. ಗದಗ, ಉತ್ತರ ಕರ್ನಾಟಕದ ಕಲೆಯ ತವರೂರು, ಇವರೆಲ್ಲ ಅಲ್ಲಿಗೇ ದೇಶಾಂತರ. ಅಲ್ಲಿಯೇ ನೆಲೆ. ಕಲೆಯೇ ವೃತ್ತಿ. ಮುಖಕ್ಕೆ ಬಣ್ಣ ಹಚ್ಚಿದಾಗ ಅಂಜಲಿದೇವಿ ಐದು ವರ್ಷದ ಬಾಲಕಿ. ಪಡೇಸೂರು ಕಂಪನಿ ಮೊದಲ ಗ್ರೀನ್‌ರೂಂ. ಶ್ರೀ ಸಿದ್ಧಲಿಂಗೇಶ್ವರ ನಾಟ್ಯ ಸಂಘ ಆಗ ರಂಗ ಶಾಲೆ. ತದ ನಂತರ ಸ್ವಂತ ನಾಟಕ ಕಂಪನಿ ಸ್ಥಾಪನೆ. ಶಾರದಾ ನಾಟಕ ಮಂಡಳಿಯ ಹುಟ್ಟು, ಅದರ ಶ್ರೇಯೋಭಿವೃದ್ಧಿಗೆ ಪಡಬಾರದ ಕಷ್ಟ.

ರಂಗ ನಟ ನೀಲಕಂಠಪ್ಪನವರೊಂದಿಗೆ ವಿವಾಹ. ಸರಳ ಜೀವನ. ಇಬ್ಬರೂ ಬದುಕಿದ್ದೇ ರಂಗಭೂಮಿಗಾಗಿ. ಅನೇಕ ಯಶಸ್ವಿ ನಾಟಕಗಳ ಪ್ರಯೋಗ. ರಂಗ ಬದುಕು ಏರು ಮುಖ. ಮಹಾರಾಷ್ಟ್ರ, ಗೋವಾ, ಹೈದರಾಬಾದ ಕರ್ನಾಟಕ ಮುಂತಾದ ಕಡೆ ರಂಗ ಬಿರುಗಾಳಿ. ಪೌರಾಣಿಕ, ಐತಿಹಾಸಿಕ ನಾಟಕಗಳಲ್ಲಿ ಅಂಜಲಿದೇವಿಯವರು ಮೈ ಮರೆಸುವ

ಅಭಿನಯ. ಅಲ್ಲಿ ಮೆರೆದದ್ದು ಯಥೇಚ್ಛ. ಉತ್ತಮ ಮೈಕಟ್ಟು ಹಾಗೂ ಶ್ರೀಮಂತ ಕಂಠ ಪಾತ್ರಗಳಿಗೆ ಪೂರಕ. ಪಡೆದವ್ವ ನಾಟಕದಲ್ಲಿ ಜನರ ಕರುಳು ಮಿಡಿದ ತಾಯಿಯ ಪಾತ್ರ. ಎಲ್ಲಾ ನಾಟಕಗಳಲ್ಲಿ ಪ್ರತಿಭೆಯ ಮಹಾಪೂರ. ರಂಗಕ್ಕೆ ಇನ್ನೇನು ಬೇಕು. ಸಾಟಿಯಿಲ್ಲದ ನಟಿಯಾಗಿ ಹೋದರು ಅಂಜಲಿದೇವಿ. ಸ್ವಂತ ಕಂಪನಿ ಕೈ ಕಚ್ಚಿತು. ಬದುಕಿನ ಗಾಲಿ ಉರುಳಬೇಕು. ಬೇರೆ ಕಂಪನಿಗೆ ಹೋಗುವ ಅನಿವಾರ್ಯತೆ. ನಾಲ್ಕು ವರ್ಷ ಸಂಗಮೇಶ್ವರ ನಾಟ್ಯ ಸಂಘ (ದೊಡ್ಡವಾಡ)ದಲ್ಲಿ ದುಡಿತ. ಅಲ್ಲಿಂದ ಮತ್ತೆ ಓಡಾಟ. ಕಮತಗಿಯ ಹೊಳೆ ಹುಚ್ಚೇಶ್ವರ ನಾಟ್ಯ ಸಂಘ, ಸೂಡಿಯ ಭಾರತಿ ನಾಟ್ಯ ಸಂಘ, ಸುಳ್ಳದ ಶ್ರೀಶೈಲ ನಾಟ್ಯ ಸಂಘ, ಸಂಕನೂರ ಶಿವಲಿಂಗೇಶ್ವರ ನಾಟ್ಯ ಸಂಘ, ಗೋಕಾಕ ಕಂಪನಿ, ಓಬಳೇಶ್ವರ ಕಂಪನಿ ಹೀಗೆ ಲೆಕ್ಕವಿಲ್ಲ. ರಂಗ ಮನೆಯ ಎಲ್ಲ ಕೋಣೆಗಳ ಸಮಗ್ರ ಪರಿಚಯ. ಕ್ರಮೇಣ ವೃತ್ತಿ ಸಂಸ್ಥೆಗಳಿಂದ ಬಿಡುಗಡೆ. ಹಳ್ಳಿಗಳ ಹವ್ಯಾಸಿ ತಂಡಗಳಿಗೆ ಈಗ ಅನಿವಾರ್ಯ ಕಲಾವಿದೆ. ನಟಿಯಾಗಿ, ಗಾಯಕಿಯಾಗಿ, ಪುರುಷ ಪಾತ್ರಧಾರಿಯಾಗಿ ಈಗಲೂ ಬಿಡುವಿಲ್ಲದ ರಂಗ ಸೇವೆ.



## ಆನಂದ ಬಸರೂರು

ಎಪ್ಪತ್ತೆರಡು ವರ್ಷದ ಶ್ರೀ ಆನಂದ ಬಸ್ರೂರು ಅವರ ವಾಸ ಕುಂದಾಪುರ ತಾಲೂಕಿನ ಬಸರೂರು. ಕರಾವಳಿ ಕರ್ನಾಟಕದ ಸರ್ವಶ್ರೇಷ್ಠ ರಂಗ ಕಲಾವಿದ. ಪಾರಂಪರಿಕ ಕಲಾವಿದರ ಬಳಗ ಕಲಾವಂತ ಕುಟುಂಬದಲ್ಲಿ ಜನನ. ಬಡತನದ ಮನೆ, ಸಂಗೀತ–ನೃತ್ಯ–ನಾಟಕ ಕುಲ ಕಸುಬು. ತಾಯಿ ಕೃಷ್ಣೆ ಸಂಗೀತದಲ್ಲಿ ಪರಿಣಿತೆ. ಆನಂದರಿಗೆ ಆಕೆಯೇ ಸಂಗೀತದ ಮೊದಲ ಗುರು. ಹಾಗಾಗಿ ಬಾಲ್ಯದಲ್ಲಿಯೇ ರಂಗ ಪ್ರವೇಶ. ರಾಮಾಯಣದ ಹನುಮಂತನಾಗಿ ಮೊದಲ ಬಾರಿ ಮುಖಕ್ಕೆ ಬಣ್ಣ. ಅದೊಂದು ರೋಮಾಂಚನದ ಕ್ಷಣ. ಎಲ್ಲರಿಂದಲೂ ಭಲೇ... ಎಂಬ ಕರತಾಡನ.

ಆದರೆ ಕೇವಲ ಕಲೆ ಹೊಟ್ಟೆ ತುಂಬಿಸುವುದಿಲ್ಲ ಎಂಬ ಸತ್ಯದ ಅರಿವು ಬಹುಬೇಗನೆ. ತುತ್ತಿಗಾಗಿ ಟೈಲರಿಂಗ್ ಕಲಿಕೆ. ಆಗೇನೋ ಹೊಟ್ಟೆಪಾಡಿನ ಚಿಂತೆಗೆ ವಿರಾಮ. ಕಲೆ ಮತ್ತೆ ಮತ್ತೆ ಕರೆಯಿತು. ನಾಟಕ – ಸಂಗೀತದಲ್ಲಿ ಸಾಟಿಯಿಲ್ಲದ ಸತತಾಭ್ಯಾಸ. ತಬಲಾ ವಾದನದಲ್ಲಂತೂ ಸುತ್ತೆಲ್ಲ ಪ್ರಸಿದ್ಧ. ಸ್ವಾತಂತ್ರ್ಯ ಹೋರಾಟದ ಆ ದಿನಗಳಲ್ಲಿ ಲಾವಣಿ ಹಾಡುಗಾರನಾಗಿ ಸೀಮೆಯ ಸುತ್ತಾಟ. ಹವ್ಯಾಸಿ ಹಾಗೂ ವೃತ್ತಿ ರಂಗಭೂಮಿಯೆರಡರಲ್ಲೂ ಅಪ್ರತಿಮ ಪ್ರತಿಭೆ.

ಹಲವಾರು ಕಲಾ ತಂಡಗಳಲ್ಲಿ ಅನುನಯನದ ಸೇವೆ, ರೂಪ ರಂಗ, ಲಲಿತ ಕಲಾ ಮಂಡಳಿ, ಜಯಶ್ರೀ ನಾಟಕ ಮಂಡಳಿ, ತರುಣ ನಾಟ್ಯ ಕಲಾ ಮಂಡಳಿ ಹೀಗೆ ಕರಾವಳಿಯಲ್ಲಿ ಕಾಲಿಡದ ಸಂಸ್ಥೆಗಳಿಲ್ಲ. ವೃತ್ತಿಪರ ಕಂಪನಿಗಳಲ್ಲಿ ಅನೂಚಾನ ಸೇವೆ. ಕಲ್ಯಾಣಿ, ಕುಂಕುಮ, ಹಳ್ಳೀ ಹುಡುಗಿ, ಕಾಲೇಜು ಗರ್ಲ್, ಮಾತಂಗ ಕನ್ಯೆ ಮುಂತಾದ ನಾಟಕಗಳಲ್ಲಿ ಅಮೋಘ ಅಭಿನಯ. ಪೌರಾಣಿಕ ನಾಟಕಗಳಲ್ಲಂತೂ ಆನಂದರನ್ನು ಸರಿಗಟ್ಟುವವರೇ ಇಲ್ಲ. ವಿಶ್ವಾಮಿತ್ರ, ಶಕುನಿ, ದಿಲೇರ್ ಖಾನ್, ಚಾಣಕ್ಯ, ವಿದ್ಯಾರಣ್ಯ ಪಾತ್ರಗಳಲ್ಲಿ ಆನಂದರ ಪ್ರತಿಭಾ ಛಾಯೆ ದಟ್ಟ.

ಇವರ ತಬಲಾ ದನಿ ಕೇಳಿದ ಅನೇಕ ಸಂಗೀತಗಾರರು ಇವರ ಬೆನ್ನ ಹಿಂದೆ. ಶ್ರೀ ಪಿ. ಕಾಳಿಂಗರಾವ್, ಮಂಜೇಶ್ವರರಾವ್ ಅವರ ಕಚೇರಿಗಳಿಗೆ ಆನಂದರ ತಬಲಾ ವಾದನ. ಚಲನಚಿತ್ರ ರಂಗದಿಂದಲೂ ಇವರಿಗೆ ಕರೆ. ಪುಟ್ಟಣ್ಣರ ಧರ್ಮಸೆರೆ, ಕಾರಂತರ ಮಲೆಯ ಮಕ್ಕಳು, ಆರೂರು ಅವರ ತುಳು ಚಿತ್ರ, ಹಿಂದಿಯ ರಕ್ಷಕ್ ಮುಂತಾದ ಚಿತ್ರಗಳಲ್ಲಿ ಭೇಷ್ ಅನಿಸುವ ಅಭಿನಯ. ಇವರ ಕಲಾ ಪ್ರೌಢಿಮೆಗೆ ದಕ್ಕಿದ ಪ್ರಶಸ್ತಿಗಳೂ ಅನೇಕ. ಉಡುಪಿಯ ಖ್ಯಾತ ರಂಗಭೂಮಿತಂಡ ನೀಡಿದ 'ರಂಗ ರತ್ನಾಕರ' ಎಂಬ ಬಿರುದು ಧಾರಣ. ನಾಡಿನ ಇಪ್ಪತ್ತೈದು ಸಂಸ್ಥೆಗಳಿಂದ ಇವರಿಗೆ ಅಭಿನಂದನಾ ಪತ್ರ. ಅಭಿಮಾನದ ರಂಗ ಗೌರವ.



## ಎಂ.ಸಿ. ಆನಂದ್

ಬೆಂಗಳೂರಿನ ಹವ್ಯಾಸಿ ರಂಗಭೂಮಿ ಕಂಡ ಬಹು ಮುಖಿ ಪ್ರತಿಭೆ ಶ್ರೀ ಎಂ.ಸಿ. ಆನಂದ್, ನಟರಾಗಿ, ವಿನ್ಯಾಸಕಾರರಾಗಿ, ನಿರ್ದೇಶಕರಾಗಿ ಪರಿಣಿತರಾದ ಆನಂದ್ 44 ಕ್ಕೂ ಮಿಕ್ಕಿದ ನಾಟಕಗಳಲ್ಲಿ ವೈವಿಧ್ಯತೆ ಮೆರೆದವರು. ಐವತ್ತಾಲ್ಕರ ಹರೆಯದ ಶ್ರೀಯುತರು ಬೆಂಗಳೂರಿನವರು. ಹವ್ಯಾಸಿ ರಂಗ ತಂಡಗಳಲ್ಲಿ ಸದಾ ಎದ್ದು ಕಾಣುವ ಮುಖಿ. ಭಾರತ ಸರಕಾರದ ರಕ್ಷಣಾ ಇಲಾಖೆಯ ವಿಭಾಗವೊಂದರಲ್ಲಿ ಅಧಿಕಾರಿ. ವೃತ್ತಿ ನಿಷ್ಠೆಯೊಂದಿಗೆ ಪ್ರವೃತ್ತಿಯಲ್ಲಿ ಒಲವು. ಇಲ್ಲೂ ಅಷ್ಟೇ ಶಿಸ್ತು, ಮೂರು ದಶಕಗಳ ರಂಗ ಸಂಪರ್ಕ. ಈ ಅವಧಿಯ ಸಾಧನೆ ಅಪಾರ. ಕನ್ನಡ ರಂಗಭೂಮಿಯ ಪ್ರಯೋಗದ ಮೈಲುಗಲ್ಲುಗಳೆಂದು ಕರೆದ ನಾಟಕಗಳಲ್ಲೆಲ್ಲ ಇವರ ಭಾಗಿತ್ವ. ನಟರಾಗಿ ತುಘಲಕ್, ಈಡಿಪಸ್, ಸಂಕ್ರಾಂತಿ ಮಾರೀಚನ ಬಂಧುಗಳು, ಹುತ್ತವ ಬಡಿದರೆ, ತಾಯಿ, ಕತ್ತಲೆ ದಾರಿ ದೂರ, ಕುರಿ, ಗೆಲಿಲಿಯೊ, ಸಂಸ್ಕಾರ ದಂಗೆಯ ಮುಂಚಿನ ದಿನಗಳು, ಕ್ರಾಂತಿ ಬಂತು ಕ್ರಾಂತಿ... ಹೀಗೆ ನಾಟಕಗಳ ಪಟ್ಟಿ ಉದ್ದ.

ಪ್ರೊ. ಬಿ.ಸಿ., ರಾಮಮೂರ್ತಿ, ಪ್ರಸನ್ನ, ಟಿ.ಎನ್. ನರಸಿಂಹನ್, ಆರ್. ನಾಗೇಶ್, ಬಿ.ವಿ. ಕಾರಂತ, ಎಂ.ಎಸ್. ಸತ್ಯು, ಎಸ್. ಮಾಲತಿ, ಅಬ್ಬೂರು ಜಯತೀರ್ಥ ಮುಂತಾದ ನಿರ್ದೇಶಕರ ಸೂತ್ರಕ್ಕೆ ನಟ.

ಕೇವಲ ಅಭಿನಯವೊಂದೇ ಇವರ ಅಭಿರುಚಿಯಲ್ಲ, ಕಲಾ ವಿನ್ಯಾಸ, ನಿರ್ದೇಶನ, ಪ್ರಚಾರ ವಿನ್ಯಾಸ, ಭಿತ್ತಿ ಪತ್ರ ರಚನೆಯಲ್ಲೂ ವಿಶೇಷ ಆಸಕ್ತಿ, ಚಿತ್ರ ಕಲೆಯಲ್ಲಿ ತರಬೇತಿ ಗಳಿಕೆ. ಹಲವಾರು ನಾಟಕಗಳಿಗೆ ಇವರದೇ ರಂಗ ವಿನ್ಯಾಸ, ಅಶ್ವಮೇಧ, ಆಮನಿ, ಲಕ್ಷಾಪತಿ ರಾಜನ ಕಥೆ, ಚಿತ್ರಪಟ ರಾಮಾಯಣ, ಸಂಧ್ಯಾ – ಛಾಯಾ, ವಾಸಂತಿ, ತದ್ರೂಪಿ ಮುಂತಾದವು. ಇಲ್ಲೆಲ್ಲ ರಂಗ ವಿನ್ಯಾಸದ ಅಪ್ಪಟ ಪ್ರತಿಭಾ ಛಾಯೆ. ಪ್ರಚಾರ ವಿನ್ಯಾಸದಲ್ಲೂ ಹೆಸರು ವಾಸಿ. ನೋಡುಗರ ಕಣ್ಣಿಗೆ ರಂಗ ಕಚಗುಳಿ. ರಂಗಶಿಬಿರಗಳಲ್ಲಿ ಭಾಗಿಯಾಗುವ ಮೂಲಕ ಅನುಭವದ ವಿಸ್ತಾರ, ಬಾದಲ್ ಸರ್ಕಾರರಲ್ಲದೆ ಇನ್ನೂ ಹಲವರ ಶಿಬಿರಗಳಲ್ಲಿ ಅಭ್ಯರ್ಥಿ.

ಚಲನಚಿತ್ರಗಳಲ್ಲೂ ನಟನಾವಕಾಶ. ದೂರದರ್ಶನಕ್ಕೆ ಇವರದೇ ವಿಶೇಷ ಕೊಡುಗೆ. ಅಭಿನಯದೊಂದಿಗೆ ಹಲವು ಧಾರಾವಾಹಿಗಳಿಗೆ ನಿರ್ದೇಶನ ಮತ್ತು ನಿರ್ಮಾಪನ. ಒಂದೆರಡು ಕಿರು ಚಿತ್ರಗಳಿಗೆ ಬಹುಮಾನ ಗಳಿಕೆ. ಹವ್ಯಾಸಿ ರಂಗಭೂಮಿಯ ಪ್ರಬುದ್ಧ ಕಲಾವಿದ ಆನಂದ್.

---



## ಬಷೀರ್

ಕಳೆದ ನಲವತ್ತು ವರ್ಷಗಳಿಂದ ರಂಗಭೂಮಿಯ ತೆಕ್ಕೆಯಲ್ಲಿರುವ *ಶ್ರೀ* ಬಷೀರ್ ಪ್ರಸಿದ್ಧ ನಾಟಕಕಾರರು. ಬೆಂಗಳೂರಿನವರು. ಸಾಮಾಜಿಕ, ಚಾರಿತ್ರಿಕ, ಜಾನಪದ, ಪೌರಾಣಿಕ ನಾಟಕಗಳನ್ನು ರಚಿಸಿ ಪ್ರೇಕ್ಷಕರ ಒಲುಮೆ ಗಳಿಸಿದವರು. ಕನ್ನಡ ನಾಡು–ನುಡಿಯ ಕುರಿತು ರಚಿಸಿ ಪ್ರದರ್ಶಿಸಿದ ರೂಪಕಗಳು ಅನೇಕ. ತನ್ಮೂಲಕ ಹೊಸ ಪ್ರತಿಭೆಗಳನ್ನು ಬೆಳಕಿಗೆ ತಂದ ಕೀರ್ತಿ ಇವರಿಗೆ. ಮನೆಮಾತು ಉರ್ದು. ಬಾರಿಸಿದ್ದೆಲ್ಲ ಕನ್ನಡ ಡಿಂಡಿಮ. ನಾಟಕ ರಚನೆಯೊಂದಿಗೆ ದಿಗ್ದರ್ಶನ ಮತ್ತು ಅಭಿನಯದಲ್ಲೂ ಮಾಗಿದ ಪ್ರತಿಭೆ. ಕನ್ನಡ ರಂಗಭೂಮಿಗೆ ನಲವತ್ತಕ್ಕೂ ಹೆಚ್ಚು ನಾಟಕಗಳ ಕೊಡುಗೆ. ಎಲ್ಲ ನಾಟಕಗಳ ನೂರಾರು ಪ್ರಯೋಗಗಳು. ಎಲ್ಲವೂ ಜನಪ್ರಿಯ. ಪ್ರಕಟವಾದದ್ದು ಮಾತ್ರ ವಿರಳ. ರಕ್ತಾಂಜಲಿ, ಟಿಪ್ಪು ಸುಲ್ತಾನ, ಕಿತ್ತೂರು ಚೆನ್ನಮ್ಮ ಈಗ ಪುಸ್ತಕ ರೂಪದಲ್ಲಿ ಎಲ್ಲಕ್ಕೂ ಹಣದ ಅಡಚಣೆ.

ಬಷೀರ್ ಅವರಿಗೆ ಇತಿಹಾಸದ ಗಟ್ಟಿ ವಸ್ತುಗಳತ್ತಲೇ ಹೆಚ್ಚು ಒಲವು. ಆ ಕಾರಣ ಅನೇಕ ಕೃತಿಗಳಲ್ಲಿ ಗೆಲುವಿನ ಒಳನೋಟ. ಸುಲಲಿತ ರಂಗಭಾಷೆ. ಸಂಭಾಷಣೆಗಳು ಸರಳ, ಸುಂದರ, ಪ್ರೇಕ್ಷಕನಿಗೆ ಮನಮುಟ್ಟುವ ಶೈಲಿ. ಪಾತ್ರ ಸೃಷ್ಟಿಯಲ್ಲಿ ಸರಳತೆ. ಪರಿಣಾಮದಲ್ಲಿ ಸೃಜನಶೀಲತೆ ಬರವಣಿಗೆಯಲ್ಲಿ ಕಲಾತ್ಮಕತೆಯ ಕೈ ಚಳಕ. ನೀಡುವ ವಸ್ತುಗಳಲ್ಲಿ ವೈವಿಧ್ಯತೆಯ ಸಮೃದ್ಧಿ ಪಳಗಿದ ನಾಟಕಕಾರರೆಂದೇ ಪ್ರಸಿದ್ಧಿ.

ಸುಬ್ಬಯ್ಯ ನಾಯ್ಡು ಅವರ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿಗೆ ಸಂದ ಸೇವೆ. ಇವರದೇ ನಾಟಕ ನಂದಾದೀಪ ಅಲ್ಲಿ ಪ್ರದರ್ಶನ. ಅರಸು ಜಯ ಚಾಮರಾಜೇಂದ್ರ ಒಡೆಯರ, ಗುಬ್ಬಿ ವೀರಣ್ಣ, ಅ.ನ.ಕೃ, ಜಿ. ಕಾರ್ಯಪ್ಪ, ಮುಂತಾದವರ ಸಮ್ಮುಖದಲ್ಲಿ ನಾಟಕಾಭಿನಯ. ಟಿಪ್ಪು, ಶಿವಶಕ್ತಿ, ರಕ್ತಾಂಜಲಿ ನಾಟಕಗಳ ಪ್ರದರ್ಶನ ದೆಹಲಿ ಮತ್ತು ಭೂಪಾಲಿನಲ್ಲಿ ದೂರದರ್ಶನದಲ್ಲೂ ಇವರ ನಾಟಕ ಮತ್ತು ರೂಪಕಗಳ ಪ್ರಸಾರ. ಕನ್ನಡ ಕಲಿಗಳು, ಕರ್ನಾಟಕ ಪರಂಪರೆ, ರಣರಂಗ ದರ್ಶನಗಳಲ್ಲಿ ದೇಶಭಕ್ತಿಯ ಪ್ರಚಾರ. ಆಕಾಶವಾಣಿಯಲ್ಲೂ ಪ್ರಮುಖ ನಾಟಕಗಳ ಬಿತ್ತರ.

ಕೆಂಪೇಗೌಡ ಪ್ರಶಸ್ತಿ, ಡಾ. ರಾಜಕುಮಾರ್ ಪ್ರಶಸ್ತಿಗಳಲ್ಲದೆ ದೊರೆತ ಮನ್ನಣೆಗಳು ಹಲವಾರು ಜನಾಂಗ ಸೌಹಾರ್ದ, ಭಾಷಾ ಬಾಂಧವ್ಯದ ಒಂದು ಸಾತ್ವಿಕ ಉದಾಹರಣೆ ಈ ಬಷೀರ್.

---



## ಚೆನ್ನಬಸಯ್ಯ ಗುಬ್ಬಿ

ವೃತ್ತಿ ರಂಗಭೂಮಿ ಕಲಾವಿದ ಹಾಗೂ ನಾಟಕ ನಿರ್ದೇಶಕರಾದ ಶ್ರೀ ಚೆನ್ನಬಸಯ್ಯ ಗುಬ್ಬಿಯವರು ತುಮಕೂರಿನವರು. ಎಪ್ಪತ್ತಾರರ ಈ ಮಾಗಿದ ಕಲಾವಿದರಿಗೆ ಇನ್ನೂ ಕುಗ್ಗದ ಉತ್ಸಾಹ. ಇಪ್ಪತ್ತೊರರ ಏರು ಹರೆಯದಲ್ಲಿ ರಂಗ ಪ್ರವೇಶ. ಚಿತ್ತರಗಿಯ ಶ್ರೀ ಕುಮಾರ ವಿಜಯ ನಾಟ್ಯ ಸಂಘ ಇವರ ಮೊದಲ ಅಖಾಡ. ಅಲ್ಲಿ ಗಂಗಾಧರ ಶಾಸ್ತ್ರಿಗಳ ಬಳಿ ಒಂದೂವರೆ ದಶಕದ ಅನುಭವ. ಸಮಗ್ರ ರಂಗಭೂಮಿಯ ಅರಿವು. ಸಹನಟರು, ಪ್ರೇಕ್ಷಕರಿಂದ ಒಲವಿನ ಗಳಿಕೆ. ಕಲಾ ಜೀವನದ ದಟ್ಟ ಅನುಭವ. ಶ್ರೀ ಗಜಾನನ ನಾಟಕ ಮಂಡಳಿ (ಜಮಖಂಡಿ) ಯಲ್ಲಿ ಗಳಿಸಿದ ಅನುಭವದ ಸದ್ಬಳಕೆ, ಕಲಾವಿದನ ಜೀವನ ಹರಿವ ನೀರು. ಒಂದೇ ಕಡೆ ನಿಲ್ಲದ ಜೀವ. ಹಲವು ಕಡೆ ಸಂಚರಿಸಿ ರಂಗಾನುಭವದ ಶೇಖರಣೆ. ನಂತರ ತಮ್ಮದೇ ಮಾಲೀಕತ್ವದಲ್ಲಿ ಶ್ರೀ ಅಮರಲಿಂಗೇಶ್ವರ ನಾಟ್ಯ ಸಂಘ ಸ್ಥಾಪನೆ. ಇದೀಗ ಈ ಕಲಾ ತಂಡಕ್ಕೆ ಹದಿನೆಂಟರ ಹರೆಯ. ನಾಟಕ ಪ್ರದರ್ಶನದೊಂದಿಗೆ ಕಲಾವಿದರನ್ನು ಗೌರವಿಸುವ ಸಾರ್ಥಕ ಕಾರ್ಯ. ಅದಕ್ಕಾಗಿ ನಿರಂತರ ಚಟುವಟಿಕೆ. ಈ ನಡುವೆ ಇವರಿಗೂ ಅನೇಕ ಕಡೆಯಿಂದ ಮಾನ–ಸನ್ಮಾನಗಳು. ಅಭಿಮಾನದ ಮಹಾಪೂರ.

ಕಳೆದ 50 ವರ್ಷಗಳಿಂದ ಸತತವಾಗಿ ಕರ್ನಾಟಕದ ಉದ್ದಗಲಕ್ಕೂ ಸಂಚಾರ. ಹೋದಲ್ಲೆಲ್ಲ ನಾಟ್ಯ ಸರಸ್ವತಿಯ ಪ್ರಚಾರ. ಇದುವರೆಗೆ ಅಭಿನಯಿಸಿದ ನಾಟಕಗಳ ಸಂಖ್ಯೆ 135 ಕ್ಕೂ ಮಿಗಿಲು. ಇವುಗಳ ಪ್ರಯೋಗಗಳು ಸಾವಿರಾರು. ವೃತ್ತಿ ನಾಟಕ ಲೇಖಕರೊಡನೆ ಗೌರವಯುತ ಸಂಪರ್ಕ. ಹೆಚ್.ಎನ್. ಹೂಗಾರ, ಪಿ.ಬಿ. ಧುತ್ತರಗಿ, ಮಾರುತೇಶ ಮಾಂಡ್ರೆ, ಆರ್.ಡಿ. ಕಾಮತ್ ಮುಂತಾದ ಗಣ್ಯ ನಾಟಕಕಾರರೊಡನೆ ನಿಕಟ ಪರಿಚಯ. ಹವ್ಯಾಸಿ ಹಾಗೂ ವೃತ್ತಿ ಕಲಾವಿದರ ಒಗ್ಗೂಡುವಿಕೆಗೆ ವಿಶೇಷ ಆಸಕ್ತಿ. ಇಬ್ಬರನ್ನೂ ಸೇರಿಸಿ ನಾಟಕ ನಿರ್ದೇಶನ. ತುಮಕೂರಿನಲ್ಲಿ ಈ ಬಗ್ಗೆ ನಾಟಕೋತ್ಸವಗಳ ಆಯೋಜನೆ. ಅಲ್ಲಿ ಕಲಾವಿದರು, ಸಂಗೀತಗಾರರು, ಸಾಹಿತಿಗಳ ಸಮ್ಮಿಲನ. ಚೆನ್ನಬಸಯ್ಯನವರ ಸ್ತುತ್ಯ ಕಾರ್ಯ ಐತಿಹಾಸಿಕ ನಾಟಕಗಳ ಬಗ್ಗೆ ಮೊದಲಿಂದಲೂ ಆಸಕ್ತಿ. ಹೊಸ ಕಲಾವಿದರನ್ನು ಪ್ರೋತ್ಸಾಹಿಸಿ ಆ ಕ್ಷೇತ್ರವನ್ನು ಶ್ರೀಮಂತಗೊಳಿಸುವ ಮಹದಾಸೆ ಇವರದು.

---

## ಜಯದೇವ ಹೆಚ್.ಕೆ.



ನಲವತ್ತೆಂಟು ವಯಸ್ಸಿನ ಜಯದೇವ ರದು ಕಲೆಯ ಕುಟುಂಬ. ತಂದೆ ಎಂ.ಸಿ. ವೀರ್ ರ ಪ್ರತಿಭೆ ನೃತ್ಯ, ಸಂಗೀತ, ಶಿಲ್ಪ ಕಲೆಗಳಲ್ಲಿ ಅಸಾಧಾರಣ ಅವರಿಗೆ ನಾಟಕ ಸಿನಿಮಾ ರಂಗ ಪ್ರತಿಭೆಗಳ ಅನೂಚಾನ ಸಂಪರ್ಕ. ಅದರೊಂದಿಗೆ ಜಯದೇವರ ಬಾಲ್ಯವೆಲ್ಲ ಕಳೆದದ್ದು ಅಂಥದೇ ವಾತಾವರಣದಲ್ಲಿ. ತಪ್ಪದೇ ನೋಡುತ್ತಿದ್ದ ಗುಬ್ಬಿ ಕಂಪನಿಯ ನಾಟಕಗಳ ಪ್ರಭಾವ ಮುದ್ರೆ ಅಚ್ಚಳ. ಆದರ ಪ್ರಭಾವವೇ ಮುಂದಿನ ದಾರಿಗೆ ದೀಪ. ರಂಗ ಸಜ್ಜಿಕೆ, ಪೇಯಿಂಟಿಂಗ್‌ನಲ್ಲಿ ಅರಳಿದ ಆಸಕ್ತಿ, ಅದನ್ನು ಗುರುತಿಸಿದ ತಂದೆಯಿಂದ ಮೈಸೂರಿನ ಜಯಚಾಮರಾಜೇಂದ್ರ ತಾಂತ್ರಿಕ ಶಿಕ್ಷಣಾಲಯಕ್ಕೆ ದಾರಿ. ಕಾರ್ವಿಂಗ್, ಪೇಯಿಂಟಿಂಗ್‌ನಲ್ಲಿ ಅಲ್ಲಿ ನಿಯಮಬದ್ಧ ಪ್ರಾವಿಣ್ಯತೆ. ತದನಂತರ ಗುಬ್ಬಿ ಕಂಪನಿ ಮತ್ತು ಹಿರಣ್ಣಯ್ಯ ಕಂಪನಿಗಳಿಗೆ ಟ್ರಿಕ್ ಸೀನುಗಳು ಮತ್ತು ಪೇಪರ್ ವಾಲ್ಡ್‌ಸೆಟ್ಟಗಳ ನಿರ್ಮಾಣ.

ಜತೆಗೆ ಉತ್ತರ ಕರ್ನಾಟಕದ ಹಲವು ಕಂಪನಿಗಳಿಗೂ ಅಂಥದೇ ಸೇವೆ.

ಈ ಮಧ್ಯೆ ತಂದೆಯ ಆಕಸ್ಮಿಕ ಅಗಲಿಕೆಯಿಂದ ತತ್ತರಿಕೆ. ಈ ಕಾರಣದಿಂದ ರಂಗಭೂಮಿಗೆ ವಿದಾಯ ಹೇಳುವ ಅನಿವಾರ್ಯತೆ. ನಡುವೆ ಬರೋಡ ಬ್ಯಾಂಕಿನಲ್ಲಿ ಉದ್ಯೋಗಿ. ಆದರೆ ಒಳಗಿನ ಕಲಾವಿದ ಸುಮ್ಮನಿರಬೇಕಲ್ಲ. ನೌಕರಿಗೆ ರಾಜೀನಾಮೆ. ಪೂರ್ಣ ಪ್ರಮಾಣದಲ್ಲಿ ರಂಗಭೂಮಿಗೆ ಜಿಗಿತ. ತನ್ನಲ್ಲಿರುವ ಪ್ರಾವಿಣ್ಯತೆಯ ಸಂಪೂರ್ಣ ಧಾರೆ. ರಂಗ ಸಜ್ಜಿಕೆಯಲ್ಲಿ ಸಿದ್ಧ ಹಸ್ತ, ಈ ಸಂದರ್ಭದಲ್ಲೇ ಹಂಸಲೇಖರೊಂದಿಗೆ ಅನನ್ಯ ಗೆಳೆತನ. ಅವರ ಬೆರಳು ನಾಟಕಗಳಿಗೆ ಮ್ಯಾಂಡಲಿನ್ ನುಡಿಸುತ್ತಿದ್ದರೆ ಜಯದೇವರ ಕೈ ಸೀನರಿಯತ್ತ.

1970 ರಲ್ಲಿ ವೃತ್ತಿ ರಂಗಭೂಮಿಯ ಇಳಿದ ಪ್ರಖರತೆ. ಅದರೊಂದಿಗೆ ಹವ್ಯಾಸಿ ರಂಗದ ಏರಿದ ಪ್ರಖರತೆ ಸಮುದಾಯದ ಸಮಸ್ತರೊಡನೆ ಜಯದೇವರ ಒಡನಾಟ. ಅಲ್ಲಿಯ ನಾಟಕಗಳಿಗೆ ರಂಗಸಜ್ಜಿಕೆ, ಮುಖವಾಡ ಇತ್ಯಾದಿಗಳ ನಿರ್ಮಾಣ. ಕನ್ನಡದ ಬಹುತೇಕ ನಿರ್ದೇಶಕರ ನಾಟಕಗಳಿಗೆ ಇವರದೇ ಕಲಾ ನಿರ್ದೇಶನ ತದನಂತರ ಹಂಸಲೇಖರ ಜತೆಗೂಡಿ ರಾಜ್ಯದಾದ್ಯಂತ ರಂಗಯಾತ್ರೆ, ರಂಗಭೂಮಿಯ ಎಲ್ಲಾ ಭಾಗಗಳಲ್ಲಿ ಆಡಿದ ಕೈ. ಇದೀಗ ತಮ್ಮದೇ ಸ್ವಂತ 'ಕಲಾ ವೀರ ಆರ್ಟ್ಸ್' ಸ್ಥಾಪನೆ. ನಾಟಕ – ಸಿನಿಮಾಗಳಿಗೆ ಸ್ವತಂತ್ರ ಕಲಾ ನಿರ್ದೇಶನ. ಜಯದೇವರದು ನಿಲ್ಲದ ಜೀವನೋತ್ಸಾಹ.

---

## ಕಿರಣ ಭಟ್



ಬಾಲ್ಯದಿಂದಲೂ ನಾಟಕಾಸಕ್ತಿಯನ್ನು ಬೆಳೆಸಿಕೊಂಡ ಕಿರಣ ಭಟ್ ಮೂಲತಃ ಹೊನ್ನಾವರದವರು. 1989ರಲ್ಲಿ ಹೊನ್ನಾವರದಲ್ಲಿ ನಡೆದ ರಂಗ ಶಿಬಿರದ ನಾಟಕ 'ಅಚಲಾಯತನ' ಇವರಿಗೆ ಹೊಸ ಆಯಾಮವನ್ನೇ ನೀಡಿತು. ಮಂಗಳೂರಿನ ಸಮುದಾಯ ತಂಡದಲ್ಲಿದ್ದು ಅನಿತ ಯೋಜನೆಯಡಿಯಲ್ಲಿ ದುಡಿದು, ಹಲವಾರು ನಾಟಕಗಳಲ್ಲಿ ಅಭಿನಯದೊಂದಿಗೆ ಹಾಡುಗಾರಿಕೆಯಲ್ಲೂ ಪಳಗಿದರು. ಮಂಗಳೂರಿನ 'ಅಯನ' ತಂಡದ ಬಸ್ತಿ, ತಾಯಿ, ಕರಿಯನ ಕೋಲ ಮುಂತಾದ ನಾಟಕಗಳಿಗೆ ಸಂಗೀತ ಒದಗಿಸಿದರು. ಕುರಿ ನಾಟಕದ ಅವರ ಅಭಿನಯಕ್ಕೆ ಜನ ಮೆಚ್ಚುಗೆ. ನೌಕರಿ ನಿಮಿತ್ತ ಶಿರಸಿಗೆ ಬಂದ ಮೇಲೂ ರಂಗ ನಂಟು ಬಿಡಲಿಲ್ಲ. ಶಿರಸಿಯಲ್ಲಿ 'ರಂಗಸಂಗ' ತಂಡ ಹುಟ್ಟು ಹಾಕುವದರೊಂದಿಗೆ ಇಲ್ಲಿಯ ರಂಗ ಶೂನ್ಯವನ್ನು ತುಂಬುವಲ್ಲಿ ಮಹತ್ವದ ಪಾತ್ರ ವಹಿಸಿದರು. ಗ್ರಾಮಾಂತರ ಭಾಗದ ಕಲಾವಿದರನ್ನು ಕೂಡಿಸಿಕೊಂಡು ಅನೇಕ ನಾಟಕಗಳನ್ನು ಆಡಿದರು. ಗಾಂಧಿ, ಕತ್ತೆ ಮತ್ತು ಧರ್ಮ, ಕುರಿತೇರು, ಕಪ್ಪು-ಕೆಂಪು, ಸೋಮಾರಿ ಕ್ಲಬ್ಬು, ಸುಲ್ತಾನ್

ಟಿಪ್ಪು, ಮುಂತಾದ ನಾಟಕಗಳ ನಿರ್ದೇಶನ, ಜತೆಗೆ ಶಿರಸಿ ಮತ್ತು ಕುಮಟಾ ಕಾಲೇಜುಗಳಲ್ಲಿ ರಂಗ ಶಿಬಿರಗಳ ನಿರ್ದೇಶನ. ಇವುಗಳಲ್ಲದೆ ರಂಗಭೂಮಿಗಾಗಿ ಹಲವು ಯೋಜನೆಗಳನ್ನು ಸಿದ್ಧಪಡಿಸುವಲ್ಲಿ ಪರಿಶ್ರಮ. ಕಥಾ ನಾಟಕ ಯೋಜನೆಯಡಿಯಲ್ಲಿ ಶ್ರೇಷ್ಠ ಕತೆಗಳನ್ನು ನಾಟಕಕ್ಕೆ ಅಳವಡಿಸಿ ವಾರಕ್ಕೊಮ್ಮೆ ಪ್ರದರ್ಶನ. ಗ್ರಾಮೀಣ ಯುವಕ–ಯುವತಿಯರಿಗಾಗಿ ಪ್ರತಿ ರವಿವಾರದಂತೆ ಇಪ್ಪತ್ತು ವಾರಗಳ ಕಾಲ ರಂಗ ಶಿಬಿರದ ಆಯೋಜನೆ. ಮಕ್ಕಳ ರಂಗ ಭೂಮಿಗಾಗಿ ಅನನ್ಯ ರೀತಿಯ ದುಡಿಮೆ. ಗ್ರಾಮಾಂತರ ಶಾಲಾ ಮಕ್ಕಳಿಗಾಗಿ ಪಾಠ ನಾಟಕ ಯೋಜನೆಯ, ರಂಗ ವಿಕಾಸ ಯೋಜನೆಗಳ ಮೂಲಕ ರಂಗಾಸಕ್ತಿಯ ಬಿತ್ತನೆ.

ನೂರಕ್ಕೂ ಮಿಕ್ಕಿ ರಂಗ ಲೇಖನಗಳನ್ನು ಬರೆಯುವ ಜತೆಗೆ ಅನೇಕ ಕಡೆ ಈ ಕುರಿತು ಪ್ರಬಂಧ ಮಂಡನೆ. ಅನೇಕ ಸಾಂಸ್ಕೃತಿಕ ಸಂಘಟನೆಗಳಲ್ಲಿ ತೊಡಗಿಸಿಕೊಂಡಿರುವ ಕಿರಣ ಭಟ್ ಸದ್ಯ ಉತ್ತರ ಕನ್ನಡ ಜಿಲ್ಲಾ ರಂಗ ಒಕ್ಕೂಟದ ಕಾರ್ಯದರ್ಶಿ. ಜತೆಗೆ ಪತ್ರಿಕೆಗಳಿಗೆ ಸಾಂಸ್ಕೃತಿಕ ವರದಿಗಾರ.

---



## ಎಲ್. ಕೃಷ್ಣಪ್ಪ

ಬೆಂಗಳೂರಿನ ಹವ್ಯಾಸಿ ರಂಗ ಸಂಸ್ಥೆಗಳಲ್ಲಿ ಸುಪರಿಚಿತ ಹೆಸರು ಶ್ರೀ ಎಲ್. ಕೃಷ್ಣಪ್ಪ. ನೇಪಥ್ಯ ನಿರ್ದೇಶಕನೆಂದೇ ಖ್ಯಾತಿ. ಅದರಲ್ಲೇ ಬಹುಮುಖಿ ಸಾಧನೆ. ಆರಂಭದಲ್ಲಿ ಬಿ.ವಿ. ಕಾರಂತರ ಬಹುತೇಕ ನಾಟಕಗಳಲ್ಲಿ ಕೆಲಸ. ರಂಗಸಜ್ಜಿಕೆ, ದೀಪಬೆಳಕು, ವಸ್ತ್ರಾಲಂಕಾರ, ಇತರ ರಂಗ ಸಂಘಟನೆಯಲ್ಲಿ ಎತ್ತಿದ ಕೈ. ಎಪ್ಪತ್ತರ ದಶಕದ ರಂಗ ನಿರ್ವಾಹಕ. ಎಲ್ಲರೂ ಸ್ಪಾಟ್ ಎದುರಿಗೇ ನಿಲ್ಲಲು ಹವಣಿಸಿದರೆ ಇವರಿಗೆ ಸ್ಪಾಟ್ ಹಿಡಿಯುವ ಆಸಕ್ತಿ. ಅದಕ್ಕೆ ಎಲ್ಲಿಲ್ಲದ ರಂಗ ಶ್ರದ್ಧೆ. ಶಾಲಾ ದಿನಗಳಲ್ಲಿ ಒಳಗೇ ಒಸರುತ್ತಿದ್ದ ರಂಗ ಪ್ರವಾಹ. ಕಾರಂತರ ನಿರ್ದೇಶನದ ಅನೇಕ ನಾಟಕಗಳಲ್ಲಿ ಅಭಿನಯ. ನೀ ಕೊಡೆ–ನಾ ಬಿಡೆ, ಸ್ವರ್ಗಕ್ಕೆ ಮೂರೇ ಬಾಗಿಲು, ಕಾರ್ನಾಡರ ಹಯವದನ, ಕಂಬಾರರ ಜೋಕುಮಾರ ಸ್ವಾಮಿ ಮುಂತಾದ ನಾಟಕಗಳ ಮೂಲಕ ರಂಗ ಬಿರುಗಾಳಿ, ಎಪ್ಪತ್ತರ ದಶಕದಲ್ಲಿ ಈ ಗಾಳಿ ಸಾಂಸ್ಕೃತಿಕ ವಲಯದಲ್ಲಿ ಎಬ್ಬಿಸಿದ್ದ ಕೋಲಾಹಲ ಅದ್ಭುತ. ಎಲ್ಲದರಲ್ಲೂ ಕೃಷ್ಣಪ್ಪನವರ ಶ್ರಮದ ಪಾಲು.

ಮುಂದೆ ನಿರ್ದೇಶನದತ್ತ ಒಲವು. ಎಂ.ಪಿ. ಪ್ರಕಾಶರ 'ಸೂರ್ಯ ಶಿಕಾರಿ' ಇವರ ಮೊದಲ ಬೇಟೆ. ಭಾರೀ ಯಶಸ್ಸು ಕೃಷ್ಣಪ್ಪನವರ ಶಿಕಾರಿ ಎಂದೇ ಖ್ಯಾತಿ. ಅದು ಗಳಿಸಿದ ಜನಪ್ರಿಯತೆ ಅಷ್ಟಿಷ್ಟಲ್ಲ. ಪತ್ರಿಕೆಗಳಿಂದಲೂ ಮುಕ್ತ ಪ್ರಶಂಸೆ. ರಾಜ್ಯ–ರಾಷ್ಟ್ರದ ಕೇಂದ್ರಗಳಲ್ಲಿ ಅದರ ಅದ್ದೂರಿ ಪ್ರಯೋಗಗಳು. ಆ ಮೂಲಕ ಇವರಿಗೆ ದೊಡ್ಡ ಹೆಸರು. ಅಲ್ಲಿಂದ ನಿರ್ದೇಶನದಲ್ಲಿ ಗಟ್ಟಿಯಾದ ಆಸಕ್ತಿ ತನ್ನಿಮಿತ್ತ ಹಲವು ರಂಗ ಶಿಬಿರಗಳ ಆಯೋಜನೆ. ಆ ಕಾರಣಕ್ಕೆ ಎಲ್ಲಾ ಕಡೆ ಓಡಾಟ. ಚಿತ್ರದುರ್ಗ, ದೊಡ್ಡಬಳ್ಳಾಪುರ, ಹೊಸಕೋಟೆಗಳಲ್ಲಿ ಇಂಥ ಶಿಬಿರಗಳ ಸಂಘಟನೆ. ಅದರಿಂದ ಬಹು ಮಟ್ಟಿನ ರಂಗ ಪ್ರಯೋಜನ. ಬೆಂಗಳೂರು ಮತ್ತು ಹೊರಗೆ ನಾಟಕೋತ್ಸವ, ರಂಗ ಗೋಷ್ಠಿಗಳ ವ್ಯವಸ್ಥಾಪನೆ. ರಂಗ ಹಬ್ಬಗಳ ಸೃಷ್ಟಿ.

ಪತ್ರಿಕಾ ಹಾಗೂ ಪ್ರಕಾಶನಗಳಲ್ಲೂ ಚಿಗುರಿದ ಆಸಕ್ತಿ. ರಂಗ ಸಂಘಟನೆಯ ಜತೆಗೆ ಪ್ರಕಟಣೆಯ ಭಾರ. ಸೂರ್ಯ ಶಿಕಾರಿ, ತಬರನ ಕಥೆ, ಆಧುನಿಕ ನಾಟಕಗಳು, ತಿರುಕ ರಾಜ ಇವು ಪುಸ್ತಕಲೋಕಕ್ಕೆ ಕೊಟ್ಟ ನಾಟಕಗಳು. ರಂಗಮಾಸಿಕ 'ಮುಕ್ತ' ಪ್ರಕಟಣೆ. ಹಲವಾರು ಕಾರಣದಿಂದ ಅದಕ್ಕೆ ಮುಕ್ತಿ, ಇದೀಗ 'ನಾಟಕ' ವಿನೂತನ ರಂಗಮಾಸಿಕ ಪ್ರಕಟಣೆ. ರಾಜ್ಯದ ರಂಗ ಸುದ್ದಿಗಳಿಗೊಂದು ಅಕ್ಷಯ ಪಾತ್ರೆ. ಇಲ್ಲೂ ಇವರ ಪ್ರಾಮಾಣಿಕ ರಂಗ ಕಾಳಜಿ. 53 ವರ್ಷದ ಕೃಷ್ಣಪ್ಪ ಕಟ್ಟಿಕೊಂಡ ರಂಗ ಕನಸುಗಳು ಹಲವಾರು. ಅವನ್ನು ಸಾಕಾರಗೊಳಿಸಲು ಇವರದು ನಿರಂತರ ಹೋರಾಟ.

---



## ಹೆಚ್.ಆರ್. ಘಟಂ ಕೃಷ್ಣ

ಚಾಮರಾಜ ತಾಲೂಕಿನ ಹರದನಹಳ್ಳಿಯ ಶ್ರೀ ಕೃಷ್ಣರಿಗೆ ಈಗ 56 ವರ್ಷ. ಮಧ್ಯಮ ಓಟಗಾರನಾಗಿ ಕ್ರೀಡಾಭಿಮಾನಿಗಳ ಮೆಚ್ಚುಗೆ ಗಳಿಸಿದ್ದ ಕೃಷ್ಣ ರಂಗಭೂಮಿಯಲ್ಲೂ ರೇಸಿನ ಕುದುರೆಯಂತೆ ಓಡಿದರು. ನಲವತ್ತು ವರ್ಷಗಳ ರಂಗ ಜೀವನದಲ್ಲಿ ಅವರೆಂದೂ ತಿರುಗಿ ನೋಡಿಲ್ಲ. ಚಲನಚಿತ್ರ ನಟ ಎಂ.ಪಿ. ಶಂಕರ್ ಅವರ ಭರಣಿ ಸಂಸ್ಥೆಯ ನಾಟಕಗಳ ಮೂಲಕ ರಂಗ ಪ್ರವೇಶ. ಕಂಪನಿ ನಾಟಕಗಳಿಗೆ ತಕ್ಕ ಸಂಗೀತದ ವಾದ್ಯ ಮೇಳ. ತಬಲ, ಘಟಂಗಳಲ್ಲಿ ಸಾಟಿಯಿಲ್ಲದ ಪರಿಣಿತಿ. ಪರಿಣಾಮ ವೃತ್ತಿ ಕಂಪನಿಯವರಿಗೆ ಇವರ ಅನಿವಾರ್ಯತೆ. ಹಾಗಾಗಿ ಅನೇಕ ನಾಟಕ ಕಂಪನಿಗಳಲ್ಲಿ ದುಡಿತ. ನಂಜನಗೂಡು ನಾಗಪ್ಪ ಕಂಪನಿ, ದಿ. ಮೈಸೂರು ಲೋಕೇಶರ ಕಂಪನಿಯಲ್ಲಿ ನಟನಾಗಿ, ವಾದ್ಯ ಕಲಾವಿದನಾಗಿ ಪ್ರೌಢತೆಯ ಮೆರವಣಿಗೆ. ಅನೇಕ ಹವ್ಯಾಸಿ ಸಂಸ್ಥೆಗಳಲ್ಲಿ ಆಹ್ವಾನಿತ ಕಲಾವಿದನಾಗಿ ಭಾಗಿ. ತನ್ಮೂಲಕ ಸಾವಿರಾರು ನಾಟಕ ಪ್ರಯೋಗಗಳಲ್ಲಿ ತೊಡಗುವಿಕೆ. ಅಭಿನಯದಲ್ಲಿ ಜನ ಮೆಚ್ಚುಗೆ. ಇವರನ್ನು ಆಹ್ವಾನಿಸಿದ ಹಳ್ಳಿಯ ಹವ್ಯಾಸಿ ಕಲಾತಂಡಗಳೇ ಇಲ್ಲ.

ಮುಂದೆ ಸಿನಿಮಾ ರಂಗಕ್ಕೂ ಪಾದಾರ್ಪಣೆ. ಡಾ. ರಾಜ್ ಅವರ ನೂರನೇ ಚಿತ್ರ ಭಾಗ್ಯದ ಬಾಗಿಲುನಲ್ಲಿ ಹುಚ್ಚನ ಪಾತ್ರ, ಆ ಚಿತ್ರವೇ ಮೊದಲು. ಆ ಮೇಲೆ ಪುಟ್ಟಣ್ಣ ಕಣಗಾಲ್ ಅವರ ಕಪ್ಪು–ಬಿಳುಪು, ಶರಪಂಜರಗಳಲ್ಲಿ ಅವಕಾಶ. ನಂತರ ನಾರಿ ಮುನಿದರೆ ಮಾರಿ, ಜಯ–ವಿಜಯ, ಋತುಗಾನ, ಬೆಕ್ಕಿನ ಕಣ್ಣು ಹೀಗೆ ಚಿತ್ರಗಳ ಸಾಲು. ಹಾಸ್ಯ ನಟನಾಗಿ ಮೂವತ್ತು ಚಿತ್ರಗಳಲ್ಲಿ ಜನ ಮೆಚ್ಚಿದ ಅಭಿನಯ. ಇನ್ನೂ ತೆರೆ ಕಾಣಬೇಕಾದ ಚಿತ್ರಗಳು ಹಲವು.

ಇವರಿಗೆ ಸಂದ ಗೌರವಗಳಿಗೂ ಕೊರೆಯಿಲ್ಲ. 'ಹಾಸ್ಯ ರಾಜ' ಎಂಬುದು ಅಭಿಮಾನಿಗಳು ನೀಡಿದ ಬಿರುದು. ಬಡತನ ಬೆನ್ನ ಹಿಂದೆ ಇದ್ದರೂ ಕಲೆಯೇ ಇವರ ಜೀವಾಳ. ಅದೇ ಬದುಕು.

---



## ಬಿ.ಆರ್. ಮಲ್ಲಿಕಾರ್ಜುನಯ್ಯ

ಅರಸೀಕೆರೆ ತಾಲೂಕು ಬಾಣಾವಾರ ಶ್ರೀ ಬಿ.ಆರ್. ಮಲ್ಲಿಕಾರ್ಜುನಯ್ಯನವರ ಹುಟ್ಟಿದೂರು. ಶಾಲಾ ದಿನಗಳಲ್ಲೇ ರಂಗ ಹವ್ಯಾಸ. ಮೆಕ್ಯಾನಿಕಲ್ ಡಿಪ್ಲೋಮಾಧರ. ಕೋಲಾರದ ಚಿನ್ನದ ಗಣಿಯ ಬಿ.ಇ.ಎ.ಎಲ್. ಕಾರ್ಖಾನೆಯಲ್ಲಿ ಉದ್ಯೋಗ. ಇಲ್ಲಿಯ ಸಾಂಸ್ಕೃತಿಕ ಸಂಸ್ಥೆಗಳಾದ ಕನ್ನಡ ಸಂಘ, ಕನ್ನಡ ಮಿತ್ರರುಗಳಲ್ಲಿ ಸಕ್ರಿಯ ಪಾತ್ರ. ಈ ಸಂಸ್ಥೆಯ ನಾಟಕಗಳಲ್ಲಿ ಸತತ ಭಾಗಿ. ಹಲವು ಪುರಸ್ಕಾರಗಳು. ಕನ್ನಡ ಸಂಘದ ಕಾರ್ಯದರ್ಶಿ. 1976ರಲ್ಲಿ 'ರಂಗ ವರ್ಷ' ನಾಟಕ ಸಂಘ ಸ್ಥಾಪನೆ. ಅನೇಕ ಸ್ಪರ್ಧೆಗಳಲ್ಲಿ ಭಾಗಿ. ರಂಗವರ್ಷದ ಮಹಿಳಾ ವಿಭಾಗಕ್ಕಾಗಿ ನಾಟಕಗಳ ನಿರ್ದೇಶನ. ನಾಟಕ ಅಕಾಡೆಮಿಯ ಶಿಬಿರಗಳಲ್ಲಿ ಭಾಗಿ. ಬಹುಮುಖಿ ರಂಗಾನುಭವ. ರಂಗವರ್ಷದ ದಶಮಾನೋತ್ಸವದ ಅದ್ದೂರಿ ಕಾರ್ಯಕ್ರಮ ಆಯೋಜನೆ. ನಾಟಕೋತ್ಸವ, ರಂಗಗೋಷ್ಠಿಗಳ ಹಬ್ಬ, ಗಡಿನಾಡು ಭಾಗದಲ್ಲಿ ವಿಶಿಷ್ಟ ಕಾರ್ಯಕ್ರಮ. ನಿಸರ್ಗಪ್ರಿಯರ ಚೋರ ಪುರಾಣ, ಶ್ರೀರಂಗರ ಉತ್ತಮ ಪ್ರಭುತ್ವ ಲೊಳಲೊಟ್ಟೆ, ಶಿವಪ್ರಕಾಶರ ಮಹಾಚೈತ್ರ, ಕಂಬಾರರ ಸಿರಿಸಂಪಿಗೆ, ಸ್ಟ್ರಿಂಡ್ ಬರ್ಗ್‌ರ ಫಾದರ್, ಭೀಷ್ಮ ಸಹಾನಿಯವರ ಮಾಧವಿ ಇವಲ್ಲದೆ ಇನ್ನೂ ಅನೇಕ. ಗಡಿನಾಡ ಭಾಗದಲ್ಲಿ ಕನ್ನಡದ ಸರ್ವಾಂಗೀಣ ಪ್ರಗತಿಗೆ ಯತ್ನ. ನಾಟಕದ ಮೂಲಕ ಬೆಳೆದದ್ದು ಕನ್ನಡದ ಕಂಪು. ರಂಗ ಸ್ಪರ್ಧೆಗಳಲ್ಲಿ ಗೆದ್ದು ಈ 'ಭಾಗದ ಸಂಸ್ಕೃತಿಗೆ ತಂದ ಗೌರವ. ಆ ಭಾಗದ ಕನ್ನಡಪರ ಹೋರಾಟಗಳಲ್ಲಿ ಸಕ್ರಿಯ ಪಾತ್ರ.

ನಾಟಕ ಅಕಾಡೆಮಿಯ ಸದಸ್ಯರಾಗಿ ಗ್ರಾಮೀಣ ರಂಗ ಕಲೆಗೆ ವಿಶೇಷ ಒತ್ತು. ದೇವದಾಸಿಗಳಿಗೆ ರಂಗ ತರಬೇತಿ. ಜಾನಪದ, ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಎಲ್ಲ ಪ್ರಕಾರಗಳ ನಾಟಕಗಳಿಗೆ ಸಹಾಯ ಹಸ್ತ ನೀಡಿಕೆ. ಕೆಲವು

ಚಲನ ಚಿತ್ರಗಳಲ್ಲೂ ಅಭಿನಯ. ಬೆಂಗಳೂರು, ಉಡುಪಿ, ಕೋಲಾರ ದೆಹಲಿ, ಮಂಗಳೂರು, ಮೂಡುಬಿದರೆ ಇನ್ನೂ ಅನೇಕ ಕಡೆ ಪ್ರದರ್ಶನಗಳು. ಇವರ ಅಭಿನಯಕ್ಕೆ ಎಲ್ಲರ ಪ್ರಶಂಸೆ, ಸಂಸ, ತುಘಲಕ, ರಾಯಣ್ಣ, ಒಥೆಲೋ ಇನ್ನೂ ಅನೇಕ ಪ್ರಮುಖ ಪಾತ್ರಗಳು. ಬಂಗಾರದ ಗಣಿಯ ಈ ರಂಗ ಕರ್ಮಿ ರಂಗಭೂಮಿಯ ಚಿನ್ನ.

## ಹೆಚ್. ಮರಿಯಣ್ಣ



ಅರವತ್ತಾರು ವರ್ಷದ ಹಿರಿಯ ಕಲಾವಿದರಾದ ಹೆಚ್. ಮರಿಯಣ್ಣ ಹೊಸಪೇಟೆಯವರು. ಎಂಟು ವರ್ಷದವರಿದ್ದಾಗಲೇ ವೃತ್ತಿ ನಾಟಕ ಕಂಪನಿಯ ಪ್ರವೇಶ. ಆಗ ಕಂಪನಿ ನಾಟಕದಲ್ಲಿ ಪಿಟೀಲು ನುಡಿಸುತ್ತಿದ್ದ ಅಣ್ಣ ಬಸವಣ್ಣೆಪ್ಪ ಹುಟ್ಟು ಕುರುಡ. ಅವರಿಗೆ ಊರುಗೋಲಾಗಿ ಮರಿಯಣ್ಣ ಕಂಪನಿ ಸೇರಬೇಕಾದ ಅನಿವಾರ್ಯತೆ. ಹುಲಿಮನೆ ಸೀತಾರಾಮ ಶಾಸ್ತ್ರಿಗಳ ನಾಟಕ ಕಂಪನಿ ಮೊದಲ ಗರಡಿ. ಪಾದುಕಾ ಪಟ್ಟಾಭಿಷೇಕದಲ್ಲಿ ಭರತನ ಪಾತ್ರ, ಚಿತ್ರಾಂಗದಾ ನಾಟಕದಲ್ಲಿ ಬಬ್ರುವಾಹನ. ಸೀತಾರಾಮ ಶಾಸ್ತ್ರಿಗಳೇ ಗುರುಗಳು. ಆಗಿನದು ಸಂಗೀತಕ್ಕೆ ಪ್ರಾಧಾನ್ಯವಿದ್ದ ಕಾಲ. ಇವರ ಸಂಗೀತ ಅಭ್ಯಾಸಕ್ಕೆ ಅಣ್ಣನೇ ಗುರು. ನಟನೆಯ ಜತೆ ಹಾರ್ಮೋನಿಯಂ ನುಡಿಸುವುದರಲ್ಲೂ ಮರಿಯಣ್ಣ ಪಳಗಿದರು. ಅದರ ಜತೆ ನರಸಯ್ಯ ದಾದಾ ಅವರಲ್ಲಿ ತಬಲಾ ಶಿಕ್ಷಣ. ವೃತ್ತಿ ನಾಟಕ ಕಂಪನಿಗೆ ಅವಶ್ಯಕವಾದ ಎಲ್ಲ ಮಟ್ಟುಗಳಲ್ಲೂ ಪರಿಣಿತ. ಏಳು ವರ್ಷಗಳ ಕಾಲ ಶಾಸ್ತ್ರಿಗಳ ಕಂಪನಿಯಲ್ಲಿ ಅನುಭವ. ಮುಂದೆ 1948ರಲ್ಲಿ ಗೋಕಾಕ ಕಂಪನಿಯಲ್ಲಿ ಸೇರ್ಪಡೆ. ಅಲ್ಲಿಯ ಮಾಲೀಕ ಬಸವರಾಜರಿಂದ ಸ್ತ್ರೀ ಪಾತ್ರದ ಬಗ್ಗೆ ವಿಶೇಷ ತರಬೇತು. ಆ ಕಂಪನಿಯಲ್ಲಿ ನಾಲ್ಕು ವರ್ಷಗಳ ಸೇವೆ.

1952ರಲ್ಲಿ ಏಣಗಿ ಬಾಳಪ್ಪನವರ ಕಂಪನಿ ಕಲಾವಿದನಾಗಿ ಹೆಜ್ಜೆ. ಅಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಅವಕಾಶ. ಐದು ವರ್ಷಗಳ ಸೇವೆ ಆ ಕಂಪನಿಗೆ. ನಂತರ ಚಿತ್ತರಗಿ ಕಂಪನಿಯಲ್ಲಿ ರಂಗ ಸೇವೆ. ಮಾಲಕ ಗಂಗಾಧರ ಶಾಸ್ತ್ರಿಗಳ ಸಹವಾಸ. ಅಲ್ಲಿ ನಾಟಕದ ಹಲವು ಮಗ್ಗಲುಗಳ ಜತೆ ಒಡನಾಟ.

1960ರಲ್ಲಿ ಕಂಪನಿ ಬದಲು. ಚೆನ್ನಬಸವರಾಜ ಕವಲಿಯವರ ಕಂಪನಿಗೆ ಪ್ರವೇಶ. ಅಲ್ಲಿ ಹತ್ತು ವರ್ಷಗಳ ಕಾಲ ನಾಯಕ ನಟ. ಹೂಗಾರ ಕವಿಗಳ ಕೊಂಡು ತಂದ ಗಂಡ ನಾಟಕದಲ್ಲಿ ಅಚ್ಚಳಿಯದ ಪಾತ್ರ, 1971ರಿಂದ ಮುಂದಿನ ಹತ್ತು ವರ್ಷ ಕಮತಗಿಯ ಹುಚ್ಚೇಶ್ವರ ನಾಟ್ಯ ಸಂಘದಲ್ಲಿ ವಿವಿಧ ಪಾತ್ರಗಳ ಮೂಲಕ ಜನ ಮೆಚ್ಚುಗೆ. ಆ ಮೇಲಿನದು ಚಿತ್ರದುರ್ಗದ ಕುಮಾರಸ್ವಾಮಿಯವರ ಕಂಪನಿ. ಅಲ್ಲಿ ಏಳು ವರ್ಷದ ಕಲಾ ಸೇವೆ. ಎಲ್ಲೆಲ್ಲೂ ಪಾತ್ರ ವೈವಿಧ್ಯತೆ. ಹೋದ ಕಡೆಯಲ್ಲೆಲ್ಲ ಕೀರ್ತಿಯ ಹೊನಲು. ಅರವತ್ತು ವರ್ಷಗಳ ತುಂಬು ರಂಗಜೀವನ. ದೇಹಕ್ಕೆ ಮುಪ್ಪು, ನೇರ ಸಂಪರ್ಕ ಮನಸ್ಸಿಗಿಲ್ಲ.

## ಮಾಲತಿಶ್ರೀ ಮೈಸೂರು



ಮೈಸೂರಿನಲ್ಲಿ ಜನಿಸಿದ ಮಾಲತಿ ಬದುಕಿನಲ್ಲಿ ಕಹಿಯನ್ನೇ ಉಂಡವರು. ಹೆತ್ತವರು ಅಗಲಿದಾಗ ಇವರು 8 ವರ್ಷದ ಮಗು. ಹಿರಿಯಕ್ಕನ ಮನೆಯೇ ಗತಿ. ಆಗಲೇ ನಾಟಕಗಳನ್ನು ನೋಡುವ ಹಂಬಲ. ಆ ಒತ್ತಾಸೆಯೇ ರಂಗಭೂಮಿಯ ಒಲವಿಗೆ ಕಾರಣ. 9ನೇ ವರ್ಷಕ್ಕೆ ಬೆಂಗಳೂರಿನ ಶ್ರೀಕಂಠಮೂರ್ತಿ ನಾಟಕ ಮಂಡಳಿಯಲ್ಲಿ ಬಾಲ ನಟಿಯಾಗಿ ಸೇರ್ಪಡೆ. ಅದೇ ರಂಗ ಜೀವನದ ಮೊದಲ ಅವಕಾಶ. ಮುಂದಿನ ಹತ್ತು ವರ್ಷ ಆ ಕಂಪನಿಯೇ ಇವರಿಗೆ ರಂಗಶಾಲೆ. ನಂತರ ಆರ್. ನಾಗರತ್ನಮ್ಮನವರ ಸೀ

ನಾಟಕ ಮಂಡಲಿ ಸೇರ್ಪಡೆ. ಕೃಷ್ಣ ಗಾರುಡಿ, ಕೃಷ್ಣಲೀಲೆ ನಾಟಕಗಳಲ್ಲಿ ಅಭಿನಯದ ಪ್ರಬುದ್ಧತೆ. ಅಲ್ಲಿ ಎರಡು ವರ್ಷದ ಅನುಭವದ ಗ್ರಹಿಕೆ. ಆಮೇಲೆ ಗೋಕಾಕ ಶಾರದಾ ನಾಟಕ ಮಂಡಳಿ ಪ್ರವೇಶ. ಅದಾಗಲೇ ಅಭಿನಯದಲ್ಲಿ ಪರಿಣಿತ. ಚಿಕ್ಕ ಸೊಸೆ, ಸಂಪತ್ತಿಗೆ ಸವಾಲ್, ಗಂಡನ ಮಾನ, ಸುಖದ ಸುಪ್ಪತ್ತಿಗೆ ನಾಟಕಗಳಲ್ಲಿ ನಾಯಕಿ – ಖಳನಾಯಕಿಯಂಥ ಪ್ರಮುಖ ಪಾತ್ರಗಳ ನಿರ್ವಹಣೆ. ಪ್ರತಿ ನಾಟಕವೂ ಪ್ರತಿಭೆಗೆ ಒರೆಗಲ್ಲು. ಅಲ್ಲಿ ಅನುಭವದ ವಿಸ್ತಾರ, ಸಮೃದ್ಧಿ. ಎರಡು ವರ್ಷದ ನಂತರ ಮಾ. ಹಿರಣ್ಣಯ್ಯನವರ ಕಂಪನಿಯಲ್ಲಿ ಕಲಾಸೇವೆ. ವೈವಿಧ್ಯಮಯ ಪಾತ್ರಗಳ ನಿರ್ವಹಣೆ. ದೇವದಾಸಿ, ಲಂಚಾವತಾರ, ನಡುಬೀದಿ ನಾರಾಯಣ ಮುಂತಾದ ನಾಟಕಗಳು. ಆ ಕಂಪನಿಯ ಋಣ ಕೆಲ ದಿನ ಮಾತ್ರ.

ಅಲ್ಲಿಂದ ಕಮತಗಿಯ ಹುಚ್ಚೇಶ್ವರ ನಾಟ್ಯ ಸಂಘದಲ್ಲಿ ರಂಗ ಪ್ರವೇಶ. ವೈವಿಧ್ಯಮಯ ಪಾತ್ರಗಳ ಸವಾಲು. ಬಸ್ ಕಂಡಕ್ಟರ್, ಇಲ್ಲಿಗೆ ಬಂತೋ ಸಂಗಯ್ಯ, ಕೊಂಡು ತಂದ ಗಂಡ, ಚಂದ್ರಿ ಚೆಲ್ಲಾಟ ಮುಂತಾದ ಪ್ರಮುಖ ನಾಟಕಗಳು. ನಾಯಕಿ–ಖಳನಾಯಕಿ ಹಾಸ್ಯ ಮುಂತಾದ ಪ್ರಮುಖ ಪಾತ್ರಗಳು. ನೋಡಿದ ಜನರಿಂದ ಶಹಭಾಸ್ ಗಿರಿ, ಸಹನಟರು, ಮಾಲೀಕರಿಂದ ಮೆಚ್ಚುಗೆ. ಇಷ್ಟರಲ್ಲಿ ಕರ್ನಾಟಕದ ತುಂಬ ಓಡಾಟ ಎಲ್ಲೆಲ್ಲೂ ಜನ ಮನ್ನಣೆ. ಈ ನಡುವೆ ಭರತನಾಟ್ಯ ಕಲಿಕೆ. ಅಗತ್ಯಕ್ಕೆ ತಕ್ಕಷ್ಟು ಪ್ರದರ್ಶನ ಬಿ.ಆರ್. ಅರಿಷಿಣಗೋಡಿಯವರಿಂದ ಸೂಕ್ತ ಮಾರ್ಗದರ್ಶನ. ಕಂಪನಿ ಹೋದಲೆಲ್ಲ ಇವರದೇ ಅಭಿನಯದ ಅಬ್ಬರ. ಜನರಿಂದ ಸನ್ಮಾನ–ಆಶೀರ್ವಾದ.

ಇದೀಗ ಮಾಲತಿಯವರು ಹುಚ್ಚೇಶ್ವರ ಕಂಪನಿಯ ಮಾಲೀಕರು. ಈ ಕಂಪನಿಯ ನಾಲ್ಕು ಶಾಖೆಗಳು ರಂಗ ಸೇವೆಯಲ್ಲಿ. ಎಲ್ಲಕ್ಕೂ ಇವರದೇ ಮಾರ್ಗದರ್ಶನ ಬಿಡುವಿಲ್ಲದ ರಂಗ ಜೀವನ.

---



## ಮುಖ್ಯಮಂತ್ರಿ ಚಂದ್ರು

ಗೌರಿಬಿದನೂರಿನ ಚಂದ್ರಶೇಖರ್ ಕನ್ನಡದಲ್ಲಿ 'ಖಾಯಂ' ಮುಖ್ಯ ಮಂತ್ರಿ ಎಂದೇ ಪ್ರಸಿದ್ಧರು. 1953 ರಲ್ಲಿ ಜನಿಸಿದ ಇವರು ಕಲಾವಿದರಾಗಿ ಸಾಧಿಸಿದ್ದು ಅಪಾರ. ವಿಜ್ಞಾನದಲ್ಲಿ ಪದವಿ. ನಾಟಕದಲ್ಲಿ ಡಿಪ್ಲೋಮ. ಕೆಲ ದಿನ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಉದ್ಯೋಗ. ರಾಜಕಾರಣಿಗಳು ರಂಗಿಣಿಗಳಾದದ್ದು ನಮ್ಮಲ್ಲಿ ಅಪರೂಪ. ಆದರೆ ರಂಗಿಣಿಗಳು ರಾಜಕಾರಣಿಗಳಾದದ್ದು ವಿಪರೀತ. ಈ ಬಹಳದಲ್ಲಿ ವಿಶಿಷ್ಟರು ಚಂದ್ರು. ಹಲವು ಸಮಿತಿಗಳ ಸದಸ್ಯರಾಗಿ ಸಾರ್ವಜನಿಕ ಸೇವೆ. ರಾಜ ಸೇವೆಗಿಂತ ರಂಗ ಸೇವೆಯೇ ಜನಕ್ಕೆ ತಲುಪಿದ್ದು ಹೆಚ್ಚು. ನಾಡವರು ಗುರುತಿಸಿದ್ದು ನಟನೆಂಬ ಮುಖ್ಯಮಂತ್ರಿ.

1970ರ ಲಾಗಾಯ್ತು ಇವರಿಗೆ ರಂಗಭೂಮಿ ಮತ್ತೊಂದು ನೆಲೆ. ಒಂದಿಲ್ಲೊಂದು ನಾಟಕ. ಒಂದಿಲ್ಲೊಂದು ಪಾತ್ರ. ಬಹುಜನರಿಂದ ಮನ್ನಣೆ. ಅದರಿಂದ ಹೆಚ್ಚಿದ ರಂಗ ಸೆಳೆತ. ಕನ್ನಡದ ಅತಿರಥ ರಂಗ ನಿರ್ದೇಶಕರೆಲ್ಲಾ ಇವರ ಮೋಡಿಗೆ ಬಲಿ. ಚಂದ್ರು ಇದ್ದಾರೆಂದರೆ ಮುಗಿಯಿತು. ನಾಟಕದ ಪತಾಕೆ ಮೇಲಕ್ಕೆ. ಬಿ.ವಿ. ಕಾರಂತ, ಪ್ರೇಮಾ ಕಾರಂತ, ಪ್ರೊ. ಬಿ. ಚಂದ್ರಶೇಖರ್, ನರಸಿಂಹನ್, ಸಿ.ಜಿ.ಕೆ. ನಾಗೇಶ್, ಪ್ರಸನ್ನ, ಟಿ.ಎನ್. ಸೀತಾರಾಮ್ ಇನ್ನೂ ಮುಂತಾದವರೆಲ್ಲರಿಗೂ ಬೇಕಾದ ನಟ. ರಂಗ ನಿರ್ದೇಶಕನಾಗಿಯೂ ರಂಗವಲಯದಲ್ಲಿ ಹೆಸರು. ಹದಿನೈದಕ್ಕೂ ಮಿಕ್ಕಿ ನಾಟಕಗಳ ಸೂತ್ರಧಾರ. ಮೂಕಿಟಾಕಿ. ಅಚಲಾಯತನ, ಮೋಡಗಳು. ಎಲ್ಲಾರು ಮಾಡುವುದು, ಗರ್ಭಗುಡಿ ಕೆಲವು ಮುಖ್ಯ ನಾಟಕಗಳು. ನೂರಕ್ಕೂ ಮಿಕ್ಕಿ ನಾಟಕಗಳಲ್ಲಿ ಅಭಿನಯ. ಅವುಗಳ ಸುಮಾರು 2000 ಪ್ರಯೋಗಗಳು ಮೈಮ್‌ಗಳಲ್ಲೂ ವಿಶೇಷ ತರಬೇತಿ. ಜೋಗೇಶದತ್ತ, ಆದಂ ಅಬ್ರಹಾಮ್, ರಾಮಮೂರ್ತಿ ಇವರ ಮಾರ್ಗದರ್ಶನ ದೇಶ–ವಿದೇಶಗಳಲ್ಲಿ ಜನಪ್ರಿಯ ಮೈಮ್‌ಪ್ರದರ್ಶನ. ಲಂಡನ್, ಪ್ಯಾರಿಸ್, ರೋಮ್, ಸ್ವಿಟ್ಜರ್‌ಲ್ಯಾಂಡ್, ಬೆಲ್ಜಿಯಂ ಮುಂತಾದ ಕಡೆಗಳಲ್ಲಿ ರಂಗ ಪ್ರವಾಸ. ಅಚಲಾಯತನ ನಾಟಕದ ನಿರ್ದೇಶನಕ್ಕೆ ರಾಜ್ಯ ಪ್ರಶಸ್ತಿ.

ಮುಖ್ಯಮಂತ್ರಿ, ಕಾಲಿಗುಲ, ತಾಯಿ, ಘಾಸೀರಾಮ್ ಕೊತ್ವಾಲ, ನಮ್ಮೊಳಗೊಬ್ಬ ನಾಜೂಕಯ್ಯ, ಆಸ್ಫೋಟ ಇನ್ನೂ ಅನೇಕ ಮುಖ್ಯ ನಾಟಕಗಳು. ಎಲ್ಲ ಪ್ರಮುಖ ಪಾತ್ರಗಳು ಎರಡು ಗಂಟೆಯ ಮೈಮ್ ಪ್ರದರ್ಶನಗಳ ಸಂಖ್ಯೆ 500. ಚಲನಚಿತ್ರ ರಂಗಕ್ಕೂ ಲಗ್ಗೆ. ಮಾಧ್ಯಮದಲ್ಲಿ ಇವರದೇ ಪ್ರೇಕ್ಷಕ ವರ್ಗ ಸೃಷ್ಟಿ. 350 ಕ್ಕೂ ಹೆಚ್ಚಿನ ಚಲನಚಿತ್ರಗಳಲ್ಲಿ ಅಭಿನಯ.

---



## ಡಿ. ಮುನಿಯಪ್ಪ (ಮೋಹನ್ ಕುಮಾರ್)

ಕಳೆದ ನಲವತ್ತು ವರ್ಷಗಳಿಂದ ರಂಗಭೂಮಿಯಲ್ಲಿರುವ ಶ್ರೀ ಡಿ. ಮುನಿಯಪ್ಪ (ಮೋಹನ್‌ಕುಮಾರ್) ನವರ ಆಸಕ್ತಿಗೆ ಹಲವಾರು ಮುಖಗಳು, ನಾಟಕಕಾರ, ನಟ, ರಂಗ ನಿರ್ದೇಶಕ, ವಸ್ತ್ರ ವಿನ್ಯಾಸಕಾರ, ಸಂಘಟಕ... ಹೀಗೆ ಎಲ್ಲದರಲ್ಲೂ ದುಡಿತ. ಎಲ್ಲರಂತೆ ಇವರಿಗೂ ಶಾಲಾ ದಿನಗಳಲ್ಲೇ ಬಣ್ಣದ ಸೆಳೆತ.

ಅಭಿನಯಿಸಿದ ನಾಟಕ ಸ್ಪರ್ಧೆಗಳಲ್ಲಿ ಬಹುಮಾನಗಳ ಗಳಿಕೆ ಬಿ.ಎ. ಪದವಿ ಪಡೆದ ನಂತರ ನೌಕರಿಯ ಹುಡುಕಾಟ. ಸರಕಾರೀ ಮುದ್ರಣಾಲಯದಲ್ಲಿ ನೌಕರಿ. ಎಲ್ಲಿದ್ದರೇನು ಸದಾಕಾಲ ರಂಗಭೂಮಿಯದೇ ಚಿಂತೆ. ಹಲವು ಹವ್ಯಾಸಿ ಕಲಾ ಸಂಸ್ಥೆಗಳಿಗೆ ಇವರದೇ ನಾಟಕ ನಿರ್ದೇಶನ. ಜತೆಗೆ ರಂಗಾಸಕ್ತರಿಗೆ ಮಾರ್ಗದರ್ಶನ. ಈ ನಡುವೆ 'ನಟರಾಜ ಆರ್ಟ್ಸ ಥೇಟರ್ಸ್'ನ ಸ್ಥಾಪನೆ ಅಲ್ಲಿಯ ಎಲ್ಲ ನಾಟಕಗಳ ನಿರ್ಮಾಣ ಮತ್ತು ನಿರ್ದೇಶನದ ಸಂಪೂರ್ಣ ಹೊಣೆ. ಪೌರಾಣಿಕ ನಾಟಕಗಳ ಅದ್ದೂರಿ ತಯಾರಿ. ರಾಮ, ಕೃಷ್ಣ, ಅರ್ಜುನ, ಭೀಮ, ರಾವಣ, ದುರ್ಯೋಧನ, ಕಂಸ, ಮುಂತಾದ ಪಾತ್ರಗಳಲ್ಲಿ ಇವರ ಭೀಭತ್ಸ ಅಭಿನಯ. ನೋಡುಗರ ಮೈ ನಡುಕ. ಪಾತ್ರದಲ್ಲಿ ಒಂದಾಗಿ ಹೋಗುವ ತನ್ಮಯತೆ. ಅಸಂಖ್ಯ ಪ್ರೇಕ್ಷಕರಿಂದ ಪ್ರಶಂಸೆಗಳ ಸುರಿಮಳೆ.

ಚಲನಚಿತ್ರ ರಂಗದಲ್ಲೂ ನಟನಾನುಭವ. ಮಹಾಶಿಲ್ಪಿ, ಜಾಣರ ಜಾಣ, ಮಹಡಿ ಮನೆ, ಸುಭದ್ರಾ ಕಲ್ಯಾಣ, ಹುಲಿಯ ಹಾಲಿನ ಮೇವು... ಇತ್ಯಾದಿ. ಅಲ್ಲೂ ಮೆಚ್ಚುಗೆ ಗಳಿಕೆ. ಸರಕಾರೀ ನೌಕರಿ ತೊಡಕಾಗಿದ್ದರಿಂದ ಕೆಲ ಕಾಲ ಆ ರಂಗದಿಂದ ನಿರ್ಗಮನ. ಮತ್ತೆ ರಂಗಭೂಮಿಯ ತೆಕ್ಕೆಗೆ. ಬಿಡುವಿಲ್ಲದ ರಂಗ ಚಿಂತನೆ... ದುಡಿಮೆ. ಇವರ ಅಭಿನಯ ಮೆಚ್ಚಿ ಜನರಿಂದ ಪ್ರಶಸ್ತಿಗಳ ಸರಮಾಲೆ. ಮುಡಿಗೆ ಸಂದ ಬಿರುದು ಬಾವಲಿಗಳು ಅನೇಕ. ರಂಗ ರತ್ನ, ನಾಟಕ ಶಿರೋಮಣಿ, ರಂಗ ಪ್ರದೀಪ, ನಟನಾ ಕೀರ್ತಿ, ನಟ ಶೇಖರ, ಅಭಿನಯ ಜಾಣ... ಇವು ರಂಗ ಜಾಣರು ನೀಡಿದ ಮುಕುಟಗಳು. ಸಾಲದ್ದಕ್ಕೆ ಮಾನ-ಸನ್ಮಾನಗಳು. ರಂಗ ಸಂಪದ, ಬೆಮಲ್ ಕಲಾ ಸಂಘ, ಮಲ್ಲಿಕಾ ತಂಡಗಳಲ್ಲಿ ನಟನಾಗಿ ದುಡಿಮೆ. ದೇಶದ ವಿವಿಧ ಕಡೆ ಪ್ರದರ್ಶನಗಳಲ್ಲಿ ಭಾಗಿ. ಇದೀಗ 60 ವರ್ಷ ಮುಗಿಸಿದ ಡಿ. ಮುನಿಯಪ್ಪನವರು ತುಂಬಿಕೊಂಡ ರಂಗ ಕನಸುಗಳಿಗೆ ಲೆಕ್ಕವಿಲ್ಲ.

---



## ನಂಜುಂಡಸ್ವಾಮಿ ತೊಟ್ಟವಾಡಿ

ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕಿನ ತೊಟ್ಟವಾಡಿ ಸಣ್ಣ ಹಳ್ಳಿ, ಶ್ರೀ ನಂಜುಂಡಸ್ವಾಮಿ ಅಲ್ಲಿಯವರು. ನಲವತ್ತೊಂಭತ್ತರ ನಡು ಹರೆಯದ ಇವರಿಗೆ ನಾಟಕವೇ ಜೀವ. ರಂಗ ಕಲಾವಿದರೆಂದರೆ ಉಕ್ಕುವ ಪ್ರೇಮ. ರಂಗಭೂಮಿಯ ಜತೆ ಸಾಮಾಜಿಕ ಕಾಳಜಿ. ರಂಗಕಲಾವಿದರ ಆರೋಗ್ಯದ ಬಗ್ಗೆ ಹೆಚ್ಚಿನ ಕಾಳಜಿ ವಿಕ್ಟೋರಿಯಾ ಆಸ್ಪತ್ರೆಯಲ್ಲಿನ ಎಲ್ಲ ಕನ್ನಡ ಕೆಲಸಗಳಿಗೂ ಇವರದು ಮೊದಲ ಹೆಜ್ಜೆ. ಎಲ್ಲರಿಂದಲೂ ಭಲೆ ಎಂಬ ಪ್ರೀತಿಯ, ಹೃದಯ ತುಂಬಿದ ಅಭಿಮಾನದ ಮಾತು. ಹೊಸದು ಹುಡುಕಬೇಕು.

ಹೊಸದು ಸೃಷ್ಟಿಸಬೇಕು ಎಂಬ ತುಡಿತ. ಕರ್ನಾಟಕದಲ್ಲಿ ಪ್ರಥಮ ಬಾರಿ ಬಂಡಾಯ ನಾಟಕಗಳ ಉತ್ಸವ ಸಂಘಟನೆ. ಸಂಸ್ಕೃತಿಯ ಮೂಲಕ ಸಂಸ್ಕಾರ ನೀಡುವ ಛಲ. ಪರಿಣಾಮ ಅನೇಕ ಸಾಂಸ್ಕೃತಿಕ ಸಂಘಗಳ ಸ್ಥಾಪನೆ. ರಂಗ ಚೇತನ, ಸುರಭಿ ಸೇವಾ ಸಂಸ್ಥೆಗಳ ಸ್ಥಾಪನೆ. ಆ ಮೂಲಕ ನಾಟಕಗಳ ಸಿದ್ಧತೆ. ಹಾಗೂ ನಾಡಿನಾದ್ಯಂತ ರಂಗ ಯಾತ್ರೆ, ನಾಡ ಚೇತನ, ನಾಡ ರತ್ನ ಪ್ರಶಸ್ತಿಗಳ ಸ್ಥಾಪನೆ. ಅಂಬೇಡ್ಕರರ ಬಗ್ಗೆ ವಿಶೇಷ ಗೌರವ. ಸಾಂಸ್ಕೃತಿಕ ಕಣ್ಣುಗಳ ಮೂಲಕ ಅವರನ್ನು ಕಾಣುವ ಹಂಬಲ. ಒಬ್ಬ ವೈದ್ಯ, ಹುಚ್ಚಾಸ್ಪತ್ರೆಯಲ್ಲಿ, ಮುಳ್ಳು ಬೇಲಿ, ಕೆಂಡ ಮಂಡಲ ನಾಟಕಗಳ ರಚನೆ. ಹತ್ತಾರು ಕಡೆ ಅವುಗಳ ಮರು ಪ್ರದರ್ಶನ.

ಶೈಕ್ಷಣಿಕ ರಂಗದಲ್ಲೂ ನಂಜುಂಡಸ್ವಾಮಿಯರ ಸೇವೆ ಅಪಾರ. ಎಸ್.ಬಿ. ವಾಣಿಜ್ಯ ವಿದ್ಯಾಲಯ, ಆರ್. ಭರಣಯ್ಯ ಪ.ಪೂ. ಕಾಲೇಜು, ಪಿ.ಎಲ್.ಎನ್. ಪ್ರಥಮ ದರ್ಜೆ ಕಾಲೇಜು ಇವುಗಳ ಸ್ಥಾಪನೆ. ಅಲ್ಲಿ ಕಾರ್ಯದರ್ಶಿಯಾಗಿ ಸೇವೆ. ಸಮಾಜ ಸೇವೆಯಲ್ಲಿ ಇನ್ನಿಲ್ಲದ ಉತ್ಸಾಹ. ಪ್ರಕಾಶಕರಾಗಿ ಹಲವಾರು ನಾಟಕಗಳ ಪ್ರಕಟಣೆ. ಪ್ರತಿ ವರ್ಷ ರಂಗ ಗಣ್ಯರಿಗೆ ಗೌರವ ಸಲ್ಲಿಕೆ. ಇವುಗಳ ಹೊರತಾಗಿಯೂ ಮತ್ತಷ್ಟು ಸಂಸ್ಕೃತಿ ಕೆಸಲಗಳು. ಕನ್ನಡೇತರರಿಗೆ ಕನ್ನಡ ಕಲಿಕೆ, ಸಾಹಿತ್ಯ ಸಂವರ್ಧನೆ, ವಿಚಾರ ಸಂಕಿರಣಗಳು, ಮಹಿಳಾ ಗೋಷ್ಠಿಗಳು, ಆಡಳಿತ ತರಬೇತಿ ಶಿಬಿರಗಳು, ಪುಸ್ತಕ ಕಾರ್ಯಕ್ರಮ... ಏನೇನಿಲ್ಲ. ಬೆಂಗಳೂರಿನ ವಿವಿಧ ಬಡಾವಣೆಗಳಲ್ಲಿ ಒಂಭತ್ತು ದಿನಗಳ ನಾಟಕೋತ್ಸವದ ಆಯೋಜನೆ. ಅಸಹಾಯಕ ಕಲಾವಿದರಿಗೆ ಸದಾ ನೆರವಿನ ಹಸ್ತ. ಅಂತಲೇ ಎಲ್ಲ ಕಲಾವಿದರಿಗೂ ನಂಜುಂಡಸ್ವಾಮಿ ಬೇಕು. ಭವಿಷ್ಯಕ್ಕೆ ಹತ್ತಾರು ಯೋಜನೆಗಳ ಹೊಳಹು.

---



## ನಾಗರತ್ನಮ್ಮ ಹೊಸಮನಿ

ಕೊಟ್ಟೂರಿನ ಶ್ರೀಮತಿ ನಾಗರತ್ನಮ್ಮನವರಿಗೆ ಬಾಲ್ಯದಲ್ಲಿಯೇ ರಂಗದ ಗೀಳು. ತಾನೊಂದು ದಿನ ಅಭಿನಯ ಸರಸ್ವತಿಯಾಗುತ್ತೇನೆ ಎಂಬ ಕಲ್ಪನೆ ಕೂಡ ಇಲ್ಲ. ಬಳ್ಳಾರಿಯ ನೆಲವೇ ಅಂಥದು. ಅದು ಕೊಟ್ಟಷ್ಟು ಕಲಾವಿದೆಯರನ್ನು ಬೇರಾವ ಜಿಲ್ಲೆಯೂ ಕೊಡಲಿಲ್ಲ. ಹತ್ತನೇ ವಯಸ್ಸಿಗೇ ಇವರು ಕಾಲೇಜು ಗರ್ಲ್. ಈ ನಾಟಕವೇ ಇವರಿಗೆ ರಂಗಭೂಮಿಯ ಮೊದಲ ಮೆಟ್ಟಿಲು. ಕಂಚೀಕೇರಿಯ ಜಯಲಕ್ಷ್ಮಿ ನಾಟ್ಯ ಸಂಗ ಪ್ರವೇಶಿಸಿದಾಗ ವಯಸ್ಸಿನ್ನೂ ಹತ್ತು. ಹೊಳೆ ಸೇರಿದ ಮೀನಿಗೆ ಏರಿಯ ಕಡೆಗೇ ಮುಖ. ನಾಗರತ್ನಮ್ಮ ಅಭಿನಯದಿಂದ ಅಭಿನಯಕ್ಕೆ ಬೆಳೆದರು. ಎರಡು ವರ್ಷ ಅಲ್ಲಿ ರಂಗ ಗೋಕುಲ. ಮುಂದೆ ಗೋಕಾಕ ಕಂಪನಿ. ಅದರ ಮಾಲಿಕ ಬಸವಣ್ಣೆಪ್ಪ ಹೊಸಮನಿಯವರ ಆದರದ ಆಮಂತ್ರಣ. ವೃತ್ತಿಯ ಋಣದೊಂದಿಗೆ ಬದುಕಿನ ಋಣದ ಸೇರ್ಪಡೆ ಮರು ವರ್ಷ ಬಸವಣ್ಣೆಪ್ಪ ಹೊಸಮನಿಯವರೊಂದಿಗೆ ವಿವಾಹ. ಸತಿ ಪತಿಗಳೊಂದಾದ ಭಕ್ತಿ ಹಿತವೆಪ್ಪುದು ಶಿವಂಗೆ. ಇಬ್ಬರದೂ ಒಂದೇ ದಾರಿ. ರಂಗ ಕ್ಷೇತ್ರದಲ್ಲಿ ಅಂಕೆಯಿಲ್ಲದ ಬೆಳವಣಿಗೆ. ಈ ಕಂಪನಿಯ 60ಕ್ಕೂ ಹೆಚ್ಚು ನಾಟಕಗಳು. ಅವುಗಳ ಸಾವಿರಾರು ಪ್ರಯೋಗಗಳು. ಎಲ್ಲದರಲ್ಲೂ ನಾಗರತ್ನಮ್ಮನವರ ನಾಗಾಲೋಟ. 1948ರ ಸುಮಾರು ಬೆಳ್ಳಿ ಚುಕ್ಕಿ, ಸುಖದ ಸುಪ್ಪತ್ತಿಗೆ ನಾಟಕಗಳಲ್ಲಿ ಭಾರೀ ಅಬ್ಬರ. ಇನ್ನೂರ ಐವತ್ತಕ್ಕೂ ಹೆಚ್ಚು ಸತತ ಪ್ರಯೋಗಗಳು. ನಾಟಕದ ಹಂಪವ್ವನೆಂದೇ ಪ್ರತೀತಿ. ಚಿತ್ರಾಂಗದಾ, ರಕ್ತ ರಾತ್ರಿ, ಕುರು ಕ್ಷೇತ್ರ, ಜಗನ್ಮಾಯೆ, ರಾಮಾಯಣ, ಅಕ್ಷಯಾಂಬರ, ಜಲಂಧರ, ಲಂಕಾದಹನ ಇವಲ್ಲದೆ ಇನ್ನೂ ಅನೇಕ. ಐತಿಹಾಸಿಕ ನಾಟಕಗಳಿಗೂ ಲೆಕ್ಕವಿಲ್ಲ. ಕಿತ್ತೂರು ಚೆನ್ನಮ್ಮ, ಹೇಮರೆಡ್ಡಿ ಮಲ್ಲಮ್ಮ, ಬಸವೇಶ್ವರ ಮುಂತಾದವುಗಳು. ಚಿಕ್ಕ ಸೊಸೆ, ಮಾನವತಿ, ಕಡ್ಲಿಮಟ್ಟಿ ಕಾಶೀಬಾಯಿ, ಮಾನವತಿ ಮುಂತಾದ ಸಾಧ್ವೀ ಪಾತ್ರಗಳು. ಎಲ್ಲದರಲ್ಲೂ ಪ್ರೌಢ ಅಭಿನಯ. ಈ ನಡುವೆ ಚಿತ್ರ ರಂಗದಿಂದಲೂ ಕರೆ. ಸರ್ವಜ್ಞ ಮೂರ್ತಿ. ನಾಗರ ಹಾವು, ಪ್ರೊ. ಹುಚ್ಚೂರಾಯ ಇನ್ನೂ ಅನೇಕ. ಆದರೆ ಬಿಡದ ರಂಗ ಕಾರ್ಯಗಳು. ನಾಟಕ ನಿಲ್ಲಬಾರದೆಂದು ಅತ್ತ ಕಡೆ ಗಮನ. ಈಗ ವಯಸ್ಸು ಅರವತ್ತೈದು. ಧಾರವಾಡದಲ್ಲಿ ನೆಲೆ. ಆಹ್ವಾನವಿದ್ದರೆ ಈಗಲೂ ಅಭಿನಯ.

---



## ಪ್ರಭಾಕರ ಸಾತಖೇಡ

ಧಗೆಯ ನಾಡಿನ ಪ್ರಭಾಕರ ಸಾತಖೇಡರ ವಾಸ ಕಲಬುರ್ಗಿ. ಅತ್ತ ಅರ್ಥಶಾಸ್ತ್ರದಲ್ಲಿ ಪ್ರಾಧ್ಯಾಪನ. ಇತ್ತ ಹವ್ಯಾಸಿ ರಂಗದೊಂದಿಗೆ ಒಗೆತನ. ಅದಕ್ಕೆ ಬಾಲ್ಯದ ಆಸಕ್ತಿಯೇ ಕಾರಣ. ಎಂಟು ವರ್ಷಕ್ಕೇ ಬಣ್ಣ ಹಚ್ಚಿದ ಪ್ರಭಾಕರ. ಅದರಲ್ಲಿಯೇ ಮುಗಿದ ವಿದ್ಯಾರ್ಥಿ ಬದುಕು. ಅಲ್ಲಿಂದ ಮುಂದೆ ಶಿಕ್ಷಕ ವೃತ್ತಿ. ಅಲ್ಲಿಯೂ ಬಿಡದ ರಂಗ ನಂಟು. ಕಲಬುರ್ಗಿ, ಹೈದರಾಬಾದ ಕಡೆ ನಾಟಕಗಳ ಸಿಡಿ ಮದ್ದು, ಕಲಬುರ್ಗಿಯ 'ರಂಗ ಮಾಧ್ಯಮ'ದ ಸಕ್ರಿಯ ಸದಸ್ಯ. 1984 ರಿಂದ ಆ ಸಂಸ್ಥೆಗೆ ಇವರದೇ ನೇತೃತ್ವ. ಜತೆಗೆ ಅಲ್ಲಿಯ ಕನ್ನಡ ಸಾಹಿತ್ಯ ಸಂಘದ ಸಂಚಾಲಕ. ಕರೆದಲ್ಲಿ ಹೋಗಿ ನಾಟಕ ಪ್ರದರ್ಶನ. ನೆರೆದಲ್ಲಿ ಹೋಗಿ ನೋಡಿ ಕಲಿಯುವ ಪ್ರವೃತ್ತಿ. ಸುಭದ್ರ ತಾಳಮೇಳ. ಪರಿಣಾಮವಾಗಿ ಲೆಕ್ಕವಿಡದಷ್ಟು ನಾಟಕದ ಪ್ರಯೋಗಗಳು. ಕತ್ತಲೆ ದಾರಿ ದೂರ, ನಾಯಿ ಕಥೆ, ಹೆಜ್ಜೆಗಳು, ಹರಕೆಯ ಕುರಿ, ಏನ ಬೇಡಲಿ ಹೀಗೆ ಹೆಸರು ತಂದ ನಾಟಕಗಳು ಅನೇಕ. ನಟನಾಗಿ ಪಡೆದಷ್ಟೇ ಹೆಸರು ನಿರ್ದೇಶನದಲ್ಲಿ. ಸಂಘಟನೆಯಂತೂ ಸರಿ ಬಿಡಿ. ಬಯಲು ನಾಡಲ್ಲಿ ಬರವಿಲ್ಲದ ಹಾಗೆ ರಂಗ ವೃಷ್ಟಿ. ದೂರದರ್ಶನಕ್ಕೂ ತಗುಲಿದ ರಂಗ ಕೊಂಡಿ. ಹೈದರಾಬಾದ, ಬೆಂಗಳೂರು, ಗುಲ್ಬರ್ಗಾಗಳಿಂದ ಇವರ ನಾಟಕಗಳು ಮಾಯಾ ಪೆಟ್ಟಿಗೆಯೊಳಗೆ. ಯಾರಿಗೆ ಮಾಡ್ತಿ ಪ್ಯಾವ್, ಆಸ್ಫೋಟ, ಅವ್ವ, ಹಾಸ್ಯ ತರಂಗ ಮುಂತಾದ ನಾಟಕಗಳು ಕಿರು ತೆರೆಗೆ. ಸಿನಿಮಾ ಕ್ಯಾಮರಾಗಳೂ ಇವರನ್ನು ಸೆರೆ ಹಿಡಿಯದೆ ಬಿಟ್ಟಿಲ್ಲ. ಆಸ್ಫೋಟ, ಮಹಾ ದಾಸೋಹಿ ಶರಣ ಬಸವ, ಮಹಾದೇವಿ ಸಿನಿಮಾಗಳಲ್ಲಿ ನಟನೆ.

ಕಲಾವಿದನಾಗಿ ಮಾತ್ರವಲ್ಲ. ಸಾಹಿತ್ಯ ರಚನೆಯಲ್ಲೂ ಸಾತಖೇಡರ ಹಿಗ್ಗಿದ ಪ್ರತಿಭೆ. ಹಿಂದಿ-ಮರಾಠಿಗಳಿಂದ ಹಲವು ನಾಟಕಗಳ ಕನ್ನಡ ಅನುವಾದ. ಹತ್ತಾರು ಸಂಕಿರಣಗಳಲ್ಲಿ ರಂಗಭೂಮಿ ಕುರಿತು ಪ್ರಬಂಧ ಮಂಡನೆ. ಅಭಿರುಚಿಗೆ ತಕ್ಕ ಕಮ್ಮಟಗಳಲ್ಲಿ ಭಾಗಿ. ಮಹಿಳಾ-ಮಕ್ಕಳ ರಂಗಭೂಮಿಗೆ ಇವರ ಸೇವೆ ಅನುಪಮ. ಆ ಕುರಿತ ಶಿಬಿರಗಳ ಸಂಚಾಲಕತ್ವ, ರಂಗೋತ್ಸವಗಳು, ಆಯೋಜನ-ಪ್ರಯೋಜನ ಎಂದು ಎಡಬಿಡದ ಓಡಾಟ. ಎರಡು ಬಾರಿ ನಾಟಕ ಅಕಾಡೆಮಿಯಲ್ಲಿ ಸದಸ್ಯತ್ವ, ತನ್ನಿಮಿತ್ತದ ಕ್ರಿಯಾ ಶೀಲತೆಗೆ ಒರೆಗಲ್ಲು. ಅಲ್ಲೂ ಯಶಸ್ಸು. ಸಾಧನೆಗೆ ನಮ್ಮಲ್ಲಿ ಅಪಾರ ಗೌರವ. ಹಾಗೆಂದೇ ಸಾತಖೇಡರಿಗೆ ಸೈ ಅಂದವರು ಅನೇಕ. ಹಲವಾರು ಕಡೆ ಹಾರ ತುರಾಯಿಗಳು. 53ರ ಪ್ರಭಾಕರ ಸಾತಖೇಡರಿಗೆ ಬತ್ತದ ಉತ್ಸಾಹ.

---



## ಪುರುಷೋತ್ತಮ ತಲವಾಟ

ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕು ವಿಖ್ಯಾತ ರಂಗ ಸಂಪನ್ನರ ಕೊಟ. ಪುರುಷೋತ್ತಮರ ಊರು ಇಲ್ಲಿಯದೇ ತಲವಾಟ. ಹಚ್ಚಹಸುರಿನ ಪುಟ್ಟ ಹಳ್ಳಿ. ಶಾಲಾ ದಿನಗಳಲ್ಲೇ ಇವರಿಗೆ ರಂಗ ದರ್ಶನ. ಎ.ಎಸ್. ಮೂರ್ತಿ, ಗುಂಡಣ್ಣನವರ ನಾಟಕಗಳಿಗೆ ಬಣ್ಣದ ರೂಪ. ಚಿತ್ರಕಲೆಯಲ್ಲಿ ಡಿಪ್ಲೋಮಾ ಪಡೆಯಲು ಮೈಸೂರಿಗೆ ಪಯಣ. ಅಲ್ಲಿಯೂ ನಾಟಕ ನೋಡುವ ಗೀಳು. ಅಲ್ಲಿ ನೋಡಿದ್ದನ್ನು ಮರಳಿ ಊರಿಗೆ ತಂದು ಜನರಿಗೆ ತೋರಿಸುವ ಮಹದಾಸೆ ಹಾಗೆಂದೇ ಊರಲ್ಲಿ ಗೆಳೆಯರ ಬಳಗದ ಸ್ಥಾಪನೆ.

ಬೆರಳ್ ಗೆ ಕೊರಳ್, ಏವಂ ಇಂದ್ರಜಿತ್, ಟಿ. ಪ್ರಸನ್ನನ ಗೃಹಸ್ಥಾಶ್ರಮ, ಮನವೆಂಬ ಮರ್ಕಟ, ಕುಂಟಾ ಕುಂಟಾ ಕುರುವತ್ತಿ ಹೀಗೆ ಪಟ್ಟಿ ಉದ್ದ. ಈ ಸಂದರ್ಭದಲ್ಲೇ ಮಕ್ಕಳ ರಂಗಭೂಮಿಯತ್ತ ಒಲವು. ಪಂಜರ ಶಾಲೆ, ಕಾಡಿನಲ್ಲಿ ಕಥೆ, ಹಿಮಾಂಶಿ ಹಾಗೂ ಏಳು ಕುಳ್ಳರು ಮುಂತಾದ ನಾಟಕಗಳಿಂದ ಮಕ್ಕಳಿಗೆ ಸಂಭ್ರಮ. ನಾಟಕ ಸ್ಪರ್ಧೆಗಳಲ್ಲಿ ಚಿಗುರಿದ ಆಸಕ್ತಿ, ಅನೇಕ ಕಡೆಯಲ್ಲಿ ನಿರ್ದೇಶನ. ಅಭಿನಯಕ್ಕೆ ದಕ್ಕಿದ ಪ್ರಶಸ್ತಿ, ಆಗ ಸಾಗರದ ಉದಯ

ಕಲಾವಿದರೊಂದಿಗೆ ಹೆಚ್ಚಿದ ರಂಗ ನಂಟು. ಸಂಕ್ರಾಂತಿ, ಜ್ಯೂಲಿಯಸ್ ಸೀಜರ್, ಜನತೆಯ ಶತ್ರು, ಕದಡಿದ ನೀರು ನಾಟಕಗಳಲ್ಲಿ ಭಾಗಿ. ಕೆಳದಿಯಲ್ಲಿ ಮೇಕಪ್ ನಾಣಿಯವರಿಂದ ಶಿಷ್ಯತ್ವ ಸ್ವೀಕಾರ. ಅಲ್ಲಿಯೂ ಪಳಗಿದ ಕೈ ಮುಂದಿನ ರಂಗ ಪಯಣ ನೀನಾಸಂ ದತ್ತ. ಅಲ್ಲಿಯ ಹಲವು ಯೋಜನೆಯಲ್ಲಿ ನಿರ್ದೇಶಕ. ತನ್ನಿಮಿತ್ತ ಕರ್ನಾಟಕದಾದ್ಯಂತ ಸುತ್ತಾಟ. ನೀನಾಸಂ ತಿರುಗಾಟಕ್ಕೆ ತಾಂತ್ರಿಕ ಸಲಹೆ ಹಾಗೂ ಸಂಚಾಲಕತ್ವ. ಬಿ.ವಿ. ಕಾರಂತ, ಪ್ರಸನ್ನ, ಜಂಬೆ, ಫ್ರಿಟ್ಸ್ ಬೆನ್ವಿಟ್ಸ್, ಕಂಬಾರ ಮುಂತಾದ ನಿರ್ದೇಶಕರ ಜೊತೆ ಕೆಲಸ.

ಬಿಡುವಿನ ವೇಳೆಯಲ್ಲಿ ಬೇರೆ ತಂಡಗಳಿಗೂ ಜೊತೆಗಾರ. ಪ್ರಸಾಧನ, ಬೆಳಕು, ರಂಗ ಪರಿಕರ, ವಸ್ತ್ರ–ರಂಗ ವಿನ್ಯಾಸ ಎಂದೆಲ್ಲಾ ಓಡಾಟ. ನಾಡಿನ ಹಲವು ರಂಗ ಮಂದಿರಗಳಿಗೆ ಇವರದೇ ವಿನ್ಯಾಸಾಕೃತಿ. ಅಲ್ಲಲ್ಲಿ ಪ್ರಸಾಧನ ಶಿಬಿರಗಳ ನಿರ್ದೇಶನ. ಕರ್ನಾಟಕದ ಬಹುತೇಕ ರಂಗ ತಂಡಗಳ ಜತೆ ಸಂಪರ್ಕ. ಸ್ನೇಹಕ್ಕೆ ಒಂದಿಲ್ಲೊಂದು ರಂಗ ಕಾರಣ. ಪ್ರತಿಭಾ ಪೂರ್ಣ ಪುರುಷೋತ್ತಮರಿಗೆ ನಿರಂತರತೆಯತ್ತ ಒಲವು. ಹಾಗೆಂದೇ ಇವರದು ಬತ್ತದ ಉತ್ಸಾಹ.

---



## ಗೋಪಾಲ ಟಿ. ಕೋಟ್ಯಾನ (ವಿ.ಜಿ. ಪಾಲ್)

ತುಳು ರಂಗಭೂಮಿಯಲ್ಲಿ ಗಟ್ಟಿ ಹೆಜ್ಜೆಯೂರಿದ ಶ್ರೀ ಗೋಪಾಲ ಟಿ. ಕೋಟ್ಯಾನ್ ಮಂಗಳೂರಿನವರು. ಐವತ್ತಾರು ವರ್ಷದ ಶ್ರೀಯುತರಿಗೆ ಬಾಲ್ಯದಲ್ಲೇ ಹಿಡಿದ ರಂಗ ನಂಟು. ಸಾಮ್ರಾಟ್ ಚಂದ್ರಗುಪ್ತ ಕನ್ನಡ ನಾಟಕದ ಮೂಲಕ ರಂಗ ಪ್ರವೇಶ. ಅಲ್ಲಿಂದ ಮತ್ತೆ ಹಿಂದೆ ನೋಡಲಿಲ್ಲ.

ಎಲ್ಲೆಡೆ ರಂಗ ದುಂದುಭಿ. ಐತಿಹಾಸಿಕ, ಪೌರಾಣಿಕ ನಾಟಕಗಳಲ್ಲಿ ಇವರದೇ ನಿರ್ದೇಶನ. ಉಳಿದವುಗಳಲ್ಲಿ ಮಿಂಚಿನ ಅಭಿನಯ. ಮುಂದೆ ತುಳು ರಂಗಭೂಮಿಯ ಆಕರ್ಷಣೆ. ವಿಶು ಕುಮಾರರ 'ಕಲ್ಜಿಗದ ಕುರುಕ್ಷೇತ್ರ' ತುಳು ನಾಟಕದ ಮೊದಲ ಪ್ರಯತ್ನ. ದಕ್ಕಿದ ಪ್ರಚಂಡ ಯಶಸ್ಸು. ಇದುವರೆಗೆ ಸಾವಿರಕ್ಕೂ ಮಿಕ್ಕಿ ತುಳು ನಾಟಕಗಳ ಪ್ರದರ್ಶನ. ಜತೆಗೆ ಕನ್ನಡ ನಾಟಕಗಳಿಗೂ ಲೆಕ್ಕವಿಲ್ಲ. ತನ್ಮೂಲಕ ದಕ್ಷಿಣ ಕನ್ನಡದ ರಂಗಭೂಮಿಯಲ್ಲಿ ಗೋಪಾಲ್ ಅವರಿಗೆ ವಿಶೇಷ ಸ್ಥಾನ. ಕೋಟಿ ಚೆನ್ನಯ್ಯ, ರಾಣಿ ಅಬ್ಬಕ್ಕ, ಬೆಳವಡಿ ಮಲ್ಲಮ್ಮ, ರಾಣಾ ಪ್ರತಾಪ್, ಸಾಮ್ರಾಟ್ ಸಂಕಲ್ಪ, ದಳವಾಯಿ ದುಗ್ಗಣ್ಣೆ, ಮಹಿಷ ಮರ್ದಿನಿ ಇವಲ್ಲದೆ ಇನ್ನೂ ಅನೇಕ ಪ್ರಮುಖ ನಾಟಕಗಳು. ಕರಾವಳಿ ಉದ್ದಕ್ಕೂ ಗೋಪಾಲ್ ರಿಂದ ರಂಗ ವರ್ಷ.

ಚಲನಚಿತ್ರ ರಂಗದಲ್ಲೂ ಇವರದು ಅಷ್ಟೇ ದೊಡ್ಡ ಹೆಸರು. ತುಳು ಚಿತ್ರರಂಗದಲ್ಲಿ ಅಚ್ಚಳಿಯದ ಅಭಿನಯ. ಬಯ್ಯ ಮಲ್ಲಿಗೆ, ಸತ್ಯ ಓಲುಂಡು, ಬಂಗಾರ ಪಟ್ಲೇರ ಹೆಸರು ಕೊಟ್ಟ ಚಿತ್ರಗಳು. ಸುಮಾರು 50 ಧ್ವನಿ ಸುರುಳಿ ನಾಟಕಗಳಲ್ಲೂ ಪಾತ್ರ, ಆ ಕ್ಷೇತ್ರದಲ್ಲೂ ಜನಪ್ರಿಯ. 1988ರಲ್ಲಿ ನಟ ಶ್ರೀ ಕೆ.ಎನ್. ಟೇಲರ್ ಜತೆ ಕೊಲ್ಲಿ ರಾಷ್ಟ್ರಗಳಿಗೆ ರಂಗ ಯಾತ್ರೆ, ಅಲ್ಲಿ ತಂಡದ ಪ್ರಮುಖ ಹಾಸ್ಯ ನಟ. ನಂತರ ರಾಜ್ಯದ ಅನೇಕ ಕಡೆ ರಂಗ ಪ್ರಯೋಗಗಳು. ಮುಂಬಯಿ, ಪೂನಾ, ಮದರಾಸು, ಕೊಲ್ಹಾಪೂರ ಮುಂತಾದ ನಗರಗಳಲ್ಲಿ ಪಾತ್ರಾಭಿನಯ. ಎಲ್ಲೆಲ್ಲೂ ಜನ ಮೆಚ್ಚಿದ ನಟನೆ.

ತುಳು ರಂಗಭೂಮಿಯಲ್ಲಿ ಚಾರಿತ್ರಿಕ ದಾಖಲೆ ಮೂಡಿಸಿದ 'ಒರ್ಯರ್ದೊರಿ ಅಸಲ್', 'ಮಾಮಿಗೊಂಡ ಮಾಮಿ' 'ಅಕ್ಲೆ ಲೆಕ್ಕ ಎಂಕುಲತ್ತ್' ನಾಟಕಗಳಲ್ಲಿ ಪ್ರಧಾನ ಪಾತ್ರ. ಪ್ರಸಕ್ತ ಕೆ.ಎನ್. ಟೇಲರ್, ಶ್ರೀ ಮಚ್ಚೇಂದ್ರನಾಥ ಪಾಂಡೇಶ್ವರ ತಂಡದ ಪ್ರಮುಖ ಕಲಾವಿದ.

---



## ಆರ್.ಟಿ. ರಮಾ

ಐವತ್ತೇಳು ವರ್ಷದ ಶ್ರೀಮತಿ ಆರ್.ಟಿ. ರಮಾ ಹುಟ್ಟಿದ್ದು ದಾವಣಗೆರೆಯಲ್ಲಿ ತಂದೆ ಟಿ.ಆರ್. ತಿರುಮಲರಾವ್ ಶಿಕ್ಷಕರು. ಮೊದಲಿಂದಲೂ ನಾಟಕ ಇವರಿಗೆ ಆಸಕ್ತಿಯ ವಿಷಯ. ವೃತ್ತಿ ರಂಗಭೂಮಿ ಇವರ ಬದುಕಿನ ದಾರಿಯನ್ನೇ ಬದಲಿಸಿತು. ಹತ್ತು ವರ್ಷದ ಬಾಲಿಕೆಯಾಗಿದ್ದಾಗಲೇ ರಂಗಪ್ರವೇಶ ದತ್ತು ಪುತ್ರ ನಾಟಕದಲ್ಲಿ ಹುಡುಗನ ಪಾತ್ರ, ಆ ನಂತರದು ಬಿಡಲಾಗದ ರಂಗ ನಂಟು. ಬೆಳೆದಂತೆಲ್ಲ ರಂಗಭೂಮಿಯ ಆಳಕ್ಕೆ ಇಳಿತ. ನಟನೆಯಲ್ಲಿ ಆಸಕ್ತಿಯ ವಿಸ್ತಾರ. ಚಿತ್ರಾಂಗದಾ ನಾಟಕದ ಕೃಷ್ಣನ ಪಾತ್ರದಿಂದ ಬಹು ಜನರಿಗೆ ಪ್ರೋಡಿ. ಅಪ್ಪಟ ನಟಿಯಾಗಿ ಪ್ರಸಿದ್ಧಿ. ಆಗ ಮಾರ್ತಾಂಡರಾವ್ ನಾಡಿಗೇರರ ಕಂಪನಿ ಪ್ರವೇಶ. ಅಲ್ಲಿಯೇ ಪಾತ್ರದಿಂದ ಪಾತ್ರಕ್ಕೆ ಭಡ್ತಿ. ಒಬ್ಬ ನಟಿಗೆ ಒಂದೇ ಕಂಪನಿ ಸಲ್ಲದ ಕಾಲ. ರಮಾ ರ ವಾಸ್ತವ್ಯ ಬದಲು. ಗರೂಡ ಶ್ರೀಪಾದರಾಯರ ಕಂಪನಿಯಲ್ಲಿ ರಂಗಸೇವೆ ಅಲ್ಲಿ ದಕ್ಕಿದ್ದು ಹಾಸ್ಯ ಪಾತ್ರ, ಅಭಿನಯಕ್ಕೆ ಹೊಸ ಮಗ್ಗುಲು. ಮುಂದಿನ ದಾರಿ ಮಂಗಳೂರಿನ ಶ್ರೀಧರರಾವ್ ಕಂಪನಿಗೆ. ಅಲ್ಲಿಂದ ಹೊನ್ನಪ್ಪ ಭಾಗವತರ್ ಕಂಪನಿಯತ್ತ ಕಾಲು. ಹಾಸ್ಯ ಪಾತ್ರದಿಂದ ಖಳನಾಯಿಕಿಗೆ ಬದಲು. ಅಲ್ಲೂ ಜನರಿಂದ ಭೇಷ್. ಆರ್. ನಾಗರತ್ನಮ್ಮನವರ ಕಂಪನಿಯಲ್ಲಿ ದರ್ಬಾರ್ ನರ್ತಕಿ. ನೃತ್ಯದಲ್ಲೂ ಮಿಂಚು. ಕಂಪನಿಯಿಂದ ಕಂಪನಿಗೆ ತಿರುಗಾಟ. ಅಲ್ಲೆಲ್ಲ ದಕ್ಕಿದ್ದು ಅನುಭವದ ಸಾಂದ್ರತೆ. ಕೈವಶಗೊಂಡದ್ದು ನಟನಾ ಸಾಮರ್ಥ್ಯ. ಈ ನಡುವೆ ಚಿತ್ರರಂಗಕ್ಕೂ ದಾಪುಗಾಲು. ಅಲ್ಲಿ ಗೌರಿ ಮೊದಲ ಚಿತ್ರ, ನರಸಿಂಹರಾಜು, ದ್ವಾರಕೀಶರೊಂದಿಗೆ ಹಾಸ್ಯ ಪಾತ್ರ, ಸುಮಾರು ನಲವತ್ತಕ್ಕೂ ಮಿಕ್ಕಿ ಚಿತ್ರಗಳಲ್ಲಿ ಅಭಿನಯದ ಪಾಲು. ಇವುಗಳ ನಡುವೆ ಮದರಾಸಿನಲ್ಲಿ ಪಂಡರೀಬಾಯಿಯವರ ನಾಟಕಗಳಲ್ಲಿ ನಟನೆ.

ರಮಾ ಕೇವಲ ವೃತ್ತಿಗಷ್ಟೇ ಸೀಮಿತವಾಗಲಿಲ್ಲ. ಹವ್ಯಾಸಿಗಳತ್ತ ಬೆಳೆದ ಒಲವು. ಬೆಂಗಳೂರಿನ ಪ್ರಮುಖ ಹವ್ಯಾಸಿ. ರಂಗ ತಂಡಗಳ ಸಂಪರ್ಕ ಎಪ್ಪತ್ತರ ದಶಕದ ಪ್ರಮುಖ ನಾಟಕಗಳಲ್ಲಿ ಪಾತ್ರ. ಕೇಳು ಜನಮೇಜಯ, ಮುಖ್ಯಮಂತ್ರಿ, ತಾಯಿ, ಆಷಾಢದ ಒಂದು ದಿನ, ಕಾಲಿಗುಲ... ಇತ್ಯಾದಿ. ಅಲ್ಲಿಂದ ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಗೆ ಪ್ರವೇಶ. ಅಲ್ಲಿ ನಟನೆಗೆ ವಿಶೇಷ ಒತ್ತು. ಅಲ್ಲಿನ ಹತ್ತಾರು ಹಿಂದೀ ನಾಟಕಗಳಲ್ಲಿ ಪ್ರಮುಖ ಪಾತ್ರ ಹಿಂದಿಗರಿಗೂ ಪ್ರತಿಭೆಯ ಪರಿಚಯ. ದೂರದರ್ಶನಕ್ಕೂ ದಕ್ಕಿದ ಪ್ರತಿಭೆ. ಹಲವಾರು ಟೆಲಿ ಫಿಲಂ ಗಳಲ್ಲಿ ಪ್ರೌಢ ಅಭಿನಯ. ಆಕಾಶವಾಣಿಗೂ ಹಾಕಿದ ಲಗ್ಗೆ, ರಮಾ ಮುಟ್ಟದ ರಂಗವಿಲ್ಲ, ಹಿಂದಿ ಎಂ.ಎ. ಇಂಗ್ಲಿಷ್ ಡಿಪ್. ಆಗಿರುವ ಇವರು ಈಗ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನಾಟಕ ವಿಭಾಗದ ಪ್ರಾಧ್ಯಾಪಕರು.

---



## ರಾಜಶೇಖರ ಕದಂಬ

ಮೈಸೂರಿನ ರಾಜಶೇಖರ್ ಕದಂಬ ಬರೀ ಒಬ್ಬ ವ್ಯಕ್ತಿಯಲ್ಲ. ಒಂದು ರಂಗ ಶಕ್ತಿಯ ಸಮೂಹ. 'ಕದಂಬ ರಂಗ ವೇದಿಕೆ' ಅವರ ಕೂಸು. ನಮ್ಮಲ್ಲಿ ವೃತ್ತಿ ಕಂಪನಿ ಕಟ್ಟಿಕೊಂಡವರು ನೂರಾರು. ಆದರೆ ಹವ್ಯಾಸಿಗಳಲ್ಲಿ ಹಾಗಲ್ಲ. ವಿರಳರಲ್ಲೇ ಎದ್ದು ಕಾಣುತ್ತಾರೆ ಕದಂಬ. ತನ್ನ ತಂಡದಿಂದಲೇ ಅಟ್ಟವೇರಿಸಿದ ರಂಗ ಕೃತಿಗಳು ಹಲವಾರು. ಆರಂಭದಲ್ಲಿ ಪೌರಾಣಿಕ, ಐತಿಹಾಸಿಕಗಳತ್ತ ಒಲವು. ಮುಂದಿನ ನೆಗೆತಕ್ಕೆ ಅದೇ ಮೆಟ್ಟಿಲು. ಭಲೆ.... ಭಲೆ ಅನ್ನಿಸಿಕೊಂಡ ನಟನೆ, ಸಂಘಟನೆ. ಪುರೂರವ, ಕೆಂಪೇಗೌಡ, ಯಲಹಂಕ ಪ್ರಭು, ನರಗುಂದ ಬಂಡಾಯ, ಸಂಗೊಳ್ಳಿ ರಾಯಣ್ಣ, ಎಚ್ಚಮ ನಾಯಕ, ದುರ್ಗಾಸ್ತಮಾನ ಹೀಗೇ ಪಟ್ಟಿ ಉದ್ದ, ಪ್ರಯೋಗಗಳು ಎಲ್ಲದರಲ್ಲೂ ಸಮೃದ್ಧ, ಇವರಿಗೂ ಸಂತೃಪ್ತಿ. ಮುಂದೆ ಸಾಮಾಜಿಕ ನಾಟಕಗಳತ್ತ ಗಮನ. ಗಾಂಧೀ ನಗರ, ದೊಡ್ಡಮನೆ, ಇದಿ ಮುಂಡೆ ಮಗಳು, ಪರಿಮಳದವರು... ಹೆಸರು ಇನ್ನಷ್ಟು. ಈ ಎಲ್ಲ ನಾಟಕಗಳ ಕನಸುಗಾರ ಇವರೊಬ್ಬರೆ. ನೂರಾರು ಪ್ರಯೋಗಗಳು. ಅಷ್ಟೇ ಸಂಖ್ಯೆಯ ರಂಗ ಕಲಾವಿದರಿಗೆ ತೆರೆದಿಟ್ಟ ಮುಕ್ತ

ವೇದಿಕೆ. ಖ್ಯಾತ–ವಿಖ್ಯಾತ ನಿರ್ದೇಶಕರೂ ವೇದಿಕೆಯ ನಾಟಕಗಳಿಗೆ ಹಿಡಿದ ರಂಗ ಸೂತ್ರ. ಇವರಿಗೆ ರಂಗ ಹುಚ್ಚು, ಚೆಲ್ಲಿದ ಹಣಕ್ಕೆ ಲೆಕ್ಕವಿಲ್ಲ. ಅದರಲ್ಲೇ ದಕ್ಕಿದ ರಂಗ ಸಂತೃಪ್ತಿ.

ಅವರಿಗೀಗ ಐವತ್ನಾಲ್ಕು ವಯಸ್ಸು, ಸೋಲೊಪ್ಪದ ಛಲಗಾರ. ಅದಮ್ಯ ಆಶಾವಾದಿ. ವೃತ್ತಿ–ಹವ್ಯಾಸಿಗಳೆರಡರ ಹಿತ ಚಿಂತಕ. ಸಿನಿಮಾದಲ್ಲೂ ಕೂಡ ಆಸಕ್ತಿ. ಅಲ್ಲೂ ಮಿಂಚಿದ ನಟನೆ. ಚಂದನದ ಗೊಂಬೆ, ಪ್ರೇಮಾಚಾರಿ, ಮುನಿಯನ ಮಾದರಿ, ಮುತ್ತಿನ ಹಾರ, ಜನುಮದ ಜೋಡಿ... ಹೀಗೆ 40 ಚಿತ್ರಗಳು. ಎಲ್ಲದರಲ್ಲಿ ಎದ್ದು ಕಾಣುವ ಅಭಿನಯ. ಅವರದೇ ಮುದ್ರೆ. ನಾಟಕ ಅಕಾಡೆಮಿಗೆ ಹಿಂದಿನ ಬಾರಿ ಸದಸ್ಯ. ಹಲವು ಮಜಲುಗಳಿಗೆ ಸ್ಪಂದನ. ರಂಗ ಗೆಳೆಯರಲ್ಲಿ ಆತ್ಮೀಯ ಸಂವಹನ. ಅವರು ಬರೆದ 'ಬಣ್ಣದ ಮುಖಗಳು' ರಂಗ ಪ್ರೀತಿಗೊಂದು ದ್ಯೋತಕ. ಮೈಸೂರು ಜಿಲ್ಲೆಯ ಕಲಾವಿದರ ಮೇಲೆ ಚೆಲ್ಲಿದ ಬೆಳಕು. ಮನೆ ತುಂಬ ಪ್ರಶಸ್ತಿಗಳ ವೃಷ್ಟಿ. ರಂಗಾಭಿಮಾನಿಗಳ ಪ್ರೀತಿಯ ಮಹಾಪೂರ. ಹಿಗ್ಗದ–ಕುಗ್ಗದ ನಿಲುವು. ಅಷ್ಟೇ ಗಂಭೀರ ವ್ಯಕ್ತಿತ್ವ.

---



## ಪಿ.ಬಿ. ರೈ

ದಕ್ಷಿಣ ಕನ್ನಡ ಜಿಲ್ಲೆ ರಂಗ ಕಲಾವಿದರ ಕಣಜ. ಯಕ್ಷಗಾನದ ಪ್ರಭಾವ ಅಲ್ಲಿ ಅಪಾರ. ಪೆರುವಾಂಜ್ ಬಾಬು ರೈ ಅಲ್ಲಿ ಎದ್ದು ಕಾಣುವ ಹೆಸರು. ದೇಹಕ್ಕೆ ಐವತ್ತೇಳರ ವಯಸ್ಸು, ಆದರೆ ಮನಸ್ಸು ಇನ್ನೂ ಚುರುಕು. ಬಾಲ್ಯದಲ್ಲಿ ಯಕ್ಷಗಾನದ ಸೆಳೆತ. ಆಗ ಹಚ್ಚಿದ ಬಣ್ಣ ಜೀವನವನ್ನೇ ಬದಲಿಸಿತು. ಕಲೆ ಉಸಿರಾಯಿತು. ಐದನೇ ಕ್ಲಾಸಿಗೆ ಓದಿದ ಉಸಿರಿನ ಸ್ತಂಭನ. ಬಿಡದ ರಂಗ ನಂಟು. ಬರೀ ಆಸಕ್ತಿ ಹೊಟ್ಟೆ ತುಂಬಿಸುವದಿಲ್ಲ. ಹಾಗಾಗಿ ಆಸಕ್ತಿ ವೃತ್ತಿಯಾಯಿತು. ಹತ್ತೊಂಬತ್ತರ ಹರೆಯಕ್ಕೇ ನಾಟಕ ಕಂಪನಿ ಸೇರ್ಪಡೆ. ಹುಬ್ಬಳ್ಳಿಯಲ್ಲಿದ್ದ ಕಂಪನಿಯಿಂದ ಮೊದಲ ಹುತ್ತು, ಗುಡಿಗೇರಿ ಕಂಪನಿಯಲ್ಲಿ ಇಪ್ಪತ್ತು ವರ್ಷಗಳ ಮೇಲ್ಪಟ್ಟ ಸಾಧನೆ. ಕಂಪನಿಯ ಪ್ರಮುಖ ನಟ. ಚಿಂದೋಡಿ ಲೀಲಾರ ಕಂಪನಿಯಲ್ಲೂ ಕೆಲ ದಿನ. ವೃತ್ತಿಗೆ ಬದುಕು ನೀಡಿದ ಕಂಪನಿಗಳು ಇನ್ನೂ ಅನೇಕ. ಬ್ಯಾಡಗಿ, ಚಿತ್ರದುರ್ಗ, ಸುಳ್ಯ, ಕಮತಗಿ, ಮೆಳ್ಳಗೇರಿ, ಹಾಸನ, ಕುಕನೂರು ಕಂಪನಿಗಳಲ್ಲಿ ದುಡಿತ. ಒಟ್ಟಾರೆ ಹತ್ತಕ್ಕೂ ಮಿಕ್ಕ ಕಂಪನಿಗಳಲ್ಲಿ ರಂಗ ಜೀವನ.

ಈಗ ಹದಿನೈದು ವರ್ಷಗಳಿಂದ ಸ್ವಂತ ಕಂಪನಿಯ ಸೃಷ್ಟಿ. ನಂದಿಕೇಶ್ವರ ನಾಟ್ಯ ಸಂಘ, ಮಂಗಳೂರು ಅದರ ಹೆಸರು. ಲಾಲನೆ ಪಾಲನೆಯ ಸಂಪೂರ್ಣ ಜವಾಬ್ದಾರಿ. ಅಲ್ಲಿ ಬಂದು ಹೋದ ಕಲಾವಿದರಿಗೆ ಲೆಕ್ಕವಿಲ್ಲ. ಕಷ್ಟಕ್ಕೆ ಕೊರಗಲಿಲ್ಲ. ಸುಖಕ್ಕೆ ಅರಳಲಿಲ್ಲ. ಇಂದಿಗೂ ಕಲೆಯನ್ನೇ ಬದುಕಾಗಿಸಿಕೊಂಡ ಛಲ. ಸಮರ್ಥ ರಂಗ ನಟರನ್ನು ನಾಡಿಗೆ ನೀಡಿದ ಹಿರಿಮೆ. ಜೊತೆಗೆ ವೃತ್ತಿ ರಂಗಕ್ಕೊಂದು ಗೌರವ ತಂದುಕೊಟ್ಟ ಗರಿಮೆ. ರಾಜ್ಯದ ಮೂಲೆ ಮೂಲೆಗೂ ಇವರ ರಂಗ ಕೀರ್ತಿ, ಪುಣೆ, ಸಾಂಗ್ಲಿ, ಸೂರತ್, ಕೊಲ್ಹಾಪುರ, ಮುಂಬಯಿ, ಕಾಸರಗೋಡು ಹೀಗೆ ಹೊರನಾಡಲ್ಲೂ ರಂಗ ದರ್ಶನ. ಸಾವಿರಕ್ಕೂ ಮಿಕ್ಕ ನಾಟಕ ಪ್ರದರ್ಶನ. ಮುದುಕನ ಮದುವೆ, ಗೌತ್ರ ಗಡ್ಡ, ಮಸ್ ಕಂಡಕ್ಟರ್, ಬಂಜೆ ತೊಟ್ಟಿಲು, ವರದಕ್ಷಿಣೆ, ಸೂಳೆ ಸಂಪತ್ತು ಒಂದೇ.... ಎರಡೇ. ಬಾಬು ರೈ ಸಾಧನೆಗೆ ಮಿತಿಯಿಲ್ಲ. ಪತ್ನಿ ಸುಮಿತ್ರಾ ಇವರ ನೆರಳಿನಲ್ಲಿ. ಅವರೂ ರಂಗ ನಟಿ. ಗಂಡ ಹೆಂಡಿರಿಬ್ಬರದೂ ಒಂದೇ ದಾರಿ. ಸಾರ್ವಜನಿಕರಿಂದ ದಕ್ಕಿದ ಸನ್ಮಾನಗಳು ಅನೇಕ. 'ಕಲಾ ಸಮ್ರಾಟ' 'ನಟ ಶೇಖರ' ಇವು ಜನ ಕೊಟ್ಟ ಬಿರುದು. ಪಿ.ಬಿ. ರೈ ಅವರ ಮಾತೃ ಭಾಷೆ ತುಳು. ಅಲ್ಲೂ ಇವರ ರಂಗ ಸಾಧನೆ. ಹತ್ತಾರು ತುಳು ನಾಟಕಗಳ ನಿರ್ದೇಶನ. ನಟನೆಯಲ್ಲಿ ಲವಲವಿಕೆ. ಸಂಘಟನೆಯಲ್ಲಿ ಕೌಶಲ್ಯ. ಅದೇ ಯಶಸ್ಸಿನ ದಾರಿ.

---

## ಸಂಪಿಗೆ ಶಂಕರ



ಬಾಲ್ಯದಲ್ಲಿ ಓದಲು ಸಾಧ್ಯವಾಗಿದ್ದರೆ ಒಳ್ಳೆಯ ಹುದ್ದೆಯಲ್ಲಿರಬೇಕಿತ್ತು ಶಂಕರ್. ಬಡತನವನ್ನೇ ಉಂಡುಟ್ಟ ಹುಡುಗನಿಗೆ ಅದು ಸಾಧ್ಯವಾಗಲಿಲ್ಲ. ರಂಗಭೂಮಿ ಕರೆಯಿತು. ಅದೇ ಬದುಕಿನ ದಾರಿಯಾಯಿತು. ಉತ್ತರ ಕರ್ನಾಟಕದ ಶ್ರೀ ಹಾಲ ಸಿದ್ದೇಶ್ವರ ಕಂಪನಿಯಲ್ಲಿ ಸೇವೆಯ ಆರಂಭ. ಕಂಪನಿಯ ಮಾಲಿಕ ಚಿಕ್ಕ ಬಟ್ಟಪ್ಪನವರಿಂದ ಶಹಾಭಾಸಗಿರಿ. ವೃತ್ತಿ ಕಂಪನಿಗಳೊಂದಿಗೆ ಬಿಡದೆ ಬಾಂಧವ್ಯ. ವೃತ್ತಿ ಕಂಪನಿಗಳಿಗೆ ಆಗ ಏರು–ಪೇರು ಕಾಲ. ಹಾಗಾಗಿ ಕಂಪನಿಯಿಂದ ಕಂಪನಿಗೆ ನಟರ ಜಿಗಿತ. ಅದಕ್ಕೆ ಸಂಪಿಗೆ ಶಂಕರರೂ ಹೊರತಲ್ಲ. ಹಲಗೇರಿ ರಾಮಣ್ಣ, ಕೌಲಿ ಚನ್ನಬಸಪ್ಪ, ಹಾಸ್ಯ ನಟ ಓಬಳೇಶ್ವರ ಅವರೊಂದಿಗೆ ನಾಡಿನ ತುಂಬ ಓಡಾಟ. ಕಂಪನಿಗಳಿಂದ ಕಂಪನಿಗೆ ಓಡಾಟ ಆ ಕಾಲದ ಜನಪ್ರಿಯ ನಟರ ಸಹಚರ–ಸಹನಟ. ಬಳ್ಳಾರಿ ಲಲಿತಮ್ಮನವರ ಕಂಪನಿಯಲ್ಲೂ ಕೆಲ ದಿನ.

ಇಷ್ಟರಲ್ಲಿ ವೃತ್ತಿರಂಗದ ಒಳ ಹೊರಗಿನ ಸಮಗ್ರ ಪರಿಚಯ. ಕಷ್ಟಗಳ ಸರಮಾಲೆ. ಸುಖ ಕತ್ತಲೆಯಲ್ಲಿ ಮಿನುಗಿದ ಮಿಂಚಿನಂತೆ. ಇವರಿಗೂ ಹಾಗೇ. 1957ರಲ್ಲಿ ನಟ ರತ್ನಾಕರ ಮಾ. ಹಿರಣ್ಣಯ್ಯನವರಿಂದ ಸ್ವತಂತ್ರ ಕಂಪನಿ ಉದಯ. ಅಲ್ಲಿಗೆ ಸರಿದರು ಸಂಪಿಗೆ. ಹಿರಣ್ಣಯ್ಯನವರ ಎಲ್ಲ ನಾಟಕಗಳ ಪಾತ್ರಗಳಿಗೆ ಇವರಿಂದ ಜೀವ ಸ್ಪರ್ಶ. ಸುಮಾರು 20 ವರ್ಷಗಳ ದೀರ್ಘ ಸೇವೆ ಅಲ್ಲಿ. ಅದೇ ಸಂದರ್ಭದಲ್ಲಿ ಗುಬ್ಬಿ ಕಂಪನಿಯ ಪ್ರಧಾನ ಮೇಸ್ತ್ರಿ ನಂಜಪ್ಪ ಅವರಿಂದ ಹೊಸ ಕಂಪನಿ ಆರಂಭ. ಸಂಪಿಗೆ ಸೇವೆ ಅಲ್ಲಿ ಎರಡು ವರ್ಷ. ನಂತರ ಚಲನಚಿತ್ರದಲ್ಲಿ ಅವಕಾಶ. ಉದಯ ಕುಮಾರರೊಂದಿಗೆ ಖಳ ನಾಯಕ. ಯಾಕೋ ಅದೂ ಸರಿ ಹೊಂದಲಿಲ್ಲ. ಹಿರಣ್ಣಯ್ಯನವರ ಕಂಪನಿಗೆ ಮತ್ತೆ ಮರಳಿಕೆ. ಅವರೊಟ್ಟಿಗೆ ಅಮೇರಿಕಾ ಪ್ರವಾಸ. ಅಲ್ಲಿಯ ಕನ್ನಡಿಗರೆದುರು ನಾಟಕ ಪ್ರದರ್ಶನ. ಸಂಪಿಗೆ ಶಂಕರರ ನಟನೆಯ ಭಾಗ್ಯ ಅಮೆರಿಕೆಯ ನೆಲದಲ್ಲಿ. ಅಲ್ಲಿಂದ ಬಂದ ಮೇಲೆ ಸ್ವತಂತ್ರ, ದೂರದರ್ಶನಕ್ಕೂ ಲಗ್ಗೆ. ಅಲ್ಲಿ 100 ಕ್ಕೂ ಮಿಕ್ಕಿ ಅವಕಾಶಗಳು. ಜನ ಮೆಚ್ಚಿದ ನಟನಾ ಕೌಶಲ್ಯ. ಪೌರಾಣಿಕ ನಾಟಕ ರಚನೆಯಲ್ಲೂ ಪರಿಶ್ರಮ. ಭಕ್ತ ಪ್ರಹ್ಲಾದ, ಭೂ ಕೈಲಾಸ, ಆದಿ ಚುಂಚನಗಿರಿ ಮಹಾತ್ಮೆ ಅವುಗಳಲ್ಲಿ ಮುಖ್ಯ. 50 ವರ್ಷಗಳ ಸಮೃದ್ಧ ರಂಗ ಜೀವನ. ಅಭಿಮಾನಿಗಳಿಂದ ಸಿಕ್ಕ ಮಾನ–ಸನ್ಮಾನಗಳಿಗೆ ಲೆಕ್ಕವಿಲ್ಲ.

---

## ಸುಶೀಲಮ್ಮ ಧಾರವಾಡ



ವೃತ್ತಿ ರಂಗಭೂಮಿಯಲ್ಲಿ ತಮ್ಮದೇ ಆದ ಛಾಪು ಮೂಡಿಸಿದವರು ಧಾರವಾಡದ ಶ್ರೀಮತಿ ಸುಶೀಲಮ್ಮ. ಎಂಟನೆಯ ತರಗತಿಯಲ್ಲಿದ್ದಾಗಲೇ ಬಣ್ಣದ ಬದುಕಿಗೆ ಬಂದವರು. ಧಾರವಾಡನಾಡಿನ ಸಾಂಸ್ಕೃತಿಕ ಸಿರಿನಗರ. ತಾಯಿ ಪಾರ್ವತಿ, ತಂದೆ ವಾಸುದೇವರಿಗೆ ಕಲೆಯಲ್ಲಿ ಅಪಾರ ಆಸಕ್ತಿ. ಮಗಳಿಗೂ ಪ್ರೋತ್ಸಾಹ. ಶಾಲಾ ಹಂತದಲ್ಲಿ ನಾಟಕಗಳಲ್ಲಿ ಅಭಿರುಚಿ. ಪಾತ್ರಾಭಿನಯ. ನಂತರದ್ದು ಪೂರ್ಣ ಪ್ರಮಾಣದ ರಂಗ ಬದುಕು. ವೃತ್ತಿ ರಂಗಭೂಮಿ ಪ್ರವೇಶ. ನಟನೆಯಲ್ಲಿ ಸತತಾಭ್ಯಾಸ. ಅದಕ್ಕೆ ಆಖಾಡವಾದ ಕಂಪನಿಗಳು ಅನೇಕ. ಭಾರತಿ ನಾಟ್ಯ ಸಂಘ ಸೂಡಿ, ಮಲ್ಲಿಕಾರ್ಜುನ ನಾಟ್ಯ ಸಂಘ ಸುಳ್ಳ, ರವಿ ನಾಟ್ಯ ಸಂಘ ಲಕ್ಷ್ಮೇಶ್ವರ, ಸಂಗಮೇಶ್ವರ ನಾಟ್ಯ ಸಂಘ ಗುಡಗೇರಿ ಇತ್ಯಾದಿಗಳು. ನಾನಾ ರೀತಿಯ ಸವಾಲುಗಳು. ಕಲೆಗೆ ಮತ್ತು ಬದುಕಿಗೆ ಸಂಬಂಧಪಟ್ಟವು. ಹೋದ ಕಡೆ ಪ್ರತಿಭೆಯ ಹೆಗ್ಗುರುತು. ಕಲಾವಿದೆಗೆ ಸಲ್ಲುವ ಅಪ್ಪಟತನ. ಸಾಧಿಸಬೇಕೆಂಬ ಛಲ. ಬೇರೆಯವರ ಕಂಪನಿಯಲ್ಲಿ ಬೇಸರದ ಮೊಳಕೆ. ತಮ್ಮಿಂದಲೇ ಹೊಸ ಕಂಪನಿಯ ಹುಟ್ಟು. ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ ಧಾರವಾಡ, ಅದರ ಹೆಸರು. ಬದುಕನ್ನು ಬಂದಹಾಗೆ ಸ್ವೀಕರಿಸುವ ಜಾಯಮಾನವಲ್ಲ ಇವರದು. ಅದನ್ನು ಮೀರಿ ಬದುಕಿದರು. ಸ್ವಂತ ಕಂಪನಿಗಳು ಎದುರಿಸುವ ಸಮಸ್ಯೆಗಳು ಹಲವು. ಎಲ್ಲಕ್ಕೂ ಎದೆಗೊಟ್ಟರು.

ಹದಿನಾರು ವರ್ಷ ನಿಲ್ಲದ ಓಟ. ಮಾಲಕಿಯಾಗಿ ಹೊಸ ಕಲಾವಿದರಿಗೆ ಪ್ರೋತ್ಸಾಹದ ಸಿಂಚನ. ಪರಿಬಿಟ್ಟ ಪ್ರತಿಭೆಗಳಿಗೆ ಲೆಕ್ಕವಿಲ್ಲ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳ ನಿರ್ಮಾಣ. ಪರಿಪೂರ್ಣ ನಟನೆ. ಸುಬೇದಾರ ಸೀತವ್ವ, ದೇಸಾಯಿ ದರ್ಬಾರ, ಗಂಡನ ಆಜ್ಞೆ, ತಂಗಿಯ ತಾಳಿ, ಬದುಕು ಬಂಗಾರವಾಯ್ತು, ಸಂಪತ್ ಲಕ್ಷ್ಮಿ, ರೇಣುಕ, ಹೇಮರೆಡ್ಡಿ ಮಲ್ಲಮ ಹೀಗೆ ಪಟ್ಟಿ ಉದ್ದ. ಸಧ್ಯ ವಿಜಾಪುರ ವಾಸ. ಅಲ್ಲಿ ಹವ್ಯಾಸಿ ರಂಗಕ್ಕೂ ಕೊಡುಗೆ. ಅಂಥ ನಾಟಕಗಳಲ್ಲಿ ಸಾರ್ಥಕ ಅಭಿನಯ. ಸೂರ್ಯಶಿಕಾರಿ, ಅಷ್ಟಾವರಣ, ಜಗದ್ಗುರು ಇಬ್ರಾಹಿಮ್, ಆಗಸ್ಟ್ ಹದಿನೇಳರ ನಂತರ... ಇವು ಹವ್ಯಾಸಿಗರಿಗಾಗಿ. ಕಲೆಗೆ ಬಿರುಕಿಲ್ಲ ಎಂಬುದರ ಸಾಬೀತು ಇವರಿಂದ.

---



## ಹೆಚ್.ಜಿ. ಸೋಮಶೇಖರರಾವ್

ಚಿತ್ರದುರ್ಗದವರಾದ ಶ್ರೀ ಹೆಚ್.ಜಿ. ಸೋಮಶೇಖರರಾವ್ ಅವರಿಗೀಗ ಅರವತ್ತೈದು ವರ್ಷ. ಹಾಲಿ ಬೆಂಗಳೂರು ವಾಸ. ವಿದ್ಯಾರ್ಥಿ ಕಾಲದಲ್ಲೇ ಅಪ್ರತಿಮ ಪ್ರತಿಭೆ ಇವರದು. ಪ್ರತಿ ಪರೀಕ್ಷೆಯಲ್ಲೂ ಪದಕ ಗಳಿಕೆ. ಆಗಿನಿಂದಲೇ ರಂಗಭೂಮಿಯತ್ತ ಒಲವು. ನಟನಾಗಿ ರಂಗ ಪ್ರವೇಶಿಸಿದಾಗ ವಯಸ್ಸು ಹನ್ನೊಂದು. ಕಾಲೇಜಿನಲ್ಲೂ ಅದರದೇ ಗುಂಗು. ಅಲ್ಲೂ ನಾಟಕಗಳ ಸಹವಾಸ. ಆಗ 300 ನಾಟಕಗಳಲ್ಲಿ ನಟನೆ. ರಂಗ ಪೋಷಕರಾದ ಮೈಸೂರಿನ ಮಹಾರಾಜರ ಸಮ್ಮುಖದಲ್ಲಿ 'ವೀರ ಮದಕರಿ ನಾಯಕ' ಪ್ರಯೋಗ. ಪ್ರಶಂಸೆಯ ಸರ ಮಾಲೆ. ಮೈಸೂರು ವಿಶ್ವ ವಿದ್ಯಾಲಯದಲ್ಲಿ "ನಟಶ್ರೀ" ಎಂದೇ ಹೆಗ್ಗಳಿಕೆ. ಆಕಾಶವಾಣಿಯಲ್ಲಿ ನಾಟಕ ನಿರ್ದೇಶನ ಮತ್ತು ನಟನೆ. ಮುಂದೆ ಅವರ ಪ್ರತಿ ಉಸಿರಲ್ಲೂ ನಾಟಕ. ಬಿ.ವಿ. ಕಾರಂತ, ಚಂದ್ರಶೇಖರ ಕಂಬಾರ, ಪ್ರಸನ್ನ ಮುಂತಾದವರ ನಿರ್ದೇಶನದಲ್ಲಿ ಪಾತ್ರ, ಜೋಕುಮಾರಸ್ವಾಮಿ, ಸಂಗ್ಯಾ-ಬಾಳ್ಯಾ, ಕದಡಿದ ನೀರು ನಾಟಕಗಳಲ್ಲಿ ಪ್ರಮುಖ ಪಾತ್ರ, ಜನ ಮೆಚ್ಚಿದ ನಟನೆ. ಸೋಮಶೇಖರರಾವ್ ಪಾತ್ರ ಮಾಡುತ್ತಾರೆ ಎಂದರೆ ಸಾಕು. ಇಡೀ ತಂಡಕ್ಕೇ ಹಮ್ಮು, ನಟನೆಗೆ ವಿಪುಲ ಅವಕಾಶ. ಅಷ್ಟೇ ಸಾಧನೆ. ನಾಟಕದಿಂದ ಚಿತ್ರರಂಗಕ್ಕೆ ದಾಪುಗಾಲು. ಅಲ್ಲೂ ಎಲ್ಲರಿಗೂ ಬೇಕು. ಅರವತ್ತೂರು ಚಿತ್ರಗಳಲ್ಲಿ ಅಭಿನಯ.

ಸಾವಿತ್ರಿ, ಹರಕೆಯ ಕುರಿ, ಆಕ್ಸಿಡೆಂಟ್, ಮಿಥಿಲೆಯ ಸೀತೆಯರು, ಗೀಜಗನ ಗೂಡು ಮುಂತಾದ ಚಿತ್ರಗಳಲ್ಲಿ ವಿಶೇಷ ಪಾತ್ರ, ಅಲ್ಲಿನ ಅಭಿನಯಕ್ಕಾಗಿ ಪ್ರಶಸ್ತಿಗಳ ಮಹಾಪೂರ. ಹರಕೆಯ ಕುರಿ ಚಿತ್ರದ ಅಭಿನಯಕ್ಕಾಗಿ ಸರಕಾರದ ಶ್ರೇಷ್ಠ ಪೋಷಕ ನಟ ಪ್ರಶಸ್ತಿ, ರಾವ್ ಕಿರಿದೆರೆಗೂ ಅಪರಿಚಿತರಲ್ಲ ಹಲವು ಕಥಾಸರಣಿಯಲ್ಲಿ ಮಿಂಚಿದ ಅಭಿನಯ. ಎಪ್ಪತ್ತಕ್ಕೂ ಮಿಕ್ಕಿದ ಧಾರಾವಾಹಿಗಳು. ಎಲ್ಲೆಲ್ಲೂ ಮೆರೆದ ನಟನಾ ಕೌಶಲ್ಯ, ಪಿ. ಲಂಕೇಶರೊಂದಿಗೆ ನಿರ್ದೇಶನದ ಅನುಭವ. ಹಲವು ನಾಟಕಗಳಿಗೆ ಸೂತ್ರಧಾರಿ. ಸಂಘಟನೆಯಲ್ಲೂ ಆಸಕ್ತಿ, ಅಭಿನಯ ತರಂಗ ನಾಟಕ ಶಾಲೆ, ಸನ್ಮಿತ್ರ ಸಂಘ, ಕೆನರಾ ಬ್ಯಾಂಕ್ ಕನ್ನಡ ಸಂಘ ಇತ್ಯಾದಿಗಳಲ್ಲಿ ಸೇವೆ. ಕನ್ನಡ ಕೆಲಸಕ್ಕೆ ಸದಾ ಮುಂದು. ಎಲ್ಲೆಲ್ಲಿದ್ದರೋ ಅಲ್ಲಿ ಪ್ರತಿಭೆಯ ಬಿತ್ತನೆ. ರಂಗಭೂಮಿಯಲ್ಲಿ ಈ ರಾವ್ ಬಲು ಬಹದ್ದೂರರು.

---



## ಶಂಭುಲಿಂಗ ವಾಲದೊಡ್ಡಿ

ಬೀದರ ಜಿಲ್ಲೆಯ ವಾಲದೊಡ್ಡಿ ಶ್ರೀ ಶಂಭುಲಿಂಗ ಅವರ ಊರು. ಇದೀಗ ನಲವತ್ತೆರಡರ ಹರೆಯ. ಬೀದರಿನ ಸಮತಾ ಪ್ರೌಢ ಶಾಲೆಯಲ್ಲಿ ಮುಖ್ಯಾಧ್ಯಾಪಕರು. ಅಲ್ಲಿದ್ದೇ ರಂಗಭೂಮಿಯತ್ತ ಚಾಚಿದ ಕೈ. ಬೀದರ ಸಮುದಾಯದ ಕ್ರಿಯಾಶೀಲ ಕಲಾವಿದ. ಆ ಮೂಲಕ ರಂಗೂಮಿಯ ಹಲವು ಮಗ್ಗುಲುಗಳ ಪರಿಚಯ. ಹಾಡುಗಾರಿಕೆಯಲ್ಲಿ ಅಪಾರ ಒಲವು. ಕಂಚಿನ ಕಂಠದ ಶಂಭುಲಿಂಗ ಇಲ್ಲದ ನಾಟಕಗಳೇ ಇಲ್ಲ. ತಬರನ ಕಥೆ, ಕೋಟೆ,

ಮಾರೀಚನ ಬಂಧುಗಳು, ಪಂಚಮ, ಅಲಿ ಬಾಬಾ, ಕೆರೆಗೆ ಹಾರ, ನಾಗ ಮಂಡಲ, ಅಗ್ನಿ ಮತ್ತು ಮಳೆ, ಜಲ ಹೀಗೆ ಅನೇಕ ನಾಟಕಗಳು. ಎಲ್ಲಕ್ಕೂ ಇವರೇ ಮುಖ್ಯ ಗಾಯಕರು. ಮತ್ತೆ ಕೆಲವು ನಾಟಕಗಳಲ್ಲಿ ನಟರೂ ಹೌದು. ಎಲ್ಲಿದ್ದರೂ ಎದ್ದು ಕಾಣುವ ಪ್ರತಿಭೆ. ಜನ ಪರ ಕಾಳಜಿಯತ್ತ ಕಲಾವಿದನ ಓಟ. ಹಲವಾರು ಚಳುವಳಿ–ಕಾರ್ಯಕ್ರಮಕ್ಕಾಗಿ ಈ ಪ್ರತಿಭೆಯ ಬಳಕೆ. ಸಮುದಾಯ, ನಾಟಕ ಅಕಾಡೆಮಿ ರಾಷ್ಟ್ರೀಯ ನಾಟಕ ಶಾಲೆ, ವಾರ್ತಾ ಮತ್ತು ಪ್ರಚಾರ ಇಲಾಖೆ, ಭಾರತೀಯ ಕುಟುಂಬ ಯೋಜನಾ ಸಂಘ, ಬೀದರ ಸಾಕ್ಷರತಾ ಸಮಿತಿ ಮುಂತಾದವುಗಳ ರಂಗಶಿಬಿರಗಳಲ್ಲಿ ಭಾಗಿ. ಅಲ್ಲಿ ಇವರಿಲ್ಲದ ರಂಗ ಕ್ರಿಯೆಗಳೇ ಇಲ್ಲ.

ಬಿ.ವಿ. ಕಾರಂತ, ಬಿ. ಜಯಶ್ರೀ ಅವರ ಶಿಬಿರಗಳಲ್ಲಿ ಹಾಡುಗಾರನಾಗಿ, ನಟನಾಗಿ ಭಾಗಿ. ವಾರ್ತಾ ಇಲಾಖೆಯ ಪರವಾಗಿ ನಿರಂತರ ಜನ ಜಾಗೃತಿ. ಅದಕ್ಕಾಗಿ ಜನರ ಬಳಿ ನಾಟಕಗಳು, ಜಾನಪದ ಕಾರ್ಯಕ್ರಮಗಳ ಸರಮಾಲೆ. ಕುಟುಂಬ ಯೋಜನಾ ಸಂಘದ ಅಡಿಯಲ್ಲಿ ಲೆಕ್ಕವಿಲ್ಲದ ಸಾಂಸ್ಕೃತಿಕ ಕಾರ್ಯಕ್ರಮಗಳು. ಬೀದರ ಸಾಕ್ಷರತಾ ಸಮಿತಿಯ ನಾಟಕ ವಿಭಾಗದ ಮುಖ್ಯಸ್ಥ. ಅಲ್ಲಿ ಅನೇಕ ನಾಟಕಗಳಿಗೆ ನಿರ್ದೇಶನ. ಆ ಕುರಿತ ಧ್ವನಿ ಸುರುಳಿಯ ಮುಖ್ಯ ಗಾಯಕ. ಅಕ್ಷರ ಗೀತೆ, ಎಚ್ಚರಾಗು, ಕೆರೆಗೆ ಹಾರ ಗಳಲ್ಲಿ ಹಾಡು, ಹಾಗೂ ಕಿರು ಚಿತ್ರಗಳಲ್ಲಿ ಅಭಿನಯ. ಆರು ಜಾತಾಗಳಲ್ಲಿ ಸಂಚಾರಿ. ಡಿ.ಪಿ.ಇ.ಪಿ. ಕಾರ್ಯಕ್ರಮದಲ್ಲೂ ದುಡಿತ. ಆಕಾಶ ಬುಟ್ಟಿ, ಆಡೋ ಕೂಸಿಗೊಂದು ಕಾಡೋ ಕೂಸು, ಹೊಸ ಮೇಡಂ ಮುಂತಾದ ಬೀದೀ ನಾಟಕಗಳ ನಿರ್ದೇಶನ. ಬೀದರ ಸಂಸ್ಕೃತಿ ಇಲಾಖೆಯ ಕಾರ್ಯಕ್ರಮಗಳಲ್ಲೂ ಸಕ್ರಿಯ. ದೆಹಲಿಯವರೆಗೂ ಪ್ರತಿಭಾ ಯಾತ್ರೆ, ನೆಹರೂ ಕೇಂದ್ರ ಮೂಲಕ ಬಾಂಗ್ಲಾ–ಭೂತಾನಗಳಿಗೂ ಸಾಂಸ್ಕೃತಿಕ ಭೇಟಿ. ನಿರಂತರ ದುಡಿಮೆಯ ಹಿಂದೆ ಪ್ರಶಸ್ತಿಗಳ ಸಾಲು ಇದ್ದೇ ಇರುತ್ತದೆ. ಇವರನ್ನು ಹುಡುಕಿ ಬಂದ ಪ್ರಶಸ್ತಿಗಳೂ ಅನೇಕ. ದೆಹಲಿಯ ದಲಿತ ಸಾಹಿತ್ಯ ಅಕಾಡೆಮಿಯಿಂದ ಡಾ. ಅಂಬೇಡ್ಕರ್ ಫೆಲೋಶಿಪ್, 98ರ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಈಗಾಗಲೇ ಸಂದಿವೆ.

---



## ಎಂ. ಶಿವಕುಮಾರ

ರಂಗ ಹವ್ಯಾಸಿಗಳಿಗೆ ಉದ್ಯೋಗ ಬದುಕಿನ ಅನಿವಾರ್ಯತೆ. ಎಲ್ಲಿದ್ದರೂ ಅವರದು ರಂಗ ಚಿಂತನ. ಅಂಥ ಗುಂಗು ಹಿಡಿಸಿಕೊಂಡವರಲ್ಲಿ ಶ್ರೀ ತುಮಕೂರು ಶಿವಕುಮಾರ ಒಬ್ಬರು. ಸಾಹಿತ್ಯ–ಸಂಸ್ಕೃತಿಗೆ ಹೊಸ ಅರ್ಥ ನೀಡುವ ಚಡಪಡಿಕೆ ಇವರದು. ತನ್ನಿಮಿತ್ತ ಇವರಿದ್ದಲ್ಲೇ ರಂಗ ಮಂಡಲ. ಬೆಂಗಳೂರು ಸರಕಾರಿ ಮುದ್ರಣಾಲಯದಲ್ಲಿ ಲೆಕ್ಕ ಬರೆಯುವ ಉದ್ಯೋಗ. ವೃತ್ತಿಯ ಜತೆ ರಂಗ ಜೀವನದ ನಂಟು. ಧಾರವಾಡದಲ್ಲಿದ್ದಾಗ ಆ ಅನುಭವದ ವಿಸ್ತಾರ. ಅಲ್ಲಿನ ಡೆರ್ ಅಸೋಸಿಯೇಶನ್ ಹಾಗೂ ರಂಗ ಚೇತನಗಳ್ಲಿ ನಟನಾಗಿ, ನಿರ್ದೇಶಕನಾಗಿ ದುಡಿಮೆ. ರಂಗ ಸಂಘಟನೆಯಲ್ಲಿ ಪಳಗಿದ ಕೈ.

ಧಾರವಾಡದ ರಂಗ ಪ್ರಿಯರಲ್ಲಿ ರಂಗುಗೊಂಡ ಹೆಸರು. ಅಲ್ಲಿದ್ದಾಗಲೇ ಆಕಾಶವಾಣಿ ನಾಟಕಗಳಿಗೆ ಪ್ರವೇಶ. ಹಲವಾರು ನಾಟಕಗಳು ಬಿತ್ತರ. ಬೆಂಗಳೂರಿಗೆ ವರ್ಗವಾದ ಮೇಲೆ ತಾವಿದ್ದ ಕಡೆಯಲ್ಲೇ ರಂಗ ನಿರ್ಮಾಣ. ರಂಗ ಸಂಸ್ಕೃತಿಯ ನಿರ್ಮಾಣದತ್ತ ಒಲವು. ಮಕ್ಕಳ ನಾಟಕಗಳಲ್ಲಿ ವಿಶೇಷ ಆಸಕ್ತಿ, ಮಕ್ಕಳ ದಂಡಿನಲ್ಲಿ ನಾಟಕದ ಹಬ್ಬ ಸೃಷ್ಟಿ. ಪರಿಣಾಮವಾಗಿ ವರ್ಷದಲ್ಲಿ ಮೂರ್‍ನಾಲ್ಕು ಮಕ್ಕಳ ಶಿಬಿರಗಳು ಮತ್ತು ನಾಟಕಗಳು. ರಂಗ ಚೇತನ, ರಂಗ ಸಾಧನ ತಂಡಗಳ ಉದಯ. ಎಲ್ಲಕ್ಕೂ ಇವರದೇ ನೇತೃತ್ವ. ತಾವೇ ಬರೆದು ನಿರ್ದೇಶಿಸಿದ ನಾಟಕಗಳು ಹಲವಾರು. ಕೆಂಗೇರಿಯ ಮಕ್ಕಳಿಂದ ನಗರದಲ್ಲಿ ರಂಗ ಸುದ್ದಿ. ಹುಚ್ಚು ಕುದುರೆ, ಸಾಕ್ಷಿಕಲ್ಲು, ಹಾವು ಹರಿದಾಡುತಾವ, ಕಾಡಿನಲ್ಲಿ ಕಥೆ, ಹೆಡ್ಡಾಯಣ, ಕಿನ್ನರಿ ಕುದುರೆ, ಗಿಣಿ ಹುಡುಗಿ, ಹುಯ್ಯೋ ಮಳೆರಾಯ... ಹೀಗೆ ನಾಟಕಗಳ ಸಾಲು. ದೊಡ್ಡವರ ನಾಟಕ. ಸಣ್ಣವರ ನಾಟಕ. ಎಲ್ಲಕ್ಕೂ ಇವರದೇ ಸೂತ್ರ.

ಹಲವು ತಂಡದಲ್ಲಿದ್ದು ಹಲವು ರೀತಿಯಲ್ಲಿ ಅಭಿನಯ. ಎಲ್ಲರ ಪ್ರೀತಿಗೆ ಪಾತ್ರ. ಗುಣಮುಖ. ತಲೆದಂಡ, ಮಹಾಚೈತ್ರ, ಇತಿಹಾಸ ಚಕ್ರ, ಸದ್ದು ವಿಚಾರಣೆ ನಡೆಯುತ್ತಿದೆ... ಮುಂತಾದ ನಾಟಕಗಳಲ್ಲಿ ಭಾಗಿ. ದೂರದರ್ಶನಗಳಲ್ಲೂ ಇವರ ಕಾರ್ಯಕ್ರಮ. ಪದರುಗಳು, ಪುಟ್ಟ ಮಾದ, ಬೈಲ ನಂ. 11, ನೇಣು ತುದಿಯ ಗೊಂಬೆ ಇವು ಬರೆದ ನಾಟಕಗಳು. ಮಕ್ಕಳಿಗೆ ಶಿವಕುಮಾರ ನಿರ್ದೇಶಿಸಿದ ಶಿಬಿರಗಳು 20ಕ್ಕೂ ಹೆಚ್ಚು.



## ಚಿನ್ನಪ್ಪ ಸಿ.ಆರ್. (ಪದ್ಮಣ್ಣ ಶ್ರಮ ಪ್ರಶಸ್ತಿ)

ರೈತಾಪಿ ಕುಟುಂಬದಲ್ಲಿ ಜನಿಸಿದ ಶ್ರೀ ಚಿನ್ನಪ್ಪ ಸಿ.ಆರ್. ಅವರಿಗೆ 65 ವರ್ಷಗಳು. ಕೋಲಾರ ತಾಲ್ಲೂಕಿನ ಚುಂಚದೇನಹಳ್ಳಿ ಹುಟ್ಟಿದೂರು. ಆಸಕ್ತಿ ಚಿಗುರೊಡೆದ ನೆಲ. ಊರಲ್ಲಿ ಪೌರಾಣಿಕ ನಾಟಕಗಳ ಭರಾಟೆ ಪ್ರತಿ ವರ್ಷ ಆಟ್ಟವೇರುತ್ತಿದ್ದ ಕುರುಕ್ಷೇತ್ರ, ಕೃಷ್ಣಗಾರುಡಿ, ರಾಮಾಯಣಗಳು ಬೀರಿದ ಪ್ರಭಾವ ಅಷ್ಟಿಷ್ಟಲ್ಲ. ಕಲಾಸಕ್ತಿಗೆ ಅಂತರಂಗದಲ್ಲೇ ಮೂರ್ತ ರೂಪ. ಚಿನ್ನಪ್ಪ ಆಟ್ಟದ ಮಾತು ಹೇಳುತ್ತ ಗದ್ದೆಗಳಲ್ಲಿ ತಿರುಗಿದ ದಿನಗಳಿಗೆ ಲೆಕ್ಕವಿಲ್ಲ. ಕೃಷ್ಣಗಾರುಡಿಯಲ್ಲಿ ನಕುಲನ ಪಾತ್ರ. ಅದೇ ಮೊದಲ ರಂಗಪ್ರವೇಶ. ಉತ್ಸಾಹ ಬುಗ್ಗೆಯಾಯಿತು. ಅಲ್ಲಿಂದ ಬಣ್ಣ ಹಚ್ಚದ ವರ್ಷಗಳಿಲ್ಲ. ರಾಮ, ಕೃಷ್ಣ, ಲಕ್ಷ್ಮಣ, ಆಂಜನೇಯ, ಭೀಮ ಪಾತ್ರಗಳಲ್ಲೇ ತಲ್ಲೀನ. ಯಾವ ಆಟವಿದ್ದರೂ ಸರಿ. ಪಾತ್ರಕ್ಕೆ ಸಿದ್ಧ. ಕಲಾವಿದನಿಗೆ ಪಾತ್ರಗಳ ನಿರಂತರತೆಯಿರುವುದಿಲ್ಲ. ಅಂತ ಸಂದರ್ಭದಲ್ಲಿ ವಿಶಿಷ್ಟ ರೀತಿಯ ಸೇವೆ ಆತನಿಂದ. ಚಿನ್ನಪ್ಪನವರು ಅದಕ್ಕೂ ಹೊರತಲ್ಲ. ನಾಟಕಮಾಡುವವರಿಗೆ ಸದಾ ಚಾಚಿದ ರಂಗಹಸ್ತ.

ಪರದೆ, ಧ್ವನಿಯಂತ್ರ, ಬೆಳಕುಗಳ ಸರಬರಾಜಿನ ಕೆಲಸ. ಮೇಕಪ್ ಕಲಾವಿದನಾಗಿಯೂ ಬೇಡಿಕೆ. ಅಲ್ಲೆಲ್ಲಾ ಶಿಸ್ತು ಬದ್ಧತೆ. ಇದ್ದ ಸ್ವಲ್ಪ ಜಮೀನು ಮಾರಾಟ. ಬಂದ ಹಣದಲ್ಲಿ ಬರೆಸಿದ್ದು ನಾಟಕದ ಸೀನರಿ. ಶ್ರೀ ಮಾರುತಿ ಡ್ರಾಮಾ ಸೀನರಿ ಅಂಡ್ ಡ್ರೆಸ್ ಸಪ್ಲಾಯರ್ಸ್ ಎಂಬ ಬೋರ್ಡು. ಇವರೇ ಮಾಲೀಕ. ಹಳ್ಳಿಗಾಡಿನ ನಾಟಕಗಳಿಗೆ ಇವರದೇ ನಿರ್ಮಾಣ ವ್ಯವಸ್ಥೆ. ಇವರ ಬಣ್ಣದ ಗಾಡಿಯ ಗಾಲಿ ಉರುಳದ ಹಳ್ಳಿಯ ದಾರಿಗಳೇ ಇಲ್ಲ. ಪೌರಾಣಿಕ, ಐತಿಹಾಸಿಕ, ಸಮಾಜಿಕ ಯಾವ ನಾಟಕವೇ ಇರಲಿ. ಅದಕ್ಕೆ ಹೊಂದುವ ಡ್ರೆಸ್, ಸೀನರಿ, ಇವರಲ್ಲಿ ಸಿದ್ಧ. ಝಗಝಗಿಸುವ ಸೀನರಿ. ಅದನ್ನು ನೋಡಲೆಂದೇ ಬರುವ ಪ್ರೇಕ್ಷಕರು. ಹಲವು ಸಲ ಇವರಿಗೆ ಶೀಳ್ಳೆ ಕೊಟ್ಟೇ ತಾಲೀಮು ಆರಂಭಿಸುತ್ತಿದ್ದ ದಿನಗಳು. ಈಗಲೂ ಎಲ್ಲರಿಗೂ ಇವರದೇ ರಂಗ ನಿರ್ಮಾಣ. ಮಾಗಿದ ವಯಸ್ಸಿಗೆ ದಣಿವಿಲ್ಲ. ಅವಶ್ಯ ಬಿದ್ದರೆ ಪಾತ್ರ ಮಾಡುತ್ತ ಸೀನರಿ ಗಾಡಿಯೊಂದಿಗೆ ಈಗಲೂ ತಪ್ಪದೆ ಪಯಣ. ಇವರ ರಂಗನಿರ್ಮಾಣದ ಕಸರತ್ತಿಗೆ ತಲೆದೂಗದವರಿಲ್ಲ. ಇವರಿದ್ದಾರೆಂದೇ ಎಷ್ಟೋ ಹವ್ಯಾಸಿಗಳಿಗೆ ನೆಮ್ಮದಿ. 35 ವರ್ಷಗಳ ಅವಿರತ ರಂಗ ಸೇವೆ ಇವರದು. ಆಟ್ಟ ಕಟ್ಟುವ ಆಟ್ಟಕ್ಕೆ ಸೀನರಿ ಕಟ್ಟುವ, ಸೀನರಿಗೆ ಬೆಳಕು ಬಿಡುವ ಚಿನ್ನಪ್ಪ ನಮ್ಮ ರಂಗಭೂಮಿಯ ಬಂಗಾರದ ಮನುಷ್ಯ.



## ಎಚ್. ಫಕೀರಪ್ಪ

ಹೂವಿನಹಡಗಲಿ ತಾಲ್ಲೂಕಿನ ಹೊಳಲು ಗ್ರಾಮದ ಶ್ರೀ ಫಕೀರಪ್ಪನವರಿಗೆ ಈಗ ವಯಸ್ಸು ಅರವತ್ತೊಂದು. ಬಡತನವೇ ಮನೆಯಲ್ಲಿದ್ದ ಭಾಗ್ಯ. ದಲಿತ ಕುಟುಂಬದಲ್ಲಿ ಜನಿಸಿದರೂ ಆ ಕಾಲದ ಲೋಯರ್ ಸೆಕೆಂಡರಿವರೆಗೂ ಶಾಲೆಯಲ್ಲಿ ಹಾಜರಾತಿ. ಹದಿಹರೆಯದಲ್ಲೇ ಹಾಡಿನ ಸರದಾರ. ಇಂಗಳಗುಂದಿ ಸಿದ್ದಪ್ಪ ಗವಾಯಿಗಳಿಗೆ ಇವರ ಮೇಲೆ ಎಲ್ಲಿಲ್ಲದ ಭರವಸೆ. ಶಿಷ್ಯರಾಗಿ ಇವರ ಸ್ವೀಕಾರ. ದೋಣಗಾವಿ ಸಂಗೀತ ಶಾಲೆಯಲ್ಲಿ ಸರಿಗಮ.

ಕೊನೆಗೆ ಅಲ್ಲಿದ್ದೇ ಉತ್ತರಾದಿ ಸಂಗೀತದಲ್ಲಿ ಪರಿಣಿತ. ಜತೆಗೆ ಸೀಮೆಯಲ್ಲಿ ಇವರ ಗಾನಸುಧೆಯ ಊಣಬಡಿತ. ಸುತ್ತಲೆಲ್ಲ ಸಂಗೀತ ಪ್ರಚಾರದ ಸಾರಥ್ಯ. ಗ್ರಾಮಾಂತರದಲ್ಲಿ ಅನೇಕರಿಗೆ ಸಂಗೀತ ಶಿಕ್ಷಣ. ಹೆಗಲ ಮೇಲೆ ಹಾರ್ಮೋನಿಯಂ ಇಟ್ಟುಕೊಂಡು ಕಾಲ್ನಡಿಗೆಯಲ್ಲಿ ಅಲೆದಾಟ. ಎಲ್ಲೆಲ್ಲೂ ಸರಿಗಮ ಪದದ ಝೇಂಕಾರ. ಸಂಗೀತ ಮಾಸ್ತರರು ಎಂಬ ಅಯಾಚಿತ ಬಿರುದು.

ಕ್ರಮೇಣ ನಾಟಕದಲ್ಲಿ ಆಸಕ್ತಿ. ನಾಟಕಕ್ಕೆ ಸಂಗೀತವೇ ಪ್ರಾಧಾನ್ಯ. ಅದೇ ಕಣ್ಣು–ಮೂಗು. ಫಕೀರಪ್ಪ ಸಹಜವಾಗೇ ರಂಗಭೂಮಿಯ ತೆಕ್ಕೆಗೆ. ಸಂಗೀತದ ಮಾಸ್ತರರು ಈಗ ನಾಟಕದ ಮಾಸ್ತರರಾಗಿ ಪರಿವರ್ತನೆ. ಅಲ್ಲಿಂದ ಇವರಿಗೆ ಅಪಾರ ಬೇಡಿಕೆ. ನೂರಾರು ಹವ್ಯಾಸಿ ಕಲಾ ತಂಡಗಳಿಗೆ ನಾಟಕದ ಮಾಸ್ತರರು. ಗ್ರಾಮೀಣದಲ್ಲಿ ಹೆಚ್ಚಿದ ಗೌರವಾದರ. ಹೇಮರಡ್ಡಿ ಮಲ್ಲಮ್ಮ, ಸಂಪೂರ್ಣ ರಾಮಾಯಣ, ಜಲಂಧರ ಹೀಗೆ 150ಕ್ಕೂ ಹೆಚ್ಚು ನಾಟಕಗಳ ನಿರ್ಮಾಣ. ನೂರಾರು ಹಳ್ಳಿಗರಿಗೆ ಪ್ರಾಮಾಣಿಕ ರಂಗ ಶಿಕ್ಷಣ. 1974ರಿಂದ ಸಿರಿಗೆರೆಯ ತರಳಬಾಳು ಕಲಾಸಂಘದಲ್ಲಿ ಸಂಗೀತ ಶಿಕ್ಷಕರಾಗಿ ಸೇವೆ. ಜಗದ್ಗುರು ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳಿಂದ ಜೀವನಕ್ಕೆ ಒಂದು ನೆಲೆ. ಸಿರಿಗೆರೆಯಲ್ಲಿ ಇವರಿಂದ ಸಂಗೀತದ ಮಹಾಪ್ರಸಾದ. ಅಲ್ಲಿಯ ನಾಟಕಗಳಿಗೆ, ಅಕ್ಕನ ಬಳಗದ ಸದಸ್ಯರಿಗೆ, ಮಕ್ಕಳಿಗೆ ಸಂಗೀತದ ದಾಸೋಹ. ಅದರ ಜತೆಗೆ ಸುತ್ತಲಿನ ಹವ್ಯಾಸಿಗರಿಗೂ ಸಂಗೀತದ ಸಹಾಯ. ಶ್ರೀ ಫಕೀರಪ್ಪನವರು ನಾಟಕಕಾರರೂ ಹೌದು. ಎಲ್ಲಾ ಜನಾಂಗದವರು ಆರಾಧಿಸುವ ದಲಿತರ ದೇವತೆ ಶ್ರೀದಂಡಿನ ದುರುಗಮ್ಮ ಮಹಾತ್ಮೆ ನಾಟಕ ರಚಿಸಿ ಹರಪನಹಳ್ಳಿ ತಾಲ್ಲೂಕು ಅರಸಿಕೆರೆಯ ದಲಿತ ಸಮೂಹದಲ್ಲಿ ನಿರ್ದೇಶನಮಾಡಿ ಅದರ 300 ಪ್ರಯೋಗಗಳಿಗೆ ಕಾರಣರಾಗಿದ್ದು ಅತ್ಯಂತ ಅದ್ಭುತ ಸಾಧನೆ. ಹಲವು ಪೌರಾಣಿಕ ಪ್ರಸಂಗಗಳನ್ನು ರಚಿಸಿದ್ದಾರೆ. ಆಕಾಶವಾಣಿಯಲ್ಲೂ ಇವರಿಂದ ನಿರಂತರ ಗಾನಸುಧೆಯ ಪ್ರವಾಹ. ಪ್ರತಿಭೆಯ ಪ್ರಸಾರ.



## ಎನ್. ಗುರುನಾಥ್

ಚಳ್ಳಕೆರೆ ತಾಲ್ಲೂಕು ಪರಶುರಾಮಪುರದ ಶ್ರೀ ಎನ್. ಗುರುನಾಥ್ ಹುಟ್ಟಿದ್ದು 1932ರಲ್ಲಿ. ತಂದೆ ಯಕ್ಷಗಾನ ಕಲಾವಿದರು. ಅವರೇ ರಂಗ ಭವಿಷ್ಯಕ್ಕೆ ಪ್ರೇರಕರು. ಬಾಲ್ಯದಲ್ಲಿ ಸಂಗೀತ, ಭಜನೆಗಳಲ್ಲಿ ಆಸಕ್ತಿ. ಶಾಲೆಯಲ್ಲಿ ಐತಿಹಾಸಿಕ, ಪೌರಾಣಿಕ, ಸಾಮಾಜಿಕ ನಾಟಕಗಳಲ್ಲಿ ಭಾಗಿ. ಪ್ರೇಕ್ಷಕರಿಂದ ಮೆಚ್ಚುಗೆ. ಆಗ ಸ್ತ್ರೀ ಪಾತ್ರಗಳೇ ಇವರ ಆಕರ್ಷಣೆ. ಮನೆಯಲ್ಲಿ ಮುಗಿಬಿದ್ದ ಬಡತನ. ಹೆಚ್ಚಿನ ಓದು ಅಸಾಧ್ಯ. ಹೆಣ್ಣು ಪಾತ್ರದಲ್ಲಿ ಆಗಲೇ ಸಿಕ್ಕ ಪ್ರಸಿದ್ಧಿ. ರಂಗ ನಟ ಹರ್ತಿಕೋಟೆಯ ಸುಬ್ಬಣ್ಣನವರಲ್ಲಿ ಸಂಗೀತ ಸಾಧನೆ. ನಾಟ್ಯದೊಡನೆ ಸಂಗೀತದ ಸಮ್ಮಿಳನ. ಪರಿಪೂರ್ಣ ಗುರುನಾಥರು. ಚಿತ್ರದುರ್ಗದಲ್ಲಿ ಕ್ಯಾಂಪ್ ಹಾಕಿದ್ದ ವೀರಣ್ಣನವರಿಂದ ಕರೆ. ಎಲ್ಲ ಗಮನಿಸುತ್ತಿದ್ದ ವ್ಯಕ್ತಿ ನಾಟಕ ಕಂಪನಿಗಳಿಂದ ಆಹ್ವಾನ. ಮೈಸೂರಿನ ಸರ್ವೋದಯ ಕಂಪನಿ, ಮಹದೇವಸ್ವಾಮಿ ನಾಟ್ಯ ಸಂಘ, ಬಳ್ಳಾರಿ ಲಲಿತಮ್ಮ ಕಂಪನಿ, ಓಂಕಾರೇಶ್ವರ ನಾಟಕ ಮಂಡಳಿ, ಹಿರಣ್ಣಯ್ಯ ಮಿತ್ರ ಮಂಡಳಿ ಮುಂತಾದವುಗಳು.

ಕುರುಕ್ಷೇತ್ರ, ರಕ್ತ ರಾತ್ರಿ, ವೀರ ಎಚ್ಚಮನಾಯಕ, ರಾಜಾ ಮದಕರಿ ನಾಯಕ, ಹೇಮರೆಡ್ಡಿ ಮಲ್ಲಮ್ಮ, ಟಿಪ್ಪು ಸುಲ್ತಾನ್ ಅಭಿನಯಿಸಿದ ಪ್ರಮುಖ ನಾಟಕಗಳು. ಆ ಕಾಲದ ಪ್ರಸಿದ್ಧ ರಂಗ ನಟರ ಗಮನ ಇವರ ಮೇಲೆ. ಹೆಸರಾಂತ ಚಿತ್ರನಟರಾದ ಉದಯ ಕುಮಾರ್, ನರಸಿಂಹ ರಾಜು, ಸುದರ್ಶನ್, ಮುಸುರಿ, ಕಲ್ಯಾಣ್ ಕುಮಾರ್, ಕಲ್ಪನಾ, ರೇವತಿ, ಶೈಲಶ್ರೀ, ರಂಗನಟ ಓಬಳೇಶ್ವರ ಮುಂತಾದವರೊಂದಿಗೆ ಅಭಿನಯ. ಹಲವು ಕಂಪನಿಗಳಲ್ಲಿ ಹಲವು ರೀತಿಯ ಸವಾಲುಗಳು. ಎಲ್ಲವನ್ನೂ ನೀಗಿಸುವ ನಟನಾ ಪ್ರತಿಭೆಗೆ ತಲೆದೂಗದವರಿಲ್ಲ. ಎಲ್ಲೆಲ್ಲೂ ದೊರೆತ ಆದರ ಕಂಪನಿಗಳಲ್ಲಿ ಕೆಲಸವಿಲ್ಲದಾಗ ಹಳ್ಳಿಗಳಲ್ಲಿ ನಾಟಕದ ಗುರು. ಚಿತ್ರದುರ್ಗ, ತುಮಕೂರು, ಬಳ್ಳಾರಿ ಜಿಲ್ಲೆಗಳಲ್ಲಿ

ಸಂಚಾರ. ನೂರಾರು ಗ್ರಾಮೀಣರಿಗೆ ನೀಡಿದ ರಂಗ ಶಿಕ್ಷಣ. ಐತಿಹಾಸಿಕ, ಪೌರಾಣಿಕ, ಸಾಮಾಜಿಕ ನಾಟಕಗಳ ಮಾಸ್ತರರಾಗಿ ಹೆಸರು. ಗ್ರಾಮೀಣ ಕಲಾವಿದರ ಪ್ರೀತಿಯ ಗುರು. ಕಳೆದ ಐವತ್ತು ವರ್ಷಗಳಿಂದ ಬಿಡದ ಸಾರ್ಥಕ ರಂಗಸೇವೆ. ಈಗಲೂ ಗ್ರಾಮೀಣ ಭಾಗದಲ್ಲಿ ಇವರದೇ ಹೆಸರು. ನಾಟಕದ ಮಾಸ್ತರರೆಂದೇ ಖ್ಯಾತಿ.

---



## ಎ.ಎಸ್. ಗುಂಡಪ್ಪ

ಕೊಳ್ಳೇಗಾಲದ ಶ್ರೀ ಎ.ಎಸ್. ಗುಂಡಪ್ಪನವರು ಈಗ ಅರವತ್ತರ ಬಾಗಿಲಲ್ಲಿ. ಹುಟ್ಟಿದ್ದು ಚಾಮರಾಜ ಜಿಲ್ಲೆಯ ಯಳಂದೂರು ತಾಲ್ಲೂಕಿನ ಅಗರಹಳ್ಳಿ, ತಂದೆ ಶ್ರೀನಿವಾಸ ಉಪಾಧ್ಯಾಯ. ಬಾಲ್ಯದಿಂದಲೇ ತಬಲಾ ಮತ್ತು ಮೃದಂಗ ವಾದನದಲ್ಲಿ ಆಸಕ್ತಿ, ತಂದೆಯಿಂದಲೂ ಪ್ರೋತ್ಸಾಹ. ಶಾಸ್ತ್ರಬದ್ಧವಾಗಿ ಕಲಿಕೆ. ತಂಜಾವೂರಿನ ರಾಜ ಐಯ್ಯರ್ ಇವರಿಗೆ ಗುರು. ಅದರಲ್ಲಿ ಪ್ರತಿಭಾಪೂರ್ಣ.

ನಂತರ ನಾಟಕದತ್ತ ಒಲವು. ಸಂಗೀತ ಪ್ರಾಧಾನ್ಯವಿದ್ದ ಕಾಲದಲ್ಲಿ ಇವರ ಪ್ರವೇಶ ರಂಗಭೂಮಿಗೆ ಅನುಕೂಲ. ನಾಟಕದ ಭಾವ–ಧ್ವನಿಗೆ ಸಂಗೀತದ ಮೆರುಗು. ಜನರಿಗೆ ಇವರ ಬಗ್ಗೆ ವಿಶೇಷ ಒಲವು. ನಾಟಕ ರಂಡಗಳವರಿಗೂ ಇವರ ಬಗ್ಗೆ ಆಸಕ್ತಿ, ಸುತ್ತಲಿನ ರಂಗ ತಂಡಗಳಿಂದ ಬಿಡದ ಕರೆ. ಇವರಿಲ್ಲದೆ ಪ್ರಯೋಗಗಳೇ ಇಲ್ಲ. ಮೃದಂಗ ಹಾಗೂ ತಬಲಾಗಳ ಮೋಡಿಯಿಂದ ಪ್ರಯೋಗಗಳಿಗೆ ಸಾರ್ಥಕತೆ.

ಶ್ರೀ ಆರ್. ಗುರುರಾಜುಲು ನಾಯ್ಡು ಅವರ 'ಅರುಣಕುಮಾರ ಮಿತ್ರ ಮಂಡಲಿ' ನಾಟಕ ಸಂಸ್ಥೆಯಲ್ಲಿ ತಬಲಾವಾದಕರಾಗಿ ಅನೇಕ ವರ್ಷ ಸೇವೆ. ಹಾಗೂ ಅವರ ಹರಿಕಥಾ ಕಾರ್ಯಕ್ರಮದಲ್ಲೂ ಸಮರ್ಪಕ ಸಾಥಿ. ಬೇರೆ ವಿದ್ವಾಂಸರ ಕಾರ್ಯಕ್ರಮದಲ್ಲೂ ತಬಲಾ ಸಹಕಾರ. ಇವರಿದ್ದರೇ ಅಂಥವರ ಕಾರ್ಯಕ್ರಮಕ್ಕೆ ಹೊಳಪು. ಗುಂಡಪ್ಪನವರಿಗೆ ತಬಲಾ ಬಿಟ್ಟರೆ ಬೇರೆ ಆಸ್ತಿ ಇಲ್ಲ. ಬದುಕಿನ ಗಾಲಿಗಳೆಂದರೆ ತಬಲಾ ಮತ್ತು ಮೃದಂಗ. ಅವು ನುಡಿಯುವವರೆಗೆ ಇವರ ಬದುಕಿನ ಗಾಡಿಗೆ ನಡೆ. ಅಭಿಮಾನಿಗಳ ಮೇಲೆ ಕಲಾವಿದನಿಗೆ ಎಂದೆಂದೂ ಭರವಸೆ. ಕಲಾವಿದನನ್ನು ಕೈ ಹಿಡಿದು ನಡೆಸುವಾತನೇ ರಂಗಾಭಿಮಾನಿ. ಶ್ರೀ ಗುಂಡಪ್ಪನವರಿಗೆ ಭರವಸೆ ಇಂದಿಗೂ.

---



## ಗುರುಮೂರ್ತಿ ವರದಾಮೂಲ

ಸಾಗರ ತಾಲ್ಲೂಕಿನ ವರದಾಮೂಲ ಶ್ರೀ ಗುರುಮೂರ್ತಿಯವರ ಊರು. ಸಂಸ್ಕೃತ ಪರೀಕ್ಷೆ 'ಕಾವ್ಯ'ದಲ್ಲಿ ತೇರ್ಗಡೆ. ಜೀವನದಲ್ಲಿ ಆರಿಸಿಕೊಂಡದ್ದು ರಂಗಭೂಮಿ. 1978ರಿಂದ ಹವ್ಯಾಸಿ ರಂಗಕ್ಕೆ ತಂತ್ರಜ್ಞನಾಗಿ ಪರಿಚಯ. ರಂಗಧ್ವನಿ, ಬೆಳಕಿನ ವ್ಯವಸ್ಥೆ, ಪ್ರಸಾಧನ ಇತ್ಯಾದಿಗಳಲ್ಲಿ ಆಸಕ್ತಿಯ ಬೆಳವಣಿಗೆ. ನೀನಾಸಂ ಜನಸ್ಪಂದನ ಕಾರ್ಯಕ್ರಮದಲ್ಲಿ ಭಾಗಿ. ಹಾಗೆಯೇ ತಿರುಗಾಟದಲ್ಲೂ ಪಾಲುದಾರಿಕೆ. ನಟನೆಯೂ ಸೇರಿದಂತೆ ತಂತ್ರಜ್ಞನಾಗಿ, ನಿರ್ವಾಹಕನಾಗಿ ಆಸಕ್ತಿಯ ವಿಸ್ತಾರ. ಕೆಳದಿಯ ಭಾರತಿ ಕಲಾವಿದರು, ಚಿಣ್ಣ–ಬಣ್ಣ ಮುಂತಾದ ತಂಡಗಳಲ್ಲಿಯೂ ಕೆಲಸ. ಅಲ್ಲಿಯೂ ಮನ ಮೆಚ್ಚುವ ನೇಪಥ್ಯ. ಅಲ್ಲದೇ ಮಂಚಿಕೇರಿ, ಮಂಡ್ಯ, ಇಳಕಲ್ ಮೊದಲಾದೆಡೆ ರಂಗ ಶಿಬಿರಗಳಲ್ಲಿ ಪಾಲು. ಮಕ್ಕಳ ರಂಗ ಕ್ಷೇತ್ರದಲ್ಲೂ ಕುದುರಿದ ಆಸಕ್ತಿ, ಆ ಕ್ಷೇತ್ರದ ಎಂಭತ್ತಕ್ಕೂ ಹೆಚ್ಚು ನಾಟಕಗಳಿಗೆ ತಂತ್ರಜ್ಞ.

ಸಾಂಬಶಿವ ಪ್ರಹಸನ, ಸಹ್ಯಾದ್ರಿ ಕಾಂಡ, ಭಾಸ ಭಾರತ, ಮಂಟಲ, ಅರ್ಧೇ ಅಧೂರೇ, ಅಹಲ್ಯೆ, ಗೋಕುಲ ನಿರ್ಗಮನ, ಮಣ್ಣಿನ ಬಂಡಿ, ಹೂ ಹುಡುಗಿ, ತದ್ರೂಪಿ, ಉದ್ಭವ, ಸಂಗ್ಯಾ–ಬಾಳ್ಯಾ, ಸೆಜುವಾನ ನಗರದ ಸಾಧ್ವಿ...

ಹೀಗೆ ನಾಟಕಗಳ ಪಟ್ಟಿ, ಅದು ಇನ್ನಷ್ಟು ಉದ್ದ, ಎಲ್ಲಕ್ಕೂ ವಸ್ತ್ರ ವಿನ್ಯಾಸ, ರಂಗಸಜ್ಜಿಕೆ, ಪರಿಕರ, ಬೆಳಕು, ಪ್ರಸಾಧನ, ಇತ್ಯಾದಿ. ಪ್ರಸ್ತುತ ಇವರ ನೆಲೆ ವರದಾಮೂಲ. ಕೃಷಿ ಮನೆತನದ ಉದ್ಯೋಗ. ಏನಿದ್ದರೂ ರಂಗಭೂಮಿ ಬೆಂಬಿಡದ ಆಸಕ್ತಿ, ಕನ್ನಡ ರಂಗಭೂಮಿ ಕುರಿತ ಶೈಕ್ಷಣಿಕ ವಿಡಿಯೋ ಚಿತ್ರ ಮಾಲಿಕೆಯ ತಯಾರಿ. ಅದು ನೀನಾಸಂನ ಹೊಸ ಯೋಜನೆ. ಈಗ ಗುರುಮೂರ್ತಿಯವರು ಅದರಲ್ಲಿ ಮಗ್ನ. 45ರ ಮಾಗಿದ ವಯಸ್ಸಿನ ಶ್ರೀಯುತರು ರಂಗ ನೇಪಥ್ಯದ ಆಸ್ತಿ.

## ಕೇಶವ (ಕೇಶವಲು)

ಬೆಂಗಳೂರಿನ ಶ್ರೀ ಕೇಶವ ರವೀಂದ್ರ ಕಲಾಕ್ಷೇತ್ರದಲ್ಲಿ ಥಟ್ಟನೆ ಸಿಗುವ ಅಪ್ಪಟ ರಂಗಕರ್ಮಿ. ಬೆಂಗಳೂರಿನ ಬಹುಪಾಲು ರಂಗ ತಂಡಗಳಿಗೆ ಈ ಕೇಶವನೆಂದರೆ ಅಚ್ಚುಮೆಚ್ಚು. ರಿಹರ್ಸಲ್‌ನಿಂದ ಪ್ರಯೋಗದವರೆಗೆ ಕೇಶವರ ಹಾಜರಾತಿ ಬಹುಮುಖ್ಯ. ನೇಪಥ್ಯದ ಯಾವುದೇ ಕೆಲಸವಿರಲಿ. ತುದಿಗಾಲಿನ ನಿಲುವು. ಕಲಾಕ್ಷೇತ್ರದ ಒಳ-ಹೊರಮೈಗಳ ಕಾಳಜಿ ಇವರಿಗೆ. ಅದು ಕಲಾ ದೇಗುಲವೆಂದೇ ಭಾವನೆ. ಮೊದಲ ಕಾಲು ಸಮುದಾಯ ತಂಡದ ಪ್ರಾಂಗಣದಲ್ಲಿ. ಹೇಳಿದ್ದು ಮಾಡುವ ಶ್ರದ್ಧೆ. ಪ್ರಸನ್ನ ನಿರ್ದೇಶಿಸಿದ 'ತಾಯಿ' ನಾಟಕದ ರಂಗ ಸಜ್ಜಿಕೆಯಲ್ಲಿ ಶ್ರಮದ ಪಾಲು. ನಟನೆಗಿಂತ ಹಿಂದಣ ಕೆಲಸದಲ್ಲೇ ಹೆಚ್ಚಿನ ಆಸಕ್ತಿ.

ನಾಗಾಭರಣರ ಸಂಗ್ಯಾ-ಬಾಳ್ಯಾ, ನಾಗೇಶರ ಸಂದರ್ಭ, ಕದಡಿದ ನೀರು, ಜೋಮನ ದುಡಿ, ಸಿ.ಆರ್. ಸಿಂಹರ ತುಘಲಕ, ಒಥೆಲೋ, ಕಾಕನಕೋಟೆ, ಬಿ.ವಿ. ಕಾರಂತರ ಜೋಕುಮಾರಸ್ವಾಮಿ, ಸತ್ತವರ ನೆರಳು, ಬಾದರದಿನ್ನಿಯವರ ಸಿಂಗಾರೆವ್ವ, ವೆಂಕಟಸುಬ್ಬಯ್ಯನವರ ಉತ್ತಮ ಪ್ರಭುತ್ವ ಲೊಳಲೊಟ್ಟೆ, ಎಲ್. ಕೃಷ್ಣಪ್ಪನವರ ಸೂರ್ಯಶಿಕಾರಿ, ಸಿ.ಜಿ.ಕೆ. ಯವರ ಒಡಲಾಳ, ಯಯಾತಿ ಈ ಎಲ್ಲ ನಾಟಕಗಳಲ್ಲಿ ರಂಗ ಸಜ್ಜಿಕೆಯಲ್ಲಿ ಸಂಪೂರ್ಣ ಭಾಗಿ. ಮೈ ಮರೆವ ದುಡಿತ. ಅಷ್ಟೇ ನಿಷ್ಠೆ, ಹಾಗಾಗಿ ಎಲ್ಲ ನಿರ್ದೇಶಕರಿಗೂ ಕೇಶವ ಬೇಕು.

ಬೆಂಗಳೂರಿನ ಖ್ಯಾತ ರಂಗ ತಂಡಗಳಾದ ಸಮುದಾಯ, ಬೆನಕ, ಮಲ್ಲಿಕಾ, ನಟರಂಗ, ಪ್ರಯೋಗ ರಂಗ, ರಂಗ ನಿರಂತರ, ರಂಗ ಸಂಪದ ಹೀಗೆ ಎಲ್ಲ ತಂಡಗಳಲ್ಲಿ ಕೆಲಸ. ರಂಗ ಸಜ್ಜಿಕೆಯ ಎಲ್ಲ ಹಂತದಲ್ಲೂ ಮನಗೆಲ್ಲುವ ಕಾಯಕ. ಕಳೆದ 25 ವರ್ಷಗಳಿಂದ ಅದರಲ್ಲೇ ಸಂತೃಪ್ತಿ. ಮಿತಭಾಷಿಯಾದ ಕೇಶವನಂಥ ನೇಪಥ್ಯಗಾರರು ರಂಗಭೂಮಿಗೆ ಅನಿವಾರ್ಯ.

## ಕೃಷ್ಣನಾಯ್ಕ ಎ.

ದಕ್ಷಿಣ ಕನ್ನಡ ಜಿಲ್ಲೆಯ ಪಾಂಡೇಶ್ವರದಲ್ಲಿ ಜನಿಸಿದ ಶ್ರೀ ಎ. ಕೃಷ್ಣನಾಯ್ಕರದು 76ರ ಪ್ರಾಯ. ಅಷ್ಟು ವಸಂತಗಳು ದೇಹಕ್ಕೆ ಮಾತ್ರ, ಉತ್ಸಾಹಕ್ಕೆ ಇನ್ನೂ ಮಾಗಿದ ಹರೆಯ. ನಾಟಕ ನೇಪಥ್ಯ ಕಲೆಯಲ್ಲಿ ಇವರದು ದೊಡ್ಡ ಹೆಸರು. ಇವರ ಕೈ ಚಳಕವಿಲ್ಲದ ನಾಟಕಗಳೇ ಜಿಲ್ಲೆಯಲ್ಲಿಲ್ಲ. ಕಲಾ ಗುರು ಕೃಷ್ಣ ಬೋಳಾರರ ಮೆಚ್ಚಿನ ವಿದ್ಯಾರ್ಥಿ. ಆರಂಭದಲ್ಲೇ ಬೆಳೆವ ಸಿರಿ ಮೊಳಕೆಯಲ್ಲಿ. ಮದರಾಸು ಸರಕಾರದ ಕಲಾ ಪರೀಕ್ಷೆಯಲ್ಲಿ ಪ್ರಥಮ. ಕಣ್ಣು ಕುಕ್ಕಿದ ಪ್ರಾವೀಣ್ಯತೆ. 20ರ ಹರೆಯದಲ್ಲಿ ಕಲಾ ಶಿಕ್ಷಕನಾಗಿ ವೃತ್ತಿಯ ಆರಂಭ. ಸುರತ್ಕಲ್ ಕಲಾ ಶಾಲೆಯಲ್ಲೂ ಸೇವೆ. ಮುಂದೆ ಕಾಸಿಯಾ ಹೈಸ್ಕೂಲಿನಲ್ಲಿ ನಿವೃತ್ತಿಯವರೆಗೆ ಕಲಾ ಗುರು. ಸಾವಿರಾರು ವಿದ್ಯಾರ್ಥಿಗಳಿಗೆ ಕಲಾಧಾರೆ. ಅವರು ಮೆಚ್ಚಿನ ಮಾರ್ಗದರ್ಶಿ. ಇದರ ಜತೆಗೇ ನಾಟಕದ ನೇಪಥ್ಯದತ್ತ

ಒಲವು. ಬಹುದಿನದ ಆಸಕ್ತಿಯ ಮೊಳಕೆ. ಗಮನ ಸೆಳೆದದ್ದು ಪೌರಾಣಿಕ, ಐತಿಹಾಸಿಕ ನಾಟಕಗಳ ದೃಶ್ಯಗಳು. ಕುಂಚದ ಮೂಲಕ ಅವುಗಳಿಗೆ ಆಕಾರ. ಪರದೆಗಳ ನಿರ್ಮಾಣ. ನೋಡುಗರ ಕಣ್ಮನ ಸೆಳೆವ ಸೃಷ್ಟಿ. ಪ್ರೋತ್ಸಾಹದ ಸುರಿಮಳೆ. ಅದರಲ್ಲೇ ಗಾಢ ತಲ್ಲೀನತೆ. ನೂರಾರು ನಾಟಕಗಳಿಗೆ ನೇಪಥ್ಯ ಕಲೆಯ ಗೌರವ. ಅದರಿಂದ ಪ್ರದರ್ಶನಗಳ ಗುಣಮಟ್ಟ ಏರಿಕೆ. ಅದರಿಂದ ಶ್ರೀ ನಾಯ್ಕರಿಗೆ ಸಹಜ ಅಭಿನಂದನೆ. ಹಾರ – ತುರಾಯಿಗಳು. ಸಮ್ಮಾನಗಳು. ಕಲಾವಿದರಿಗೆ ತಕ್ಕ ಗೌರವ.

ಕೆಲ ದಿನ ಮುಂಬಯಿಯ ಕಲಾ ಸ್ಟುಡಿಯೋದಲ್ಲಿ ನೇಪಥ್ಯ ಕೆಲಸ. ಅಲ್ಲಿ ಹಲವು ಚಲನಚಿತ್ರಗಳಿಗೆ ಕಲಾ ಸಾರಥ್ಯ. ಕೊಂಕಣಿ, ತುಳು ಚಿತ್ರಗಳಿಗೂ ಇವರ ಕಲೆಯ ಬಳಕೆ. ಕರ್ನಾಟಕದಾಚೆಯೂ ಇವರ ಪ್ರಸಿದ್ಧಿ. ಗುಜರಾತ್, ಮಹಾರಾಷ್ಟ್ರ, ತಮಿಳುನಾಡು, ಕೇರಳಗಳಲ್ಲಿ ಕಲೆಯ ಆಕರ್ಷಣೆ. ಅಲ್ಲಿಯ ನಾಟಕಗಳಿಗೂ ನೇಪಥ್ಯದ ಕೆಲಸ. ಪ್ರಸಾಧನ, ಪರದೆ, ಪೋಸ್ಟರು, ಬ್ಯಾನರುಗಳಿಗೆ ಶ್ರೀ ಕೃಷ್ಣರು ಬೇಕು. ಕರಾವಳಿಯ ಹಲವು ದೇವಸ್ಥಾನಗಳಲ್ಲಿ ಪೌರಾಣಿಕ ವರ್ಣಚಿತ್ರಗಳ ರಚನೆ. ಈಗಲೂ ಅವು ಅಲ್ಲಿ ಜನರ ಆಕರ್ಷಣೆ.

---



## ಪಿ.ಟಿ. ಕೃಷ್ಣಮೂರ್ತಿ

ಕೋಲಾರದ ಶ್ರೀ ಪಿ.ಟಿ. ಕೃಷ್ಣಮೂರ್ತಿಯವರಿಗೆ ಐವತ್ನಾಲ್ಕು ವರ್ಷ. ಪದವೀಧರರಾದ ಇವರಿಗೆ ರಂಗಭೂಮಿ ಆರಂಭದ ಆಸಕ್ತಿ, ಹಲವರಿಗೆ ನಟನೆ, ಕೆಲವರಿಗೆ ಸಂಘಟನೆಗಳಲ್ಲಿ ವಿಶೇಷತೆ. ಪಿ.ಟಿ.ಕೆ. ಯವರಿಗೆ ಎರಡರಲ್ಲೂ ಸಮಾನ ಬಯಕೆ. ಹಾಗಾಗಿ ನಟಿಸಿದ ನಾಟಕಗಳಿಗೆ, ಸಂಘಟಿಸಿದ ಕಾರ್ಯಕ್ರಮಗಳಿಗೆ ಲೆಕ್ಕವಿಲ್ಲ. ಇದಕ್ಕೆಲ್ಲ ಒಳಗಿನ ರಂಗ ತುಡಿತವೇ ಕಾರಣ. ಎಲ್ಲಕ್ಕೂ ಗಳಿಸಿದ ಅನುಭವಗಳ ಹಿನ್ನೆಲೆ. ರಂಗದ ಹಿಂದಣ ಕೆಲಸಕ್ಕಾಗಿಯೇ ಅನೇಕ ಶಿಬಿರಗಳಲ್ಲಿ ತರಬೇತು. ಕೋಲಾರದಲ್ಲಿ ನಡೆದ ಬಹುಪಾಲು ಶಿಬಿರಗಳ ನೇಪಥ್ಯ ಸೂತ್ರ, ಬಹುಮುಖಿ ವ್ಯವಸ್ಥಾಪನ.

ಆರಂಭದಲ್ಲಿ ಬೆಂಗಳೂರಿನ ಅಭಿನಯ ತರಂಗ ಪಾಠಶಾಲೆಯಲ್ಲಿ ಒಂದು ವರ್ಷ ಕಲಿಕೆ. ಸಂಸ್ಕೃತಿಯ ಪರಿಚಯಕ್ಕಾಗಿ ಹೆಗ್ಗೋಡಿಗೂ ಪಯಣ. ಅಲ್ಲಿ ಚಲನಚಿತ್ರದ ಒಳ ಹೊರಗನ್ನು ಅರಿಯುವ ಬಯಕೆ. ಆ ಕಾರಣದಿಂದ ಹಲವಾರು ಕಡೆ ಓಡಾಟ, ಚರ್ಚೆ. ವಿಡಿಯೋ ಚಿತ್ರಗಳಲ್ಲಿ ನಾಯಕನಾಗಿ ಅಭಿನಯ. ಎಲ್ಲರ ಗಮನ ಇವರ ಮೇಲೆ. ಕೃಷ್ಣ ಲೀಲೆ, ಕುರುಕ್ಷೇತ್ರ, ಕಳಿಂಗ ಯುದ್ಧ, ಮದುವೆ ದಲ್ಲಾಳಿ, ಪಂಗನಾಮ, ಎಚ್ಚಮ ನಾಯಕ... ಇವು ಪ್ರಮುಖ. ನಾಟಕ ಸ್ಪರ್ಧೆಗಳಲ್ಲೂ ಆಸಕ್ತಿ, ಅದರಲ್ಲೂ ಏಕಪಾತ್ರಾಭಿನಯದಲ್ಲಿ ಹೆಚ್ಚಿದ ಒಲವು. ರಾಜ್ಯದಾದ್ಯಂತ ನಡೆಯುವ ಸ್ಪರ್ಧೆಗಳಲ್ಲಿ ಭಾಗಿ. ಬಹುಮಾನ ಗಳಿಕೆ. ಜನರಿಂದ ಶಿಳ್ಳೆ, ಚಪ್ಪಾಳೆ. ಅಭಿನಯದಿಂದ ಸಂಘಟನೆಯತ್ತ ವಾಲುವಿಕೆ. ಹೊರಗಿನ ತಂಡಗಳನ್ನು ಕರೆತಂದು ಆಡಿಸುವ ಪ್ರವೃತ್ತಿ. ಊರ ಜನ ಹೊರಗಿನ ನಾಟಕ ನೋಡುವ ಸಂದರ್ಭ ಸೃಷ್ಟಿ. ಎಲ್ಲಕ್ಕೂ ಇವರ ಅಪ್ರತಿಮ ಪ್ರಯತ್ನ.

ಬೆಂಗಳೂರು ಹಾಗೂ ಇನ್ನಿತರ ಕಡೆಯ ನಾಟಕ ತಂಡಗಳು ಕೋಲಾರಕ್ಕೆ. ಸಾಹಿತ್ಯದಲ್ಲೂ ಗಂಭೀರ ಆಸಕ್ತಿ. ಜಿಲ್ಲೆಯ ಕ.ಸಾ.ಪ. ಅಧ್ಯಕ್ಷರಾಗಿ ಸೇವೆ. ಇವರ ಬಹುಮುಖಿ ಪ್ರತಿಭೆಯನ್ನು ಪರಿಚಯಿಸಿದ ಪತ್ರಿಕೆಗಳೂ ಅನೇಕ. ರಂಗ ಸಂಘಟನೆಗೆ ತಮ್ಮನ್ನೇ ತೇಯ್ದುಕೊಂಡ ಗಾಢ ಅನುಭವ ಈ ಪಿ.ಟಿ.ಕೆ.ಯದು.

---



## ಲಾಡ್ಲೇಸಾಬ ಹುಸೇನಸಾಬ ಅಮೀನಗಡ

ಶ್ರೀ ಲಾಡ್ಲೇಸಾಬರಿಗೆ ಈಗ 85 ವರ್ಷ. ಆದರೆ ವೃದ್ಧಾಪ್ಯವಿಲ್ಲ. ರಂಗಭೂಮಿಯೆಂದರೆ ಪುಟಿಯುವ ಉತ್ಸಾಹ. ಅದಕ್ಕೆ 50 ವರ್ಷಗಳ ಸುದೀರ್ಘ ರಂಗಜೀವನ ಕಾರಣ. ಬದುಕಿನ ಉಸಿರೆಲ್ಲ ರಂಗಭೂಮಿಯಲ್ಲಿ. ಹಗಲು ರಾತ್ರಿಗಳು ಸರಿದದ್ದೇ ಅಲ್ಲಿ. ಊರು ಬಾಗಿಲುಕೋಟೆ ಜಿಲ್ಲೆಯ ಶಿರಸೂರು. 14ನೇ ವಯಸ್ಸಿಗೆ ವೃತ್ತಿ ರಂಗಭೂಮಿ ಪ್ರವೇಶ. 1928ರಲ್ಲಿ ಇಲಕಲ್ ಶ್ರೀ ಎಸ್.ಆರ್. ಕಂಠಿಯವರ ಕಂಪನಿ. ಅದೇ ಮೊದಲ ಹೆಜ್ಜೆ. ಬಹುತೇಕ ರಂಗಶಿಕ್ಷಣ ಅಲ್ಲಿಯೇ. ನಟರ, ನಾಟಕಗಳ, ರಂಗ ಸಂಘಟಕರ, ನೇಪಥ್ಯಗಾರರ ಸಹವಾಸ ಅಲ್ಲಿ. ಎಲ್ಲರಿಂದ ಒಂದೊಂದರ ಕಲಿಕೆ. ಪರದೆ ಎಳೆಯುವ–ಕಟ್ಟುವ ಕಾಯಕ ಮೊದಲು. ನಟನೆ ನಂತರದು. ಆಮೇಲೆ 'ಬನ್ನಿರಿ...... ನೋಡಿರಿ....' ಎಂದು ಬೀದಿ ಸುತ್ತುವ ಕೆಲಸ. ಬಿಡುವಾದಾಗ ಹಿರಿಯ ನಟರ ಚಾಕರಿ. ಎಲ್ಲದರಲ್ಲೂ ಮುಂದು. ಶ್ರದ್ಧೆ. ಆರು ವರ್ಷದ ನಂತರ ಕಂಪನಿ ಬದಲು. ಶಿರಹಟ್ಟಿ ವೆಂಕೋಬರಾಯರ ಕಂಪನಿ. ಅಲ್ಲಿ ಹೆಚ್ಚಿನವು ಸ್ತ್ರೀ ಪಾತ್ರಗಳು. ಆಕರ್ಷಕ ಮೈಕಟ್ಟು, ಹೊಂದಿಕೊಳ್ಳುವ ಶಾರೀರ. ರಂಗಮಂಚದಲ್ಲಿ ಥೇಟ್ ಹೆಣ್ಣು. ಅಷ್ಟೇ ಸಹಜ ಅಭಿನಯ. ನೋಡಿದವರೆಲ್ಲ ಮೋಹಿತರು.

ವೃತ್ತಿಯಲ್ಲಿ ಏರು–ಪೇರು. ಅದರಿಂದ ಕಂಪನಿಗಳ ಬದಲು. ಅಥಣಿಯ ಭಾಗ್ಯೋದಯ ಕಂಪನಿ, ಗೋಕಾರ ಕಂಪನಿ, ಸೀತಾರಾಮ ಶಾಸ್ತ್ರಿ ಕಂಪನಿ, ಸ್ನೇಹ ವಿಲಾಸ ನಾಟ್ಯ ಸಂಘ, ಶಳಕಲ್ ವೆಂಕರೆಡ್ಡಿಯವರ ಕಂಪನಿ, ನಟರಾಜ ನಾಟ್ಯ ಸಂಘ ಇವೆಲ್ಲರ ಜತೆ ದುರ್ಗಾದಾಸರೊಡನೆ ಸ್ವಂತ ಕಂಪನಿ. ಅನಂತರ ಗುಡಿಗೇರಿ ಕಂಪನಿ ಮತ್ತು ಸುಳ್ಳದ ಶ್ರೀಶೈಲ ನಾಟ್ಯ ಸಂಘದಲ್ಲೂ ಹಲವು ದಿನ. ಎಲ್ಲೇ ಇರಲಿ. ಲಾಡ್ಲೇಸಾಬರ ಮೇಲೆ ಎಲ್ಲರಿಗೂ ಅಕ್ಕರತೆ. ಸ್ನೇಹ ಜೀವಿ. ಮೃದು ಸ್ವಭಾವ. ಆದರೆ ರಂಗದ ಮೇಲೆ ಬಂದರೆ ಹುಲಿ. ಕಂಪನೀ ಮಾಲೀಕರಿಗಂತೂ ಬೆಲ್ಲದ ಅಚ್ಚು. ಖರೇ ಲಾಡ್ಲೆ. ಜನ ಪ್ರಶಂಸೆ ಕೊಟ್ಟರು. ಪ್ರಶಸ್ತಿ ಇದುವರೆಗೆ ಬಂದಿರಲಿಲ್ಲ. ಸಾರ್ಥಕ ರಂಗ ಜೀವನದಲ್ಲಿ ಈಗ ಸಂತೋಷದ ನಗೆಯ ಗೆರೆ. ಗುರುತಿಸುವ ಜನರಿದ್ದಾರೆಂಬ ಸಮಾಧಾನ.

---



## ಕೆ. ನಂಜಪ್ಪ

ವೃತ್ತಿ ರಂಗಭೂಮಿಯ ಹಲವು ಸ್ತರಗಳಲ್ಲಿ ದುಡಿದ ಶ್ರೀ ಕೆ. ನಂಜಪ್ಪನವರು ಹುಟ್ಟಿದ್ದು ಮೈಸೂರಿನಲ್ಲಿ. ಅರವತ್ತು ವರ್ಷದ ಶ್ರೀಯುತರು ರಂಗ ಶಿಲ್ಪಿಯೆಂದೇ ಪ್ರಸಿದ್ಧರು. ಓದಿದ್ದು ಕೇವಲ 5ನೇ ಪ್ರಾಥಮಿಕ ತರಗತಿ. ರಂಗಶಾಲೆಗೆ ಇವರ ಪ್ರಥಮ ಪ್ರಾಶಸ್ತ್ಯ. 16ನೇ ವಯಸ್ಸಿನಲ್ಲಿ ಸುಬ್ಬಯ್ಯ ನಾಯ್ಡು ಕಂಪನಿಯಲ್ಲಿ ಪಾದಾರ್ಪಣೆ. ಅಲ್ಲಿ ಒಂದು ವರ್ಷ. ನಂತರ ಗುಬ್ಬಿ ಕಂಪನಿಯತ್ತ ಕಾಲು. ವೀರಣ್ಣನವರ ಅಕ್ಕರೆಯ ಕರೆ. ಅಲ್ಲಿಯ ಮೊದಲ ಕೆಲಸ ರಂಗ ವ್ಯವಸ್ಥಾಪನ. ಅನಿವಾರ್ಯವಾದಾಗ ಪಾತ್ರಾಭಿನಯ. ಸ್ಟೇಜ್ ಮ್ಯಾನೇಜರ್ ಎಂದೇ ಗೌರವ. ವೀರಣ್ಣನವರ ವಿಶ್ವಾಸಕ್ಕೆ ಪಾತ್ರ. ಈ ಸಂದರ್ಭದಲ್ಲಿ ರಾಜ್ಯದಾದ್ಯಂತ ಪ್ರವಾಸ. ಹದಿನೈದು ವರ್ಷ ಅಲ್ಲಿ ಸೇವೆ. ಕಂಪನಿಯ ಎಲ್ಲ ವಿಭಾಗಗಳಲ್ಲೂ ಅನುಭವ ಗಳಿಕೆ.

ತದನಂತರ ಮೈಸೂರಿಗೆ ವಾಪಸ್ಸು. ಕನ್ನಡ ಥೇಟರ್ಸ್ ಎಂಬ ಹೊಸ ಕಂಪನಿಯಲ್ಲಿ ಪ್ರವೇಶ. ಆ ಕಂಪನಿಯ ಮ್ಯಾನೇಜರ್ ಆಗಿ ಕೆಲಸ. ಇವರ ಜಾಣ್ಮೆಯಿಂದಾಗಿ ಕಂಪನಿಯಲ್ಲಿ ಅದ್ಭುರಿ ಪ್ರಯೋಗಗಳು. ಹಣ ಗಳಿಕೆಯಲ್ಲೂ ಮಿಗಿಲು. ಕಂಪನಿಗೆ ಏರು ಮುಖ. ಅಷ್ಟರಲ್ಲಿ ಬೆಂಗಳೂರಿನ ಹಿರಣ್ಣಯ್ಯ ಮಿತ್ರ ಮಂಡಳಿಯಿಂದ ಕರೆ. ಆ ಕಂಪನಿಯ ವ್ಯವಸ್ಥಾಪಕರಾಗಲು ಆಹ್ವಾನ. ಆರು ತಿಂಗಳು ಮಾತ್ರ ಅಲ್ಲಿ. ಮುಂದೆ ಸುಳ್ಳದ ಶ್ರೀಶೈಲ ನಾಟಕ ಮಂಡಳಿ ಪ್ರವೇಶ. ಅಲ್ಲಿಯೂ ಕಂಪನಿಯ ಮ್ಯಾನೇಜರ್. ಸಿಂಧೂರ ಲಕ್ಷ್ಮಣ, ಕಿತ್ತೂರು ಚೆನ್ನಮ್ಮ ಮತ್ತು ಶರಣ ಬಸವೇಶ್ವರ ನಾಟಕಗಳ ತಯಾರಿ. ಅವು ಆ ಕಾಲದ ದಾಖಲೆಯ ಪ್ರಯೋಗಗಳು. ಮುಂದೆ ಕೊಪ್ಪಳದ ಗವಿಸಿದ್ಧೇಶ್ವರ ನಾಟಕ

ಮಂಡಳಿಯಲ್ಲೂ ವ್ಯವಸ್ಥಾಪಕ. ಮತ್ತೆ ಹಿರಣ್ಣಯ್ಯನವರ ಕರೆ. ಅಲ್ಲಿಯೂ ಸ್ಟೇಜ್ ಮ್ಯಾನೇಜರ್. 1964ರಲ್ಲಿ ಸ್ವಂತ ಕಂಪನಿ ಸ್ಥಾಪನೆ. ಜನಪ್ರಿಯ ಚಲನಚಿತ್ರ ನಟರನ್ನು ಕರೆದು ರಂಗ ಹತ್ತಿಸಿದ ಶ್ರೇಯಸ್ಸು, ಎರಡು ವರ್ಷದ ನಂತರ ಶ್ರೀಕಂಠೇಶ್ವರ ಕೃಪಾಪೋಷಿತ ನಾಟಕ ಮಂಡಳಿಯಲ್ಲಿ ವ್ಯವಸ್ಥಾಪಕ ಜವಾಬ್ದಾರಿ. ಇಂದಿಗೂ ಅಲ್ಲಿಯೇ ಬಿಡದ ಸೇವೆ. ಎಲ್ಲ ಜಿಲ್ಲೆಗಳಲ್ಲೂ ರಂಗಯಾತ್ರೆ, ಅಭಿಮಾನಿಗಳಿಂದ ಗೌರವ ಸಂದಾಯ. 'ರಂಗ ರೂವಾರಿ' 'ರಂಗ ಶಿಲ್ಪಿ' 'ರಂಗ ಕಲಾ ರತ್ನ' ಎಂಬ ಬಿರುದಾಂಕಿತರು.



## ಎಸ್. ನಾಗರಾಜ

ಕೆಲವರಿಗೆ ರಂಗಭೂಮಿ ಆಸಕ್ತಿ, ಕೆಲವರಿಗೆ ಅದು ಜೀವ. ಹಾಗೇ ಕೆಲವರು ಬೆಳಕಲ್ಲಿ ಪ್ರತಿಭೆಯ ಚೆಂಡುಗಳು. ಇನ್ನು ಕೆಲವರು ಕತ್ತಲಿನ ಸೂರ್ಯರು. ನೇಪಥ್ಯದಲ್ಲೇ ಅವರ ಜೀವಮಾನ. ಶ್ರೀ ಎಸ್. ನಾಗರಾಜ ಕತ್ತಲೆಯೊಳಗಿದ್ದೂ ಬೆಳಕು ಚೆಲ್ಲುವ ಮೋಡಿಗಾರ. ಸಹಜ ಕಲಾವಿದರಂತೆ ಇವರೂ ಬಾಲ್ಯದಲ್ಲಿಯೇ ರಂಗಭೂಮಿಯ ಸೆಳೆತಕ್ಕೆ ಈಡಾದವರು. ಹದಿನೇಳರ ಹರೆಯದಲ್ಲಿ ಹಿರಣ್ಣಯ್ಯ ಮಿತ್ರ ಮಂಡಳಿಯಲ್ಲಿ ಕೆಲಸ. ರಂಗ ಸಜ್ಜಿಕೆಯ ಹುಡುಗನೆಂದೇ ಪ್ರಿಯ. ಗಳು ಕಟ್ಟುವುದು, ಪರದೆ ಸರಿಸುವುದು, ನಟರ ಮುಖಕ್ಕೆ ಬೆಳಕು ಚೆಲ್ಲುವುದು. ಎಲ್ಲವೂ ಕತ್ತಲಿನ ಗರ್ಭದಿಂದ. ಇಂಥವರು ಕತ್ತಲಿನಲ್ಲಿರುವುದರಿಂದಲೇ ಹಲವರ ಮುಖ ಬೆಳಕಿನಲ್ಲಿ. ಹೆಸರು – ಮುಖ ಎಲ್ಲ ಅನಾಮಧೇಯ. ಹಾಗಿದ್ದರೂ ನಾಗರಾಜರ ರಂಗನಿಷ್ಠೆ ಅದ್ಭುತ. ಬೆಳಕಿನ ಹಿಂದಣ ಎಲ್ಲ ಕೆಲಸಗಳಲ್ಲೂ ಶಿಸ್ತು. ಹಿರಣ್ಣಯ್ಯ ಕಂಪನಿಯಲ್ಲಿ ಕಲಿತದ್ದು ಹೆಚ್ಚು. ಉತ್ಸಾಹಕ್ಕೆ ಅಲ್ಲಿ ಮೀಟುಗೋಲು. ಮುಂದೆ ಕಾರ್ಯರಂಗ ಬದಲು. ಪ್ರಭಾತ ಕಲಾವಿದರ ಗುಂಪಿಗೆ ಸೇರ್ಪಡೆ. ಅಲ್ಲಿಯೂ ನೇಪಥ್ಯ ಸೇವೆ. ಪ್ರತಿ ಹಂತಗಳೂ ಅಲ್ಲಿ ಪ್ರತಿಭೆಗೆ ಸವಾಲು. ಬೆಳಕಿನ ಲೋಕದ ಸೃಷ್ಟಿಗೆ ಹೆಚ್ಚಿನ ಅವಕಾಶ. ಬಿಡುವಿಲ್ಲದ ಶ್ರಮ. ಸಹಜ ಯಶಸ್ಸು. ಅಲ್ಲಿ ಎಲ್ಲ ಮಗ್ಗುಲುಗಳಲ್ಲೂ ದುಡಿತ. ದಕ್ಕಿದ ಅನುಭವದ ಗಟ್ಟಿ. ಆದರಲ್ಲೇ ಪರಿಣತಿ. ಎಲ್ಲರಿಂದಲೂ ಶಹಭಾಸ್‌ಗಿರಿ.

ಹರಿವ ನೀರು ಒಂದೇ ಕಡೆ ನಿಲ್ಲುವದಿಲ್ಲ. ಪ್ರತಿಭಾ ಪ್ರವಾಹ ಚೌಡೇಶ್ವರಿ ಕಂಪನಿಯತ್ತ. ಅಲ್ಲಿ ವಸ್ತ್ರಾಲಂಕಾರದಲ್ಲಿ ದುಡಿತ. ಅದರಲ್ಲಿಯೇ ಹೆಚ್ಚಿನ ಪರಿಶ್ರಮ. ಬೆಳಕಿನ ವಿನ್ಯಾಸದಲ್ಲಿ ಹೆಚ್ಚಿನ ಕಲಿಕೆ. ಅನುಭವದ ಸಾಂದ್ರತೆ. 1985ರಿಂದ ರವಿಂದ್ರ ಕಲಾಕ್ಷೇತ್ರದಲ್ಲಿ ಸೇವೆ. ಕಲಿತದ್ದನ್ನು ಬಳಸಿಕೊಳ್ಳುವ ಅವಕಾಶ. ಇಲ್ಲಿ ನಡೆಯುವ ಎಲ್ಲ ನಾಟಕಗಳಿಗೆ ತಾಂತ್ರಿಕ ಸಹಕಾರ. ಇಲ್ಲಿ ಬರುವ ಎಲ್ಲ ತಂಡಗಳಿಗೂ ನೆರವು. 'ಲೈಟಿಂಗ್ ನಾಗ' ಎಂದೇ ಖ್ಯಾತಿ. ಕಳೆದ ಹದಿನಾಲ್ಕು ವರ್ಷಗಳಿಂದ ರವೀಂದ್ರ ಕಲಾಕ್ಷೇತ್ರದ ನೇಪಥ್ಯ ಕೆಲಸದಲ್ಲಿ ಮಗ್ನ. ತನ್ನ ಕೈ ಚಳಕದಿಂದ ಬೆಳಕಿನ ಬಣ್ಣ, ಪರಿಣಾಮಗಳನ್ನು ಮೋಹಕವಾಗಿ ಬದಲಿಸಬಲ್ಲ ಕುಶಲ ನೇಪಥ್ಯ ಕರ್ಮಿ. ರಂಗದ ಹಿಂದಿನ ಕೆಲಸಕ್ಕೆ ಗೌರವ ತಂದು ಕೊಟ್ಟವರ ಸಾಲಿನಲ್ಲಿ ಈಗ ನಾಗರಾಜ.



## ಎ. ಪೊನ್ನುಸ್ವಾಮಿ

ಪ್ರಾಥಮಿಕ ಓದಿನ ಹಂತದಲ್ಲಿಯೇ ವಸ್ತ್ರಾಲಂಕಾರದತ್ತ ಆಕರ್ಷಗೊಂಡ ಶ್ರೀ ಎ. ಪೊನ್ನುಸ್ವಾಮಿಯವರು ಸದ್ಯ ಬೆಂಗಳೂರು ನಿವಾಸಿ. ನಟನೆಗಿಂತ ಇವರಿಗೆ ಮೇಕಪ್ ಕಲೆಯಲ್ಲಿಯೇ ಹೆಚ್ಚು ಆಸಕ್ತಿ. ಈ ಕ್ಷೇತ್ರಕ್ಕೆ ಕಾಲಿಟ್ಟದ್ದು ಹನ್ನೆರಡನೆಯ ವಯಸ್ಸಿಗೆ. ಧನಪಾಲ್ ಅಂಡ್ ಕಂಪನಿಯ ನಾಟಕವೊಂದಕ್ಕೆ ಸ್ವತಂತ್ರ ವರ್ಣಾಲಂಕಾರ. ಬಾಲಕ ಕೈ ಚಳಕಕ್ಕೆ ಬೆರಗಾದವರು ಬಹು ಮಂದಿ. ಬೆಳೆಯುವ ಪೈರು ಮೊಳಕೆಯಲ್ಲಿ ಎಂಬ

ಮಾತಿನ ಸಾಬೀತು. ಅಲ್ಲಿಂದ ಮೇಕಪ್ ಕಲಾವಿದನಾಗಿ ವೃತ್ತಿ ಜೀವನ ಪ್ರಾರಂಭ. ಆಗಿವರಿಗೆ ಅನೇಕ ಹಿರಿಯರ ಮಾರ್ಗದರ್ಶನ. ನಂತರ ಹೆಸರಾಂತ ಪ್ರಭಾತ ಕಲಾವಿದರು ಸಂಸ್ಥೆಯಲ್ಲಿ ಸೇವೆ ಆರಂಭ. ಅಲ್ಲಿ ಅನೇಕ ವೃತ್ತಿ ನಾಟಕಗಳಿಗೆ ವರ್ಣ–ವಸ್ತ್ರಾಲಂಕಾರ. ಬೆರಳ್ ಗೆ ಕೊರಳ್ ನಾಟಕದ ವಸ್ತ್ರಾಲಂಕಾರಕ್ಕೆ ರಾಷ್ಟ್ರಕವಿ ಕುವೆಂಪುರವರಿಂದ ಪ್ರಶಂಸೆ. ಎಪ್ಪತ್ತರ ದಶಕದಲ್ಲಿ ಆಗಿನ ಧರ್ಮಾಂಬುಧಿ ಕೆರೆಯಲ್ಲಿ ಹಿರಣ್ಣಯ್ಯ ಮಿತ್ರ ಮಂಡಲಿಯ ಟೆಂಟು. ಅಲ್ಲಿನ ಬಹುತೇಕ ನಾಟಕಗಳಿಗೆ ಇವರದೇ ವರ್ಣಾಲಂಕಾರ. ನಟರ ಹಾಗೂ ಮಾಲಿಕರ ಮೆಚ್ಚುಗೆ ಇವರ ಮೇಲೆ. ಈ ಮಂಡಲಿಯ ಕನಿಷ್ಠ ನೂರು ನಾಟಕಗಳಿಗೆ ಇವರ ಕೈ ಕೆಲಸ. ಪೌರಾಣಿಕ – ಚಾರಿತ್ರಿಕ ನಾಟಕ ಮಾಡುವವರಿಗೆ ಪೊನ್ನುಸ್ವಾಮಿಯವರೇ ಅಕ್ಷಯಾಂಬರ. ಇವರ ಬಿಡುವು ನೋಡಿಕೊಂಡೇ ಪ್ರದರ್ಶನದ ದಿನಾಂಕ.

ಕಂದಗಲ್ ಹಣಮಂತರಾಯರ ರಕ್ತರಾತ್ರಿ ನಾಟಕದಲ್ಲಿ ಎದ್ದು ಕಾಣುವ ಇವರ ಕುಸುರಿ ಕೆಲಸ. ಆ ನಾಟಕದ ಸಾವಿರಕ್ಕೂ ಮಿಕ್ಕಿದ ಪ್ರಯೋಗಗಳಿಗೆ ವರ್ಣಾಲಂಕಾರ. ಉತ್ತರ ಕರ್ನಾಟಕದ ವೃತ್ತಿ ಕಲಾವಿದರಿಗೂ ಇವರು ಬೇಕು. ಸುಭದ್ರಮ್ಮ ಮನ್ಸೂರು, ನಾಗರತ್ನಮ್ಮ, ವಾದಿರಾಜ್, ನಾಗನಗೌಡ ಮುಂತಾದವರ ನಾಟಕಗಳಿಗೆ ಇವರು ಬೇಕೇ ಬೇಕು. ಸಾವಿರಾರು ಪ್ರಯೋಗಗಳಿಗೆ ವರ್ಣಾಲಂಕಾರ ಮಾಡಿದ ಖ್ಯಾತಿ ಇವರದು. ಶ್ರೀ ಚೌಡೇಶ್ವರಿ ವಸ್ತ್ರಾಲಂಕಾರ ಕಂಪನಿ ಪ್ರವೇಶಿಸಿ ರಾಜ್ಯಾದ್ಯಂತ ಸೇವೆ. ರಂಗಭೂಮಿಯ ಬಣ್ಣದ ಮನುಷ್ಯ ಎಂಬ ಹೆಗ್ಗಳಿಕೆ. ಖ್ಯಾತ ಸಂಗೀತ ನಿರ್ದೇಶಕ ಹಂಸಲೇಖರ ನಾಟಕಗಳಿಗೂ ಇವರ ಸೇವೆ.

ಭಟ್ಟ ಮಹಾದೇವಪ್ಪ ಮಿತ್ರ ಮಂಡಲಿಯ ದಾನಶೂರ ಕರ್ಣ ನಾಟಕದ ವರ್ಣಾಲಂಕಾರ ಮೆಚ್ಚಿದ ಡಾ. ರಾಜ್ ಕುಮಾರರಿಂದ ಪುರಸ್ಕಾರ. ಕೆ.ಜಿ.ಎಸ್. ಕ್ಲಬ್ ನಾಟಕ ಸ್ಪರ್ಧೆಯ ಬಹುಮಾನಗಳಲ್ಲಿ ಅವರಿಗೂ ಪಾಲು. ಯುವರಂಗ ನಾಟಕ ಸ್ಪರ್ಧೆಗಳಲ್ಲಿ ಹತ್ತು ಪ್ರಶಸ್ತಿಗಳಾದರೂ ಇವರ ಪಾಲಿಗೆ. ದಕ್ಕಿದ ಪುರಸ್ಕಾರಗಳು ಅನೇಕ. ಎಲ್ಲವೂ ಅಭಿಮಾನದ ದ್ಯೋತಕ.

---



## ರಹಮಾನಸಾಬ್ ದೊಡಮನಿ

ಕಲೆಯ ಸ್ವಭಾವ ವಿಚಿತ್ರ, ಕೆಲವರನ್ನು ಕೈ ಮಾಡಿ ಕರೆಯುತ್ತದೆ. ಕೆಲವರನ್ನು ತಾನೇ ಹೋಗಿ ಅಪ್ಪಿಕೊಳ್ಳುತ್ತದೆ. ಶ್ರೀ ರಹಮಾನ ಸಾಬ್‌ರನ್ನು ಕಲೆ ದೂರ ನಿಂತು ಕರೆಯಲಿಲ್ಲ, ಅವರಿದ್ದಲ್ಲಿ ತಾನೇ ನೆಲೆಗೊಂಡಿತು. ತಲೆಮಾರುಗಳ ಕಲಾ ಬಳ್ಳಿ, ಚಿವುಟಿದಲ್ಲೆಲ್ಲ ಒಸರಿದ್ದು ಕೇವಲ ಕಲೆ. ಇವರ ಇತಿಹಾಸವೇ ಅಂಥದು. ಮುತ್ತಜ್ಜಿ ಬಚ್ಚಾಸಾನಿ 1924ರಲ್ಲಿಯೇ ಸ್ತ್ರೀ ನಾಟಕ ಮಂಡಳಿಕಟ್ಟಿ ರಂಗಭೂಮಿಗೆ ಮುಡಿಪಾದವರು. ತನ್ನ ಸೋದರಿಯರು, ಮಕ್ಕಳಿಗೆಲ್ಲ ಆಕೆಯೇ ರಂಗ ಗುರು. ಅವರದೇ ಒಂದು ಕಂಪನಿ. 'ಶಾಕುಂತಲ' ಈ ಕಂಪನಿಯ ಹೆಸರಾಂತ ಪ್ರಯೋಗ. ಬಚ್ಚಾಸಾನಿಯ ಮಗಳು ಫಕೀರುಸಾಬ್‌ನ ಮಗಳು ವಜೀರಾ ಬಾಯಿ ಸ್ಫುರದ್ರೂಪಿ ನಟಿ. ಅಷ್ಟೇ ಪ್ರತಿಭಾವಂತೆ. ಶಾಕುಂತಲೆಯ ಪಾತ್ರದಲ್ಲಿ ಈಕೆ ಜನರಿಗೆ ಹಿಡಿಸಿದ್ದು ಹುಚ್ಚು. ಆ ಪಾತ್ರ ಅವಳ ನಿಜ ಜೀವನದಲ್ಲೂ ಒಬ್ಬ ದುಷ್ಯಂತನನ್ನು ತಂದಿತು. ಅತನೇ ಗೋಣಿ ನಿಂಗಪ್ಪ. ಇವರಿಬ್ಬರ ಪರಿಣಯದ ಕೂಸು ರಹಿಮಾನ ಸಾಬ್. ಮಗುವಾಗಿದ್ದಾಗಲೇ ತಾಯಿಯ ಕಣ್ಮರೆ. ಬೆಳೆದದ್ದು ತಂದೆಯ ಮನೆಯಲ್ಲಿ ರಾಮನಾಗಿ. ರಕ್ತಗತವಾದ ಕಲೆ ಮೌನಿಯಾಗಲು ಬಿಡಲಿಲ್ಲ. ಬೆಳೆದಂತೆ ಅತ್ತಲೇ ಓಟ. ಮೊದಲು ಊರಿನ ಭಜನಾ ಸಂಘದಲ್ಲಿ ಹಾಡು. ಅಲ್ಲಿಂದ ನಾಟಕದ ಮನೆ. 16ನ ವಯಸ್ಸಿಗೆ ಚಿತ್ರಾಂಗದಾ, ಉಷಾ–ಪರಿಣಯ, ನಂಬಿಯಕ್ಕ ಮೊದಲಾದ ನಾಟಕಗಳಲ್ಲಿ ಸ್ತ್ರೀ ಪಾತ್ರ. ಆ ಪಾತ್ರಗಳಿಗೆ ಹೇಳಿ ಮಾಡಿಸಿದ ಮುಖಚರ್ಯೆ. ಎಲ್ಲಾ ತಾಯಿಯ ಬಳುವಳಿ. ಅಭಿನಯ ಕಂಡ ಜನರೆಲ್ಲ ಮೋಹಿತರು. ಸ್ಟೇಜ್ ಟೈಗರ್ ವಿಠಲಸಾ ಖಟವಟೆ ಕೈ ಹಿಡಿದು ಎತ್ತಿದರು. ಉಷಾ ಸ್ವಯಂವರದಲ್ಲಿ ಅವರು ಬಾಣಾಸುರ. ಇವರು ಉಷೆ. ನೋಡುಗರ ಕಣ್ಣಿಗೆ ಕುಡಿದೀಪವಾಗಿಬಿಟ್ಟರು. ತಾಯಿ ವಜೀರಳದೇ ಎಲ್ಲ ಪ್ರತಿರೂಪ.

ರಹಿಮಾನರ ರಂಗ ಜೀವನವೆಲ್ಲ ಹಳ್ಳಿಗಾಡಿನಲ್ಲಿ. ಅಶಿಕ್ಷಿತರನ್ನು ತಿದ್ದಿ ತೀಡುವ ಕೆಲಸ. ನಾಟಕ ಕಲಿಸುವುದೇ ವೃತ್ತಿ. ಅದಕ್ಕಾಗಿ ಸುತ್ತದ ದಾರಿಗಳಿಲ್ಲ. ಎಲ್ಲಕ್ಕೂ ರಂಗ ಕಾರಣ. ನೂರಾರು ಗ್ರಾಮಗಳಲ್ಲಿ ಇವರದೇ ಹೆಸರು. ರಹಿಮಾನ ಮಾಸ್ತರರೆಂದೇ ಖ್ಯಾತಿ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳ ಯಶಸ್ವಿ ಪ್ರದರ್ಶನ. 71ರ ವಯಸ್ಸಿನಲ್ಲಿರುವ ಇವರಿಗೆ ಅನೇಕ ಶಿಷ್ಯರು. ಸುತ್ತಲೂ ಹಬ್ಬಿಸಿದ ಕಲಾ ಬಳ್ಳಿ. ವಂಶದ ಗೌರವಕ್ಕೆ ಹಿರಿಮೆ ತಂದ ಜೀವ.

---



## ಎ. ಶಿವಮಲ್ಲಯ್ಯ

ಕಂಸಾಳೆ ಮಹದೇವಯ್ಯನವರ ಪುತ್ರ ಶ್ರೀ ಶಿವಮಲ್ಲಯ್ಯ ಪ್ರತಿಭಾ ಸಂಪನ್ನರು. ರಂಗಭೂಮಿ, ಚಲನಚಿತ್ರ, ದೂರದರ್ಶನಗಳಲ್ಲಿ ವಿಶಿಷ್ಟ ಸೇವೆ. ಐವತ್ತು ವರ್ಷದ ಶ್ರೀಯುತರು ಸಾಮಾಜಿಕ-ಸಾಂಸ್ಕೃತಿಕ ವಲಯಗಳ ಮುಂಚೂಣಿಯಲ್ಲಿ 13ನೇ ವಯಸ್ಸಿಗೇ ಖಳನಾಯಕನ ಪಾತ್ರ ನಿರ್ವಹಣೆ ಆಗಿನ ಗುಬ್ಬಿ ವೀರಣ್ಣ ರಂಗ ಮಂದಿರದಲ್ಲಿ. ನಾಟಕ ರಾಜತಂತ್ರ. ಅಲ್ಲಿಂದ ಮುಂದೆ ನಾಟಕವೇ ಸರ್ವಸ್ವ ವಿಜಯವಾಹಿನಿ ಕಲಾ ಮಂದಿರದಲ್ಲಿ ಸಕ್ರಿಯ. ರಂಗಭೂಮಿಯ ವಿವಿಧ ಆಯಾಮಗಳ ದರ್ಶನ. ಹೆಪ್ಪುಗಟ್ಟಿದ ಅನುಭವ. ಮುಂದಿನ ದಾರಿಗೆ ಸಜ್ಜು. ಅಭಿನಯ, ನಿರ್ದೇಶನ, ವಸ್ತ್ರ ವಿನ್ಯಾಸ, ಪ್ರಸಾಧನ, ಬೆಳಕು, ರಂಗಸಜ್ಜಿಕೆ... ಹೀಗೆ ಎಲ್ಲದರಲ್ಲೂ ಶ್ರಮ. ನಾಟಕ ರಚನೆಯಲ್ಲೂ ಕೈಯಾಡಿಕೆ. ರಂಗ ನಿರ್ಮಾಪಕನಾಗಿ ಅದ್ದೂರಿ ನಾಟಕಗಳ ಪ್ರದರ್ಶನ.

ಪೌರಾಣಿಕ, ಐತಿಹಾಸಿಕ, ಸಮಾಮಜಿಕ, ಜಾನಪದ, ಬೀದಿ ನಾಟಕ, ಹೊಸ ಅಲೆಯ ನಾಟಕ, ಆಕಾಶವಾಣಿ ನಾಟಕ ಹೀಗೆ ಹಲವು ಮಜಲು. ಪೌರಾಣಿಕ ನಾಟಕಗಳ ವಸ್ತ್ರಾಲಂಕಾರದಲ್ಲಿ ಎತ್ತಿದ ಕೈ. ಎಲ್ಲೆಲ್ಲೂ ಅದ್ದೂರಿ. ರಾಜತಂತ್ರ, ಎಚ್ಚಮನಾಯಕ, ಮೂರು ಜೋಡಿ ನಾಟಕಗಳ ನಿರ್ವಹಣೆ. ರಾಜ್ಯಾದ್ಯಂತ ನಾಟಕಗಳ ದಂಡಯಾತ್ರೆ, ಹಣ ಹೋಯಿತು. ಹೆಸರು ಬಂದಿತು.

ಹವ್ಯಾಸಿಯ ಹೆಸರಾಂತ ನಿರ್ದೇಶಕರ ನಾಟಕಗಳಲ್ಲೂ ಅಭಿನಯ. ಬಿ.ವಿ. ಕಾರಂತ, ಸಿ.ಜಿ.ಕೆ., ಹಂಸಲೇಖ, ನಾಗೇಶ್, ಶ್ರೀನಿವಾಸ ಪ್ರಭು, ಅಮರ ದೇವ ಮುಖ್ಯರು. ಎನ್.ಜಿ.ಇ.ಎಫ್.ನಲ್ಲಿ ಕೆಲ ದಿನ ಉದ್ಯೋಗ. ಅಲ್ಲಿಯೂ ರಂಗ ವಾತಾವರಣ ಸೃಷ್ಟಿ. ಅನೇಕ ನಾಟಕಗಳಿಗೆ ಬಹುಮಾನ. ಇದುವರೆಗೆ ನೂರಕ್ಕೂ ಮಿಕ್ಕಿ ನಾಟಕಗಳಲ್ಲಿ ಪಾತ್ರ. ಸಿನಿ ರಂಗಕ್ಕೂ ಇವರ ಸೇವೆ. ಅಲ್ಲಿ ಅಭಿನಯ. ಮಲೆ ಮಹದೇಶ್ವರ, ಕೌರ್ಯ, ಗುರು ಬ್ರಹ್ಮ, ಭುಜಂಗಯ್ಯ... ಇತ್ಯಾದಿ.

ದೂರದರ್ಶನಕ್ಕೂ ಲಗ್ಗೆ. 23 ಧಾರಾವಾಹಿಗಳ ನಿರ್ಮಾಪಕ. ಕೆಲವಕ್ಕೆ ನಿರ್ದೇಶನ.

ಸಾಹಿತಿಗಳೆಂದರೆ ಪ್ರಾಣ. ಭಾಷಾ ಚಳುವಳಿಯಲ್ಲಿ ಭಾಗಿ. ಸದಾ ನಾಡು ನುಡಿಗಾಗಿ ಹೋರಾಟ. ಕಾವೇರಿ, ಗಡಿ ಸಮಸ್ಯೆ, ಕೆಂಪೇಗೌಡ ಪ್ರತಿಮೆ ಒಂದಿಲ್ಲೊಂದು ಕಾರಣ. ಶ್ರೀಯುತರಿಗೆ ಈಗ ಅರ್ಧ ಶತಕ. ಇಷ್ಟು ಅವಧಿಯಲ್ಲಿ ಕನ್ನಡಿಗನೊಬ್ಬ ಹೇಗಿರಬೇಕೆಂಬುದರ ನಿದರ್ಶನ. ಸಂಸ್ಕೃತಿ-ಛಲ-ಅಭಿಮಾನಗಳ ಸಂಗಮ ಶಿವಮಲ್ಲಯ್ಯ.

---



## ಕೆ.ವಿ. ತಿಮ್ಮಪ್ಪ

ಶ್ರೀ ಕರೂರು ವಿ. ತಿಮ್ಮಪ್ಪ ಹುಟ್ಟಿದ್ದು 1924ರಲ್ಲಿ. ಬಾಲ್ಯದಲ್ಲಿಯೇ ಸಂಗೀತದಲ್ಲಿ ಆಸಕ್ತಿ, ಹನ್ನೊಂದರ ಹುಡುಗನಿಗೆ ಸಂಗೀತದ ಪಾಠ. ಆಗ ಗ್ರಾಮ ಶಾಲೆಗಳ ಪದ್ಧತಿ. 5ನೇ ವರ್ಗದಲ್ಲಿಯೇ ಜೈಮಿನಿ ಭಾರತ, ಅಮರ ಕೋಶ, ಹರಿಭಕ್ತಿ ಸಾರ, ಸೋಮೇಶ್ವರ ಶತಕ ಕಂಠಪಾಠ. ಆದರೆ 5ನೇ ತರಗತಿಗೇ ಓದು ಮುಕ್ತಾಯ. ಸಂಗೀತದಲ್ಲಿ ಹೆಚ್ಚಿನ ಒಲವು. ಗುರು ಕೆ. ಬಸಯ್ಯಸ್ವಾಮಿಗಳಲ್ಲಿ ಶಿಷ್ಯವೃತ್ತಿ. 6 ವರ್ಷಗಳ ಕಾಲ ಸಂಗೀತ ಪಾಠ. ಮುಂದೆ ನಾಟಕದತ್ತ ಒಲವು. ಆಗ ಪೌರಾಣಿಕ ನಾಟಕಗಳ ಕಾಲ. ಅವುಗಳಿಗೆ ಇನ್ನಿಲ್ಲದ ಪ್ರೋತ್ಸಾಹ. ಸಂಗೀತದಲ್ಲಿ ಪರಿಣತಿ ಪಡೆದ ತಿಮ್ಮಪ್ಪನವರ ಗಮನವೆಲ್ಲ ನಾಟಕ ನಿರ್ದೇಶಿಸುವ ಕಡೆಗೆ. 17ನೇ ವಯಸ್ಸಿಗೇ ಆ ಪಟ್ಟ. ರಾಮಾಯಣ, ಲಂಕಾದಹನಗಳ ಸಮರ್ಪಣ. ಪೂನಾ ನಗರಕ್ಕೆ ಹೋಗಲು ಗುರುಗಳ ಆಜ್ಞೆ. ಅಲ್ಲಿ ಮರಾಠೀ ಅಭ್ಯಾಸ. ಹಿಂದೀ ವಿಶಾರದ ಪರೀಕ್ಷೆ. ಅಲ್ಲಿ ಹಿಂದೀ ಮರಾಠಿ ನಾಟಕಗಳ ನಿರ್ದೇಶನ. ಆ ಭಾಷೆಗಳ ಜನರಿಗೆ ಹತ್ತಿರವಾದ ಕನ್ನಡ ರಂಗ ಗುರು. ಅಲ್ಲಿ ಆರು ವರ್ಷಗಳ ಸೇವೆ. ನಂತರ ಸ್ವಗ್ರಾಮ ಕರೂರಿಗೆ ವಾಪಸು. ಅಲ್ಲಿಂದ ಇಲ್ಲಿಯವರೆಗೆ ಬಿಡದ ರಂಗ ನಂಟು. ನಾಟಕದ ಮಾಸ್ತರರಾಗಿ ಸೀಮೆಯಲ್ಲಿ ಪ್ರಸಿದ್ಧ.

ಹಳ್ಳಿಹಳ್ಳಿಗಳಲ್ಲಿ ಈಗ ಅವರದೇ ಹೆಸರು. ಅವರು ನಾಟಕ ಕಲಿಸುವ ಮಾಸ್ತರರು. ಬೇರೆಯವರ ನಿರ್ದೇಶನದ ನಾಟಕಗಳಿಗೂ ಸಂಗೀತ ಸ್ಪರ್ಶ. ಒಟ್ಟು 58 ವರ್ಷಗಳ ರಂಗ ಸೇವೆ. ಗ್ರಾಮೀಣರಿಂದ ಮಾನ-ಸಮ್ಮಾನಗಳು. ಇವರ ರಂಗ ಕೀರ್ತಿ ರಾಜಧಾನಿಯವರೆಗೆ. ರಾಜ್ಯೋತ್ಸವದ ಸಮಯದಲ್ಲಿ ಗೌರವ ಸ್ವೀಕಾರ. ಬಳ್ಳಾರಿಯ ನಾಟ್ಯಭಾರತಿ, ಹೂವಿನ ಹಡಗಲಿ ಕಲಾವಿದರಿಂದಲೂ ಸನ್ಮಾನ. ಡ. ಜೋಳದರಾಶಿ ದೊಡ್ಡನಗೌಡರು ಮೆಚ್ಚಿದ ನಾಟಕ ಮೇಷ್ಟ್ರು. ವಯಸ್ಸಿನ ಬಾಧೆಯಿಲ್ಲ. ನಾಟಕವಾಡುವ ಜನ ಇದ್ದರೆ ಹೇಳಿ ಸ್ವಾಮಿ, ಬರುತ್ತೇನೆ ಅನ್ನುವ ಕಳಕಳಿ.





## ವಸಂತ ಅಣ್ಣಾರಾವ ಕುಲಕರ್ಣಿ

ಬಾಗಲಕೋಟೆ ಜಿಲ್ಲೆಯ ಗಿರಿಸಾಗರದ ಶ್ರೀ ವಸಂತ ಕುಲಕರ್ಣಿಯವರು ವೃತ್ತಿಯಲ್ಲಿ ಮೂವತ್ತೆರಡು ವರ್ಷ ಶಿಕ್ಷಕರು. ಬೀಳಗಿಯಲ್ಲಿ ರಂಗ ಸುಗಂಧ ಬೀರಿದವರು. ಅಲ್ಲಿಯ ಕಂದಗಲ್ಲ ಹಣಮಂತರಾಯ ರಂಗವೇದಿಕೆಯ ಮೂಲಕ ಜನರ ಹತ್ತಿರ ತಂದದ್ದು ನಾಟಕ. ಅಲ್ಲಿ ಸಂಘಟನಾ ಕಾರ್ಯದರ್ಶಿಯಾಗಿ ಸಮರ್ಪಕ ಸೇವೆ. ಬಾಗಿಲಕೋಟೆಯ ವಾಸುದೇವ ವಿನೋದಿನಿ ನಾಟ್ಯ ಸಭಾ ಅತ್ಯಂತ ಹಿರಿಯ ರಂಗ ಸಂಸ್ಥೆ. ಕೆರೂರು ವಾಸುದೇವಾಚಾರ್ಯರ ರಂಗದಂಗಣ. ವಸಂತರಾವ ಅವರು ಈ ಸಂಘದ ಸಕ್ರಿಯ ಸದಸ್ಯರು. ಜತೆಗೆ ಸುರೇಬಾನದ ಮೂಡಲಪಾಯ ಯಕ್ಷಗಾಯ ಬಯಲಾಟ ಮಂಡಳಿಯ ದಿಗ್ದರ್ಶಕ. ಈ ಮಂಡಳಿ ಹಾಕಿಕೊಂಡ ಮೂಡಲಪಾಯದ ಶ್ರೇಯೋಭಿವೃದ್ಧಿಯ ಯೋಜನೆಗಳು ಹಲವು. ಅಲ್ಲಿ ಕುಲಕರ್ಣಿಯವರ ರಂಗಚಿಂತನೆಗೆ ಇನ್ನಷ್ಟು ರೂಪ.

ಶಾಲೆಗಳಲ್ಲಿ ನಾಟಕವಾಡುವುದು ಹೊಸದಲ್ಲ. ಆದರೆ ವೃತ್ತಿ ನಾಟಕಗಳನ್ನು ಶಾಲೆಗಳಲ್ಲಿ ಪ್ರದರ್ಶಿಸುವುದು ಅಪರೂಪ. ಶ್ರೀಯುತರು ಅಂಥ ಕೆಲಸ ಮಾಡಿದರು. ಬಸ್ ಕಂಡಕ್ಟರ್, ಬದುಕು ಬಂಗಾರವಾಯ್ತು, ದಾರೀ ದೀಪ, ರಕ್ತರಾತ್ರಿ, ನೀನು ಸಾಹುಕಾರನಾಗು ಮುಂತಾದ ನಾಟಕಗಳು ಶಾಲೆಯ ಬಯಲಲ್ಲಿ ನಿರ್ದೇಶನದ ಜೊತೆಗೆ ನಟನೆ. ಗ್ರಾಮೀಣ ಜನರಿಂದ ತೂರಿಬಂದ ಅಭಿಮಾನದ ಹೊಳೆ. ಮತ್ತೆ ಮತ್ತೆ ನಾಟಕವಾಡಲು ಪ್ರೋತ್ಸಾಹ. ವಾಸುದೇವ ವಿನೋದಿನಿ ನಾಟ್ಯ ಸಭಾದಲ್ಲೂ ನಟನೆ. ಹಯವದನ ನಾಟಕದಲ್ಲಿ ಕಪಿಲನ ಪಾತ್ರದಿಂದ ನೋಡುಗರ ಹೃದಯಕ್ಕೆ ಲಗ್ಗೆ. ರಂಗ ಸಂಘಟನೆಯಲ್ಲೂ ಎತ್ತಿದ ಕೈ. 1995ರಲ್ಲಿ ಕಂದಗಲ್ಲ ಹಣಮಂತ ರಾಯರ ನಾಟಕೋತ್ಸವ. ಐದು ದಿನಗಳ ಈ

ಉತ್ಸವದಲ್ಲಿ ನಾಟಕ–ವಿಚಾರ ಸಂಕಿರಣ. ರಂಗಗೀತೆಗಳು, ಪ್ರಸಾಧನ ಕಾರ್ಯಾಗಾರ ಇತ್ಯಾದಿಗಳು ಇವೆಲ್ಲದರ ರೂವಾರಿ ಕುಲಕರ್ಣಿಯವರು. ಪಟ್ಟದಕಲ್ಲು ಮಹೋತ್ಸವದಲ್ಲಿ ಮೊದಲ ಯಕ್ಷಗಾನ ಪ್ರಯೋಗ. ಈ ಪ್ರಕಾರಕ್ಕೆ ವಿಶಿಷ್ಟತೆಯ ಮೆರುಗು. ಅದಕ್ಕೆ ಪ್ರತ್ಯೇಕ ಮಾನ್ಯತೆ ದೊರಕಿಸುವ ಹಂಬಲ. ಕಲಾವಿದರ ಪ್ರತಿಭೆ ಗುರುತಿಸಿ ಗೌರವಿಸುವ ಹವ್ಯಾಸ. ಅದರಿಂದ ಅನೇಕರಿಗೆ ಸಂದ ಗೌರವ. ಐವತ್ತೈದರ ಹರೆಯದ ಶ್ರೀಯುತರಿಗೆ ಸಾಹಿತ್ಯದಲ್ಲೂ ಆಸಕ್ತಿ. ಪ್ರಸಕ್ತ ಬೀಳಗಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು.

---



## ಬಿ.ಎಂ. ವೆಂಕಟೇಶ (ಅಣ್ಣಯ್ಯ)

ನಾಟಕ ಮತ್ತು ಚಿತ್ರಕಲೆಯಲ್ಲಿ ಹೆಸರುಗಳಿಸಿದ ಶ್ರೀ ಬಿ.ಎಂ. ವೆಂಕಟೇಶ್ ಬೆಂಗಳೂರಿನವರು. ನಾಟಕದ ಹಿಂದಣ ಕೆಲಸಗಳಾದ ಸೆಟ್ ಡಿಜೈನ್, ಮೇಕಪ್, ಬ್ಯಾನರ್ ರಚನೆ, ಪರದೆಗಳ ನಿರ್ಮಾಣ ಮುಂತಾದವುಗಳಲ್ಲಿ ಸಿದ್ಧಹಸ್ತರು. ಪರದೆಯ ಅಣ್ಣಯ್ಯನೆಂದೇ ಪ್ರಸಿದ್ಧರು.

ಪೌರಾಣಿಕ ನಾಟಕಗಳಲ್ಲಿ ಮೊದಲಿನಿಂದಲೂ ಆಸಕ್ತಿ. ಹಾಗಾಗಿ ವಸ್ತ್ರ ವಿನ್ಯಾಸದಲ್ಲಿ ಸಹಜವಾಗಿಯೇ ಕುತೂಹಲ. ಒಳಗಿದ್ದ ಕಲಾಕಾರನ ಸಾಕ್ಷಾತ್ಕಾರ. ಕುಶಲ ಕಲೆಗಾರಿಕೆಯ ಪ್ರದರ್ಶನ. ನಾಟಕದಿಂದ ನಾಟಕಕ್ಕೆ ಬೆಳವಣಿಗೆ. ಇವರ ಅದ್ಭುತ ವಸ್ತ್ರ ವಿನ್ಯಾಸಕ್ಕೆ ಹಲವಾರು ಕಡೆ ಬೇಡಿಕೆ. ಪೌರಾಣಿಕ ನಾಟಕವಾಡುವ ತಂಡಗಳಿಗೆ ಸೀನರಿ ಕೊಡುವ ಅನಿವಾರ್ಯದ ಅಣ್ಣ. ಇವರ ಸೀನರಿಗಳಿಂದ ಹೆಚ್ಚಿದ ಪ್ರಯೋಗಗಳ ಪರಿಣಾಮ ಪ್ರೇಕ್ಷಕರಿಂದಲೂ ಶಹಭಾಸ್ ಗಿರಿ. ಪರದೆ ಬರೆಯುವ ಜತೆಗೆ ಪುಸ್ತಕಗಳಿಗೆ ಮುಖಪುಟ ರಚನೆಗೂ ತಯಾರಿ. ಭಾರತ–ಭಾರತಿ ಪುಸ್ತಕ ಸಂಪದದ ನೂರಾರು ಪ್ರಕಟಣೆಗಳಿಗೆ ಇವರದೇ ಮುಖಚಿತ್ರ. ಸಾಂಪ್ರದಾಯಕ ಚಿತ್ರ ಕಲೆಯಲ್ಲಿ ಆಕರ್ಷಕ ಸಾಧನೆ. ಅದರಿಂದಾಗಿ ಪರದೆ, ರಂಗ ವಿನ್ಯಾಸಗಳಲ್ಲಿ ಹೆಚ್ಚಿನ ಪರಿಣತಿ. ದೊಡ್ಡ ದೊಡ್ಡ ಬ್ಯಾನರ್‌ಗಳು, ಸಿನಿಮಾ ಕಟೌಟಗಳಲ್ಲಿ ಪರಿಶ್ರಮ. ಫಲಪ್ರದ ಸಾಧನೆ. ಎಲ್ಲೆಲ್ಲೂ ಇವರಿಗೆ ಬೇಡಿಕೆ.

ಅಭಿನಯದಲ್ಲೂ ಜನಪ್ರಿಯ. ಪೌರಾಣಿಕ ಪಾತ್ರಗಳಲ್ಲಿ ಮಿಂಚಿದ ಪ್ರತಿಭೆ. ಅರ್ಜುನ, ಕೃಷ್ಣ, ಅಭಿಮನ್ಯು, ರಾಮ, ಬಭ್ರುವಾಹನ, ರಾಜಾ ಮಾರ್ತಾಂಡ ಪಾತ್ರಗಳಲ್ಲಿ ಅಭಿನಯದ ಮೆಲುಗೈ. ಐವತ್ತು ವರ್ಷದ ವೆಂಕಟೇಶ ಅವರಿಗೆ ಪರದೆ, ಕಟೌಟ ನಿರ್ಮಾಣ, ಬ್ಯಾನರ್, ಚಿತ್ರ ಕಲೆಗಳಲ್ಲಿ ಇಂದಿಗೂ ಕುಗ್ಗದ ಉತ್ಸಾಹ.

---

# 2000ರ ಪ್ರಶಸ್ತಿ ವಿಜೇತರು



## ಕೆ.ವಿ. ಅಕ್ಷರ (ಫೆಲೋಷಿಪ್)

'ನೀನಾಸಮ್' ಸ್ಥಾಪಕರಾದ ಶ್ರೀ ಕೆ.ವಿ. ಸುಬ್ಬಣ್ಣ ಮತ್ತು ಶ್ರೀಮತಿ ಕೆ.ವಿ. ಶೈಲಜರವರ ಪುತ್ರರಾಗಿ 1960ರಲ್ಲಿ ಅಕ್ಷರ ಜನಿಸಿದರು. ಬಾಲ್ಯದಿಂದಲೇ ರಂಗ ವಾತಾವರಣದಲ್ಲೇ ಬೆಳೆದ ಅಕ್ಷರ, ಸಹಜವಾಗಿಯೇ ರಂಗಭೂಮಿಯೆಡೆಗೆ ಆಕರ್ಷಿತರಾದರು.

ರಂಗಕ್ಷೇತ್ರವನ್ನೇ ತಮ್ಮ ಕಾರ್ಯಕ್ಷೇತ್ರವಾಗಿ ಸ್ವೀಕರಿಸಿಸಲು ನಿರ್ಧರಿಸಿ, ಬಿ.ಎ., ಪದವಿಯ ನಂತರ ದೆಹಲಿಯ ರಾಷ್ಟ್ರೀಯ ಶಿಕ್ಷಣ ಶಾಲೆಯಿಂದ ನಿರ್ದೇಶನದಲ್ಲಿ ವಿಶೇಷ ಪರಿಣತಿ ಪದವಿಯೊಂದಿಗೆ, ಇಂಗ್ಲೆಂಡಿನ ಲೀಡ್ಸ್ ವಿಶ್ವವಿದ್ಯಾಲಯದಿಂದ ರಂಗಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಯುರೋಪ್, ಅಮೆರಿಕಾಗಳ ಆಧುನಿಕ ರಂಗಭೂಮಿಗಳನ್ನು ಪ್ರತ್ಯಕ್ಷವಾಗಿ ಕಂಡ, ಅಲ್ಲದೆ ಭಾರತದ ರಂಗಭೂಮಿಗಳ ಬಗ್ಗೆ ಅಭ್ಯಾಸ ಮಾಡಿರುವ ಅಕ್ಷರ 1988ರಿಂದ ನೀನಾಸಮ್ ರಂಗಶಿಕ್ಷಣ ಕೇಂದ್ರದಲ್ಲಿ ಅಧ್ಯಾಪಕರಾಗಿ, ನೀನಾಸಮ್ ತಿರುಗಾಟಗಳಲ್ಲಿ ನಿರ್ದೇಶಕರಾಗಿ ಕೆಲಸ ಮಾಡುತ್ತಿದ್ದಾರೆ.

ಬೆಟ್ಟಕ್ಕೆ ಚಳಿಯಾದರೆ, ತಾಯಿ, ಮ್ಯಾಕ್‌ಬೆತ್, ಮೂರು ಕಾಸಿನ ಸಂಗೀತ, ಮಹಿಮಾಪುರ, ತುಕ್ರನ ಕನಸು, ಸಂಗ್ಯಾಬಾಳ್ಯಾ, ಕಿರುಗೂರಿನ ಗಯ್ಯಾಳಿಗಳು, ಅಹಲ್ಯೆ, ಸ್ಮಶಾನ ಕುರುಕ್ಷೇತ್ರ, ತುಘಲಕ್, ಆಷಾಢದ ಒಂದು ದಿನ, ಸಾಂಬಶಿವ ಪ್ರಹಸನ, ಸಾಹೇಬರು ಬರುತ್ತಾರೆ, ಮಂಡಿತ್ರಾಕ್ಷಿಸೆ, ಚೋರಿಕಟ್ಟೆ ಅರ್ಥಾತ್ ಕಲ್ಯಾಣಪುರ ನಾಟಕಗಳನ್ನು ನಿರ್ದೇಶಿಸಿದ್ದಾರೆ.

ನಾಟಕ ನಿರ್ದೇಶನದ ಜೊತೆಗೆ ಆಧುನಿಕ ರಂಗಭೂಮಿ ಕುರಿತು ದೇಶಾದ್ಯಂತ ನಡೆದ ಹಲವು ವಿಚಾರ ಸಂಕಿರಣದಲ್ಲಿ ಭಾಗವಹಿಸಿ, ನಾಟಕ ಹಾಗೂ ವಿವಿಧ ರಂಗಮಾಧ್ಯಮಗಳ ಕುರಿತು ತಮ್ಮ ವಿಚಾರ ಮಂಡನೆ ಮಾಡಿದ್ದಾರೆ. ಉಡುಪಿ, ದಾವಣಗೆರೆ, ಜೋಗ್ ಫಾಲ್ಸ್, ಮಂಚಿಕೆರೆ ಮುಂತಾದೆಡೆ ರಂಗತರಬೇತಿ ಶಿಬಿರಗಳನ್ನು ಆಯೋಜಿಸಿದ್ದಾರೆ. ಪುಣೆಯ ಎಸ್.ಎನ್.ಡಿ.ಟಿ. ಕಾಲೇಜಿಗೆ ನಿರ್ದೇಶಿಸಿದ ರಂಗತರಬೇತಿ ಶಿಬಿರದಲ್ಲಿ 'ಮಕ್ಕಳಿಗಾಗಿ ಸಮೂಹ ಮಾಧ್ಯಮ' ವಿಷಯ ಕುರಿತಾದ ಇವರ ಉಪನ್ಯಾಸ ಗಮನಾರ್ಹವಾದುದು.

ಸೃಜನಶೀಲ ಸಾಹಿತ್ಯ ಕ್ಷೇತ್ರದಲ್ಲೂ ಅಕ್ಷರ ಕೆಲಸ ಮಾಡಿದ್ದಾರೆ. 'ಹದಿಹರೆಯದ ಹಾಡುಗಳು' ಎಂಬ ಕವನ ಸಂಕಲನದೊಂದಿಗೆ, ಸಹ್ಯಾದ್ರಿ ಕಾಂಡ, ಚೋರಿಕಟ್ಟೆ ಅರ್ಥಾತ್ ಕಲ್ಯಾಣಪುರ ಎಂಬ ನಾಟಕಗಳನ್ನು ರಚಿಸಿ ಪ್ರಕಟಿಸಿದ್ದಾರೆ. ರಂಗಕ್ಕೆ ಸಂಬಂಧಿಸಿದ ಹಲವು ಲೇಖನಗಳನ್ನು ಅನುವಾದಿಸಿ ಪ್ರಕಟಿಸಿದ್ದಾರೆ. ಪ್ರಪಂಚದ ವಿವಿಧ ದೇಶಗಳ ರಂಗಸಾಧನೆಗಳನ್ನು ಪರಿಚಯಿಸುವ 'ರಂಗಪ್ರಪಂಚ', 'ರಂಗಪ್ರಯೋಗ', 'ರಂಗ ಅನ್ವೇಷಣೆ', 'ರಂಗಭೂಮಿ ಪೂರ್ವಪಶ್ಚಿಮ' ಎಪಿಕ್ ರಂಗಭೂಮಿ, ಮಾವಿನ ಮರದಲ್ಲಿ ಬಾಳೆಹಣ್ಣು ರಂಗಕಲೆ ಕುರಿತಾದ ಇವರ ಕೃತಿಗಳು.

ಹೀಗೆ ಸದಾ ಚಟುವಟಿಕೆಯಿಂದಿರುವ ಅಕ್ಷರ ರಂಗಭೂಮಿಗಾಗಿ ತಮ್ಮ ಸೇವೆಯನ್ನು ಮೀಸಲಾಗಿಟ್ಟಿದ್ದಾರೆ.



## ಡಾ|| ಎಂ.ಜಿ. ಈಶ್ವರಪ್ಪ (ಫೆಲೋಷಿಪ್)

ಡಾ|| ಎಂ.ಜಿ. ಈಶ್ವರಪ್ಪನವರು ವೃತ್ತಿಯಿಂದ ಕಾಲೇಜು ಅಧ್ಯಾಪಕರು. ರಂಗಚಟುವಟಿಕೆಗಳು ಇವರ ಆಸಕ್ತಿಯ ಕ್ಷೇತ್ರ. ಮೈಸೂರು ವಿಶ್ವವಿದ್ಯಾನಿಲಯದಿಂದ ಕನ್ನಡ ಸಾಹಿತ್ಯದಲ್ಲಿ ಎಂ.ಎ., ಪಿಎಚ್.ಡಿ. ಪದವಿಯೊಂದಿಗೆ, ಆಂಗ್ಲ ಭಾಷೆಯ ಡಿಪ್ಲೊಮಾವನ್ನೂ ಪೂರೈಸಿಕೊಂಡಿದ್ದಾರೆ. ದಾವಣಗೆರೆಯ ಡಿ.ಆರ್.ಎಂ. ವಿಜ್ಞಾನ ಕಾಲೇಜಿನಲ್ಲಿ 28 ವರ್ಷಗಳ ಅಧ್ಯಾಪಕ ವೃತ್ತಿಯ ಅನುಭವ ಇವರದು. ಈಶ್ವರಪ್ಪನವರಿಗೆ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವುದು ಮೆಚ್ಚಿನ ವಿಷಯ.

ಮೊದಲಿನಿಂದಲೂ ರಂಗಭೂಮಿಯ ಬಗೆಗೆ ವಿಶೇಷ ಕಾಳಜಿಯುಳ್ಳ ಈಶ್ವರಪ್ಪನವರು ರಂಗಭೂಮಿಯ ಔಪಚಾರಿಕ ಶಿಕ್ಷಣಕ್ಕಾಗಿ 1979ರಲ್ಲಿ ತ್ರಿಚೂರಿನ ನಾಟಕ ಶಾಲೆಯಲ್ಲಿ ನಡೆದ ರಾಷ್ಟ್ರೀಯ ಮಟ್ಟದ ತರಬೇತಿ ಶಿಬಿರದಲ್ಲಿ ಹಾಗೂ ಕರ್ನಾಟಕ ನಾಟಕ ಅಕಾಡೆಮಿಯ ಸಹಯೋಗದಿಂದ ಭೂಪಾಲ್ ಹಾಗೂ ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯಲ್ಲಿ ರಂಗದಿಗ್ಗಜ ಶ್ರೀ ಬಿ.ವಿ. ಕಾರಂತರ ಮಾರ್ಗದರ್ಶನದಲ್ಲಿ ರಂಗಕಲೆಯ ಅಧ್ಯಯನ ನಡೆಸಿ ನಟನೆ, ನಿರ್ದೇಶನಗಳಲ್ಲಿ ವಿಶೇಷ ಪರಿಣತಿ ಪಡೆದರು. ನಂತರ ಮೆರವಣಿಗೆ, ಈಡಿಪಸ್, ಸಂಕ್ರಾಂತಿ, ಸಂತೆಯಲ್ಲಿ ನಿಂತ ಕಬೀರ, ನೆಜುವಾನಿನ ಸಾಧ್ವಿ, ಸಿದ್ಧತೆ, ಟಿಪ್ಪು ಸುಲ್ತಾನ್ ಮುಂತಾದ ನಾಟಕಗಳಲ್ಲಿ ಅಭಿನಯಿಸಿ, ಜಾತ್ರೆ, ಸಾಯೋ ಆಟ, ಅಪ್ಪ, ಕಡೇ ಮನೆ ಕಡೇಗಲ್ಲಿ, ಹಳ್ಳಿ ಚಿತ್ರ, ಹಳ್ಳಿ ಮೇಷ್ಟ್ರು, ಮಾರೀಚನ ಬಂಧುಗಳು, ನಾಗನಕತೆ ನಾಟಕಗಳ ನಿರ್ದೇಶನ ಮಾಡಿದ್ದಾರೆ.

ದಾವಣಗೆರೆಯ ಪ್ರತಿಷ್ಠಿತ ಸಾಹಿತ್ಯಕ ಮತ್ತು ಸಾಂಸ್ಕೃತಿಕ ವೇದಿಕೆ 'ಪ್ರತಿಮಾ ಸಭಾ'ದ ಅಧ್ಯಕ್ಷರೂ ಆಗಿರುವ ಇವರು ಈ ಸಂಸ್ಥೆಯಡಿ ಹಲವು ರಂಗಶಿಬಿರಗಳನ್ನು ಸಂಘಟಿಸಿದ್ದಾರೆ. ಅಶೋಕ ಬಾದರದಿನ್ನಿ, ವಾಲ್ಟರ್ ಡಿಸೋಜ, ಸುರೇಶ್ ಆನಗವಾಡಿ, ಗಂಗಾಧರಸ್ವಾಮಿ, ಜಂಬೆ, ಅಕ್ಷರ, ಕೃಷ್ಣಮೂರ್ತಿ ಮುಂತಾದ ರಂಗತಜ್ಞರ ನಿರ್ದೇಶನದ ನಾಟಕ ಪ್ರದರ್ಶನ ಏರ್ಪಡಿಸಿ, ದಾವಣಗೆರೆಯ ರಂಗಪ್ರಿಯರಿಗೆ ರಂಗರಸದೌತಣ ನೀಡಿದ್ದಾರೆ.

ಎರಡು ಬಾರಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಸದಸ್ಯರಾಗಿ ಆಯ್ಕೆಗೊಂಡು, ಜನಪದ ಕಲೆಗಳ ಮತ್ತು ಜನಪದ ರಂಗಭೂಮಿಯ ಅಧ್ಯಯನ ನಡೆಸಿ, ಜಾನಪದ ರಂಗಪ್ರಕಾರಗಳನ್ನು ಆಧುನಿಕ ರಂಗಭೂಮಿಗೆ ಅಳವಡಿಸುವ ಕಾರ್ಯದಲ್ಲಿ ಮಗ್ನರಾಗಿದ್ದಾರೆ. ನಾಟಕ ಸಂದರ್ಭಕೋಶ ಹಾಗೂ ಹುನಗುಂದ ಬಾಬಣ್ಣ ಎಂಬ ಎರಡು ನಾಟಕ ಸಂಬಂಧಿ ಕೃತಿಗಳನ್ನು ರಚಿಸಿದ್ದಾರೆ.



## ಎಸ್.ಬಿ. ಕಂಠಿ ಹನುಮಂತರಾಯ (ಫೆಲೋಷಿಪ್)

ಸಾಹಿತ್ಯ, ಸಂಗೀತ, ಅಭಿನಯ, ನಿರ್ದೇಶನ, ಚಿತ್ರಕಲೆ, ಸಮಾಜಸೇವೆ ಹೀಗೆ ಹಲವಾರು ಸಾಂಸ್ಕೃತಿಕ ಚಟುವಟಿಕೆಗಳಿಗೆ ತಮ್ಮ ಜೀವನವನ್ನೇ ಮುಡಿಪಾಗಿಟ್ಟಿದ್ದಾರೆ ಹಿರಿಯ ಕಲಾವಿದ ಕಂಠಿ ಹನುಮಂತರಾಯರು. 1929ರಲ್ಲಿ ಜನಿಸಿದ ಶ್ರೀಯುತರು ಎಂ.ಎ., ಬಿ.ಎಡ್. ಪದವಿಯೊಂದಿಗೆ ಕನ್ನಡ ಶಿಕ್ಷಕರಾಗಿ ದುಡಿದದ್ದಲ್ಲದೆ ಅನೇಕ ಶಾಲೆಗಳಲ್ಲಿ ಮುಖ್ಯೋಪಾಧ್ಯಾಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ವಿದ್ಯಾರ್ಥಿ ದೆಸೆಯಿಂದಲೇ ಸಾಹಿತ್ಯ, ನಾಟಕ, ಇವರ ಮೆಚ್ಚಿನ ಕ್ಷೇತ್ರವಾಗಿದ್ದು ಇವರ ಅನೇಕ ಕತೆ, ಕವನಗಳು ಜನಪ್ರಿಯ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಶ್ರೀರಂಗರ ನಾಟಕದಲ್ಲಿ ಅಭಿನಯಿಸುವ ಮೂಲಕ ರಂಗಪ್ರವೇಶ ಮಾಡಿದ ಕಂಠಿಯವರು ತಮ್ಮ ಹುಟ್ಟೂರಲ್ಲಿ 'ಶ್ರೀ ದಿಗಂಬರೇಶ್ವರ ನಾಟ್ಯ ವೃಂದ'ವನ್ನು ಹುಟ್ಟುಹಾಕಿ, ಮಂಗಳಗೌರಿ, ಕಾಂಚನ

ಮೃಗ, ಭಾಗ್ಯಮಂದಿರ, ಪೋಲೀಸ್ ಇನ್ಸ್‌ಪೆಕ್ಟರ್, ಚಿನ್ನದ ಸರ, ಬಹದ್ದೂರ್ ಗಂಡು, ಸಿಂಧೂರ ಲಕ್ಷ್ಮಣ, ಶೋಭಾರಾಣಿ ಮುಂತಾದ ಸ್ವರಚಿತ ನಾಟಕಗಳನ್ನು ಪ್ರಯೋಗಿಸಿದ್ದಾರೆ.

'ವಿಶ್ವಭಾರತಿ ಕಲಾ ವೃಂದ' ಎಂಬ ಸ್ವಂತ ವೃತ್ತಿ ನಾಟಕ ಕಂಪನಿಯನ್ನು ಕಟ್ಟಿಕೊಂಡು ಗರುಡರೇಖೆ, ಗೌಡರ ಮಗ, ಕಿತ್ತೂರು ಕಾಶೀಬಾಯಿ ನಾಟಕಗಳನ್ನು ಪ್ರದರ್ಶಿಸಿದರು. ಸಂಶೋಧನಾತ್ಮಕ ಕೃತಿಯಾಗಿ ರಚನೆಗೊಂಡ 'ಸಿಂಧೂರ ಲಕ್ಷ್ಮಣ' ನಾಟಕ ಮಹಾರಾಷ್ಟ್ರದ ಮೀರಜ್ ಮತ್ತು ಇಚಲಕರಂಜಿ ಮುಕ್ಕಾಮಿನಲ್ಲಿ ನೂರಾರು ಪ್ರಯೋಗಗಳನ್ನು ಕಂಡು, ರಾಜ್ಯದ ಹೊರಗೂ ಕಂಠಿಯವರ ಹೆಸರನ್ನು ಬೆಳಗಿಸಿತು. 1955ರಲ್ಲಿ ದಿ: ಕಂದಗಲ್ಲ ಹಣಮಂತರಾಯರ ಜನ್ಮಶತಾಬ್ದಿ ಅಂಗವಾಗಿ ಬಿಳಗಿಯಲ್ಲಿ ಜರುಗಿದ ನಾಟಕೋತ್ಸವದ ರಂಗವೇದಿಕೆಯ ಉಪಾಧ್ಯಕ್ಷರಾಗಿ ಕಾರ್ಯಕ್ರಮದ ಯಶಸ್ಸಿಗೆ ಕಾರಣರಾಗಿದ್ದಾರೆ. ಅವಸಾನದ ಅಂಚಿನಲ್ಲಿರುವ ವೃತ್ತಿ ರಂಗಭೂಮಿಯ ಪುನಶ್ಚೇತನ ಕುರಿತು ಪತ್ರಿಕೆಗಳಲ್ಲಿ ಅನೇಕ ಲೇಖನಗಳನ್ನು ಬರೆದಿದ್ದಾರೆ. ಕಂಠಿಯವರ ನಾಟಕಗಳು ವೃತ್ತಿ ಹಾಗೂ ಹವ್ಯಾಸಿ ರಂಗಭೂಮಿಗಳನ್ನು ಜೋಡಿಸುವ ಕೊಂಡಿಯಾಗಿರುವುದರಿಂದ, ಸುಶಿಕ್ಷಿತ ಹಾಗೂ ಸಾಮಾನ್ಯವರ್ಗದವರ ಮೆಚ್ಚುಗೆಗೆ ಪಾತ್ರವಾಗಿವೆ.

ತಮ್ಮ 72ರ ಇಳಿವಯಸ್ಸಿನಲ್ಲಿಯೂ ಹೊಸ ಹೊಸ ನಾಟಕಗಳ ರಚನೆಗೆ ತೊಡಗಿ ಕ್ರಿಯಾಶೀಲರಾಗಿರುವ ಈ ಪ್ರತಿಭಾವಂತರಿಗೆ ಕರ್ನಾಟಕ ನಾಟಕ ಅಕಾಡೆಮಿಯು 2000ನೇ ಸಾಲಿನ ಫೆಲೋಶಿಪ್ ನೀಡಲು ಹರ್ಷಿಸುತ್ತದೆ.



## ಎ. ಕೃಷ್ಣನ್ (ಫೆಲೋಶಿಪ್)

ಶ್ರೀಯುತ ಎ. ಕೃಷ್ಣನ್ ಅವರು ಬೆಂಗಳೂರಿನ ಮೈಕೋ ಕಾರ್ಖಾನೆಯಲ್ಲಿ ಮಾನವ ಸಂಪನ್ಮೂಲ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕನ್ನಡ ಹವ್ಯಾಸಿ ರಂಗಭೂಮಿಯ ಬಗೆಗೆ ಆಸಕ್ತಿ ಉಳ್ಳ ಕೃಷ್ಣನ್ ಬೆಂಗಳೂರಿನ ಮೈಕೋ ಕಾರ್ಖಾನೆಯ ಲಲಿತ ಕಲಾಸಂಘದ ಜೊತೆಗೆ ನಾಗನಾಥಪುರದಲ್ಲಿರುವ ಕಾರ್ಖಾನೆಯ ಲಲಿತ ಕಲಾಸಂಘದ ಮುಖ್ಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಾ ಬಂದಿದ್ದಾರೆ. ಮೈಕೋ ಕಲಾಸಂಘವು ಕನ್ನಡ ರಂಗಭೂಮಿಗೆ ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಸೇವೆ ಸಲ್ಲಿಸುತ್ತಾ ಬಂದಿದೆ. ಮುಖ್ಯವಾಗಿ ಪ್ರತಿವರ್ಷವೂ ಕಾರ್ಖಾನೆಯ ಕಲಾವಿದರಿಗಾಗಿಯೇ ನಾಟಕಗಳನ್ನು ಏರ್ಪಡಿಸುತ್ತಾ ಬಂದಿದೆ. ಕನ್ನಡದ ಉತ್ತಮ ನಾಟಕಗಳನ್ನು ಕಾರ್ಖಾನೆಯ ಕಾರ್ಮಿಕರಿಗೂ, ಅವರ ಕುಟುಂಬದವರಿಗೂ ನೋಡಲು ಅವಕಾಶ ಮಾಡಿಕೊಟ್ಟಿದೆ. ಅಲ್ಲದೆ ಹವ್ಯಾಸಿ ರಂಗತಂಡಗಳು ಪ್ರಯೋಗಿಸುವ ಉತ್ತಮ ನಾಟಕಗಳಿಗೂ ಸಹಕಾರ ನೀಡುತ್ತಾ ಬಂದಿದೆ. ಇತ್ತೀಚೆಗೆ ಮುಂಬಯಿಯಲ್ಲಿ ನಡೆದ ಜ್ಞಾನಪೀಠ ವಿಜೇತ ನಾಟಕಕಾರ ಶ್ರೀ ಗಿರೀಶ್ ಕಾರ್ನಾಡ್ ನಾಟಕೋತ್ಸವ ಸೇರಿದಂತೆ ಧಾರವಾಡ, ಬೆಳಗಾಂ ಮುಂತಾದ ಕಡೆಗಳಲ್ಲೂ ಇವರ ಸಹಾಯ ವಿಸ್ತರಿಸಿದೆ.

ಈ ಸಂಘದ ಮತ್ತೊಂದು ಗಮನಾರ್ಹ ಕಾರ್ಯವೆಂದರೆ, ಪ್ರತಿವರ್ಷ ಕನ್ನಡ ರಂಗಭೂಮಿಗೆ ಕೊಡುಗೆ ನೀಡಿರುವ ರಂಗಮಹನೀಯರನ್ನು ಸತ್ಕರಿಸುತ್ತಾ ಬಂದಿರುವುದು. ಶ್ರೀ ಬಿ.ವಿ. ಕಾರಂತ್, ಶ್ರೀ ಲೋಹಿತಾಶ್ವ, ಶ್ರೀ ಪ್ರಸನ್ನ, ಮಾಸ್ಟರ್ ಹಿರಣ್ಣಯ್ಯ, ಶ್ರೀಮತಿ ಲಕ್ಷ್ಮೀ ಚಂದ್ರಶೇಖರ್ ಈ ಗೌರವಕ್ಕೆ ಪಾತ್ರರಾಗಿದ್ದಾರೆ. ನಾಟಕದಲ್ಲಿ ನಟಿಸುವುದಕ್ಕೆ ಆಸಕ್ತಿ ಇರುವ ಕಾರ್ಮಿಕರನ್ನು ಗುರುತಿಸಿ, ಪ್ರೋತ್ಸಾಹಿಸಿ, ರಂಗಶಿಕ್ಷಣಕ್ಕಾಗಿ ರಂಗ ತರಬೇತಿ ಶಿಬಿರಗಳಲ್ಲಿ ಆಸಕ್ತರು ಪಾಲ್ಗೊಳ್ಳಲು ಅವಕಾಶ ನೀಡುತ್ತಿದೆ. ಇಂಥ ತರಬೇತಿ ಕಲಾವಿದರಿಂದ ಪ್ರತಿವರ್ಷವೂ ನಡೆಯುವ ಕಾರ್ಮಿಕರ ನಾಟಕ ಸ್ಪರ್ಧೆಗಳಲ್ಲಿ, ನಾಟಕ ಉತ್ಸವಗಳಲ್ಲಿ, ರಾಜ್ಯದಲ್ಲಲ್ಲದೆ ಹೊರರಾಜ್ಯಗಳಲ್ಲೂ ನಾಟಕ ಪ್ರದರ್ಶನ ನೀಡಿದೆ. ಈ ಎಲ್ಲ ರಂಗ ಚಟುವಟಿಕೆಗಳ ಮುಖ್ಯ ಪ್ರೇರಕ ಶಕ್ತಿ ಕೃಷ್ಣನ್ ಅವರು. ಇವರು ಕಾರ್ಖಾನೆಗೆ ನೀಡಿರುವ ಮತ್ತೊಂದು ಕೊಡುಗೆ 'ಸುರಸಂಗಮ' ಎಂಬ ಸಂಗೀತ ಉತ್ಸವ. ಇದರ ಅಡಿಯಲ್ಲಿ ರಾಷ್ಟ್ರದ ಖ್ಯಾತ ಸಂಗೀತಗಾರರಾದ

ಡಾ: ಬಾಲಮುರಳಿ ಕೃಷ್ಣ, ಹರಿಪ್ರಸಾದ್ ಚೌರಾಸಿಯ, ಕುನ್ನುಕುಡಿ ವೈದ್ಯನಾಥನ್ ಮುಂತಾದವರ ಸಂಗೀತ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ನಡೆಸಿಕೊಂಡು ಬಂದಿದ್ದಾರೆ. 'ಕಲಾರಾಧನ' ಎಂಬ ಸಾಂಸ್ಕೃತಿಕ ಸಂಘಟನೆಯ ಸ್ಥಾಪಕ ಕಾರ್ಯದರ್ಶಿಯಾಗಿ ಹಲವು ವರ್ಷ ಸೇವೆ ಸಲ್ಲಿಸಿರುವ ಕೃಷ್ಣನ್ ಈ ಸಂಸ್ಥೆಯಿಂದ ಹವ್ಯಾಸಿ ತಂಡಗಳ ನಾಟಕಗಳನ್ನು ಸಾರ್ವಜನಿಕರಿಗಾಗಿ ಏರ್ಪಡಿಸಿದ್ದಾರೆ. ರಂಗಾಸಕ್ತ ವಿದ್ಯಾರ್ಥಿಗಳು ಅಭಿನಯಿಸಿರುವ ನಾಟಕಗಳನ್ನು ಪ್ರದರ್ಶಿಸಿದೆ. ಪ್ರತಿವರ್ಷ ರಾಜ್ಯೋತ್ಸವದ ಅಂಗವಾಗಿ ನಾಟಕೋತ್ಸವಗಳನ್ನು ನಡೆಸಿದ್ದಾರೆ.

ಕಲಾರಾಧನ ಹಾಗೂ ಕಾರ್ಖಾನೆಯ ಲಲಿತಕಲಾ ಸಂಘದ ವತಿಯಿಂದ ಕನ್ನಡ ರಂಗಭೂಮಿಗೆ ಕೃಷ್ಣನ್ ಅವರು ನೀಡಿದ ಕೊಡುಗೆ ಅವಿಸ್ಮರಣೀಯ.



## ಧರ್ಬೆ ಕೃಷ್ಣಾನಂದ ಚೌಟ (ಫೆಲೋಷಿಪ್)

ಬಹುಮುಖ ಪ್ರತಿಭೆಯ ಧರ್ಬೆ ಕೃಷ್ಣಾನಂದ ಚೌಟರು ಹುಟ್ಟಿ ಬೆಳೆದದ್ದು ಗಡಿನಾಡಾದ ಮಂಜೇಶ್ವರದಲ್ಲಿ. ಮುಂಬಯಿ ವಿಶ್ವವಿದ್ಯಾಲಯದಿಂದ ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಚೌಟರು 25 ವರ್ಷ ವಿದೇಶದಲ್ಲಿದ್ದು ಬಂದಿದ್ದಾರೆ. ಪ್ರಸ್ತುತ ಬೆಂಗಳೂರಿನಲ್ಲಿ ನೆಲೆಸಿರುವ ಚೌಟರು ವಾಣಿಜ್ಯ ಕೈಗಾರಿಕೆಗಳಲ್ಲಿ ತೊಡಗಿಸಿಕೊಂಡು, ತಮ್ಮ ದಕ್ಷ ನಿರ್ವಹಣೆಗಾಗಿ ಕಳೆದ ಐದು ವರ್ಷಗಳಿಂದ ಎಕ್ಸ್ ಪೋರ್ಟ್ ಪ್ರಮೋಷನ್ ಕೌನ್ಸಿಲಿನಿಂದ ಸತ್ಕರಿಸಲ್ಪಟ್ಟಿದ್ದಾರೆ. ಇವರು ಹುಟ್ಟು ಹಾಕಿದ ಪವರ್‌ಗೇರ್, ಸನ್‌ವ್ಯಾಲಿ, ಪಿ.ಸಿ. ಎಕ್ಸ್‌ಪೋರ್ಟ್ ಸಂಸ್ಥೆಗಳಲ್ಲಿ ನೂರಾರು ಕನ್ನಡಿಗರಿಗೆ ಉದ್ಯೋಗಾವಕಾಶ ನೀಡಿದ್ದಾರೆ.

ತಮ್ಮ ವಾಣಿಜ್ಯ ಕ್ಷೇತ್ರದಲ್ಲೇ ಬಿಡುವಿಲ್ಲದೆ ಕಾರ್ಯನಿರ್ವಹಿಸುತ್ತಿರುವ ಚೌಟರಿಗೆ ನಗರದ ಸಾಂಸ್ಕೃತಿಕ ವಲಯದಲ್ಲಿ ಅಪಾರ ಆಸಕ್ತಿ ಇದೆ. ಸಂಗೀತ, ನೃತ್ಯ, ನಾಟಕ, ಚಿತ್ರಕಲೆ, ಶಿಲ್ಪಕಲೆ, ಸಾಹಿತ್ಯ ಎಲ್ಲದರಲ್ಲೂ ಆಸಕ್ತಿ, ಅನುಭವ ಹೊಂದಿರುವ ಶ್ರೀಯುತರು ಈ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳಿಗೆ, ಸಂಘ-ಸಂಸ್ಥೆಗಳಿಗೆ ಉದಾರವಾಗಿ ದೇಣಿಗೆ ನೀಡುತ್ತಾ ಬಂದಿದ್ದಾರೆ. ಅಲ್ಲದೆ ನಾದನೃತ್ಯ, ವಿಶ್ವಕಲಾ ಮುಂತಾದ ಸಂಸ್ಥೆಗಳಿಗೆ ಅಧ್ಯಕ್ಷರಾಗಿ ಸಾಂಸ್ಕೃತಿಕ ಲೋಕಕ್ಕೆ ವಿಶೇಷ ಕೊಡುಗೆ ನೀಡಿದ್ದಾರೆ. ಅಂತೆಯೇ ಚಿತ್ರಕಲಾ ಪರಿಷತ್ತು, ನೃತ್ಯಕಲಾ ಪರಿಷತ್ತಿನ ಸಕ್ರಿಯ ಕಾರ್ಯಕರ್ತರೂ ಆಗಿದ್ದಾರೆ. ಸ್ವತಃ ಸಾಹಿತಿಗಳೂ, ಉತ್ತಮ ವಾಗ್ಮಿಗಳೂ ಆಗಿರುವ ಚೌಟರು ಹಲವು ಸಣ್ಣಕತೆಗಳನ್ನೂ, ಪಿಲಿ ಪತ್ತಿಗಡಸ್, ಆಟದ ಕುಲ ಎಂಬ ತುಳು ನಾಟಕಗಳನ್ನು ರಚಿಸಿದ್ದಾರೆ.

ಸಮಾಜಸೇವೆಯಲ್ಲೂ ಆಸಕ್ತಿ ಇರುವ ಚೌಟರು ಬಂಟರ ಸಂಘದ ಅಧ್ಯಕ್ಷರಾಗಿ ವಿದ್ಯಾವೇತನ, ಮಹಿಳಾ ಸೇವಾ, ವೈದ್ಯಕೀಯ ನೆರವು ಇತ್ಯಾದಿ ಸೇವಾ ಕಾರ್ಯಗಳನ್ನು ನಡೆಸುತ್ತಿದ್ದಾರೆ. ತಮ್ಮ ಸಮುದಾಯವನ್ನೂ ಈ ದಿಕ್ಕಿನೆಡೆಗೆ ಕೊಂಡೊಯ್ಯುತ್ತಿದ್ದಾರೆ.



## ಮಹಾಂತಯ್ಯಸ್ವಾಮಿ ಮಂಡರಗಿ ಮಠ (ಫೆಲೋಷಿಪ್)

ಹಿರಿಯ ರಂಗಕರ್ಮಿ ಮಹಾಂತಯ್ಯಸ್ವಾಮಿ ಮಂಡರಗಿ ಮಠ 84 ವಸಂತಗಳನ್ನು ಕಂಡಿದ್ದಾರೆ. ಕಲಾಸೇವೆಯಲ್ಲೇ ಸುಮಾರು 65 ವರ್ಷ ಕಳೆದಿರುವುದು ಅವರ ಕಲಾಭಿರುಚಿಗೆ ಸಾಕ್ಷಿಯಾಗಿದೆ. 1917ರಲ್ಲಿ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಕವಿತಾಳ ಗ್ರಾಮದಲ್ಲಿ ಮಹಾಂತಯ್ಯ ಜನಿಸಿದರು. ಬಾಲ್ಯದಿಂದಲೇ ಸಂಗೀತದಲ್ಲಿ ಅಪಾರ ಆಸಕ್ತಿ ಇದ್ದುದರಿಂದ ತಮ್ಮ 13ನೇ ವಯಸ್ಸಿಗೆ ಕಂದಗಲ್‌ನ ಶ್ರೀ ಸಂಗನ

ಬಸವಸ್ವಾಮಿಗಳವರಲ್ಲಿ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತವನ್ನು ಶ್ರದ್ಧೆಯಿಂದ ಕಲಿತು ಪರಿಣತರಾದರು. ಇವರ ಸಂಗೀತಾಭಿರುಚಿ ಕ್ರಮೇಣ ನಾಟಕಗಳ ಕಡೆಗೆ ಹೆಜ್ಜೆ ಇಡಲು ಕಾರಣವಾಯಿತು. ಆರಂಭದಲ್ಲಿ ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದು, ಕ್ರಮೇಣ ನಾಟಕಗಳಿಗೆ ಹಾರ್ಮೋನಿಯಂ ನುಡಿಸತೊಡಗಿದರು. ಅನುಭವ ನಾಟಕ ನಿರ್ದೇಶನಕ್ಕೆ ದಾರಿಮಾಡಿತು. ಕಿತ್ತೂರು ಚೆನ್ನಮ್ಮ, ಮಲ್ಲಮ್ಮನ ಪವಾಡ, ಅಣ್ಣತಂಗಿ, ಅಶ್ವತ್ಥಾಮ, ಕ್ರಾಂತಿಕಾರಿ ಬಸವೇಶ್ವರ, ಎಚ್ಚಮನಾಯಕ, ರಾಮ ಪಾದುಕಾ ಪಟ್ಟಾಭಿಷೇಕ, ಶಾಪ ವಿಮೋಚನೆ, ಪ್ರಪಂಚ ಪರೀಕ್ಷೆ, ಬಡತನ ಭೂತ, ಪಶ್ಚಾತ್ತಾಪ, ಆತ್ಮಾರ್ಪಣ, ಕುರುಕ್ಷೇತ್ರ, ಅಕ್ಷಯಾಂಬರ, ವೀರಾಭಿಮನ್ಯು, ಭೌಮಾಸುರ ಮಹಾಂತಯ್ಯನವರು ನಟಿಸಿ, ನಿರ್ದೇಶಿಸಿ, ಸಂಗೀತ ನೀಡಿದ ನಾಟಕಗಳು. 1953ರಲ್ಲಿ ಮುಂಬೈನಲ್ಲಿ 'ಕುರುಕ್ಷೇತ್ರ' ನಾಟಕವನ್ನು ಪ್ರದರ್ಶಿಸಿ ರಂಗಪ್ರೇಮಿಗಳ ಮೆಚ್ಚುಗೆ ಗಳಿಸಿದ್ದಾರೆ.

ಇವರು ರಂಗಕ್ಕೆ ನೀಡುತ್ತಿರುವ ಮತ್ತೊಂದು ಸೇವೆಯೆಂದರೆ, ಸುಮಾರು 50 ವರ್ಷಗಳಿಗಿಂತ ಮೇಲ್ಪಟ್ಟು ನಾಟಕಗಳಿಗೆ ಅಗತ್ಯವಿರುವ, ಪರದೆ, ಕವಾಟು, ವೇಷ ಭೂಷಣಗಳನ್ನು ಒದಗಿಸುತ್ತಾ ಬಂದಿರುವುದು. ರಾಯಚೂರು, ಬಿಜಾಪುರ, ಬಳ್ಳಾರಿ ಜಿಲ್ಲೆಗಳಲ್ಲೂ ಈ ರೀತಿಯ ಸೇವೆ ವಿಸ್ತರಿಸಿದ್ದಾರೆ. ಮೂಲತಃ ಸಂಗೀತಗಾರರಾದ ಮಹಾಂತಯ್ಯ ಮೈಸೂರಿನ ಪ್ರತಿಷ್ಠಿತ ದಸರಾ ಉತ್ಸವ ಸೇರಿದಂತೆ, ಹಲವು ಸಾರ್ವಜನಿಕ ಸಂಗೀತ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಸ್ಥಳೀಯ ಆಕಾಶವಾಣಿಯಲ್ಲಿಯೂ ಇವರ ಸಂಗೀತ ಕಾರ್ಯಕ್ರಮಗಳು ಬಿತ್ತರಗೊಂಡಿವೆ.

---



## ಪ್ರೊ. ರಾಮದಾಸ್ (ಫೆಲೋಷಿಪ್)

ಸೃಜನಶೀಲ ಸಾಹಿತ್ಯದ ವಿವಿಧ ಪ್ರಕಾರಗಳಾದ ಕಾವ್ಯ, ಕತೆ, ಕಾದಂಬರಿ, ನಾಟಕ, ಅನುವಾದ ಸಾಹಿತ್ಯಗಳಿಂದ ಕನ್ನಡ ಸಾಹಿತ್ಯಕ್ಕೆ ಉತ್ತಮ ಕೊಡುಗೆ ನೀಡಿದ್ದಾರೆ ಶ್ರೀಯುತ ರಾಮದಾಸ್ ಅವರು. 1940 ಫೆಬ್ರವರಿ 1ರಂದು ಉಡುಪಿಯಲ್ಲಿ ಜನಿಸಿದ ರಾಮದಾಸ್ 60ರ ದಶಕದಿಂದಲೇ ತಮ್ಮ ಅಭಿವ್ಯಕ್ತಿ ಪ್ರಕಾರವಾಗಿ ಕಾವ್ಯವನ್ನು ಆರಿಸಿಕೊಂಡರು.

ಈ ಪ್ರಯತ್ನದಿಂದ ಋತಗೀತಾಮೃತ, ಭಸ್ಮಾಸುರ, ಹದಿಹರೆಯದ ಹುಡುಗರು ಕವನ ಸಂಕಲನಗಳನ್ನು ಪ್ರಕಟಿಸಿದರು. ಕ್ರಮೇಣ ಸಣ್ಣಕತೆ, ನಾಟಕ, ಕಾದಂಬರಿ, ವಿಮರ್ಶೆ, ಆಂಗ್ಲ ಲೇಖನಗಳ ಅನುವಾದ, ಉತ್ತಮ ಕೃತಿಗಳ ಸಂಪಾದನೆ ಹೀಗೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೆಲಸ ಮಾಡಲು ಆರಂಭಿಸಿ ಹಲವಾರು ಕೃತಿಗಳನ್ನು ಪ್ರಕಟಿಸಿ ಹೊರತಂದರು. ಬೆದರುಗೊಂಬೆ, ತಲೆದಂಡ, ಗರುಡಗಂಬ, ಸಾಕ್ಷಾತ್ಕಾರ ಮುಂತಾದ ನಾಟಕಗಳ ರಚನೆಯೊಂದಿಗೆ, ನಾಟಕಗಳಲ್ಲಿ ಅಭಿನಯಿಸುವ ಹಂಬಲವೂ ಮೂಡಿತು. ರಂಗಭೂಮಿಯ ಔಪಚಾರಿಕ ಶಿಕ್ಷಣಕ್ಕಾಗಿ ಬಿ.ವಿ. ಕಾರಂತ, ಪ್ರಸನ್ನರ ನಾಟಕ ತರಬೇತಿ ಶಿಬಿರದಲ್ಲಿ ಪಾಲ್ಗೊಂಡು, ನಂತರ ಮುಖಕ್ಕೆ ಬಣ್ಣ ಹಚ್ಚಿದರು.

ಬಾಡಿಗೆ ಮೀಸೆ, ತುಘಲಕ್, ಈಡಿಪಸ್, ಕುಮಾರರಾಮ, ಹೆಬ್ಬೆರಳು, ಅಂಧಯುಗ, ತಲೆದಂಡ, ಸಾಕ್ಷಾತ್ಕಾರ, ಮನಸ್ಸಾಕ್ಷಿ, ಸಂಧ್ಯಾಛಾಯಾ, ಸೂರ್ಯಶಿಕಾರಿ, ಹೃದಯದೇಗುಲ, ಕನ್ನಡ ನಾಟಕಗಳೊಂದಿಗೆ 'ಬುದ್ಧದೇವ' ಎಂಬ ಹಿಂದಿ ನಾಟಕದಲ್ಲೂ 'ದಿ ಬಿಷಪ್ಸ್ ಕ್ಯಾಂಡ್ರಸ್ಟಿಕ್ಸ್' ಎಂಬ ಇಂಗ್ಲಿಷ್ ನಾಟಕದಲ್ಲೂ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿದರು. ಅಲ್ಲದೆ ಇದುವರೆಗೂ ಸರಿಸುಮಾರು ಒಂದು ನೂರು ಆಕಾಶವಾಣಿ ನಾಟಕಗಳಲ್ಲಿ ಅಭಿನಯಿಸಿರುವುದು ಗಮನಾರ್ಹ ಸಂಗತಿ. ಯಯಾತಿ, ಜೋಕುಮಾರ ಸ್ವಾಮಿ, ಹೇಡಿಗಳು, ಸಂಕ್ರಾಂತಿ, ತಲೆದಂಡ, ಸೂರ್ಯಶಿಕಾರಿ, ಮನಸ್ಸಾಕ್ಷಿ, ಒಡಿಸ್ಸಿ ಮೊದಲಾದ ನಾಟಕಗಳ ನಿರ್ದೇಶನಗಳನ್ನು ಮಾಡಿದ್ದಾರೆ. ತಮ್ಮ ಈ ಎಲ್ಲ ಅನುಭವಗಳನ್ನು ಮುಂದಿನ ಪೀಳಿಗೆಯವರಿಗೆ ತಲುಪಿಸುವ ಸಲುವಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಆಶ್ರಯದಲ್ಲಿ ಜರುಗಿದ 'ಕನ್ನಡ ನಾಟಕ ಲೇಖಕರ ಶಿಬಿರ'ದ ಹಾಗೂ 'ತುಳು ಸಾಹಿತ್ಯ ಅಕಾಡೆಮಿ' ಆಶ್ರಯದಲ್ಲಿ

ನಡೆದ ತುಳು ನಾಟಕ ರಚನಾ ಶಿಬಿರದಲ್ಲಿ ತರಬೇತುದಾರರಾಗಿ ಕಾರ್ಯನಿರ್ವಹಿಸಿದ್ದಾರೆ. ಕಿರುತೆರೆಯ ಜನಪ್ರಿಯ ಧಾರಾವಾಹಿಗಳಾದ 'ಗುಡ್ಡದಭೂತ' 'ಓ ನನ್ನ ಬೆಳಕೆ'ಗಳಲ್ಲಿಯೂ ಪಾತ್ರವಹಿಸಿದ್ದಾರೆ.

ಬಹುಮುಖಿ ಪ್ರತಿಭೆಯ ರಾಮದಾಸ್ ಕನ್ನಡ ಸಾಹಿತ್ಯ ಕ್ಷೇತ್ರಕ್ಕಷ್ಟೇ ಅಲ್ಲದೆ ಕನ್ನಡ ರಂಗಭೂಮಿಗೂ ಸ್ಮರಣಾರ್ಹ ಕೊಡುಗೆ ನೀಡಿದ್ದಾರೆ.

---



## ಲಕ್ಷ್ಮೀ ಚಂದ್ರಶೇಖರ್ (ಫೆಲೋಶಿಪ್)

ಶ್ರೀಮತಿ ಲಕ್ಷ್ಮೀ ಚಂದ್ರಶೇಖರ್ ಬೆಂಗಳೂರಿನ ಎನ್.ಎಂ.ಕೆ.ಆರ್.ವಿ. ಮಹಿಳಾ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರು. ಕರ್ನಾಟಕದ ಮುಖ್ಯ ರಂಗ ವಿಮರ್ಶಕರಲ್ಲಿ ಒಬ್ಬರಾದ ಲಕ್ಷ್ಮೀ ಸ್ವತಃ ಕಲಾವಿದರೂ ಆಗಿದ್ದಾರೆ. ಆಧುನಿಕ ರಂಗಭೂಮಿಯ ಬಗೆಗೆ ಹೆಚ್ಚಿನ ಕಾಳಜಿಯುಳ್ಳ ಇವರು ಪ್ರಗತಿಪರ ರಂಗಚಳವಳಿಯಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. 'ದಿ ಹಿಂದೂ' ಇಂಗ್ಲಿಷ್ ದೈನಂದಿನ ಸೇರಿದಂತೆ ಅನೇಕ ನಿಯತಕಾಲಿಕಗಳ ಮೂಲಕ ರಂಗಭೂಮಿಯ ಚಟುವಟಿಕೆಗಳನ್ನು ನಿರಂತರವಾಗಿ ದಾಖಲಿಸುತ್ತಾ ಬಂದಿದ್ದಾರೆ.

ಸ್ವತಃ ನಟಿಯಾಗಿ ಸಮುದಾಯ ತಂಡದಿಂದ ಪ್ರಯೋಗಗೊಂಡ ಗೆಲಿಲಿಯೋ, ಮಾದರಿ ಮಾದಯ್ಯ, ಮೀಡಿಯಾ ಸೇರಿದಂತೆ ಮಹಾಚೈತ್ರ, ಮಧುರೆಕಾಂಡ, ಈ ಕೆಳಗಿನವರು, ತಾಯಿ, ದಂಗೆಯ ಮುಂಚಿನ ದಿನಗಳು, ಸಂಸ್ಕಾರ, ಕುರಿ, ಕತ್ತಲೆ ದಾರಿ ದೂರ, ಹುತ್ತವ ಬಡಿದರೆ, ಮೃಚ್ಛಕಟಿಕ, ಕದಡಿದ ನೀರು, ಬಹದ್ದೂರ್ ಗಂಡ, ಆಷಾಢಭೂತಿ ನಾಟಕಗಳಲ್ಲಿ ಉತ್ತಮ ಅಭಿನಯ ನೀಡಿದ್ದಾರೆ.

ವರದಕ್ಷಿಣೆ, ನರಮೇಧ ಬೀದಿನಾಟಕಗಳನ್ನು ನಿರ್ದೇಶಿಸಿದ್ದಾರೆ. ಕಿರುತೆರೆಯ ಮಾಲ್ಗುಡಿ ಡೇಸ್, ಕಥೆಗಾರ, ಮಾಯಾಮೃಗ, ಕಾಮನಬಿಲ್ಲು ಮುಂತಾದ ಜನಪ್ರಿಯ ಧಾರಾವಾಹಿಗಳಲ್ಲಿ ಅಭಿನಯಿಸಿ ಜನಮನಕ್ಕೆ ಹತ್ತಿರವಾಗಿದ್ದಾರೆ. ಇವರ 'ಏಕವ್ಯಕ್ತಿ' ಪ್ರದರ್ಶನದ 'ಹೆಣ್ಣಲ್ಲವೇ' ದೇಶವಿದೇಶಗಳಲ್ಲಿ ಪ್ರದರ್ಶನ ಕಂಡು ಜನಮೆಚ್ಚುಗೆ ಗಳಿಸಿದೆ.

ಕನ್ನಡ ಹಾಗೂ ಇಂಗ್ಲಿಷ್ ರಂಗಭೂಮಿಯನ್ನು ಕುರಿತಂತೆ ತೌಲನಿಕ ಅಧ್ಯಯನ ನಡೆಸಿರುವ ಲಕ್ಷ್ಮಿಯವರು ರಂಗಭೂಮಿಗೆ ಸಂಬಂಧಿಸಿದಂಥ ಹಲವು ವಿಚಾರ ಸಂಕಿರಣಗಳಲ್ಲಿ ಪಾಲ್ಗೊಂಡು ಮಹಿಳೆ ಮತ್ತು ರಂಗಭೂಮಿ, ಗಿರೀಶ್ ಕಾರ್ನಾಡ್ ಮತ್ತು ಆಧುನಿಕ ರಂಗಭೂಮಿ, ಷೇಕ್ಸ್‌ಪಿಯರ್ ಬಗ್ಗೆ ಭಾರತೀಯ ಪ್ರತಿಕ್ರಿಯೆಗಳು, ಸಿನಿಮಾ, ದೂರದರ್ಶನಗಳಿಂದ ರಂಗಭೂಮಿಯ ಮೇಲಾಗುತ್ತಿರುವ ಪರಿಣಾಮ ಮುಂತಾದ ವಿಷಯಗಳ ಬಗ್ಗೆ ವಿಚಾರ ವಿನಿಮಯ ನಡೆಸಿದ್ದಾರೆ. ಅಲ್ಲದೇ ರಂಗಕಲೆಯನ್ನು ಕುರಿತಾದ 'ನಾಟಕಗಳು, ನಟರು ಮತ್ತು ನಾಟಕಕಾರರು', 'ರಂಗಭೂಮಿಯಲ್ಲಿ ಮಹಿಳೆ', 'ಕನ್ನಡ ರಂಗಭೂಮಿಯ ಮೌಲ್ಯಮಾಪನ' ಕೃತಿಗಳನ್ನು ಹೊರತಂದಿದ್ದಾರೆ.

ಯುವ ಕಲಾವಿದರನ್ನು ರಂಗಭೂಮಿಗೆ ಪರಿಚಯಿಸುವ ನಿಟ್ಟಿನಲ್ಲಿ ಎನ್.ಎಂ.ಕೆ.ಆರ್.ವಿ. ಕಾಲೇಜಿನ ರಂಗಭೂಮಿ ಚಟುವಟಿಕೆಗಳ ನೇತೃತ್ವ ವಹಿಸಿಕೊಂಡು ಕಾಲೇಜು ರಂಗಭೂಮಿಗೆ ಸಾಕಷ್ಟು ನೆರವಾಗಿದ್ದಾರೆ ಶ್ರೀಮತಿ ಲಕ್ಷ್ಮೀಚಂದ್ರಶೇಖರ್.

---



## ಎಚ್. ಅನಸೂಯ

ಹಿರಿಯ ಕಲಾವಿದೆ ಎಚ್. ಅನಸೂಯ ಅವರು 1948ರಲ್ಲಿ ಶ್ರೀ ಹನುಮಂತಯ್ಯ ಮತ್ತು ಶ್ರೀಮತಿ ಲಕ್ಷ್ಮಮ್ಮ ದಂಪತಿಗಳಿಗೆ ಮಗಳಾಗಿ ಜನಿಸಿದರು. ಶಾಲಾ ಶಿಕ್ಷಣವನ್ನು ಪೂರೈಸಿ, ರಂಗಚಟುವಟಿಕೆಗಳನ್ನೇ ಬದುಕಿಗೆ ಆಧಾರವಾಗಿಸಿಕೊಂಡರು.

ಅನುಸೂಯರವರಿಗೆ ರಂಗಪ್ರವೇಶ ಶಾಲಾದಿನಗಳಲ್ಲೇ ಆಯಿತು. 'ಲಕ್ಷ್ಮೀ ಲಕ್ಷ್ಮಣ' ಸಾಮಾಜಿಕ ನಗೆ ನಾಟಕದ ಪುರುಷವೇಶಧಾರಿ ಲಕ್ಷ್ಮಣನಾಗಿ ಬಣ್ಣದ ಬದುಕಿಗೆ ನಾಂದಿ ಹಾಡಿದರು. ಅದೇ ದಿನಗಳಲ್ಲಿ 'ರಾಮಾಯಣ' ನಾಟಕದ ಆಂಜನೇಯನಾಗಿ, 'ದೇವದಾಸಿ' ನಾಟಕದ 'ಮಣಿ ಮಂಜರಿಯಾಗಿ' ಪಾತ್ರವಹಿಸಿ ರಂಗಪ್ರಿಯರ ಗಮನ ಸೆಳೆದರು. ಹಲವಾರು ರಂಗತಂಡಗಳಿಂದ ನಟನೆಗೆ ಆಹ್ವಾನ ಬಂದು, ಉತ್ತಮ ನಟನೆ ನೀಡಿ ಜನಪ್ರಿಯ ಕಲಾವಿದೆಯಾಗಿ ರೂಪುಗೊಂಡರು.

ಕುರುಕ್ಷೇತ್ರ, ಪ್ರಚಂಡ ರಾವಣ, ದೇವದಾಸಿ, ಕೃಷ್ಣಗಾರುಡಿ, ತ್ರಿಪುರ ಸಂಹಾರ, ಶಿವಜಲಂಧರ, ರಾಜಸೂಯಯಾಗ, ಸತ್ಯವ್ರತ ಹರಿಶ್ಚಂದ್ರ, ರಾಜಾವಿಕ್ರಮ, ಬಭ್ರುವಾಹನ, ಸದಾರಮೆ, ರಕ್ತರಾತ್ರಿ, ಮೂರುವರೆ ವಜ್ರ, ಅಣ್ಣತಂಗಿ, ಬಂಜೆ ತೊಟ್ಟಿಲು, ಬಸ್ ಕಂಡಕ್ಟರ್, ಮಂಗಳಾ ನನ್ನ ಅತ್ತಿಗೆ, ಕಲಿತ ಕಳ್ಳ, ತಾಳಿ ಇಲ್ಲದೆ ತಾಯಿಯಾದೆ ಇತ್ಯಾದಿ ಅನೇಕ ನಾಟಕಗಳಲ್ಲಿ ವಿವಿಧ ಪಾತ್ರಗಳ ಜೊತೆಗೆ ಶ್ರೀ ಕೃಷ್ಣ, ದುರ್ಯೋಧನ, ಕಾಲಭೈರವ, ಕರ್ಣ, ಅರ್ಜುನ ಸೇರಿದಂತೆ ಪುರುಷ ಪಾತ್ರಗಳಲ್ಲಿ ಅಭಿನಯಿಸಿ ಜನಮೆಚ್ಚುಗೆ ಪಡೆದಿದ್ದಾರೆ. ಇದುವರೆವಿಗೂ ಸುಮಾರು 3000ಕ್ಕೂ ಹೆಚ್ಚು ನಾಟಕ ಪ್ರದರ್ಶನಗಳಲ್ಲಿ ಭಾಗವಹಿಸಿ ನಾಡಿನಾದ್ಯಂತ ರಂಗಪ್ರವಾಸ ಮಾಡಿದ್ದಾರೆ ಶ್ರೀಮತಿ ಎಚ್. ಅನಸೂಯ.



## ಅಂಕಲ್ ಶ್ಯಾಂ (ಎಂ.ಎಸ್. ಶ್ಯಾಮಸುಂದರ್)

1968ರಲ್ಲಿ ಮೈಸೂರಿನಲ್ಲಿ ಜನಿಸಿದ ಶ್ಯಾಮ ಸುಂದರ್ ಮೂಲತಃ ಮಲೆನಾಡಿನವರು. ತಂದೆಯ ಕೆಲಸದ ನಿಮಿತ್ತ ಮೈಸೂರು ಸೇರಿ, ಪದವಿ ಪಡೆದು ಈಗ ಮಂಡ್ಯದ ಕೃಷಿ ವಿಶ್ವವಿದ್ಯಾಲಯದಲ್ಲಿ ಸಹಾಯಕ ಆಡಳಿತಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಸುಮಾರು 25 ವರ್ಷಕ್ಕೂ ಮೀರಿ ರಂಗ ಸೇವೆ ಮಾಡಿದ್ದಾರೆ.

70ರ ದಶಕದಲ್ಲಿ ಖ್ಯಾತ ರಂಗ ತಂಡಗಳ ನಾಟಕ ನೋಡುವ ಹಂಬಲ, ಮುಂದೆ ನಟನಾ ಬದುಕಿಗೆ ಪ್ರವೇಶ ನೀಡಿತು. ಚಾಕಲೇಟ್ ಹೀರೋ ಪಾತ್ರಗಳಲ್ಲಿ ಅಭಿನಯಿಸುವ ಮೂಲಕ ರಂಗ ಪ್ರವೇಶ ಮಾಡಿದ ಶ್ಯಾಂಸುಂದರ್‌ಗೆ ರಂಗಭೂಮಿಯ ಗೆಳೆಯರು ಬಹಳ ಪ್ರೀತಿಯಿಂದ ಇಟ್ಟ ಹೆಸರು 'ಅಂಕಲ್ ಶ್ಯಾಂ' ಎಂದು. ಕ್ರಮೇಣ ರಂಗಭೂಮಿಯ ವಿವಿಧ ವಿಭಾಗಗಳ ಬಗ್ಗೆ ಅರಿತುಕೊಳ್ಳುವ ಅವಕಾಶ ಪಡೆದು ರಂಗಸಜ್ಜಿಕೆ, ರಂಗ ಪರಿಕರ, ವಸ್ತ್ರ ವಿನ್ಯಾಸ, ನಾಟಕ ರಚನೆ, ನಿರ್ದೇಶನ ಹೀಗೆ ಎಲ್ಲ ಪ್ರಕಾರಗಳಲ್ಲೂ ಪರಿಣತಿ ಪಡೆದುಕೊಂಡರು. ಸಮಯ ಸಾಧಕರು, ಅಕ್ಕರೆ ಇವರ ಗಮನಾರ್ಹ ರಚನೆಗಳು.

ಕೃಷಿ ಕಾಲೇಜು ವಿದ್ಯಾರ್ಥಿಗಳಿಗಾಗಿ ಗೋರಿಗಳ ನಡುವೆ, ಯಮನ ಸೋಲು, ಮಹಾಯಾತ್ರೆ, ಹಾವಿಲ್ಲದ ಹುತ್ತ, ನೀರು ನೆತ್ತರು, ಬೆಳ್ಳಿ, ಅಕ್ಕರೆ, ಸಮಯ ಸಾಧಕರು ನಾಟಕಗಳ ನಿರ್ದೇಶನ ಮಾಡಿದ್ದಾರೆ. ಸಾಮಾಜಿಕ ಎಚ್ಚರ ಕುರಿತಾದ ಹಲವಾರು ಬೀದಿ ನಾಟಕಗಳನ್ನು ಪ್ರಯೋಗಿಸಿದ್ದಾರೆ. ಗೆಳೆಯ ಡಾ। ಬಿ.ಎಸ್. ವಿಶ್ವನಾಥರೊಂದಿಗೆ 'ಅಂತರಂಗ' ತಂಡವನ್ನು ಹುಟ್ಟುಹಾಕಿ, ತಂಡದ ಕಾರ್ಯದರ್ಶಿಯಾಗಿ ಹೊಣೆ ಹೊತ್ತು ಉತ್ತಮ ನಾಟಕಗಳು ಪ್ರಯೋಗಗೊಳ್ಳಲು ಕಾರಣರಾಗಿದ್ದಾರೆ. ಉತ್ತಮ ಸಂಘಟಕರಾದ ಶ್ಯಾಂಸುಂದರ ಕಿರುತೆರೆಯ ಧಾರವಾಹಿಗಳಲ್ಲೂ ನಟರಾಗಿ ಪರಿಚಿತರು.



## ಎ.ಎನ್. ಕಪಿನಯ್ಯ

ನಾಲ್ಕು ದಶಕಗಳಿಗೂ ಮೀರಿ ಹವ್ಯಾಸಿ ರಂಗಭೂಮಿಯಲ್ಲಿ ಅಭಿನಯ, ರಂಗ ಸಜ್ಜಿಕೆ ಹಾಗೂ ಬೆಳಕು ವಿಭಾಗಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ. ಶ್ರೀ ಎ.ಎನ್. ಕಪಿನಯ್ಯ, ಬಾಲ್ಯದಿಂದಲೇ ನಾಟಕದ ಗೀಳು ಅಂಟಿಸಿಕೊಂಡ ಕಪಿನಯ್ಯ 1958ರಲ್ಲಿ 'ವೀರ ಅಭಿಮನ್ಯು' ಎನಲ್ಲಿ 'ಅರ್ಜುನ' ಪಾತ್ರಧಾರಿಯಾಗಿ ರಂಗ ಪ್ರವೇಶ ಮಾಡಿದರು. ಇವರ ಗುರುಗಳಾಗಿದ್ದ ಎಚ್.ಎಂ. ರಾಮಾರಾಧ್ಯರೇ ಪ್ರೇರಣೆ ನೀಡಿದರು.

1955ರಲ್ಲಿ ಬೆಂಗಳೂರಿನ ಖ್ಯಾತ ರಂಗಸಂಸ್ಥೆ 'ಕಲಾಜ್ಯೋತಿ' ತಂಡ ಸೇರಿ 'ಹುತ್ತದಲ್ಲಿ ಹುತ್ತ', 'ಅಮ್ಮಾವ್ರ ಗಂಡ', 'ಹುಟ್ಟಿದ್ದು ಹೊಲೆಯೂರು', 'ಕತ್ತಲೆ ಬೆಳಕು', 'ಪ್ರಪಂಚ ಪಾಣಿಪತ್ತು', 'ವಿಗಡ ವಿಕ್ರಮರಾಯ', 'ರಕ್ತಾಕ್ಷಿ', 'ಆಷಾಢಭೂತಿ' ನಾಟಕಗಳಲ್ಲಿ ನಟಿಸಿದರು. 'ಅಂಡರ್ ಸೆಕ್ರೆಟರಿ', 'ಬೆಂಬಿಡದ 'ಭೂತ', 'ಭ್ರಮೆ' ಹಾಗೂ 'ನನ್ನ ತಂಗಿಗೊಂದು ಗಂಡು ಕೊಡಿ', ನಾಟಕಗಳಲ್ಲಿ ನಟನೆಯೊಂದಿಗೆ ರಂಗ ಸಜ್ಜಿಕೆ, ಬೆಳಕು ವಿನ್ಯಾಸ ಮಾಡಿದರು.

ಬೆಂಗಳೂರು 'ನಾಟ್ಯ ಸಂಘ' ದ ಆರಂಭಿಕ ಸದಸ್ಯರಾಗಿ, ಪ್ರತಿವರ್ಷ ನಡೆಸುತ್ತಿದ್ದ ಉಲ್ಲಾಳ್ ನಾಟಕ ಸ್ಪರ್ಧೆಯಲ್ಲಿ ರಂಗ ಸಜ್ಜಿಕೆ ಹಾಗೂ ಬೆಳಕಿನ ವಿಭಾಗಗಳಲ್ಲಿ ದುಡಿದಿದ್ದಾರೆ. ಅಂದಿನ ಯಾವುದೇ ಸೌಲಭ್ಯಗಳಿಲ್ಲದಂಥ ದಿನಗಳಲ್ಲೂ ರವೀಂದ್ರ ಕಲಾಕ್ಷೇತ್ರದಂಥ ವಿಶಾಲ ರಂಗಮಂದಿರದಲ್ಲಿ ರಂಗಸಜ್ಜಿಕೆ, ಬೆಳಕು ವಿನ್ಯಾಸ ಮಾಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ 1966ರಲ್ಲಿ ಮೊತ್ತಮೊದಲು ಜಿ.ವಿ. ಶಿವಾನಂದ, ನಾಗರತ್ನ ಜಿ. ರಾವ್‌ರ ನಿರ್ದೇಶನದಲ್ಲಿ ಕಾರ್ನಾಡರ 'ಯಯಾತಿ' ನಾಟಕ ಪ್ರದರ್ಶಿಸಿದಾಗ ಯಶಸ್ವಿಯಾಗಿ ರಂಗಸಜ್ಜಿಕೆ, ದೀಪ ವಿನ್ಯಾಸ ನೀಡಿದ್ದಾರೆ.

ನಂತರ 'ನಟರಂಗ'ದ ಸದಸ್ಯರಾಗಿ ಸಿ.ಆರ್.ಸಿಂಹ, ಬಿ.ವಿ. ಕಾರಂತ, ಜಿ. ಶ್ರೀನಿವಾಸ್ ಅವರ ನೇತೃತ್ವದ ನಾಟಕಗಳಲ್ಲಿ ನಟಿಸಿ ದೆಹಲಿ, ಮದರಾಸು, ಕಲ್ಕತ್ತ, ನಾಟಕೋತ್ಸವಗಳಲ್ಲಿ ಪಾಲ್ಗೊಂಡಿದ್ದಾರೆ. ಈ ತಂಡದ 'ತೊಘಲಕ್' 'ಗುಣಮುಖ', 'ಸಂಕ್ರಾಂತಿ', 'ನನಗೆ ಯಾರ ಹಂಗು', 'ಕಾಕನಕೋಟೆ', 'ಮೃಚ್ಛಕಟಿಕ', 'ತಲೆದಂಡ', 'ಋಷ್ಯ ಶೃಂಗ', 'ಎಲ್ಲಾ ನನ್ನಕ್ಕಳೆ' ನಾಟಕಗಳಲ್ಲಿ ನಟನೆ ಮತ್ತು ರಂಗಸಜ್ಜಿಕೆಗಳಲ್ಲಿ 'ಭಾಗವಹಿಸಿದ್ದಾರೆ. ಎಂ.ಎಸ್. ಸತ್ಯು, ನಿರ್ದೇಶನದ 'ವೋಟಿರಾಮನ ಸತ್ಯಾಗ್ರಹ' ನಾಟಕ ಮತ್ತು ದೂರದರ್ಶನ 'ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ.

ಮೈಸೂರು ಲ್ಯಾಂಪ್ಸ್ ಕಾರ್ಖಾನೆಯಲ್ಲಿ ಉದ್ಯೋಗಿಯಾಗಿದ್ದಾಗ, ಕಾರ್ಖಾನೆಯ ವತಿಯಿಂದ ವಿಶೇಷ ತರಬೇತಿಗಾಗಿ ಸ್ವಿಟ್ಜರ್‌ಲ್ಯಾಂಡಿಗೆ ಹೋಗಿದ್ದಾಗ, ಯೂರೋಪಿನ ಕೆಲವು ಪ್ರದೇಶಗಳ ನಾಟಕಗಳು ಹಾಗೂ ರಂಗಮಂದಿರಗಳನ್ನು ನೋಡಿ ವಿಶೇಷ ಅನುಭವ ಪಡೆದುಕೊಂಡಿರುವ ಕಪಿನಯ್ಯನವರು ಈಗ ಸೇವೆಯಿಂದ ನಿವೃತ್ತಿ ಹೊಂದಿದ್ದರೂ ರಂಗಾಕರ್ಷಣೆ ಉಳಿಸಿಕೊಂಡಿದ್ದಾರೆ.



## ಎಂ.ಬಿ. ಕೃಷ್ಣರಾವ್

ಶ್ರೀ ಎಂ.ಬಿ. ಕೃಷ್ಣರಾವ್ ಆನೇಕಲ್ ತಾಲ್ಲೂಕಿನ, ಮರಸೂರು ಗ್ರಾಮದ ಶ್ರೀ ಚೆನ್ನಪ್ಪ ಮತ್ತು ಶ್ರೀಮತಿ ರಾಮಾಬಾಯಿಯವರ ಏಕೈಕ ಪುತ್ರರಾಗಿ 1922ರಲ್ಲಿ ಜನಿಸಿದರು. ಕೃಷ್ಣರಾವ್ ಅವರಿಗೆ ಕಲೆ ವಂಶಪಾರಂಪರ್ಯವಾಗಿ ಹರಿದು ಬಂದಿದೆ. ಇವರ ಹಿರಿಯರು ಬೊಂಬೆಯಾಟ, ಬಯಲಾಟ, ಯಕ್ಷಗಾನ, ನಾಟಕ ಕಲಾವಿದರಾಗಿ ಜೀವನ ಸವೆಸಿದವರು. ಇಂಥ ಕಲಾವಾತಾವರಣದಲ್ಲಿ ಬೆಳೆದು, ಕಲೆಯನ್ನೇ ಅಪ್ಪಿಕೊಳ್ಳ ಹೊರಟ ಇವರಿಗೆ ಸಹಜವಾಗಿಯೇ ಕುಟುಂಬದ ಪ್ರೋತ್ಸಾಹ ದೊರೆತು ನಾಟಕಗಳಲ್ಲಿ ಅಭಿನಯಿಸತೊಡಗಿದರು. ಆರಂಭದಲ್ಲಿ ಗ್ರಾಮೀಣ ನಾಟಕಗಳಲ್ಲಿ ನಟಿಸುತ್ತಿದ್ದು, ನಂತರ ತಮ್ಮದೇ ಮಾಲೀಕತ್ವದ

'ಶ್ರೀ ಬಾಲಸರಸ್ವತಿ ನಾಟಕ ಮಂಡಲಿ' ಎಂಬ ಕಂಪನಿ ಕಟ್ಟಿಕೊಂಡು ಕರ್ನಾಟಕದಾದ್ಯಂತ ಮಾತ್ರವಲ್ಲದೆ ಆಂಧ್ರ, ತಮಿಳುನಾಡು ರಾಜ್ಯಗಳಲ್ಲಿಯೂ ನಾಟಕ ಪ್ರದರ್ಶನ ನೀಡಿ ಕನ್ನಡದ ಕಂಪನ್ನು ಬೀರಿದ್ದಾರೆ.

ವಿವಿಧ ವ್ಯಕ್ತಿ ಕಂಪನಿಯ ಪೌರಾಣಿಕ ನಾಟಕಗಳಲ್ಲಿ ಕೃಷ್ಣ, ಅರ್ಜುನ, ಧರ್ಮರಾಯ, ದುರ್ಯೋಧನ, ಹರಿಶ್ಚಂದ್ರ, ನಕ್ಷತ್ರಿಕ, ಶ್ರೀರಾಮ, ಯಮಧರ್ಮ, ದೇವೇಂದ್ರ, ಅಭಿಮನ್ಯು, ಘಟೋದ್ಗಜ ಮುಂತಾದ ಪಾತ್ರಗಳಿಗೆ ಜೀವತುಂಬಿ, ನಾಟಕಗಳ ಯಶಸ್ಸಿಗೆ ಕಾರಣರಾಗಿದ್ದಾರೆ.

ನಿರ್ದೇಶಕರಾಗಿ 'ಕುರುಕ್ಷೇತ್ರ', 'ಸತ್ಯಹರಿಶ್ಚಂದ್ರ', 'ಶ್ರೀ ಕೃಷ್ಣಾರ್ಜುನರ ಯುದ್ಧ', 'ಪಾಂಚಾಲಿಯ ಪ್ರತಿಜ್ಞೆ', 'ಸೇಡಿನ ಸರ್ಪ', 'ಶಕುನಿ', 'ಸದಾರಮೆ' ಇನ್ನೂ ಮುಂತಾದ ಜನಪ್ರಿಯ ನಾಟಕಗಳನ್ನು ಸುಮಾರು ನಲ್ವತ್ತು ವರ್ಷಗಳಿಂದಲೂ ಪ್ರಯೋಗಿಸುತ್ತಾ ಬಂದಿದ್ದಾರೆ. ಜೊತೆಗೆ ತಮ್ಮ ನಿರ್ದೇಶನದ ನಾಟಕಗಳಿಗೆ ತಾವೇ ಸಂಗೀತ ಸಂಯೋಜಿಸಿದ್ದಾರೆ. 75ರ ಇಳಿವಯಸ್ಸಿನಲ್ಲೂ ಕಲಾಸೇವೆಯನ್ನು ಮುಂದುವರೆಸುತ್ತಾ, ತಮ್ಮ ಮಕ್ಕಳನ್ನು ಈ ಕಲಾಲೋಕಕ್ಕೆ ಕಾಣಿಕೆಯಾಗಿ ನೀಡಿ ಯುವ ರಂಗಾಸಕ್ತರಿಗೆ ಮಾದರಿಯಾಗಿದ್ದಾರೆ ಶ್ರೀಯುತ ಎಂ.ಬಿ. ಕೃಷ್ಣರಾವ್.



## ಗೌರಿದತ್ತು

ಶ್ರೀಮತಿ ಗೌರಿದತ್ತು 17ರ ಸೆಪ್ಟೆಂಬರ್ 1950ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಕನ್ನಡ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವೀಧರೆಯಾದ ಗೌರಿಗೆ ರಂಗ ಹವ್ಯಾಸ ಬಾಲ್ಯದಿಂದಲೇ ಬೆಳೆಯಿತು. ಕಲಾಮಂದಿರದ ವಾತಾವರಣದಲ್ಲಿ ಬೆಳೆದು, ನ್ಯಾಷನಲ್ ಕಾಲೇಜಿನಲ್ಲಿ ಪದವಿ ಓದುತ್ತಿದ್ದಾಗ 'ಸಾಕ್ರಟೀಸ್' 'ಸಾಗರಕ್ಕೆ ಸವಾರರು' ನಾಟಕಗಳಲ್ಲಿ ನಟಿಸಿದರು.

ನಂತರ ಮಕ್ಕಳ ನಾಟಕಗಳಿಂದ ಹವ್ಯಾಸಿ ರಂಗ ಪ್ರವೇಶ ಮಾಡಿದ ಗೌರಿ 'ಆ ಮನಿ' 'ಕಾಬೂಲಿವಾಲ', 'ಕಿಟ್ಟಿಕಥೆ', 'ಜಂಬೂ ಸವಾರಿ' 'ಬಯಲು ಸೀಮೆ ಸರದಾರ', 'ಹುತ್ತವ ಬಡಿದರೆ', 'ಋಷ್ಯಶೃಂಗ', 'ಟೋಪಿಯಾಟವಯ್ಯ', 'ಸಿರಿಸಂಪಿಗೆ', 'ಅಂತಿಗೊನೆ', 'ಹ್ಯಾಮ್ಲೆಟ್', 'ಧನ್ವಂತರಿ ಚಿಕಿತ್ಸೆ', 'ಉಳ್ಳವರ ನೆರಳು' ಮುಂತಾದ ನಾಟಕ ಪ್ರದರ್ಶನಗಳಲ್ಲಿ 'ಭಾಗವಹಿಸಿ ರಾಜ್ಯಾದ್ಯಂತ ಪ್ರವಾಸ ಮಾಡಿದ್ದಾರೆ.

ಇದುವರೆಗೂ 2000 ಬೀದಿ ನಾಟಕಗಳಲ್ಲಿ ಅಭಿನಯಿಸಿರುವುದು ಗಮನಾರ್ಹ ಸಂಗತಿ. ಉತ್ತಮ ಗಾಯಕಿ, ಸಂಗೀತ ನಿರ್ದೇಶಕಿ, ಸಂಘಟಕಿ, ನಿರ್ದೇಶಕಿಯೂ ಆಗಿರುವ ಇವರು ರಂಗಧುರೀಣರಾದ ಬಿ.ವಿ. ಕಾರಂತ, ಕಂಬಾರ, ಎ.ಎಸ್. ಮೂರ್ತಿ, ವಿ. ರಾಮಮೂರ್ತಿ, ಸುರೇಶ್ ಆನಗಳ್ಳಿ, ಎಸ್. ಮಾಲತಿ, ಬಾದರದಿನ್ನಿ ಇವರುಗಳೊಡನೆ ಕೆಲಸ ಮಾಡಿ ಪಡೆದ ರಂಗಾನುಭವ ಇವರ ಈ ಎಲ್ಲಾ ಸಾಧನೆಗೆ ಮೂಲ.

ಮಕ್ಕಳ ನಾಟಕಗಳಿಗೆ ವಿಶೇಷ ಮಾನ್ಯತೆ ನೀಡುವ ಗೌರಿಯವರು ಸೋಲಿಗರ ಮಕ್ಕಳಿಗಾಗಿ ಬಿಳಿಗಿರಿ ಬೆಟ್ಟದಲ್ಲಿ ಹದಿನೈದು ದಿನಗಳ ರಂಗ ತರಬೇತಿ ಶಿಬಿರವನ್ನು ನಡೆಸಿ, 'ಸೋಲದ ಸೋಲಿಗರು', ನಾಟಕವನ್ನು ಶಿಬಿರಾರ್ಥಿಗಳಿಗಾಗಿ ನಿರ್ದೇಶಿಸಿದ್ದಾರೆ. 'ಮಾಧ್ಯಮ' ತಂಡಕ್ಕೆ ಯಾರು ಹೆಚ್ಚು, ಚಿತ್ರಾಪುರದ ಮಕ್ಕಳಿಗೆ ಕುಣಿಯೋಣು ಬಾರ' ನಾಟಕಗಳನ್ನು ನಿರ್ದೇಶಿಸಿ, ಮಕ್ಕಳಿಗಾಗಿಯೇ ರಾಜ್ಯಾದ್ಯಂತ ರಂಗ ಶಿಬಿರಗಳನ್ನು ಏರ್ಪಡಿಸುತ್ತ ಬಂದಿದ್ದಾರೆ.

ಇವರ ಮತ್ತೊಂದು ಗಮನಾರ್ಹ ಸಾಧನೆಯೆಂದರೆ ಪಪೆಟ್ ಲ್ಯಾಂಡ್ ಮೂಲಕ ಗಿರೀಶ್ ಕಾರ್ನಾಡ್, ಚಂಪಾ, ಎ.ಎಸ್. ಮೂರ್ತಿ, ಕಂಬಾರ, ಗಿರಡ್ಡಿ ಗೋವಿಂದರಾಜ್, ದೇವಕಿ ಮೂರ್ತಿ ಮುಂತಾದವರ ನಾಟಕಗಳನ್ನು ಬೊಂಬೆ ನಾಟಕಗಳಾಗಿ ಅಳವಡಿಸಿ ನಾಡಿನಾದ್ಯಂತ ಪ್ರದರ್ಶಿಸಿದ್ದಾರೆ. ಇದು ದೂರದರ್ಶನದಲ್ಲಿ ಪ್ರಸಾರವಾಗಿದೆ. ಇಷ್ಟೇ ಅಲ್ಲದೆ ಕ್ಯಾಸೆಟ್ ನಾಟಕಗಳು, ಮಡಗಾಂವ್ ಕನ್ನಡ ಸಂಘದಲ್ಲಿ ಸಾಂಸ್ಕೃತಿಕ ಚಟುವಟಿಕೆಗಳು, ಅಭಿನಯ ತರಂಗ ಶಾಲೆಯ ನಿರ್ವಹಣೆಯೊಂದಿಗೆ, 'ಬಿಂಬ' ಹೆಸರಿನ ಮಕ್ಕಳ ನಾಟಕ ಸಂಸ್ಥೆ ಆರಂಭಿಸಿ ಹನುಮಂತನಗರ,

ವಿಜಯನಗರ ಶಾಖೆಗಳಲ್ಲಿ ನಿರ್ದೇಶಕಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಮಕ್ಕಳಿಗಾಗಿಯೇ ನಾಟಕಗಳನ್ನು ರಚಿಸಿ, ಪ್ರಕಟಿಸಿದ್ದಾರೆ ಶ್ರೀಮತಿ ಗೌರಿದತ್ತು.

---



## ಡಾ. ಗುರುರಾವ್ ಬಾಪಟ್

ಸಾಗರದ 'ಉದಯ ಕಲಾವಿದರು' ತಂಡದ ಮುಖ್ಯ ರಂಗಕರ್ಮಿಗಳಲ್ಲಿ ಒಬ್ಬರಾದ ಗುರುರಾವ್ ಬಾಪಟ್ ಇಂಗ್ಲಿಷ್ ಸಾಹಿತ್ಯದ ಎಂ.ಎ., ಪಿ.ಎಚ್.ಡಿ. ಪದವೀಧರರು. ಸಾಗರದ ಎಲ್.ಬಿ. ಮತ್ತು ಎಸ್.ಬಿ.ಎಸ್. ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶಾಲಾ ದಿನಗಳಲ್ಲೇ 'ಉದಯ ಕಲಾವಿದರು' ತಂಡಕ್ಕೆ ಸದಸ್ಯನಾಗಿ ಸೇರ್ಪಡೆ ಹೊಂದಿದ ಬಾಪಟ್, ಇದುವರೆಗೂ ನೂರಾರು ನಾಟಕಗಳಲ್ಲಿ, ವೈವಿಧ್ಯಪೂರ್ಣ ಪಾತ್ರಗಳನ್ನು ಸಮರ್ಥವಾಗಿ ನಿರ್ವಹಿಸಿದ್ದಾರೆ, ನಾಟಕಗಳನ್ನು ನಿರ್ದೇಶಿಸಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ಮೂರು ಕಾಸಿನ ಆಟ, ತುಘಲಕ್, ಹಯವದನ, ಸಂಕ್ರಾಂತಿ, ಜೂಲಿಯಸ್ ಸೀಸರ್, ನೀಕೊಡೆ ನಾಬಿಡೆ, ಬೆಳ್ಳಿ ಬೆಳಕಿನ ಹಿಂದೆ ಈ ಕೆಲವನ್ನು ಹೆಸರಿಸಬಹುದು. ನಾಟಕಕಾರರು ಆಗಿರುವ ಶ್ರೀಯುತರು ಮುಖ್ಯವಾಗಿ ಮಕ್ಕಳ ನಾಟಕ ಸಾಹಿತ್ಯಕ್ಕೆ ಕೊಡುಗೆಯಾಗಿ ಬೇಟೆ, ಅಭಯಾರಣ್ಯ, ಅಲ್ಲಾ ಉದ್ದೀನನ ಅದ್ಭುತ ದೀಪ ಇತ್ಯಾದಿ ನಾಟಕಗಳನ್ನು ರಚಿಸಿದ್ದಾರೆ. ಸಪ್ದರ್ ಹಶ್ಮಿ ಅವರೊಡಗೂಡಿ ದಿಲ್ಲಿಯಲ್ಲಿ ಹಿಂದಿ ಭಾಷೆಯ ಬೀದಿ ನಾಟಕಗಳಲ್ಲಿ ಸಕ್ರಿಯ ಪಾತ್ರವಹಿಸಿದ್ದಾರೆ. ರಂಗಭೂಮಿ, ಯಕ್ಷಗಾನ, ಸಂಸ್ಕೃತಿ ಬಗ್ಗೆ ವಿಶೇಷ ಅಭ್ಯಾಸ ಮಾಡಿ ಕನ್ನಡ ಮತ್ತು ಇಂಗ್ಲಿಷಿನ ಪ್ರಮುಖ ಪತ್ರಿಕೆಗಳಿಗೆ ಹತ್ತಾರು ಲೇಖನಗಳನ್ನು ಬರೆದಿದ್ದಾರೆ. 'ಯಕ್ಷಗಾನ' ಅರ್ಥಸ್ವರೂಪದ ಬಗ್ಗೆ ಮಹಾಪ್ರಬಂಧ ರಚಿಸಿ ಡಾಕ್ಟರೇಟ್ ಪದವಿ ಪಡೆದಿದ್ದಾರೆ.

ಶಿವಮೊಗ್ಗೆಯ 'ಅಭಿನಯ' ತಂಡದ ಪ್ರಾರಂಭಿಕ ಸದಸ್ಯರಾಗಿ, ತಂಡಕ್ಕೆ ಹಲವು ನಾಟಕಗಳನ್ನು ನಿರ್ದೇಶಿಸಿದ್ದಾರೆ. ಸಾಗರದಲ್ಲಿ ತಮ್ಮದೇ ಆದ 'ಅಭಿರುಚಿ' ತಂಡ ಸ್ಥಾಪಿಸಿ ಉತ್ತಮ ನಾಟಕಗಳನ್ನು ರಂಗಕ್ಕೆ ಅಳವಡಿಸುವ ಯತ್ನದಲ್ಲಿ ಯಶಸ್ಸು ಪಡೆದಿದ್ದಾರೆ. ಗ್ರಾಮೀಣ ರಂಗಭೂಮಿ, ಜನರತ್ತ ರಂಗಭೂಮಿ ಮುಂತಾದ ಕಾರ್ಯಕ್ರಮಗಳನ್ನು ತಮ್ಮ ತಂಡದೊಂದಿಗೆ ಹಮ್ಮಿಕೊಂಡು ಕಾರ್ಯಪ್ರವೃತ್ತರಾಗಿದ್ದಾರೆ.

ಪ್ರಸ್ತುತ '20ನೇ ಶತಮಾನದ ಕನ್ನಡ ನಾಟಕ' ಈ ಬಗ್ಗೆ ಕೃತಿ ರಚಿಸುತ್ತಿರುವ ಬಾಪಟ್ ಅವರು ಸಮಾಜದ ಎಲ್ಲ ಸ್ತರಗಳನ್ನು ಮುಟ್ಟಬಲ್ಲ, ಜನರ ಬದುಕಿನ ಅವಿಭಾಜ್ಯ ಅಂಗವಾಗಿ ಅವರ ಆಶೋತ್ತರಗಳಿಗೆ ಸ್ಪಂದಿಸಬಲ್ಲ ರಂಗಭೂಮಿಯನ್ನು ಶೋಧಿಸುವತ್ತ ಹೆಜ್ಜೆ ಹಾಕುತ್ತಿದ್ದಾರೆ.

---



## ಗೋಪಾಲಕೃಷ್ಣ ಪಿ. ನಾಯಕ

ನಟ, ನಾಟಕಕಾರ, ಸಂಘಟಕ, ನೃತ್ಯಪಟು, ಕ್ರೀಡಾಪಟು ಹೀಗೆ ಹಲವು ಕ್ಷೇತ್ರಗಳ ಪ್ರತಿಭಾ ಸಂಗಮವಾಗಿದ್ದಾರೆ ಶ್ರೀ ಗೋಪಾಲಕೃಷ್ಣ ಪಾಂಡುರಂಗ ನಾಯಕ. 1929ರಲ್ಲಿ ಉತ್ತರ ಕನ್ನಡದ ತೊರ್ಕೆ ಗ್ರಾಮದಲ್ಲಿ ಜನಿಸಿದ ನಾಯಕರು, ಬಿ.ಎಸ್ಸಿ., ಬಿ.ಎಡ್. ಪದವೀಧರರಾಗಿ, 34 ವರ್ಷ ಅಧ್ಯಾಪನ ವೃತ್ತಿಯಲ್ಲಿ ಸೇವೆ ಸಲ್ಲಿಸಿ, ಮುಖ್ಯೋಪಾಧ್ಯಾಯರಾಗಿ ನಿವೃತ್ತಿ ಹೊಂದಿದ್ದಾರೆ.

ಎಳೆತನದಿಂದಲೇ ರಂಗಭೂಮಿಯಲ್ಲಿ, ನೃತ್ಯ ಕಲೆಯಲ್ಲಿ ಒಲವು ಬೆಳೆಸಿಕೊಂಡಿದ್ದ ನಾಯಕರು, ಆರಂಭದಲ್ಲಿ ಸ್ತ್ರೀಪಾತ್ರಗಳ ಸೊಗಸಾದ ನಿರ್ವಹಣೆಯಿಂದ ಗಮನ ಸೆಳೆದು, ನಂತರ ಪುರುಷ

ಪಾತ್ರಗಳಲ್ಲಿ ಶ್ರೇಷ್ಠ ನಟರೆಂಬ ಹೆಗ್ಗಳಿಕೆಗೆ ಪಾತ್ರರಾದರು. 150ಕ್ಕೂ ಹೆಚ್ಚು ಹವ್ಯಾಸಿ, ಕಂಪನಿ ನಾಟಕಗಳಲ್ಲಿ ಪ್ರಮುಖ ಪಾತ್ರದಲ್ಲಿ ಅಭಿನಯಿಸಿರುವ ಶ್ರೀಯುತರು ದೇವದಾಸಿ, ಕುಂಕುಮ, ಉತ್ತರೆ–ಅಭಿಮನ್ಯು ಮೊದಲಾದ ನಾಟಕಗಳನ್ನು ರಂಗಕ್ಕೆ ಅಳವಡಿಸಿ, ಉತ್ತಮ ಪ್ರದರ್ಶನ ನೀಡಿದ್ದಾರೆ.

ಚಿಕ್ಕಂದಿನಿಂದ ನೃತ್ಯದ ಕಡೆಗೂ ಆಸಕ್ತಿ ಹರಿಸಿದ ನಾಯಕರು ನಾಟ್ಯಾಚಾರ್ಯ ಶ್ರೀನಿವಾಸ ಕುಲಕರ್ಣಿಯವರಿಂದ ಶಾಸ್ತ್ರೀಯವಾಗಿ ಭರತನಾಟ್ಯವನ್ನು ಅಭ್ಯಾಸ ಮಾಡಿ ಹಲವಾರು ಪ್ರದರ್ಶನ ನೀಡಿದ್ದಾರೆ. ಕುವೆಂಪು, ಬೇಂದ್ರೆಯವರ ಗೀತೆಗಳಿಗೆ ಮೊಟ್ಟ ಮೊದಲು ನೃತ್ಯಾಭಿನಯಗೈದು ಜನ–ಮನ ಸೂರೆಗೊಂಡಿದ್ದಾರೆ. ಕಿಸಾಗೋತಮಿ, ಗೋಕುಲ ನಿರ್ಗಮನ, ರಂಗ ಪಂಚಮಿ, ಪುರಂದರರಂಗ ಮೊದಲಾದ ರೂಪಕಗಳನ್ನು ರಂಗಕ್ಕೆ ಅಳವಡಿಸಿ ಪ್ರದರ್ಶಿಸಿದ್ದಾರೆ. ಬಾದಾಮಿಯಲ್ಲಿ ನಡೆದ ಕರ್ನಾಟಕ ನೃತ್ಯ ನವೋದಯ ಕಾರ್ಯಾಗಾರದಲ್ಲಿ ನಾಟ್ಯಾಚಾರ್ಯರಾಗಿ, ಚಾಲುಕ್ಯ ರಾಜ್ಯೋತ್ಸವದಲ್ಲಿ ನಾಟ್ಯತಜ್ಞರಾಗಿ ಕಾರ್ಯ ನಿರ್ವಹಿಸಿದ್ದಾರೆ. ಬರವಣಿಗೆಯ ಗೀಳನ್ನು ಮೈಗೂಡಿಸಿಕೊಂಡಿರುವ ಇವರು ಅನೇಕ ಏಕಾಂಕಗಳನ್ನು ಬರೆದಿದ್ದಾರೆ. ದೇವಮೂರ್ತಿ, ನೂರು ರೂಪಾಯಿ ನೋಟು, ಜೀವನ–ಸಂಜೀವಿನಿ, ನಟ ನಾಟಕ, ಹರಿಶ್ಚಂದ್ರಮತಿ ಇವರ ಜನಪ್ರಿಯ ನಾಟಕಗಳು.

ಅನೇಕ ಸಾಹಿತ್ಯ ಸಮ್ಮೇಳನಗಳಲ್ಲಿ, ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ ಕರ್ನಾಟಕದ ಜನಪದ ಕಲೆ, ನಾಟಕ, ವಿಮರ್ಶೆ ಕುರಿತಂತೆ ಉಪನ್ಯಾಸ ನೀಡಿದ್ದಾರೆ. ದೆಹಲಿಯಲ್ಲಿ ನಡೆದ ಕಲಾಮಹೋತ್ಸವದಲ್ಲಿ ಪಾಲ್ಗೊಂಡಿರುವ ನಾಯಕರು ಉತ್ತರ ಕನ್ನಡ ಜಿಲ್ಲೆಯ ಪ್ರಸಿದ್ಧ ಕಲಾವಿದರು.

---



## ಹೆಚ್. ಜನಾರ್ಧನ (ಜನ್ನಿ)

ಬಹುಮುಖ ಪ್ರತಿಭೆಯ ಹೆಚ್. ಜನಾರ್ಧನ ಸುಮಾರು ಎರಡೂವರೆ ದಶಕದಿಂದ ಹವ್ಯಾಸಿ ರಂಗಭೂಮಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಸಮುದಾಯ ರಂಗ ಚಳವಳಿಯ ಮೂಲಕ ರಂಗಪ್ರವೇಶ ಮಾಡಿದ ಇವರು ಸಮರ್ಥ ನಿರ್ದೇಶಕರಾಗಿ, ಗಾಯಕರಾಗಿ, ಸಂಗೀತ ನಿರ್ದೇಶಕರಾಗಿ ನಾಡಿನಾದ್ಯಂತ 'ಜನಮನ'ದ ಜನ್ನಿ ಎಂದೇ ಖ್ಯಾತರಾಗಿದ್ದಾರೆ. ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯಲ್ಲಿ ನಿರ್ದೇಶನದಲ್ಲಿ ವಿಶೇಷ ಪರಿಣತಿಯ ಪದವಿ ಪಡೆದ ಜನ್ನಿ ಮೈಸೂರಿನ ರೀಜನಲ್ ಕಾಲೇಜಿನ ಡೆಮಾನ್‌ಸ್ಟ್ರೇಷನ್ ಶಾಲೆಯಲ್ಲಿ ನಾಟಕ ಶಾಸ್ತ್ರದ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದಾರೆ.

ಇವರ ರಂಗಪಯಣದಲ್ಲಿ ನಾಡಿನ ಜನಪದ ಸಮುದಾಯ ಸಂಘಟನೆಯ ರಾಜ್ಯಮಟ್ಟದ ಪ್ರಧಾನ ಕಾರ್ಯದರ್ಶಿಯಾಗಿ, ಹಳ್ಳಿಹಳ್ಳಿಗಳನ್ನು ಸುತ್ತಿ ಸಮುದಾಯದ ರಂಗ ಘಟಕಗಳನ್ನು ಕಟ್ಟಿ ಬೆಳೆಸಲು ದುಡಿದಿದ್ದಾರೆ. ನಾಡಿನಾದ್ಯಂತ ನಟರು, ಗಾಯಕರನ್ನು ತರಬೇತುಗೊಳಿಸಿ, ರಂಗಶಿಬಿರಗಳು, ನಾಟಕೋತ್ಸವಗಳು, ವಿಚಾರ ಸಂಕಿರಣಗಳನ್ನು ಸಂಘಟಿಸುವುದರೊಂದಿಗೆ, ದಲಿತ ರಂಗಭೂಮಿ, ಬೀದಿ ಮಕ್ಕಳ ರಂಗಭೂಮಿ ಹಾಗೂ ಮಹಿಳಾ ಸಂಘಟನೆಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ರೂಪಿಸಿದ್ದಾರೆ.

ನಟರಾಗಿ 'ಹಯವದನ', 'ತಾಯಿ', 'ಕತ್ತಲೆ ದಾರಿ ದೂರ', 'ಹುತ್ತವ ಬಡಿದರೆ', 'ಕುಂಬಿ ಮತ್ತು ಇಯಾಲ', 'ಸಂಸ್ಕಾರ', 'ಚೋರ ಚರಣದಾಸ', 'ಕುರಿ' ನಾಟಕಗಳೊಂದಿಗೆ 'ಬೆಲ್ಚಿ' 'ಪತ್ರೆ ಸಂಗಪ್ಪನ ಕೊಲೆ' ಬೀದಿನಾಟಕಗಳಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ರಂಗನಿರ್ದೇಶಕರಾಗಿ 'ಕುಸುಮ ಬಾಲೆ', 'ತುಕ್ರನ ಕನಸು', 'ಮುಟ್ಟಿಸಿಕೊಂಡವನು', 'ಹುತ್ತವ ಬಡಿದರೆ', 'ಮಾರೀಚನ ಬಂಧುಗಳು', 'ಕತ್ತಲೆ ದಾರಿ ದೂರ', 'ಕಕೇಷಿಯನ್ ಚಾಕ್ ಸರ್ಕಲ್', 'ಸೂರ್ಯ ಶಿಕಾರಿ', 'ಚೋರ ಚರಣದಾಸ', ಮುಂತಾದ ನಾಟಕಗಳಲ್ಲದೆ, ಬೆಲ್ಚಿ, ಎಚ್ಚರ, ಗಾಂಧಿ ಹೇಳಿದ್ದು, ಡಾಂಬರ ಬಂದುದು, ಬೀದಿ ನಾಟಕಗಳನ್ನು ನಿರ್ದೇಶಿಸುವುದರ ಮೂಲಕ ಬೀದಿ ನಾಟಕ ಚಳವಳಿಯನ್ನು ಬೆಳೆಸುವಲ್ಲಿ ಪ್ರಮುಖರಾಗಿದ್ದಾರೆ. ಇವರೇ ರಚಿಸಿ ನಿರ್ದೇಶಿಸಿದ ಪತ್ರೆ ಸಂಗಪ್ಪನ ಕೊಲೆ, ನರಗುಂದ ಬಂಡಾಯ, ಸ್ವಾತಂತ್ರ್ಯ

ಅಂದು ಇಂದು ನಾಟಕಗಳು – ನಾಡಿನಾದ್ಯಂತ ಮಾತ್ರವಲ್ಲದೆ ಕಲ್ಕತ್ತ, ದೆಹಲಿ, ಹೈದರಾಬಾದ್, ಭೂಪಾಲ್‌ನಲ್ಲೂ ಪ್ರದರ್ಶನ ಕಂಡಿವೆ. ಜನ್ನಿಯವರ ಮತ್ತೊಂದು ಮುಖ್ಯ ಸಾಧನೆ ಎಂದರೆ 'ಕಾವ್ಯರಂಗ ಪ್ರಯೋಗ', ವಾಚನಾಭಿರುಚಿಗೆ ಸೀಮಿತವಾಗಿದ್ದ ಕನ್ನಡ ಕಾವ್ಯ ಪರಂಪರೆಗೆ ರಂಗಭೂಮಿಯ ಆಯಾಮವನ್ನು ನೀಡಿದವರಲ್ಲಿ ಜನ್ನಿ ಪ್ರಮುಖರು.

ಸಿಂಗಿರಾಜ, ಸಂಪಾದನೆ, ಸಮಗಾರ ಭೀಮವ್ವ, ಅಲ್ಲೆ ಕುಂತವ್ರೆ, ಕತ್ತೆ ಮತ್ತು ಧರ್ಮ, ಕಳ್ಳಿ, ನಾಗಿ ಇವರ ಕಾವ್ಯ ರಂಗ ಪ್ರಯೋಗಗಳು. ರಂಗಸಂಗೀತ ನಿರ್ದೇಶಕರಲ್ಲೂ ಪ್ರಮುಖ ಹೆಸರಾದ ಜನ್ನಿ ಸೂರ್ಯ ಶಿಕಾರಿ, ಧರ್ಮಪುರಿಯ ದೇವದಾಸಿ ದ್ಯಾವನೂರು, ಮನೆ, ಬಡವಾಯಿ ಮಾದಪ್ಪ, ಜೇ ಸವಾರ್, ಮ್ಯಾನ್ ಅಂಡ್ ಮ್ಯಾನ್ ತಸ್ಕರ, ಅವ್ವ, ಜಸ್ಮಾ ಓಡೆನ್, ಕೆರೆಗೆ ಹಾರ, ನಾಟಕಗಳಿಗೆ ಸಂಗೀತ ನಿರ್ದೇಶನ ನೀಡಿದ್ದಾರೆ. ಚಲನಚಿತ್ರಗಳಿಗೆ ಗಾಯಕರಾಗಿ, 'ನೋಡು ಬಾ ನಮ್ಮೂರ' ಚಿತ್ರಕ್ಕಾಗಿ ವಿಶೇಷ ಹಿನ್ನೆಲೆ ಗಾಯಕರಾಗಿ ರಾಜ್ಯ ಪ್ರಶಸ್ತಿ ಪಡೆದಿದ್ದಾರೆ. ಕಳೆದ ಒಂದು ದಶಕದಿಂದ ಮೈಸೂರಿನ ಸಾಂಸ್ಕೃತಿಕ ಸಂಘಟನೆಯಾದ 'ಜನಮನ' ದೊಂದಿಗೆ ಕೆಲಸ ಮಾಡುತ್ತ, ರಂಗ ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಂಡಿದ್ದಾರೆ ಜನಾರ್ಧನ ಅರ್ಥಾತ್ ಜನ್ನಿ.

---



## ಪಿ. ತಿಪ್ಪೇಸ್ವಾಮಿ

ಚಿತ್ರದುರ್ಗದ ಚಳ್ಳಕೆರೆಯಲ್ಲಿ 1946ರಲ್ಲಿ ತಿಪ್ಪೇಸ್ವಾಮಿ ಜನಿಸಿದರು. ಬಿ.ಎ., ಬಿ.ಎಡ್, ಪದವೀಧರರಾದ ಇವರು ಪ್ರಸ್ತುತ ಚಳ್ಳಕೆರೆಯ ಶ್ರೀ ಕಾಟಲಿಂಗೇಶ್ವರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ತಿಪ್ಪೇಸ್ವಾಮಿಯವರ ರಂಗಚಟುವಟಿಕೆ 1960ರಲ್ಲಿ 'ಸುಧನ್ವ' ಎಂಬ ನಾಟಕದ 'ನಾರದ' ಪಾತ್ರದ ಮೂಲಕ ಆರಂಭವಾಯಿತು. ರಂಗಭೂಮಿಗೆ ಪೂರಕವಾಗಿ, ಮೊದಲೇ ಉತ್ತಮ ಕಂಠವಿದ್ದುದರಿಂದ ಶಾಸ್ತ್ರೀಯ ಸಂಗೀತಾಭ್ಯಾಸದೊಂದಿಗೆ, ಹಾರ್ಮೋನಿಯಂ ನುಡಿಸುವುದನ್ನೂ ಕಲಿತರು.

1976ರಲ್ಲಿ 'ಶ್ರೀ ಕಾಟಲಿಂಗೇಶ್ವರ ನಾಟಕ ಸಂಘ'ವನ್ನು ಪ್ರಾರಂಭಿಸಿ ಅನೇಕ ಪೌರಾಣಿಕ, ಸಾಮಾಜಿಕ ನಾಟಕಗಳನ್ನು ನಿರ್ದೇಶಿಸಿ, ಸಂಗೀತ ಸಂಯೋಜನೆಯನ್ನು ಮಾಡಿದ್ದಾರೆ. 'ನಾಟ್ಯರಾಣಿ', 'ಬಸ್ ಹಮಾಲಿ', 'ದುರಹಂಕಾರಿ', 'ಆಶಾಲತಾ', 'ಸರ್ಪ ಸಾಮ್ರಾಜ್ಯ', 'ಕಲಿಯುಗ ಶಕುನಿ', 'ಮಂಗಳಾ ನನ್ನ ಅತ್ತಿಗೆ', 'ಭಕ್ತ ಸುಧನ್ವ', 'ರಾಜವೀರ ಮದಕರಿ ನಾಯಕ', ತಿಪ್ಪೇಸ್ವಾಮಿಯವರು ನಿರ್ದೇಶಿಸಿ, ಸಂಗೀತ ನೀಡಿದ ಮುಖ್ಯ ನಾಟಕಗಳು.

ಚಿತ್ರದುರ್ಗ ಜಿಲ್ಲೆಯ ನಾನಾ ಕಡೆ ತಮ್ಮ ತಂಡದಿಂದ ನಾಟಕ ಪ್ರದರ್ಶನ ನೀಡಿರುವುದಲ್ಲದೆ ಜಿಲ್ಲಾ ನಾಟಕೋತ್ಸವ, ದುರ್ಗೋತ್ಸವ, ಮೈಸೂರು ದಸರಾ ನಾಟಕೋತ್ಸವ ಸೇರಿದಂತೆ ರಾಜ್ಯದ ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ನಾಟಕ ಪ್ರದರ್ಶನ ನೀಡಿ, ಜನಮನ್ನಣೆ ಪಡೆದಿದ್ದಾರೆ. 1999ರಲ್ಲಿ 'ಶ್ರೀ ಶ್ರೀ ಶ್ರೀ ಜಗಲೂರಜ್ಜ ಮಹಾಸ್ವಾಮಿ ಮಹಾತ್ಮೆ' ಎಂಬ ಮ್ಯಾಸಬೇಡರ ದಾರ್ಶನಿಕ ಪುರುಷರ ನಾಟಕ ನಿರ್ದೇಶಿಸಿ, ಸಂಗೀತ ನೀಡಿ ರಂಗದ ಮೇಲೆ ಪ್ರದರ್ಶಿಸಿದ್ದಾರೆ.

ಬಿಡುವಿನ ವೇಳೆಯಲ್ಲಿ ಹೊಸ ನಾಟಕಗಳಿಗೆ ಸಾಹಿತ್ಯ, ಸಂಗೀತ, ಜೋಡಣೆಯ ಕೆಲಸದಲ್ಲಿ ತೊಡಗಿಸಿಕೊಂಡು, ರಂಗಕ್ರಿಯೆಗಳಲ್ಲಿ ಸದಾ ಚಟುವಟಿಕೆಯಿಂದಿದ್ದಾರೆ ಶ್ರೀಯುತ ತಿಪ್ಪೇಸ್ವಾಮಿಯವರು.

---



## ಪಿ. ಧನಂಜಯ

'ಕಲೆ ಎಂಬುದು ಒಂದು ವರವಿದ್ದಂತೆ. ಅದನ್ನು ಪಡೆಯಲು ತಕ್ಕ ಪರಿಶ್ರಮ, ಸಾಧನೆ, ತಪಸ್ಸು ಬೇಕು' ಎಂಬ ತತ್ವದ ಮೇಲೆ ಕಲಾಸೇವೆಗೈಯುತ್ತ ಬಂದಿದ್ದಾರೆ ಹವ್ಯಾಸಿ ರಂಗನಟರಾದ ಶ್ರೀ ಪಿ. ಧನಂಜಯ, ಶ್ರೀ ದಾಮೋದರ್ ಶೆಟ್ಟಿಗಾರ್ ಹಾಗೂ ಶ್ರೀಮತಿ ಗಿರಿಜರವರ ಪುತ್ರರಾಗಿ 1962ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜನಿಸಿದ ಧನಂಜಯ, ಕರಾವಳಿಯ ಸುಂದರ ತಾಣದ, ಚೆಂಡಮದ್ದಳೆಯ ಝೇಂಕಾರದಲ್ಲಿ ಬೆಳೆದವರು. ಯಕ್ಷಗಾನ ಲಹರಿಯ ಗುಂಗಿನಲ್ಲಿ ಬಾಲ್ಯಾವಸ್ಥೆಯನ್ನು ಕಳೆದ ಇವರು ಶ್ರೀ ಹೊನ್ನಯ್ಯ ಕರ್ಕೇರರ ಬಳಿ ಕತ್ತಿವರಸೆ, ಲಾಠಿವರಸೆಗಳನ್ನು ಕಲಿತು ಅದರಲ್ಲಿ ಪರಿಣತಿ ಸಾಧಿಸಿಕೊಂಡಿದ್ದಾರೆ. ಬಾಲ್ಯದಲ್ಲಿಯೇ 'ಛದ್ಮವೇಷ' ತುಳು ನಾಟಕದಲ್ಲಿ ಅಭಿನಯಿಸಿದ ಧನಂಜಯ, ನಂತರ ತಮ್ಮ ಸೋದರ ಮಾವನವರ ನೆರವಿನಿಂದ ಬೆಂಗಳೂರಿಗೆ ಬಂದು, 'ಅಭಿನಯ ತರಂಗ' ತಂಡ ಸೇರಿ ಹಲವು ನಾಟಕಗಳಲ್ಲಿ ನಟಿಸಿದರು. ಮಾನಿಷಾದ, ಸಂಕ್ರಾಂತಿ, ಅವಿಶ್ವಾಸ, ಸಿಂಗಾರವ್ವ ಮತ್ತು ಅರಮನೆ, ಅಭಿಜ್ಞಾನ ಶಾಕುಂತಲ, ಟೆಂಗರ ಬುಡ್ಡಣ್ಣ, ಹುತ್ತವ ಬಡಿದರೆ, ದಂಗೆಯ ಮುಂಚಿನ ದಿನಗಳು, ಮಾರೀಚನ ಬಂಧುಗಳು, ತುಘಲಕ್, ಲಕ್ಷಾಪತಿ ರಾಜನ ಕಥೆ, ಕರಿಮಾಯಿ, ಕೆಂಪು ಕಣಗಿಲೆ ಹೀಗೆ ಅನೇಕ ಉತ್ತಮ ನಾಟಕಗಳಲಿ ಪಾತ್ರವಹಿಸುತ್ತಾ ಒಳ್ಳೆ ನಟರಾಗಿ ರೂಪುಗೊಂಡರು. ವಾಲ್ಟರ್ ಡಿ' ಸೋಜ, ಬಿ. ಜಯಶ್ರೀ, ಅಶೋಕ ಬಾದರದಿನ್ನಿ, ಕಿಟ್ಟಿಯಂಥ ಸಮರ್ಥ ನಿರ್ದೇಶಕರ ಅಡಿಯಲ್ಲಿ ಅಭಿನಯ ಕಲೆ ಕಲಿತರು.

ನಗರದ ಮತ್ತೊಂದು ಖ್ಯಾತ ಹವ್ಯಾಸಿ ತಂಡ 'ಪ್ರಯೋಗರಂಗದ' ಸಕ್ರಿಯ ರಂಗಕರ್ಮಿಯಾಗಿ ಕೆ.ವಿ. ನಾಗರಾಜಮೂರ್ತಿ, ಸುರೇಶ್ ಆನಗಳ್ಳಿ, ಕೃಷ್ಣಮೂರ್ತಿ ಕವತ್ತಾರ್, ಸುರೇಂದ್ರನಾಥ್, ಎನ್.ಎ. ಸೂರಿ ಮುಂತಾದವರ ನಿರ್ದೇಶನ ಮೌನಿ, ಮಂಟೇಸ್ವಾಮಿ ಕಥಾ ಪ್ರಸಂಗ, ಮಕರ ಚಂದ್ರ, ಒಂದು ಸೈನಿಕ ವೃತ್ತಾಂತ, ರಾಜಬೇಟೆ, ಕಬೀರ, ಮಹೀಪತ ಕ್ವಾಣನ ತಂಬ್ಗಿ ಎಂ.ಎ. ಇತ್ಯಾದಿ ನಾಟಕಗಳಲ್ಲಿ ಅಭಿನಯಿಸಿ ರಂಗಪ್ರೇಮಿಗಳ ಮೆಚ್ಚುಗೆ ಪಡೆದರು. 'ಮಂಟೇಸ್ವಾಮಿ ಕಥಾಪ್ರಸಂಗ 'ನಾಟಕವು 300ಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡಿರುವುದರ ಯಶಸ್ಸಿಗೆ ಧನಂಜಯರೂ ಕಾರಣಕರ್ತರಾಗಿದ್ದಾರೆ. ಭಾರತ ಯಾತ್ರಾ ಕೇಂದ್ರದ ವತಿಯಿಂದ ಬಸವ ಇಂಟರ್ ನ್ಯಾಷನಲ್ ಫೌಂಡೇಷನ್‌ನ ಸಹಯೋಗದೊಂದಿಗೆ ಲಂಡನ್‌ನಲ್ಲಿ 'ಸಿಂಗಿರಾಜ ಸಂಪಾದನೆ' ಎಂಬ ಕಾವ್ಯ ನಾಟಕದಲ್ಲಿ ಅಭಿನಯಿಸಿರುವುದು ಗಮನಾರ್ಹ ಸಂಗತಿ.

ಪ್ರಸ್ತುತ ಬಿಇಎಮ್‌ಎಲ್‌ನಲ್ಲಿ ಉದ್ಯೋಗಿಯಾಗಿ ಸೇವೆ ಸಲ್ಲಿಸುತ್ತಿರುವ ಧನಂಜಯ ಅಲ್ಲಿನ ಲಲಿತಕಲಾ ಸಂಘದ ವತಿಯಿಂದ ಪ್ರಯೋಗಗೊಳ್ಳುವ ಎಲ್ಲ ನಾಟಕಗಳಲ್ಲಿ ಪ್ರಧಾನ ಭೂಮಿಕೆ ನಿರ್ವಹಿಸುತ್ತಾ ಕಾರ್ಮಿಕ ಕಲಾವಿದರಾಗಿಯೂ ಗುರುತಿಸಲ್ಪಡುತ್ತಿದ್ದಾರೆ.

---



## ಬಿ.ಎನ್. ನಂಜುಂಡಸ್ವಾಮಿ

ಶ್ರೀಮಾನ್ ಬಿ.ಎನ್. ನಂಜುಂಡಸ್ವಾಮಿಯವರು ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ, ಬೆಳಕವಾಡಿ ಎಂಬ ಗ್ರಾಮದ ಶ್ರೀ ನಂಜಯ್ಯನವರ ಪುತ್ರರಾಗಿ 1930ರಲ್ಲಿ ಜನ್ಮ ಪಡೆದರು. ಮಾಧ್ಯಮಿಕ ಶಾಲಾಶಿಕ್ಷಣವನ್ನು ಸ್ವಗ್ರಾಮದಲ್ಲೇ ಪಡೆದು, ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ 1946ರಲ್ಲಿ ಬೆಂಗಳೂರು ಸೇರಿದರು. 1952ರಲ್ಲಿ ಎಲೆಕ್ಟ್ರಿಕಲ್ ವಿಭಾಗದಲ್ಲಿ ಡಿಪ್ಲೊಮಾ ಪಡೆದು, ಬಿನ್ನಿಮಿಲ್ ಕಾರ್ಖಾನೆಗೆ ಉದ್ಯೋಗಕ್ಕಾಗಿ ಸೇರಿದರು. ಅಲ್ಲಿ 6 ವರ್ಷ ಕೆಲಸ ಮಾಡಿ, ನಂತರ ಬೆಂಗಳೂರು ವಿಮಾನ ಕಾರ್ಖಾನೆಗೆ ಸೇರಿ, ಕಾರ್ಖಾನೆಯ ಕೆಲಸದೊಂದಿಗೆ ಆಸಕ್ತ ಕಾರ್ಮಿಕರಿಗೆ ನಾಟಕವನ್ನು ಕಲಿಸುತ್ತಿದ್ದರು. ದಿವಂಗತ ಮುನಿಸ್ವಾಮಯ್ಯನವರ ಶಿಷ್ಯರಾಗಿ

ದಾನಶೂರಕರ್ಣ, ಮಹಾಭಾರತ, ಸುಭದ್ರಾ ಕಲ್ಯಾಣ, ಕುರುಕ್ಷೇತ್ರ ಪೌರಾಣಿಕ ನಾಟಕಗಳನ್ನು ನಿರ್ದೇಶಿಸಿದರು. 1957ರಲ್ಲಿ ಬೆಂಗಳೂರು ಸಶಸ್ತ್ರ ಪಡೆ ಪೊಲೀಸ್‌ರಿಗಾಗಿ 'ಸಂಪೂರ್ಣ ರಾಮಾಯಣ' ಪೌರಾಣಿಕ ನಾಟಕವನ್ನು ಕಲಿಸಿ, ಪ್ರದರ್ಶಿಸಿದರು. 1964ರ ನಂತರ ಬಿಟ್‌ಸ್ಪೇಷನ್ ಡ್ಯೂಟಿಗಾಗಿ ಜೋತ್‌ಪುರ, ಆಗ್ರಾ, ಅಸ್ಸಾಂ, ಗೌಹಾಟಿ ಮುಂತಾದ ಸ್ಥಳಗಳಿಗೆ ಇವರನ್ನು ವರ್ಗಾಯಿಸಲಾಯಿತು. ನಂತರ ವಿಮಾನ ಕಾರ್ಖಾನೆಗೆ ಮರಳಿ ಬಂದು 1976ರಲ್ಲಿ ಕೆಲಸಕ್ಕೆ ರಾಜೀನಾಮೆ ಕೊಟ್ಟು, ನಾಟಕ ಕಲಿಸುವುದನ್ನೇ ವೃತ್ತಿಯಾಗಿ ಸ್ವೀಕರಿಸಿದರು.

ಮುಖ್ಯವಾಗಿ ಬೆಂಗಳೂರು ಗ್ರಾಮಾಂತರ ಪ್ರದೇಶಗಳಲ್ಲಿ ನಾಟಕ ಕಲಿಸುತ್ತ ಜೀವನ ಸಾಗಿಸುತ್ತಿರುವ ಶ್ರೀಯುತ ನಂಜುಂಡಸ್ವಾಮಿಯವರು ಬದುಕಿನುದ್ದಕ್ಕೂ ರಂಗಸೇವೆ ಮಾಡಬೇಕು ಎಂಬ ಅಭಿಲಾಷೆ ಹೊಂದಿದ್ದಾರೆ.



## ವಿ.ಎಮ್. ನಾಗೇಶ್ (ಚಡ್ಡಿ ನಾಗೇಶ್)

ಧಾರವಾಡದ ವೆಂಕಟರಮಣ ಮತ್ತು ಶಾರದಾಬಾಯಿ ದಂಪತಿಗಳ ಮಗನಾದ ನಾಗೇಶ್ 1950ರಲ್ಲಿ ಜನಿಸಿದರು. ಬಿ.ಎಸ್ಸಿ. ಪದವೀಧರರಾದ ಇವರು 1968–69ರಲ್ಲಿ ಪ್ರಥಮ ಬಾರಿಗೆ ಬಯಲು ರಂಗಭೂಮಿ ಕಾರ್ಯಕ್ರಮಗಳಲ್ಲಿ ನೇಪಥ್ಯದ ಕೆಲಸ ಮಾಡುತ್ತ, ರಂಗಕ್ಕೆ ಸೇರ್ಪಡೆ ಹೊಂದಿದರು. 1972–73ರಲ್ಲಿ 'ರಂಗ ಸಂಪದ'ದಲ್ಲಿ ಕಾರ್ಯಕರ್ತರಾಗಿ ಸೇರಿ 'ಕದಡಿದ ನೀರು', 'ತ್ರಿಶಂಕು', 'ಜೈಸಿದ ನಾಯಕ', 'ಸಂಗ್ಯಾ ಬಾಳ್ಯ', 'ಸಮಗ್ರ ಮಂಥನ', 'ಮಹಪ್ರಸ್ಥಾನ' ಹೀಗೆ ಅನೇಕ ನಾಟಕಗಳಿಗೆ ವ್ಯವಸ್ಥಾಪಕ ನಿರ್ದೇಶಕರಾಗಿ, ನಟರಾಗಿ ಕಾರ್ಯನಿರ್ವಹಿಸುತ್ತಾ ರಂಗಪ್ರಿಯರಲ್ಲಿ 'ಚಡ್ಡಿ ನಾಗೇಶ್' ಎಂದೇ ಚಿರಪರಿಚಿತರಾದರು.

ಟಿ.ಎಸ್. ನಾಗಾಭರಣ, ಚಂದ್ರಶೇಖರ ಕಂಬಾರ, ಪ್ರಸನ್ನ, ಆರ್.ನಾಗೇಶ್, ಸಿ.ಜಿ.ಕೆ., ಅಶೋಕ ಬಾದರದಿನ್ನಿ, ಮ್ಯಾಜಿಕ್ ರಮೇಶ್, ವೆಂಕಟಸುಬ್ಬಯ್ಯ, ಉಮಾಶಂಕರರಂಥ ರಂಗಾನುಭವಿಗಳೊಂದಿಗೆ ಕೆಲಸ ಮಾಡಿದ ಅನುಭವ ಪಡೆದರು. ನಂತರದಲ್ಲಿ ಚೋಮನದುಡಿ, ಉತ್ತಮ ಪ್ರಭುತ್ವ ಲೊಳಲೊಟ್ಟೆ, ಒಡಲಾಳ, ಯಯಾತಿ, ಹರಕೆಯ ಕುರಿ, ಮಹಾಚೈತ್ರ, ಅಲ್ಲೇ ಇದ್ದೋರು, ಸುಲ್ತಾನ್ ಟಿಪ್ಪು, ಚಿದಂಬರ ರಹಸ್ಯ, ಒಥೆಲೊ, ಯಾತ್ರೆ, ಸಮಗ್ರ ಮಂಥನ, ಸನ್ನಿವೇಶ, ಕತ್ತಲೆ ಬೆಳಕು, ಕದಡಿದ ನೀರು ನಾಟಕಗಳಿಗೆ ಬೆಳಕು, ಸಂಗೀತ, ರಂಗ ವಿನ್ಯಾಸ, ನೀಡಿದರು. 1984ರಲ್ಲಿ 'ರಂಗ ಸಂಪದ' ತಂಡದಿಂದ 'ಜನ ಜಾಗೃತಿಗಾಗಿ ನಾಟಕ' ಜಾಥಾವನ್ನು ಗುಲ್ಬರ್ಗಾ, ರಾಯಚೂರು, ಬೀದರ್, ಬಳ್ಳಾರಿ, ಧಾರವಾಡಗಳಲ್ಲಿ ಏರ್ಪಡಿಸಿ, ಸಾಮಾನ್ಯ ಜನರಿಗೆ ಚುನಾವಣಾ ಮಹತ್ವವನ್ನು ಈ ಮೂಲಕ ಸಾರಿದ್ದಾರೆ.

ರಂಗ ಹಿಂದೆಯೇ ಸದಾ ಚಟುವಟಿಕೆಯಿಂದ ಉತ್ಸಾಹವಾಗಿ ದುಡಿಯುವ ನಾಗೇಶ್ ಸಾರ್ಕ್ ಉತ್ಸವಕ್ಕೆ, ರಷ್ಯನ್ ಉತ್ಸವಕ್ಕೆ, ಲಂಡನ್ನಿನ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ 'ಮ್ಯಾಕಬೆತ್' ನಾಟಕಕ್ಕೆ ರಂಗ ಸಜ್ಜಿಕೆ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸಿದ್ದಾರೆ.



## ಎನ್. ನರಸಿಂಹಯ್ಯ (ಗಡವ)

1935ರಲ್ಲಿ ಬೆಂಗಳೂರಿನ ಕಸ್ತೂರಿ ಬಾ ನಗರದ ಶ್ರೀ ನಂಜಪ್ಪ ಮತ್ತು ಶ್ರೀಮತಿ ಅಕ್ಕಮ್ಮ ದಂಪತಿಗಳಿಗೆ ಮಗನಾಗಿ ಜನಿಸಿದ ನರಸಿಂಹಯ್ಯ ತಮ್ಮ ಜೀವನದ 68 ವಸಂತಗಳನ್ನು ಸವೆಸಿದ್ದಾರೆ. ಸುಮಾರು 50 ವರ್ಷಗಳನ್ನು ಕಲಾದೇವಿಯ ಸೇವೆ ಮಾಡುತ್ತ ಕಳೆದಿದ್ದಾರೆ. ನಟನೆ, ಹಾಡುಗಾರಿಕೆಯಲ್ಲಿ ಉತ್ತಮ ಪರಿಶ್ರಮವುಳ್ಳವರಾಗಿ, ಈ ಎರಡೂ ವಿಭಾಗಗಳಲ್ಲಿ ಅವಿಶ್ರಾಂತವಾಗಿ ದುಡಿಯುತ್ತಾ ಬಂದಿದ್ದಾರೆ. ಕೇವಲ ಎಂಟು ವರ್ಷದ

ಬಾಲಕನಿದ್ದಾಗಲೇ 'ಸತ್ಯಹರಿಶ್ಚಂದ್ರ' ನಾಟಕದ ಮೂಲಕ ರಂಗಭೂಮಿಗೆ ಪಾದಾರ್ಪಣೆ ಮಾಡಿದ ನರಸಿಂಹಯ್ಯ, ತಮ್ಮ ಪಾತ್ರಾಭಿನಯಕ್ಕೆ ಜನಮೆಚ್ಚುಗೆ ಪಡೆದರು. ಕಲಾಪ್ರೇಮಿಗಳ ಪ್ರೋತ್ಸಾಹ ನಾಟಕದಲ್ಲಿ ನಟಿಸುವುದನ್ನು ಮುಂದುವರೆಸಲು ಕಾರಣವಾಯಿತು. ಬೆಂಗಳೂರಿನ 'ಶ್ರೀ ಮುನೇಶ್ವರಸ್ವಾಮಿ ಕಪಾ ಪೋಷಿತ ನಾಟಕ ಮಂಡಳಿ', ಆರ್. ಗುರುರಾಜುಲು ನಾಯ್ಡುರವರ 'ಅರುಣ್ ಕುಮಾರ್ ಮಿತ್ರ ಮಂಡಳಿ' ಮೊದಲಾದ ಪ್ರಮುಖ ಕಂಪನಿಗಳ ಮಹಾಭಾರತ, ಕೀಚಕವಧೆ, ವಿರಾಟಪರ್ವ, ದಾನಶೂರಕರ್ಣ, ಭಕ್ತ ಕನಕದಾಸ, ಶ್ರೀಕೃಷ್ಣ ವಿಜಯ, ಕಲಿ ಕಂಠೀರವ, ವಿಪ್ಲವ, ಎಚ್ಚಮ ನಾಯಕ, ಟಿಪ್ಪು ಸುಲ್ತಾನ್, ಕೃಷ್ಣ ಸಂಧಾನ ಇನ್ನೂ ಹಲವಾರು ನಾಟಕಗಳಲ್ಲಿ ಪ್ರಧಾನ ಭೂಮಿಕೆಯಲ್ಲಿ ಅಭಿನಯಿಸಿ ಜನಮನ ರಂಜಿಸಿದ್ದಾರೆ. ಅದರಲ್ಲೂ ದೈತ್ಯ ಪಾತ್ರಗಳಾದ ಭೀಮ, ಕೀಚಕ, ದುರ್ಯೋಧನ, ದುಶ್ಯಾಸನ, ಪಾತ್ರಗಳಿಗೆ ಜೀವ ತುಂಬಿ ಅಭಿನಯಿಸುವಲ್ಲಿ ನರಸಿಂಹಯ್ಯ ನಿಷ್ಣಾತರು.

ಕಲಿತದ್ದು–5ನೇ ತರಗತಿಯವರೆಗಾದರೂ ನರಸಿಂಹಯ್ಯ ಬೆಂಗಳೂರಿನ ಆಮ್ಕೋ ಬ್ಯಾಟರೀಸ್ ಲಿಮಿಟೆಡ್‌ನಲ್ಲಿ ಕಾರ್ಮಿಕನಾಗಿ 40 ವರ್ಷಗಳ ಕಾಲ ದುಡಿದಿದ್ದಾರೆ. ಈ ಅವಧಿಯಲ್ಲಿ ಕಾರ್ಮಿಕ ಕಲಾವಿದರನ್ನು ಒಗ್ಗೂಡಿಸಿ 'ಆಮ್ಕೋ ಲಲಿತ ಕಲಾಸಂಘ' ವನ್ನು ಸ್ಥಾಪಿಸಿ, ಹೊಸ, ಹೊಸ ನಾಟಕಗಳನ್ನು ಪ್ರಯೋಗಿಸಿದ್ದಾರೆ. ಕಾರ್ಖಾನೆಯ ವತಿಯಿಂದ ದೆಹಲಿ, ಕೊಲ್ಕತ್ತಾ, ಮುಂಬೈ, ಮದ್ರಾಸ್‌ಗಳಲ್ಲಿ ರಂಗಪ್ರವಾಸ ಮಾಡಿದ್ದಾರೆ.

ಸ್ವತಃ ಹಾಡುಗಾರರೂ ಆಗಿರುವ ಇವರು ಆಕಾಶವಾಣಿ, ದೂರದರ್ಶನಗಳಲ್ಲಿ ಕಾರ್ಯಕ್ರಮ ನೀಡಿದ್ದಾರೆ. ಬೆರಳೆಣಿಕೆಯ ಚಲನಚಿತ್ರಗಳಲ್ಲಿ ಪಾತ್ರವಹಿಸಿದ್ದಾರೆ. ರಂಗಕ್ಷೇತ್ರದ ಈ ಎಲ್ಲ ಸಾಧನೆಗಾಗಿ ಅನೇಕ ಪ್ರಶಸ್ತಿ, ಪುರಸ್ಕಾರಗಳನ್ನು ಪಡೆದಿದ್ದಾರೆ ಶ್ರೀಯುತ ನರಸಿಂಹಯ್ಯ.

---



## ಕೆ. ಪ್ರಕಾಶ್ ಶೆಣೈ

ಮೈಸೂರು ಹವ್ಯಾಸಿ ರಂಗಭೂಮಿಯಲ್ಲಿ ಸಾಕಷ್ಟು ಕೆಲಸ ಮಾಡಿ ಪರಿಶ್ರಮ ಹೊಂದಿರುವ ಶ್ರೀ ಪ್ರಕಾಶ್ ಶೆಣೈ ಕನ್ನಡ ರಂಗಭೂಮಿಗೆ ದಕ್ಷಿಣ ಕನ್ನಡದ ಕೊಡುಗೆ. 1954ರಲ್ಲಿ ಕೆಮ್ಮಣ್ಣು ಎಂಬ ಗ್ರಾಮದಲ್ಲಿ ಜನಿಸಿದ ಶೆಣೈರಲ್ಲಿ ಕಲಾಭಿರುಚಿ ಮೂಡಲು ತಂದೆಯೇ ಕಾರಣ. ಇವರ ತಂದೆ ವಾಸುದೇವ ಶೆಣೈ ವೃತ್ತಿಯಿಂದ ವಾಹನ ಚಾಲಕರಾಗಿದ್ದರೂ, ಕಲಾಪ್ರಿಯರು. ತಂದೆಯ, ಕೊಂಕಣಿ ಚಿತ್ರ 'ಜೀವಿತ್ ಆಮಚೆ ಆಶ' ದಲ್ಲಿ ನಟಿಸಿದ್ದು, ಅದೇ ಚಿತ್ರದಲ್ಲಿ ಬಾಲಪಾತ್ರಧಾರಿಯಾಗಿ ಪ್ರಕಾಶ್ ಮೊದಲಬಾರಿಗೆ ಪಾತ್ರವಹಿಸಿದರು. ಪ್ರೌಢಶಾಲೆಯ ಉಪಾಧ್ಯಾಯರುಗಳ ಪ್ರೋತ್ಸಾಹದಿಂದ 'ರಸಿಕರು' ನಾಟಕದಲ್ಲಿ ಪಾತ್ರವಹಿಸಿ, ಅಭಿನಯಕ್ಕೆ ಪೂರಕವಾಗಿ ಹಾಡುವುದನ್ನು, ಅಲ್ಪಸ್ವಲ್ಪ ನೃತ್ಯವನ್ನು ಕಲಿತರು. ಉದ್ಯೋಗಕ್ಕಾಗಿ ಸಿಂಡಿಕೇಟ್ ಬ್ಯಾಂಕ್ ಆಶ್ರಯಿಸಿದ ಶೆಣೈ ಅವರನ್ನು ಮೈಸೂರಿನ 'ಸಮುದಾಯ' ತಂಡಕ್ಕೆ ಸಹೋದ್ಯೋಗಿ ಗಂಗಾಧರ್ ಪರಿಚಯಿಸಿದರು. ಖ್ಯಾತ ನಿರ್ದೇಶಕರಾದ ಪ್ರಸನ್ನ ನಿರ್ದೇಶಿಸಿದ 'ತಾಯಿ' ನಾಟಕದಿಂದ ಹವ್ಯಾಸಿ ರಂಗಭೂಮಿಗೆ ನಟನಾಗಿ ಪರಿಚಿತರಾದರು.

ಮೈಸೂರು ಅಮೆಚೂರ್ಸ್ 1977ರಲ್ಲಿ ನಡೆಸಿದ ರಂಗಶಿಬಿರದಲ್ಲಿ ಭಾಗವಹಿಸಿ ಅಭಿನಯ ಕಲೆಯೊಂದಿಗೆ, ಪ್ರಸಾಧನ, ರಂಗಸಂಗೀತ, ಬೆಳಕು, ಮೂಕಾಭಿನಯ ವಿಷಯಗಳಲ್ಲಿ ತರಬೇತಿ ಪಡೆದು, ಖ್ಯಾತ ರಂಗತಜ್ಞರಾದ ಆರ್. ನಾಗೇಶ್, ವಿ. ರಾಮಮೂರ್ತಿ, ಬಿ. ಜಯಶ್ರೀ, ಅಬ್ಬೂರ್ ಜಯತೀರ್ಥ, ಶ್ರೀರಂಗ, ನಾಣಿ, ಜಿ.ವಿ. ಶಿವಾನಂದ ಮುಂತಾದ ಪ್ರತಿಭಾನ್ವಿತರ ಮಾರ್ಗದರ್ಶನ ಪಡೆದರು. ಇದರಫಲವಾಗಿ ಶ್ರೀರಂಗರ 'ರಂಗಭಾರತ' ನಾಟಕವನ್ನು ಕೇವಲ ನಾಲ್ಕೇ ದಿನಗಳಲ್ಲಿ ರಂಗಕ್ಕೆ ಅಳವಡಿಸಿ ತಮ್ಮ ಪ್ರತಿಭೆ ತೋರಿದರು. ಇವರಲ್ಲಿದ್ದ ಪ್ರತಿಭೆಯನ್ನು ಗುರುತಿಸಿ ಮೈಸೂರಿನ ಪ್ರತಿಷ್ಠಿತ ರಂಗತಂಡಗಳಾದ ಕಲಾಪ್ರಿಯ, ಚೇತನ ಕನ್ನಡ ಸಂಘ, ಜೆ.ಎಸ್.ಎಸ್.ಕಲಾ ಮಂಟಪ, ಕದಂಬ ರಂಗ ವೇದಿಕೆ, ಅಮರ ಕಲಾ ಸಂಘ, ಸಮತೆಂತೋ ತಂಡಗಳು ತಮ್ಮ ನಾಟಕಗಳಿಗೆ ಆಹ್ವಾನಿಸಿ ವಿಶೇಷ ಪಾತ್ರ ನೀಡಿದವು. ದುರ್ಗಾಸ್ತಮಾನ, ಸಾವಿನ ಹೆದ್ದಾರಿಯಲ್ಲಿ, ನಿರುತ್ತರ ಕುಮಾರ, ಬಿರುಗಾಳಿ, ಮಹಾರಾತ್ರಿ,

ನಾಗಮಂಡಲ, ಕವಿಭಿಕ್ಷೆ, ಕೈಕಾ ರಾಣಿ ನಾಟಕಗಳ ಜೊತೆಗೆ 'ಸಮತೆಂತೋ' ಪ್ರದರ್ಶಿಸಿದ ಘಾಶಿರಾಂ ಕೋತ್ವಾಲ್ ನಾಟಕದ ನಾನಾ ಫಡ್ನವೀಸ್ ನ ಪಾತ್ರ ಶೆಣೈಯವರ ಕಲಾಜೀವನಕ್ಕೆ ಹೊಸ ತಿರುವು ನೀಡಿತು. ಇವುಗಳ ನಡುವೆ 'ಸಿಂಡಿಕೇಟ್ ಬ್ಯಾಂಕ್ ಕಲಾರಂಗ'ದ ಕಾರ್ಯದರ್ಶಿಯಾಗಿ ಹಲವು ರಂಗಕಾರ್ಯಗಳಲ್ಲಿ ಪಾಲ್ಗೊಂಡಿದ್ದಾರೆ.

ಈವರೆಗೆ ಸುಮಾರು 149 ನಾಟಕಗಳಲ್ಲಿ ವಿವಿಧ ಪಾತ್ರಗಳಲ್ಲಿ ಅಭಿನಯಿಸಿರುವ ಶೆಣೈ ದೂರದರ್ಶನ, ಚಲನಚಿತ್ರಗಳಲ್ಲೂ ನಟಿಸಿದ್ದಾರೆ. ಮೈಸೂರು ಆಕಾಶವಾಣಿ ಕೇಂದ್ರದ ನಾಟಕ ವಿಭಾಗದ ಕಲಾವಿದರೂ ಆಗಿ 48 ನಾಟಕಗಳಲ್ಲಿ ಭಾಗವಹಿಸಿದ್ದಾರೆ. ಕೆಲ ನಾಟಕಗಳನ್ನು ನಿರ್ದೇಶಿಸಿರುವ ಶ್ರೀಯುತರು ಎಚ್ಚರಿಕೆ ಮನವೇ ಎಚ್ಚರಿಕೆ, ಹೊಗೆ ಹತ್ತಿದ ಜನ, ಮಹಾಯಾತ್ರೆ, ಇಲಾವೃತರಾಜನ ಕಥೆ ಮೊದಲಾದ ನಾಟಕಗಳನ್ನು ರಚಿಸಿ ಉತ್ತಮ ನಾಟಕಕಾರರು ಎಂದು ಸಾಬೀತುಗೊಳಿಸಿದ್ದಾರೆ. ಪ್ರೇಮಲತಾ ಸುಂದರೇಶ್ ಅವರ ಕಾದಂಬರಿ 'ವಿಜೇತ' ವನ್ನು ರೇಡಿಯೋ ನಾಟಕವನ್ನಾಗಿ ಅಳವಡಿಸಿರುವುದು ಇವರ ಮತ್ತೊಂದು ಸಾಧನೆ. ಸದ್ಯ ತಮ್ಮ ಉದ್ಯೋಗದಿಂದ ಸ್ವಯಂ ನಿವೃತ್ತಿ ಹೊಂದಿ, ರಂಗಚಟುವಟಿಕೆಗಳಲ್ಲಿ ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡಿದ್ದಾರೆ. ಕ್ರಿಯಾಶೀಲ, ಸ್ನೇಹಶೀಲ ಸರಳ ವ್ಯಕ್ತಿತ್ವದ ಪ್ರಕಾಶ್ ಶೆಣೈ ಹವ್ಯಾಸಿ ರಂಗಭೂಮಿಯ ಅಭಿಜಾತ ಕಲಾವಿದರು.

---



## ಪಿಚ್ಚಳ್ಳಿ ಶ್ರೀನಿವಾಸ

ಪಿಚ್ಚಳ್ಳಿ ಶ್ರೀನಿವಾಸ್ ಕಂಚಿನ ಕಂಠದ ಗಾಯಕರು. ತರೀಘರ ಹಾಡುಗಳಿರಲಿ, ಜಾನಪದ ಹಾಡುಗಳಿರಲಿ, ಹೋರಾಟದ ಹಾಡುಗಳೇ ಆಗಲಿ ಜೀವ ತುಂಬಿ ಹಾಡುವುದರ ಮೂಲಕ ವಿಶಿಷ್ಟ ಹಾಡುಗಾರರಾಗಿ ರೂಪುಗೊಂಡಿದ್ದಾರೆ. ಕೋಲಾರ ಜಿಲ್ಲೆಯ ಚಿಕ್ಕ ತಿರುಪತಿಯ ಬಡ ಕೃಷಿಕ ಮೂಲದ ಕುಟುಂಬದಲ್ಲಿ ಶ್ರೀನಿವಾಸ್ ಹುಟ್ಟಿದರು. ಹುಟ್ಟಿನಿಂದ ದಲಿತನಾದ್ದರಿಂದ, ದಲಿತರ ಮೇಲಾಗುತ್ತಿರುವ ದೌರ್ಜನ್ಯ, ಶೋಷಣೆಗಳ ವಿರುದ್ಧ ತನ್ನ ಜನಾಂಗಕ್ಕೆ ಎಚ್ಚರ ನೀಡುವ ಉದ್ದೇಶದಿಂದ ಕಾಲೇಜು ವಿದ್ಯಾಭ್ಯಾಸವನ್ನು ಅರ್ಧಕ್ಕೆ ತೊರೆದು, ಕರ್ನಾಟಕದ ಮಹತ್ವದ ಚಳವಳಿಯಾದ 'ದಲಿತ ಸಂಘರ್ಷ ಸಮಿತಿ' ಸೇರಿ, ದಲಿತ ಕಲಾಮಂಡಳಿಯ ಮೂಲಕ ತಮ್ಮ ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರಾರಂಭಿಸಿದರು. ದಲಿತರ ಎಚ್ಚರದ ದನಿಯಾಗಿ ಕರ್ನಾಟಕದ ಉದ್ದಗಲಕ್ಕೂ ಸಂಚರಿಸುತ್ತಾ ಬೀದಿನಾಟಕಗಳು, ಹೋರಾಟದ ಹಾಡುಗಳ ಮೂಲಕ ಗ್ರಾಮೀಣ ಪ್ರದೇಶದ ದಲಿತ ಸಮುದಾಯಕ್ಕೆ ಜಾಗೃತಿ ಮೂಡಿಸತೊಡಗಿದರು. 1979ರಲ್ಲಿ ಐತಿಹಾಸಿಕವಾದ 'ಸಮುದಾಯ ಜಾಥ' ದಲ್ಲಿ ಪ್ರಮುಖ ಗಾಯಕರಾಗಿ ಭಾಗವಹಿಸಿ ಕೋಮು ಸೌಹಾರ್ದ ಹಾಗೂ ಪರಿಸರ ಪ್ರಜ್ಞೆಯನ್ನು ಕುರಿತ ಹಾಡುಗಳ ಮೂಲಕ ಗಮನ ಸೆಳೆದರು.

1989ರಲ್ಲಿ ಬಿ.ವಿ. ಕಾರಂತರ ನೇತೃತ್ವದ 'ರಂಗಾಯಣ'ಕ್ಕೆ ಸೇರಿ, ರಂಗಭೂಮಿಯ ನಾನಾ ವಲಯಗಳ ತರಬೇತಿ ಪಡೆದು, ರಂಗಸಂಗೀತದಲ್ಲೂ ವಿಶೇಷ ಪರಿಣತಿ ಸಾಧಿಸಿಕೊಂಡರು. ರಂಗಾಯಣದಲ್ಲಿ ನಿರ್ಮಿತವಾದ ಬೊಮ್ಮನಹಳ್ಳಿ ಕಿಂದರಿಜೋಗಿ, ಮೂಕನ ಮಕ್ಕಳು, ಶೇಕ್ಸ್‌ಪಿಯರ್‌ಗೆ ನಮಸ್ಕಾರ, ಚೆರ‍್ರಿ ತೋಟ, ಭೂಮಿಗೀತ, ಕುಸುಮಬಾಲೆ, ರೋಡ್, ಕತ್ತಲೆ ಬೆಳಕು, ಗೋವಿನ ಹಾಡು ಇತ್ಯಾದಿ ನಾಟಕಗಳಲ್ಲಿ ಗಾಯಕರಾಗಿ ರಂಗಸಂಗೀತಕ್ಕೆ ವಿಶೇಷ ಮೆರಗು ತಂದರು. ನಾಟಕಗಳಲ್ಲಿ ಹಾಡುಗಾರರಾಗಿ ಮಾತ್ರ ಉಳಿಯದೆ ಸಂಗೀತ ನಿರ್ದೇಶಕರಾಗಿಯೂ ಕೆಲ ನಾಟಕಗಳಿಗೆ ಕಾರ್ಯನಿರ್ವಹಿಸಿದ್ದಾರೆ. ಚಕೋರಿ, ಮದರ್ ಕರೇಜ್, ಹೆಬ್ಬೆಟ್ಟು, ಸಂಕ್ರಾಂತಿ, ನನಗೂ ಕಲಿಸವ್ವ, ಸಿಂದ್ ಆಟ ಅವುಗಳಲ್ಲಿ ಕೆಲವು. ಮೂಟೆ, ಒತ್ತಪ್ಪ, ಹಳ್ಳಿಗಾಡ ಹಸುಗೂಸೆ, ಏಕಲವ್ಯನ ಹೆಬ್ಬೆರಳು, ಸ್ವಚ್ಛಗ್ರಾಮ, ಗುಟ್ಕ ತಿಂದು ಗೊಟಕ್ ಎಂದ ಇತ್ಯಾದಿ ಬೀದಿನಾಟಕಗಳಿಗೆ ಸಂಗೀತ ಒದಗಿಸಿದ್ದಾರೆ. ತಾವು ಹಾಡಿರುವುದರೊಂದಿಗೆ, ಸಂಗೀತ ನಿರ್ದೇಶಿಸಿರುವ ಹಲವು ಧ್ವನಿಸುರುಳಿಗಳನ್ನು ಹೊರತಂದಿದ್ದಾರೆ. ಸಾಕ್ಷರತೆ, ಮಹಿಳಾ ಜಾಗೃತಿ, ಆದಿವಾಸಿ ಜಾಗೃತಿ, ಹೀಗೆ ಹಲವು ಸಾಮಾಜಿಕ ಸಮಸ್ಯೆಗಳ ಬಗ್ಗೆ ಎಚ್ಚರ ನೀಡುವ ಹಲವಾರು ಕಮ್ಮಟಗಳನ್ನು, ತರಬೇತಿ

ಕಾರ್ಯಾಗಾರವನ್ನು ಆಯೋಜಿಸಿದ್ದಾರೆ. ವಿಶಿಷ್ಟ ಹಾಡುಗಾರನಾಗಿ, ನಾಟಕ, ಸಂಗೀತ, ಸಮಾಜಸೇವೆ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿರುವ ಶ್ರೀನಿವಾಸ್ ರಂಗಸಂಗೀತದಲ್ಲಿ ಮಹತ್ತರವಾದದ್ದನ್ನು ಸಾಧಿಸುವ ಹಂಬಲ ಹೊಂದಿದ್ದಾರೆ.



## ಎಸ್.ಕೆ. ಪರಮೇಶ್ವರಯ್ಯ

1952ರಲ್ಲಿ ಜನಿಸಿದ ಶ್ರೀ ಎಸ್.ಕೆ. ಪರಮೇಶ್ವರಯ್ಯನವರು ಚಿತ್ರದುರ್ಗ ಜಿಲ್ಲೆಯ ಸಾಣೇಹಳ್ಳಿಯ ನಿವಾಸಿಗಳು. ಬಿ.ಎ.ಪದವಿ ಪಡೆದಿರುವ ಇವರು ವ್ಯವಸಾಯವನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡಿದ್ದರೂ ರಂಗಭೂಮಿಯಲ್ಲಿ ಹೆಚ್ಚಿನ ಆಸಕ್ತಿ ತೋರಿದ್ದಾರೆ.

ಶ್ರೀ ಪರಮೇಶ್ವರಯ್ಯನವರು ಅಭಿಜಾತ ಕಲಾವಿದರು. ಇವರು ಶ್ರೀ ಶಿವಕುಮಾರ ಹವ್ಯಾಸಿ ಕಲಾ ಸಂಘದ ಸಕ್ರಿಯ ಸದಸ್ಯರು. ಶ್ರೀಯುತರಿಗೆ ನಾಟಕದಲ್ಲಿ ಯಾವ ಪಾತ್ರವನ್ನೇ ಕೊಡಲಿ, ಅದು ಸಣ್ಣದಿರಲಿ, ದೊಡ್ಡದಿರಲಿ, ಅದಕ್ಕೆ ಜೀವ ತುಂಬಿ, ಪಾತ್ರಕ್ಕೆ ಕಳೆಕಟ್ಟುವಂತೆ ನಟಿಸುವುದು ಇವರ ವಿಶೇಷ ಗುಣ. ಸನ್ನಡತೆ, ಸದಾಚಾರ, ವೈಚಾರಿಕತೆ, ಅವರ ಬದುಕಿನ ಅವಿಭಾಜ್ಯ ಅಂಗವಾಗಿದೆ.

ಸಾಣೇಹಳ್ಳಿ ಶ್ರೀ ಮಠದ ಕಾರ್ಯದರ್ಶಿಯಾಗಿ, ಸ್ಥಳೀಯ ಪ್ರೌಢಶಾಲೆಯ ಸಲಹಾ ಸಮಿತಿ ಸದಸ್ಯರಾಗಿ, ಶ್ರೀ ಶಿವಕುಮಾರ ಹವ್ಯಾಸಿ ಕಲಾಸಂಘದ ಕಾರ್ಯದರ್ಶಿಯಾಗಿ, ಶ್ರೀ ಶಿವಕುಮಾರ ವಿದ್ಯಾವರ್ಧಕ ಸಂಸ್ಥಾಪಕ ಕಾರ್ಯದರ್ಶಿಯಾಗಿ ಹಾಗೂ ಇತರೆ ಸಂಘ ಸಂಸ್ಥೆಗಳ ನಿರ್ದೇಶಕ ಹಾಗೂ ಸದಸ್ಯರಾಗಿದ್ದು ಕೊಂಡು ಜನಪರ ಕೆಲಸ ಕಾರ್ಯಗಳನ್ನು ನಿಸ್ಪೃಹತೆಯಿಂದ ಮಾಡುತ್ತಾ ಬಂದಿದ್ದಾರೆ.

'ಮಲಮಗಳು' ನಾಟಕವನ್ನು ನಿರ್ದೇಶಿಸುವುದರ ಜೊತೆಗೆ 'ಗೌಡರ ಗದ್ಲ', 'ಬಸ್ ಕಂಡಕ್ಟರ್', 'ಯಾರು ಇಲ್ಲೋ ಎಪ್ಪಾ ನಮಗೆ ಸಾಕ್ಷಿ', 'ಕಲ್ಯಾಣ ಜ್ಯೋತಿ', 'ಕದಡಿದ ನೀರು', 'ಸಂಗ್ಯಾ–ಬಾಳ್ಯಾ', 'ನಾಗಮಂಡಲ', 'ತಿರುಕನ ಕನಸು', 'ಧರ್ಮಪುರಿಯ ಶ್ವೇತವೃತ್ತ', 'ಬೆಪ್ಪುತಕ್ಕಡಿ ಬೋಳೆಶಂಕರ', 'ಸಾಹುಕಾರ', 'ಶರಣಸತಿ–ಲಿಂಗಪತಿ', 'ಮರಣವೇ ಮಹಾನವಮಿ', 'ಉರಿಲಿಂಗ ಪೆದ್ದಿ', 'ಅಂತರಂಗ ಬಹಿರಂಗ', 'ಸೂಳೆ ಸಂಕವ್ವೆ', 'ಕಪಟ ಕಾರಸ್ಥಾನ', ಮುಂತಾದ ನಾಟಕಗಳಲ್ಲಿ ಪಾತ್ರವಹಿಸಿ ವಿಶೇಷ ಪರಿಶ್ರಮದಿಂದ ಜನಮನ ಸೂರೆಗೊಂಡಿದ್ದಾರೆ.

ಕೃಷಿಕರಾಗಿದ್ದರೂ, ಕಲೆಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟಿದ್ದಾರೆ ಶ್ರೀಯುತ ಎಸ್.ಕೆ. ಪರಮೇಶ್ವರಯ್ಯ.



## ಪ್ರಮೀಳಾ ಬೇಂಗ್ರೆ

ಮಂಗಳೂರಿನ ಬಳಿ ಅರಬ್ಬಿ ಸಮುದ್ರದ ನಡುಗಡ್ಡೆ 'ಸ್ಯಾಂಡ್‌ಪಿಟ್ ಬೇಂಗ್ರೆ' ಪ್ರಮೀಳಾರವರ ಹುಟ್ಟೂರು. ಮೀನುಗಾರರ ಕುಟುಂಬದ ಸಂಜೀವ ಸುವರ್ಣ ಹಾಗೂ ವಿಶ್ವನಿ ಕರ್ಕೇರ ಇವರ ತಂದೆ ತಾಯಿಗಳು. ಬಿ.ಎಸ್ಸಿ. ವಿದ್ಯಾಭ್ಯಾಸದ ಅವಧಿಯಲ್ಲಿ ಕಾಲೇಜು ನಾಟಕಗಳಲ್ಲಿ ಅಭಿನಯಿಸುವುದರ ಮೂಲಕ ರಂಗಚಟುವಟಿಕೆ ಆರಂಭಿಸಿದ ಪ್ರಮೀಳಾ, ನಂತರ ಮಂಗಳೂರಿನ 'ಆಯನಾ' ರಂಗತಂಡದ ಸಕ್ರಿಯ ಸದಸ್ಯೆಯಾಗಿ ಕಾರ್ಯನಿರ್ವಹಿಸುತ್ತಿರುವಾಗಲೇ 1987–88ನೇ ನೀನಾಸಂ ತಿರುಗಾಟ ತಂಡಕ್ಕೆ ನಟಿಯಾಗಿ ವಲಸೆ ಬಂದರು.

ನಂತರ 1989ರಲ್ಲಿ 'ರಂಗಾಯಣ' ಕ್ಕೆ ಸೇರ್ಪಡೆ ಹೊಂದಿ, ನಟಿಯಾಗಿ, ವಸ್ತ್ರ ವಿನ್ಯಾಸಕಿಯಾಗಿ, ಸಂಗೀತ ಸಹಾಯಕಿಯಾಗಿ ರಂಗಾಯಣದ ಬಹುತೇಕ ನಾಟಕಗಳಲ್ಲಿ ಅಲ್ಲದೆ ಅಗ್ನಿ ಮತ್ತು ಮಳೆ, ಮ್ಯಾಕ್ ಬೆತ್, ನಾಗಮಂಡಲ, ಕಾಲನೇಮಿ, ಮಾರನಾಯಕ, ಸೂರ್ಯಶಿಕಾರಿ ನಾಟಕಗಳಲ್ಲಿ ಪಾಲ್ಗೊಳ್ಳುವುದರ ಮೂಲಕ ಬಿ.ವಿ. ಕಾರಂತ, ಕೆ.ವಿ. ಸುಬ್ಬಣ್ಣ, ಫ್ರಿಟ್ಸ್ ಬೆನವಿಟ್ಸ್, ಕನ್ಹಯ್ಯಲಾಲ್, ಪ್ರಸನ್ನ, ಬಸವಲಿಂಗಯ್ಯ, ಕ್ರಿಶ್ಚಿಯನ್ ಸ್ಟುಕಲ್, ಜಾನ್ ಮಾರ್ಟಿನ್‌ರಂಥ ರಂಗ ದಿಗ್ಗಜರಿಂದ ರಂಗಭೂಮಿಯ ನಾನಾ ವಿಭಾಗಗಳಲ್ಲಿ ಹೆಚ್ಚಿನ ಅರಿವು ಪಡೆದರು.

ನಟಿಯಾಗಿ ಹಿಪ್ಪೋಲಿಟಸ್, ಕುಸುಮಬಾಲೆ, ಮುಗ್ಧದವರು, ಅಲೆಗಳಲ್ಲಿ ರಾಜಹಂಸ, ಭೂಮಿಗೀತ, ಕತ್ತಲೆ ಬೆಳಕು, ತಡೆದಂಡ, ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್, ಗುಣಮುಖ, ಗಾಂಧಿ ವರ್ಸಸ್ ಗಾಂಧಿ, ಸಿರಿಸಂಪಿಗೆ, ಒಥೆಲೋ ನಾಟಕಗಳಲ್ಲಿ ಪಳಗಿದ ಅಭಿನೇತ್ರಿಯಾಗಿ ಪಾತ್ರಗಳಿಗೆ ಜೀವ ತುಂಬಿದ್ದಾರೆ.

ರಂಗಾಯಣದಿಂದ ಜರ್ಮನಿ, ಆಸ್ಟ್ರೀಯ, ಅಮೆರಿಕಾ ದೇಶಗಳಲ್ಲಿ ನಾಟಕ ಪ್ರದರ್ಶನ ನೀಡಿರುವ ಹಿರಿಮೆ ಪ್ರಮೀಳ ಅವರದು. ತಮ್ಮ ಪತಿ ಶ್ರೀ ಹುಲುಗಪ್ಪ ಕಟ್ಟೀಮನಿಯವರೊಂದಿಗೆ ಹಲವು ರಂಗಶಿಬಿರಗಳನ್ನು ನಡೆಸಿ, ನಟಿಯಾಗಿ, ವಸ್ತ್ರವಿನ್ಯಾಸಕಿಯಾಗಿ ಅನುಭವ ಪಡೆದಿದ್ದಾರೆ. ಇವರ ಮತ್ತೊಂದು ಸಾಧನೆಯೆಂದರೆ, ಬಳ್ಳಾರಿಯ ಕೇಂದ್ರ ಕಾರಾಗೃಹದಲ್ಲಿ ನಡೆದ ಖೈದಿಗಳ ಮನಃ ಪರಿವರ್ತನ ಶಿಬಿರದಲ್ಲಿ 'ಕಾಲನೇಮಿ' ನಾಟಕಕ್ಕೆ ವಸ್ತ್ರವಿನ್ಯಾಸ ಮಾಡಿರುವುದು.

ನಾಡಿನ ಕೆಲವೇ ಕೆಲವರಲ್ಲಿ ಉತ್ತಮ ರಂಗನಟಿ ಎಂಬ ಹೊಗಳಿಕೆಗೆ ಪಾತ್ರರಾಗಿರುವ ಪ್ರಮೀಳಾ ಬೇಂಗ್ರೆ ಸದ್ಯ ರಂಗಾಯಣದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

---



## ಡಾ. ಬಸವರಾಜ ಸಬರದ

ಕನ್ನಡ ಸಾಹಿತ್ಯದ ಎಂ.ಎ., ಪಿ.ಎಚ್.ಡಿ. ಪದವೀಧರರಾದ ಡಾ. ಬಸವರಾಜ ಸಬರದ ಪ್ರಸ್ತುತ ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಡಾ. ಸಬರದ ಕನ್ನಡ ಸಾಹಿತ್ಯಲೋಕದಲ್ಲಿ ಈಗಾಗಲೇ ಸಾಕಷ್ಟು ಹೆಸರು ಗಳಿಸಿದ್ದಾರೆ. ಕಾವ್ಯ, ನಾಟಕ, ವಿಮರ್ಶೆ, ಸಂಶೋಧನೆ, ವಿಚಾರ ಸಾಹಿತ್ಯಗಳಲ್ಲಿ ಕೃಷಿ ಮಾಡಿ ಈ ಎಲ್ಲಾ ಪ್ರಕಾರಗಳ 40ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ.

ಸಬರದ ಅವರಿಗೆ ಚಿಕ್ಕಂದಿನಿಂದಲೇ ನಾಟಕರಂಗದ ಬಗ್ಗೆ ಅಪಾರ ಒಲವು ಇದ್ದುದರಿಂದ ಇಂದುಅವರು ಪ್ರಮುಖ ನಾಟಕಕಾರರಾಗಿ ಬೆಳೆಯುವುದಕ್ಕೆ ಸಾಧ್ಯವಾಯಿತು. ಪ್ರತಿರೂಪ, ರೆಕ್ಕೆ ಮೂಡಿದಾಗ, ಬೆಳ್ಳಿ, ನರಬಲಿ, ಬೆಳ್ಳಕ್ಕಿಸಾಲು, ಮೂರು ಬೀದಿ ನಾಟಕಗಳು, ಕನ್ನಡ ನಾಟಕ ಸಾಹಿತ್ಯಕ್ಕೆ ಇವರ ಮಹತ್ವದ ಕೊಡುಗೆಗಳಾಗಿವೆ. ನಾಟಕ ಕ್ಷೇತ್ರದ ಉತ್ತಮ ವಿಮರ್ಶಕರೂ ಆಗಿರುವ ಸಬರದ ಜಡಭರತರ ನಾಟಕಗಳ ವಿಶ್ಲೇಷಣೆ, ಕುವೆಂಪು ನಾಟಕಗಳ ದಲಿತಪ್ರಜ್ಞೆ, ಕಂಬಾರರ ನಾಟಕಗಳು ಮತ್ತು ಜಾನಪದ, ಬೀದಿ ನಾಟಕಗಳ ಪರಂಪರೆ ಮತ್ತು ಪ್ರಸ್ತುತತೆ ವಿಷಯಗಳನ್ನು ಕುರಿತು ಕೃತಿ ರಚಿಸಿದ್ದಾರೆ.

ನಾಟಕಗಳಿಗೆ ಮಾತ್ರವಲ್ಲದೆ ತಮ್ಮ ಸಾಹಿತ್ಯ ಕೃತಿಗಳಿಗೂ ಮೆಚ್ಚುಗೆ ಗಳಿಸಿರುವ ಸಬರದ ನಾಟಕ, ಜಾನಪದ, ಸಾಮಾಜಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿ ಅನೇಕ ಪ್ರಶಸ್ತಿ, ಪುರಸ್ಕಾರಗಳನ್ನು ಪಡೆದಿದ್ದಾರೆ.

---



## ಆರ್. ಭರಮಲಿಂಗಪ್ಪ

1934ರಲ್ಲಿ ಜನಿಸಿದ ಭರಮಲಿಂಗಪ್ಪನವರ ತಂದೆ ಗಿಡ್ಡಪ್ಪ, ತಾಯಿ ಕಾಳಮ್ಮನವರು. ಇವರು ಕಲಿಯುತ್ತಿರುವಾಗಲೇ, ದೇಶಭಕ್ತಿ ಗೀತೆಗಳನ್ನು ರಚಿಸಲು ಪ್ರಾರಂಭಿಸಿದರು. ಸುತ್ತಮುತ್ತಲಿನ ರಂಗಭೂಮಿ ವಾತಾವರಣ ಇವರನ್ನು ನಾಟಕಗಳ ರಚನೆಗೆ ಪ್ರೇರೇಪಿಸಿತು. 1956ರಲ್ಲಿ 'ಜೀವನ ರಹಸ್ಯ' ಎಂಬ ನಾಟಕವನ್ನು ರಚಿಸಿದರು. ಶಿಕ್ಷಕರಾಗಿ ನೇಮಕವಾಗಿ, ತಾವು ಸೇವೆ ಆರಂಭಿಸಿದ ನಿಂಬಳಗೆರೆಯ 'ಕಲ್ಲೇಶ್ವರ ನಾಟ್ಯ ಸಂಘ'ದ ಮೂಲಕ ಆ ನಾಟಕವನ್ನು ಪ್ರದರ್ಶಿಸಿದರು. ನಂತರ 'ಮುಳ್ಳುಮಲ್ಲಿಗೆ', 'ಚಂದ್ರಹಾಸ', 'ಸತ್ತವಳ ಸಾಕ್ಷಿ', 'ದೇವರಿಗೆ ಕಣ್ಣಿಲ್ಲ', 'ಮನೆಮುರುಕರು', ಮುಂತಾದ ನಾಟಕಗಳನ್ನು ರಚಿಸಿದರು. ಈ ನಾಟಕಗಳು ಪ್ರಯೋಗಗೊಂಡು, ಕರ್ನಾಟಕದ ಹಲವೆಡೆ ಪ್ರದರ್ಶನ ಕಂಡವು.

ತಮ್ಮ ಶಾಲೆಯ ಮಕ್ಕಳಿಗಾಗಿ ಶಾಕುಂತಲಾ, ಸಾವಿತ್ರಿ, ಸೀತಾ ಪರಿತ್ಯಾಗ, ಜೀಮೂತವಾಹನ, ಮುಂತಾದ ಏಕಾಂತಗಳನ್ನು ರಚಿಸಿದರು. 1978ರ ಸುಮಾರಿಗೆ 'ಶ್ರೀ ಗುರುದತ್ತ ನಾಟಕ ಸಂಘ' ವನ್ನು ಸ್ಥಾಪಿಸಿದರು.

ತಮ್ಮದೇ ಆದ ಪ್ರಕಾಶನ ಸಂಸ್ಥೆಯನ್ನು ಸ್ಥಾಪಿಸಿ, ತಮ್ಮ ಹಲವು ನಾಟಕಗಳನ್ನು, ಕವನ ಸಂಕಲನಗಳು, ಪ್ರಕಟಿಸಿದರು; ಹಲವಾರು ರಂಗಗೀತೆಗಳನ್ನು ರಚಿಸಿದರು. ಉತ್ತಮ ರಂಗತಜ್ಞರೂ, ನಿರ್ದೇಶಕರೂ, ಆಗಿರುವ ಇವರು, ಶಿಕ್ಷಕ ಸೇವೆಯಿಂದ ನಿವೃತ್ತಿ ಹೊಂದಿದ ಮೇಲೆ, 1995ರಲ್ಲಿ ರಾಮನಗರ 'ಶ್ರೀ ಗುರುದತ್ತ ಶಿಕ್ಷಣ ಸಂಸ್ಥೆ' ಯನ್ನು ಸ್ಥಾಪಿಸಿದರು. ಪ್ರಸ್ತುತ ಆ ಸಂಸ್ಥೆಯ ಆಡಳಿತಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದರೆ. ತಮ್ಮ ಸಾಧನೆಗೆ ಜನಮನ್ನಣೆ ಗಳಿಸಿದ್ದಾರೆ.

---



## ಮಹಾನಂದಾ ಹುಲ್ಲೂರ

ಹುಬ್ಬಳ್ಳಿಯ ಶ್ರೀಮತಿ ಮಹಾನಂದಾ ಹುಲ್ಲೂರ ಶ್ರೀಮತಿ ಬಸಮ್ಮ ಮತ್ತು ಶ್ರೀ ಮುರಿಗೆಪ್ಪ ಮೋಟೆಬೆನ್ನೂರ ಎಂಬ ರೈತ ದಂಪತಿಗಳ ಮಗಳು. ಬ್ಯಾಡಗಿಯಲ್ಲಿ ಶಾಲಾ ಶಿಕ್ಷಣ ಪಡೆದ ಮಹಾನಂದಾ ಮುಂದೆ ಓದಲು ಹಂಬಲಿಸಿದಾಗ, ಹೆಣ್ಣುಮಕ್ಕಳಿಗೆ ಹೆಚ್ಚಿನ ವಿದ್ಯಾಭ್ಯಾಸವೇ? ಎಂಬ ವಿರೋಧಿ ಪರಿಸರದ ನಡುವೆಯೇ ಎಂ.ಎ. ಪದವಿ ಪಡೆದು ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿ ಕನ್ನಡ ಉಪನ್ಯಾಸಕಿಯಾಗಿ ವೃತ್ತಿ ಜೀವನ ಆರಂಭಿಸಿ, 33 ವರ್ಷಗಳ ಸೇವೆಯ ನಂತರ ಈಗ ನಿವೃತ್ತಿ ಜೀವನ ನಡೆಸುತ್ತಿದ್ದಾರೆ. ಬಾಲ್ಯದಿಂದಲೂ ಅಭಿನಯದಲ್ಲಿ ಆಸಕ್ತಿ ಇದ್ದು ಬ್ಯಾಡಗಿಯಲ್ಲಿ ಗೆಳೆಯರ ಕೂಟ, ಅಕ್ಕನ ಬಳಗ ಹಾಗೂ ಶಾಲೆಯ ನಾಟಕಗಳಲ್ಲಿ ಭಾಗವಹಿಸುತ್ತಿದ್ದರು. ಕಾಲೇಜಿನಲ್ಲಿ ವಾರ್ಷಿಕೋತ್ಸವ, ಯುವಜನೋತ್ಸವ ನಾಟಕಗಳಲ್ಲೂ ಮುಖ್ಯ ಭೂಮಿಕೆ ವಹಿಸುತ್ತಿದ್ದರು. 1961ರಲ್ಲಿ 'ವಾಗ್ದಾನ' ನಾಟಕದ ಅಭಿನಯ ಖ್ಯಾತಿಯಿಂದಾಗಿ ಆಕಾಶವಾಣಿಯಲ್ಲಿ ನಾಟಕಾಭಿನಯಕ್ಕೆ ಕರೆ ಬಂದಿತು. ಆಕಾಶವಾಣಿ ಕಲಾವಿದೆಯಾಗಿ ಆಯ್ಕೆಗೊಂಡು ಇದುವರೆಗೆ ಸುಮಾರು 80 ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಹವ್ಯಾಸಿ ನಾಟಕ ಕಲಾವಿದೆಯಾಗಿ ಗುಲ್ಬರ್ಗಾದ 'ರಂಗಮಾಧ್ಯಮ' ತಂಡದಿಂದ 'ಬಾಕಿ ಇತಿಹಾಸ', 'ಕದಡಿದ ನೀರು', 'ಆನಿ ಬಂತಾನಿ', 'ಹಕ್ಕಿ ಹಾರುತಿದೆ ನೋಡಿದರಾ' ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಬಾಗಲಕೋಟೆಯ 'ಸೃಜನ ವೇದಿಕೆ' ತಂಡಕ್ಕೆ 'ಕದಡಿದ ನೀರು' ನಾಟಕವನ್ನು ನಿರ್ದೇಶಿಸಿದ್ದಾರೆ.

ಪ್ರಖ್ಯಾತ ರಂಗ ನಿರ್ದೇಶಕರಾದ ಬಿ.ವಿ. ಕಾರಂತ, ಜಯತೀರ್ಥ ಜೋಶಿ, ಅಶೋಕ ಬಾದರದಿನ್ನಿ, ಚಿತ್ತರಂಜನ್ ಚಟರ್ಜಿ, ಗಿರಡ್ಡಿ ಗೋವಿಂದರಾಜ್, ಚಂದ್ರಕಾಂತ ಕುಸನೂರ, ಗಂಗಾಧರಯ್ಯ, ಟಿ.ಎಸ್. ನಾಗಾಭರಣ, ಟಿ.ಎಚ್. ರಾಘವೇಂದ್ರ, ಮೊದಲಾದವರಿಂದ ರಂಗಾಭಿನಯ ಪಾಠ ಕಲಿತು ಹುಬ್ಬಳ್ಳಿಯ ಪ್ರಗತಿ ಕಲಾವೃಂದ, ಅಭಿನಯ

ಭಾರತಿ, ರಂಗರಂಜನಿ, ರಂಗ ಮಿತ್ರರು, ಹವ್ಯಾಸಿ ತಂಡಗಳಿಂದ 'ಹೀಗೊಂದುರಾಗ', 'ಒಬ್ಬ ರಾಜ', 'ಮೃತ್ಯುದಾನ', 'ದುರ್ಗಾಮಗ', 'ತಾಮ್ರಪತ್ರ', 'ಮತ್ತೊಬ್ಬ ದ್ರೋಣ', 'ಕನಸಿನೊಂದಿಗೆ', 'ನಂದ ಭೂಪತಿ', 'ನಾ ಬೆಳೆದ ಬಾಳೆಯ ಸುಳಿಯಾಗ', 'ಇತಿಹಾಸ ಚಕ್ರ', 'ನನ್ನ ಹೆಂಡತಿ', 'ಬಂಗಾರ ಬುಡ್ಡಣ್ಣ', 'ನಾಲ್ವತ್ತೇಳರ ಸ್ವಾತಂತ್ರ್ಯ', 'ಬೇಲಿ ಮತ್ತು ಹೊಲ', ಮೊದಲಾದ ನಾಟಕಗಳಲ್ಲಿ ಅಭಿನಯಿಸಿ ಹುಬ್ಬಳ್ಳಿ, ಧಾರವಾಡ, ಬಾಗಲಕೋಟೆ, ಇಳಕಲ್, ಬಿಜಾಪುರ, ಹರಿಹರ, ಹಾವೇರಿ ನವಲಗುಂದ ಮೊದಲಾದೆಡೆ ರಂಗಯಾತ್ರೆಯಲ್ಲಿ ನಟಿಯಾಗಿ ಪಾಲ್ಗೊಂಡಿದ್ದಾರೆ. ಇವರ 'ತಾಮ್ರಪತ್ರ' ನಾಟಕ ಇಪ್ಪತ್ತೈದು ಪ್ರದರ್ಶನ ಕಂಡಿದೆ. 'ನಂದಭೂಪತಿ' ನಾಟಕವು ಹೈದರಾಬಾದ್ ದೂರದರ್ಶನದಲ್ಲಿ ಪ್ರಸಾರಗೊಂಡಿದೆ.

ಇಷ್ಟೆಲ್ಲಾ ಸಾಧನೆ ಮಾಡಿರುವ ಶ್ರೀಮತಿ ಮಹಾನಂದಾ ಹುಲ್ಲೂರ ತಮಗೆ ಪ್ರೋತ್ಸಾಹ, ನೀಡಿದ ಪತಿ ಶ್ರೀ ನಿಂಗೇಶ ಹುಲ್ಲೂರರನ್ನು ಕೃತಜ್ಞತೆಯಿಂದ ನೆನೆಯುತ್ತಾರೆ.

---



## ಪ್ರೊ. ಮೋಹನ್‌ರಾಜ್

ಶ್ರೀ ವಿ. ಶಿವರಾಮು, ಶ್ರೀಮತಿ ಸತ್ಯಭಾಮಾ ದಂಪತಿಗಳ ಮಗನಾಗಿ 1956ರಲ್ಲಿ ಜನಿಸಿದ ಮೋಹನ್ ರಾಜ್ ವೃತ್ತಿಯಿಂದ ಮಂಡ್ಯದ ಪಿ.ಇ.ಎಸ್. ಕಾಲೇಜಿನಲ್ಲಿ ಆಂಗ್ಲ ಭಾಷೆಯ ಪ್ರವಾಚಕರು.

ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಹೆಚ್ಚಿನ ಆಸಕ್ತಿ ಉಳ್ಳ ಇವರು ಮೈಸೂರು ವಿಶ್ವವಿದ್ಯಾನಿಲಯದಿಂದ ಸ್ನಾತಕೋತ್ತರ ಪದವಿಯೊಂದಿಗೆ ಪತ್ರಿಕೋದ್ಯಮದಲ್ಲೂ ಡಿಪ್ಲೊಮ ಪದವಿ ಪಡೆದಿದ್ದಾರೆ. 1978–1980 ರವರೆಗೆ ಮಾನಸ ಗಂಗೋತ್ರಿ ಪಠ್ಯೇತರ ಚಟುವಟಿಕೆ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ.

1980 ರಿಂದ ಹವ್ಯಾಸಿ ರಂಗಭೂಮಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ನಟರಾಗಿ, ಸಂಘಟಕರಾಗಿ ಸೇವೆ ಸಲ್ಲಿಸುತ್ತ ಬಂದಿದ್ದಾರೆ. 1995–1996ರಲ್ಲಿ 'ಗೆಳೆಯರ ಬಳಗ' ಸಂಘಟನೆಯ ಕಾರ್ಯದರ್ಶಿಯಾಗಿ ಆಯ್ಕೆಗೊಂಡು ಉತ್ತಮ ಸೇವೆ ಸಲ್ಲಿಸಿದ್ದಾರೆ. ನಟರಾಗಿ 50 ಕ್ಕೂ ಹೆಚ್ಚು ಹೊಸ ಅಲೆಯ ನಾಟಕಗಳಲ್ಲಿ ಹೆಸರಾಂತ ನಾಟಕ ನಿರ್ದೇಶಕರಾದ ಅಶೋಕ ಬಾದರದಿನ್ನಿ, ಸಿಜಿಕೆ, ಅತುಲ್ ತಿವಾರಿ, ಬಿ.ವಿ. ಕಾರಂತ, ಬಸವಲಿಂಗಯ್ಯ ನಿರ್ದೇಶನದಡಿಯಲ್ಲಿ ಅಭಿನಯಿಸಿದ ಅನುಭವ ಪಡೆದಿದ್ದಾರೆ. ಮೃಚ್ಛಕಟಿಕದ ಶಕಾರ, ಕುರಿದೊಡ್ಡಿ, ಕುರುಕ್ಷೇತ್ರದ ಛೇರ್ಮನ್ ಚಲುವೇಗೌಡನಾಗಿ, ಜೂಲಿಯಸ್ ಸೀಸರ್‌ನ ಆಂಟನಿಯಾಗಿ, ಸೇವಂತಿಯ ಜವರಣ್ಣನಾಗಿ ಹೀಗೆ ಹಲವು ನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳನ್ನು ನಿರ್ವಹಿಸಿದ್ದಾರೆ. ಚಲನಚಿತ್ರಗಳಲ್ಲೂ ಪಾತ್ರವಹಿಸಿದ್ದಾರೆ.

ರಂಗವಿನ್ಯಾಸದಲ್ಲಿ ತೀವ್ರ ಆಸಕ್ತಿಯುಳ್ಳ ಮೋಹನ್‌ರಾಜ್ ಹಲವಾರು ರಂಗತರಬೇತಿ ಶಿಬಿರಗಳಲ್ಲಿ ಭಾಗವಹಿಸಿದ್ದು ಅದರ ಪೂರ್ಣ ಪ್ರಯೋಜನವನ್ನು ಮಂಡ್ಯದ ಹವ್ಯಾಸಿ ಕಲಾವಿದರಿಗೆ ದೊರಕಿಸಿಕೊಡುತ್ತ ಬಂದಿದ್ದಾರೆ.

ಕಳೆದ ಎರಡು ಸಾಲಿನಿಂದ ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕರ ಕ್ಷೇತ್ರದಿಂದ ಸೆನೆಟ್ ಸದಸ್ಯನಾಗಿ ಆಯ್ಕೆಯಾಗಿ ಸೇವೆ ಸಲ್ಲಿಸಿದ್ದಾರೆ. ರಾಜ್ಯ ಹಾಗೂ ರಾಷ್ಟ್ರ ಮಟ್ಟದ ವಿಚಾರ ಸಂಕಿರಣಗಳಲ್ಲಿ ಪ್ರಬಂಧ ಮಂಡನೆ ಮಾಡಿದ್ದಾರೆ. ಯೂರೋಪಿನ ಆಧುನಿಕ ನಾಟಕಕಾರರಾದ ಟಿ.ಎಸ್. ಎಲಿಯಟ್, ಬ್ರೆಕ್ಟ್, ಚೆಕೋವ್ ಜೋಸೆ ಕಾನಾರ್ಡ್ ಸಿಂಜ್ ಇವರುಗಳ ಬಗ್ಗೆ ವಿಶೇಷ ಅಧ್ಯಯನ ನಡೆಸಿ ಪ್ರಬಂಧ ಮಂಡಿಸಿದ್ದಾರೆ.

21 ವರ್ಷಗಳ ಅಧ್ಯಾಪಕ ಸೇವೆಯಲ್ಲಿ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಗೆ ನಿರಂತರ ಶ್ರಮಿಸುತ್ತಿರುವ ಮೋಹನ್‌ರಾಜ್ ಸಾಮಾಜಿಕ ಕ್ಷೇತ್ರದಲ್ಲೂ ಉತ್ತಮ ಕಾರ್ಯ ಮಾಡುವ ಹಂಬಲ ಹೊಂದಿದ್ದಾರೆ.

---



## ಯಶವಂತ್. ಎಂ

ಚಿಕ್ಕಮಗಳೂರಿನ ಹವ್ಯಾಸಿ ರಂಗಕರ್ಮಿ ಯಶವಂತ್ 54ರ ವಯೋಮಾನದವರು. ಮೆಕ್ಯಾನಿಕಲ್ ಡಿಪ್ಲೊಮ ಪದವಿ ಪಡೆದಿರುವ ಇವರು ಸುಮಾರು 25 ವರ್ಷಗಳಿಗೂ ಹೆಚ್ಚು ಕಾಲ ರಂಗಭೂಮಿಯಲ್ಲಿ ನಾಟಕ ರಚನೆ, ನಿರ್ದೇಶನ, ನಟನೆ, ಬೆಳಕು ಸಂಯೋಜನೆ, ವ್ಯವಸ್ಥಾಪನೆಯಲ್ಲಿ ಶ್ರೀಮಂತ ಅನುಭವಗಳನ್ನು ತಮ್ಮದಾಗಿಸಿ ಕೊಂಡಿದ್ದಾರೆ.

'ರಂಗಶ್ರೀ' ನಾಟಕ ತಂಡದ ಸಕ್ರಿಯ ಸದಸ್ಯರಾಗಿರುವ ಶ್ರೀಯುತರು ಹತ್ತು ನಾಟಕಗಳನ್ನು ರಚಿಸಿ ಸ್ವತಃ ಅವುಗಳ ನಿರ್ದೇಶನ ಮಾಡಿದ್ದಾರೆ. ಅವುಗಳಲ್ಲಿ 'ಸಂಬಂಧಗಳು' 'ಯಾರ ತಪ್ಪು? ಯಾರಿಗೆ ಶಿಕ್ಷೆ?' 'ಪೂಜನೀಯ ವಾಸವಿ', 'ನಂದು', 'ಗೊಂದಲ', 'ವರದಕ್ಷಿಣೆ', 'ಮಲೆನಾಡ ನಾಲ್ಕು ತಲೆಮಾರ ಮಹಿಳೆಯರು' ನಾಟಕಗಳು ಮುಖ್ಯವಾದುವು. 'ರಂಗಶ್ರೀ' ತಂಡಕ್ಕಾಗಿ ಲಂಕೇಶರ 'ಸಿದ್ಧತೆ' ಶ್ರೀರಂಗರ 'ಉತ್ತಮ ಪ್ರಭುತ್ವ ಲೊಳಲೊಟ್ಟೆ', 'ವಿಠಲ ಬಂದ ವಿಠಲ', 'ಒಂದು ಲೋಕದ ಕಥೆ', 'ಸಂಬಂಧಗಳು' ನಾಟಕಗಳನ್ನು ನಿರ್ದೇಶಿಸಿದ್ದಾರೆ. ನಟನಾಗಿ ಶ್ರೀಮತಿ ಸುಮತಿ ನಿರ್ದೇಶಿಸಿದ 'ಸಾಹೇಬರು ಬರುತ್ತಾರೆ' ಯಲ್ಲಿ ಸಾಹೇಬನಾಗಿ, ಶ್ರೀಮತಿ ಬಿ.ಜಯಶ್ರೀ ನಿರ್ದೇಶಿಸಿದ 'ಸಂಜೆಯಲ್ಲಿ ನಿಂತ ಕಬೀರ' ದಲ್ಲಿ ಫಕೀರನಾಗಿ, ದಿ: ಸತ್ಯಸಂಧ ನಿರ್ದೇಶಿಸಿದ 'ಸಿಝರ್' ನಾಟಕದಲ್ಲಿ ಸಿಸಿರೋ ಪಾತ್ರಗಳಲ್ಲಿ ಗಮನಾರ್ಹ ನಟನೆ ನೀಡಿದ್ದಾರೆ.

ಬಾದಲ್ ಸರ್‌ಕಾರ್‌ರವರ ರಂಗತರಬೇತಿ ಶಿಬಿರವೂ ಸೇರಿದಂತೆ, ಹಲವು ಶಿಬಿರಗಳಲ್ಲಿ ಶಿಬಿರಾರ್ಥಿಯಾಗಿ, ಮೂರು ಶಿಬಿರಗಳ ವ್ಯವಸ್ಥಾಪಕರಾಗಿ ದುಡಿದಿದ್ದಾರೆ ಯಶವಂತ್. 'ರಂಗವೇಷ' ರಂಗಭೂಮಿ ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯರು, ವಿಮರ್ಶಕರೂ ಆಗಿರುವ ಇವರು ಸ್ಥಳೀಯ ಕಲಾಮಂದಿರದ ಸ್ಥಾಪನೆಗೆ ಅದರ ಕುಂದುಕೊರತೆಗಳ ಬಗ್ಗೆ, ಆಗಬೇಕಾದ ಸುವ್ಯವಸ್ಥೆಗಳ ಬಗ್ಗೆ ಸಂಬಂಧಿಸಿದ ವ್ಯಕ್ತಿಗಳನ್ನು ಭೇಟಿ ಮಾಡಿ ಮನವಿಗಳನ್ನು ಸಲ್ಲಿಸಿ, ಆ ಬಗ್ಗೆ ಸ್ಥಳೀಯ ಪತ್ರಿಕೆಗಳಲ್ಲಿ ಹಲವಾರು ಆಗ್ರಹ ಪೂರ್ವಕ ಲೇಖನಗಳನ್ನು ಬರೆದು ತಮ್ಮ ರಂಗಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ. ಯುವಜನರಲ್ಲಿ ರಂಗಕಲೆಯ ಬಗ್ಗೆ ಆಸಕ್ತಿ ಹುಟ್ಟಿಸಿ ಜಿಲ್ಲೆಯಲ್ಲಿ ರಂಗ ಚಟುವಟಿಕೆಗಳನ್ನು ಜೀವಂತವಾಗಿಡುವ ಸಲುವಾಗಿ ಶಾಲಾಕಾಲೇಜು ಮಟ್ಟದ ನಾಟಕೋತ್ಸವ, ನಾಟಕ ಸ್ಪರ್ಧೆಗಳನ್ನು ಯಶಸ್ವಿಯಾಗಿ ನಡೆಸುತ್ತಾ ಬಂದಿದ್ದಾರೆ.

ಪ್ರಸ್ತುತ ಚಿಕ್ಕಮಗಳೂರಿನಲ್ಲಿ ವಿದ್ಯುತ್ ಗುತ್ತಿಗೆದಾರರೂ, ಕಾಫಿ ಬೆಳೆಗಾರರೂ ಆಗಿ ಜೊತೆಗೆ ರಂಗ ಕೈಂಕರ್ಯದಲ್ಲೂ ತೊಡಗಿದ್ದಾರೆ ಶ್ರೀಯುತ ಯಶವಂತ್.



## ಅ.ನ. ರಮೇಶ್

ರಂಗ ಒಡನಾಡಿಗಳಲ್ಲಿ ಅ.ನ.ರಮೇಶ್ ಎಂದೇ ಪರಿಚಿತರಾಗಿರುವ ಅಂಕತಟ್ಟಹಳ್ಳಿ ನಂಜುಂಡಪ್ಪ ರಮೇಶ್ ಸೆಪ್ಟೆಂಬರ್ 14, 1957ನೇ ಇಸವಿಯಲ್ಲಿ ಕೋಲಾರದ ಅಂಕತಟ್ಟ ಹಳ್ಳಿಯಲ್ಲಿ ಜನಿಸಿದರು. ವೃತ್ತಿಯಿಂದ ಮೈಕೋ ಕಾರ್ಖಾನೆಯ ಆರ್ ಮತ್ತು ಡಿ ವಿಭಾಗದಲ್ಲಿ ಇಂಜಿನಿಯರ್ ಆಗಿ ಸೇವೆ ಸಲ್ಲಿಸುತ್ತಿರುವ ರಮೇಶ್, ಆರ್. ನಾಗೇಶ್‌ರ 'ಸೂತ್ರಧಾರ' ತಂಡದ ಮೂಲಕ ಕಲಾರಂಗಕ್ಕೆ ಪರಿಚಿತರಾದರು. ನಾಟಕಗಳಲ್ಲಿ ನಟಿಸುವದಕ್ಕಿಂತ ರಂಗ ನೇಪಥ್ಯ ಕರ್ಮಕ್ಕೆ ಆದ್ಯತೆ ನೀಡಿರುವ ರಮೇಶ್ ರಂಗಸಜ್ಜಿಕೆ, ಬೆಳಕು ವಿನ್ಯಾಸ, ಧ್ವನಿವಿನ್ಯಾಸಗಳೊಂದಿಗೆ ನಾಟಕ ನಿರ್ದೇಶನದಲ್ಲೂ ಅಭಿರುಚಿ ಉಳ್ಳವರು.

ರಂಗಕ್ಕೆ ಪರಿಚಿತರಾದ ದಿನಗಳಲ್ಲಿ 'ಸೂತ್ರಧಾರ' ತಂಡ ಪ್ರಯೋಗಿಸಿದ ಈಡಿಪಸ್, ಆಸ್ಫೋಟ, ಚೋಮ, ಕೆಫನ್, ನೀಗಿಕೊಂಡ ಸಂಸ ನಾಟಕಗಳಲ್ಲಿ ಅಭಿನಯಿಸಿದರು. ಮುಂದಿನ ಎಲ್ಲಾ ಸಾಧನೆಗಳು ರಂಗ ನೇಪಥ್ಯ ಕರ್ಮಿಯಾಗಿಯೇ ಸಾಧಿಸಿದವುಗಳಾಗಿವೆ. ಸೂತ್ರಧಾರ, ಜನ ನಾಟ್ಯ ಮಂಡಳಿ, ರಂಗ ನಿರಂತರ, ರಂಗ ಸಂಪದ, ನಟರಂಗ, ಬೆನಕ ಪ್ರತಿಮಾ ನಾಟಕ, ಗ್ಲೋಬ್ ಥಿಯೇಟರ್ಸ್, ಪ್ರಯೋಗರಂಗ ಮುಂತಾದ ಹವ್ಯಾಸಿ ರಂಗ ತಂಡಗಳಿಂದ ಪ್ರಯೋಗಗೊಂಡ ಜೂಲಿಯಸ್ ಸೀಸರ್, ಈಡಿಪಸ್, ಮಹಾಚೈತ್ರ, ಒಥೆಲೋ, ಕಾಲಜ್ಞಾನಿ ಕನಕ, ಅಂಬೇಡ್ಕರ್, ಅಲಾಮನ ಅದ್ಭುತ ನ್ಯಾಯ, ಚಕೋರಿ, ಅಗ್ನಿಪಥ, ಜೋಕುಮಾರಸ್ವಾಮಿ, ಕದಡಿದನೀರು, ತಬರನಕಥೆ, ವೈಶಂಪಾಯನ ತೀರ ಮೊದಲಾದ ನಾಟಕಗಳಿಗೆ ಬೆಳಕು, ಧ್ವನಿ ವಿನ್ಯಾಸಕಾರರಾಗಿ ಸೇವೆ ಸಲ್ಲಿಸಿ, ನಾಟಕಗಳ ಉತ್ತಮ ಪ್ರದರ್ಶನಕ್ಕೆ ಕಾರಣಕರ್ತರಲ್ಲಿ ಒಬ್ಬರಾಗಿದ್ದಾರೆ. ಕಳ್ಳಿಯಲ್ಲಿ ಕೆಂಪು ಹೂ, ಜನಗಳ ರಾಜ್ಯದಲ್ಲಿ, ಥ್ಯಾಂಕ್ಯೂ ಮಿ: ಗ್ಲಾಡ್, ವಿಗಡ ವಿಕ್ರಮರಾಯ, ಕದಡಿದ ನೀರು, ನನ್ನ ತಂಗಿಗೊಂದು ಗಂಡು ಕೊಡಿ ನಾಟಕಗಳಿಗೆ ರಂಗಸಜ್ಜಿಕೆ ನಿರ್ಮಾಣದೊಂದಿಗೆ, ನಿರ್ದೇಶನವನ್ನೂ ಮಾಡಿದ್ದಾರೆ.

ಮೈಕೋ ಲಲಿತ ಕಲಾ ಸಂಘದ ರಂಗಚಟುವಟಿಕೆಗಳಲ್ಲಿ ನಿರಂತರ ಭಾಗಿಯಾಗಿ, ಸಂಘದ ರಂಗಚಟುವಟಿಕೆಗಳಲ್ಲಿ ನಿರಂತರ ಭಾಗಿಯಾಗಿ, ಸಂಘದ ಸಹ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಸೂತ್ರಧಾರ ತಂಡದಿಂದ ಪ್ರಕಾಶವಾಗುತ್ತಿರುವ 'ಸೂತ್ರಧಾರ ವಾರ್ತಾಪತ್ರ' ರಂಗ ಪತ್ರಿಕೆಯ ಕಾರ್ಯಕಾರಿ ಸಂಪಾದಕರಾಗಿಯೂ ಕಾರ್ಯನಿರ್ವಹಿಸುತ್ತಿದ್ದಾರೆ.

ನಾಟಕಗಳ ಜೊತೆಗೆ ಹಲವಾರು ಸಂಘ ಸಂಸ್ಥೆಗಳ ಪ್ರತಿಷ್ಠಿತ ಸಾಂಸ್ಕೃತಿಕ ಕಾರ್ಯಕ್ರಮಗಳಿಗೂ ರಂಗಸಜ್ಜಿಕೆ ಮಾಡಿರುವ ರಮೇಶ್ ಹವ್ಯಾಸಿ ರಂಗಭೂಮಿ ಕಂಡ ಅತಿ ಚುರುಕಿನ ರಂಗಕರ್ಮಿಗಳಲ್ಲಿ ಒಬ್ಬರು.

---



## ಎಚ್.ಸಿ. ರಾಮಚಂದ್ರ (ಹುಳಿಮಾವು)

ಹಾಸ್ಯ ಪಾತ್ರಗಳಿಗೆ ಜೀವ ತುಂಬಿ ಅಭಿನಯಿಸುವ ಶ್ರೀ ಎಚ್.ಸಿ. ರಾಮಚಂದ್ರ 51ರ ಪ್ರಾಯದವರು. ಬೆಂಗಳೂರು ಸಮೀಪದ ಹುಳಿಮಾವು ಹುಟ್ಟೂರು. ತಂದೆ ಸಾಮಾನ್ಯ ರೈತ. ಊರಿನ ಹಿರಿಯರು ಆಡುತ್ತಿದ್ದ ನಾಟಕಗಳನ್ನು ನೋಡುವ ಗೀಳು, ಮುಂದೆ ತಾನು ನಾಟಕಗಳಲ್ಲಿ ನಟಿಸಬೇಕೆಂಬ ಹಂಬಲಕ್ಕೆ ದಾರಿಮಾಡಿತು. ತಂದೆ ತಾಯಿಯರ ಇಚ್ಛೆಗೆ ವಿರುದ್ಧವಾಗಿ ಶಾಲಾ ದಿನಗಳಲ್ಲೇ 'ಸಂಪೂರ್ಣ ರಾಮಾಯಣ' ನಾಟಕದಲ್ಲಿ ಪ್ರಾರ್ಥನೆ ಹಾಡುವ ಬಾಲ ಪಾತ್ರದಿಂದ ರಂಗ ಪ್ರವೇಶವಾಯಿತು.

ಕ್ರಮೇಣ ರಂಗದ ನಂಟು ಇನ್ನೂ ಹತ್ತಿರವಾಗಿ ಹತ್ತು ಹಲವು ನಾಟಕಗಳಲ್ಲಿ ಪಾತ್ರವಹಿಸಲು ಕಾರಣವಾಯಿತು. ಉದ್ಯೋಗಕ್ಕಾಗಿ ಎನ್.ಜಿ.ಇ.ಎಫ್. ಕಾರ್ಖಾನೆ ಸೇರಿ, ಕಾರ್ಖಾನೆಯ ಲಲಿತ ಕಲಾ ಸಂಘದ ಸದಸ್ಯರಾಗಿ ತಮ್ಮ ಕಲಾ ಸೇವೆಯ ಕ್ಷೇತ್ರವನ್ನು ವಿಸ್ತರಿಸಿಕೊಂಡು, ಸಂಘದ ವತಿಯಿಂದ ಅನೇಕ ನಾಟಕ ಸ್ಪರ್ಧೆಗಳಲ್ಲಿ ಭಾಗವಹಿಸಿದರು. 'ಸದಾರಮೆ', 'ತ್ಯಾಗಿ', 'ಭೀಷ್ಮ', 'ಪ್ರತಿಜ್ಞೆ', 'ಸಂಸಾರ ನೌಕೆ', 'ಬೇಡರ ಕಣ್ಣಪ್ಪ', 'ಪಂಚಭೂತ', 'ದೇವದಾಸಿ', 'ಪ್ರಚಂಡ ರಾವಣ', 'ಕೌರವೇಶ್ವರ', 'ಭಕ್ತ ಪ್ರಹ್ಲಾದ', 'ದಾನಶೂರಕರ್ಣ', 'ಕದಡಿದ ನೀರು', 'ತೋಳಗಳ ನಡುವೆ', 'ಕಾಡು', ಭೂ ಕೈಲಾಸ', 'ರಾಜಾವಿಕ್ರಮ', 'ಶ್ರೀ ಕೃಷ್ಣ ಗಾರುಡಿ', 'ಯಾಜ್ಞಸೇನಿ', 'ಕತ್ತಲೆ–ಬೆಳಕು', 'ಹೀಗೊಂದು ಊರಿಗೊಬ್ಬ ರಾಜ, ಕುರಿದೊಡ್ಡಿ ಕುರುಕ್ಷೇತ್ರ' ಹೀಗೆ ಹಲವಾರು ನಾಟಕಗಳಲ್ಲಿ ಅಭಿನಯಿಸಿದರು. ತಮ್ಮದೇ ಆದ 'ಶ್ರೀ ಕಲಾರಂಗ' ತಂಡವನ್ನು ಹುಟ್ಟು ಹಾಕಿ ನೂರಕ್ಕೂ ಹೆಚ್ಚು ನಾಟಕಗಳನ್ನು ಪ್ರಯೋಗಿಸಿದ ಕೀರ್ತಿ ಇವರದು.

ನಾಟಕ ಕ್ಷೇತ್ರವಲ್ಲದೆ, ಕಿರುತೆರೆ, ಚಲನಚಿತ್ರಗಳಲ್ಲಿ ಅಭಿನಯಿಸುತ್ತಿದ್ದರೂ 'ನಾಟಕ ನನ್ನ ಉಸಿರು, ನನ್ನ ಹವ್ಯಾಸ, ನನ್ನ ಜೀವನ' ಎಂದು ರಂಗಸೇವೆ ಮಾಡುತ್ತಾ ಮುಂದುವರೆದಿದ್ದಾರೆ ಶ್ರೀಯುತ ಎಚ್.ಸಿ. ರಾಮಚಂದ್ರ.

---



## ಎಸ್.ಆರ್. ರಾಧಮ್ಮ

ರಾಯಚೂರು ಜಿಲ್ಲೆಯ ಮಾನ್ವಿಯ ನಿವಾಸಿಗಳಾದ ರಾಘವೇಂದ್ರರಾವ್ ಕುಲ್ಕರ್ಣಿ, ಶೇಷಮ್ಮನವರ ಪುತ್ರಿಯಾಗಿ ರಾಧಮ್ಮ ಜನಿಸಿದರು. ಬಾಲ್ಯದಿನಗಳಲ್ಲೇ ನಾಟಕಗಳಲ್ಲಿ ಅಭಿನಯಿಸಿದ ಅನುಭವ ಇವರದು. ಅತಿ ಚಿಕ್ಕವಯಸ್ಸಿನಲ್ಲಿಯೇ ವೃತ್ತಿರಂಗಭೂಮಿಗೆ ಪಾದಾರ್ಪಣೆ ಮಾಡಿ, ಕೆ.ಬಿ.ಆರ್. ಡ್ರಾಮಾ ಕಂಪನಿಯಲ್ಲಿ ಆಶ್ರಯ ಪಡೆದರು. 'ಸುಮಂಗಲಿ' ನಾಟಕದ ಮೂಲಕ ವೃತ್ತಿ ಬದುಕು ಆರಂಭವಾಯಿತು. ಸಂಪೂರ್ಣ ರಾಮಾಯಣ, ಹೇಮರೆಡ್ಡಿ ಮಲ್ಲಮ್ಮ ಶಾಕುಂತಲ, ಗುಣಸಾಗರಿ, ಬ್ರಹ್ಮಚಾರಿಯ ಮಗ, ಹಳ್ಳಿ ಹುಡುಗಿ, ವಿಶ್ವದಾಖಲೆ ಸ್ಥಾಪಿಸಿದ ಪೋಲಿಸನ ಮಗಳು, ದೇವದಾಸಿ, ಹೆಣ್ಣಿಗೆ ಹಟ ಗಂಡಿಗೆ ಚಟ ನಾಟಕಗಳಲ್ಲಿ ಅಭಿನಯಿಸಿ ಮೆಚ್ಚುಗೆ ಗಳಿಸಿದ್ದಾರೆ.

ಇವರ ಅಭಿನಯವನ್ನು ಮೆಚ್ಚಿ ದೆಹಲಿ ಕನ್ನಡ ಸಂಘ ಆಗಿನ ಕೇಂದ್ರ ಸಚಿವ ಅಜಿತ್ ಕುಮಾರ್ ಪಾಂಜಾ ಅವರಿಂದ ಸನ್ಮಾನಿಸಿದೆ. ಹಾಗೂ 1970ರಲ್ಲಿ ಚಿಂದೋಡಿ ವೀರಪ್ಪನವರು ರಚಿಸಿದ 'ಬ್ರಹ್ಮಚಾರಿಯ ಮಗ' ನಾಟಕದಲ್ಲಿ ಇವರ ಪಾತ್ರವನ್ನು ಮೆಚ್ಚಿ ಡಾ. ಪಂಡಿತ ಪೂಜ್ಯ ಪುಟ್ಟರಾಜ ಗವಾಯಿಗಳು 'ಸಹಜ ಅಭಿನಯ ಚತುರೆ' ಎಂಬ ಬಿರುದನ್ನಿತ್ತು ಆಶೀರ್ವದಿಸಿದ್ದಾರೆ. ಇವರ ನಾಟಕ ಸೇವೆಯನ್ನು ಮನಗಂಡ ಕರ್ನಾಟಕ ಸರ್ಕಾರ 1991 ರಿಂದ 1995 ರವರೆಗೆ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿ ನೇಮಿಸಿತ್ತು. 1982ರಲ್ಲಿ ಬೆಳಗಾವಿ ನಾಗರೀಕರು 'ಶ್ರೇಷ್ಠ ರಂಗನಟಿ' ಪ್ರಶಸ್ತಿಯನ್ನು ಆಗಿನ ರಾಜ್ಯಪಾಲರಾದ ಅಶೋಕನಾಥ ಬ್ಯಾನರ್ಜಿರವರಿಂದ ನೀಡಿದ್ದರು. ಇವರು ಚಿಂದೋಡಿ ಲೀಲಾ ನೇತೃತ್ವದಲ್ಲಿ ಕೈಗೊಂಡ ಕಾಸರಗೋಡಿನಿಂದ ಕಾಶಿಯವರೆಗಿನ ರಂಗಯಾತ್ರೆಯಲ್ಲಿ ಪ್ರಮುಖ ನಟಿಯಾಗಿ ಭಾಗವಹಿಸಿದ್ದರು. ಈಗಲೂ ಕೆ.ಬಿ.ಆರ್. ಡ್ರಾಮಾ ಕಂಪನಿಯಲ್ಲಿ ಪ್ರಮುಖ ನಟಿಯಾಗಿ ಮುಂದುವರೆದು ರಂಗಭೂಮಿಯ ಸೇವೆ ಮಾಡುತ್ತಿದ್ದಾರೆ ಶ್ರೀಮತಿ ರಾಧಮ್ಮ.

---



## ಸೂತ್ರಧಾರ ರಾಮಯ್ಯ

'ಸೂತ್ರಧಾರ ರಾಮಯ್ಯ' ಎಂದೇ ಪ್ರಸಿದ್ಧರಾಗಿರುವ ಡಿ. ರಾಮಯ್ಯನವರು ವಿಮಾ ಇಲಾಖೆಯಲ್ಲಿ ಉದ್ಯೋಗಿಯಾಗಿದ್ದು, 29 ವರ್ಷ ಸರ್ಕಾರಿ ಸೇವೆ ಸಲ್ಲಿಸಿ ಈಗ ನಿವೃತ್ತಿ ಹೊಂದಿದ್ದಾರೆ. 16ರ ಅಕ್ಟೋಬರ್ 1947ರಲ್ಲಿ ಕನಕಪುರ ತಾಲ್ಲೂಕಿನ ದೊಡ್ಡ ಆಲಹಳ್ಳಿಯಲ್ಲಿ ರಾಮಯ್ಯ ಜನಿಸಿದರು. ಶಾಲಾ ದಿನಗಳಿಂದಲೇ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದ ಶ್ರೀಯುತರು 1967ರಲ್ಲಿ ಎಂ.ಇ.ಎಸ್. ಕಾಲೇಜಿನ 'ಸಂಧ್ಯಾಕಾಲ' ನಾಟಕದ ಮೂಲಕ ಹವ್ಯಾಸಿ ರಂಗಭೂಮಿಗೆ ಪರಿಚಿತರಾದರು. ತಾವು ಹುಟ್ಟಿ ಬೆಳೆದೂರಿನಲ್ಲಿನ ಬಂಧು ಬಾಂಧವರು ನಾಟಕ ಮಾಡಿಕೊಂಡು ತಿರುಗುತ್ತಾನೆಂದು ಅಣಕ ಮಾಡಿದರೂ ಲೆಕ್ಕಿಸದೆ, ರಂಗದ ಹವ್ಯಾಸ ಮುಂದುವರೆಸಿದರು. ಮುಂದೆ ಉದ್ಯೋಗಕ್ಕಾಗಿ ವಿಮಾ ಇಲಾಖೆಗೆ ಸೇರಿ ಸಚಿವಾಲಯ ಕ್ಲಬ್‌ನ ಮೂಲಕ ರವೀಂದ್ರ ಕಲಾಕ್ಷೇತ್ರದ ಮೆಟ್ಟಿಲಿಗೆ ವರ್ಗವಾದರು. 'ಸೂತ್ರದಾರ' ತಂಡದ ಸಂಸ್ಥಾಪಕ ಸದಸ್ಯರಾಗಿ ತಂಡದ ನಾಟಕಗಳಲ್ಲಿ ಪ್ರಮುಖ ಭೂಮಿಕೆಯಲ್ಲಿ ಅಭಿನಯಿಸಿದರು.

ಹಿರಿಯ ರಂಗಕರ್ಮಿ ಆರ್. ನಾಗೇಶ್‌ರಿಂದ ಗುರುತಿಸಲ್ಪಟ್ಟು 'ಈಡಿಪಸ್', 'ಚೋಮ', 'ಆಸ್ಫೋಟ', 'ಕಫನ್', 'ಕಾಮಗಾರಿ', 'ದೊಡ್ಡಪ್ಪ', 'ರಣಹದ್ದು', 'ಕತ್ತಲೆ ಬೆಳಕು', 'ಹುತ್ತದಲ್ಲಿ ಹುತ್ತ', 'ಜೈಸಿದ ನಾಯಕ', 'ತೆರೆಗಳು', 'ಸೀತಾಪಹರಣ' ಮುಂತಾದ ನಾಟಕಗಳಲ್ಲಿ ಅವಕಾಶ ಪಡೆದರು. ಹಾಗೆಯೇ 'ಸೂತ್ರಧಾರ', ವಾರಪತ್ರಿಕೆಯ ಸಂಪಾದಕರಾಗಿ 1986 ರಿಂದ 1993ರ ಅವಧಿಯ ಪ್ರಮುಖ ರಂಗ ಚಟುವಟಿಕೆಗಳನ್ನು, ಹವ್ಯಾಸಿ ರಂಗ ಭೂಮಿಯ ಏಳು ಬೀಳುಗಳನ್ನು ದಾಖಲಿಸುತ್ತ ಮಕ್ಕಳ ರಂಗಭೂಮಿ, ಹವ್ಯಾಸಿ ರಂಗಭೂಮಿಯಲ್ಲಿ ಮಹಿಳೆಯರ ಪಾತ್ರ,

ಕನ್ನಡದಲ್ಲಿ ಹಾಸ್ಯ ನಾಟಕಗಳು, ನೇಪಥ್ಯ ಸಂಚಿಕೆ, ರಂಗ ಶಿಕ್ಷಣ, ಹೀಗೆ ಹಲವಾರು ವಿಶೇಷ ಸಂಚಿಕೆಗಳನ್ನು ಹೊರತಂದಿದ್ದಾರೆ. ಕಲಾಕ್ಷೇತ್ರದ ಮೆಟ್ಟಲು ಮಹಿಮೆ ಇವರ ಇನ್ನೊಂದು ಉತ್ತಮ ಕೃತಿ.

ಆಕಾಶವಾಣಿ, ದೂರದರ್ಶನ ನಾಟಕಗಳಲ್ಲೂ ಅಭಿನಯಿಸಿರುವ ರಾಮಯ್ಯ, ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ 1980 ರಿಂದ ಸುಮಾರು 300 ನಾಟಕ ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ. ದೆಹಲಿ, ಮುಂಬೈ, ಹೈದ್ರಾಬಾದ್‌ಗಳಿಗೂ ರಂಗ ಪ್ರವಾಸ ಮಾಡಿದ್ದಾರೆ. 1997ರಲ್ಲಿ ಸರ್ಕಾರಿ ನೌಕರರನ್ನೊಳಗೊಂಡ 'ಹೊಸಬರು' ರಂಗ ತಂಡದ ಸಂಸ್ಥಾಪಕ ಅಧ್ಯಕ್ಷರಾಗಿ, ಈ ತಂಡದಿಂದ ಹಲವು ನಾಟಕಗಳು ಪ್ರಯೋಗಗೊಳ್ಳಲು ಕಾರಣರಾಗಿರುವ ರಾಮಯ್ಯ, ನಿವೃತ್ತಿಯ ನಂತರ ಈಗ ವಕೀಲರಾಗಿ ಮುಂದುವರೆದು ಈ ರಂಗದಲ್ಲೂ ಇರುವ ಪ್ರತಿಭೆಗಳ ಆವಿಷ್ಕಾರವಾಗಿ 'ನ್ಯಾಯಾಂಗ ರಂಗ' ತಂಡದ ಸ್ಥಾಪನೆಗೆ ಸಿದ್ಧತೆ ನಡೆಸುತ್ತಾ ರಂಗಸೇವೆಯಲ್ಲಿ ನಿರತರಾಗಿದ್ದಾರೆ.

---



## ಲೂಸಿ ಪಿರೇರಾ

ಸುಮಾರು 23 ವರ್ಷಗಳಿಂದ ಮಂಗಳೂರಿನ ಹವ್ಯಾಸಿ ರಂಗಭೂಮಿಯಲ್ಲಿ ನಟಿಯಾಗಿ, ಸಂಘಟಕಿಯಾಗಿ ಈಗಲೂ ಕಾರ್ಯಪ್ರವೃತ್ತರಾಗಿರುವ ಶ್ರೀಮತಿ ಲೂಸಿ ಪಿರೇರಾ ವೃತ್ತಿಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕಿ. ಸುಮಾರು 1979 ರಿಂದಲೇ ಬೀದಿ ನಾಟಕಗಳಲ್ಲಿ ಪಾಲ್ಗೊಂಡ ಈಕೆ, ನಂತರ ಮಂಗಳೂರಿನ ಖ್ಯಾತ ರಂಗ ಸಂಸ್ಥೆಯಾದ 'ಅಭಿವ್ಯಕ್ತಿ'ದ ಹುಟ್ಟಿಗೆ ಕಾರಣಕರ್ತರಲ್ಲಿ ಒಬ್ಬರಾದರು.

ಬಕ, ಮಾರೀಚನ ಬಂಧಗಳು, ಕುರುಡು ಕುಬೇರ, ಬೇಲಿ ಮತ್ತು ಹೊಲ, ರಥಮುಸಲ, ಗೋವಿಂದಣ್ಣ ಬಂದ ಮೇಲೆ, ಉಳ್ಳವರ ನೆರಳು, ಕೋಮಲ ಗಾಂಧಾರ, ಕಲ್ಕಿ, ನಮ್ಮಂಗಪ್ಪ, ಅಧ್ವಾನಪುರ, ಮಾಲಿ, ಕೊಂಬಿನವರು, ಸಾಕ್ಷಾತ್ಕಾರ, ಕೊಡಿಮರ, ಪೆದಂಬು, ಗ್ರಾಮ ಚಾವಡಿ ಸೇರಿದಂತೆ 30ಕ್ಕೂ ಹೆಚ್ಚು ನಾಟಕಗಳಲ್ಲಿ ಪ್ರಧಾನ ಸ್ತ್ರೀ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ವಿಡಿಯೋ ಕಥಾಚಿತ್ರ ಹಾಗೂ ದೂರದರ್ಶನದ ಕಿರುಚಿತ್ರ ಹಾಗೂ ಧಾರಾವಾಹಿಗಳಲ್ಲಿಯೂ ಮುಖ್ಯ ಪಾತ್ರಗಳ ನಿರ್ವಹಣೆ ಮಾಡಿದ್ದಾರೆ. ಸ್ಥಳೀಯ ಆಕಾಶವಾಣಿಯ ಕಲಾವಿದೆಯಾಗಿ ಹಲವಾರು ನಾಟಕಗಳಲ್ಲಿ ಪಾತ್ರವಹಿಸಿದ್ದಾರೆ.

ಹವ್ಯಾಸಿ ರಂಗಭೂಮಿ ನಟಿಯರ ಕೊರತೆಯನ್ನು ಅನುಭವಿಸುತ್ತಿರುವಾಗ ಅಭಿನಯ ಮಾತ್ರವಲ್ಲದೆ ರಂಗದ ನೇಪಥ್ಯದಲ್ಲಿಯೂ ಪೂರ್ಣವಾಗಿ ತೊಡಗಿಸಿಕೊಂಡ ಶ್ರೀಮತಿ ಲೂಸಿ ಪಿರೇರಾ ಇಂದಿಗೂ ರಂಗಪ್ರದರ್ಶನದ ಪೂರ್ವ ಸಿದ್ಧತೆಗಾಗಿ ಕೆಲಸ ಮಾಡುವ ರೀತಿ ಅನನ್ಯವಾದುದು. ರಂಗಸಾಮಾಗ್ರಿಗಳ ಸಿದ್ಧತೆ, ಉಡುಪುಗಳ ಜೋಡಣೆಯಿಂದ ಹಿಡಿದು, ಪ್ರದರ್ಶನದ ನಂತರದ ಕೊನೆಯ ಕ್ಷಣದವರೆಗೆ ಎಲ್ಲ ಕೆಲಸಗಳಲ್ಲಿಯೂ ಕೈಜೋಡಿಸುತ್ತಾರೆ. ಅಭಿವ್ಯಕ್ತಿವು ಪರವೂರಿನ ತಂಡಗಳನ್ನು ಮಂಗಳೂರಿಗೆ ತರಿಸಿ, ನಾಟಕೋತ್ಸವಗಳನ್ನು ನಡೆಸಿದ ಸಂದರ್ಭಗಳಲ್ಲಿ ತಂಡಗಳಿಗೆ ಬೇಕಾದ ಎಲ್ಲ ಸೌಕರ್ಯಗಳನ್ನು ತಾವೇ ನಿಂತು ನೋಡಿಕೊಳ್ಳುತ್ತಾರೆ. ಇವರು ಸೇವೆ ಸಲ್ಲಿಸುತ್ತಿರುವ ಹಳ್ಳಿಯ 'ಶಾಲಾ' ವಿದ್ಯಾರ್ಥಿಗಳಿಗೆ ಹೊಸ ನಾಟಕಗಳನ್ನು ಪರಿಚಯಿಸಿ, ಅವರಿಂದಲೂ ಅನೇಕ ರಂಗಪ್ರದರ್ಶನಗಳನ್ನು ನಡೆಸಿದ್ದಾರೆ.

ಸಾಮಾಜಿಕ ಸೇವೆಯಲ್ಲಿಯೂ ಆಸಕ್ತಿ ಹೊಂದಿರುವ ಲೂಸಿ ಹಲವಾರು ಮಹಿಳಾ ಸಂಘಟನೆಗಳ ಜೊತೆಗೆ ಕಾರ್ಯನಿರ್ವಹಿಸಿದ್ದಾರೆ. ತಾವೇ ಮಹಿಳಾ ಸಂಘ ಸ್ಥಾಪಿಸಿದ್ದಾರೆ. ಈ ನಿಟ್ಟಿನಲ್ಲಿ ರಾಜ್ಯ ಹಾಗೂ ರಾಷ್ಟ್ರ ಮಟ್ಟದಲ್ಲಿ ನಡೆದ ಹಲವು ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದ್ದಾರೆ. ಹವ್ಯಾಸಿ ರಂಗಕ್ಷೇತ್ರದಲ್ಲಿ ಇಂದಿಗೂ ಕ್ರಿಯಾಶೀಲರಾಗಿರುವ ಶ್ರೀಮತಿ ಲೂಸಿ ಪಿರೇರಾ ಜಿಲ್ಲೆಯ ಹವ್ಯಾಸಿ ರಂಗಭೂಮಿಗೆ ಉತ್ತಮ ಕೊಡುಗೆ ನೀಡಿದ್ದಾರೆ.

---



## ಪಿ.ಎ. ವೇಣುಗೋಪಾಲ ರೆಡ್ಡಿ

ಬಾಲ್ಯದಿಂದಲೇ ನಾಟಕದ ಗೀಳು ಹತ್ತಿಸಿಕೊಂಡ ಪಿ.ಎ. ವೇಣುಗೋಪಾಲರೆಡ್ಡಿ 1945ರ ಸುಮಾರಿನಲ್ಲಿ ದಿವಂಗತ ಕೆ. ಹನುಮಂತಯ್ಯನವರ ಸಮ್ಮುಖದಲ್ಲಿ 'ಕಲಾಜ್ಯೋತಿ' ಸಂಸ್ಥೆಯನ್ನು ಪ್ರಾರಂಭಿಸಿ, ಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳಾದರು. ಹೆಸರಾಂತ ನಾಟಕಕಾರರ ನಾಟಕಗಳಲ್ಲಿ ಪಾತ್ರವಹಿಸಿ, ಅವುಗಳು ರಂಗದಲ್ಲಿ ಯಶಸ್ವಿಯಾಗಿ, ಪ್ರದರ್ಶಿತಗೊಳ್ಳಲು ಕಾರಣರಾದರು. ಬೆಂಗಳೂರು ಆಕಾಶವಾಣಿಯವರು ನಡೆಸುತ್ತಿದ್ದ ನಾಟಕೋತ್ಸವಗಳಲ್ಲಿ ಇವರು ಅಭಿನಯಿಸಿದ ನಾಟಕಗಳು ಪ್ರದರ್ಶನಗೊಂಡವು. ದೆಹಲಿಯಲ್ಲಿ ನಡೆದ ಬೇಸಗೆಯ ನಾಟಕೋತ್ಸವದಲ್ಲಿ ಕೈಲಾಸಂರ ನಾಟಕವನ್ನು ಕನ್ನಡ ಹಾಗೂ ಹಿಂದಿಯಲ್ಲಿ ಪ್ರಯೋಗಿಸಿ, ಆಗಿನ ಪ್ರಧಾನಿ ದಿ: ನೆಹರೂ ಅವರಿಂದ ಪ್ರಶಂಸೆಗೆ ಪಾತ್ರರಾದರು. ದೆಹಲಿ ಕನ್ನಡ ಸಂಘ ಮತ್ತು ಪಾರ್ಲಿಮೆಂಟ್ ಸದಸ್ಯರ ಕ್ಲಬ್‌ಗಾಗಿ ವಿಶೇಷ ಪ್ರದರ್ಶನಗಳನ್ನು ನೀಡಿ, ಯೋಜನಾ ಸಚಿವಾಲಯದ ಪ್ರಚಾರ ನಾಟಕಗಳನ್ನು ಕರ್ನಾಟಕದ ವಿವಿಧ ಸ್ಥಳಗಳಲ್ಲಿ ಪ್ರದರ್ಶಿಸಿ ಅವುಗಳ ಸಂದೇಶಗಳು ಜನರನ್ನು ತಲುಪುವಂತೆ ಮಾಡಿದರು.

ಮುಂದೆ ರಾಜ್ಯ 'ನಾಟ್ಯ ಸಂಘ'ದ ಪ್ರಧಾನ ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ ತಮ್ಮ ಅಧಿಕಾರವಧಿಯಲ್ಲಿ ನಾಟ್ಯ ಸಂಘ ಸುವರ್ಣಯುಗ ಕಾಣುವಂತೆ ಮಾಡಿದರು. 1970 ರಿಂದ 1985 ರವರೆಗೆ ಉಲ್ಲಾಳ ಪಾರಿತೋಷಕ ಅಂತರ ಕಾಲೇಜು ನಾಟಕ ಸ್ಪರ್ಧೆ, ವಿಲಾಸೀ ಕಲಾ ಸಂಸ್ಥೆಗಳಿಗಾಗಿ ಡಾ: ರಾಜ್‌ಕುಮಾರ್ ಪಾರಿತೋಷಕ ನಾಟಕ ಸ್ಪರ್ಧೆಗಳನ್ನು ಏರ್ಪಡಿಸಿ, ಯಶಸ್ವಿಯಾಗಿ ನಿರ್ವಹಿಸಿದ ಹೆಗ್ಗಳಿಕೆ ಇವರದು. ಹೊರದೇಶಗಳಿಂದ ಬಂದ ನಾಟಕ, ನೃತ್ಯ, ಸಂಗೀತದ ತಂಡಗಳು ಪ್ರದರ್ಶನ ನೀಡಬೇಕಾದರೆ ಇವರ ಸಹಾಯ ಅತ್ಯಗತ್ಯವಾಗಿತ್ತು. ಆಗ ಪ್ರತಿ ವರ್ಷ ಬೇಸಗೆಯಲ್ಲಿ ಪ್ರೌಢಶಾಲಾ ಉಪಾಧ್ಯಾಯರಾಗಿ 30 ದಿನಗಳ ನಾಟಕ ತರಬೇತಿ ಶಿಬಿರಗಳನ್ನು ಏರ್ಪಡಿಸಿ, ಉಪನ್ಯಾಸ ನೀಡುವುದಕ್ಕಾಗಿ ಹೆಸರಾಂತ ಕಲಾವಿದರಾದ ಪು.ಲ. ದೇಶಪಾಂಡೆ, ದಿವಂಗತ ಉತ್ಪಲದತ್, ಬಾದಲ್ ಸರ್ಕಾರ್, ಅಲಕಾಜೀ, ಹಬೀಬ್ ತನ್ವೀರ್, ಡಾ: ಸುರೇಶ್ ಅವಸ್ತಿ, ದಿ: ನಾರಾಯಣಕಾಳೆ, ಸತ್ಯದೇವ್ ದುಬೆ, ವಿಜಯ ತೆಂಡೂಲ್ಕರ್, ಎಂ.ಎಸ್. ಸತ್ಯು, ಕರ್ನಲ್ ಗುಪ್ತೆ, ಮೃಣಾಳಿನಿ ಸರಾಭಾಯ್, ದಿ: ರುಕ್ಮಿಣೀ ಅರುಂಡೇಲ್, ಶ್ರೀರಂಗ, ಪರ್ವತವಾಣಿ ಮುಂತಾದವರಿಂದ ನೆರವೇರಿಸಿದರು.

1973ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಸಹಯೋಗದೊಂದಿಗೆ ನಾಟ್ಯ ಸಂಘವು ಅಖಿಲ ಭಾರತ ರಂಗಭೂಮಿ ಸಂಕಿರಣ ಹಾಗೂ ನಾಟಕೋತ್ಸವ ವಸ್ತು ಪ್ರದರ್ಶನ ಏರ್ಪಡಿಸಿತ್ತು. ಬಂಗಾಳಿ, ಗುಜರಾತಿ, ತೆಲುಗು, ಕನ್ನಡ, ಮಲೆಯಾಳಂ, ಮರಾಠಿ, ಕೊಂಕಣಿ ನಾಟಕಗಳು ಈ ಪ್ರದರ್ಶನದಲ್ಲಿ ಪಾಲ್ಗೊಂಡವು. ನಾಟಕ ಕಲೆಯ ಬಗ್ಗೆ ಸಿನಿಮಾ ಪ್ರದರ್ಶನಗಳು, ಕನ್ನಡ ಹಿರಿಯ ವೃತ್ತಿ ನಾಟಕರಂಗದ ಕಲಾವಿದರಿಂದ ರಂಗಗೀತೆಗಳನ್ನು ಏರ್ಪಡಿಸಿ, ಇಂದಿನ ತಲೆಮಾರಿಗೆ ಅವುಗಳ ಪರಿಚಯ ಮಾಡಿಸುವಲ್ಲಿ ರೆಡ್ಡಿಯವರ ಪರಿಶ್ರಮ ಸಾರ್ಥಕವಾದುದು.

ಮೊಟ್ಟ ಮೊದಲ ಬಾರಿಗೆ ರವೀಂದ್ರ ಕಲಾಕ್ಷೇತ್ರದ ಹಿಂಬದಿ ಮತ್ತು ಪಕ್ಕದ ಪಾರ್ಶ್ವದಲ್ಲಿ ನಾಟಕ ಪ್ರದರ್ಶನಗಳು ಇವರ ನೇತೃತ್ವದಲ್ಲಿ ಜರುಗಿದವು. 'ಹುತ್ತದಲ್ಲಿ ಹುತ್ತ', 'ಹೋಂರೂಲು', 'ಸೂಳೆ', 'ಟೊಳ್ಳುಗಟ್ಟಿ', 'ಗಂಡಸ್ಕತ್ರಿ', 'ನಮ್ಮ ಕಂಪ್ನಿ', 'ಏಗಡ ವಿಕ್ರಮರಾಯ', 'ಆಷಾಢಭೂತಿ' 'ನನ್ನ ಗೋಪಾಲ', 'ಬಹದ್ದೂರ್ ಗಂಡ', 'ಕಂಬ್ಳಿ ಸೇವೆ', 'ಗಗ್ಗಯ್ಯನ ಗಡಿಬಿಡಿ' ಇವು ವೇಣುಗೋಪಾಲ ರೆಡ್ಡಿಯವರು ನಿರ್ದೇಶಿಸಿ, ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿರುವ ಕೆಲವು ನಾಟಕಗಳು. ರಂಗದ ಮೇಲೆ ಅಭಿನಯಕ್ಕಿಂತ ರಂಗದ ನೇಪಥ್ಯ ಚಟುವಟಿಕೆಗಳಲ್ಲಿ ಹೆಚ್ಚು ಕ್ರಿಯಾಶೀಲರಾಗಿದ್ದ ಶ್ರೀಯುತರು ಕನ್ನಡ ರಂಗಭೂಮಿಗೆ ನೀಡಿದ ಕೊಡುಗೆ ಅಭಿನಂದನೀಯ.



## ಬಿ.ವಿ. ವೆಂಕಟಗಿರಿಯಪ್ಪ (ಬಿ.ವಿ.ವಿ.ಗಿರಿ)

ಬಿ.ವಿ.ವಿ. ಗಿರಿ ಎಂದೇ ಖ್ಯಾತನಾಮರಾಗಿರುವ ಶ್ರೀ ಬಿ.ವಿ. ವೆಂಕಟಗಿರಿಯಪ್ಪ, 1960ರಲ್ಲಿ ಜನಿಸಿದರು. ಕೋಲಾರ ಜಿಲ್ಲೆಯ ಬೀರಮಾನ ಹಳ್ಳಿಯವರಾದ ಶ್ರೀ ವೆಂಕಟಪ್ಪ ಮತ್ತು ಶ್ರೀಮತಿ ಮೇಣಸಮ್ಮ ಇವರ ತಂದೆ ತಾಯಿ. ಗಿರಿಯವರು ವೃತ್ತಿಯಿಂದ ಶಾಲಾ ಉಪಾಧ್ಯಾಯರು. ರಂಗಭೂಮಿ ಇವರ ಹವ್ಯಾಸಕ್ಷೇತ್ರ. ಕಳೆದ 33 ವರ್ಷಗಳಿಂದ ಸಾಹಿತ್ಯಕ್ಷೇತ್ರ ಹಾಗೂ ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಶಿಶುಸಾಹಿತ್ಯ, ಜಾನಪದನೃತ್ಯ, ಜಾನಪದಗೀತೆ, ಜಾನಪದ ನಾಟಕಗಳ ರಚನೆಯೊಂದಿಗೆ ನಿರ್ದೇಶನ ವಿಭಾಗದಲ್ಲೂ ಕಾರ್ಯನಿರ್ವಹಿಸಿದ್ದಾರೆ. 1983ರಲ್ಲಿ ಚಿತ್ರದುರ್ಗ ಜಿಲ್ಲೆಯ ಕೊಂಡಜ್ಜಿಯಲ್ಲಿ ರಾಜ್ಯ ನಾಟಕ ಅಕಾಡೆಮಿ ಏರ್ಪಡಿಸಿದ್ದ ನಾಟಕ ರಚನಾ ಶಿಬಿರದಲ್ಲಿ ಪಾಲ್ಗೊಂಡು ತರಬೇತಿ ಪಡೆದ ನಂತರ, 13 ನಾಟಕಗಳನ್ನು ರಚಿಸಿದ್ದಾರೆ. ಅದೇ ವರ್ಷ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯವರು ಬಿಜಾಪುರದ ಇಂಡಿಯಲ್ಲಿ ಏರ್ಪಡಿಸಿದ್ದ ಜಾನಪದ ಕಾರ್ಯಾಗಾರದಲ್ಲಿ ತಮ್ಮ ಜಿಲ್ಲೆಯನ್ನು ಪ್ರತಿನಿಧಿಸಿ, ಜಾನಪದ ಸಾಹಿತ್ಯವನ್ನು ಧ್ವನಿಮುದ್ರಿಸಿಕೊಂಡು ಅಕಾಡೆಮಿಗೆ ಅರ್ಪಿಸಿದ್ದಾರೆ. ಅಂತೆಯೇ ಕೋಲಾರ ಜಿಲ್ಲೆಯ ಹಳ್ಳಿಗಳಲ್ಲಿ ಸಂಚರಿಸಿ ಹಳ್ಳಿಯ ಜನರಲ್ಲಿ ಅಡಗಿರುವ ಕಲೆಯನ್ನು ಹೊರತರುವಲ್ಲಿ ಶ್ರಮಿಸಿದ್ದಾರೆ. 'ದರ್ಪಣ' ಎಂಬ ಹೆಸರಿನ ಜಾನಪದ ಹಾಡುಗಳ ಸಂಕಲನವನ್ನು ರಚಿಸಿದ್ದಾರೆ.

ಶ್ರೀ ಗಿರಿಯವರು ನಿರ್ದೇಶನ ಮಾಡಿದ ಮುಖ್ಯವಾದ ನಾಟಕಗಳು ಗುಣಮುಖ, ಎಚ್ಚಮ ನಾಯಕ, ದೇವದಾಸಿ, ಸದಾರಮೆ, ಭಗವಾನ್ ಭಾರ್ಗವ, ಕರಿಭಂಟನ ಕಾಳಗ, ದುಶ್ಯಾಸನ, ಗಗನ ಕುಸುಮ ನಾಟಕಗಳೊಂದಿಗೆ ಬೆಂಗಳೂರಿನ ಲೋಕ ಶಿಕ್ಷಣ ಇಲಾಖೆ ನಿರ್ದೇಶನಾಲಯ ಏರ್ಪಡಿಸಿದ್ದ ಸಾಕ್ಷರತಾ ಕಲಾ ಜಾಥಾದಲ್ಲಿ ತಂಡದ ನಾಯಕನಾಗಿ ಕೋಲಾರ, ಬೆಂಗಳೂರು ಗ್ರಾಮಾಂತರ, ಚಾಮರಾಜನಗರ, ಮೈಸೂರು, ಮಂಡ್ಯ, ತುಮಕೂರು, ದಾವಣಗೆರೆ, ಚಿತ್ರದುರ್ಗ ಜಿಲ್ಲೆಗಳಲ್ಲಿ ಸುಮಾರು ಎರಡು ಸಾವಿರ ಕಿ.ಮೀ.ಗಳ ಕಾಲ್ನಡಿಗೆಯಲ್ಲಿ ಬೀದಿ ನಾಟಕಗಳನ್ನು ಆಡಿಸಿ, ಅಕ್ಷರ ಜ್ಞಾನದ ಮಹತ್ವವನ್ನು ಸಾರಿದ್ದಾರೆ.

ಹೀಗೆ ಕಲಾಸೇವೆಯ ಮುಖಾಂತರವೇ ಸಮಾಜ ಸೇವೆಯನ್ನು ಮಾಡುತ್ತಿರುವ ಗಿರಿಯವರು, ಜನಪದ ಗೀತೆ, ಗೀಗೀ ಪದ, ಲಾವಣಿ, ವೀರಗಾಸೆ ಕುಣಿತ, ಹಳ್ಳಿಯ ಹಾಡು, ಸುಗ್ಗಿಹಾಡು, ನಾಟಕ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾ ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯಮಟ್ಟದ ಅನೇಕ ಪ್ರಶಸ್ತಿ, ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ.



## ಶಂಕರ ಶಿವಬಸಪ್ಪ ದನದಮನಿ

ನಾಟಕ, ಸಂಗೀತದ ವ್ಯಾಮೋಹಕ್ಕೆ ಈಡಾಗಿ ತಮ್ಮ ಬದುಕನ್ನೇ ನಾಟಕಕಲೆಗಾಗಿ ಅರ್ಪಿಸಿಕೊಂಡ ಅಪರೂಪದ ಕಲಾವಿದರಾಗಿದ್ದಾರೆ ಶ್ರೀ ಶಂಕರ ಶಿವಬಸಪ್ಪ ದನದಮನಿ. 1938ರಲ್ಲಿ ಹಾಲಗಿ ಮರ್ಡಿಯಲ್ಲಿ ಜನಿಸಿದ ಇವರು, ನಾಲ್ಕನೇ ವರ್ಗದವರೆಗೂ ಶಿಕ್ಷಣ ಪಡೆದಿದ್ದಾರೆ. ಸಂಗೀತ ವಿಶಾರದ ಪರೀಕ್ಷೆಯಲ್ಲಿ ಪ್ರಥಮ ಸ್ಥಾನಗಳಿಸಿದ್ದಾರೆ. ಚಿಕ್ಕಂದಿನಿಂದಲೇ ನಾಟಕಗಳಲ್ಲಿ ನಟಿಸುವ ಹಂಬಲವಿದ್ದುದರಿಂದ, ತಮ್ಮ 13ನೇ ವಯಸ್ಸಿಗೆ ನಾಟಕ ಕ್ಷೇತ್ರಕ್ಕೆ ಕಾಲಿಟ್ಟರು. ಬಾಲಕ ದನದಮನಿಯಲ್ಲಿದ್ದ ಸಂಗೀತ, ಅಭಿನಯ ಚಾತುರ್ಯವನ್ನು ಗುರ್ತಿಸಿದ ಶ್ರೀ ಎಸ್.ಆರ್. ಬಾಬುರಾವ್ ಅವರು ಇವರ ಆಸಕ್ತಿಗೆ ನೀರೆರೆದು ಪೋಷಿಸಿದರು. ಕ್ರಮೇಣ ರಂಗಕರ್ಮಿಗಳನ್ನೇ ತಮ್ಮ ವೃತ್ತಿಯಾಗಿ ಸ್ವೀಕರಿಸಿ ನಟನೆ, ನಿರ್ದೇಶನ, ಸಂಗೀತ ವಿಭಾಗದಲ್ಲಿ ನಿರಂತರವಾಗಿ ಕಾರ್ಯನಿರ್ವಹಿಸುತ್ತಾ ಬಂದಿದ್ದಾರೆ. ಆರಂಭದಲ್ಲಿ ಬಬ್ರುವಾಹನ, ಅಭಿಮನ್ಯು, ಚಿತ್ರಾಂಗದ, ಪುತ್ಥಳಿ,

ಗಂಡನ ಮನೆ, ಜೀವನನೌಕೆ ಇತ್ಯಾದಿ ನಾಟಕಗಳಲ್ಲಿ ನಟಿಸಿದ್ದರೂ, ನಾಟಕ ಕಲಿಸುವ ಗುರುವಾಗಿ ಇವರ ಸೇವೆ ಅಪಾರ. ಕುಟುಂಬವನ್ನು ಲೆಕ್ಕಿಸದೇ ಹಲವಾರು ಗ್ರಾಮಗಳಿಗೆ ಹೋಗಿ ಸ್ಥಳೀಯ ಕಲಾವಿದರನ್ನು ಬಳಸಿಕೊಂಡು ನಾಟಕ ಆಡಿಸಿರುವುದು ದನದಮನಿಯವರ ಕಲಾಭಿರುಚಿಗೆ ಹಿಡಿದ ಕೈಗನ್ನಡಿಯಾಗಿದೆ.

ಕೈಕೊಟ್ಟ ದೇವ, ಜಗಜ್ಯೋತಿ ಬಸವೇಶ್ವರ, ಕಳ್ಳ ಕಟ್ಟಿದ ತಾಳಿ, ಸೋತುಗೆದ್ದ ಸಾಧ್ವಿ, ಶಿಶುನಾಳ ಶರೀಫರ ಮಹಾತ್ಮೆ, ಚಿನ್ನದಗೊಂಬೆ, ವರದಕ್ಷಿಣೆ, ಮನೆಗೆ ತಕ್ಕ ಮಗ, ಸುಖದ ಸುಪ್ಪತ್ತಿಗೆ, ಪಟ್ಟಣಕ್ಕೆ ಬಂದ ಪತ್ನಿಯರು ಮುಂತಾದ ನಾಟಕಗಳನ್ನು ರಂಗದ ಮೇಲೆ ತರಲು ಅಪಾರ ಶ್ರಮವಹಿಸಿದ್ದಾರೆ. ಹೊರ ರಾಜ್ಯವಾದ ಗೋವಾದಲ್ಲಿಯೂ ಕನ್ನಡದ ಕಂಪನ್ನು ಸೂಸಿ 'ಅಣ್ಣ-ತಂಗಿ' ನಾಟಕವನ್ನು ಪ್ರದರ್ಶಿಸಿದ್ದಾರೆ. ಹಿರೇಬಾಗೇವಾಡಿಯ ಹರಿಜನ, ಹೆಣ್ಣು ಮಕ್ಕಳಿಗೆ ಸಂಗೀತದ ಆಸಕ್ತಿ ತುಂಬಿ ಧಾರವಾಡದ ಆಕಾಶವಾಣಿಯಲ್ಲಿ ಸೋಬಾನೆ ಪದಗಳು, ಸೇರಿದಂತೆ ಹಲವು ಸಂಗೀತ ಕಾರ್ಯಕ್ರಮಗಳು ಬಿತ್ತರಗೊಳ್ಳಲು ಕಾರಣವಾಗಿದ್ದಾರೆ. 63 ವಯಸ್ಸು ದಾಟಿದರೂ ಸದಾ ಉತ್ಸಾಹದಿಂದ ಕೈಲಾದಷ್ಟು ಕಲಾಸೇವೆ ಮಾಡುತ್ತ, ಹಾಡುತ್ತ ಜೀವನ ಸಾಗಿಸುತ್ತಿದ್ದಾರೆ ಶ್ರೀ ಶಂಕರ ಶಿವಬಸಪ್ಪ ದನದಮನಿ.



## ಶಂಕರಯ್ಯ ರಕ್ಕಸಗಿ

ಐತಿಹಾಸಿಕ ಪ್ರಸಿದ್ಧವಾದ ವಿಜಾಪುರ ಜಿಲ್ಲೆಯ ರಕ್ಕಸಗಿ ಗ್ರಾಮದವರಾದ ಶ್ರೀ ಶಂಕರಯ್ಯನವರಿಗೆ ಅಭಿನಯದ ಗೀಳು ಹಿಡಿದದ್ದೂ ಒಂದು ವಿಚಿತ್ರ, ಶಾಲೆಯಲ್ಲಿ ಅವರ ಶಿಕ್ಷಕರೊಬ್ಬರಿಗೆ ಏಕಾಂತ ನಾಟಕ ಬರೆಯುವ ಹುಚ್ಚು, ಅದರೊಂದಿಗೆ ಪ್ರಯೋಗಿಸಬೇಕೆಂಬ ಆಸೆ. ತಮ್ಮ ನಾಟಕಗಳಿಗೆ ಆಕರ್ಷಕ ಚೂಟಿ ಬಾಲಕ ಶಂಕ್ರಯ್ಯನನ್ನು ಬಳಸಿಕೊಳ್ಳತೊಡಗಿದರು. ಶಾಲೆಯಲ್ಲಿ ಮುಖಕ್ಕೆ ಹಚ್ಚಿದ ಬಣ್ಣ, ಇಂದು ಶಂಕರಯ್ಯ ಅವರನ್ನು ಕನ್ನಡ ಹೆಸರಾಂತ ಕಲಾವಿದನನ್ನಾಗಿ ರೂಪಿಸುವಲ್ಲಿ ಆರಂಭದ ಅಡಿಪಾಯವಾಯಿತು.

ಎಸ್.ಎಸ್.ಎಲ್.ಸಿ.ವರೆಗೆ ಕಲಿತಿರುವ ಶಂಕರಯ್ಯ ಆ ನಂತರ ಬಣ್ಣದ ಬದುಕನ್ನೇ ತಮ್ಮ ವೃತ್ತಿಯಾಗಿರಿಸಿಕೊಂಡರು. 1957ರಲ್ಲಿ ಅಮೀನಗಡದ 'ಶ್ರೀ ಬನಶಂಕರಿ ನಾಟಕ ಸಂಘ' ದಿಂದ ತಮ್ಮ ವೃತ್ತಿ ಜೀವನ ಆರಂಭಿಸಿದ ಶ್ರೀಯುತರು ಅಭಿನಯ ಕಲೆಯನ್ನು ಕರಗತ ಮಾಡಿಕೊಂಡು, ಶ್ರದ್ಧೆಯಿಂದ ಪಾತ್ರಗಳ ಜೀವಕೃವರಿತು, ಅಭಿನಯಿಸತೊಡಗಿ ನಾಡಿನ ರಂಗಪ್ರೇಮಿಗಳ ಗಮನ ಸೆಳೆದಿದ್ದಾರೆ. ಇದುವರೆಗೆ ಇವರ ಸೇವೆಯ ಕಂಪನಿಗಳೆಂದರೆ, ಚಿತ್ತರಗಿಯ 'ಶ್ರೀ ಕುಮಾರ ವಿಜಯ ನಾಟ್ಯ ಸಂಘ', ಕುಕನೂರಿನ 'ಶ್ರೀ ಮಹಾಕೂಟೇಶ್ವರ ನಾಟ್ಯ ಸಂಘ', ಲಕ್ಷ್ಮೇಶ್ವರದ 'ಶ್ರೀ ರವಿಕಲಾ ನಾಟ್ಯ ಸಂಘ', ಚಿತ್ರದುರ್ಗದ 'ಶ್ರೀ ಕುಮಾರೇಶ್ವರ ನಾಟ್ಯ ಸಂಘ', ಗುಡಿಗೇರಿಯ 'ಶ್ರೀ ಸಂಗಮೇಶ್ವರ ನಾಟ್ಯ ಸಂಘ', ದಾವಣಗೆರೆಯ 'ಶ್ರೀ ಕೆ.ಬಿ.ಆರ್. ಡ್ರಾಮಾ ಕಂಪನಿ', ಅಕಾಶಪೂರದ 'ಶ್ರೀ ಸಂಗಮೇಶ್ವರ ನಾಟ್ಯ ಸಂಘ' ಇವುಗಳು.

ಮೇಲಿನ ಎಲ್ಲ ಕಂಪನಿಗಳಲ್ಲಿ ಅಭಿನಯಿಸಿದ ಕೆಲವು ಪ್ರಮುಖ ನಾಟಕಗಳೆಂದರೆ 'ಹಣೆಯಕ್ಕಿ ಕೂಡಿದರೆ', 'ಹಡೆದವರು ಬೇಕಿಲ್ಲ', 'ಜೈ ಜವಾನ್ ಜೈ ಕಿಸಾನ್', 'ದೇವರಿಲ್ಲದ ಗುಡಿ', 'ಧರ್ಮ ದೇವತೆ', 'ಸಂಪತ್ತಿಗೆ ಸವಾಲು', 'ಕಿತ್ತೂರು ಚೆನ್ನಮ್ಮ', 'ಮನೆ ಎರಡು ಮನ ಒಂದು', 'ಸುಳ್ಳು ದೇವರಿಗೆ ಕಳ್ಳ ಪೂಜಾರಿ', 'ಬಸ್ ಕಂಡಕ್ಟರ್', 'ಗರೀಬಿ ಹಟಾವೋ', 'ಹೆಣ್ಣು ಮಗಳು', 'ಎಚ್ಚರ ತಂಗಿ ಎಚ್ಚರ', 'ಎಂಥ ಮೋಜಿನ ಕುದುರೆ', ಈ ಎಲ್ಲ ನಾಟಕಗಳು ನೂರಾರು ಪ್ರದರ್ಶನ ಕಂಡಿವೆ. ಶಂಕರಯ್ಯನವರು ಇವುಗಳಲ್ಲಿ ನಾಯಕ – ಖಳನಾಯಕರಾಗಿ ಪಾತ್ರವಹಿಸಿದ್ದಾರೆ.

ಕಲಾರಂಗದಲ್ಲಿ 40 ವರ್ಷ ಸೇವೆ ಸಲ್ಲಿಸಿ ಈಗ ರಂಗದಿಂದ ನಿವೃತ್ತರಾಗಿರುವ ರಕ್ಕಸಗಿ ರಂಗಶಾಲೆಯಲ್ಲಿ ತಾವು ಪಡೆದ ಅನುಭವವನ್ನು ಯುವ ಪೀಳಿಗೆಯವರಿಗೆ ಧಾರೆಯೆರೆಯುತ್ತಾ ಆದರ್ಶಪ್ರಾಯರಾಗಿದ್ದಾರೆ.



## ಶೈಲಜಾ ಎಸ್. ಕುಂದಾಪುರ

ರಂಗಭೂಮಿಯ ಆಕರ್ಷಣೆಗೆ ಸರಿಹೊಂದುವ ಮೈಕಟ್ಟು, ಮುಖದ ಚೆಲುವು, ಮಧುರ ಧ್ವನಿ, ಈ ಮೂರನ್ನು ಮೇಳೈಸಿಕೊಂಡಿರುವ ಶ್ರೀಮತಿ ಶೈಲಜಾ ಕುಂದಾಪುರ ರಂಗಭೂಮಿಗಾಗಿಯೇ ಹುಟ್ಟಿದ ಪ್ರತಿಭಾವಂತ ಅಭಿನೇತ್ರಿ. ತಾಯಿ ಸುಶೀಲಮ್ಮ ಕುಂದಾಪುರ ವೃತ್ತಿ ರಂಗಭೂಮಿಯ ಹೆಸರಾಂತ ಕಲಾವಿದೆಯಾದುದರಿಂದ, ಚಿಕ್ಕಂದಿನಲ್ಲಿಯೇ ತಾಯಿಯಿಂದ ರಂಗ ಶಿಕ್ಷಣ ಪಡೆದರು. ಶಾಲಾ ಶಿಕ್ಷಣ ಪೂರೈಸಿದ ಬಳಿಕ ರಂಗಭೂಮಿಯನ್ನೇ ಆಶ್ರಯಿಸಿಕೊಂಡ ಇವರಿಗೆ ಅತ್ತೆ ಸುಮಿತ್ರಮ್ಮ ಕುಂದಾಪುರ ಇವರಿಂದಲೂ ಪಾತ್ರಗಳ ಅಭಿನಯಕ್ಕೆ ರಂಗ ತರಬೇತಿ ಸಿಕ್ಕಿತು. ಹೀಗೆ ತಾಯಿ, ಅತ್ತೆ, ಈರ್ವರಿಂದಲೂ ರಂಗಕಲೆಯನ್ನು ಅಭ್ಯಸಿಸಿ ಶೈಲಜಾ ಕನ್ನಡ ವೃತ್ತಿ ರಂಗಭೂಮಿಯಲ್ಲಿ 'ಅಭಿಜಾತ ಕಲಾವಿದೆ' ಎನಿಸಿಕೊಂಡರು.

'ರೈತನ ಮಕ್ಕಳು', 'ವಿಧಿಯ ಕೈವಾಡ', 'ಬದುಕು ಬಂಗಾರವಾಯ್ತು', 'ದಾರಿದೀಪ', 'ತಾಳಿಯ ತಕರಾರು', 'ಚಿನ್ನದ ಬೊಂಬೆ', 'ಎಚ್ಚರ ತಂಗಿ ಎಚ್ಚರ', 'ಕೈಲಾಗದ ಗಂಡ ಕೈಲಾಸ ಕಂಡ', ಮೊದಲಾದ ನಾಟಕಗಳಲ್ಲಿ ಪ್ರಮುಖ ಪಾತ್ರಗಳಲ್ಲಿ ಮಿಂಚಿ ಮೆರೆದಿದ್ದಾರೆ. ಕರ್ನಾಟಕದ ಪ್ರಸಿದ್ಧ ವೃತ್ತಿ ನಾಟಕ ಕಂಪನಿಗಳಾದ ಗುಡಿಗೇರಿಯ ಶ್ರೀ ಸಂಗಮೇಶ್ವರ ನಾಟ್ಯ ಸಂಘ, ದಾವಣಗೆರೆಯ ಕೆ.ಬಿ.ಆರ್. ಡ್ರಾಮಾ ಕಂಪನಿ, ಲಕ್ಷ್ಮೇಶ್ವರದ ರವಿ ಕಲಾ ನಾಟ್ಯ ಸಂಘ, ಸೇರಿದಂತೆ ಹಲವು ಕಂಪನಿಯ ನಾಟಕಗಳಲ್ಲಿ ಮುಖ್ಯ ಪಾತ್ರ ಇವರಿಗೇ ಮೀಸಲು. ನಾಟಕ ಪ್ರಚಾರದ ಜಾಹೀರಾತು, ಬೋರ್ಡುಗಳಲ್ಲಿ ಶೈಲಜಾ ಕುಂದಾಪುರ ಹೆಸರನ್ನು ನೋಡಿಯೇ ಜನ ನಾಟಕಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಬರುತ್ತಿದ್ದರೆಂಬುದು ಇವರ ಅಭಿನಯಕ್ಕೆ ಸಿಕ್ಕ ಪ್ರತಿಫಲವಾಗಿದೆ.

ಕೇವಲ ವೃತ್ತಿ ರಂಗಭೂಮಿಯಲ್ಲಿ ಮಾತ್ರವಲ್ಲದೆ, ಹವ್ಯಾಸಿ ರಂಗಭೂಮಿಯಲ್ಲೂ ಶೈಲಜಾರವರ ಹೆಸರು ಸಾಕಷ್ಟು ಪ್ರಸಿದ್ಧಿಯಾಗಿದೆ. 'ಸಂಗೊಳ್ಳಿ ರಾಯಣ್ಣ' 'ದಾರಿಯಾವುದಯ್ಯಾ ಮುಂದೆ', 'ತಘಲಕ್', ಮುಂತಾದ ನಾಟಕಗಳಲ್ಲಿ ಪ್ರಧಾನ ಪಾತ್ರಗಳನ್ನೇ ನಿರ್ವಹಿಸಿದ್ದಾರೆ. ನಾಟಕ ಪೌರಾಣಿಕವಿರಲಿ, ಐತಿಹಾಸಿಕವೇ ಇರಲಿ ಅಥವಾ ಸಾಮಾಜಿಕವೇ ಆಗಿರಲಿ, ಯಾವುದಿದ್ದರೂ ತಮಗೆ ವಹಿಸಿಕೊಟ್ಟ ಪಾತ್ರಗಳ ಔಚಿತ್ಯವರಿತು ಅಭಿನಯಿಸುವುದು ಅವರ ರಂಗಪ್ರಜ್ಞೆಗೆ ಸಾಕ್ಷಿಯಾಗಿದೆ.

ಪ್ರಸ್ತುತ ಗುಡಿಗೇರಿ ನಾಟಕ ಕಂಪನಿಯಲ್ಲಿ ಕಲಾವಿದೆಯಾಗಿ ಮುಂದುವರೆಯುತ್ತಿರುವ ಶೈಲಜಾ, ರಂಗಸೇವೆಯೇ ತನ್ನ ಜೀವನವೆಂದು ನಂಬಿ ಕಲಾಸೇವೆ ಗೈಯುತ್ತಿದ್ದಾರೆ.

---



## ಡಾ. ಸಂಜೀವ ದಂಡಕೇರಿ

ದಕ್ಷಿಣ ಕನ್ನಡ ಜಿಲ್ಲೆಯ ಪ್ರತಿಭಾವಂತ ಕಲಾವಿದರಾದ ಸಂಜೀವ ದಂಡಕೇರಿಯವರು 08–06–1964ರಲ್ಲಿ ಯೆಯ್ಯಾಡಿ ಎಂಬಲ್ಲಿ ಜನಿಸಿದರು. ಸಂಜೀವ ದಂಡಕೇರಿ ವೃತ್ತಿಯಿಂದ ಆಯುರ್ವೇದ ವೈದ್ಯರು; ಪ್ರವೃತ್ತಿಯಿಂದ ನಟ, ನಾಟಕಕಾರ, ನಿರ್ದೇಶಕ ಮತ್ತು ನಿರ್ಮಾಪಕರಾಗಿ ತುಳು ರಂಗಭೂಮಿಗೆ ಗಮನಾರ್ಹ ಕೊಡುಗೆ ನೀಡಿದ್ದಾರೆ. 1962ರಲ್ಲಿ ಮಂಗಳೂರಿನಲ್ಲಿ ಸ್ಥಾಪಿಸಿದ ನಾಟಕ ಸಂಸ್ಥೆ 'ಸರಸ್ವತಿ ಕಲಾವೃಂದ' ಸಂಸ್ಥೆಯ ಸಂಚಾಲಕರಾಗಿ ಹಲವು ಕನ್ನಡ ಹಾಗೂ ತುಳು ಭಾಷೆಯ ನಾಟಕಗಳನ್ನು ಪ್ರಯೋಗಿಸಿದ್ದಾರೆ. ಸ್ವತಃ ನಾಟಕಕಾರರಾಗಿ 20 ತುಳು ನಾಟಕಗಳನ್ನು, ಎಂಟು ಕನ್ನಡ ನಾಟಕಗಳನ್ನು ರಚಿಸಿ ಜನಮೆಚ್ಚುಗೆಗೆ ಪಾತ್ರರಾಗಿದ್ದಾರೆ. 'ಮಲ್ಲಾಯಿ ಮಗೆ' (ಶ್ರೀಮಂತನ ಮಗ), 'ಮೆಗಿದಿ ಪಲಿ' (ಅಕ್ಕತಂಗಿ), 'ಬಯ್ಯ ಮಲ್ಲಿಗೆ' (ಸಂಜೆ ಮಲ್ಲಿಗೆ), 'ಒಂಜೇ ಕರ್ಲೆ' (ಒಂದೇ ಕರುಳು), 'ದುಡ್ಡುದ ಮರ್ಲೆ' (ಹಣದ ಹುಚ್ಚು),

'ಪೂ ಮುಳ್ಳು' (ಹೂವು ಮುಳ್ಳು), ಡಾ: ಸಂಜೀವರ ರಚನೆಯ ತುಳು ನಾಟಕಗಳು. ಇವರ 'ಬಂಯ್ಯಮಲ್ಲಿಗೆ' ನಾಟಕ ಕೃತಿಯು ಕನ್ನಡ ಮರಾಠಿ  ಮತ್ತು ಮಲೆಯಾಳಂ ಭಾಷೆಗಳಿಗೆ ಭಾಷಾಂತರಗೊಂಡು ಯಶಸ್ಸು ಗಳಿಸಿದೆ. ತುಳು ಭಾಷೆಯ ಈ ನಾಟಕವು ಸುಮಾರು 300 ಕ್ಕೂ ಮಿಕ್ಕಿದ ಪ್ರದರ್ಶನ ಕಂಡು ದಾಖಲೆ ನಿರ್ಮಿಸಿದೆ. ಕನ್ನಡದಲ್ಲಿ ಮಸಣದ ಮನೆ, ಅಮ್ಮ, ಸರಸ್ವತಿ, ಗಂಗಾರಾಮ, ವಿಧಿಲೀಲೆ, ಪಾಪ ಪುಣ್ಯ ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ದಂಡಕೇರಿಯವರು ತುಳು ರಂಗಭೂಮಿಯಲ್ಲಿ ಗಳಿಸಿದ ಖ್ಯಾತಿಯನ್ನು ತುಳು ಚಿತ್ರರಂಗದಲ್ಲೂ, ಗಳಿಸಿದ್ದಾರೆ. ಅವರದೇ ರಚನೆಯ, ದಾಖಲೆ ಪ್ರದರ್ಶನ ಕಂಡ 'ಬಂಯ್ಯ ಮಲ್ಲಿಗೆ' ನಾಟಕವನ್ನು ಚಿತ್ರಕಥೆಯಾಗಿಸಿ, ಸಂಭಾಷಣೆ, ಸಾಹಿತ್ಯ ರಚನೆಯ ಜೊತೆಗೆ ನಿರ್ಮಾಪಕರೂ ಆಗಿ ಪಾತ್ರವನ್ನೂ ವಹಿಸಿದ್ದಾರೆ. ಇನ್ನು ಹಲವು ಚಲನಚಿತ್ರಗಳನ್ನು ನಿರ್ಮಿಸಿದ್ದಾರೆ.

ಜನಪರ ಸೇವಾ ಕಾರ್ಯಗಳಲ್ಲೂ ಆಸಕ್ತಿ ಹೊಂದಿರುವ ಶ್ರೀಯುತರು ಹಲವಾರು ಸಂಘ, ಸಂಸ್ಥೆಗಳಿಗೆ ಧನಸಹಾಯ ನೀಡಿ ಪ್ರೋತ್ಸಾಹಿಸುತ್ತಿದ್ದಾರೆ.



## ಎಂ.ಕೆ. ಸತ್ಯನಾರಾಯಣ

ವೃತ್ತಿ ರಂಗಭೂಮಿ ಕಲಾವಿದರಾದ ಎಂ.ಕೆ. ಸತ್ಯನಾರಾಯಣ ಹುಟ್ಟಿದ್ದು 19 ಮಾರ್ಚ್ 1937ರಲ್ಲಿ ಶಿವಮೊಗ್ಗದಲ್ಲಿ. ವಿದ್ಯಾರ್ಥಿ ಜೀವನದಲ್ಲಿಯೇ ಕಲೆಯ ಬಗ್ಗೆ ಅಪಾರ ಆಸಕ್ತಿ ಬೆಳೆಸಿಕೊಂಡಿದ್ದ ಇವರು ಆ ದಿನಗಳಲ್ಲೇ ಹಲವಾರು ಏಕಾಂಕಗಳಲ್ಲಿ ಪಾತ್ರ ನಿರ್ವಹಿಸಿದರು. ಈ ಅನುಭವ ಮುಂದೆ ಕಲಾರಂಗದಲ್ಲೇ ಮುಂದುವರೆಯಬೇಕೆಂಬ ಸದಿಚ್ಛೆಗೆ ಕಾರಣವಾಗಿ ರಂಗ ಪ್ರವೇಶವಾಯಿತು.

1957ರಲ್ಲಿ ಬಳ್ಳಾರಿಯ ಶ್ರೀ ಲಲಿತ ಕಲಾ ಮಿತ್ರ ಮಂಡಳಿಯಲ್ಲಿ ಬಣ್ಣದ ಕೊಠಡಿಯ ಕೆಲಸಗಾರನಾಗಿ ಸೇರ್ಪಡೆ ಹೊಂದಿದರು. ಕಂಪನಿಯ ರಂಗಪಾರ್ಟಿ ಕೆಲಸಗಾರನಾಗಿ, ಹಿರಿಯ ಕಲಾವಿದರ ಸೇವೆ ಮಾಡುತ್ತಾ, ಹಂತ ಹಂತವಾಗಿ, ಪೋಷಕ ಪಾತ್ರ, ಖಳನಾಯಕನ ಪಾತ್ರ, ಹಾಸ್ಯ ಪಾತ್ರ, ಹೀಗೆ ಯಾವುದೇ ಪಾತ್ರವಿರಲಿ ಜೀವತುಂಬಿ ಅಭಿನಯಿಸಿದರು.

ಇವರ ಕಲಾಭಿರುಚಿಯನ್ನು ಗಮನಿಸಿದ ಶ್ರೀ ಶಾಂತಕುಮಾರ್ ರಾಯರು, ದಿವಂಗತ ಶ್ರೀ ಅಪ್ಪುರಾಜ್ (ಮುಧೋಳ) ಹಾಗೂ ಶ್ರೀ ಬಿ.ಪಿ.ಬಳಪ್ಪನವರು ಸತ್ಯನಾರಾಯಣರನ್ನು ಪ್ರೋತ್ಸಾಹಿಸಿ, ಮಾರ್ಗದರ್ಶನ ನೀಡಿದ ಫಲವಾಗಿ ನಾಡಿನ ಹೆಸರಾಂತ ಶ್ರೀ ವಿಜಯ ಕಲಾ ನಾಟ್ಯ ಸಂಘ, ಶ್ರೀ ವಿಜಯಕುಮಾರ ನಾಟ್ಯ ಸಂಘ, ಶ್ರೀ ಶಕ್ತಿ ನಾಟ್ಯ ಕಲಾ ಸಂಘ, ಶ್ರೀ ಕೊಟ್ಟೂರೇಶ್ವರ ನಾಟ್ಯ ಸಂಘ, ಶ್ರೀ ವೀರೇಶ್ವರ ನಾಟ್ಯ ಸಂಘ, ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ, ಶ್ರೀ ಸಂಗಮೇಶ್ವರ ನಾಟ್ಯ ಸಂಘ, ಶ್ರೀ ಕೆ.ಬಿ.ಆರ್. ಡ್ರಾಮಾ ಕಂಪನಿ ಹೀಗೆ ಹಲವಾರು ವೃತ್ತಿ ರಂಗ ತಂಡಗಳಲ್ಲಿ ನಟನಾಗಿ, ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ.

ಪುತ್ಥಳಿ, ಕಳ್ಳ ದೇವರಿಗೆ ಸುಳ್ಳು ಪೂಜಾರಿ, ತಾಯಿ ಕರುಳು, ಮಲಮಗಳು, ವಿಧಿಯ ಕೈವಾಡ, ಸತ್ಯ ಸತ್ತಿತು, ದುಡ್ಡಿನ ದರ್ಪ ಮದುವೆಯಾಗದ ವಿಧವೆ, ಪೋಲೀಸನ ಮಗಳು, ಎಚ್ಚರ ತಂಗಿ ಎಚ್ಚರ, ನಾಟಕಗಳ ಪಾತ್ರಗಳು ಸತ್ಯನಾರಾಯಣ ಅವರಿಗೆ ಜನಪ್ರಿಯತೆ ತಂದಿತ್ತ ನಾಟಕಗಳು.

ಹೀಗೆ ನಲವತ್ತೂರು ವರ್ಷಗಳಿಂದ ರಂಗ ಸೇವೆಯ ಕೈಂಕರ್ಯದಲ್ಲಿ ತೊಡಗಿದ್ದು, ಶೇಷ ಬದುಕನ್ನು ರಂಗದ ಒಡನಾಟದಲ್ಲಿಯೇ ಕಳೆಯಬೇಕೆಂಬ ಹಂಬಲ ಹೊಂದಿದ್ದಾರೆ ಶ್ರೀಯುತ ಎಂ.ಕೆ. ಸತ್ಯನಾರಾಯಣ.



## ಕೆ. ಸುಬ್ಬಣ್ಣ ಶೆಟ್ಟಿ

ಕಾಸರಗೋಡು ಜಿಲ್ಲೆಯ ಕೂಡ್ಲು ಗ್ರಾಮದವರಾದ ಸುಬ್ಬಣ್ಣ ಶೆಟ್ಟಿ ವೃತ್ತಿಯಿಂದ 'ಪತ್ರಿಕೋದ್ಯಮಿ' ನಾಟಕಗಳಲ್ಲಿ ನಟಿಸುವುದು ಇವರ ಹವ್ಯಾಸ, ಅದರಲ್ಲೂ ಉತ್ತಮ ಸ್ತ್ರೀ ವೇಷಧಾರಿ.

ಸುಬ್ಬಣ್ಣ 1965ರಲ್ಲಿ ರಂಗಭೂಮಿ ಪ್ರವೇಶಿಸಿ, 'ಸಹೋದರ ಕಲಾ ಸಂಘ' ಎಂಬ ಹೆಸರಿನ ನಾಟಕ ತಂಡವೊಂದನ್ನು ಕಟ್ಟಿ ಕಾಸರಗೋಡಿನಲ್ಲಿ ಹವ್ಯಾಸಿ ರಂಗಭೂಮಿಗೆ ಚಾಲನೆ ನೀಡಿದರು. ಕರೆ ಬಂದಾಗ ಬೇರೆ ತಂಡಗಳಲ್ಲೂ ಪಾತ್ರವಹಿಸಿದರು. 1979ರಲ್ಲಿ 'ಯವನಿಕಾ' ರಂಗ ಸಂಸ್ಥೆಯನ್ನು ಸ್ಥಾಪಿಸಿ ದೆಹಲಿ, ಕೋಲಾಪುರ, ಮುಂಬೈ, ಗೋವಾ ಮೊದಲಾದ ಕಡೆ ಪ್ರದರ್ಶಿಸಿದ ನಾಟಕಗಳಲ್ಲಿ ಮುಖ್ಯ ಪಾತ್ರಗಳನ್ನು ನಿರ್ವಹಿಸಿದ್ದಾರೆ. 'ಮನೆಯಿಂದ ಮಸಣಕ್ಕೆ', 'ಮಂಗಳಾ, 'ಧರ್ಮಚಕ್ರ', 'ಮಣ್ಣಿನ ಬೊಂಬೆ', 'ಗುಲಾಮನ ನಗು', 'ನಾಯಿಗಳು, 'ಸಿದ್ಧತೆ', 'ದೃಷ್ಟಿ', 'ಪ್ರಶ್ನೆ', 'ಪತನ', ಸುಬ್ಬಣ್ಣ ಅಭಿನಯಿಸಿರುವ ನಾಟಕಗಳು. ತುಳು, ಕೊಂಕಣಿ, ನಾಟಕಗಳಲ್ಲೂ ಅಭಿನಯಿಸಿರುವುದಲ್ಲದೆ ಕೆಲವು ತುಳು ನಾಟಕಗಳ ನಿರ್ದೇಶಕರೂ ಆಗಿದ್ದಾರೆ. ಇವರ ಅಭಿನಯದ ನಾಟಕಗಳು ದೂರದರ್ಶನದಲ್ಲೂ ಪ್ರಸಾರ ಕಂಡಿವೆ. ಮಂಗಳೂರು ಆಕಾಶವಾಣಿಯಿಂದಲೂ ಮನ್ನಣೆ ಪಡೆದ ಕಲಾವಿದರಾಗಿದ್ದಾರೆ. ಉತ್ತಮ ಮೂಕಾಭಿನಯ ಪಟುವೂ ಆಗಿರುವ ಸುಬ್ಬಣ್ಣ ನೂರಕ್ಕೂ ಮಿಕ್ಕಿ ಮೂಕಾಭಿನಯ ಪ್ರದರ್ಶನ ನೀಡಿದ್ದಾರೆ.

ಪ್ರಸ್ತುತ ಯವನಿಕಾದ ಉಪಾಧ್ಯಕ್ಷರಾಗಿ ನಟನೆಯೊಂದಿಗೆ ನಾಟಕ ವಿಮರ್ಶೆ, ರಂಗ ಸಂಘಟನೆ, ಸಾಮಾಜಿಕ ಚಟುವಟಿಕೆಗಳಲ್ಲೂ ಆಸಕ್ತಿವಹಿಸಿ ಕನ್ನಡಪರ ಹೋರಾಟಗಾರರೂ ಆಗಿದ್ದಾರೆ ಶ್ರೀಯುತ ಸುಬ್ಬಣ್ಣ ಶೆಟ್ಟಿ.

---



## ಕೆ.ಆರ್. ಸುಧೀಂದ್ರ ಶರ್ಮ

ಕೆ.ಆರ್. ಸುಧೀಂದ್ರ ಶರ್ಮ ಅವರು ಮಂಡ್ಯ ಜಿಲ್ಲೆಯ ಮದ್ದೂರಿನಲ್ಲಿ 1951ರಲ್ಲಿ ಜನಿಸಿದರು. ಚಿಕ್ಕಂದಿನಿಂದಲೇ ರಂಗಕರ್ಮಗಳ ಬಗ್ಗೆ ಆಸಕ್ತಿ ಇದ್ದುದರಿಂದ ನಾಟಕಶಾಸದಲ್ಲಿ ಡಿಪ್ಲೊಮಾ ಪದವಿಯೊಂದಿಗೆ, ಅಮೆರಿಕೆಯ ಬ್ರೂಕ್‌ಲಿನ್ ಕಾಲೇಜಿನಿಂದ ಸ್ನಾತಕೋತ್ತರ ಪದವಿಯನ್ನು ಪಡೆದುಕೊಂಡಿದ್ದಾರೆ. ಸದ್ಯ ಬೆಂಗಳೂರು ವಿಶ್ವವಿದ್ಯಾಲಯದ ಪ್ರದರ್ಶನ ಕಲಾ ವಿಭಾಗದಲ್ಲಿ ನಾಟಕಶಾಸ್ತ್ರದ ಪ್ರವಾಚಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. 1969ರಲ್ಲಿ ಮೈಸೂರಿನ ಖ್ಯಾತ 'ಚೇತನ ಕನ್ನಡ ಸಂಘ'ದ ಕಲಾವಿಭಾಗದ ಸಂಚಾಲಕರಲ್ಲಿ ಒಬ್ಬರಾಗಿ ರಂಗಚಟುವಟಿಕೆ ಆರಂಭಿಸಿದ ಶರ್ಮ ಅಲ್ಲಿಂದ ಪ್ರಯೋಗಗೊಂಡ 'ನನ್ನ ತಂಗಿಗೊಂದು ಗಂಡು ಕೊಡಿ', ಹಗ್ಗದ ಕೊನೆ ನಾಟಕಗಳಲ್ಲಿ ಪಾತ್ರ ನಿರ್ವಹಿಸಿದ್ದಾರೆ. ಮುಂದೆ ಲಲಿತಕಲಾ ಕಾಲೇಜಿನ ವಿದ್ಯಾರ್ಥಿಯಾಗಿ ಕೊಡೆಗಳು, ಬೆರಳ್ ಗೆ ಕೊರಳ್, ಆಷಾಢಭೂತಿ, ಸಾಯೋಆಟ, ನಂಕಂಪ್ನಿ, ಕೇಳು ಜನಮೇಜಯ ಇತ್ಯಾದಿ ನಾಟಕಗಳಲ್ಲಿ ಅಭಿನಯಿಸಿದರು.

ಕ್ರಮೇಣ ಹವ್ಯಾಸಿ ಕಲಾವಿದರಾಗಿ ಮುಂದುವರೆದು ಖ್ಯಾತ ರಂಗತಂಡಗಳಾದ ಸಮತೆಂತೋ, ಪ್ರತಿಬಿಂಬ ಕಲಾವಿದರು, ಸ್ನೇಹ ವೃಂದ, ಕಲಾಪ್ರಿಯ, ಪ್ರಯೋಗರಂಗ ತಂಡಗಳ ಎಲ್ಲರಂಥವನಲ್ಲ ನನಗಂಡ, ಸತ್ತವರ ನೆರಳು, ವಿಗಡ ವಿಕ್ರಮರಾಯ, ಗಿಳಿಯು ಪಂಜರದೊಳಿಲ್ಲ, ಅಳಿಯ ದೇವರು, ಅದೇ ದಾರಿ, ಇದಕ್ಕೆ ಸಂಶಯವಿಲ್ಲ, ಮೌನಿ ಮೊದಲಾದ ನಾಟಕಗಳಲ್ಲಿ ಅಭಿನಯಿಸಿದರು. ವಿಶ್ವವಿದ್ಯಾಲಯದ ಕಲಾವಿಭಾಗಕ್ಕಾಗಿ ಬೆರಳ್‌ಗೆ ಕೊರಳ್, ಗರ್ಭಗುಡಿ, ಆಷಾಢದ ಒಂದು ದಿನ, ಸಿದ್ಧತೆ, ಆನಿ ಬಂತಾನಿ, ಹೆಜ್ಜೆಗಳು, ಗಾರ್ದಭ ವಿಜಯ, ಪ್ರತ್ಯಕ್ಷ ಪ್ರಮಾಣ ನಾಟಕಗಳನ್ನು ನಿರ್ದೇಶಿಸಿ, ಗಂಡಸ್ಮತ್ರಿ, ಕೇಳು ಜನಮೇಜಯ, ಯಯಾತಿ, ವಾಲ್ಮೀಕಿ ಭಾಗ್ಯ, ಷಾಜಹಾನ್, ಕಂಬ್ಳಿಸೇವೆ, ಇದಕೆ

ಸಂಶಯವಿಲ್ಲ ನಾಟಕಗಳಲ್ಲಿ ನಟನಾಗಿ ಪಾಲ್ಗೊಂಡಿದ್ದಾರೆ. 'ಅಭಿವ್ಯಕ್ತಿ' ಮಕ್ಕಳ ನಾಟಕ ತಂಡದ ಸ್ಥಾಪಕ ಸದಸ್ಯರಾಗಿ ಕಾಡಿನಲ್ಲಿ ಕಥೆ, ಸ್ನೋವೈಟ್, ಕಟ್ಟುಕಥೆ ನಾಟಕಗಳನ್ನು 'ಅಭಿನಯ ತರಂಗ' ರಂಗಶಾಲೆಗಾಗಿ ಜನಮರುಳೋ, ಆಷಾಢದ ಒಂದು ದಿನ, 'ಕಲಾಗಂಗೋತ್ರಿ' ಗಾಗಿ ಮಿಸ್ ಜೂಲಿ, ಕೇಳು ಜನಮೇಜಯ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಅಮೇರಿಕಾ, ಜರ್ಮನ್, ಲಂಡನ್‌ಗಳಲ್ಲಿ ರಂಗಪ್ರವಾಸ ಮಾಡಿಬಂದಿದ್ದಾರೆ. ಯುವ ಕಲಾಪ್ರಿಯರನ್ನು ರಂಗಭೂಮಿಯತ್ತ ಆಕರ್ಷಿಸುವುದಕ್ಕಾಗಿ ಹಲವು ತರಬೇತಿ ಕಾರ್ಯಾಗಾರಗಳನ್ನು ನಿರ್ದೇಶಿಸಿರುವ ಶರ್ಮ ಆಕಾಶವಾಣಿಗಾಗಿ ಹೀಗೊಂದು ಪ್ರಸಂಗ, ಒಂದು ಹಳ್ಳಿಯ ವ್ಯಥೆ, ಉದಯರಾಗ, ಕಂತುಗೃಹ, ಮಾಡಿದ್ದುಣ್ಣೋ ಮಹಾರಾಯ, ಇತ್ಯಾದಿ ನಾಟಕಗಳನ್ನು ರಚಿಸಿದ್ದಾರೆ. ಕರ್ನಾಟಕ ಸರ್ಕಾರದ ಪಠ್ಯಪುಸ್ತಕ ಇಲಾಖೆಗಾಗಿ ಎರಡು ವರ್ಷದ ನಾಟಕ ಡಿಪ್ಲೊಮಾ ಪದವಿಗೆ 'ಕನ್ನಡ ಜಾನಪದ ರಂಗಭೂಮಿ' ಎಂಬ ಕೃತಿ ರಚಿಸಿದ್ದಾರೆ.

---



## ಸುಲೋಚನಾ ಕಲಾವಂತ

ಕಲೆಯನ್ನೇ ವೃತ್ತಿಯಾಗಿಸಿಕೊಂಡ ಶ್ರೀಮತಿ ಸುಲೋಚನಾ ಕಲಾವಂತ ಮೂಲತಃ ಕಲಾವಿದ ಕುಟುಂಬಕ್ಕೆ ಸೇರಿದವರು. ತಂದೆ ದಿ: ಕೃಷ್ಣಪ್ಪಾ ಬೆಟದೂರ್ ಹಾಗೂ ತಾಯಿ ದಿ: ರೇಣಮ್ಮ ಬೆಟದೂರ್ ವೃತ್ತಿ ಕಲಾವಿದರು. ಶ್ರೀಯುತ ಮನಸೂರ್ ಬಸವಣ್ಣೆಪ್ಪನವರ ಕಂಪನಿಯ ನಾಟಕಗಳಲ್ಲಿ ತಂದೆ ತಾಯಿಯರು ಮುಖ್ಯ ಪಾತ್ರವಹಿಸುತ್ತಿರುವಾಗ, ಅದೇ ನಾಟಕಗಳಲ್ಲಿ ಸುಲೋಚನಾ ಬಾಲಪಾತ್ರಗಳಲ್ಲಿ ನಟಿಸುತ್ತ ರಂಗಪ್ರಿಯರ ಗಮನ ಸೆಳೆದರು.

ನಂತರದ ದಿನಗಳಲ್ಲಿ ಕರ್ನಾಟಕದ ಪ್ರಮುಖ ವೃತ್ತಿ ಕಂಪನಿಗಳಾದ ಶ್ರೀಯುತ ಏಣಗಿ ಬಾಳಪ್ಪನವರ ನಾಟಕ ಕಂಪನಿ, ಗೋಕಾಕದ ಶ್ರೀ ಶಾರದಾ ನಾಟ್ಯ ಸಂಘ, ಶ್ರೀಯುತ ನ್ಯಾಮತಿ ಶಾಂತಪ್ಪನವರ ಕಂಪನಿ, ಶ್ರೀ ಕೆ.ಬಿ.ಆರ್. ಡ್ರಾಮಾ ಕಂಪನಿ, ಶ್ರೀ ರೇಣುಕಾಚಾರ್ಯ ನಾಟ್ಯ ಸಂಘ, ಶ್ರೀ ನಟರಾಜ ನಾಟ್ಯ ಸಂಘ, ಹೀಗೆ ಉತ್ತರ ಕರ್ನಾಟಕದ ಪ್ರಮುಖ, ಜನಪ್ರಿಯ ನಾಟಕ ಕಂಪನಿಯ ನಾಟಕಗಳಲ್ಲಿ ನಾಯಕಿಯಾಗಿ, ಹಾಸ್ಯನಟಿಯಾಗಿ ಮಿಂಚಿದರು. ನಾಡಿನ ಪ್ರಸಿದ್ಧ ರಂಗ ಕಲಾವಿದರಾದ ಸುಭದ್ರಮ್ಮಾ ಮನ್ಸೂರ್, ತಾಳಗುಪ್ಪದ ಶಾಂತಕುಮಾರ, ಗೋಕಾಕ ಬಸವಣ್ಣೆಪ್ಪ, ಕುಂದಾಪುರ ಸುಮಿತ್ರ, ಹಡಗಲಿ ವೀರಭದ್ರಪ್ಪ, ಅದವಾನಿ ಲಕ್ಷ್ಮಿದೇವಿ ರೊಂದಿಗೆ ನಟಿಸಿ, ಉತ್ತರ ಕರ್ನಾಟಕದ ರಂಗಪ್ರಿಯರಿಗೆ ಚಿರಪರಿಚಿತ ನಟಿಯಾಗಿದ್ದಾರೆ.

ಸುಮಾರು 60 ವರ್ಷಗಳ ಕಲಾಬದುಕನ್ನು ಪೂರೈಸಿ, ಈಗ ನಿವೃತ್ತಿ ಹೊಂದಿದ್ದರೂ, ಯುವ ಕಲಾಸಕ್ತರಿಗೆ ತರಬೇತಿ, ಮಾರ್ಗದರ್ಶನ ನೀಡುತ್ತ ತಮ್ಮ ಮಕ್ಕಳನ್ನು, ಕಲಾರಂಗಕ್ಕೆ ಕಾಣಿಕೆಯಾಗಿ ನೀಡಿದ್ದಾರೆ ಹಿರಿಯ ರಂಗಜೀವಿ ಶ್ರೀಮತಿ ಸುಲೋಚನಾ ಕಲಾವಂತ.

---



## ಸಂಗಮೇಶ್ ಆರ್. ಗುರವ

ನಾಟಕ ಅಂದರೆ ಮೂಗು ಮುರಿಯುತ್ತಿದ್ದ ಕುಟುಂಬದಿಂದ ಬಂದವರು ಶ್ರೀ ಸಂಗಮೇಶ್ ಆರ್. ಗುರವ. ವಿಜಾಪುರ ಜಿಲ್ಲೆಗೆ ಸೇರಿದ ಕವಟಗಿ ಎಂಬ ಸಣ್ಣ ಗ್ರಾಮದವರಾದ ಸಂಗಮೇಶ್, ತಂದೆ ತಾಯಿಗಳ ಇಚ್ಛೆಗೆ ವಿರುದ್ಧವಾಗಿ ನಾಟಕ ಕಂಪನಿ ಸೇರಿ ಮನೆಯಿಂದ ಉಚ್ಚಾಟಿಸಲ್ಪಟ್ಟರು. ಬಿ.ಎ. ಪದವಿ ಪಡೆದಿರುವ ಇವರು 1971ರಲ್ಲಿ ಮೊದಲ ಬಾರಿಗೆ ರಂಗಕ್ಕೆ ಪರಿಚಿತರಾದರು. ನಾಟಕ ರಚನೆಯ ಕಡೆಗೆ ಹೆಚ್ಚು ಆಸಕ್ತಿ ಇದ್ದು

ಇದುವರೆಗೂ 25 ನಾಟಕಗಳನ್ನು ಬರೆದಿದ್ದಾರೆ. ಎಲ್ಲವೂ ಪ್ರದರ್ಶನ ಕಂಡಿರುವುದು ವಿಶೇಷ. 'ಬಹಿಷ್ಕಾರ', 'ಸಂಗೊಳ್ಳಿ ರಾಯಣ್ಣ', 'ಬದುಕು ಜಟಕಾ ಬಂಡಿ', 'ವಿದ್ಯೆ ಇದ್ದರೂ ದುಡಿಮೆ ಬೇಕು', 'ಸಾಕು ಮಗಳು' ಅವುಗಳಲ್ಲಿ ಕೆಲವು.

ಕವಿ ಸಾಳುಂಕೆ, ಶ್ರೀ ಮಹಂತೇಶ ಶಾಸ್ತ್ರಿ, ಶಿವಶಂಕರ, ಸಂಕೇಶ ಡಂಬಳ ಗುರುವೃಂದದಿಂದ ಪ್ರೋತ್ಸಾಹ ಪಡೆದು ಶ್ರೀ ಲಲಿತ ಕಲಾ ನಾಟ್ಯ ಸಂಘ, ಶ್ರೀ ಭಾಗ್ಯೋದಯ ನಾಟ್ಯ ಸಂಘ, ಶ್ರೀ ಗವಿಸಿದ್ದೇಶ್ವರ ನಾಟ್ಯ ಸಂಘ, ಮುಂತಾದೆಡೆಯಲ್ಲಿ ಸೇವೆ ಸಲ್ಲಿಸಿ ಉತ್ತಮ ವ್ಯವಸ್ಥಾಪಕನೆಂಬ ಹೆಗ್ಗಳಿಕೆ ಪಡೆದಿದ್ದಾರೆ. ಬಿ. ಜಯಮ್ಮನವರಿಂದ 'ರಂಗಭೂಮಿಯ ಸಮರ್ಥ ವ್ಯವಸ್ಥಾಪಕ'ನೆಂಬ ಗೌರವಕ್ಕೂ ಪಾತ್ರರಾಗಿದ್ದಾರೆ.

ಉತ್ತಮ ನಾಟಕಕಾರರಾದ ಇವರ ರಚನೆಯ 'ಸಿಂಧೂರ ಲಕ್ಷ್ಮಣ' ನಾಟಕ ಚಿತ್ರ ನಟ ಸುಧೀರ್ ಅಭಿನಯದಲ್ಲಿ ನಾಡಿನಾದ್ಯಂತ ಪ್ರದರ್ಶನ ಕಂಡಿದೆ. ಆಂಧ್ರಪ್ರದೇಶದ ಆದವಾನಿಯಲ್ಲಿ 41 ಪ್ರದರ್ಶನದೊಂದಿಗೆ, ನಾಟಕ ಕೃತಿಯಾಗಿ ಹನ್ನೊಂದು ಮುದ್ರಣಗಳನ್ನು ಕಂಡಿರುವುದು ಈ ನಾಟಕದ ಜನಪ್ರಿಯತೆಗೆ ಸಾಕ್ಷಿ.

ನಟ ನಾಟಕಕಾರ, ವ್ಯವಸ್ಥಾಪಕರಷ್ಟೇ ಅಲ್ಲದೆ ಪತ್ರಕರ್ತರೂ ಆಗಿರುವ ಸಂಗಮೇಶ ಸಾಮಾಜಿಕ ಕಳಕಳಿ ಉಳ್ಳವರು. ಭಾವೈಕ್ಯತೆ, ಸಾಕ್ಷರತಾ ಆಂದೋಲನ, ಪಾನ ನಿರೋಧ, ಪರಿಸರ ಸಂರಕ್ಷಣೆ, ಕುಟುಂಬ ಯೋಜನೆ ಪ್ರಚಾರದಲ್ಲಿ ಹೊಸ ಮಾದರಿಯ ನಾಟಕಗಳನ್ನು ರಚಿಸಿ ಅಭಿನಯಿಸಿದ್ದಾರೆ.



## ಹನುಮಯ್ಯ

68 ವಸಂತಗಳನ್ನು ಕಂಡಿರುವ ಹಿರಿಯ ಕಲಾವಿದ ಶ್ರೀ ಹನುಮಯ್ಯ ಚಾಮರಾಜನಗರ ರಂಗಭೂಮಿ ಇತಿಹಾಸದಲ್ಲಿ ಗಣನೀಯವಾದ ಹೆಸರು.

ದಿ: ಚಿಕ್ಕೂರಯ್ಯ, ದಿ: ಹನುಮಮ್ಮ ಇವರ ತಂದೆ ತಾಯಿಯರು. ನಾಟಕದಲ್ಲಿ ಅಭಿನಯಿಸುವ ಗೀಳು ಬಾಲ್ಯದಿಂದಲೇ ಇತ್ತು, ಅದಕ್ಕೆ ಪೂರಕವಾಗಿ ಉತ್ತಮ ಕಂಠ ಮಾಧುರ್ಯವನ್ನು ಹನುಮಯ್ಯ ಪಡೆದಿದ್ದುದರಿಂದ, ರಂಗಪ್ರವೇಶಕ್ಕೆ ದಾರಿ ಸುಗಮವಾಯಿತು. ಶ್ರೀ ಮಂಟೇ ಲಿಂಗೇಶ್ವರ ಕೃಪಾ ಪೋಷಿತ ನಾಟಕ ಮಂಡಲಿಯಲ್ಲಿ ರಂಗ ಸಂಘಟಕರಾಗಿ ಸೇರಿ, ಅಲ್ಲಿಂದಲೇ ಬಣ್ಣದ ಬದುಕು ಆರಂಭಿಸಿದರು. ಹವ್ಯಾಸಿ ನಟರಾಗಿದ್ದ ಹನುಮಯ್ಯ ಕೃಷಿ ಇಲಾಖೆಯಲ್ಲಿ ಫೀಲ್ಡ್ ಆಫೀಸರ್ ಹುದ್ದೆಯಲ್ಲಿ ಹತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿ ಕೊನೆಗೊಂದು ದಿನ ಕೆಲಸಕ್ಕೆ ರಾಜೀನಾಮೆ ನೀಡಿ ಸಂಪೂರ್ಣವಾಗಿ ರಂಗಭೂಮಿಗೆ ತಮ್ಮನ್ನು ಅರ್ಪಿಸಿಕೊಂಡರು.

'ಕುರುಕ್ಷೇತ್ರ', 'ಜಗಜ್ಯೋತಿ ಬಸವೇಶ್ವರ', 'ಕೀಚಕ ವಧೆ', 'ತ್ರಿಜನ್ಮ ಮೋಕ್ಷ', 'ಸಂಪೂರ್ಣ ರಾಮಾಯಣ', 'ದಕ್ಷಯಜ್ಞ' ಮುಂತಾದ ಪೌರಾಣಿಕ ನಾಟಕಗಳಲ್ಲಿ ಕರ್ಣ, ರಾಮ, ಕೃಷ್ಣ, ಬಸವಣ್ಣ, ನಾರದ ಪಾತ್ರಗಳಿಗೆ ಪರಕಾಯ ಪ್ರವೇಶವಾದಂತೆ ಜೀವತುಂಬುತ್ತಿದ್ದರು. ಜೊತೆಗೆ ಈ ನಾಟಕಗಳ ಗೀತೆಗಳನ್ನು ಸೊಗಸಾಗಿ ಹಾಡಿ ಜನಮನ ರಂಜಿಸುತ್ತಿದ್ದರು.

ವೃತ್ತಿ ರಂಗಭೂಮಿಯಲ್ಲೇ ಹೆಚ್ಚಾಗಿ ತೊಡಗಿಸಿಕೊಂಡಿದ್ದರೂ, ಹನುಮಯ್ಯ ಹವ್ಯಾಸಿ ರಂಗಭೂಮಿಯ ಚಟುವಟಿಕೆಗಾಗಿ ಅನೇಕ ಯುವಕರನ್ನು ತರಬೇತಿ ನೀಡಿ ಕ್ರಿಯಾಶೀಲರಾಗುವಂತೆ ಮಾಡಿದ್ದಾರೆ. ರಂಗವಾಹಿನಿ, ಭಾರತ ಯಾತ್ರಾ ಕೇಂದ್ರ ಸಂಘಟನೆಗಳೊಂದಿಗೆ ಪೋಷಕರಾಗಿ ಸೇವೆ ಸಲ್ಲಿಸುತ್ತಾ ಕರೆ ಬಂದಾಗ ಬೇರೆ ತಂಡಗಳಲ್ಲೂ ಅಭಿನಯಿಸುತ್ತಾ ರಂಗಭೂಮಿಗಾಗಿ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ.



## ಎ. ಕೃಷ್ಣಯ್ಯ (ಟ್ರ್ಯೂಬ್) (ಪದ್ಮಣ್ಣ ಶ್ರಮ ಪ್ರಶಸ್ತಿ)

ಕನಕಪುರ ತಾಲ್ಲೂಕಿನ ಚಿಕ್ಕದೇವರ ಹಳ್ಳಿಯ ಅಂಕೇಗೌಡರ ಮಗನಾಗಿ ಎ. ಕೃಷ್ಣಯ್ಯ 1957ರಲ್ಲಿ ಜನಿಸಿದರು. ಎಸ್.ಎಸ್.ಎಲ್.ಸಿ. ವರೆಗೆ ವಿದ್ಯಾಭ್ಯಾಸ ಪಡೆದು 1974ರಲ್ಲಿ ಪ್ರಭಾತ್ ಸೌಂಡ್ ಸಿಸ್ಟಂನಲ್ಲಿ ಸಹಾಯಕರಾಗಿ ಸೇರಿ, ಕ್ರಮೇಣ ಸ್ವತಂತ್ರ ಧ್ವನಿ ನಿರ್ವಾಹಕನಾಗಿ, ನಾಟಕಗಳಿಗೆ ಕೆಲಸ ಮಾಡಲು ಆರಂಭಿಸಿದರು. ಧ್ವನಿ ನಿರ್ವಹಣೆಯ ಜೊತೆಗೆ ರಂಗ ಸಜ್ಜಿಕೆಯಲ್ಲೂ ಪರಿಶ್ರಮವಿದ್ದುದರಿಂದ ಈ ಎರಡು ಕ್ಷೇತ್ರಗಳಲ್ಲೂ ದುಡಿಯತೊಡಗಿದರು. ನಗರದ ಖ್ಯಾತ ಹವ್ಯಾಸಿ ತಂಡಗಳಾದ ನಟರಂಗ, ಬೆನಕ, ಸಮುದಾಯ, ಸ್ಫೂರ್ತಿ ಕಲಾವಿದರು, ಸೂತ್ರಧಾರ, ವೇದಿಕೆ, ಪ್ರಯೋಗರಂಗ, ನಾಟ್ಯ ಸಂಘ ಥಿಯೇಟರ್ ಸೆಂಟರ್ ಇನ್ನೂ ಮುಂತಾದ ರಂಗತಂಡಗಳ ನಾಟಕಗಳಿಗೆ ವೇದಿಕೆ ಸಹಾಯಕನಾಗಿ ಕೆಲಸ ಮಾಡಿದ್ದಾರೆ.

ರವೀಂದ್ರ ಕಲಾಕ್ಷೇತ್ರವು ದುರಸ್ತಿಯಲ್ಲಿದ್ದಾಗ, ಕಲಾಕ್ಷೇತ್ರದ ಪಕ್ಕದ ಖಾಲಿ ಜಾಗದಲ್ಲಿ ಪ್ರಾರಂಭವಾದ 'ಕೈಲಾಸಂ ಕಲಾಕ್ಷೇತ್ರ'ದಲ್ಲೂ ಧ್ವನಿ, ಬೆಳಕಿನ ವ್ಯವಸ್ಥೆ ಮಾಡಿದ್ದಾರೆ. ಆ ದಿನಗಳಲ್ಲಿ ಮೈಕೋ ಲಲಿತಕಲಾ ಸಂಘಕ್ಕಾಗಿ ಸಿಜಿಕೆ ನಿರ್ದೇಶಿಸಿದ 'ಜೂಲಿಯಸ್ ಸೀಸರ್', ರಂಗ ಸಂಪದದ 'ಒಡಲಾಳ' ಹಾಗೂ ವೇದಿಕೆ ತಂಡಕ್ಕಾಗಿ ಟಿ.ಎಸ್. ನರಸಿಂಹನ್ ನಿರ್ದೇಶಿಸಿದ 'ಟಿಪಿಕಲ್ ಕೈಲಾಸಂ' ನಾಟಕದ ರಂಗಸಜ್ಜಿಕೆಯಲ್ಲಿ ಮಹತ್ತರ ಪಾತ್ರ ವಹಿಸಿದ್ದಾರೆ. 1985ರಲ್ಲಿ ರವೀಂದ್ರ ಕಲಾಕ್ಷೇತ್ರದಲ್ಲಿ ರಂಗ ನಿರಂತರದಿಂದ ನಡೆದ 150 ದಿನಗಳ ನಾಟಕೋತ್ಸವದಲ್ಲಿ ಹಲವು ನಾಟಕಗಳಿಗೆ ಧ್ವನಿ, ರಂಗಸಜ್ಜಿಕೆ, ಬೆಳಕು ನೀಡಿರುವುದು ವಿಶೇಷ.





## ಕಲ್ಲೂರು ಶ್ರೀನಿವಾಸ್ (ಪದ್ಮಣ್ಣ ಶ್ರಮ ಪ್ರಶಸ್ತಿ)

ಸುಮಾರು 35 ವರ್ಷಗಳಿಂದ ಅವಿರತವಾಗಿ ರಂಗಭೂಮಿಯಲ್ಲಿ ಸೇವೆ ಸಲ್ಲಿಸುತ್ತಿರುವ ಶ್ರೀಯುತ ಕಲ್ಲೂರು ಶ್ರೀನಿವಾಸ್ ತಂದೆಯಿಂದ ವರವಾಗಿ ಬಂದ ಕಲೆಯನ್ನು ಉಳಿಸಿ, ಬೆಳೆಸಿ ಇಂದಿಗೂ ಕಲಾಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಮಾಗಡಿ ತಾಲ್ಲೂಕಿನ ಕಲ್ಲೂರಿನಲ್ಲಿ ದಿ: ನರಸಿಂಹಯ್ಯ ಹಾಗೂ ಶ್ರೀಮತಿ ಕಮಲಮ್ಮನವರಿಗೆ ಮಗನಾಗಿ 1955ರಲ್ಲಿ ಶ್ರೀನಿವಾಸ್ ಜನಿಸಿದರು. ತಂದೆ ಸಂಗೀತ ವಿದ್ವಾನ್ ಆಗಿದ್ದವರು. ಅವರ ನೆರಳಿನಲ್ಲಿ ಬೆಳೆದ ಶ್ರೀನಿವಾಸ್ ತಮ್ಮ ಹತ್ತನೇ ವಯಸ್ಸಿಗೆ 'ನಳ ದಮಯಂತಿ' ನಾಟಕದ ಮೂಲಕ ಬಾಲ ನಟನಾಗಿ ರಂಗಕ್ಷೇತ್ರಕ್ಕೆ ಪರಿಚಿತರಾದರು. ನಂತರ 'ಸಂಪೂರ್ಣ ರಾಮಾಯಣ' ನಾಟಕದಲ್ಲಿ ಸೀತೆ, ತಾರೆ, ಸ್ವಯಂಪ್ರಭೆ ಪಾತ್ರಗಳಲ್ಲಿ ದಾನಶೂರ ಕರ್ಣ ನಾಟಕದಲ್ಲಿ ನಾರದ, ವಿದುರ ಪಾತ್ರಗಳಲ್ಲಿ, ನೂರಾರು ಪ್ರದರ್ಶನಗಳಲ್ಲಿ ಭಾಗವಹಿಸಿ ರಂಗಾಸಕ್ತರ ಪ್ರೋತ್ಸಾಹ ಪಡೆದರು.

ರಂಗಭೂಮಿಯ ಸೆಳೆತದಿಂದ ಎಸ್.ಎಸ್.ಎಲ್.ಸಿ.ವರೆಗೆ ಮಾತ್ರ ಶಿಕ್ಷಣ ಪಡೆದು, ತಂದೆಯವರಿಂದಲೇ ಹಾರ್ಮೋನಿಯಂ ನುಡಿಸುವುದನ್ನು ಕಲಿತು ನಂತರ ರಂಗಸೇವೆಗಾಗಿ ತಮ್ಮನ್ನು ಪೂರ್ಣವಾಗಿ ಅರ್ಪಿಸಿಕೊಂಡರು. ಅತ್ಯಂತ ಕಿರುವಯಸ್ಸಿನಲ್ಲಿಯೇ ನಾಟಕ ನಿರ್ದೇಶಕರಾಗಿ 'ದಾನಶೂರ ಕರ್ಣ' ನಾಟಕ ನಿರ್ದೇಶಿಸಿ ಯಶಸ್ವಿ ಪ್ರದರ್ಶನ ನೀಡಿದರು. ಮುಂದೆ ಅವ್ಯಾಹತವಾಗಿ ಕುರುಕ್ಷೇತ್ರ, ಕೃಷ್ಣಾರ್ಜುನ ಯುದ್ಧ, ನಳದಮಯಂತಿ, ಪ್ರಚಂಡ ರಾವಣ, ತ್ರಿಪುರ ಸಂಹಾರ, ಕೃಷ್ಣಗಾರುಡಿ, ಪಾಂಡವ ವಿಜಯ, ಸಂಪೂರ್ಣ ರಾಮಾಯಣ, ಸುಭದ್ರಾ ಪರಿಣಯ, ಅಹಿರಾವಣ ಮಹಿರಾವಣ ಮುಂತಾದ ಪೌರಾಣಿಕ ನಾಟಕಗಳನ್ನು ಅನೇಕ ಕಲಾಸಂಸ್ಥೆಗಳಿಗಾಗಿ ನಿರ್ದೇಶಿಸಿದರು. ಉತ್ತಮ ಶಾರೀರವುಳ್ಳ ಶ್ರೀನಿವಾಸ್ ಹಲವಾರು ರಂಗಗೀತೆಗಳ ಧ್ವನಿಸುರುಳಿಗೆ ಗಾಯಕರಾಗಿ, ಧ್ವನಿಸುರುಳಿ ನಾಟಕಗಳಿಗೆ ಸಂಗೀತ ನಿರ್ದೇಶಕರಾಗಿಯೂ ಕೆಲಸ ಮಾಡಿದ್ದಾರೆ. ಇತ್ತೀಚೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ನಿರ್ಮಿಸಿದ 'ಶತಮಾನದ ರಂಗಗೀತೆಗಳು' ಧ್ವನಿ ಸುರುಳಿಯಲ್ಲಿ ಕೆಲವು ಅಪರೂಪದ

ರಂಗಗೀತೆಗಳನ್ನು ಹಾಡಿದ್ದಾರೆ. 46ರ ಹರೆಯದ ಶ್ರೀನಿವಾಸ್ ಈಗಲೂ ಅವಿಶ್ರಾಂತವಾಗಿ ರಂಗಭೂಮಿಗಾಗಿ ದುಡಿಯುತ್ತಾ, ಪೌರಾಣಿಕ ನಾಟಕಗಳನ್ನು ಕಲಿಸುತ್ತ ಪೌರಾಣಿಕ ನಾಟಕ ಪರಂಪರೆಯ ಉಳಿವಿಗಾಗಿ ಕಟಿಬದ್ಧರಾಗಿದ್ದಾರೆ.

---



## ಕಲ್ಲಪ್ಪ ಬಾಲಪ್ಪ ದ್ಯಾವಣಾಸಿ (ಪದ್ಮಣ್ಣ ಶ್ರಮ ಪ್ರಶಸ್ತಿ)

ಶ್ರೀ ಕಲ್ಲಪ್ಪ ಬಾಲಪ್ಪ ದ್ಯಾವಣಾಸಿ ರಂಗಭೂಮಿಯಲ್ಲಿ ಹವ್ಯಾಸಿ ನಟರಾಗಿ, ಪ್ರಸಾಧನ ಕಲಾವಿದರಾಗಿ ಮತ್ತು ಸುಮಾರು ಎರಡು ತಲೆಮಾರಿನಿಂದ ರಂಗಭೂಮಿಗೆ ಅವಶ್ಯವಿರುವ ರಂಗಸಜ್ಜಿಕೆ ಪರಿಕರಗಳನ್ನು ಒದಗಿಸುತ್ತಾ ಬಂದಿದ್ದಾರೆ.

ಕಲ್ಲಪ್ಪ ಗದಗ ತಾಲ್ಲೂಕಿನ ಹುಯಿಲಗೋಳ ಗ್ರಾಮದಲ್ಲಿ 1932ರಲ್ಲಿ ಜನಿಸಿದರು. ಇವರ ತಂದೆ ಬಾಲಪ್ಪನವರು ಗತಕಾಲದಲ್ಲಿ ನಾಟಕ ರಂಗಕ್ಕೆ ಮೆರಗು ನೀಡುತ್ತಿದ್ದ ಸೀನರಿ, ವೇಷಭೂಷಣ, ಪ್ರಸಾಧನ, ರಂಗಸಜ್ಜಿಕೆಯ ಪರಿಕರಗಳನ್ನು ಒದಗಿಸುತ್ತಿದ್ದರು. ತಂದೆಯವರ ಕಲಾ ನೈಪುಣ್ಯವನ್ನು ನೋಡಿದ ಬಾಲಕ ಕಲ್ಲಪ್ಪನವರಿಗೆ ರಂಗಭೂಮಿಯ ಚಟ ಅಂಟಿತು. ತಂದೆಯಿಂದ ಮುಖವರ್ಣಿಕೆ ಕೆಲಸ ಕಲಿತರು; ರಂಗಸಜ್ಜಿಕೆ, ವಸ್ತ್ರ ವಿನ್ಯಾಸದಲ್ಲೂ ಪಳಗಿದ ಕಲಾವಿದರಾಗಿ ರೂಪುಗೊಂಡರು. ರಂಗ ನೇಪಥ್ಯ ಚಟುವಟಿಕೆಗಳನ್ನೇ ಕಸುಬಾಗಿಸಿಕೊಂಡು, ನಾಡಿನ ಮೂಲೆ ಮೂಲೆಗಳಲ್ಲಿ ಸಂಚರಿಸಿ, ಹಲವು ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳಿಗೆ ರಂಗಸಜ್ಜಿಕೆ, ವಸ್ತ್ರವಿನ್ಯಾಸ, ಪ್ರಸಾಧನ ವಿಭಾಗಗಳಲ್ಲಿ ಅಪಾರ ಶ್ರಮವಹಿಸಿ ನಾಟಕಗಳ ಯಶಸ್ಸಿಗೆ ಕಾರಣರಾಗಿದ್ದಾರೆ. ಇದೇ ರಂಗದಲ್ಲಿ 50 ವರ್ಷಗಳ ದುಡಿಮೆಯ ಅನುಭವ ಹೊಂದಿರುವ ಹಿರಿಯ ಕಲಾವಿದರಾಗಿದ್ದಾರೆ.

---



## ಹೆಚ್.ಬಿ. ಕಂಚೀಪತಿ (ಪದ್ಮಣ್ಣ ಶ್ರಮ ಪ್ರಶಸ್ತಿ)

ತಿಪಟೂರು ತಾಲ್ಲೂಕಿನ ಹುಣಸೇಘಟ್ಟದಲ್ಲಿ ವಾಸವಾಗಿರುವ ಶ್ರೀ ಎಚ್.ಬಿ. ಕಂಚೀಪತಿಯವರು, ತಾಲ್ಲೂಕಿನ ಪ್ರಸಿದ್ಧ ರಂಗಕರ್ಮಿಗಳು. ವರ್ಣಾಲಂಕಾರ ಹಾಗೂ ವಸ್ತ್ರಾಲಂಕಾರಗಳಲ್ಲಿ ನೈಪುಣ್ಯ ಹೊಂದಿ ಸರಿ ಸುಮಾರು 45 ವರ್ಷಗಳಿಂದ ಕಲಾಸೇವೆ ಮಾಡುತ್ತಾ ಬಂದಿದ್ದಾರೆ. ರಂಗಸಜ್ಜಿಕೆ, ದೀಪ ಜೋಡಣೆಯಲ್ಲೂ ಪರಿಶ್ರಮ ಹೊಂದಿದ್ದಾರೆ. ಕಂಚೀಪತಿಯವರದು ಕಲಾವಿದ ಕುಟುಂಬ. ರಂಗ ಶಿಕ್ಷಣಕ್ಕೆ ತಂದೆಯೇ ಮೊದಲ ಗುರು. ತಂದೆ ಶ್ರೀ ಎಂ.ಪಿ. ಬೆಟ್ಟಪ್ಪನವರು, ಶ್ರೀ ಸಿ.ವಿ. ಮಲ್ಲಪ್ಪನವರ ಕಂಪನಿ, ಶ್ರೀ ಗುಬ್ಬಿ ವೀರಣ್ಣನವರ ಕಂಪನಿಯಲ್ಲಿ ಸಣ್ಣ ಪುಟ್ಟ ಪಾತ್ರವಹಿಸುತ್ತಿದ್ದರು. ಸೀನರಿ ಬರೆಯುವುದು ಹಾರ್ಮೋನಿಯಂ ನುಡಿಸುವುದು, ನಾಟಕಕ್ಕೆ ಬೇಕಾದ ಉಡುಪು ತಯಾರಿಕೆ, ವರ್ಣಾಲಂಕಾರ ವಿಭಾಗದಲ್ಲಿ ಪರಿಣತಿ ಪಡೆದಿದ್ದರು. ತಾಯಿ ರಾಮಮ್ಮನವರೂ ಗಂಡನಿಗೆ ಸಹಾಯ ಮಾಡುತ್ತಿದ್ದರು.

ಇಂಥ ಕಲಾ ಕುಟುಂಬದಲ್ಲಿ 1932ರಲ್ಲಿ ಕಂಚೀಪತಿ ಜನಿಸಿದರು. ಶಾಲೆಯಲ್ಲಿ ಕಲಿಯುವಾಗ ಶಾಲಾ ವಾರ್ಷಿಕೋತ್ಸವದಲ್ಲಿ ಪ್ರದರ್ಶಿತವಾದ ನಾಟಕದಲ್ಲಿ ಅಭಿನಯಿಸುವುದರ ಮೂಲಕ ರಂಗ ಜೀವನಕ್ಕೆ ಕಾಲಿಟ್ಟರು. ತಂದೆ ಕೆಲಸ ಮಾಡುತ್ತಿದ್ದ ನಾಟಕಗಳನ್ನು ನೋಡಲು ಹೋಗುತ್ತಿದ್ದ ಬಾಲಕ ಕಂಚೀಪತಿಗೆ, ರಂಗಜೋಡಣೆ, ವಸ್ತ್ರಾಲಂಕಾರ, ವರ್ಣಾಲಂಕಾರ ವಿಷಯಗಳಲ್ಲಿ ಆಸಕ್ತಿ ಬೆಳೆದು ಈ ವಿಭಾಗಗಳಲ್ಲಿ ತಂದೆಯಿಂದಲೇ ಶಿಕ್ಷಣ ಪಡೆದರು. 1952ರಲ್ಲಿ ಮಿತ್ರ ಸಂಘದ 'ಗರತಿ' ನಾಟಕಕ್ಕೆ ಮೊದಲ ಬಾರಿಗೆ ವರ್ಣಾಲಂಕಾರ ಮಾಡಿ ಸೈ ಎನಿಸಿಕೊಂಡು, ಮುಂದೆ ಮಿತ್ರ ಸಂಘದ ಎಲ್ಲಾ ನಾಟಕಗಳಿಗೂ ಖಾಯಂ ಕಲಾವಿದರಾದರು. ಸಂಘದ ವತಿಯಿಂದ

ಚಿಕ್ಕಮಗಳೂರು, ಸಾಗರ, ಭದ್ರಾವತಿ, ಕಾರ್ಗಿಲ್, ಸಕಲೇಶಪುರ, ಜೋಗ್‌ಫಾಲ್ಸ್, ಬೆಂಗಳೂರು, ಮೈಸೂರು ಕಡೆಗಳಲ್ಲೆಲ್ಲಾ ದಂಡಯಾತ್ರೆಯಲ್ಲಿ ಪಾಲ್ಗೊಂಡಿದ್ದಾರೆ. 1961ರಲ್ಲಿ ಸ್ಥಾಪಿತವಾದ ಕಲ್ಪತರು ಕಾಲೇಜಿನ ವಾರ್ಷಿಕೋತ್ಸವಕ್ಕೆ ವರ್ಣಾಲಂಕಾರ ಮಾಡಿದ ಫಲವಾಗಿ, 1965ರಲ್ಲಿ ಕಾಲೇಜಿನ ಹಿರಿಯ ವಿದ್ಯಾರ್ಥಿ ಸಂಘದವರು ಆರಂಭಿಸಿದ ನಾಟಕ ಸ್ಪರ್ಧೆಗೆ ರಂಗ ಸಜ್ಜಿಕೆ, ವರ್ಣಾಲಂಕಾರ, ವಸ್ತ್ರಾಲಂಕಾರ, ದೀಪಾಲಂಕಾರ ಮಾಡಲು ಅವಕಾಶ ಪಡೆದು ಸತತವಾಗಿ 25 ವರ್ಷಗಳ ದೀರ್ಘ ಸೇವೆಯನ್ನು ಈ ಸಂಘಕ್ಕೆ ಮಾಡಿದ್ದಾರೆ. ಕಾಲೇಜು ವಿದ್ಯಾರ್ಥಿಗಳ ಪ್ರೀತಿಗೆ, ಗೌರವಕ್ಕೆ ಪಾತ್ರರಾಗಿ 'ಕಲ್ಪತರು ಕಲಾ ಸಂಘ'ದ ಅಧ್ಯಕ್ಷರಾಗಿ ನೇಮಿಸಲ್ಪಟ್ಟರು. ಅಲ್ಲದೆ ತಿಪಟೂರಿನ ಸುತ್ತಮುತ್ತಲ ಎಲ್ಲಾ ಶಾಲಾ ಕಾಲೇಜುಗಳ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಅವಶ್ಯಬೇಕಾದ ಕಲಾವಿದರಾಗಿದ್ದಾರೆ. ತಿಪಟೂರಿನಲ್ಲಿ ಯುವ ಸಂಘದ ಸಂಚಾಲಕನಾಗಿ 15 ವರ್ಷಗಳ ಕಾಲ ರಂಗಚಟುವಟಿಕೆಗಳನ್ನು ನಡೆಸಿದ್ದಾರೆ. ಇವುಗಳ ನಡುವೆ ಛಲದೊಳ್ ದುರ್ಯೋಧನ, 'ಕುರುಕ್ಷೇತ್ರ', 'ರಾಜಸೂಯ ಯಾಗ', 'ಸತ್ಯವ್ರತ', 'ರಾಮಾಯಣ', ಕರಿಭಂಟ' ನಾಟಕಗಳಲ್ಲಿ ನಟಿಸಿದ್ದಾರೆ. ಪುರುಷರಿಗೆ ಸ್ತ್ರೀ ವೇಷ ತೊಡಿಸಿ ಮುಖ ವರ್ಣಿಕೆ ಮಾಡುವುದರಲ್ಲಿ ತಂದೆಯನ್ನು ಮೀರಿಸುವ ಕಲಾವಿದರಾಗಿ ಬೆಳೆದ ಕಂಚೀಪತಿ, ತಮ್ಮಲ್ಲಿರುವ ಕಲೆಯನ್ನು ತಮ್ಮ ಮಗನಿಗೂ ಕಲಿಸಿ ಇದೇ ರಂಗದಲ್ಲಿ ಮುಂದುವರೆಯುವಂತೆ ಮಾಡಿದ್ದಾರೆ.

---



## ಎಂ.ಎಸ್. ಗುರುಮೂರ್ತಿ (ಪದ್ದಣ್ಣ ಶ್ರಮ ಪ್ರಶಸ್ತಿ)

1955ರಲ್ಲಿ ಕಲಾವಿದರ ಕುಟುಂಬದಲ್ಲಿ ಗುರುಮೂರ್ತಿ ಜನಿಸಿದರು. ಇವರ ತಂದೆ ಶ್ರೀ ಎ.ಎಲ್. ಶ್ರೀಕಂಠಯ್ಯ ವರದಾಚಾರ್ಯರ ನಾಟಕ ಕಂಪನಿಯಲ್ಲಿ ಸ್ತ್ರೀ ಪಾತ್ರ ನಿರ್ವಹಣೆಗೆ ಖ್ಯಾತರಾದವರು. ತಾಯಿ ಶ್ರೀಮತಿ ನಂಜಮ್ಮ, ತಂದೆಯವರಲ್ಲಿದ್ದ ಕಲಾಪ್ರತಿಭೆಯಿಂದ ಸ್ಫೂರ್ತಿ ಪಡೆದ ಬಾಲಕ ಗುರುಮೂರ್ತಿ ಶಾಲೆಗೆ ಶರಣು ಹೊಡೆದು 8ನೇ ವಯಸ್ಸಿಗೆ ಮಂಜುನಾಥ ಡ್ರಮೆಟಿಕ್ ಅಸೋಸಿಯೇಷನ್‌ನ 'ಸಾಹುಕಾರ' ನಾಟಕದಲ್ಲಿ ಬಾಲನಟನಾಗಿ ನಾಟಕ ಕ್ಷೇತ್ರಕ್ಕೆ ಪರಿಚಿತರಾದರು.

ನಂತರ ಯೋಗಾನರಸಿಂಹ, ಮಾಸ್ಟರ್ ಹಿರಣ್ಣಯ್ಯ, ಗುಬ್ಬಿ ವೀರಣ್ಣ, ಮುನಿರಂಗಪ್ಪ, ಓಬಳೇಶ್ವರ ಇವರುಗಳ ಕಂಪನಿಗಳಲ್ಲಿ ಚಿಕ್ಕಪುಟ್ಟ ಪಾತ್ರಗಳನ್ನು ವಹಿಸುತ್ತಾ ಬಂದರು. ನಟನೆಯಲ್ಲಿ ಆಸಕ್ತಿ ಕುಂದಿ ರಂಗ ತಾಂತ್ರಿಕತೆಯ ಕಡೆ ಕಣ್ಣು ಹೊರಳಿ ಪ್ರಭಾತ್ ಸೌಂಡ್ ಸಿಸ್ಟಂನಲ್ಲಿ ರಂಗವಿನ್ಯಾಸ, ಬೆಳಕು ವಿನ್ಯಾಸಗಳಲ್ಲಿ ಪರಿಣತಿ ಪಡೆದರು. 1982ರಲ್ಲಿ ರವೀಂದ್ರ ಕಲಾಕ್ಷೇತ್ರದಲ್ಲಿ ಕೆಲಸಕ್ಕೆ ಸೇರಿದ ಗುರುಮೂರ್ತಿ ಈಗಲೂ ಸೇವೆಯಲ್ಲಿ ಮುಂದುವರಿದಿದ್ದಾರೆ.

ಬೆಂಗಳೂರಿನ ಖ್ಯಾತ ಹವ್ಯಾಸಿ ರಂಗತಂಡಗಳಾದ ರಂಗನಿರಂತರ, ಪ್ರಯೋಗರಂಗ, ಸಮುದಾಯ, ಬೆನಕ, ನಟರಂಗದ ನಾಟಕಗಳಿಗೆ ನೇಪಥ್ಯಕರ್ಮಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಜೆ.ಕೆ. ಶ್ರೀನಿವಾಸಮೂರ್ತಿಯವರ 'ಬೇಡರ ಕಣ್ಣಪ್ಪ' ನಾಟಕಕ್ಕೆ ರಂಗವಿನ್ಯಾಸ, ಬೆಳಕಿನ ವಿನ್ಯಾಸ ಮಾಡಿ ರಂಗತಜ್ಞರಿಂದ ಸೈ ಎನಿಸಿಕೊಂಡರು.

ತಮ್ಮ ಮೂರು ದಶಕಗಳನ್ನು ರಂಗಸೇವೆಯಲ್ಲಿ ಕಳೆದಿರುವ ಗುರುಮೂರ್ತಿಯವರ ನಾಲ್ಕು ಸಹೋದರರು ರಂಗಭೂಮಿಯ, ಚಲನಚಿತ್ರರಂಗದ ಉತ್ತಮ ನಟರಾಗಿ ಕಲಾಪ್ರಿಯರಿಗೆ ಪರಿಚಿತರು. ರಂಗಭೂಮಿಯಲ್ಲೇ ಕೊನೆಯವರೆಗೂ ಉಳಿದು ವಿಶೇಷವಾದದ್ದನ್ನು ಸಾಧಿಸಬೇಕೆಂಬ ಹಂಬಲದಿಂದ ರಂಗ ಕಾರ್ಯಕ್ರಮಗಳಲ್ಲಿ ಸದ್ದಿಲ್ಲದೆ ದುಡಿಯುತ್ತಿದ್ದಾರೆ ಶ್ರೀಯುತ ಗುರುಮೂರ್ತಿ.

---



## ಚಂದ್ರಶೇಖರ ಚಿಕ್ಕಿ (ಪದ್ದಣ್ಣ ಶ್ರಮ ಪ್ರಶಸ್ತಿ)

ನಟನೆ, ನಿರ್ದೇಶನ, ಸಂಘಟನೆ, ಚಿತ್ರಕಲೆ ಸೇರಿದಂತೆ ಕಲಾರಂಗದ ಹಲವು ವಿಭಾಗಗಳಲ್ಲಿ ಅರಿವು, ಪರಿಶ್ರಮ ಪಡೆದಿರುವ ಹವ್ಯಾಸಿ ಕಲಾವಿದ ಚಂದ್ರಶೇಖರ ಚಿಕ್ಕಿ, ಮೂಲತಃ ಗುಲಬರ್ಗಾ ಜಿಲ್ಲೆಯವರು. ವಿದ್ಯಾರ್ಥಿ ದಿನಗಳಿಂದಲೇ ಕಲಾರಂಗದಲ್ಲಿ ಅಭಿರುಚಿ ಹೊಂದಿದ್ದ ಚಿಕ್ಕಿಯವರು ಗುಲಬರ್ಗಾದ 'ದಿ ಐಡಿಯಲ್ ಫೈನ್ ಆರ್ಟ್ಸ್ ಇನ್ಸ್ಟಿಟ್ಯೂಟ್'ನಲ್ಲಿ ಕಲಿಯುತ್ತಿರುವಾಗಲೇ ಕಾಲೇಜು ವಿದ್ಯಾರ್ಥಿಗಳೊಂದಿಗೆ ನಾಟಕ ಬಳಗವನ್ನು ರೂಪಿಸಿ, ಹಲವಾರ ನಾಟಕಗಳನ್ನು ಪ್ರದರ್ಶಿಸಿದ್ದಾರೆ. ಪದವಿ ಪಡೆದ ನಂತರ ಹೈದ್ರಾಬಾದ್ ಕರ್ನಾಟಕ ಶಿಕ್ಷಣ ಸಂಸ್ಥೆಯ ಭೂಮರೆಡ್ಡಿ ವಿಶ್ವವಿದ್ಯಾಲಯದಲ್ಲಿ ಉದ್ಯೋಗ ಹೊಂದಿ ಸೇವೆ ಸಲ್ಲಿಸುತ್ತಿದ್ದಾರೆ. 1980ರಲ್ಲಿ ಬೀದರ್ ಜಿಲ್ಲೆಯ 'ಸಮುದಾಯ' ತಂಡದ ಸದಸ್ಯರಾಗಿ, ಕಾರ್ಯದರ್ಶಿಯಾಗಿ ಉತ್ತಮ ರಂಗ ಚಟುವಟಿಕೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ನೆರವೇರಿಸಿದ್ದಾರೆ.

'ಮಿಡ್ ಸಮ್ಮರ್ ನೈಟ್ಸ್ ಡ್ರೀಮ್', 'ಈಡಿಪಸ್', 'ಜೈಸಿದ ನಾಯಕ', 'ಪ್ರೆಸಿಡೆಂಟಗೆ ಪತ್ರ', 'ಕುರಿ', 'ಚಾರ್ವಾಕ', 'ಪೈಸಾ', 'ಬಾಯಿ ಬಂದ ಬಾದಷಾ', 'ರತ್ತೋ ರತ್ತೋ ರಾಯನ ಮಗಳೆ' ಮೊದಲಾದ ನಾಟಕಗಳಲ್ಲಿ ಪ್ರಧಾನ ಭೂಮಿಕೆ ವಹಿಸಿದ್ದಾರೆ. ನಾಟಕ ಅಕಾಡೆಮಿಯ ಸಹಯೋಗದೊಂದಿಗೆ 'ಬೆಳೆದವರು' ಎಂಬ ಮಕ್ಕಳ ನಾಟಕವನ್ನು ನಿರ್ದೇಶಿಸಿ ಉತ್ತಮ ಪ್ರಯೋಗವಾಗಿಸಿದ್ದಾರೆ. ಬೀದರ್ ಜಿಲ್ಲೆಗೆ ಸಂಬಂಧಿಸಿದ ಎಲ್ಲ ಜನಪರ ಕಾರ್ಯಕ್ರಮಗಳಿಗೂ ಸಹಾಯ ಹಸ್ತ ನೀಡುತ್ತಾ ಬಂದಿದ್ದಾರೆ. 1992ರಲ್ಲಿ ಭಾರತದ ಜ್ಞಾನ ವಿಜ್ಞಾನ ಸಮಿತಿಯ ಅಡಿಯಲ್ಲಿ ಬೀದರ್ ಜಿಲ್ಲೆಯ 120 ಹಳ್ಳಿಗಳಲ್ಲಿ 30 ದಿನವಸಗಳವರೆಗೆ ನಾಟಕ ತರಬೇತಿ ನೀಡಿ ಹಲವು ನಾಟಕಗಳನ್ನು ಪ್ರದರ್ಶಿಸಿದ್ದಾರೆ. 1999ರಲ್ಲಿ 100 ಹಳ್ಳಿಗಳಲ್ಲಿ ಸಾಕ್ಷರತಾ ಜಾಥಾ ಕಾರ್ಯಕ್ರಮದಲ್ಲಿ ನಿರ್ದೇಶಕರಾಗಿ, ನಟರಾಗಿ ಹಾಗೂ ಸಂಘಟಕರಾಗಿ ದುಡಿದು ಗ್ರಾಮೀಣ ಜನರಲ್ಲಿ ಸಾಕ್ಷರತೆಯ ಅರಿವು ಮೂಡಿಸಲು ಪ್ರಯತ್ನಿಸಿದ್ದಾರೆ. ಅಲ್ಲದೆ ಹಲವು ರಂಗ ಶಿಬಿರಗಳನ್ನು ಸಂಘಟಿಸಿ, ನಿರ್ದೇಶಿಸಿದ್ದಾರೆ. ಜಿಲ್ಲೆಯ ಯುವ ರಂಗಾಸಕ್ತರಿಗೆ ನಿರ್ದೇಶನ ವಿಭಾಗದಲ್ಲಿ ತರಬೇತಿ ನೀಡುತ್ತಿದ್ದಾರೆ.

ನಾಟಕ ಕ್ಷೇತ್ರವಲ್ಲದೆ ಚಲನಚಿತ್ರ ಕ್ಷೇತ್ರಕ್ಕೂ ಚಿಕ್ಕಿಯವರ ಸೇವೆ ಸಂದಿದೆ. ರಾಷ್ಟ್ರಪ್ರಶಸ್ತಿ ವಿಜೇತ ಚಿತ್ರ, ಶ್ರೀ ಎಂ.ಎಸ್. ಸತ್ಯು ನಿರ್ದೇಶನದ 'ಬರ' ಚಿತ್ರಕ್ಕಾಗಿ ಸಹಾಯಕ ಕಲಾ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ್ದಾರೆ. ಪುಟ್ಟ ಪಾತ್ರವನ್ನು ವಹಿಸಿದ್ದಾರೆ.

ಬೀದರ್ ಜಿಲ್ಲೆಯಲ್ಲಿ ರಂಗ ವಾತಾವರಣವನ್ನು ಮೂಡಿಸುವ ಸಲುವಾಗಿ ವಿವಿಧ ರಂಗ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಕಾರ್ಯ ಪ್ರವೃತ್ತರಾಗಿದ್ದಾರೆ ಶ್ರೀಯುತ ಚಂದ್ರಶೇಖರ ಚಿಕ್ಕಿ.

---



## ಡಿ. ಜಗದೀಶ್ (ಪದ್ದಣ್ಣ ಶ್ರಮ ಪ್ರಶಸ್ತಿ)

ಮೈಸೂರಿನ ವಾಸಿಯಾದ ಶ್ರೀ ಓಂಕಾರ ಜಗ್ಗಣ್ಣ ಉರುಫ್ ಡಿ. ಜಗದೀಶರವರು ನಾಟಕಗಳಿಗೆ ಲೈಟಿಂಗ್ ಮಾಡುವುದನ್ನು ತಮ್ಮ ಉಸಿರನ್ನಾಗಿಸಿಕೊಂಡಿದ್ದಾರೆ. ಲೈಟಿಂಗ್ ಮಾಡುವುದರಲ್ಲಿ ಅತ್ಯುತ್ತಮ ಹೆಸರನ್ನೂ ಗಳಿಸಿದ್ದಾರೆ. ಜಗ್ಗಣ್ಣನವರನ್ನು ರಂಗಭೂಮಿಗೆ ಲೈಟಿಂಗ್ ಮಾಡುವುದರಲ್ಲಿ ನಿಮ್ಮ ಸಾಧನೆ ಏನು ಎಂದು ಯಾರಾದರೂ ಕೇಳಿದರೆ ಲೈಟಿಂಗ್ ಮಾಡುವುದಕ್ಕೆ ಏಣಿ ಹುಡುಕುವುದರಲ್ಲೆ ನನ್ನ ಜೀವನ ಸವೆಯುತ್ತಿದೆ ಎಂಬ ಚಟಾಕಿ ಮಾತಿನಿಂದ ಮುಂದಿನ ಪ್ರಶ್ನೆಗಳಿಗೆ ಕಡಿವಾಣ ಹಾಕುತ್ತಾರೆ. ಮೈಸೂರಿನ ರಂಗಕರ್ಮಿ ಹಾಗೂ ನೃತ್ಯಪಟುಗಳಿಗಂತೂ ಜಗ್ಗಣ್ಣ ಇಲ್ಲದಿದ್ದರೆ ನಾಟಕದ ಪ್ರದರ್ಶನ ಇಲ್ಲ. ಕಾಲೇಜು ಓದನ್ನು

ಮುಗಿಸಿ, ತೋಟಗಾರಿಕೆಯಲ್ಲಿ ತರಬೇತಿ ಪಡೆದದ್ದನ್ನು ನೋಡಿದರೆ ಇದರಲ್ಲೆ ಇವರು ಜೀವನ ಸಾಗಿಸುತ್ತಾರೆಂದೆನಿಸುತ್ತಿತ್ತು, ಆದರೆ ಲಾರಿಡ್ರೈವರ್ ಆಗಿ ನಾಟಕದ ಕಂಪನಿಯಲ್ಲಿ ಎಲ್ಲಾ ಊರುಗಳಲ್ಲೂ ನಾಟಕದ ಜಾಹಿರಾತಿನ ಅನೌನ್ಸರ್ ಆಗಿ ಕೆಲಸಕ್ಕೆ ಸೇರಿದರು. ಇದೇ ಸಂದರ್ಭದಲ್ಲಿ ಓಂಕಾರ್ ಸೌಂಡ್ ಸಿಸ್ಟಮ್‌ನ ಶ್ರೀ ರಾಜಣ್ಣ ಮತ್ತು ಟೈಲರ್ ಶಂಕರಣ್ಣನವರು ಶ್ರೀಯುತರಿಗೆ ಗುರುಗಳಾಗಿ ದೊರೆತರು. ನಾಟಕದ ಕಂಪನಿ ಹೋದಲ್ಲೆಲ್ಲಾ ಇವರೂ ಸಂಚರಿಸಿ ಲೈಟಿಂಗ್‌ಗೆ ಹೆಚ್ಚಿನ ಅನುಕೂಲವಿಲ್ಲದಿದ್ದರೂ ಸಹ ಎಪ್ಪತ್ತರ ದಶಕದ ಲೈಟಿಂಗನ್ನು ಅತ್ಯುತ್ತಮವಾಗಿ ಮಾಡಿ ಜನರಿಂದ ಶಹಭಾಷಗಿರಿಯನ್ನು ಪಡೆದಿದ್ದಾರೆ.

'ನಾಕು ಫ್ಲಡ್ ಲೈಟ್' ಎಂಬ ಅಡ್ಡ ಹೆಸರು ಪಡೆದ ಜಗ್ಗಣ್ಣ, ನಾಕು ಲೈಟುಗಳಿಂದಲೇ ನಾಟಕದ ದೃಶ್ಯಗಳಿಗೆ ಬೇಕಾದ ಹತ್ತಾರು ರೀತಿಯಲ್ಲಿ ಲೈಟಿಂಗ್ ಮಡುವುದರಲ್ಲಿ ನಿಷ್ಣಾತರು. ಜಗ್ಗಣ್ಣ ಇಲ್ಲದಿದ್ದರೆ ನಾಟಕದ ಪ್ರದರ್ಶನವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಇವರ ಮೇಲೆ ಎಲ್ಲಾ ರಂಗಕರ್ಮಿಗಳೂ ನಂಬಿಕೆ ಇಟ್ಟು, ಇವರ ಪ್ರತಿಭೆಯನ್ನು ಕೊಂಡಾಡಿದ್ದಾರೆ. ವಿಶ್ವನಾಥ ಮಿರ್ಲೆ, ಬಿ.ವಿ. ಕಾರಂತ ಹಾಗೂ ಡಾ. ರಾಜ್‌ಕುಮಾರ ಅವರುಗಳೂ ಸಹ ಇವರನ್ನು ಲೈಟಿಂಗ್ ಮಾಡುವುದಕ್ಕೆ ಆಹ್ವಾನಿಸುತ್ತಾರೆ. ಜಗ್ಗಣ್ಣನ ಲೈಟಿಂಗ್‌ನಿಂದಲೇ ಮೈಸೂರಿನಲ್ಲಿ ಹವ್ಯಾಸಿ ನಾಟಕಗಳು ಯಶಸ್ವಿಯಾದವು ಎಂದರೆ ಅತಿಶಯೋಕ್ತಿಯೇನಲ್ಲ. ನಿರ್ದೇಶನದ ಕ್ರಿಯಾಶೀಲತೆಗೆ ತಕ್ಕಂತೆ ಲೈಟಿಂಗ್ ಮಾಡುತ್ತಾರೆ. ಭರತನಾಟ್ಯ, ಆರ್ಕೆಸ್ಟ್ರಾಗಳಿಗೆ ಲೈಟಿಂಗ್ ಮಾಡುತ್ತಿದ್ದರೂ ಸಹ ಇವರಿಗೆ ಮಾತ್ರ ನಾಟಕದಲ್ಲಿ ಪಾತ್ರವಹಿಸಬೇಕೆಂಬ ಆಸೆ ಎಳ್ಳಷ್ಟೂ ಮೂಡಿ ಬರಲಿಲ್ಲ.

ಬಡತನದ ಕುಟುಂಬದ ಇವರು ಲೈಟಿಂಗ್ ಮಾಡುತ್ತಾ, ಕರೆಂಟು (ಶಾಕ್) ಹೊಡೆಸಿಕೊಳ್ಳುತ್ತಾ, ನಾಟಕಗಳಿಗೆ ಲೈಟಿಂಗ್ ಮಾಡುವುದೇ ನನ್ನ ಗುರಿ ಎಂದುಕೊಂಡು ನಗುನಗುತ್ತಾ ತಮ್ಮ ಜೀವನ ಸಾಗಿಸುತ್ತಿದ್ದಾರೆ ಶ್ರೀಯುತ ಡಿ. ಜಗದೀಶ್‌ರವರು.

---



## ಎ.ಜೆ. ದೇಸಾಯಿ (ಪದ್ಮಣ್ಣ ಶ್ರಮ ಪ್ರಶಸ್ತಿ)

ಶ್ರೀ ಅಪ್ಪಾ ಸಾಹೇಬ ಜಂಬುರಾವ್ ದೇಸಾಯಿ, ಉತ್ತರ ಕನ್ನಡ ಜಿಲ್ಲೆಯ ಹಳಿಯಾಳದವರು. ಜನನ ಜನವರಿ 14, 1942ರಲ್ಲಿ ತಂದೆ ಹಿರಿಯ ಸ್ವಾತಂತ್ರ್ಯೋಧರು, ಕಾಂಗ್ರೆಸ್ ಸಂಸ್ಥೆಯ ಹಿರಿಯ ಸದಸ್ಯರು ಆಗಿದ್ದ ದಿ: ಶ್ರೀ ಜಂಬೂರಾವ್ ಪಾಂಡಪ್ಪ ದೇಸಾಯಿ. ಶಾಲಾಶಿಕ್ಷಣವನ್ನು ಹಳಿಯಾಳದಲ್ಲು, ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಬಿ.ಎ. ಪದವಿ ಮುಗಿಸಿದ ದೇಸಾಯಿ 1971ರಲ್ಲಿ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಯಲ್ಲಿ ಉದ್ಯೋಗ ಪಡೆದರು. ದೇಸಾಯಿಯವರಿಗೆ ರಂಗಪರಿಚಯ ಬಾಲ್ಯದಲ್ಲಿಯೇ ಆಯಿತು. 10ನೇ ವರ್ಷದಲ್ಲಿ 'ಶಾಂತ ಸದನ' ನಾಟಕದಲ್ಲಿ ದೇಶಭಕ್ತನ ಪಾತ್ರದೊಂದಿಗೆ ಮುಖಕ್ಕೆ ಬಣ್ಣ ಹಚ್ಚಿದರು. ನಟಿಸಿದ ಪಾತ್ರಕ್ಕೆ ಶ್ರೇಷ್ಠ ಬಾಲನಟ ಪ್ರಶಸ್ತಿಯನ್ನೂ ಪಡೆದರು. ಈ ಅನುಭವ ನಟನೆಯೊಂದಿಗೆ ಮೇಕಪ್ ಕಲೆಯ ಬಗೆಗೂ ಆಸಕ್ತಿ ಬೆಳೆಸಿತು. ಅಂದಿನ ದಿನಗಳಲ್ಲೇ ಸಹಪಾಠಿ ಗೆಳೆಯರೊಂದಿಗೆ ಶ್ರೀರಂಗ, ಪರ್ವತವಾಣಿ, ಮೊದಲಾದವರ ನಾಟಕಗಳನ್ನು ದಿಗ್ದರ್ಶಿಸಿ, ನಟಿಸಿ, ಮೇಕಪ್ ಸಹ ಮಾಡಿದರು.

ಕಾಲೇಜು ದಿನಗಳಲ್ಲಿ ಧಾರವಾಡದ ಹವ್ಯಾಸ ತಂಡಗಳ ನಂಟು ಬೆಳೆಸಿಕೊಂಡು ಹಲವು ನಾಟಕಗಳಲಿ ನಟಿಸಿದರು. ನೌಕರಿಗಾಗಿ ಸಕ್ಕರೆ ಕಾರ್ಖಾನೆಗೆ ಬಂದ ಮೇಲೆ ಕಾರ್ಮಿಕ ಬಂಧುಗಳನ್ನು ಒಂದುಗೂಡಿಸಿ 'ಹೆಜ್ಜೆ ತಪ್ಪಿದ ಹೆಣ್ಣು', 'ಹಡೆದವ್ವ', 'ತಾಳ ತಪ್ಪಿದ ಬಾವ', 'ವಿಧಿ ಕೈವಾಡ', ಪ್ರಪಂಚ ಪಾಣಿಪತ್ತು, ಲೋಕಚಿಕಿತ್ಸ, ಹರಿಜನ್ವಾರ, ಹೃದಯದೇಗುಲ ಹೀಗೆ ಹಲವಾರು ನಾಟಕಗಳನ್ನು ದಿಗ್ದರ್ಶಿಸಿ, ಮುಖ್ಯ ಪಾತ್ರವಹಿಸಿ, ರಂಗಸಜ್ಜಿಕೆಯೊಂದಿಗೆ ಪ್ರಸಾಧನವನ್ನು ಮಾಡಿದ್ದಾರೆ. ಶ್ರೀ ಜಗತೀರ್ಥ ಜೋಶಿಯವರ ನೇತೃತ್ವದಲ್ಲಿ ನೀನಾಸಂ ಏರ್ಪಡಿಸಿದ 'ಜನಸ್ಪಂದನ'

ರಂಗ ಕಾರ್ಯಾಗಾರದಲ್ಲಿ ಭಾಗವಹಿಸಿ, ಅದರಿಂದ ಜನ್ಮ ಪಡೆದ 'ರಂಗ ಚೇತನ' ಕಿತ್ತೂರು ನಾಟಕ ಸಂಘದ ಧರ್ಮಪುರಿಯ ಶ್ವೇತವೃತ್ತ, ಬಳ್ಳಾನ ಬೆಳದಿಂಗಳು, ಮೇಟಿ, ಶ್ರೀಕೃಷ್ಣ ಪಾರಿಜಾತ ಸೇರಿದಂತೆ ತಂಡದ ಎಲ್ಲ ನಾಟಕಗಳಲ್ಲೂ ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ಶ್ರೀ ಬಸವಲಿಂಗಯ್ಯ ಹಿರೇಮಠ ಮತ್ತು ಶ್ರೀಮತಿ ವಿಶ್ವೇಶ್ವರಿ ಹಿರೇಮಠರವರು ಸ್ಥಾಪಿಸಿದ 'ಜಾನಪದ ಸಂಶೋಧನಾ ರಂಗ ಕೇಂದ್ರ'ದಲ್ಲೂ ಪ್ರಸಾಧನ ಮತ್ತು ವೇಷ-ಭೂಷಣಗಳ ಹೊಣೆ ಹೊತ್ತು ದುಡಿದ್ದಾರೆ. ಇಷ್ಟೇ ಅಲ್ಲದೆ ಹುಬ್ಬಳ್ಳಿಯ ಸುತ್ತಮುತ್ತಲಿನ ಹವ್ಯಾಸಿ ತಂಡಗಳಿಗೂ ಇವರ ಸೇವೆ ಸಂದಿದೆ. ಸ್ಥಳೀಯ ಜನರಿಂದ ನಾಟಕದ ದೇಸಾಯಿ ಎಂದೇ ಪ್ರಸಿದ್ಧಿ ಪಡೆಯುವುದಕ್ಕೆ ಅವರ ಕಲಾ ನೈಪುಣ್ಯವೇ ಕಾರಣವಾಗಿದೆ. ಹೀಗೆ ವೃತ್ತಿ ಹಾಗೂ ಪ್ರವೃತ್ತಿಯನ್ನು ಹಲವು ತೊಂದರೆಗಳ ನಡುವೆಯೂ ಸರಿದೂಗಿಸಿಕೊಂಡು ಹೋಗುತ್ತಿರುವ ದೇಸಾಯಿ ಕನ್ನಡ ರಂಗಭೂಮಿಗೆ ಅನುಪಮ ಕಾಣಿಕೆ ನೀಡಿದ್ದಾರೆ.

---



## ನಾರಾಯಣಪ್ಪ (ಪದ್ಮಣ್ಣ ಕ್ರಮ ಪ್ರಶಸ್ತಿ)

ವಿನೂತನ ಮಾದರಿಯ ರಂಗಸಜ್ಜಿಕೆ, ವಸ್ತ್ರಾಲಂಕಾರ, ವರ್ಣಾಲಂಕಾರ, ದೀಪ ವ್ಯವಸ್ಥೆ, ರಂಗ ಪರಿಕರಗಳ ಮೇಲಿನ ವಿಶೇಷ ಆಸಕ್ತಿಯೊಂದಿಗೆ, ಈ ಎಲ್ಲ ವಿಭಾಗಗಳಲ್ಲೂ ವಿಶೇಷ ಸಾಧನೆ ಮಾಡಿದ್ದಾರೆ ಮಂಡ್ಯದ ರಂಗಕರ್ಮಿ ಶ್ರೀ ನಾರಾಯಣಪ್ಪ. ಅರ್ಧಶತಕದ ಗಡಿ ದಾಟಿರುವ ನಾರಾಯಣಪ್ಪ ಮಂಡ್ಯದ ಹಳೇನಗರದ ನಿವಾಸಿ. ಹೊಸ ಕೆಂಪನಿಂಗಯ್ಯ ಮತ್ತು ಚಿಕ್ಕತಾಯಮ್ಮ ಇವರ ತಂದೆ ತಾಯಿಯರು. ಕಲಾ ಪದವೀಧರರಾದ ನಾರಾಯಣಪ್ಪನವರು ರಂಗಕ್ಷೇತ್ರಕ್ಕೆ ಬರಲು ಅವರ ತಂದೆಯೇ ಮೂಲ ಪ್ರೇರಣೆ. ಅಂದಿನ ದಿನಗಳಲ್ಲಿ ತಂದೆಯವರಿಗೆ ಶನಿದೇವರ ಕಥೆ ಓದಿಸುವುದು, ಯಕ್ಷಗಾನ, ಗೊಂಬೆ ಕಥೆಗಳನ್ನು ಆಡಿಸುವುದು ವೃತ್ತಿಯಾಗಿತ್ತು. ತಂದೆಯವರು ಹಾಕಿಕೊಟ್ಟ ಬುನಾದಿಯಲ್ಲೇ ಸುಮಾರು 35 ವರ್ಷಗಳಿಂದಲೂ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾರೆ.

ಚಿಕ್ಕಂದಿನಿಂದಲೇ ಕಂಪನಿಯ ನಾಟಕಗಳಿಂದ ಪ್ರಭಾವಿತರಾಗಿ ತಾವೂ ನಾಟಕ ಕಂಪನಿ ಮಾಡಬೇಕೆಂಬ ಆಸೆ ಉದಯಿಸಿ, ಆರ್ಥಿಕ ಮುಗ್ಗಟ್ಟಿನಿಂದ ನಿಂತುಹೋಗುತ್ತಿದ್ದ 'ಶ್ರೀ ಕುಮಾರೇಶ್ವರ ನಾಟಕ ಕಂಪನಿ'ಯ ಉಸ್ತುವಾರಿ ವಹಿಸಿಕೊಂಡು 'ಮುದುಕನ ಮದುವೆ', 'ಚನ್ನಪ್ಪ ಚನ್ನೇಗೌಡ', 'ನನ್ನ ತಂಗಿ', ಮುಂತಾದ ನಾಟಕಗಳಿಗೆ ಪ್ರಖ್ಯಾತ ಕಲಾವಿದರಾದ ಧೀರೇಂದ್ರ ಗೋಪಾಲ್, ಸುಧೀರ್, ಶ್ರೀನಿವಾಸಮೂರ್ತಿ, ಸುಮತಿ ಶ್ರೀ ಯಂಥವರನ್ನು ಕರೆಸಿ ನಾಟಕ ಪ್ರದರ್ಶಿಸಿದರು. ಆದರೆ ವ್ಯವಸ್ಥೆ ಸರಿಹೋಗದೆ ಕಂಪನಿ ಮುಚ್ಚಿ ವಿನೂತನ ರಂಗ ಪರಿಕರಗಳನ್ನು ಹೊಂದಿದ 'ಶ್ರೀ ರಾಘವೇಂದ್ರ ಸೀನರಿ'ಯನ್ನು ಸ್ಥಾಪಿಸಿದರು. ಉತ್ತಮ ರಂಗ ಸಜ್ಜಿಕೆ ನಿರ್ಮಾಣದಿಂದ ಅಲ್ಪಕಾಲದಲ್ಲಿಯೇ ಅತಿ ಹೆಚ್ಚು ನಾಟಕಗಳಿಗೆ ರಂಗಸಜ್ಜಿಕೆ ಮಾಡಿ ಜನಪ್ರಿಯರಾದರು. ಕರ್ನಾಟಕವಲ್ಲದೆ, ನೆರೆಯ ಮಹಾರಾಷ್ಟ್ರ, ತಮಿಳುನಾಡು, ಆಂಧ್ರಪ್ರದೇಶದ ಕೆಲ ಗ್ರಾಮಗಳಿಗೆ ರಂಗಸಜ್ಜಿಕೆ, ಒದಗಿಸಿ ಜನಮೆಚ್ಚುಗೆ ಪಡೆದಿದ್ದಾರೆ. ಇದುವರೆಗೂ 800ಕ್ಕೂ ಹೆಚ್ಚು ನಾಟಕ ಪ್ರದರ್ಶನಗಳಿಗೆ ರಂಗಸಜ್ಜಿಕೆ ಒದಗಿಸಿರುವುದು ವಿಶೇಷ ಸಾಧನೆಯೇ ಹೌದು.

ಈ ನಡುವೆ ಹವ್ಯಾಸಿ ನಟರಾಗಿ ನಲವತ್ತಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿ ನಟನೆಯಲ್ಲಿಯೂ ಮಿಂಚಿರುವ ನಾರಾಯಣಪ್ಪನವರು 'ದಾನಶೂರಕರ್ಣ' 'ರಕ್ತ ರಾತ್ರಿ', 'ದಕ್ಷಯಜ್ಞ', 'ರುಕ್ಮಿಣೀ ಸ್ವಯಂವರ', 'ಶ್ರೀನಿವಾಸ ಕಲ್ಯಾಣ', 'ಶ್ರೀ ಕೃಷ್ಣ ಪಾರಿಜಾತ' ನಾಟಕಗಳಲ್ಲಿ ಶ್ರೀ ಕೃಷ್ಣ, ಶ್ರೀನಿವಾಸ, ಚಂದ್ರಮ ಹೀಗೆ ಹಲವು ಪಾತ್ರ ನಿರ್ವಹಿಸಿದ್ದಾರೆ.

ರಂಗಭೂಮಿಯ ಸರ್ವತೋಮುಖ ಬೆಳವಣಿಗೆ ಹಾಗೂ ಬಡ ಕಲಾವಿದರ ಆರ್ಥಿಕ ಸಹಾಯಾರ್ಥವಾಗಿ 1994ರಲ್ಲಿ 'ರಂಗರತ್ನ ಕಲಾವಿದರ ಸಂಘ ಸ್ಥಾಪಿಸಿ ರಂಗಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಮುನ್ನಡೆಯುತ್ತಿದ್ದಾರೆ ಶ್ರೀಯುತ ನಾರಾಯಣಪ್ಪ.

---



## ನರಸಿಂಗರಾವ್ ಕುಲ್ಕರ್ಣಿ (ಪದ್ಮಣ್ಣ ಶ್ರಮ ಪ್ರಶಸ್ತಿ)

ಕಳೆದ ಹನ್ನೊಂದು ವರ್ಷಗಳಿಂದ ಕೆ.ಬಿ.ಆರ್. ಡ್ರಾಮಾ ಕಂಪನಿಯೊಂದರಲ್ಲೇ ರಂಗಸೇವೆ ಮಾಡುತ್ತ ಬಂದಿದ್ದಾರೆ ಶ್ರೀಯುತ ನರಸಿಂಗರಾವ್ ಕುಲ್ಕರ್ಣಿ. ರಾಯಚೂರು ಜಿಲ್ಲೆಯ ಸಗಂಗುಂಟಾ ಹಳ್ಳಿಯ ಭೀಮಸೇನ್ ರಾವ್ ಕುಲ್ಕರ್ಣಿ, ಶಾಂತಾಬಾಯಿ ದಂಪತಿಗಳ ಹಿರಿಯ ಮಗನಾಗಿ 1970ರಲ್ಲಿ ಜನಿಸಿದರು. ಆರ್ಥಿಕ ತೊಂದರೆಯಿಂದಾಗಿ ಎಸ್.ಎಸ್.ಎಲ್.ಸಿ. ವರೆಗೆ ಮಾತ್ರ ಕಲಿತು, 1990ರಲ್ಲಿ ರಂಗಕ್ಕೆ ಪಾದಾರ್ಪಣೆ ಮಾಡಿದರು. ಕೆ.ಬಿ.ಆರ್. ಡ್ರಾಮಾ ಕಂಪನಿಯ ಶ್ರೀ ಕೃಷ್ಣದೇವರಾಯ ನರಸಿಂಗರಾವ್ ನಟಿಸಿದ ಮೊದಲ ನಾಟಕ. ಅದೇ ಸಂಸ್ಥೆಯ ಹೆಣ್ಣಿಗೆ ಹಟ ಗಂಡಿಗೆ ಚಟ, ದೇವದಾಸಿ, ಕರಿಬಸವೇಶ್ವರ ಮಾಹಾತ್ಮೆ, ಅಣ್ಣ ತಂದ ಅತ್ತಿಗೆ, ರೊಚ್ಚಿಗೆದ್ದ ಹೆಂಡತಿ, ಗೋವಾದಲ್ಲಿ ಗೌಡ್ರು ಹಾಗೂ ವಿಶ್ವನಾಥಲೆ ಸ್ಥಾಪಿಸಿದ 'ಪೋಲಿಸನ ಮಗಳು' ನಟನಾಗಿ ಜನಪ್ರಿಯತೆಯನ್ನು ಪಡೆಯಲು ಕಾರಣವಾದ ನಾಟಕಗಳು.

ಚಿಂದೋಡಿ ಲೀಲಾ ನೇತೃತ್ವದ ಕಾಸರಗೋಡಿನಿಂದ ಕಾಶಿಯವರೆಗೆ ರಂಗಯಾತ್ರೆಯಲ್ಲಿ ಭಾಗವಹಿಸಿದ ಹೆಗ್ಗಳಿಕೆ ಇವರದು.



## ಪಿ.ವಿ. ಪರಮೇಶ್ (ಪದ್ಮಣ್ಣ ಶ್ರಮ ಪ್ರಶಸ್ತಿ)

ಮಂಗಳೂರಿನ ಎಂ.ಸಿ.ಎಫ್. ಕಾರ್ಖಾನೆಯ ಉದ್ಯೋಗಿಯಾಗಿ ಸೇವೆ ಸಲ್ಲಿಸುತ್ತಿರುವ ಪಿ.ವಿ. ಪರಮೇಶ್‌ರವರಿಗೆ ಯಕ್ಷಗಾನ, ನಾಟಕಗಳಲ್ಲಿ ನಟಿಸುವುದರ ಜೊತೆಗೆ ವರ್ಣಾಲಂಕಾರ ವಿಭಾಗದಲ್ಲೂ ಅಪಾರ ಆಸಕ್ತಿ, ಉತ್ತಮ ಪರಿಶ್ರಮವಿದೆ. 1963ರಲ್ಲಿ ಶ್ರೀ ಪಿ. ವೆಂಕಟರಾವ್ ಮತ್ತು ಶ್ರೀಮತಿ ಸುಮಿತ್ರ ದಂಪತಿಗಳ ಮಗನಾಗಿ ಪರಮೇಶ್ ಜನಿಸಿದರು. ಚಿಕ್ಕಂದಿನಿಂದಲೇ ರಂಗಕರ್ಮಿಗಳ ಬಗ್ಗೆ ಕಾಳಜಿ ಇದ್ದುದರಿಂದ ತಮ್ಮ 12ನೇ ವಯಸ್ಸಿಗೆ ರಂಗಭೂಮಿಗೆ ಹೆಜ್ಜೆಯಿಟ್ಟರು. ನಟನೆಯಿಂದ ಪ್ರಸಾಧನ ಕಲೆಯ ಕಡೆ ಮನ ಹೊರಳಿ, ಪರಿಣತಿ ಸಾಧಿಸಿಕೊಂಡು ಯಕ್ಷಗಾನ, ನಾಟಕ, ಭರತನಾಟ್ಯ, ಕಥಕ್ಕಳಿ ಸಹಿತ 12 ಕಲಾಪ್ರಕಾರಗಳಿಗೆ ಮುಖವರ್ಣಿಕೆ ಮಾಡುವ ಸಾಮರ್ಥ್ಯ ಪಡೆದುಕೊಂಡರು. ಮುಂದೆ ಮಂಗಳೂರಿನ ಖ್ಯಾತ ರಂಗ ತಂಡಗಳಾದ ಭೂಮಿಕಾ, ಅಭಿವ್ಯಕ್ತಿ, ಸಂವಹನ, ಕಲಾಶಿಲ್ಪ, ಕಲಾಸಂಗಮ, ಕಡಲನಾಡ ಕಲಾವಿದರು, ಅಭಯ ಕುಡ್ಲ, ಕದಿರೆಯ ಕಲಾವಿದರು, ಸಂಕೇತ್ ಸಂಸ್ಥೆಗಳ 'ತುಘಲಕ್', 'ಜೈಸಿದ ನಾಯ್ಕ', 'ಹುಡುಗಾಟ', 'ಅಪೂರ್ಣರು', ಚಕ್ರವ್ಯೂಹ', 'ಒಥೆಲೊ', 'ಬೇಲಿ ಬೈಲು', 'ರಥ ಮುಸಲ', 'ಉರುಳು', 'ದೃಷ್ಟಿ', 'ನಕ್ಕಳಾ ರಾಜಕುಮಾರಿ', 'ಟಿಂಗರ ಬುಡ್ಡಣ್ಣ' ಇತ್ಯಾದಿ ನಾಟಕಗಳಿಗೆ ವಸ್ತ್ರವಿನ್ಯಾಸಕಾರರಾಗಿ ಪ್ರಸಾಧನಕಾರರಾಗಿ ಸೇವೆ ಸಲ್ಲಿಸಿದ್ದಾರೆ. 'ನಾಗಬಲ', 'ಬೈಲಪ್ಪ', 'ಸರ್ಪಶಾಪ', 'ದೊಂಪದ ಬಲಿ', 'ಕೋಟಿ ಚೆನ್ನಯ್ಯ' ಮುಂತಾದ ತುಳು ಜಾನಪದ ನಾಟಕಗಳಿಗೂ ವಸ್ತ್ರವಿನ್ಯಾಸ, ಪ್ರಸಾಧನ ಸೇವೆ ಸಂದಿದೆ.

ನಾಟಕಗಳಿಗೆ ಮಾತ್ರವಲ್ಲದೆ ಹಲವು ಕಲಾ ಸಂಘ ಸಂಸ್ಥೆಗಳಲ್ಲಿ, ಶಾಲಾಕಾಲೇಜುಗಳ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಮುಖವರ್ಣಿಕೆ, ವಸ್ತ್ರವಿನ್ಯಾಸ ಮಾಡಿದ್ದಾರೆ. ಯಕ್ಷಗಾನದಲ್ಲಿ ವೇಷ ಧರಿಸಿದ ಅನುಭವದೊಂದಿಗೆ ಹಿಮ್ಮೇಳನಕಾರನಾಗಿ, ಪ್ರಸಾಧನಕಾರನಾಗಿ, ವಸ್ತ್ರ ವಿನ್ಯಾಸಕಾರನಾಗಿ ಕಾರ್ಯನಿರ್ವಹಿಸಿದ್ದಾರೆ. ಈ ನಡುವೆ ನಟನಾಗಿ ತುಘಲಕ್, ಜೈಸಿದ ನಾಯ್ಕ, ಚಕ್ರವ್ಯೂಹ, ಕೋಟಿ ಚೆನ್ನಯ್ಯ, ಮಾಯಾದ ತಗೆ ತಂಗಡಿ, ಶಿವಲೀಲೆ, ಮಣ್ಣಿನ ಮಗಳು, ಅಬ್ಬಕ್ಕ ಸಹಿತ ನೂರಾರು ಕನ್ನಡ, ತುಳು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಮಂಗಳೂರಿನ ಭಾರತೀಯ ವಿದ್ಯಾಭವನ, ರಾಗತರಂಗ, ಕರ್ನಾಟಕ ಕಲಾಕೇಂದ್ರ ಸೇರಿದಂತೆ, ಸ್ಥಳೀಯ ಶಾಲಾಕಾಲೇಜುಗಳಲ್ಲಿ ತರಬೇತಿ ಶಿಬಿರ, ಯಕ್ಷನೃತ್ಯ ಶಿಬಿರ, ಮುಖವರ್ಣಿಕೆಯ ಶಿಬಿರ, ಕಮ್ಮಟಗಳನ್ನು ಏರ್ಪಡಿಸಿದ್ದಾರೆ.

1992ರಲ್ಲಿ ಡಾ: ನಾ.ದಾ. ಶೆಟ್ಟಿಯವರ ನೇತೃತ್ವದಲ್ಲಿ ಇಂಗ್ಲೆಂಡ್ ಪ್ರವಾಸ, 1993ರಲ್ಲಿ ಡಾ: ಚಂದ್ರಶೇಖರ ಕಂಬಾರ ಮತ್ತು ಶ್ರೀ ಪುರುಷೋತ್ತಮ ಬಿಳಿಮಲೆ ನೇತೃತ್ವದಲ್ಲಿ ಜಪಾನ್ ಪ್ರವಾಸ ಕೈಗೊಂಡು ನಾಟಕ, ನೃತ್ಯ, ಯಕ್ಷಗಾನ, ಮುಖವರ್ಣಿಕೆ ಪ್ರದರ್ಶನ, ಪ್ರಾತ್ಯಕ್ಷಿಕೆ ಪ್ರದರ್ಶನ ನೀಡಿದ್ದಾರೆ. ಇಷ್ಟೆಲ್ಲ ಬಿಡುವಿಲ್ಲದ ಕಾರ್ಯಚಟುವಟಿಕೆಗಳ ನಡುವೆಯೂ ಹಲವು ಸಾಂಸ್ಕೃತಿಕ ಕ್ರಿಯಾ ವೇದಿಕೆಗಳ ಪದಾಧಿಕಾರಿಯಾಗಿ, ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ ಶ್ರೀಯುತ ಪಿ.ವಿ. ಪರಮೇಶ್.

---



## ಬುಡಾನ್ ಭಾಷಾ ಸಾಹೇಬ್ (ಪದ್ಧಣ್ಣ ಶ್ರಮ ಪ್ರಶಸ್ತಿ)

ಖಾಜಿ ಮೈದಿನ್ ಸಾಹೇಬ್ ಮತ್ತು ಸೈಭಿನಭಿಯವರ ಮಗನಾಗಿ 1916ರಲ್ಲಿ ಬಾರ್ಕೂರಿನಲ್ಲಿ ಜನಿಸಿದ ಬುಡಾನ್ ಬಾಷಾ ಸಾಹೇಬರು ಬಾಲ್ಯದಲ್ಲಿ ತಮ್ಮ ಧರ್ಮಕ್ಕನುಗುಣವಾದ ಸಾಂಪ್ರದಾಯಿಕ ಶಿಕ್ಷಣ ಪಡೆದರು. ಮುಂದಿನ ವಿದ್ಯಾಭ್ಯಾಸಕ್ಕೆಂದು ಹೈಸ್ಕೂಲ್ ಸೇರಿದಾಗ, ಇವರ ಕಲಾಪ್ರತಿಭೆ ಗುರುತಿಸಿದ ಬಿರ್ತಿ ಗೋವಿಂದ ಮಾಸ್ತರರು ನೀಡಿದ ಪ್ರೋತ್ಸಾಹದ ಫಲವಾಗಿ ಯಕ್ಷಗಾನ ನಾಟಕದ ಮೂಲಕ ರಂಗ ಪ್ರವೇಶಿಸಿದರು. 'ಕಂಸವಧೆ', 'ಪ್ರಹ್ಲಾದ ಚರಿತ್ರೆ', 'ಸೀತಾ ಸ್ವಯಂವರ', ಪ್ರಸಂಗಗಳಲ್ಲಿ ನಟಿಸಿ ಸ್ಥಳೀಯ ಕಲಾಪ್ರಿಯರ ಮೆಚ್ಚುಗೆಗೆ ಪಾತ್ರರಾದರು. ಮುಂದೆ ಮಲ್ಲಾಡಿಹಳ್ಳಿ ಸ್ವಾಮೀಜಿಗಳಿಂದ ಉತ್ತೇಜನ ದೊರೆತು ನಾಟಕಗಳಲ್ಲಿ ಪಾತ್ರವಹಿಸುವುದು ಮುಂದುವರೆಯಿತು.

ವಿದ್ಯಾಭ್ಯಾಸ ಮುಗಿಸಿ ಕೆಲಕಾಲ ಬಾರ್ಕೂರು ಮತ್ತು ಹಂಗಾರಕಟ್ಟೆಯ ಶಾಲೆಗಳಲ್ಲಿ ಮಾಸ್ತರಾಗಿದ್ದು ಕಸೂತಿ, ಸ್ಕೌಟ್ಸ್, ಅಭಿನಯ ಕಲೆಗಳ ಬಗ್ಗೆಯೂ ವಿದ್ಯಾರ್ಥಿಗಳಲ್ಲಿ ಆಸಕ್ತಿ ತರಲು ಪ್ರಯತ್ನಿಸಿದರು. ಆದರೆ ಈ ವೃತ್ತಿ ಸಮಾಧಾನ, ತೃಪ್ತಿ ನೀಡುವಲ್ಲಿ ಸೋತಾಗ ಅಧ್ಯಾಪನ ವೃತ್ತಿಗೆ ವಿದಾಯ ಹೇಳಿ ತಮಗೆ ಒಲವಿದ್ದ ರಂಗಭೂಮಿಗೆ ಮರಳಿದರು. ಬಾರ್ಕೂರಿನಲ್ಲಿ 'ಶ್ರೀ ಪಂಚಲಿಂಗೇಶ್ವರ ನಾಟಕ ಮಂಡಳಿ'ಯನ್ನು ಸ್ಥಾಪಿಸಿ ಕಂಪನಿಯ ಮಾಲೀಕರಾಗಿ, ನಿರ್ದೇಶಕರಾಗಿ, ನಟರಾಗಿ, ತಮ್ಮ ಪ್ರತಿಭೆ ತೋರಿದರು. ಟಿಪ್ಪು ಸುಲ್ತಾನ್, ಕಾಳಿದಾಸ, ಚಿತ್ರಾಂಗದ, ಪಾದುಕ ಪ್ರದಾನ ಮುಂತಾದ ನಾಟಕಗಳು ಸಾಹೇಬರ ಕಂಪನಿಯ ಕೀರ್ತಿ ಹೆಚ್ಚಿಸಿದವು. ಈ ನಾಟಕಗಳಲ್ಲಿ ಶ್ರೀರಾಮ, ಕಂಸ, ಹಿರಣ್ಯಕಶಿಪು, ಮಾರೀಚ, ಅರ್ಜುನ, ಕಾರ್ನ್‌ವಾಲೀಸ್ ಪಾತ್ರಗಳಲ್ಲಿ ಬುಡಾನರ ಅಭಿನಯ ಸ್ಮರಣೀಯ. ಇವರೊಂದಿಗೆ ಹಾಸ್ಯಪಟು ಉಡುಪಿ ದಾಸಭಟ್ಟ, ಇಂದು ಶೇಖರ, ಧೀರೇಂದ್ರ ಗೋಪಾಲ್, ಆರೂರು ರಘುರಾಮರಾವ್, ಎ.ಪಿ. ನಾಯಕ್, ಬೇಗಡಿ ಸಾವಿತ್ರಿ, ಸಾವಿತ್ರಿ ದೇಶಪಾಂಡೆ, ಹಡಗಲಿ ವೀರಭದ್ರಪ್ಪ ಕಂಪನಿಯಿಂದ ಪ್ರಸಿದ್ಧಿ ಪಡೆದು, ಉತ್ತಮ ಕಲಾವಿದರಾಗಿ ರೂಪುಗೊಂಡರು.

ಈ ಮಧ್ಯೆ ಆರ್ಥಿಕ ಮುಗ್ಗಟ್ಟಿನಿಂದ ಕಂಪನಿಯನ್ನು ಮುಚ್ಚಿದರೂ, ಎದೆಗುಂದದೆ ಮ್ಯೂಜಿಕ್ ಶೋ, ಮಿಮಿಕ್ರಿ, ಹಾಸ್ಯ ಚಟಾಕಿ ಕಾರ್ಯಕ್ರಮಗಳನ್ನು ಶಾಲೆಗಳಲ್ಲಿ ನೀಡಿ, ಮತ್ತೆ ರಂಗಭೂಮಿಗೆ ಮರಳಿದರು. ರಂಗಸಜ್ಜಿಕೆಗೆ ಬೇಕಾದ ಸಲಕರಣೆಗಳು, ದೀಪಾಲಂಕಾರ ಸಾಮಗ್ರಿಗಳು, ವೇಷ–ಭೂಷಣಗಳು ಹೀಗೆ ನಾಟಕ ಪ್ರದರ್ಶನಕ್ಕೆ ಬೇಕಾದ ಎಲ್ಲ ಸಾಮಗ್ರಿಗಳನ್ನು ಒದಗಿಸುವ ಕಾಯಕವನ್ನು ಅಂದಿನಿಂದ ಇಂದಿನವರೆಗೆ ಪಾಲಿಸುತ್ತಾ ಬಂದಿದ್ದಾರೆ. ಬಾರ್ಕೂರಿನ ಸುತ್ತ ಮುತ್ತ ನಡೆಯುವ ಯಾವುದೇ ಕಾರ್ಯಕ್ರಮವಾಗಲಿ, ನಾಟಕಕ್ಕಾಗಲಿ ಸಾಹೇಬರಿಗೆ ಬುಲಾವ್ ಬರುತ್ತದೆ.

'ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆ' ಎಂಬಂತೆ ತಾವು ರಂಗಭೂಮಿಯಿಂದ ಗಳಿಸಿದ್ದನ್ನು ಮತ್ತೆ ರಂಗಭೂಮಿಗೆ ನೀಡಿ ಈ 85ರ ತಾರುಣ್ಯದಲ್ಲೂ ಉತ್ಸಾಹದಿಂದ ರಂಗಕರ್ಮಗಳಿಗೆ, ಓಡಾಡುವ ತಮ್ಮನ್ನು, ತಮ್ಮ ಜೀವನವನ್ನು ಕಲೆಗಾಗಿ ಅರ್ಪಿಸಿಕೊಂಡ ಧರ್ಮಾತೀತ ರಂಗ ಪ್ರವೀಣ ಬುಡಾನ್ ಭಾಷಾ ಸಾಹೇಬ ಯುವ ಕಲಾ ಪೀಳಿಗೆಗೆ ಮಾದಿಯಾಗಿದ್ದಾರೆ.

---



## ಬಸವರಾಜ ಗೌಡ ನಾಡಂಗ (ಪದ್ವಣ್ಣ ಶ್ರಮ ಪ್ರಶಸ್ತಿ)

59ರ ಹರೆಯದ ಶ್ರೀ ಬಸವರಾಜ ಗೌಡ ನಾಡಂಗರು ಸುಮಾರು ಮೂರು ದಶಕಕ್ಕೂ ಹೆಚ್ಚು ಕಾಲ ರಂಗಭೂಮಿಯ ನೇಪಥ್ಯ ವಲಯದಲ್ಲಿ ವಿಶಿಷ್ಟ ರೀತಿಯ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಶೇಷ ಬದುಕನ್ನು ರಂಗಸೇವೆಗಳಿಗಾಗಿಯೇ ಮೀಸಲಾಗಿಟ್ಟು, ಸದ್ದುಗದ್ದಲವಿಲ್ಲದೆ ತಮ್ಮ ಕಾಯಕದಲ್ಲಿ ಮಗ್ನರಾಗಿದ್ದಾರೆ.

ಕರ್ನೂಲು ಜಿಲ್ಲೆಯ ಆಲೂರು ತಾಲ್ಲೂಕಿನ ವಿರುಪಾಪುರದಲ್ಲಿ 1942ರಲ್ಲಿ ನಾಡಂಗರು ಜನಿಸಿದರು. ತಂದೆ ಶ್ರೀ ಹೆಚ್. ಚನ್ನಬಸವಗೌಡ ಹಾಗೂ ತಾಯಿ ಶ್ರೀಮತಿ ಹೆಚ್. ಬಸವಲಿಂಗಮ್ಮ, ವಿದ್ಯಾಭ್ಯಾಸಕ್ಕಾಗಲಿ, ಕಲಾಭ್ಯಾಸಕ್ಕಾಗಲಿ ಪ್ರೋತ್ಸಾಹವಿಲ್ಲದ ಕುಟುಂಬವಾದ್ದರಿಂದ, ಸೋದರ ಮಾವನ ಸಹಾಯದಿಂದ ಎಸ್.ಎಸ್.ಎಲ್.ಸಿ.ವರೆಗೆ ಮಾತ್ರ ವ್ಯಾಸಂಗ ಸಾಧ್ಯವಾಯಿತು. ನಾಡಂಗರಿಗೆ ಚಿಕ್ಕಂದಿನಿಂದಲೇ ರಂಗಭೂಮಿಯ ಸೆಳೆತ, ಆದರೆ ಅವಕಾಶ ಕಡಿಮೆ. ವಿಚಿತ್ರವೆಂದರೆ ತಮ್ಮ 21ನೆಯ ವಯಸ್ಸಿಗೆ ಅಂದಿಗೆ ಸುಪ್ರಸಿದ್ಧವಾದ ಶ್ರೀ ಮೋಹನಕುಮಾರ ಕಿರಣಗೆ ಕೃತಿ 'ಅಣ್ಣ ತಂಗಿ' ನಾಟಕದಲ್ಲಿ ಕಥಾನಾಯಕನಾಗಿ ಅಭಿನಯಿಸಿ ಪ್ರೇಕ್ಷಕರಿಂದ ಅಭಿನಂದಿಸಲ್ಪಟ್ಟ ಮೇಲೆ ರಂಗಭೂಮಿಯ ನಂಟು ಬಾಳುವೆಯ ಗಂಟಾಗಿ ಪರಿಣಮಿಸಿತು.

ಜೀವನ ಸಾಗಿಸಲು ನಾಟಕವನ್ನೇ ಆಧಾರ ಮಾಡಿಕೊಂಡು 'ಕಾಯಕವೇ ಕೈಲಾಸ' ಎಂಬ ಬಸವಣ್ಣನವರ ಉಕ್ತಿಯಂತೆ ಪ್ರಾಮಾಣಿಕತೆಯಿಂದ ದುಡಿಯತೊಡಗಿದರು. ಮಾಸ್ಟರ್ ಹಿರಣ್ಣಯ್ಯ ಮಿತ್ರ ಮಂಡಳಿ, ಕುಕ್ಕನೂರಿನ ಶ್ರೀ ವಿಜಯಲಕ್ಷ್ಮಿ ನಾಟಕ ಮಂಡಳಿ, ಬಾಗಲವಾಡದ ಶ್ರೀ ಅಮರೇಶ್ವರ ನಾಟಕ ಮಂಡಳಿ, ಹಾಲಾಪುರದ ಶ್ರೀ ಅಮರೇಶ್ವರ ನಾಟ್ಯ ಸಂಘ, ಸೂಡಿಯ ಶ್ರೀ ಮಲ್ಲಿಕಾರ್ಜುನ ನಾಟಕ ಸಂಘ, ಗುಡಿಗೇರಿಯ ಶ್ರೀ ಸಂಗಮೇಶ್ವರ ನಾಟ್ಯ ಸಂಘ, ಕಮತಗಿಯ ಶ್ರೀ ಹುಚ್ಚೇಶ್ವರ ನಾಟ್ಯ ಸಂಘ ಮುಂತಾದ ಶಿಸ್ತುಬದ್ಧ ವೃತ್ತಿ ರಂಗಭೂಮಿಯಲ್ಲಿ ಸೇವೆ ಸಲ್ಲಿಸಿ, ರಂಗದ ನಾನಾ ವಲಯಗಳಲ್ಲಿ ಅಪಾರ ಅನುಭವ ಪಡೆದುಕೊಂಡರು. ರಂಗಸಜ್ಜಿಗೆಯಿಂದ ಮೊದಲುಗೊಂಡು, ಕೈಕೊಟ್ಟ ಪಾತ್ರಧಾರಿಯ ಪಾತ್ರ ನಿರ್ವಹಣೆಯವರೆಗೆ ಅರ್ಹತೆಯನ್ನು ಪಡೆದುಕೊಂಡರು. ಸಾಮಾಜಿಕ, ಐತಿಹಾಸಿಕ, ಪೌರಾಣಿಕ ನಾಟಕಗಳಲ್ಲಿ ಯಾವುದೇ ಪಾತ್ರವಾಗಲೀ ಲೀಲಾಜಾಲವಾಗಿ ನಿರ್ವಹಿಸುವ ಚಾಕಚಕ್ಯತೆಯಿಂದಾಗಿ ರಂಗಾಸಕ್ತರ ಹೃದಯ ಗೆದ್ದಿರುವ ಕಲಾವಿದರಾಗಿದ್ದಾರೆ.

ನಟನೆಯೊಂದಿಗೆ ರಂಗಸಜ್ಜಿಕೆ, ಬೆಳಕು, ಪ್ರಸಾಧನ, ಧ್ವನಿ ವ್ಯವಸ್ಥೆ, ಸಂಘಟನೆಗಳಲ್ಲಿ ಸಿದ್ಧಹಸ್ತರಾದ ಬಸವರಾಜ ನಾಡಂಗರು ಕನ್ನಡ ರಂಗಭೂಮಿ ಕಂಡ ಪರಿಪೂರ್ಣ ಕಲಾವಿದರಲ್ಲಿ ಒಬ್ಬರು.

---



## ಬಿ.ಎನ್. ಬ್ರಹ್ಮಾಚಾರ್ಯ (ಪದ್ವಣ್ಣ ಶ್ರಮ ಪ್ರಶಸ್ತಿ)

ನಾಟಕ ನಿರ್ದೇಶನ, ಸಂಗೀತ, ಸಾಹಿತ್ಯ, ಚಿತ್ರಕಲೆ ಹೀಗೆ ಹಲವಾರು ಕಲಾವಿಭಾಗಗಳಲ್ಲಿ ಅಭಿರುಚಿ, ಪರಿಶ್ರಮ ಹೊಂದಿರುವ ಬಿ.ಎನ್. ಬ್ರಹ್ಮಾಚಾರ್ಯ ದಾವಣಗೆರೆ ಜಿಲ್ಲೆ ಮಳಲಕೆರೆಯವರು. ಇಂಪಾದ ಕಂಠದ ಒಡೆಯರಾದ ಬ್ರಹ್ಮಾಚಾರ್ಯ ಎಳೆಯ ವಯಸ್ಸಿನಲ್ಲೇ ತಮ್ಮ ಗ್ರಾಮದವರು ಆಡಿಸುತ್ತಿದ್ದ ನಾಟಕಗಳಲ್ಲಿ ಸ್ತ್ರೀ ಪಾತ್ರಗಳನ್ನು ಅಭಿನಯಿಸುವುದರ ಮೂಲಕ ರಂಗ ಜೀವನಕ್ಕೆ ಕಾಲಿಟ್ಟರು. ಮುಂದೆ ನಾಟಕಗಳಲ್ಲಿ ಅನೇಕ ವಿಭಿನ್ನ ಪಾತ್ರಗಳನ್ನು ನಿರ್ವಹಿಸಿ ಜನಮೆಚ್ಚುಗೆ ಗಳಿಸಿದರು. ಸಂಗೀತ ವಿದ್ವಾನ್ ಶ್ರೀ ಬ್ಯಾಟರಾಯಪ್ಪನವರಲ್ಲಿ ಸಂಗೀತಾಭ್ಯಾಸ ಮಾಡಿ ನಾಟಕಗಳಿಗೆ ಹಾರ್ಮೋನಿಯಂ ಸಹ ನುಡಿಸತೊಡಗಿದರು. ಇವರ ಗಣನೀಯ ಸಾಧನೆಯೆಂದರೆ ನೂರಾರು ಗ್ರಾಮಗಳಿಗೆ ಹೋಗಿ, ಅಲ್ಲಿಯ ಜನರಿಗೆ ಸಂಗೀತ ಮತ್ತು

ನಾಟಕಗಳಿಗೆ ತರಬೇತಿ ನೀಡಿ ನಾಟಕ ನಿರ್ದೇಶಿಸಿ, ಪ್ರದರ್ಶಿಸಿರುವುದು. 'ರಕ್ತ ರಾತ್ರಿ', 'ವೀರಾಭಿಮನ್ಯು', 'ಪಾದುಕಾ ಪಟ್ಟಾಭಿಷೇಕ', 'ಟಿಪ್ಪು ಸುಲ್ತಾನ್', 'ಸಂಗೊಳ್ಳಿ ರಾಯಣ್ಣ', 'ದೇವದಾಸಿ', 'ಅಣ್ಣತಮ್ಮ', 'ದುಡ್ಡೇ ದೊಡ್ಡಪ್ಪ', 'ಬಂಜೆ ತೊಟ್ಟಿಲು', 'ಕಾಲ್ಪನಿಕ', 'ಬಾಲಚಂದ್ರ' ಮೊದಲಾದ ನಾಟಕಗಳು ಇವರ ನಿರ್ದೇಶನದಡಿ ಹಲವು ಪ್ರದರ್ಶನ ಕಂಡಿವೆ.

ಬಡತನ ಭೂತ, ಅಣ್ಣತಮ್ಮ, ವೀರಾಭಿಮನ್ಯು, ಕುರುಕ್ಷೇತ್ರ, ಟಿಪ್ಪು ಸುಲ್ತಾನ್, ಬಾಲಚಂದ್ರ, ವಿಶ್ವಬಂಧು ಮರುಳಸಿದ್ಧ, ಮರಣವೇ ಮಹಾನವಮಿ, ಮಹಾಬೆಳಗು, ಆದರ್ಶ ಪ್ರೇಮ, ದೇವದಾಸಿ, ಹೇಮರೆಡ್ಡಿ ಮಲ್ಲಮ್ಮ ಸೇರಿದಂತೆ ಸುಮಾರು ನಲವತ್ತಕ್ಕೂ ಅಧಿಕ ನಾಟಕಗಳಲ್ಲಿ ವಿಭಿನ್ನ ಪಾತ್ರಗಳನ್ನು ನಿರ್ವಹಿಸಿದ್ದಾರೆ. ಅಲ್ಲದೆ ಪ್ರಮುಖ ರಂಗ ನಿರ್ದೇಶಕರುಗಳಾದ ಬಿ. ಜಯಶ್ರೀ, ಸಿಜಿಕೆ, ಅಶೋಕ ಬಾದರದಿನ್ನಿ ಮೊದಲಾದವರಲ್ಲಿ ತರಬೇತಿ  ಪಡೆದಿರುವ ಶ್ರೀಯುತರು, ಹೊಸ ಅಲೆಯ ನಾಟಕಗಳಲ್ಲೂ ಅಭಿನಯಿಸಿದ್ದಾರೆ. ಶರಣ ತತ್ವಗಳ ನಾಟಕ ಪ್ರದರ್ಶನದ ಮೂಲಕ ಬೆಂಗಳೂರು, ಮೈಸೂರು, ಹುಬ್ಬಳ್ಳಿ, ಧಾರವಾಡ, ಹೈದರಾಬಾದ್, ಕನ್ಯಾಕುಮಾರಿ, ದೆಹಲಿ, ಜಮ್ಮು, ಬೊಂಬಾಯಿ, ನಾಸಿಕ್, ಕಾಶಿ, ಶ್ರೀನಗರ ಹೀಗೆ ಭಾರತದ ಪ್ರಮುಖ ನಗರಗಳಲ್ಲಿ ಸಂಚರಿಸಿ ನಾಟಕ ಪ್ರದರ್ಶನ ನೀಡಿದ್ದಾರೆ.

ಇವರ ಪ್ರತಿಭೆಗೆ ಮಾರು ಹೋಗಿ ತರಳಬಾಳು ಜಗದ್ಗುರು *ಶ್ರೀ ಶ್ರೀ ಶ್ರೀ* ಶಿವಕುಮಾರ ಶಿವಾಚಾರ್ಯರು 'ತರಳಬಾಳು ಕಲಾಸಂಘ'ದಲ್ಲಿ ಖಾಯಂ ಸದಸ್ಯರನ್ನಾಗಿ ನೇಮಿಸಿಕೊಂಡಿದ್ದಾರೆ. ಈ ಸಂಸ್ಥೆಗಾಗಿ ನಾಟಕ ನಿರ್ದೇಶಿಸುತ್ತಾ, ಹೊಸ ಕಲಾವಿದರಿಗೆ ಮಾರ್ಗದರ್ಶನ ನೀಡುತ್ತಾ ತಮ್ಮ ಕಲಾ ಬದುಕನ್ನು ಸವೆಸುತ್ತಿದ್ದಾರೆ ಶ್ರೀಯುತ ಬಿ.ಎಸ್. ಬ್ರಹ್ಮಾಚಾರ್ಯ.

---



## ರುದ್ರಯ್ಯ ವಿ. (ಪದ್ದಣ್ಣ ಶ್ರಮ ಪ್ರಶಸ್ತಿ)

ಮಂಚೇನಹಳ್ಳಿ ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ಒಂದು ಪುಟ್ಟ ಗ್ರಾಮ. ಅಲ್ಲಿನ ನಿವಾಸಿಗಳಾದ ವೀರಭದ್ರಯ್ಯ ಮತ್ತು ಸಿದ್ದಗಂಗಮ್ಮ ದಂಪತಿಗಳ ಮಗನಾಗಿ ರುದ್ರಯ್ಯ ಜನಿಸಿದರು. ನೆಲಮಂಗಲದ ತ್ಯಾಮಗೊಂಡ್ಲುವಿನಲ್ಲಿ ಪಿ.ಯು.ಸಿ. ವರೆಗೆ ಕಲಿತು ಕೆಲಸ ಅರಸುತ್ತಾ ಬೆಂಗಳೂರಿಗೆ ಬಂದು, ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಹಾಗೂ ಪರೀಕ್ಷಾ ವಿಭಾಗದಲ್ಲಿ ಅರೆಕಾಲಿಕ ಉದ್ಯೋಗಿಯಾಗಿ ಕೆಲಸಕ್ಕೆ ಸೇರಿದರು.

ಆಗ ವಿ.ವಿ.ಯ ಉಪಕುಲಪತಿಗಳಾಗಿದ್ದ ಶ್ರೀ ಎಚ್. ನರಸಿಂಹಯ್ಯನವರ ಕೃಪಾದೃಷ್ಟಿಗೆ ಬಿದ್ದು ಜಯನಗರ ನ್ಯಾಷನಲ್ ಕಾಲೇಜಿನಲ್ಲಿ ಸಹಾಯಕರಾಗಿ 1986ರಲ್ಲಿ ವೃತ್ತಿಗೆ ಸೇರಿದರು. ನ್ಯಾಷನಲ್ ಕಾಲೇಜ್, ಎಚ್.ಎನ್. ಕಲಾಕ್ಷೇತ್ರ ಸ್ಥಾಪಿಸಿದಾಗ ಅದರ ನಿರ್ವಹಣೆಯ ಜವಾಬ್ದಾರಿಯನ್ನೂ ಹೊತ್ತುಕೊಂಡರು. ರಂಗತಜ್ಞರಾದ ಶ್ರೀಯುತ ಪದ್ಮನಾಭ (ಪದ್ದಣ್ಣ) ಮತ್ತು ಶ್ರೀಯುತ ವಿ. ರಾಮಮೂರ್ತಿಯವರ ಮಾರ್ಗದರ್ಶನದಲ್ಲಿ ರಂಗಸಜ್ಜಿಕೆ ಹಾಗೂ ಬೆಳಕಿನ ಸಂಯೋಜನೆಯ ಕೆಲಸ ಕಲಿತು ಅಂದಿನಿಂದ ಇಂದಿನವರೆಗೂ ಸುಮಾರು ನೂರಾರು ನಾಟಕಗಳಿಗೆ ರಂಗಸಜ್ಜಿಕೆ, ಬೆಳಕು ವಿನ್ಯಾಸ ಮಾಡುತ್ತಾ ಬಂದಿದ್ದಾರೆ.

ರಂಗಭೂಮಿಯ ಹೆಸರಾಂತ ನಿರ್ದೇಶಕರಾದ ಸಿ.ಆರ್. ಸಿಂಹ, ಪ್ರಸನ್ನ, ಅರುಂಧತಿರಾವ್, ಕಪ್ಪಣ್ಣ, ಟಿ.ಎಸ್. ನಾಗಾಭರಣ, ಟಿ.ಎನ್. ಸೀತಾರಾಂ, ಸುರೇಶ್ ಆನಗಳ್ಳಿ, ಸುರೇಂದ್ರನಾಥ್, ಆರ್. ನಾಗೇಶ್, ಕೃಷ್ಣಮೂರ್ತಿ ಕವತ್ತಾರ್, ಇಕ್ಬಾಲ್ ಅಹಮದ್ ಹೀಗೆ ಇನ್ನೂ ಅನೇಕ ನಿರ್ದೇಶಕರೊಂದಿಗೆ ಕೆಲಸ ಮಾಡಿದ ಅನುಭವ ಹೊಂದಿದ್ದಾರೆ. ನಿಜಗಲ್ಲಿನ ರಾಣಿ ಸೂಳೇಕೆರೆ, ತವರಿನ ಹಂಬಲ, ಅನುಕೂಲಕ್ಕೊಬ್ಬಣ್ಣ, ಮಳೆ ನಿಲ್ಲುವವರೆಗೂ... ಪರಿಹಾರ, ಕುದುರೆ ಮೊಟ್ಟೆ, ತದ್ರೂಪಿ, ಅಂಜುಮಲ್ಲಿಗೆ, ಒಂದು ಸೈನಿಕ ವೃತ್ತಾಂತ, ದಿ ವೇವ್ಸ್, ನನ್ನ ತಂಗಿಗೊಂದು ಗಂಡು ಕೊಡಿ, ಮಹಾರಾತ್ರಿ, ಆಷಾಢಭೂತಿ, ಹೋಂರೂಲು, ಹಾವಿಲ್ಲದ ಹುತ್ತ, ಸಾಯುವನೆ ಚಿರಂಜೀವಿ, ಮ್ಯಾಕ್‌ಬೆತ್ ಹೀಗೆ ಅಸಂಖ್ಯಾತ ನಾಟಕಗಳಲ್ಲಿ ಇವರದೇ ರಂಗಸಜ್ಜಿಕೆ, ಬೆಳಕು ವ್ಯವಸ್ಥೆ.

ಉದಯ ಕಲಾನಿಕೇತನ, ರಂಗಾವತಾರ, ಸ್ನೇಹ ಸಮೂಹ, ರಂಗಾಸಕ್ತರು, ಅಂತರಂಗ, ಪರಸ್ಪರ, ಸಂಚಯ, ದೃಷ್ಟಿ ತಂಡಗಳೊಂದಿಗೆ ಸಕ್ರಿಯವಾಗಿ ಭಾಗವಹಿಸುವ ರುದ್ರಯ್ಯ ನ್ಯಾಷನಲ್ ಕಾಲೇಜ್ ರಂಗಭೂಮಿಯಲ್ಲೂ ಅವಶ್ಯಬೇಕಾದ ರಂಗಕರ್ಮಿಯಾಗಿದ್ದಾರೆ.



## ಜಿ.ಎಂ. ರಂಗಯ್ಯ (ಪದ್ಮಣ್ಣ ಶ್ರಮ ಪ್ರಶಸ್ತಿ)

'ಕಲೆಯೇ ನನ್ನ ಆರಾಧ್ಯ ದೈವ' ಎಂದು ನಂಬಿ, ಕಲೆಗಾಗಿಯೇ ತಮ್ಮನ್ನು ಅರ್ಪಿಸಿಕೊಂಡು ಸುಮಾರು 30 ವರ್ಷಗಳಿಂದ ನಿರಂತರವಾಗಿ ಕಲಾಸೇವೆ ಮಾಡುತ್ತಾ ಬಂದಿದ್ದಾರೆ ಶ್ರೀ ಜಿ.ಎಂ. ರಂಗಯ್ಯ

ದಿನಾಂಕ 4 ಡಿಸೆಂಬರ್ 1953ರಲ್ಲಿ ಶ್ರೀ ಗಂಗಪ್ಪ ಮತ್ತು ಶ್ರೀಮತಿ ಮುನಿಯಮ್ಮನವರ ಪುತ್ರರಾಗಿ ಬೆಂಗಳೂರಿನ ವಾಲ್ಮೀಕಿನಗರದಲ್ಲಿ ರಂಗಯ್ಯ ಜನಿಸಿದರು. ಇವರ ತಂದೆ ಹಾರ್ಮೋನಿಯಂ ಮತ್ತು ನಾಟಕ ಮಾಸ್ತರರಾಗಿದ್ದುದರಿಂದ ರಂಗಯ್ಯನವರ ಕಲಾಭ್ಯಾಸಕ್ಕೆ ಮನೆಯೇ ಮೊದಲ ಪಾಠಶಾಲೆ ಆಗಿತ್ತು, ಶಾಲಾ ವಿದ್ಯಾಭ್ಯಾಸದ ಜೊತೆ ಜೊತೆಯಲ್ಲಿ, ಶಾಲೆಯ ನಾಟಕಗಳಲ್ಲಿ ಸಣ್ಣಪುಟ್ಟ ಪಾತ್ರಗಳನ್ನು ಮಾಡುತ್ತಿದ್ದರು.

1969ರಲ್ಲಿ 'ಪ್ರೇಮ ಹಸ್ತ' ನಾಟಕದ ಸಾಹುಕಾರ ಮುಕುಂದರಾಯರ ಪಾತ್ರದಿಂದ ನಟರಾಗಿ ರಂಗಮಂಚ ಹತ್ತಿದರು. ನಾಟಕಗಳಲ್ಲಿ ಅಭಿನಯಿಸುವುದನ್ನು ವೃತ್ತಿಯಾಗಿ ಸ್ವೀಕರಿಸಿದರು. ಪೌರಾಣಿಕ ನಾಟಕಗಳಲ್ಲಿ ಕೃಷ್ಣ, ಕರ್ಣ, ವಿದುರ, ಆಂಜನೇಯ ಪಾತ್ರಗಳಲ್ಲಿ ಐತಿಹಾಸಿಕ ನಾಟಕಗಳಲ್ಲಿ ಗಂಡುಗಲಿ ಕುಮಾರ ರಾಮ, ಬೈಚಪ್ಪ, ಟಿಪ್ಪು ಸುಲ್ತಾನ್ ನಾಟಕದಲ್ಲಿ 'ದಿವಾನ್ ಪೂರ್ಣಯ್ಯ', ದೇವದಾಸಿ ನಾಟಕದಲ್ಲಿ ವಸಂತ ಶೇಖರ, ರಕ್ತಭೂಮಿಯಲ್ಲಿ ಕರ್ಣ ಈ ಪಾತ್ರಗಳಲ್ಲಿ ತಲ್ಲೀನರಾಗಿ ಅಭಿನಯಿಸಿ ರಂಗಪ್ರಿಯರ ಅಭಿಮಾನಿಯಾಗಿದ್ದಾರೆ ಶ್ರೀಯುತ ಜಿ.ಎಂ. ರಂಗಯ್ಯ,



## ಎಂ.ಎಸ್. ವೆಂಕಟಸುಬ್ಬರಾವ್ (ಪದ್ಮಣ್ಣ ಶ್ರಮ ಪ್ರಶಸ್ತಿ)

ಶ್ರೀ ಎಂ.ಎಸ್. ವೆಂಕಟಸುಬ್ಬರಾವ್ ಅಕ್ಟೋಬರ್ 2, 1947ರಲ್ಲಿ ಕೋಲಾರ ಜಿಲ್ಲೆಯ ಮುಳುಬಾಗಿಲು ತಾಲ್ಲೂಕಿನ ಮರಕಲಗಟ್ಟ ಗ್ರಾಮದ ತಬಲ ವಿದ್ವಾನ್ ಶ್ಯಾನಭೋಗ ನಾರಾಯಣಪ್ಪನವರ ಪುತ್ರರಾಗಿ ಜನಿಸಿದರು. ಕಲಾ ಪರಿಸರದಲ್ಲಿ ಬೆಳೆದುದರಿಂದ, ಸಹಜವಾಗಿಯೇ ನಾಟಕಗಳಲ್ಲಿ ಪಾತ್ರವಹಿಸುವ ಹಂಬಲ. ತಮ್ಮ ಹತ್ತನೇ ವಯಸ್ಸಿಗೆ ಕೃಷ್ಣ ವೇಷಧಾರಿಯಾಗಿ ಮುಖಕ್ಕೆ ಬಣ್ಣ ಬಳಿದುಕೊಂಡರು. ಅಂದಿನಿಂದ ಇಂದಿನವರೆಗೂ ಅಂದರೆ ಸುಮಾರು 43 ವರ್ಷಗಳ ಕಾಲ ಒಂದಲ್ಲ ಒಂದು ರೀತಿಯಲ್ಲಿ ಕಲಾಸೇವೆ ಮಾಡುತ್ತಾ ಬರುತ್ತಿದ್ದಾರೆ. ತಂದೆಯಿಂದಲೇ ತಬಲ ನುಡಿಸುವುದನ್ನು ಕಲಿತು, ಉತ್ತಮ ಕಂಠವಿದ್ದುದರಿಂದ ಹಾಡುಗಾರರಾಗಿ ಪಂಡರಿ ಭಜನೆ, ಕೋಲಾಟ, ಮುಂತಾದವುಗಳಲ್ಲಿ ಪಾಲ್ಗೊಳ್ಳತೊಡಗಿದರು. ಕಾಲೇಜು ದಿನಗಳಲ್ಲಿ ನಾಟಕದಲ್ಲಿ ಅಭಿನಯಿಸುವ ಹವ್ಯಾಸ ಮುಂದುವರೆದು 'ಅಡಿದ್ದೇ ನಾಟಕ', 'ಹಣ–ಹದ್ದು', 'ಸುಂದೋಪಸುಂದ್ರು' ನಾಟಕಗಳಲ್ಲಿ ನಟಿಸಿ ಕಾಲೇಜಿಗೆ ಕೀರ್ತಿ ತಂದರು.

ಕರ್ನಾಟಕ ರಾಜ್ಯ ಕೃಷಿ ಉತ್ಪನ್ನ ಮಾರುಕಟ್ಟೆ ಇಲಾಖೆಯಲ್ಲಿ ಉದ್ಯೋಗಕ್ಕೆ ಸೇರಿದ ಮೇಲೂ, ಹವ್ಯಾಸಿ ನಟರಾಗಿ ಮುಂದುವರೆದು 'ಲೇಡೀಸ್ ಓನ್ಲಿ', 'ಹುಚ್ಚ', 'ಅವಾಂತರ', 'ವಾರ್ಷಿಕೋತ್ಸವ', 'ತ್ಯಾಗಿ', 'ಲಕ್ಷ', 'ಗಂಡಸ್ಕತ್ರಿ', 'ದಾರಿ ಯಾವುದಯ್ಯಾ ಮುಂದೆ', 'ಜೋಕುಮಾರ ಸ್ವಾಮಿ', 'ದೇವದಾಸಿ', 'ಎಚ್ಚಮ ನಾಯಕ', 'ರೊಟ್ಟಿ ಋಣ', 'ಅಕ್ಕ–

ಪಕ್ಷ', 'ಮದುವೆಯಾಗೋಕೆ ತಯಾರ್', 'ಪಂಚಭೂತ' ಹೀಗೆ ಹಲವು ಸಮಾಜಿಕ ನಾಟಕಗಳಲ್ಲಿ ಗಮನಾರ್ಹ ಪಾತ್ರ ವಹಿಸಿದ್ದಾರೆ. 1983ರಲ್ಲಿ ಬೆಂಗಳೂರಿಗೆ ಬಂದ ಮೇಲೆ 'ಮಹಾಭಾರತ', ಪೌರಾಣಿಕ ನಾಟಕದಲ್ಲಿ ದುರ್ಯೋಧನ ಪಾತ್ರಧಾರಿಯಾಗಿ ಉತ್ತಮ ಯಶಸ್ಸು ಸಾಧಿಸಿಕೊಂಡರು. ಅನಂತರ ಕುರುಕ್ಷೇತ್ರ, ಶ್ರೀಕೃಷ್ಣ ರಾಯಭಾರ, ಕೌರವೇಶ್ವರ, ಸಾಮ್ರಾಟ್ ಸುಯೋಧನ, ದಾನವೀರ ಶೂರ ಕರ್ಣ, ಪ್ರಚಂಡ ರಾವಣ, ರಕ್ತಭೂಮಿ – ನಾಟಕಗಳಲ್ಲಿ ದುರ್ಯೋಧನ, ಭೀಮ, ರಾವಣನಾಗಿ ಅಭಿನಯಿಸಿ ಉತ್ತಮ ನಟರ ಸಾಲಿಗೆ ಸೇರ್ಪಡೆಯಾದರು.

ಈ ಎಲ್ಲ ಕೆಲಸದ ಒತ್ತಡದ ನಡುವೆಯೂ ತಾವು ಕೆಲಸ ಮಾಡುತ್ತಿರುವ ಕೃಷಿ ಇಲಾಖೆಯ ನೌಕರರ ಸಂಘದ ಕಲಾವೇದಿಕೆಯ ಅಧ್ಯಕ್ಷರಾಗಿ, ಚೈತ್ರ ಕಲಾವಿದರು ಸಂಘದ ಉಪಾಧ್ಯಕ್ಷರಾಗಿ, ಕನ್ನಡ ಕಲಾ ಸಂಘದ ಕಾರ್ಯದರ್ಶಿಯಾಗಿ, ಕರ್ನಾಟಕ ರಾಜ್ಯ ಕಲಾವಿದರ ಕ್ಷೇಮಾಭಿವೃದ್ಧಿ ಕೇಂದ್ರ ಸಂಘದ ಖಜಾಂಚಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ವೃತ್ತಿಯಿಂದ ಸರ್ಕಾರಿ ನೌಕರರಾಗಿದ್ದು, ಹವ್ಯಾಸಿ ಕಲಾವಿದರಾಗಿ ಇಷ್ಟೆಲ್ಲಾ ಸಾಧನೆಗೈಯಲು ಪ್ರೇರಣೆ, ಪ್ರೋತ್ಸಾಹ ನೀಡಿದ ಗುರುಗಳಾದ ಗಡ್ಡೂರು ಸುಬ್ರಮಣ್ಯಂ, ವಾಸುದೇವರಾವ್, ಬಿ.ಎ. ನಾರಾಯಣರಾವ್, ಪಿ. ವಜ್ರಪ್ಪ, ಗಂಗಪ್ಪ, ಮ.ನ.ಮೂರ್ತಿ, ಕಲ್ಲೂರು ಶ್ರೀನಿವಾಸರನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಾರೆ ಶ್ರೀಯುತ ಎಂ.ಎನ್. ವೆಂಕಟಸುಬ್ಬರಾವ್.



## ಬಿ.ಆರ್. ವಿಶ್ವನಾಥ್ (ಪದ್ಮಣ್ಣ ಶ್ರಮ ಪ್ರಶಸ್ತಿ)

ತಬಲವಾದನದಲ್ಲಿ ನುರಿತ ಕಲಾವಿದರಾದ ಶ್ರೀಯುತ ಬಿ.ಆರ್. ವಿಶ್ವನಾಥ್ ಹುಟ್ಟಿದ್ದು 1939ರಲ್ಲಿ. ಇವರು ಕಲಾರಂಗಕ್ಕೆ ಬರಲು ಪ್ರೇರಣೆ, ಪ್ರೋತ್ಸಾಹ ಸ್ವತಃ ತಂದೆಯವರೇ. ಇವರ ತಂದೆ ಶ್ರೀ ವೈ.ಆರ್. ರಾಮದಾಸ ನಾಯ್ಡು ತಬಲ ವಾದನದಲ್ಲಿ ಪಳಗಿದ ಹಸ್ತ. ತಂದೆಯ ಕೈಚಳಕದ ಮೋಡಿಗೆ ಒಳಗಾದ ವಿಶ್ವನಾಥ 7ನೇ ತರಗತಿವರೆಗೆ ಶಿಕ್ಷಣ ಪಡೆದು, ನಂತರ ತಂದೆಯಿಂದಲೇ ಪ್ರಾಥಮಿಕ ಶಿಕ್ಷಣವನ್ನು ಪಡೆದರು. ಉತ್ತಮ ತಬಲವಾದಕರಾಗಿ ರೂಪುಗೊಂಡರು. ಇವರ ಪ್ರಥಮ ಕಾರ್ಯಕ್ರಮ ಅಂದಿನ ಶಿಕ್ಷಣ ಮಂತ್ರಿಗಳಾಗಿದ್ದ ಶ್ರೀ ಶಂಕರೇಗೌಡರ ಸಮ್ಮುಖದಲ್ಲಿ ಪ್ರದರ್ಶಿತವಾದ 'ಸಂಪೂರ್ಣ ರಾಮಾಯಣ' ನಾಟಕಕ್ಕೆ ತಬಲ ವಾದಕರಾಗಿ ವೃತ್ತಿ ಜೀವನ ಆರಂಭವಾಯಿತು. ಇದೇ ವೃತ್ತಿಯಲ್ಲಿ ಮುಂದುವರೆದು ನಾಡಿನ ಖ್ಯಾತ ಸಂಗೀತ ನಿರ್ದೇಶಕರು ಹಾಗೂ ನಾಟಕ ನಿರ್ದೇಶಕರ ಸಾಥಿಯಾಗಿ ಕಾರ್ಯಕ್ರಮಗಳ ನಾಟಕಗಳ ಯಶಸ್ಸಿಗೆ ಕಾರಣಕರ್ತರಲ್ಲಿ ಒಬ್ಬರಾದರು.

ಖ್ಯಾತ ವೃತ್ತಿ ತಂಡಗಳಾದ ಶ್ರೀ ಸುಬ್ಬಯ್ಯನಾಯ್ಡು ನಾಟಕ ಕಂಪನಿ, ಹಿರಣ್ಣಯ್ಯ ಮಿತ್ರ ಮಂಡಲಿ, ಯೋಗಾನರಸಿಂಹ ಅವರ ನಾಟಕ ಸಂಸ್ಥೆ, ಗುಡಿಗೇರಿ ಬಸವರಾಜುರವರ ನಾಟಕ ಸಂಸ್ಥೆ, ಚಿತ್ರನಟಿ ಕಲ್ಪನಾ ನಾಟಕ ಸಂಸ್ಥೆಗಳ ನಾಟಕಗಳಿಗೆ ತಬಲ ಸಾಥಿಯಾಗಿ ಸೇವೆ ಸಲ್ಲಿಸಿದ್ದಾರೆ. ಶ್ರೀ ಕಣಗಾಲ್ ಪ್ರಭಾಕರ ಶಾಸ್ತ್ರಿಯವರ ಮಹತ್ವದ ಪೌರಾಣಿಕ ನಾಟಕ 'ಪ್ರಚಂಡ ರಾವಣ' ಎಲ್ಲ ಹಾಡುಗಳಿಗೂ ಸಂಗೀತ ಸಂಯೋಜನೆ ನೀಡಿದ್ದಾರೆ. 1931ರಿಂದ 1974ರ ವರೆಗೆ ಮದ್ರಾಸಿನ ಹೆಚ್.ಎಮ್.ವಿ. ರೆಕಾರ್ಡಿಂಗ್ ಸಂಸ್ಥೆಯಲ್ಲಿ ಹಲವು ಭಾಷೆಗಳ ಗ್ರಾಮಫೋನ್ ರೆಕಾರ್ಡ್‌ಗಳಲ್ಲಿ ತಬಲ ನುಡಿಸಿದ್ದಾರೆ. ಚಲನಚಿತ್ರದ ಹಾಡುಗಳಿಗೆ, ಶ್ರೀ ಗುರುರಾಜುಲು ನಾಯ್ಡುರವರ ಹರಿಕಥಾ ಧ್ವನಿ ಸುರುಳಿಗಳಿಗಲ್ಲದೆ ಖ್ಯಾತ ಸುಗಮ ಸಂಗೀತ ಹಾಡುಗಾರರಾದ ದಿ: ಪಿ. ಕಾಳಿಂಗರಾವ್, ದಿ: ಮೈಸೂರು ಅನಂತಸ್ವಾಮಿ, ಹೆಚ್.ಕೆ. ನಾರಾಯಣ, ಪದ್ಮಚರಣ್, ಸಿ. ಅಶ್ವತ್ಥ್, ಬಿ.ಕೆ. ಸುಮಿತ್ರ ಮುಂತಾದವರ ಧ್ವನಿಸುರುಳಿಗಳಿಗೂ ತಬಲ ಸಾಥಿಯಾಗಿ ಈ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಶ್ರೀಯುತ ವಿಶ್ವನಾಥರವರು ಇಂದಿಗೂ ತಮ್ಮ ಕಲಾಸೇವೆಯನ್ನು ಮುಂದುವರಿಸುತ್ತಿದ್ದಾರೆ.



## ರವೀಂದ್ರಕುಮಾರ್ ವಿ. (ಪದ್ಮಣ್ಣ ಶ್ರಮ ಪ್ರಶಸ್ತಿ)

ಶ್ರೀ ರವೀಂದ್ರಕುಮಾರ್ ತಮ್ಮ ತಂದೆ ಎಸ್. ವೀರಭದ್ರಾಚಾರ್‌ರವರು ಸ್ಥಾಪಿಸಿದ 'ರವೀಂದ್ರ ನಾಟಕ ಸಭಾ'ದಿಂದ 1962ರಲ್ಲಿ ಪ್ರಯೋಗಿಸಿದ 'ಪುರೂರವ ಚಕ್ರವರ್ತಿ' ಪೌರಾಣಿಕ ನಾಟಕದಲ್ಲಿ ಬಾಲನಟರಾಗಿ ಕಲಾಬದುಕಿಗೆ ಹೆಜ್ಜೆಯಿಟ್ಟರು. ಆಗ ಇವರ ವಯಸ್ಸು ಕೇವಲ ಎಂಟು ವರ್ಷ. ಮುಂದೆ ತಂದೆಯವರ ಮಾರ್ಗದರ್ಶನದಲ್ಲಿ ನಾಟಕದಲ್ಲಿ ಪಾತ್ರವಹಿಸುವುದನ್ನು ಮುಂದುವರೆಸಿ ಹಲವಾರು ಪೌರಾಣಿಕ, ಐತಿಹಾಸಿಕ, ಸಾಮಾಜಿಕ, ಜಾನಪದ ನಾಟಕಗಳಲ್ಲಿ ಅಭಿನಯಿಸಿದರು. ಕ್ರಮೇಣ ರಂಗ ನೇಪಥ್ಯದಲ್ಲಿ ಆಸಕ್ತಿ ಬೆಳೆಸಿಕೊಂಡು, ರಂಗಸಜ್ಜಿಕೆ, ಪ್ರಸಾಧನ ಕಲೆಗಳಲ್ಲಿ ಪರಿಣತಿ ಪಡೆದುಕೊಂಡು, 1968ರಲ್ಲಿ ಸ್ವತಂತ್ರವಾಗಿ 'ದಾನ ಶೂರ ಕರ್ಣ' ನಾಟಕಕ್ಕೆ ವರ್ಣಾಲಂಕಾರ ಮಾಡಿದರು. ರಂಗಭೂಮಿಯ ಒಲವು ಶಾಲೆಗೆ ವಿದಾಯ ಹೇಳಿ ಮೇಕಪ್ ಕಲೆಯನ್ನೇ ವೃತ್ತಿಯಾಗಿ ಸ್ವೀಕರಿಸುವಂತಾಯಿತು. ಕರ್ನಾಟಕದಾದ್ಯಂತ ಹಳ್ಳಿಹಳ್ಳಿಗಳಿಗೆ ಕರೆದಲ್ಲೆಲ್ಲಾ ಹೋಗಿ ನಾಟಕಗಳಿಗೆ ಮುಖವರ್ಣಿಕೆ ಮಾಡುತ್ತಾ ಪ್ರಸಾಧನ ಕಲೆಯಲ್ಲಿ ನೈಪುಣ್ಯತೆ ಸಾಧಿಸಿಕೊಂಡರು.

1981ರಲ್ಲಿ 'ಶ್ರೀ ವಿನಾಯಕ ವಸ್ತ್ರಾಲಂಕಾರ' ಎಂಬ ಡ್ರಾಮಾ ಸೀನರಿಯನ್ನು ಸ್ಥಾಪಿಸಿಕೊಂಡು ನಿರಂತರವಾಗಿ ರಂಗಭೂಮಿಯ ಎಲ್ಲ ಪ್ರಾಕಾರಗಳಿಗೂ ವರ್ಣಾಲಂಕಾರ, ವಸ್ತ್ರ ವಿನ್ಯಾಸ, ರಂಗಸಜ್ಜಿಕೆ ಸಲಕರಣೆ, ಧ್ವನಿವರ್ಧಕ, ಬೆಳಕು ಸಂಯೋಜನೆಗೆ ಬೇಕಾದ ಸಾಮಗ್ರಿಗಳನ್ನು ಒದಗಿಸುತ್ತಾ ಬಂದಿದ್ದಾರೆ. ಕೆಲವು ಚಲನಚಿತ್ರಗಳಿಗೆ, ದೂರದರ್ಶನ ಧಾರಾವಾಹಿಗಳಿಗೂ ಕೆಲಸ ನಿರ್ವಹಿಸಿದ್ದಾರೆ.



## ಶಾಂತಯ್ಯ ಹಿರೇಮಠ (ಪದ್ಮಣ್ಣ ಶ್ರಮ ಪ್ರಶಸ್ತಿ)

ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ವಿಜಾಪುರ ಘಟಕದಲ್ಲಿ ನಿರ್ವಾಹಕರಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಶಾಂತಯ್ಯ ಹಿರೇಮಠ ಜನಪ್ರಿಯ ಕಲಾವಿದರು. ನಟನೆ, ಸಂಗೀತ, ಸಾಹಿತ್ಯಗಳಲ್ಲಿ ತೀವ್ರ ಆಸಕ್ತಿಯುಳ್ಳ ಇವರಿಗೆ ವೃತ್ತಿ ರಂಗಭೂಮಿ ನಾಟಕಗಳಲ್ಲಿ ಪಾತ್ರವಹಿಸುವುದು ಅಚ್ಚುಮೆಚ್ಚು. ಮೂಲತಃ ವಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಇಂಗಳಗಿಯವರಾದ ಶ್ರೀ ಬಸವಯ್ಯನವರು ಶಾಂತಯ್ಯನವರ ತಂದೆ. ಚಿಕ್ಕವರಿದ್ದಾಗ ಊರಿನ ಯುವಕರು–ಹಿರಿಯರು ಸೇರಿ ಆಡುತ್ತಿದ್ದ ನಾಟಕಗಳಿಂದ ಪ್ರಭಾವಿತರಾಗಿ, 'ಅಣ್ಣ–ತಂಗಿ' ನಾಟಕದಲ್ಲೊಂದು ಪಾತ್ರ ಮಾಡುವುದರ ಮೂಲಕ ಬಣ್ಣದ ಪ್ರಪಂಚಕ್ಕೆ ಕಾಲಿಟ್ಟರು. ಮುಂದೆ ನಾಟಕದ ಅಭಿನಯ ಗೀಳಾಗಿ ಅಂಟಿಕೊಂಡು 'ರತ್ನ ಮಾಂಗಲ್ಯ', 'ಕುಲಪುತ್ರ', 'ಸಮಾಜಕ್ಕೆ ಸವಾಲು', 'ಕೈಲಾಗದ ಗಂಡ ಕೈಲಾಸ ಕಂಡ', 'ಗವಿಸಿದ್ಧೇಶ್ವರ ಮಹಾತ್ಮೆ', 'ಸಿದ್ಧರಾಮೇಶ್ವರ ಮಹಾತ್ಮೆ', 'ಕಲಿತ ಕಳ್ಳ', 'ಜೋಕುಮಾರಸ್ವಾಮಿ', 'ದಾರಿಯಾವುದಯ್ಯಾ ಮುಂದೆ', 'ಸಂಗೊಳ್ಳಿ ರಾಯಣ್ಣ', 'ಬಿಚ್ಚುಗತ್ತಿ', 'ಅಷ್ಟಾವರಣ', 'ಕಾಲಚಕ್ರ' ಇತ್ಯಾದಿ ಹವ್ಯಾಸಿ ಹಾಗೂ ವೃತ್ತಿ ರಂಗಭೂಮಿಯ ನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ನಾಡಿನ ಹಲವೆಡೆ ನಾಟಕ ಪ್ರದರ್ಶನಗಳಲ್ಲಿ ಪಾಲ್ಗೊಂಡಿದ್ದಾರೆ. ಇವರು ದುಃಖಮಯ ಪಾತ್ರದಲ್ಲಿ ತನ್ಮಯರಾಗಿ ಅಭಿನಯಿಸುವ ರೀತಿಗೆ ಜನಮೆಚ್ಚುಗೆ ಪಡೆದಿದ್ದಾರೆ. ನಟನೆಯೊಂದಿಗೆ ಜಾನಪದ ಗೀತೆಗಳನ್ನು ಹಾಡುವುದು, ಚಿತ್ರಕಲೆ, ಮೂರ್ತಿ ತಯಾರಿಕೆ, ಮೂಗಿನಿಂದ ಶಹನಾಯಿ ನುಡಿಸುವುದು, ವಿವಿಧ ಪ್ರಾಣಿಗಳ ಧ್ವನಿಯನ್ನು ಅನುಕರಣೆ ಮಾಡುವುದು ಈ ಎಲ್ಲ ಕಲೆಗಳನ್ನು ಕರಗತ ಮಾಡಿಕೊಂಡಿರುವ ಶಾಂತಯ್ಯ ಹಲವು ಕಲೆಗಳ ಸಂಗಮವಾಗಿದ್ದಾರೆ. ನಿವೃತ್ತಿಯ ನಂತರ ಸಂಪೂರ್ಣವಾಗಿ 'ಕಲಾ ಪ್ರಪಂಚಕ್ಕೆ' ತಮ್ಮನ್ನು ಅರ್ಪಿಸಿಕೊಳ್ಳುವ ಹಂಬಲ ಹೊಂದಿ ವೃತ್ತಿಯೊಂದಿಗೆ, ಪ್ರವೃತ್ತಿಯಲ್ಲೂ ನಿಷ್ಠೆಯಿಂದ ದುಡಿಯುತ್ತಿದ್ದಾರೆ.



## ಜಿ.ಎಸ್. ಸಬಕಾಳೆ

ಬಿಜಾಪುರ ಜಿಲ್ಲೆಯ ಜೋಳ ಚಿಕ್ಕಲಗಿಯವರಾದ ಶ್ರೀ ಸದಾಶಿವ ಸಬಕಾಳೆ ಹಾಗೂ ಶ್ರೀಮತಿ ತುಳಜಾಬಾಯಿ ಸ. ಸಬಕಾಳೆ ದಂಪತಿಗಳಿಗೆ ಮಗ ಶ್ರೀ ಜ್ಞಾನೋಭಾ ಸದಾಶಿವ ಸಬಕಾಳೆ, ವೃತ್ತಿ ರಂಗಭೂಮಿಯಲ್ಲಿ ನಟರಾಗಿ, ನಿರ್ದೇಶಕರಾಗಿ, ನಾಟಕಕಾರರಾಗಿ ಮಹತ್ತರ ಸಾಧನೆ ಮಾಡಿದ್ದಾರೆ. 1964ರಲ್ಲಿ ಅಂದರೆ ತಮ್ಮ ಹದಿನಾಲ್ಕನೇ ವಯಸ್ಸಿಗೆ 'ಅಣ್ಣ-ತಂಗಿ' ಸಾಮಾಜಿಕ ನಾಟಕದ ಮೂಲಕ ನಟನಾ ಬದುಕಿಗೆ ಕಾಲಿಟ್ಟ ಸಬಕಾಳೆ ಆರಂಭದಲ್ಲಿ ಹವ್ಯಾಸಿ ನಟರಾಗಿದ್ದವರು ಕ್ರಮೇಣ 'ವಿಜಯಲಕ್ಷ್ಮಿ', 'ದೀಪಾವಳಿ' ನಾಟಕಗಳು ತಂದಿತ್ತ ಯಶಸ್ಸು, ಜನಪ್ರಿಯತೆಯಿಂದಾಗಿ ರಂಗ ಬದುಕನ್ನೇ ತಮ್ಮ ವೃತ್ತಿಯಾಗಿ ಸ್ವೀಕರಿಸಿದರು. ಆ ನಂತರದ ದಿನಗಳಲ್ಲಿ ಲಕ್ಷ್ಮೇಶ್ವರದ ಶ್ರೀ ಸೋಮೇಶ್ವರ ನಾಟ್ಯ ಸಂಘ, ಘಟಪ್ರಭಾದ ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ, ಗದಗ್‌ನ ಶ್ರೀ ವೀರೇಶ್ವರ ನಾಟ್ಯ ಸಂಘ, ಜಾಲಿಹಾಳದ ಶ್ರೀ ಗಂಗಾಧರ ವಿಜಯ ನಾಟ್ಯ ಸಂಘ, ಕಾಗವಾಡದ ಶ್ರೀ ಕುಮಾರೇಶ್ವರ ಪ್ರಾಸಾದಿಕ ಸಂಗೀತ ನಾಟಕ ಮಂಡಳಿ, ಕಮತಗಿಯ ಶ್ರೀ ಹುಚ್ಚೇಶ್ವರ ನಾಟ್ಯ ಸಂಘ, ತಾಳಿಕೋಟೆಯ ಶ್ರೀ ಖಾಸ್ಗತೇಶ್ವರ ನಾಟ್ಯ ಸಂಘ ಹೀಗೆ ಉತ್ತರ ಕರ್ನಾಟಕದ ಹೆಸರಾಂತ ವೃತ್ತಿ ನಾಟಕ ಕಂಪನಿಗಳಲ್ಲಿ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ.

'ಮಾಂಗಲ್ಯದ ಮಹಿಮೆ', 'ಧರೇ ಗೌಡಮಕೊಳ್ಳಿ', 'ಮಹಾಸತಿ ಮೈನಾ ಸುಂದರಿ', 'ಮುತ್ತೈದೆ ನೀ ಮತ್ತೊಮ್ಮೆ ಬಾ', 'ಶೀಲವೇ ಸತಿಗೆ ಸೌಭಾಗ್ಯ', 'ಚಿತ್ರಾಂಗದ', 'ಮಾತಂಗ ಕನ್ಯ' ನಾಟಕಗಳು ಸಬಕಾಳೆಯವರಿಗೆ ಜನಪ್ರಿಯತೆಯನ್ನು ತಂದಿದ್ದವು. ನಾಟಕ ಸಾಹಿತ್ಯಕ್ಕೆ ಕೊಡುಗೆಯಾಗಿ ವಂಶಜ್ಯೋತಿ, ಅರ್ಥಾತ್ ಮಗ ಮನೆಗೆ ಬಂದ, ಮಾಂಗಲ್ಯದ ಮಹಿಮೆ, ಅರ್ಥಾತ್ ಶೀಲವೇ ಸತಿಗೆ ಸೌಭಾಗ್ಯ, ಮಹಾಸತಿ ಮೈನಾ ಸುಂದರಿ, ಸೂಳೆಯಲ್ಲ ಸಾವಿತ್ರಿ, ಸತ್ಯಕ್ಕೆ ಬಂದ ಸೌಭಾಗ್ಯ, ಧರೆ ಗೌಡನ ಕೊಳ್ಳಿ ಮುಂತಾದ ನಾಟಕಗಳನ್ನು ರಚಿಸಿ ನೀಡಿದ್ದಾರೆ.

ಹೀಗೆ ಸುಮಾರು 35 ವರ್ಷಗಳ ಕಲಾ ಬದುಕನ್ನು ಸವೆಸಿರುವ ಸಬಕಾಳೆಯವರು ಸದ್ಯ 'ಖಾಸ್ಗತೇಶ್ವರ ನಾಟ್ಯ ಸಂಘ'ದಲ್ಲಿ ತಮ್ಮ ರಂಗಸೇವೆ ಮುಂದುವರೆಸಿದ್ದಾರೆ.

■

## 2001ರ ಪ್ರಶಸ್ತಿ ವಿಜೇತರು



### ಎ.ಎ. ಅನಂತ ರಂಗಾಚಾರ್

1.1.1939ರಲ್ಲಿ ಜನಿಸಿದ ಶ್ರೀ ಎ.ಎ. ಅನಂತರಂಗಾಚಾರ್ ಅವರಿಗೀಗ 63 ವರ್ಷ. ತಮ್ಮ ಬದುಕಿನ ಹೆಚ್ಚು ಪಾಲನ್ನು, ಅಂದರೆ ನಲವತ್ತಾರು ವರ್ಷಗಳನ್ನು ರಂಗಭೂಮಿಗೆ ಸಾರ್ಥಕವಾಗಿ ದುಡಿಸಿಕೊಂಡ ರಂಗಕರ್ಮಿ ಶ್ರೀ ಆಚಾರ್.

1956ರಲ್ಲಿ ತಮ್ಮ ಹದಿನೇಳರ ಹರೆಯದಲ್ಲಿ ಬೆಂಗಳೂರಿನ ಮಲ್ಲೇಶ್ವರದ ಕಲ್ಪನಾ ಆರ್ಟಿಸ್ಟ್ ತಂಡದಲ್ಲಿ 'ಗೆಸ್ಟ್ ಹೌಸ್' ಮತ್ತು 'ಉಂಡಾಡಿ ಗುಂಡ' ನಾಟಕಗಳಲ್ಲಿ ಪಾತ್ರವಹಿಸುವುದರ ಮೂಲಕ ಅನಂತರಂಗಾಚಾರ್ 'ರಂಗಪ್ರವೇಶ' ಮಾಡಿದರು.

ತಮಗೆ ದಕ್ಕಿದ್ದ ಒಳ್ಳೆಯ ಬ್ಯಾಂಕ್ ನೌಕರಿಯನ್ನು ಅರ್ಧಕ್ಕೇ ಬಿಟ್ಟು ನಾಟಕಗಳಿಗಾಗಿ ತಮ್ಮನ್ನು ಮುಡುಪಾಗಿಟ್ಟು ದುಡಿಯುತ್ತಿರುವ ಶ್ರೀ ಆಚಾರ್ ನಟರಾಗಿ, ನಿರ್ದೇಶಕರಾಗಿ, ಸಂಘಟಕರಾಗಿ.... ರಂಗಭೂಮಿಗೆ ನೀಡಿದ ಕೊಡುಗೆ ಅಪಾರ. 60ರ ದಶಕದಲ್ಲಿ ರಾಜಾಜಿನಗರದಲ್ಲಿ ಲಲಿತಕಲಾನಿಕೇತನ ಸಂಘಟಿಸಿದ್ದೇ ಅಲ್ಲದೆ 'ಶ್ರೀರಂಗ ಕಲಾವಿದರು' ತಂಡವನ್ನು ಹುಟ್ಟುಹಾಕಿ ಹುಚ್ಚ, ಎಚ್ಚಮನಾಯಕ, ಕ್ಷೇತ್ರದ ಕಾಗೆ, ಗೀತಾರಾಕ್ಷಸ, ಟಿಪ್ಪು ಸುಲ್ತಾನ್.... ಇತ್ಯಾದಿ ನಾಟಕಗಳ ನಿರ್ದೇಶಕರಾಗಿ, ಪ್ರಮುಖ ಪಾತ್ರಧಾರಿಯಾಗಿ ಹೆಸರಾದರು.

ಕೆಲಕಾಲ ಮೈಸೂರಿನಲ್ಲಿ ನೆಹರು ಯುವಕಕೇಂದ್ರದ ಪ್ರಾಯೋಜಕತ್ವದಲ್ಲಿ ನಾಟಕಕಾರ ಶ್ರೀರಂಗರಿಂದಲೇ ಗ್ರಾಮೀಣ ಯುವಕರಿಗೆ ನಾಟಕ ಕಲಿಸುವ ಕೆಲಸ ಕೈಗೊಂಡರು. ಮೈಸೂರಿನ ಸ್ನೇಹ ಸಂಪದ ಮಂಗಳೂರಿನ ಅಭಿವ್ಯಕ್ತಿ, ಬೆಂಗಳೂರಿನ ಹೊಸಬರು, ದಾವಣಗೆರೆಯ ಸ್ನೇಹ ಸಂಪದಗಳಿಗಾಗಿ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಕನ್ನಡದ ಪ್ರಮುಖ ಕಾದಂಬರಿಗಳನ್ನು ನಾಟಕರೂಪಾಂತರ ಮಾಡಿ ಪ್ರಯೋಗಿಸುವ ಪ್ರಯತ್ನವನ್ನೂ ಮಾಡಿದ ಶ್ರೀ ಅನಂತರಂಗಾಚಾರ್ ಅವರ ಬದುಕು ನಿರಂತರ ರಂಗ ಚಿಂತನೆಗೆ ಮೀಸಲಾಗಿದೆ.

---



### ಹೆಚ್.ಟಿ. ಕಸ್ತೂರಮ್ಮ

ಕಸ್ತೂರಮ್ಮನವರು ಹುಟ್ಟಿ ಬೆಳೆದದ್ದೇ ರಂಗಭೂಮಿಯ ಕುಟುಂಬದಲ್ಲಿ. ತಂದೆ ದಿ. ನಿಡಗುಂದಿ ಶಂಕ್ರಪ್ಪ ನಾಟಕ ಕಂಪೆನಿಯನ್ನು ನಡೆಸಿ ಪ್ರದರ್ಶನವಿತ್ತವರು. ಪತಿ ದಿ. ಹೆಚ್.ಟಿ. ಸೋಮಣ್ಣನವರು ಕಟ್ಟಿದ ನರೇಗಲ್ಲ ಸಿದ್ಧಲಿಂಗೇಶ್ವರ ನಾಟ್ಯ ಸಂಘವನ್ನು ಅವರ ನಿಧನಾನಂತರ ಕಸ್ತೂರಮ್ಮನವರೇ ನಡೆಸಿಕೊಂಡು ಬಂದಿದ್ದು, ಸಾಕಷ್ಟು ನಾಟಕ ಪ್ರದರ್ಶನಗಳನ್ನಿತ್ತಿದ್ದಾರೆ.

ಆರೇಳು ವರ್ಷಗಳ ಬಾಲ್ಯದಲ್ಲೇ 'ಹರಿಶ್ಚಂದ್ರ' ನಾಟಕದ ಮೂಲಕ ಬಣ್ಣಕ್ಕೆ ಮುಖ ಒಡ್ಡಿದ ಇವರು ಮತ್ತೆ ತಿರುಗಿ ನೋಡಿಲ್ಲ. ದಿನೇ ದಿನೇ ಅಭಿನಯದಲ್ಲಿ ವಿಕಾಸಗೊಳ್ಳುತ್ತ ಮುಖ್ಯ ಪಾತ್ರಗಳನ್ನು ಅಭಿನಯಿಸುವ ಮಟ್ಟಕ್ಕೆ ತಲುಪಿದರು. ಅನಕ್ಷರಸ್ಥೆ ಕಸ್ತೂರಮ್ಮನವರ ಸಂಭಾಷಣೆಯ ಸುಂದರ ಉಚ್ಚಾರಣೆ ಕಲಿತವರನ್ನೂ ನಾಚಿಸುವಂತಹುದು. ತಮ್ಮ ಕಂಪೆನಿಯಲ್ಲಷ್ಟೇ ಅಲ್ಲದೆ ಆತ್ಮೀಯರ ಆಹ್ವಾನವನ್ನು ಪುರಸ್ಕರಿಸಿ ಅವರ ನಾಟಕಗಳಲ್ಲೂ ಅಭಿನಯಿಸುವ ಈಕೆ ಸಂಪ್ರದಾಯ ರೀತ್ಯ ಆಡುವ ವೃತ್ತಿ ನಾಟಕಗಳಲ್ಲಿ ಮಾತ್ರವಲ್ಲ, ಹವ್ಯಾಸಿ ಶೈಲಿಯ ನಾಟಕಗಳಲ್ಲೂ ಉತ್ಸಾಹದಿಂದ ಭಾಗವಹಿಸುತ್ತಾರೆ. ದಾವಣಗೆರೆಯ ರಂಗ ತರಬೇತಿ ಶಿಬಿರದಲ್ಲಿ ಒಮ್ಮೆ

ಪಾಲ್ಗೊಂಡ ಈಕೆ 1998–99ರಲ್ಲಿ ಈ ಶಿಬಿರದಲ್ಲಿ ತಯಾರಾದ ಬ್ರೆಕ್ಟ್‌ನ 'ತಾಯಿ' ನಾಟಕದಲ್ಲಿ ತಾಯಿಯಾಗಿ ನೀಡಿದ ಅಭಿನಯ ದಾವಣಗೆರೆಯ ಜನರ ನೆನಪಿನಲ್ಲಿ ಇನ್ನೂ ಹಸಿರು. ತಮ್ಮ ತಾಯಿ ಆಸ್ಪತ್ರೆಯಲ್ಲಿ ಅರೆ ಪ್ರಜ್ಞಾವಸ್ಥೆಯಲ್ಲಿ ಮಲಗಿದ್ದಾಗಲೂ ವಿಚಲಿತರಾಗದೆ ತಾವು ಒಪ್ಪಿಕೊಂಡು ಮಾಡುತ್ತೇನೆಂದ ಪಾತ್ರವನ್ನು ಕುಂದು ಬಾರದಂತೆ ಅಭಿನಯಿಸಿದ ಕಸ್ತೂರಮ್ಮನವರ ರಂಗನಿಷ್ಠೆ ಕೇವಲ ಕೆಲವೇ ಜನರಲ್ಲಿ ಕಂಡು ಬರುವ ವೈಶಿಷ್ಟ್ಯ. ಹಾಲಿ ಶ್ರೀಮತಿ ಕಸ್ತೂರಮ್ಮನವರು ದಾವಣಗೆರೆಯ ವಿನೋಬಾನಗರದಲ್ಲಿ ವಾಸವಾಗಿರುವ ಇವರು ಈಗಲೂ ಸಕ್ರಿಯ ಕಲಾವಿದೆ.



## ಗಂಗಾಚರಣ್

ಸೆಪ್ಟೆಂಬರ್ 5, 1951ರಂದು ಹಾಸನ ಜಿಲ್ಲೆ, ಅರಕಲಗೂಡು ತಾಲ್ಲೂಕು, ಕೊಣನೂರಿನಲ್ಲಿ ಜನಿಸಿದ ರಾಜಣ್ಣ ಅಲಿಯಾಸ್ ಗಂಗಾಚರಣ್‌ರವರ ರಂಗಭೂಮಿಯೊಂದಿಗಿನ ನಂಟು ಚಿಕ್ಕಂದಿನಿಂದಲೆ ಬಂದದ್ದು. ಪ್ರಾಥಮಿಕ ಶಾಲೆಯಲ್ಲಿ ಸೀಮೆಸುಣ್ಣದ ಪುಡಿಯನ್ನು ಮುಖಕ್ಕೆ ಮೇಕಪ್ ಆಗಿ ಬಳಿದುಕೊಂಡು ತಲೆಗೊಂದು ನವಿಲುಗರಿ, ಕೈಯಲ್ಲೊಂದು ಕೊಳಲು ಧರಿಸಿ ಕೃಷ್ಣ ಪಾತ್ರಧಾರಿಯಾಗಿ ಅಟ್ಟ ಹತ್ತಿದ ಗಂಗಾಚರಣ್‌ಗೆ ಅದು ಆ ಕ್ಷಣದ ಆಸೆಯಷ್ಟೇ ಆಗದೆ ಬದುಕಿನುದ್ದಕ್ಕೂ ಬೆಂಬಿಡದೆ ಬಂದು ಬಣ್ಣದ ಲೋಕವನ್ನು ಬಿಚ್ಚಿಟ್ಟು ಹುಚ್ಚು ಹತ್ತಿಸಿದ ಹವ್ಯಾಸವಾಯಿತು.

ತಂದೆ ಬಿ. ಕಂಚೀಗೌಡರದು ಪೋಲೀಸ್ ಇಲಾಖೆಯ ನೌಕರಿಯಾದ ಕಾರಣ ಊರಿಂದೂರಿಗೆ ವರ್ಗಾವಣೆಯಾಗುತ್ತಿದ್ದಂತೆ ಗಂಗಾಚರಣ್ ಸಹ ಊರೂರು ನೋಡುತ್ತಿದ್ದ. ವಿವಿಧ ಊರುಗಳಲ್ಲಿ ಕ್ಯಾಂಪ್ ಹಾಕಿ ಪ್ರದರ್ಶನ ಕೊಡುತ್ತಿದ್ದ ಗುಬ್ಬಿ ಕಂಪನಿ, ಚಿಂದೋಡಿ ವೀರಪ್ಪನವರ ಕಂಪನಿ, ಮುಂತಾದವು ಪ್ರದರ್ಶಿಸುತ್ತಿದ್ದ ನಾಟಕಗಳನ್ನು ನೋಡುತ್ತ ಬೆಳೆದ ಗಂಗಾಚರಣ್‌ಗೆ ರಂಗಭೂಮಿಯ ಕಡೆ ಒಲವು ಬಲವತ್ತಾಗಿ ಸ್ವತಃ ಗೆಳೆಯರೊಂದಿಗೆ ನಾಟಕ ತಂಡಗಳನ್ನು ಹುಟ್ಟು ಹಾಕಿದರು. ಕೊಣನೂರಿನಲ್ಲಿ ಮಿತ್ರವೃಂದ, ಹಾಸನದಲ್ಲಿ ಸುಂದರವಾಣಿ ಮುಂತಾದ ತಂಡಗಳು ಕುಡಿಯೊಡೆದು ಬೆಳೆದವು. 1969–70ರಲ್ಲಿ ಬೆಂಗಳೂರಿನಲ್ಲಿದ್ದಾಗ ವಿವೇಕ ವೇದಿಕೆ ರಂಗದಲ್ಲಿ ರೈತಜೀವಿ, ಜೋಕುಮಾರ ಸ್ವಾಮಿಯಂತಹ ನಾಟಕಗಳಲ್ಲಿ ಸಾವಿರಾರು ಬಾರಿ ಸ್ಟೇಜು ಹತ್ತಿದವರು. 1980–81ರಲ್ಲಿ ಹಾಸನಕ್ಕೆ ಮರಳಿದ ಗಂಗಾಚರಣ್‌ರವರು ಭೂಮಿ ಕಲಾರಂಗ, ಸಂಗೀತ ಮೇಳಗಳಂತಹ ತಂಡಗಳನ್ನು ಬೆಳೆಸಿ ನಾಟಕ ಸಾಹಿತಿಯಾಗಿ, ಹಾಡುಗಾರನಾಗಿ, ನಟನಾಗಿ ನಿರ್ದೇಶಕನಾಗಿ, ಸಂಘಟಕನಾಗಿ, ಪ್ರಚಾರಕನಾಗಿ ತಮ್ಮ ಅವಿಸ್ಮರಣೀಯ ಕಾಣಿಕೆ ನೀಡಿದರು. 1995–96ರಲ್ಲಿ ಸರ್ಕಾರ ಇವರ ರಂಗ ಪರಿಶ್ರಮವನ್ನು ಗುರುತಿಸಿ ನಾಟಕ ಅಕಾಡೆಮಿಯ ಸದಸ್ಯನಾಗಿ ಆಯ್ಕೆ ಮಾಡಿದಾಗ ಆ ಸಂದರ್ಭದಲ್ಲಿ ಹಾಸನ ಜಿಲ್ಲೆಯಲ್ಲಿ ಸಾಕಷ್ಟು ನಾಟಕೋತ್ಸವಗಳನ್ನು ಮಾಡಿಸಿದ್ದೇ ಅಲ್ಲದೆ ಹಾಸನ ಪ್ರದೇಶದ ಅನೇಕ ಕಲಾವಿದರನ್ನು ಸತ್ಕರಿಸಿದ ಹೆಗ್ಗಳಿಕೆ ಶ್ರೀ ಗಂಗಾಚರಣ್ ಅವರಿಗೆ ಸಲ್ಲುತ್ತದೆ.



## ಬಿ. ಜಯಪ್ರಕಾಶಗೌಡ

ಕನ್ನಡ ಎಂ.ಎ. ಪದವೀಧರರಾದ ಶ್ರೀ ಜಯಪ್ರಕಾಶಗೌಡರು 15.2.1949ರಂದು ಶ್ರೀ ಬೋರೇಗೌಡ ಪುಟ್ಟಲಿಂಗಮ್ಮ ದಂಪತಿಯ ಮಗನಾಗಿ ದೊಡ್ಡಬಾಣಸವಾಡಿ ಗ್ರಾಮದಲ್ಲಿ (ಮಂಡ್ಯ ತಾಲ್ಲೂಕು) ಹುಟ್ಟಿ ಬೆಳೆದರು. ವೃತ್ತಿಯಲ್ಲಿ ಕಾಲೇಜು ಅಧ್ಯಾಪಕರಾಗಿರುವ ಇವರ ಪ್ರವೃತ್ತಿಗಳು–ಒಲವುಗಳು ಅನೇಕ. ಅವುಗಳಲ್ಲಿ ಮುಖ್ಯವಾದದ್ದು ರಂಗಭೂಮಿ. ವಿದ್ಯಾರ್ಥಿ ದೆಸೆಯಿಂದಲೂ ಮುಂದಾಳ್ತನ ಸ್ವಭಾವ

ಜನ್ಯವಾಗಿದ್ದ ಇವರು ರಂಗಭೂಮಿಯಲ್ಲೂ ಸಂಘಟನೆಯ ಕ್ಷೇತ್ರದಲ್ಲಿ ಹೆಸರುವಾಸಿ. 1976ರಲ್ಲಿ ಪಿ.ಇ.ಎಸ್. ವಿಜ್ಞಾನ ಕಾಲೇಜು ಕಟ್ಟಡ ನಿಧಿಯ ಸಹಾಯಾರ್ಥ ಕುರುಕ್ಷೇತ್ರ ನಾಟಕ ಪ್ರದರ್ಶನ ಏರ್ಪಡಿಸಿ ಸಂಗ್ರಹಿಸಿ ಸಂಸ್ಥೆಗೆ ನೀಡಿದ ಎರಡು ಲಕ್ಷ ರೂಪಾಯಿ ದೇಣಿಗೆ ಅಪೂರ್ವ ದಾಖಲೆ. 1980ರಲ್ಲಿ ಶ್ರೀಯುತರು ಮಂಡ್ಯದಲ್ಲಿ ಗೆಳೆಯರ ಬಳಗ ಸಾಂಸ್ಕೃತಿಕ ಸಂಸ್ಥೆಯನ್ನು ಸ್ಥಾಪಿಸಿ ಮಂಡ್ಯ ಜಿಲ್ಲೆಯಲ್ಲಿ ನಾಟಕ ಚಟುವಟಿಕೆ ಹೆಚ್ಚುವಲ್ಲಿ ಇವರ ಸೇವೆ ಅನುಪಮವಾದುದು.

ನಟರಾಗಿಯಷ್ಟೆ ಅಲ್ಲದೆ ನಾಟಕದ ಇತರ ಕ್ಷೇತ್ರಗಳಲ್ಲೂ ಸಾಕಷ್ಟು ಪರ್‌ಫಾರ್ಮೆನ್ಸ್ ನೀಡಿ 'ಸೈ' ಎನಿಸಿಕೊಂಡ ಶ್ರೀ ಜಯಪ್ರಕಾಶಗೌಡರು ಮಂಡ್ಯಜಿಲ್ಲೆಯ ಮರೆಯಲಾಗದ ಕಲಾಭಿಮಾನಿ, ಸಾಹಿತ್ಯ-ಸಾಂಸ್ಕೃತಿಕ-ರಂಗಭೂಮಿ-ಸಂಘಟನೆ ಹೀಗೆ ಹಲವು ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಗೌಡರಿಗೆ ನೀಡಿರುವ ಗೌರವ ಅಪಾರ. ರಂಗಭೂಮಿಯಷ್ಟೇ ಅಲ್ಲದೆ ಸಮಾಜಸೇವೆ, ಪುಸ್ತಕ ಪ್ರಕಾಶನ, ಜಾನಪದ ಸಂಘಟನೆ – ಇತ್ಯಾದಿ ವಿವಿಧ ಪ್ರಕಾರಗಳಲ್ಲಿ ಆಸಕ್ತರಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀ ಗೌಡರು ಪ್ರಸ್ತುತ ಪಿ.ಇ.ಎಸ್. ವಿಜ್ಞಾನ, ಕಲಾ ಮತ್ತು ವಾಣಿಜ್ಯ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

---



## ಎಸ್. ತಿಮ್ಮಪ್ಪ

74 ವರ್ಷಗಳ ಹಿಂದೆ ಬಳ್ಳಾರಿ ಜಿಲ್ಲೆಯ ಶಿಡಗಿನ ಮೇಳ ಗ್ರಾಮದಲ್ಲಿ ಜನಿಸಿದ ಶ್ರೀ ಎಸ್. ತಿಮ್ಮಪ್ಪನವರು ತಮ್ಮ 12ನೇ ವಯಸ್ಸಿನಿಂದ ತಂದೆ ಗಾದೆಪ್ಪನವರಿಂದ ತಬಲಾ ವಾದನ ಕಲಿಯಲಾರಂಭಿಸಿದರು. ಮುಂದೆ ಆಧೋನಿ ಶಂಕ್ರಣ್ಣನವರು ಮತ್ತು ದಾವಣಗೆರೆಯ ಸಂಗಯ್ಯ ಸ್ವಾಮಿಯವರಲ್ಲಿ ತರಬೇತಿ ಪಡೆದರು.

ತಮ್ಮ ತಾಳವಾದ್ಯ ಪರಿಣತಿಯನ್ನು ಸತತವಾಗಿ ಸುಮಾರು 52 ವರ್ಷಗಳಿಂದ ನಾಟಕಗಳಿಗಾಗಿ ದುಡಿಸಿಕೊಂಡ ಇವರು ಬಳ್ಳಾರಿ ಕಡೆಯ ಕಂಪೆನಿಗಳಿಗೆ ಬಹಳ ಬೇಕಾದ ಕಲಾವಿದ. ಆಂಧ್ರ-ಕರ್ನಾಟಕದ ವಿವಿಧ ಕಂಪೆನಿಗಳಲ್ಲಿ ತಬಲಾವಾದಕರಾಗಿ ಸೇವೆಸಲ್ಲಿಸಿದ್ದೇ ಅಲ್ಲದೆ ನಾಡಿನ ಹೆಸರಾಂತ ಗಾಯಕರಿಗೆ, ಗಮಕಿಗಳಿಗೆ ಮುಖ್ಯವಾಗಿ ಶ್ರೀ ಜೋಳದರಾಶಿ ದೊಡ್ಡನಗೌಡರಿಗೆ ಸುಮಾರು 25 ವರ್ಷ-ಕಾರ್ಯಕ್ರಮಗಳಲ್ಲಿ ತಬಲಾ ಸಾಥಿ ನೀಡಿದ್ದಾರೆ. ಇಷ್ಟಕ್ಕೆ ತೃಪ್ತರಾಗದ ಈ ಕಲಾವಿದ ತಮ್ಮ ಕಲಿಕೆಯ ಸಂಪತ್ತನ್ನು ತಮ್ಮ ಮುಂದಿನ ಪೀಳಿಗೆಗೆ ಧಾರೆಯೆರೆದು ಪರಿಣತ ಶಿಷ್ಯವರ್ಗವನ್ನು ಸೃಷ್ಟಿಸಿದ್ದಾರೆ.

ತಮ್ಮ ಇಳಿವಯಸ್ಸಿನಲ್ಲಿ ಈಗ ಬಳ್ಳಾರಿಯ ಕೌಲ್ ಬಜಾರಿನಲ್ಲಿ ವಾಸಿಸುತ್ತಿರುವ ಈ ಹಿರಿಯ ಜೀವಕ್ಕೆ ಅವರ ಸೇವೆಯನ್ನು ಪರಿಗಣಿಸಿ ಸರಕಾರ 1984ರಿಂದ ಮಾಸಾಶನ ನೀಡುತ್ತಿದೆ.

---



## ಸಿ.ಎಂ. ತಿಮ್ಮಯ್ಯ

ಸುಮಾರು 22 ವರ್ಷಗಳಿಂದ ರಂಗದ ಗೀಳು ಹಚ್ಚಿಕೊಂಡಿರುವ ಶ್ರೀ ತಿಮ್ಮಯ್ಯನವರಿಗೆ ಈಗ 47 ವರ್ಷ ವಯಸ್ಸು. ಸಿ.ಪಿ. ಮುತ್ಯಾಲಪ್ಪ – ಕದರಮ್ಮ ದಂಪತಿಗಳಿಗೆ 23-3-1955ರಲ್ಲಿ ಜನಿಸಿದ ಶ್ರೀಯುತರು ಶಾಲಾ ದಿನಗಳಿಂದಲೇ ಬಣ್ಣದ ಬೆನ್ನು ಹತ್ತಿದವರು. ಬಿ.ಎಸ್‌ಸಿ. ಪದವೀಧರ ತಿಮ್ಮಯ್ಯನವರು ನಿರ್ದೇಶಕರಾಗಿ, ನಟರಾಗಿ, ಸಂಘಟಕರಾಗಿ ರಂಗಭೂಮಿಯಲ್ಲಿ ಸಾಕಷ್ಟು ಸಾಧನೆ ಮಾಡಿರುವ ಪ್ರತಿಭಾನ್ವಿತ.

'ಎ.ಕೆ.ಎಂ. ಕಲಾವಿದರು' ಸಂಸ್ಥೆಯನ್ನು ಆರಂಭಿಸಿದ ಶ್ರೀ ತಿಮ್ಮಯ್ಯನವರು ಇಪ್ಪತ್ತೆರಡು ವರ್ಷಗಳಿಂದ ಹೊರನಾಡುಗಳಲ್ಲಿ ಸತತವಾಗಿ ಡಾ. ಬಿ.ಆರ್. ಅಂಬೇಡ್ಕರ್ ಸ್ಮಾರಕ ಅಖಿಲ ಭಾರತ ಕನ್ನಡ ನಾಟಕ ಸ್ಪರ್ಧೆಗಳನ್ನು ಏರ್ಪಡಿಸುತ್ತಾ ಬಂದಿದ್ದಾರೆ. ತಿಮ್ಮಯ್ಯನವರು ಅಭಿನಯಿಸಿದ ಮತ್ತು ನಿರ್ದೇಶಿಸಿದ ನಾಟಕಗಳ ಸಂಖ್ಯೆ ಐವತ್ತಕ್ಕೂ ಮೇಲ್ಪಟ್ಟಿದೆ. ಡಾ. ಚಂದ್ರಶೇಖರ ಕಂಬಾರರ 'ಸಂಗ್ಯಾ ಬಾಳ್ಯಾ'ವನ್ನು ಇಪ್ಪತ್ತೆಂಟು ಬಾರಿ ಪ್ರದರ್ಶನಗೊಳಿಸಿದ ಹೆಮ್ಮೆ ಇವರದ್ದು. 1984ರಿಂದ ಇಲ್ಲಿಯವರೆಗೆ ಶ್ರೀಯುತರಿಗೆ ಉತ್ತಮ ನಿರ್ದೇಶನ ಹಾಗೂ ಉತ್ತಮ ಅಭಿನಯಗಳಿಗಾಗಿ ರಾಜ್ಯ ಮತ್ತು ರಾಷ್ಟ್ರಮಟ್ಟದ ಹತ್ತು ಹಲವಾರು ಬಹುಮಾನಗಳು ಮತ್ತು ಪ್ರಶಸ್ತಿಗಳು ಲಭಿಸಿವೆ.

ದೆಹಲಿ ಕರ್ನಾಟಕ ಭವನದಲ್ಲಿ 22 ಮತ್ತು 23 ಮಾರ್ಚ್ 1999ರಲ್ಲಿ ಸತತ 30 ಘಂಟೆಗಳ ಕಾಲ ಅಭಿನಯಿಸಿದ ಸಾಧಕ ಈತ. ಬೆಂಗಳೂರಿನ ಜಗಜೀವನರಾಂ ನಗರ ನಿವಾಸಿ ಶ್ರೀ ಸಿ.ಎಂ. ತಿಮ್ಮಯ್ಯನವರು ಅನೇಕ ಸಂಘ ಸಂಸ್ಥೆಗಳಿಂದ ತಮ್ಮ ಸಾಧನೆಗಳಿಗಾಗಿ ಸನ್ಮಾನಿತರಾಗಿದ್ದಾರೆ.

---



## ಬಸಪ್ಪ ದಂಡಿನ ಕಲ್ಲೂರ

10–9–1929ರಲ್ಲಿ ಜನಿಸಿ ಈಗ ಎಪ್ಪತ್ತೆರಡರ ಬಾಳ ಸಂಜೆಯಲ್ಲಿರುವ ಶ್ರೀ ದಂಡಿನ ಅವರ ರಂಗಭೂಮಿಯ ನಂಟು ಶುರುವಾದಾಗ ಅವರಿಗೆ ಹದಿನೆಂಟು. ಗೋಕಾಕದ ಶ್ರೀ ಶಾರದ ಸಂಗೀತ ನಾಟಕ ಮಂಡಳಿಯಲ್ಲಿ ತೊಡಗಿದ ಇವರ ರಂಗಯಾತ್ರೆ ಸತತ 54 ವರ್ಷ ಅನೂಚಾನವಾಗಿ ನಡೆಯುತ್ತ ಬಂದಿದೆ.

1961ರಲ್ಲಿ ಶ್ರೀ ಹಿರಣ್ಣಯ್ಯ ಮಿತ್ರ ಮಂಡಲಿ ಸೇರಿ ಅಲ್ಲಿ ಎರಡು ವರ್ಷ, 1963ರಲ್ಲಿ ಕಮತಗಿಯ ಶ್ರೀ ಹುಚ್ಚೇಶ್ವರ ನಾಟ್ಯ ಸಂಸ್ಥೆಗೆ ಸೇರಿ ಅಲ್ಲಿ ಎರಡು ವರ್ಷ ದುಡಿದ ನಂತರ ಶ್ರೀ ದಂಡಿನ ಅವರು 1966ರಲ್ಲಿ ಕಲ್ಲೂರಿನಲ್ಲಿ ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘವನ್ನು ಸ್ವತಃ ಆರಂಭಿಸಿ ಇಪ್ಪತ್ತೈದು ವರ್ಷಗಳ ಕಾಲ ನಡೆಸಿದರು. ಮುಂದೆ ಈ ಸಂಸ್ಥೆ ಅನಿವಾರ್ಯವಾಗಿ ಮುಚ್ಚಲ್ಪಟ್ಟು ಶ್ರೀಯುತರು ಮುಂದೆ ವಿವಿಧ ಸಂಸ್ಥೆಗಳಲ್ಲಿ ದುಡಿದರು. 1987ರಲ್ಲಿ ಇವರು ಕಲ್ಲೂರಿನಲ್ಲಿ ಶ್ರೀ ಸಿದ್ಧಿ ವಿನಾಯಕ ನಾಟ್ಯ ಸಂಸ್ಥೆ ಆರಂಭಿಸಿದರು. ಒಮ್ಮೆ ನಾಟಕ ಆಡುತ್ತಿರುವಾಗ ಪ್ರಕೃತಿ ಪ್ರಕೋಪವಶಾತ್ ಮಳೆಗೆ ಇಡೀ ರಂಗಮಂದಿರ ಮುರಿದು ಕಲಾವಿದರು ಆಸ್ಪತ್ರೆಗೆ ಸೇರಿ ಯಜಮಾನರ ಕೈ–ಜೇಬು ಬರಿದಾಯಿತು. ಸದ್ಯ ದಂಡಿನ ಅವರು ಹದಿನಾಲ್ಕು ವರ್ಷಗಳಿಂದ ಶಾಲೆ–ಕಾಲೇಜುಗಳಲ್ಲಿ ಕಾರ್ಯಕ್ರಮ ನಡೆಸುತ್ತ ಬಂದ ಹಣದಲ್ಲಿ ಬದುಕು ಸಾಗಿಸುತ್ತಿದ್ದಾರೆ.

ವಾರ್ಧಕ್ಯದಲ್ಲಿ ಅರ್ಬುದ ರೋಗಕ್ಕೆ ತುತ್ತಾಗಿರುವ ಶ್ರೀಯುತರು ರಂಗಭೂಮಿಯಲ್ಲಿ ತೊಡಗಿದ ಹೋರಾಟವನ್ನು ಜೀವನ ನಾಟಕದಲ್ಲೂ ಮುಂದುವರಿಸಿದ್ದಾರೆ. ಅನಿವಾರ್ಯವಾಗಿ, ರಂಗಭೂಮಿಗಾಗಿ ತನು–ಮನ–ಧನ ಎಲ್ಲವನ್ನೂ ಅರ್ಪಿಸಿದ ಹಿರಿಯ ರಂಗ ಚೇತನ ಪ್ರಶಸ್ತಿ ಪ್ರಕಟವಾದ ಕೆಲದಿನಗಳಲ್ಲಿಯೆ ದೈವಾಧೀನರಾದುದು ದುಃಖದ ಸಂಗತಿ.

---



## ಎ. ಮುರಿಗೆಪ್ಪ

ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡದಲ್ಲಿ ವಿದ್ಯಾರ್ಥಿ ಕಲ್ಯಾಣ ವಿಭಾಗದ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿರುವ ಡಾ. ಮುರಿಗೆಪ್ಪನವರು ಬೋಧನೆಯನ್ನು ವೃತ್ತಿಯನ್ನಾಗಿಸಿಕೊಂಡವರು. ಇದರ ಜತೆಗೆ ರಂಗಭೂಮಿಯನ್ನೂ ತನ್ನ ಅಧ್ಯಯನ ವಸ್ತುವನ್ನಾಗಿಸಿಕೊಂಡ ಮುರಿಗೆಪ್ಪನವರಿಗೆ ಮೊದಲಿನಿಂದಲೂ ನಾಟಕದ ಬಗ್ಗೆ ಒಲವು. 1968ರಲ್ಲಿ ಶ್ರೀರಂಗರ ಪ್ರಪಂಚ ಪಾಣಿಪತ್ತು ನಾಟಕದ ಮೂಲಕ ವೇದಿಕೆ ಹತ್ತಿದ

ಮುರಿಗೆಪ್ಪನವರು ಸಾಗರದ 'ಉದಯ ಕಲಾವಿದರು' ಸಂಸ್ಥೆಯಲ್ಲಿ 5 ವರ್ಷ ದುಡಿದರು. ಕರ್ನಾಟಕದ ಸಾಕಷ್ಟು ಜಿಲ್ಲೆಗಳಲ್ಲಿ ಸಂಘದ ಪ್ರಚಾರ ನಾಟಕಗಳಲ್ಲಿ ಭಾಗವಹಿಸಿದರು.

ಈ ಮಧ್ಯೆ 1971ರಲ್ಲಿ ಧಾರವಾಡದಲ್ಲೂ ತಮ್ಮ ಕಾರ್ಯಕ್ಷೇತ್ರ ವಿಸ್ತರಿಸಿಕೊಂಡ ಮುರಿಗೆಪ್ಪನವರು ನೇಪಥ್ಯ ಕ್ಷೇತ್ರದಲ್ಲೂ ತಮ್ಮನ್ನು ತೊಡಗಿಸಿಕೊಂಡರು. ಡಾ. ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠದಲ್ಲಿ ಅಧ್ಯಕ್ಷರಾಗಿದ್ದು ನಾಟಕ ಚಟುವಟಿಕೆಗಳಲ್ಲಿ ತೀವ್ರವಾಗಿ ಶ್ರಮದಾನ ಮಾಡಿದರು. ಜತೆಗೆ ಚಂದ್ರಶೇಖರ ಪಾಟೀಲ, ಸಿದ್ದಲಿಂಗ ಪಟ್ಟಣಶೆಟ್ಟಿ, ಪ್ರೊ. ಸಂಪಿಗೆ ತೋಂಟದಾರ್ಯ ಮುಂತಾದವರೊಡನೆ ಸೇರಿ ಅಂತರಂಗ ನಾಟಕ ಸಂಸ್ಥೆಯನ್ನು ಧಾರವಾಡದಲ್ಲಿ ಆರಂಭಿಸಿ ಸಾಕಷ್ಟು ನಾಟಕಗಳಲ್ಲಿ ನಟನಾಗಿ, ನಿರ್ದೇಶಕನಾಗಿ, ಸಂಘಟಕನಾಗಿ, ನೇಪಥ್ಯ ಕರ್ಮಿಯಾಗಿ ಹೀಗೆ ವಿವಿಧ ರೀತಿಗಳಲ್ಲಿ ದುಡಿದರು.

ಆರ್ಥರ್ ಅಧಮಾವ್‌ನ 'ಪ್ರೊಫೆಸರ್ ಟಕಿನ' ಮತ್ತು ಫರ್ನಾಂಡೊ ಅರಬಾಲ್ ಅವರ 'ದಿ ಟೂ ಎಕ್ಸಿಕ್ಯೂಷನರ್ಸ್' ನಾಟಕಗಳನ್ನು ಅನುವಾದಿಸಿದ್ದಾರೆ.

ರಾಜ್ಯಮಟ್ಟದ ವಿಚಾರ ಸಂಕಿರಣಗಳಲ್ಲಿ ಪ್ರಬಂಧ ಮಂಡನೆ, ರಂಗಭೂಮಿ ಕುರಿತು ಲೇಖನಗಳ ಪ್ರಕಟಣೆ, ಶಿಬಿರಗಳಲ್ಲಿ ಉಪನ್ಯಾಸ, ನಾಟಕ ತರಬೇತಿ ಹಾಗೂ ಪ್ರದರ್ಶನಗಳಿಗೆ ನೆರವು–ಹೀಗೆ ರಂಗಭೂಮಿಗೆ ಇವರ ಕೊಡುಗೆ ಅಮೂಲ್ಯ ಮತ್ತು ಅಪಾರ.



## ಎನ್.ಎಸ್. ಮೂರ್ತಿ

10–2–1929ರಲ್ಲಿ ಜನಿಸಿದ ಶ್ರೀ ಎನ್.ಎಸ್. ಮೂರ್ತಿಯವರಿಗೆ ಈಗ 73 ವರ್ಷ ವಯಸ್ಸು ; ಇದರಲ್ಲಿ ಅರವತ್ತು ವರ್ಷಗಳು ರಂಗಭೂಮಿಗಾಗಿ ಸವೆದಿವೆ, ಕಳೆದಿವೆ. ಈ ಕಲಾವಿದನ ವೃತ್ತಿಯೂ ರಂಗಭೂಮಿ, ಪ್ರವೃತ್ತಿಯೂ ರಂಗಭೂಮಿ.

ಹದಿನಾಲ್ಕು ವರ್ಷದ ಬಾಲಕನಿದ್ದಾಗಲೇ ಮೂರ್ತಿಯವರು ಮೈಸೂರಿನ 'ಸರ್ವೋದಯ ನಾಟಕ ಮಂಡಲಿ'ಗೆ ಸೇರಿ ಧರ್ಮರತ್ನಾಕರ ನಾಟಕದ ಮೂಲಕ ಬಾಲನಟನಾಗಿ ಬಣ್ಣದ ಬದುಕಿಗೆ ಪದಾರ್ಪಣ ಮಾಡಿದರು. ಢಿಕ್ಕಿ ಮಾಧವರಾಯರೊಂದಿಗೆ ಸಂಸಾರ ನೌಕೆ, ಡಾ. ರಾಜ್‌ಕುಮಾರ್‌ರೊಂದಿಗೆ ಎಚ್ಚಮನಾಯಕ, ಮುಸರಿ ಕೃಷ್ಣಮೂರ್ತಿಯವರೊಂದಿಗೆ ಮಕ್ಮಲ್ ಟೋಪಿ, ನರಸಿಂಹರಾಜುರವರೊಂದಿಗೆ ಸದಾರಮೆ... ಹೆಸರಿಸುತ್ತ ಹೋದರೆ ಇನ್ನೂ ಹಲವಾರು.

ನಂತರ ಹಿರಣ್ಣಯ್ಯ ಮಿತ್ರ ಮಂಡಳಿಯಲ್ಲೂ ಸಾಕಷ್ಟು ವರ್ಷಗಳ ಕಾಲ ಸೇವೆ ಸಲ್ಲಿಸಿದ ನಂತರ ಶ್ರೀಯುತರು ನಾರಾಯಣದಾಸರ ಚಾಮುಂಡೇಶ್ವರಿ ಕಂಪೆನಿಯಲ್ಲಿ ಸೇರಿ ಪೌರಾಣಿಕ ನಾಟಕಗಳಲ್ಲೂ ಅಭಿನಯಿಸಿದರು. ಕಂಪೆನಿ ಬದುಕಿನ ಸಿಹಿಕಹಿ ಅನುಭವಿಸಿ ನಂತರ ತುಮಕೂರಿಗೆ ಬಂದು ನೆಲೆಸಿದರು.

ವೈ.ಎನ್. ಮೂರ್ತಿಯವರಿಂದ ಪ್ರಸಾಧನ ಕಲೆಯನ್ನು ಕಲಿತು ನುರಿತ ಪ್ರಸಾಧನ ಕಲಾವಿದನಾಗಿ ತುಮಕೂರು ಜಿಲ್ಲೆಯಲ್ಲಿ ಹೆಸರು ಗಳಿಸಿದ ಶ್ರೀ ಮೂರ್ತಿಯವರು ರಂಗಸಜ್ಜಿಕೆಯಲ್ಲೂ ಪ್ರವೀಣ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಸಾಕಷ್ಟು ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಯಶಸ್ವಿ ಕಲಾವಿದರು ಶ್ರೀ ಮೂರ್ತಿಯವರು.

ಇವರು ಪಡೆದ ಅಭಿನಂದನಾ ಪತ್ರಗಳು, ಸನ್ಮಾನ ಪತ್ರಗಳು ಹಾಗೂ ಪ್ರಶಸ್ತಿ ಪತ್ರಗಳು ಹಲವಾರು. ಈತ ಕಲಾವಿದನಷ್ಟೇ ಅಲ್ಲ, ದಾರಿ ತಪ್ಪಿ ಬಂದ ಅನೇಕ ಕಲಾವಿದರಿಗೆ ಆಶ್ರಯ ದಾತನಾದ ಹೃದಯವಂತ ಕೂಡ.

## ಎಚ್.ಆರ್. ರಮೇಶ್



6–20–1958ರಲ್ಲಿ ಜನಿಸಿದ ಶ್ರೀ ರಮೇಶ್ ಅವರು ವೃತ್ತಿಯಲ್ಲಿ ಸಾಣೆ ಹಳ್ಳಿಯ ಶ್ರೀ ಗುರುಪಾದೇಶ್ವರ ಪ್ರೌಢಶಾಲೆಯಲ್ಲಿ ಸೇವಕರು. ಭೂಮಿಯ ಕೃಷಿ ಮತ್ತು ರಂಗಭೂಮಿಯ ಕೃಷಿ ಇವರ ಒಲವಿಗೆ ಪಾತ್ರವಾದ ಪ್ರವೃತ್ತಿ. ಹದಿಮೂರು–ಹದಿನಾಲ್ಕನೇ ವಯಸ್ಸಿನಿಂದಲೂ ಶಾಲಾ ನಾಟಕಗಳಲ್ಲಿ ಪಾತ್ರ ವಹಿಸುವುದರ ಮೂಲಕ ರಂಗದಲ್ಲಿ ರಂಗು ಕಂಡವರು ರಮೇಶ್. ಮುಂದೆ ಬೆಳೆಯುತ್ತ ಬೆಳೆಯುತ್ತ ಇವರು ಅಭಿನಯಕ್ಕಷ್ಟೇ ತಮ್ಮನ್ನು ಸೀಮಿತಗೊಳಿಸದೆ ನಾಟಕಕ್ಕೆ ಪೂರಕಗಳಾದ ಧ್ವನಿ ಮತ್ತು ಬೆಳಕು ಸಂಯೋಜನೆಯ ಕ್ಷೇತ್ರದಲ್ಲೂ ಅಡಿಯಿರಿಸಿ ಸೈ ಎನಿಸಿಕೊಂಡರು.

ವಿವಿಧ ರೀತಿಯ ಪಾತ್ರಗಳಲ್ಲಿ ಸಲೀಸಾಗಿ ಅಭಿನಯಿಸಿ ಜನರ ಮೆಚ್ಚುಗೆ ಗಳಿಸಿದ ರಮೇಶ್ ಅವರು ಅಭಿನಯಿಸಿದ ನಾಟಕಗಳಲ್ಲಿ ಹೆಸರಿಸಬಹುದಾದದ್ದು ಅನೇಕ. ಅವುಗಳಲ್ಲಿ ಕೆಲವೇ ಕೆಲವೆಂದರೆ–ಬಸ್‌ಕಂಡಕ್ಟರ್, ಗೌಡರ ಗದ್ದ, ಸಂಗ್ಯಾ–ಬಾಳ್ಯಾ, ಕದಡಿದ ನೀರು, ನಾಗಮಂಡಲ, ಧರ್ಮಪುರಿಯ ಶ್ವೇತ ವೃತ್ತ, ತಿರುಕನ ಕನಸು, ಸೂಳೆಸಂಕವ್ವೆ, ಸಂತ ಶಿಶುನಾಳ ಷರೀಫ, ಕಾಕನ ಕೋಟೆ ಇತ್ಯಾದಿ. ಪ್ರಸ್ತುತ ಶ್ರೀಯುತರು ಸಾಣೆಹಳ್ಳಿಯ ಶ್ರೀ ಶಿವಕುಮಾರ ಹವ್ಯಾಸಿ ಕಲಾ ಸಂಘ (ರಿ)ದಲ್ಲಿ ಸಕ್ರಿಯ ಭಾಗಿಯಾಗಿ ದುಡಿಯುತ್ತಿದ್ದಾರೆ. ಇಪ್ಪತ್ತೈದರ ಹರೆಯದಲ್ಲಿ ಅಜ್ಜನ ಪಾತ್ರದಲ್ಲಿ ರಮೇಶ್‌ರನ್ನು ನೋಡಿದ ಸಾಣೆಹಳ್ಳಿಯ ಮಕ್ಕಳು ಈಗಲೂ ಅವರನ್ನು ಪ್ರೀತಿಯಿಂದ ಕರೆಯುವುದು 'ಅಜ್ಜಾ', ಎಂದೇ. ವೃತ್ತಿ ಪ್ರವೃತ್ತಿಗಳೆರಡನ್ನೂ ಸಮಾನವಾಗಿ ಕಾಣುತ್ತ ಕಾಯಕ ನಡೆಸುತ್ತಿರುವ ರಮೇಶ್ ಒಬ್ಬ ರಂಗಶರಣ.

---

## ಜೆ. ರವೀಂದ್ರ



ಕರ್ನಾಟಕ ಮೀನುಗಾರಿಕೆ ಅಭಿವೃದ್ಧಿ ನಿಗಮದ ನಿವೃತ್ತ ಯಾಂತ್ರಿಕ ಸಹಾಯಕ ಶ್ರೀ ಜೆ. ರವೀಂದ್ರ ಈಗ 62ರ ಯುವಕ. ಡಿಸೆಂಬರ್ 9, 1939 ರಲ್ಲಿ ಜನಿಸಿದ ಇವರು 'ಕೈದಾರೆ' ಎಂಬ ತುಳುನಾಟಕದಿಂದ 1962ರಲ್ಲಿ ಪ್ರವೇಶಮಾಡಿದವರು. ಮುಂದೆ ಕನ್ನಡ ನಾಟಕಗಳಲ್ಲೂ ಅಭಿನಯಿಸಿದರು.

ಬರಿಯ ಅಭಿನಯದಲ್ಲಷ್ಟೇ ತೃಪ್ತರಾಗದ ರವೀಂದ್ರರವರು ನಿರ್ದೇಶನ, ನಾಟಕರಚನೆ, ನಾಟಕ ತರಬೇತಿ ನೀಡುವುದು ಇವೆಲ್ಲದರಲ್ಲೂ ಸಕ್ರಿಯವಾಗಿ ಶ್ರಮವಹಿಸಿ ರಂಗಭೂಮಿಗೆ ತಮ್ಮ ಅಮೂಲ್ಯ ಕೊಡುಗೆ ನೀಡಿದ್ದಾರೆ.

ಕನ್ನಡ ಮತ್ತು ತುಳು ಭಾಷೆಗಳಲ್ಲಿ ಒಟ್ಟು 1500ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯ ಮತ್ತು ನಿರ್ದೇಶನಗಳನ್ನು ಮಾಡಿದ ಗರಿಮೆ ರವೀಂದ್ರರದು. ಹತ್ತು ಹಲವಾರು ನಾಟಕ ಸಂಸ್ಥೆಗಳಲ್ಲಿ ತಮ್ಮ ಸೇವೆ ಸಲ್ಲಿಸಿರುವ ಶ್ರೀ ರವೀಂದ್ರರು ಸತತವಾಗಿ ನಡೆಸಿಕೊಂಡು ಬಂದಿರುವ ವಿಶೇಷ ಕಾರ್ಯವೆಂದರೆ ಪ್ರತಿವರ್ಷ ದಕ್ಷಿಣ ಕನ್ನಡ ಜಿಲ್ಲೆಯ ಶಾಲಾ ಕಾಲೇಜಿನ ಹತ್ತು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ನಾಟಕ ತರಬೇತಿ ಶಿಬಿರವನ್ನು ಉಚಿತವಾಗಿ ನಡೆಸುವುದು.

ಇಂತಹ ಮಹತ್ತರ ಸಾಧನೆಗಳ ಸಾಧಕ ಶ್ರೀ ಜೆ. ರವೀಂದ್ರರವರನ್ನು ಮಂಗಳೂರಿನ ಸಾರ್ವಜನಿಕರು 1997ರಲ್ಲಿ 'ಕಲಾವಲ್ಲಭ' ಎಂಬ ಅಕ್ಷರಶಃ ಸಾರ್ವಜನಿಕರಿಂದಲೇ ಸೂಚಿಸಲ್ಪಟ್ಟ ಬಿರುದನ್ನು ನೀಡಿ ಗೌರವಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಇವರಿಗೆ ಉತ್ತಮ ರಂಗ ನಿರ್ದೇಶನಕ್ಕಾಗಿ ಪ್ರಶಸ್ತಿ ನೀಡಿದೆ. ಮಂಗಳೂರಿನಲ್ಲಿ ಈಗ ವಾಸವಾಗಿರುವ ಶ್ರೀ ರವೀಂದ್ರರವರು ವೃತ್ತಿಯಿಂದ ನಿವೃತ್ತರಾದರೂ ಪ್ರವೃತ್ತಿಯಿಂದ ನಿವೃತ್ತರಾಗಿಲ್ಲ. ಈಗಲೂ ಅವರು ಸಕ್ರಿಯ ರಂಗಕರ್ಮಿ.

---



## ಎನ್.ಕೆ. ರಾಮಕೃಷ್ಣ

ಪ್ರಸಾಧನ ಕಲೆಗೆ ಭೌಗೋಳಿಕ, ಧಾರ್ಮಿಕ ಅಥವಾ ಭಾಷೆ... ಈ ರೀತಿಯ ಯಾವ ಎಲ್ಲೆಯೂ ಇಲ್ಲ. ಹಾಗೆಯೇ ಪ್ರಸಾಧನ ಕಲಾವಿದನಿಗೂ ಉತ್ತಮ ಗುಣಮಟ್ಟದ ಪ್ರಸಾಧನ ಕಲಾವಿದ ಸರ್ವತ್ರ ಪ್ರೀತಿಪಾತ್ರನಾಗುತ್ತಾನೆ. ಗೆಳೆಯರ ನಡುವೆ 'ರಾಮಣ್ಣ' ಎಂದೇ ಗುರುತಿಸಲ್ಪಡುವ ಶ್ರೀ ಎನ್.ಕೆ. ರಾಮಕೃಷ್ಣ ಇಂತಹ ಒಬ್ಬ ಅಪರೂಪದ ವ್ಯಕ್ತಿ.

ವಯಸ್ಸಿನಲ್ಲೀಗ ಅರ್ಧ ಶತಕ ಪೂರೈಸಿರುವ ರಾಮಣ್ಣನ ರಂಗ ಪ್ರವೇಶವಾದದ್ದು ಎಲ್ಲರಂತೆ ನಟನಾಗಬೇಕೆಂಬ ಉದ್ದೇಶದಿಂದಲೇ. ಕಾಲೇಜಿನಲ್ಲಿ ಅಭಿನಯದೊಂದಿಗೆ ಮೇಕಪ್ ಕಲೆಯನ್ನೂ ಪ್ರಾಕ್ಟಿಸ್ ಮಾಡುತ್ತಿದ್ದ ಈತ 1969–70ರಲ್ಲಿ ಬಿ.ವಿ. ಕಾರಂತರ ನೇತೃತ್ವದಲ್ಲಿ ನಡೆದ ರಂಗಶಿಬಿರದಲ್ಲಿ ಪಾಲ್ಗೊಂಡರು. ನಂತರ ಮೇಕಪ್ ನಾಣಿಯವರಲ್ಲಿ ಪ್ರಸಾಧನ ಕಲೆಯನ್ನು ತರಬೇತಿ ಪಡೆದ ರಾಮಕೃಷ್ಣ ಅವರು ಮುಂದೆ ಇದನ್ನೇ ಪ್ರಧಾನ ಚಟುವಟಿಕೆ ಮತ್ತು ಉದ್ಯೋಗವನ್ನಾಗಿ ಮಾಡಿಕೊಂಡು ದುಡಿಯುತ್ತಿದ್ದಾರೆ. ಆದರೆ ಅಭಿನಯ ಕೈಬಿಟ್ಟಿಲ್ಲ. 'ಹರಕೆಯಕುರಿ', 'ಎಲ್ಲರಂಥವನಲ್ಲ ನನಗಂಡ' ದಂತಹ ನಾಟಕಗಳಲ್ಲಿ ಸಮರ್ಥ ಅಭಿನಯವನ್ನೂ ನೀಡಿದ್ದಾರೆ. ಹಿನ್ನೆಲೆಯಲ್ಲಿ ರಂಗಸಜ್ಜಿಕೆ ತಯಾರಿಯಲ್ಲೂ ಶ್ರಮದಾನ ಮಾಡಿದ್ದಾರೆ. ಮಕ್ಕಳ ನಾಟಕಗಳ ಕ್ಷೇತ್ರದಲ್ಲಿ ಪ್ರೇಮಾಕಾರಂತ ಮತ್ತು ಬಿ. ಜಯಶ್ರೀಯವರ ಮುಂದಾಳ್ತನದಲ್ಲಿ ದುಡಿದ ಇವರ ಕೊಡುಗೆ ಗಣನೀಯ.

ಇವರು ಪ್ರಸಾಧನ ಪರಿಣತಿಯಿಂದಾಗಿ ನಾಟಕಗಳಲ್ಲಷ್ಟೇ ಅಲ್ಲದೆ ಸಿನಿಮಾ ಮತ್ತು ಟಿ.ವಿ. ಗಳಲ್ಲೂ ವರ್ಣರಚಿತ ಕಾರ್ಯಗಳನ್ನು ಮಾಡಿದ್ದಾರೆ, ಮಾಡುತ್ತಿದ್ದಾರೆ. ಕಂಡು, ಕೇಳಿ, ಓದಿ ತಿಳಿದು ಪ್ರಾವೀಣ್ಯತೆ ಗಳಿಸಿರುವ ರಾಮಣ್ಣ ಉರುಫ್ ಮೇಕಪ್ ರಾಮಕೃಷ್ಣ ಅಲಿಯಾಸ್ ಎನ್.ಕೆ. ರಾಮಕೃಷ್ಣ ಎಲ್ಲರ ಮುಖಗಳನ್ನು ಪಾತ್ರಕ್ಕೆ ಬೇಕಾದಂತೆ ಅರಳಿಸಬಲ್ಲ ಮೇಕಪ್ ಕಲಾವಿದ.





## ಡಾ. ರಾಮಕೃಷ್ಣ ಮರಾಠೆ

ಬೆಳಗಾವಿ ಭಾವುರಾವ್ ಕಾಕತಕರ್ ಮಹಾವಿದ್ಯಾಲಯದಲ್ಲಿ ಹಿರಿಯ ಶ್ರೇಣಿಯ ಕನ್ನಡ ಉಪನ್ಯಾಸಕರಾದ ಶ್ರೀ ಮರಾಠೆಯವರು ಕನ್ನಡದಲ್ಲಿ ಸ್ನಾತಕೋತ್ತರ ಪದವೀಧರ ಮತ್ತು ಡಾಕ್ಟರೇಟ್ ಪಡೆದವರು. ಇವರು ಪಿ.ಎಚ್.ಡಿ.ಗಾಗಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಾದರ ಪಡಿಸಿದ ಮಹಾಪ್ರಬಂಧ 'ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿ'.

ಬಿಜಾಪುರದ ಸಿಂದಗಿ ತಾಲ್ಲೂಕು ದೇವಣ ಗಾಂವದಲ್ಲಿ 25–5–1958ರಲ್ಲಿ ಜನಿಸಿದ ಶ್ರೀ ಮರಾಠೆಯವರು ಅಪರೂಪದ ಕಾವ್ಯ ಸಂಪಾದನೆ ಮಾಡಿದ್ದಾರೆ (ಹರಿಹರನ ನಾಲ್ಕು ರಗಳೆಗಳು, ಅಲ್ಲಮ ಲೀಲೆ). ಡಾಕ್ಟರೇಟ್‌ಗಾಗಿ ಮಂಡಿಸಲಾದ ಮೇಲ್ಕಂಡ ಮಹಾಪ್ರಬಂಧವೇ ಅಲ್ಲದೆ 'ಕೊಣ್ಣೂರ ನಾಟಕ ಕಂಪನಿ' ಎಂಬ ಇನ್ನೊಂದು ಸಂಶೋಧನಾ ಪ್ರಬಂಧ ಮತ್ತು ಕಲಾವಿದ ಬಿ.ಆರ್. ಅರಿಷಿಣ ಗೋಡಿಯವರ ಜೀವನ ಚಿತ್ರಣವನ್ನೂ ಮಾಡಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕರ್ನಾಟಕ ನಾಟಕ ಅಕಾಡೆಮಿ–ಇವರು ಆಯೋಜಿಸಿದ ಅನೇಕ ವಿಚಾರ ಸಂಕಿರಣಗಳಲ್ಲಿ ತಮ್ಮ ಅಮೂಲ್ಯ ಪ್ರಬಂಧಗಳನ್ನು ಮಂಡಿಸಿದ್ದಾರೆ. ನಾಡಿನ ವಿವಿಧ ಪತ್ರಿಕೆಗಳಲ್ಲಿ ಇವರ ಅನೇಕ ಮೌಲ್ಯಯುತವಾದ ಲೇಖನಗಳು ಪ್ರಕಟವಾಗಿವೆ.

ಅಭಿನಯದಲ್ಲೂ ಶ್ರೀಯುತರು ಉತ್ಸಾಹಿಗಳಾಗಿದ್ದು ಮೃಚ್ಛಕಟಿಕ, ಉದ್ಧವ ಮುಂತಾದ ನಾಟಕಗಳಲ್ಲಿ ಭಾಗವಹಿಸಿ ತಾವೊಬ್ಬ ಉತ್ತಮ ನಟನೆಂಬುದನ್ನೂ ಸಾಬೀತುಗೊಳಿಸಿದ್ದಾರೆ. ಒಳ್ಳೆಯ ಸಂಘಟಕ ಕೂಡ. 'ಸಾಹಿತ್ಯ ಸಂವಾದ' ಕರ್ನಾಟಕ ರಂಗಭೂಮಿಯ ಉತ್ತೇಜನ ಹಾಗೂ ಅಭಿವೃದ್ಧಿ ಸಹಕಾರ ಸಂಘ, ಬೆಳಗಾವಿ ಜಿಲ್ಲಾ ಬಂಡಾಯ ಸಾಹಿತ್ಯ ಸಂಘಟನೆ–ಇವುಗಳಲ್ಲಿ ಕಾರ್ಯಕಾರಿ ಸಮಿತಿಯ ಸದಸ್ಯ ಹಾಗೂ ಬೆಳಗಾವಿಯ 'ಇಪ್ಟಾ' (IPTA) ಘಟಕದ ಅಧ್ಯಕ್ಷ. ನಿರಂತರ ರಂಗಶ್ರಮಿಕ ಮರಾಠೆಯವರು ಕನ್ನಡ – ಮರಾಠಿ ರಂಗಭೂಮಿ ಕುರಿತು ತೌಲನಿಕ ಅಧ್ಯಯನ ಮತ್ತು ನಟ ಹಂದಿಗನೂರು ಸಿದ್ರಾಮಪ್ಪನವರ ರಂಗವ್ಯಕ್ತಿತ್ವದ ಬಗ್ಗೆ ಅಧ್ಯಯನಗಳ ಯೋಜನೆ ಹಾಕಿಕೊಂಡು ಈ ನಿಟ್ಟಿನಲ್ಲಿ ಕಾರ್ಯನಿರತರಾಗಿದ್ದಾರೆ.

---



## ಹೆಚ್.ಕೆ. ರಾಮನಾಥ್

ಶ್ರೀ ರಾಮನಾಥ್ ರವರಿಗೆ ರಂಗಭೂಮಿ ಒಂದು ರೀತಿಯಲ್ಲಿ ವೃತ್ತಿಯೇ ಆಗಿದೆ. ಏಪ್ರಿಲ್ 21, 1938ರಂದು ಜನಿಸಿದ ಶ್ರೀಯುತರು ಕನ್ನಡ ಎಂ.ಎ.,ಯ ಜತೆಗೆ ನಾಟಕಶಾಸ್ತ್ರದಲ್ಲಿ ಪಿಎಚ್.ಡಿ. ಸಹ ಗಳಿಸಿದ್ದಾರೆ. ಮೈಸೂರಿನಲ್ಲಿ ಕೆಲವು ಕಾಲ ಲಲಿತಕಲಾ ಕಾಲೇಜಿನಲ್ಲಿ ನಾಟಕ ಶಾಸ್ತ್ರ ವಿಭಾಗದಲ್ಲಿ ಪಾರ್ಟ್ ಟೈಂ ಉಪನ್ಯಾಸಕರಾಗಿ ಹತ್ತು ವರ್ಷ ಸೇವೆ ಸಲ್ಲಿಸಿದ ಇವರ ರಂಗಭೂಮಿಯ ಅನುಭವ ಸುಮಾರು ನಲವತ್ತೈದು ವರ್ಷಗಳದ್ದು. ನಟನಾಗಿ, ನಿರ್ದೇಶಕನಾಗಿ, ಮೇಕಪ್ ಕಲಾವಿದರಾಗಿ, ವಿಮರ್ಶಕನಾಗಿ, ಲೇಖಕನಾಗಿ ವಿವಿಧ ರೀತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಶ್ರೀ ರಾಮನಾಥ್ ರವರದ್ದು ಗಮನೀಯ, ಗಣನೀಯ, ಶ್ಲಾಘನೀಯ ಸಾಧನೆ.

'ಕನ್ನಡ ರಂಗಭೂಮಿಯ ವಿಕಾಸ' ಮತ್ತು 'ಕರ್ನಾಟಕ ರಂಗಭೂಮಿ ನಿನ್ನೆ, ಇಂದು, ನಾಳೆ' ಇವು ಇವರ ಸಂಶೋಧನಾ ಲೇಖನಗಳು. ಇವೇ ಅಲ್ಲದೆ ಎರಡು ಕಿರು ನಾಟಕಗಳನ್ನು ಮತ್ತು ಮಕ್ಕಳ ನಾಲ್ಕು ನಾಟಕಗಳನ್ನು ಸಹ ರಚಿಸಿ ನಾಟಕಕಾರರೆನ್ನಿಸಿಕೊಂಡಿದ್ದಾರೆ.

ತಮ್ಮ ಉತ್ತಮ ಸಾಧನೆಗಳಿಂದಾಗಿ ಶ್ರೀಯುತರು ಮೈಸೂರು ಶಿವಮೊಗ್ಗ ಮತ್ತಿತರ ಊರುಗಳ ನಾಗರಿಕರಿಂದ ಸನ್ಮಾನಿತರಾಗಿರುವ ಇವರು ಪ್ರಸ್ತುತ ಮೈಸೂರಿನ ಕುವೆಂಪು ನಗರದ ನಿವಾಸಿಗಳಾಗಿದ್ದು ಮೈಸೂರಿನ ರಂಗಭೂಮಿಯ ಶ್ರಮಜೀವಿಗಳಲ್ಲೊಬ್ಬರು ಮತ್ತು ಗಣ್ಯರು.

---



## ಕೆ. ರಾಮಯ್ಯ (ಕೋಟಿಗಾನಹಳ್ಳಿ ರಾಮಯ್ಯ)

6–5–1955ರಲ್ಲಿ ಜನಿಸಿದ ಶ್ರೀ ರಾಮಯ್ಯನವರದ್ದು ಬಹುಮುಖ ಪ್ರತಿಭೆ. ಮೊದಲು ರೈಲ್ವೆ ಮೇಯಿಲ್ ಸರ್ವಿಸ್‌ನಲ್ಲಿ, ನಂತರ ಕೆನರಾ ಬ್ಯಾಂಕ್‌ನಲ್ಲಿ ಸೇವೆ ಸಲ್ಲಿಸಿದ ಇವರು ತಮಗೆ ಬಹಳ ಇಷ್ಟವಾದ ಬರವಣಿಗೆಗೆ ಜೋತುಬಿದ್ದರು. ಲಂಕೇಶ್ ಪತ್ರಿಕೆ, ಸುದ್ದಿ ಸಂಗಾತಿ ಪತ್ರಿಕೆಗಳಿಗೆ ವರದಿಗಾರರಾಗಿ, ಮುಂಗಾರು, ಪಂಚಮ ಪಾಕ್ಷಿಕಗಳ ಸಹಸಂಪಾದಕ/ಸಂಪಾದಕರಾಗಿ, 'ಶಬ್ದ ಲೋಕ'ದ ಮೂಲಕ ಪ್ರಕಾಶಕರಾಗಿ (ಧ್ವನಿಸುರುಳಿಗಳ ಪ್ರಕಾಶನ) ದುಡಿದ ಇವರು ರಂಗಭೂಮಿಗೂ ನಾಟಕ ರಚನೆಗಳ ಮೂಲಕ ತಮ್ಮ ಗಣನೀಯ ಕೊಡುಗೆಗಳನ್ನು ಇತ್ತಿದ್ದಾರೆ.

ಇವರ ಪ್ರತಿನಾಟಕದಲ್ಲೂ ಸಾಮಾಜಿಕ ಕಾಳಜಿ–ಕಳಕಳಿಗಳ ವಸ್ತುಪ್ರಧಾನವಾಗಿರುತ್ತದೆ. ಗಾದೆ ಗುರ್ರಕ್ಕಾ ಮತ್ತಿತರ ನಾಟಕಗಳು (ಹತ್ತು ನಾಟಕಗಳು) ಬೀದಿ ನಾಟಕ ರೂಪದಲ್ಲಿದ್ದು ಜನಜಾಗೃತಿಯ ದಿಸೆಯಲ್ಲಿ ರಚಿತವಾದವು. ಸ್ತ್ರೀಸಬಲತೆ, ಜೀತ ಪದ್ಧತಿ ವಿರೋಧ, ಕುಡಿತದ ದುಷ್ಪರಿಣಾಮಗಳು, ಮಾತೃ ಪ್ರಧಾನ ಸಂಸ್ಕೃತಿಯ ಹುಡುಕಾಟ – ಇವು ಇವರ ನಾಟಕಗಳ ಕೆಲವು ವಸ್ತುಗಳು. ಗಂಗಭಾರತ, ನಾಯಿತಿಪ್ಪ, ಸುಮ್‌ಸುಮ್ಮೆ, ಡರ್ ಡರ್ ಬುಡ್ಡಣ್ಣ, ಕಳ್ಳ ಬಂಡೆ, ಭೂಮಿ ಹಕ್ಕು ಸಿಕ್ಕಿತು, ಎಂಗ್ಲೇಸನ ಕೈ ಬೆರಳು, ಅವ್ವ, ಫುಟ್‌ಬಾಲ್ ಆಟ–ಇವು ಇವರ ರಚನೆಗಳು. ಇವೇ ಅಲ್ಲದೆ ಮಕ್ಕಳಿಗಾಗಿ ಬರೆದ ನಾಟಕಗಳು ಒಗಟಿನ ರಾಣಿ, ಹಕ್ಕಿ ಹಾಡು, ಚಿನ್ನದ ಕಾಳಿನ ಜಾತ್ರೆ, ಬಿದರು ಬೊಂಬೆಯ ಹಾಡು.

ಅನೇಕ ಚಲನ ಚಿತ್ರಗಳು, ಕಿರು ಚಿತ್ರಗಳು, ಕಿರುತೆರೆಯ ಧಾರಾವಾಹಿಗಳು ಮುಂತಾದವಕ್ಕೆ ಚಿತ್ರಕಥೆ, ಸಂಭಾಷಣೆ ಮತ್ತು ಗೀತೆಗಳನ್ನು ರಚಿಸಿ ಪ್ರಶಸ್ತಿಗಳನ್ನು, ಪ್ರಶಂಸೆಗಳನ್ನು ತಮ್ಮ ಹಡಪದೊಳಗೆ ಇಳಿಬಿಟ್ಟಿದ್ದಾರೆ.

ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿ ಹಾಗೂ ಸೆನ್ಸಾರ್‌ನಿಯಂತ್ರಣ ಮಂಡಳಿಗಳಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ನಾಟಕಕಾರರಾಗಿ ಇವರು ರಂಗಭೂಮಿಗೆ ನೀಡಿರುವ ಕೊಡುಗೆ ಮರೆಯಲಾಗದ್ದು.

## ರಿಚರ್ಡ್ ಲೂಯಿಸ್



ಐವತ್ತೊಂದು ವರ್ಷ ವಯಸ್ಸಿನ ಶ್ರೀ ರಿಚರ್ಡ್ ಲೂಯಿಸ್ ಹುಟ್ಟಿದ್ದು 16–12–1950ರಲ್ಲಿ. ತಂದೆ ಶ್ರೀ ಅಂತೋಣಿ ಲೂಯಿಸ್, ತಾಯಿ ಶ್ರೀಮತಿ ಲೂಸಿ ಲೂಯಿಸ್ ಕೊಂಕಣಿ ಮಾತೃಭಾಷೆಯಾಗಿರುವ ಈತ ಕನ್ನಡ ರಂಗಭೂಮಿಯಲ್ಲಿ ಸತತವಾಗಿ ದುಡಿದ ವ್ಯಕ್ತಿ.

ಬಿ.ಕಾಂ (ಎಲ್.ಎಲ್.ಬಿ) ಪದವೀಧರ ರಿಚರ್ಡ್ ಚಿಕ್ಕಂದಿನಿಂದಲೇ ನಾಟಕದ ಚಟ ಹತ್ತಿಸಿಕೊಂಡವರು. ಪ್ರವೇಶಿಸಿದ್ದು ಎಲ್ಲರಂತೆ ನಟನಾಗಲು. ನಟನಾಗಿ ಸಿಕ್ಕು, ಉದ್ಧವ, ಮಾರೀಚನ ಬಂಧುಗಳು, ಗುಳ್ಳೆನರಿ, ಬೇಲಿ ಮತ್ತು ಹೊಲ, ನೆರಳಿಲ್ಲದ ಜೀವಗಳು, ಅಂತಿಮ ಯಾತ್ರೆ, ಘಾಶೀರಾಂ ಕೊತ್ವಾಲ್, ಹ್ಯಾಮ್ಲೆಟ್... ಇತ್ಯಾದಿ ಸುಮಾರು ನೂರೈವತ್ತು ನಾಟಕಗಳಲ್ಲಿ ಅಭಿನಯಿಸಿದ್ದಾರೆ.

ಕಲಾಗಂಗೋತ್ರಿ, ಬೆನಕ, ರಂಗಸಂಪದ, ನಾಟ್ಯದರ್ಪಣ, ಸೂತ್ರಧಾರ, ಸ್ಪಂದನ, ಬಿಂಬ ಹಾಗೂ ಚಿತ್ರ–ಬೀದಿ ನಾಟಕ ತಂಡಗಳಲ್ಲಿ ಪಾಲ್ಗೊಂಡಿರುವ ರಿಚರ್ಡ್ ಕನ್ನಡ ರಂಗಭೂಮಿಯ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ 1988ರಲ್ಲಿ ಮ್ಯಾಂಚೆಸ್ಟರ್‌ನಲ್ಲಿ ನಡೆದ ವಿಶ್ವ ಕನ್ನಡ ಸಮ್ಮೇಳನದಲ್ಲಿ ಹಾಗೂ ಲಂಡನ್‌ನಲ್ಲಿ ಆಡಿದ ಸಿಕ್ಕು ನಾಟಕದ ನೇತೃತ್ವ ಹಾಗೂ ಮುಖ್ಯ ಪಾತ್ರಾಭಿನಯ ಮಾಡಿದ ಗರಿಮೆ ಇವರದು.

ಸಂಘಟನೆಯಲ್ಲೂ ಈತ ಪರಿಣಿತ. 25 ವರ್ಷಗಳ ಕಾಲ ನಾಟ್ಯ ದರ್ಪಣ ಸಂಸ್ಥೆಯ ಕಾರ್ಯದರ್ಶಿಯಾಗಿದ್ದ ಇವರು ಬಡಾವಣಾ ರಂಗಭೂಮಿ (ಲೋಕ್ಯಾಲಿಟಿ ಥಿಯೇಟರ್)ನ ಸ್ಥಾಪಕರೂ ಹೌದು. ಇದಲ್ಲದೆ ರಂಗಭೂಮಿ ಕ್ರಿಯಾ ಸಮಿತಿ, ಮಂಗಳೂರಿನ ಅಭಿವ್ಯಕ್ತಿ–ಇತ್ಯಾದಿ ತಂಡಗಳೊಂದಿಗೆ ಅನೂಚಾನ ಸಂಬಂಧ.

ವಿವಿಧ ಊರುಗಳಲ್ಲಿ ರಂಗ ಶಿಬಿರಗಳನ್ನು ನಡೆಸಿ ಸ್ಥಳೀಯ ಕಲಾವಿದರನ್ನೇ ಒಗ್ಗೂಡಿಸಿ ನಾಟಕವಾಡಿಸಿದವರು ರಿಚರ್ಡ್. ಇವರ ಮತ್ತೊಂದು ಹೆಗ್ಗಳಿಕೆ ಕನ್ನಡ ಕತೆ–ಕಾದಂಬರಿಗಳನ್ನೇ ಆಧರಿಸಿ ನಾಟಕ ರಚಿಸಿ ಪ್ರದರ್ಶಿಸಿದ್ದು.

ಅಕೌಂಟೆಂಟ್ ಜನರಲ್‌ರ ಕಛೇರಿಯಲ್ಲಿ ಸೇವೆಯಲ್ಲಿರುವ ರಿಚರ್ಡ್ ಸಿನಿಮಾ ಮತ್ತು ಕಿರು ತೆರೆಗಳಲ್ಲೂ ಸಾಹಿತಿ, ನಟ ಹಾಗೂ ನಿರ್ದೇಶಕನಾಗಿ ತಮ್ಮ ಪ್ರತಿಭೆ ಮೆರೆದಿದ್ದಾರೆ. ಆದರೆ ರಂಗಭೂಮಿಯ ನಂಟು ಅವರನ್ನು ಬಿಡಲಾರದ ಅಂಟು.



## ಎ. ವರಲಕ್ಷ್ಮೀ

ತನ್ನ ಎಂಟನೆಯ ವಯಸ್ಸಿನಲ್ಲೇ ಬಳ್ಳಾರಿ ಲಲಿತಮ್ಮನವರ ಶ್ರೀ ಲಲಿತಕಲಾ ನಾಟಕ ಮಂಡಲಿಯಲ್ಲಿ ರಂಗಕ್ಕೇರಿದ ವರಲಕ್ಷ್ಮಿಯವರು ಮುಂದೆ ಅದೇ ಕಂಪೆನಿಯಲ್ಲಿ ಬಾಲ ಕಲಾವಿದೆಯಾಗಿ ಮಕ್ಮಲ್ ಟೋಪಿ, ಟಿಪ್ಪು ಸುಲ್ತಾನ್, ಲವಕುಶ ಮುಂತಾದ ನಾಟಕಗಳಲ್ಲಿ ಅಭಿನಯಿಸಿ ಹೆಸರಾದರು. ಮತ್ತೆ ಮಾಂಡ್ರೆ ಕವಿಯವರ ಕಂಪೆನಿಯಲ್ಲಿ ಸ್ವಲ್ಪ ಕಾಲ ಸೇವೆ ಸಲ್ಲಿಸಿದರು.

ನಂತರ ಶ್ರೀ ಏಣಗಿ ಬಾಳಪ್ಪನವರ ಕಂಪೆನಿಯಲ್ಲಿ ಸಾಕಷ್ಟು ವರ್ಷಗಳು ನಟಿಯಾಗಿ ಸೇವೆ ಸಲ್ಲಿಸಿದರು. 'ಮಾವ ಬಂದಾನಪ್ಪ ಮಾವ', 'ವೀರ ರಾಣಿ ಕಿತ್ತೂರು ಚೆನ್ನಮ್ಮ' ಇತ್ಯಾದಿ ನಾಟಕಗಳಲ್ಲಿ ಅಭಿನಯಿಸಿದರು. ಓಬಳೇಶ್ವರರ ಓಂಕಾರೇಶ್ವರ ನಾಟಕ ಮಂಡಲಿಯಲ್ಲೂ ಸೇವೆ ಸಲ್ಲಿಸಿ 'ಖಾದಿ ಸೀರೆ', 'ಶರಣ ಬಸವೇಶ್ವರ' ನಾಟಕಗಳಲ್ಲಿ ಅಭಿನಯಿಸಿದರು.

ನಂತರ ತಮ್ಮ ಸ್ವಸ್ಥಳವಾದ ಬಳ್ಳಾರಿಗೆ ಮರಳಿ ಬಂದು ನೆಲಸಿ ಹವ್ಯಾಸಿ ಸಂಸ್ಥೆಗಳಲ್ಲಿ ವೃತ್ತಿ ಕಲಾವಿದೆಯಾಗಿ ಭಾಗವಹಿಸುತ್ತಿದ್ದಾರೆ. ರಕ್ತರಾತ್ರಿ, ಕುರುಕ್ಷೇತ್ರ, ಅಣ್ಣ ತಂಗಿ, ಬಸ್ ಕಂಡಕ್ಟರ್ ಇವೇ ಮುಂತಾದ ಕನ್ನಡ ನಾಟಕಗಳೇ ಅಲ್ಲದೆ ಬಾಲನಾಗಮ್ಮ, ಸಾರಂಗಧರ, ಮೂಲರಂಗಡು, ಪಲ್ಲಕ್ಕಿ, ಇದೇಮಿಟಿ–ಮುಂತಾದ ತೆಲುಗು ನಾಟಕಗಳಲ್ಲೂ ಅಭಿನಯಿಸಿ ಜನಪ್ರಿಯರಾದ, ಕರ್ನಾಟಕಾ ಆಂಧ್ರ ಅಭಿನೇತ್ರಿ ಶ್ರೀಮತಿ ವರಲಕ್ಷ್ಮಿಯವರು.

ಕರ್ನಾಟಕ ನಾಟಕ ಅಕಾಡೆಮಿ ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಹಮ್ಮಿಕೊಂಡ ಅನೇಕ ಸ್ಥಳೀಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಉತ್ಸಾಹಿ ಕಲಾವಿದೆ ಈಕೆ. ಇವರ ಮಡಿಲಿಗೆ ಸುಮಾರು ಇಪ್ಪತ್ತು ಇಪ್ಪತ್ತೈದು ಪ್ರಶಸ್ತಿ–ಪ್ರಶಂಸಾ ಪತ್ರಗಳು ವಿವಿಧ ಸ್ಥಳಗಳ ನಾಗರಿಕ ಸಂಸ್ಥೆಗಳಿಂದ ಪ್ರೀತಿಪೂರ್ವಕ ಬಂದು ತುಂಬಿವೆ.

---



## ವಾಣಿ ಸರಸ್ವತಿ ನಾಯ್ಡು

ಜನನ 15–8–1935. ಸಂಗೀತ ಶಿಕ್ಷಕ ತಂದೆಯ ಮಗಳಾದ ವಾಣಿಯವರು ಓದಿದ್ದು ಆರನೇ ತರಗತಿಯವರೆಗೆ ಮಾತ್ರ, ನಂತರ ಭರತನಾಟ್ಯ, ಕಥಕ್ ಮತ್ತು ಕಥಕ್ಕಳಿ ನೃತ್ಯ ಕಲೆಗಳನ್ನು ಶಾಸ್ತ್ರೋಕ್ತವಾಗಿ ಕಲಿತ ಶ್ರೀಮತಿ ನಾಯ್ಡುರವರು ತಮ್ಮ 8ನೇ ವಯಸ್ಸಿನಿಂದಲೂ ನಾಟಕ–ನೃತ್ಯಗಳಲ್ಲಿ ಪಾಲ್ಗೊಳ್ಳುತ್ತ ಅನುಭವಿ ಕಲಾವಿದೆಯಾಗುವ ದಿಸೆಯಲ್ಲಿ ಶ್ರಮಿಸಿದರು.

1956ರಲ್ಲಿ ಚತುರ್ಭಾಷಾ ತಾರೆ ಎಂ. ಪಂಢರೀ ಬಾಯಿಯವರ ಕಂಪೆನಿಯಲ್ಲಿ ಭಕ್ತ ವಿಜಯ ನಾಟಕದಲ್ಲಿ ನೃತ್ಯ–ಅಭಿನಯಗಳ ಮೂಲಕ ಪ್ರವೇಶವಿತ್ತ ಇವರು ಅಲ್ಲಿಂದ ಮುಂದೆ ವೃತ್ತಿರಂಗ ಭೂಮಿಯಲ್ಲಿ ಹಿಂತಿರುಗಿ ನೋಡಲಿಲ್ಲ. ಇವರ ಅತಿ ಮಹತ್ವದ ಸಾಧನೆ 1983–85ರಲ್ಲಿ ಹುಬ್ಬಳ್ಳಿಯಲ್ಲಿ ಶ್ರೀ ಗುರುರಾಜ ಸ್ತ್ರೀ ನಾಟ್ಯಸಂಘ ಎಂಬ ಹೆಸರಿನಲ್ಲಿ ಸ್ತ್ರೀಯರಿಂದಲೇ ಅಭಿನಯಿಸುವ ಸಂಘದ ಸ್ಥಾಪನೆ.

ಕಡಪಟ್ಟಿಯ ಗುರುಪ್ರಸಾದ ನಾಟ್ಯಸಂಘ, ಸೂಡಿಯ ಶ್ರೀ ಭಾರತಿ ನಾಟ್ಯಸಂಘ ಮುಂತಾದ ರಂಗ ಸಂಸ್ಥೆಗಳೇ ಅಲ್ಲದೆ ಮುಂಬೈಯ ಪೃಥ್ವಿರಾಜಕಪೂರರ ಮರಾಠಿ ನಾಟಕ ಕಂಪೆನಿಯಲ್ಲಿ ಒಂದು ವರ್ಷ ಇದ್ದು ಮರಾಠಿ ನಾಟಕಗಳಲ್ಲೂ ಅಭಿನಯಿಸಿದ ಸಾಧಕರು ಇವರು. ಹುಬ್ಬಳ್ಳಿಯ ಬೆಂಗೇರಿಯಲ್ಲಿ ಸದ್ಯ ವಾಸವಾಗಿರುವ ಶ್ರೀಮತಿ ನಾಯ್ಡುರವರದು ಅಭಿನಯ, ನೃತ್ಯ – ಇವೆರಡು ಕ್ಷೇತ್ರಗಳಲ್ಲಿ ಗಣನೀಯ ಸಾಧನೆ.

---



## ಡಾ. ಜಿ. ವೆಂಕಟೇಶಲು

ರಂಗ ಪ್ರಯೋಗಗಳು ಯಶಸ್ಸು ಕಾಣಲು ಸಂಘಟನೆ ಮುಖ್ಯ ಪಾತ್ರ ವಹಿಸುತ್ತದೆ. ಉತ್ತಮ ಸಂಘಟನೆಕಾರ ಕೇವಲ ತನ್ನ ತಂಡದ ನಾಟಕಗಳ ಯಶಸ್ಸಿಗಷ್ಟೇ ಅಲ್ಲ, ತನ್ನ ಮುಂದಿನ ತಲೆಮಾರಿನವರಿಗೆ ಸಂಘಟನೆಕಾರರಾಗಲು ಸ್ಫೂರ್ತಿಗೂ ಮೂಲ ಕಾರಣವಾಗುತ್ತಾನೆ. ರಂಗಭೂಮಿಯ ವಿಕಸನದಲ್ಲೂ ಈತನ ಪಾತ್ರ ಮಹತ್ವದ್ದು. ಡಾ. ಜಿ. ವೆಂಕಟೇಶಲು ಇಂತಹ ಒಬ್ಬ ಅಪರೂಪದ ವ್ಯಕ್ತಿ.

ನಲವತ್ತೇಳರ ಹರೆಯದ ಶ್ರೀಯುತರು ಎಂ.ಎ., ಎಂ.ಬಿ.ಎ., ಪಿಎಚ್.ಡಿ. (ಮಾನವ ಸಂಪನ್ಮೂಲ ಅಭಿವೃದ್ಧಿ) ಪದವೀಧರ. ಎಚ್.ಎಂ.ಟಿ. ಗಡಿಯಾರ ಕಾರಖಾನೆ–4 ತುಮಕೂರಿನಲ್ಲಿ ಮಾನವ ಸಂಪನ್ಮೂಲ ಆಡಳಿತ ವಿಭಾಗದ ಮುಖ್ಯಸ್ಥರಾಗಿ ಕಾರ್ಮಿಕರ ಮತ್ತು ಅವರ ಕುಟುಂಬದ ಸದಸ್ಯರ ಸುಪ್ತ ಪ್ರತಿಭೆಗಳು ಹೊರ ಹೊಮ್ಮಲು ಕಾರಣರಾದರು. ನಾಟಕದ ವಿವಿಧ ಪ್ರಕಾರಗಳಷ್ಟೇ ಅಲ್ಲದೆ ಸಂಗೀತಕ್ಕೂ ಪ್ರೋತ್ಸಾಹಿಸಿ ಗಣನೀಯ ಸೇವೆ ಇತ್ತಿದ್ದಾರೆ.

ಇದರ ಜತೆಗೆ ರಾಜ್ಯ ಮಟ್ಟದ ಕನ್ನಡ ನಾಟಕ ಸ್ಪರ್ಧೆಗಳನ್ನೂ ಯಶಸ್ವಿಯಾಗಿ 1986ರಿಂದ ಇದುವರೆಗೂ ಯೋಜಿಸುತ್ತ ಬಂದಿರುವುದು ಇವರ ಉತ್ಸಾಹಕ್ಕೊಂದು ಬೆಳಕಿಂಡಿ. ಇದಲ್ಲದೆ ರಾಷ್ಟ್ರಮಟ್ಟದ ನಾಟಕೋತ್ಸವಗಳು, ಕರ್ನಾಟಕ ನಾಟಕ ಅಕಾಡೆಮಿಯ ಸಹಕಾರದೊಂದಿಗೆ ಮಕ್ಕಳ ನಾಟಕೋತ್ಸವ, ಕಾರ್ಮಿಕ ನಾಟಕೋತ್ಸವ ಹಾಗೂ ಜಿಲ್ಲಾ ನಾಟಕೋತ್ಸವಗಳನ್ನು ನಡೆಸಿದ್ದಾರೆ.

ತುಮಕೂರಿನಲ್ಲಿ ಹೆಚ್.ಎಂ.ಟಿ. ರಂಗ ಕರ್ಮಿಗಳಿಗಾಗಿ ವಿವಿಧ ಕಲಾಸಂಘಗಳನ್ನು ರೂಪಿಸಿದ ಕೀರ್ತಿ ಇವರದ್ದು. ಇದಲ್ಲದೆ ಸಾಹಿತ್ಯ ಸಂಘಟನೆ, ಕವಿಗೋಷ್ಠಿ, ಸಾಹಿತ್ಯ ಸಮ್ಮೇಳನ – ಇವೇ ಮುಂತಾದುವನ್ನು ಏರ್ಪಡಿಸುವ ಈ ಉತ್ಸಾಹದ ಚಿಲುಮೆಗೆ ಸಾಕಷ್ಟು ಪ್ರಶಸ್ತಿ – ಸನ್ಮಾನಗಳು ದಕ್ಕಿವೆ.

---



## ಎ. ಶಂಕರ ಭೀಮಪ್ಪ ಹಡಪದ

ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕು ಹಿರೇ ಅರಳ ಹಳ್ಳಿಯಲ್ಲಿ 28.6.1951ರಲ್ಲಿ ಜನಿಸಿದ ಶ್ರೀ ಶಂಕರ ಭೀಮಪ್ಪ ಹಡಪದ ಅವರು 1970ರಿಂದ ವೃತ್ತಿರಂಗ ಕಲಾವಿದರಾಗಿ ನಾಟಕ ರಂಗಕ್ಕೆ ತಮ್ಮ ಅಮೂಲ್ಯ ಕಾಣಿಕೆ ನೀಡಿದ್ದಾರೆ.

ಶ್ರೀ ಮಲ್ಲಿಕಾರ್ಜುನ ನಾಟ್ಯಸಂಘ, ಬಾಗಲವಾಡಿಯಲ್ಲಿ ಸತಿಯ ಸೌಭಾಗ್ಯ ನಾಟಕದಲ್ಲಿ ನಟನಾಗಿ ಮೊಟ್ಟಮೊದಲು ವೃತ್ತಿರಂಗ ಭೂಮಿ ಪ್ರವೇಶಿಸಿದ ಇವರು 1993ರ ವರೆಗೆ ಅಂದರೆ 23 ವರ್ಷಗಳ ಕಾಲ ಗೋಕಾಕದ ಶ್ರೀ ಶಾರದಾ ಸಂಗೀತ ನಾಟಕ ಮಂಡಳಿ, ಸುಳ್ಳದ ಶ್ರೀ ಶ್ರೀಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ, ಆಶಾಪುರದ ಶ್ರೀ ಸಂಗಮೇಶ್ವರ ನಾಟ್ಯಸಂಘ – ಮತ್ತು ಗುಡಿಗೇರಿಯ ಶ್ರೀ ಗುರು ಸಂಗಮೇಶ್ವರ ನಾಟ್ಯಸಂಘ – ಈ ಸಂಸ್ಥೆಗಳಲ್ಲಿ ಕಲಾವಿದರಾಗಿ ಸೇವೆ ಸಲ್ಲಿಸಿ ಪೌರಾಣಿಕ, ಚಾರಿತ್ರಿಕ ಹಾಗೂ ಸಾಮಾಜಿಕ ನಾಟಕಗಳಲ್ಲಿ ವಿವಿಧ ಪಾತ್ರಾಭಿನಯಗಳಿಂದ ಜನಪ್ರಿಯರಾದರು.

1993ರಲ್ಲಿ ಮಂಡಲಗಿರಿಯಲ್ಲಿ ಗೆಳೆಯರೊಡನೆ ಶ್ರೀ ಗುರು ತೋಂಟದಾರ್ಯ ನಾಟ್ಯ ಸಂಘ ಸ್ಥಾಪಿಸಿಕೊಂಡು ಕಳೆದ 9 ವರ್ಷಗಳಿಂದ ನಾಟಕ ಪ್ರದರ್ಶನ ನೀಡುತ್ತಿದ್ದು ಪ್ರಸ್ತುತ ಕೊಪ್ಪಳದಲ್ಲಿ ಪ್ರದರ್ಶನ ನೀಡುತ್ತಿದ್ದಾರೆ.

ಶ್ರೀ ಕೃಷ್ಣಗಾರುಡಿ, ವೀರ ರಾಣಿ ಕಿತ್ತೂರು ಚನ್ನಮ್ಮ, ಬೆಳ್ಳಿ ಚುಕ್ಕಿ, ಚಿತ್ರಾಂಗದಾ, ಹೇಮರೆಡ್ಡಿ ಮಲ್ಲಮ್ಮ, ವೀರ ಸಿಂಧೂರ ಲಕ್ಷ್ಮಣ – ಇವೇ ಮೊದಲಾದವು ಇವರು ಅಭಿನಯಿಸಿ ಪ್ರದರ್ಶಿಸಿದ ನಾಟಕಗಳು. ಹೆಸರಾಂತ ವೃತ್ತಿರಂಗ

ನಾಟಕಕಾರರಾದ ಹೆಚ್.ಎನ್. ಹೂಗಾರ ಅಂಥವರ ಸಾಮಾಜಿಕ ನಾಟಕಗಳನ್ನೂ ಆಡಿಸಿ ಅಭಿನಯಿಸಿದ್ದಾರೆ. ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕು ಹಿರೇ ಮನ್ನಾಪುರದ ಮಂಡಲಗಿಯಲ್ಲಿ ಶ್ರೀಯುತರ ಪ್ರಸ್ತುತ ವಾಸ, ಅವಿರತ 32 ವರ್ಷಗಳಿಂದ ರಂಗ ಕಾಯಕ ನಡೆಸಿಕೊಂಡು ಬಂದಿರುವ ಹಡಪದ ಅವರಿಗೆ ರಂಗಭೂಮಿ ಒಂದು ಗುಡಿಯಂತೆ.



## ಶಿವಪ್ಪ ಗೂಳಪ್ಪ ಕಳ್ಳನ್ನವರ

ಬಾಗಲಕೋಟೆ ಜಿಲ್ಲಾ ಮುಧೋಳ ತಾಲ್ಲೂಕಿನ ಮುಗಳಖೋಡ ಗ್ರಾಮವಾಸಿ ಶ್ರೀ ಕಳ್ಳನ್ನವರ. ಇವರದ್ದು ವ್ಯಕ್ತಿ ಹಾಗೂ ಬಯಲಾಟ ಕಂಪೆನಿಯಲ್ಲಿ ಸಾಕಷ್ಟು ಕೇಳಿಬರುವ ಹೆಸರು.

ಮುಗಳಖೋಡದ ಗೂಳಪ್ಪ-ಲಕ್ಕವ್ವ ದಂಪತಿಗಳ ಮಗನಾದ ಶಿವಪ್ಪ ಪ್ರೌಢಶಾಲೆಯ ಶಿಕ್ಷಣ ಮುಗಿಸಿ ಸೈನ್ಯಕ್ಕೆ ಸೇರಿದರು. ಎಂಟು ವರ್ಷ ಸೇವೆಯ ನಂತರ ಅಲ್ಲಿಯ ಸೇವೆಯನ್ನೂ ಮೊಟಕುಗೊಳಿಸಿ ಊರಿಗೆ ಮರಳಿದವರು ಉಳುಮೆಯಿಂದ ಭೂಮಿ ಸೇವೆಗೆ ತೊಡಗಿದರು.

ಚಿಕ್ಕಂದಿನಿಂದಲೂ ನಾಟಕದ ಗೀಳು ಹಚ್ಚಿಕೊಂಡಿದ್ದ ಶ್ರೀ ಕಳ್ಳನ್ನವರ ಮುಂದೆ ಊರಿನ ಜಾತ್ರೆ – ಉತ್ಸವಗಳಲ್ಲಿ ನಡೆಯುವ ನಾಟಕಗಳಲ್ಲಿ ಅಭಿನಯಿಸತೊಡಗಿದರು. ಕಾರಣಾಂತರಗಳಿಂದ ರಬಕವಿಗೆ ತೆರಳಿದ ಇವರು ಅಲ್ಲಿ ಬಯಲಾಟದ ಕಂಪೆನಿ ನಡೆಸುತ್ತಿದ್ದ ಹನುಮಂತರ ದೃಷ್ಟಿಗೆ ಬಿದ್ದು 'ಸಿಂಧೂರ ಲಕ್ಷ್ಮಣ' ನಾಟಕದ ಮೂಲಕ ವೃತ್ತಿ ರಂಗವನ್ನು ಪ್ರವೇಶಿಸಿದರು. ಹತ್ತು ವರ್ಷ ಅಲ್ಲಿ ಸೇವೆ ಸಲ್ಲಿಸಿದ ನಂತರ ಶ್ರೀಶೈಲ ದೀವಟಗಿ ಕಂಪೆನಿಗೆ ಸೇರಿ ಮುಂದೆ ಬಸವೇಶ್ವರ ನಾಟ್ಯ ಸಂಘ ಬಂಡಿಗಣಿಯ ಮಾಯಪ್ಪನ ಕಂಪೆನಿಯಲ್ಲಿ 'ಸತ್ಯವಾನ ಸಾವಿತ್ರಿ'ಯಲ್ಲಿ ಯಮನ ಪಾತ್ರದ ಮೂಲಕ ಹೆಸರಾದರು.

ಕರ್ನಾಟಕ-ಮಹಾರಾಷ್ಟ್ರಗಳ ಗಡಿ ಊರುಗಳಲ್ಲೆಲ್ಲ ತಮ್ಮ ಪ್ರತಿಭೆಯ ಪ್ರದರ್ಶನ ನೀಡಿರುವ ಈತ ಕಳೆದ ಐವತ್ತು ವರ್ಷಗಳಿಂದ ವೃತ್ತಿರಂಗ ಕಲಾವಿದರಾಗಿ ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ. ಈಗಲೂ ಇವರದು ನಿರಂತರ ರಂಗ ಕಾಯಕ.



## ಕೆ. ಶಿವರುದ್ರಯ್ಯ

ನಟ, ನಿರ್ದೇಶಕ, ಛಾಯಾಗ್ರಾಹಕ, ಚಲನಚಿತ್ರ ನಿರ್ದೇಶಕ ದೂರದರ್ಶನ ಚಿತ್ರಗಳ ನಟ ನಿರ್ದೇಶಕ.... ಇವೆಲ್ಲದರ ಅಚ್ಚುಕಟ್ಟಾದ ಸಂಗಮ ಕೆ. ಶಿವರುದ್ರಯ್ಯ.

ಬೆಂಗಳೂರು ಜಿಲ್ಲೆ ನೀಲಕಂಠನ ಹಳ್ಳಿ ಗ್ರಾಮದಲ್ಲಿ ಎಸ್.ಟಿ. ಕುನ್ನಯ್ಯನವರಿಗೆ 15-05-1952ರಲ್ಲಿ ಜನಿಸಿದ ಶಿವರುದ್ರಯ್ಯ ಕಳೆದ 25 ವರ್ಷಗಳಿಂದ ರಂಗಭೂಮಿಯ ವಿವಿಧ ವಿಭಾಗಗಳಲ್ಲಿ ಮೆರೆದ ಪ್ರತಿಭೆ.

ಕರ್ನಾಟಕ ರಾಜ್ಯ ವಾರ್ತಾ ಮತ್ತು ಪ್ರಚಾರ ಇಲಾಖೆಯಲ್ಲಿ ಹಿರಿಯ ಕಲಾವಿದರಾಗಿ ಸೇವೆ ಸಲ್ಲಿಸುತ್ತಿರುವ ಇವರಿಗೆ ಭಾಗ್ಯವಶಾತ್ ಪ್ರವೃತ್ತಿಯೇ ವೃತ್ತಿಯಾಗಿ ಬಂದು ಇವರು ತಮಗೊಲಿದ ಕ್ಷೇತ್ರಗಳಲ್ಲಿ ಅರಳಲು ಸಹಕಾರಿಯಾಗಿದೆ.

ಸಾಕ್ಷಿ ಕಲ್ಲು, ಬೆಳ್ಳಕ್ಕಿ ಹಿಂಡು ಬೆದರ್‍ಯಾವೋ, ದೊಡ್ಡಪ್ಪ, ಜೋಕುಮಾರ ಸ್ವಾಮಿ, ಹಯವದನ, ಸುಲ್ತಾನ್ ಟಿಪ್ಪು, ದಿಂಡಿ, ಜಲಗಾರ, ಏಕಲವ್ಯ – ಇತ್ಯಾದಿ ಇವರು ನಿರ್ದೇಶಿಸಿದ ನಾಟಕಗಳು. ಮುಂಬಯಿ, ದಿಲ್ಲಿ, ಕೊಲ್ಕತ್ತಾದಂತಹ ಪ್ರಮುಖ ನಗರಗಳಲ್ಲಿ ಪ್ರದರ್ಶಿತವಾಗಿರುವುದು ಇವರ ವೈಶಿಷ್ಟ್ಯ. ಇದಲ್ಲದೆ ಭಾರತ ಆಹಾರ ನಿಗಮ, ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ಮೈಕೋ, ಬಿ.ಇ.ಎಲ್., ಮೈಸೂರಿನ ಜನಮನ ಈ ಕಲಾ ಸಾಂಸ್ಕೃತಿಕ ತಂಡಗಳಿಗೆ ಯಶಸ್ವಿಯಾಗಿ ನಾಟಕಗಳನ್ನು ನಿರ್ದೇಶಿಸಿ ಕೊಟ್ಟಿದ್ದಾರೆ.

ತಮಗೆ ಒಲಿದ ಛಾಯಾ ಚಿತ್ರಗ್ರಹಣದಲ್ಲೂ ಪರಿಣತಿ ಸಾಧಿಸಿದ ಇವರು ಓರ್ವ ಪ್ರಮುಖ ನಿಸರ್ಗ ಛಾಯಾ ಚಿತ್ರಗ್ರಾಹಕ. ಶ್ರೀಯುತರು 2001ನೇ ಸಾಲಿನ ಇಮೇಜ್ ಕೊಲೇಜ್ ಸೊಸೈಟಿ ಆಫ್ ಕ್ಯಾಲಿಫೋರ್ನಿಯಾದ ಮನ್ನಣೆ ಪಡೆದಿದ್ದಾರೆ. ತಮ್ಮ ಪ್ರತಿಭೆಯನ್ನು ರಂಗಭೂಮಿಗಾಗಿ ದುಡಿಸಿಕೊಂಡ ಇವರು ಕಳೆದ ಹತ್ತುವರ್ಷಗಳಿಂದ ನಾಟಕ ಪ್ರಯೋಗದ ನಡುವೆಯೇ ಅತ್ಯಂತ ಪರಿಣಾಮಕಾರಿಯಾಗಿ ದೃಶ್ಯಗಳನ್ನೂ ಸೆರೆಹಿಡಿದು ದಾಖಲಿಸಿದ್ದಾರೆ. ಚಲನಚಿತ್ರ ನಿರ್ದೇಶಕನಾಗಿಯೂ ಹೆಸರಾದ ಇವರ ನಿರ್ದೇಶನದ 'ಚೈತ್ರದ ಚಿಗುರು' ಚಿತ್ರಕ್ಕೆ 1999ನೇ ಸಾಲಿನ ಶ್ರೇಷ್ಠ ಚಿತ್ರ ರಾಜ್ಯ ಪ್ರಶಸ್ತಿ ಮತ್ತು ನಿರ್ದೇಶನ ಪ್ರಶಸ್ತಿ ಸಿಕ್ಕಿದೆ.



## ಶ್ರೀಧರ ಗಣಪತಿ ಹೆಗಡೆ

1955 ಆಗಸ್ಟ್ 3ನೇ ತಾರೀಖು ಗಣಪತಿ ಆರ್ ಹೆಗಡೆ ಮತ್ತು ಗಂಗಾ ದಂಪತಿಗಳಿಗೆ ಜನಿಸಿದ ಶ್ರೀಧರ ಜಿ. ಹೆಗಡೆ ಉತ್ತರ ಕನ್ನಡ ಜಿಲ್ಲಾ ಸಿದ್ದಾಪುರ ತಾಲ್ಲೂಕು ಕೆರೆ ಹೊಂಡಾ ಗ್ರಾಮದವರು. ಕೃಷಿಕ ಕುಟುಂಬದಲ್ಲಿ ಹುಟ್ಟಿ ಬೆಳೆದ ಶ್ರೀಧರರಿಗೆ ತಮ್ಮ ಹಳ್ಳಿಗೆ ಜಾತ್ರೆ ಸಮಯದಲ್ಲಿ ಬಂದು ಮೊಕ್ಕಾಂ ಮಾಡುತ್ತಿದ್ದ ಕಂಪೆನಿಗಳ ನಾಟಕ ನೋಡಿ ತಾವೂ ನಟನಾಗಬೇಕೆಂಬ ಕನಸು ಕಂಡರು.

ಶಾಲಾ ನಾಟಕಗಳಲ್ಲಿ ಭಾಗವಹಿಸುತ್ತಿದ್ದ ಶ್ರೀಧರರು ಎಸ್.ಎಸ್.ಎಲ್.ಸಿ.ಗೆ ಶಿಕ್ಷಣ ನಿಲ್ಲಿಸಿ ತಮ್ಮನ್ನು ರಂಗಭೂಮಿಯಲ್ಲಿ ತೊಡಗಿಸಿಕೊಂಡರು. 1974ರಲ್ಲಿ ಜಮಖಂಡಿಯ ಕಡಪಟ್ಟಿಯಲ್ಲಿನ ಶ್ರೀಗುರುಪ್ರಸಾದ ನಾಟ್ಯಸಂಘದಲ್ಲಿ "ಬದುಕು ಬಂಗಾರವಾಯ್ತು" ನಾಟಕದ ಮೂಲಕ ವೃತ್ತಿ ರಂಗಭೂಮಿಗೆ ಹೆಜ್ಜೆಯಿಟ್ಟ ಇವರು ಅಂದಿನಿಂದ ಈವರೆಗೂ ಸತತವಾಗಿ ವೃತ್ತಿ ನಾಟಕಗಳಲ್ಲಿ ವಿವಿಧ ರೀತಿಗಳಲ್ಲಿ ದುಡಿದರು. ಕರ್ನಾಟಕ–ಮಹಾರಾಷ್ಟ್ರ ಗಡಿ ಪ್ರದೇಶದಲ್ಲಿ ನಾಟಕಗಳನ್ನು ಅತಿ ಜನಪ್ರಿಯಗೊಳಿಸಿದ ಶ್ರೀಯುತರು ಅನೇಕ ವೃತ್ತಿ ನಾಟಕ ಕಂಪೆನಿಗಳನ್ನು ಹುಟ್ಟು ಹಾಕಿದ್ದೇ ಅಲ್ಲದೆ ಇನ್ನೂ ಕೆಲವು ಕಂಪೆನಿಗಳ ಸಂಚಾಲಕರಾಗಿಯೂ ಶ್ರಮಿಸಿದರು.

ಈಗ ಹಾನಗಲ್‌ನ ಶ್ರೀ ಎಲ್.ಬಿ. ಶೇಖ್ ಮಾಸ್ತರರ ಶ್ರೀ ಗುರು ಕುಮಾರೇಶ್ವರ ನಾಟ್ಯ ಸಂಘದ ಸಂಚಾಲಕರಾಗಿ 1988ರಿಂದಲೂ ಅದನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಬಂದಿದ್ದಾರೆ.



## ಸದಾನಂದ ಶ್ಯಾನಭಾಗ್ (ಪುತ್ತಣ್ಣ)

ಶಿರಸಿಯ ಸದಾನಂದ ಶ್ಯಾನಭಾಗರು ಅಲ್ಲಿಯ ರಂಗಭೂಮಿಯ ವಲಯದಲ್ಲಿ ಹಾಗೂ ಮಿತ್ರರ ನಡುವೆ 'ಪುತ್ತಣ್ಣ' ಎಂದೇ ಹೆಸರಾದವರು. ಬಣ್ಣವೆಂದರೆ ಇವರಿಗೆ ಅತಿಪ್ರಿಯ. ವೃತ್ತಿಗಾಗಿಯೂ ಬಣ್ಣವನ್ನೇ ಆಶ್ರಯಿಸಿರುವ ಇವರು ಗಣೇಶನ ವಿಗ್ರಹ ತಯಾರಿಕೆ, ಮನೆಗಳಿಗೆ ಬಣ್ಣ ಬಳಿಯುವುದು, ಜಾಹಿರಾತು ಫಲಕ ತಯಾರಿಸುವುದರ ಮೂಲಕ ಜೀವನೋಪಾಯಕ್ಕೆ ಅನುವು ಮಾಡಿಕೊಂಡರೆ ಮನದ ಮುದಕ್ಕಾಗಿ ನಾಟಕದ

ಪಾತ್ರಗಳಿಗೆ ಮೇಕಪ್ ಮಾಡುವುದರ ಮೂಲಕ ಬಣ್ಣದ ಬದುಕಿನವರೇ ಆಗಿದ್ದಾರೆ ಪುತ್ತಣ್ಣ. ಮೇಕಪ್ ಅಷ್ಟೇ ಅಲ್ಲ, ಇವರು ನೇಪಥ್ಯ ಕರ್ಮಿಗಳು ಹಾಗೂ ನಟರು ಸಹ. ಕಾಸ್ಟ್ಯೂಂಸ್ ನಾಟಕಗಳಿಗೆ ಬೇಕಾದ ಉಡುಪುಗಳನ್ನು ಇವರು ದಾಸ್ತಾನು ಮಾಡಿದ್ದಾರೆ. ಇಲ್ಲದಿರುವ ಉಡುಪನ್ನು ಪಾತ್ರಕ್ಕೆ ಬೇಕಾದಂತೆ ಸಿದ್ಧಪಡಿಸಿಯೂ ಕೊಡುತ್ತಾರೆ. ಉಡುಪುಗಳನ್ನಷ್ಟೇ ಅಲ್ಲ ರಂಗಪರಿಕರಗಳನ್ನೂ ವಿನ್ಯಾಸ ಮಾಡಿ ಸಿದ್ಧಪಡಿಸಿಕೊಡಬಲ್ಲ ಪರಿಣತಿ ಪುತ್ತಣ್ಣನವರದ್ದು. ಇದರ ಜೊತೆಗೆ ಮುಖವಾಡ ತಯಾರಿಕೆಯಲ್ಲೂ ಈತ ನಿಷ್ಣಾತರು.

ತಮಗೆ ತಿಳಿದಿರುವ ಕಲೆಗಳನ್ನು ಪ್ರಸಾಧನ ಶಿಬಿರ, ಮುಖವಾಡ ಶಿಬಿರಗಳ ಮೂಲಕ ಮಕ್ಕಳಿಗೆ ಧಾರೆಯೆರೆದು ತಮಗೊಲಿದ ಕಲಾಧಾರೆ ಮುಂದಿನ ತಲೆಮಾರಿಗೂ ಹರಿಯುವಂತೆ ಅನುವು ಮಾಡಿರುವ, ಮಾಡುತ್ತಿರುವ ಈತ ಶಿರಸಿಯ ಸುತ್ತ ಮುತ್ತ ಅತ್ಯಾದರಣೀಯ ವ್ಯಕ್ತಿ. ಸಿನಿಮಾರಂಗದಲ್ಲೂ ನೇಪಥ್ಯ ಕೆಲಸಗಳನ್ನು, ಸಾಕಷ್ಟು ಚಲನಚಿತ್ರಗಳಲ್ಲಿ ವಿ. ಶಾಂತಾರಾಂ, ಒ.ಪಿ. ರಾಲ್ಹನ್, ವೈ.ಆರ್. ಸ್ವಾಮಿ, ರಮಾನಂದ ಸಾಗರ್ ಮೊದಲಾದ ನಿರ್ದೇಶಕರೊಡನೆ ಮಾಡಿದ್ದಲ್ಲದೆ ಕನ್ನಡದ 'ನಮ್ಮೂರ ಮಂದಾರ ಹೂವೆ' ಚಿತ್ರದಲ್ಲಿ ನಟಿಸಿಯೂ ಇದ್ದಾರೆ. ತಮ್ಮ ಸಾಧನೆಗಾಗಿ ವಿವಿಧ ಸಾಂಸ್ಕೃತಿಕ ಸಂಸ್ಥೆಗಳಿಂದ ಸನ್ಮಾನಿತರಾಗಿರುವ ಇವರು ಈಗ ಶಿರಸಿಯ ಹುಬ್ಬಳ್ಳಿ ರಸ್ತೆಯಲ್ಲಿರುವ ಕೆ.ಎಚ್.ಬಿ. ಕಾಲೋನಿಯಲ್ಲಿ ವಾಸವಾಗಿದ್ದಾರೆ.

---



## ಸದಾನಂದ ಸುವರ್ಣ

ದಕ್ಷಿಣ ಕನ್ನಡ ಜಿಲ್ಲೆಯ ಮೂಲ್ಕಿಯಲ್ಲಿ ಜನಿಸಿದ ಶ್ರೀ ಸದಾನಂದ ಸುವರ್ಣರವರದ್ದು ರಂಗಭೂಮಿಗೆ ವೈವಿಧ್ಯಮಯ ಕೊಡುಗೆ. ನಾಟ್ಯ ಅಕಾಡೆಮಿಯಿಂದ ನಾಟಕ ಕಲೆಯಲ್ಲಿ ಡಿಪ್ಲೋಮಾ, ಮುಂಬಯಿ ಭವನ್ಸ್ ಕಾಲೇಜಿನಿಂದ ಸಮೂಹ ಮಾಧ್ಯಮ (ಚಲನಚಿತ್ರ, ಆಕಾಶವಾಣಿ ಮತ್ತು ಟೆಲಿವಿಷನ್)ದಲ್ಲಿ ಡಿಪ್ಲೋಮಾ, ಪೂನಾದ ಫಿಲಂ ಮತ್ತು ಟೆಲಿವಿಷನ್ ಇನ್‌ಸ್ಟಿಟ್ಯೂಟ್‌ನಿಂದ ಫಿಲಂ ಅಪ್ರಿಸಿಯೇಷನ್ ಕೋರ್ಸ್ – ಇವುಗಳನ್ನು ಪಡೆದಿರುವ ಶ್ರೀ ಸುವರ್ಣ ಅವರು ನಾಟಕಕಾರರಾಗಿ, ಅನುವಾದಕರಾಗಿ, ನಾಟಕ ನಿರ್ದೇಶಕರಾಗಿ, ನಟರಾಗಿ ಕಳೆದ ಐದು ದಶಕಗಳಿಂದ ರಂಗಭೂಮಿಗಾಗಿ ಶ್ರಮಿಸಿದ್ದಾರೆ. ಕನ್ನಡ ಮತ್ತು ತುಳು ರಂಗಭೂಮಿ ಎರಡರಲ್ಲೂ ಇವರದು ವಿಶಿಷ್ಟ ಸ್ಥಾನ.

ಅಭಾಗಿನಿ, ಕುರುಡನ ಸಂಗೀತ, ವಿಷಮ ಗಳಿಗೆ, ಹಳ್ಳದಿಂದ ಹಾದಿಗೆ ಮುಂತಾದ ಕನ್ನಡ ನಾಟಕ ಹಾಗೂ ಗುಡ್ಡೆದ ಭೂತದಂತಹ ತುಳು ನಾಟಕಗಳ ಕರ್ತೃವಾಗಿ, ಚಕ್ರವ್ಯೂಹ (ಇಂಗ್ಲೀಷ್‌ನಿಂದ) ಉರುಳು (ಹಿಂದಿಯಿಂದ) ಕನ್ನಡ ರೂಪಾಂತರ, ಅಣ್ಣನ ಮದ್ಮೆ (ಬೆಂಗಾಲಿಯಿಂದ) ಬಾಳೇ ಬಂಗಾರ್ (ಬೆಂಗಾಲಿಯಿಂದ) ನಂತಹ ತುಳು ರೂಪಾಂತರಗಳಿಗಾಗಿ ನಾಟಕಗಳನ್ನು ರಂಗಭೂಮಿಗೆ ನೀಡಿದ್ದಾರೆ ಶ್ರೀ ಸುವರ್ಣರವರು.

ಉದಯ ಕಲಾನಿಕೇತನ ಮುಂಬೈನ ಮೊದಲ ಸದಸ್ಯರಲ್ಲೊಬ್ಬರಾಗಿ ಅಲ್ಲದೆ ಮುಂದೆ ಕನ್ನಡ ಕಲಾ ಕೇಂದ್ರದಲ್ಲಿ ನಾಟಕ ನಿರ್ದೇಶಕರಾಗಿ ಉದಯೋನ್ಮುಖ ಕಲಾವಿದರನ್ನು ಬೆಳಕಿಗೆ ತಂದರು. ಕದಡಿದ ನೀರು, ಕಿಂಗ್ ಈಡಿಪಸ್, ರಜಪೂತ ಪವಾಡ, ಉತ್ತಮ ಪ್ರಭುತ್ವ ಲೊಳಲೊಟ್ಟೆ ಯಂತಹ ಉತ್ತಮ ನಾಟಕಗಳನ್ನು ಮುಂಬೈಯಲ್ಲಿ ಪ್ರದರ್ಶಿಸಿದರು. ಅಲ್ಲದೆ ನಟನಾಗಿಯೂ ಹಲವಾರು ನಾಟಕಗಳಲ್ಲಿ ಮಿಂಚಿರುವ ಶ್ರೀ ಸುವರ್ಣರವರು ಚಲನಚಿತ್ರ, ಟಿವಿ ಸರಣಿಗಳ ನಿರ್ಮಾಪಕ ಹಾಗೂ ನಿರ್ದೇಶಕರಾಗಿಯೂ ಅಂತರ್‌ರಾಷ್ಟ್ರೀಯ ಮನ್ನಣೆ ಪಡೆದಿದ್ದಾರೆ. ತಬರನ ಕಥೆ, ಮನೆ, ಕುಬಿ ಮತ್ತು ಇಯಾಲ ಹಾಗೂ ಗುಡ್ಡೆದ ಭೂತ ಇವು ಇವರ ಕೆಲವು ಚಲನಚಿತ್ರ ಹಾಗೂ ಟಿವಿ ಸರಣಿಗಳು. ಶ್ರೀಯುತರು ತುಳು ಸಾಹಿತ್ಯಕ್ಕೆ ನೀಡಿದ ಕೊಡುಗೆಗಾಗಿ ತುಳು ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ವಿಜೇತರೂ ಆಗಿದ್ದಾರೆ.

---



## ಅನ್ನದಾನಯ್ಯ

ಗ್ರಾಮೀಣ ಪರಿಸರದ ಬಯಲಾಟದ ಪ್ರಭಾವದಿಂದ ರಂಗಭೂಮಿಯ ಮೇಲೆ ಪ್ರೀತಿ ಬೆಳೆಸಿಕೊಂಡ ಅನ್ನದಾನಯ್ಯ ಪೌರಾಣಿಕ ನಾಟಕಗಳಲ್ಲಿ ಅಭಿನಯಿಸಿ ಅಪಾರ ಖ್ಯಾತಿಗೆ ಪಾತ್ರರಾದರು. ತುಮಕೂರಿನ ಕ್ಯಾತಮಾರನ ಹಳ್ಳಿಯವರಾದ ಅನ್ನದಾನಯ್ಯ, ತಮ್ಮ ವಿದ್ಯಾಭ್ಯಾಸದ ನಂತರ ಆರೋಗ್ಯ ಇಲಾಖೆಗೆ ಸೇರಿದರು. ಕುಷ್ಠರೋಗಿಗಳ ಸೇವೆ ಮಾಡುತ್ತಾ, ಆಸ್ಪತ್ರೆಯ ರೋಗಿಗಳಲ್ಲೂ ರಂಗಾಭಿರುಚಿಯನ್ನು ಹುಟ್ಟಿಸಿ ಪೌರಾಣಿಕ ನಾಟಕವನ್ನು ನಿರ್ದೇಶಿಸಿ, ಯಶಸ್ವಿಯಾದರು.

ತಮ್ಮ ಸೇವಾ ಅವಧಿಯಲ್ಲೇ ಪೌರಾಣಿಕ ನಾಟಕ ಸಂಸ್ಥೆಯನ್ನು ಪ್ರಾರಂಭಿಸಿ ಹಲವಾರು ನಾಟಕಗಳನ್ನು ಪ್ರದರ್ಶಿಸಿ, ತಂಡಗಳನ್ನು ಪ್ರೋತ್ಸಾಹಿಸಿದರು. ಶ್ರೀ ಗಂಗಾಧರೇಶ್ವರ ವಿದ್ಯಾಸಂಸ್ಥೆಯ ಮೂಲಕ ಅಕ್ಷರವಂಚಿತ ಮಕ್ಕಳಿಗೆ ವಿದ್ಯಾದಾನ ಮಾಡುತ್ತಿರುವ ಅನ್ನದಾನಯ್ಯ ಅನೇಕ ಸಂಘಟನೆಗಳಲ್ಲಿ ಸಕ್ರಿಯವಾಗಿದ್ದಾರೆ. ರಂಗಚೇತನ ಸಂಸ್ಥೆಯ ಗೌರವ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸುತ್ತಿರುವ ಇವರು 300ಕ್ಕೂ ಹೆಚ್ಚು ಬಾರಿ ಪೌರಾಣಿಕ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ಇವರ ರಂಗಭೂಮಿ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.



## ವಿ.ಎನ್. ಅಕ್ಕಿ

ಕಳೆದ ಮೂರು ದಶಕಗಳಿಂದ ರಾಯಚೂರು ಹಾಗೂ ಸುತ್ತಮುತ್ತಲ ಪ್ರದೇಶಗಳಲ್ಲಿ ರಂಗಚಟುವಟಿಕೆಗಳನ್ನು ನಡೆಸುತ್ತಿರುವ ವೀರಭದ್ರಪ್ಪ ನಿಂಗಪ್ಪ ಅಕ್ಕಿ, ನಟರು, ನಿರ್ದೇಶಕರು ಹಾಗೂ ಪ್ರಮುಖ ಸಂಘಟಕರು.

ಕೃಷಿ ಇಲಾಖೆಯಲ್ಲಿ ನೌಕರರು. ರಂಗಭೂಮಿಯ ಬಗ್ಗೆ ಒಲವು ಹೊಂದಿದ್ದ ಇವರಿಗೆ, ರಂಗಭೂಮಿ ಒಂದು ಬದ್ಧತೆಯಾಗಿದ್ದು ಸಮುದಾಯ ಸಂಘಟನೆಯ ಮೂಲಕ 70ರ ದಶಕದ ಸಮುದಾಯ ಸಾಂಸ್ಕೃತಿಕ ಜಾಥಾಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾ ರಾಯಚೂರು ಸಮುದಾಯದ ಪ್ರಧಾನ ಕಾರ್ಯದರ್ಶಿ, ಸಂಘಟನಾ ಕಾರ್ಯದರ್ಶಿ ಹಾಗೂ ಅಧ್ಯಕ್ಷರಾಗಿ ಸಂಘಟನೆ ಹಾಗೂ ಚಳುವಳಿಯನ್ನು ಜೀವಂತವಾಗಿಟ್ಟವರು ವಿ.ಎನ್. ಅಕ್ಕಿ

ರಾಯಚೂರು ನಗರಕ್ಕಷ್ಟೇ ಸೀಮಿತಗೊಳ್ಳದೆ ಸುತ್ತಮುತ್ತಲ ಸ್ಥಳಗಳಲ್ಲಿ ರಂಗಕಾರ್ಯಾಗಾರಗಳು, ನಾಟಕೋತ್ಸವ, ವಿಚಾರ ಸಂಕಿರಣಗಳ ಸಂಘಟನೆ, ಸಾಕ್ಷರತಾ ಆಂದೋಲನದ ಸಾಂಸ್ಕೃತಿಕ ಜಾಥಾಗಳ ನಿರ್ವಹಣೆ, ಹೀಗೆ ಒಟ್ಟು ಸಮಾಜದ ಬದಲಾವಣೆಗೆ ನಿರಂತರ ಶ್ರಮಿಸುತ್ತಿರುವ ವ್ಯಕ್ತಿ.

ಇವರು ರಂಗಭೂಮಿಗೆ ಸಲ್ಲಿಸಿರುವ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.



## ಕಾಲಭೈರವ ಗಂಗಾಧರ್

ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು ಯಡಿಯೂರು ಬಳಿಯ ಚಿಕ್ಕಮಧುರೆ ಗ್ರಾಮದ ಗಂಗಾಧರ್ ಶಾಲಾ ಕಾಲೇಜು ದಿನಗಳಲ್ಲೇ ಸಕ್ರಿಯವಾಗಿ ರಂಗಾಭಿನಯದಲ್ಲಿ ತೊಡಗಿಸಿಕೊಂಡರು. ಗ್ರಾಮೀಣ ಪರಿಸರದ ಪೌರಾಣಿಕ ನಾಟಕಗಳು ಇವರ ಮೇಲೆ ಅಪಾರ ಪರಿಣಾಮ ಬೀರಿದವು. ಕಾಲೇಜು ವಿದ್ಯಾಭ್ಯಾಸದ ನಂತರ ಗೆಳೆಯರೊಡಗೂಡಿ ತಮ್ಮದೇ ಆದ 'ಶ್ರೀ ಕಾಲಭೈರವ ಕಲಾನಿಕೇತನ ಸಂಸ್ಥೆ' ಪ್ರಾರಂಭಿಸಿದರು.

ವೃತ್ತಿಯಲ್ಲಿ ಸರ್ವೆ ಇಲಾಖೆಯಲ್ಲಿ ಕಾರ್ಯನಿರ್ವಹಿಸುವ ಇವರು ರವೀಂದ್ರ ಕಲಾಕ್ಷೇತ್ರವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡು 1977ರಿಂದ ಸತತವಾಗಿ ರಂಗಪ್ರದರ್ಶನ, ಪೌರಾಣಿಕ ನಾಟಕೋತ್ಸವ, ರಂಗಕಾರ್ಯಗಾರಗಳನ್ನು ನಡೆಸುತ್ತ ಅಪಾರ ಜನಮನ ಗೆದ್ದಿದ್ದಾರೆ. ಕಳೆದ 32 ವರ್ಷಗಳಲ್ಲಿ ನೂರಾರು ನಾಟಕಗಳನ್ನು ನಿರ್ದೇಶಿಸಿ, ಅಭಿನಯಿಸಿರುವ ಗಂಗಾಧರ್, ಕಾಲಭೈರವ ಗಂಗಾಧರ್ ಎಂದೇ ಪರಿಚಿತರು.

ರವೀಂದ್ರ ಕಲಾಕ್ಷೇತ್ರದಲ್ಲಿ ಪೌರಾಣಿಕ ನಾಟಕ ಪ್ರಕಾರಕ್ಕೆ ವಿಶೇಷ ಸ್ಥಾನವನ್ನು ತಂದುಕೊಟ್ಟ ಹೆಗ್ಗಳಿಕೆ ಇವರದು. ಪ್ರತಿವರ್ಷ ರಾಜ್ಯಮಟ್ಟದ ಪೌರಾಣಿಕ ನಾಟಕ ಸ್ಪರ್ಧೆಯನ್ನು ಯಶಸ್ವಿಯಾಗಿ ನಡೆಸುವ ಇವರಿಗೆ ಹಲವಾರು ಪ್ರಶಸ್ತಿಗಳು ಸಂದಿವೆ. ಪೌರಾಣಿಕ ನಾಟಕ ಜೊತೆಗೆ ಐತಿಹಾಸಿಕ, ಸಾಮಾಜಿಕ ನಾಟಕಗಳನ್ನು ಯಶಸ್ವಿಯಾಗಿ ಪ್ರಯೋಗಿಸಿದ್ದಾರೆ. ಇವರ ರಂಗಭೂಮಿ ಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಗಜಾನನ ಉಮೇಶ ಭಟ್ಟ

ಗಜಾನನ ಉಮೇಶಭಟ್ಟ ವೃತ್ತಿಯಲ್ಲಿ ಪತ್ರಕರ್ತರಾದರೂ, ಶ್ರೀರಂಗರು ಕರ್ನಾಟಕ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಏರ್ಪಡಿಸಿದ ರಾಜ್ಯಮಟ್ಟದ ಆಧುನಿಕ ರಂಗತರಬೇತಿ ಶಿಬಿರದ ಅಭ್ಯರ್ಥಿಯಾಗಿ ಪಾಲ್ಗೊಂಡರು. ಬಿ.ವಿ. ಕಾರಂತ ನಿರ್ದೇಶನದ ನಾಟಕಗಳಲ್ಲಿ ಅಭಿನಯಿಸಿ ಆಧುನಿಕ ರಂಗಭೂಮಿಗೆ ಒಲಿದು ಬಂದರು. ಜಿ.ಯು. ಭಟ್ಟರೆಂದೇ ಖ್ಯಾತರಾದ ಇವರು ತಮ್ಮ ಬಾಲ್ಯದ ರಂಗಾಸಕ್ತಿಯನ್ನು ಹೀಗೆ ಆಧುನಿಕ ರಂಗ ಪ್ರಪಂಚವನ್ನು ಪ್ರವೇಶಿಸುವ ಮೂಲಕ ತಣಿಸಿಕೊಂಡರು. ಅಷ್ಟಕ್ಕೇ ಸೀಮಿತಗೊಳ್ಳದೆ ನಿರ್ದೇಶನ, ನಟನೆಗಳಲ್ಲಿ ಪರಿಣತಿಯನ್ನು ಸಾಧಿಸಿ, ಹೊನ್ನಾವರದಲ್ಲಿ 'ಗೆಳೆಯ ಕಲಾಕ್ಷೇತ್ರ' ತಂಡವನ್ನು ಸ್ಥಾಪಿಸಿ ಮುನ್ನಡೆಸಿದರು.

ರಾಜ್ಯದ ನಾನಾ ಮೂಲೆಗಳಿಂದ ರಂಗ ತಂಡಗಳನ್ನು ಆಹ್ವಾನಿಸಿ ಹೊನ್ನಾವರದ ರಂಗರಸಿಕರಿಗೆ ರಂಗರಸದೌತಣವನ್ನು ಉಣಿಸಿದ ಜಿ.ಯು. ಭಟ್, ತಮ್ಮ ವೃತ್ತಿ ಬದುಕಿನ ಜೊತೆ ಜೊತೆಗೂ ರಂಗಭೂಮಿಯ ಬೆಳವಣಿಗೆಗೆ ದುಡಿಯುತ್ತಿದ್ದಾರೆ. ರಂಗಾಯಣ ಸೇರಿದಂತೆ, ಅನೇಕ ಸಂಸ್ಥೆಗಳಲ್ಲಿ ಸದಸ್ಯತ್ವವನ್ನು ಪಡೆದಿರುವ ಇವರ ರಂಗಭೂಮಿಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಚೆನ್ನವೀರ ಝುಳಕಿ

ವಿಜಾಪುರ ಜಿಲ್ಲೆಯ ರಂಗಭೂಮಿಯ ವಿಶಿಷ್ಟ ಸಂಘಟನಕಾರ ಚೆನ್ನವೀರ ಝುಳಕಿ. ಸಿಂದಗಿ ತಾಲ್ಲೂಕಿನ ಕಲಕೇರಿಯಲ್ಲಿ ಹುಟ್ಟಿದ ಝುಳಕಿ ಅವರು, ಸಧ್ಯ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ವಿಜಾಪುರ ಘಟಕದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ ಬಾಲ್ಯದ ರಂಗಭೂಮಿ ಒಲವು. ತರುಣ ಝುಳಕಿಯವರಲ್ಲಿ ಇಂದು ಹೆಮ್ಮರವಾಗಿ ಬೆಳೆದಿದೆ. ನಟರಾಗಿ ತಮ್ಮ ಅಭಿನಯ ಚಾತುರ್ಯವನ್ನು ಮೆರೆದಿರುವ ಝುಳಕಿಯವರ ಮುಖ್ಯ ನಾಟಕಗಳು ಸಂಗೊಳ್ಳಿ ರಾಯಣ್ಣ, ಜಗದ್ಗುರು ಇಬ್ರಾಹಿಂ, ಕೋಡಗನ ಕೋಳಿ ನುಂಗಿತ್ತು ಹುಲಿಯ ನೆರಳು, ಕಾಲಚಕ್ರ, ಶಂಕಿ ಮುಂತಾದವು.

ಸಂಘಟನೆಯಲ್ಲಿ ಕೌಶಲ್ಯವನ್ನು ಪಡೆದಿರುವ ಇವರು ಕರ್ನಾಟಕ ನಾಟಕ ಅಕಾಡೆಮಿ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ಬ್ರೆಕ್ಟ್ ಕುರಿತು ವಿಚಾರ ಸಂಕಿರಣ, ಕೊಳಚೆ ಪ್ರದೇಶದ ಮಕ್ಕಳಿಗಾಗಿ ರಂಗತರಬೇತಿ, ನಾಟಕೋತ್ಸವ, 'ಶತಮಾನದ ರಂಗ ಸಂಭ್ರಮ' ನಿರ್ವಹಣೆ, ಬೇಸಿಗೆ ಶಿಬಿರಗಳು, ನಾಟಕ ಸ್ಪರ್ಧೆ ಅಭಿನಂದನಾ ಸಮಾರಂಭ ಹೀಗೆ ಹತ್ತಾರು ಕ್ರಿಯಾಶೀಲ ಕಾರ್ಯಕ್ರಮಗಳನ್ನು ಸಂಘಟಿಸಿ ಯಶಸ್ವಿಯಾಗಿದ್ದಾರೆ. ಸಂಘಟನಾ ಚತುರ ಚೆನ್ನವೀರ ಝುಳಕಿ ಅವರ ರಂಗಭೂಮಿ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಕೆ. ಜಯರಾಮ ರೆಡ್ಡಿ

ರಂಗಭೂಮಿಯನ್ನು ಕಟ್ಟುವ ಕೆಲಸ ಕಷ್ಟದ್ದು. ಸಂಕೀರ್ಣ ಪ್ರದರ್ಶನ ಕಲೆಯಾದ ರಂಗಭೂಮಿ ನಾಟಕಕಾರ, ನಟ, ಪ್ರಸಾಧನ ಪಟು, ವಿನ್ಯಾಸಕಾರ, ಸಂಘಟನಕಾರ, ಸಂಗೀತಗಾರ ಹೀಗೆ ಹತ್ತು ಹಲವು ವಿಭಾಗಗಳಿಂದ ಪರಿಣತರನ್ನು ಬೇಡುತ್ತದೆ. ರಂಗಭೂಮಿಯಲ್ಲಿ ಸಂಘಟನೆಗೆ ಮಹತ್ವದ ಸ್ಥಾನವಿದೆ. ಪ್ರೋತ್ಸಾಹಕರನ್ನು ಅರಸಿ, ಸಂಪನ್ಮೂಲ ಸಂಗ್ರಹಿಸಿ, ಒಟ್ಟು ರಂಗಚಟುವಟಿಕೆಯನ್ನು ಯಶಸ್ವಿಗೊಳಿಸುವಲ್ಲಿ ಸಂಘಟಕನ ಪಾತ್ರಹಿರಿದು, ವೃತ್ತಿಯಲ್ಲಿ ಎಂಜಿನಿಯರ್ ಆಗಿ, ರಂಗಭೂಮಿಯ ಈ ವಿಭಾಗವನ್ನು ಯಶಸ್ವಿಯಾಗಿ ನಿಭಾಯಿಸಿದವರು ಕೆ. ಜಯರಾಮ ರೆಡ್ಡಿ, ಕಿರ್ಲೋಸ್ಕರ್ ಎಲೆಕ್ಟ್ರಿಕಲ್ ಕಂಪನಿ, ಐ.ಟಿ.ಐ. ಕಾರ್ಖಾನೆಗಳಲ್ಲಿ ಸೇವೆ ಸಲ್ಲಿಸುತ್ತಲೇ ಅಲ್ಲಿನ ಲಲಿತ ಕಲಾ ಸಂಘಗಳ ಮುಖ್ಯಸ್ಥರಾಗಿ, ಕಾರ್ಮಿಕ ರಂಗಭೂಮಿಯನ್ನು ಹೆಚ್ಚು ಯಶಸ್ವಿಗೊಳಿಸಿದವರು ಇವರು. ಆಧುನಿಕ ಹವ್ಯಾಸಿರಂಗದ ಬೆಳವಣಿಗೆಯಲ್ಲಿ ಕಾರ್ಮಿಕರ ಪಾತ್ರ ಅಪಾರವಾದ್ದು. ಯಾಂತ್ರಿಕ ಜಗತ್ತಿನಿಂದ, ಸೃಜನಶೀಲ ಜಗತ್ತಿಗೆ ಕಾರ್ಮಿಕ ಬಂಧುಗಳನ್ನು ಕಲಾವಿದರಾಗಿ ಪರಿಚಯಿಸಿದ ಕೀರ್ತಿ ಜಯರಾಮ ರೆಡ್ಡಿ ಅವರದು. ಕಳೆದ ಒಂದು ದಶಕದಿಂದ ಕರ್ನಾಟಕ ಕೈಗಾರಿಕಾ ಕ್ರೀಡಾ ಮತ್ತು ಲಲಿತಕಲಾ ಸಂಘದ ಆಡಳಿತಾಧಿಕಾರಿಯಾಗಿ, ಎ.ಡಿ.ಎ. ರಂಗಮಂದಿರದ ವ್ಯವಸ್ಥಾಪಕರಾಗಿ ಇಂದಿಗೂ ರಂಗಭೂಮಿ ಸೇವೆಸಲ್ಲಿಸುತ್ತಿದ್ದಾರೆ. ಇವರಿಗೆ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---

## ಕೆ. ಜಂಬುನಾಥ್



ಬಳ್ಳಾರಿ ಜಿಲ್ಲೆಯ ಹೊಸಪೇಟೆಯಲ್ಲಿ ಜನಿಸಿದ ಕಿರಂಗ ಜಂಬುನಾಥ್ ತಮ್ಮ ಬಾಲ್ಯದಿನಗಳಲ್ಲೇ ರಂಗಮಂಚಕ್ಕೆ ಪರಿಚಿತರಾದರು. ಶ್ರೀ ಸಾಲಿ ಪೊಂಪಯ್ಯನವರ ಕಂಪೆನಿಯ ಮೇಲೆ 'ವಿಜಯ ವಿದ್ಯಾರಣ್ಯ'ದಲ್ಲಿ ಅಭಿನಯಿಸಿ, ಮುಂದೆ ಲಂಕಾದಹನ, ಮೋಹಿನಿ–ರುಕ್ಮಾಂಗದ, ನಾರದ ಗರ್ವಭಂಗ, ಮುಂತಾದ ನಾಟಕಗಳಲ್ಲಿ ಅಭಿನಯಿಸಿ ಅಪಾರ ಮೆಚ್ಚುಗೆಗೆ ಪಾತ್ರರಾದರು.

ಇವರು 'ದತ್ತು–ಮಗ' ನಾಟಕದಲ್ಲಿ ಬಾಲವಿಧವೆಯ ಪಾತ್ರವನ್ನು ಮನೋಜ್ಞವಾಗಿ ಅಭಿನಯಿಸಿ ಹೊಸಪೇಟೆಯ ಮನೆ ಮಾತಾದರು. ಶಿಕ್ಷಣ ಇಲಾಖೆಯಲ್ಲಿ ನೌಕರಿ ಸಿಕ್ಕಿ, ಬಳ್ಳಾರಿಗೆ ಬಂದಮೇಲೆ, ಕನ್ನಡ ನಾಟಕಗಳು ಅಪರೂಪವೆಂಬಂತಿದ್ದ ಗಡಿನಾಡು ಜಿಲ್ಲೆ ಬಳ್ಳಾರಿಯಲ್ಲಿ ನಿರಂತರವಾಗಿ ಕನ್ನಡ ನಾಟಕಗಳ ಪ್ರದರ್ಶನವನ್ನು ಮಾಡತೊಡಗಿದರು. ಇವರ ಹೆಗ್ಗಳಿಕೆ 'ಗಾಂಧೀಜಿ' ಏಕಪಾತ್ರಾಭಿನಯ.

1958ರ ಅಖಿಲಭಾರತ ಕನ್ನಡ ಸಮ್ಮೇಳನದಲ್ಲಿ ಅಂದಿನ ರಾಜ್ಯಪಾಲರಾಗಿದ್ದ ಶ್ರೀ ಜಯಚಾಮರಾಜ ಒಡೆಯರ್ ಹಾಗೂ ಸಮ್ಮೇಳನಾಧ್ಯಕ್ಷರಾಗಿದ್ದ ಖ್ಯಾತ ಸಾಹಿತಿ ಶ್ರೀ ವಿ.ಕೃ. ಗೋಕಾಕರ ಸಮ್ಮುಖದಲ್ಲಿ 'ಗಾಂಧೀಜಿ' ಪಾತ್ರವನ್ನು ಪ್ರಸ್ತುತ ಪಡಿಸಿ ಅಪಾರ ಮೆಚ್ಚುಗೆಗಳಿಸಿದರು.

ಬಾಲ್ಯದಿಂದಲೂ ಸಂಗೀತದ ಗೀಳು ಹಾಗೂ ಬರವಣಿಗೆಯ ಹವ್ಯಾಸ. ಇವರು ರಂಗಭೂಮಿ ದಿಗ್ಗಜರ ಬಗ್ಗೆ ಬರೆದ ರೂಪಕಗಳು ಹೊಸಪೇಟೆಯ ಬಾನುಲಿಯಲ್ಲಿ ಬಿತ್ತರವಾಗಿ ಅಪಾರ ಮೆಚ್ಚುಗೆಗೆ ಪಾತ್ರವಾಗಿದೆ. ಇವರ ರಂಗಭೂಮಿ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---

## ಎಂ. ದ್ವಾರಕನಾಥ್



ಅಭಿನಯದ ಸೂಕ್ಷ್ಮತೆಗಳನ್ನು ಮೈಗೂಡಿಸಿಕೊಂಡು, ನಾಟಕಗಳಿಗೆ ತಮ್ಮ ಸಹಜ ಅಭಿನಯದಿಂದ ಜೀವತುಂಬುವ ಎಂ. ದ್ವಾರಕನಾಥ್, ಮೈಸೂರು ಹವ್ಯಾಸಿ ರಂಗಭೂಮಿಯ ಕೊಡುಗೆ. ತಂದೆ ಖ್ಯಾತ ನಟ ತಮಾಷ್ ಮಾಧವ್‌ರಾವ್ ಅವರಿಂದ ಅಭಿನಯ ಪ್ರತಿಭೆಯನ್ನು ಬಳುವಳಿಯಾಗಿ ಪಡೆದಿದ್ದಾರೆ.

ಮೈಸೂರು ಅಮೆಚೂರ್ ಸಂಸ್ಥೆಯ ಸ್ಥಾಪಕಸದಸ್ಯರಾಗಿ, ಕಲಾಪ್ರಿಯ, ಅಮರ ಕಲಾಸಂಘ, ಸಮುದಾಯ, ಸ್ನೇಹಸಂಪದ, ಕದಂಬ ರಂಗವೇದಿಕೆ ಮುಂತಾದ ರಂಗತಂಡಗಳ ಖಾಯಂ ನಟರಾಗಿ ದ್ವಾರಕಾನಾಥ್, ತಮ್ಮ ಅಭಿನಯದಿಂದ ಮೈಸೂರಿನ ಹವ್ಯಾಸಿ ರಂಗದ ಜನಮನಗೆದ್ದಿದ್ದಾರೆ.

ಇವರ ಅಭಿನಯದ ರಂಗಭಾರತ, ಏನಬೇಡಲಿ ನಿನ್ನ ಬಳಿಗೆ ಬಂದು, ಏವಂ ಇಂದ್ರಜಿತ್, ಕೋಮಲಗಾಂಧಾರ, ರಾವಿನದಿ ದಂಡೆಯಲ್ಲಿ, ಹುತ್ತವ ಬಡಿದರೆ, ಯಯಾತಿ ಮುಂತಾದ ನಾಟಕಗಳನ್ನು ಮರೆಯಲು ಸಾಧ್ಯವೇ ಇಲ್ಲ.

ರಂಗಭೂಮಿ ಸಂಘಟನೆಯಲ್ಲೂ ಅಪಾರ ಪರಿಶ್ರಮ ಹೊಂದಿರುವ ಇವರು ಅನೇಕ ನಾಟಕೋತ್ಸವಗಳನ್ನು ಯಶಸ್ವಿಯಾಗಿ ನಡೆಸಿದ್ದಾರೆ. ಬುದ್ಧಿಮಾಂದ್ಯಮಕ್ಕಳ ರಂಗಚಟುವಟಿಕೆಗಳಲ್ಲಿ ಆಸಕ್ತಿ ವಹಿಸಿ ರಂಗತರಬೇತಿ ಶಿಬಿರಗಳನ್ನು ನಿರ್ದೇಶಿಸಿದ್ದಾರೆ. ಇವರು ಉತ್ತಮ ತಬಲಾವಾದಕರು ಹೌದು. ಇವರ ರಂಗಭೂಮಿ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ನಟರಾಜ ಹೊನ್ನವಳ್ಳಿ

ನಟರಾಜ ಹೊನ್ನವಳ್ಳಿ ಇಂದಿನ ತಲೆಮಾರಿನ ಕ್ರಿಯಾಶೀಲ ನಿರ್ದೇಶಕ. ತಿಪಟೂರಿನ ಹೊನ್ನವಳ್ಳಿಯವರಾದ ಇವರು ತಮ್ಮ ಬಿ.ಕಾಂ. ಓದಿನ ನಂತರ ನೀನಾಸಂ ರಂಗ ಶಿಕ್ಷಣ ಕೇಂದ್ರಕ್ಕೆ ಸೇರಿದರು. ರಂಗಭೂಮಿಯ ಒಳಹೊರಗುಗಳನ್ನು ಆಸಕ್ತಿಯಿಂದ ಕಲಿತ ಹೊನ್ನವಳ್ಳಿ ಇಂದು ಸಮರ್ಥ ನಿರ್ದೇಶಕರಾಗಿ, ರಂಗ ಚಿಂತಕರಾಗಿ ರೂಪುಗೊಳ್ಳುತ್ತಿದ್ದಾರೆ.

ಅಭಿನಯ, ವಿನ್ಯಾಸ, ನಿರ್ದೇಶನದಲ್ಲಿ ನಟರಾಜ್ ತುಳಿದಿದ್ದು ಹೊಸಹಾದಿ. ತಮ್ಮ ನಿರ್ದೇಶನದಲ್ಲಿ ನಿರೂಪಣಾತಂತ್ರಕ್ಕೆ ಹೆಚ್ಚು ಒತ್ತುಕೊಟ್ಟು, ಕಥೆಯೊಂದಿಗೆ ಪ್ರೇಕ್ಷಕ ಪ್ರಜ್ಞಾಪೂರ್ವಕವಾಗಿ ತೊಡಗಿಸಿಕೊಳ್ಳುವಂತೆ ಮಾಡಿ, ರಂಗಾನುಭವದ ತೀವ್ರತೆಯನ್ನು ಒಮ್ಮೆಲೆ ದಕ್ಕಿಸಿಕೊಡುವ ನಿರ್ದೇಶನ ಕಲೆಯನ್ನು ಪ್ರಯೋಗಾತ್ಮಕವಾಗಿ ಅಷ್ಟೇ ಯಶಸ್ವಿಯಾಗಿ ಮೈಗೂಡಿಸಿಕೊಂಡಿದ್ದಾರೆ.

"ಕಥನ ಕಲೆ ನಮ್ಮ ಪರಂಪರೆಯಲ್ಲೇ ಇದೆ. ಅದರಲ್ಲೇ ನಾಟಕೀಯತೆಯೂ ಅಡಗಿದೆ. ಅದರ ಪುನರ್ ಸೃಷ್ಟಿ ನನ್ನ ಪ್ರಯತ್ನ" ಎನ್ನುವ ನಟರಾಜ್, ನೀನಾಸಂ ತಿರುಗಾಟದ ನಟರಾಗಿ, ಪ್ರೌಢಿಯೋ ರೆಪರ್ಟರಿಯ ನಿರ್ದೇಶಕರಾಗಿ ಅಪಾರ ಅನುಭವ ಪಡೆದಿದ್ದಾರೆ. ರಂಗಕಾರ್ಯಗಾರಗಳಲ್ಲಿ, ವಿಚಾರ ಸಂಕಿರಣಗಳಲ್ಲಿ ಸಕ್ರಿಯವಾಗಿತೊಡಗಿಸಿ ಕೊಳ್ಳುವ ನಟರಾಜ್, ಕನ್ನಡದ ಖ್ಯಾತ ಕಥೆಗಳ ರಂಗಾಭಿವ್ಯಕ್ತಿಯನ್ನು ಯಶಸ್ವಿಯಾಗಿ ಮಾಡಿದ್ದಾರೆ. ಇವರ ಕ್ರಿಯಾಶೀಲತೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ನಾ. ಶ್ರೀನಿವಾಸ

ಇಂದು ರಂಗಶಿಕ್ಷಣಕ್ಕೆ ಹಾಗೂ ಶಿಕ್ಷಣದಲ್ಲಿ ರಂಗಮಾಧ್ಯಮದ ಬಳಕೆಗೆ ಅಪಾರ ಪ್ರಾಮುಖ್ಯತೆ ದೊರಕುತ್ತಿದೆ. ಈ ಎರಡೂ ಕ್ಷೇತ್ರಗಳನ್ನು ತಮ್ಮ ಬದುಕಿನ ಗುರಿಯಾಗಿಸಿ ಕೊಂಡು ನಿರಂತರ ಕ್ರಿಯಾಶೀಲವಾಗಿರುವ ಪ್ರತಿಭೆ ನಾ. ಶ್ರೀನಿವಾಸ್. ಮೈಸೂರಿನಲ್ಲಿ ನಾ. ಶ್ರೀನಿವಾಸ್ 'ಪಾಪು' ಎಂದೇ ಪರಿಚಿತರು. ತಮ್ಮ ವಿದ್ಯಾಭ್ಯಾಸದ ನಂತರ ನಾಟಕ ಶಿಕ್ಷಕರಾಗಿ ಸರ್ಕಾರಿ ಸೇವೆಗೆ ಸೇರಿ, ಪೊನ್ನಂಪೇಟೆಯ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಇವರ 'ಕನಸಿನವರು', 'ಕುರಿತೇರು' ರಂಗಕೃತಿಗಳು ನಾಡಿನಾದ್ಯಂತ ಪ್ರದರ್ಶಿತವಾಗಿವೆ. ಅಸಂಖ್ಯ ಬೀದಿ ನಾಟಕಗಳು ರಂಗನಾಟಕಗಳು ಇವರ ಲೇಖನಿಯಿಂದ ಮೂಡಿಬಂದಿವೆ. ಹಲವಾರು ರಂಗಸಂಘಟನೆಗಳನ್ನು ಹುಟ್ಟುಹಾಕಿರುವ ಶ್ರೀನಿವಾಸ್ ತಮ್ಮ 'ಅಂಕ' ತಂಡದ ಮೂಲಕ ನೂರಾರು ಬೀದಿ ನಾಟಕಗಳನ್ನು ರಚಿಸಿ, ನಿರ್ದೇಶಿಸಿದ್ದಾರೆ. ರಂಗತರಬೇತಿಯಲ್ಲಿ ವಿಶೇಷ ಪರಿಣತಿ, ಶಿಕ್ಷಣವನ್ನು ರಂಗಮಾಧ್ಯಮದಲ್ಲಿ ಬಳಸುವ ಬಗ್ಗೆ ಇವರ ಪರಿಶ್ರಮ ಉಲ್ಲೇಖನೀಯ. ರಂಗಭೂಮಿಯ ಸಾಧ್ಯತೆಗಳನ್ನು ವಿಸ್ತರಿಸುವ ಇವರ ಪ್ರಯತ್ನ ನಿರಂತರ. ಹಾಗೆಂದೇ ಇವರು ಶಿಕ್ಷಣ ಮತ್ತು ರಂಗಭೂಮಿಯ ನಡುವಿನ ಸಂಪರ್ಕ ಸೇತುವಾಗಿ ಪಠ್ಯಪುಸ್ತಕ ರಚನೆಗಳಲ್ಲಿ ತೊಡಗಿಸಿ ಕೊಂಡಿದ್ದಾರೆ. ಸಾಮಾಜಿಕ ಪರಿವರ್ತನಾ ಕಲಾಜಾಥಾಗಳಲ್ಲಿ, ಸಾಕ್ಷರತಾ ಆಂದೋಲನಗಳಲ್ಲಿ ಸಕ್ರಿಯ ಪಾತ್ರ, ಇವರ ಬಹುಮುಖಿ ಪ್ರತಿಭೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.



## ಪ್ರಭಾಕರ ದ. ಕೋಪರ್ಡೆ

ತಮ್ಮ 14ನೇ ವರ್ಷದಲ್ಲೇ ರಂಗಭೂಮಿ ಪ್ರವೇಶ ಮಾಡಿದ ಪ್ರಭಾಕರ ಕೋಪರ್ಡೆ, ಹೆಚ್ಚಿನ ವಿದ್ಯಾಭ್ಯಾಸ ಮಾಡಲಿಲ್ಲ. ಆದರೂ ನಟರಾಗಿ, ನಾಟಕ ಕರ್ತೃವಾಗಿ ಅಪಾರ ಜನಮನ್ನಣೆ ಗಳಿಸಿದ್ದಾರೆ. ಬದುಕಿನ ಅನುಭವ, ಸುತ್ತಲಿನ ಸಮಾಜವನ್ನು ತಮ್ಮ ತೀಕ್ಷ್ಣ ಬುದ್ಧಿಯಿಂದ ವಿಶ್ಲೇಷಿಸುವ ಕೌಶಲ ಇವರಿಗೆ ದಕ್ಕಿದೆ. ಹಾಗಾಗಿ ಇವರು ಬರೆದಿರುವ ನಾಟಕಗಳು ಜನಪ್ರಿಯತೆ ಗಳಿಸಿವೆ.

'ಸಿಟ್ಟು ತನ್ನ ವೈರಿ', 'ಬನಹಟ್ಟಿ ಬಹದ್ದೂರ', 'ಎಲ್ಲಾ ಬಿಟ್ಟಾ ಕಾವಿ ತೊಟ್ಟ', 'ನನ್ನ ಹೆಂಡತಿಯ ಗಂಡ ನೀನು' ಮುಂತಾದವು ಇವರ ನಾಟಕಗಳು, ಶ್ರೀ ನೀಲಕಂಠೇಶ್ವರ ನಾಟ್ಯ ಸಂಘ, ರಾಮಾಪುರ ಶ್ರೀ ಮಹದೇಶ್ವರ ನಾಟ್ಯ ಸಂಘ, ರಾಮದುರ್ಗ, ಶ್ರೀ ಹುಚ್ಚೇಶ್ವರ ನಾಟ್ಯ ಸಂಘ ಕಮತಗಿ, ಶ್ರೀ ಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ, ಸುಳ್ಯ, ಶ್ರೀ ಗುರು ಮಾದೇಶ್ವರ ನಾಟ್ಯ ಸಂಘ, ಹಾನಗಲ್ಲ, ಅಲ್ಲದೆ ಹವ್ಯಾಸಿ ತಂಡ ಬಿಜಾಪುರದ 'ರಂಗಚೇತನ'ದಲ್ಲೂ ಅಭಿನಯಿಸಿದ್ದಾರೆ.

ಇವರ ಅಭಿನಯದ ಮುಖ್ಯ ನಾಟಕಗಳು ಬದುಕು ಬಂಗಾರವಾಯಿತು, ಹೇಮರೆಡ್ಡಿ ಮಲ್ಲಮ್ಮ, ಟಿಪ್ಪುಸುಲ್ತಾನ, ಗೆದ್ದವರು ಯಾರು, ಸಂಗೊಳ್ಳಿ ರಾಯಣ್ಣ ಮುಂತಾದವು.

ಇವರ ರಂಗಭೂಮಿಯ ಸೇವೆಯನ್ನು ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಕೆ. ಬಾಲಕೃಷ್ಣ ಪೈ (ಕುಳ್ಳಪ್ಪು)

ಆಕೃತಿ ಚಿಕ್ಕದಾದರೂ ಕೃತಿ ಮೇರು ಪರ್ವತ. ಕುಳ್ಳಪ್ಪು ಎಂದೇ ಖ್ಯಾತರಾದ ಕುಂದಾಪುರದ ಕೆ. ಬಾಲಕೃಷ್ಣ ಪೈ, 69ರ ಇಳಿವರ್ಷದಲ್ಲೂ ಚೈತನ್ಯದ ಚಿಲುಮೆ. ರಂಗಕಾಯಕವನ್ನು ನಿಷ್ಠೆಯಿಂದ ಮಾಡುತ್ತಾ ಜನಮನದಲ್ಲಿ ಶಾಶ್ವತ ನೆಲೆ ಪಡೆದಿರುವ ಕೆ. ಬಾಲಕೃಷ್ಣ ಪೈ, ನಟ, ನಿರ್ದೇಶಕ, ರಂಗ ಸಂಘಟಕ, ನಾಟಕಕಾರ, ನೇಪಥ್ಯ ಕಲಾವಿದ. ಹೀಗೆ ಇವರ ರಂಗಕರ್ಮದ ವ್ಯಾಪ್ತಿ ಬೆಳೆಯುತ್ತಾ ಹೋಗುತ್ತದೆ.

ಬಾಲ್ಯದ ಮನೆಯ ಪರಿಸರ, ತಾಯಿಯಿಂದ ಪ್ರೇರಿತವಾದ ನೃತ್ಯಾಸಕ್ತಿ ಯಕ್ಷಗಾನದ ಕುಣಿತ, ಚಂಡೆಮದ್ದಲೆ, ಹರಿಕಥೆಯ ನಾದಸುಧೆ... ಒಬ್ಬ ಕ್ರಿಯಾಶೀಲ ರಂಗಪಟು ರೂಪುಗೊಳ್ಳಲು ಇಷ್ಟೆಲ್ಲಾ ಒತ್ತಾಸೆಯಾಗಿ ಬಾಲಕ ಬಾಲಕೃಷ್ಣಪೈಗೆ ನಿಂತವು.

ಮುಂದೆ ತಮ್ಮೂರಿಗೆ ಬಂದ ನಾಟಕಕಂಪನಿಗಳು, ಪ್ರತಿಷ್ಠಿತ ರಂಗನಾಟಕಗಳು, ಕವಿಗಳ ಒಡನಾಟ, ಬಾಲಕೃಷ್ಣ ಪೈ ತಮ್ಮ ಆಕೃತಿಯಿಂದ ಕುಳ್ಳಪ್ಪುವಾದರೂ, ರಂಗಭೂಮಿಯನ್ನು ಇವರು ಅಪ್ಪಿದ ರೀತಿ ಅನನ್ಯ. ಕುಂದಾಪುರ ಪ್ರದೇಶದಲ್ಲಿ ರಂಗಚಟುವಟಿಕೆಯನ್ನು ಜೀವಂತವಾಗಿಡಲು ಇವರು 'ರೂಪರಂಗ', ನಂತರದ 'ರೂಪಕಲಾ' ಮೂಲಕ ಅಪಾರವಾಗಿ ಶ್ರಮಿಸಿದರು. ಸದಾ ಹೊಸತನ್ನು ಅರಸುವ, ಹೊಸತನ್ನು ಕನಸುವ ಬಾಲಕೃಷ್ಣ ಪೈ ಇಂದಿನ, ಎಲ್ಲಾ ರಂಗಾಸಕ್ತರಿಗೆ, ಕಲಾವಿದರಿಗೆ ಮಾದರಿ. ಇವರ ರಂಗಭೂಮಿಯಲ್ಲಿನ ಸುದೀರ್ಘ ಕ್ರಿಯಾಶೀಲತೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.

---



## ಭೀಮಪ್ಪ ಅಣ್ಣಪ್ಪ ಸನದಿ

ಕೃಷಿಯನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡರೂ, ರಂಗಭೂಮಿಯಲ್ಲಿ ಕೃಷಿಮಾಡುವ ಪ್ರವೃತ್ತಿ ಬಿ.ಎ. ಸನದಿ ಅವರದ್ದು. ಬಾಲ್ಯದ ರಂಗಭೂಮಿ ಒಲವು, ಆಗೊಮ್ಮೆ ಈಗೊಮ್ಮೆ ಪಾತ್ರ ಮಾಡಿದರೂ, ಒಟ್ಟು ರಂಗಭೂಮಿಯ ಪೋಷಕರಾಗಿ, ಕಲಾರಾಧಕರಾಗಿ ಸನದಿಯವರು ಇಂದು ಉತ್ತರ ಕರ್ನಾಟಕ ರಂಗಭೂಮಿಗೆ ಚೇತನ ಸ್ವರೂಪರಾಗಿದ್ದಾರೆ.

ವರ್ಷದಲ್ಲಿ 3 ತಿಂಗಳು ತಮ್ಮ ಸಿನಿಮಾ ಮಂದಿರವನ್ನೇ ರಂಗಭೂಮಿಯನ್ನಾಗಿ ಪರಿವರ್ತಿಸಿ, ವೃತ್ತಿಕಂಪನಿಗಳನ್ನು ಆಹ್ವಾನಿಸಿ ನಾಟಕ ಪ್ರದರ್ಶನಕ್ಕೆ, ಜೀವನ ನಿರ್ವಹಣೆಗೆ ಅವಕಾಶವನ್ನು ಕಲ್ಪಿಸಿಕೊಡುವ ಪರಿಪಾಠ ಬೆಳೆಸಿಕೊಂಡು ಬಂದಿದ್ದಾರೆ. ನಾಟಕದ ಹುಚ್ಚಿನಲ್ಲಿ ನಟನಾಗಬಹುದಿತ್ತು, ಕಂಪನಿಯನ್ನು ಕಟ್ಟಬಹುದಿತ್ತು. ಆದರೆ ವೃತ್ತಿ ಕಂಪನಿಗಳಿಗೆ ಅಗತ್ಯವಾದ ಖಾಯಂ ರಂಗಮಂದಿರ ಹಾಗೂ ಪ್ರದರ್ಶನದ ವ್ಯವಸ್ಥೆ ಮಾಡಿ ಅದಕ್ಕಿಂತ ಮಹತ್ವದ ಕಾರ್ಯ ಕೈಗೊಂಡಿದ್ದಾರೆ.

ನಾಡಿನ ಶ್ರೇಷ್ಠ ಕಲಾವಿದರೆಲ್ಲಾ ಈ ರಂಗ ಮಂಚದ ಮೇಲೆ ಅಭಿನಯಿಸಿದ್ದಾರೆ. ನಟನೆಯನ್ನೇ ಹವ್ಯಾಸವಾಗಿಸಿಕೊಂಡು, ಕೃಷಿಯನ್ನು ವೃತ್ತಿಯನ್ನಾಗಿಸಿ ರಂಗಭೂಮಿಯನ್ನು ಪೋಷಿಸುವ ಇವರಂಥ ಪೋಷಕರು ಇಂದು ಕನ್ನಡ ರಂಗಭೂಮಿಗೆ ಬೇಕಾಗಿದೆ. ಇವರ ರಂಗಭೂಮಿಯ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಆರ್.ಎಸ್. ರಾಜಾರಾಂ

ನಟರಂಗ ಪ್ರತಿಷ್ಠಿತ ನಾಟಕ ತಂಡ. ಈ ತಂಡದ ರಂಗಪ್ರತಿಭೆ ಆರ್.ಎಸ್. ರಾಜಾರಾಂ, ಕೆ.ಜಿ.ಎಫ್. ನವರು. ತಂದೆಯವರ ವರ್ಗಾವಣೆಯಿಂದ ಬೆಂಗಳೂರಿಗೆ ಬಂದ ಇವರ ರಂಗಚಟುವಟಿಕೆಗಳ ಕ್ಷೇತ್ರ ಮೊದಲಿಗೆ ಮಲ್ಲೇಶ್ವರಂ. 1954ರಿಂದಲೇ ಮಲ್ಲೇಶ್ವರಂನ ವಿವಿಧ ಸಾಂಸ್ಕೃತಿಕ ಸಂಘಟನೆಗಳಲ್ಲಿ ನಟನಾಗಿ ಕ್ರಿಯಾಶೀಲರಾಗಿದ್ದ ರಾಜಾರಾಂ, 1964ರಲ್ಲಿ ಸಚಿವಾಲಯದ ಸಹೋದ್ಯೋಗಿಗಳೊಳಗೂಡಿ ಸಚಿವಾಲಯ ಸಾಂಸ್ಕೃತಿಕ ಸಂಘದ ಸ್ಥಾಪನೆಗೆ ಕಾರಣರಾಗಿ ಅನೇಕ ಪ್ರಖ್ಯಾತ ನಾಟಕಗಳಲ್ಲಿ ಭಾಗವಹಿಸಿದರು. ಜೊತೆಗೆ ವಾರ್ತಾ ಇಲಾಖೆಯ ಸಂಗೀತ ನಾಟಕ ವಿಭಾಗದ ನಾಟಕಗಳಲ್ಲೂ ಅಭಿನಯ.

1972ರಿಂದ ನಟರಂಗ ತಂಡದ ಅವಿಭಾಜ್ಯ ಅಂಗವಾಗಿ ಕಾಕನಕೋಟೆ, ತುಘಲಕ್, ಮೃಚ್ಛಕಟಿಕ, ಸಂಕ್ರಾಂತಿ ಮುಂತಾದ ನಾಟಕಗಳಲ್ಲಿ ಅಭಿನಯ, 1983ರಲ್ಲಿ ಅಸ್ತಿತ್ವಕ್ಕೆ ಬಂದ ವೇದಿಕೆ ತಂಡದೊಂದಿಗೆ ಇವರ ಚಟುವಟಿಕೆ. ಖ್ಯಾತ ನಿರ್ದೇಶಕರಾದ ಬಿ.ವಿ. ಕಾರಂತ, ಎಂ.ಎಸ್. ಸತ್ಯು, ಆರ್. ನಾಗೇಶ್, ಸಿ.ಆರ್. ಸಿಂಹ ಮುಂತಾದವರ ನಿರ್ದೇಶನದಲ್ಲಿ ಅಭಿನಯಿಸಿ ಜನಪ್ರಿಯತೆಗಳಿಸಿದ್ದಾರೆ.

ಕರ್ನಾಟಕದಾದ್ಯಂತ, ಅಲ್ಲದೆ ರಾಷ್ಟ್ರದ ಮುಖ್ಯನಗರಗಳಲ್ಲೂ ಅಭಿನಯಿಸಿರುವ ರಾಜಾರಾಂ ಸಿನಿಮಾ ಹಾಗೂ ಕಿರುತೆರೆಯಲ್ಲೂ ನಟಿಸಿ ತಮ್ಮ ಪ್ರತಿಭೆಯನ್ನು ಪ್ರದರ್ಶಿಸಿದ್ದಾರೆ. ಇವರ ಸುದೀರ್ಘ ರಂಗಭೂಮಿ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---

## ಪಿ.ಎಲ್. ರಂಗಸ್ವಾಮಯ್ಯ



ಬಾಲ್ಯದಿಂದಲೇ ಸಂಗೀತದ ಬಗ್ಗೆ ಅಪಾರ ಒಲವು. ಬಡತನದ ಬೇಗೆಯಿಂದ 7ನೇ ತರಗತಿಗೆ ವಿದ್ಯಾಭ್ಯಾಸವನ್ನು ಕೊನೆಗಾಣಿಸಿದರೂ, ತಮ್ಮ ಸಂಗೀತಾಭಿರುಚಿಯನ್ನು ಬಿಟ್ಟುಕೊಡಲಿಲ್ಲ ಬಾಲಕ ರಂಗಸ್ವಾಮಯ್ಯ. ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಇರಕಸಂದ್ರ ಗ್ರಾಮದಲ್ಲಿ ಇವರ ಜನನ. ತ್ಯಾಗಟೂರು ಗ್ರಾಮದ ಶ್ರೀ ಮಹಾಲಿಂಗಪ್ಪ ಅವರಲ್ಲಿ ಆರಂಭಿಕ ಸಂಗೀತ ಅಭ್ಯಾಸ. ಹಾರ್ಮೋನಿಯಂ ಕಲಿಕೆಯನ್ನೇ ಜೀವದ ಉಸಿರನ್ನಾಗಿಸಿಕೊಂಡ ರಂಗಸ್ವಾಮಯ್ಯ ಆಸ್ಥಾನ ವಿದ್ವಾನ್ ಆರ್. ಸಿದ್ದಲಿಂಗಸ್ವಾಮಿ ಅವರ ಬಳಿ 5 ವರ್ಷಗಳ ಕಾಲ ಸತತ ಸಂಗೀತಾಭ್ಯಾಸ ಮಾಡಿದರು. ಸಂಗೀತದ ಜೊತೆ ಜೊತೆಗೂ ರಂಗಾಸಕ್ತಿ, ಇವರಿಗೆ ಹಾರ್ಮೋನಿಯಂ ಮೇಷ್ಟ್ರ ಪದವಿಯನ್ನು ತಂದುಕೊಟ್ಟಿತು. ಹಳ್ಳಿಯಿಂದ ಹಳ್ಳಿಗೆ ಪಯಣಿಸಿ ನೂರಾರು ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳನ್ನು ನಿರ್ದೇಶಿಸಿದ ಕೀರ್ತಿ ಇವರದು. ನಾಟಕ ಕಲೆಯನ್ನೇ ಜೀವನಾಧಾರ ಮಾಡಿಕೊಂಡು, ನಿರಂತರ ರಂಗಸೇವೆಯಲ್ಲಿ ತನ್ಮಯರಾಗಿರುವ ರಂಗಸ್ವಾಮಯ್ಯನವರಿಗೆ ಹತ್ತು ಹಲವು ಪ್ರಶಸ್ತಿಗಳು ಸಂದಿವೆ. ಇವರ ರಂಗಸೇವೆಯನ್ನು ಗೌರವಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿಯನ್ನು ನೀಡುತ್ತಿದೆ.



## ಡಾ॥ ರಾಜಶೇಖರ ಹೆಚ್.ಎಸ್. (ರಾಜಶೇಖರ ಹನುಮಲಿ)



ಬಹುಮುಖಿ ಆಸಕ್ತಿ ಹೊಂದಿರುವ ರಾಜಶೇಖರ ಹನುಮಲಿ, ನಾಟಕಕಾರ–ನಟ, ಸಂಘಟಕ ಹಾಗೂ ನಿರ್ದೇಶಕರು. ವೃತ್ತಿಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಅಪಾರ ಪರಿಶ್ರಮ ಪಡೆದಿರುವ ರಾಜಶೇಖರ 'ವೀರಗಾಸೆ' ಕುರಿತು ತಮ್ಮ ಸಂಶೋಧನಾ ಕೃತಿ ರಚಿಸಿದ್ದು ಕುವೆಂಪು ವಿಶ್ವವಿದ್ಯಾಲಯದ ಡಾಕ್ಟರೇಟ್ ಪದವಿಗಳಿಸಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ರಂಗಾಪುರದವರಾದ ರಾಜಶೇಖರ ಹನುಮಲಿ ಅವರು ಬಾಲ್ಯದಿಂದಲೇ ರಂಗಭೂಮಿ ಒಲವು ಬೆಳೆಸಿಕೊಂಡವರು. ಸಿರಿಗೆರೆಯ ತರಳಬಾಳು ಕಲಾಸಂಘದಲ್ಲಿ ನಟರಾಗಿ, ನಿರ್ದೇಶಕರಾಗಿ, ನೇಪಥ್ಯಪಟುವಾಗಿ ಕಳೆದ 40 ವರ್ಷಗಳಿಂದ ನಿರಂತರವಾಗಿ ತೊಡಗಿಸಿಕೊಂಡಿದ್ದಾರೆ. 'ಮಹಾಬೆಳಗು' ಇವರಿಂದ ರಚಿತವಾದ ನಾಟಕ, ರಂಗದ ಮೇಲೆ ಅಪಾರ ಯಶಸ್ವಿಯಾಗಿದೆ. ರಂಗನಾಟಕ, ರೂಪಕ, ಬಾನುಲಿ ನಾಟಕಗಳನ್ನು ರಚಿಸಿರುವ ರಾಜಶೇಖರ್ ಅವರು 50ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಶಾಲಾ–ಕಾಲೇಜುಗಳಲ್ಲಿ ನಿರಂತರ ರಂಗಚಟುವಟಿಕೆಗಳನ್ನು ನಡೆಸುತ್ತಿದ್ದಾರೆ. ಇವರ ರಂಗಭೂಮಿಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿಯ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ರಾಜು ತಾಳಿಕೋಟೆ (ಕರ್ಜಗಿ)



ಕುಟುಂಬದ ರಂಗಭೂಮಿ ಪರಿಸರ ಬಾಲಕ ರಾಜುತಾಳಿಕೋಟೆಗೆ ರಂಗಭೂಮಿಯಲ್ಲಿ ಆಸಕ್ತಿ ಮೂಡಿಸಿದ್ದು ಸಹಜ. ತಂದೆ ಕಂಪನಿ ನಟ, ಕಲೆಯ ಬಲೆ ಕೈಬೀಸಿ ಕರೆದಾಗ ಶಿಕ್ಷಕ ವೃತ್ತಿಯಲ್ಲಿದ್ದ ತಾಯಿ, ನೌಕರಿಯನ್ನು ಬಿಟ್ಟು ತಮ್ಮ ಗಂಡನೊಡನೆ ರಂಗಪ್ರವೇಶ ಮಾಡಿದರು. ವಿದ್ಯಾಭ್ಯಾಸ ಮಾಡುತ್ತಿದ್ದ ರಾಜು ತಾಳಿಕೋಟೆ, ಅರ್ಧದಲ್ಲೇ ಶಾಲೆ ಬಿಟ್ಟು ರಂಗಪ್ರವೇಶ ಮಾಡಿದರು.

ನಾಟಕ ಕಂಪನಿಯನ್ನು ಕಟ್ಟಬೇಕೆಂಬ ಮಹದಾಸೆ ಇದ್ದರೂ, ಆರ್ಥಿಕ ಸಂಪನ್ಮೂಲದ ಕೊರತೆಯ ಕಾರಣ ಹಲವಾರು ಕಂಪನಿಗಳಲ್ಲಿ ನಟರಾಗಿ, ತಾಂತ್ರಿಕ ವರ್ಗದಲ್ಲಿ ಕಾಯಕ ಮಾಡುತ್ತಾ ಬೆಳೆದರು. ತಮ್ಮ ಸಹೋದರನೊಟ್ಟಿಗೆ 1984ರಲ್ಲಿ ಶ್ರೀ ಖಾಸ್ಗತೇಶ್ವರ ಕಂಪನಿಯನ್ನು ತಮ್ಮೂರಲ್ಲೇ ಹುಟ್ಟುಹಾಕಿ ಅದೃಷ್ಟ ಪರೀಕ್ಷೆ ಮಾಡಿದರು. ಹತ್ತು ವರ್ಷಗಳ ಕಾಲ ಕಂಪನಿಯನ್ನು ಯಶಸ್ವಿಯಾಗಿ ನಡೆಸಿದರೂ, ಸಾಲದ ಭಾರದಿಂದ ಕಂಪನಿಯನ್ನು ಮುಂದುವರಿಸಲಾಗಲಿಲ್ಲ ಇವರಿಗೆ. ಶ್ರೀ ಹುಚ್ಚೇಶ್ವರ ನಾಟಕ ಕಂಪನಿಯಲ್ಲಿ ತಮ್ಮ ಪತ್ನಿಯೊಂದಿಗೆ ಹತ್ತು ವರ್ಷಗಳ ಕಾಲ ನಟಿಸಿ ಜನಪ್ರಿಯತೆಗಳಿಸಿದರು. ಮತ್ತೆ ತಮ್ಮ ಖಾಸಗೀ ಕಂಪನಿಗೆ ಚಾಲನೆ ನೀಡಿದ ಶ್ರೀಯುತರಿಗೆ ಈಗ ತಮ್ಮ ವೃತ್ತಿ ಜೀವನದ ರಜತ ವರ್ಷದ ಸಂಭ್ರಮ. ಇವರ ರಂಗಭೂಮಿ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.



## ವಸಂತ ಬನ್ನಾಡಿ

ಶಾಲಾ ವಾರ್ಷಿಕೋತ್ಸವದ ರೋಚಕ ಅನುಭವವನ್ನು ನೆನಪಿಸಿಕೊಳ್ಳುವ ವಸಂತ ಬನ್ನಾಡಿ, ಕುಂದಾಪುರ ಭಂಡಾರ್ಕಾರ್ಸ್ ಕಾಲೇಜಿನಲ್ಲಿ ಬಿ.ಕಾಂ. ಪದವಿ ಓದುವಾಗ ಆಧುನಿಕ ರಂಗಭೂಮಿಯನ್ನು ಪರಿಚಯ ಮಾಡಿಕೊಂಡರು. ಮುಂದೆ ಮೈಸೂರಿನಲ್ಲಿ ಎಂ.ಕಾಂ. ಓದುವಾಗ ಆಧುನಿಕ ರಂಗ ಪ್ರಯೋಗಗಳ ಗಟ್ಟಿತನಗಳು ಇವರಿಗೆ ರಂಗಭೂಮಿಯ ಆಕರ್ಷಣೆಯನ್ನು ಹೆಚ್ಚಿಸಿದವು. ಪ್ರಸನ್ನರ 'ಗೆಲಿಲಿಯೋ', ವೆಂಕಟಸುಬ್ಬಯ್ಯನವರ 'ಮಹಾನಿರ್ವಾಣ' ಇಂಥ ಪ್ರಭಾವ ಬೀರಿದ ಪ್ರಯೋಗಗಳಲ್ಲಿ ಕೆಲವು.

ಮತ್ತೆ ಭಂಡಾರ್ಕಾರ್ಸ್ ಕಾಲೇಜಿಗೆ ಅಧ್ಯಾಪನ ಮಾಡಲು ಬಂದಾಗ ಪ್ರಿನ್ಸಿಪಾಲರಾಗಿದ್ದ ಡಾ॥ ಹೆಚ್. ಶಾಂತಾರಾಮ್ ಅವರ ಪ್ರೋತ್ಸಾಹದಿಂದ 'ಅಸಂಗತ ನಾಟಕ ವೇದಿಕೆ'ಯನ್ನು ಹುಟ್ಟುಹಾಕಿ ಹಲವಾರು ಅಸಂಗತ ನಾಟಕಗಳನ್ನು ಪ್ರದರ್ಶಿಸಿದರು. ನಿರಂತರ ಹುಡುಕಾಟದ ಮನಸ್ಸಿನ ವಸಂತ ಬನ್ನಾಡಿ, ರಂಗಭೂಮಿ ಮತ್ತು ಸಾಹಿತ್ಯದಲ್ಲಿ ತೀವ್ರವಾಗಿ ತೊಡಗಿಸಿಕೊಂಡು, 'ಜನರಂಗ' ಸಂಸ್ಥೆಯ ಜನನಕ್ಕೆ ಕಾರಣರಾದರು. ಈ ಸಂಸ್ಥೆಯ ಮೂಲಕ ಚಾಕ್‌ಸರ್ಕಲ್, ಜಾತ್ರೆ, ಜನಶತ್ರು, ಕತ್ತಲೆದಾರಿ ದೂರ, ತಲೆದಂಡ ಮುಂತಾಗಿ ವೈವಿಧ್ಯಮಯ, ವಿಚಾರ ಪೂರ್ಣನಾಟಕಗಳನ್ನು ನೀಡಿದ ಕೀರ್ತಿ ಇವರದು. ಕುಂದಾಪುರಕ್ಕೆ ಆಧುನಿಕ ರಂಗಪರಂಪರೆಯನ್ನು ಪರಿಚಯಿಸಿ ಒಟ್ಟು ರಂಗಭೂಮಿಗೆ ಇವರು ಸಲ್ಲಿಸಿದ ಸೇವೆಯನ್ನು ಗಮನಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಬಿ.ಆರ್. ವೆಂಕಟರಮಣ ಐತಾಳ್

ಉಡುಪಿ ಜಿಲ್ಲೆಯ, ಕುಂದಾಪುರ ತಾಲ್ಲೂಕು ಶಂಕರನಾರಾಯಣ ಗ್ರಾಮದ ಸಮೀಪದ ಕ್ರೋಡಬೈಲೂರಿನ ವೆಂಕಟರಮಣ ಐತಾಳ್ ಇಂದು ಆಧುನಿಕ ಕನ್ನಡ ರಂಗಭೂಮಿಯ ಪ್ರಮುಖ ಚಿಂತಕರಲ್ಲಿ ಒಬ್ಬರು. ತಮ್ಮ ಪರಿಸರದ ಯಕ್ಷಗಾನ ಕಲೆಯನ್ನು ಮೈಗೂಡಿಸಿಕೊಂಡೇ ಬೆಳೆದ ವೆಂಕಟರಮಣ ಐತಾಳ, ಕನ್ನಡ ಮತ್ತು ಸಂಸ್ಕೃತ ರಂಗಭೂಮಿ ನಡುವಿನ ಕೊಂಡಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ತಮ್ಮ ಓದಿನ ನಂತರ ಯಕ್ಷಗಾನ ಕೇಂದ್ರ ಉಡುಪಿಯಲ್ಲಿ, ನೀನಾಸಂ ರಂಗಶಿಕ್ಷಣ ಕೇಂದ್ರದಲ್ಲಿ, ತ್ರಿಚೂರ್‌ನ 'ಸ್ಕೂಲ್ ಆಫ್ ಡ್ರಾಮಾ'ದಲ್ಲಿ ವಿಶೇಷವಾಗಿ ಯಕ್ಷಗಾನ, ರಂಗಭೂಮಿಯನ್ನು ಕಲಿತು, ಪ್ರಸ್ತುತ

ನೀನಾಸಂ ರಂಗಶಿಕ್ಷಣಕೇಂದ್ರದಲ್ಲಿ ಅಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಕನ್ನಡ, ಸಂಸ್ಕೃತ ಎರಡು ಭಾಷೆಗಳಲ್ಲೂ ವಿಶೇಷವಾಗಿ ನಾಟಕಗಳನ್ನು ನಿರ್ದೇಶಿಸಿರುವ ಐತಾಳ್ ಅವರು, ರಂಗಭೂಮಿ ಕುರಿತು ಅನೇಕ ಚಿಂತನಾ ಕೃತಿಗಳನ್ನು, ಮಕ್ಕಳ ನಾಟಕಗಳನ್ನು ರಚಿಸಿದ್ದಾರೆ. ಹಲವಾರು ಅನುವಾದಗಳನ್ನು ಮಾಡಿ ಕನ್ನಡ ರಂಗಭೂಮಿ ಸಾಹಿತ್ಯಕ್ಕೆ ಕೊಡುಗೆ ನೀಡಿದ್ದಾರೆ.

ನೀನಾಸಂ, ತಿರುಗಾಟದ ನಾಟಕಗಳು ಸೇರಿದಂತೆ ಕರ್ನಾಟಕದ ವಿವಿಧ ರಂಗತಂಡಗಳಿಗೆ ನಾಟಕ ನಿರ್ದೇಶಿಸಿರುವ ಐತಾಳ ಅವರಿಗೆ ಬಿ.ವಿ. ಕಾರಂತ, ಫ್ರಿಟ್ಸ್‌ಬೆನಿವಿಟ್ಸ್, ಮೈಕಲ್ ಪ್ಯಾಟಸನ್, ಭಾಸ್ಕರ್ ಚಂದಾವರ್ಕರ್, ಕಾವಾಲಂ ನಾರಾಯಣ ಪಣಿಕ್ಕರ್, ರುಸ್ತುಂ ಭರೋಚಿ ಮುಂತಾದ ದಿಗ್ಗಜರೊಂದಿಗೆ ಕಾರ್ಯನಿರ್ವಹಿಸಿದ ಅನುಭವ. ಇವರ ರಂಗಭೂಮಿ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ವೀರಯ್ಯ ಬಸಲಿಂಗಯ್ಯ ಹಿರೇಮಠ ಮಂಡಲಗಿರಿ

ವೀರಯ್ಯ ಬಸಲಿಂಗಯ್ಯ ಹಿರೇಮಠ ಹವ್ಯಾಸಿ ಕಲಾವಿದರಾಗಿ ರಂಗಭೂಮಿಯ ಪ್ರವೇಶಮಾಡಿ, ನಂತರ ತಮ್ಮದೇ ಆದ ಸ್ವಂತ ಕಂಪನಿಯನ್ನು ಯಶಸ್ವಿಯಾಗಿ ನಡೆಸಿದರು.

ತಮ್ಮ ಪಿ.ಯು.ಸಿ. ವ್ಯಾಸಂಗದ ನಂತರ ತಮ್ಮೂರಿನ ಯುವಕರನ್ನು ಒಗ್ಗೂಡಿಸಿ ಶ್ರೀ ವೀರೇಶ್ವರ ಹವ್ಯಾಸಿ ಯುವಕ ಕಲಾಸಂಘವನ್ನು 1976ರಲ್ಲಿ ಸ್ಥಾಪಿಸಿ, ಗ್ರಾಮಾಂತರ ಪ್ರದೇಶಗಳಲ್ಲಿ ಹಲವು ವರ್ಷಗಳ ಕಾಲ ನಾಟಕ ಚಟುವಟಿಕೆಗಳನ್ನು ನಡೆಸಿದರು.

1993ರಲ್ಲಿ ಪಂ॥ ಪುಟ್ಟರಾಜ ಗವಾಯಿಗಳ ಆಶೀರ್ವಾದದಿಂದ ಶ್ರೀ ಗುರು ತೋಂಟದಾರ್ಯ ನಾಟ್ಯ ಸಂಘ ಸ್ಥಾಪಿಸಿ, ಯಶಸ್ವಿಯಾಗಿ ಕಂಪನಿಯನ್ನು ನಡೆಸುತ್ತಿದ್ದಾರೆ. ಇದಕ್ಕೆ ಮುನ್ನ ಇವರು ಶ್ರೀ ಮುದ್ದಾನೇಶ್ವರ ನಾಟ್ಯ ಸಂಘ, ಶಿರಗುಪ್ಪ, ಶ್ರೀ ಶೈಲ–ಸೂಚಿ ಮಲ್ಲಿಕಾರ್ಜುನ ನಾಟ್ಯ ಸಂಘ, ಶ್ರೀ ಸಂಗಮೇಶ್ವರ ನಾಟ್ಯ ಸಂಘ ಆಶಾಪೂರ, ಶ್ರೀ ಗುರು ಸಂಗಮೇಶ್ವರ ನಾಟ್ಯ ಸಂಘ, ಗುಡಿಗೇರಿ ಕಂಪನಿಗಳಲ್ಲಿ ನಟಿಸಿ ಅನುಭವ ಪಡೆದರು.

ರಂಗಭೂಮಿ ಚಟುವಟಿಕೆಗಳೊಟ್ಟಿಗೆ ಸಮಾಜ ಸೇವಾ ಕಾರ್ಯದಲ್ಲೂ ತೊಡಗಿಸಿಕೊಂಡಿರುವ ಇವರು ತಮ್ಮ ಸಂಸ್ಥೆಯ ಮೂಲಕ ಶ್ರೀ ಏಣಗಿ ಬಾಳಪ್ಪ ಶ್ರೀಮತಿ ನಾಗರತ್ನಮ್ಮ ಮುಂತಾದ ರಂಗ ಶ್ರೇಷ್ಠರನ್ನು ಸನ್ಮಾನಿಸಿ, ತಮ್ಮ ಘನತೆಯನ್ನು ಹೆಚ್ಚಿಸಿಕೊಂಡಿದ್ದಾರೆ. ಇವರ ರಂಗಭೂಮಿ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಎಸ್. ವೀರಪ್ಪ ಕುಕ್ಕವಾಡ

ಹೊನ್ನಾಳಿ ತಾಲ್ಲೂಕಿನ ಬೇಲಿಮಲ್ಲೂರು ಗ್ರಾಮದ ರಂಗ ಪ್ರತಿಭೆ ಎಸ್. ವೀರಪ್ಪ ಕುಕ್ಕವಾಡ. ಜೀವನ ನಿರ್ವಹಣೆಗೆ ರಂಗಭೂಮಿಯನ್ನು ಆಶ್ರಯಿಸದಿದ್ದರೂ, ವೃತ್ತಿ ನಾಟಕ ನಟರಾಗಿ ತಮ್ಮ ರಂಗ ಕಾಯಕವನ್ನು ನಿರಂತರವಾಗಿ ನಡೆಸಿದರು. ಎಚ್.ಟಿ. ಮಹಾಂತೇಶ ಶಾಸ್ತ್ರಿಗಳ 'ಅಣ್ಣ–ತಮ್ಮ' ಇವರು ಮೊದಲು ಬಣ್ಣ ಹಚ್ಚಿದ ನಾಟಕ. ಹಿರಿಯ ರಂಗನಟ ಪುಟ್ಟಪ್ಪನವರ ಮಾರ್ಗದರ್ಶನದಲ್ಲಿ ನಟನೆಯ ಪ್ರಾಥಮಿಕ ತಿಳುವಳಿಕೆ ಪಡೆದರು.

ಎಚ್.ಎನ್. ಹೂಗಾರ, ಕೆ.ಎನ್. ಸಾಳುಂಕೆ, ಬಿ.ವಿ. ಈಶ, ಪಿ.ಬಿ. ಧುತ್ತರಗಿ, ಮೋಹನಚಂದ ಕೀರಣಗಿಯವರ ನಾಟಕಗಳಲ್ಲಿ ವಿವಿಧ ಪಾತ್ರ ಅಭಿನಯಿಸಿ ಸೈ ಅನ್ನಿಸಿಕೊಂಡರು.

ಕುಕ್ಕವಾಡ ಸಕ್ಕರೆ ಕಾರ್ಖಾನೆಯಲ್ಲಿ ಗುಮಾಸ್ತರಾಗಿ ಕಾರ್ಯನಿರ್ವಹಿಸುತ್ತ ದಾವಣಗೆರೆಯಲ್ಲಿ ಹವ್ಯಾಸಿ ರಂಗದ ತೆಕ್ಕೆಗೆ ಬಂದರು. ರಾಜಾರಾಮ ಗಿರಿಯನ್ ಅವರ 'ಸ್ನೇಹಸಂಪದ' ತಂಡದಲ್ಲಿ ಜೈಸಿದ ನಾಯ್ಕ, ನಾಯಿಕತೆ, ಗೋಕರ್ಣದ ಗೌಡಶಾನಿ, ಸಂಕ್ರಾಂತಿ ಮುಂತಾದ ನಾಟಕಗಳಲ್ಲಿ ತಮ್ಮ ಅಪ್ರತಿಮ ಅಭಿನಯವನ್ನು ಮೆರೆದರು. ಹೆಗ್ಗೋಡಿನ ನೀನಾಸಂನಲ್ಲೂ ತರಬೇತಿಯನ್ನು ಪಡೆದು ವೃತ್ತಿ ಹಾಗೂ ಆಧುನಿಕ ರಂಗಭೂಮಿ ಎರಡರಲ್ಲೂ ಪರಿಣತಿ ಗಳಿಸಿದರು. ಅನೇಕ ನಾಟಕಗಳನ್ನು ರಚಿಸಿದ ಇವರ ನಾಟಕರಂಗ ಪರಿಶ್ರಮವನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ವೈಶಾಲಿ ಕಾಸರವಳ್ಳಿ

ಗುಲ್ಬರ್ಗಾದಲ್ಲಿ ಜನಿಸಿದ ವೈಶಾಲಿಯವರು ತಮ್ಮ ತಂದೆ ಡಾ॥ ವಿ.ಎಂ. ಚಿಟಗೋಪಿಯವರೊಂದಿಗೆ ಬೆಂಗಳೂರಿಗೆ ಬರುವ ಮುನ್ನ ರಂಗಕಲಾವಿದೆಯಾಗುತ್ತೇನೆ ಎಂದು ಕನಸು ಕಂಡಿರಲಾರರು. ಬೆಂಗಳೂರಿಗೆ ಬಂದದ್ದೇ ಕಲಾಕ್ಷೇತ್ರ ಅವರನ್ನು ಕೈಬೀಸಿ ಕರೆಯಿತು. ನಾಡಿನ ಶ್ರೇಷ್ಠ ನಿರ್ದೇಶಕರ ಮಾರ್ಗದರ್ಶನದಲ್ಲಿ ಅದ್ಭುತ ಪ್ರಯೋಗಗಳಲ್ಲಿ ವೈಶಾಲಿ ಅವರಿಗೆ ಅವಕಾಶ. ಬಂದ ಅವಕಾಶಗಳನ್ನು ಬಾಚಿ ತಬ್ಬಿಕೊಂಡ ವೈಶಾಲಿ ತಮ್ಮ ಅಭಿನಯ ಪ್ರತಿಭೆಯನ್ನು ಮೆರೆದರು. ಬಿ.ವಿ. ಕಾರಂತರ 'ಹಯವದನ'ದ ಪದ್ಮಿನಿ, ವೈಶಾಲಿಯವರ ಅಭಿಜಾತ ಪ್ರತಿಭೆಯನ್ನು ಹೊರಹಾಕಿದ ಪಾತ್ರ, ಪ್ರಸನ್ನ, ಸಿ.ಆರ್. ಸಿಂಹ, ಆರ್. ನಾಗೇಶ್ ಮುಂತಾದವರ ನಾಟಕಗಳಲ್ಲೂ ಅಭಿನಯಿಸಿದ ವೈಶಾಲಿ ಸಹಜವಾಗಿಯೇ ಚಿತ್ರರಂಗಕ್ಕೆ ಸೇರಿದರು. ಕಲಾತ್ಮಕ ಚಿತ್ರಗಳು ಸೇರಿದಂತೆ ಅನೇಕ ವ್ಯಾಪಾರಿ ಚಿತ್ರಗಳಲ್ಲಿ ಅಭಿನಯಿಸಿದರು. ಗಿರೀಶ್ ಕಾಸರವಳ್ಳಿಯವರ 'ಆಕ್ರಮಣ' ಚಿತ್ರದ ಅಭಿನಯಕ್ಕೆ ಶ್ರೇಷ್ಠನಟಿ ರಾಜ್ಯ ಪ್ರಶಸ್ತಿಯನ್ನು ಪಡೆದರು, ರಂಗಭೂಮಿ, ಚಿತ್ರರಂಗ, ಕಿರುತೆರೆ ಮೂರು ಮಾಧ್ಯಮಗಳಲ್ಲೂ ತೊಡಗಿಸಿಕೊಂಡು ಜನಪ್ರಿಯತೆ, ಯಶಸ್ಸು, ಪ್ರಶಸ್ತಿ ಪುರಸ್ಕಾರಗಳನ್ನು ಪಡೆದ ಕ್ರಿಯಾಶೀಲರು ವೈಶಾಲಿ ಕಾಸರವಳ್ಳಿ, ಅನೇಕ ನಾಟಕಗಳ ಅನುವಾದವನ್ನು ಇವರು ಮಾಡಿದ್ದಾರೆ. ಕನ್ನಡ ರಂಗಭೂಮಿಯಲ್ಲಿ ಇವರ ಸಾಧನೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಶೋಭಾ ರಂಜೋಳಕರ್

ಮೂಲತಃ ಆಂಧ್ರ ಪ್ರದೇಶದವರಾದ ಶೋಭಾ ಅವರು ಸೇಡಂ ತಾಲ್ಲೂಕಿನ ಶ್ರೀ ಭೀಮರಾವ್ ರಂಜೋಳಕರರ ಧರ್ಮಪತ್ನಿಯಾಗಿ ಕರ್ನಾಟಕಕ್ಕೆ ಬಂದವರು. ಶೋಭಾ ಗೃಹಿಣಿಯಾಗಿ ಸಂಸಾರ ಜೀವನ ನಡೆಸುತ್ತಲೇ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾ ಗುಲ್ಬರ್ಗಾ ನಗರದ ರಂಗಚಟುವಟಿಕೆಗಳಲ್ಲಿ ಪ್ರಮುಖ ಸ್ಥಾನ ಪಡೆದರು.

ನಗರ ಪ್ರದೇಶಗಳಲ್ಲೂ ಕೂಡ ನಟಿಯರ ಸಂಖ್ಯೆ ಅತಿಕಡಿಮೆ ಇರುವ ಸಂದರ್ಭದಲ್ಲಿ ಶೋಭಾ ರಂಜೋಳಕರ್ ಅಂಥವರು ಮಾದರಿಯಾಗುತ್ತಾರೆ. ತಮ್ಮ ಸಾಂಸಾರಿಕ ಜವಾಬ್ದಾರಿಗಳೊಟ್ಟಿಗೆ ಸಾಮಾಜಿಕ ಕ್ಷೇತ್ರದಲ್ಲೂ ತಮ್ಮ ಕ್ರಿಯಾಶೀಲತೆ ಮೈಗೂಡಿಸಿಕೊಂಡ ಇವರು 15ಕ್ಕೂ ಹೆಚ್ಚು ನಾಟಕಗಳಲ್ಲಿ ನಟಿಯಾಗಿ, ನಿರ್ದೇಶಕಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಅಲ್ಲದೆ ಕಿರುತೆರೆ, ದೂರದರ್ಶನ ಕಾರ್ಯಕ್ರಮಗಳಲ್ಲೂ ಪಾಲ್ಗೊಂಡು,

ತಮ್ಮ ಪ್ರತಿಭೆಯನ್ನು ಜಾಹೀರುಮಾಡಿದ್ದಾರೆ. ಆಕಾಶವಾಣಿಯಲ್ಲೂ ಕಲಾವಿದೆಯಾಗಿ ಅಭಿನಯಿಸಿರುವ ಶೋಭಾ ರಂಜೋಳಕರ್ 'ರಂಗಮಾಧ್ಯಮ' ಸಂಸ್ಥೆಯೂ ಸೇರಿದಂತೆ ಅನೇಕ ಸಾಂಸ್ಕೃತಿಕ ಹಾಗೂ ಮಹಿಳಾ ಸಂಘಟನೆಗಳಲ್ಲಿ ಸಕ್ರಿಯವಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಬಿ. ಶಿವಕುಮಾರಿ

ರಂಗಭೂಮಿಗೂ ಬಡತನಕ್ಕೂ ಬಿಡಸಲಾಗದ ನಂಟು, ವೃತ್ತಿ ರಂಗಭೂಮಿಯಲ್ಲಿ ಭವಿಷ್ಯ ಅರಸಿಬಂದವರು ಕಡುಬಡತನದ ಕುಟುಂಬದ ಹಿನ್ನೆಲೆಯಿಂದ ಬಂದವರೆ. ಹೀಗೆ ಬಂದವರು ತಮ್ಮ ಪರಿವಾರದ ಹೊಟ್ಟೆಪಾಡಿನ ಹೊಣೆಯನ್ನು ಅನೇಕರು. ಇಂಥವರಲ್ಲಿ ಬಿ. ಶಿವಕುಮಾರಿಯವರೂ ಒಬ್ಬರು. ಎಸ್.ಎಸ್.ಎಲ್.ಸಿ. ವರೆಗೆ ಶಿಕ್ಷಣವನ್ನು ಪೂರೈಸಿ ಹೆಚ್ಚಿನ ಓದಿಗೆ ಮನಸ್ಸು ತುಡಿಯುತ್ತಿದ್ದಾಗ, ಕೌಟುಂಬಿಕ ಬಡತನ, ನಾಟಕಕಂಪನಿಗೆ ಪಾದಾರ್ಪಣೆ ಮಾಡುವಂತೆ ಪ್ರೇರೇಪಿಸಿತು. ಮನೆಯ ಹಿರಿಯ ಮಗಳಾಗಿ ಸಂಸಾರದ ಜವಾಬ್ದಾರಿಯ ಹೊಣೆಹೊತ್ತ ಶಿವಕುಮಾರಿ ರಂಗದ ಮೇಲೆ ತಮ್ಮ ಸಹಜ ಪ್ರತಿಭೆಯಿಂದ ಬೆಳಗಿದರು. ಸತತ 25 ವರ್ಷಗಳಿಂದ ಬೇಡಿಕೆಯ ರಂಗನಟಿಯಾಗಿ, ಸುಮಾರು 2000ಕ್ಕೂ ಹೆಚ್ಚಿನ ನಾಟಕಗಳಲ್ಲಿ ನಟಿಸಿದ್ದು ಇವರಿಗೆ ತೃಪ್ತಿ ತಂದುಕೊಟ್ಟಿದೆ.

ಹಿರಿಯರಾದ ದಿ. ಕೆ. ರೇಣುಕಮ್ಮ, ಸುಭದ್ರಮ್ಮ ಮನ್ಸೂರ್, ಮರಿಯಮ್ಮನ ಹಳ್ಳಿ ಕೆ. ನಾಗರತ್ನಮ್ಮ ಮುಂತಾದವರ ಸಹಕಾರವನ್ನು ನೆನೆಯುವ ಇವರು ಕೇವಲ ವೃತ್ತಿರಂಗಕ್ಕೇ ಸೀಮಿತಗೊಳ್ಳದೆ ಸಾಮಾಜಿಕ ಪರಿವರ್ತನೆಯ ಆಂದೋಲನಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಇವರ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.



## ಎ.ಎಸ್. ಶಿರಹಟ್ಟಿಮಠ

ಎ.ಎಸ್. ಶಿರಹಟ್ಟಿಮಠ ವೃತ್ತಿಯಿಂದ ಹಲಗಲಿಯ ಪ್ರೌಢಶಾಲಾ ಶಿಕ್ಷಕರು. ಪ್ರವೃತ್ತಿಯಿಂದ ಬಹುಮುಖಿ ಆಸಕ್ತರು. ಮಕ್ಕಳ ನಾಟಕಕಾರರಾಗಿ, ಅನುವಾದಕರಾಗಿ, ಕಾದಂಬರಿಕಾರರಾಗಿ ಶಿರಹಟ್ಟಿಮಠ ಅವರು ತಮ್ಮ ಸಾಹಿತ್ಯ ಸೇವೆಯನ್ನು ನಿರಂತರವಾಗಿಸಿದ್ದಾರೆ.

ಮಕ್ಕಳಿಗಾಗಿ 30ಕ್ಕೂ ಹೆಚ್ಚು ಶೈಕ್ಷಣಿಕ, ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳನ್ನು ಕಿರುನಾಟಕಗಳನ್ನು ರಚಿಸಿದ್ದಾರೆ. ಪಠ್ಯ ಪೂರಕ ಚಟುವಟಿಕೆಯಾಗಿ ರಂಗಮಾಧ್ಯಮವನ್ನು ಯಶಸ್ವಿಯಾಗಿ ಬಳಸಿರುವ ಶ್ರೀಯುತರು ಸರಳ ಭಾಷೆಯ ಬಳಕೆ ಹಾಗೂ ಸುಂದರ ದೃಶ್ಯ ನಿರ್ಮಾಣದಿಂದ ಮಕ್ಕಳ ಮನಸೂರೆಗೊಂಡಿದ್ದಾರೆ.

ಮಕ್ಕಳ ರಂಗಭೂಮಿಗೆ ಪೂರಕವಾಗಿ ಇವರು ಸಂಘಟಿಸಿರುವ ತರಬೇತಿ ಶಿಬಿರಗಳು, ಸಾಹಿತ್ಯ ಕಮ್ಮಟಗಳು ಇವರ ಕ್ರಿಯಾಶೀಲತೆಗೆ, ಸಂಘಟನಾ ಚಾತುರ್ಯಕ್ಕೆ ಸಾಕ್ಷಿ ಇವರ ರಂಗಾಭಿರುಚಿ ಹಾಗೂ ಮಕ್ಕಳ ನಾಟಕ ಸಾಹಿತ್ಯಕ್ಕೆ ಇವರ ಕೊಡುಗೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರಲ್ಲಿ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಕೆ. ಸಣ್ಣೇಗೌಡ

ಹಾಸನ ತಾಲ್ಲೂಕಿನ ದೊಡ್ಡಬೀಕನಹಳ್ಳಿ ಗ್ರಾಮದ ಕೆ. ಸಣ್ಣೇಗೌಡ ಗ್ರಾಮೀಣ ಪ್ರತಿಭೆ. ಹಾಸನ ನಗರದಲ್ಲಿ ತಮ್ಮ ಕ್ರಿಯಾಶೀಲತೆಯಿಂದ ರಂಗಚಟುವಟಿಕೆಯನ್ನು ಜೀವಂತವಾಗಿಟ್ಟ ಹೆಗ್ಗಳಿಕೆ ಇವರದು.

ಬಾಲ್ಯದಿಂದಲೇ ಹವ್ಯಾಸಿರಂಗದ ನಂಟು. 1979ರಲ್ಲಿ 'ಬೆಲ್ಲಿ' ನಾಟಕಕ್ಕೆ ರಾಜ್ಯಮಟ್ಟದಲ್ಲಿ ಪ್ರಥಮ ಬಹುಮಾನ ಪಡೆದರು. ಪತ್ರಸಂಗಪ್ಪನ ಕೊಲೆ, ಜೋಕುಮಾರಸ್ವಾಮಿ, ಯಮಳ ಪ್ರಶ್ನೆ ಇವರ 'ಗಜಾನನ ಯುವಕ ಸಂಘ'ದಿಂದ ಪ್ರದರ್ಶಿತವಾದ ಮುಖ್ಯ ನಾಟಕಗಳು.

ವಿದ್ಯಾರ್ಥಿ ಜೀವನದಲ್ಲಿ ಹಾಸನದಲ್ಲಿ 'ಕಲಾ ಕೌತುಕ ಕೂಟ'ದಲ್ಲಿ ಸಕ್ರಿಯ ಚಟುವಟಿಕೆ. ಹಾಸನಕ್ಕೆ ಅಶೋಕ ಬಾದರದಿನ್ನಿಯವರನ್ನು ಆಹ್ವಾನಿಸಿ, ರಂಗತರಬೇತಿಯನ್ನು ನಿರ್ವಹಿಸಿದ ಸಣ್ಣೇಗೌಡ, ಸಾಕ್ಷರತಾ ಆಂದೋಲನದಲ್ಲಿ, ಭಾರತಜ್ಞಾನ ವಿಜ್ಞಾನ ಸಮಿತಿಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ತಮ್ಮಲ್ಲಿರುವ ಸಾಮಾಜಿಕ ಬದ್ಧತೆಯನ್ನು ಪ್ರಕಟಿಸಿದರು. ರಾಜ್ಯ ಸರ್ಕಾರಿ ನೌಕರರ ಸಂಘದ ಸಾಂಸ್ಕೃತಿಕ ವಿಭಾಗದ ಕಾರ್ಯದರ್ಶಿಯಾಗಿಯೂ ಕಾರ್ಯನಿರ್ವಹಿಸಿರುವ ಇವರು, ಮಕ್ಕಳ ರಂಗಭೂಮಿಗಾಗಿ ದುಡಿದಿದ್ದಾರೆ. ಹಾಸನದ ವಿವಿಧ ಶಾಲೆಯ ಮಕ್ಕಳಿಗೆ ನಾಟಕಗಳನ್ನು ನಿರ್ದೇಶಿಸಿದ್ದಾರೆ. 'ರಂಗಸಿರಿ' ತಂಡವನ್ನು ಸ್ಥಾಪಿಸಿ ಹಾಸನದಲ್ಲಿ ನಿರಂತರ ರಂಗ ಚಟುವಟಿಕೆಗೆ ಕಾರಣರಾಗಿದ್ದಾರೆ. ಇವರ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಸೇತುಮಾಧವ ರಂಗಾಚಾರ್ಯ ಮಾನವಿ

ತಮ್ಮ 70ರ ಇಳಿವಯಸ್ಸಿನಲ್ಲೂ ರಂಗಭೂಮಿಯಲ್ಲಿ ಇನ್ನೂ ದುಡಿಯಬೇಕೆಂಬ ಹಂಬಲ, ಕಲಿಕೆಯ ಹಸಿವು ಎರಡನ್ನು ಮೈಗೂಡಿಸಿಕೊಂಡಿರುವ ಧಾರವಾಡದ ಸೇತುಮಾಧವ ಮಾನವಿ, ಶ್ರೀರಂಗದ ನಾಟಕಗಳ ಮೂಲಕ ಹವ್ಯಾಸಿರಂಗಭೂಮಿಗೆ ಪರಿಚಿತರಾದರು.

ತಮ್ಮ ಗೆಳೆಯರೊಡಗೂಡಿ ಹುಬ್ಬಳ್ಳಿಯಲ್ಲಿ ಪ್ರಾರಂಭಿಸಿದ 'ಅಭಿನಯಭಾರತಿ'ಯ ಮೂಲಕ 100ಕ್ಕೂ ಹೆಚ್ಚು ನಾಟಕಗಳ ಅಸಂಖ್ಯ ಪ್ರದರ್ಶನಗಳನ್ನು ನೀಡಿದ್ದರೂ, ಇನ್ನೂ ದಣಿವರಿಯದ ವ್ಯಕ್ತಿ ಮಾನವಿ ಅವರು.

ಕನ್ನಡದ ಪ್ರತಿಷ್ಠಿತ ನಾಟಕಕಾರರೆಲ್ಲರ ನಾಟಕಗಳನ್ನು ಯಶಸ್ವಿಯಾಗಿ ಪ್ರದರ್ಶಿಸಿದ ಇವರು ಕೆ.ಎಸ್.ಆರ್.ಟಿ.ಸಿ. ಸಂಸ್ಥೆಯಲ್ಲಿ ಉದ್ಯೋಗ ಮಾಡಿ ನಿವೃತ್ತರಾಗಿದ್ದಾರೆ.

ರಂಗಯಾತ್ರೆ, ನಾಟಕವಾಚನ, ರಂಗತರಬೇತಿಯ ಶಿಬಿರಗಳು ಇವರ ಇನ್ನಿತರ ನಿರಂತರ ಚಟುವಟಿಕೆಗಳು. ಮಕ್ಕಳಿಗಾಗಿ ರಂಗತರಬೇತಿ ಶಿಬಿರಗಳನ್ನು ನಿರ್ದೇಶಿಸಿರುವ ಇವರು ಅನೇಕ ರಾಷ್ಟ್ರೀಯ ಹಾಗೂ ಸ್ಥಳೀಯ ನಾಟಕೋತ್ಸವಗಳನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ತಮ್ಮ ಸಂಸ್ಥೆಯ ಮೂಲಕ ವಿಶ್ವ ರಂಗಭೂಮಿ ದಿನಾಚರಣೆಯ ದಿನದಂದು ಪ್ರತಿವರ್ಷ ಒಬ್ಬ ರಂಗಕರ್ಮಿಯನ್ನು ಅಭಿನಂದಿಸುವ ಕಾರ್ಯ ಮಾಡುತ್ತಿದ್ದಾರೆ. ಇಂತಹ ರಂಗಚೇತನಕ್ಕೆ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಹರಿಕೃಷ್ಣ

ಬಾಲ್ಯದಿಂದಲೂ ನಾಟಕ ಚಟುವಟಿಕೆಗಳಲ್ಲಿ ಅಪಾರ ಆಸಕ್ತಿ ಹೊಂದಿದ್ದ ಹರಿಕೃಷ್ಣ ಉದ್ಯೋಗದ ನಿಮಿತ್ತ ಬೆಂಗಳೂರಿಗೆ ಬಂದರು. ಶಿವಮೊಗ್ಗದಲ್ಲಿ ತಮ್ಮ ವಿದ್ಯಾಭ್ಯಾಸದ ಸಂದರ್ಭದಲ್ಲಿ ಚಿಗುರೊಡೆದಿದ್ದ ಇವರ ರಂಗಪ್ರತಿಭೆ, ಅರಳಿ ಹೂಬಿಟ್ಟಿದ್ದು ಬೆಂಗಳೂರಿನಲ್ಲಿ ಸಂಜೆ ಕಾಲೇಜು ಅಭ್ಯಾಸದ ಸಂದರ್ಭದಲ್ಲಿ ಉಲ್ಲಾಳ್ ಶೀಲ್ಡ್ ಸ್ಪರ್ಧೆಯ ಮೂಲಕ ಬೆಂಗಳೂರು ರಂಗಭೂಮಿಗೆ ಪರಿಚಿತರಾದ ಹರಿಕೃಷ್ಣ 'ಕನ್ನಡ ಸಾಹಿತ್ಯ ಕಲಾಸಂಘ'ದಲ್ಲಿ ಸಕ್ರಿಯವಾದರು. 70ರ ದಶಕದ ಐತಿಹಾಸಿಕ ಬಯಲುರಂಗ ಪ್ರಯೋಗದಲ್ಲಿ ನೇಪಥ್ಯ ಕರ್ಮಿಯಾಗಿ ಪಾಲ್ಗೊಂಡು, ಗೆಳೆಯರೊಡಗೂಡಿ 'ರಂಗಸಂಪದ'ದ ಅಸ್ತಿತ್ವಕ್ಕೂ ತಮ್ಮ ಹೆಗಲು ಕೊಟ್ಟರು.

ಪ್ರಸನ್ನರ 'ಕದಡಿದ ನೀರು' ನಾಟಕದ 'ಹುಚ್ಚರಾಚ್ಯ' ಪಾತ್ರ ಇವರ ಅಭಿನಯ ಪ್ರತಿಭೆಯನ್ನು ಸಾರಿಹೇಳಿದ ಪಾತ್ರ. ನಟನೆಯಲ್ಲಿ ಅಪಾರ ಅನುಭವ, ಸಂಘಟನೆಯಲ್ಲಿ ಕ್ರಿಯಾಶೀಲತೆಯನ್ನು ಪಡೆದಿರುವ ಹರಿಕೃಷ್ಣ ನಾಟಕ ಅನುವಾದದಲ್ಲೂ ತಮ್ಮ ಪ್ರೌಢಿಮೆಯನ್ನು ಮೆರೆದಿದ್ದಾರೆ. ಒಂದು ಆಕೃತಿಯ ಹತ್ಯೆ, ಮರುಳ ಮಂಗಳದಾಸ, ದಿಲ್ಲಿ ಚಲೋ ಮುಂತಾದವು ಇವರ ಅನುವಾದಗಳು. ಆಮನಿ, ಚಾರವಾಕ, ತ್ರಿಶಂಕು ನಾಟಕಗಳ ನಿರ್ದೇಶನದಲ್ಲೂ ತಮ್ಮ ಪ್ರತಿಭೆಯನ್ನು ಮೆರೆದಿರುವ ಹರಿಕೃಷ್ಣ ಅವರ ಅಭಿನಯದ 'ಸ್ವರ್ಗಕ್ಕೆ ಮೂರೇ ಬಾಗಿಲು', 'ಅಪಕಾರಿ ಕಥೆ', 'ಕ್ರಾಂತಿ ಬಂತು ಕ್ರಾಂತಿ', 'ತುಕ್ಕೋಜಿ' ಮುಂತಾದವು ಇಂದೂ ಸರಣಾರ್ಹ. ಹಿಂದಿ ನಾಟಕ ರಂಗದಲ್ಲಿ–ರಕ್ತಕಲ್ಯಾಣ್, ಮನ್ ಹೀ ಮನ್‌ದಲ್ಲಾ ನಾಚೆ–ಅಭಿನಯಿಸಿದ ಅನುಭವ. ಇವರ ರಚನೆಯ ಮಕ್ಕಳ ನಾಟಕ ಮೋಗ್ಲಿ–ಕಾಡಿನಿಂದ ನಾಡಿಗೆ ಯಶಸ್ವಿ ರಂಗಪ್ರಯೋಗ ಕಂಡಿದೆ. ಬ್ಯಾಂಕ್ ನೌಕರಿ ತ್ಯಜಿಸಿ, ರಂಗಭೂಮಿಯಲ್ಲಿ ಪೂರ್ಣವಾಗಿ ತೊಡಗಿಸಿಕೊಂಡಿರುವ ಇವರ ಸಾಧನೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಟಿ.ಹೆಚ್. ಹೇಮಲತಾ

ಬಾಲ್ಯದಲ್ಲೇ ಸಂಗೀತ, ನೃತ್ಯ ಕಲೆಯ ಬಗ್ಗೆ ಅಪಾರ ಒಲವು ಟಿ.ಹೆಚ್. ಹೇಮಲತಾ ಅವರಿಗೆ, ಶಿವಪುರಿನ ಹೇಮಲತಾ ತಮ್ಮ ವಿದ್ಯಾಭ್ಯಾಸದ ದಿನಗಳಲ್ಲೇ ಗುಬ್ಬಿ ಕಂಪನಿಯಲ್ಲಿ ಪಾತ್ರವಹಿಸುವ ಭಾಗ್ಯ ಇವರದಾಯಿತು. ಕುರುಕ್ಷೇತ್ರ, ದಶಾವತಾರ, ಕೃಷ್ಣಲೀಲೆ, ಸಾಹುಕಾರ ಮುಂತಾದ ನಾಟಕಗಳಲ್ಲಿ ಅಭಿನಯಿಸಿ ಗುಬ್ಬಿವೀರಣ್ಣ ಅವರಿಂದ ಪ್ರಶಂಸಿತರಾಗಿದ್ದರು. ನಂತರದಲ್ಲಿ ಶ್ರೀ ನಟರಾಜ ನಾಟ್ಯ ಸಂಘ, ಹೊಳೆಹಡಗಲಿ ಎಂಬ ಸ್ವಂತ ಕಂಪನಿಯಲ್ಲಿ ಪ್ರಾರಂಭಿಸಿ, ಆದಿಶಕ್ತಿ, ಟಿಪ್ಪುಸುಲ್ತಾನ್, ಹೇಮರೆಡ್ಡಿ ಮಲ್ಲಮ್ಮ ಮುಂತಾದ 15ಕ್ಕೂ ನಾಟಕಗಳನ್ನು ಹೇಮಲತಾ ಅವರೇ ನಿರ್ದೇಶಿಸಿ, ನಾಡಿನ ಎಲ್ಲೆಡೆ ಪ್ರದರ್ಶಿಸಿ ಜನಮನ್ನಣೆಗಳಿಸಿದರು. ನಾಟಕ, ನಿರ್ದೇಶನ, ಕಂಪನಿ ಮಾಲೀಕತ್ವ ಅಭಿನಯ ಹೀಗೆ ಎಲ್ಲವನ್ನು ಯಶಸ್ವಿಯಾಗಿ ನಿರ್ವಹಿಸಿದ ಕೆಲವೇ ಮಹಿಳೆಯರಲ್ಲಿ ಇವರೂ ಒಬ್ಬರು.

ಮುಂದಿನ ದಿನಗಳಲ್ಲಿ ಕಂಪನಿಯಿಂದ ಜೀವನ ನಿರ್ವಹಣೆ ಕಷ್ಟವೆನಿಸಿದಾಗ ಸಿನಿಮಾರಂಗದಲ್ಲಿ ತಮ್ಮ ಪ್ರತಿಭೆಯನ್ನು ಮೆರೆದರು. ಈಗ 'ಹೇಮಲತಾ ಕಲಾವೃಂದ' ಸ್ಥಾಪಿಸಿ, ರಂಗಚಟುವಟಿಕೆ ಹಾಗೂ ಸಿನಿಮಾ ಅಭಿನಯವನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ವೃತ್ತಿ ಹಾಗೂ ಹವ್ಯಾಸಿ ರಂಗಭೂಮಿಗೆ ಇವರ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2002ರ ಗೌರವ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

# 2003ರ ಪ್ರಶಸ್ತಿ ವಿಜೇತರು



## ಅಕ್ಮಲ್ ಪಾಶಾ

ನಾಟಕಕ್ಕೆ ಬೇಕಾದ ರಂಗಸಜ್ಜಿಕೆಯ ಕೆಸಲವಾಗಲಿ, ಉತ್ಸವಗಳ ಸ್ತಬ್ಧ ಚಿತ್ರಗಳನ್ನು ರೂಪಿಸುವುದಾಗಲಿ, ಸಮಾರಂಭಗಳ ವೇದಿಕೆಗಳನ್ನು ಅಲಂಕರಿಸುವುದಾಗಲಿ ಹೀಗೆ ಯಾವುದಾದರೂ ಸರಿ. ಅದಕ್ಕೊಂದು ಚೆಂದಾದ ರೂಪ ಕೊಡುವ ಕಲಾ ನಿರ್ದೇಶಕ ಅಕ್ಮಲ್ ಪಾಶಾ. ಮಂಡ್ಯ ಜಿಲ್ಲೆಯ ನಾಗಮಂಗಲದ ಪಾಶಾ, ಐ.ಟಿ.ಐ.ನಲ್ಲಿ ತರಬೇತಿ ಪಡೆದು ಕೆ.ಜಿ.ಎಫ್.ದ ಬಿ.ಇ.ಎಂ.ಎಲ್.ನಲ್ಲಿ ಟೆಕ್ನಿಷಿಯನ್ನಾಗಿ ಕೆಸಲಕ್ಕೆ ಸೇರಿದರು. ಆದರೆ ವೃತ್ತಿಗೆ ಅಂಟಿಕೊಳ್ಳದೆ ರಂಗಭೂಮಿಯ ನಂಟು ಬೆಳೆಸಿಕೊಂಡರು.

ಕೆ.ಜಿ.ಎಫ್.ದ ಕನ್ನಡ ಮಿತ್ರರು ಸಂಸ್ಥೆಯಿಂದ 'ಹೆದ್ದಾರಿಯಲ್ಲೊಂದು ರಾತ್ರಿ', 'ಕದಡಿದ ನೀರು' ಮೊದಲಾದ ನಾಟಕಗಳಿಗೆ ಅಭಿನಯಿಸಿದ್ದಲ್ಲದೆ, ಸಿರಿಸಂಪಿಗೆ ನಾಟಕದ ಕಾಳಿಂಗನ ಪಾತ್ರ ಅವರಿಗೆ ಹೆಸರು ತಂದುಕೊಟ್ಟಿತು. ಕಿರಿಯರಿಗೆಲ್ಲ ಕಾಳಿಂಗ ಅಂಕಲ್ ಆದರು. ಆಮೇಲೆ ಸಿ.ಜಿ.ಕೆ. ಅವರ ಸಲಹೆ ಮೇರೆಗೆ ರಂಗ ನೇಪಥ್ಯದಲ್ಲಿ ತೊಡಗಿಸಿಕೊಂಡ ಪಾಶಾ, ಮೈಸೂರಿನಲ್ಲಿ ಬಿ.ಇ.ಎಂ.ಎಲ್.ಗೆ ವರ್ಗವಾಗಿ ಅಲ್ಲಿಯ ಸ್ಥಳೀಯ ಸಂಸ್ಥೆಗಳೊಂದಿಗೆ ಕಾರ್ಯನಿರ್ವಹಿಸಿದರು.

ನಾಟಕಗಳಿಗೆ ಅಲ್ಲದೆ ಚಲನಚಿತ್ರಗಳಲ್ಲೂ ಕಲಾನಿರ್ದೇಶಕರಾದ ಪಾಶಾ, ಇಂಗ್ಲಿಷ್‌ನ ಸಿನಿಮಾಗಳಿಗೂ ಕಲಾ ನಿರ್ದೇಶಕರಾಗಿ ದುಡಿದಿದ್ದಾರೆ.

---



## ಅಚ್ಯುತ

ತುರ್ತು ಪರಿಸ್ಥಿತಿ ಸಂದರ್ಭದಲ್ಲಿ ಸಮುದಾಯದ ಸಾಂಸ್ಕೃತಿಕ ಚಳವಳಿಯ ಜನಪರ ನಾಟಕಗಳಲ್ಲಿ ಅಭಿನಯಿಸಿ ರಾಜ್ಯ ವ್ಯಾಪಿ ಜಾಥಾದಲ್ಲಿ ಪಾಲ್ಗೊಂಡ ಅಚ್ಯುತ ಅವರು ಹುಟ್ಟಿದ್ದು ದಕ್ಷಿಣ ಕನ್ನಡದ ನೆಲ್ಲಿತೀರ್ಥದಲ್ಲಿ. ಆದರೆ ಅವರು ನೆಲೆ ನಿಂತದ್ದು ಕೆ.ಜಿ.ಎಫ್.ದಲ್ಲಿ. ಅಲ್ಲಿಯ ಬಿ.ಇ.ಎಂ.ಎಲ್.ದ ಜಂಟಿ ಸೂಪರ್‌ವೈಸರ್. ಆದರೆ ಆ ಉದ್ಯೋಗಕ್ಕೆ ಮಾತ್ರ ಅಂಟಿಕೊಳ್ಳದೆ ರಂಗಭೂಮಿಯಲ್ಲಿ ತೊಡಗಿಸಿಕೊಂಡರು.

ತುಳು ನಾಟಕಗಳಲ್ಲಿ ಅಭಿನಯಿಸುತ್ತ, ನಿರ್ದೇಶಿಸುತ್ತ ಬಂದ ಅಚ್ಯುತ, 1980ರಲ್ಲಿ ಕೆ.ಜಿ.ಎಫ್.ದಲ್ಲಿ ಸಮುದಾಯ ಘಟಕದ ಸ್ಥಾಪಕರಲ್ಲೊಬ್ಬರು. ಸುಮಾರು 25ಕ್ಕೂ ಹೆಚ್ಚು ಬೀದಿ ನಾಟಕಗಳಲ್ಲಿ ಅಭಿನಯಿಸಿರುವ ಅಚ್ಯುತ, ಕತ್ತಲೆ ದಾರಿ ದೂರ, ಹುತ್ತವ ಬಡಿದರೆ, ತಾಯಿ ಮೊದಲಾದ ನಾಟಕಗಳನ್ನು ನಿರ್ದೇಶಿಸಿದ್ದಾರೆ.

ರಾಜ್ಯ ಮಟ್ಟದ ಕೈಗಾರಿಕಾ ನಾಟಕ ಸ್ಪರ್ಧೆಯಲ್ಲಿ 'ಕತ್ತಲೆ ದಾರಿ ದೂರ' ನಾಟಕಕ್ಕೆ ಅತ್ಯುತ್ತಮ ನಾಟಕ ಪ್ರಶಸ್ತಿ, ಅಶೋಕವನ ನಾಟಕಕ್ಕೆ ಹೊರಜಿಲ್ಲೆಯ ಅತ್ಯುತ್ತಮ ನಾಟಕ, ಅತ್ಯುತ್ತಮ ನಿರ್ದೇಶನದ ಪ್ರಶಸ್ತಿ, ರಾವಿ ನದಿಯ ದಂಡೆಯಲ್ಲಿ ನಾಟಕಕ್ಕೆ ಶ್ರೇಷ್ಠ ನಿರ್ದೇಶನ, ಶ್ರೇಷ್ಠ ನಾಟಕ, ಶ್ರೇಷ್ಠನಟ, ಶ್ರೇಷ್ಠ ರಂಗಸಜ್ಜಿಕೆ ಪ್ರಶಸ್ತಿಗಳನ್ನು ಪಡೆದಿರುವ ಅವರು, ರಂಗ ಸಂಘಟನೆಯಲ್ಲೂ ಮುಂದು.

---



## ಅರ್ಜುನ್ ಸಜ್‌ನಾನಿ

ಬೆಂಗಳೂರಿನಲ್ಲಿ ಇಂಗ್ಲಿಷ್ ರಂಗಭೂಮಿಯಲ್ಲಿ ತೊಡಗಿಸಿಕೊಂಡಿರುವ ಅರ್ಜುನ್, ಕಳೆದ 25 ವರ್ಷಗಳಿಂದ ಇಂಗ್ಲಿಷ್ ನಾಟಕಗಳನ್ನು ನಿರ್ದೇಶಿಸುತ್ತಿದ್ದಾರೆ.

ದೆಹಲಿ ಪಬ್ಲಿಕ್ ಸ್ಕೂಲಿನಲ್ಲಿ ಓದಿದವರು. ನಂತರ ಅಮೆರಿಕದ ಯೂನಿವರ್ಸಿಟಿ ಆಫ್ ಸೌತ್‌ನಲ್ಲಿ, ನ್ಯೂಯಾರ್ಕ್ ವಿಶ್ವವಿದ್ಯಾಲಯದಲ್ಲಿ ಓದಿದವರು. ಜೊತೆಗೆ ಫಿಲಂ ಪ್ರೊಡಕ್ಷನ್‌ನಲ್ಲಿ ಡಿಪ್ಲೊಮಾ ಮಾಡಿದವರು. ವಿದೇಶದಿಂದ ಓದು ಮುಗಿಸಿಕೊಂಡು ವಾಪಸಾದ ನಂತರ ಬೆಂಗಳೂರಿನಲ್ಲಿ 'ಥಿಯೇಟರ್ ಆರ್ಟ್ಸ್' ಎನ್ನುವ ನಾಟಕ ಕಂಪನಿಯನ್ನು ಆರಂಭಿಸಿದರು. 70ರ ದಶಕದಿಂದ ನಿರಂತರವಾಗಿ ನಾಟಕಗಳನ್ನು ಪ್ರಯೋಗಿಸುತ್ತಿರುವ ಅವರು ಅನೇಕ ನಾಟಕಗಳಲ್ಲಿ ನಟಿಸಿದ್ದಾರೆ ಕೂಡಾ.

ವಿದೇಶಗಳಲ್ಲಿ ನೆಲೆ ನಿಲ್ಲುತ್ತಿದ್ದ ಅವರು 1982ರಲ್ಲಿ ಭಾರತಕ್ಕೆ ಆಗಮಿಸಿ ರಂಗಭೂಮಿ ಮತ್ತು ಸಿನಿಮಾದಲ್ಲಿ ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳುತ್ತಿದ್ದಾರೆ. ಅರ್ಜುನ್ ಮೀರಾನಾಯರ್ ಅವರ 'ಕಾಮಸೂತ್ರ' ಚಿತ್ರದಲ್ಲಿ ನಟಿಸಿದ್ದಾರೆ. ಗಿರೀಶ್ ಕಾರ್ನಾಡರ 'ಅಗ್ನಿ ಮತ್ತು ಮಳೆ' ನಾಟಕವನ್ನು ಇಂಗ್ಲಿಷ್‌ನಲ್ಲಿ 'ದಿ ಫೈರ್ ಅಂಡ್ ದಿ ರೈನ್' ನಾಟಕವನ್ನು ಪ್ರಸ್ತುತಪಡಿಸಿದ್ದಾರೆ. 'ಅಗ್ನಿವರ್ಷ' ಹಿಂದಿ ಚಿತ್ರಕಥೆ ಬರೆದಿದ್ದಾರೆ ಅವರು. ಈ ಚಿತ್ರ ಬಾಲಿವುಡ್, ಸ್ಕ್ರೀನ್ ಮತ್ತು ಝೀ ಸಿನಿಮಾ ಪ್ರಶಸ್ತಿಗಳನ್ನು ಪಡೆಯಿತು.

ಇದರೊಂದಿಗೆ ಗಿರೀಶ್ ಕಾರ್ನಾಡರ 'ತುಘಲಕ್' ನಾಟಕವನ್ನು ಇಂಗ್ಲಿಷ್‌ನಲ್ಲಿ ಪ್ರಯೋಗಿಸಿದ್ದಾರೆ. 'ದಿ ಮಂಡಲ ಆಫ್ ಶರ್ಲಾಕ್ ಹೋಮ್ಸ್' ಎನ್ನುವ ಚಿತ್ರಕ್ಕಾಗಿ ಈಗ ದುಡಿಯುತ್ತಿದ್ದಾರೆ.

---



## ಅರುಂಧತಿ (ನಾಗ್) ರಾವ್

ಬೆಂಗಳೂರಿನ ಜೆ.ಪಿ. ನಗರದಲ್ಲಿ ತಲೆ ಎತ್ತಿರುವ 'ರಂಗ ಶಂಕರ'ದ ರೂವಾರಿ ಅರುಂಧತಿ ರಾವ್. ಅದನ್ನು ರಂಗಭೂಮಿ ಸಂಕೀರ್ಣವಾಗಿಸುವುದು ಅವರ ಉದ್ದೇಶ. ತಮ್ಮ ಪತಿ ನಟ/ನಿರ್ದೇಶಕ ಶಂಕರ್‌ನಾಗ್ ಸ್ಮರಣಾರ್ಥ 'ರಂಗಶಂಕರ'ವನ್ನು ಕಟ್ಟಿದ್ದಾರೆ.

ಅವರು ಹುಟ್ಟಿದ್ದು ದೆಹಲಿಯಲ್ಲಿ, ಬೆಳೆದದ್ದು ಮುಂಬೈನಲ್ಲಿ. 16ನೇ ವರ್ಷಕ್ಕೆ ಇಪ್ಟಾ (ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಶನ್) ದೊಂದಿಗೆ ಗುರುತಿಸಿ ಕೊಂಡರು.

ಕೈಫಿ ಆಜ್ಮಿ, ಬಾಲರಾಜ್ ಸಹಾನಿ, ಎ.ಕೆ. ಹಂಗಾಲ್ ಅವರ ಮಾರ್ಗದರ್ಶನದಲ್ಲಿ ಇಪ್ಟಾದ ಚಟುವಟಿಕೆಗಳಲ್ಲಿ ಪಾಲ್ಗೊಂಡರು. ಆಮೇಲೆ ಮರಾಠಿ ಮತ್ತು ಗುಜರಾತಿ ರಂಗಭೂಮಿಯಲ್ಲಿ ತೊಡಗಿಸಿಕೊಂಡರು. ಅಷ್ಟರಲ್ಲಿ ಮುಂಬೈನ ಕಾಲೇಜಿನ ರಂಗಭೂಮಿಯಲ್ಲಿ ಸಕ್ರಿಯವಾಗಿದ್ದ ಶಂಕರ್‌ನಾಗ್ ಅವರನ್ನು ಮದುವೆಯಾಗಿ ಬೆಂಗಳೂರಿಗೆ ಬಂದರು. ಅವರು ಕನ್ನಡದ ಅನೇಕ ನಾಟಕಗಳಲ್ಲಿ ಭಿನ್ನ ಪಾತ್ರಗಳನ್ನು ನಿರ್ವಹಿಸಿದ್ದಾರೆ.

ಅವುಗಳಲ್ಲಿ ಶಂಕರ್‌ನಾಗ್ ನಿರ್ದೇಶನದ 'ಅಂಜುಮಲ್ಲಿಗೆ', 'ನಾಗಮಂಡಲ', ಸಂಧ್ಯಾ ಛಾಯಾ, 'ಬ್ಯಾರಿಸ್ಟರ್' ನಾಟಕಗಳು ಪ್ರಮುಖ. ಇವುಗಳಲ್ಲದೆ ಇಂಗ್ಲಿಷ್, ಹಿಂದಿ, ಗುಜರಾತಿ, ಮರಾಠಿ ನಾಟಕಗಳಲ್ಲಿಯೂ ಅಭಿನಯಿಸಿರುವ ಅರುಂಧತಿ ಕನ್ನಡ, ಹಿಂದಿ ಸಿನಿಮಾಗಳಲ್ಲೂ ನಟಿಸಿದ್ದಾರೆ.

ಅವರು ಹಿಂದಿಯಲ್ಲಿ ಜನಪ್ರಿಯಗೊಂಡ ಟಿ.ವಿ. ಧಾರವಾಹಿ 'ಮಾಲ್ಗುಡಿ ಡೇಸ್'ಗೆ ಹಿಂದಿ ಸಂಭಾಷಣೆಯನ್ನೂ ಬರೆದಿದ್ದಾರೆ. ಪ್ರಸಿದ್ಧ ನಿರ್ದೇಶಕ ಡೇವಿಡ್ ಲೀನ್ ನಿರ್ದೇಶನದ ಇಂಗ್ಲಿಷ್ ಚಿತ್ರ 'ಅ ಪ್ಯಾಸೇಜ್ ಟು ಇಂಡಿಯ'ಗೆ ಸಹಾಯಕ ನಿರ್ದೇಶಕರಾಗಿದ್ದರು. ಮಿಂಚಿನ ಓಟ, ಜನುಮ ಜನುಮದ ಅನುಬಂಧ, ಗೀತಾ, ನೋಡಿ ಸ್ವಾಮಿ ನಾವಿರೋದೆ ಹೀಗೆ ಚಿತ್ರಗಳಿಗೆ ವಸ್ತ್ರವಿನ್ಯಾಸಕಿಯಾಗಿಯೂ ದುಡಿದಿದ್ದಾರೆ.

---



## ಕೆ.ಜಿ. ಕೃಷ್ಣಮೂರ್ತಿ

ಮಕ್ಕಳಿಗಾಗಿ ನಾಟಕ ಪ್ರದರ್ಶನ, ಶಾಲೆಗಳಲ್ಲಿ ರಂಗ ಮುಖೇನ ಶಿಕ್ಷಣ ಶಿಬಿರ ಮೊದಲಾದ ಚಟುವಟಿಕೆಗಳ ಮೂಲಕ ಮಕ್ಕಳ ರಂಗಭೂಮಿ ಕುರಿತು ಗಂಭೀರ ಚಿಂತನೆ ಮತ್ತು ಪ್ರಯೋಗ ನಡೆಸಿರುವವರು ಕೃಷ್ಣಮೂರ್ತಿ.

ಸಾಗರ ಹತ್ತಿರದ ತುಮರಿಯಲ್ಲಿ ಕಿನ್ನರ ಮೇಳ ಕಟ್ಟಿಕೊಂಡು ಮಕ್ಕಳ ನಾಟಕಗಳನ್ನು ಪ್ರಯೋಗಿಸುವ ಕೃಷ್ಣಮೂರ್ತಿ, ಯಕ್ಷಗಾನ ಹಿನ್ನೆಲೆಯ ಕುಟುಂಬದವರು. ಬಿ.ವಿ. ಕಾರಂತ ನಿರ್ದೇಶನದ 'ಪಂಜರ ಶಾಲೆ' ಮಕ್ಕಳ ನಾಟಕದ ಮೂಲಕ ರಂಗ ಪ್ರವೇಶ ಪಡೆದ ಕೃಷ್ಣಮೂರ್ತಿ, ನೀನಾಸಮ್ ಸಂಸ್ಥೆಯಲ್ಲಿ ಸಕ್ರಿಯ ಸದಸ್ಯರಾಗಿ, ನಟರಾಗಿ, ವಿದ್ಯಾರ್ಥಿಯಾಗಿ, ಅಧ್ಯಾಪಕರಾಗಿ, ತಿರುಗಾಟದಲ್ಲಿ ನಟರಾಗಿ, ನಿರ್ದೇಶಕರಾಗಿ ಅನುಭವ ಪಡೆದರು. ಆಮೇಲೆ ರಾಷ್ಟ್ರೀಯ ನಾಟಕ ಶಾಲೆಯ ಪದವಿ ಪಡೆದರು. ತ್ರಿಚೂರಿನ ಸ್ಕೂಲ್ ಆಫ್ ಡ್ರಾಮಾದಲ್ಲಿ ಅತಿಥಿ ಉಪನ್ಯಾಸಕರು.

ಜಯಂಟ್ ಮಾಮ, ನೀಲಿ ಕುದುರೆ, ಝುಂ ಝುಂ ಆನೆ, ಸೂರ್ಯ ಬಂದ ಮೊದಲಾದ ನಾಟಕಗಳನ್ನು ನಿರ್ದೇಶಿಸಿರುವ ಅವರು, ರಾಜ್ಯ ಮತ್ತು ಹೊರ ರಾಜ್ಯಗಳಲ್ಲೂ ರಂಗ ತರಬೇತಿ ಶಿಬಿರ, ಮಕ್ಕಳ ಶಿಬಿರ, ಶಿಕ್ಷಕರಿಗಾಗಿ ರಂಗ ತರಬೇತಿ ಶಿಬಿರ ನಡೆಸಿದ್ದಾರೆ.

---



## ಬಿ.ಎಂ. ಕುಮಾರಸ್ವಾಮಿ

ಶಿವಮೊಗ್ಗದ ಡಿ.ವಿ.ಎಸ್. ಕಾಲೇಜಿನಲ್ಲಿ ಅರ್ಥಶಾಸ್ತ್ರ ಉಪನ್ಯಾಸಕರಾಗಿ, ನಂತರ ಪ್ರಾಚಾರ್ಯರಾಗಿ ನಿವೃತ್ತರಾದ ಕುಮಾರಸ್ವಾಮಿ, ವಿದ್ಯಾರ್ಥಿ ದೆಸೆಯಲ್ಲೇ ನಾಟಕಗಳಲ್ಲಿ ಪಾತ್ರ ಮಾಡಿದವರು. 1972ರಲ್ಲಿ ಗೆಳೆಯರೊಂದಿಗೆ ಸೇರಿ 'ಅಭಿನಯ' ಎನ್ನುವ ಅಭಿನಯ ನಾಟಕ ಸಂಸ್ಥೆಯನ್ನು ಸ್ಥಾಪಿಸಿದರು. ಇದರ ಸಂಘಟನೆ, ನಿರ್ವಹಣೆ, ಪಾತ್ರ, ನಿರ್ದೇಶನ, ನಾಟಕ ರಚನೆ ಹೀಗೆ ವಿವಿಧ ಕ್ಷೇತ್ರಗಳಲ್ಲಿ ದುಡಿದ ಕುಮಾರಸ್ವಾಮಿ, ಸುಮಾರು 50 ನಾಟಕಗಳಿಗೆ ಬಣ್ಣ ಹಚ್ಚಿದ್ದಾರೆ. 'ನನ್ನ ತಂಗಿಗೊಂದು ಗಂಡು ಕೊಡಿ', 'ತುಘಲಕ್', 'ತಾಮ್ರಪತ್ರ', 'ಅಂಧಯುಗ' ಮೊದಲಾದ ನಾಟಕಗಳಲ್ಲಿ ಅಭಿನಯಿಸಿರುವ ಕುಮಾರಸ್ವಾಮಿ, 'ಸದ್ಯ ವಿಚಾರಣೆ ನಡೆಯುತ್ತಿದೆ', 'ಮಾದು ಸಿಕ್ಕದಲ್ಲ', 'ತದ್ರೂಪಿ', 'ಪ್ರಾಣಿ ಪ್ರಭುತ್ವ' ಮೊದಲಾದ ನಾಟಕಗಳನ್ನು ನಿರ್ದೇಶಿಸಿದ್ದಾರೆ.

ಜಾರ್ಜ್ ಆರ್ವೆಲ್ 'ದಿ ಎನಿಮಲ್ ಫಾರಂ' ಆಂಗ್ಲ ಕಾದಂಬರಿಯ ಕನ್ನಡ ರಂಗರೂಪ 'ಪ್ರಾಣಿ ಪ್ರಭುತ್ವ' ಅವರು ರಚಿಸಿದ ನಾಟಕಗಳಲ್ಲಿ ಪ್ರಮುಖ.

---



## ಗುಡಿಹಳ್ಳಿ ನಾಗರಾಜ

ವೃತ್ತಿಯಿಂದ ಪತ್ರಕರ್ತರಾದ ನಾಗರಾಜ, ಪ್ರವೃತ್ತಿಯಿಂದ ರಂಗಭೂಮಿಯ ನಿರಂತರ ಒಡನಾಡಿ.

ಅಭಿನಯ ಮತ್ತು ಸಂಘಟನೆ ಮೂಲಕ ರಂಗಭೂಮಿಯ ನಂಟನ್ನು ವಿದ್ಯಾರ್ಥಿ ದೆಸೆಯಿಂದಲೇ ಅಂಟಿಸಿಕೊಂಡ ಅವರು, ಕ್ರಮೇಣ ರಂಗಭೂಮಿಯ ಶೋಧನೆ, ದಾಖಲೀಕರಣದತ್ತ ಗಮನಹರಿಸಿದರು. ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕಿನ ಗುಡಿಹಳ್ಳಿಯಲ್ಲಿ ಜನಿಸಿದ ಅವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ., ಇಂಗ್ಲಿಷ್ ಪದವಿ ಪಡೆದರು. ಕೆಲ-ಕಾಲ ಹರಪನಹಳ್ಳಿ ಕಾಲೇಜಿನಲ್ಲಿ ಉಪನ್ಯಾಸಕರಾದಾಗ ಹಲವು ನಾಟಕಗಳನ್ನು ನಿರ್ದೇಶಿಸಿ, ರಂಗಶಿಬಿರಗಳನ್ನು ಸಂಘಟಿಸಿದರು.

ಮರಿಯಮ್ಮನ ಹಳ್ಳಿಯ ರಂಗಸಿರಿ, ಕಲಾಗ್ರಾಮ, ಚಿಂದೋಡಿ ಲೀಲಾ, ರಂಗ ನಾಟಕ ಪ್ರಯೋಗ ಸಾರ್ಥಕತೆ ಅವರ ಕೃತಿಗಳು. ಜೊತೆಗೆ 'ವೃತ್ತಿ ರಂಗಭೂಮಿಯ ಮಹತ್ತರ ನಾಟಕಗಳು' ಕೃತಿಯನ್ನು ರಾಮಕೃಷ್ಣ ಮರಾಠೆ ಅವರೊಂದಿಗೆ ಸಂಪಾದಿಸಿದ್ದಾರೆ.

ಸದ್ಯ ಪ್ರಜಾವಾಣಿ ಪತ್ರಿಕೆಯ ಹಿರಿಯ ಉಪಸಂಪಾದಕರಾಗಿರುವ ನಾಗರಾಜ, ರಾಜ್ಯ ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷರೂ ಕೂಡ.

---



## ಡಿ.ಟಿ. ಚನ್ನಕೇಶವ ಮೂರ್ತಿ

ಕೆಲ ವರ್ಷಗಳ ಹಿಂದೆ ಜಿ.ಬಿ. ಜೋಶಿ ಅವರ 'ಕದಡಿದ ನೀರು' ನಾಟಕ ಬೆಂಗಳೂರಿನಲ್ಲಿ ಪ್ರಯೋಗಗೊಂಡಿತು. ಅದರ ನಿರ್ದೇಶಕರು ಪ್ರಸನ್ನ, ಅದರಲ್ಲಿ ಪ್ರಮುಖ ಪಾತ್ರಧಾರಿ ಚನ್ನಕೇಶವ ಮೂರ್ತಿ. ಸ್ವಾತಂತ್ರ್ಯಯೋಧ ಶಿವಪ್ಪನ ಪಾತ್ರಕ್ಕೆ ಜೀವ ತುಂಬಿ ನಟಿಸಿದ ಚನ್ನಕೇಶವ ಮೂರ್ತಿ ಅಭಿನಯವನ್ನು ನೋಡಿದವರು ಯಾರೂ ಮರೆಯಲಾರರು.

ಇಂಥ ಚನ್ನಕೇಶವ ಮೂರ್ತಿ ವೃತ್ತಿಯಿಂದ ತೆರಿಗೆ ಅಧಿಕಾರಿ. ಆದರೆ ರಂಗಭೂಮಿಯೊಂದಿಗೆ ಸದಾ ಅಂಟಿದ ನಂಟು. ಬಿ.ಎ., ಓದುವಾಗಲೇ ನಾಟಕ ವಿಷಯ ಆಯ್ದುಕೊಂಡ ಅವರು, ಬೆಂಗಳೂರಿನಲ್ಲಿದ್ದ ಗುರುರಾಜುಲು ನಾಯ್ಡು ನಾಟಕ ಕಂಪನಿಯ ವತಿಯಿಂದ ನಾಟಕಕ್ಕೆ ಪ್ರವೇಶವಾದರು. ನಂತರ ನಾಡಿನ ಹೆಸರಾಂತ ರಂಗ ತಂಡವಾದ 'ರಂಗಸಂಪದ'ದಲ್ಲಿ ಸೇರಿ ಅಭಿನಯ, ನಿರ್ದೇಶನದಲ್ಲಿ ತೊಡಗಿದರು. ಇದಕ್ಕೂ ಮೊದಲು 1975ರಲ್ಲಿ ಬೆಳಗಾವಿಯಲ್ಲಿ 'ನಟ ಸಂಪದ' ಮತ್ತು 'ರಂಗ ಸಂಪದ' ರಂಗ ತಂಡಗಳನ್ನು ಹುಟ್ಟುಹಾಕಿ ಬೆಳೆಸಿದರು.

60ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿರುವ ಚನ್ನಕೇಶವ ಮೂರ್ತಿ, 30ಕ್ಕೂ ಹೆಚ್ಚು ನಾಟಕಗಳನ್ನೂ ನಿರ್ದೇಶಿಸಿದ್ದಾರೆ. ಬೆಂಗಳೂರಿಗೆ ಬಂದಿದ್ದ ಇಂಗ್ಲೆಂಡಿನ 'ನ್ಯೂ ಷೇಕ್ಸ್‌ಪಿಯರ್' ನಾಟಕ ತಂಡದೊಂದಿಗೆ ಕೆಲಸ ಮಾಡಿರುವ ಚನ್ನಕೇಶವಮೂರ್ತಿ 'ಮಾನು' ಪ್ರಶಸ್ತಿ ಪುರಸ್ಕೃತರು.

---



## ಯು.ಆರ್. ಚಂದರ್

ಜೀವ ವಿಮಾ ನಿಗಮದ ನಿವೃತ್ತ ಹಿರಿಯ ಶಾಖಾಧಿಕಾರಿಯಾದರೂ ವಿದ್ಯಾರ್ಥಿಯಾಗಿರುವಾಗಲೇ ತೌಳವ ಸ್ವಾತಂತ್ರ್ಯ ನಾಟಕದ ಮೂಲಕ ರಂಗ ಪ್ರವೇಶಿಸಿದವರು ಈ ಉಳ್ಳಾಲ ರಾಮಚಂದ್ರ. ಅವರು ಹುಟ್ಟಿದ್ದು ಕೂಡ ದಕ್ಷಿಣ ಕನ್ನಡದ ಉಳ್ಳಾಲದಲ್ಲಿ. ನಿರ್ಭಾಗ್ಯ ನಳಿನಿ, ಜೀವನ ನಾಟಕ, ಮರಳಿ ಮನೆಗೆ, ತಿರುಗಿ ನೋಡು, ಮಿಸ್ ಮಾಲಿನಿ, ಎಡವಿದ ಮಡದಿ, ಹೊಂಗನಸು ಮೊದಲಾದ ಸಾಮಾಜಿಕ ನಾಟಕಗಳನ್ನು ರಚಿಸಿದ ಚಂದರ್, ಭಾರತಿ, ಒಂದೆ ತಾಯಿಯ ಮಕ್ಕಳು ಎನ್ನುವ ದೇಶ ಪ್ರೇಮ ಕುರಿತಾದ ನಾಟಕಗಳನ್ನು ಬರೆದಿದ್ದಾರೆ. ಅಲ್ಲದೆ ಶ್ರೀ ಸತ್ಯನಾರಾಯಣ ಮಹಾತ್ಮೆ ಎನ್ನುವ ನಾಟಕ, ಜೊತೆಗೆ ತುಳು ನಾಟಕಗಳನ್ನೂ ಬರೆದಿದ್ದಾರೆ. ಈಗಾಗಲೇ ತೌಳವ ಪ್ರಶಸ್ತಿ ಪಡೆದಿರುವ ಅವರು, ಹಲವಾರು ಸಂಘ–ಸಂಸ್ಥೆಗಳಿಂದ ಸನ್ಮಾನಿತರು. ಅವರು ವೃತ್ತಿಯಿಂದ ನಿವೃತ್ತರಾದ ಸಂದರ್ಭದಲ್ಲಿ 'ಅವಲೋಕನ' ಎಂಬ ಗ್ರಂಥ ಪ್ರಕಟವಾಗಿದೆ. ಇದರಲ್ಲಿ ಚಂದರ್ ಅವರ ಬದುಕು ಸಾಧನೆಗಳ ಬಗ್ಗೆ ವಿವರಗಳಿವೆ.

---



## ಚಂದ್ರಹಾಸ ಉಳ್ಳಾಲ್

ಬಿ.ಎಸ್.ಎನ್.ಎಲ್.ದ ಸಬ್ ಡಿವಿಜನಲ್ ಎಂಜಿನಿಯರ್ ಆದ ಚಂದ್ರಹಾಸ, ಬೆಳಗಿದ್ದು ರಂಗಭೂಮಿಯಲ್ಲಿ. ಸಮುದಾಯದ ಮಂಗಳೂರು ಘಟಕದಲ್ಲಿದ್ದಾಗ ಪ್ರಸನ್ನ ನಿರ್ದೇಶಿಸಿದ 'ಮಾರೀಚನ ಬಂಧುಗಳು' ನಾಟಕದಲ್ಲಿ ಅಭಿನಯಿಸಿದರು. ಆಮೇಲೆ ಸಮುದಾಯದ ರಂಗ ತರಬೇತಿ ಶಿಬಿರಗಳಲ್ಲಿ ಪಾಲ್ಗೊಂಡ ಅವರು, ಉದ್ಯೋಗ ನಿಮಿತ್ತ ಗೋಣಿಕೊಪ್ಪಲಿಗೆ ಹೋಗಿ ಅಲ್ಲಿ ಮಿತ್ರರೊಂದಿಗೆ ಸ್ಪಂದನ ತಂಡ ಹುಟ್ಟು ಹಾಕಿದರು. ಅಲ್ಲಿ ಪ್ರತಿವರ್ಷ ಸ್ಪಂದನ ನಾಟಕೋತ್ಸವವನ್ನು ಸಂಘಟಿಸಿದರು.

ಆಮೇಲೆ ಮಂಗಳೂರಿನ ಮಿತ್ರರೊಂದಿಗೆ 'ಅಯನ' ನಾಟಕದ ಮನೆ ಸಂಘಟನೆಯಲ್ಲಿ ಪಾತ್ರ. ಇದರ ಪ್ರಥಮ ನಾಟಕ 'ಬಸ್ತಿ' ನಾಟಕದಲ್ಲಿ ಅಭಿನಯ. ನಂತರ ಮಂಗಳೂರಿನ ಅಭಿವ್ಯಕ್ತ ನಾಟಕ ತಂಡದಲ್ಲಿ ನಟಿಸಿದರು. ಜೊತೆಗೆ ಮಂಗಳೂರಿನ ಸಂಕೇತ್ ಕಲಾವಿದರ ಸದಾನಂದ ಸುವರ್ಣ ನಿರ್ದೇಶಿಸಿದ 'ಉರುಳು' ನಾಟಕದಲ್ಲಿ ಪ್ರಮುಖ ಪಾತ್ರ. ಎರಡು ಬಾರಿ ಶ್ರೇಷ್ಠ ಪ್ರಶಸ್ತಿ ಪಡೆದ ಚಂದ್ರಹಾಸ, ಪ್ರಸನ್ನ, ಬಿ.ವಿ. ಕಾರಂತ, ಸಿ.ಜಿ.ಕೆ. ಮೊದಲಾದವರು ತಿದ್ದಿ ಬುದ್ಧಿ ಹೇಳಿದ್ದಾರೆಂದು ಸ್ಮರಿಸಿಕೊಳ್ಳುತ್ತಾರೆ. ಈಗ ಅವರು ಮಂಗಳೂರಿನ ಸದಾನಂದ ಸುವರ್ಣ ಸಾಂಸ್ಕೃತಿಕ ಪ್ರತಿಷ್ಠಾನದ ಸಂಘಟಕರು.

---



## ಕೆ. ದೇವಪ್ಪ ನಾಯಕ

ಕಾಸರಗೋಡಿನ ಕೊಲ್ಲಂಗಾನ ಗ್ರಾಮದಲ್ಲಿ ಜನಿಸಿದರೂ ನೆಲೆ ನಿಂತದ್ದು ಧಾರವಾಡದಲ್ಲಿ. ಹೊಟ್ಟೆ ಪಾಡಿಗೆ ಅಂಚೆ ಇಲಾಖೆಯಲ್ಲಿ ಕೆಲಸ. ಆದರೆ ಧಾರವಾಡದ ರಂಗಭೂಮಿಯೊಂದಿಗೆ ನಿರಂತರ ನಂಟು. 'ಅರುಣೋದಯ' ಹವ್ಯಾಸಿ ಕಲಾಸಂಘದ ಸ್ಥಾಪಕರು. ಸುಮಾರು 10 ತುಳು ನಾಟಕಗಳಲ್ಲಿ ನಟಿಸಿ, ನಿರ್ದೇಶಿಸಿರುವ ದೇವಪ್ಪ ನಾಯಕ, ಕನ್ನಡದ ಅನೇಕ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ವಸ್ತ್ರ ವಿನ್ಯಾಸಕ, ರಂಗ ವಿನ್ಯಾಸ, ಬೆಳಕು ವಿನ್ಯಾಸ ಹೀಗೆ ರಂಗಭೂಮಿಯ ಅನೇಕ ಪ್ರಕಾರಗಳಲ್ಲಿ ದುಡಿದಿರುವ

ದೇವಪ್ಪ ತಮ್ಮ 11ನೇ ವಯಸ್ಸಿಗೆ ಬಣ್ಣ ಹಚ್ಚಿದವರು. ತಮ್ಮೂರಿನಲ್ಲಿ 'ನವರಂಗ ಆರ್ಟ್ಸ್' ಸಂಸ್ಥೆಯನ್ನು ಸ್ಥಾಪಿಸಿದ ಅವರು, ಅನೇಕ ತುಳು ನಾಟಕವನ್ನು ಪ್ರದರ್ಶಿಸಿದರು. ಅದಕ್ಕೆ ಈಗ 35ರ ಹರೆಯ. ಅದಕ್ಕೀಗ ಜನರ ಸಹಕಾರದಿಂದ ಬಯಲು ರಂಗ ಮಂದಿರ ಸಾಧ್ಯವಾಗಿದೆ.

ಟಿ.ವಿ. ಧಾರಾವಾಹಿ, ಸಿನಿಮಾ, ಟೆಲಿ ನಾಟಕ, ಕಿರುಚಿತ್ರ ಹೀಗೆ ಅವರ ಬಣ್ಣದ ಬದುಕಿನ ಕ್ಯಾನ್ವಾಸ್ ದೊಡ್ಡದು. ಸದ್ಯ ಅಂಚೆ ಇಲಾಖೆಯಿಂದ ಸ್ವಯಂ ನಿವೃತ್ತಿ ಪಡೆದಿರುವ ಅವರು, ಪೂರ್ತಿಯಾಗಿ ರಂಗಭೂಮಿಯಲ್ಲಿ ತೊಡಗಿಸಿಕೊಂಡಿದ್ದಾರೆ.

---



## ಹೆಚ್.ಕೆ. ದ್ವಾರಕಾನಾಥ್

ಈಚೆಗೆ ರಂಗಾಯಣದ ಕಲಾವಿದರು ಅಭಿನಯಿಸುವ 'ಕೃಷ್ಣೇಗೌಡನ ಆನೆ' ನಾಟಕ ನೋಡಿದ್ದೀರಾ? ಪೂರ್ಣಚಂದ್ರ ತೇಜಸ್ವಿಯವರ ಕಥೆಯನ್ನು ನಾಟಕಕ್ಕೆ ಅಳವಡಿಸಿ ನಿರ್ದೇಶಿಸಿದರು ಆರ್. ನಾಗೇಶ್. ಇದರಲ್ಲಿ ಮಾವುತನಾಗಿ ಹೆಚ್.ಕೆ. ದ್ವಾರಕಾನಾಥ್ ಅಭಿನಯವನ್ನು ಯಾರೂ ಮರೆಯಲಾರರು.

ಆದರೆ ರಂಗವಿನ್ಯಾಸಕಾರರಾಗಿ ಹೆಚ್ಚು ಪರಿಚಿತರಾಗಿರುವ ಹೆಚ್.ಕೆ. ದ್ವಾರಕಾನಾಥ್ ಅವರೊಳಗೊಬ್ಬ ಉತ್ತಮ ನಟನಿದ್ದಾನೆ ಎಂಬುದು ಸಾಬೀತಾಗಿದ್ದು ಕಡಿಮೆಯೇ.

1982ರಿಂದ ಸಮುದಾಯದಲ್ಲಿ ಸಕ್ರಿಯರಾದ ದ್ವಾರಕಾನಾಥ್, 1989ರಿಂದ ರಂಗಾಯಣದಲ್ಲಿ ವಿನ್ಯಾಸಕಾರರಾಗಿ ನೇಮಕಗೊಂಡರು. ಹಲವಾರು ನಾಟಕಗಳಿಗೆ ರಂಗವಿನ್ಯಾಸ. ಮುಖವಾಡ ತಯಾರಿಕೆ, ಭಿತ್ತಿಚಿತ್ರಗಳು, ಮೂರ್ತಿಶಿಲ್ಪ ಮೊದಲಾದ ಕಲಾಪ್ರಕಾರಗಳಲ್ಲಿ ಅವರ ಅನುಭವ ದಟ್ಟವಾದುದು. ಹೆಸರಾಂತ ನಿರ್ದೇಶಕರ ನಾಟಕಗಳಿಗೆ ರಂಗವಿನ್ಯಾಸಕರಾದ ಅವರು ರಂಗಾಯಣದ ಚಿಣ್ಣರ ಮೇಳದ ಕಲಾ ನಿರ್ದೇಶಕರು, 2002ರಲ್ಲಿ ಅಂತರಾಷ್ಟ್ರೀಯ ಕಲಾಕಮ್ಮಟ 'ಖೋಜ್'ನಲ್ಲಿ ಭಾಗವಹಿಸಿದ್ದರು.

ರಾಜ್ಯ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ಎನ್.ಸಿ.ಇ.ಆರ್.ಟಿ. ರಾಷ್ಟ್ರೀಯ ಪ್ರಶಸ್ತಿ ಪಡೆದಿರುವ ದ್ವಾರಕಾನಾಥ್ ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಚಿಣ್ಯದವರು.

---



## ಆರ್. ನರೇಂದ್ರಬಾಬು

ಕಾಲೇಜು ದಿನಗಳಲ್ಲೇ ಕಲಾಸಕ್ತಿ ಬೆಳಸಿಕೊಂಡ ಬಾಬು, ನಾಟಕ, ಮೂಕಾಭಿನಯ ಮೊದಲಾದ ಸ್ಪರ್ಧೆಗಳಲ್ಲಿ ಭಾಗವಹಿಸಿ ರಾಜ್ಯಮಟ್ಟದಲ್ಲಿ 25ಕ್ಕೂ ಹೆಚ್ಚು ಬಹುಮಾನಗಳನ್ನು ಪಡೆದಿದ್ದಾರೆ.

ಓದಿದ್ದು ಎಂಜಿನಿಯರಿಂಗ್, ಈಗ ಟಿ.ಬಿ. ಡ್ಯಾಂದ ತುಂಗಭದ್ರ ಮಂಡಳಿಯ ಸಹಾಯಕ ಅಭಿಯಂತರ. ಜೊತೆಗೆ ಅಲ್ಲಿಯ ಕನ್ನಡ ಕಲಾಸಂಘದ ಕಾರ್ಯದರ್ಶಿ, ಹೊಸಪೇಟೆಯ ಸುತ್ತಮುತ್ತ ರಂಗ ಚಟುವಟಿಕೆಗಳಲ್ಲಿ ಸಕ್ರಿಯರಾಗಿದ್ದಾರೆ. ಹೊಸಪೇಟೆ ನಗರದಲ್ಲಿ ಪಂಪ ಕಲಾಮಂದಿರ ನಿರ್ಮಾಣ ಮಾಡುವಲ್ಲಿ, ಕನ್ನಡ ಕಾರ್ಯಕ್ರಮ ಆಯೋಜಿಸುವಲ್ಲಿ ಪ್ರಮುಖ ಪಾತ್ರಧಾರಿ. ಕನ್ನಡ ಕಲಾಸಂಘದ ಎಲ್ಲ ನಾಟಕಗಳಿಗೆ ಬಾಬು ಅವರೇ ಪ್ರಮುಖರು. 'ರಾಕ್ಷಸ', 'ದಫನ್' ಹೀಗೆ ಅನೇಕ ನಾಟಕಗಳಲ್ಲಿ ಅಭಿನಯಿಸಿ, ಪ್ರಶಸ್ತಿಗಳನ್ನೂ ಪಡೆದಿದ್ದಾರೆ. ಅವರು ನಟಿಸಿದ 'ನಾಯಿ ಕಥೆ' ನಾಟಕ ಸ್ಪರ್ಧೆಯಲ್ಲಿ ಏಳು ಬಹುಮಾನ

ಲಭಿಸಿದರೆ, ಬಾಬು ಅವರಿಗೆ ಅತ್ಯುತ್ತಮ ನಟ ಪ್ರಶಸ್ತಿ ಸಿಕ್ಕಿದೆ. ಇದರೊಂದಿಗೆ ಉತ್ತಮ ಅಭಿನಯಕ್ಕಾಗಿ ಶಂಕರ್‌ನಾಗ್ ಪ್ರಶಸ್ತಿ ಪಡೆದಿದ್ದಾರೆ. ಮಕ್ಕಳ ರಂಗ ಚಟುವಟಿಕೆಯಲ್ಲಿ ಪ್ರೋತ್ಸಾಹಿಸಲು ಪ್ರತಿವರ್ಷ ಹೊಸಪೇಟೆಯಲ್ಲಿ 'ಚಿನಾರ' (ಚಿಣ್ಣರ ನಾಟಕ ರಂಗ) ಉತ್ಸವವನ್ನು ಆಯೋಜಿಸುತ್ತಿದ್ದಾರೆ.



## ನಂಜುಂಡ ಮೈಮ್

ಹುಟ್ಟಿದ್ದು ಕೃಷಿ ಕುಟುಂಬದಲ್ಲಾದರೂ ಕೈಗೊಂಡದ್ದು ಕಲಾಕೃಷಿ ನಟರಾಗಿ, ನಿರ್ದೇಶಕರಾಗಿ ನಾಟಕಗಳನ್ನು ಕಲಿಸುತ್ತ ಹಾಸನ ಜಿಲ್ಲೆ ತುಂಬಾ ಸುತ್ತಾಡಿರುವ ನಂಜುಂಡೇಗೌಡ, ನಂಜುಂಡ ಮೈಮ್ ಎಂದೇ ಪ್ರಸಿದ್ಧರು.

ಕೇವಲ 19 ಸೆಕೆಂಡುಗಳ ನಾಟಕ 'ಸ್ಫೋಟ' ಪ್ರದರ್ಶಿಸಿ ಲಿಮ್ಕಾ ದಾಖಲೆ ಸೇರಿರುವ ನಂಜುಂಡ, ಸಂಗ್ಯಾಬಾಳ್ಯಾ, ವಿದೂಷಕ, ಅಪ್ಪ, ಮನೆ ಮೊದಲಾದ ನಾಟಕಗಳಲ್ಲಿ ನಟಿಸಿದ್ದಾರೆ.

ಕಳೆದ 25 ವರ್ಷಗಳಿಂದ ನಾಟಕ ರಚನೆ, ನಿರ್ದೇಶನ, ವಸ್ತ್ರ ವಿನ್ಯಾಸ, ಅಭಿನಯ, ಬೆಳಕು ಹೀಗೆ ತೊಡಗಿಸಿಕೊಂಡಿರುವ ನಂಜುಂಡ, ಹಾಸನ ಜಿಲ್ಲೆಯ ಚನ್ನರಾಯಪಟ್ಟಣದವರು. ಯುವರಂಗದವರ ಡಾ॥ ರಾಜ್‌ಕುಮಾರ್ ಪ್ರಶಸ್ತಿ, ಪುಟ್ಟಣ್ಣ ಕಣಗಾಲ್ ಪ್ರಶಸ್ತಿ, ರಾಜ್ಯ ಸರ್ಕಾರದ ಸಚಿವಾಲಯ ಪ್ರಶಸ್ತಿ, ಯಲಹಂಕ ಸ್ನೇಹಿತರು ನೀಡಿದ ಪ್ರಶಸ್ತಿ ಹೀಗೆ ಹಲವಾರು ಪ್ರಶಸ್ತಿ ಪಡೆದಿರುವ ನಂಜುಡ ಸದ್ಯ ಹಾಸನ ಜಿಲ್ಲೆಯ 'ಜನಮಿತ್ರ' ಪತ್ರಿಕೆಯ ಛಾಯಾಗ್ರಾಹಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.



## ಕೆ.ವಿ. ನಾಗರಾಜ ಮೂರ್ತಿ

ಸದಾ ಜುಬ್ಬ, ಸದಾ ಮುಗುಳ್ನಗೆ, ಸದಾ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಠಿಕಾಣಿ, ಸದಾ ಪಾದರಸ. ಅವರು ನಾಗರಾಜಮೂರ್ತಿ, ಪ್ರತಿವರ್ಷ ಕಾಲೇಜು ವಿದ್ಯಾರ್ಥಿಗಳಿಗಾಗಿ ನಡೆಸುತ್ತಿರುವ ನಾಟಕೋತ್ಸವದ ಮೂಲಕ ರಂಗಭೂಮಿಗೆ ಹೊಸಬರನ್ನು ಕರೆತರುತ್ತಿರುವವರು.

ಭಾರತ ಯಾತ್ರಾ ಕೇಂದ್ರದ ಕಾರ್ಯದರ್ಶಿಯಾಗಿ ಸುಮಾರು 50ಕ್ಕೂ ಹೆಚ್ಚು ರಂಗಶಿಬಿರಗಳನ್ನು ರಾಜ್ಯಾದ್ಯಂತ ಸಂಘಟಿಸಿರುವ ನಾಗರಾಜಮೂರ್ತಿ, ಭಾರತ ಯಾತ್ರಾ ಕೇಂದ್ರದ ಮೂಲಕ ಸುಮಾರು 20ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. 10ಕ್ಕೂ ಹೆಚ್ಚು ವರ್ಷಗಳ ಕಾಲ ರಾಜ್ಯ ಅಕಾಡೆಮಿಯ ಸದಸ್ಯರಾಗಿದ್ದ ನಾಗರಾಜಮೂರ್ತಿ ನಟ ಕೂಡ.

ಪ್ರಯೋಗರಂಗ ತಂಡದ ಸಂಸ್ಥಾಪಕರಾದ ಅವರು ಸುಮಾರು 50ಕ್ಕೂ ಹೆಚ್ಚು ನಾಟಕಗಳನ್ನು ನಿರ್ಮಿಸಿದ್ದಾರೆ. ಒಂದು ಸೈನಿಕ ವೃತ್ತಾಂತ, ಮಂಟೇಸ್ವಾಮಿ ಕಥಾಪ್ರಸಂಗ, ಮೌನಿ, ನಮ್ಮ ನಿಮ್ಮೊಳಗೊಬ್ಬ, ಸಿರಿಪುರಂದರ ಮೊದಲಾದ ನಾಟಕಗಳ ನಿರ್ಮಾಪಕರು ಅವರು.

ಇದರೊಂದಿಗೆ, ಪ್ರಯೋಗರಂಗದ ಮೂಲಕ ನೂರಾರು ಬೀದಿನಾಟಕಗಳನ್ನು ಪ್ರದರ್ಶಿಸಿರುವ ನಾಗರಾಜಮೂರ್ತಿ ಹೊರರಾಜ್ಯಗಳಲ್ಲೂ ನಾಟಕೋತ್ಸವ ನಡೆಸಿದ ಹೆಗ್ಗಳಿಕೆ ಅವರದು.



## ಪ್ರೇಮ ಬಾದಾಮಿ

ಸಾಮಾನ್ಯವಾಗಿ ನಾಟಕ ಕಂಪನಿಗಳಲ್ಲಿಯ ಕಲಾವಿದೆಯರು ಪಾತ್ರಕ್ಕೆ ಮಾತ್ರ ಸೀಮಿತರಾಗುತ್ತಾರೆ. ಆದರೆ ಪ್ರೇಮಾ ಅನೇಕ ನಾಟಕ ಕಂಪನಿಗಳಲ್ಲಿ ಪಾತ್ರಧಾರಿಯಲ್ಲದೆ ನಾಟಕ ರಚನೆಗೆ ಮುಂದಾದವರು. ವಿಧಿ ಚಕ್ರ, ಸಿರಿ ಮಹಲು, ನೀತಿ ತಪ್ಪಿದ ಪ್ರೀತಿ, ಪ್ರೇಮ ಶಿಕ್ಷೆ, ಕುಂಕುಮ ತಂದ ಕೈಲಾಸ ಹೀಗೆ ಅನೇಕ ನಾಟಕಗಳನ್ನು ರಚಿಸಿ, ನಿರ್ದೇಶಿಸಿ ರಂಗ ಮಂಚವೇರಿಸಿದವರು ಈ ಪ್ರೇಮಾ.

ಹಿಂದೆ ಪೌರಾಣಿಕ, ಐತಿಹಾಸಿಕ ನಾಟಕಗಳಲ್ಲಿ ಪಾತ್ರ ನಿರ್ವಹಿಸಿ ಜನಮೆಚ್ಚುಗೆ ಗಳಿಸಿದ್ದ ಪದ್ಮಾವತಿಯವರ ಮಗಳಾದ ಪ್ರೇಮಾ, ಪಿಯುಸಿ ಓದುವಾಗಲೇ ಬಣ್ಣ ಹಚ್ಚಿದರು. ಧುತ್ತರಗಿ ಅವರ ಕಂಪನಿ, ಗುಡಿಗೇರಿ ಬಸವರಾಜು ಅವರ ಕಂಪನಿ ಹೀಗೆ ಅನೇಕ ನಾಟಕ ಕಂಪನಿಗಳಲ್ಲಿ ದುಡಿದ ಅವರಿಗೆ ಅನೇಕ ಸನ್ಮಾನಗಳು ಸಂದಿವೆ.

ಕಳೆದ 25 ವರ್ಷಗಳಿಂದ ವೃತ್ತಿ ಹಾಗೂ ಹವ್ಯಾಸಿ ರಂಗಭೂಮಿಯ ಒಡನಾಡಿಯಾಗಿರುವ ಪ್ರೇಮಾ, ಹುಬ್ಬಳ್ಳಿಯಲ್ಲಿ ಮಾರುತಿ ನಾಟ್ಯ ಸಂಘ, ಭಾಗ್ಯವಂತಿ ನಾಟ್ಯ ಸಂಘಗಳನ್ನು ಆರಂಭಿಸಿದರು. ಇದಕ್ಕೆ ಕಲಾವಿದರನ್ನು ಕಲೆ ಹಾಕಿ ಸ್ವರಚಿತ ನಾಟಕಗಳನ್ನು ತಾವೇ ನಿರ್ದೇಶಿಸಿ, ಪ್ರದರ್ಶಿಸಿ ಜನ ಮೆಚ್ಚುಗೆ ಗಳಿಸಿದ್ದಾರೆ. ಈಗ ಬಾದಾಮಿಯಲ್ಲಿ ನೆಲೆ ನಿಂತಿದ್ದಾರೆ.

---



## ಆರ್. ಮಂಜುಳಾ

ಆರ್. ನಾಗರತ್ನಮ್ಮ ಅವರ 'ಸ್ತ್ರೀ ನಾಟಕ ಮಂಡಳಿ'ಯಲ್ಲಿಯ ನಾಟಕಗಳಲ್ಲಿ ಬರೀ ಗಂಡು ಪಾತ್ರಗಳನ್ನೇ ನಿರ್ವಹಿಸುತ್ತಿದ್ದ ಆರ್. ಮಂಜುಳಾ, 1943ರಿಂದ ರಂಗಭೂಮಿ ಪ್ರವೇಶಿಸಿದವರು. ಮೊದಲಿಗೆ ಹಿರಣ್ಣಯ್ಯ ಮಿತ್ರಮಂಡಳಿಯಲ್ಲಿ, ನಂತರ ಹೆಚ್.ಎಲ್.ಎನ್.ಸಿಂಹ ಅವರ ಸೆಲೆಕ್ಟ್ ಆರ್ಟಿಸ್ಟ್, ಸೊರೋಟ್ ಅಶ್ವತ್ಥ್ ಅಲ್ಲದೆ ಹವ್ಯಾಸಿ ಸಂಸ್ಥೆಗಳಲ್ಲಿಯೂ ಸ್ತ್ರೀ ಪಾತ್ರಗಳಲ್ಲಿ ಕಾಣಿಸಿಕೊಂಡ ಮಂಜುಳಾ ಚೆನ್ನಾಗಿ ಹಾಡಬಲ್ಲರು.

ಶ್ರೀ ಕೃಷ್ಣ ಗಾರುಡಿ, ಶ್ರೀ ಕೃಷ್ಣ ಲೀಲಾ, ಬೇಡರ ಕಣ್ಣಪ್ಪ, ಸಂಸಾರ ನೌಕ, ಸದಾರಮೆ ಹೀಗೆ ಅನೇಕ ನಾಟಕಗಳಲ್ಲಿ ಪ್ರಮುಖ ಪಾತ್ರಧಾರಿಯಾದ ಮಂಜುಳಾ, ಮಕ್ಮಲ್ ಟೋಪಿ, ಗುಲೆಬಕಾವಲಿಯಂಥ ನಾಟಕಗಳಲ್ಲೂ ಕಾಣಿಸಿಕೊಂಡರು. ಅವರು ಅಭಿನಯಿಸಿದ ನಾಟಕಗಳ ಹಾಡುಗಳನ್ನು ಈಗಲೂ ಸೊಗಸಾಗಿ ಹಾಡಬಲ್ಲರು.

---



## ಮಂಜುಳಾ ಬಾದಾಮಿ

ಸಾಣೇಹಳ್ಳಿ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳವರ ಶಿವಕುಮಾರ ಕಲಾಸಂಘದ ರಂಗ ನಿರ್ದೇಶಕಿ ಮಂಜುಳಾ ಬಾದಾಮಿ.

ಕಳೆದ 15 ವರ್ಷಗಳಿಂದ ರಂಗಭೂಮಿಯಲ್ಲಿ ಸಕ್ರಿಯವಾಗಿರುವ ಮಂಜುಳಾ, ನೀನಾಸಂ ಪದವೀಧರೆ, ನೀನಾಸಂ ತಿರುಗಾಟದಲ್ಲಿದ್ದ ಅವರು, ಹೂ ಹುಡುಗಿ, ಕದಡಿದ ನೀರು, ನಾಗಮಂಡಲ, ತಿರುಕನ ಕನಸು, ಆ ಊರು ಈ ಊರು, ಜಂಗಮದೆಡೆಗೆ ಮೊದಲಾದ

ನಾಟಕಗಳಲ್ಲಿ ನಟಿಸಿದ್ದಾರೆ. ಬಲಿಪಶು, ಅಪ್ಪಾ, ಮೂಕನ ಮಕ್ಕಳು, ವೀರಭಂಟ, ಕಟ್ಟಿ ಚಿನ್ನ, ಅಲಿಬಾಬ 40 ಜನ ಕಳ್ಳರು, ನಮ್ಮೂರ ಸರದಾರ ಮೊದಲಾದ ನಾಟಕಗಳನ್ನು ನಿರ್ದೇಶಿಸಿದ ಮಂಜುಳಾ, ದಾವಣಗೆರೆಯ ವನಿತಾ ಸಮಾಜ, ಕೊಟ್ಟೂರಿನ ಕಲಾಕೇಂದ್ರ, ಹೊಸದುರ್ಗದ ಜನರಲ್ ಕಾರ್ಯಪ್ಪ ವಸತಿ ಶಾಲೆ, ಜಗಳೂರಿನ ನಳಂದ ಕಲಾಭಾರತಿ, ಸಿರಿಗೆರೆಯ ತರಳಬಾಳು ಕಲಾಸಂಘಕ್ಕೆ ಹೀಗೆ ಅನೇಕ ಸಂಘ–ಸಂಸ್ಥೆಗಳಿಗೆ ನಿರ್ದೇಶಕಿಯಾಗಿಯೂ ದುಡಿದಿದ್ದಾರೆ. ಈಗ ಸಾಣೇಹಳ್ಳಿಯಲ್ಲಿಯ ಶಿವಕುಮಾರ ಕಲಾಸಂಘದ ಸಕ್ರಿಯ ಸದಸ್ಯೆ.

---



## ಮಾಲತಿ ಸುಧೀರ್

ಮೋಡಿ ಮಾಡುವ ಕಂಠ, ಭಾವನಾತ್ಮಕ ಅಭಿನಯದಿಂದ ಪ್ರೇಕ್ಷಕರ ಮನಸೂರೆಗೊಳ್ಳುವ ಮಾಲತಿ ಸುಧೀರ್, ಕರ್ನಾಟಕ ಕಲಾ ವೈಭವ ಸಂಘದ ಒಡೆಯರು.

ನಾಟಕ ಕಂಪನಿಗಳು ನಿಲ್ಲುತ್ತಿರುವ ಸಂದರ್ಭದಲ್ಲಿ ತಮ್ಮ ಕಲಾವೈಭವ ಸಂಘದಿಂದ ಊರೂರು ಅಲೆಯುತ್ತಿದ್ದಾರೆ. ಕಷ್ಟ–ನಷ್ಟ ಅನುಭವಿಸಿದರೂ ಕಂಪನಿಯನ್ನು ನಿಲ್ಲಿಸದೇ ಮುನ್ನಡೆಸುತ್ತಿದ್ದಾರೆ.

ಚಲನಚಿತ್ರ ನಟ ಸುಧೀರ್ ಅವರನ್ನು ಮದುವೆಯಾದ ನಂತರವೂ ಬಣ್ಣದ ಬದುಕಿಗೆ ವಿದಾಯ ಹೇಳಲಿಲ್ಲ. ಮಿನುಗುತಾರೆ ಕಲ್ಪನಾ ಅವರ ಕಂಪನಿ, ಮುನಿರಂಗಸ್ವಾಮಿ ಅವರ ಕಂಪನಿ, ಗೋಕಾಕದ ಶಾರದಾ ನಾಟಕ ಮಂಡಳಿ, ಸುಳ್ಯ ಶ್ರೀಶೈಲ ಮಲ್ಲಿಕಾರ್ಜುನ ನಾಟಕ ಸಂಘ, ಕಮತಗಿಯ ಶ್ರೀ ಸಂಗಮೇಶ್ವರ ನಾಟಕ, ಕಮತಗಿಯ ಶ್ರೀ ಹುಚ್ಚೇಶ್ವರ ನಾಟಕ ಸಂಘಗಳಲ್ಲಿ ಅಭಿನಯಿಸಿದ ಅವರು, ಈಗ ಕಂಪನಿಯ ಮಾಲೀಕರು.

ಅಸಂಖ್ಯಾತ ನಾಟಕಗಳಲ್ಲಿ ಅಭಿನಯಿಸಿರುವ ಮಾಲತಿ, ಪಡೆದ ಸನ್ಮಾನ ಮತ್ತು ಪ್ರಶಸ್ತಿಗಳು ಹಲವಾರು.

---



## ಬಿ.ಎಸ್. ರಾಮರಾವ್

ಬೆಂಗಳೂರಿನ ಜಯನಗರದ ಎಂ.ಇ.ಎಸ್. ಪ್ರೌಢಶಾಲೆಯಲ್ಲಿ 20 ವರ್ಷಗಳಿಗೂ ಹೆಚ್ಚು ಕಾಲ ರಂಗಚಟುವಟಿಕೆಗಳ ಸಂಚಾಲಕರಾಗಿ ದುಡಿದವರು ರಾಮರಾವ್. ಇದಕ್ಕೂ ಮೊದಲು ನ್ಯಾಷನಲ್ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಲೂ ರಂಗದ ನಂಟು ಅವರಿಗೆ.

ಬಿ.ಎಸ್ಸಿ., ಎಂ.ಎ. (ಇಂಗ್ಲಿಷ್) ಓದಿ ಎಂ.ಇ.ಎಸ್. ಪ್ರೌಢಶಾಲೆಯಲ್ಲಿ ಶಿಕ್ಷಕರಾದ ರಾಮರಾವ್, ಈಗ ಜಯನಗರದ ವಿಜಯಾ ಸಂಜೆ ಪದವಿಪೂರ್ವ ಕಾಲೇಜಿನಲ್ಲಿ ಇಂಗ್ಲಿಷ್ ಉಪನ್ಯಾಸಕರು. ಆದರೆ ರಂಗಭೂಮಿಯ ಒಡನಾಟ ನಿರಂತರ. ಇದರ ಫಲ 'ಸಂಚಯ' ಹವ್ಯಾಸಿ ನಾಟಕ ತಂಡದ ಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದರಲ್ಲದೆ ಈಗ ಅದರ ಅಧ್ಯಕ್ಷರು.

'ಸಂಚಯ' ತಂಡದ 16 ವರ್ಷಗಳ ಅವಧಿಯಲ್ಲಿ 35 ನಾಟಕಗಳ ಪ್ರಯೋಗ, ಮೂರು ನಾಟಕೋತ್ಸವ ಆಯೋಜನೆ, ರಂಗಚಿತ್ರ ಕಾರ್ಯಕ್ರಮ ಮೊದಲಾದವು ಹೆಸರಿಸಬೇಕಾದವು. 'ಕಾಶೀ ಯಾತ್ರೆ', 'ಕತ್ತಲೆ ದಾರಿ ದೂರ', 'ಹಕ್ಕಿ ಹಾರುತಿದೆ', 'ಗಿಳಿಯು ಪಂಜರದೊಳಿಲ್ಲ' ರಾಮರಾವ್ ಅಭಿನಯಿಸಿದ ಪ್ರಮುಖ ನಾಟಕಗಳು.

---



## ರಾಮಕೃಷ್ಣ ಭಟ್ ಧುಂಡಿ

ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ ಮುಂಚಿಕೇರಿ ಎಂದರೆ ಅಲ್ಲಿ ರಂಗಮಂಚ ಏರದ ನಾಟಕಗಳೇ ಇಲ್ಲವೇನೋ ಎನ್ನುವ ಪ್ರತೀತಿ ಇದೆ.

ಅಲ್ಲಿ ಎರಡು ದಶಕಗಳ ಹಿಂದೆ ಹುಟ್ಟಿಕೊಂಡ 'ರಂಗ ಸಮೂಹ'ದ ಸ್ಥಾಪಕರಾಗಿ, ಅದರ ಅಧ್ಯಕ್ಷರಾಗಿರುವವರು ರಾಮಕೃಷ್ಣ ಭಟ್. ಅದರ ಉದ್ದೇಶ; ಸಾಂಸ್ಕೃತಿಕ ಕಾರ್ಯಕ್ರಮಗಳ ಸಂಘಟನೆ ಹಾಗೂ ಪ್ರಸಾರಕ್ಕಾಗಿ. ಇದು ಶುರುವಾದ ಮರುವರ್ಷವೇ ಸಿದ್ದಿ ಜನಾಂಗದವರಿಗಾಗಿ ನೀನಾಸಂ ಸಹಯೋಗದಲ್ಲಿ ರಂಗ ತರಬೇತಿ ಶಿಬಿರ ನಡೆಸಿ 'ಕಪ್ಪು ಜನ ಕೆಂಪು ನೆರಳು' ನಾಟಕ ಪ್ರದರ್ಶಿಸಿದರು.

ಈಗ ಪ್ರತಿವರ್ಷ ರಂಗ ತರಬೇತಿ ಶಿಬಿರ ನಡೆಸುವ ರಾಮಕೃಷ್ಣ, ನಾಟಕ ಅಕಾಡೆಮಿ ಸದಸ್ಯರೂ ಆಗಿದ್ದರು. ರಾಜ್ಯದ ಬಹುತೇಕ ಸಾಂಸ್ಕೃತಿಕ ಕೇಂದ್ರಗಳಲ್ಲಿ ತಮ್ಮ 'ರಂಗಸಮೂಹ' ತಂಡದಿಂದ ನಾಟಕ ಪ್ರದರ್ಶಿಸಿರುವ ಅವರು, ಹೊಸ ರಾಜ್ಯಗಳಲ್ಲೂ ನಾಟಕಗಳನ್ನು ಪ್ರಯೋಗಿಸಿದ್ದಾರೆ. ಜೊತೆಗೆ ಮುಂಚಿಕೇರಿಯಲ್ಲಿ ಸುಸಜ್ಜಿತ ರಂಗ ಮಂದಿರವನ್ನೂ ನಿರ್ಮಿಸಿದ್ದಾರೆ.





## ರಾಮಚಂದ್ರ ಬಿ. ನೇಂತ್ರೆಕರ

ಬೆಳಗಾವಿಯ ಪ್ರಮುಖ ಹವ್ಯಾಸಿ ರಂಗ ತಂಡವಾದ 'ರಂಗ ಸಂಪದ'ದ ಸ್ಥಾಪಕರಲ್ಲೊಬ್ಬರಾದ ರಾಮಚಂದ್ರ, ಸಿರಸಿಯ ಹುಲೇಕಲ್‌ದವರು. ಆದಾಯ ತೆರಿಗೆ ಇಲಾಖೆಯಲ್ಲಿ ಕೆಲಸಕ್ಕೆ ಸೇರಿ, ಕಾರವಾರದಲ್ಲಿ ಕೊಂಕಣಿ ನಾಟಕದೊಂದಿಗೆ ರಂಗ ಪ್ರವೇಶಿಸಿದ ಅವರು, ಬೆಳಗಾವಿಗೆ ವರ್ಗವಾದ ನಂತರ ನಟ ಸಂಪದ ತಂಡದ ನಾಟಕಗಳಲ್ಲಿ ಅಭಿನಯಿಸಿದರು.

ಕಳೆದ 25 ವರ್ಷಗಳಿಂದ ರಂಗ ಸಂಪದ ತಂಡದ ಹಿರಿಯ ಸದಸ್ಯರಾಗಿ, ಸತ್ತವರ ನೆರಳು, ಘಾಸಿರಾಂ ಕೊತ್ವಾಲ್, ಈ ಊರು ಆ ಊರು, ಜಿ.ಕೆ. ಮಾಸ್ತರರ ಪ್ರಣಯ ಪ್ರಸಂಗ, ಏನು ಬೇಡಲಿ ನಿನ್ನ ಬಳಿ ಬಂದು – ಮೊದಲಾದ ನಾಟಕಗಳಲ್ಲಿ ಅಭಿನಯಿಸಿರುವ ಅವರು, ಮರಾಠಿ, ಹಿಂದಿ, ಉರ್ದು ನಾಟಕಗಳಲ್ಲೂ ನಟಿಸಿದ್ದಾರೆ.

ಸದ್ಯ ಬೆಳಗಾವಿಯ 'ಸಾಹಿತ್ಯ ಸಂವಾದ' ಹಾಗೂ 'ಕಲಾರಂಗ' ತಂಡಗಳೊಂದಿಗೆ ಸಕ್ರಿಯರಾಗಿದ್ದಾರೆ.





## ಲೋಲಾದೇವಿ

ತಮ್ಮ ಐದನೇ ವಯಸ್ಸಿನಲ್ಲಿ 'ಭಕ್ತ ಪುಂಡಲೀಕ' ನಾಟಕದಲ್ಲಿ ಬಾಲವಿಠಲನಾಗಿ ರಂಗ ಪ್ರವೇಶಿಸಿದ ಲೋಲಾದೇವಿ, ಬೆಂಗಳೂರಿನ ವೃತ್ತಿ ಕಲಾವಿದರಾದ ಮುನಿಸ್ವಾಮಿ, ಸುಮಿತ್ರಮ್ಮನವರ ಮಗಳು.

ಬಡತನದ ಬವಣೆಯಿಂದ ರಂಗಭೂಮಿಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡು ನಾಟಕಗಳಲ್ಲಿ ಅಭಿನಯಿಸಲು ಶುರು ಮಾಡಿದ ಲೋಲಾದೇವಿ, ಅರ್ಜುನಸಾ ನಾಕೋಡ್

ಅವರ ಕಂಪನಿಯಲ್ಲಿದ್ದರು. ಬಕರೆ ಕಂಪನಿ, ನ್ಯಾಮತಿ ಕಂಪನಿ, ಚನ್ನಬಸವಯ್ಯನವರ ಕಂಪನಿ, ಗೋಕಾಕದ ಶಾರದ ನಾಟಕ ಮಂಡಳಿ, ಮುರಡಯ್ಯನವರ ಕಂಪನಿಗಳಲ್ಲಿ ನಟಿಯಾಗಿದ್ದ ಲೋಲಾದೇವಿ, ಯೋಗಾನರಸಿಂಹ ಅವರ ಕಂಪನಿಯಲ್ಲಿ ಹಿನ್ನೆಲೆ ಗಾಯಕಿಯಾಗಿ ಕೆಲ ವರ್ಷ ಸೇವೆ ಸಲ್ಲಿಸಿದರು. ಅಲ್ಲದೆ ಸುಳ್ಳದ ದೇಸಾಯಿ ಅವರ ಕಂಪನಿ, ಏಣಗಿ ಬಾಳಪ್ಪನವರ ಕಂಪನಿಯಲ್ಲೂ ಇದ್ದರು.

ರತ್ನಮಾಂಗಲ್ಯ, ಹರಿಶ್ಚಂದ್ರ, ಜೈ ಪದ್ಮಾವತಿ, ಬಸವೇಶ್ವರ ಹೇಮರೆಡ್ಡಿ ಮಲ್ಲಮ್ಮ ಮೊದಲಾದ ನಾಟಕಗಳಲ್ಲಿ ಅಭಿನಯಿಸಿದ ಲೋಲಾದೇವಿಯರು ತಮ್ಮ ಏಳು ಜನ ಮಕ್ಕಳಿಗೆ ರಂಗಭೂಮಿಯಲ್ಲಿಯೇ ತೊಟ್ಟಿಲು ಕಟ್ಟಿ ಬೆಳೆಸಿದರು.

---



## ವಿಶ್ವನಾಥ ವಂಶಾಕೃತಮಠ

ಉತ್ತರ ಕರ್ನಾಟಕದ ಇಲಕಲ್ಲ ಸೀರೆಗೆ ಪ್ರಸಿದ್ಧ ಜೊತೆ ಕಲಾವಿದರ ತವರೂರದು. ಇಂಥ ಊರಿನ ವಂಶಾಕೃತಮಠ 'ಸ್ನೇಹ ರಂಗ'ದ ಸ್ಥಾಪಕರು, ಸದ್ಯ ಅಧ್ಯಕ್ಷರೂ ಹೌದು. ಅವರ ನಿರ್ದೇಶನದ 'ಜೋಕುಮಾರಸ್ವಾಮಿ' ನಾಟಕವು 60ಕ್ಕಿಂತ ಹೆಚ್ಚು ಪ್ರದರ್ಶನ ಕಂಡಿದೆ. 'ಹಾವು ಹರಿದಾಡತಾವ', 'ಉದ್ಧವ', 'ಬೆಳ್ಳನ ಬೆಳದಿಂಗಳು' ಮೊದಲಾದ ನಾಟಕಗಳನ್ನು 'ಸ್ನೇಹರಂಗ'ಕ್ಕಾಗಿ ನಿರ್ದೇಶಿಸಿದ್ದಾರೆ.

ಅನೇಕ ರಂಗ ಶಿಬಿರಗಳನ್ನು ಸಂಘಟಿಸಿ, ನಾಟಕಗಳಲ್ಲೂ ಅಭಿನಯಿಸಿರುವ ವಂಶಾಕೃತಮಠ, ನಾಟಕಗಳ ನೇಪಥ್ಯ, ನಿರ್ಮಾಣ ನಿರ್ವಹಣೆಯಲ್ಲೂ ಎತ್ತಿದ ಕೈ. ಇದರೊಂದಿಗೆ ಕಥೆ, ಕವನಗಳನ್ನು ಬರೆದಿದ್ದಲ್ಲದೆ, ಸಂಕಲನಗಳನ್ನೂ ಪ್ರಕಟಿಸಿದ್ದಾರೆ.

ಸದ್ಯ ಇಲಕಲ್ಲಿನ ಎಸ್.ಆರ್. ಕಂಠಿ ಶಿಕ್ಷಣ ಮಹಾವಿದ್ಯಾಲಯದಲ್ಲಿ ಹಿರಿಯ ಉಪನ್ಯಾಸಕರಾಗಿದ್ದಾರೆ.

---



## ಶಂಕರ ನಾಯ್ಡು

ಕಡುಬಿಸಿಲಿನ ಬಳ್ಳಾರಿಯಲ್ಲಿ ಕಲೆ ಬತ್ತಿಲ್ಲ, ಬತ್ತುವುದಿಲ್ಲ. ಈಗಲೂ ಅಲ್ಲಿ ಪೌರಾಣಿಕ ನಾಟಕಗಳ ಪ್ರಯೋಗವೇ ಹೆಚ್ಚು, ರಕ್ತರಾತ್ರಿ, ಕುರುಕ್ಷೇತ್ರ, ಅಂಧಯುಗ ಮುಂತಾದ ನಾಟಕಗಳ ಪ್ರದರ್ಶನ ನಿರಂತರವಾಗಿ ನಡೆಯುತ್ತಲೇ ಇರುತ್ತವೆ. ಇಂಥ ಪ್ರಯೋಗಗಳಲ್ಲಿ ಕಾಣಿಸಿಕೊಳ್ಳುವವರು ಶಿವಶಂಕರನಾಯ್ಡು.

ರಕ್ತರಾತ್ರಿ ನಾಟಕದ 'ನವಲಿ ಪಕ್ಷ'ನಾಗಿ 300 ಪ್ರಯೋಗಗಳಲ್ಲಿ ಅಭಿನಯಿಸಿರುವ ಅವರು, ಕುರುಕ್ಷೇತ್ರ ನಾಟಕದಲ್ಲಿ ನೂರಾರು ಪ್ರಯೋಗಗಳಲ್ಲಿ ಕಾಣಿಸಿಕೊಂಡಿದ್ದಾರೆ. ಅಲ್ಲಿಯ ಶಿರಿಗೇರಿ ನಾಗನಗೌಡರು, ಬೆಳಗಲ್ಲು ವೀರಣ್ಣನವರಲ್ಲಿ ರಂಗ ತರಬೇತಿ ಪಡೆದ ನಾಯ್ಡು, ನಟರಷ್ಟೇ ಅಲ್ಲ, ನಿರ್ದೇಶಕ, ಸಂಘಟಕ ಕೂಡ.

---



## ಬಿ.ಎಂ. ಶಂಕರಯ್ಯ

ತಮ್ಮ 17ನೇ ವಯಸ್ಸಿನಲ್ಲಿ ಹಾಸನದ ಸುತ್ತಮುತ್ತ ನಾಟಕ, ನಿರ್ದೇಶನ, ಹರಿಕಥೆ ಹೀಗೆ ಹಳ್ಳಿ ಹಳ್ಳಿ ಸುತ್ತಿ ಕಲೆಯಿಂದ ನೆಲೆಯನ್ನು ಕಂಡುಕೊಂಡವರು ಬಿ.ಎಂ. ಶಂಕರಯ್ಯ. ಕುಲಕಸುಬು ಚಮ್ಮಾರಿಕೆಯಾದರೂ ಕಲಿತದ್ದು ಹಾರ್ಮೋನಿಯಂ ನುಡಿಸುವುದನ್ನು. ಆಮೇಲೆ ನಾಟಕದಲ್ಲಿ ಪಾತ್ರ. ಅದೇ ಮುಂದೆ ಹೊಟ್ಟೆಪಾಡಾಯಿತು. ಮುಂದೆ ಗುಬ್ಬಿ ವೀರಣ್ಣ ಕಂಪನಿಯಲ್ಲಿ ಪಿಯಾನೋ ನುಡಿಸುತ್ತಿದ್ದ ಸಿ.ವಿ. ವೀರಭದ್ರಾಚಾರ್, ಎಸ್.ಎಸ್. ಪುಟ್ಟಚಾರ್ ಬಳಿ ನಾಟಕದ ಪಟ್ಟು ಕಲಿತರು. ಹೆಚ್ಚಾಗಿ ಪೌರಾಣಿಕ ನಾಟಕಗಳನ್ನು ನಿರ್ದೇಶಿಸಿ, ಆಡಿಸಿರುವ ಶಂಕರಯ್ಯ, ಹಾಸನ ಜಿಲ್ಲೆ ಚನ್ನರಾಯ ಪಟ್ಟಣ ತಾಲ್ಲೂಕಿನ ಬಾಗೂರು ಗ್ರಾಮದವರು. ಓದಿದ್ದು 3ನೇ ತರಗತಿಯವರೆಗೆ ಮಾತ್ರ. ಆದರೆ ರಂಗಭೂಮಿಯ ನಿರಂತರತೆಗಾಗಿ ನಾಟಕ ಕಲಿಸುತ್ತ ಊರೂರು ಅಲೆದವರು.

---



## ಶಿವಯ್ಯ ಕೊಟ್ರಯ್ಯ ಗುರುವಿನ

ನಾಡಿನ ಹೆಸರಾಂತ ನಾಟಕ ಕಂಪನಿಗಳಲ್ಲಿ 35 ವರ್ಷಗಳವರೆಗೆ ಕಲಾವಿದರಾಗಿದ್ದರು ಶಿವಯ್ಯ. ಅವರ ತಂದೆ ಕೊಟ್ರಯ್ಯ ಸ್ವಾಮಿಗಳು ಹೂವಿನ ಹಡಗಲಿ ಭಾಗದ ಹೆಸರಾಂತ ಬಯಲಾಟ ಕಲಾವಿದರು. ಹೀಗಾಗಿ ಬಾಲ ಕಲಾವಿದರಾಗಿ ರಂಗ ಪ್ರವೇಶಿಸಿದ ಶಿವಯ್ಯ, ಎಸ್.ಎಸ್.ಎಲ್.ಸಿ.ವರೆಗೆ ಓದಿದರೂ ಬಣ್ಣದ ಬದುಕನ್ನು ಅಪ್ಪಿಕೊಂಡರು. ಸ್ವಾಮಿತಿಯ ಮಹೇಶ್ ನಾಟ್ಯ ಸಂಘದಲ್ಲಿ ಕಲಾವಿದರ ವಸ್ತ್ರಾಭರಣ ಹಾಗೂ ಬಣ್ಣದ ಮನೆಯ ಸಹಾಯಕರಾದ ಅವರು, ಯಲಿವಾಳ ಸಿದ್ಧಯ್ಯ ಸ್ವಾಮಿಗಳ ಮಾರ್ಗದರ್ಶನದಲ್ಲಿ ನುರಿತರು.

ರೇಣುಕಾ ಯಲ್ಲಮ್ಮ, ಕೊಂಡು ತಂದ ಗಂಡ, ಟಿಪ್ಪು ಸುಲ್ತಾನ್, ಚಿತ್ರಾಂಗದ, ಸಂಪತ್ತಿಗೆ ಸವಾಲ್ ಹೀಗೆ ಮೊದಲಾದ ನಾಟಕಗಳಲ್ಲಿ ಅಭಿನಯಿಸಿ ಹೆಸರುವಾಸಿಯಾದ ಅವರಿಗೆ ಸಿಕ್ಕ ಪ್ರಶಸ್ತಿ ಪುರಸ್ಕಾರಗಳು ಅನೇಕ.

---



## ಜಿ.ಕೆ. ಶ್ರೀನಿವಾಸಮೂರ್ತಿ

ಆರನೇ ವಯಸ್ಸಿನಲ್ಲಿ 'ಭಕ್ತಪ್ರಹ್ಲಾದ' ನಾಟಕದಲ್ಲಿಯ ಪುಟ್ಟ ಪಾತ್ರದೊಂದಿಗೆ ರಂಗಪ್ರವೇಶ ಮಾಡಿದ ಶ್ರೀನಿವಾಸಮೂರ್ತಿ, ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕಿನ ಜಡಲತಿಮ್ಮನ ಹಳ್ಳಿಯವರು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವಾಗಲೇ ನಾಟಕಗಳಲ್ಲಿ ಅಭಿನಯಿಸಿದ ಶ್ರೀನಿವಾಸಮೂರ್ತಿ, ವಿದ್ಯಾಭ್ಯಾಸ ಮೊಟಕುಗೊಳಿಸಿ ಚಿಕ್ಕಬಳ್ಳಾಪುರದಲ್ಲಿ 'ಕರ್ನಾಟಕ ಕಲಾ ಸಂಘ' ಸ್ಥಾಪಿಸಿ, ಕಾರ್ಯದರ್ಶಿಯಾದರು. ಆಗ ವಿದ್ಯಾರ್ಥಿಗಳಿಗೆ ನಾಟಕ ತರಬೇತಿ, ನಾಟಕ ಸ್ಪರ್ಧೆ ಏರ್ಪಡಿಸಿದರು.

ಆಮೇಲೆ ಯೋಗಾನರಸಿಂಹ ಅವರ 'ಸರ್ವೋದಯ ನಾಟಕ ಮಂಡಳಿ'ಯಲ್ಲಿ ಐದು ವರ್ಷಗಳವರೆಗೆ ಎಲ್ಲಾ ನಾಟಕಗಳ ಮುಖ್ಯ ಪಾತ್ರಗಳಲ್ಲಿ ಕಾಣಿಸಿಕೊಂಡರು. ನಂತರ ಬೆಂಗಳೂರಿನಲ್ಲಿ ಗುರುರಾಜುಲು ನಾಯ್ಡು ಅವರ ನಾಟಕ ಸಂಘದಲ್ಲಿ ರಾಮಾಯಣ, ಶ್ರೀ ಕೃಷ್ಣ ಗಾರುಡಿ, ರಕ್ತಾಕ್ಷಿ ನಾಟಕಗಳಲ್ಲಿ ಅಭಿನಯಿಸಿದರು. ಇದೊಂದು

1974ರಲ್ಲಿ ಪ್ರಸನ್ನ ನಿರ್ದೇಶನದ ಸಮುದಾಯದ ನಾಟಕಗಳಲ್ಲಿ ಅಭಿನಯಿಸಿದರು. ಜೊತೆಗೆ ಆರ್. ನಾಗೇಶ್ ನಿರ್ದೇಶನದ ನಾಟಕಗಳಲ್ಲೂ ಕಾಣಿಸಿಕೊಂಡರು. ಹೀಗೆ ಕಳೆದ 45 ವರ್ಷಗಳಿಂದಲೂ ರಂಗಭೂಮಿಯ ನಂಟು ಅವರದು. ಹೇಮಾವತಿ ಕನ್ನಡ ಚಿತ್ರದಿಂದ ಸಿನಿಮಾ ಪ್ರವೇಶಿಸಿದ ಅವರು, ಇದುವರೆಗೆ ಸುಮಾರು 200 ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಜೊತೆಗೆ ನಾರಿ ಸ್ವರ್ಗಕ್ಕೆ ದಾರಿ, ಶ್ರೀರಸ್ತು ಶುಭಮಸ್ತು ಚಿತ್ರಗಳ ಅಭಿನಯಕ್ಕೆ ಶ್ರೇಷ್ಠ ಪೋಷಕ ನಟ ಪ್ರಶಸ್ತಿಯನ್ನು ಪಡೆದಿದ್ದಾರೆ. ಇದರೊಂದಿಗೆ ಚಿತ್ರಗಳ ನಿರ್ಮಾಣಕ್ಕೂ ಇಳಿದ ಅವರು, 'ದೇವರ ಮಕ್ಕಳು' ಚಿತ್ರವನ್ನು ನಿರ್ದೇಶಿಸಿದ್ದಾರೆ.



## ಪಿ.ವಿ. ಸುಬ್ರಹ್ಮಣ್ಯ

ರಂಗಭೂಮಿಯ ಆಸಕ್ತರಾದ ಪರಿಣಾಮ 10ನೇ ತರಗತಿಯನ್ನೂ ದಾಟದ ಸುಬ್ರಹ್ಮಣ್ಯ, ಹೊಟ್ಟೆ ಪಾಡಿಗೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಲ್ಲಿ ಗುಮಾಸ್ತರಾದರು. ಆದರೆ ಬಣ್ಣದ ಬದುಕಿನಲ್ಲಿ ಮಾಸ್ತರರಾದರು.

ಅವರ ತಂದೆ ಪರಶುರಾಮಪುರ ವಿಶ್ವನಾಥ ಪೌರಾಣಿಕ, ಐತಿಹಾಸಿಕ ನಾಟಕಗಳಲ್ಲಿ ಅಭಿನಯಿಸುತ್ತಿದ್ದರು. ಅವರಿಂದ ಪ್ರಭಾವಿತರಾದ ಸುಬ್ರಹ್ಮಣ್ಯ ಅವರು, ಮಧುಗಿರಿಯ ಸಂಘ–ಸಂಸ್ಥೆಗಳು ನಡೆಸುತ್ತಿದ್ದ ಮನರಂಜನೆ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು.

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಪರಶುರಾಮಪುರ ಗ್ರಾಮದಲ್ಲಿ ಹುಟ್ಟಿದ್ದರೂ ಮಧುಗಿರಿಯಲ್ಲಿ ನೆಲೆನಿಂತು 'ಕನ್ನಡ ಯುವಕ ಸಂಘ' ಕಟ್ಟಿ ಅನೇಕ ನಾಟಕಗಳನ್ನು ಪ್ರದರ್ಶಿಸಿದರು. ಮತ್ತೆ 1981ರಲ್ಲಿ 'ಕಲಾರಂಗ' ಎಂಬ ಸಂಸ್ಥೆಯಲ್ಲಿ ಕಟ್ಟಿ ಈಗ ಅದರ ಉಪಾಧ್ಯಕ್ಷ ಸುಬ್ರಹ್ಮಣ್ಯ ಅವರು. ರಕ್ತರಾತ್ರಿ, ಕುರುಕ್ಷೇತ್ರ, ಶ್ರೀಕೃಷ್ಣ ಗಾರುಡಿ ಹೀಗೆ ಐತಿಹಾಸಿಕ, ಪೌರಾಣಿಕ, ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸಿದ ಅವರು, ಎಚ್ಚಮ ನಾಯಕ, ಮೋಚಿ, ರಂಗಣ್ಣನ ರಾದ್ಧಾಂತ ಮೊದಲಾದ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಕುಣಿಗಲ್, ತುಮಕೂರು ಮೊದಲಾದ ಕಡೆ ಸನ್ಮಾನಿತರಾದ ಸುಬ್ರಹ್ಮಣ್ಯ, ಮಧುಗಿರಿ ತಾಲ್ಲೂಕು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು.



## ಸುಮತಿಶ್ರೀ ನವಲಿ

ತಮ್ಮ ಏಳನೇ ವಯಸ್ಸಿನಲ್ಲಿಯೇ 'ಹರಿಶ್ಚಂದ್ರ' ನಾಟಕದಲ್ಲಿ ಲೋಹಿತಾಶ್ವ ಪಾತ್ರದಲ್ಲಿ ಕಾಣಿಸಿ ಕೊಳ್ಳುವ ಮೂಲಕ ಬಣ್ಣದ ಬದುಕಿಗೆ ಕಾಲಿಟ್ಟವರು ಸುಮತಿಶ್ರೀ. ಉತ್ತರ ಕನ್ನಡದ ಯಲ್ಲಾಪುರದವರಾದ ಅವರು, ಧುತ್ತರಗಿ, ಎಚ್.ಎನ್. ಹೂಗಾರ, ಸಾಳುಂಕೆ ಅವರ ಗರಡಿಯಲ್ಲಿ ಪಳಗಿದವರು. ಚಿತ್ತರಗಿಯ ಕುಮಾರೇಶ್ವರ ನಾಟಕ ಸಂಘದಲ್ಲಿ ಅಲ್ಲದೆ, ಅರಿಶಿಣಗೋಡಿ, ಬಸವರಾಜ ಗುಡಗೇರಿ ಅವರ ಕಂಪನಿಗಳಲ್ಲಿ ನಟಿಯಾಗಿ ಮೆರೆದವರು.

1982ರಲ್ಲಿ ಶ್ರೀಶಕ್ತಿ ಕಲಾ ನಾಟ್ಯ ಸಂಘ ಚಿತ್ರದುರ್ಗ ಎಂಬ ನಾಟಕ ಕಂಪನಿಯನ್ನು ಆರಂಭಿಸಿದ ಅವರು, ಶ್ರೀದೇವಿ ಮಹಾತ್ಮೆ, ಶ್ರೀ ಇಟಗಿ ಭೀಮಾಂಬಿಕೆ ಮಹಾತ್ಮೆ, ರೇಣುಕಾ ಮಹಾತ್ಮೆ ನಾಟಕಗಳಲ್ಲಿ ಪ್ರಮುಖ ಪಾತ್ರಧಾರಿ ಅವರು. ಸುಮಾರು 30ಕ್ಕೂ ಹೆಚ್ಚಿನ ಸಿನಿಮಾಗಳಲ್ಲಿ ಅಭಿನಯಿಸಿರುವ ಅವರಿಗೆ ಅನೇಕ ವೇದಿಕೆಗಳಲ್ಲಿ ಸನ್ಮಾನಿಸಲಾಗಿದೆ. ಪ್ರಶಸ್ತಿಗಳು ಲಭಿಸಿವೆ.

## 2004ರ ಪ್ರಶಸ್ತಿ ವಿಜೇತರು



### ಡಾ॥ ನ. ರತ್ನ (ಗೌರವ ಪ್ರಶಸ್ತಿ)

ಹುಟ್ಟೂರು ತಮಿಳುನಾಡಿನ ಚಿದಂಬರಂ. ಎಪ್ಪತ್ತೆರಡು ವಸಂತಗಳ ಡಾ॥ ನ. ರತ್ನ ಅದಮ್ಯ ಜೀವನೋತ್ಸಾಹಿ. ಶಿಕ್ಷಣ ಮತ್ತು ಇಂಗ್ಲಿಷ್ ಸಾಹಿತ್ಯದಲ್ಲಿ ಪದವಿ ಪಡೆದ ನ. ರತ್ನ ಮೈಸೂರಿನ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯ ನಿರ್ದೇಶಕರಾಗಿ, ಮುಂಬೈನ ರಾಷ್ಟ್ರೀಯ ಶ್ರವಣ ವಿಕಲಾಂಗರ ಸಂಸ್ಥೆಯ ನಿರ್ದೇಶಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಇಂತಹ ಸಂಸ್ಥೆಗಳಲ್ಲಿಯೂ ರಂಗಭೂಮಿಯ ಸಂವೇದನೆಗಳನ್ನು ಅವರು ತೀವ್ರವಾಗಿ ದುಡಿಸಿಕೊಂಡವರೆಂಬುದು ಮುಖ್ಯ.

ಮೈಸೂರಿನ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯ ವಿದ್ಯಾರ್ಥಿಗಳಿಗಾಗಿ ಸ್ವಪ್ನ ವಾಸವದತ್ತಾ, ಸೋಲಿಗರ ಸಿದ್ಧ, ಆಷಾಢದ ಒಂದು ದಿನ, ಭಗವದಜ್ಜುಕೀಯಂ ನಾಟಕಗಳನ್ನು ನಿರ್ದೇಶಿಸಿದರು.

1950ರ ಸುಮಾರಿಗೆ ಚಿತ್ರಮೇಳದಲ್ಲಿ ಮುದ್ಕಣಿ ಪಾತ್ರ ಮಾಡಿದರು. ಕಾಶ್ಮೀರ ಯಾತ್ರೆ, ರಕ್ತಾಕ್ಷಿ, ವಿಗಡ ವಿಕ್ರಮರಾಯ, ಮಹಾರಾತ್ರಿ ನಾಟಕ ನಿರ್ಮಾಣಗಳಲ್ಲಿ ಸಕ್ರಿಯ ಪಾತ್ರ ವಹಿಸಿದರು. ದೆಹಲಿಯ ಕನ್ನಡ ಭಾರತಿ ತಂಡದ ಮ್ಯಾಕ್‌ಬೆತ್, ಮೈಸೂರಿನ ಸಮತೆಂತೋ, ಕಲಾಸುರಚಿ, ಅಮರ ಕಲಾ ತಂಡದಲ್ಲಿ ಘಾಶೀರಾಮ ಕೊತ್ವಾಲ, ತಲೆದಂಡ, ಹುಚ್ಚುಕುದುರೆ ಮತ್ತಿತರ ನಾಟಕಗಳಲ್ಲಿ ಪಾತ್ರ ವಹಿಸಿದರು. ತುಘಲಕ್, ಕದಡಿದ ನೀರು, ಎಲ್ಲಿಗೆ, ಬೊಂತೆ ಇವು ಇವರು ನಿರ್ದೇಶಿಸಿದ ನಾಟಕಗಳು. ಎಲ್ಲಿಗೆ, ಗೋಡೆ ಬೇಕೆ ಗೋಡೆ, ಹೆದ್ದಾರಿಯಲ್ಲಿ, ಒಬ್ಬ ಮನುಷ್ಯನಿಗೆ ಎಷ್ಟು ಜಾಗ ಬೇಕು, ಛಿನ್ನ ಬೆನಕ, ಕಿರೀಟ ಮುಂತಾದವು ಇವರು ರಚಿಸಿದ ನಾಟಕಗಳು. ಇವರು ಋಷ್ಯಶೃಂಗ, ಕಾಡು, ಆಕ್ರಮಣ ಮುಂತಾದ ಸಿನಿಮಾಗಳಲ್ಲಿ ಕಾಣಿಸಿಕೊಂಡಿದ್ದಾರೆ. ರಂಗ ಸಮಾಜ ಮತ್ತು ನಾಟಕ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದ ಇವರಿಗೀಗ ಕರ್ನಾಟಕ ನಾಟಕ ಅಕಾಡೆಮಿಯ ಗೌರವ ಪ್ರಶಸ್ತಿಯ ಪುರಸ್ಕಾರ.



### ಎಸ್. ಮಾಲತಿ

ಎಪ್ಪತ್ತರ ದಶಕದಲ್ಲಿ ಕರ್ನಾಟಕದ ರಂಗಭೂಮಿಯಲ್ಲಿ ಎಡಪಂಥೀಯ ಸಾಂಸ್ಕೃತಿಕ ಸಂಘಟನೆಗಳು ಮುಂಚೂಣಿಗೆ ಬಂದವು. ಅವುಗಳಲ್ಲಿ ಮುಖ್ಯವಾದದ್ದು ಸಮುದಾಯ. ಈ ರೀತಿಯ ಸಾಮಾಜಿಕ ಕಳಕಳಿಯ ರಂಗಬದ್ಧತೆಯಿಂದ ಕಾರ್ಯನಿರತರಾದವರು ಎಸ್. ಮಾಲತಿ.

ಮಾಲತಿ ಗಂಭೀರ ಚಿಂತಕಿ. ಇವರದು ಬೌದ್ಧಿಕ ಸಾಹಚರ್ಯ ಜೊತೆಗೆ ಸಾಂಸ್ಕೃತಿಕ ಕ್ರಾಂತಿಯ ಕನಸು. ಇವರಿಗೆ ರಂಗಭೂಮಿ ಮತ್ತು ಬರವಣಿಗೆ ಸಮಾನ ಆಸಕ್ತಿಯಲ್ಲಿ ವಿಚಾರಗಳು. ರಂಗಭೂಮಿಯ ವಿಮರ್ಶೆಯ ಕ್ಷೇತ್ರದಲ್ಲಿ ಸಹಾ ದುಡಿದವರು.

ತಾಯಿ, ಜೋಕುಮಾರಸ್ವಾಮಿ, ಮೀಡಿಯಾ, ಸ್ವಪ್ನವಾಸವದತ್ತ, ಆಷಾಢದ ಒಂದು ದಿನ, ಮ್ಯಾಕ್‌ಬೆತ್, ಹುತ್ತವ ಬಡಿದರೆ, ಹುಲಿಯ ನೆರಳು, ಗೆಲಿಲಿಯೋ ಹೀಗೆ ಅವರು ಅಭಿನಯಿಸಿದ ನಾಟಕಗಳು ಹಲವು. ಕೆರೆಗೆ ಹಾರ, ಹೆಣ್ಣು, ಕಾಡುಕುದುರೆ, ಹ್ಯಾಮ್ಲೆಟ್, ಬುದ್ಧ ಹೇಳಿದ ಕಥೆ, ಈಶ್ವರ ಅಲ್ಲಾಹ್, ಮರದ ತಾಯಿ, ಶೂದ್ರ ತಪಸ್ವಿ, ರೂಪಾಂತರ, ದನ್, ಸಿರಿಸಂಪಿಗೆ ಹೀಗೆ ಅನೇಕ ನಾಟಕಗಳನ್ನು ನಿರ್ದೇಶಿಸಿದರು. ಸಿನಿಮಾ, ದೂರದರ್ಶನ ಮಾಧ್ಯಮಗಳಲ್ಲೂ

ದುಡಿದವರು. ಪ್ರಿಯತಮನ ಬಾಳು, ಜೀವನವೆಂಬ ನಾಟಕರಂಗ, ಕ್ಷಣಿಕವಲ್ಲದ ಕ್ಷಣಗಳು, ಭಾವಕೋಶ, ಮರದ ತಾಯಿ, ಹೇಳಬೇಕೆನಿಸಿದ್ದು.... ಹೀಗೆ ಅನೇಕ ಕವಿತಾ ಸಂಕಲನಗಳು ಹಾಗೂ ರಂಗಭೂಮಿಗೆ ಸಂಬಂಧಿಸಿದ ಕೃತಿಗಳು ಇವರ ಸೃಜನಶೀಲತೆಗೆ ಹಿಡಿದ ಕನ್ನಡಿಯಾಗಿವೆ. ಪುಸ್ತಕ ವಿಮರ್ಶಕಿಯಾಗಿಯೂ ಇವರು ಹೆಸರು ಮಾಡಿದ್ದಾರೆ. ವಿಮುಕ್ತ ಮಾನವ ಸಮಾಜ ಚಿಂತನೆಯ ಮಾಲತಿ ಅತ್ಯುತ್ತಮ ಬೋಧಕಿ. ಎನ್.ಎಸ್.ಡಿ.ಯ ಪದವಿ, ಬಿಕಾಂ. ಮತ್ತು ಸ್ನಾತಕೋತ್ತರ ಪದವಿ ಪಡೆದುಕೊಂಡಿರುವ ಅವರೀಗ ಸಾಗರದಲ್ಲಿ ಗಂಭೀರ ರಂಗಚಟುವಟಿಕೆಗಳ ಕೇಂದ್ರಬಿಂದು.



## ಬಿ. ರೇಣುಕಾ ಪ್ರಸಾದ್

ಊರು ಮೈಸೂರು. ವಯಸ್ಸು ನಲವತ್ತಾರು. ಉದ್ಯೋಗ ವ್ಯಾಪಾರ. ಓದಿದ್ದು ಡಿ.ಪ್ಲೋಮ. ಸ್ನೇಹಿತ ಪಶುಪತಿ ದೆಸೆಯಿಂದಾಗಿ ಈಗ್ಗೆ ಇಪ್ಪತ್ತೂರು ವರ್ಷಗಳಿಂದ ರಂಗಭೂಮಿಯ ನಂಟು. ಈ ನಂಟೇ ಅಂತಹದ್ದು, ಒಮ್ಮೆ ಅಂಟಿಕೊಂಡರೆ ನಾವು ಬಿಟ್ಟರೂ ಅದು ಬಿಡುವುದಿಲ್ಲ.

1983ರಲ್ಲಿ ಹೊರೆಯಾಲ ದೊರೆಸ್ವಾಮಿಯವರ ದಾರಿ ಬದಲಿಸಿದಾಗ ನಾಟಕದೊಂದಿಗೆ ರೇಣುಕಾ ಪ್ರಸಾದರ ರಂಗಪ್ರವೇಶ. ಅಲ್ಲಿಂದ ಇಲ್ಲಿಯ ತನಕ ಇವರು ಸುಮಾರು ನಲವತ್ತಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಜೈಸಿದ್ಧ ನಾಯ್ಕ, ಅಶ್ವತ್ಥಾಮನ್, ಗೋಕರ್ಣದ ಗೌಡಶಾನಿ, ಹರಕೆಯ ಕುರಿ, ಗೌತಮ ಬುದ್ಧ, ನಾಗಮಂಡಲ, ಕೇಳು ಜನಮೇಜಯ, ಸುಯೋಧನ, ದುರ್ಗಾಸ್ತಮಾನ, ಚಂದ್ರಹಾಸ, ಬಿರುಗಾಳಿ, ಸೂರ್ಯಶಿಕಾರಿ, ಹಯವದನ ಇವು ಇವರು ಅಭಿನಯಿಸಿದ ನಾಟಕಗಳ ಪೈಕಿ ಕೆಲವಾಗಿವೆ.

ಬಿ.ವಿ. ಕಾರಂತ, ಯೋಗಾನರಸಿಂಹ, ಎಚ್.ಎಸ್. ಉಮೇಶ್, ಗಂಗಾಧರಸ್ವಾಮಿ, ಬಿ. ಜಯಶ್ರೀ ಇವರುಗಳ ನಿರ್ದೇಶನದಲ್ಲಿ ಪ್ರಸಾದ್ ಅಭಿನಯಿಸಿ ಹೆಸರುಗಳಿಸಿಕೊಂಡಿದ್ದಾರೆ. ಇವರ ಅಭಿನಯದ ನಾಗಮಂಡಲ ನಾಟಕವು ದೆಹಲಿಯ ರಂಗವಸಂತ ನಾಟಕೋತ್ಸವದಲ್ಲಿ ಮೊದಲ ಬಹುಮಾನ ಗಳಿಸಿದೆ.



## ಎಂ.ಕೆ. ಸುಂದರರಾಜ್

ಸುಂದರರಾಜ್ ಹೆಚ್ಚು ಖ್ಯಾತಿಯನ್ನು ಗಳಿಸಿದ್ದು ಸಿನಿಮಾಗಳ ಮೂಲಕವಾದರೂ ಇವರ ನಟನೆಯ ಬೇರುಗಳಿರುವುದು ರಂಗಭೂಮಿಯಲ್ಲೇ. ಬಿ.ವಿ. ಕಾರಂತರ ರಂಗಗರಡಿಯಲ್ಲಿ ಸಾಮು ತೆಗೆದವರು. ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಓದುವಾಗಲೇ ಡಾ॥ ಎಚ್.ಎನ್. ಅವರಿಂದ ರಂಗಭೂಮಿಯ ಕೆಸಲಕ್ಕೆ ಆಶೀರ್ವಾದ. ಆಗಲೇ ಪಾತ್ರವೊಂದಕ್ಕೆ ಬಿ.ವಿ. ಕಾರಂತರಿಂದ ಆಯ್ಕೆ. ಮುಂದೆ ಸುಂದರರಾಜ್ ಕಂಬಾರ, ಕಾರ್ನಾಡ, ನಾಗಾಭರಣ, ಸಿ.ಆರ್. ಸಿಂಹ, ಲಂಕೇಶ್, ಬಿ. ಜಯಶ್ರೀ, ಪ್ರೇಮಾ ಕಾರಂತ ಮುಂತಾದ ನಿರ್ದೇಶಕರ ನಾಟಕಗಳಲ್ಲಿ ಅಭಿನಯಿಸಿ ಮೆಚ್ಚುಗೆ ಗಳಿಸಿದರು. ಜರ್ಮನಿಯ ನಿರ್ದೇಶಕ ಫ್ರಿಟ್ಜ್ ಬೆನೆವಿಟ್ಜ್ ಅವರ ನಾಟಕ ಶ್ರೀಮಾನ್ ಪುಟ್ಟಪ್ಪನೂ ಆಳು ಸೋಮನೂ ಎಂಬ ನಾಟಕದಲ್ಲಿ ಅತ್ಯುತ್ತಮವಾಗಿ ಅಭಿನಯಿಸಿದರು. ಹಯವದನ, ಸಂಗ್ಯಾಬಾಳ್ಯಾ, ಜಸ್ಮಾ ಒಡೆನ್, ಹುತ್ತವ ಬಡಿದರೆ, ಸತ್ತವರ ನೆರಳು, ತದ್ರೂಪಿ, ಜೋಕುಮಾರಸ್ವಾಮಿ, ಹಕ್ಕಿ ಹಾರುತಿದೆ ನೋಡಿದಿರಾ ಮುಂತಾದ ಆಧುನಿಕ ನಾಟಕಗಳಲ್ಲಿ ಮಾತ್ರವಲ್ಲದೆ ಚಿನ್ನದ

ಗೊಂಬೆ, ಮುದುಕನ ಮದುವೆ, ನನ್ನ ಅತ್ತಿಗೆ, ಹಸಿರು ಬಳೆ, ಬಂಗಾರದ ಹೆಣ್ಣು ಮುಂತಾದ ಕಂಪನಿ ನಾಟಕಗಳಲ್ಲೂ ಅಭಿನಯಿಸಿ ಹೆಸರು ಗಳಿಸಿದ್ದಾರೆ.

ಬರಗೂರು ರಾಮಚಂದ್ರಪ್ಪ, ಟಿ.ಎಸ್. ನಾಗಾಭರಣ, ದೊರೆ–ಭಗವಾನ್, ಎಂ.ಎಸ್. ಸತ್ಯು, ಕೆ. ಬಾಲಚಂದರ್ ಮುಂತಾದ ನಿರ್ದೇಶಕರ ಸಿನಿಮಾಗಳಲ್ಲೂ ನಟಿಸಿದ್ದಾರೆ. ಎರಡು ನೂರಕ್ಕೂ ಹೆಚ್ಚು ಸಿನಿಮಾಗಳಲ್ಲಿ ನಟಿಸಿದ ದಾಖಲೆ ಇವರದು. ದೂರದರ್ಶನದ ಅನೇಕ ಧಾರಾವಾಹಿಗಳಲ್ಲೂ ಇವರು ನಟಿಸಿದ್ದಾರೆ. ಬೆನಕ ರಂಗಸಂಸ್ಥೆಯ ಸ್ಥಾಪಕ ಕಾರ್ಯದರ್ಶಿಯಾಗಿ, ಕನ್ನಡ ಚಲನಚಿತ್ರ ಕಲಾವಿದರ ಸಂಘದ ಕಾರ್ಯದರ್ಶಿಯಾಗಿ ದುಡಿಯುತ್ತಿದ್ದಾರೆ.

---



## ಡಾ॥ ಸರಸ್ವತಿ ಚಿಮ್ಮಲಗಿ

ಮೇಲೆತ್ತರದ ಹೆಣ್ಣುಮಗಳು. ಕಲಬುರ್ಗಿಯ ಕಡುಬಿಸಿಲು, ಬಿಜಾಪುರದ ದುಷ್ಕಾಳ ಈ ಎರಡನ್ನೂ ಉಂಡು ಬೆಳೆದ ಪ್ರತಿಭೆ. ಸಾಹಿತ್ಯ, ಸಂಘಟನೆ, ರಂಗಭೂಮಿ, ಬೋಧನೆ, ಕ್ರೀಡೆ ಹೀಗೆ ಅವರದು ಬಹುಮುಖಿ ವ್ಯಕ್ತಿತ್ವ. ಕನ್ನಡಶಾಲಿ ಶಿಕ್ಷಕಿಯಿಂದ ಹಿಡಿದು ಕಾಲೇಜು ಪ್ರಾಧ್ಯಾಪಕಿ ಹುದ್ದೆವರೆಗೆ ಬೆಳೆದುಬಂದ ಶ್ರಮದ ದಾರಿ ದೊಡ್ಡದು. ನಮ್ಮ ಉತ್ತರ ಕರ್ನಾಟಕದ ಅಪ್ಪಟ ಹಳ್ಳಿಯ ಗೌಡತಿಯಂತಿರುವ ಸರಸ್ವತಿ ಚಿಮ್ಮಲಗಿ ಮಹತ್ವಾಕಾಂಕ್ಷೆಯ ಮಹಿಳೆ. ಮೂಲಭೂತವಾಗಿ ಅವರೊಬ್ಬ ಲೇಖಕಿ. ಇವರು ಕಾವ್ಯ, ಸಂಶೋಧನೆ, ಸಂಪಾದಿಕ ಕೃತಿಗಳೊಂದಿಗೆ ಒಂಬತ್ತು ನಾಟಕಗಳನ್ನೂ ರಚಿಸಿದ್ದಾರೆ.

ಬಹಳಷ್ಟು ನಾಟಕಗಳು ದೂರದರ್ಶನ ಮತ್ತು ರೇಡಿಯೋಗಳ ಮೂಲಕ ಪ್ರಸಾರವಾಗಿವೆ. ಶಾಂತಲಾ, ಬ್ರೀಫ್‌ಕೇಸ್, ನೀವು ಮಾಡೋದು ಹೀಂಗ ನಾಟಕಗಳು ರಂಗಪ್ರಯೋಗವಾಗಿವೆ. ರಂಗನಟಿಯಾಗಿ ಪರಿಚಿತರಾಗಿರುವ ಅವರು ಅಮ್ಮಾವ್ರ ಗಂಡ, ಜೋಮ, ಹುಲಿಯ ನೆರಳು, ಜೋಕುಮಾರ ಸ್ವಾಮಿ, ಶಾಂತಲಾ, ಕತ್ತಲೆ ಬೆಳಕು, ಜೋಗಿಬಾವಿ ಮುಂತಾದ ಇಪ್ಪತ್ತಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದಾರೆ.

ಕಳೆದ ಮೂವತ್ತು ವರ್ಷಗಳಿಂದ ನೂರಕ್ಕೂ ಹೆಚ್ಚು ರೇಡಿಯೋ ನಾಟಕಗಳಲ್ಲಿ ಭಾಗವಹಿಸಿದ ಅನುಭವ. ಜೋಗೀಶಿ, ಹೊಸಹಾದಿ, ಅಕ್ಕಮ್ಮನ ಶಾಲೆ, ಜೀವನ ಜೋಕಾಲಿ, ಲಕ್ಷ್ಮವ್ವನ ಮಂದಿ ಮುಂತಾದ ಟೆಲಿಚಿತ್ರಗಳಲ್ಲಿ, ಹಳ್ಳಿ ಹಳ್ಳಿಯ ಕಥೆ, ನೋಸಿಲಾ, ಮಹಾದಾಸೋಹಿ ಶರಣ ಬಸವ ಚಲನಚಿತ್ರಗಳಲ್ಲಿ ಅಭಿನಯಿಸಿದ್ದುಂಟು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯೆಯಾಗಿ, ಅಖಿಲ ಭಾರತ ಕವಯಿತ್ರಿಯರ ಸಂಘದ ಉಪಾಧ್ಯಕ್ಷೆಯಾಗಿ ಕ್ರಿಯಾಶೀಲತೆ ಮೆರೆದಿದ್ದಾರೆ.

---



## ದೇವ್ ನಾಗೇಶ್

ಬೆಂಗಳೂರೆಂಬುದು ಮಯಾಭುಗಿಲಿನ 'ಗು'ಲಾಬಿ ನಗರ. ಇದರ ಧಾವಂತಗಳೆಂದರೆ ಅಕ್ಷರ ಮಾತು. ಆಲೋಚನೆಗಳಿಗೆ ಮೀರಿದ ಡಿಜಿಟಲ್ ಚಿಂತನೆಗಳು. ಅಂತಹ ಅವಸರದ ಈ ಊರು ಹತ್ತಾರು ಸೋಜಿಗಗಳನ್ನು ಗರ್ಭೀಕರಿಸಿಕೊಂಡಿದೆ. ಅಂತಹ ಸೋಜಿಗವೇ ಈ ಊರ ರಂಗಭೂಮಿ. ಈಗ್ಗೆ ಐದು ವರ್ಷಗಳ ಹಿಂದೆ ಇಂತಹ ಸೋಜಿಗಕ್ಕೊಂದು ಶಿರಪೇಷು ದಕ್ಕಿಸಿಕೊಟ್ಟವರು ದೇವ ನಾಗೇಶ್ ಮತ್ತು ಅವರ ಪತ್ನಿ ರತ್ನಾ. ನಿರಂತರ ನೂರು ತಾಸುಗಳ ನಾಟಕ ಅಭಿನಯಿಸುವುದರ ಮೂಲಕ ಅವರು ವಿಶ್ವದಾಖಲೆ ಸ್ಥಾಪಿಸಿದರು. ಅವರೇ ಬಿತ್ತಿ ಬೆಳೆದ 'ನಂದನ' ರಂಗ ತಂಡದ ವಿಸ್ಮಯವದು.

ಹೆಚ್ಚು ಮಾತನಾಡದ ಕ್ರಿಯಾಶೀಲ ರಂಗಸಂಘಟಕ ಇವರು. ಕಳೆದ ಬಾರಿ ಅಕಾಡೆಮಿಯ ಸದಸ್ಯರಾಗಿದ್ದವರು. ಆತನ ಬಾಳಸಂಗಾತಿ ರತ್ನಾ ಕುರಿತು ಹೇಳದಿದ್ದರೆ ನಾಗೇಶ್ ಬಗ್ಗೆ ಏನನ್ನೂ ಹೇಳಿದಂತಾಗುವುದಿಲ್ಲ. ದೇವ್ ಸಂಕಲ್ಪದ ಎಲ್ಲ ರಂಗಕ್ರಿಯೆಗಳಲ್ಲಿ ಸಮಪಾಲು ರಂಗಸಂಗಾತಿ ರತ್ನಾಗೆ ಸಲ್ಲುತ್ತದೆ. ನೂರು ತಾಸುಗಳಲ್ಲಿ ನಲವತ್ತು ನಾಟಕಗಳನ್ನು ಅಭಿನಯಿಸಿದ ದಾಖಲೆ ಈ ರಂಗಜೋಡಿಯ ನಂದನ ತಂಡದ್ದು.

ಬರಗೂರ ರಾಮಚಂದ್ರಪ್ಪನವರ ಬಹುತೇಕ ಕಲಾತ್ಮಕ ಚಿತ್ರಗಳಲ್ಲಿ ನಾಗೇಶ್ ಸಹನಿರ್ದೇಶಕರಾಗಿ ದುಡಿದಿದ್ದಾರೆ. ರತ್ನಾ ನಾಗೇಶ್ ರಂಗದಾಂಪತ್ಯದ ಉಲ್ಲೇಖಾರ್ಹ ಉಡುಗೊರೆ ಎಂದರೆ ಪಠ್ಯನಾಟಕಗಳ ರಂಗರೂಪ. ತನ್ಮೂಲಕ ಸಹಸ್ರಾರು ವಿದ್ಯಾರ್ಥಿಗಳಿಗೆ ಶೈಕ್ಷಣಿಕವಾಗಿ ಸದುಪಯೋಗವಾಗಿದೆ.

ಹಳ್ಳಿಗಾಡಿನಿಂದ ಶಹರಕ್ಕೆ ಬರುವವರೆಲ್ಲ ಸರ್ಕಾರಿ ನೌಕರಿ ಹುಡುಕಿಕೊಂಡು ಬರುತ್ತಾರೆ. ಚೆನ್ನರಾಯಪಟ್ಟಣದ ದೇವಿಗೆರೆ ಇವರ ಜನ್ಮಸ್ಥಳ. ಜವರೇಗೌಡ, ಜಯಲಕ್ಷ್ಮಮ್ಮ ಅವರ ಮಗ ದೇವ್ ನಾಗೇಶ್ ಬೆಂಗಳೂರಿನಲ್ಲಿ ರಂಗಭೂಮಿಯನ್ನೇ ನಂಬಿಕೊಂಡು ಎತ್ತರಕ್ಕೆ ಬೆಳೆಯುತ್ತಿದ್ದಾರೆ.

---



## ಶಿವರಾಮು

ಸಕ್ಕರೆನಾಡು ಮಂಡ್ಯಾದಲ್ಲಿ ಶಿವರಾಮು ಹಿರಿಯ ಗ್ರಂಥಪಾಲಕ. ಹುಟ್ಟೂರು ಅಲ್ಲೇ ಹತ್ತಿರದ ತುಂಬಕೆರೆ. ಸಾಸಿವೆಯಷ್ಟೂ ಗಿಲೀಟುತನವಿಲ್ಲದ ಸಜ್ಜನ ರಾಜಕಾರಣಿ ಕೆ.ವಿ. ಶಂಕರೇಗೌಡರ ಸುಸಂಪರ್ಕದಲ್ಲಿ ಅಡಿ ಬೆಳೆದವರು ಶಿವರಾಮು. ಅಲ್ಲಿನ ಗೆಳೆಯರ ಬಳಗ ಸಾಂಸ್ಕೃತಿಕ ಸಂಘಟನೆ ರಂಗಪ್ರೇಮಿಗಳ ವಿನೂತನ ಅನುಭವಗಳ ಕೇಂದ್ರ. ಅಲ್ಲಿ ದಶಕಕ್ಕೂ ಮೀರಿ ಉನ್ನತ ಸ್ಥಾನ. ತನ್ಮೂಲಕ ಸಾಂಸ್ಕೃತಿಕ ಲೋಕದ ಸಾರ ವಿಸ್ತಾರದ ಪರಿಚಯ. ಹೀಗೆ ಬೆಳೆದದ್ದು ಶಿವರಾಮು.

ಸಿಜಿಕೆ ರಂಗಗರಡಿಯಲ್ಲಿ ತಬರನ ಕಥೆಯ ತಬರ, ಬಸವಲಿಂಗಯ್ಯನವರ ಅಂಧಯುಗದ ಅಶ್ವತ್ಥಾಮ, ಬಾದರದಿನ್ನಿ ನಿರ್ದೇಶನದ ಸಂಕ್ರಾಂತಿಯ ರುದ್ರ, ಕಾರಂತರ ಕಡೆಯ ನಾಟಕ ಸೇವಂತಿಯಲ್ಲಿ ಭಾರ್ಗವ ಶಾಸ್ತ್ರಿಯಾಗಿ ಯಶಸ್ವಿ ನಟರೆಂಬ ಕಿರೀಟ. ಬಹಳ ಹಿಂದೆ ಶಂಕರೇಗೌಡರೇ ನಿರ್ದೇಶಿಸಿದ್ದ ರಕ್ತಾಕ್ಷಿ, ಪಾದುಕಾ ಕಿರೀಟ ದನಿ ಮೊದಲಾದ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ವಹಿಸಿದ್ದರು. ಸಾಂಸ್ಕೃತಿಕ ಸಂಘಟನೆಯಲ್ಲಿ ಅಪಾರ ನಂಬಿಕೆಯುಳ್ಳ ಶಿವರಾಮುಗೆ ಹತ್ತಾರು ಸಂಘಟನೆಗಳಲ್ಲಿ ಮಹತ್ತರ ಹೊಣೆ. ಒಂದು ಅವಧಿಗೆ ಅಕಾಡೆಮಿಯ ಸದಸ್ಯನಾಗಿ ಕೆಲಸ ನಿರ್ವಹಿಸಿರುವ ಅವರು ಹೆಸರಾಂತ ಸಾಹಿತಿಗಳ ಆಪ್ತಮಿತ್ರ.

---



## ಬಾ.ಮ. ಬಸವರಾಜಯ್ಯ

ಬಾಮ – ಎರಡಕ್ಷರಗಳ ಚೆಂದನೆಯ ಹೆಸರು ಸುಂದರ ಹೆಣ್ಣೊಂದನ್ನು ಧ್ಯಾಸಕ್ಕೆ ತರುತ್ತದೆ. ಆದರೆ ದಾವಣಗೆರೆಯ ಸಂದರ್ಭದಲ್ಲಿ ಎರಡಕ್ಷರದ ಈ ಹೆಸರು ಎರಡು ಮಾತಿಲ್ಲದೆ ಬಾ.ಮ. ಬಸವರಾಜಯ್ಯ. ವಿರೇವಂದ್ರ ಅದು ಬಸಾಪುರ ಮಠದ ಬಸವರಾಜಯ್ಯ ಅಂತ. ಬಾ.ಮ. ಸರಿಕಾಣದೇ ಸಹೃದಯರೆಲ್ಲರೂ ಬಾಮ ಎಂದು ಕರೆದೇ ಜನಪ್ರಿಯವಾಯ್ತು.

ಬಾಮಗೆ ಬಾಲ್ಯದಲ್ಲಿ ಉಂಡುಡಲು ಇದ್ದದ್ದು ಯಥೇಚ್ಛ ಬಡತನ ಹಸಿವು. ಅದೆಲ್ಲ ಈಗ ನಿಕಾಲೆಯಾಗಿ ಮುನ್ನೂರು ಚೀಲ ಭತ್ತ ಬೆಳೆಯುವಷ್ಟು ಸ್ಥಿತಿವಂತ. ರಾಜಕಾರಣ, ಸಾಹಿತ್ಯ, ಪತ್ರಿಕೋದ್ಯಮ, ಸಿನಿಮಾ.... ಹೀಗೆ ಅವರದು ಬಹುಮುಖಿ ಆಸಕ್ತಿ, ಒಂದು ಕೋನದಲ್ಲಿ ಬಾದರದಿನ್ನಿಯ ನೆನಪು ತೀಡಿಸುವ ಚಹರೆ. ಯಾವತ್ತೂ ದಾವಣಗೇರಿಯ ಗತ್ತುಗಮ್ಮತ್ತುಗಳಿಲ್ಲದೇ ಅವರು ಯಥಾರ್ಥ ಮಾತಾಡುವುದೇ ಪಸಂದ.

ಪ್ರಗತಿಪರ ಎನ್ನಬಹುದಾದ ಅನೇಕ ಹೋರಾಟ – ಪ್ರತಿಭಟನೆಗಳಲ್ಲಿ ಮೈಚಳಿ ಇಟ್ಟುಕೊಂಡೇ ಭಾಗವಹಿಸಿದ ಬಾಮ, ಲಂಕೇಶರ ಸಂಕ್ರಾಂತಿ ನಾಟಕದಲ್ಲಿ ಮೈಚಳಿ ಬಿಟ್ಟು ಥೇಟ್ ಕೆಂಚನೇ ಆಗಿ, ನಂತರದ ನಂದರಾಜ ಪ್ರಹಸನ, ಸೆಜುವಾನಿನ ಸಾಧ್ವಿ ಮುಂತಾದವುಗಳಲ್ಲಿ ಅಭಿನಯ. ಮಹಿಳಾ ಮಂಡಳಿಯ ಪ್ರಮೀಳೆಯರಿಗೆ 'ಕೇಳಿದ್ರೇನ್ರಿ ಸುದ್ದೀನಾ' ರೂಪಕ ಸೇರಿದಂತೆ ಅಕಾಡೆಮಿ ಮೆಂಬರಾಗಿದ್ದಾಗ ಅವರಿಗಾಗಿ ತರಬೇತಿ ಶಿಬಿರ ಮಾಡಿಸಿದ್ರು. ಪತ್ರಕರ್ತರಾಗಿ 'ಟೋಪಿ ಜನಗಳು' ಎಂಬ ಚುರುಕಾದ ಪ್ರಹಸನ ಮಾಡಿಸಿದರು.

ಇಪ್ಪತ್ತು ಕತೆ, ಎರಡು ನಾಟಕಗಳನ್ನು ಬರೆದಿದ್ದಾರೆ. ದಾವಣಗೆರೆಯ ಪ್ರತಿಮಾ ಸಭಾ, ಕಸಾಪದಲ್ಲಿ ಅಹರ್ನಿಶಿ ದುಡಿದಿದ್ದಾರೆ. ದಾವಣಗೆರೆ ನಗರಸಭೆ ಸದಸ್ಯರಾಗಿ, ಭೂಬ್ಯಾಂಕ್ ನಿರ್ದೇಶಕರಾಗಿಯೂ ಸಾಂಸ್ಕೃತಿಕ ಬದುಕಿನ ನಂಟು, ಬರವಣಿಗೆ, ರಾಜಕಾರಣ, ರಂಗಸಂಘಟನೆ.... ಅಂತ ಬದುಕಿನ ಐವತ್ತು ಸಂವತ್ಸರಗಳನ್ನು ದಾಟಿದ ಅವರು ಮದುವೆ ಆಗುವುದನ್ನೇ ಮರೆತರು.

---



## ಎಚ್.ಎಸ್. ಹಿರಿಯಣ್ಣಯ್ಯ

ಬದುಕಿನ ಅರವತ್ತೊಂದು ಬೇಸಿಗೆ, ಮಳೆಗಾಲ, ಚಳಿಗಾಲಗಳನ್ನು ಕಂಡ ಹಿರಿಯಣ್ಣಯ್ಯನವರು ನಾಲ್ಕು ದಶಕಗಳಿಗೂ ಹೆಚ್ಚು ರಂಗವಸಂತಗಳನ್ನು ಆಚರಿಸಿದವರು. ತಮ್ಮ ವಾರಗೆಯಲ್ಲಿ ಇವರು ಹಿರಣ್ಣಿ ಎಂದೇ ಪ್ರಸಿದ್ಧ.

ಓದಿದ್ದು ಇಂಜಿನಿಯರಿಂಗ್, ನೌಕರಿ ಮಾಡಿದ್ದು ಅದೇ ವಿಚಾರದಲ್ಲಿ ಪಾಠ ಮಾಡುವ ಮೇಷ್ಟ್ರಾಗಿ, ಆದರೆ ರಂಗಭೂಮಿಯ ಮೋಹ ಉದ್ದಕ್ಕೂ ಬೆಳೆಯುತ್ತಾ ಬಂತು.

ರಾಮನಗರದಲ್ಲಿ ಚಿಕ್ಕ ವಯಸ್ಸಿನಲ್ಲೇ ನಾಟಕ ಲೋಕಕ್ಕೆ ಪಾದಾರ್ಪಣೆ. ನಿರ್ದೇಶನ ಇವರಿಗೆ ಪ್ರೀತಿಯ ರಂಗಪ್ರಾಕಾರ. ಹವ್ಯಾಸಿ ರಂಗಭೂಮಿಯ ಹೊಸ ನಾಟಕಗಳ 'ರಂಗಮಂಚ'ದ ವಿನೂತನ ವಿನ್ಯಾಸಗಳಿಗೆ ತೊಡಗಿಸಿಕೊಂಡರು. ನಾಲ್ಕು ದಶಕಗಳಷ್ಟು ಹಿಂದೆಯೇ ಕೈಲಾಸಂ ಅವರ ಸೂಳೆ, ಎ.ಕೆ. ಮೂರ್ತಿಯವರ ವರ್ಣಾರಂಭ ನಾಟಕಗಳಿಗೆ ನಾವೀನ್ಯತೆಯ ವಿನ್ಯಾಸದ ಮೂಲಕ ಯಶಸ್ಸು ಕಂಡುಕೊಂಡವರು ಹಿರಣ್ಣಿ. ನಿರಂಜನ ಅವರ ಸಂಗಮಸ್ನಾನ ನಾಟಕಕ್ಕೆ ಪರಿಷ್ಕಾರದ ರಂಗರೂಪ. ಅನುಪಮಾ ನಿರಂಜನರ 'ಕಲ್ಲೋಲ'ವನ್ನು ರಂಗಕ್ಕೆ ತಂದ ಖ್ಯಾತಿ ಅವರದು.

1965ರಲ್ಲಿ ಕನ್ನಡಿಗರ ಕೂಟದ ಕಾರ್ಯದರ್ಶಿ. 1967ರಲ್ಲಿ ಅ.ಅ.ಅ. (ಅಸೋಸಿಯೇಟೆಡ್ ಅಮೆಚೂರ್ ಆರ್ಟಿಸ್ಟ್) ಎಂಬ ರಂಗಸಂಸ್ಥೆ ಹುಟ್ಟು ಹಾಕಿದವರು. ಹವ್ಯಾಸಿ ರಂಗಭೂಮಿಯಲ್ಲಿ ತಾವು ಮೆಚ್ಚಿ ಮದುವೆಯಾದ ಮಡದಿಯ ಹೆಸರು ಸಾವಿತ್ರಿ. ಅವರದು ರಂಗಸಂಸ್ಕೃತಿಯ ಪ್ರೀತಿಯ ಸುಸಂಸ್ಕೃತ ಕುಟುಂಬ.

---



## ವೀರಶೆಟ್ಟಿ ಕೋಡ್ಲಿ

ಎಪ್ಪತ್ತರ ಗಡಿಯಲ್ಲಿರುವ (8-5-1937) ವೀರಶೆಟ್ಟಿ ಬಸವಲಿಂಗಪ್ಪ ಕೋಡ್ಲಿ ಅವರದು ಹರಿಗಡಿಯದ ರಂಗಚೇತನ. ಮುಂಬಯಿ ಮತ್ತು ಹೈದ್ರಾಬಾದ ಕರ್ನಾಟಕದ ಆಡುಂಬೊಲದಲ್ಲಿ ಆಡಿ ಬೆಳೆದ ಹಿರಿಯಜೀವ. ಅಳಿದುಳಿದಿರುವ ಸೋಪಜ್ಞಶೀಲ ವೃತ್ತಿರಂಗಭೂಮಿಯ ಬೆರಳೆಣಿಕೆಯ ಮಂದಿಯಲ್ಲಿ ಅವರೊಬ್ಬರು. ಓದಿದ್ದು ಕನ್ನಡ ಎರಡನೇ ಈಯತ್ತೆಯಾದರೂ ಅವರ ಬದುಕಿನ ಓದು ಬಲು ದೊಡ್ಡದು.

ಹೈದ್ರಾಬಾದ ಕರ್ನಾಟಕಕ್ಕೆ ಸ್ವಾತಂತ್ರ್ಯ ಬಂದ ಹೊಸದರಲ್ಲಿ ಇವರು ರಂಗಪ್ರವೇಶ ಪಡೆದರು. ಆಗ ಕಲಬುರ್ಗಿಯಲ್ಲಿ ಕ್ಯಾಂಪ್ ಮಾಡುವ ಕಂಪನಿಗಳಿಗೆ ಬರವಿರಲಿಲ್ಲ. ನ್ಯಾಮತಿ ಶಾಂತಪ್ಪನವರ ಮಹೇಶ ನಾಟ್ಯಸಂಘದಲ್ಲಿ ಹನ್ನೆರಡು ವರುಷಗಳ ರಂಗಪಟ್ಟ ವೀರಶೆಟ್ಟಿಯವರದ್ದು. ಗೋಕಾಕ ಕಂಪನಿ, ಬೆಳವಣಿಕೆ ಸಂಗಪ್ಪನವರ ಕಂಪನಿ, ಕಡಪಟ್ಟಿ ಕಂಪನಿ, ಮೈಂದರಗಿ ಕಂಪನಿ, ಗುಡಗೇರಿ ಕಂಪನಿ ಹೀಗೆ ಹತ್ತಾರು ಕಂಪನಿಗಳಲ್ಲಿ ನಟನಾಗಿ, ನಿರ್ದೇಶಕನಾಗಿ, ನಾಟಕಕಾರನಾಗಿ ಅವರದು ಅವಿರತ ರಂಗಸೇವೆ.

ಶ್ರೀ ಬ್ರಹ್ಮಾನಂದ ನಾಟ್ಯಸಂಘ, ಸಿರಿವಾರ ಎಂಬ ಕಂಪನಿ ಕಟ್ಟಿಕೊಂಡು ಇಪ್ಪತ್ತು ವರ್ಷಗಳ ಕಾಲ ಸುಂದರ ರಂಗಬಾಳುವೆ ಮಾಡಿದ ಇವರದು ರಂಗ ಕುಟುಂಬ. ಮಕ್ಕಳಿಗೆಲ್ಲ ಇದೇ ರಂಗದಾಸೋಹ. ಕರುಣೇಶ್ವರ ಮಹಾತ್ಮೆ, ಒಲಿದು ಬಂದವಳು, ಗುಡ್ಡದ ಬಸವರಾಜ ಮಹಾತ್ಮೆ ಎಂಬ ನಾಟಕಗಳನ್ನು ರಚಿಸಿದ್ದಾರೆ. ಪ್ರಸ್ತುತ ಜಮಖಂಡಿ ಬಳಿಯ ರಾಮಪುರದಲ್ಲಿ ತಮ್ಮ ರಂಗಬದುಕಿನ ಸಂಧ್ಯಾ ಕಾಲವನ್ನು ಕಳೆಯುತ್ತಿದ್ದಾರೆ.

---



## ಸಂಗಮೇಶ ಗಜೇಂದ್ರಗಡ

ಸಂಗಮೇಶ ಸಿದ್ಧಪ್ಪ ಗಜೇಂದ್ರಗಡ ಎಪ್ಪತ್ತೊಂದು ವರ್ಷಗಳ (12-01-1936) ಹಿರಿಯ ರಂಗಜೀವ. ಸಾಲಿ ಕಲಿತದ್ದು ಮೂರನೇ ಈಯತ್ತೆ ಮಾತ್ರ. ವೃತ್ತಿರಂಗ ಬದುಕಿನ ಸಾಲಿ ಯಾವ ವಿಶ್ವವಿದ್ಯಾಲಯದಲ್ಲೂ ಸಿಗಲಾರದ್ದು. ಗುಬ್ಬಿ ಕಂಪನಿಯಿಂದ ಹಿಡಿದು ಕಲಬುರ್ಗಿಯಲ್ಲಿ ಕಳೆದ ಮೂರು ವರ್ಷಗಳಿಂದ ಕ್ಯಾಂಪ್ ಮಾಡಿರುವ ಶೇಖ ಮಾಸ್ತರರ ಕುಮಾರೇಶ್ವರ ನಾಟಕ ಕಂಪನಿವರೆಗೆ ಅವರು ನಡೆದುಬಂದ ದಾರಿಗೆ ಅರ್ಧ ಶತಮಾನದ ರಂಗ ಇತಿಹಾಸ.

ಗುಬ್ಬಿ ಕಂಪನಿಯಲ್ಲಿ 1950ರ ಸುಮಾರಿಗೆ ಸಿಕ್ಕ ಪಾತ್ರವೆಂದರೆ ಕರಪತ್ರ ಹಂಚುವುದು ಮತ್ತು ಬೋರ್ಡಿಂಗ್‌ನಲ್ಲಿ ಅಡುಗೆ ಸಹಾಯಕ. ತದನಂತರ ಸದಾರಮೆಯಲ್ಲಿ ಹೆಂಡಕುಡುಕ ಡಂಗುರಕ ಪಾತ್ರ. ಮೈಸೂರಿನ ಟಿ.ಎನ್. ಸೋಮಶೇಖರ ಬಳಿ ಮೂರು ವರ್ಷಗಳ ಕಾಲ ಶಾಸ್ತ್ರೀಯ ನೃತ್ಯಾಭ್ಯಾಸ ಮಾಡಿ ಅದನ್ನು ರಂಗಭೂಮಿಗೆ ಅಳವಡಿಸಿಕೊಂಡರು ಸಂಗಮೇಶ. ಎಂ.ಸಿ. ಮಹಾದೇವ ಸ್ವಾಮಿಗಳ ಕನ್ನಡ ಥಿಯೇಟರ್ಸ್ ಸಂಘದಲ್ಲಿ ನಟ ಮತ್ತು ನೃತ್ಯಪಟುವಾಗಿ ರಂಗಸೇವೆ. ಅದೇ ಕಂಪನಿಯಲ್ಲಿದ್ದ ರಂಗನಟಿ ಕಮಲಮ್ಮನವರೊಂದಿಗೆ ಮದುವೆ.

ನ್ಯಾಮತಿ ಕಂಪನಿ, ಕೆ. ಹಿರಣ್ಣಯ್ಯ ಮಿತ್ರ ಮಂಡಲಿ, ವೀರಶೆಟ್ಟಿ ಕೊಡ್ಲಿ ಕಂಪನಿ, ಆರ್.ಡಿ. ಕಾಮತರ ಕಂಪನಿ, ಏಣಗಿ ಬಾಳಪ್ಪ ಕಂಪನಿ, ಫ.ಶಿ. ಭಾಂಡಗೆ ಕಂಪನಿ, ಲಕ್ಷ್ಮಂಡಿ ಕಂಪನಿ, ಗುಡಗೇರಿ ಕಂಪನಿ, ಕಳೆದ ಹತ್ತು ವರ್ಷಗಳಿಂದ ಶೇಖ ಮಾಸ್ತರ ಕಂಪನಿಯಲ್ಲಿ.... ಹೀಗೆ ಅವರ ರಂಗ ಸೇವೆ ಇಂದಿಗೂ ಮುಂದುವರೆದಿದೆ.

---



## ಎಚ್.ಬಿ. ಸರೋಜಮ್ಮ

ವೃತ್ತಿರಂಗಭೂಮಿಯಲ್ಲಿ ನಾಲ್ಕು ದಶಕಗಳಿಂದ 'ರಂಗಬದುಕು' ಬಾಳುತ್ತಿರುವವರು ಸರೋಜಮ್ಮ. ಈಗವರು ಹುಬ್ಬಳ್ಳಿಯ ನಿವಾಸಿ. ಮೈಸೂರು ಮಹದೇವ ಸ್ವಾಮಿಯವರ ಕಂಪನಿಯಲ್ಲಿ ರಂಗಪ್ರವೇಶ ಮಾಡಿದಾಗ ಸರೋಜಮ್ಮನವರಿಗೆ ಹದಿನಾರರ ಹರೆಯ. ಆ ನಂತರ ಅವರ ಪ್ರಬುದ್ಧ ಅಭಿನಯ ಧಾರೆಗೊಂಡದ್ದು ಬಳ್ಳಾರಿ ಲಲಿತಮ್ಮ, ನರೇಗಲ್ ಚನ್ನಬಸವಯ್ಯ, ಸುಳ್ಳದ ದೇಸಾಯಿ, ರಾಮರಾವ್ ದೇಸಾಯಿ, ಚಿಂದೋಡಿ, ಅರಿಶಿಣಗೋಡಿ ಮತ್ತು ಕಡಪಟ್ಟಿ ಕಂಪನಿಗಳಲ್ಲಿ.

ವೃತ್ತಿರಂಗದ ದಿಗ್ಗಜರಾದ ಎಲಿವಾಳ ಸಿದ್ದಯ್ಯ, ದುರ್ಗಾದಾಸ್, ಪಿ.ಬಿ. ಧುತ್ತರಗಿ, ಎಚ್.ಟಿ. ಅರಸು, ಎಚ್.ಎನ್. ಹೂಗಾರ, ಮಹಾಂತೇಶ ಶಾಸ್ತ್ರಿ, ಸುಭದ್ರ ಮನ್ಸೂರ ಮುಂತಾದವರ ಒಡನಾಟ ಮತ್ತು ಪ್ರೀತಿ ಗಳಿಸಿದ ರಂಗತಾರೆ ಸರೋಜಮ್ಮ.

ರಕ್ತರಾತ್ರಿಯ ಉತ್ತರೆ, ತಾಯಿ ಕರುಳಿನ ಗೌರಮ್ಮ, ಗೋಮುಖವ್ಯಾಘ್ರದ ರೋಹಿಣಿ, ಎಚ್ಚರ ತಂಗಿ ಎಚ್ಚರದ ಸಂಧ್ಯಾ, ಮಲಮಗಳು ನಾಟಕದ ಕಲ್ಯಾಣಿ ಹೀಗೆ ಅವರು ವೃತ್ತಿ ನಾಟಕಗಳ ಮಹತ್ತರ ಪಾತ್ರಗಳಲ್ಲಿ ಜನಮನ್ನಣೆ ಗಳಿಸಿದ್ದಾರೆ. ನಾಡಿನ ಹತ್ತಾರು ಕಡೆ ಅವರಿಗೆ ಗೌರವ ಪುರಸ್ಕಾರ ಸಂದಿವೆ.

---



## ಡಿ.ಎಂ. ತೋಟಯ್ಯ ಸ್ವಾಮಿ

ಪೌರಾಣಿಕ, ಸಾಮಾಜಿಕ, ಐತಿಹಾಸಿಕ ಇಲ್ಲವೇ ಹೊಚ್ಚ ಹೊಸ ಅಲೆ.... ಹೀಗೆ ನಾಟಕ ಯಾವುದೇ ಆಗಿರಲಿ ಅಲ್ಲಿ ತೋಟಯ್ಯಸ್ವಾಮಿಗಳ ಸಂಗೀತ ಸಾರಥ್ಯ ಇರುತ್ತದೆಂದರೆ ಸಾಕು ನಾಟಕಕ್ಕೆ ಯಶಸ್ಸು ಕಟ್ಟಿಟ್ಟ ಬುತ್ತಿ. ಇದು ಉತ್ಪ್ರೇಕ್ಷೆಯ ಮಾತಲ್ಲ. ರಂಗಸಂಗೀತದೊಂದಿಗೆ ಅರ್ಧ ಶತಮಾನ ಬಾಳಿದ ಅವರು ಹಳತು ಹೊಸತರ ರಂಗಕೊಂಡಿ. ದಿಲ್‌ರೂಬಾದಂತಹ ತಂತಿವಾದ್ಯದ ನಾದ ಮಾಧುರ್ಯವನ್ನು ಗ್ರಾಮೀಣ ರಂಗಭೂಮಿಯಲ್ಲಿ ಸೊಗಸಾಗಿ ಪರಿಚಯಿಸಿದವರು ಈ ಮಾಸ್ತರ. ಹಾರ್ಮೋನಿಯಂ ನುಡಿಸುವುದರಲ್ಲಿ ಅವರಿಗೆ ಅವರೇ ಸಾಟಿ. ಆಧುನಿಕ ವಿದ್ಯುನ್ಮಾನ ವಾದನದಲ್ಲೂ ಎತ್ತಿದ ಕೈ. ಹೀಗೆ ಆಧುನಿಕತೆಗೆ ಹೊಂದಿಕೊಳ್ಳುವ ಚಲನಶೀಲ ರಂಗಪ್ರಜ್ಞೆ ಇವರದು.

ಬಳ್ಳಾರಿ, ರಾಯಚೂರು, ಕೊಪ್ಪಳ, ಚಿತ್ರದುರ್ಗ, ದಾವಣಗೆರೆ ಈ ಭಾಗದ ಗ್ರಾಮೀಣ ರಂಗಭೂಮಿಗೆ ಅವರು ಸಲ್ಲಿಸುತ್ತಿರುವ ರಂಗಸೇವೆಯು ಪ್ರಶಸ್ತಿ, ಪುರಸ್ಕಾರಗಳನ್ನು ಮೀರಿ ಬೆಳೆದದ್ದು. ಅವರು ಕೇವಲ ಸಂಗೀತ ಮಾಸ್ತರರಲ್ಲ. ನಾಟಕದ ಜೀವಾಳ. ರಂಗಸಂಗೀತದ ಸಾಹಚರ್ಯದಿಂದಲೇ ರಂಗಪ್ರಯೋಗದ ದೊಡ್ಡ ಯಶಸ್ಸನ್ನು ನಿತ್ಯ ಸಾಧಿಸಿ ತೋರಿಸುವವರು.

ರಕ್ತರಾತ್ರಿ, ಹೇಮರೆಡ್ಡಿ ಮಲ್ಲಮ್ಮ, ಚಿತ್ರಕೇತು, ರುಕ್ಮಿಣಿ ಸ್ವಯಂವರ, ದೇವದಾಸಿ ಮುಂತಾದ ಹಳೆಯ ನಾಟಕಗಳು, ಬಸ್ ಕಂಡಕ್ಟರ್, ಸ್ತ್ರೀರತ್ನ, ಆದರ್ಶಪ್ರೇಮ ಮುಂತಾದ ಜನಪ್ರಿಯ ನಾಟಕಗಳಲ್ಲದೆ ಸಂಗ್ಯಾಬಾಳ್ಯಾ, ಸೂರ್ಯಶಿಕಾರಿ ಅಂತಹ ಆಧುನಿಕ ನಾಟಕಗಳಲ್ಲೂ ಅವರ ಸಂಗೀತ ಪ್ರೇಕ್ಷಕರನ್ನು ಮರುಳು ಮಾಡುತ್ತದೆ. ವ್ಯಕ್ತಿಯಲ್ಲಿ ಆಧುನಿಕತೆ ಅಳವಡಿಸಿಕೊಂಡರೂ ಮರಿಯಮ್ಮನಹಳ್ಳಿಯ ಪಕ್ಕದ ಡಣಾಯಕನಕೆರೆಯ ತಮ್ಮ ಉಡುಪು, ಮಾತುಕತೆ, ರೀತಿ ರಿವಾಜುಗಳಲ್ಲಿ ಅಪ್ಪಟ ಗ್ರಾಮೀಣರೇ.

---

## ಸಿರಾಜುದ್ದೀನ್



ಚನ್ನರಾಯಪಟ್ಟಣದ ಬಾಗೂರು ರಸ್ತೆಯ ಟಿಪ್ಪು ಕ್ರಾಸ್ ಬಳಿ ಕಂಚುಗಾರ ಬೀದಿಯಲ್ಲಿರುವ ಸಿರಾಜುದ್ದೀನ್ ರಂಗಭೂಮಿಯಲ್ಲಿ ಚಿರಪರಿಚಿತರು. ಕಲಾಭೀಷ್ಮ ಬಿರುದಾಂಕಿತ ಗೌಸ್‌ಮೊಹಿದ್ದೀನ್ ಅವರ ಈ ಕಲಾಭೀಷ್ಮರ ಹೆಮ್ಮೆಯ ಪುತ್ರ ಸಿರಾಜುದ್ದೀನ್. ಅರವತ್ನಾಲ್ಕು ವರ್ಷದ ಸಿರಾಜುದ್ದೀನ್ ಅವರಿಗೆ ರಂಗಭೂಮಿಯ ನಂಟು ಅಪ್ಪನಿಂದ ಸಹಜವಾಗಿ ಬಂದದ್ದು.

ಸಿರಾಜುದ್ದೀನ್ ಅವರಿಗೆ ಪ್ರಸಾದನ ಕಲೆಯಲ್ಲಿ ಆಸಕ್ತಿ ಮೂಡಿದ್ದು ಬಾಲ್ಯದ ಎಂಟನೇ ತರಗತಿಯಲ್ಲೇ. ಹಾಸನ ಜಿಲ್ಲೆಯಾದ್ಯಂತ ಇದುವರೆಗೆ ನೂರಾರು ಸ್ತ್ರೀ–ಪುರುಷ ಕಲಾವಿದರಿಗೆ, ನೂರಿಪ್ಪತ್ತೈದಕ್ಕೂ ಹೆಚ್ಚು ಪೌರಾಣಿಕ, ಐತಿಹಾಸಿಕ ಸಾಮಾಜಿಕ ನಾಟಕಗಳಿಗೆ ತಮ್ಮ ಪ್ರಸಾದನ ಕಲೆಯ ರಂಗಸೇವೆ ಮಾಡಿದ್ದಾರೆ. ಜಿಲ್ಲೆಯಾಚೆಗೂ ಬೆಂಗಳೂರು, ಮುಂಬಯಿ ಮುಂತಾದ ಕಡೆ ಅವರುಗಳಿಂದ ಮೇಕಪ್ ಮಾಡಿಸಿಕೊಂಡ ರಂಗತಂಡಗಳು ಮತ್ತು ಕಲಾವಿದರು ಅನೇಕ ಪ್ರಶಸ್ತಿ, ಬಹುಮಾನ, ಪುರಸ್ಕಾರಗಳಿಗೆ ಭಾಜನರಾಗಿದ್ದಾರೆ.

ಬರೀ ಪ್ರಸಾಧನಕ್ಕಷ್ಟೇ ಮಿತಿಗೊಳ್ಳದೆ ರಂಗಸ್ಥಳದ ಬೆಳಕು, ಧ್ವನಿ, ರಂಗಸಜ್ಜಿಕೆ ವಿನ್ಯಾಸದತ್ತಲೂ ಇವರ ರಂಗಾಸಕ್ತಿ ವಿಸ್ತೃತಗೊಂಡು ಮೆಚ್ಚುಗೆಗೆ ಪಾತ್ರಗೊಂಡಿದೆ.

---

## ಕೃಷ್ಣರಾವ್ (ಪಾಪುಳು)



ಪೌರಾಣಿಕ ನಾಟಕಗಳ ತವರೂರಾದ ಮಂಡ್ಯದಲ್ಲಿ ಪಾಪುಳು ಕೃಷ್ಣರಾವ್ ತುಂಬಿದ ಕೊಡದಂತಹ ಹೆಸರು. ಕೃಷ್ಣರಾವ್ ಎಂದು ಜನ ಕರೆಯುವುದು ಕಡಿಮೆ. ಪಾಪುಳು ಎಂದರೆ ಯಾರೆಂದು ಪುಟ್ಟ ಮಗುವೂ ಹೇಳುತ್ತೆ. ಇದು ಅವರ ಪ್ರೀತಿಯ ಹೆಸರು. ಕೃಷ್ಣರಾವ್ – ವೆಂಕಟರಾವ್ ಸಹೋದರರ ರಂಗನೃತ್ಯ ಜೋಡಿ ಪ್ರಸಿದ್ಧವಾದದ್ದು. ಕಳೆದ ಅರ್ಧ ಶತಮಾನದಿಂದ ಕೃಷ್ಣರಾವ್ ವೃತ್ತಿರಂಗಭೂಮಿಯ ಒಡನಾಡಿ. ಅವರ ಹೋಟೆಲು ವೃತ್ತಿ ಕಲಾವಿದರ ಬಿಡಾರ. ಅಶಕ್ತ ಕಲಾವಿದರ ಆಪದ್ಬಾಂಧವ ಕೃಷ್ಣರಾವ್. ಪಾಪುಳು ತಂದೆ ದಿವಂಗತ ಯು.ಬಿ. ಗುಂಡೂರಾಯರು ನಾಟಕ ಕಂಪನಿ ನಡೆಸಿದವರು. ತಂದೆಯವರ ರಂಗಗರಡಿಯಲ್ಲೇ ಪಳಗಿ ಬಂದವರು ಕೃಷ್ಣರಾವ್.

ಒಂದು ಕಾಲಕ್ಕೆ ಶಾಸ್ತ್ರೀಯ ನೃತ್ಯ–ಸಂಗೀತಗಳಿಗೆ ವಿಪುಲವಾದ ಅವಕಾಶ ಆಸರೆ ನೀಡಿದ್ದೇ ವೃತ್ತಿ ಕಂಪನಿಗಳು. ಉತ್ತರಾದಿ ದಕ್ಷಿಣಾದಿ ಸಂಗೀತ ಜ್ಞಾನವಿದ್ದರೆ ಮಾತ್ರ ವೃತ್ತಿ ಕಂಪನಿಗಳಲ್ಲಿ ಅವಕಾಶ ಸಿಗುತ್ತಿತ್ತು. ಕೃಷ್ಣರಾವ್ ಅಂತಹ ಪರಂಪರೆಯ ಹಿನ್ನೆಲೆಯನ್ನು ಹೊಂದಿದವರು. ಆ ಭಾಗದ ಹಳ್ಳಿಹಳ್ಳಿಗಳಲ್ಲೂ ಇವರ ಕಲಾವಂತಿಕೆಯು ಹೆಸರು ಗಳಿಸಿದೆ.

ಪೌರಾಣಿಕ, ಐತಿಹಾಸಿಕ, ಕೆಲ ಸಾಮಾಜಿಕ ನಾಟಕಗಳಲ್ಲಿನ ಶಿವತಾಂಡವ ನೃತ್ಯ, ನವಿಲು ನೃತ್ಯ, ಆಸ್ಥಾನ ನೃತ್ಯ, ಶಿವ ಪಾರ್ವತಿ ಜೋಡಿ ನೃತ್ಯಕ್ಕೆ ಪಾಪುಳು ಹೇಳಿ ಮಾಡಿಸಿದ ಹೆಸರು. ಸ್ಮಶಾನ ಕುರುಕ್ಷೇತ್ರದ ತಾಂಡವ ನೃತ್ಯ ಇತ್ತೀಚೆಗೂ ಈ ಇಳಿ ವಯಸ್ಸಿನಲ್ಲೂ ಮೆಚ್ಚುಗೆ ಗಳಿಸಿದೆ.

ಅರವತ್ತೊಂದು ವಸಂತಗಳ (24–08–1945) ಕೃಷ್ಣರಾವ್ ರಾಷ್ಟ್ರಮಟ್ಟದ ಕಬಡ್ಡಿ ಪಟುವೂ ಆಗಿದ್ದಾರೆ. ಅವರ ಸಹಧರ್ಮಿಣಿ ಶಕುಂತಲ ಅವರ ಬದುಕಿನ ಪ್ರೇರಕಶಕ್ತಿ.

---



## ಪ್ರಸಾದ್ ರಕ್ಷಿದಿ

ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ರಕ್ಷಿದಿ ಇವರ ಜನ್ಮಸ್ಥಳ. ತಂದೆ, ತಾಯಿ ಕಾಫಿತೋಟದಲ್ಲಿ ಕೂಲಿ ಕೆಲಸಗಾರರು. ಈ ಹಿನ್ನೆಲೆಯಲ್ಲಿಯೇ ಬಿ.ಎಸ್ಸಿ. ತನಕ ವ್ಯಾಸಂಗ. ಸಮಾಜವಾದಿ ಚಿಂತನೆಯ ಎಡಪಂಥೀಯ ನಿಲುವಿನೊಂದಿಗೆ ರಂಗಭೂಮಿಯ ನಂಟು.

ಪ್ರಸಾದ್ ತಮ್ಮ ರಂಗಚಟುವಟಿಕೆಗಳನ್ನು ಆರಂಭಿಸಿದ್ದು ಅನಕ್ಷರಸ್ಥ ಕೂಲಿಕಾರ್ಮಿಕರಿಗೆ ಅಕ್ಷರ ಕಲಿಸುವುದರ ಮತ್ತು ಅವರನ್ನು ಸಂಘಟಿಸುವುದರ ಮೂಲಕ. ಪ್ರಸಾದ್ ಬರೆದು ನಿರ್ದೇಶಿಸಿದ ಕೆಲವು ನಾಟಕಗಳೆಂದರೆ ನಮ್ಮ ಎಲುಬುಗಳ ಮೇಲೆ, ಅನಾಮಿಕರು, ಸತ್ಯಕ್ಕೆ ಸಾವಿಲ್ಲ ಇತ್ಯಾದಿ. ಈ ನಾಟಕಗಳಲ್ಲಿ ಅಭಿನಯಿಸಿದವರು ಕೂಲಿಕಾರರು, ಗಾರೆ ಕೆಸಲದವರು, ದರ್ಜಿಗಳು, ಶಾಲೆಯ ಮುಖವನ್ನೇ ಕಾಣದ ಬಡ ರೈತ ಮಕ್ಕಳು. ಈ ನಾಟಕಗಳು ಹೊಸ ರಾಜಕೀಯ ಪ್ರಜ್ಞೆಯನ್ನು ಈ ಜನರಲ್ಲಿ ಹುಟ್ಟಿಸಿದವು. ಮೂವತ್ತು ವರ್ಷಗಳ ಹಿಂದೆಯೇ ಸಾಕ್ಷರತೆ, ಸಾಮಾಜಿಕ ಪ್ರಜ್ಞೆ, ಕಾರ್ಮಿಕ ಹೋರಾಟಕ್ಕೆ ರಂಗಸಜ್ಜಿಕೆಯ ನಿರ್ಮಾಣ. ಆಗಲೇ ಭೀಮಣ್ಣನ ಕಥಾ ಪ್ರಸಂಗ ಎಂಬ ಇವರ ನಾಟಕವು ಜನಮನ್ನಣೆ ಗಳಿಸಿತ್ತು.

ಅನೇಕ ಪ್ರತಿಭಾವಂತ ನಾಟಕ ನಿರ್ದೇಶಕರನ್ನು ರಕ್ಷಿದಿಗೆ ಕರೆಯಿಸಿಕೊಂಡು ನಾಟಕ ಶಿಬಿರ, ನಾಟಕೋತ್ಸವ, ವಿಚಾರ ಸಂಕಿರಣ ಮುಂತಾದ ಕಾರ್ಯಕ್ರಮಗಳ ಜೊತೆಯಲ್ಲೇ ರಂಗಚಟುವಟಿಕೆಗಳನ್ನೂ ನಿರಂತರವಾಗಿ ಇರಿಸಿಕೊಂಡಿದ್ದಾರೆ ಪ್ರಸಾದ್. ರಂಗಭೂಮಿಯ ಮೂಲಕ ಸಾಮಾಜಿಕ ಬದಲಾವಣೆಯನ್ನು ಅಪೇಕ್ಷಿಸುವ ಇವರು 'ಇಂಡಿಯಾ 1991, ಪ್ಲಾಂಟರ್ ಪರಮೇಶಿ, ಕಣಿವೆ ಕೆಳಗಿನ ಕ್ರಾಂತಿ, ಮಾಯಾಮೃಗ ಮುಂತಾದ ನಾಟಕಗಳನ್ನು ರಚಿಸಿ ನಿರ್ದೇಶಿಸಿದ್ದಾರೆ. ತಮ್ಮ ಊರಿನಲ್ಲಿ ಒಂದು ಬಯಲು ರಂಗಮಂದಿರವನ್ನು ನಿರ್ಮಿಸಿದ್ದಾರೆ.



## 2005ರ ಪ್ರಶಸ್ತಿ ವಿಜೇತರು



### ಚಂದ್ರಕಾಂತ ಕುಸನೂರ (ಗೌರವ ಪ್ರಶಸ್ತಿ)

ಕಲಬುರ್ಗಿಯಲ್ಲಿರುವುದೇ ಎರಡು ಕಾಲ. ಒಂದು ಬರಗಾಲ, ಇನ್ನೊಂದು ಬೇಸಿಗೆ ಕಾಲ. ಇಂತಹ ನೆಲದಲ್ಲಿ ಹುಟ್ಟಿ ಬಾಳುವುದೇ ಒಂದು ರೀತಿಯ ಬಂಡಾಯ. ಅಲ್ಲಿ ಆಡುವ ಆರು ಮಾತುಗಳಲ್ಲಿ ಮೂರು ಉರ್ದುವಿಗೆ ಸೇರಿರುತ್ತವೆ. ಅದು ಅವರಿಗೆ ಯಾವತ್ತೂ ಅನ್ಯವೆನಿಸದು. ನಾಟಕ ಅದಕ್ಕೆ ಹೊರತಲ್ಲ. ಅಂತಹ ನಾಡಿನಿಂದ ಬಂದವರು ನಮ್ಮ ಚಂದ್ರಕಾಂತ ಗುಂಡೇರಾವ್ ಕುಸನೂರ.

ಓದಿದ್ದು ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಉರ್ದು ಸ್ನಾತಕೋತ್ತರ ಪದವಿ. ಹೆಚ್ಚು ಬರೆದದ್ದು ಕನ್ನಡದಲ್ಲಿ. ಬರೆದ ಬಹಳಷ್ಟು ಕೃತಿಗಳಿಗೆ ನಾಟಕ, ಸಾಹಿತ್ಯ, ಲಲಿತ ಕಲಾ ಅಕಾಡೆಮಿಗಳ ಬಹುಮಾನಗಳ ಸೋನೆಮಳೆ, ಮನೆ, ವಿದೂಷಕ, ಹಳ್ಳಕೊಳ್ಳ, ದಿಂಡಿ, ಅವಿ ಬಂತು ಅವಿ, ರಿಹರ್ಸಲ್, ಸೆಳೆತ ಕನಸು.... ಹೀಗೆ ಮೂವತ್ತು ನಾಟಕಗಳ ರಚನೆ. ಇವುಗಳಲ್ಲಿ ಬಹುಪಾಲು ಅಸಂಗತ ಪ್ರಕಾರಕ್ಕೆ ಸೇರಿಕೆ.

ಚಿತ್ರಕಲೆಯಲ್ಲೂ ಎತ್ತಿದ ಕೈ ಕುಸನೂರರದು. ಆರು ಕಾದಂಬರಿ, ಎರಡು ಕಥಾಸಂಕಲನ, ಎರಡು ಚಿತ್ರಕಲಾ ವಿಮರ್ಶೆ, ಒಂದು ಕವನ ಸಂಕಲನ, ಎರಡು ಅನುವಾದಿತ ಕೃತಿ, ಎರಡು ಹಿಂದಿ ಗ್ರಂಥ.... ಹೀಗೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಈಸಿ ಬಂದವರು. ಅಪ್ಪಟ ಸೆಕ್ಯುಲರ್ ಆದ ರಂಗಭೂಮಿಯನ್ನೇ ಒಪ್ಪಿಕೊಂಡವರು.

ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಮತ್ತು ಶ್ರೀ ಕೃಷ್ಣ ಆಲನಹಳ್ಳಿಯವರ 'ಕಾಡು' ಕೃತಿಗಳನ್ನು ಹಿಂದಿಗೆ ಅನುವಾದಿಸಿದ್ದು ಉತ್ತರ ಪ್ರದೇಶದ ಭಾಷಾ ಸಂಸ್ಥಾನದ ಬಹುಮಾನ. ಹಿಂದಿ ಕಥಾಸಂಕಲನಕ್ಕೆ ಕೇಂದ್ರ ಸರ್ಕಾರದ ಬಹುಮಾನ ಪ್ರಾಪ್ತಿ. ಮೂರು ಬಾರಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಸ್ತಕ ಬಹುಮಾನ, ಒಮ್ಮೆ ನಾಟಕ ಅಕಾಡೆಮಿ ಪುರಸ್ಕಾರವೂ ದೊರೆತಿದೆ. ಎಪ್ಪತ್ತರ ದಶಕದಲ್ಲಿ ಕಲಬುರ್ಗಿಯಲ್ಲಿ ರಂಗ ಮಾಧ್ಯಮದ ಹವ್ಯಾಸಿ ರಂಗ ಚಟುವಟಿಕೆಗಳನ್ನು ಆರಂಭಿಸಿದವರಲ್ಲಿ ಕುಸನೂರರು ಅಗ್ರಗಣ್ಯರು. ಕನ್ನಡ ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರಾಗಿ ಅನನ್ಯ ಅನುಭವ. ಎಪ್ಪತ್ತೈದರ ಈ ಮುಪ್ಪಿನಲ್ಲಿ ಇಪ್ಪತ್ತೈದರ ಮನೋಲ್ಲಾಸದ ಕುಸನೂರರ ರಂಗಖುಷಿಗೆ ಎಲ್ಲೆ ಇಲ್ಲ.

---



### ಪ್ರಭು ಗುರಪ್ಪನವರ

ಇವರೊಬ್ಬ ಗ್ರಾಮ್ಯಜನ್ಯ ರಂಗಪ್ರತಿಭೆ. ಉತ್ತಮ ಸಂಘಟಕ. ಹಾವೇರಿ ಜಿಲ್ಲೆ ಹಾನಗಲ್ ತಾಲ್ಲೂಕಿನ ಶೇಷಗಿರಿ ಎಂಬ ಸಣ್ಣ ಹಳ್ಳಿಯಲ್ಲಿ ರಂಗ ಚಟುವಟಿಕೆಯ ನಿರಂತರತೆ ಕಾಪಾಡಿದ್ದಾರೆ. ನಲವತ್ತಾರು ವರ್ಷದ ಪ್ರಭು ಕಳೆದ ಎರಡು ದಶಕಗಳಿಂದ ಗಜಾನನ ಯುವಕ ಮಂಡಲಿ ಎಂಬ ರಂಗತಂಡ ಕಟ್ಟಿಕೊಂಡು ಶೇಷಗಿರಿಯನ್ನು ರಂಗಭೂಮಿಯ 'ವಿಶೇಷಗಿರಿ' ಆಗಿಸುವಲ್ಲಿ ಶ್ರಮಿಸುತ್ತಿದ್ದಾರೆ.

ಈ ಪುಟ್ಟ ಹಳ್ಳಿಯಲ್ಲಿ ಸಮುದಾಯದ ಬೆಳ್ಳಿಹಬ್ಬ, ಬೀದಿ ನಾಟಕ, ಜಾತ್ರೆ, ಕುವೆಂಪು ಶತಮಾನೋತ್ಸವ, ತಮ್ಮ ರಂಗತಂಡದ ದಶಮಾನೋತ್ಸವ.... ಹೀಗೆ ಪ್ರತಿ ಉತ್ಸವದಲ್ಲೂ ನಾಟಕಗಳ ಸಂಭ್ರಮ, ಸಡಗರ, ವಿಚಾರ ಸಂಕಿರಣ, ರಂಗ ಶಿಬಿರಗಳ ವೈಭವ. ಬಡ ರೈತಕೂಲಿ ಕಾರ್ಮಿಕರೇ, ತುಂಬಿಕೊಂಡಿರುವ ಈ ತಂಡ ಕಳೆದೆರಡು ದಶಕಗಳಲ್ಲಿ ಮುನ್ನೂರಕ್ಕೂ ಹೆಚ್ಚು ಊರುಗಳಲ್ಲಿ ಪ್ರದರ್ಶನ ನೀಡಿದೆ. ಪ್ರಗತಿಪರ ಧೋರಣೆ, ಆಧುನಿಕ ರಂಗ ಸಂವೇದನೆ ಇವರ

ನಾಟಕಗಳ ಮೂಲದ್ರವ್ಯ, ದೀಪಾವಳಿ, ಕಪ್ಪು ನೆಲದ ಕೆಂಪು ಕಥೆ, ಕಥೆಯಾದ ಕಾಳ, ಕತ್ತಲಿನಿಂದ ಬೆಳಕಿನೆಡೆಗೆ, ಹೊಸದಿಕ್ಕು, ನೀರು ಬೇಕು.... ಇವರ ಪ್ರದರ್ಶಿತ ನಾಟಕಗಳು. ಒಂದರ್ಥದಲ್ಲಿ ತಮ್ಮದು ಹಳ್ಳಿಗಾಡಿನ 'ಲಗಾನ್ ತಂಡ'ವೆಂದು ಪ್ರಭು ಹೆಮ್ಮೆ ಪಡುತ್ತಾರೆ.

---



## ಲಕ್ಷ್ಮಣಕುಮಾರ್ ಮಲ್ಲೂರ್

ಊರು ಮಂಗಳೂರು ಬಳಿಯ ಮಲ್ಲೂರು. ಅಪ್ಪ ದೆಮ್ಮಲೆ ಐತಪ್ಪ ಕೊಟ್ಟಾರಿ, ಅಮ್ಮ ಗುಲಾಬಿ. ಸಹಕಾರಿ ಬ್ಯಾಂಕಿನಲ್ಲಿ ವೃತ್ತಿ, ರಂಗಭೂಮಿಯು ಅದಮ್ಯ ಪ್ರವೃತ್ತಿ. ಅಮ್ಮುಂಜೆಯಲ್ಲಿ ಓದುತ್ತಿರುವಾಗಲೇ ಹತ್ತನೇ ವಯಸ್ಸಿನಲ್ಲೇ (1962) ರಂಗಪ್ರವೇಶ. ತುಳು ರಂಗಭೂಮಿಯಲ್ಲಿ ಅವರು ಬೆಳೆದು ದೊಡ್ಡವರಾದರು. 'ದಳ್ಯಾರಿ ಸೋಂಪಣ್ಣೆ'ಯಿಂದ ಹಿಡಿದು ಕೋಟಿ ಚೆನ್ನಯ್ಯದವರೆಗೆ ಹತ್ತಾರು ತುಳು ನಾಟಕಗಳಲ್ಲಿ ಅಭಿನಯ. ಕಳೆದ 25 ವರ್ಷಗಳಿಂದ ಮಂಗಳೂರು ಆಕಾಶವಾಣಿಯ 'ಬಿ' ಹೈಗ್ರೇಡ್ ಕಲಾವಿದರಾಗಿ ಧ್ವನಿ ನೀಡಿರುವ ನಾಟಕಗಳ ಸಂಖ್ಯೆ 50ಕ್ಕೂ ಮಿಕ್ಕಿವೆ.

ಕನ್ನಡ ಹವ್ಯಾಸಿ ರಂಗಭೂಮಿಗೆ 'ಮಲ್ಲೂರ್' ಎಂತಲೇ ಪರಿಚಿತರು. ಮಂಗಳೂರಿನ 'ಭೂಮಿಕಾ' ರಂಗ ತಂಡದ ಸದಸ್ಯರಾಗಿ ಅವರು ಕನ್ನಡ ರಂಗಭೂಮಿಯಲ್ಲೂ ಎತ್ತರಕ್ಕೆ ಬೆಳೆದವರು. ಕಾರ್ನಾಡರ ತುಘಲಕ್, ಕಂಬಾರರ ಜೈಸಿದ್ನಾಯ್ಕ, ಶ್ರೀರಂಗರ ಏನ ಬೇಡಲಿ ನಿನ್ನ ಬಳಿಗೆ ಬಂದು, ಸಿದ್ದಲಿಂಗ ಪಟ್ಟಣಶೆಟ್ಟರ ಬೇರಿಲ್ಲದವರು, ವೇಣುಗೋಪಾಲ ಕಾಸರಗೋಡರ ದೃಷ್ಟಿ ಹೀಗೆ ಅವರು ಅಭಿನಯಿಸಿದ ನಾಟಕಗಳ ಪಟ್ಟಿ ಪುಟ್ಟದಲ್ಲ.

ಹಿರಿತೆರೆ ಕಿರುತೆರೆಗಳಲ್ಲೂ ಲಕ್ಷ್ಮಣ ಅಭಿನಯಿಸಿದ್ದಾರೆ. ಮುಖ್ಯವಾಗಿ ಮುನ್ನುಡಿ ಚಿತ್ರದಲ್ಲಿ ಅರಬ್ಬೀ ಪಾತ್ರ ಸಾಗರದೀಪದಲ್ಲಿ ವ್ಯಾಪಾರಿ ಪಾತ್ರ, ತುಳು ಮತ್ತು ಮಲೆಯಾಳಂ ಚಿತ್ರಗಳಲ್ಲೂ ಅವರಿಗೆ ಉತ್ತಮ ಪಾತ್ರಗಳಿವೆ.

---



## ಬಿ.ಎಸ್. ರಾಮಮೂರ್ತಿ

ಬೆಂಗಳೂರಿನ ರಾಮಮೂರ್ತಿಗೆ ಮೊನ್ನೆ ಮೇ ಎರಡರಂದು ಐವತ್ತಾರು ತುಂಬಿದವು. ಅಪ್ಪ ಸುಬ್ಬರಾಯ, ಅಮ್ಮ ಸುಂದ್ರಮ್ಮ. ಸಿ.ಎಂ.ಟಿ.ಐ. ಸಂಸ್ಥೆಯ ಜಂಟಿ ನಿರ್ದೇಶಕರ ಆಪ್ತ ಸಹಾಯಕರ ಹುದ್ದೆ ಇವರದು.

ರಂಗಸಂಪದ ತಂಡದ ತ್ರಿಶಂಕು ನಾಟಕದ ಮೂಲಕ ಮೂವತ್ತು ವರ್ಷಗಳ ಹಿಂದೆಯೇ ರಂಗಪ್ರವೇಶ. ಅಭಿನಯ, ನಿರ್ದೇಶನ, ನೇಪಥ್ಯವೆಂದು ನಲವತ್ತಕ್ಕೂ ಹೆಚ್ಚು ನಾಟಕಗಳಲ್ಲಿ ಸಕ್ರಿಯ ಪಾತ್ರ. ದೆಹಲಿಯ ರಂಗಮಹೋತ್ಸವ ಸೇರಿದಂತೆ ಮುಂಬಯಿ, ಕೋಲ್ಕತ್ತಾ ಲಕ್ನೋ, ದುರ್ಗಾಪುರ ಮುಂತಾದೆಡೆ ಯಶಸ್ವಿ ರಂಗ ನಾಟಕಗಳ ಪ್ರಯೋಗ.

ಜೈಸಿದ್ನಾಯ್ಕ, ಸಂಗ್ಯಾಬಾಳ್ಯ, ಸಾಕ್ಷಿಕಲ್ಲು, ತ್ರಿಶಂಕು, ಕತ್ತಲೆ ಬೆಳಕು, ಉತ್ತಮ ಪ್ರಭುತ್ವ ಈ ಎಲ್ಲ ನಾಟಕಗಳಿಗೆ ರಾಮಮೂರ್ತಿಯವರ ಉತ್ತಮ ನಿರ್ದೇಶನ. ಹರಕೆಯ ಕುರಿ, ಮಹಾಚೈತ್ರ, ಒಡಲಾಳ, ಸಂದರ್ಭ, ಸನ್ನಿವೇಶ, ಮಹಾಪ್ರಸ್ಥಾನ ಇನ್ನೂ ಕೆಲವು ನಾಟಕಗಳಲ್ಲಿ ಗಮನ ಸೆಳೆವ ಪಾತ್ರಗಳು. ಕೊಟ್ರೇಶಿ ಕನಸು, ಆರಂಭ, ಅಸಂಭವ.... ಹೀಗೆ ಹತ್ತಕ್ಕೂ ಹೆಚ್ಚು ಸಿನಿಮಾ, ಮೂವತ್ತಕ್ಕೂ ಹೆಚ್ಚು ಧಾರಾವಾಹಿಗಳಲ್ಲಿ ಪಾತ್ರ ನಿರ್ವಹಿಸಿದ ಹಿರಿಮೆ ಇವರದು.

---



## ವಿಜಯಾ ಜೇವೂರ

ಸಜ್ಜನಿಕೆ ತುಂಬಿತುಳುಕುವ ವಿನಯವಂತಿಕೆಯ ಹೆಣ್ಣುಮಗಳು. ಹುಟ್ಟೂರು ಬಿಜಾಪುರ. ತವರುಮನೆಯ ಹೆಸರು ಕಮಲಾ ಕಲಮದಾನಿ. ರಂಗಭೂಮಿ, ಸಿನಿಮಾ, ಕಿರುತೆರೆಗಳಲ್ಲಿ ವಿಜಯಾ ಜೇವೂರ ಅಂತಲೇ ಪ್ರಸಿದ್ಧಿ. ಧಾರವಾಡದ ಕೆ.ಇ. ಬೋರ್ಡ್ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕಿಯಾಗಿದ್ದರು. ಇದೇ ವರುಷ ನಿವೃತ್ತಿ ಹೊಂದಬೇಕಿತ್ತು. ರಂಗಬಾಹುಳ್ಯಕ್ಕಾಗಿ ಕಳೆದ ವರ್ಷವೇ ಸ್ವಯಂ ನಿವೃತ್ತಿ ಪಡೆದರು ವಿಜಯಾಬಾಯಿ.

ನಟನೆ, ನಿರ್ದೇಶನ, ಹಿನ್ನೆಲೆ ಸಂಗೀತ, ರಂಗಸಜ್ಜಿಕೆ, ಬೋಧನೆ.... ಹೀಗೆ ರಂಗಭೂಮಿಯಲ್ಲಿ ಅವರದು ಬಹುಮುಖಿ ಪಾತ್ರ. ಕರ್ನಾಟಕ ಕಲೋದ್ಧಾರ ಸಂಘದವರು ನಿಯಮಿತವಾಗಿ ನಡೆಸುವ ರವಿವಾರದ ನಾಟಕ ಶಾಲೆಯ ಖಾಯಂ ರಂಗಶಿಕ್ಷಕಿ. ಏನ ಬೇಡಲಿ ನಿನ್ನ ಬಳಿಗೆ ಬಂದು, ಹರಕೆಯ ಕುರಿ, ಮೃಚ್ಛಕಟಿಕ, ಚೋಮನದುಡಿ, ನಗೆಯು ಬರುತಿದೆ ಎನಗೆ, ಟೊಳ್ಳುಗಟ್ಟಿ, ಕಿತ್ತೂರು ಚೆನ್ನಮ್ಮ, ಗೋಕರ್ಣದ ಗೌಡಶಾನಿ, ನಾನೇ ಬಿಜ್ಜಳ.... ಹೀಗೆ ಅವರು ಅಭಿನಯಿಸಿದ ಸಾಲು ಸಾಲು ನಾಟಕಗಳಿವೆ. ಕಳೆದ ಎರಡು ದಶಕಗಳಲ್ಲಿ ಅರವತ್ತಕ್ಕೂ ಹೆಚ್ಚು ರೇಡಿಯೋ ನಾಟಕಗಳಲ್ಲಿ ಪಾಲ್ಗೊಂಡಿದ್ದಾರೆ. ದೂರದರ್ಶನದಲ್ಲಿ ಕುಂಟಲಪಿ, ಸಾಲಗಾರ್ತಿ, ವಿಹಂಗಮ, ಸೆನಲಿಸಾ ಮುಂತಾದ ನಾಟಕಗಳು ತೆರೆ ಕಂಡಿವೆ.

ಟಿ.ಎಸ್. ರಂಗಾ ನಿರ್ದೇಶನದ ಹಿಂದಿ ಚಿತ್ರ ಉದ್ಧವ್, ಗಿದ್, ಕನ್ನಡದ ಸಾವಿತ್ರಿ, ಟಿ.ಎಸ್. ನಾಗಾಭರಣರ ಸಂತ ಶಿಶುನಾಳ ಶರೀಫ, ಪುಣೇಕರರ ಗಂಗವ್ವ ಗಂಗಾಮಾಯಿ, ಹಪ್ಪೇಕರರ ಚಮತ್ಕಾರ ಚಲನಚಿತ್ರಗಳಲ್ಲಿ ಉತ್ತಮ ಅವಕಾಶ ಈ ಅಭಿನೇತ್ರಿಗೆ. ಪಾರಿಜಾತದ ಇಪ್ಪತ್ತಕ್ಕೂ ಹೆಚ್ಚು ರೂಪಕಗಳನ್ನು ಪ್ರಸ್ತುತ ಪಡಿಸಿದ್ದಾರೆ. ಸಾವಿತ್ರಿ ಚಿತ್ರಕ್ಕಾಗಿ ಜರ್ಮನ್ ಸರ್ಕಾರದ ಪ್ರಶಸ್ತಿ ಸೇರಿದಂತೆ ಹತ್ತಾರು ಸಂಘ ಸಂಸ್ಥೆಗಳು ಇವರನ್ನು ಪ್ರಶಸ್ತಿ ನೀಡಿ ಆದರಿಸಿವೆ.

---



## ಅಜ್ಜಂಪುರ ಕೃಷ್ಣಮೂರ್ತಿ

ಅಕಾಡೆಮಿಯೊಂದು ಮಾಡಬಹುದಾದ ರಂಗದಾಖಲೆ ಕಾರ್ಯವನ್ನು ಕಳೆದ ಮೂವತ್ತು ವರ್ಷಗಳಿಂದ ಅಜ್ಜಂಪುರದ ಕೃಷ್ಣಮೂರ್ತಿ ಅತ್ಯಂತ ಅಚ್ಚುಕಟ್ಟಾಗಿ ಮಾಡುತ್ತಾ ಬಂದಿದ್ದಾರೆ. ರಂಗಭೂಮಿ ಕುರಿತು ಪ್ರಕಟವಾಗಿರುವ ಸಹಸ್ರಾರು ಲೇಖನಗಳ ಸಂಗ್ರಹಣೆ ಮಾಡಿದ ದಾಖಲೆಯ ಕೇಂದ್ರ ಅವರದು. ನಾಟಕಗಳ ವಿಮರ್ಶೆ, ರಂಗಕರ್ಮಿಗಳ ಪರಿಚಯ, ರಂಗನೇಪಥ್ಯ, ರಂಗಸಂಘಟನೆ, ರಂಗತಂಡ ಹೀಗೆ ಎಲ್ಲ ಬಗೆಯ ಲೇಖನಗಳ ಸಂಗ್ರಹ ಅವರ ರಂಗ ಖಜಾನೆಯಲ್ಲಿವೆ. ಬೆಂಗಳೂರು ದಾವಣಗೆರೆ, ಧಾರವಾಡ, ಮೂಡಬಿದರೆ, ಸಾಣೇಹಳ್ಳಿ, ಹುನಗುಂದ ಹೀಗೆ ನಾನಾ ಕಡೆ ಈ ದಾಖಲಾತಿಗಳು ಪ್ರದರ್ಶನ ಕಂಡಿವೆ. ನಿರಂತರ ಬೆಳೆಯುವ ಪ್ರಕ್ರಿಯೆಯಿದು.

ಕೃಷ್ಣಮೂರ್ತಿ ಓರ್ವ ಉತ್ತಮ ಸಂಘಟಕ. ತರೀಕೆರೆ ತಾಲ್ಲೂಕಿನ ಅಜ್ಜಂಪುರದಲ್ಲಿ ಗೆಳೆಯರ ಬಳಗ ರಂಗತಂಡ ಕಟ್ಟಿಕೊಂಡು ಕಳೆದ ಇಪ್ಪತ್ತೈದು ವರ್ಷಗಳಿಂದ ಪ್ರತಿ ವರ್ಷವೂ ನವೆಂಬರ್ ತಿಂಗಳಿನಲ್ಲಿ ಹತ್ತು ದಿನಗಳ ಕಾಲ ನಾಟಕೋತ್ಸವವನ್ನು ಅರ್ಥಪೂರ್ಣವಾಗಿ ಮಾಡುತ್ತಾರೆ.

ಮೃದು ಮೌನದ ಕೃಷ್ಣಮೂರ್ತಿ ಎಲೆಮರೆಯ ಕಾಯಿ. ಒಂದು ವಾರ ಕಾಲ ರಂಗಕಮ್ಮಟ ನಡೆಸುವುದೇ ಕಷ್ಟವಿರುವಾಗ ಅವರು ತಿಂಗಳು, ಎರಡು ತಿಂಗಳ ಕಾಲ ಕಾರ್ಯಾಗಾರ ಮಾಡಿ ಹತ್ತಾರು ನಾಟಕ ಪ್ರದರ್ಶಿಸಿದ್ದಾರೆ. ಧ್ರುವರಾಜ ದೇಶಪಾಂಡೆ, ಇಕ್ಬಾಲ್ ಅಹಮದ್, ಪ್ರಮೋದ್ ಶಿಗ್ಗಾಂವ್, ಜಯಶೇಖರ ಮಡಪ್ಪಾಡಿ

ಮುಂತಾದವರನ್ನು ಕರೆಯಿಸಿ ಶಿಬಿರ ನಡೆಸಿದ್ದಾರೆ. ಮಧ್ಯಮವ್ಯಾಯೋಗ, ರೊಟ್ಟಿಋಣ, ಬಬ್ರುಗತ್ತಿ, ಜಗಜ್ಯೋತಿ ಬಸವೇಶ್ವರ, ಎಚ್ಚಮನಾಯಕ ಇವು ಕೃಷ್ಣಮೂರ್ತಿ ಅಭಿನಯಿಸಿದ ನಾಟಕಗಳು. ಹೆಜ್ಜಾಯಿಣ, ಒಂದು ಅರಣ್ಯ ಪ್ರಸಂಗ, ಮುಖವಾಡದವರು, ಅಪ್ಪ, ಕುಂಟಾ ಕುಂಟಾ ಕುರವತ್ತಿ ಇವು ಇವರು ನಿರ್ದೇಶಿಸಿದ ಮುಖ್ಯ ನಾಟಕಗಳು.

---



## ರಮೇಶ್ ಗೌಡ ಪಾಟೀಲ್

ಅಲ್ಲಾಸಾನಿ ಪೆದ್ದನ್ನನಂತಹ ಅನ್ಯಭಾಷಾ ಕಲಾವಿದರ ಶ್ರೀಪಾದಕ್ಕೆ ಬಂಗಾರದ ಕಡಗ ತೊಡಿಸಿ ಗೌರವಿಸಿದ್ದು ಬಳ್ಳಾರಿ ಜಿಲ್ಲೆ. ರಾಘವ, ಜೋಳದರಾಶಿ ದೊಡ್ಡನಗೌಡ, ಸುಭದ್ರಮ್ಮ ಮನ್ಸೂರ ಅವರಂತಹ ಸದ್ಯೋಜಾತ ರಂಗಪ್ರತಿಭೆಗಳನ್ನು ನೀಡಿದ್ದು ಬಳ್ಳಾರಿ. ಅಂತಹ ಊರಿನಿಂದ ಬಂದವರು ರಮೇಶಗೌಡ ಪಾಟೀಲ ನೋಡಲು ಥೇಟ್ ತೆಲುಗಿನ ನಾಟಕ ನಟನ ಫಿಜಿಕ್ಕು. ಮಾತುಗಳಿಗೂ ತೆಲುಗಿನ ತೆಳುಲೇಪನದ ಗಾಳಿಗಂಧ.

ರಮೇಶಗೌಡ ರಂಗಕಂಕಣ ಕಟ್ಟಿಸಿಕೊಂಡ ಚೊಚ್ಚಲ ನಾಟಕ ಹರಿದ್ರ ಕುಂಕುಮ. ಆಗಿನ್ನೂ ಆತನಿಗೆ ಹದಿಹರೆಯ. ಹವ್ಯಾಸಕ್ಕೆ ಆಡಿದ ವೃತ್ತಿ ನಾಟಕಗಳ ಲೆಕ್ಕ ಇಟ್ಟಿಲ್ಲ.

ಮಹಾರಥಿ ಕರ್ಣ, ರಕ್ತರಾತ್ರಿ, ಬಬ್ರುವಾಹನ, ಉತ್ತರಭೂಪ, ಕುರುಕ್ಷೇತ್ರ, ಹೇಮರೆಡ್ಡಿ ಮಲ್ಲಮ್ಮ, ಸತ್ಯಹರಿಶ್ಚಂದ್ರ ನಾಟಕಗಳ ಶ್ರೀಕೃಷ್ಣ, ಅರ್ಜುನ ವೇಮಣ್ಣ ಇನ್ನೂ ಮುಂತಾದ ಪಾತ್ರಗಳು ಗೌಡರಿಗೆ ಹೆಸರು ತಂದಿವೆ. ಕನ್ನಡ ರಂಗಭೂಮಿ ಮಾತ್ರವಲ್ಲದೆ ತೆಲುಗು ರಂಗಭೂಮಿಗೂ ಅವರ ರಂಗಸೇವೆಯ ಸಂದಾಯವಾಗಿದೆ.

ಸಂಘಟನೆಯಲ್ಲೂ ಅವರದು ದೊಡ್ಡ ಹೆಸರು. ನಾಲ್ಕಾರು ರಂಗಶಿಬಿರಗಳನ್ನು ನಡೆಸಿದ್ದಾರೆ. 40 ದಿನಗಳ ಕಾಲ ನೂರು ಮಂದಿ ಕಲಾವಿದರಿಂದ ವಿಜಯನಗರ ಸಾಮ್ರಾಜ್ಯ ಒಡ್ಡೋಲಗವನ್ನೇ ಸೃಷ್ಟಿಸಿ ಬಳ್ಳಾರಿ ಜನತೆಗೆ ಮನೋಜ್ಞವಾದ ರಂಗಸಿರಿ ಉಣಬಡಿಸಿದವರು ಪಾಟೀಲ. ಇವರ ಮನೆ ರಂಗಭೂಮಿ ಕಲಾವಿದರ ತವರುಮನೆ. ಅಲ್ಲಿ ಅಂತಹದೊಂದು ಆತ್ಮೀಯ ಆತಿಥ್ಯ. ಕಳೆದ ಅವಧಿಗೆ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿ ಸಹೃದಯತೆ ಮೆರೆದಿರುವ ರಮೇಶಗೌಡ ಬೆಳ್ಳಿನಾಗ, ಹತ್ಯಾಕಾಂಡ ಸಿನಿಮಾಗಳಲ್ಲೂ ನಟಿಸಿದ್ದಾರೆ. ಕೆಲವು ಟೆಲಿಫಿಲಂಗಳಲ್ಲೂ ಅಭಿನಯಿಸಿ ಪ್ರೇಕ್ಷಕರ ಪ್ರೀತಿಗೆ ಪಾತ್ರರಾಗಿದ್ದಾರೆ. ವ್ಯಾಪಾರ ವೃತ್ತಿಯ ಪಾಟೀಲ ಅರವತ್ತು ಸಂವತ್ಸರಗಳತ್ತ ಹೆಜ್ಜೆ ಇಡುತ್ತಿದ್ದಾರೆ.

---



## ನಾಟಕಮನೆ ಮಹಾಲಿಂಗು

ಅವರು ಬರೀ ಮಹಾಲಿಂಗು ಅಲ್ಲ, ನಾಟಕಮನೆ ಮಹಾಲಿಂಗು. ತುಮಕೂರು ಛಾಸಲೆ ಹಳ್ಳಿ ಹಳ್ಳಿಗಳಲ್ಲಿ ಮಹಾಲಿಂಗು ಹೆಸರು ಮನೆಮಾತು. ರಂಗಬದುಕಿನ ಸಂಧ್ಯಾಕಾಲದಲ್ಲಿ ಕಲಾವಿದರ ಬದುಕು ಬರ್ಬರ. ಅಂತಹ ಅಸಹಾಯಕರ ಆಪದ್ಬಾಂಧವ ಮಹಾಲಿಂಗು. ಮೊಗದ ತುಂಬಾ ನಿಷ್ಕಳಂಕ ನಗುವು ತುಂಬಿಕೊಂಡ ಆತ ಮಾತನಾಡಿಸಿದರೆ ಸಾಕು ಸಣ್ಣದೊಂದು ಸಮಾಧಾನ. ದೀಪ ಹಚ್ಚಿ ಹುಡುಕಿದರೂ ಸಿಗಲಿಕ್ಕಿಲ್ಲ ಆತನಲ್ಲಿ ಬಿಗುಮಾನ. ನಟ, ನಿರ್ದೇಶಕ, ನೇಪಥ್ಯ ಕಲಾವಿದ, ಸಂಘಟಕ, ನಾಟಕಕಾರ.... ಹೀಗೆ ರಂಗಭೂಮಿಯ ಈ ಎಲ್ಲರ ನಡುವೆ ಪ್ರೀತಿ, ಅಂತಃಕರಣದ 'ರಂಗಸೇತುವೆ' ಕಟ್ಟುವಲ್ಲಿ ನಮ್ಮ ಮಹಾಲಿಂಗು ಮಧುರ ಹೆಸರು. ಕಲಾವಿದರ ಸುನೀತಪ್ರೀತಿಯಂತಿರುವ ಈತ ಅನೇಕರಿಗೆ ನಿಸ್ಪೃಹ ನೆರವು ನೀಡಿದ್ದಾರೆ.

ಹುಟ್ಟೂರು ತುಮಕೂರಿಗೆ ಸೇರಿದ ಬಾಣಾವರ. ದಿ॥ ಗಂಗಮ್ಮ – ಗಂಗಣ್ಣ ಇವರ ಅಮ್ಮ, ಅಪ್ಪ. ಬದುಕಿನ ಐವತ್ತು ಸಂವತ್ಸರಗಳಲ್ಲಿ ಮುಕ್ಕಾಲುಪಾಲು ರಂಗಭೂಮಿಗೇ ಮುಡಿಪು. ದಿ॥ ಉದಯಕುಮಾರ್ ಕಟ್ಟಿಹೋದ ಉದಯ ಕಲಾನಿಕೇತನದ ಸ್ಥಾಪಕ ಕಾರ್ಯದರ್ಶಿಯಾಗಿ, ಗ್ರಾಮೀಣ ರಂಗಕರ್ಮಿಗಳ ಜೀವಾಳವಾಗಿ ದುಡಿದದ್ದೇ ಆತನಿಗೆ ಇದುವರೆಗೆ ಸಿಕ್ಕ ಸರ್ಟಿಫಿಕೇಟು. ಈ ಸಹೃದಯ ಸಂಘಟಕ ಅಭಿಮಾನದ ರಂಗನಟ. ಜೆಂದುಳ್ಳ ಚೆಲುವೆ, ಮದುವೆ ಮಾರ್ಕೆಟ್, ಸೇವಂತಿ ಪ್ರಸಂಗ, ಹಯವದನ, ಹೆಜ್ಜೆಗೆಜ್ಜೆ, ರಮಾನಂದರ ಬೀದಿನಾಟಕಗಳ ಮುಖೇನ ಅವರ ಅಭಿನಯ ಜನಮನ್ನಣೆ ಪಡೆದಿದೆ.

---



## ಬಿ.ಎಸ್. ಗವಿಮಠ

ರಂಗಭೂಮಿಯ ಮೇಲೆ ಮರೆಯಲಾರದ ಪ್ರೀತಿ ಇಟ್ಟುಕೊಂಡವರು ಗವಿಮಠ. ವೃತ್ತಿಯಿಂದ ಪ್ರಾಧ್ಯಾಪಕರಾಗಿ ಇದೀಗ ಬೆಳಗಾವಿಯ ಕೆ.ಎಲ್.ಇ. ಸಂಸ್ಥೆಯ ಪ್ರಸಾರಂಗದ ನಿರ್ದೇಶಕರಾಗಿದ್ದಾರೆ.

ಅವರೊಬ್ಬ ಉತ್ತಮ ರಂಗಸಂಘಟಕರು. ಅಪರೂಪವೆನ್ನುವಂತೆ ಹತ್ತು ವರುಷಗಳ ಹಿಂದೆ ರಂಗಭೂಮಿ ಕಲಾವಿದರ ಸಂಘ ಸ್ಥಾಪಿಸಿದ ಕೀರ್ತಿಗೆ ಭಾಜನರು. ಅದಕ್ಕೆ ಹತ್ತು ವರ್ಷ ಹಿಂದೆ ಪ್ರತಿಭಾ ಹವ್ಯಾಸಿ ಕಲಾವಿದರ ತಂಡ ಹುಟ್ಟುಹಾಕಿದ ಕೀರ್ತಿ ಅವರದು. 1995ರ ಅವಧಿಯಲ್ಲಿ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿ ಬೆಳಗಾವಿ ಪ್ರಾಂತ್ಯದಲ್ಲಿ ನಾಟಕೋತ್ಸವ, ರಂಗ ತರಬೇತಿ ಶಿಬಿರ, ರಂಗ ಸಂಗೀತ, ವಿಚಾರ ಸಂಕಿರಣ ಕಾರ್ಯಕ್ರಮ ನಡೆಸಿದ್ದಾರೆ.

ನಾಟ್ಯಭೂಷಣ, ಕಲಾವೈಭವ, ಮರೆಯಲಾಗದ ನಾಟಕಕಾರ ಚಿಕ್ಕೋಡಿ ಶಿವಲಿಂಗಸ್ವಾಮಿಗಳು ಈ ರಂಗಕೃತಿಗಳನ್ನು ಸಂಪಾದಿಸಿದ್ದಾರೆ.

---



## ಬಸವರಾಜ್ ಪಂಚಗಲ್

ವೃತ್ತಿರಂಗ ವಲಯದಲ್ಲಿ ಪಂಚಗಲ್ ಕವಿಗಳೆಂದೇ ಪ್ರಸಿದ್ಧವಾಗಿರುವ ಬಸವರಾಜ ಪಂಚಗಲ್ ಅವರದು ಕಲಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕಿನ ಕೊಡೇಕಲ್ ಎಂಬ ಐತಿಹ್ಯದ ಊರು. ಕಾಲಜ್ಞಾನ ವಚನಕಾರ ಬಸವಣ್ಣನವರ ಈ ಊರು ನಗರನಾಡಿನ ಆಗಸಿಬಾಗಿಲು.

ಹಾಗೆ ನೋಡಿದರೆ ಪಂಚಗಲ್ ಬಸವರಾಜ ವೃತ್ತಿರಂಗದ ಅಚ್ಚುಕಟ್ಟಾದ ನಾಯಕನಟ. ಆದರೆ ಬಸವರಾಜನಿಗೆ ತನ್ನನ್ನು ಕವಿಯೆಂದೇ ಗುರುತಿಸಿಕೊಳ್ಳುವ ಉಮೇದು. ವೃತ್ತಿರಂಗಭೂಮಿಯಲ್ಲಿ ಕವಿಗಳೆಂದರೆ ನಾಟಕಕಾರರು. ಇವರು ಒಂದು ಡಜನ್ ನಾಟಕ ಬರೆದಿದ್ದಾರೆ. ಅರ್ಧ ಡಜನ್ ನಾಟಕಗಳು ರಂಗಪ್ರಯೋಗ ಕಂಡಿವೆ. ಅವರು ಎಷ್ಟು ಮುದ್ದಾಗಿ ಬರೆಯುತ್ತಾರೆಂದರೆ ಆ ಮೋಹಕ ಅಕ್ಷರಗಳನ್ನು ಯಥಾವತ್ತಾಗಿ ಮುದ್ರಿಸಿಬಿಡಬೇಕೆನ್ನುವಷ್ಟು. ಗುಡಗುಂಟಿ ಅಮರೇಶ್ವರ ಕಂಪನಿ, ರಾಮರಾವ್ ದೇಸಾಯಿ ಕಂಪನಿ, ಚಿತ್ತರಗಿ ಕಂಪನಿ, ಮಂಡಲಗಿರಿ ಕಂಪನಿಗಳಲ್ಲಿ ದುಡಿದು, ಈಗ ಸದ್ಯಕ್ಕೆ ಮಾಲತಿ ಸುಧೀರ್ ಕಂಪನಿಯಲ್ಲಿ ರಂಗ ನೆಲೆ.

ಅಲ್ಲಮಪ್ರಭು ಕುರಿತು ನಾಟಕಗಳೇ ಅಪರೂಪ. ಅಂತಹ ಕೊರತೆ ನೀಗಿಸಿ ನಾಟಕ ಬರೆದು ಅವರೇ ಅಲ್ಲಮನ ಪಾತ್ರ ಮಾಡಿ ಸೈ ಅನಿಸಿಕೊಂಡಿದ್ದಾರೆ.

ಚಿನ್ನದ ಗೊಂಬೆ ನಾಟಕದ ಸೋಮಶೇಖರ, ಎಚ್ಚರ ತಂಗಿ ಎಚ್ಚ ನಾಟಕದ ಡಾ. ಗುಣಶೇಖರ್, ಗೌಡ್ರಗದ್ಲ ನಾಟಕದ ಬಸವರಾಜ, ಕುರುಕ್ಷೇತ್ರದ ಶ್ರೀಕೃಷ್ಣ, ಧರ್ಮಾಧಿಕಾರಿ ನಾಟಕದ ದೇಶಮುಖ... ಹೀಗೆ ನಾಯಕ ನಟನ ಪಟ್ಟಿ ದೊಡ್ಡದು. ವೃತ್ತಿ ರಂಗಭೂಮಿಯ ವಿನೂತನ ಆವಿಷ್ಕಾರಗಳ ಹತ್ತು ಹಲವು ಕನಸು ಹೊತ್ತಿರುವ ಕವಿ ಪಂಜಗಲ್ ವಿಚಾರ ಪ್ರಚೋದಕ ರಂಗಕರ್ಮಿ. ಅವರನ್ನು ಹತ್ತಾರು ಸಂಘ ಸಂಸ್ಥೆಗಳು ಸತ್ಕರಿಸಿವೆ.



## ಶಂಕರಗೌಡ ದತ್ತಾತ್ರೇಯ ಪಾಟೀಲ್

ಈ ಬಾರಿಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರಲ್ಲೇ ಅತ್ಯಂತ ಹಿರಿಯರು ಶಂಕರಗೌಡ. ಅವರಿಗೀಗ ಎಂಬತ್ತಾರು (21–10–1920). ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ಅಂಕಲಿ ಎಂಬ ಊರಿನವರು. ಅಂದಿನ ಮೈಸೂರು ಸರಕಾರದಲ್ಲಿ ಕೆಲಕಾಲ ಬಸ್ ಕಂಡಕ್ಟರ್ ನೌಕರಿ ಮಾಡಿದ ಅವರಿಗೆ ರಂಗಭೂಮಿಯ ಸೆಳೆತ ನೌಕರಿ ಬಿಡಿಸಿತು. ಸ್ವಾತಂತ್ರ್ಯ ಪೂರ್ವದಲ್ಲೇ (1946) ಸಿದ್ದೇಶ್ವರ ನಾಟ್ಯ ಸಂಘ ಎಂಬ ಕಂಪನಿ ಕಟ್ಟಿ ಆರು ವರ್ಷ ನಡೆಸಿದರು. ಅವರ ಪತ್ನಿ ಹೀರಾಬಾಯಿ ಪಾಟೀಲ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ರಂಗನಟಿ.

ಗೋಕಾಕ ಬಸವಣ್ಣೆಪ್ಪನವರ ಕಂಪನಿ, ಏಣಗಿ ಬಾಳಪ್ಪನವರ ಕಂಪನಿಯಲ್ಲಿ ತಮ್ಮ ಬಹುಪಾಲು ರಂಗಬದುಕನ್ನು ಬಾಳಿದ್ದಾರೆ. ವಿಶೇಷವಾಗಿ ಮಹಾರಾಷ್ಟ್ರದ ಅನೇಕ ಊರುಗಳಲ್ಲಿ ಕನ್ನಡದ ನಾಟಕಗಳನ್ನು ಆಡಿದ ಖ್ಯಾತಿ. ಮಾವ ಬಂದ್ನಪ್ಪೋ ಮಾವ ಆಗ ದೊಡ್ಡ ಹೆಸರು ಮಾಡಿದ ನಾಟಕ. ಪಣಜಿ, ಗೋವಾ, ಪಂಢರಾಪುರ, ಸೊಲ್ಲಾಪುರ, ಸಾಂಗಲಿ ಮುಂತಾದ ಕಡೆ ನಾಟಕಗಳ ಜಯಭೇರಿ. ಸಂಪೂರ್ಣ ರಾಮಾಯಣ, ಗೋರಾಕುಂಬಾರ, ಅಕ್ಷಯಾಂಬರ, ಜೈ ಪದ್ಮಾವತಿ ಮಾತಾ.... ಹೀಗೆ ಐತಿಹಾಸಿಕ, ಪೌರಾಣಿಕ ನಾಟಕಗಳಲ್ಲಿ ವೈವಿಧ್ಯಮಯ ಪಾತ್ರ ಮಾಡಿದ ಕೀರ್ತಿ ಶಂಕರಗೌಡ ಪವರದು. ಅವರ ರಂಗದಾಂಪತ್ಯ ಬಣ್ಣದ ಬದುಕಲ್ಲೇ ಹಣ್ಣಾದದ್ದು.



## ಬಿ. ಜಯ

ಬಣ್ಣದ ಬದುಕಿಗೂ ಬಿ. ಜಯ ಅವರಿಗೂ ಅರ್ಧ ಶತಮಾನದ ರಂಗಸಂಬಂಧ. ಬಾಲನಟಿಯಾಗಿ ಚಾಮುಂಡೇಶ್ವರಿ ನಾಟಕ ಮಂಡಳಿಯಲ್ಲಿ ರಂಗಪ್ರವೇಶ. ಜಿ.ವಿ. ಅಯ್ಯರ್, ಡಾ॥ ರಾಜ್‌ಕುಮಾರ್, ನರಸಿಂಹರಾಜು, ಬಾಲಕೃಷ್ಣ ಈ ಎಲ್ಲಾ ರಂಗನಟರೊಂದಿಗೆ ಹಾಸ್ಯಪಾತ್ರ ಮಾಡಿದ ರಂಗಾನುಭವ. ಪಂಡರಿಬಾಯಿ ಅವರ ಕೃಷ್ಣ ಚೈತನ್ಯ ನಾಟಕ ಸಭಾ, ಕಲ್ಯಾಣಕುಮಾರ್ ಹಾಗೂ ಉದಯ ಕುಮಾರ್ ಜೊತೆಗೆ ಅಭಿನಯಿಸಿದ ರಂಗಪ್ರೀತಿ ಅವರದು.

ಕುಮಾರೇಶ್ವರ ನಾಟಕ ಸಂಘ ಎಂಬ ಕಂಪನಿ ಕಟ್ಟಿ ಅದನ್ನು ಹನ್ನೊಂದು ವರ್ಷಗಳ ಕಾಲ ನಡೆಸಿಕೊಂಡು ಬಂದ ಸಾಹಸಿ ಈ ಹೆಣ್ಣು ಮಗಳು. ಆಗ ಅವರ ಹೆಸರಾಂತ ನಾಟಕಗಳೆಂದರೆ – ಮಹದೇಶ್ವರ ಮಹಾತ್ಮೆ ಹಾಗೂ ಚೆನ್ನಪ್ಪ ಚೆನ್ನಗೌಡ.

ಚಲನಚಿತ್ರರಂಗದಲ್ಲಿ ಅವರದು ದೊಡ್ಡ ಹೆಸರು. ಆರಂಭದ ದಿನಗಳಲ್ಲಿ ಚಲನಚಿತ್ರಗಳು ವೃತ್ತಿನಾಟಕದ ಪರಿಷ್ಕೃತ ರೂಪಗಳಂತಿದ್ದವು. ಸುಬ್ಬಯ್ಯನಾಯ್ಡು ಅವರ ಭಕ್ತ ಪ್ರಹ್ಲಾದ (1956) ಚಿತ್ರದಲ್ಲಿ ನಾಗರಾಜನ ಪಾತ್ರ ವಹಿಸಿದ್ದಾರೆ. ಇದುವರೆಗೆ ಇನ್ನೂರಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯ. ಬೆಟ್ಟದ ಹುಲಿ, ನ್ಯಾಯವೇ ದೇವರು ಚಿತ್ರದ ಉತ್ತಮ ಹಾಸ್ಯ

ನಟಿ ಪ್ರಶಸ್ತಿ, ಇತ್ತೀಚೆಗೆ ಗೌಡ್ರು ಚಿತ್ರಕ್ಕೆ ಶ್ರೇಷ್ಠ ಪೋಷಕ ನಟಿ ಪ್ರಶಸ್ತಿ ದೊರಕಿವೆ. ಪಾ.ಪ. ಪಾಂಡು ಇನ್ನಿತರ ನವಿರು ಹಾಸ್ಯದ ಟಿ.ವಿ. ಧಾರಾವಾಹಿಗಳಲ್ಲಿ ಚುರುಕಾದ ಪಾತ್ರ ಮಾಡಿ ಅಪಾರ ಜನಪ್ರಿಯತೆ ಗಳಿಸಿದ್ದಾರೆ.

---



## ಬಿ.ಎಚ್. ನಾಗಲೀಕರ

ಬೂದೆಪ್ಪ ತಂದೆ ಹಂಪಣ್ಣ ನಾಗಲೀಕರ ಸಾಕೀನ ಗಬ್ಬೂರು, ತಾಲ್ಲೂಕು ರಾಯಚೂರು. ಇಂತಹ ಅಂಚೆ ವಿಳಾಸದ ಬೂದೆಪ್ಪ ಮಾಸ್ತರ ರಾಯಚೂರು ಪರಿಸರದ ಜನಪ್ರಿಯ ಹಾರ್ಮೋನಿಯಂ ಮಾಸ್ತರ. ತಮ್ಮನ್ನು ಅಮೆಚೂರ್ ನಾಟಕಗಳ ರಂಗಕರ್ಮಿಗಳೆಂದು ಗುರುತಿಸಿಕೊಂಡ ಅವರ ವೃತ್ತಿಯೇ 'ಪೆಟಿಗೆ' ನುಡಿಸುವುದು, ನಾಟಕ ದಿಗ್ದರ್ಶನ ಮಾಡುವುದು, ಒಂದು ಜನಪ್ರಿಯ ರಂಗಪ್ರಯೋಗ ಸಿದ್ಧಮಾಡಿಕೊಡುವುದು. ಇಂತಹ ರಂಗಕ್ರಿಯೆ ಕಂಪನಿ ನಾಟಕಗಳದ್ದೇ ಆಗಿರುತ್ತದೆ. ಆದರೂ ಅವರು ಅಮೆಚೂರ್ ಹೆಸರಿನಿಂದ ಕರೆದುಕೊಳ್ಳಲು ಸ್ವಂತ ಕಂಪನಿ ಕಟ್ಟಿಕೊಂಡು ಆಡುತ್ತಿಲ್ಲವೆಂಬ ಕಾರಣ.

ಮೊಗಲಾಯಿ ನೆಲದ ಈ ಪ್ರತಿಭೆ ಈಗ್ಗೆ ನಲವತ್ತು ವರ್ಷಗಳಷ್ಟು ಹಿಂದೆಯೇ (1966) ನಿಷ್ಕಳಂಕ ಎಂಬ ನಾಟಕ ಬರೆದು ಅದನ್ನು ರಂಗಸ್ಥಳಕ್ಕೆ ಆಗಲೇ ತಂದವರು. ಸಾಮಾಜಿಕ, ಪೌರಾಣಿಕ, ಐತಿಹಾಸಿಕ ಹೀಗೆ ಗ್ರಾಮೀಣ ರಂಗಭೂಮಿಯ ಸಮೃದ್ಧಿಗೆ ಶ್ರಮಿಸುತ್ತಿದ್ದಾರೆ ಬೂದೆಪ್ಪ ಮಾಸ್ತರ. ಗುಲಬರ್ಗಾ, ರಾಯಚೂರು ಭಾಗಶಃ ಚಿತ್ರದುರ್ಗ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಅವರ ರಂಗಸೇವೆ ಸಂದಾಯವಾಗಿದೆ.

---



## ಮೆಹಬೂಬ ಎಂ. ಸನದಿ

ಇವತ್ತಿಗೂ ಹಳ್ಳಿಗಳಲ್ಲಿ ಕಂಪನಿ ಶೈಲಿಯ ವೃತ್ತಿ ನಾಟಕಗಳೇ ಯಥೇಚ್ಛ ಪ್ರದರ್ಶನಗೊಳ್ಳುತ್ತವೆ. ಅಂತಹ ನಾಟಕಗಳ ರೂವಾರಿಗಳೆಂದರೆ ಹಳ್ಳಿಗಾಡಿನ ಹಾರ್ಮೋನಿಯಂ ಮಾಸ್ತರ. ಸಾಂಸ್ಕೃತಿಕ ಲೋಕದ ನಿರ್ಲಕ್ಷಿತ ಪ್ರತಿಭೆಗಳವರು. ಅಂಥವರಲ್ಲೊಬ್ಬರು ಈ ನಮ್ಮ ಮೆಹಬೂಬ ಸನದಿ ಮಾಸ್ತರ. 'ಪಾರಿಜಾತ' ಎಂಬ ಅಭಿಜಾತ ರಂಗಕಲೆಯ ತವರುಮನೆಯಾದ ಬಾಗಲಕೋಟೆಯ ಮಹಾಲಿಂಗಪುರದವರು ಈ ಮಾಸ್ತರ. ರಂಗಭೂಮಿಯ ಪ್ರಥಮ ರಂಗನಟಿಯೆನಿಸಿದ ಕೌಜಲಗಿ ನಿಂಗಮ್ಮನವರು ಸ್ಥಾಪಿಸಿದ ಬಯಲಾಟ ಕಂಪನಿಯಲ್ಲಿ ಬಾಲಗೋಪಾಲ ಹಾಗೂ ನಾರದ ಪಾತ್ರದೊಂದಿಗೆ ರಂಗಪ್ರವೇಶ ಮಾಡಿದ ಮಾಸ್ತರ ರಂಗಸಂಗೀತದಲ್ಲಿ ಗುರುತಿಸಿಕೊಂಡರು.

ಆರಂಭಕ್ಕೆ ಹುನ್ನೂರಿನ ಗುರುಪಾದ ಮಾಸ್ತರ ಬಳಿ ಹಾರ್ಮೋನಿಯಂ ಶಿಕ್ಷಣ. ಅನಂತರ ಸಂಗನಬಸಯ್ಯ ಹಿರೇಮಠ ಅವರಲ್ಲಿ ಸಂಗೀತ ಶಿಕ್ಷಣ. ಇದೆಲ್ಲವೂ ಗಾವಟಿ ಶಿಕ್ಷಣ. ಆದರೆ ಗ್ರಾಮೀಣ ನಾಟಕಗಳಿಗೆ ಸಮೃದ್ಧವಾದ ಸಂಗೀತ ನೀಡುವಲ್ಲಿ ಕರತಲಾಮಲಕ ಮಾಡಿಕೊಂಡವರು ಮೆಹಬೂಬ ಮಾಸ್ತರ.

ಬಿಜಾಪುರ, ಬಾಗಲಕೋಟೆ, ಬೆಳಗಾವಿ ಭಾಗದ ಹಳ್ಳಿಗಳ ನಾಟಕಗಳಲ್ಲಿ ಅವರಿಗೆ ಅಪಾರ ಬೇಡಿಕೆ. ಕುರುಕ್ಷೇತ್ರ, ಜಗಜ್ಯೋತಿ ಬಸವೇಶ್ವರ, ಹೇಮರೆಡ್ಡಿ ಮಲ್ಲಮ್ಮ, ಸಂಗೊಳ್ಳಿರಾಯಣ್ಣ, ಜಂಗಮನ ಜೋಳಿಗೆ, ಬಂಜೆ ತೊಟ್ಟಿಲು, ಬದುಕು ಬಂಗಾರವಾಯ್ತು, ಚಿನ್ನದ ಗೊಂಬೆ.... ಹೀಗೆ ಏನಿಲ್ಲವೆಂದರೂ ಅರ್ಧ ಸಾವಿರಕ್ಕೂ ಹೆಚ್ಚು ಪ್ರಯೋಗಗಳಿಗೆ ಹಾರ್ಮೋನಿಯಂ ನುಡಿಸಿ ನಾಟಕ ನಿರ್ದೇಶಿಸಿದ ಜವಾರಿ ಅನುಭವ ಅವರದು.

---



## ಆರ್. ಗುರುಮೂರ್ತಿ

ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕಿನ ಕಿರಗಸೂರು ಗ್ರಾಮದ ರಾಚಯ್ಯ ಮತ್ತು ಲಕ್ಷ್ಮಮ್ಮನವರ ಮೂರನೇ ಮಗ ಗುರುಮೂರ್ತಿ. ತಂದೆ ಪೌರಾಣಿಕ ನಾಟಕಗಳ ಸಂಗೀತ ಮಾಸ್ತರ. ಇವರ ಅಣ್ಣ ರಾಜಪ್ಪ ಕೂಡಾ ಸಂಗೀತ ವಿದ್ವಾನ್. ಹೀಗಾಗಿ ರಂಗಭೂಮಿಯ ಮೊದಲ ಪಾಠಶಾಲೆಯೇ ಇವರ ಮನೆ. ಸಹಜವಾಗಿ ಬಾಲ್ಯದಲ್ಲೇ ಬಣ್ಣದ ಬದುಕಿನ ಒಡನಾಟ.

ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಸಣ್ಣದೊಂದು ನೌಕರಿ ಸೇರಿದ ಮೇಲೂ ರಂಗ ಬದುಕು ಸೊರಗಲಿಲ್ಲ. ಬೆಂಗಳೂರಿನ ಹತ್ತಾರು ಪೌರಾಣಿಕ ರಂಗತಂಡಗಳೊಂದಿಗೆ ಅವಿನಾಭಾವ ಸಂಬಂಧ. ಪೌರಾಣಿಕ ನಾಟಕಗಳಿಗೆ ಹಾರ್ಮೋನಿಯಂ ನುಡಿಸುವಲ್ಲಿ ಗುರುಮೂರ್ತಿಯವರದು ಗುರುತರ ಪ್ರತಿಭೆ. ಇದುವರೆಗೆ ನೂರೈವತ್ತಕ್ಕೂ ಹೆಚ್ಚು ನಾಟಕಗಳನ್ನು ಕಲಿಸಿ ಆಡಿಸಿದ ಹೆಗ್ಗಳಿಕೆ ಅವರದು.

ಬೆಂಗಳೂರು ಮಾತ್ರವಲ್ಲದೇ ಗ್ರಾಮಾಂತರ ಪ್ರದೇಶಗಳಲ್ಲೂ ಗುರುಮೂರ್ತಿಯವರ ರಂಗ ಕೈಂಕರ್ಯದ ಕ್ಷಿತಿಜ ವಿಸ್ತಾರಗೊಂಡಿದೆ. ಕುರುಕ್ಷೇತ್ರ, ಗಿರಿಜಾ ಕಲ್ಯಾಣ, ದಕ್ಷಯಜ್ಞ, ರಾಜಸೂಯಯಾಗ, ಶ್ರೀ ಕೃಷ್ಣಗಾರುಡಿ.... ಹೀಗೆ ಅವರು ದಿಗ್ದರ್ಶಿಸಿದ ನಾಟಕಗಳದ್ದು ಸರಮಾಲೆ. ಸತ್ಯಶ್ರೀ ಕಲಾವೃಂದ ಎಂಬ ಕಲಾಸಂಸ್ಥೆಯ ಸಂಸ್ಥಾಪಕರಾದ ಅವರು ಸೀದಾ ಮತ್ತು ಸಾದಾ ರಂಗವ್ಯಕ್ತಿತ್ವವುಳ್ಳವರು.



## ಮನೋಹರ ಕುಲಕರ್ಣಿ

ಹುಬ್ಬಳ್ಳಿಯ ಮೋಹವೇ ಅಂತಹದ್ದು. ಬಳುಕುವ ಬೇಸಿಗೆ. ಜೀವಪ್ರೀತಿಯ ಜವಾರಿ ಮಾತು, ನಾಟಕದ ಕಕುಲಾತಿ.... ಹೀಗೆ ಅದರ ಹತ್ತು ಹಲವು ಹೂಬಳ್ಳಿಯಂತಹ ಕಳ್ಳುಬಳ್ಳಿ ಸಂಬಂಧಗಳಿಂದಾಗಿಯೇ ದೂರದ ಹೆಗ್ಗಡದೇವನಕೋಟೆಯ ಮನೋಹರ ಅವರು ಮನೋಹರ ಕುಲಕರ್ಣಿಯೆಂದು ಗುರುತಿಸಿಕೊಂಡರು. ಇದು ಅವರ ರಂಗಭೂಮಿ ಕುರಿತಾದ ಕುತೂಹಲಕಾರಿ ಕಥನ.

ಬಾಲ್ಯದಲ್ಲೇ 'ತಾಯಿನಾಡು' ಪತ್ರಿಕೆಯಿಂದಲೇ 'ಭೇಷ್' ಅನಿಸಿಕೊಂಡ ರಂಗನಂಟು. 'ವಿಜಯಮಾಲಾ'ಕ್ಕೆ ಬೆಚ್ಚನೆಯ ಕಥೆ ಬರೆದ ನೆನಪು. ಆಗಲೇ ಬಿ.ಎಸ್. ಕೇಶವರಾವ್, ಸಂಪತ್, ಎಂ.ಪಿ. ಶಂಕರ್, ಕುಂದಾನಿ ಸತ್ಯ ಈ ಎಲ್ಲ ಸಾಂಸ್ಕೃತಿಕ ವ್ಯಕ್ತಿತ್ವಗಳ ಒಡನಾಟ.

ಸಾಂಗ್ಲಿಯಲ್ಲಿ ಇಂಜಿನಿಯರಾಗಿದ್ದಾಗ ಮರಾಠಿ ರಂಗಭೂಮಿಯ ದಟ್ಟ ಪರಿಚಯ. ರಾಜಾ ಪರಾಂಜಪೆ, ಕಾಶೀನಾಥ ಘಾಣೇಕರ ಅಂಥವರ ರಂಗಸಖ್ಯ. ಕನ್ನಡ, ಮರಾಠಿ ರಂಗದ ಆದಾನ–ಪ್ರದಾನ. ನಂತರ ಹುಬ್ಬಳ್ಳಿಗೆ ವಸಲೆ ಬಂದ ಈ ರಂಗಹಕ್ಕಿ ಅಲ್ಲಿಯೂ ಮಹಾರಾಷ್ಟ್ರ ಮಂಡಳಕ್ಕೆ ಸೇರಿ ಪು.ಲ. ದೇಶಪಾಂಡೆಯವರ ಅನೇಕ ನಾಟಕಗಳಲ್ಲಿ ಪಾತ್ರ ವಹಿಸಿದರು. ಬೆಂಗಳೂರಿನ ರಂಗಸಂಪದ ಮೂಲಕ ಅನೇಕ ಹೊಸ ಅಲೆಯ ನಾಟಕಗಳಲ್ಲಿ ವೈವಿಧ್ಯಮಯ ಪಾತ್ರ,

ಕಾರವಾರ, ಕಲಬುರ್ಗಿ, ಧಾರವಾಡ, ದಾವಣಗೆರೆ ಈ ಎಲ್ಲ ಪ್ರಾದೇಶಿಕ ಕನ್ನಡದ ಸೊಗಡನ್ನು ಮನೋಹರ ತಮ್ಮ ಜವಾರಿ ಕಂಠದಲ್ಲಿ ಸೊಗಸಾಗಿಸುತ್ತಾರೆ.



## ಭರತ್‌ಕುಮಾರ್ ಪೊಲಿಪು

(ಕೆ. ಹಿರಣ್ಣಯ್ಯ ಶತಮಾನೋತ್ಸವ ದತ್ತಿ ಪುರಸ್ಕಾರ)

ಇವರು ಹೊರ ರಾಜ್ಯ ರಂಗಕರ್ಮಿ, ಮುಂಬಯಿಯಲ್ಲಿ ಬ್ಯಾಂಕ್ ಅಧಿಕಾರಿ. ಮೂಲತಃ ಇವರದು ಉಡುಪಿ ಜಿಲ್ಲೆಯ ಕಾಪು ಸಮೀಪದ ಪೊಲಿಪು ಎಂಬ ಪುಟ್ಟ ಹಳ್ಳಿ. ತಂದೆ ದೇವಪುತ್ರನ್, ತಾಯಿ ಕಮಲಾಪುತ್ರನ್. ಓದಿದ್ದು ಕನ್ನಡ ಎಂ.ಎ.

ಆರಂಭಕ್ಕೆ ಮಂಗಳೂರಿನ 'ಅಭಿವ್ಯಕ್ತ' ಸಂಸ್ಥೆಯಲ್ಲಿ ರಂಗತರಬೇತಿ ಶಿಬಿರ, ಸಾಹಿತ್ಯ ಅಕಾಡೆಮಿ ಏರ್ಪಡಿಸುವ ನಾಟಕ ರಚನಾ ಶಿಬಿರ ಹಾಗೂ ಪ್ರಸನ್ನ ನಿರ್ದೇಶನದ ನಾಟಕ ರಚನಾ ಶಿಬಿರ(ಕೊಂಡಜ್ಜಿ)ಗಳಲ್ಲಿ ಸಕ್ರಿಯ ಪಾಲು. ಕಾಲೇಜು ದಿನಗಳಲ್ಲಿ ಪ್ರತಿಭಾವಂತ ಕಲಾವಿದ ಪಟ್ಟ, ಅವರು ರಚಿಸಿದ ಅರುಂಧತಿ ತುಳು ನಾಟಕಕ್ಕೆ ರತ್ನವರ್ಮ ಹೆಗ್ಗಡೆ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ.

ಲಂಕೇಶರ ಪೊಲೀಸರಿದ್ದಾರೆ ಎಚ್ಚರಿಕೆ, ಟಿ. ಪ್ರಸನ್ನನ ಗೃಹಸ್ಥಾಶ್ರಮ, ಶ್ರೀರಂಗರ ಗುಮ್ಮನೆಲ್ಲಿಹ ತೋರಮ್ಮಾ, ಕೆ.ವಿ. ಸುಬ್ಬಣ್ಣರ ಶಾಂಡಿಲ್ಯ ಪ್ರಹಸನ, ಸರಜೂ ಕಾಟ್ಕರ್ ಅವರ ಅಂಬೆ ನಾಟಕಗಳನ್ನು ರಂಗಕ್ಕೆ ತಂದಿದ್ದಾರೆ.

ಕಳೆದೆರಡು ದಶಕಗಳಿಂದ ಮುಂಬೈ ರಂಗಚಟುವಟಿಕೆಗಳಲ್ಲಿ ಪೊಲಿಪು ಅವರದ್ದು ಎದ್ದು ಕಾಣುವ ಹೆಸರು. ಅಲ್ಲಿನ ಪ್ರಯೋಗರಂಗದ ಸಂಚಾಲಕ. ಕರ್ನಾಟಕ ಸಂಘದ ಮೂಲಕ ಹತ್ತು ಬಾರಿ ಕುವೆಂಪು ಸ್ಮಾರಕ ಅಖಿಲ ಭಾರತ ಏಕಾಂಕ ನಾಟಕ ಸ್ಪರ್ಧೆಯ ಸಂಘಟನೆ. ರಂಗಾಯಣ, ನೀನಾಸಂ ನಾಟಕಗಳ ಪ್ರಯೋಗ ಸಂಘಟನೆ.

ಪತ್ರಕರ್ತನಾಗಿ ರಂಗಭೂಮಿ ಕುರಿತಾದ ಅಂಕಣಗಳನ್ನು ಬರೆದಿದ್ದಾರೆ. ಚಾರಕೊಪ್ಪ ಬಳಗದ ಕೆ.ಕೆ. ಸುವರ್ಣ ಸ್ಮಾರಕ ಶ್ರೇಷ್ಠ ರಂಗ ನಿರ್ದೇಶಕ ಪುರಸ್ಕಾರ ಪ್ರಾಪ್ತಿ.





## ಜೀವನರಾಮ್ ಸುಳ್ಯ (ಸಿ.ಜಿ.ಕೆ. ನೆನಪು – ನೇಪಥ್ಯ ಪುರಸ್ಕಾರ)

ಯಕ್ಷಗಾನ, ಪಾಡ್ದನ, ಜಾದೂ, ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಬೈಕ್ ಓಡಿಸುವುದು, ಬೀದಿ ನಾಟಕ, ಕಲರ್‌ಫುಲ್ ಥಿಯೇಟರ್... ಹೀಗೆ ಈತನದು ಸಾಹಸಗಳ ಸರಮಾಲೆ. ಸರಳವಾಗಿದ್ದುಕೊಂಡೇ ಸುಂದರ ರಂಗಾಲೋಚನೆ. ಹೆಗಲಿಗೆ ಅಡ್ಡಡ್ಡ ಜೋಳಿಗೆ ಚೀಲ ಹಾಕಿಕೊಂಡು ಅದರ ತುಂಬೆಲ್ಲಾ ಚೆಂದ ಚೆಂದನೆಯ ಕನಸು ತುಂಬಿಕೊಂಡಿರ್ತಾನೆ.

ಮೈಮನಗಳ ತುಂಬಾ ರಂಗಪ್ರೀತಿಯನ್ನೇ ಅಂಟಿಸಿಕೊಂಡಿರುವ ಜೀವನ್ ಒಂದಷ್ಟು ಹಳ್ಳಿಯ ಮುಗ್ಧತೆ ನಗರದ ಲೋಭತೆ ಉಳಿಸಿಕೊಂಡಾಂವ. ಬಯಲುನಾಡಿನ ಕಂಬಾರರ ಸಂಭಾಷಣೆಗಳು ಘಟ್ಟದ ಕೆಳಗಿನ ಈತನಿಗೆ ಹೃದ್ಯವಾದವು. 'ರಂಗಮನೆ' ಎಂಬುದು ಅವರ ಹುದ್ದಾಂತಃಕರಣದ ಮನೆ.

ವ್ಯಕ್ತಿಯೊಬ್ಬ ಸುಳ್ಯದಂತಹ ಹಳ್ಳಿಗಾಡಿನಲ್ಲಿ ಇಂತಹದ್ದೊಂದು ರಂಗವಾತಾವರಣದ ಮನೆ ಕಟ್ಟಿರುವುದು ಸುಮ್ಮನೆ ಅಲ್ಲ. ಅದೀಗ ಸಾಂಸ್ಕೃತಿಕ ಕಲಾಕೇಂದ್ರವಾಗಿ ಬೆಳೆಯುತ್ತಿದೆ. ನಾಟಕ, ಯಕ್ಷಗಾನ, ಭರತನಾಟ್ಯ, ಶಾಸ್ತ್ರೀಯ ಸಂಗೀತ, ಚೆಣ್ಣರ ಮೇಳ, ರಂಗ ಕಾರ್ಯಾಗಾರಗಳು, ರಂಗಗೀತೆ, ತಾಳಮದ್ದಲೆ ಹೀಗೆ ಹತ್ತು ಹಲವು ಜೀವಸಂಸ್ಕೃತಿಯ ಆತ್ಮೀಯ ರಂಗಮಂದಿರವದು.

ಚಿಕ್ಕಮಕ್ಕಳ ರಂಗಭೂಮಿಗೆ ಜೀವನ್ ದೊಡ್ಡ ಮೊತ್ತದ ಕೆಲಸ ಮಾಡುತ್ತಿದ್ದಾರೆ. ನೀನಾಸಂ ಪದವಿ ಪಡೆದು ತಿರುಗಾಟದ ಅರ್ಧದಶಕದ ಅನುಭವ ಅವನನ್ನು ಕರ್ನಾಟಕದ ತುಂಬಾ ಪರಿಚಯಿಸಿದೆ. ಅಭಿನಯ, ರಂಗವಿನ್ಯಾಸ,

ಬೆಳಕು, ಪ್ರಸಾಧನ, ಸಂಘಟನೆ, ರಂಗಗೀತೆ ಗಾಯನ, ಚಿತ್ರಕಲೆ, ಜಾದೂ, ಕಲಾತ್ಮಕ ವೇದಿಕೆ ನಿರ್ಮಾಣ... ಹೀಗೆ ಸಮಗ್ರ ರಂಗಭೂಮಿಯ ಕೀಲಿಕೈಯಂತೆ ಜೀವನ್ ಸದಾ ಕ್ರಿಯಾಶೀಲ. ಈ ಪ್ರತಿಭಾವಂತ ಯುವ ರಂಗಕರ್ಮಿಗೆ ರಂಗಭೂಮಿಯೇ ಮುಖ್ಯಪ್ರಾಣ. ಪ್ರಯೋಗಶೀಲತೆಯ ಅನುದಿನದ ರಂಗಮಿತ್ರ ಜೀವನ್.



## ಕೆ.ಪಿ. ಗಿರಿಧರ (ಸಿ.ಜಿ.ಕೆ. ನೆನಪು – ನೇಪಥ್ಯ ಪುರಸ್ಕಾರ)

ಕಂದರ್ಪಿ ಪದ್ಮನಾಭಾಚಾರ್ ಗಿರಿಧರ, ಕಲಬುರ್ಗಿಯವರು. ತೆಳ್ಳಗೆಂದರೆ ತುಂಬಾ ತೆಳ್ಳಗಿನ ಫಿಜಿಕ್ಕು. ಪ್ರಥಮ ದರ್ಜೆ ಸಹಾಯಕರಾಗಿ ಆರೋಗ್ಯ ಇಲಾಖೆಯಲ್ಲಿದ್ದಾರೆ. ಗಿರಿಧರ ಅವರಿಗೆ ರಂಗಭೂಮಿಯ ಆರೋಗ್ಯದತ್ತ ಯಾವತ್ತೂ ಕಾಳಜಿ. ಹಾಗಂತ ತಮ್ಮ ಆರೋಗ್ಯ ಕೆಡಿಸಿಕೊಂಡವರಲ್ಲ. ರಂಗನೇಪಥ್ಯವೆಂದರೆ ಸಾಕು, ಯಾವ ಪಥ್ಯವನ್ನಾದರೂ ಮಾಡುವ ಸಹೃದಯ ಗಿರಿಧರ. ಕಲಬುರ್ಗಿಯಲ್ಲಿ ಪ್ರಭಾಕರ ಸಾತಖೇಡ, ಹೇಮಂತ ಕಲ್ಲಾಪುರೆ, ಕೆ.ಎಸ್. ರಾಜು, ಡಾ|| ಸ್ವಾಮಿರಾವ್ ಕುಲಕರ್ಣಿ, ಶೋಭಾ ರಂಜೋಳಕರ ಇವರ ಬಹುತೇಕ ನಾಟಕಗಳಲ್ಲಿ ಅವರಿಗೊಂದು ಪುಟ್ಟ ಪಾತ್ರ ಇದ್ದೇ ಇರುತ್ತದೆ. ಅದೆಲ್ಲಕ್ಕು ಮುಖ್ಯವಾಗಿ ನಾಟಕಕ್ಕೆ ಕೊಂದರೆ, ಹರಕತ್ತು ಬೀಳದಂತೆ ಓಡಾಡಿ ವ್ಯವಸ್ಥೆ ಮಾಡುವ ಉತ್ತಮ ನಿರ್ವಹಣಾ ಶಕ್ತಿಗುಣ ಗಿರಿಧರ ಅವರದ್ದು. ಏನಿಲ್ಲವೆಂದರೂ ಹೊಸ ಅಲೆಯ ಇಪ್ಪತ್ತೈದಕ್ಕೂ ಹೆಚ್ಚು ನಾಟಕಗಳಿಗೆ ರಂಗದ ಹಿಂದೆ ನಿಸ್ಸಂಕೋಚದಿಂದ ದುಡಿದ ಅನುಭವ. ಕಲಬುರ್ಗಿಯ ದೂರದರ್ಶನ, ರೇಡಿಯೋ ನಾಟಕಗಳಲ್ಲಿ 'ರಂಗ ಮಾಧ್ಯಮ'ದ ನೆರವಿನೊಂದಿಗೆ ಭಾಗವಹಿಸಿದ್ದಾರೆ ಬಿಸಿಲ ನಾಡಿನ ರಂಗಪ್ರತಿಭೆ.



## ಸಿ.ಎಂ. ನರಸಿಂಹಮೂರ್ತಿ (ಸಿ.ಜಿ.ಕೆ. ನೆನಪು – ನೇಪಥ್ಯ ಪುರಸ್ಕಾರ)

ಆತನ ಸಿರಿಕಂಠದಲ್ಲಿ ಅನುಭಾವದ ಸೆಳೆತ ಮತ್ತು ಭಾವೋನ್ಮಾದದ ಮಿಳಿತ. ಅಂತೆಯೇ ಮಂಟೇಸ್ವಾಮಿ ಮತ್ತು ಶರೀಫರನ್ನು ನರಸಿಂಹಮೂರ್ತಿ ತನ್ನ ಕಂಠಸಿರಿಯಲ್ಲಿ ಕಾಣಿಸುತ್ತಾನೆ. ತತ್ವಪದಗಳ ನುಡಿ ಬೆಡಗು–ಬಿನ್ನಾಣ ಹಿಡಿದಿಟ್ಟುಕೊಂಡ ನಾದಪ್ರಜ್ಞೆಯ ಜೀವತಂತು ಹಾಡುತ್ತಿದ್ದರೆ ಅಪರಿಚಿತ ಶ್ರೋತೃವಿಗೂ ಮಂಟೇಸ್ವಾಮಿಯ ದರ್ಶನವಾಗಬಲ್ಲದು. ಅಂತಹ ಜೋಡಿಯ ಹಾಡುಗಾರ ಸಿ.ಎಂ.ಎನ್. ಈತನ ನಾಭಿಯಿಂದ ಉಕ್ಕಿ ಬರುವ ನೀಲಗಾರರನ್ನು ಕೇಳುವುದೆಂದರೆ ಮತ್ತೆ ನಾವು ಅನುಭಾವ ಲೋಕಕ್ಕೆ ಪಯಣಿಸಿದಂತೆ.

ನರಸಿಂಹಮೂರ್ತಿ ಚಾಮರಾಜನಗರವೆಂಬ ಮಲೆಮಹದೇಶ್ವರ ಒಕ್ಕಲಿನಲ್ಲಿ ಹುಟ್ಟಿಬಂದ ಹುಡುಗ. ಅಪ್ಪ ಮಾದಯ್ಯ, ಅವ್ವ ತಾಯಮ್ಮಣ್ಣಿಯ ಮುದ್ದಿನ ಮಗ. ಓದಿದ್ದು ಇಂಜಿನಿಯರಿಂಗ್ ಪದವಿ. ಈತನ ಹಾಡುಗಾರಿಕೆಗೆ ಅದು ಅಡ್ಡಿಯಾಗಲಿಲ್ಲ. ಓದುತ್ತಿರುವಾಗಲೇ ಬೆಂಗಳೂರಿನ ಭಾರತಯಾತ್ರಾ ಕೇಂದ್ರದ ರೂವಾರಿ ನಾಗರಾಜಮೂರ್ತಿ ಅವರನ್ನೇ ತನ್ನ ರಂಗಬದುಕಿನ ಗುರುವಾಗಿ ಸ್ವೀಕಾರ. ಸಿಜಿಕೆ ಕೂಡಾ ಇನ್ನೊಬ್ಬ ಗುರು. ಓದಿನೊಂದಿಗೇ ನಾಟಕದ ಒಡನಾಟ. ಓದು ಮುಗಿಯಿತು. ನಾಟಕ ಮುಗಿಯುವಂತಹದಲ್ಲ. ಅದು ನಿರಂತರ. ಮಂಟೇಸ್ವಾಮಿ ಕಥಾಪ್ರಸಂಗ, ಮಕರಚಂದ್ರ, ಹುಚ್ಚ ಮುನ್ಸೀಫ, ಅಲಿಬಾಬ ಮತ್ತು ನಲವತ್ತು ಕಳ್ಳರು, ಮಲ್ಲಮ್ಮನ ಮನೆ ಹೋಟ್ಳು, ಮೌನಿ, ವಧೂಟಿ, ಮಿಸ್ಟರ್ ಈ... ಹೀಗೆ ಅನೇಕ ನಾಟಕಗಳಲ್ಲಿ ಹಾಡು, ಅಭಿನಯಕ್ಕೆ ಅವಕಾಶ. ಕರ್ನಾಟಕ ಸರ್ಕಾರದ ಯುವ ಪ್ರಶಸ್ತಿಗೆ ಭಾಜನರಾಗಿರುವ ಮೂರ್ತಿ ಬಿಳಿಗಿರಿ ರಂಗನ ಬೆಟ್ಟದ ಜನಗಳಿಗೆ ಹತ್ತು ಹಲವು ಸಾಂಸ್ಕೃತಿಕ ಕಾರ್ಯಕ್ರಮ ರೂಪಿಸಿ ಗಡಿ ಜಿಲ್ಲೆಯ ಸಾಂಸ್ಕೃತಿಕ ರಾಯಭಾರಿ ಎನಿಸಿದ್ದಾರೆ.



## ಸರ್ವೇಶ್ ಎಚ್.ಸಿ. (ಸಿ.ಜಿ.ಕೆ. ನೆನಪು – ನೇಪಥ್ಯ ಪುರಸ್ಕಾರ)

ಬೆಂಗಳೂರಿನ ಕಲ್ಯಾಣ ನಗರ ಅಂಚೆಯ ಹೆಣ್ಣೂರುವಾಸಿ ಎಚ್.ಸಿ. ಸರ್ವೇಶ್ ನಾಟಕದ ನಂಟು ಬೆಳೆಸಿಕೊಂಡದ್ದು ತೊಂಬತ್ತರ ದಶಕದ ಹೊಸ್ತಿಲಲ್ಲಿ ಅವರದು ರಂಗಭೂಮಿಯ ವಿವಿಧ ಪ್ರಕಾರಗಳ ಒಡನಾಟ. ಅಭಿನಯ, ರಂಗಸಂಗೀತ, ರಂಗಸಜ್ಜಿಕೆ, ರಂಗವಿನ್ಯಾಸ... ಹೀಗೆ ರಂಗದ ಸರ್ವಸ್ವಕ್ಕೆ ಸರ್ವೇಶ್ ಸೈ ಅನಿಸಬಹುದಾದ ಹೆಸರು.

ಮಂಟೇಸ್ವಾಮಿ ಕಥಾಪ್ರಸಂಗ, ಸಂತೆಯಲ್ಲಿ ನಿಂತ ಕಬೀರ, ನೆಪೋಲಿಯನ್, ಗಾದೆ ಗುರ್ರಕ್ಕನ ಕಥೆ ಇವೆಲ್ಲಾ ಸರ್ವೇಶ್ ಅಭಿನಯದ ನಾಟಕಗಳು. ಮೌನಿ, ಜುಗಾರಿಕೂಟ, ನಮ್ಮ ನಿಮ್ಮೊಳಗೊಬ್ಬ, ಚಿತ್ರಪಟ ರಾಮಾಯಣ... ಮುಂತಾದವು ಆತ ನೇಪಥ್ಯದಲ್ಲಿ ರಂಗಪರಿಚಾರಿಕೆ ಮಾಡಿದ ಪ್ರಯೋಗಗಳು. ವಾಲ್ಟರ್ ಡಿಸೋಜ, ಅರ್ಜುನ್ ಸಜನಾನಿ, ಸಿಜಿಕೆ, ಕೆ.ವಿ. ನಾಗರಾಜ ಮೂರ್ತಿ, ಅಡಪ, ಸುರೇಶ ಆನಗಳ್ಳಿ... ಮೊದಲಾದವರೊಡಗೂಡಿ ರಂಗನಿರ್ವಹಣೆಯ ಅನನ್ಯ ಅನುಭವ.

ಭಾರತ ಯಾತ್ರಾ ಕೇಂದ್ರ ಆಯೋಜಿಸುವ ಬಹುತೇಕ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸರ್ವೇಶ್‌ಗೆ ಮೈ ತುಂಬಾ ಕೆಲಸ. ಕೆಲವು ಟಿ.ವಿ. ಧಾರಾವಾಹಿಗಳಿಗೆ ಕಲಾ ನಿರ್ದೇಶಕನಾಗಿ ಕೆಲಸ ಮಾಡಿದ ಪ್ರೀತಿ ಆತನದು.

---



## ಸುಕುಮಾರ್ ಮೋಹನ್ (ಸಿ.ಜಿ.ಕೆ. ನೆನಪು – ನೇಪಥ್ಯ ಪುರಸ್ಕಾರ)

ಅತ್ತ ಯಕ್ಷಗಾನ ನೆಲದಲ್ಲಿ ಆಧುನಿಕ ರಂಗ ಸಂವೇದನೆಯ ಸಮೃದ್ಧ ಬೆಳೆ. ಅಂತಹ ಸಮೃದ್ಧ ಫಸಲಿನ ಎಸಳು ಮುದ್ರಾಡಿಯ ಸುಕುಮಾರ್ ಮೋಹನ್. ಇಂದಿನ ಉಡುಪಿ ಜಿಲ್ಲೆ ಕಾರ್ಕಳ ತಾಲ್ಲೂಕಿನ ಮುದ್ರಾಡಿಯ ಆದಿಶಕ್ತಿ ದೇವಸ್ಥಾನದಲ್ಲಿ ಇವರ ತಂದೆ ಧರ್ಮಯೋಗಿ ಮೋಹನ್ ಅವರದು ದೈವಾರಾಧನೆಯ ಅರ್ಚಕ ವೃತ್ತಿ. ಅಂತಹ ಧಾರ್ಮಿಕ ಪರಿಸರದಲ್ಲಿ ಸುಕುಮಾರ್ ರಂಗಭೂಮಿಯಂತಹ ಸರ್ವರಿಗೂ ಸಮಪಾಲು ಕಲಿಸಿಕೊಡುವ ಕ್ರಿಯೆಗಿಳಿದಿರುವದು ಹೆಚ್ಚುಗಾರಿಕೆ.

ಗೋಪಾಲಕೃಷ್ಣ ನಾಯರಿ, ಕೃಷ್ಣಮೂರ್ತಿ ಕವತ್ತಾರ್, ಪ್ರಮೋದ್ ಶಿಗ್ಗಾಂವ್, ಜೀವನ್‌ರಾಮ್ ಸುಳ್ಯ ಮೊದಲಾದವರ ಬಳಿ ರಂಗತರಬೇತಿ ಪಡೆದು ರಂಗಪ್ರವೇಶ. ಸಿರಿಸಂಪಿಗೆ, ದಂಗೆಯ ಮುಂಚಿನ ದಿನಗಳು, ನಾಯಿಕತೆ, ಪಿಲಿಪತಿಗಡಸ್, ಹುಲಿಯ ನೆರಳು, ಪಂಪನಿಗೆ ಬಿದ್ದ ಕನಸು, ನಾಗಬನ ಮುಂತಾದ ಪರದೆ ನಾಟಕಗಳು ಮತ್ತು ಹಲವಾರು ಬೀದಿ ನಾಟಕಗಳಲ್ಲಿ ಅಭಿನಯದ ದಿವಿನಾದ ಅನುಭವ.

ಗದಾಯುದ್ಧದ ದುರ್ಯೋಧನ, ಕನಸಕಂಡ ಕಂಸದಲ್ಲಿ ಕಂಸ, ಚಂದ್ರಹಾಸದಲ್ಲಿ ದುಷ್ಟಬುದ್ಧಿ, ಬೇಡರ ಕಣ್ಣಪ್ಪದಲ್ಲಿ ಕಾಶಿಮಾಣಿ... ಹೀಗೆ ಯಕ್ಷರಂಗದಲ್ಲೂ ಮುದ್ರಾಡಿಯ ರಂಗಮುದ್ರೆಗಳಿವೆ.

ಮುದ್ರಾಡಿಯಂತಹ ಹಳ್ಳಿಯಲ್ಲಿ ಜಿಲ್ಲಾ ಹಾಗೂ ರಾಜ್ಯ ಮಟ್ಟದ ನಾಟಕ ಸ್ಪರ್ಧೆಗಳನ್ನು 'ನಮ ತುಳುವೆರ್' ಸಂಘಟನೆ ಮೂಲಕ ಏರ್ಪಡಿಸಿದ ಹೆಗ್ಗಳಿಕೆ. ನಾಲ್ಕು ವರ್ಷಗಳ ಕಾಲ ರಾಜ್ಯದ ಪ್ರಖ್ಯಾತ ತಂಡಗಳನ್ನು ಕರೆಸಿ ನವರಂಗೋತ್ಸವ ಮಾಡಿದ ರಂಗಕೀರ್ತಿಗೆ ಭಾಜನ. ಕಳೆದ ಎಂಟು ವರ್ಷಗಳಿಂದ ಅಲ್ಲಿನ ಪ್ರತಿಷ್ಠಿತ ನಮ ತುಳುವೆರ್ ಕಲಾ ಸಂಘಟನೆ ಅಧ್ಯಕ್ಷರಾಗಿದ್ದಾರೆ.

---

# 2006ರ ಪ್ರಶಸ್ತಿ ವಿಜೇತರು



## ಎಚ್. ಡುಂಡಿರಾಜ್ (ಗೌರವ ಪ್ರಶಸ್ತಿ)

ಅಖಿಲ ಭಾರತ ಬಾನುಲಿ ನಾಟಕ ರಚನಾ ಸ್ಪರ್ಧೆಯಲ್ಲಿ ಅತ್ಯುತ್ತಮ ಹಾಸ್ಯನಾಟಕ ಪುರಸ್ಕಾರ (1989) ಪಡೆದ ಶ್ರೀ ಎಚ್. ಡುಂಡಿರಾಜ್ ರೇಡಿಯೊ ರಂಗನಾಟಕಕ್ಕೆ ವಿಶಿಷ್ಟ ಕೊಡುಗೆ ನೀಡಿದವರು. ಹತ್ತು ಬಾನುಲಿ ನಾಟಕಗಳ ಕರ್ತೃ.

‘ಹುಡುಕಾಟ’ ಮತ್ತು ‘ಓದುವವರು’ ಡುಂಡಿರಾಜ್‌ರ ಬಹುಚರ್ಚಿತ ಅಸಂಗತ ನಾಟಕಗಳು. ತಿಳಿಹಾಸ್ಯದ ಒಡಲಲ್ಲಿ ಅಸಂಗತ ವಿಡಂಬನೆ ಓದುಗನನ್ನು ತಡವಿ ಚಿಂತನೆಗೆ ಒಡ್ಡುತ್ತದೆ. ಡುಂಡಿಯರವರ ‘ಅಧ್ವಾನಪುರ’ ರಾಜಕೀಯ ಅಧ್ವಾನಗಳನ್ನು ಸಂಕೇತಿಸುತ್ತದೆ. ನಾಳೆ ಬನ್ನಿ, ಕೊರಿಯಪ್ಪನ ಕೊರಿಯೋಗ್ರಫಿ, ವೇಷಾಂತರ ಪ್ರಸಂಗ, ಸಿನಿ ಮಹಾತ್ಮೆ, ಕೋಟೇಶ ರಾಯರ ಭಾಗ್ಯ ಮುಂತಾದ ನಾಟಕಗಳು ವ್ಯವಸ್ಥೆಯ ಬಗ್ಗೆ ಆಲೋಚನೆಗೆ ಪ್ರಚೋದಿಸುವ ನಾಟಕಗಳು.

ಎಚ್. ಡುಂಡಿರಾಜ್ ರಂಗಕೃತಿ ರಚನೆಯ ಸಂಗಡ ಅಭಿನಯ ಮತ್ತು ನಿರ್ದೇಶನದಲ್ಲೂ ತೊಡಗಿಸಿಕೊಂಡವರು. ಮಂಗಳೂರಿನ ‘ಭೂಮಿಕಾ’ ಉಡುಪಿಯ ‘ರಂಗಭೂಮಿ’ ಹಾಗೂ ತಮ್ಮ ಬ್ಯಾಂಕಿನ ರಂಗತಂಡದಲ್ಲಿ ರಂಗಕರ್ಮಿಯಾಗಿ ಸೇವೆ ನೀಡಿದ್ದಾರೆ.



## ಪ್ರಭಾತ್ ಕಲಾವಿದರು (ಕೆ. ಹಿರಣ್ಣಯ್ಯ ಪುರಸ್ಕಾರ)

‘ಪ್ರಭಾತ್ ಕಲಾವಿದರು’ ತಂಡ ಕಳೆದ ಏಳು ದಶಕಗಳಿಂದ ನಾಡಿನುದ್ದಕ್ಕೂ ಬ್ಯಾಲೆ ಶೈಲಿಯ ರೂಪಕ–ನಾಟಕಗಳನ್ನು ಪ್ರದರ್ಶಿಸಿದೆ. ಹರಿಕಥಾ ರತ್ನ ಟಿ.ಪಿ. ಗೋಪಿನಾಥದಾಸರು ತಮ್ಮ ಸಹೋದರರೊಂದಿಗೆ ಪೌರಾಣಿಕ ನಾಟಕಗಳನ್ನು 30ರ ದಶಕದಲ್ಲಿ ಆಡಿಸುವಾಗ ಪ್ರೇರಣೆಯಾಗಿ ಹುಟ್ಟಿಕೊಂಡದ್ದು ಪ್ರಭಾತ್ ಕಲಾವಿದರ ತಂಡ.

‘ಗೋಪಿನ ಕಥೆ’, ‘ಕಿಂದರಿಜೋಗಿ’, ‘ಧರ್ಮಭೂಮಿ’, ‘ಕರ್ನಾಟಕ ವೈಭವ’, ‘ಮೋಹಿನಿ ಭಸ್ಮಾಸುರ’, ‘ಭಗವದ್ಗೀತೆ’, ‘ಸಿಂಡ್ರೆಲಾ’, ‘ದಿವ್ಯದೃಷ್ಟಿ’ ಹೀಗೆ ಹತ್ತಾರು ನೃತ್ಯ ರೂಪಕಗಳು ನಾಡಿನ ಜನಮನ ಗೆದ್ದಿವೆ. ಸಿಂಡ್ರೆಲಾ ನೃತ್ಯರೂಪಕ ಒಂದು ಸಾವಿರ ಪ್ರಯೋಗ ಕಂಡು ಈಗಲೂ ಕಲಾರಸಿಕರ ಅತ್ಯಂತ ಬೇಡಿಕೆಯ ನೃತ್ಯರೂಪಕವಾಗಿದೆ.

1982ರ ನಂತರ ಸಂಸ್ಥೆಯ ಸ್ಥಾಪಕರಾದ ಗೋಪಿನಾಥದಾಸರ ನಿಧನದ ನಂತರ ಅವರ ಹಿರಿಯ ಸುಪುತ್ರ ಟಿ.ಜಿ. ವೆಂಕಟೇಶಾಚಾರ್ ಮತ್ತು ಸಹೋದರರು ತಂಡವನ್ನು ಸಮರ್ಥವಾಗಿ ಮುನ್ನಡೆಸಿಕೊಂಡು ಬರುತ್ತಿದ್ದಾರೆ.

ಸಿಂಗಾಪುರ್, ಮಲೇಷಿಯಾ, ಅಮೇರಿಕಾ ಮುಂತಾದ ದೇಶಗಳ ಬೇರೆ ಬೇರೆ ನಗರಗಳಲ್ಲಿ ಪ್ರಭಾತ್ ಕಲಾವಿದರು ತಮ್ಮ ಪ್ರತಿಭಾಪೂರ್ಣ ನೃತ್ಯ ರೂಪಕಗಳಿಂದ ಖ್ಯಾತಿ ಪಡೆದಿದ್ದಾರೆ.



## ಅನಿತಾ ಕಾರ್ಯಪ್ಪ

ಸೃಷ್ಟಿ ಸೊಬಗಿನ ಕೊಡಗಿನಲ್ಲಿ ರಂಗಸೊಬಗನ್ನು ಹರಡುತ್ತಿರುವ ಶ್ರೀಮತಿ ಅನಿತಾ ಕಾರ್ಯಪ್ಪರ ರಂಗಕೊಡುಗೆ ಅನನ್ಯ. ಕೊಡವ-ಕನ್ನಡ ನಾಟಕಗಳಲ್ಲಿ ಅಭಿನಯಿಸುತ್ತ ರಂಗಜೀವನ ಆರಂಭಿಸಿದ ಅನಿತಾ ಕೊಡಗಿನ ರಂಗಭೂಮಿಯಲ್ಲಿ ತೊಡಗಿರುವ ಮೊದಲ ಏಕೈಕ ಮಹಿಳೆ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಐದು ಸಾವಿರಕ್ಕೂ ಹೆಚ್ಚಿನ ರಂಗ ಪ್ರಯೋಗಗಳಲ್ಲಿ ಪಾಲ್ಗೊಂಡ ಇವರ ಸಾಧನೆ ಚಿಕ್ಕದಲ್ಲ. 1987ರಲ್ಲಿ 'ಸೃಷ್ಟಿ ಕೊಡವ ರಂಗ' ಸ್ಥಾಪನೆಯಲ್ಲಿ ಇವರದು ಪ್ರಮುಖ ಪಾತ್ರ. ಇದು ರಾಜ್ಯದ ಎಲ್ಲ ತಾಲ್ಲೂಕುಗಳಲ್ಲಿ ಸಂಚರಿಸಿತು. ಕನ್ನಡದ ಬಹುತೇಕ ನಾಟಕಗಳನ್ನು ಕೊಡವ ಭಾಷೆಗೆ ಅನುವಾದಿಸಿ 'ಸೃಷ್ಟಿ ಕೊಡವರಂಗ'ದ ಮೂಲಕ ರಂಗದ ಮೇಲೆ ತರುವಲ್ಲಿ ಅನಿತಾರವರು ಪ್ರಮುಖ ಪಾತ್ರ ವಹಿಸಿದ್ದಾರೆ.



## ಕೆ. ಆನಂದರಾಜ್

ವಿದ್ಯಾರ್ಥಿ ಜೀವನದಿಂದಲೇ ರಂಗಭೂಮಿಯ ಅನುಭವ ಇರುವ ಶ್ರೀ ಆನಂದರಾಜು 28 ವರ್ಷ ಎನ್.ಜಿ.ಇ.ಎಫ್.ನಲ್ಲಿ ಮಾರ್ಕೆಟಿಂಗ್ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿದ್ದಾರೆ. ಸ್ಪಂದನದ ಸ್ಥಾಪಕ ಸದಸ್ಯರಾಗಿ ಅನೇಕ ನಾಟಕಗಳಲ್ಲಿ, ನೇಪಥ್ಯದಲ್ಲಿ ದುಡಿದಿರುವ ಆನಂದರಾಜು ಶ್ರೀಮತಿ ರಾಣಿರಾವ್, ಎಸ್.ಎಸ್. ವೆಂಕಟರಾಮ್, ಶಂಕರ್‌ನಾಗ್, ವೆಂಕಟಸುಬ್ಬಯ್ಯರಂತಹ ನಿರ್ದೇಶಕರ ಜೊತೆ ಕೆಲಸ ಮಾಡಿದ್ದಾರೆ.

ರವೀಂದ್ರ ಕಲಾಕ್ಷೇತ್ರ, ಚೌಡಯ್ಯ ಮೆಮೋರಿಯಲ್ ಹಾಲ್, ಗುರುನಾನಕ್ ಭವನ್, ರಂಗಮಂದಿರಗಳಿಗೆ ಬೆಳಕು ಸಂಯೋಜಿಸುವ ಕಾರ್ಯದಲ್ಲಿ ಹೆಸರಾಂತ ಬೆಳಕು ತಜ್ಞ ವಿ. ರಾಮಮೂರ್ತಿ ಅವರಿಗೆ ಸಹಾಯಕರಾಗಿದ್ದು ಬೆಳಕು ವಿನ್ಯಾಸದಲ್ಲಿ ಅನುಭವ ಪಡೆದಿದ್ದಾರೆ. ಬ್ರಿಟನ್, ಜರ್ಮನಿ, ಯು.ಎಸ್.ಎ. ಮುಂತಾದ ದೇಶಗಳಿಂದ ಬಂದ ಹಲವು ನಾಟಕ ಕಂಪನಿಗಳ ನಾಟಕಗಳಿಗೆ ಬೆಳಕನ್ನು ಸಂಯೋಜಿಸಿರುವುದು ಇವರ ಹಿರಿಮೆ.



## ಎಸ್.ಎನ್. ದೇಶಪಾಂಡೆ

ಕಳೆದ ಮೂರು ದಶಕಗಳಿಂದ ಧಾರವಾಡ ಪರಿಸರದಲ್ಲಿ ರಂಗಭೂಮಿಯನ್ನು ಕಟ್ಟುವ ಕಾಯಕದಲ್ಲಿ ತೊಡಗಿಸಿಕೊಂಡವರು ಶ್ರೀ ಎಸ್.ಎನ್. ದೇಶಪಾಂಡೆಯವರು. 'ಕರ್ನಾಟಕ ಕಲೋದ್ಧಾರ ಸಂಘ' ಕಟ್ಟಿಕೊಂಡು ಹವ್ಯಾಸಿ ರಂಗಕ್ಕೆ ಆಧುನಿಕ ನಾಟಕ ಪ್ರಯೋಗಗಳ ಮೂಲಕ ಅನನ್ಯ ಕೊಡುಗೆ ನೀಡಿದವರು. ಮೃಚ್ಛಕಟಿಕ, ಕದಡಿದ ನೀರು, ನಟಸಾಮ್ರಾಟ, ಸಾಂಬಶಿವ ಪ್ರಹಸನ ಇವು ಈ ತಂಡದ ಪ್ರಮುಖ ಪ್ರಯೋಗಗಳು.

ನಟನೆ, ನೇಪಥ್ಯ ಮತ್ತು ಸಂಘಟನೆ ಮೂಲಕ ಪರಿಚಯಿಸಿಕೊಂಡ ದೇಶಪಾಂಡೆಯವರು ತಮ್ಮ ತಂಡದಲ್ಲಿ ವಿಭಿನ್ನ ಪ್ರಯೋಗಗಳನ್ನು ನಡೆಸುತ್ತ ಬಂದಿದ್ದಾರೆ. 'ರಕ್ತರಾತ್ರಿ' ಎಂಬ ವೃತ್ತಿನಾಟಕವನ್ನು ಹವ್ಯಾಸಿ ಸ್ವರೂಪಕ್ಕಿಳಿಸಿ ಪ್ರಯೋಗಿಸಿದ ಹೆಗ್ಗಳಿಕೆ ಇವರದು. ರಂಗಶಿಬಿರಗಳನ್ನು ಏರ್ಪಡಿಸಿ ಯುವಪ್ರತಿಭೆಗಳನ್ನು ಪ್ರೋತ್ಸಾಹಿಸುವ ಕಾರ್ಯ ನಡೆಸುತ್ತ ಬಂದಿದ್ದಾರೆ.

## ದೇವೇಂದ್ರ ರೆಡ್ಡಿ ಮೈನಹಳ್ಳಿ



ಶ್ರೀ ದೇವೇಂದ್ರ ರೆಡ್ಡಿಯವರು ಜನ್ಮದಿಂದ ಅಂಧರಾದರೂ ಗ್ರಾಮೀಣ ರಂಗಭೂಮಿಗೆ ಕಣ್ಣಾದವರು. ಗದುಗಿನ ವೀರೇಶ್ವರ ಪುಣ್ಯಾಶ್ರಮದಲ್ಲಿ ಸಂಗೀತ ಅಭ್ಯಾಸ ಪೂರೈಸಿ ತಬಲಾ, ಹಾರ್ಮೋನಿಯಂ ಮತ್ತು ಗಾಯನ ಕಲೆಯನ್ನು ಕರಗತಮಾಡಿಕೊಂಡವರು. ದೇವೇಂದ್ರರು ಗುಡಗೇರಿ ಬಸವರಾಜರ ಕಂಪನಿಯಲ್ಲಿ ಹಾರ್ಮೋನಿಯಂ ಮಾಸ್ತರರಾಗಿ ಸೇವೆ ನಿರ್ವಹಿಸಿದ ನಂತರದಲ್ಲಿ ನಾಟಕ ಕಲಿಸುವ ಮಾಸ್ತರರಾಗಿ ಪ್ರಸಿದ್ಧಿಗೆ ಬಂದರು.

ಬಳ್ಳಾರಿ ಜಿಲ್ಲೆ ಗ್ರಾಮೀಣ ವಲಯದಲ್ಲಿ ಅಷ್ಟೇ ಅಲ್ಲ, ಧಾರವಾಡ ಕೊಪ್ಪಳ ಜಿಲ್ಲೆಗಳ ಹಳ್ಳಿ ಪ್ರದೇಶಗಳಿಗೆ ಹೋಗಿ ನಾಟಕಗಳನ್ನು ಕಲಿಸುವ ಕಾಯಕವನ್ನು ಮುನ್ನಡೆಸಿಕೊಂಡು ಬಂದಿದ್ದಾರೆ.

---

## ದೊಡ್ಡ ಅಂಕಾಚಾರ್



ಕರ್ನಾಟಕದ ಹೆಸರಾಂತ ನಟರಾಗಿದ್ದ ಕೊಟ್ಟೂರಪ್ಪ ಕಂಪನಿಯಲ್ಲಿ ಬಾಲನಟರಾಗಿ ರಂಗಭೂಮಿಗೆ ಪಾದಾರ್ಪಣೆ ಮಾಡಿದ ಶ್ರೀ ದೊಡ್ಡ ಅಂಕಾಚಾರ್‌ರವರು ಕರ್ನಾಟಕದ ಗ್ರಾಮೀಣ ರಂಗಭೂಮಿ ಹಾಗೂ ಪೌರಾಣಿಕ ರಂಗಭೂಮಿಯಲ್ಲಿ ನಟರಾಗಿ, ಹಾಡುಗಾರರಾಗಿ, ನಿರ್ದೇಶಕರಾಗಿ ಹಾಗೂ ಹಾರ್ಮೋನಿಯಂ ಮಾಸ್ತರರಾಗಿ ತಮ್ಮನ್ನು ರಂಗಭೂಮಿಗೆ ಅರ್ಪಿಸಿಕೊಂಡಿದ್ದಾರೆ. ಇವರ ವಿಶೇಷತೆ ಎಂದರೆ ಸ್ತ್ರೀಪಾತ್ರ ಇವರು 'ದಾನಶೂರ ಕರ್ಣ', 'ಸುಭದ್ರಾ ಕಲ್ಯಾಣ' ಇನ್ನೂ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಮಾಗಡಿ, ಕನಕಪುರ, ಮಂಡ್ಯ ಈ ಮೂರು ಪ್ರದೇಶಗಳಲ್ಲಿ ಪೌರಾಣಿಕ ನಾಟಕಗಳಿಗೆ ಬೇಡಿಕೆ ಇರುವ ನಿರ್ದೇಶಕರು. ಇವರು ಪೌರಾಣಿಕ ರಂಗಭೂಮಿಗೆ ಹೊಸ ಹೊಸ ನಾಟಕಗಳನ್ನು ಪರಿಚಯಿಸಿದ್ದು ನಾಡಿನ ಗ್ರಾಮೀಣ ರಂಗಭೂಮಿಗೆ ಹೆಮ್ಮೆ ತರುವ ವಿಚಾರ.

---

## ನಾರಾಯಣ ಭೀಮಸೇನರಾವ ಕುಲಕರ್ಣಿ



ಸಾಹಿತ್ಯ ಮತ್ತು ರಂಗಭೂಮಿಯಲ್ಲಿ ತನ್ನದೇ ಛಾಪು ಮೂಡಿಸಿರುವ ಶ್ರೀ ನಾರಾಯಣ ಕುಲಕರ್ಣಿಯವರು ಕಲಾವಿದರಾಗಿ, ಸಂಘಟಕರಾಗಿ ತೊಡಗಿರುವ ಇವರು ಕೆನರಾ ಬ್ಯಾಂಕ್ ಉದ್ಯೋಗಿ.

ಸುಮಾರು ಮೂರು ದಶಕಗಳ ರಂಗದ ಸಕ್ರಿಯ ಸೇವೆಯಲ್ಲಿ ನಲವತ್ತಕ್ಕೂ ಅಧಿಕ ಆಧುನಿಕ ನಾಟಕಗಳಲ್ಲಿ ಅಭಿನಯ ಮತ್ತು ನಿರ್ದೇಶನ ನೀಡಿದ್ದಾರೆ. ಬೀದಿನಾಟಕಗಳ ಮೂಲಕ ಹೊಸ ಆಯಾಮವನ್ನು ನೀಡಿದವರು. ಹಿಂದೂ–ಸಿಖ್ ಗಲಭೆಯಾದಾಗ 'ಕೋಮು ಸೌಹಾರ್ದ – ರಂಗಮೇಳ' ಹಮ್ಮಿಕೊಂಡು ನಾಟಕಗಳನ್ನು ಪ್ರಯೋಗಿಸಿ ಸೌಹಾರ್ದ ನಿರ್ಮಿತಿಗೆ ಕಾರಣಕರ್ತರಾದವರು.

ನಟನೆ ಮತ್ತು ನಿರ್ದೇಶನಕ್ಕೆ ತಮ್ಮ ಪ್ರತಿಭಾಶಕ್ತಿಯನ್ನು ಸೀಮಿತಗೊಳಿಸದೆ ನಾಟಕ ರಚನೆಯಲ್ಲೂ ಸಾಧನೆ ಮಾಡಿದವರು. ಹರಕೆಯ ಕುರಿ, ಜೈಸಿದ ನಾಯಕ, ಗ್ರಹಣ, ಸುರಪುರ ವೆಂಕಟಪ್ಪನಾಯಕ ಇವರಿಗೆ ಅಪಾರ ಹೆಸರು ತಂದಿಟ್ಟ ನಾಟಕಗಳು.

---



## ಮಹಾಂತೇಶ ಗಜೇಂದ್ರಗಡ

1979ರಲ್ಲಿ ಬೀದಿ ನಾಟಕವೊಂದರಲ್ಲಿ ಅಭಿನಯಿಸುವ ಮೂಲಕ ರಂಗಕ್ಕೆ ಪಾದಾರ್ಪಣ ಮಾಡಿದ ಶ್ರೀ ಮಹಾಂತೇಶ ಗಜೇಂದ್ರಗಡರವರು ಅವಿಭಾಜಿತ ಬಿಜಾಪುರ ಜಿಲ್ಲೆಯ ಸಾಂಸ್ಕೃತಿಕ ಲೋಕದ ಧ್ರುವತಾರೆ. ಸದ್ಯ ಬಾಗಲಕೋಟ ಜಿಲ್ಲೆಯ ಸಾಂಸ್ಕೃತಿಕ ವಕ್ತಾರರಂತೆ ಕಾರ್ಯನಿರ್ವಹಿಸುತ್ತಿರುವ ಶ್ರೀಯುತರು ಜೋಕುಮಾರಸ್ವಾಮಿ, ತಲೆದಂಡ, ತುಘಲಕ್ ಒಂದು ವಾಡೆಯ ಕಥೆ, ಹಗರಣ ನಾಟಕಗಳಲ್ಲಿ ಅಭಿನಯಿಸಿ ಕನ್ನಡ ರಂಗಭೂಮಿಯ ಉತ್ತಮ ನಟರೆನಿಸಿಕೊಂಡಿದ್ದಾರೆ. ಕರ್ನಾಟಕದ ಹಲವು ತಂಡಗಳು ಬಿಜಾಪುರ ಬಾಗಲಕೋಟೆಗಳಲ್ಲಿ ಪ್ರದರ್ಶನ ನೀಡುವಲ್ಲಿ ಮಹಾಂತೇಶರ ಪಾತ್ರ ಪ್ರಮುಖವಾದದು. ನಟನೆ–ಸಂಘಟನೆಯ ಜೊತೆಜೊತೆಗೆ ರಂಗಾಸಕ್ತರನ್ನು ಒಟ್ಟುಗೂಡಿಸಿ ಕಲಾವಿದರಿಗಾಗಿ 'ಪರಿಹಾರ ವೇದಿಕೆ'ಯನ್ನು ಕಟ್ಟಿ ಅನಾರೋಗ್ಯ, ಅಶಕ್ತ ಕಲಾವಿದರಿಗೆ ನೆರವು ನೀಡುತ್ತಿರುವುದು ಇವರಲ್ಲಿರುವ ಮಾನವೀಯತೆಗೆ ಕೈಗನ್ನಡಿ. 'ಸ್ನೇಹರಂಗ'ದ ಮೂಲಕ ಅನೇಕ ನಟರು, ನಿರ್ದೇಶಕರು, ನೇಪಥ್ಯ ಕಲಾವಿದರು ಬೆಳಕಿಗೆ ಬಂದು ರಂಗಚಳವಳಿಯಲ್ಲಿ ಪಾತ್ರರಾಗಿದ್ದರೆ ಅದರ ಯಶಸ್ಸು ಗಜೇಂದ್ರಗಡರಿಗೂ ಸಲ್ಲಬೇಕು.

---



## ಮೈಕೊ ಚಂದ್ರು (ಎಂ. ಚಂದ್ರಶೇಖರ್ ರಾವ್)

ರಂಗಭೂಮಿ ಮತ್ತು ಚಲನಚಿತ್ರ ಕ್ಷೇತ್ರದಲ್ಲಿ ಮೈಕೋ ಚಂದ್ರು ಎಂದೇ ಖ್ಯಾತನಾಮದಿಂದ ಕರೆಯಿಸಿಕೊಳ್ಳುವ ಶ್ರೀ ಎಂ. ಚಂದ್ರಶೇಖರ ರಾವ್ ಅವರು ತಮ್ಮ ಬಾಳಬುತ್ತಿಯಲ್ಲಿ ರಂಗಾನುಭವವನ್ನು 35 ವರ್ಷ ಕಾಲ ಜತನವಾಗಿಟ್ಟು ಹಂಚಿ ಉಂಡವರು.

ನಾಗಾಭರಣ, ಸಿ.ಆರ್. ಸಿಂಹರಿಂದ ಹಿಡಿದು ಇಂದಿನ ಪೀಳಿಗೆಯ ಸಿ. ಬಸವಲಿಂಗಯ್ಯನವರ ತನಕ ನಾಟಕವಾಡಿ ತಮ್ಮ ಸಾಧನೆ ತೋರಿದವರು. ಗಿರೀಶ ಕಾಸರವಳ್ಳಿಯವರ 'ಮನೆ', ಶಂಕರನಾಗ್‌ರ 'ಮಾಲ್ಗುಡಿ ಡೇಸ್', ನಾಗಾಭರಣರ 'ಬ್ಯಾಂಕರ್ ಮಾರ್ಗಯ್ಯ' ಪ್ರಮುಖ ಕಲಾತ್ಮಕ ಸಿನೇಮಾಗಳು. ರಂಗಭೂಮಿಯ ನಂಟು ಹಲವಾರು ತಂಡಗಳ ಜತೆಗಿದೆ. ಸಂಗ್ಯಾಬಾಳ್ಯಾ, ಕತ್ತಲೆ ಬೆಳಕು, ಒಡಲಾಳ, ಮಹಾಚೈತ್ರ ರಂಗಸಂಪದದ ಪ್ರಯೋಗಗಳಾದರೆ. ಸಂಕ್ರಾಂತಿ, ಗೆಲಿಲಿಯೋ ಪ್ರಮುಖ ರಂಗಪ್ರಯೋಗಗಳು ಚಂದ್ರು ಅವರನ್ನು ಸದಾ ನೆನಪಿಡುವಂತೆ ಮಾಡಿದ ಸಮುದಾಯದ ನಾಟಕಗಳು.

---



## ಕೆ. ರಂಗಸ್ವಾಮಿ

ಪೌರಾಣಿಕ ನಾಟಕಗಳ ಪ್ರೇರಣೆ ಪಡೆದ ಶ್ರೀ ಕೆ. ರಂಗಸ್ವಾಮಿ ಹದಿವಯಸ್ಸಿನಲ್ಲೇ ಐತಿಹಾಸಿಕ. ಚಾರಿತ್ರಿಕ ಮತ್ತು ಸಾಮಾಜಿಕ ನಾಟಕಗಳಲ್ಲಿ ಮುಖಕ್ಕೆ ಬಣ್ಣ ಹಚ್ಚಿದರು.

ರಂಗಸಿರಿಯ ಹವ್ಯಾಸಿ ಗೆಳೆಯರ ಜೊತೆಗೂಡಿ 'ಅಂಜುಮಲ್ಲಿಗೆ', 'ತೆರೆಗಳು', 'ಒಂದು ಬೊಗಸೆ ನೀರು' ಮುಂತಾದ ನಾಟಕಗಳ ನಿರ್ದೇಶನ ಮಾಡಿ ಪ್ರೇಕ್ಷಕರನ್ನು ಕಟ್ಟುವ ಕೆಲಸ ಮಾಡಿದರು. ರಂಗನಿರ್ದೇಶನದೊಟ್ಟಿಗೆ ನೆಳಲು–ಬೆಳಕು, ವಸ್ತ್ರವಿನ್ಯಾಸ, ರಂಗಪರಿಕರಗಳ ವಿಭಾಗಗಳಲ್ಲು ಕಾರ್ಯನಿರ್ವಹಿಸಿ ತಮ್ಮ ರಂಗಸೇವೆಯ ಹರವನ್ನು ವಿಸ್ತರಿಸಿಕೊಂಡರು.

'ರಂಗಸಿರಿ'ಯ ಬಳಗದಿಂದ 'ಅಣ್ಣಾ' ಎಂದು ಕರೆಯಿಸಿಕೊಳ್ಳುವ ನಮ್ಮ ಕೆ. ರಂಗಣ್ಣ ಹಲವಾರು ಹೊರ ಸಂಘಟನೆಗಳನ್ನು ಹಾಸನಕ್ಕೆ ಆಹ್ವಾನಿಸಿ ರಂಗಬುತ್ತಿಯ ಉಣಬಡಿಸಿದ್ದಾರೆ. ಯುವ ಪೀಳಿಗೆಗೆ ಕಾಲೇಜು ನಾಟಕ ಮತ್ತು ಮಾಧ್ಯಮಿಕ ಹಂತದವರೆಗಿನ ವಯೋಮಾನದ ಚಿಣ್ಣರಿಗೆ ಮಕ್ಕಳ ನಾಟಕಗಳ ಆಯೋಜನೆ ಇವರ ಸಾಧನೆಯ ಗರಿಮೆಗಳಲ್ಲೊಂದು.

---



## ಪಿ.ಎಸ್. ರಾವ್

ಕನ್ನಡ, ತುಳು ನಾಟಕ ಕ್ಷೇತ್ರದಲ್ಲಿ ಬೆರಗಾಗುವ ಸಾಧನೆಗೈದ *ಶ್ರೀ* ಪಿ.ಎಸ್. ರಾವ್ ಬಹುಮುಖಿ ವ್ಯಕ್ತಿತ್ವ ಹೊಂದಿದವರು. ಇವರ ಒಂದುನೂರು ನಲವತ್ತೈದಕ್ಕೂ ಹೆಚ್ಚಿನ ತುಳು-ಕನ್ನಡ ನಾಟಕಗಳು ರಂಗಮಂಚ ಏರಿವೆ. ಹತ್ತಾರು ನಾಟಕಗಳನ್ನು ಅಭಿನಯಿಸಿ, ಜೊತೆಗೆ ಹತ್ತಾರು ಸಂಘ-ಸಂಸ್ಥೆಗಳಲ್ಲಿ ಪದಾಧಿಕಾರಿಯಾಗಿ, ಕಾರ್ಯಕರ್ತರಾಗಿ ದುಡಿದು ಸಮಾಜದಲ್ಲಿ ರಂಗಜಾಗೃತಿ ಉಂಟುಮಾಡಿದವರು. ಸಹೋದರ ಕಲಾವೃಂದ, ಸಹೋದರ ಕಲಾವೃಂದ ಪ್ರಕಾಶನ, ದುರ್ಗಾ ಪ್ರಕಾಶನ ಎಂಬ ಸಂಸ್ಥೆಗಳನ್ನು ಸ್ಥಾಪಿಸಿದ ಶ್ರೇಯ ಪಿ.ಎಸ್. ರಾವ್ ಅವರಿಗೆ ಸಲ್ಲುತ್ತವೆ.

ಜನಪ್ರಿಯ ಹಾಸ್ಯನಟ, ನಿರ್ದೇಶಕ, ಪ್ರಸಾಧನ ಕಲಾವಿದರಾಗಿ ರಂಗಸೇವೆ ನೀಡಿದ್ದಾರೆ. 2000ದ ಸಾಲಿನಲ್ಲಿ ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಮತ್ತು ತುಳು ಸಾಹಿತ್ಯ, ನಾಟಕ, ಪತ್ರಿಕೋದ್ಯಮದ ಅಮೂಲ್ಯ ಕೊಡುಗೆಗಾಗಿ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿಯೂ ರಾವ್‌ರ ಪಾಲಾಗಿದೆ.

---



## ಲಿಂಗಯ್ಯ ವೀರಭದ್ರಯ್ಯ ಕುಲಕರ್ಣಿ

ತಮ್ಮ ಹದಿನಾಲ್ಕನೆಯ ವಯಸ್ಸಿನಲ್ಲಿ ರಂಗಪ್ರವೇಶ ಮಾಡಿದ *ಶ್ರೀ* ಲಿಂಗಯ್ಯ ವೀರಭದ್ರಯ್ಯ ಕುಲಕರ್ಣಿಯವರು ವೃತ್ತಿ ರಂಗದಲ್ಲಿ ನಟ, ಗಾಯಕ, ಹಾರ್ಮೋನಿಯಂ ಮೇಷ್ಟರಾಗಿ ಸೇವೆ ಗೈದವರು. ತಮ್ಮ ಮನೋಜ್ಞ ಅಭಿನಯ, ಸಂಗೀತದಿಂದ ಅಪಾರ ರಸಿಕರನ್ನು ಗಳಿಸಿದವರು. ನಾಟ್ಯಭೂಷಣ ಏಣಗಿ ಬಾಳಪ್ಪನವರ ಗರಡಿಯಲ್ಲಿ ಪಳಗಿದ ಲಿಂಗಯ್ಯನವರು ಬೇರೆ ಬೇರೆ ನಾಟಕ ಕಂಪನಿಗಳಲ್ಲಿ ಸಂಗೀತ ಪ್ರಧಾನ ಪಾತ್ರಗಳನ್ನು ನಿರ್ವಹಿಸಿದ್ದಾರೆ.

1968ರಲ್ಲಿ *ಶ್ರೀ* ಮಹಾಂತ ದುರದುಂಡೀಶ್ವರ ಸಂಗೀತ ನಾಟಕ ಮಂಡಳಿಯನ್ನು ಸ್ಥಾಪಿಸಿ ಒಂದು ದಶಕಕ್ಕೂ ಹೆಚ್ಚು ಕಾಲ ಕಂಪನಿಯನ್ನು ಮುನ್ನಡೆಸಿಕೊಂಡು ಹೋದರು. ಬಸ್ ಹಮಾಲ್, ಕೊಯ್ನಾ ಭೂಕಂಪ, ಬಂದ್ನಪ್ಪೋ ಮುಸುರಿ ಮಾವ, ಕುಲಪುತ್ರ, ಹೇಮರೆಡ್ಡಿ ಮಲ್ಲಮ್ಮ, ರೇಣುಕಾ ಯಲ್ಲಮ್ಮ ಮುಂತಾದ ನಾಟಕಗಳು ಇವರ ಮಾಲೀಕತ್ವದ ನಾಟಕ ಕಂಪನಿಯಿಂದ ಪ್ರಯೋಗ ಕಂಡಿವೆ.

---



## ಕೆ.ಬಿ. ಶಂಕರ್

ಕಳೆದ ಮುವತ್ತಾರು ವರ್ಷಗಳಿಂದ ಚಿತ್ತರಗಿ ವೃತ್ತಿ ನಾಟಕ ಸಂಘದಲ್ಲಿ ರಂಗಸೇವೆಯಲ್ಲಿರುವ ಶ್ರೀ ಕೆ.ಬಿ. ಶಂಕರ್ ಇಳಿವಯಸ್ಸಿನಲ್ಲೂ ದಣಿವರಿಯದ ರಂಗಕಾಯಕ ಯೋಗಿ. ಬಿ.ಎ. ಪದವಿ ಪಡೆಯದೇ ಶಿಕ್ಷಣವನ್ನು ಅರ್ಧಕ್ಕೆ ಬಿಟ್ಟು ಉಪಜೀವನಕ್ಕಾಗಿ ರಂಗಭೂಮಿ ಆಸರೆಗೆ ಬಂದರು.

ರಂಗವಿನ್ಯಾಸ ಕಲಾವಿದನಾಗಿ ಸೇವೆ ಸಲ್ಲಿಸುತ್ತ ಚಿತ್ತರಗಿ ಕಂಪನಿಯ ಮೂರೂ ಶಾಖೆಗಳಲ್ಲಿ ಕಂಪನಿ ಕಾರ್ಯದರ್ಶಿಯಾಗಿ ವ್ಯವಸ್ಥಾಪನೆಯನ್ನು ನೋಡಿಕೊಳ್ಳುತ್ತಿದ್ದಾರೆ. ಒಂದು ಕಂಪನಿ ನಡೆಸುವ ಎಲ್ಲ ಸೂಕ್ಷ್ಮಗಳನ್ನು ಅನುಭವದಿಂದ ಕಲಿತು ಎತ್ತರಕ್ಕೆ ಏರಿದ ಶಂಕರ್ ನಾಟಕ ಕಂಪನಿಗಳ ವ್ಯವಸ್ಥಾಪನಕ್ಕೆ ಉತ್ತಮ ಉದಾಹರಣೆ.



## ಡಿ.ಕೆ. ಶಿಂಧೆ

ರಂಗಕರ್ಮಿ ಶ್ರೀ ಡಿ.ಕೆ. ಶಿಂಧೆ ಐತಿಹಾಸಿಕ ಮತ್ತು ಪೌರಾಣಿಕ ರಂಗಕ್ಷೇತ್ರದಲ್ಲಿ ದೊಡ್ಡ ಹೆಸರು. ಐವತ್ತಕ್ಕೂ ಮೇಲ್ಪಟ್ಟ ನಾಟಕಗಳಲ್ಲಿ ಅಭಿನಯಿಸಿದ ಇವರು ನಾಟಕ ರಚನೆ ಮತ್ತು ನಿರ್ದೇಶನದಲ್ಲೂ ಯಶಸ್ವಿಯಾಗಿದ್ದಾರೆ. ಕಲಿ ಕಂಠೀರವ, ಕಿತ್ತೂರು ಚೆನ್ನಮ್ಮ, ಟಿಪ್ಪು ಸುಲ್ತಾನ್, ಪ್ರಚಂಡ ರಾವಣ, ಛತ್ರಪತಿ ಶಿವಾಜಿ ಇವು ಶಿಂಧೆಯವರು ಅಭಿನಯಿಸಿದ ಪ್ರಮುಖ ನಾಟಕಗಳು.

ಐತಿಹಾಸಿಕ, ಪೌರಾಣಿಕ ಮತ್ತು ಸಾಮಾಜಿಕ ನಾಟಕಗಳ ನಿರ್ದೇಶನದ ಹೊಣೆಗಾರಿಕೆ ಜೊತೆಗೆ ನೇಪಥ್ಯದ ಕಾರ್ಯವನ್ನು ನಿರ್ವಹಿಸಿರುವವರು. ಸೀನರಿ, ವಸ್ತ್ರವಿನ್ಯಾಸ, ಪ್ರಸಾಧನ, ಬೆಳಕು, ರಂಗಸಜ್ಜಿಕೆಯಲ್ಲಿ ಅನುಭವ ಪಡೆದ ಇವರು ಪೌರಾಣಿಕ ನಾಟಕಗಳಲ್ಲಿ ಪ್ರಾಯೋಗಿಕತೆ ತಂದು ಆ ನಾಟಕಗಳನ್ನು ರಂಗದ ಮೇಲೆ ತರುವಲ್ಲಿ ಖ್ಯಾತರಾಗಿದ್ದಾರೆ.



## ಜಿ. ಸೀತಾರಾಮಶೆಟ್ಟಿ ಕೂರಾಡಿ

ಉಡುಪಿ ಜಿಲ್ಲೆಯಲ್ಲಿ ರಂಗಚಟುವಟಿಕೆಗಳನ್ನು ಚಳವಳಿಯಂತೆ ಮುನ್ನಡೆಸಿಕೊಂಡು ಬರುತ್ತಿರುವ ಶ್ರೀ ಜಿ. ಸೀತಾರಾಮಶೆಟ್ಟಿಯವರು ವೃತ್ತಿಯಲ್ಲಿ ಮುಖ್ಯೋಪಾಧ್ಯಾಯರು. ನಟನೆ, ನಿರ್ದೇಶನ, ರಚನೆ ಮತ್ತು ನೇಪಥ್ಯದಲ್ಲೂ ದುಡಿಯುವ ಸೀತಾರಾಮರು ಪೂರ್ಣಪ್ರಮಾಣದ ರಂಗಕರ್ಮಿಯಾಗಿ ಹೊರಹೊಮ್ಮಿದ್ದಾರೆ. ಅಲಿಬಾಬಾ ಮತ್ತು ನಲವತ್ತು ಕಳ್ಳರು, ಹಯವದನ, ಉದ್ಧವ, ಅಜ್ಜಿ ಕತೆ, ಶಿವಭೂತಿ, ಶೆಟ್ಟರ ಶ್ರೇಷ್ಠ ನಿರ್ದೇಶನಕ್ಕೆ ಉತ್ತಮ ಉದಾಹರಣೆಗಳು. ಅಲಿಬಾಬಾ ಅತಿ ಹೆಚ್ಚು ರಂಗಪ್ರಯೋಗ ಕಂಡ ನಾಟಕವಾಗಿದೆ.

ಕುಂದಾಪುರ, ಕೂರಾಡಿ, ಹಾರಾಡಿ, ಬೈಂದೂರು ಪರಿಸರದಲ್ಲಿ ರಂಗಕ್ರಿಯೆಗಳು ಸದಾ ಜೀವಂತವಾಗಿರಿಸಿದವರಲ್ಲಿ ಸೀತಾರಾಮರು ಪ್ರಮುಖರು.



## ಹರಿಪ್ರಸಾದ್

ಒಂಬತ್ತನೆಯ ತರಗತಿಯಲ್ಲೇ ಕಿರುನಾಟಕಕ್ಕೆ ಪ್ರಶಸ್ತಿ ಪಡೆದ ಶ್ರೀಮತಿ ಹರಿಪ್ರಸಾದ್ ಬಹುಮುಖಿ ಪ್ರತಿಭೆಯ ಸಾಧಕರು. ಸುಗಮ ಸಂಗೀತ ಗಾಯನ, ರೇಡಿಯೋ ನಾಟಕಗಳ ಕಲಾವಿದೆಯಾಗಿ ಆರಂಭದಲ್ಲಿ ತಮ್ಮ ಕಲಾಭಿವ್ಯಕ್ತಿ ಮೆರೆದ ಶ್ರೀಮತಿ ಹರಿಪ್ರಸಾದ್‌ರು ವಿವಿಧ ತಂಡಗಳಲ್ಲಿ ಅನೇಕ ಪ್ರಮುಖ ಪಾತ್ರ ನಿರ್ವಹಿಸಿ ಮೆಚ್ಚುಗೆಗೆ ಪಾತ್ರರಾದರು. ಕಿಸಾಗೌತಮಿ ಗೀತ ನಾಟಕದಲ್ಲಿ ಕಾರಂತರ ನಿರ್ದೇಶನದ ಗೀತೆಗಳನ್ನು ಹಾಡಿ ಪ್ರೇಕ್ಷಕರನ್ನು ಮಂತ್ರಮುಗ್ಧರಾಗಿಸಿದವರು.ಏಗಡ ವಿಕ್ರಮರಾಯ, ಬೆರಳ್ಗೆ ಕೊರಳ್, ಆಷಾಢಭೂತಿ, ಮೃಚ್ಛಕಟಿಕ, ಕನ್ನಡದ ಮುಖ್ಯ ನಾಟಕಗಳಲ್ಲಿ ಅಭಿನಯಿಸಿದ ಇವರು ಇಂಗ್ಲಿಷ್‌ನ ಮೊಲಿಯೆರ್, ಷೆರಿಡನ್, ಆಸ್ಕರ್ ವೈಲ್ಡ್, ಚೆಕಾಫ್‌ರ ನಾಟಕಗಳಲ್ಲಿ ಅಭಿನಯ ನೀಡಿ ಎರಡೂ ಭಾಷೆಗಳ ಸಾಂಸ್ಕೃತಿಕ ಕೊಂಡಿಯೆನಿಸಿದ್ದಾರೆ. ರಾಷ್ಟ್ರ, ಅಂತರರಾಷ್ಟ್ರೀಯ ಮಟ್ಟದ ಸಮಾವೇಶಗಳಿಗೆ ನೃತ್ಯ ನಾಟಕ, ರಂಗಸಜ್ಜಿಕೆ, ಹಿನ್ನೆಲೆಗಾಯನ ಮತ್ತು ಪಾತ್ರ ನಿರ್ವಹಣೆ ನೀಡಿದ ಶ್ರೀಮತಿ ಹರಿಪ್ರಸಾದ್ ರಂಗಭೂಮಿ ಅನುಭವವನ್ನು ಹೆಚ್ಚೆಚ್ಚು ವಿಸ್ತರಿಸಿಕೊಂಡವರು.

---



## ಮೋಹನ ಮಟ್ಟನವಿಲೆ (ಸಿ.ಜಿ.ಕೆ. ಯುವರಂಗ ಪುರಸ್ಕಾರ)

ಮೈಸೂರು ವಿಶ್ವವಿದ್ಯಾಲಯದ ಕಲಾಪದವೀಧರರಾದ ಶ್ರೀ ಮೋಹನ ಮಟ್ಟನವಿಲೆ 1995ರಿಂದ ರಂಗಭೂಮಿಯೊಂದಿಗೆ ಬೆಸೆದುಕೊಂಡವರು. ಅನೇಕ ರಂಗತರಬೇತಿ ಶಿಬಿರಗಳಲ್ಲಿ ಭಾಗವಹಿಸಿರುವ ಇವರು ಅಭಿನಯ, ನಿರ್ದೇಶನ, ವಸ್ತ್ರವಿನ್ಯಾಸ ಮೊದಲಾದ ವಿಭಾಗಗಳಲ್ಲಿ ರಂಗಸೇವೆ ಗೈದಿದ್ದಾರೆ. ಸಿ. ಬಸವಲಿಂಗಯ್ಯ ನಿರ್ದೇಶನದ ಮಯೂರಿ, ಕೃಷ್ಣಮೂರ್ತಿ ಕವತ್ತಾರರ ಸಂಭವಾಮಿ ಯುಗೆ ಯುಗೆ, ಜೀವನರಾಂ ಸುಳ್ಯರವರ 'ಅಂಧಯುಗ' ನಾಟಕ ಶಿಬಿರಗಳಲ್ಲಿ ಭಾಗವಹಿಸಿ ನಟರಾಗಿ, ವಸ್ತ್ರವಿನ್ಯಾಸಕಾರರಾಗಿ, ಪರಿಕರ ಸಹಾಯಕರಾಗಿ, ಸಂಘಟಕರಾಗಿ ರಂಗಸೇವೆ ಗೈದಿದ್ದಾರೆ. 'ಆ ಕಡೆಯ ದಿನ', 'ಯಮಳ ಪ್ರಶ್ನೆ', 'ನ್ಯಾಯದ ಬಾಗಿಲಲ್ಲಿ' ನಾಟಕಗಳನ್ನು ನಿರ್ದೇಶಿಸಿದ್ದಾರೆ.

---



## ರಾಜೇಶ್ ತಲಕಾಡು (ಸಿ.ಜಿ.ಕೆ. ಯುವರಂಗ ಪುರಸ್ಕಾರ)

ನಟನೆ, ನಿರ್ದೇಶನ, ಬೆಳಕು ವಿನ್ಯಾಸ, ಮೇಕಪ್, ರಂಗ ವಿನ್ಯಾಸ ಹೀಗೆ ರಂಗಭೂಮಿಯ ಹಲವಾರು ವಿಭಾಗಗಳಲ್ಲಿ ಶ್ರಮಿಸುತ್ತಿರುವವರು 32ರ ಹರೆಯದ ಶ್ರೀ ರಾಜೇಶ್ ತಲಕಾಡು. ಮೈಸೂರು ವಿಶ್ವವಿದ್ಯಾಲಯದ ಬಿ.ಎಸ್ಸಿ. ಪದವೀಧರ ಈಗಾಗಲೇ 24 ನಾಟಕಗಳಿಗೆ ಬೆಳಕಿನ ವಿನ್ಯಾಸ ಒದಗಿಸಿದ್ದಾರೆ.ಪುಷ್ಪರಾಣಿ, ಆಪರೇಷನ್ ಥಿಯೇಟರ್, ಅಶ್ವಪರ್ವ, ಸಯಾಮಿ ಸಿಸ್ಟರ್, ಪರಿಸರ, ಭೂಮಿ ನಾಟಕಗಳನ್ನು ನಿರ್ದೇಶಿಸಿರುವ ಇವರು ಅನೇಕ ನಾಟಕೋತ್ಸವಗಳಲ್ಲಿ ನಾಟಕ ಪ್ರದರ್ಶನ ನೀಡಿದ್ದಾರೆ. ಜನಮನ, ರಂಗಾಯಣ, ನಿರಂತರ, ನಟನ, ಪರಿವರ್ತನ, ಕದಂಬ ರಂಗ ವೇದಿಕೆ, ತನುಮನ, ಮೊದಲಾದ ಸಂಘಟನೆಗಳೊಂದಿಗೆ ಕೈಗೂಡಿಸಿ ರಂಗಸೇವೆ ಗೈದವರು. ಸಿ.ಜಿ.ಕೆ. ಪ್ರಸನ್ನ, ಜನ್ನಿ, ಚಿದಂಬರರಾವ್ ಜಂಬೆ, ರಾಜಶೇಖರ ಕದಂಬ, ಮಂಡ್ಯ ರಮೇಶರಂಥ ನುರಿತ ರಂಗಕರ್ಮಿಗಳೊಂದಿಗೆ ರಂಗಭೂಮಿಯ ವಿವಿಧ ಕ್ಷೇತ್ರಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ.

---



## ರಾಮಕೃಷ್ಣ ಬೆಳ್ತೂರ್ (ಸಿ.ಜಿ.ಕೆ. ಯುವರಂಗ ಪುರಸ್ಕಾರ)

ದುಶ್ಯಾಸನ ವಧೆಯ ಕೃಷ್ಣನಾಗಿ ಅಭಿನಯಿಸಿದ ಬಾಲನಟ ಶ್ರೀ ರಾಮಕೃಷ್ಣ ಅಭಿನಯ ತರಂಗದಲ್ಲಿ ಒಂದು ವರ್ಷದ ರಂಗತರಬೇತಿಯ ಬಳಿಕ ನಾಣಿಯವರ ಹತ್ತಿರ ಪ್ರಸಾಧನದ ಪಟ್ಟುಗಳನ್ನು ಕಲಿತುಕೊಂಡು ನಟನೆ ಮತ್ತು ಪ್ರಸಾಧನಗಳಲ್ಲಿ ಅಲ್ಪಾವಧಿಯಲ್ಲೇ ಗಣನೀಯ ಕೊಡುಗೆ ನೀಡಿದರು. ಸಿ.ಜಿ.ಕೆ.ಯವರ ರುಡಾಲಿ, ಕಾ.ತ. ಚಿಕ್ಕಣ್ಣನವರ ದಂಡೆ ಇಕ್ಕಾಲರ ನಾಯಿತಿಪ್ಪ ಹೆಸರಿಸುವ ರಾಮಕೃಷ್ಣರ ಅಭಿನಯದ ರಂಗಕೃತಿಗಳು. ನಾಡಿನ ಹೆಸರಾಂತ ತಂಡಗಳಿಗೆ ಪ್ರಸಾಧನ ಕಲೆಯ ಸ್ಪರ್ಶ ನೀಡಿದ ಬೆಳ್ತೂರು ಹಲವು ನಾಟಕಗಳಿಗೆ ನಿರ್ದೇಶನ ಮಾಡಿದ್ದಾರೆ. ಬೆಳ್ತೂರು ಅವರು ಮಕ್ಕಳ ಮೇಳಗಳನ್ನು, ಏರ್ಪಡಿಸಿ ಶಿಬಿರಗಳನ್ನು ಹಮ್ಮಿಕೊಂಡು, ಅಲ್ಲಿ ಮಕ್ಕಳ ಪ್ರತಿಭೆಗಳಿಗೆ ಬೆಳಕು ನೀಡಿ ಉತ್ಸಾಹ ತುಂಬುವ ಕಾಯಕ ನಡೆಸಿದ್ದಾರೆ.

---



## ಸಂತೋಷ ಗಜಾನನ ಮಹಾಲೆ (ಸಿ.ಜಿ.ಕೆ. ಯುವರಂಗ ಪುರಸ್ಕಾರ)

ಕರ್ನಾಟಕದ ಪ್ರಸಿದ್ಧ ಪ್ರಸಾಧನ ಕಲಾವಿದರಾದ ಗಜಾನನ ಹರಿ ಮಹಾಲೆಯವರ ಪುತ್ರರಾಗಿ ತಂದೆ ತುಳಿದ ಹಾದಿಯಲ್ಲೇ ತಮ್ಮ ರಂಗಜೀವನವನ್ನು ಸಾರ್ಥಕಗೊಳಿಸಿಕೊಂಡಿರುವ ಶ್ರೀ ಸಂತೋಷ ಮಹಾಲೆ ಎಸ್.ಎಸ್.ಡಿ. ಪದವೀಧರರು. ಏಣಗಿ ಬಾಳಪ್ಪ, ಅಂಕೂರ್ ಸಿ. ಬಸವಲಿಂಗಯ್ಯ, ವಾಲ್ಟರ್ ಡಿಸೋಜ, ಜಯತೀರ್ಥ ಜೋಷಿ, ಇವರ ಸಹಯೋಗದಲ್ಲಿ ರಂಗಭೂಮಿಯ ಅನುಭವ ಹೊಂದಿದ್ದಾರೆ. 'ತಲೆದಂಡ', 'ಸ್ಪಾರ್ಟಕಸ್', 'ಪರಕಾಯ ಪ್ರವೇಶ', 'ಗಿಡ್ಡು ಟೇಲರ್', 'ಹೆದ್ದಾರಿಯಲ್ಲೊಂದು ರಾತ್ರಿ', 'ಹಯವದನ', 'ಕ್ರಾಂತಿ ಬಂತು ಕ್ರಾಂತಿ', 'ಸಾಕ್ಷಿಕಲ್ಲು', 'ಪೇಯಿಂಗ್ ಗೆಸ್ಟ್' ಇನ್ನೂ ಹಲವಾರು ನಾಟಕಗಳಲ್ಲಿ ಪ್ರಸಾಧನದ ಜೊತೆಗೆ ಅಭಿನಯವನ್ನೂ ಮಾಡಿದ್ದಾರೆ. ಕನ್ನಡ ರಂಗಭೂಮಿಯಲ್ಲದೆ ಕೊಂಕಣಿ ರಂಗಭೂಮಿಗೂ ಸಹ ಸೇವೆ ಸಲ್ಲಿಸಿರುವುದು ಇವರ ಹೆಗ್ಗಳಿಕೆ. ಕರ್ನಾಟಕದ ಪ್ರಮುಖ ಪ್ರಸಾಧನ ಕಲಾವಿದರಲ್ಲಿ ಮಹಾಲೆ ಪ್ರಮುಖರು.

---



## ಸಿದ್ಧರಾಜು ಎಸ್.ಎಸ್. (ಸಿ.ಜಿ.ಕೆ. ಯುವರಂಗ ಪುರಸ್ಕಾರ)

ರಂಗಶಿಕ್ಷಣದಲ್ಲಿ ಡಿಪ್ಲೊಮಾ ಪದವಿ ಗಳಿಸಿದ ಶ್ರೀ ಸಿದ್ಧರಾಜು ಅತ್ಯಂತ ಭರವಸೆಯ ಯುವ ರಂಗಕರ್ಮಿ. ದಾವಣಗೆರೆಯ ಪ್ರತಿಮಾ ಸಭಾ ಆಯೋಜಿಸಿದ ರಂಗತರಬೇತಿ ಶಿಬಿರದ ಮೂಲಕ ರಂಗಕ್ಕಿಳಿದ ಈ ಯುವ ಪ್ರತಿಭೆ 'ಕಿನ್ನರ ಮೇಳ'ದಲ್ಲಿ ಅಭಿನಯಿಸುವ ಮೂಲಕ ತಿರುಗಾಟ ನಡೆಸಿದವರು. 'ನೀನಾಸಂ'ನ ಶಿಕ್ಷಣ ಪೂರೈಸಿ ನಟನಾಗಿ ಹೊರ ಹೊಮ್ಮಿದವರು. ಈ ಅನುಭವ ಕಟ್ಟಿಕೊಂಡು 1997ರಿಂದ ದಾವಣಗೆರೆಯ 'ನೀವು ನಾವು' ಸಂಸ್ಥೆಯ ಸಂಚಾಲಕನ ಹೊಣೆ ಹೊತ್ತು ರಂಗಸೇವೆ ನಡೆಸಿದ್ದಾರೆ. ಹೊರಗಿನ ಶ್ರೇಷ್ಠ ತಂಡಗಳ ಪ್ರಯೋಗ ಮತ್ತು ಸ್ಥಳೀಯ ಸಂಸ್ಥೆಯ ಪ್ರಯೋಗಗಳನ್ನು ಯಶಸ್ವಿಯಾಗಿ ಇವರು ಆಯೋಜಿಸಿದ್ದಾರೆ.

---



## ಸುರೇಶ್ ಅಂಗಡಿ (ಸಿ.ಜಿ.ಕೆ. ಯುವರಂಗ ಪುರಸ್ಕಾರ)

ಬಿ.ಎಸ್ಸಿ., ಬಿ.ಇಡಿ. ಪದವೀಧರರಾದ ಶ್ರೀ ಸುರೇಶ್ ಅಂಗಡಿಯವರು ಕನ್ನಡ ಸಾಹಿತ್ಯ ಪರಿಷತ್ತು, ರಂಗಭಾರತಿ, ಭಾರತ ಜ್ಞಾನ ವಿಜ್ಞಾನ ಸಮಿತಿ, ಚುಟುಕು ಸಾಹಿತ್ಯ ಪರಿಷತ್‌ಗಳಲ್ಲಿ ಸದಸ್ಯರಾಗಿದ್ದಾರೆ. 'ಕಟ್ಟೆರಂಗ ಪ್ರೀತಿ' ರೆಪರೇಟರಿಯ ಸಂಸ್ಥಾಪಕರು. ಬೀದಿ ರಂಗಭೂಮಿಯಲ್ಲಿ, ಅಭಿನಯ, ರಚನೆ, ನಿರ್ದೇಶನ. ಇವರ ನಿರ್ದೇಶನದ 'ಅಂಗಾದ್ರೆ ನಾವು ಮದುವೆಯಾಗೋದ್ ಯಾರ್ನ' ಈ ನಾಟಕಕ್ಕೆ ಪ್ರಶಸ್ತಿ ಲಭಿಸಿದೆ. 'ಪಂಡಿತ ದಿಗ್ವಿಜಯ ಭಂಗ', 'ದೇವರ ಪಲಾಯನ', 'ಹೆಬ್ಬಾಲ', 'ವಂದೇ ಮಾತರಂ', 'ಗೆಜ್ಜೆಲಟ್ಟೆ' ಇವರು ಅಭಿನಯಿಸಿದ ನಾಟಕಗಳು. ಇವರು ನಿರ್ದೇಶಿಸಿದ ನಾಟಕಗಳು 'ಸಾಹೇಬರ ನಾಯಿ', 'ಬಾಂಬ್ ಸ್ಫೋಟ'.

ಪೌರಾಣಿಕ ನಾಟಕದಲ್ಲೂ ಕೈಯಾಡಿಸಿದ ಇವರು 'ರಕ್ತ ಬೀಜಾಸುರ'ದಲ್ಲಿ ಅಭಿನಯಿಸಿದ್ದಾರೆ. ಇದಲ್ಲದೆ ಮಕ್ಕಳ ರಂಗಭೂಮಿಯೊಂದಿಗೆ ಒಡನಾಟ. ಕಾಲೇಜು ನಾಟಕೋತ್ಸವದಲ್ಲಿ 'ಪಂಡಿತ ದಿಗ್ವಿಜಯ ಭಂಗ' ನಾಟಕಕ್ಕೆ ಚಿನ್ನದ ಪದಕವನ್ನು ತಮ್ಮದಾಗಿಸಿಕೊಂಡಿದ್ದಾರೆ. ಇವರು ನಾಟಕ ವಿಮರ್ಶಕರು ಹೌದು.

---



## ಪ್ರೊ. ತಾವರೆಕೆರೆ (ಕಂಠಿ) ಶ್ರೀಕಂಠಯ್ಯ

(ಹೊರರಾಷ್ಟ್ರ ಕನ್ನಡಿಗರು ಪುರಸ್ಕಾರ)

ತಾವರೆಕೆರೆ ಶ್ರೀ ಶ್ರೀಕಂಠಯ್ಯನವರು ಮೈಸೂರು ವಿಶ್ವವಿದ್ಯಾಲಯದಲ್ಲಿ ಬಿ.ಎಸ್‌ಸಿ. ಪದವಿಯನ್ನು, ಎಂ.ಎಸ್‌ಸಿ. ಪದವಿಯನ್ನು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ಪಿಹೆಚ್.ಡಿ. ಪದವಿಗಳನ್ನು ಸದರನ್ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದಲ್ಲಿ ಪಡೆದಿರುತ್ತಾರೆ. ಶ್ರೀಯುತರು ಕ್ಯಾಲಿಫೋರ್ನಿಯಾ ಸ್ಟೇಟ್ ಯೂನಿವರ್ಸಿಟಿ, ಕ್ಯಾಥೋಲಿಕ್ ಯೂನಿವರ್ಸಿಟಿ ಆಫ್ ಅಮೇರಿಕಾ ಇನ್ ವಾಷಿಂಗ್ಟನ್ ಡಿ.ಸಿ. ಹಾಗೂ ಅಮೆರಿಕೆಯ ಹಲವು ವಿ.ವಿ.ಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಸಿಸ್ಟಮ್ ಅನಾಲಿಸಿಸ್ ಹಾಗೂ ಕ್ವಾಂಟಿಟೇಟಿವ್ ರಿಸರ್ಚ್ ಮೆಥೆಡ್ಸ್ ಬಗ್ಗೆ ಪುಸ್ತಕಗಳನ್ನು ಬರೆದಿರುತ್ತಾರೆ. ತಮ್ಮ ನಿರಂತರ ವೃತ್ತಿ ಜೀವನದ ನಡುವೆ ಕನ್ನಡ ಸಂಸ್ಕೃತಿ–ಸಾಹಿತ್ಯ–ರಂಗಭೂಮಿಯನ್ನು ಮರೆತವರಲ್ಲ. ವಾಷಿಂಗ್ಟನ್ನಿನ ಕನ್ನಡ ಸಂಘದ ಸಲಹೆಗಾರರಾಗಿ, ಅಧ್ಯಕ್ಷರಾಗಿ ಕೆಲಸ ನಿರ್ವಹಿಸಿರುವ ಇವರು 'ನಾಟ್ಯಭಾರತಿ'ಯ ಸ್ಥಾಪಕ ಅಧ್ಯಕ್ಷರು ಹಾಗೂ 'ಶರಣ ಚಾರಟ'ಯ ಅಧ್ಯಕ್ಷರಾಗಿದ್ದಾರೆ. ಮದುವೆ ದಲ್ಲಾಳಿ, ಅಳಿಯ ದೇವರು, ಹಯವದನ, ಬೆರಳ್ಗೆ–ಕೊರಳ್ ನಾಟಕಗಳಲ್ಲಿ ಅಭಿನಯಿಸಿ, ನಿರ್ದೇಶನವನ್ನು ಮಾಡಿದ್ದಾರೆ.

---



## ವಲ್ಲೀಶ್ ಎಂ.ವಿ. ಶಾಸ್ತ್ರಿ (ಹೊರರಾಷ್ಟ್ರ ಕನ್ನಡಿಗರು ಪುರಸ್ಕಾರ)

ಹಾಸನ ಜಿಲ್ಲೆಯ ಮತಿಗೋಡುವಿನಲ್ಲಿ ಶ್ರೀ ವಲ್ಲೀಶ್ ಎಂ.ವಿ. ಶಾಸ್ತ್ರಿಯವರು 8 ಡಿಸೆಂಬರ್ 1955ರಲ್ಲಿ ಜನಿಸಿದರು. ಪ್ರಸ್ತುತ ಯು.ಎಸ್.ಎ. ನಲ್ಲಿ ಕಂಪ್ಯೂಟರ್ ಕನ್ಸಲ್ಟೆಂಟ್ ಆಗಿರುವ ಇವರು ಬೆಂಗಳೂರಿನ ಬೆನಕ ತಂಡದ ಜೋಕುಮಾರಸ್ವಾಮಿ, ಸತ್ತವರ ನೆರಳು, ಹ್ಯಾಮ್ಲೆಟ್ ಹಾಗೂ ಇತರ ನಾಟಕಗಳಲ್ಲಿ ಅಭಿನಯಿಸಿರುವವರು. ಮುಂದೆ ವೃತ್ತಿಯನ್ನರಸಿ ಅಮೆರಿಕೆಗೆ ತೆರಳಿದ ನಂತರ ನಾರ್ಥರನ್ ಕ್ಯಾಲಿಫೋರ್ನಿಯ, ಬೋಸ್ಟನ್ ನ್ಯೂ

ಇಂಗ್ಲೆಂಡ್, ವಾಷಿಂಗ್ಟನ್ ಡಿ.ಸಿ., ನ್ಯೂಜರ್ಸಿ, ನ್ಯೂಯಾರ್ಕ್‌ನ ಕನ್ನಡ ಕೂಟ, ಕಾವೇರಿ ಕನ್ನಡ ಸಂಘ, ತ್ರಿವೇಣಿ ಕನ್ನಡ ಸಂಘಗಳಲ್ಲಿ ಸಕ್ರಿಯವಾಗಿರುವವರು.

ಹಾಲಿವುಡ್‌ನಲ್ಲಿ ಯಮ, ಯಮನ ಕಾಲ್‌ಸೆಂಟರ್, ಕೃಷ್ಣಸಂಧಾನ, ಪಶ್ಚಾತ್ತಾಪ, ಗೋವಿನ ಕಥೆ, ಕಿಂದರಜೋಗಿ ನಾಟಕಗಳನ್ನು ನಿರ್ದೇಶಿಸಿ ಹೂಸ್ಟನ್–2000, ಡೆಟ್ರಾಯಿಟ್–2002, ಅಟ್ಲಾಂಟ–2004, ಬಾಲ್ಟಿಮೋರ್–2006ನ 'ಅಕ್ಕ' ಸಮ್ಮೇಳನಗಳಲ್ಲಿ ಪ್ರದರ್ಶಿಸಿದ್ದಾರೆ. ಯಮನ ಕಾಲ್‌ಸೆಂಟರ್, ಪೀಕ್ ಎಂಡ್ ಗಂಡ, ಬೋರೇಗೌಡನ ಅಮೆರಿಕಾ ಪ್ರವೇಶ ನಾಟಕಗಳನ್ನು ಬರೆದಿರುವ ಇವರು ಅಮೆರಿಕೆಯ ಕನ್ನಡ ಸಾಂಸ್ಕೃತಿಕ ಜಗತ್ತಿನ ಮೇರು ವ್ಯಕ್ತಿಗಳಲ್ಲಿ ಮುಖ್ಯರು.

---



**ಸುದರ್ಶನ ನಾರಾಯಣ** (ಹೊರರಾಷ್ಟ್ರ ಕನ್ನಡಿಗರು ಪುರಸ್ಕಾರ)

ಶ್ರೀ ಸುದರ್ಶನ ನಾರಾಯಣರವರು ಪ್ರಸ್ತುತ ಆಸ್ಟ್ರೇಲಿಯಾದ ಸಿಡ್ನಿಯಲ್ಲಿ ವೃತ್ತಿಯಲ್ಲಿದ್ದು, ಅಲ್ಲಿನ ಸಾಹಿತ್ಯ ಹಾಗೂ ರಂಗಭೂಮಿ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ರಂಗಸಂಗೀತ, ಬೆಳಕು ವಿನ್ಯಾಸ, ರಂಗವಿನ್ಯಾಸ, ನಟನೆ, ನಿರ್ದೇಶನ, ಸಂಘಟನೆಗಳಲ್ಲಿ ಆಸಕ್ತಿ ವಹಿಸಿರುವ ಶ್ರೀಯುತರು, ಬೆಂಗಳೂರಿನ ಬೆನಕ ತಂಡದಲ್ಲಿ ಹಲವು ನಾಟಕಗಳಲ್ಲಿ ಅಭಿನಯಿಸಿರುವರು. ಆಸ್ಟ್ರೇಲಿಯಾದ ಸಿಡ್ನಿಯಲ್ಲಿ ಅನಿವಾಸಿ ಕಲಾತಂಡವನ್ನು ಸ್ಥಾಪಿಸಿ ಜೋಕುಮಾರಸ್ವಾಮಿ, ಬೆಕ್ಕು ಮತ್ತು ಬಾವಿ, ನಾಟಕಗಳನ್ನು ನಿರ್ದೇಶಿಸಿ ಸಿಡ್ನಿಯಲ್ಲಿ ಪ್ರದರ್ಶಿಸಿದ್ದಾರೆ. ಲೀಲಾಜಾಲ–ನಾಟಕ ರಚನೆಯ ಜೊತೆಗೆ ನಿಕಲಾಯ್ ಗೋಗೆಲ್‌ರ 'ದ ಗ್ಯಾಂಬ್ಲರ್' ಮತ್ತು 'ದ ಓವರ್‌ಕೋಟ್', 'ಲೇಡಿ ಗ್ರೆಗರಿಯ ರೈಸಿಂಗ್ ಆಫ್ ದ ಮೂನ್' ನಾಟಕಗಳನ್ನು ರೂಪಾಂತರಿಸಿ ನಿರ್ದೇಶಿಸಿದ್ದಾರೆ. 'ಗ್ರೀನ್ ರೂಂ' ಇವರ ಕವಿತಾ ಸಂಕಲನ. 'ಮುಖಾಮುಖಿ' ಇವರು ನಿರ್ದೇಶಿಸಿರುವ ಚಲನಚಿತ್ರ, ಇದರ ಜೊತೆಗೆ ಕಿರುಚಿತ್ರ ಸಾಕ್ಷ್ಯಚಿತ್ರಗಳ ನಿರ್ಮಾಣ, ನಿರ್ದೇಶನ ಮತ್ತು ಬರವಣಿಗೆ ಇವರ ಇತರ ಹವ್ಯಾಸಗಳು.

---



**ಓಂದಾಸ್ ಕಣ್ಣಂಗಾರ್** (ಹೊರನಾಡು ಕನ್ನಡಿಗರು ಪುರಸ್ಕಾರ)

ಉಡುಪಿ ಜಿಲ್ಲೆಯ ಕಣ್ಣಂಗಾರ್ ಶ್ರೀಯುತರು ಹುಟ್ಟಿದ ಸ್ಥಳ. ಇವರ ತಂದೆ ಜನಾರ್ಧನ ಕಾಂಚನ್ ತಾಯಿ ದಯಾವತಿ ಕಾಂಚನ್. ಬಾಲ್ಯದ ಶಿಕ್ಷಣವನ್ನು ಕಣ್ಣಂಗಾರಿನಲ್ಲಿ ಪಡೆದ ಇವರು ಉನ್ನತ ವ್ಯಾಸಂಗವನ್ನು ಮುಂಬಯಿಯಲ್ಲಿ ಪಡೆದು ಪ್ರಸ್ತುತ ಮೊಗವೀರ ಬ್ಯಾಂಕಿನ ಉದ್ಯೋಗಿ. 25 ವರ್ಷಗಳಿಂದ ರಂಗಭೂಮಿಯಲ್ಲಿ ಸಕ್ರಿಯವಾಗಿರುವ ಓಂದಾಸ್‌ರವರು ಮುಂಬಯಿಯ 'ಕರ್ನಾಟಕ ಸಂಘದ ಹಲವು ಪದವಿಗಳನ್ನು ಅಲಂಕರಿಸಿ ಕಳೆದ ಹನ್ನೆರಡು ವರ್ಷಗಳಿಂದ ರಾಷ್ಟ್ರಮಟ್ಟದಲ್ಲಿ ಕುವೆಂಪು ಸ್ಮಾರಕ ಏಕಾಂಕ ನಾಟಕ ಸ್ಪರ್ಧೆಯನ್ನು ಯಶಸ್ವಿಯಾಗಿ ಸಂಘಟಿಸುತ್ತಿದ್ದಾರೆ. ಕರ್ನಾಟಕ ಸಂಘದ 'ಕಲಾಭಾರತಿ' ಮೂಲಕ ಕರ್ನಾಟಕದ ಹಲವು ಭಾಗಗಳಲ್ಲಿ ಹಾಗೂ ರಾಷ್ಟ್ರದ ಪ್ರಮುಖ ನಗರಗಳಲ್ಲಿ ರಂಗಪ್ರಯೋಗಗಳನ್ನು ಸಂಘಟಿಸಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿಯೂ ಕೃಷಿ ಮಾಡಿರುವ ಇವರು 'ದಂಗೆ'; ಕಥಾ ಸಂಕಲನವನ್ನು ಹೊರತಂದಿದ್ದಾರೆ.

---



## ಜಿ. ಕುಮಾರಪ್ಪ (ಹೊರನಾಡು ಕನ್ನಡಿಗರು ಪುರಸ್ಕಾರ)

ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕಿನ ಬಸಾಪುರ ಶ್ರೀ ಜಿ. ಕುಮಾರಪ್ಪ 1957ರಲ್ಲಿ ಜನಿಸಿದರು. ಎಂ.ಎ., ಬಿ.ಲಿಬ್ ಮಾಡಿಕೊಂಡು ಕಳೆದ ಇಪ್ಪತ್ತೆರಡು ವರ್ಷಗಳಿಂದಲೂ ಕೊಲ್ಕತ್ತಾದ ಭಾರತ ರಾಷ್ಟ್ರೀಯ ಗ್ರಂಥಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ಕೊಲ್ಕತ್ತಾದ ಸುಪ್ರಸಿದ್ಧ 'ನಾಂದಿಕಾರ್' ನಾಟಕ ತಂಡ ಹಾಗೂ ಕರ್ನಾಟಕ ಅಸೋಸಿಯೇಷನ್‌ಗಳ ಸಹಕಾರದಿಂದ ಅನೇಕ ಕನ್ನಡ ನಾಟಕ ತಂಡಗಳನ್ನು ಕೊಲ್ಕತ್ತಾಗೆ ಆಹ್ವಾನಿಸುವ ಮೂಲಕ ಬಂಗಾಲದಲ್ಲಿ ಕನ್ನಡ ನಾಟಕಗಳು ಪ್ರದರ್ಶನಗೊಳ್ಳಲು ಪ್ರಮುಖ ಪಾತ್ರ ವಹಿಸಿದ್ದಾರೆ. ಕೊಲ್ಕತ್ತಾಗೆ ಬರುವ ಪ್ರತಿಯೊಬ್ಬ ಸಾಹಿತಿ–ಕಲಾವಿದ ಹಾಗೂ ಕಲಾತಂಡಗಳಿಗೆ ಕುಮಾರಪ್ಪನವರ ಸಹಾಯ ಸದಾ ಸಿದ್ಧ. ಇವರು ಬಂಗಾಳಿ ಕೃತಿಗಳನ್ನು ಕನ್ನಡಕ್ಕೂ ಕನ್ನಡ ಕೃತಿಗಳನ್ನು ಬಂಗಾಳಿಕ್ಕೂ ಅನುವಾದಿಸಿದ್ದಾರೆ. ಮಹಾಶ್ವೇತಾದೇವಿಯವರ ಕಾವಿನ ದಾವೇದಾರ, ದೇವಿಪ್ರಸಾದ ಚಟ್ಟೋಪಾಧ್ಯಾಯರ ಕೃತಿಗಳು, ಸುಸ್ಮಿತ ಬಂದೋಪಾಧ್ಯಾಯ ಅವರ ಕಾಬೂಲಿವಾಲ ಇವರಿಂದ ಅನುವಾದಗೊಂಡ ಪ್ರಮುಖ ಕೃತಿಗಳು. ಸಾಹಿತ್ಯ–ರಂಗಭೂಮಿ–ಸಂಸ್ಕೃತಿ ಹೀಗೆ ಶ್ರೀಯುತರು ಕನ್ನಡ ಮತ್ತು ಬಂಗಾಳಿ ನಡುವಿನ ಕರ್ನಾಟಕ ಸಾಂಸ್ಕೃತಿಕ ರಾಯಭಾರಿಗಳು.

---



## ಯಂ.ಆರ್. ಕೃಷ್ಣಮೂರ್ತಿ ಭಾಗವತರ್

(ಹೊರನಾಡು ಕನ್ನಡಿಗರು ಪುರಸ್ಕಾರ)

ಶ್ರೀ ಪುತ್ತೋಡಿ ಕೊರಗಪ್ಪ ರೈರವರ ರಂಗನಾಮ ಯಂ.ಆರ್. ಕೃಷ್ಣಮೂರ್ತಿ ಭಾಗವತರ್. ಇವರ ತಂದೆ ಉತ್ತಪ್ಪ ರೈ, ತಾಯಿ ದೆಯ್ಯಕ್ಕ, ಕಾಸರಗೋಡಿನ ಪುತ್ತೋಡಿ ಮನೆಯಲ್ಲಿ 1925ರಲ್ಲಿ ಜನಿಸಿದ ಇವರು ಸಂಗೀತ ಶಿಕ್ಷಣವನ್ನು ದಿ. ವೈಂದಪ್ಪ ರೈಗಳು ಹಾಗೂ ದಿ. ಎಂ.ಪಿ. ನರಸಿಂಹಾಚಾರ್ ಇವರಿಂದ, ಯಕ್ಷಗಾನ ಭಾಗವಂತಿಕೆಯನ್ನು ದಿ. ಪುಂಡೂರು ಗೋಪಾಲಕೃಷ್ಣ ಪುಣಿಂಚತ್ತಾಯರವರಿಂದ, ಪಿಟೀಲು ವಾದ್ಯ ಕಲಿಕೆಯನ್ನು ಪಿಟೀಲು ಚೌಡಯ್ಯನವರಿಂದ ಕಲಿತಿದ್ದಾರೆ. ಮುಂದೆ ಇವರು ರಂಗಭೂಮಿಯಲ್ಲಿ ಆಸಕ್ತಿ ಹೊಂದಿ ಎಂ.ವಿ. ಸುಬ್ಬಯ್ಯ ನಾಯ್ಡುರವರ ಕಂಪನಿ, ಗುಬ್ಬಿ ವೀರಣ್ಣ ಕಂಪನಿ ಮತ್ತು ನಂದಿಕೇಶ್ವರ ಕಂಪನಿ, ಬೆಳ್ಳಾರೆ ಚೆನ್ನಕೇಶ್ವರ ನಾಟಕ ಸಂಘ, ಬೇಲೂರು ಇನ್ನೂ ಹಲವು ಕಂಪನಿಗಳಲ್ಲಿ 50 ವರ್ಷಗಳಿಗೂ ಮಿಗಿಲಾಗಿ ರಂಗಸೇವೆಯಲ್ಲಿ ನಿರತರಾಗಿದ್ದ ಇವರು ಹಲವು ಸಿನಿಮಾಗಳಲ್ಲಿಯೂ ನಟಿಸಿದ್ದಾರೆ.

---



## ಪವನ್‌ಕುಮಾರ್ ಮಾನ್ವಿ (ಹೊರನಾಡು ಕನ್ನಡಿಗರು ಪುರಸ್ಕಾರ)

ಶ್ರೀ ಮಾನ್ವಿಯವರು ಹುಟ್ಟಿದ್ದು ನಿಜಾಮನ ಹೈದರಾಬಾದಿನಲ್ಲಿ. ಇಲ್ಲಿಯೇ ಪ್ರಾಥಮಿಕ ಹಾಗೂ ಪದವಿ ವಿದ್ಯಾಭ್ಯಾಸದ ನಂತರ ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಗಳಿಸಿದರು. ಪುಣೆಯ ಫಿಲ್ಮ್ ಮತ್ತು ಟೆಲಿವಿಷನ್ ಶಾಲೆಯಲ್ಲಿ ಚಲನಚಿತ್ರ ನಿರ್ದೇಶನ ಕುರಿತು ಅಧ್ಯಯನ, ನಂತರ ಟಲಿವಿಷನ್ ಮತ್ತು ಸಿನಿಮಾ ಕುರಿತು ಹೆಚ್ಚಿನ ವಿದ್ಯಾಭ್ಯಾಸವನ್ನು ಅಮೇರಿಕೆಯ ಸಿರಾಕ್ಯೂಸ್ ವಿಶ್ವವಿದ್ಯಾಲಯದಲ್ಲಿ ಪಡೆದಿದ್ದಾರೆ. ಹೈದರಾಬಾದ್ ದೂರದರ್ಶನ ಕೇಂದ್ರದಲ್ಲಿ ನಿರ್ಮಾಪಕರಾಗಿ, ಕನ್ನಡ ನಾಟಕಗಳನ್ನು

ಹೈದರಾಬಾದಿಗೆ ಕರೆಸಿ, ಹೈದರಾಬಾದ್ ಹಾಗೂ ಗುಲಬರ್ಗಾ ದೂರದರ್ಶನಗಳಲ್ಲಿ ಪ್ರಸಾರ ಕಾರ್ಯಕರ್ತರಾಗಿದ್ದಾರೆ. ಹೈದರಾಬಾದಿನ ಕನ್ನಡಿಗರನ್ನು ಸಂಘಟಿಸಿ ಕನ್ನಡದ ಅನೇಕ ನಾಟಕಗಳನ್ನು ನಿರ್ದೇಶಿಸಿದ್ದಲ್ಲದೆ ಕನ್ನಡನಾಡಿನಾದ್ಯಂತ ಪ್ರದರ್ಶನಗಳನ್ನು ನೀಡಿದ್ದಾರೆ. ಪ್ರಸ್ತುತ ಈಟೀವಿ ಸಮೂಹದ ಹನ್ನೊಂದು ಟೆಲಿವಿಷನ್ ವಾಹಿನಿಗಳ ಪ್ರಧಾನ ನಿರ್ಮಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

---



## ಭಾಗೀರಥಿ ಬಾಯಿ ಕದಂ (ಹೊರನಾಡು ಕನ್ನಡಿಗರು ಪುರಸ್ಕಾರ)

ಮೈಸೂರು ಜಿಲ್ಲೆಯ ಗೌಡಗೆರೆಯಲ್ಲಿ 1963ರಲ್ಲಿ ಜನಿಸಿದ ಶ್ರೀಮತಿ ಭಾಗೀರಥಿಯವರು ನೀನಾಸಂ ಮೂಲಕ ರಂಗಭೂಮಿಗೆ ಪಾದಾರ್ಪಣ ಮಾಡಿದವರು. ನೀನಾಸಂ ಪದವಿ ಪಡೆದು ಅಲ್ಲಿಯ 'ತಿರುಗಾಟ'ದ ಕಲಾವಿದೆಯಾಗಿ ತ್ರಿಪೆನ್ನಿ ಅಪೆರಾ, ಅಲಿಬಾಬ, ಮೃಚ್ಛಕಟಿಕ, ಆಷಾಢದಲ್ಲಿ ಒಂದು ದಿನ, ಹೆರ್ರಿ ಪುಂಟಿಲ ಅಂಡ್ ಹಿಸ್ ಮ್ಯಾನ್ ಮಟ್ಟಿ ನಾಟಕಗಳಲ್ಲಿ ಅಭಿನಯಿಸಿದವರು. ಮುಂದೆ 1990ರಲ್ಲಿ ಎನ್.ಎಸ್.ಡಿ. ಪದವಿ ಪಡೆದು, ಕನ್ನಡ, ಅಸ್ಸಾಂ, ಹಿಂದಿ, ಉರ್ದು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಮುಂದೆ ಲಂಡನ್‌ನ 'ತಾರಾ ಆರ್ಟ್ಸ್' ಸೇರಿ ಯು.ಕೆ. ಹಾಗೂ ಜಪಾನ್‌ಗಳಲ್ಲಿ ನಾಟಕಗಳನ್ನು ಪ್ರದರ್ಶಿಸಿದ್ದಾರೆ. ಪ್ರಸ್ತುತ ಇವರು ಗುಹಾತಿಯಲ್ಲಿ ಸೀಗಲ್ ರಂಗತಂಡವನ್ನು ಕಟ್ಟಿ ರಂಗಭೂಮಿಯಲ್ಲಿ ಸಕ್ರಿಯವಾಗಿದ್ದಾರೆ. ಹಲವಾರು ಕನ್ನಡ ನಾಟಕಗಳನ್ನು ಅಸ್ಸಾಮಿ ಭಾಷೆಗೆ ಅನುವಾದಿಸಿದ್ದಲ್ಲದೆ ಹಲವು ನಾಟಕಗಳನ್ನು ನಿರ್ದೇಶಿಸಿದ್ದಾರೆ.

---



## ಕೆ. ಮಂಜುನಾಥಯ್ಯ (ಹೊರನಾಡು ಕನ್ನಡಿಗರು ಪುರಸ್ಕಾರ)

ಶ್ರೀ ಕೆ. ಮಂಜುನಾಥಯ್ಯನವರು ಕರ್ನಾಟಕದ ಚಿಕ್ಕಮಗಳೂರಿನಲ್ಲಿ 1940ರಲ್ಲಿ ಜನಿಸಿ, ತರೀಕೆರೆ, ಹಾಸನ, ಗುಲಬರ್ಗಾಗಳಲ್ಲಿ ವಿದ್ಯಾಭ್ಯಾಸ ನಡೆಸಿದ್ದಾರೆ. ಹಾಸನದ ದನಗಳ ಜಾತ್ರೆಗೆ ಬರುತ್ತಿದ್ದ ಗುಬ್ಬಿ ಕಂಪನಿಯ, ಹಿರಣ್ಣಯ್ಯ ಮಿತ್ರಮಂಡಳಿ, ಕೇರಳಾಪುರ ನಾಟಕ ಮಂಡಳಿಗಳ ನಾಟಕಗಳನ್ನು ನೋಡುತ್ತಾ ರಂಗದೆಡೆಗೆ ಆಸಕ್ತಿ ಬೆಳೆಸಿಕೊಂಡು ಜಾತ್ರೆಯ ಸಂದರ್ಭದಲ್ಲಿ ನಡೆಯುತ್ತಿದ್ದ ಕಿರಿಯರ ನಾಟಕೋತ್ಸವದಲ್ಲಿ ಭಾಗವಹಿಸಿದವರು.

1962ರಲ್ಲಿ ಮುಂಬಯಿಗೆ ಬಂದ ನಂತರ ಮುಂಬಯಿನ ಮೈಸೂರು ಅಸೋಸಿಯೇಷನ್ನಿನ ಸಂಪರ್ಕ ಬೆಳೆಸಿ ಅದರಲ್ಲಿ ಶ್ರೀ ಜಯಚಾಮರಾಜೇಂದ್ರ ಅಂತರ ಕಾಲೇಜು ನಾಟಕ ಸ್ಪರ್ಧೆ, ಕನ್ನಡ–ಮರಾಠಿ ನಾಟಕೋತ್ಸವ, ಕರ್ನಾಟಕ ಹಿಂದೂಸ್ತಾನಿ ಸಂಗೀತೋತ್ಸವಗಳನ್ನು ಹಾಗೂ ಇನ್ನಿತರ ಕಾರ್ಯಕ್ರಮಗಳನ್ನು ಆಯೋಜಿಸಿದ್ದಾರೆ. ಶ್ರೀಯುತರು ಕದಡಿದ ನೀರು, ಜಾತ್ರೆ, ಹರಕೆಯ ಕುರಿ, ಮುದ್ರಾರಾಕ್ಷಸ, ಬಿತ್ತಿ ಬೆಳೆದದ್ದು, ಕಕೇಶಿಯನ್ ಚಾಕ್ ಸರ್ಕಲ್ ನಾಟಕಗಳಲ್ಲಿ ಮುಖ್ಯ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ.

ಲಲಿತ ಕಲಾ ವಿಭಾಗದ ಸದಸ್ಯರಾಗಿ, ಅಸೋಸಿಯೇಷನ್ನಿನ ಗೌರವ ಕಾರ್ಯದರ್ಶಿಯಾಗಿ ಮುಂಬಯಿಯಲ್ಲಿ ಕನ್ನಡ ರಂಗಭೂಮಿ–ಸಾಹಿತ್ಯ–ಕಲೆ ಸಮೃದ್ಧವಾಗಿ ನೆಲೆಯಾಗಲು ಶ್ರೀಯುತರು ಮುಖ್ಯ ಪಾತ್ರ ವಹಿಸಿದ್ದಾರೆ.

---



## ಸರವು ಕೃಷ್ಣಭಟ್ (ಹೊರನಾಡು ಕನ್ನಡಿಗರು ಪುರಸ್ಕಾರ)

ಮಂಗಳೂರಿನ 'ಏಟ್ಲ'ದವರಾದ ಕೃಷ್ಣಭಟ್ಟರು ದೆಹಲಿಯಲ್ಲಿ ಉನ್ನತ ವ್ಯಾಸಂಗ ಪಡೆದವರು. ಸಾಫ್ಟ್‌ವೇರ್ ತಜ್ಞರಾಗಿ ಹಲವಾರು ಖಾಸಗಿ ಕಂಪನಿಗಳಲ್ಲಿ ಕೆಲಸ ಮಾಡಿದರೂ ರಂಗಭೂಮಿ ಹಾಗೂ ಕನ್ನಡದ ಜಾನಪದ ಕಲೆಗಳತ್ತ ಒಲವು ತೋರಿದವರು. 1989ರಲ್ಲಿ ದೆಹಲಿಯಲ್ಲಿ 'ಕನ್ನಡ ಚೈತನ್ಯ' ನಾಟಕ ತಂಡ ಕಟ್ಟಿ ಹೋಂ ರೂಲ್, ರಘು, ನವರಸ, ನಾಳೆ ಮತ್ತು ನಾನು ಮುಂತಾದ ನಾಟಕಗಳನ್ನು ಪ್ರದರ್ಶಿಸುವುದರ ಮೂಲಕ ದೆಹಲಿ ರಂಗಭೂಮಿಗೆ ಪಾದಾರ್ಪಣೆ ಮಾಡಿದರು.

ತದನಂತರ ದೆಹಲಿ ಕರ್ನಾಟಕ ಸಂಘದ ಸಂಪರ್ಕಕ್ಕೆ ಬಂದು ಕರ್ನಾಟಕ ಸಂಘದ ಕಾರ್ಯದರ್ಶಿ ಸ್ಥಾನಕ್ಕೆ ಏರಿ ಕರ್ನಾಟಕದ ಹಲವು ರಂಗತಂಡಗಳು ದೆಹಲಿಯಲ್ಲಿ ನಾಟಕ ಪ್ರದರ್ಶಿಸಲು ಕಾರಣರಾಗಿದ್ದಾರೆ. ನಂತರ ಪ್ರಧಾನ ಕಾರ್ಯದರ್ಶಿಯಾಗಿ ಸಂಘ ಸರ್ವತೋಮುಖವಾಗಿ ಬೆಳೆಯಲು ಶ್ರಮಿಸಿದ್ದಾರೆ. ದೆಹಲಿಯಲ್ಲಿ ನಡೆಯುವ 'ಏಕಾಂಕ ನಾಟಕ ಸ್ಪರ್ಧೆ'ಗೆ ಹೊಸ ಆಯಾಮಗಳನ್ನು ನೀಡಿದವರು.

ಯಕ್ಷಗಾನದಲ್ಲಿ ಆಸಕ್ತಿ ಹೊಂದಿರುವ ಇವರು ದೆಹಲಿಯಲ್ಲಿ ತೆಂಕುತಿಟ್ಟು 'ಯಕ್ಷಗಾನ ಅಕಾಡೆಮಿ' ಸ್ಥಾಪಿಸಿ ಆ ಕ್ಷೇತ್ರದಲ್ಲೂ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ.

---



## ಎಂ.ಕೆ. ಭಾಸ್ಕರರಾವ್ (ರಂಗ ವಿಮರ್ಶಕರು ಪುರಸ್ಕಾರ)

ಪ್ರಸ್ತುತ 'ಪ್ರಜಾವಾಣಿ' ದೈನಿಕದಲ್ಲಿ ಸಹಾಯಕ ಸಂಪಾದಕರಾಗಿರುವ ಶ್ರೀ ಎಂ.ಕೆ. ಭಾಸ್ಕರರಾವ್, ಮೂಲತಃ ಶಿವಮೊಗ್ಗ ಜಿಲ್ಲೆಯ ಪುಟ್ಟ ಹಳ್ಳಿ ಮಕರಿಕೊಪ್ಪದವರು. ಶ್ರೀಮತಿ ಶಾರದಮ್ಮ ಹಾಗೂ ಶ್ರೀ ಕೃಷ್ಣಯ್ಯ ಇವರ ತಾಯಿ–ತಂದೆ.

ನಾಲ್ಕು ದಶಕಕ್ಕೂ ಹಿಂದೆಯೇ ಬೆಂಗಳೂರಿಗೆ ಬಂದು 1939ರಲ್ಲಿ 'ಸಂಯುಕ್ತ ಕರ್ನಾಟಕ'ದಲ್ಲಿ ಪತ್ರಕರ್ತರಾಗಿ ಸೇರಿ 1983ರ ವರೆಗೆ ಅಲ್ಲಿ ಉಪಸಂಪಾದಕ ಹಾಗೂ ಕೊನೆಯ ಮೂರು ವರ್ಷ ವರದಿಗಾರನಾಗಿ ಕಾರ್ಯನಿರ್ವಹಣೆ ಮಾಡಿದ್ದಾರೆ.

ಪತ್ರಕರ್ತರಾಗಿ ಸಿನಿಮಾ, ನಾಟಕ, ನೃತ್ಯ, ಸಂಗೀತವೇ ಮುಂತಾದ ಸಾಂಸ್ಕೃತಿಕ ಕ್ಷೇತ್ರ ಸಂಬಂಧಿ ಬರಹಗಳಿಗೆ ಮೊದಲಿನಿಂದಲೂ ಆದ್ಯತೆ ನೀಡಿದವರು ಭಾಸ್ಕರರಾವ್. ಬಿ.ವಿ. ಕಾರಂತರ ಅಧ್ಯಕ್ಷತೆಯಲ್ಲಿ ರಾಜ್ಯ ಸರ್ಕಾರ ರಚಿಸಿದ್ದ ಚಲನಚಿತ್ರ ಪ್ರಶಸ್ತಿ ಸಮಿತಿಯಲ್ಲಿ ಸದಸ್ಯರಾಗಿ, ಎಂ.ಎಸ್. ಸತ್ಯು ಅಧ್ಯಕ್ಷರಾಗಿದ್ದ ಸದಭಿರುಚಿಯ ಸಿನಿಮಾಗಳಿಗೆ ಸಹಾಯ ಧನ ನೀಡುವ ಸರ್ಕಾರದ ಕ್ವಾಲಿಟಿ ಟ್ಯಾಗ್ ಸಮಿತಿಯ ಸದಸ್ಯರಾಗಿ ಕೆಲಸ ಮಾಡಿದವರು ರಾವ್.

ರಂಗಭೂಮಿಯ ಸರ್ವಾಂಗೀಣ ಅಭಿವೃದ್ಧಿಗೆ ಪತ್ರಿಕೆಗಳು ಹೇಗೆ ಗಣನೀಯ ಕೊಡುಗೆ ನೀಡಬಹುದು ಎನ್ನುವುದಕ್ಕೂ ಇವರದೇ ಆದ ಮಾರ್ಗದರ್ಶಿ ಸೂತ್ರಗಳಿದ್ದು ಅವುಗಳನ್ನು ಪ್ರಸ್ತುತ 'ಪ್ರಜಾವಾಣಿ'ಯ ಮೆಟ್ರೊ ಪುರವಣಿಯಲ್ಲಿ ಜಾರಿಗೆ ತಂದಿದ್ದಾರೆ.

---



## ಶ್ರೀಕಂಠ ಗುಂಡಪ್ಪ (ರಂಗ ವಿಮರ್ಶಕರು ಪುರಸ್ಕಾರ)

ಮೈಸೂರಿನ ಶ್ರೀಕಂಠ ಗುಂಡಪ್ಪನವರ ತಂದೆ ತಾಯಿಗಳು ಸುಬ್ಬರಾವ್ ಹಾಗೂ ನಂಜಮ್ಮನವರು. ಮೈಸೂರಿನ ಅಮರ ಕಲಾಸಂಘ, ಸಮತೆಂತೋ, ಥಿಯೇಟರ್ಸ್ ಗ್ರೂಪ್, ಸ್ನೇಹಸಂಪದ, ಮೈಸೂರು ಅಮೆಚೂರ್ಸ್, ಕಲಾಜ್ಯೋತಿ, ಕದಂಬ ರಂಗ ವೇದಿಕೆ, ರಂಗಾಯಣ ಮುಂತಾದ ಸಂಸ್ಥೆಗಳ ಜೊತೆ ಸಾಂಗತ್ಯ ಇರುವ ಶ್ರೀಯುತರು 1973ರಲ್ಲಿ ಸ್ಥಾಪನೆಗೊಂಡ ಮೈಸೂರು ಕಲಾಪ್ರಿಯ ಸಂಸ್ಥೆಯ ಸಂಸ್ಥಾಪಕರು.

ಮೈಸೂರಿನ ಬಹುತೇಕ ರಂಗಚಟುವಟಿಕೆಗಳು ಹಾಗೂ ರಂಗ ಚಳವಳಿಗಳಲ್ಲಿ ಸಕ್ರಿಯ ಪಾತ್ರ, ಚಿಕವೀರ ರಾಜೇಂದ್ರ, ಅದೇ ದಾರಿ, ಬೆಲೆಗಳು, ಕನಸಿನವರು, ಕುರಿತೇರು, ಮೃತ್ಯುಛಾಯ, ವಿಜಯನರಸಿಂಹ ನಾಟಕಗಳಲ್ಲಿ ಅಭಿನಯ. ಹಗ್ಗದ ಕೊನೆ, ನಿರುತ್ತರ ಕುಮಾರ, ಒಳದನಿಗಳು, ಹೆಜ್ಜೆಗಳು, ತುಘಲಕ್, ನಂ ಕಂಪ್ನಿ, ಸುಂದ್ರೋಪ ಸುಂದರ, ಏನ ಬೇಡಲಿ ನಿನ್ನ ಬಳಿಗೆ ಬಂದು ಹೀಗೆ ಹಲವು ನಾಟಕಗಳ ನಿರ್ದೇಶನ. ಈ ಮಾಸ ನಾಟಕ, ರಂಗತೋರಣ, ರಂಗವಾಣಿ ಪತ್ರಿಕೆಗಳಲ್ಲಿ ಇವರ ರಂಗ ಲೇಖನಗಳು ಪ್ರಕಟವಾಗಿವೆ. ರಂಗಭೂಮಿ ನಡೆದು ಬಂದ ದಾರಿ ಬಗ್ಗೆ ಅಪೂರ್ವ ಭಿತ್ತಿಚಿತ್ರ ಪ್ರದರ್ಶನ ಮಾಡಿದ್ದಾರೆ. ರಂಗಪ್ರದರ್ಶನಗಳ ಬಗ್ಗೆ ವಸ್ತುನಿಷ್ಠ ವಿಮರ್ಶೆ ಇವರದು. ವ್ಯಕ್ತಿ ಹಾಗೂ ಹವ್ಯಾಸಿ ರಂಗಭೂಮಿಯ ಬಗ್ಗೆ ಲೇಖನಗಳು ಇವರ ಲೇಖನಿಯಿಂದ ಮೂಡಿಬಂದಿದೆ.

---



## ಹುಣಸವಾಡಿ ರಾಜನ್ (ರಂಗ ವಿಮರ್ಶಕರು ಪುರಸ್ಕಾರ)

ತುಮಕೂರು ಜಿಲ್ಲೆ ಮಧುಗಿರಿ ತಾಲ್ಲೂಕು ಹುಣಸವಾಡಿಯಲ್ಲಿ ಜನನ. ಶಾನುಭೋಗರ ಮನೆತನ. ತಂದೆ ಜಿ. ನಾರಾಯಣರಾವ್, ತಾಯಿ ಗಂಗಮ್ಮ. ಶಿಕ್ಷಣ: ಎಂ.ಎ. (ಇಂಗ್ಲಿಷ್ ಸಾಹಿತ್ಯ), ಓದಿದ್ದು, ಹುಣಸವಾಡಿ, ನಿಟ್ಟರಹಳ್ಳಿ ಕವಣದಾಲ ನಂತರ ಬೆಂಗಳೂರು.

ವೃತ್ತಿಯಿಂದ ಪತ್ರಕರ್ತ. ಪ್ರವೃತ್ತಿಯಿಂದ ರಂಗಭೂಮಿ ಕಾರ್ಯಕರ್ತ. ಸೆಂಟ್ರಲ್ ಕಾಲೇಜ್ ಮೂಲಕ ಸಾಹಿತ್ಯ ಹಾಗೂ ರಂಗಭೂಮಿ ಚಟುವಟಿಕೆಗಳ ಜೊತೆ ನಂಟು. ನಂತರ 'ಸೂತ್ರಧಾರ' ತಂಡದಲ್ಲಿ ಸಕ್ರಿಯ. ಹಲವಾರು ನಾಟಕಗಳಲ್ಲಿ ಪಾಲ್ಗೊಂಡ ಅನುಭವ. 'ಬೆನಕ' ತಂಡಕ್ಕೆ ನಾಯಿ ನಾಟಕದ ನಿರ್ದೇಶನ. 'ಸೂತ್ರಧಾರ'ಕ್ಕೆ ಪಾಲ್ ಸುದರ್ಶನ್ ವಿರಚಿತ 'ಕಾಯೋ ಕುರಿಗಳನಾ' ನಾಟಕದ ನಿರ್ದೇಶನ. ವಿವಿಧ ಹವ್ಯಾಸಿ ತಂಡಗಳಿಗೆ ಈಡಿಪಸ್, ಆಸ್ಫೋಟ, ಕಫನ್, ಹಳ್ಳ-ಕೊಳ್ಳ ನೀರು, ಉದ್ಧವ ನಾಟಕಗಳ ನಿರ್ದೇಶನ. ರಂಗಭೂಮಿಯ ಚಟುವಟಿಕೆಗಳಿಗೆ ಮೀಸಲಾಗಿದ್ದ 'ಸೂತ್ರಧಾರ' ಪತ್ರಿಕೆಯ ಸಂಪಾದಕತ್ವ

ಪ್ರಸ್ತುತ 'ಸಂಯುಕ್ತ ಕರ್ನಾಟಕ' ಪತ್ರಿಕೆಯಲ್ಲಿ ವಿಶೇಷ ವರದಿಗಾರ/ಪ್ರಧಾನ ವರದಿಗಾರನಾಗಿ ಸೇವೆ ಮಾಡುತ್ತಲೇ ರಂಗಭೂಮಿಯ ಅಪರೂಪದ ಚಿಂತಕರಲ್ಲೊಬ್ಬರಾಗಿದ್ದಾರೆ.

---



**ರಂಗತೋರಣ** (ರಂಗ ಪತ್ರಿಕೆ ಪುರಸ್ಕಾರ)

**ಸುದರ್ಶನ ದೇಸಾಯಿ,** ಪ್ರಧಾನ ಸಂಪಾದಕ

ರಾಣೆಬೆನ್ನೂರಿನ ಶ್ರೀ ವಿರೂಪಾಕ್ಷ ನಾಯಕರು ಧಾರವಾಡಕ್ಕೆ ಬಂದವರು 'ಕರ್ನಾಟಕ ಕಲೋದ್ಧಾರಕ ಸಂಘ' ಹಾಗೂ ಜನಾರ್ದನ ನಾವಡ, ಯಮುನಾಮೂರ್ತಿ ಹಾಗೂ ಇನ್ನಿತರರಿಂದ ರಂಗಭೂಮಿಯಲ್ಲಿ ಆಸಕ್ತಿ ಪಡೆದವರು. ಬೆಂಗಳೂರಿನ 'ಸೂತ್ರಧಾರ' ವಾರ್ತಾಪತ್ರದಿಂದ ಸ್ಫೂರ್ತಿ ಪಡೆದ ನಾಯಕರು 'ರಂಗತೋರಣ' ಪ್ರಾರಂಭಿಸಿ 1985ರಲ್ಲಿ ಹುಬ್ಬಳ್ಳಿ ಧಾರವಾಡದಲ್ಲಿ ಒಮ್ಮೆಗೆ ಬಿಡುಗಡೆ ಮಾಡಿದರು. ಡಾ. ಗಿರಡ್ಡಿ ಗೋವಿಂದರಾಜು, ಡಿ.ಕೆ. ಜೋಶಿ, ಇಂದುಹಾಸ ಜೇವೂರ, ಡಾ. ಎಚ್.ಎ. ಪಾರ್ಶ್ವನಾಥ, ಪರ್ವತವಾಣಿ, ಕುರ್ತಕೋಟಿ, ಎನ್ಕೆ, ಹೇಮಾ ಪಟ್ಟಣಶೆಟ್ಟಿ, ಗಣಪತಿ ಭಟ್ಟ, ಗುಂದ, ಜಯತೀರ್ಥ ಜೋಶಿ ಇನ್ನೂ ಹಲವರಿಂದ ಅರ್ಥಪೂರ್ಣವಾದ ಲೇಖನಗಳು ರಂಗತೋರಣದಲ್ಲಿ ಮೂಡಿಬಂದಿದೆ. ನಾಯಕರ ಅನಾರೋಗ್ಯದ ಕಾರಣ 2005ರಲ್ಲಿ ಕಾದಂಬರಿಕಾರ, ನಾಟಕಕಾರ, ಸಂಶೋಧಕ, ಸಂದರ್ಶನ ದೇಸಾಯಿಯವರು ರಂಗತೋರಣದ ಜವಾಬ್ದಾರಿಯನ್ನು ಕೈಗೆತ್ತಿಕೊಂಡರು. ಮುಂದೆ ರಂಗತೋರಣವು ದೇಸಾಯಿಯವರ ನೇತೃತ್ವದಲ್ಲಿ ಕರ್ನಾಟಕದ ಹೆಮ್ಮೆಯ ರಂಗಪತ್ರಿಕೆಗಳಲ್ಲಿ ಒಂದಾಯಿತು.

---



**ರಂಗವಾಣಿ** (ರಂಗ ಪತ್ರಿಕೆ ಪುರಸ್ಕಾರ)

**ಜಿ. ಮಹಾದೇವಪ್ಪ,** ವ್ಯವಸ್ಥಾಪಕ ಸಂಪಾದಕರು

ಮೈಸೂರಿನ ಶ್ರೀ ಜಿ. ಮಹಾದೇವಪ್ಪ ತಮ್ಮ ರಂಗಪತ್ರಿಕೆ 'ರಂಗವಾಣಿ'ಯ ಮೂಲಕ ರಂಗವಾಣಿ ಮಹಾದೇವಪ್ಪ ಎಂತಲೇ ಪರಿಚಿತರಾದವರು. ಮೈಸೂರಿನ ವಿಕ್ರಾಂತ್ ಟೈರ್ಸ್ ಲಿಮಿಟೆಡ್ ಉದ್ಯೋಗಿಯಾಗಿರುವ ಶ್ರೀಯುತರು ಕಳೆದ 40 ವರ್ಷಗಳಿಂದಲೂ ರಂಗಭೂಮಿಗೆ ದುಡಿದವರು. ಮಹಾದೇವಪ್ಪನವರು ತಮ್ಮ ಎಳೆಯ ವಯಸ್ಸಿನಲ್ಲಿಯೇ ನಾಟಕದಲ್ಲಿ ಆಸಕ್ತಿ ಹೊಂದಿ 'ಪಂಚಭೂತ' ನಾಟಕದ ಮೂಲಕ ರಂಗಕ್ಷೇತ್ರಕ್ಕೆ ಪ್ರವೇಶಿಸಿದವರು. 1968ರಲ್ಲಿ ಮಿತ್ರರೊಡಗೂಡಿ ಶ್ರೀ ಲಕ್ಷ್ಮೀಶ ಕನ್ನಡ ಕಲಾಸಂಘ ಸ್ಥಾಪಿಸಿ ಪೂರ್ಣವಾಗಿ ರಂಗಭೂಮಿಗೆ ತಮ್ಮನ್ನು ಅರ್ಪಿಸಿಕೊಂಡರು. ಗ್ರಾಮಾಂತರ ಪ್ರದೇಶಗಳಿಗಾಗಿಯೇ ಅನೇಕ ನಾಟಕಗಳನ್ನು ಬರೆದು ನಿರ್ದೇಶಿಸಿದರು. 1982ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ನಾಟಕ ಡಿಪ್ಲೊಮಾ ಪಡೆದು ರಂಗಭೂಮಿಗೆ ಮೀಸಲಾದ 'ರಂಗವಾಣಿ' ಪತ್ರಿಕೆಯನ್ನು 1985ರಲ್ಲಿ ಪ್ರಾರಂಭಿಸಿದರು. ರಾಜಾನಂದ್ ನಾಟಕ ಸಪ್ತಾಹದ ಸಂಘಟಕರು, ಹೆಚ್.ಕೆ. ಯೋಗನರಸಿಂಹರ 5 ನಾಟಕಗಳು ಹಾಗೂ ತಮ್ಮ 9 ನಾಟಕಗಳನ್ನು ಪ್ರಕಟಿಸಿ ರಂಗಭೂಮಿಗೆ ಅರ್ಪಿಸಿದರು.

---



**ನಾಗರಾಜ್ ಕೋಟೆ** (ವಿಶೇಷ ಕೊಡುಗೆ)

ತಮ್ಮ ಹದಿಯರೆಯದ ವಯಸ್ಸಿನಿಂದಲೇ ನಾಟಕದ ಗೀಳು ಅಂಟಿಸಿಕೊಂಡಿರುವ ಶ್ರೀ ನಾಗರಾಜ ಕೋಟೆ ನಿರಂತರವಾಗಿ ನಾಟಕ, ಅಭಿನಯ, ನಿರ್ದೇಶನ, ರಚನೆ ಹಾಗೂ ಸಾಮಾಜಿಕ ಜಾಗೃತಿಗಳನ್ನು ಅಭಿವ್ಯಕ್ತಗೊಳಿಸುವ ಬೀದಿ ನಾಟಕಗಳು ಮತ್ತು ಹಾಸ್ಯ ಪ್ರಹಸನಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಮುದುಕನ ಮದುವೆ ನಾಟಕದಲ್ಲಿ ಬಣ್ಣ ಹಚ್ಚಿಕೊಳ್ಳುವ ಮೂಲಕ ರಂಗಪ್ರವೇಶ ಗೈದಿರುವ ಇವರು ಈವರೆಗೂ 150ಕ್ಕೂ ಹೆಚ್ಚು

ನಾಟಕಗಳಲ್ಲಿ, 1000ಕ್ಕೂ ಹೆಚ್ಚು ಪ್ರದರ್ಶನಗಳಲ್ಲಿ ಅಭಿನಯಿಸಿದ್ದಾರೆ ಹಾಗೂ 50ಕ್ಕೂ ಹೆಚ್ಚು ನಾಟಕಗಳನ್ನು ನಿರ್ದೇಶಿಸಿದ್ದಾರೆ. ಅನೇಕ ನಾಟಕಗಳನ್ನು ರಚಿಸಿದ್ದು, ಭವಿಷ್ಯ, ಶೂನ್ಯ, ದ್ವಂದ್ವ, ಪರ್ಯಾಯ, ಉಸಿರು, ಮರೀಚಿಕೆ, ತಾತ ಬಂದ್ರು, ಹುಷಾರ್, ನೆಲೆ, ಬೊಂಬೆಗಳು ಮೊದಲಾದವು ಪ್ರಮುಖವಾಗಿವೆ. ಕೋಟಿದಾಗ ಗೀಚಿದ್ದು ಇವರ ಕವನ ಸಂಕಲನ. 1999ರಲ್ಲಿ ಕಾರ್ಗಿಲ್ ಯೋಧರ ನಿಧಿಗಾಗಿ ಹಾಸನ ಜಿಲ್ಲೆಯಾದ್ಯಂತ ಒಂದು ವಾರಗಳ ಕಾಲ 'ಭವಿಷ್ಯ' ನಾಟಕವಾಡಿ ದೇಣಿಗೆ ಸಂಗ್ರಹಿಸಿದ್ದಾರೆ. 2005ರ ಜೂನ್ 5ರಂದು ವಿಶ್ವಪರಿಸರ ದಿನಾಚರಣೆಯ ಅಂಗವಾಗಿ, ಪರಿಸರ ಪ್ರಜ್ಞೆ ಮೂಡಿಸುವ ನಾಟಕ 'ನೆಲೆ'ಯನ್ನು ಸಂಪೂರ್ಣವಾಗಿ ಮರದ ಮೇಲೆ ಪ್ರದರ್ಶಿಸಿ ವಿಶ್ವದಾಖಲೆ ನಿರ್ಮಿಸಿದ್ದಾರೆ.



## ನೀನಾಸಂ ಕೆ.ವಿ. ಸುಬ್ಬಣ್ಣ (ವಿಶೇಷ ಕೊಡುಗೆ)

1949ರಲ್ಲಿ ಕೆ.ವಿ. ಸುಬ್ಬಣ್ಣನವರ ತಂದೆ ಕೆ.ವಿ. ರಾಮಪ್ಪನವರ ನೇತೃತ್ವದಲ್ಲಿ ಸಾಗರ ತಾಲ್ಲೂಕಿನ ಹೆಗ್ಗೋಡಿನಲ್ಲಿ ಶ್ರೀ ನೀಲಕಂಠೇಶ್ವರ ನಾಟ್ಯ ಸೇವಾ ಸಂಘ ಸ್ಥಾಪನೆಯಾಗಿ ಗ್ರಾಮೀಣ ಕರ್ನಾಟಕದಲ್ಲೊಂದು ರಂಗಕ್ರಾಂತಿಯನ್ನು ಪ್ರಾರಂಭಿಸಿತು. ತಾತ್ಕಾಲಿಕವಾಗಿ ಸೋಗೆ ಗರಿಗಳನ್ನು ಕಟ್ಟಿ ರಂಗಮಂಟಪ ಸಿದ್ಧಪಡಿಸಿ, ಸದಭಿರುಚಿಯ ಗೆಳೆಯರು ಕೂಡಿ 'ಷಹಜಾನ್' ನಾಟಕವನ್ನು ಪ್ರದರ್ಶಿಸುವುದರ ಮೂಲಕ ನೀನಾಸಂನ ರಂಗಚಟುವಟಿಕೆಯನ್ನು ಪ್ರಾರಂಭಿಸಲಾಯಿತು. ಸುಬ್ಬಣ್ಣನವರು ಮೈಸೂರಿನಲ್ಲಿ ಕನ್ನಡ ಎಂ.ಎ., ಮುಗಿಸಿ 1954ರ ಸುಮಾರಿಗೆ ಗಾಂಧೀಜಿಯವರ 'ಮರಳಿ ಹಳ್ಳಿಗೆ' ಎಂಬ ಕರೆಗೆ ಓಗೊಟ್ಟು ತಮ್ಮ ಊರನ್ನೇ ತಮ್ಮ ಸಾಧನೆಯ ನೆಲೆಯಾಗಿಸಿಕೊಳ್ಳುತ್ತಾರೆ. ಊರಿಗೆ ಮರಳಿದ ಇವರು ಸಂಘದ ಸಾರಥ್ಯ ವಹಿಸಿಕೊಂಡು ರಂಗಕೃಷಿಯನ್ನು ಪ್ರವೃತ್ತಿಯನ್ನಾಗಿಯೂ, ಅಡಿಕೆ ಕೃಷಿಯನ್ನು ವೃತ್ತಿಯನ್ನಾಗಿಯೂ ಮಾಡಿಕೊಳ್ಳುತ್ತಾರೆ. 1972ರಲ್ಲಿ ಶ್ರೀ ಶಿವರಾಮ ಕಾರಂತ ರಂಗಮಂದಿರ, 1973ರಲ್ಲಿ ನೀನಾಸಂ ಚಿತ್ರಸಮಾಜ, 1980ರಲ್ಲಿ ನೀನಾಸಂ ರಂಗಶಿಕ್ಷಣ ಕೇಂದ್ರ, 1985ರಲ್ಲಿ ನೀನಾಸಂ ತಿರುಗಾಟ (ರೆಪ್ರಟರಿ)ಗಳು ಹೆಗ್ಗೋಡಿನಲ್ಲಿ ಪ್ರಾರಂಭವಾಗಿ, ಕರ್ನಾಟಕದ ರಂಗಭೂಮಿಯನ್ನು ಲೋಕಕ್ಕೆ ತೋರಿದೆ.



## ಕೆ.ಆರ್. ಪ್ರಕಾಶ್ (ವಿಶೇಷ ಕೊಡುಗೆ)

ಶ್ರೀ ಕೆ.ಆರ್. ಪ್ರಕಾಶ್ ಅವರು ತಮ್ಮ 16ನೆಯ ವಯಸ್ಸಿನಿಂದಲೇ ಸ್ತ್ರೀವೇಷಧಾರಿಯಾಗಿ ರಂಗಭೂಮಿಗೆ ಪಾದಾರ್ಪಣೆ ಮಾಡಿದರು. 'ಸಂಸಾರದಲ್ಲಿ ಸನಿದಪ', 'ಆವರ್ತನ', 'ಇ-ಮೇಲ್', 'ಪರಿವರ್ತನೆ', 'ದೆವ್ವದ ಕಾಟ', 'ಕುಬಿ ಮತ್ತು ಇಯಾಲ', 'ಉದ್ಧವ' ನಾಟಕಗಳಲ್ಲಿ ತಮ್ಮ ವಿಶಿಷ್ಟ ಅಭಿನಯದ ಮೂಲಕ ಜನಪ್ರಿಯರಾದರು. 'ಚೂರಿಕಟ್ಟೆ', 'ದತ್ತವಾಣಿ ಮದುವೆ ಪ್ರಸಂಗ', 'ಹೆಡ್ಡಾಯಣ', 'ಮಹಾರಾತ್ರಿ', 'ಪರಿವರ್ತನೆ', 'ನಕ್ಷತ್ರ ರಾಜಕುಮಾರಿ', 'ನಾಳೆ ಯಾರಿಗೂ ಇಲ್ಲ', 'ಹರಿವ ನದಿ ತೀರದಲ್ಲಿ', 'ಶತಮಾನದಾಚೆಗೆ', 'ರಾಣಿ ಜಲಜಾಕ್ಷಿ', 'ನೊಂದವರ ಹಾಡು', 'ಇದು ಎಂಥಾ ಲೋಕವಯ್ಯಾ', 'ಸಂಗ್ರಾಮದ ಆ ಗಳಿಗೆ', 'ಬೆಳ್ಳಕ್ಕಿಗಳ ಲೋಕದಲ್ಲಿ', 'ಕುರಿತೇರು' ಇನ್ನೂ ಮುಂತಾದ ನಾಟಕಗಳನ್ನು ಇವರು ನಿರ್ದೇಶಿಸಿದ್ದಾರೆ. ಇವರು ಬರೆದಿರುವ ನಾಟಕಗಳೆಂದರೆ 'ಸಂಗ್ರಾಮದ ಆ ಘಳಿಗೆ' ಹಾಗೂ ಮೂರು ಬೀದಿ ನಾಟಕಗಳು. ನದಿ ತೀರಗಳಲ್ಲಿ ಹಾಗೂ ಸಮುದ್ರ ತೀರಗಳಲ್ಲಿ ನಾಟಕಗಳನ್ನು ಪ್ರದರ್ಶಿಸಿದ್ದು ಇವರ ರಂಗಭೂಮಿಯ ವಿಶಿಷ್ಟ ಕೊಡುಗೆ ಎನ್ನಬಹುದು.



## ಸಿ. ಲಕ್ಷ್ಮಣ್ (ವಿಶೇಷ ಕೊಡುಗೆ)

1956ರಲ್ಲಿ ಹುಟ್ಟಿದ ಶ್ರೀ ಲಕ್ಷ್ಮಣರವರ ತಂದೆ ಶ್ರೀ ಚೆನ್ನಪ್ಪನವರು. ಇವರು ತಮ್ಮ ಬಾಲ್ಯದಲ್ಲಿಯೇ ರಂಗಭೂಮಿಯಲ್ಲಿ ಆಸಕ್ತಿ ವಹಿಸಿ ಕೃಷ್ಣಾರ್ಜುನ ಯುದ್ಧ, ಕುರುಕ್ಷೇತ್ರ, ದೇವದಾಸಿ ನಾಟಕಗಳಲ್ಲಿ ಬಾಲನಟರಾಗಿ ರಂಗಭೂಮಿಗೆ ಬಂದವರು. ಮುಂದೆ ಶ್ರೀ ಆರ್. ನಾಗೇಶ್‌ರವರ ನಿರ್ದೇಶನದಲ್ಲಿ ಈಡಿಪಸ್, ಆಸ್ಫೋಟ, ಭಾರತೀಪುರ, ಜೋಮ ನಾಟಕಗಳಲ್ಲಿ ಅಭಿನಯಿಸಿದವರು. ಸುಮಾರು 30ಕ್ಕೂ ಹೆಚ್ಚು ವರ್ಷಗಳಿಂದ ರಂಗಸೇವೆ ಮಾಡುತ್ತಿದ್ದಾರೆ. ಮುಂದೆ ಇವರು ಮಕ್ಕಳ ರಂಗಭೂಮಿಯನ್ನು ತಮ್ಮ ಕಾರ್ಯಕ್ಷೇತ್ರವಾಗಿಸಿಕೊಂಡು ಕಾರಣಿಕ ಶಿಶು, ಗಾಂಧಿಟೋಪಿ, ನನ್ನ ಗೋಪಾಲ, ಮೋಡಣ್ಣನ ತಮ್ಮ ಬೊಮ್ಮನಹಳ್ಳಿಯ ಕಿಂದರಿಜೋಗಿ ಇನ್ನೂ ಹಲವು ನಾಟಕಗಳನ್ನು ನಿರ್ದೇಶಿಸಿದ್ದಾರೆ. ಇವರ ಪ್ರಮುಖ ನಾಟಕ 'ಗುರುಮೂರ್ತಪ್ಪನ ತೋಟ' ಕನ್ನಡ ರಂಗಭೂಮಿಯಲ್ಲಿ ಬಂದ ಒಂದು ವಿಶಿಷ್ಟ ನಾಟಕ ಕೃತಿ. ತಮ್ಮ ರಂಗತಂಡ 'ರಂಗ ಕಹಳೆ' ಮೂಲಕ ಲಕ್ಷ್ಮಣ್ ರಂಗಭೂಮಿಯಲ್ಲಿ ಸಕ್ರಿಯವಾಗಿಯೂ ಅಲ್ಲದೆ ಪ್ರಸ್ತುತ ಚಲನಚಿತ್ರರಂಗದಲ್ಲಿಯೂ ಆಸಕ್ತಿ ವಹಿಸಿ 'ಮಸಣದ ಮಕ್ಕಳು' ಮಕ್ಕಳ ಚಿತ್ರವನ್ನು ಚಿತ್ರರಂಗಕ್ಕೆ ಅರ್ಪಿಸಿದ್ದಾರೆ.

---



## ಶಿವಸಂಚಾರ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು

(ವಿಶೇಷ ಕೊಡುಗೆ)

ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಶಿವಸಂಚಾರದ ಸಂಸ್ಥಾಪಕರು ಹಾಗೂ ಮಹಾಪೋಷಕರು. 1997ರಲ್ಲಿ ಪೂಜ್ಯರು ಸಾಣೇಹಳ್ಳಿ ಶ್ರೀಮಠದ ಪಟ್ಟಾಧಿಕಾರ ವಹಿಸಿಕೊಂಡರು. ಶ್ರೀಯುತರು ತಮ್ಮ ಗುರುಗಳಂತೆ ಸಾಂಸ್ಕೃತಿಕ ಹರಿಕಾರರು. ಸಮಾಜವನ್ನು ಸರಿದಾರಿಗೆ ತಂದು ಕ್ರಿಯಾತ್ಮಕವಾಗಿ ಚಿಂತಿಸುವಂತೆ ಮಾಡುವ ಸದಾಶಯದಿಂದ 1987ರಲ್ಲಿ ಶ್ರೀ ಶಿವಕುಮಾರ ಕಲಾಸಂಘ ಸ್ಥಾಪಿಸಿದರು. 1997ರಲ್ಲಿ ಶ್ರೀ ಶಿವಕುಮಾರ ಕಲಾಸಂಘದ ದಶಮಾನೋತ್ಸವದ ಸ್ಮರಣಾರ್ಥವಾಗಿ ಶಿವಸಂಚಾರ ತಂಡದ ಸ್ಥಾಪನೆಯಾಯಿತು. ಇಂದು ಶಿವಸಂಚಾರ ಕರ್ನಾಟಕದ ಹೆಸರಾಂತ ಗ್ರಾಮೀಣ ರಂಗ ತಂಡವಾಗಿದೆ. ಕಲಾಸಂಘದ ಆಶ್ರಯದಲ್ಲಿ ಪ್ರತಿವರ್ಷ ನವೆಂಬರ್ 1ರಿಂದ 9ರವರೆಗೆ ಸಾಣೇಹಳ್ಳಿಯಲ್ಲಿ 9 ದಿನಗಳ ನಾಟಕೋತ್ಸವ ನಡೆಸಲಾಗುವುದು. ಈ ಹತ್ತು ವರ್ಷಗಳಲ್ಲಿ ವೈವಿಧ್ಯಮಯ ವಸ್ತುವುಳ್ಳ 20 ನಾಟಕಗಳ 1200ಕ್ಕೂ ಹೆಚ್ಚು ಪ್ರದರ್ಶನಗಳಾಗಿವೆ. ಪ್ರಸ್ತುತ ಈ ವರ್ಷ ಶಿವಸಂಚಾರವು ಕನ್ನಡದ ಪ್ರಖ್ಯಾತ ಮೂರು ನಾಟಕಗಳನ್ನು ಹಿಂದಿ ಭಾಷೆಗೆ ಅನುವಾದಿಸಿ ದೇಶದ 50ಕ್ಕೂ ಹೆಚ್ಚು ಕೇಂದ್ರಗಳಲ್ಲಿ 'ಭಾರತ ರಂಗಸಂಚಾರ' ಏರ್ಪಡಿಸಿ, ಕನ್ನಡದ ರಂಗಕೀರ್ತಿಯನ್ನು ದೇಶದೆಲ್ಲೆಡೆ ಹರಡಿದೆ.

---



## ಶ್ರೀಶೈಲ ಘೂಳಿ (ವಿಶೇಷ ಕೊಡುಗೆ)

1945ರಲ್ಲಿ ಜನಿಸಿದ ಶ್ರೀ ಘೂಳಿಯವರು ಎಂ.ಎಸ್ಸಿ., ಎಂ.ಫಿಲ್., ಪದವಿ ಪಡೆದು ಗುಲಬರ್ಗಾದ ಎಂ.ಆರ್. ಮೆಡಿಕಲ್ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದುಕೊಂಡು ರಂಗಭೂಮಿಯಲ್ಲಿಯೂ ಸಹ ಗುರುತಿಸಿಕೊಂಡವರು. 'ಕಲ್ಬುರ್ಗಿಯ ಸಮುದಾಯ' ತಂಡದ ಅಧ್ಯಕ್ಷರಾಗಿ ಗುಲಬರ್ಗಾದ ಕಲ್ಯಾಣ ಕರ್ನಾಟಕ ಮತ್ತು ಕಲ್ಯಾಣ ಸಂಸ್ಥೆಯ ಉಪಾಧ್ಯಕ್ಷರಾಗಿ ಹಲವು ಸಂಘ ಸಂಸ್ಥೆಗಳ ಕಾರ್ಯದರ್ಶಿ ಹಾಗೂ ಸದಸ್ಯರಾಗಿ

ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ದುಡಿಯುತ್ತಾ ಬಂದಿರುವ ಘೂಳಿಯವರು 20 ವರ್ಷಕ್ಕೂ ಹೆಚ್ಚು ರಂಗಭೂಮಿಯಲ್ಲಿ ನಟರಾಗಿ, ಸಂಘಟಕರಾಗಿ, ನಿರ್ದೇಶಕರಾಗಿ ವಿವಿಧ ಕ್ಷೇತ್ರಗಳ ಜವಾಬ್ದಾರಿ ಹೊತ್ತವರು. ಇವರು ಅಭಿನಯಿಸಿದ ನಾಟಕಗಳೆಂದರೆ 'ಕಲಿಯುಗ', 'ರಕ್ತರಾತ್ರಿ', 'ಶಕುನಿ', 'ಮಹಿಮಾಪುರ', 'ಸಂಸ್ಥೆ', 'ಸಾಹೇಬ್ರು ಬರ್ತಾರೆ'.

## ಉದ್ಯಾವರ ನಾಗೇಶ್ ಕುಮಾರ್ (ಗೌರವ ಪುರಸ್ಕಾರ)



ಶ್ರೀ ಉದ್ಯಾವರ ನಾಗೇಶಕುಮಾರರವರು ಉದ್ಯಾವರದ ಪಾಂದೆಮನೆಯವರು. ಇವರ ಜನನ 1960ರಲ್ಲಿ. ಕಳೆದ 25 ವರ್ಷಗಳಿಂದ ರಂಗಭೂಮಿಯಲ್ಲಿ ಸಕ್ರಿಯವಾಗಿರುವ ಇವರು ತುಳು ರಂಗಭೂಮಿಯಲ್ಲಿಯೂ ಕೆಲಸ ಮಾಡಿದ್ದಾರೆ. ಇವರು ನಿರ್ದೇಶಿಸಿದ ಕನ್ನಡ ಭಾಷೆಯ ಪ್ರಮುಖ ನಾಟಕಗಳೆಂದರೆ, ಮಹಾಚೈತ್ರ, ಉದ್ಧವ, ಅವರೋಹಣ, ಕ್ರಾಂತಿ ಬಂತು ಕ್ರಾಂತಿ, ಪೋಲೀಸರಿದ್ದಾರೆ ಎಚ್ಚರಿಕೆ, ಕಪ್ಪೆ ಬಾವಿ ಮತ್ತು ನಕ್ಷತ್ರ, ತುಳು ಭಾಷೆಯ ಗೊಂದೋಳು, ರಾಯರಾವ್ರತೆ, ಸಂಕ್ರಾಂತಿ, ಬೋಳಟೆ, ಒಂಟೆ ಮೇಲೆ, ಕನ್ನಿಕಾ, ಕಚೇರಿ, ನಮ್ಮ ನಡುಟೂರಿ ಬೈರೆ, ಗುವೆಲ್ ಕಳವಾತ್‌ಡ್ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಮಕ್ಕಳ ನಾಟಕ ಹಾಗೂ ಬೀದಿನಾಟಕಗಳನ್ನು ನಿರ್ದೇಶಿಸಿರುವ ಇವರು ತುಳುವಿನಲ್ಲಿ ಬೋಂಟೆ ಮತ್ತು ಬಾಯಿದಾಂತಿನಕ್ಲು, ಹಸಿರುಧ್ವಜ ನಾಟಕಗಳನ್ನು ರಚಿಸಿದ್ದಾರೆ. ಮ್ಯಾಕ್ ಬೆತ್, ಸಂಕ್ರಾಂತಿ, ಹಯವದನ, ನಾಯಿಕತೆ, ಜತೆಗಿರುವನು ಚಂದಿರ, ಈಡಿಪಸ್ ನಾಟಕಗಳನ್ನು ಅನುವಾದಿಸಿ ತುಳು ರಂಗಭೂಮಿಯನ್ನು ಶ್ರೀಮಂತಗೊಳಿಸಿದ್ದಾರೆ. ಇವರ ಕತೆ, ಕವನ, ಲೇಖನಗಳು ಪತ್ರಿಕೆ ಹಾಗೂ ಆಕಾಶವಾಣಿಯಲ್ಲಿ ಪ್ರಸಾರವಾಗಿದೆ.

## ರಮಾನಂದ ಐನಕೈ



ಶ್ರೀ ದಯಾನಂದ ಐನಕೈ ಮೂಲತಃ ಉತ್ತರಕನ್ನಡ ಜಿಲ್ಲೆ ಸಿದ್ದಾಪುರದ ಐನಕೈಯವರು ಈಗ ಶಿರಸಿಯ ಸಮೀಪದ ಯಕ್ಷದೃಷ್ಟಿಯಲ್ಲಿ ವಾಸ್ತವ್ಯ ಮಾಡಿದ್ದಾರೆ. ನೀನಾಸಂನಲ್ಲಿ ರಂಗಶಿಕ್ಷಣ ಕೇಂದ್ರದಲ್ಲಿ ಪದವಿ ಪಡೆದ ಇವರು ನೀನಾಸಂನ 'ತಿರುಗಾಟ'ದ ಸಂಸ್ಥಾಪಕ ವ್ಯವಸ್ಥಾಪಕರಾಗಿ ಕರ್ನಾಟಕದ 175 ತಾಲ್ಲೂಕುಗಳಲ್ಲಿ ಸಂಚರಿಸಿ 'ತಿರುಗಾಟ'ದ ಪ್ರದರ್ಶನ ಏರ್ಪಾಟು ಮಾಡಿದ್ದಾರೆ.

ರಂಗನಿರ್ದೇಶಕರಾಗಿ, ನಟರಾಗಿ, ಸಂಘಟಕರಾಗಿ, ವಿಮರ್ಶಕರಾಗಿ ಕಳೆದ ಇಪ್ಪತ್ತು ವರ್ಷಗಳಿಂದ ಕೆಲಸ ಮಾಡುತ್ತಾ ಬಂದಿದ್ದಾರೆ. ಅಂಧಯುಗ, ಮಣ್ಣಿನ ಬಂಡಿ, ಮಹಿಮಾಪುರ, ಉದ್ಧವ, ಕುಬಿ ಮತ್ತು ಇಯಾಲ, ಅಲೀಬಾಬ, ಸಾಯೋ ಜಾತ್ರೆ, ದೆವ್ವದ ಕಾಟ – ಹೀಗೆ ಮುಂತಾದ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಶಿರಸಿಯ 'ಅಂಕನುಸಾರ' ನಾಟಕ ತಂಡದ ಸ್ಥಾಪಕ ಅಧ್ಯಕ್ಷರು, ಮುಂಬಯಿಯ ಭಾರತೀಯ ವಿದ್ಯಾಭವನದಲ್ಲಿ ಪತ್ರಿಕೋದ್ಯಮದಲ್ಲಿ ಪದವಿ ಪಡೆದಿರುವ ಇವರ ಪತ್ರಿಕಾ ವರದಿಗಾರರಾಗಿ, ಅಂಕಣಕಾರರಾಗಿ, ಸಂಪಾದಕರಾಗಿ ಅಪಾರ ಅನುಭವ ಪಡೆದಿದ್ದಾರೆ. ಕತೆಗಾರರಾಗಿಯೂ ಪ್ರಸಿದ್ಧಿ ಪಡೆದಿರುವ ಇವರ ಇಡೀ ಕುಟುಂಬ ರಂಗಭೂಮಿಯಲ್ಲಿ ತೊಡಗಿಕೊಂಡಿದೆ.



## ಶ್ರೀಧರ್ ಹೆಗಡೆ ಹುಲಿಮನೆ

ಹುಲಿಮನೆಯ ಶ್ರೀ ಶ್ರೀಧರ ಹೆಗಡೆಯವರಿಗೆ ರಂಗಕಲೆ ಅನುವಂಶೀಯವಾಗಿ ಬಂದದ್ದು, ಇವರು ತಮ್ಮ ಚಿಕ್ಕಪ್ಪ ಹುಲಿಮನೆ ಸೀತಾರಾಮಶಾಸ್ತ್ರಿಯವರು ಇಟ್ಟ ಹೆಜ್ಜೆ ಗುರುತಿನಲ್ಲೇ ಹಾದಿಯನ್ನು ಕ್ರಮಿಸಿದವರು. ತಮ್ಮ ಹದಿನೈದನೆಯ ವಯಸ್ಸಿನಲ್ಲಿಯೇ ಶ್ರೀ ಜಯಕರ್ನಾಟಕ ನಾಟ್ಯ ಸಂಘದ ನಾಟಕಗಳಲ್ಲಿ ನಾಯಕ ನಟರಾಗಿ ಮಿಂಚಿದವರು. ಮುಂದೆ 1965ರಿಂದ 72ರ ವರೆಗೆ ದೊಡ್ಡವಾಡದ ಸಮಾಜವಿಕಾಸ ನಾಟಕ ಸಂಘದಲ್ಲಿ ನಾಯಕ ನಟನಾಗಿ ಅಭಿನಯಿಸಿ ನ್ಯಾಮತಿ ನಾಟಕ ಕಂಪನಿಯಲ್ಲಿ ಕೆಲ ವರ್ಷಗಳ ಕಾಲ ನೂರಕ್ಕೂ ಹೆಚ್ಚು ನಾಟಕಗಳನ್ನು ನಿರ್ದೇಶಿಸಿ ಹೆಸರು ಗಳಿಸಿದವರು. ಸಂದೇಹ ಸಾಮ್ರಾಜ್ಯದ ಅಶ್ವಿನಿಶೇಟ್, ವೀರ ಪನ್ನಾದಾಸಿಯ ಸತ್ಯಸಿಂಹ, ರಾಮಾಯಣದ ರಾಮ, ವರದಕ್ಷಿಣೆಯ ರಾಮಚಂದ್ರ, ಟಿಪ್ಪೂಸುಲ್ತಾನದ ಟಿಪ್ಪು, ಮೀರಸಾದಕ ಹಾಗೂ ಕಾರನ್‌ವಾಲೀಸ್ ಪಾತ್ರಗಳು ಇವರಿಗೆ ಹೆಸರು ತಂದುಕೊಟ್ಟ ಪಾತ್ರಗಳು. ಮನೆತನ, ಅಣ್ಣತಂಗಿ, ಒಂದಕ್ಕೆ ಒಂದೂವರೆ ಮುಂತಾದ ಸಾಮಾಜಿಕ ನಾಟಕಗಳನ್ನು ಬರೆದವರು. 1986ರಲ್ಲಿ ಹುಲಿಮನೆ ಸೀತಾರಾಮಶಾಸ್ತ್ರಿ ಸ್ಮಾರಕ ಪ್ರತಿಷ್ಠಾನವನ್ನು ಹುಟ್ಟುಹಾಕಿ ಅದರ ವತಿಯಿಂದ 'ಭಾರತಿ ನಾಟಕ ಕಲಾ ತರಬೇತಿ ಕೇಂದ್ರ' ಎಂಬ ನಾಟಕ ಶಾಲೆಯನ್ನು ಆರಂಭಿಸಿ ಈಗಲೂ ಅದರ ಪ್ರಾಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

---



## ಅಲ್ಲಮಪ್ರಭು ಬೆಟ್ಟದೂರ

1951ರಲ್ಲಿ ಜನಿಸಿದ ಇವರು ಎಂ.ಎ. ಪದವೀಧರರು. ಕೊಪ್ಪಳದ ಶ್ರೀ ಗವಿಸಿದ್ಧೇಶ್ವರ ಕಾಲೇಜಿನ ಪ್ರಾಂಶುಪಾಲರಾಗಿ ವೃತ್ತಿ ನಿರ್ವಹಿಸುತ್ತಾ ಸಾಹಿತ್ಯ ಹಾಗೂ ರಂಗಭೂಮಿಯಲ್ಲಿ ಸಕ್ರಿಯವಾಗಿರುವವರು. ಇದು ನನ್ನ ಭಾರತ. ಕುದುರಿಮೋತಿ ಮತ್ತು ನೀಲಗಿರಿ, ಕೆಡಹ ಬಲ್ಲರು ಅವರು ಕಟ್ಟಬಲ್ಲೆವು ನಾವು. ವರ್ತಮಾನ ಇವು ಶ್ರೀಯುತರ ಲೇಖನಿಯಿಂದ ಹೊರಹೊಮ್ಮಿದ ಸಾಹಿತ್ಯ ಕೃತಿಗಳು. ತಿರುಳ್ಗನ್ನಡ ಅಂಬಿಗರ ಚೌಡಯ್ಯ, ವಿಮೋಚನೆ, ಬೆಳಕು ಬಂತು ಬಯಲಿಗೆ ಇವರು ಸಂಪಾದಿಸಿದ ಕೃತಿಗಳು. ಬಂಡಾಯ ಸಾಹಿತ್ಯ ಸಂಘಟನೆಯ ರಾಜ್ಯಸಂಚಾಲಕರಾಗಿ, ತುಂಗಭದ್ರೆ ಉಳಿಸಿ ಹೋರಾಟ ಸಮಿತಿ ಸದಸ್ಯರಾಗಿ ತಮ್ಮ ಸಾಮಾಜಿಕ ಕಳಕಳಿಯನ್ನು ಮೆರೆದಿದ್ದಾರೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ಸಾಹಿತ್ಯ ಅಕಾಡೆಮಿಗಳ ಸದಸ್ಯರಾಗಿ ಹಾಗೂ ಕರ್ನಾಟಕ ನಾಟಕ ಅಕಾಡೆಮಿಯ ಸಂಚಾಲಕರಾಗಿ ಕೆಲಸ ನಿರ್ವಹಿಸಿ ಕೊಪ್ಪಳ ನಾಡಿನ ರಂಗ ರಾಯಭಾರಿಯಾಗಿದ್ದಾರೆ. ಕನಕ ಪ್ರಶಸ್ತಿ, ವಿಶ್ವೇಶ್ವರಯ್ಯ ಪ್ರಶಸ್ತಿಗಳು ಇವರಿಗೆ ಸಂದಿವೆ.

---



## ನರಸಣ್ಣ ಸೋನಾರ

ಶ್ರೀ ನರಸಣ್ಣ ಸೋನಾರರವರು ಕುಷ್ಟಗಿ ಮೇಲಪ್ಪ ಮತ್ತು ಯಶೋಧಮ್ಮ ದಂಪತಿಗಳ ಮಗನಾಗಿ 1944ರಲ್ಲಿ ಜನಿಸಿದರು. ಬಾಲ್ಯದಿಂದಲೇ ಸಂಗೀತ ಮತ್ತು ಅಭಿನಯದಲ್ಲಿ ಆಸಕ್ತಿ ಹೊಂದಿ ಯಲಬುರ್ಗಾ ತಾಲ್ಲೂಕಿನ ವಣಗೇರಿ ಗ್ರಾಮದ ಅಖಂಡೇಶ್ವರ ಪತ್ತಾರ ಗವಾಯಿಗಳ ಹತ್ತಿರ ಸಂಗೀತ ಹಾಗೂ ಹಾರ್ಮೋನಿಯಂ ಕಲಿತರು. ದಿಲ್‌ರುಬಾ, ಕ್ಯಾಸಿನೋಗಳನ್ನು ನುಡಿಸಬಲ್ಲ ಸಂಗೀತ ಸಾಧಕರಿವರು. ಅಕ್ಷಯಾಂಬರ, ಕುರುಕ್ಷೇತ್ರ, ಪ್ರಪಂಚ ಪರೀಕ್ಷೆ, ಚಿತ್ರಾಂಗದಾ, ವೀರಧನಂಜಯ, ಹೇಮರೆಡ್ಡಿ ಮಲ್ಲಮ್ಮ, ಸತಿ

ಸತ್ಯಪರೀಕ್ಷೆ, ಭಕ್ತ ಮಾರ್ಕಂಡೇಯ ಮುಂತಾದ ನಾಟಕಗಳಿಗೆ ಸಂಗೀತ ನೀಡಿ – ನಿರ್ದೇಶನವನ್ನು ನೀಡಿರುತ್ತಾರೆ. ಇದಲ್ಲದೆ ಪಿ. ಧುತ್ತರಗಿಯವರ ಸಂಪತ್ತಿಗೆ ಸವಾಲ್, ಮಲಮಗಳು, ತಾಯಿ ಕರುಳು ಹಾಗೂ ಮಾರುತೇಶ ಮಾಂಡ್ರೆಯವರ ಸೌಭಾಗ್ಯ, ಲಕ್ಷ್ಮಿ, ಸ್ತ್ರೀರತ್ನ, ಖಾದೀ ಟೋಪಿ, ಮೊದಲಾದ ಸಾಮಾಜಿಕ ನಾಟಕಗಳನ್ನು ಕೊಪ್ಪಳದ ಗ್ರಾಮಾಂತರ ಪ್ರದೇಶದಲ್ಲಿ ನಿರ್ದೇಶಿಸಿ ಯಶಸ್ವಿ ಪ್ರದರ್ಶನಗಳನ್ನು ನೀಡಿ ಪ್ರಖ್ಯಾತರಾಗಿದ್ದಾರೆ.

---



## ಎನ್.ಎಸ್. ದೇವಿಪ್ರಸಾದ್ ಸಂಪಾಜೆ

ಶ್ರೀ ಎನ್. ಸಣ್ಣಯ್ಯ ಪಟೇಲ್ ಮತ್ತು ಶ್ರೀಮತಿ ಪೂವಮ್ಮ ದಂಪತಿಗಳಿಗೆ ಶ್ರೀ ಸಂಪಾಜೆಯವರು 1942ರಲ್ಲಿ ಜನಿಸಿದರು. ಮೈಸೂರು ಹಾಗೂ ಮುಂಬಯಿಗಳಲ್ಲಿ ವ್ಯಾಸಂಗ ಮಾಡಿರುವ ಇವರು ವೃತ್ತಿಯಲ್ಲಿ ಅಡಿಕೆ ಬೆಳೆಗಾರರು. ಲೇಖಕ, ನಟ, ನಿರ್ದೇಶಕ, ನಿರ್ಮಾಪಕ, ಸಂಶೋಧಕ, ಹೀಗೆ ಹಲವು ಕ್ಷೇತ್ರಗಳಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದವರು.

ಶಿರಾಡಿ ಭೂತ, ಗೌಡ ಕನ್ನಡ ಭಾಷೆಯ 'ಹೇಂಗಿಸ್ ಹೆಂಗಾಸ್' ನಾಟಕಗಳನ್ನು ಬರೆದಿರುವ ಶ್ರೀಯುತರು ಕಂಬಾರರ 'ಕಿಟ್ಟಕತೆ' ನಾಟಕವನ್ನು ನಿರ್ದೇಶಿಸಿದ್ದಾರೆ. ನೀನಾಸಂನ ತಿರುಗಾಟ, ಸ್ಪಿಕ್‌ಮೆಕೆ ತಂಡ, ಸೃಷ್ಟಿಕೊಡವ ರಂಗ, ಮಾಯಾರಾವ್ ತಂಡ, ರತನ್ ತಿಯಾಂ ತಂಡ ಇವರ ಆತಿಥ್ಯ ಪಡೆದಿವೆ. ತಮ್ಮ ನಾಟಕಗಳನ್ನು ಇವರ 'ನಿಸರ್ಗರಂಗಮಂಚ'ದಲ್ಲಿ ಪ್ರದರ್ಶಿಸಿದ್ದಾರೆ. ದೇವಿಪ್ರಸಾದ್ ನಿರ್ಮಿಸಿದ 'ಮೂರು ದಾರಿಗಳು' ಚಲನಚಿತ್ರ ರಾಷ್ಟ್ರ ಹಾಗೂ ರಾಜ್ಯಪ್ರಶಸ್ತಿಗಳನ್ನು ಪಡೆದಿವೆ. 'ಅಪಹರಣ' ಇವರಿಂದ ನಿರ್ಮಾಣಗೊಂಡ ಟೆಲಿಚಿತ್ರ.

ಇವರು 'ಗುಡ್ಡದ ಭೂತ' ಟಿ.ವಿ. ಧಾರಾವಾಹಿಯಲ್ಲಿ ನಟಿಸಿ ಜನಮೆಚ್ಚುಗೆ ಗಳಿಸಿದ್ದಾರೆ. 'ಅಮರ ಸುಳ್ಯದ ಸ್ವಾತಂತ್ರ್ಯ ಸಮರ' ಇವರ ಸಂಶೋಧನಾ ಕೃತಿ. ಉದ್ಘಾಟನೆ, ನವನೀತ, ಕೊಡಗಿನ ಭಾಷಾ ಸಾಮರಸ್ಯ – ಇವು ಇವರ ಸಂಪಾದಿತ ಕೃತಿಗಳು.

---



## ಊ.ಮ. ತಿಪ್ಪೇಸ್ವಾಮಿ

ಬಳ್ಳಾರಿ ಜಿಲ್ಲೆಯ ಕುರುಗೋಡಿನ ಶ್ರೀ ಪೊಂಪಾಪತಿ ಸ್ವಾಮಿ ಹಾಗೂ ಹಂಪಮ್ಮ ದಂಪತಿಗಳ ಸುಪುತ್ರರಾಗಿ ಶ್ರೀಯುತರು 1955ರಲ್ಲಿ ಜನಿಸಿದರು. ಕಾಲೇಜಿನ ನಾಟಕವೊಂದರಲ್ಲಿ 'ಸ್ತ್ರೀ' ಪಾತ್ರ ಮಾಡುವುದರ ಮೂಲಕ ರಂಗಪ್ರವೇಶ ಮಾಡಿದ ಇವರು ಕೆಲಸವರಸಿ ಕೆ.ಜಿ.ಎಫ್.ಗೆ ಬಂದ ನಂತರ ಅಲ್ಲಿನ 'ಕನ್ನಡ ಮಿತ್ರರು' ಸಂಸ್ಥೆಯಲ್ಲಿ ಸಕ್ರಿಯವಾಗಿ 3 ದಶಕಗಳಿಗೂ ಹೆಚ್ಚು ಕಾಲದಿಂದಲೂ ರಂಗಭೂಮಿಯ ಸೇವೆಗೈಯುತ್ತಾ ಬಂದಿದ್ದಾರೆ. ಥ್ಯಾಂಕ್ಯು ಮಿಸ್ಟರ್‌ಗ್ಲಾಡ್, ಸಿರಿಸಂಪಿಗೆ, ಪೋಸ್ಟರ್, ಮಾರೀಚನ ಬಂಧುಗಳು, ಅಶ್ವತ್ಥಾಮನ್, ಮೋಳಿಗೆ ಮಾರಯ್ಯ, ಚೋರ ಪುರಾಣ, ಸಂಕ್ರಾಂತಿ, ಬಂಡ್ವಾಳ್ವಿಲ್ಲದ ಬಡಾಯಿ, ಯಯಾತಿ, ಹಾವು ಹರಿದಾಡತಾವು, ಉತ್ತಮ ಪ್ರಭುತ್ವ ಲೊಳಲೊಟ್ಟೆ ಹೀಗೆ 60ಕ್ಕೂ ಹೆಚ್ಚು ನಾಟಕಗಳಲ್ಲಿ ಸಿ.ಜಿ.ಕೆ. ಹಾಗೂ ಬಿ.ಆರ್. ಮಲ್ಲಿಕಾರ್ಜುನಯ್ಯನವರ ನಿರ್ದೇಶನದಲ್ಲಿ ಅಭಿನಯಿಸಿದ್ದಾರೆ. ಕನ್ನಡ ಮಿತ್ರರು ಸಂಸ್ಥೆಯ ಗೌರವ ಖಜಾಂಚಿಯಾಗಿ ಹಾಗೂ ಗೌರವ ಕಾರ್ಯದರ್ಶಿಯಾಗಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಸ್ಥೆಯ ರಚನಾತ್ಮಕ ಕೆಲಸ ಮಾಡುವಲ್ಲಿ ಇವರ ದುಡಿಮೆ ಅಪಾರವಾದದ್ದು.

---



## ಡಿ.ಎಂ. ಮುನಿಶಾಮಪ್ಪ

ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ದೊಡ್ಡಮಲ್ಲೇಕೆರೆಯಲ್ಲಿ ಜನಿಸಿದ ಶ್ರೀಯುತರು ರಂಗಭೂಮಿಯಲ್ಲಿ ಚಿಕ್ಕಂದಿನಿಂದಲೇ ಅಭಿರುಚಿಯನ್ನು ಬೆಳೆಸಿಕೊಂಡು, ಕುರುಕ್ಷೇತ್ರ ನಾಟಕದಲ್ಲಿ ಅಭಿಮನ್ಯು ಪಾತ್ರದ ಮೂಲಕ ರಂಗಪ್ರವೇಶ ಮಾಡಿದರು. ನಂತರ ಹಾರ್ಮೋನಿಯಂ ಅಭ್ಯಾಸ ನಡೆಸಿ ಗ್ರಾಮಾಂತರ ಪ್ರದೇಶಗಳಲ್ಲಿ ನಿರಂತರವಾಗಿ ನಾಟಕಗಳನ್ನು ಕಲಿಸುತ್ತಾ ಅದನ್ನೇ ತಮ್ಮ ಕಸುಬಾಗಿಸಿಕೊಂಡಿದ್ದಾರೆ. ಭೂಕೈಲಾಸ, ಗಧಾಯುದ್ಧ, ಕುರುಕ್ಷೇತ್ರ, ಶಿವಶರಣ ರಾವಣ, ಸಂಪೂರ್ಣ ರಾಮಾಯಣ, ಸತ್ಯಹರಿಶ್ಚಂದ್ರ, ನಳದಮಯಂತಿ, ರಾಜಸೂಯಾ ಯಾಗ, ದಾನಶೂರ ಕರ್ಣ, ಶ್ರೀರಾಮ ಭಾರ್ಗವ ರಾಮ, ದಶರಥ ಶ್ರೀರಾಮ ಪಾದುಕಾ ಪಟ್ಟಾಭಿಷೇಕ, ಶ್ರೀನಿವಾಸ ಕಲ್ಯಾಣ, ಶ್ರೀಕೃಷ್ಣ ಸಂಧಾನ, ಸೀತಾಕಲ್ಯಾಣ, ಸೀತಾಪಹರಣ, ಪ್ರಚಂಡ ರಾವಣ ಇನ್ನು ಮುಂತಾದ ನಾಟಕಗಳನ್ನು ನಿರ್ದೇಶಿಸುತ್ತಾ ಕಲೆಯನ್ನೇ ನಂಬಿ ಬದುಕಿದ್ದಾರೆ. ಅಲ್ಲದೆ ಹರಿಕಥೆ, ಭಜನೆ ಇತರ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹಾರ್ಮೋನಿಯಂ ವಾದಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.



## ರಂಗಾರೆಡ್ಡಿ ಕೋಡಿರಾಂಪುರ

ಗೌರಿಬಿದನೂರಿನ ನ್ಯಾಷನಲ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವ ಶ್ರೀ ರಂಗಾರೆಡ್ಡಿ-ಯವರು ಬಂಡಾಯ ಸಾಹಿತ್ಯ ಸಂಘಟನೆಯ ಮೂಲಕ ಸಾರಸ್ವತ ಲೋಕದಲ್ಲಿ ಗುರುತಿಸಿಕೊಂಡವರು. ಸಮುದಾಯ ಚಳವಳಿ, ಸಾಕ್ಷರತಾ ಕಲಾಜಾಥಾಗಳಿಂದ ರಂಗಭೂಮಿಯೆಡೆಗೆ ಆಕರ್ಷಿತರಾದ ಇವರು ಜಾನಪದ ರಂಗಭೂಮಿ ಕುರಿತು ವಿಶೇಷ ಅಧ್ಯಯನ ನಡೆಸಿದವರು. ಒಂದು ಸೊಸೈಟಿಯ ಕಥೆ. ಮಳೆಯ ದೂತರು. ವಿದುರಾಶ್ವತ್ಥ ಹತ್ಯಾಕಾಂಡ, ದಾಲೀದ್ವಾತರ ಜನ್ಮ, ಶಿವನ ಸಂಸಾರ, ನಾಗಸಂದ್ರ ಜೇತದಂಗೆ – ಇವು ಇವರ ಲೇಖನಿಯಿಂದ ಮೂಡಿಬಂದ ನಾಟಕಗಳು. ಜನಪದ ಕಲಾಕೂಟ, ಮೈಸೂರು, ತೊಲುಗೊಂಬೆ ಕಾರ್ಯಾಗಾರ, ಹೊಸೂರು, ಜನಪದ ಕರಕುಶಲ ರಂಗಸಜ್ಜಿಕೆ ಕಾರ್ಯಾಗಾರ, ಹೀಗೆ ಅನೇಕ ಶಿಬಿರಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ಮೂಡಲಪಾಯ ಯಕ್ಷಗಾನ, ಜನಪದ ರಂಗಕಲೆಗಳಲ್ಲಿ ಬಂಡಾಯ ಸಾಧ್ಯತೆ, ಹವ್ಯಾಸಿ ಮತ್ತು ಜನಪದ ರಂಗಭೂಮಿ–ತೌಲನಿಕ ವಿವೇಚನೆ, ಮಾದರಿ ಮಾದಯ್ಯ ಮತ್ತು ಸಾಂಸ್ಕೃತಿಕ ಪಲ್ಲಟ ಹೀಗೆ ಹಲವು ವಿಷಯಗಳ ಕುರಿತು ಹಲವಾರು ಸಂಸ್ಥೆಗಳು ನಡೆಸಿರುವ ವಿಚಾರಗೋಷ್ಠಿಗಳಲ್ಲಿ ಪ್ರಬುದ್ಧ ಪ್ರಬಂಧಗಳನ್ನು ಮಂಡಿಸಿದ್ದಾರೆ.



## ಆರ್.ಎನ್. ಕುಲಕರ್ಣಿ

ಶ್ರೀ ಆರ್.ಎನ್. ಕುಲಕರ್ಣಿಯವರು, ಬೆಳಗಾಂ ಜಿಲ್ಲೆಯ ಅಥಣಿಯಲ್ಲಿ 31 ಮಾರ್ಚ್ 1946ರಲ್ಲಿ ಜನಿಸಿದರು. ನಾಟಕರಚನೆ, ನಟನೆ, ಸಂಘಟನೆಗಳಲ್ಲಿ ಆಸಕ್ತಿ ವಹಿಸಿರುವ ಇವರು ಕುಮಾರವ್ಯಾಸನ 'ಗದುಗ'ವನ್ನು ತಮ್ಮ ಪ್ರವೃತ್ತಿಗೆ ತಾಣವಾಗಿಸಿಕೊಂಡವರು. ತಮ್ಮ ಬಾಲ್ಯದಲ್ಲಿಯೇ 'ಸಂತೆ' ಎಂಬ ನಾಟಕ ರಚಿಸಿ, ನಿರ್ದೇಶನವನ್ನು ಮಾಡಿ ಹೆಸರು ಮಾಡಿದವರು. ವೃತ್ತಿಯನ್ನರಸಿ ಗದುಗಿಗೆ ಬಂದ ಇವರು 1974ರಲ್ಲಿ ಸ್ನೇಹಿತರೊಡಗೂಡಿ

ಆರ್.ಎನ್.ಕೆ. ಮಿತ್ರಮಂಡಳಿ ಎಂಬ ಹವ್ಯಾಸಿ ಕಲಾತಂಡವನ್ನು ಕಟ್ಟಿ ಬಂಡವಾಳ್ವಿಲ್ಲದ ಬಡಾಯಿ, ಮತಾಂತರ, ಜೈಸಿದ ನಾಯಕ, ಕುಂಟಾಕುಂಟಾ ಕುರುವತ್ತಿ, ಲೊಳಲೊಟ್ಟೆ ಬದುಕ ಲೊಳಲೊಟ್ಟೆ, ಎಂಥಾ ಲೋಕವಯ್ಯಾ, ಪೊಲೀಸರಿದ್ದಾರೆ ಎಚ್ಚರ ಹೀಗೆ ಹಲವಾರು ನಾಟಕಗಳನ್ನು ಗದುಗಿನ ಭಾಗದಲ್ಲಿ ಪ್ರದರ್ಶಿಸಿದ್ದಾರೆ. ಹೀರೋಯಿನ್ ಬೇಕಾಗಿದ್ದಾಳೆ, ಹಳೇ ಅರಿವಿಗೆ ಹೊಸ ಭಾಂಡೀ, ಜಪಾನೀ ಸಾಡೀ, ದೇವರ ಬಡಾಯಿ, ಅದುದ್ದೆಲ್ಲಾ ಒಳಿತೇ ಆಯಿತು ಹೀಗೆ ಸುಮಾರು 50ಕ್ಕೂ ಹೆಚ್ಚು ನಾಟಕಗಳನ್ನು ರಚಿಸಿದ್ದಾರೆ. ಆಕಾಶವಾಣಿ ನಾಟಕಗಳು. ಟಿ.ವಿ. ಹಾಗೂ ಸಿನಿಮಾಗಳಲ್ಲಿ ಪಾತ್ರ ವಹಿಸಿರುವ ಇವರು ಹಲವಾರು ಕಾದಂಬರಿಗಳನ್ನು ಬರೆದಿದ್ದಾರೆ.



## ಈಶ್ವರಪ್ಪಾ ಫರಹತಾಬಾದ

ಗುಲಬರ್ಗಾ ಜಿಲ್ಲೆಯ ಫಹತಾಬಾದಿನಲ್ಲಿ ಶ್ರೀ ಈಶ್ವರಪ್ಪನವರು 1939ರಲ್ಲಿ ಜನಿಸಿದರು. ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ವೃತ್ತಿ ಮಾಡುತ್ತಲೆ ರಂಗಭೂಮಿಯನ್ನು ತಮ್ಮ ಪ್ರವೃತ್ತಿಯನ್ನಾಗಿಸಿಕೊಂಡು ಸುಮಾರು 40ಕ್ಕೂ ಹೆಚ್ಚು ವರ್ಷಗಳಿಂದ ರಂಗಸೇವೆ ಮಾಡುತ್ತಾ ಬಂದಿದ್ದಾರೆ. ಇವರು ಅಭಿನಯಿಸಿರುವ ನಾಟಕಗಳೆಂದರೆ, ವರ ನೋಡಿ ಹೆಣ್ಣು ಕೊಡು, ಗುಡಿಸಲಿನ ಗುಡುದಾಳ, ಅಣ್ಣತಂಗಿ, ಬೆಳದಿಂಗಳು, ಆದರ್ಶಪ್ರೇಮ, ಕುದುರೆಮೊಟ್ಟೆ, ತಾಯಿ, ಮೂರು ಮೆಟ್ಟಲಿನ ಕಥೆ, ವಿಷಜ್ವಾಲೆ, ದಾರಿ ತೋರೋ ಭಗವಂತ, ಗುಮ್ಮನಲ್ಲಿಹ ತೋರಮ್ಮ, ಯಥಾ ಪ್ರತ್ಯೇಕ ತಥಾ ನಾಟಕ, ಶಟವಿ, ಋಣಭಾರ, ಓಕಳಿ, ಬದುಕಬೇಕು, ಬಂದೂಕ ಸಾಕು, ಸಾರುವ ಅಮ್ಮನವರು ಹಾಗೂ ಸಹಾರಾ ಎಂಬ ಹಿಂದಿ ನಾಟಕಗಳಲ್ಲಿಯೂ ಅಭಿನಯಿಸಿರುವ ಇವರು ಗುಲಬರ್ಗಾ ಆಕಾಶವಾಣಿಯ 'ಬಿ' ಗ್ರೇಡ್ ಕಲಾವಿದರಾಗಿ 1982ರಿಂದ ಇಲ್ಲಿಯವರೆಗೂ ಸುಮಾರು 50ಕ್ಕೂ ಹೆಚ್ಚು ನಾಟಕಗಳಲ್ಲಿ ಭಾಗವಹಿಸಿದ್ದಾರೆ. ಅಲ್ಲದೆ ದೂರದರ್ಶನ ಧಾರಾವಾಹಿಗಳು, ಕಿರುಚಿತ್ರಗಳು, ಚಲನಚಿತ್ರಗಳಲ್ಲಿಯೂ ಇವರು ಅಭಿನಯಿಸಿದ್ದಾರೆ. ಕರ್ನಾಟಕ ಶ್ರೇಷ್ಠ ವಾಸ್ತುಶಿಲ್ಪಗಳನ್ನು ಥರ್ಮಾಕೋಲಿನಲ್ಲಿ ಪ್ರತಿ ಮಾದರಿಗಳನ್ನು ರೂಪಿಸುವುದು ಇವರ ಮತ್ತೊಂದು ಹವ್ಯಾಸ.



## ಆಯ್.ಎಸ್. ನವಲಿ

1052ರಲ್ಲಿ ಜನಿಸಿದ ಶ್ರೀ ನವಲಿಯವರು ಬಿ.ಎಸ್ಸಿ. ಪದವೀಧರರು. ಇವರು ಗುಲಬರ್ಗಾ ಜಿಲ್ಲೆಯವರು. ಸುಮಾರು 35 ವರ್ಷಗಳಿಂದ ಹವ್ಯಾಸಿ ರಂಗಭೂಮಿಯ ನಿಕಟ ಸಂಪರ್ಕದಿಂದ ಗುಲಬರ್ಗಾ, ಬೀದರ, ರಾಯಚೂರು, ಬಿಜಾಪುರ, ಬಾಗಲಕೋಟೆ, ಹುನಗುಂದ, ಇಳಕಲ್, ಬೆಂಗಳೂರು, ಮೈಸೂರು, ಸುರಪುರ, ಹೈದ್ರಾಬಾದ್, ಮದ್ರಾಸ್ ಹೀಗೆ ಅನೇಕ ಊರುಗಳಲ್ಲಿ ನಾಟಕಗಳನ್ನು ಆಡುತ್ತಾ ಬಂದಿದ್ದಾರೆ. ಕಪಟ ವೇಷಧಾರಿ, ಹೊಸ ಬಾಳು, ಜಾಳೀಷಾ, ಖಿರೋಖಿರ, ಕತ್ತಲೆ ಬೆಳಕು, ಜೋಗಿಭಾವಿ, ಸಮಗ್ರ ಮಂಥನ, ಏನ ಬೇಡಲಿ ನಿನ್ನ ಬಳಿಗೆ ಬಂದು, ಜಂಬೂ ದ್ವೀಪೇ ಭರತ ಖಂಡೇ, ಜೈಸಿದ ನಾಯಕ, ಹರಕೆಯ ಕುರಿ, ಇನ್ನೊಬ್ಬ ದ್ರೋಣ ಹೀಗೆ ಹಲವಾರು ನಾಟಕಗಳಲ್ಲಿ ಅಭಿನಯಿಸುತ್ತಾ ಗುಲಬರ್ಗಾದ ರಂಗಭೂಮಿಯು ಶ್ರೀಮಂತಗೊಳ್ಳುವಲ್ಲಿ ಪ್ರಮುಖ ಪಾತ್ರಧಾರಿಯಾಗಿದ್ದಾರೆ. ಇದಲ್ಲದೆ ಶ್ರೀಯುತರು ಗುಲಬರ್ಗಾ ಆಕಾಶವಾಣಿಯ 'ಬಿ' ಗ್ರೇಡ್ ಕಲಾವಿದರು. ಇವರ ಹಲವಾರು ನಾಟಕಗಳು ಹೈದ್ರಾಬಾದ್ ದೂರದರ್ಶನದಲ್ಲಿಯೂ ಪ್ರದರ್ಶನಗೊಂಡಿವೆ. ಇವರು ನಾಗಾಭರಣರ ಆಸ್ಫೋಟ ಚಿತ್ರದಲ್ಲಿಯೂ ಅಭಿನಯಿಸಿದ್ದಾರೆ.



## ಡಿ.ಎಸ್. ಕುಮಾರ

ಶ್ರೀ ಡಿ.ಎಸ್. ಕುಮಾರ್‌ರವರು 1943ರಲ್ಲಿ ಗುಲಬರ್ಗಾ ಜಿಲ್ಲಾ ಯಾದಗಿರಿಯಲ್ಲಿ ಜನಿಸಿದರು. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಬಯಲಾಟ, ನಾಟಕಗಳಲ್ಲಿ ಆಸಕ್ತಿ ಹೊಂದಿದವರು. 1967ರಲ್ಲಿ ಉದಯಕಲಾ ಮಂಡಳಿ, ಮೈಸೂರು ಕಂಪನಿ ಸೇರಿ ಚಿ॥ ಕಳ್ಳಬಟ್ಟಿ, ದೇವದಾಸಿ, ಚುನಾವಣೆ, ಖಾದಿ ಸೀರೆ ನಾಟಕಗಳಲ್ಲಿ ಅಭಿನಯಿಸುತ್ತಾ ಕಂಪನಿಯ ಮಾಲೀಕರು ಹಾಗೂ ಕವಿಗಳೂ ಆದ ಶ್ರೀ ಯೋಗನರಸಿಂಹಮೂರ್ತಿ ಯವರಿಂದ ಸಾಹಿತ್ಯದಲ್ಲಿ ತರಬೇತಿ ಹೊಂದಿದವರು. 1973ರಲ್ಲಿ ನಡೆದ ಪಾಕಿಸ್ತಾನ–ಬಾಂಗ್ಲಾ ಯುದ್ಧದ ಅನುಷ್ಠಾನವನ್ನು ಮೂಲವಾಗಿಟ್ಟುಕೊಂಡು 'ಜನ್ಮಭೂಮಿ' ನಾಟಕ ಬರೆಯುವ ಮೂಲಕ ನಾಟಕ ರಚನೆಗೆ ಶ್ರೀಕಾರ ಹಾಕಿದವರು. ಕಣ್ಣಿಟ್ಟ ಹೆಣ್ಣು, ಬಂಗಾರದ ಲಿಂಗ, ಹೆಣ್ಣು ಜಗದ ಕಣ್ಣು, ಹಳ್ಳಿ ಸುಟ್ಟ ಕೊಳ್ಳಿ, ಕುಡುಕನ ಗದ್ದ, ಹೆಣ್ಣಿನ ಕಣ್ಣೀರು, ಹೀಗೆ ಹಲವಾರು ನಾಟಕಗಳನ್ನು ಬರೆದವರು. ಮುಂದೆ ಇವರು ಗುಲಬರ್ಗಾ ಜಿಲ್ಲಾ ರಂಗಭೂಮಿ ಕವಿ ಮತ್ತು ಕಲಾವಿದರ ಸಂಘ ಯಾದಗಿರಿ ಎಂಬ ಸಂಸ್ಥೆಯನ್ನು ಕಟ್ಟಿ ಗುಲಬರ್ಗಾ ಜಿಲ್ಲಾದ್ಯಂತ ನಾಟಕ ಮಾಡಿದವರು. ಶ್ರೀಯುತರು 40 ವರ್ಷಗಳಿಂದಲೂ ಅವಿಶ್ರಾಂತವಾಗಿ ರಂಗಭೂಮಿ ಸೇವೆಯನ್ನು ಮಾಡುತ್ತಾ ಅದನ್ನೇ ವೃತ್ತಿಯನ್ನಾಗಿಸಿಕೊಂಡವರು.

---



## ಕುಂಟೆಪ್ಪ ಮಾಸ್ತರ ಕೋಡ್ಲಿ

ಕಲ್ಬುರ್ಗಿ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಕೋಡ್ಲಿ ಗ್ರಾಮದ ವೀರಬಸಪ್ಪ ಮತ್ತು ನೀಲಮ್ಮ ದಂಪತಿಗಳ ಪುತ್ರರಾಗಿ ಶ್ರೀ ಕಂಟೆಪ್ಪ ಮಾಸ್ತರವರು 1937ರಲ್ಲಿ ಜನಿಸಿದರು. ಸುಲೇಪೇಟೆ ಹಾಗೂ ಗುಲಬರ್ಗಾದಲ್ಲಿ ವ್ಯಾಸಂಗ ಮಾಡಿ 1958ರಲ್ಲಿ ಚಿಂಚೋಳಿ ತಾಲ್ಲೂಕಿನ ಧುತ್ತರಗಿಯ ಶಾಲೆಗೆ ಶಿಕ್ಷಕರಾಗಿ ಬಂದ ನಂತರ ಅಲ್ಲಿಯ ಬಸವಲಿಂಗಯ್ಯ ಮಲ್ಲಾಪುರ ಹಾಗೂ ವೈ.ಎಸ್. ಆಚಾರ್ಯರಿಂದ ರಂಗಭೂಮಿ ಹಾಗೂ ಸಾಹಿತ್ಯದಲ್ಲಿ ಅಭಿರುಚಿ ಹೊಂದಿ 1960ರಲ್ಲಿ ಕಂದಗಲ್ಲ ಹನುಮಂತರಾಯರ ಬೆಳ್ಳಿಚುಕ್ಕಿ ನಾಟಕದಲ್ಲಿ ಖಳನಾಯಕ ಪಾತ್ರ ಮಾಡುವುದರ ಮೂಲಕ ರಂಗಭೂಮಿ ಪ್ರವೇಶ ಮಾಡಿದರು. ಶಾಲಾ ಮಾಸ್ತರಿಕೆಯ ಜೊತೆಜೊತೆಗೆ ನಟನೆ, ನಿರ್ದೇಶನ, ಬರವಣಿಗೆಯಲ್ಲಿಯೂ ಆಸಕ್ತಿ ವಹಿಸಿದ ಇವರು ರಾಜಾರಾಣಿ ಗುಲಾಮ, ಕುಡುಕನಹುದು ಕೊಲೆಗಡುಕ ನಾನಲ್ಲ, ಎಲ್ಲಾ ಊರಾಗ ಇದೆ, ಹೋಳಿಹುಣ್ಣಿಮೆ, ಅನುರಾಧಾ, ತವರು ಮನೆ ತಣ್ಣಗಿರಲಿ, ಪ್ಯಾರೆ ದುನಿಯಾ, ಧರ್ಮಚಕ್ರ ಹೀಗೆ ಮೂವತ್ತು ಸಾಮಾಜಿಕ ನಾಟಕಗಳು, ಶ್ರೀ ಹಾರಕುಂಡ ಚೆನ್ನಬಸವೇಶ್ವರ ಮಹಾತ್ಮೆ ಎಂಬ ಆಧ್ಯಾತ್ಮಿಕ ನಾಟಕ, ಗೈಡಿನ ಗುಲಾಮರು, ಒಂದಾನೊಂದು ಊರಿನಲ್ಲಿ, ಓದದೆ ಕೆಟ್ಟ ಓಂಕಾರಭಟ್ಟ, ಬಾ ಮರಳಿ ಶಾಲೆಗೆ ಮುಂತಾದ ಶೈಕ್ಷಣಿಕ ಕಿರುನಾಟಕಗಳನ್ನು ಸಹ ಇವರು ರಚಿಸಿದ್ದಾರೆ.

---



## ರಾಚಣ್ಣಾ ಮಲ್ಲಣ್ಣಾ ಹುಗ್ಗಿ

ಶ್ರೀ ರಾಚಣ್ಣಾ ಮಲ್ಲಣ್ಣಾ ಹುಗ್ಗಿಯವರು 1952ರಲ್ಲಿ ಕಲಬುರ್ಗಿಯ ಜೇವರಗಿಯಲ್ಲಿ ಜನಿಸಿದರು. ಪಿ.ಯು.ಸಿ.ವರೆಗೆ ವ್ಯಾಸಂಗ ಮಾಡಿರುವ ಇವರು ವೃತ್ತಿರಂಗಭೂಮಿಯ ಕಲಾವಿದರಾಗಿ, ಶ್ರೀ ಶಿವಲಿಂಗೇಶ್ವರ ನಾಟ್ಯ ಸಂಘ, ಸಂಕನೂರ, ಶ್ರೀ ಪಂಚಾಕ್ಷರ ನಾಟ್ಯ ಸಂಘ, ಗದಗ, ಶ್ರೀ ಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ, ಸುಳ್ಳ, ಶ್ರೀ ಕುಮಾರೇಶ್ವರ ನಾಟ್ಯ ಸಂಘ, ಹಾನಗಲ್, ಕೆ.ವಿ.ಆರ್. ಡ್ರಾಮಾ ಕಂಪನಿ ದಾವಣಗೆರೆ, ಶ್ರೀ ವಿಶ್ವಾರಾಧ್ಯ ನಾಟ್ಯ

ಸಂಘ, ಜೇವರಗಿ ಹಾಗೂ ಕರ್ನಾಟಕ ಬಹುತೇಕ ಕಂಪನಿಗಳಲ್ಲಿ ಪಾತ್ರಾಭಿನಯ ಮಾಡುತ್ತಾ ಸುಮಾರು 35ಕ್ಕೂ ಹೆಚ್ಚು ವರ್ಷಗಳಿಂದ ರಂಗಭೂಮಿ ಸೇವೆ ಮಾಡುತ್ತಾ ಬಂದಿದ್ದಾರೆ. ಹಲವು ಜನಪ್ರಿಯ ಪಾತ್ರಗಳಲ್ಲಿ ಅಭಿನಯಿಸಿರುವ ಇವರು ಕೆ.ಬಿ.ಆರ್. ಡ್ರಾಮಾ ಕಂಪನಿಯೊಂದರಲ್ಲೇ 20 ವರ್ಷ ಸೇವೆ ಸಲ್ಲಿಸಿರುವುದರ ಮೂಲಕ ತಮ್ಮ ರಂಗಬದ್ಧತೆಗೆ ಹೆಸರಾಗಿದ್ದಾರೆ. ಪ್ರಸ್ತುತ ಗ್ರಾಮಾಂತರ ಪ್ರದೇಶಗಳಲ್ಲಿ ನಾಟಕಗಳನ್ನು ಮಾಡುತ್ತಾ ಹಾಗೂ ನಾಟಕಗಳಿಗೆ ಪ್ರಸಾಧನ ಮಾಡುತ್ತಾ ರಂಗಭೂಮಿಯನ್ನೇ ವೃತ್ತಿಯಾಗಿಸಿಕೊಂಡಿದ್ದಾರೆ.



## ವಿಶ್ವನಾಥ ಮಾಸ್ತರ್ ಬೆಳಗುಂಪಿ

ಗುಲಬರ್ಗಾ ಜಿಲ್ಲೆಯ ಶ್ರೀ ವಿಶ್ವನಾಥ ಮಾಸ್ತರ್ ಬೆಳಗುಂಪಿ ಇವರ ತಂದೆ ಚಂದ್ರಾಮಪ್ಪಾ ಬಿರದಾರ ಬೆಳಗುಂಪಿ. ಇವರು ಜನಿಸಿದ್ದು 1947ರಲ್ಲಿ.

1958ರಲ್ಲಿ ರಂಗಪ್ರವೇಶ ಮಾಡಿದ ಇವರು, ನಟರಾಗಿ, ನಿರ್ದೇಶಕರಾಗಿ ನಾಟಕಕಾರರಾಗಿ ರಂಗಭೂಮಿಯ ಸೇವೆ ಮಾಡುತ್ತಾ ಬಂದಿದ್ದಾರೆ. ಅಧ್ಯಾತ್ಮಿಕ ನಾಟಕಗಳು ಹಾಗೂ ಸಾಮಾಜಿಕ ನಾಟಕಗಳಲ್ಲಿ ಇವರು ಹೆಚ್ಚು ಅಭಿನಯಿಸಿರುವುದು.

ಶ್ರೀ ಅಯ್ಯಪ್ಪಯ್ಯ ಮಹಾತ್ಮೆ, ಶ್ರೀ ಮೌನೇಶ್ವರ ಮಹಾತ್ಮೆ, ಶ್ರೀ ಭಾಗಮ್ಮಾಯಿ ಮಹಾತ್ಮೆ, ಶ್ರೀ ಹಾರಕುಂಡ ಚೆನ್ನಬಸವೇಶ್ವರ ಮಹಾತ್ಮೆ ಹೀಗೆ 50ಕ್ಕೂ ಹೆಚ್ಚಿನ ಅಧ್ಯಾತ್ಮಿಕ ನಾಟಕಗಳಲ್ಲೂ ಮುತ್ತಳಿ, ಬಡತನ ಭೂತ, ದುರಹಂಕಾರ, ಜಮೀನ್ದಾರ, ಕಲಿತ ಕಳ್ಳ, ಅಣ್ಣತಂಗಿ, ಕೆಟ್ಟ ಮೇಲೆ ಬುದ್ಧಿ ಬಂತು, ತೊಟ್ಟಿಲು ಬಟ್ಟಲು, ಕಾಲಚಕ್ರ, ನಾಯಿಗಳಿವೆ ಎಚ್ಚರಿಕೆಯಂತಹ ಸಾಮಾಜಿಕ ನಾಟಕಗಳಲ್ಲೂ ಅಭಿನಯಿಸಿದ್ದಾರೆ. ಸರ್ಪ ಸ್ನೇಹ, ಸ್ವರ್ಗದ ಸಂಪಿಗೆ, ಜೋಕರ್, ಧರ್ಮಫಲ, ಹಣೆಬರಹಕ್ಕೆ ಹೊಣೆ ಯಾರು ಹೀಗೆ ಹಲವಾರು ನಾಟಕಗಳನ್ನು ನಿರ್ದೇಶಿಸಿದ್ದಾರೆ. ಸ್ವರ್ಗದ ಸಂಪಿಗೆ, ಜೋಕರ್, ಧರ್ಮಪುತ್ರ, ಬೆಂಗಳೂರಕ್ಕಾ ಹರಾಮಿರೊಕ್ಕಾ, ಅಮೃತವಾಣಿ ನಾಟಕಗಳನ್ನು ರಚಿಸಿರುತ್ತಾರೆ. ನಿವೃತ್ತ ಪ್ರಾಥಮಿಕ ಶಾಲಾ ಶಿಕ್ಷಕರಾಗಿರುವ ಇವರು ಈಗಲೂ ರಂಗಭೂಮಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದಾರೆ.



## ಬಣ್ಣದ ಬಸವರಾಜಪ್ಪ

ಚಾಮರಾಜನಗರದ ಮಧುವನಹಳ್ಳಿಯವರಾದ ಇವರು ವರ್ಣಾಲಂಕಾರ, ವಸ್ತ್ರವಿನ್ಯಾಸ, ನಟನೆ, ರಂಗಸಂಘಟನೆ ಮೊದಲಾದ ವಿಭಾಗಗಳಲ್ಲಿ ಸುದೀರ್ಘ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ.

82ರ ಹರೆಯದ ಬಸವರಾಜಪ್ಪನವರು ಮೈಸೂರಿನ ಮಹದೇಶ್ವರ ಮಿತ್ರ ಮಂಡಲಿ, ಕೊಳ್ಳೇಗಾಲದ ವೆಂಕಟೇಶ್ವರ ಡ್ರಾಮ ಸೀನರಿ, ಶ್ರೀ ಶಕ್ತಿ ಡ್ರಾಮ ಸೀನರಿ, ಅಕ್ಕಮಹಾದೇವಿ ಕೃಪಾಪೋಷಿತ ನಾಟಕ ಮಂಡಲಿ, ಟಿ. ನರಸೀಪುರದ ಶ್ರೀ ಶಕ್ತಿ ಕಲಾನಿಕೇತನ ಇತರ ಸಂಸ್ಥೆಗಳಲ್ಲಿ ಸುಮಾರು 65ಕ್ಕೂ ಹೆಚ್ಚು ವರ್ಷಗಳಿಂದ ಕಲಾಸೇವೆ ಮಡುತ್ತಾ ಬಂದು ಕೀರ್ತಿ ಪಡೆದವರು. ಯಕ್ಷಗಾನ, ಶನಿಮಹಾತ್ಮೆ, ದಕ್ಷಯಜ್ಞ ಸೇರಿದಂತೆ ಅನೇಕ ಬಯಲು ನಾಟಕಗಳಲ್ಲಿ ಪಾತ್ರ ವಹಿಸಿ ಜನಮನ್ನಣೆ ಗಳಿಸಿದ್ದಾರೆ. ತಮ್ಮ ಇಳಿವಯಸ್ಸಿನಲ್ಲಿಯೂ ರಂಗಭೂಮಿಯನ್ನು ತಮ್ಮ ಬದುಕಾಗಿಸಿಕೊಂಡಿದ್ದಾರೆ.



## ಮಹಾವೀರ್ ಜೈನ್

ಮಾಧ್ಯಮಿಕ ಶಾಲಾ ಹಂತದಲ್ಲೇ ಗುರುಚಂದ್ರಪ್ಪನವರಿಂದ ಪ್ರೋತ್ಸಾಹ ಪಡೆದು 'ಅನ್‌ಎಂಪ್ಲಾಯ್ಡ್ ಅಳಿಯ' ನಾಟಕದ ಮೂಲಕ ಬಣ್ಣದ ಲೋಕಕ್ಕೆ ಬಂದ ಶ್ರೀ ಜೈನ್ ಚಿತ್ರನಟರಾದ ಬಾಲಕೃಷ್ಣ ಮತ್ತು ಚಾಪ್ಲಿನ್‌ನ ಪ್ರಭಾವಕ್ಕೆ ಒಳಗಾದವರು. ಊರಿನ ಸತ್ಯನಾರಾಯಣ ಶೆಟ್ಟರು ಮತ್ತು ಕೃಷ್ಣೋಜಿರಾಯರು ಇವರ ಪ್ರತಿಭೆ ಗುರುತಿಸಿ 'ಕಲಾಸೇವಾ ಸಂಘ'ದ 'ಜಗಜ್ಯೋತಿ ಬಸವೇಶ್ವರ' ನಾಟಕದಲ್ಲಿ ಅಭಿನಯಿಸಲು ಅವಕಾಶ ಮಾಡಿಕೊಟ್ಟರು. ಅಲ್ಲಿಂದಾಚೆಗೆ ಅಜ್ಜಂಪುರ ರಂಗಚಟುವಟಿಕೆಗೂ ಜೈನ್‌ರವರಿಗೆ ಅವಿನಾಸಂಬಂಧ ಏರ್ಪಟ್ಟು ಎ.ಎಸ್. ಕೃಷ್ಣಮೂರ್ತಿಯ ಪರಿಚಯವಾಗಿ ನೀನಾಸಂ ಸೇರಿದರು.

ತಿರುಗಾಟದ ಮೇಲ್ವಿಚಾರಕರಾಗಿ, ತಂತ್ರಜ್ಞರಾಗಿ ದುಡಿದಿದ್ದು ಇವರಿಗೆ ಹೆಮ್ಮೆಯ ವಿಚಾರ. ತುಘಲಕ್, ಚಿದಂಬರ ರಹಸ್ಯ, ಚಾಣಕ್ಯ ಪ್ರಪಂಚ, ಕಿಂಗ್‌ಲಿಯರ್, ಸಾಹೇಬರು ಬರುತ್ತಾರೆ, ಸುಜುವಾನ್ ನಗರದ ಸಾಧ್ವಿ, ಇನ್ನು ಹಲವು ನಾಟಕಗಳಲ್ಲಿ ಅಭಿನಯಿಸಿದ್ದು ಇವರು ಚಿತ್ರರಂಗ ಪ್ರವೇಶಿಸಲು ಸಹಕಾರಿಯಾಯಿತು. 'ಎರಡು ರೇಖೆ', 'ಉಂಡೂ ಹೋದ ಕೊಂಡು ಹೋದ', 'ಕೊಟ್ರೇಶಿ ಕನಸು', 'ಒರು ಊಮೆಯಿನ್ ರಾಗಂ' ಚಿತ್ರಗಳಲ್ಲಿ ಅಭಿನಯಿಸಿದರು. ಕೆ.ಬಿ.ಆರ್.ಡ್ರಾಮಾ ಕಂಪನಿ, ಹುಚ್ಚೇಶ್ವರ ನಾಟ್ಯ ಸಂಘದ ವೃತ್ತಿನಾಟಕಗಳಲ್ಲೂ ಅಭಿನಯಿಸಿರುವ ಜೈನ್ ಅವರು ಅಜ್ಜಂಪುರ ರಂಗಭೂಮಿಗೆ ಆಧಾರ ಸ್ತಂಭ.

---



## ಎಂ.ಬಿ. ಶಿವಪ್ಪ

ಚಿಕ್ಕಮಗಳೂರಿನ ಶ್ರೀ ಎಂ.ಬಿ. ಬಸಪ್ಪಶೆಟ್ಟಿ ಮತ್ತು ಶ್ರೀಮತಿ ಬಿ. ಸೋಮಮ್ಮರವರ ಪುತ್ರರಾಗಿ 1953ರಲ್ಲಿ ಜನಿಸಿದ ಶ್ರೀಯುತರು ನಗರದ ಛಾಯಾ ಕಲಾವಿದರು ಹಾಗೂ ಕಲಾ ಸೇವಾ ಸಂಘಗಳಿಂದ ಪ್ರೇರಿತಗೊಂಡು 1980ರಲ್ಲಿ 'ಪ್ರತಿಭಾ ಕಲಾವಿದರು' ರಂಗತಂಡವನ್ನು ಹುಟ್ಟುಹಾಕಿ 'ವಿಷಜ್ವಾಲೆ', 'ಹಗ್ಗದ ಕೊನೆ', 'ದಿವ್ಯದರ್ಶನ', 'ಗುಂಡೂ ಬಳಗ', 'ಮದ್ವೆ ಬೇಕೇ', 'ತೆರೆದ ಹೃದಯ', 'ರಣ ದುಂದುಬಿ', 'ಕುರಿದೊಡ್ಡಿ ಕುರುಕ್ಷೇತ್ರ ಸನ್ನಿವೇಶ', 'ಜೋಕುಮಾರಸ್ವಾಮಿ', 'ಸುಳಿಯಲ್ಲಿ ಸಿಕ್ಕವರು' ಮುಂತಾದ ನಾಟಕಗಳಲ್ಲಿ ನಟಿಸಿ ನಿರ್ದೇಶನವನ್ನೂ ಮಾಡಿರುತ್ತಾರೆ.

1996ರಲ್ಲಿ ನಗರದ ಭೂಮಿಕಾ ಮತ್ತು ಪ್ರತಿಭಾ ತಂಡಗಳು ಕೂಡಿ 'ಸಂಯುಕ್ತ' ತಂಡ ರೂಪ ತಾಳುವಲ್ಲಿ ಶ್ರೀಯುತರು ಶ್ರಮವಹಿಸಿ ಆ ಮೂಲಕ ಇಂದಿಗೂ ರಂಗಚಟುವಟಿಕೆಯನ್ನು ಮುಂದುವರಿಸಿದ್ದಾರೆ. ಕಳೆದ 11 ವರ್ಷಗಳಿಂದ ಮಕ್ಕಳ ಬೇಸಿಗೆ ಶಿಬಿರವನ್ನು ನಡೆಸುತ್ತಾ ಬಂದಿರುವುದರಲ್ಲಿ ಇವರ ಪಾತ್ರ ಹಿರಿದು. ಮಕ್ಕಳಿಗಾಗಿ ಮೃಗ ಮತ್ತು ಸುಂದರಿ, ಪುಷ್ಪರಾಣಿ ಹಾಗೂ ಮಾಡಿದುಣ್ಣೋ ಮಾರಾಯ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಕೆಲವು ಚಲನಚಿತ್ರಗಳಲ್ಲಿ ಅಭಿನಯಿಸಿರುವ ಶ್ರೀಯುತರಿಗೆ 2003 ಚಿಕ್ಕಮಗಳೂರು ಜಿಲ್ಲಾಡಳಿತ 'ರಾಜ್ಯೋತ್ಸವ ಪ್ರಶಸ್ತಿ' ನೀಡಿ ಗೌರವಿಸಿದೆ.

---

## ಜೆ.ಎಲ್. ರಾಮಪ್ಪ



ಗಂಗಸಮುದ್ರದ ಶ್ರೀ ಜೆ.ಎಲ್. ನಾರಾಣಪ್ಪ ಮತ್ತು ಶ್ರೀಮತಿ ಶಾರದಮ್ಮ ದಂಪತಿಗಳಿಗೆ 1928ರಲ್ಲಿ ಜನಿಸಿದ ಶ್ರೀಯುತರು ಬಾಲ್ಯದಲ್ಲಿಯೇ ಹುಟ್ಟೂರಾದ ಶ್ರೀ ರಾಮಲಿಂಗೇಶ್ವರ ಕೃಪಾಪೋಷಿತ ನಾಟಕ ಮಂಡಲಿಯ 'ಪ್ರಭಾಮಣಿ ವಿಜಯ' ನಾಟಕದ ಮೂಲಕ ರಂಗಪ್ರವೇಶ ಮಾಡಿದರು. 1959ರಲ್ಲಿ ತಾವೇ ರಚಿಸಿ ನಿರ್ದೇಶಿಸಿದ 'ಗಾಂಪ ವಿಜಯ'ದ ಮೂಲಕ ಮಲ್ಲಾಡಿಹಳ್ಳಿಯ ಶ್ರೀಗಳ ಗಮನ ಸೆಳೆದ ಇವರು ರಂಗಭೂಮಿಯಲ್ಲಿ ಸಕ್ರಿಯವಾಗಲು ಕಾರಣವಾಯಿತು.

ಹಿಂದಿ ನಾಟಕಕಾರ ಶ್ರೀಕೃಷ್ಣಚಂದ್ರರ ನಾಟಕ 'ಸಹರಾಯ್ ಕೆ. ಬಾಹರ್' ನಾಟಕವು ಶ್ರೀ ಎನ್. ಬಾಲಸುಬ್ರಹ್ಮಣ್ಯರಿಂದ 'ಛತ್ರದ ಹೊರಗೆ' ಎಂದು ಅನುವಾದಿಸಲ್ಪಟ್ಟು, ಶ್ರೀಯುತರಿಂದ ನಿರ್ದೇಶಿಸಲ್ಪಟ್ಟು – ಅಂದಿನ ರಾಷ್ಟ್ರಾಧ್ಯಕ್ಷರಾದ ಡಾ. ಜಾಕೀರ್‌ಹುಸೇನ್‌ರಿಂದ ವೀಕ್ಷಿಸಲ್ಪಟ್ಟು ಮೆಚ್ಚುಗೆ ಗಳಿಸಿದ್ದು ಇವರ ರಂಗಕಿರೀಟಕ್ಕೊಂದು ನವಿಲುಗರಿ.

ಮುಂದೆ ಮಲ್ಲಾಡಿಹಳ್ಳಿಯ ಶ್ರೀಗಳ ಜೊತೆ ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಾ ಶ್ರೀಗಳು ರಚಿಸಿದ ಬಹುತೇಕ ನಾಟಕಗಳಲ್ಲಿ ಭಾಗವಹಿಸಿ ಜನಮನ್ನಣೆಗೆ ಪಾತ್ರರಾಗಿದ್ದಾರೆ. ಇವರು ಅಭಿನಯಿಸಿದ ಮುಖ್ಯ ನಾಟಕಗಳು 'ನ್ಯಾಯ ಮಂತ್ರಿ', 'ವನಮಹೋತ್ಸವ', 'ತಿರುನಾಮ', 'ಧನಪಿಶಾಚಿ', 'ನನ್ನ ರಾಮರಾಜ್ಯ', 'ಧನ್ಯ ಭಾರತಿ' ಇನ್ನು ಹಲವಾರು.

---

## ಕುಪ್ಪೂರು ಕೃಷ್ಣಮೂರ್ತಿ



ಚಿಕ್ಕನಾಯಕನಹಳ್ಳಿ ತಾಲ್ಲೂಕು, ಕುಪ್ಪೂರಿನ ಶ್ರೀ ಅನಂತಯ್ಯ ಹಾಗೂ ಶ್ರೀಮತಿ ಲಕ್ಷ್ಮಿದೇವಮ್ಮ ದಂಪತಿಗಳ ಸುಪುತ್ರರಾಗಿ ಶ್ರೀ ಕೃಷ್ಣಮೂರ್ತಿಯವರು 1945ರಲ್ಲಿ ಜನಿಸಿದರು. ಇವರು ಬೆಂಗಳೂರು, ಕುಪ್ಪೂರು ಹಾಗೂ ಹುಳಿಯಾರಿನಲ್ಲಿ ವಿದ್ಯಾಭ್ಯಾಸ ಮಾಡಿ ಬೆಂಗಳೂರಿನ ಹೆಚ್.ಎಂ.ಟಿ. ಕಾರ್ಖಾನೆಯ ಉದ್ಯೋಗಿಯಾದರು.

ಹೆಚ್.ಎಂ.ಟಿ.ಯ ಗೆಳೆಯರ ಜೊತೆಗೂಡಿ 'ಕಲಾಜ್ಯೋತಿ ಗೆಳೆಯರ ಬಳಗ' ಸ್ಥಾಪಿಸಿ, ಶ್ರೀ ಎ.ಎಸ್. ಮೂರ್ತಿಯವರ 'ಚೆಂದೊಳ್ಳಿ ಚೆಲುವೆ' ನಾಟಕ ಮಾಡಿ ಬಹುಮಾನ ಪಡೆದ ಸ್ಫೂರ್ತಿಯಾಗಿ ಮುಂದೆ ಕೈಲಾಸಂರವರ ಹೋಂ ರೂಲು, ನಂ ಕಂಪ್ನಿ, ಬಂಡ್ವಾಳ್ವಿಲ್ಲ ಬಡಾಯಿ, ಗಂಡಸ್ಕತ್ರಿ, ಅನುಕೂಲಕ್ಕೊಬ್ಬಣ್ಣ ನಾಟಕಗಳು, ವೈನತೇಯರ ನಾಟಕಗಳು, ಪರ್ವತವಾಣಿ, ಎನ್.ಎಸ್.ರಾವ್, ಶ್ರೀರಂಗ, ಡಾ. ಕಂಬಾರ, ನಾ.ಕ್ಯಾ, ಸತ್ಯನಾರಾಯಣರ ಹೆಸರಾಂತ ನಾಟಕಗಳಲ್ಲಿ ಅಭಿನಯಿಸಿ ಅನೇಕ ಸ್ಪರ್ಧೆಗಳಲ್ಲಿ ಬಹುಮಾನ ಗಳಿಸಿದ್ದು ಇವರ ಹೆಗ್ಗಳಿಕೆ.

ಮುಂದೆ 1978ರಲ್ಲಿ ತುಮಕೂರಿನ ಹೆಚ್.ಎಂ.ಟಿ.ಗೆ ಬಂದ ನಂತರ 1981ರಲ್ಲಿ ಹೆಚ್.ಎಂ.ಟಿ. 'ಲಲಿತ ಕಲಾಸಂಘ'ವನ್ನು ಸ್ಥಾಪಿಸಿ ಕಾರ್ಖಾನೆ ವಾತಾವರಣದಲ್ಲಿಯೂ ರಂಗಭೂಮಿಯನ್ನು ಜೀವಂತವಾಗಿಟ್ಟವರು. ತಮ್ಮ ನಿವೃತ್ತಿಯ ನಂತರವೂ ಶ್ರೀಯುತರು ತುಮಕೂರು ರಂಗಕ್ಷೇತ್ರದಲ್ಲಿ ಸಕ್ರಿಯವಾಗಿದ್ದಾರೆ.

---



## ಹೆಚ್.ಬಿ. ಸಿದ್ದಲಿಂಗಪ್ಪ

ತುಮಕೂರಿನ ಊರುಕೆರೆಯ ಶ್ರೀ ಭೋಗಯ್ಯ ಮತ್ತು ಶ್ರೀ ಸಿದ್ಧಗಂಗಮ್ಮನವರ ಸುಪುತ್ರರಾಗಿ 1920ರಲ್ಲಿ ಜನಿಸಿದರು. 5ನೇ ತರಗತಿಯವರೆಗೂ ಹೆಬ್ಬಾಕದಲ್ಲಿ ವಿದ್ಯಾಭ್ಯಾಸ ನಡೆಸಿ 11ನೇ ವಯಸ್ಸಿನಲ್ಲಿಯೇ ವಿದ್ವಾನ್ ಟಿ. ರಾಮಮೂರ್ತಿಯವರಿಂದ ಸಂಗೀತ ಕಲಿತು ಊರುಕೆರೆ ವೆಂಕಟರಾಮಯ್ಯ ಹಾಗೂ ಉತ್ತೇನಹಳ್ಳಿ ದೊಡ್ಡನಂಜಪ್ಪನವರ ನಿರ್ದೇಶನದಲ್ಲಿ 'ದಕ್ಷಯಜ್ಞ' ಹಾಗೂ 'ಟಿಪ್ಪು ಸುಲ್ತಾನ್' ನಾಟಕಗಳಲ್ಲಿ ಅಭಿನಯಿಸುವುದರ ಮೂಲಕ ರಂಗಕ್ಕೆ ಪಾದಾರ್ಪಣೆ ಮಾಡಿದವರು. ಮುಂದೆ ಗುಬ್ಬಿ ಕಂಪನಿ ಹಾಗೂ ಶಾರದಾ ಸಂಗೀತ ನಾಟಕ ಮಂಡಲಿ, ಗೋಕಾಕ ಸೇರಿ ಸಂಪೂರ್ಣವಾಗಿ ರಂಗಭೂಮಿಗೆ ಬದುಕನ್ನು ಸಮರ್ಪಿಸಿಕೊಂಡು ಮಹಾರಾಣಿ ಶ್ರೀಮತಿ ತ್ರಿಪುರ ಸುಂದರಮ್ಮಣ್ಣಿಯವರಿಂದ ಸನ್ಮಾನಿಸಿಕೊಂಡು ಕೀರ್ತಿ ಪಡೆದವರು. ಕುರುಕ್ಷೇತ್ರ, ರಕ್ತರಾತ್ರಿ, ಮಾನವತಿ, ಮಾತೃಪ್ರೇಮ, ಕಿರಾತನಾರ್ಜುನ ಕಿರಾತ, ಕಚದೇವಯಾನಿ, ದಶಾವತಾರ, ರುಕ್ಮಿಣಿ ಸ್ವಯಂವರ, ಶ್ರೀಕೃಷ್ಣ ಗಾರುಡಿ ಹೀಗೆ ಹಲವಾರು ನಾಟಕಗಳಲ್ಲಿ ಅಭಿನಯಿಸಿ ಸುಮಾರು 50 ವರ್ಷಗಳಿಗೂ ಹೆಚ್ಚು ವರ್ಷಗಳ ಕಾಲ ರಂಗಭೂಮಿ ಸೇವೆಗೈದವರು.

---



## ಜನಾರ್ಧನ್ ಆಚಾರ್ಯ

ಬೈಕಾಡಿ ಶ್ರೀ ಜನಾರ್ಧನ ಆಚಾರ್‌ರವರು, ಬೈಕಾಡಿಯ ಶಿವಯ್ಯ ಆಚಾರ್ ಮತ್ತು ಜಲಜರವರ ಪುತ್ರರಾಗಿ 1951ರಲ್ಲಿ ಜನಿಸಿದರು. ಬೈಕಾಡಿ, ಬ್ರಹ್ಮಾವರ, ಮಣಿಪಾಲ್, ಉಡುಪಿ, ಧಾರವಾಡಗಳಲ್ಲಿ ವ್ಯಾಸಂಗ ಮಾಡಿರುವ ಇವರು ಶಿಕ್ಷಣ ಕ್ಷೇತ್ರದಲ್ಲಿ ಉದ್ಯೋಗಿಯಾಗಿದ್ದಾರೆ. ನಟನೆ ಹಾಗೂ ನಿರ್ದೇಶನ ಅವರ ಅಚ್ಚುಮೆಚ್ಚಿನ ಕ್ಷೇತ್ರ. ಅಮೃತಸೋಮೇಶ್ವರರ ಗೋಂದೊಳು, ರಾಮದಾಸರ ಗರುಡಗಂಬ, ಹಾಗೂ ಕುರುಡು ಕಾಂಚಾಣ, ಯುದ್ಧಾನಂತರ, ಸುಯೋಧನ ಕೊಡೆಗಳು ಇವರು ನಿರ್ದೇಶಿಸಿರುವ ಪ್ರಮುಖ ನಾಟಕಗಳು. ಆಕಾಶವಾಣಿ ನಾಟಕ ಹಾಗೂ ಹಲವು ಸಾಕ್ಷ್ಯಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಕಲೆ ಮತ್ತು ಕಲಾವಿದರಿಗಾಗಿ ಮೀಸಲಾಗಿರುವ ಮಾಸಪತ್ರಿಕೆ 'ರೂವಾರಿ'ಯ ಗೌರವ ಸಂಪಾದಕರು. ನಮ್ಮ ಕುಡ್ಲ, ನಮ್ಮ ಟಿ.ವಿ., ಶ್ರೀ ಟಿ.ವಿ. ಮೊದಲಾದ ಚಾನೆಲ್‌ಗಳಲ್ಲಿ ಶಿಕ್ಷಣದ ಕುರಿತಾಗಿ ಸಂದರ್ಶನ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿದ್ದಾರೆ. ಹತ್ತಕ್ಕೂ ಹೆಚ್ಚು ಸ್ಮರಣಸಂಚಿಕೆಗಳ ಪ್ರಮುಖ ಸಂಪಾದಕರಾಗಿ ಕಾರ್ಯ ನಿರ್ವಹಿಸಿರುವ ಇವರು ಹಲವಾರು ಶಾಲಾ–ಕಾಲೇಜು, ಸಂಘ ಸಂಸ್ಥೆಗಳು ರೂಪಿಸುವ ಶೈಕ್ಷಣಿಕ ಶಿಬಿರಗಳ ಸಂಪನ್ಮೂಲ ವ್ಯಕ್ತಿಯಾಗಿ ಶಿಕ್ಷಣ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ.

---



## ರತ್ನಮಾಲಾ ಪುರಂದರ್

ಶ್ರೀಮತಿ ರತ್ನಮಾಲಾ ಪುರಂದರ್ ಅವರು ಪಣಂಬೂರಿನ ಜಿ. ಓಮಯ್ಯ ಮತ್ತು ಕಮಲಮ್ಮ ದಂಪತಿಗಳ ಸುಪುತ್ರಿ, ರಂಗಭೂಮಿ, ಸಿನಿಮಾ, ಕಿರುತೆರೆ, ಸುಗಮ ಸಂಗೀತ ಕ್ಷೇತ್ರದಲ್ಲಿ ಸುಮಾರು 25 ವರ್ಷಗಳಿಂದಲೂ ಗುರುತಿಸಿಕೊಂಡಿರುವ ಇವರು ತುಳು ರಂಗಭೂಮಿಯ ದಂತಕಥೆಯಾಗಿರುವ ಕೆ.ಎನ್. ಟೈಲರ್‌ರವರ ಯಾನ್ ಸಂನ್ಯಾಸಿ ಆಪೆ, ಕಾಸ್ ದಾಯಿಕಂಡನೆ, ಏರ್‌ಮಟ್ಟಿನ ತಪ್ಪು, ಎನನ್ ಬದ್‌ಕೆರೆ ಬುಡ್ಲೆ, ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಅಲ್ಲದೆ, ಹೆಚ್.ಕೆ. ಯೋಗಾನರಸಿಂಹರವರ ನಿರ್ದೇಶನದ ಭ್ರಷ್ಟಾಚಾರ,

ಕಳ್ಳಭಟ್ಟಿ, ಶ್ರೀಮಾನ್ ಬೇಸ್ತಿ, ಕನ್ಯಾಬಲ ಹಾಗೂ ರಮಾನಂದಚೂರ್ಯ ನಿರ್ದೇಶನದಲ್ಲಿ ಗೀತಾರಹಸ್ಯ ಮತ್ತು ನಾವಿಲ್ಲದಾಗ, ಕನ್ನಡ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಬೆಳದಿಂಗಳಾಗಿ ಬಾ, ಲಾವಿ, ತುಳಸಿ, ಕಪಿಚೇಷ್ಟೆ ಹಾಗೂ ಜೋಕ್‌ಫಾಲ್ಸ್ ಟಿ.ವಿ. ಧಾರಾವಾಹಿಗಳು, ಯಾರು ಹಿತವರು, ಗಿರಿಕನ್ಯೆ, ಮುಯ್ಯಿ, ಬಡವರ ಬಂಧು ಇನ್ನು ಹಲವಾರು ಸಿನಿಮಾಗಳಲ್ಲಿ ಅಭಿನಯಿಸಿದ್ದಾರೆ. ಸುಗಮ ಸಂಗೀತ ಕಲಾವಿದೆಯಾಗಿರುವ ಇವರು 'ಸುಮಧುರ ಸಂಗೀತ ಶಾಲೆ'ಯನ್ನು ಸ್ಥಾಪಿಸಿ ಆ ಮೂಲಕ ಸಂಗೀತ ಕ್ಷೇತ್ರದಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

---



## ರೋಹಿಣಿ ಜಯರಾಮ್

ಶ್ರೀಮತಿ ರೋಹಿಣಿ ಜಯರಾಮ್‌ರವರು ರಘುರಾಮ್ ಹಾಗೂ ಕಮಲ ದಂಪತಿಗಳ ಸುಪುತ್ರಿಯಾಗಿ 1948ರಲ್ಲಿ ಜನಿಸಿದರು. ರಮಾನಂದ ಚೂರ್ಯರವರು ರಚಿಸಿ ನಿರ್ದೇಶಿಸಿದ ಹೌದಾದ್ರೆ ಹೌದೆನ್ನಿ ನಾಟಕದ ಮೂಲಕ 1982ರಲ್ಲಿ ರಂಗಭೂಮಿಗೆ ಅಡಿಯಿಟ್ಟರು. ದಕ್ಷಿಣ ಕನ್ನಡ, ಉಡುಪಿ, ಕಾಸರಗೋಡು, ಮುಂಬಯಿ, ನಾಸಿಕ್, ಪುಣೆ, ಬೆಂಗಳೂರು, ಮೈಸೂರು, ಹುಬ್ಬಳ್ಳಿ, ಧಾರವಾಡ, ಗುಲಬರ್ಗಾ, ಕುವೈಟ್‌ಗಳಲ್ಲಿ ಪ್ರದರ್ಶಿತವಾಗಿರುವ ಶ್ರೀಕೃಷ್ಣ ದೇವರಾಯ, ಚಕ್ರವ್ಯೂಹ, ಚೆಲುವ ಚೆನ್ನಿಗರಾಯ, ಆತ್ಮಲಿಂಗ, ನಾಟ್ಯರಾಣಿ ಶಾಂತಲಾ, ಹೌದಾದ್ರೆ ಹೌದೆನ್ನಿ ಕನ್ನಡ ನಾಟಕಗಳು ಹಾಗೂ ಏರೆನ್ಲಾ ನಂಬೊಡ್ಚಿ ಕಂಪನಿ – ಬುಡೆದಿ, ದೇವೆರ್ ಕೊರ್ಪೆರ್, ಗಂಟೆ ಶಾಂಡ್, ಈರ್‌ದೂರಪನಯರೆ ಹೊಂಡಾ ಮಸ್ತಂಡು ಹಾಗೂ ಇತರ ತುಳು ನಾಟಕಗಳಲ್ಲಿ ನಟಿಸಿದ್ದಾರೆ. ಅಲ್ಲದೆ ಕನ್ನಡ ಹಾಗೂ ತುಳುವಿನ ಸುಮಾರು 1500ಕ್ಕೂ ಹೆಚ್ಚು ನಾಟಕಗಳಲ್ಲಿ ಗಾಯಕಿಯಾಗಿ ಸೇವೆ ಸಲ್ಲಿಸಿದ್ದಾರೆ. ಆಕಾಶವಾಣಿ, ಕಿರುತೆರೆ ಹಾಗೂ ಚಲನಚಿತ್ರಗಳಲ್ಲಿಯೂ ಇವರು ಅಭಿನಯಿಸಿದ್ದಾರೆ.

---



## ಎ.ಕೆ. ವಿಜಯ್

ಕಾಸರಗೋಡಿನ ಕೊರಗಪ್ಪ ಮತ್ತು ಎಂ. ಅಪ್ಪಿ ದಂಪತಿಗಳ ಪುತ್ರರಾಗಿ ಜನಿಸಿದ ಶ್ರೀ ಎ.ಕೆ. ವಿಜಯ್‌ರವರು ಬಾಲ್ಯದಿಂದಲೇ ಸಂಗೀತಕ್ಕೆ ಮಾರುಹೋದವರು. ತನ್ನ ಅಣ್ಣ ಕಾಳಪ್ಪರೊಂದಿಗೆ ಬಾಲ್ಯದಲ್ಲಿಯೇ ಹಾರ್ಮೋನಿಯಂ ನುಡಿಸುವುದರೊಂದಿಗೆ ಜನಪ್ರಿಯರಾದವರು. ನಂತರ ರಂಗಭೂಮಿಯೆಡೆಗೆ ಆಕರ್ಷಿತರಾಗಿ ಸುಮಾರು 28 ವರ್ಷಗಳಿಂದ ರಂಗಸಂಗೀತ ನೀಡಿ ರಂಗಭೂಮಿಗೆ ಸೇವೆ ಸಲ್ಲಿಸುತ್ತಿದ್ದಾರೆ. ಮಚ್ಚೇಂದ್ರನಾಥ್ ಪಾಂಡೇಶ್ವರ, ಸೀತಾರಾಮ್ ಕುಲಾಲ್, ರಾಮ ಕಿರೋಡಿಯನ್, ರತ್ನಾಕರ ರಾವ್ ರಾವೂರ್, ಕಾಸರಗೋಡು ಚಿನ್ನ, ಅಚ್ಯುತ ಕಲ್ಲಾಪು, ರಮಾನಂದ ಚೂರ್ಯ, ವಿಜಯಕುಮಾರ್ ಕೊಡಿಯಾಲ್ ಬೈಲ್, ಇಂತಹ ಹೆಸರಾಂತ ನಿರ್ದೇಶಕರ ನಾಟಕಗಳಿಗೆ ಸಂಗೀತ ನೀಡಿ ಕೀರ್ತಿ ಪಡೆದಿದ್ದಾರೆ. ಅಲ್ಲದೆ ಅದ್ದೂರಿ ತುಳು ಚಲನಚಿತ್ರ 'ಬಿರಿಯದೋರ್ಂ ಅಸಲ್' ಚಲನಚಿತ್ರದಲ್ಲಿ ಖ್ಯಾತ ಗಾಯಕ ಎಸ್.ಪಿ. ಬಾಲಸುಬ್ರಹ್ಮಣ್ಯಂರವರು ಇವರ ಸಂಗೀತ ನಿರ್ದೇಶನದಲ್ಲಿ ಹಾಡಿರುವುದು ಇವರಿಗೆ ಹೆಮ್ಮೆಯ ವಿಚಾರ. ಶ್ರೀಯುತರು ಇಲ್ಲಿಯವರೆಗೆ ಕನ್ನಡ, ತುಳು, ಕೊಂಕಣಿಯ ಸುಮಾರು ನಾಟಕಗಳಿಗೆ ಸಂಗೀತ ನೀಡಿ ನಾಡಿನ ರಂಗಪ್ರಿಯರ ಮನ ಗೆದ್ದಿದ್ದಾರೆ.

---



## ಸುಕುಮಾರ್ ಕೆ. ಕಣ್ಣನ್

ಸುಕುಮಾರ್ ಕೆ. ಕಣ್ಣನ್‌ರವರು ಕಣ್ಣನ್ ಹಾಗೂ ಕೆ. ರೋಹಿಣಿಯವರ ಪುತ್ರರು 12ನೇ ಪ್ರಾಯದಲ್ಲಿಯೇ ಬಣ್ಣದ ಪ್ರಪಂಚಕ್ಕೆ ಅಡಿ ಇಟ್ಟವರು. ಮಂಗಳೂರಿನ ಯು.ಎಸ್. ಕೃಷ್ಣರಾವ್, ಕಾಸರಗೋಡಿನ ಶ್ಯಾಮಲ, ಕಣ್ಣೂರಿನ ಮನೋರಮ, ಬಾಲಕೃಷ್ಣರಲ್ಲಿ ಶಾಸ್ತ್ರೀಯ ನೃತ್ಯ ಕಾರ್ಯಕ್ರಮಗಳನ್ನು ನೀಡಿದ ಅನುಭವ ಇವರದಾಗಿದೆ. ನೇಪಾಳ ಹಾಗೂ ಕಠ್ಮಂಡುಗಳಲ್ಲಿ ನೃತ್ಯ ನಾಟಕಗಳಲ್ಲಿ ಅಭಿನಯಿಸಿ ನೃತ್ಯ ಹಾಗೂ ರಂಗಭೂಮಿ ಕೊಂಡಿಯಾಗಿದ್ದಾರೆ. ಕಾಸರಗೋಡಿನ ಗಡಿನಾಡು ಕಲಾವಿದರು (ರಿ.) ಸಂಸ್ಥೆಯಲ್ಲಿ 25 ವರ್ಷಗಳಿಂದಲೂ ನಿರಂತರವಾಗಿ ರಂಗಚಟುವಟಿಕೆಗಳಲ್ಲಿ ಭಾಗಿಯಾಗಿದ್ದಾರೆ. ಬಣ್ಣದ ಪ್ರಪಂಚ, ಹಯವದನ, ಕತ್ತಲುದಾರಿ ದೂರ, ಗುರುದಕ್ಷಿಣೆ, ಸಾಂಬಶಿವ, ಸತ್ಯಹರಿಶ್ಚಂದ್ರ, ಮೊದಲಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ರಾಜ್ಯದಾಹ, ಅಗ್ನಿ ಮತ್ತು ಮಳೆ, ಅಂಧ ಯುಗ ಹಾಗೂ ತುಳುವಿನ ಏರ್‌ತೂಯಿನಿ, ಎಂಚಿನಲಾ ಪನ್ಲೆ, ಸೋಮು, ಮುಕ್ಕಾಲು ಮೂರುಗಳಿಗೆ, ಕಂಟುಲ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಕಿಲಾಡಿ ತಾತ, ಫಣಿಯಮ್ಮ, ಸುಲ್ತಾನ್, ಸ್ನೇಹಸಿಂಧೂರ ಸಿನಿಮಾಗಳಲ್ಲಿ ಅಭಿನಯಿಸಿರುವ ಶ್ರೀಯುತರು ಕಾಸರಗೋಡಿನ ಯವನಿಕಾ, ಲಲಿತ ಕಲಾಸದನ ಸಂಸ್ಥೆಗಳಲ್ಲಿ ಸಕ್ರಿಯರಾಗಿದ್ದು ತುಳು, ಕನ್ನಡ ರಂಗಭೂಮಿಯ ಗಡಿನಾಡಿನ ನೇತಾರರಾಗಿದ್ದಾರೆ.



## ಜಯಕುಮಾರ ಕೊಡಗನೂರು

ಶ್ರೀ ಹನುಮಂತಪ್ಪ ಮತ್ತು ಶ್ರೀಮತಿ ಗಂಗಮ್ಮನವರ ಸುಪುತ್ರರಾಗಿ 1951ರಲ್ಲಿ ಜನಿಸಿದ ಶ್ರೀಯುತರು ತಮ್ಮ 12ನೇ ವಯಸ್ಸಿನಲ್ಲಿಯೇ ಬಣ್ಣ ಹಚ್ಚಿಕೊಂಡವರು. ಮುಂದೆ 1976ರ ವೇಳೆಗೆ 'ರಾಜೇಶ್ವರಿ ನಾಟಕ ಸಂಘ' ಸೇರಿ 'ಸದಾರಮೆ' ನಾಟಕದಲ್ಲಿ ನಟಿಸುವುದರ ಮೂಲಕ ರಂಗಭೂಮಿಯನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡವರು. ಗುಬ್ಬಿ ಕಂಪನಿ, ಶ್ರೀ ಕುಮಾರೇಶ್ವರಿ ನಾಟಕ ಸಂಘ, ಚಿತ್ರದುರ್ಗ, ಶ್ರೀ ಸಂಗಮೇಶ್ವರ ನಾಟಕ ಸಂಘ, ಗುಡಗೇರಿ, ಶ್ರೀ ಓಂಕಾರೇಶ್ವರ ನಾಟಕ ಸಂಘ, ರಾಣೆಬೆನ್ನೂರು, ಶ್ರೀಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ, ಸುಳ್ಯ, ಶ್ರೀ ಕೆ.ಬಿ.ಆರ್. ಡ್ರಾಮ ಕಂಪನಿಗಳಲ್ಲಿ ಕಳೆದ 30 ವರ್ಷಗಳಿಂದಲೂ ಅಭಿನಯಿಸುತ್ತಾ ಬಂದವರು. ಟಿಪ್ಪುಸುಲತಾನ್, ರಾಷ್ಟ್ರವೀರ ಎಚ್ಚಮನಾಯಕ, ಮಹಿಷಾಸುರ, ಕಾರ್ತ್ಯವೀರಾರ್ಜುನ, ರಾಜಾ ಮದಕರಿನಾಯಕ ಇವರಿಗೆ ಹೆಸರು ತಂದ ಪಾತ್ರಗಳು. ಕೆ.ಬಿ.ಆರ್. ಡ್ರಾಮ ಕಂಪನಿ ಬೆಂಗಳೂರಿನಲ್ಲಿ 1000ಕ್ಕೂ ಹೆಚ್ಚು ಪ್ರದರ್ಶನ ಕಾಣಲು ಶ್ರೀಯುತರ 'ಪೋಲೀಸ್ ಅಧಿಕಾರಿ ಎಸ್.ಪಿ. ಚಂದ್ರಶೇಖರ' ಪಾತ್ರದ ಅಮೋಘ ಅಭಿನಯ ಕಾರಣ ಎಂದರೆ ತಪ್ಪಿಲ್ಲ. ಇವರಿಗೆ 'ಅಭಿನಯ ಚತುರ' ಬಿರುದು ಬಂದಿರುವುದು ಇವರ ಅಭಿನಯಕ್ಕೆ ಸಂದ ಗೌರವ.



## ಕೆ. ವೀರಯ್ಯಸ್ವಾಮಿ

ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕಿನ ಕುಪ್ಪೇಲೂರು ಗ್ರಾಮದ ಮಹಾದೇವಯ್ಯನವರ ಪುತ್ರರಾಗಿ ಶ್ರೀ ಕೆ. ವೀರಯ್ಯಸ್ವಾಮಿಯವರು 15 ಜನವರಿ 1939ರಲ್ಲಿ ಜನಿಸಿದರು. 1972ರಲ್ಲಿ ಶ್ರೀ ಮಂಜುನಾಥ ನಾಟ್ಯಕಲಾ ಸಂಘ, ಚಿತ್ರದುರ್ಗ, ಕಂಪನಿಯ ತಾಯಿ ಕರುಳು ನಾಟಕದ ಮೂಲಕ ರಂಗಭೂಮಿ ಸೇವೆ ಪ್ರಾರಂಭಿಸಿದ ಇವರು. ಫ.ಶಿ. ಭಾಂಡಗೆ ನಾಟ್ಯ ಸಂಘ, ಕರ್ನಾಟಕ ಕಲಾಸಂಘ ಯಂಕಂಚಿ, ಮಹೇಶ

ನಾಟ್ಯ ಸಂಘ, ನ್ಯಾಮತಿ ಬಸವಲಿಂಗ ನಾಟ್ಯ ಸಂಘ, ಪಟ್ಟದಕಲ್ಲು, ಮೃತ್ಯುಂಜಯ ನಾಟ್ಯ ಸಂಘ, ಧಾರವಾಡ, ಶ್ರೀಶೈಲ ಮಲ್ಲಿಕಾರ್ಜುನ ನಾಟಕ ಸಂಘ, ಸೂಳ್ಯ, ಹುಚ್ಚೇಶ್ವರ ನಾಟ್ಯಸಂಘ, ಕಮತಗಿ ಹೀಗೆ ಹಲವಾರ ಕಂಪನಿಗಳಲ್ಲಿ ಕೆಲಸ ನಿರ್ವಹಿಸಿರುತ್ತಾರೆ. ಕೊರವಂಜಿ ರಾಮಾಯಣ, ಎಚ್ಚಮನಾಯಕ, ಹೇಮರೆಡ್ಡಿ ಮಲ್ಲಮ್ಮ, ಕಿತ್ತೂರು ಚೆನ್ನಮ್ಮ, ಸಿಂಧೂರ ಲಕ್ಷ್ಮಣ, ಗೌಡ್ರಗದ್ಲ, ಬಸ್ ಕಂಡಕ್ಟರ್, ಮುದುಕನ ಮದುವೆ ಹೀಗೆ ಹಲವು ನಾಟಕಗಳು ವೀರಯ್ಯಸ್ವಾಮಿಯವರಿಗೆ ಹೆಸರು ತಂದುಕೊಟ್ಟ ನಾಟಕಗಳು. ಹಲವಾರು ನಾಟಕಗಳನ್ನು ನಿರ್ದೇಶಿಸಿರುವ ಇವರು ಕೆಲವು ಚಿತ್ರಗಳಲ್ಲೂ ಅಭಿನಯಿಸಿದ್ದಾರೆ. ಇವರಿಗೆ ಅಭಿಮಾನಿಗಳಿಂದ 'ಅಭಿನವ ತೆನಾಲಿ' ಎಂಬ ಬಿರುದು ತಂದಿದೆ.

---



## ಎ. ಯಲ್ಲಪ್ಪ

ಬೆಂಗಳೂರಿನ ಗ್ರಾಮಾಂತರ ಜಿಲ್ಲೆಯ ರಂಗಪ್ರತಿಭೆಯಾದ ಶ್ರೀ ಯಲ್ಲಪ್ಪನವರು ಅರಸಪ್ಪ ಮತ್ತು ಮುನಿಯಮ್ಮನವರ ಮಗನಾಗಿ 1938ರಲ್ಲಿ ಜನಿಸಿದ ಇವರು ಬಾಲ್ಯದಿಂದಲೆ ರಂಗಾಸಕ್ತಿ ಬೆಳೆಸಿಕೊಂಡು 'ಒಡೆದ ಕನ್ನಡಿ' ಮೂಲಕ ನಾಟಕರಂಗಕ್ಕೆ ಬಂದರು. ದುರ್ಯೋಧನ, ದಿವ್ಯದರ್ಶನ, ವಿಷಜ್ವಾಲೆ, ಅಂಗೀಬಟ್ಟೆ, ನಂ ಸಂಗಪ್ಪ, ದೊಡ್ಡಪ್ಪ, ಸಂಕ್ರಾಂತಿ, ಷಹಜಹಾನ್, ದಾನಶೂರ ಕರ್ಣ, ಸಂಪೂರ್ಣ ರಾಮಾಯಣ, ಮಲಮಗಳು, ತಾಯಿಕರುಳು, ಬಂಜೆತೊಟ್ಟಿಲು, ಮಂಡೋದರಿ, ನಂದಾದೀಪ, ಸಮಯಕ್ಕೊಂದು ಸುಳ್ಳು, ಬಲಿದಾನ, ನನ್ನವಳ ಕಾಗದ, ಹಾವು, ಒಂದು ರೂಪಾಯಿ ಮುಂತಾದ ನಾಟಕಗಳಲ್ಲಿ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ತಮ್ಮ ಊರಿನವರೇ ಆದ ಬಳೇ ವೆಂಕಟರಮಣಪ್ಪನವರು ಹಾಗೂ ದೊಡ್ಡಬಳ್ಳಾಪುರದ ಪಲಾವ್ ರಾಮು ಮತ್ತು ದೊಡ್ಡಬಳ್ಳಾಪುರ ಟೌನ್ ಹಾಗೂ ತಾಲ್ಲೂಕಿನ ಅನೇಕ ಮಹನೀಯರಿಂದ ಸಹಕಾರ-ಸ್ಫೂರ್ತಿ ಪಡೆದಿರುವ ಶ್ರೀಯುತರು ದೊಡ್ಡಬಳ್ಳಾಪುರದ 'ಅಭಿವ್ಯಕ್ತಿ' ಸಂಸ್ಥೆಯ ಸಕ್ರಿಯ ಸದಸ್ಯರಾಗಿದ್ದವರು. 'ರಂಗರಂಜನಿ' ಎಂಬ ಬಿರುದನ್ನು ಶ್ರೀಮತಿ ಉಮಾಶ್ರೀಯವರು ನೀಡಿ ಇವರನ್ನು ಗೌರವಿಸಿದ್ದಾರೆ.

---



## ರಘುನಾಥ ಗುರುನಾಥ ನಾಡಿಗೇರ

1945ರಲ್ಲಿ ಜನಿಸಿದ ಶ್ರೀ ರಘುನಾಥ ಗುರುನಾಥ ನಾಡಿಗೇರರವರು ಬಿ.ಇ.ಯವರೆಗೆ ವ್ಯಾಸಂಗ ಮಾಡಿ ಸೂಪರಿಂಟೆಂಡಿಂಗ್ ಇಂಜಿನಿಯರ್ ಆಗಿ ನಿವೃತ್ತಿ ಪಡೆದಿರುತ್ತಾರೆ. ಧಾರವಾಡದ ರಂಗಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀಯುತರು ಜಯತೀರ್ಥ ಜೋಶಿ, ಶ್ರೀಪತಿ ಮಂಜನಬೈಲ, ವಿನೋದ ಅಂಬೇಕರ, ರಾಘವೇಂದ್ರ ಹುನಗುಂದ, ದೇವಪ್ಪ ನಾಯಕ, ಆರ್.ಜಿ. ನಾಡಿಗೇರ, ಕೃಷ್ಣ ಉಪಾಧ್ಯರಂತಹ ಹಿರಿಯ ನಿರ್ದೇಶಕರು ನಿರ್ದೇಶಿಸಿರುವ ಸತ್ತವರ ನೆರಳು, ನಿಜದ ನೆಲೆ ನಿಜಕಿಲ್ಲ, ಆಗಮನ, ದಿಂಡಿ, ಆಲೂರು ಭಾಗೀರಥಿ, ಕಪ್ಪುಬಿಳುಪು, ಗೌರಿ, ಅದ್ವಾನಪುರ, ಪರಿಮಳದವರು, ಭುಜಗೋವಿಂದಂ, ದೇವರ ಪಲಾಯನ, ಹಜ್ಜೆಗಳು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಅಲ್ಲದೆ ಟಿ.ವಿ. ರಂಗ ನಿರ್ದೇಶಿಸಿರುವ ಗೌರಿ ಹಾಗೂ ಮಹದೇವ ವೈಲಾರ, ಟಿ.ವಿ. ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಇತಿ ನಿಮ್ಮ ಅಮೃತಾ, ನಾಟಕಕ್ಕೆ ಸಂಗೀತ ನೀಡಿರುವ ಇವರು 15 ವರ್ಷಗಳ ಕಾಲ ಬೆಳಗಾವಿಯ 'ರಂಗಸಂಪದ' ತಂಡದ ಅಧ್ಯಕ್ಷರಾಗಿ ಕೆಲಸ ನಿರ್ವಹಿಸಿದ್ದಾರೆ.

---



## ಎ. ರಾಜಲಕ್ಷ್ಮಿ

ಶ್ರೀಮತಿ ಎ. ರಾಜಲಕ್ಷ್ಮಿಯವರ ತಂದೆ ಅನಂತರಾಮಯ್ಯನವರು. ಇವರ ಜನನ 1944ರಲ್ಲಿ. 1956ರಲ್ಲಿ ಅಂದರೆ ತಮ್ಮ 12ನೇ ವಯಸ್ಸಿನಲ್ಲಿಯೇ ಬಳ್ಳಾರಿಯಲ್ಲಿ ಶ್ರೀ ಲಲಿತಕಲಾ ನಾಟ್ಯ ಸಂಘದ 'ಮಕಮಲ್ ಟೋಪಿ' ನಾಟಕದಲ್ಲಿ ಬಾಲನಟಿಯ ಪಾತ್ರದಿಂದ ರಂಗಪ್ರವೇಶ ಮಾಡಿದ್ದಾರೆ. ಮುಂದೆ ಮಾ॥ ಹಿರಣ್ಣಯ್ಯ ಕಂಪನಿ, ಸುಬ್ಬಯ್ಯ ನಾಯ್ಡು ಕಂಪನಿ, ಗುಬ್ಬಿ ಕಂಪನಿ, ಓಂಕಾರೇಶ್ವರ ನಾಟ್ಯಸಂಘ, ಚಿತ್ರದುರ್ಗ ಕಂಪನಿ, ಕಾಕನೂರು ಕಂಪನಿ, ವಸಂತಸಾ ನಾಕೋಡ ಕಂಪನಿ ಹಾಗೂ ಶ್ರೀ ಸಂಗೇಶ್ವರ ನಾಟ್ಯ ಸಂಘ, ಗುಡಗೇರಿ ಕಂಪನಿಗಳಲ್ಲಿ ನಿರಂತರವಾಗಿ 35 ವರ್ಷಗಳಿಂದ ರಂಗಭೂಮಿ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಮಕಮಲ್ ಟೋಪಿ, ರಕ್ತರಾತ್ರಿ, ದೇವದಾಸಿ, ಹೈಬ್ರೀಡ್ ಹೆಣ್ಣು, ಸತಿಪತಿ, ಕಿವುಡ ಮಾಡಿದ ಕಿತಾಪತಿ, ತಾಯಿಯ ಕರುಳು, ರೈತನ ಮಕ್ಕಳು, ದುಡ್ಡಿನ ದರ್ಪ, ಸತ್ಯ ಸತ್ತಿತು. ಛಲ ತೀರಿತು, ಮದುವೆಯಾಗದ ವಿಧವೆ, ವಿಧಿಯ ಕೈವಾಡ, ಹೆತ್ತ ತಾಯಿ ಹೀಗೆ ಸುಮಾರು 50ಕ್ಕೂ ಹೆಚ್ಚಿನ ನಾಟಕಗಳ ಸಾವಿರಾರು ಪ್ರದರ್ಶನಗಳಲ್ಲಿ ಇವರು ಅಭಿನಯಿಸಿದ್ದಾರೆ. ಇವರ ಕಲಾಸೇವೆ ಹಾಗೂ ನಟನೆಗೆ ಮೆಚ್ಚಿದ ಅಭಿಮಾನಿಗಳು ಇವರಿಗೆ ನಾಟ್ಯಸರಸ್ವತಿ, ಅಭಿನಯ ಶಾರದೆ ಎಂಬ ಬಿರುದನ್ನಿತ್ತು ಗೌರವಿಸಿದೆ.



## ವೀರಣ್ಣಾ ಕುರ್ಲಿ

1930ರಲ್ಲಿ ಜನಿಸಿರುವ ಶ್ರೀ ವೀರಣ್ಣಾ ಕುರ್ಲಿಯವರು 1949ರಿಂದಲೂ ರಂಗಭೂಮಿಯಲ್ಲಿ ನಿರಂತರವಾಗಿ ಸೇವೆ ಮಾಡುತ್ತಾ ಬಂದಿದ್ದಾರೆ. ಇಲ್ಲಿಯವರೆಗೂ ಸುಮಾರು 70ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿರುವ ಇವರು ಧಾರವಾಡದ ಅನೇಕ ಸಾಂಸ್ಕೃತಿಕ ಸಂಘಟನೆಗಳ ಒಡನಾಡಿಯಾಗಿದ್ದಾರೆ. ಇವರು ಅಭಿನಯಿಸಿರುವ ಪ್ರಮುಖ ನಾಟಕಗಳೆಂದರೆ ಬಡತನ ಭೂತ, ಅಗ್ನಿಕುಂಡ, ದೈವ ದುರಂತ, ಕರ್ಣ, ಸೌಭಾಗ್ಯ ಲಕ್ಷ್ಮಿ, ಬಂಜೆ ತೊಟ್ಟಿಲು, ಅತ್ತಿಗೆ, ಕಡ್ಲಿಮಟ್ಟಿ ಸ್ಟೇಶನ್ ಮಾಸ್ತರ, ಗೌರಿ, ಹರಿಜನ್ವಾರ, ಲೋಕಚಕ್ರ, ಮಹಿಮಾಪುರ, ಅಳಿಯದೇವರು ಹಾಗೂ ಬೇಲಿ ಮತ್ತು ಹೊಲ. ಇವರು ನಾಟಕಗಳಲ್ಲದೆ ಕಿತಾಪತಿ, ಕಾಡಿನ ಬೆಂಕಿ, ಉಷಾಕಿರಣ, ಸಂತ ಶಿಶುನಾಳ ಷರೀಫ್, ಪತಿತ ಪಾವನಿ ಸಿನಿಮಾಗಳು ಅಲ್ಲದೆ, ಮೂಡಲಮನೆ ಧಾರವಾಹಿಯಲ್ಲಿಯೂ ಅಭಿನಯಿಸಿದ್ದಾರೆ.



## ಶ್ರೀದೇವಿ ಜೋಶಿ

ಶ್ರೀಮತಿ ಶೀದೇವಿ ಜೋಶಿಯವರ ತಂದೆ ವಿಘ್ನೇಶ್ವರ ಜೋಶಿ. ಇವರ ಜನನ 1944ರಲ್ಲಿ. ಬಾಲ್ಯದಲ್ಲಿ ಯಕ್ಷಗಾನದಿಂದ ಪ್ರಭಾವಿತರಾಗಿ ಮಾರಾವತಾರ ಯಕ್ಷಗಾನ ಪ್ರಸಂಗದಲ್ಲಿ ಅಭಿನಯಿಸುವುದರ ಮೂಲಕ ರಂಗಕ್ಕೆ ಪಾದಾರ್ಪಣೆ ಮಾಡಿದ್ದಾರೆ. ಮುಂದೆ ಇವರು ಧಾರವಾಡದ ರಂಗಭೂಮಿಯ ಬಹುತೇಕ ನಾಟಕಗಳಲ್ಲಿ ನಟಿಯಾಗಿ ಅಭಿನಯಿಸಿದ್ದಾರೆ. ಸಾಹೇಬರು ಬರುತ್ತಾರೆ. ಟೊಳ್ಳು-ಗಟ್ಟಿ, ನಾಯಿಕಥೆ, ಮಹಿಮಾಪುರ, ಜೈಸಿದನಾಯಕ, ಕೇಸರಿ ಬಿಳಿ ಹಸಿರು, ಧರ್ಮಪುರಿ ಕ್ಷೇತವೃತ್ತ, ಜೋಕುಮಾರಸ್ವಾಮಿ, ಬೇಲಿ ಮತ್ತು ಹೊಲ ನಾಟಕಗಳಲ್ಲಿ ಪಿ.ಎಮ್. ಜೋಶಿ, ಯಶವಂತ ಸರದೇಶಪಾಂಡೆ, ಪ್ರಭಾಕರ ಲಾಳಸಂಗಿ, ವಿಶ್ವನಾಥ ಸೂಗರ,

ಪ್ರಭುಸ್ವಾಮಿ ಮಳಿಮಠ, ಎಲ್.ಜಿ. ದೇವಾಂಗಮಠ, ಜೀವನ ಮಾನಕರ, ದೇವಪ್ಪನಾಯಕರಂತಹ ನಿರ್ದೇಶಕರ ಅಡಿಯಲ್ಲಿ ಅಭಿನಯಿಸಿದ್ದಾರೆ. ಅಲ್ಲದೆ ಧಾರವಾಡ ಸಮುದಾಯಕ್ಕೆ ಪ್ರಮೋದ್ ಶಿಗ್ಗಾಂವ್ ನಿರ್ದೇಶಿಸಿದ್ದ ದಿಕ್ಕಾಂತರ ಹಾಗೂ ರಂಗಪುರೋಭಿವೃದ್ಧಿ ಸಂಸ್ಥೆಗೆ ಪ್ರಕಾಶ ಗರುಡ ನಿರ್ದೇಶಿಸಿದ್ದ ಜೈ ಕರ್ನಾಟಕ ಮತ್ತು ವಿಶ್ವೇಶ್ವರಿ ಹಿರೇಮಠ ನಿರ್ದೇಶಿಸಿದ ಎಂ.ಎಂ. ಕಲಬುರ್ಗಿಯವರ ಖರೇಖರೇ ಸಂಗ್ಯಾಬಾಳ್ಯದಲ್ಲಿಯೂ ಅಭಿನಯಿಸಿದ್ದಾರೆ. ಹಲವಾರು ಚಲನಚಿತ್ರಗಳಲ್ಲಿ ನಟಿಸಿರುವ ಇವರು ಧಾರವಾಡ ರಂಗಭೂಮಿಯ ಸಕ್ರಿಯ ಕಲಾವಿದೆ.



## ಸುಲೋಚನಾ ಕೋಟೂರ

ಶ್ರೀಮತಿ ಸುಲೋಚನಾ ಕೋಟೂರುರವರು ತಮ್ಮ 3ನೇ ವಯಸ್ಸಿನಲ್ಲಿಯೇ ಧಾರವಾಡದ ಮೃತ್ಯುಂಜಯ ಅಪ್ಪ ಸ್ವಾಮಿಗಳ ಸಮ್ಮುಖದಲ್ಲಿ ನಾಟಕ ಮಾಡುವುದರ ಮೂಲಕ ರಂಗಭೂಮಿಯನ್ನು ಪ್ರವೃತ್ತಿಯಾಗಿಸಿಕೊಂಡರು. ಬ್ಯಾಂಕಿಂಗ್ ಕ್ಷೇತ್ರ ಇವರ ವೃತ್ತಿ. ಶಾಂತಮಾಳವಾಡ ಇವರಿಗೆ ನಾಟಕ ಕಲಿಸಿದ್ದಾರೆ.

ಬೇಂದ್ರೆ ಲಕ್ಷ್ಮಣರಾಯರ ನಾರ್ಸ್ಯಾನ ಕರಾಮತ್ತು, ಎ.ಎಂ. ಇನಾಮ್‌ದಾರ್‌ರವರ ಕಣ್ಣುಮುಚ್ಚಾಲೆ, ದ.ರಾ. ಬೇಂದ್ರೆಯವರ ಮಂದೀ ಮದುವೆ, ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಮುಂಬಯಿಯ ಉದಯಕಲಾ ನಿಕೇತನ, ಕರ್ನಾಟಕ ಥಿಯೇಟರ್, ಕನ್ನಡ ಸಂಘ, ಮಾತುಂಗಾ, ಬಾನಾಡಿ ಗ್ರೂಪ್‌ಗಳ ಒಡನಾಡಿಯಾಗಿದ್ದು ತುಘಲಕ್, ಶೋಕಚಕ್ರ, ಗುಮ್ಮನೆಲ್ಲಿಹ ತೋರಮ್ಮ, ಮೈ ಫೇರ್ ಲೇಡಿ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಲ್ಲದೆ, ರಮಾನಂದ ಚೂರ್ಯ, ದುಗ್ಗಪ್ಪಯ್ಯಾ, ವೆಂಕಟರಾವ್ ತೆಲಗೇರಿ, ಕೇಶವ ಮೌಳಿಕರೊಂದಿಗೆ ಪಾತ್ರ ವಹಿಸಿದ್ದಾರೆ. 1994 ನಿವೃತ್ತಿಯ ನಂತರ ಮತ್ತೆ ಧಾರವಾಡದಲ್ಲಿ ನೆಲೆಸಿದ ಮೇಲೆ ಶ್ರೀರಂಗರ ಬಹುತೇಕ ನಾಟಕಗಳನ್ನು ರಂಗದ ಮೇಲೆ ತಂದಿರುವ ಸಾಧನೆ ಇವರದು.



## ಪಿ. ಗೋವಿಂದ್

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಯ ಶ್ರೀ ಪಿ. ಗೋವಿಂದ್‌ರವರು 1959ರಲ್ಲಿ ಜನಿಸಿದವರು. ಬಿ.ಎ., ಬಿ.ಇಡಿ. ಪದವಿ ಗಳಿಸಿ ಮುದ್ರಣಕಾರರಾಗಿ ವೃತ್ತಿ ನಡೆಸುತ್ತಾ ಪತ್ರಕರ್ತರಾಗಿರುವುದೂ ಅಲ್ಲದೆ ರಂಗಭೂಮಿಯಲ್ಲಿ ಅಭಿನಯ, ನಿರ್ದೇಶನಗಳಲ್ಲಿಯೂ ತೊಡಗಿರುವವರು. ಕಳೆದ ಮೂವತ್ತು ವರ್ಷಗಳಿಂದ ಸಾಮಾಜಿಕ, ಐತಿಹಾಸಿಕ, ಪೌರಾಣಿಕ ಹಾಗೂ ಹೊಸ ಅಲೆಯ ಸಾವಿರಕ್ಕೂ ಹೆಚ್ಚಿನ ನಾಟಕಗಳ ಪ್ರದರ್ಶನದಲ್ಲಿ ನಟಿಸಿದವರು.

ಬೀದಿ ನಾಟಕ ರಚನೆ ಹಾಗೂ ನಿರ್ದೇಶನವನ್ನು ಮಾಡುತ್ತಾ ಬಳ್ಳಾರಿ ಜಿಲ್ಲೆಯಾದ್ಯಂತ ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಡಿದವರು. ತಾಲ್ಲೂಕು ಪತ್ರಕರ್ತರ ಸಂಘದ ಗೌರವ ಅಧ್ಯಕ್ಷರಾಗಿ, ಬಳ್ಳಾರಿ ಪತ್ರಕರ್ತರ ಸಂಘದ ಉಪಾಧ್ಯಕ್ಷರಾಗಿ, ತಾಲ್ಲೂಕು ಕಲಾವಿದರ ಸಂಘದ ಅಧ್ಯಕ್ಷರಾಗಿ, ಜ್ಯೋತಿ ವೃಂದದ ಅಧ್ಯಕ್ಷರಾಗಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಹಲವು ಕ್ಷೇತ್ರಗಳಲ್ಲಿ ಗುರುತಿಸಿಕೊಂಡಿರುವ ಇವರು ಕೆಲವು ಚಲನಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

## ಕೆ. ಜಗದೀಶ್ ಬಳ್ಳಾರಿ



ಬಳ್ಳಾರಿ ಜಿಲ್ಲೆಯವರಾದ ಶ್ರೀ ಕೆ. ಜಗದೀಶರವರು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಉದ್ಯೋಗಿಯಾಗಿದ್ದುಕೊಂಡು ಬಳ್ಳಾರಿಯ ಬಹುತೇಕ ಸಾಂಸ್ಕೃತಿಕ-ಸಾಹಿತ್ಯ ಚಟುವಟಿಕೆಗಳಲ್ಲಿ ಸಕ್ರಿಯರಾಗಿದ್ದಾರೆ. ಇವರು ಹೇಗೆ ಸಾಹಿತ್ಯ ಪಾರಿಚಾರಕರೂ ಹಾಗೆಯೆ ರಂಗಭೂಮಿಯಲ್ಲಿಯೂ ಆಸಕ್ತಿ ಉಳ್ಳವರು. 1968ರಲ್ಲಿ 'ಗಿರಿಜಾ ಕಲ್ಯಾಣ' ಬಯಲಾಟದಲ್ಲಿ ಬಾಲನಟರಾಗಿ ರಂಗಪ್ರವೇಶ ಮಾಡಿರುವ ಇವರು ಬಳ್ಳಾರಿಯಲ್ಲಿ ಮಯೂರ ಕಲಾಸಂಘ ಕಟ್ಟಿ ಬೆಳೆಸುವಲ್ಲಿ ಶ್ರಮ ವಹಿಸಿದ್ದಾರೆ. ಇವರು ಕದಡಿದ ನೀರು, ಬೆಪ್ಪುತಕ್ಕಡಿ ಬೋಳೇಶಂಕರ ಹಾಗೂ ಹಲವಾರು ನಾಟಕಗಳಲ್ಲಿ ಅಭಿನಯಿಸಿದವರು. ರಾಜ್ಯಮಟ್ಟದ ಹಲವಾರು ಸ್ಪರ್ಧೆಗಳಲ್ಲಿ ಇವರಿಂದ ರಚಿತವಾದ ಬಚ್ಚಿಟ್ಟುಕೊಂಡವರು, ನೆಲದಡಿಯ ಬುರುಡೆಗಳು ನಾಟಕಗಳು ಶ್ರೇಷ್ಠ ರಚನೆ ಹಾಗೂ ನಿರ್ದೇಶನಕ್ಕೆ ಬಹುಮಾನ ಗಳಿಸಿವೆ. 2004ರಲ್ಲಿ 'ಅಭಿನಯ ಕಲಾಕೇಂದ್ರ' ಸ್ಥಾಪನೆ ಮಾಡಿರುತ್ತಾರೆ. ರಾಘವ ಮೆಮೋರಿಯಲ್ ಅಸೋಸಿಯೇಷನ್ನಿನ ಸಹಯೋಗದ ಮೂಲಕ 600ಕ್ಕೂ ಹೆಚ್ಚು ನಾಟಕ ಪ್ರದರ್ಶನಗಳಲ್ಲಿ ಭಾಗಿಯಾಗಿ 25 ವರ್ಷಗಳಿಂದಲೂ ರಂಗಸೇವೆಯನ್ನು ಶ್ರೀಯುತರು ಮಾಡುತ್ತಾ ಬಂದಿದ್ದಾರೆ.

---

## ಆರ್. ಬದರಿನಾರಾಯಣ



ಬಳ್ಳಾರಿ ಜಿಲ್ಲೆಯವರಾದ ರೂಪನಗುಡಿ ಶ್ರೀ ಬದರಿನಾರಾಯಣರವರು ಬಿ.ಇ. ಪದವಿ ಪಡೆದು ಟಿ.ಬಿ. ಡ್ಯಾಂನಲ್ಲಿ ಸಹಾಯಕ ಇಂಜಿನಿಯರ್ ಆಗಿ ಸೇವೆ ಸಲ್ಲಿಸುತ್ತಾ ಇದ್ದಾರೆ. ತಮ್ಮ 8ನೇ ವಯಸ್ಸಿನಲ್ಲಿ ಶಾಲಾ ನಾಟಕದಲ್ಲಿ ಭಾಗವಹಿಸುವುದರ ಮೂಲಕ ರಂಗಭೂಮಿಯಲ್ಲಿ ಆಕರ್ಷಿತರಾದ ಇವರು ಶಾಲಾ ಕಾಲೇಜಿನ ಪ್ರತಿ ನಾಟಕದಲ್ಲಿ ಅಭಿನಯಿಸುತ್ತಾ ಬಂದವರು. ಕರ್ನಾಟಕ ನಾಟಕ ಅಕಾಡೆಮಿ ಹಾಗೂ ರಾಷ್ಟ್ರೀಯ ನಾಟಕ ಶಾಲೆಯ ಸಹಯೋಗದಲ್ಲಿ ಹೊಸಪೇಟೆಯಲ್ಲಿ ನಡೆದ 'ರಂಗಶಿಬಿರ'ದ ಆಯೋಜನೆಯ ಜವಾಬ್ದಾರಿ ಹೊತ್ತವರು. ದಫನ್, ರಾಕ್ಷಸ, ಅನುಬಂಧ, ಅಂತ್ಯವಲ್ಲ ಇದು ಆರಂಭ, ಅನ್ನದಾತ, ಅಮ್ಮ ಮುಂತಾದ ನಾಟಕಗಳನ್ನು, ಹಂಪಿ, ಹಡಗಲಿ, ಬಿಜಾಪುರ, ಬೆಳಗಾಂ, ಲಿಂಗಸೂರು, ಮುಂಬಯಿ, ತಿರುಪತಿ, ಹೈದರಾಬಾದ್ ಮುಂತಾದ ಕಡೆಗಳಲ್ಲಿ ಪ್ರದರ್ಶಿಸಿದವರು. ಆಂಧ್ರ ಸರ್ಕಾರದ ರಾಜ್ಯಮಟ್ಟದ ನಂದಿ ನಾಟಕೋತ್ಸವ – 2004ರಲ್ಲಿ ಪಾಲ್ಗೊಂಡು 'ರಾಕ್ಷಸುಡು' ತೆಲುಗು ನಾಟಕದ ನಟನೆಗಾಗಿ 'ನಂದಿ ಪ್ರಶಸ್ತಿ' ವಿಶೇಷ ಬಹುಮಾನ ಪಡೆದ ಕನ್ನಡಿಗ ಹೊಸಪೇಟೆಯಲ್ಲಿ ಪ್ರತಿ ವರ್ಷ 'ಚಿನಾರ' ಮಕ್ಕಳ ನಾಟಕ ಸ್ಪರ್ಧೆಯನ್ನು ಆಯೋಜಿಸಿ ಮಕ್ಕಳ ರಂಗಭೂಮಿಯನ್ನು ಶ್ರೀಮಂತಗೊಳಿಸಿದವರು.

---

## ಮಹಾಲಿಂಗರಾಜ ಗವಾಯಿ



ಬಳ್ಳಾರಿ ಜಿಲ್ಲೆ ಹೂವಿನಹಡಗಲಿಯ ಶ್ರೀ ಮಹಾಲಿಂಗರಾಜ ಗವಾಯಿಗಳು 1939ರಲ್ಲಿ ನೀಲಕಂಠಪ್ಪ ಹಾಗೂ ಬಸಮ್ಮ ದಂಪತಿಗಳ ಸುಪುತ್ರರಾಗಿ ಜನಿಸಿದರು. ಪಂಡಿತ್ ಪಂಚಾಕ್ಷರಿ ಗವಾಯಿಗಳ ಶಿಷ್ಯರಾಗಿ ಸಂಗೀತ ಅಭ್ಯಾಸ ಮಾಡಿರುವ ಶ್ರೀಯುತರು ಬೆಂಗಳೂರು, ಹಂಪಿ, ಬಳ್ಳಾರಿ ಹಾಗೂ ಹಲವು ನಗರಗಳ ಪ್ರಮುಖ ವೇದಿಕೆಗಳ ಸಂಗೀತೋತ್ಸವದಲ್ಲಿ ಗಾನಸುಧೆಯನ್ನು ಹರಿಸಿ ಖ್ಯಾತಿ ಗಳಿಸಿದ್ದಾರೆ. ಸತಿ ಸುಕನ್ಯ,

ರಕ್ಷಾಬಂಧನ, ಅದೃಷ್ಟವೋ ಅದೃಷ್ಟ, ಕಣ್ಣಿದ್ದರೂ ಕುರುಡ, ಸತಿ ಸಂಸಾರದ ಜ್ಯೋತಿ, ಬಾಳು ಬೆಳಗಿದ ಸತಿ, ಜೋಕುಮಾರಸ್ವಾಮಿ, ಸಂಗ್ಯಾಬಾಳ್ಯಾ ಹಾಗೂ ಗೆಜ್ಜೆ ಲಿಟ್ಟಿಯಂತಹ ಹಲವಾರು ನಾಟಕಗಳಿಗೆ ಸಂಗೀತ ನೀಡಿದ್ದಾರೆ. ಇವರಿಗೆ ಕರ್ನಾಟಕದ ಹಲವು ಸಂಸ್ಥೆಗಳಿಂದ ಪ್ರಶಸ್ತಿಗಳು ಲಭಿಸಿದ್ದು, ಅಭಿಮಾನಿಗಳಿಂದ 'ಸಂಗೀತ ಸುಧಾರಕ' ಎಂಬ ಪ್ರಶಸ್ತಿಯು ಬಂದಿರುವುದು ತಾವು ಸಂಗೀತ ಹಾಗೂ ರಂಗಸಂಗೀತಕ್ಕೆ ನೀಡಿರುವ ಸೇವೆಗೆ ಸಂದ ಪುರಸ್ಕಾರವೆಂದೇ ಇವರು ಭಾವಿಸಿದ್ದಾರೆ. ಹಡಗಲಿಯ ರಂಗಭಾರತಿ ಹಾಗೂ ಕಲಾಬಳಗದ ಸದಸ್ಯರಾಗಿ ರಂಗಸೇವೆ ಮಾಡುತ್ತಲಿದ್ದಾರೆ.

## ಎ.ಡಿ. ವೆಂಕನಗೌಡ



ಶ್ರೀ ಎ.ಡಿ. ವೆಂಕನಗೌಡರು ಬಳ್ಳಾರಿ ಜಿಲ್ಲೆಯ ಹಂದಿಹಾಳ್ ಗ್ರಾಮದ ಎ.ಎ. ಶೇಷಾರೆಡ್ಡಿ ಹಾಗೂ ಕಮಲಮ್ಮ ದಂಪತಿಗಳ ಸುಪುತ್ರರಾಗಿ 7 ಅಕ್ಟೋಬರ್ 1940ರಲ್ಲಿ ಜನಿಸಿದರು. ಉಸ್ತಾದ್ ಅಂಜಿನಪ್ಪ, ಉಸ್ತಾದ್ ಶ್ರೀ ಜಯಕರ್‌ರವರಲ್ಲಿ ಪಿಟೀಲು ಕಲಿತ ಇವರು ಗಿಟಾರ್‌ವಾದಕರಾಗಿ, ಹಾರ್ಮೋನಿಯಂ, ಮೆಂಡೋಲಿನ್, ಕೀಬೋರ್ಡ್ ಹಾಗೂ ರಿದಮ್ಸ್‌ಗಳನ್ನು ನುಡಿಸುವುದರಲ್ಲಿ ಪರಿಣಿತರು. ವಿಶೇಷ ವಾದ್ಯವಾದ 'ಅಕಾರ್ಡಿಯನ್' ನುಡಿಸುವುದರಲ್ಲಿ ಸಿದ್ಧಹಸ್ತರು. 1971ರಲ್ಲಿ ಗೌಡ ಅಂಡ್ ಹಿಸ್ ರಿದಮ್ ಸ್ಟಾರ್ಸ್ ಎಂಬ ತಂಡವನ್ನು ಹೊಸಪೇಟೆಯಲ್ಲಿ ಸ್ಥಾಪಿಸಿದ್ದಾರೆ. ಸಂಗಮೇಶ್ವರ ನಾಟ್ಯಸಂಘ ಗುಡಿಗೇರಿ, ಧುತ್ತರಗಿಯವರ ಕಂಪನಿ, ಹಾಲಾಪುರ ದೇಸಾಯಿ ಕಂಪನಿಗಳಲ್ಲಿ ಗಿಟಾರ ವಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಎಲಿವಾಳ ಸಿದ್ದಯ್ಯ, ಚಿತ್ರನಟಿ ಕಲ್ಪನಾ, ಸುಭದ್ರಮ್ಮ ಮನ್ಸೂರ್, ರಮೇಶಗೌಡ ಪಾಟೀಲ್, ನಾಗರತ್ನಮ್ಮ ಮರಿಯಮ್ಮನ ಹಳ್ಳಿ, ಪದ್ಮಾ ಕೊಟ್ಟೂರು ಇವರು ಅಭಿನಯಿಸಿರುವ ನಾಟಕಗಳಿಗೆ ಹಿನ್ನೆಲೆ ಸಂಗೀತ ನುಡಿಸಿದ್ದಾರೆ. ಇಲ್ಲಿಯವರೆಗೆ ಸುಮಾರು 200 ಹವ್ಯಾಸಿ ಹಾಗೂ ವೃತ್ತಿಪರ ನಾಟಕಗಳಿಗೆ ಸಂಗೀತ ನೀಡಿ ರಂಗಸೇವೆಯಲ್ಲಿ ಸಕ್ರಿಯವಾಗಿದ್ದಾರೆ.

## ಕೆ. ಹೊನ್ನಮ್ಮ



ಬಳ್ಳಾರಿ ಜಿಲ್ಲೆ ಕೊಟ್ಟೂರಿನ ಶ್ರೀಮತಿ ಕೆ. ಹೊನ್ನಮ್ಮನವರ ತಾಯಿ ಶ್ರೀಮತಿ ನಾಗಮ್ಮನವರು. 1955ರಿಂದ ಇಂದಿನವರೆಗೂ ಅನೇಕ ಪೌರಾಣಿಕ, ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸುತ್ತಾ ಬಂದಿದ್ದಾರೆ. ಇವರು ನಟಿಸಿದ ಪೌರಾಣಿಕ ಹಾಗೂ ಐತಿಹಾಸಿಕ ನಾಟಕಗಳೆಂದರೆ ಕುರುಕ್ಷೇತ್ರ, ಅಗ್ನಿಕಮಲ, ರಕ್ತರಾತ್ರಿ, ಮಹಾರಥಿ ಕರ್ಣ, ವಿಜಯನಗರ ಸಾಮ್ರಾಜ್ಯ, ಟಿಪ್ಪುಸುಲ್ತಾನ್, ಚಿತ್ರಾಂಗದ, ಮಣಿಮಂಜರಿ, ಉತ್ತರೆ, ಅಕ್ಷಯಾಂಬರ ಹಾಗೂ ಮುಂತಾದವು. ಇವರು ಅಭಿನಯಿಸಿದ ನಾಟಕಗಳೆಂದರೆ ಅಣ್ಣ-ತಮ್ಮ, ಅಣ್ಣ-ತಂಗಿ, ರತ್ನ ಮಾಂಗಲ್ಯ, ರಕ್ತದೀಪ, ದೀಪಾವಳಿ, ಮಾತಂಗ ಕನ್ಯೆ, ತಾಯಿ ಇಲ್ಲದ ತವರು, ಆದರ್ಶ ಪ್ರೇಮ ಮುಂತಾದವು. ಸುಮಾರು 50 ವರ್ಷಗಳಿಂದಲೂ ರಂಗಭೂಮಿ ಸೇವೆ ಮಾಡುತ್ತಾ ಬಂದಿರುವ ಇವರಿಗೆ, ಕೊಟ್ಟೂರಿನ ಚಿಂತನಾ ಸಾಹಿತ್ಯ ಬಳಗದಿಂದ, ಕೊಟ್ಟೂರಿನಲ್ಲಿ ನಡೆದ 36ನೇ ಕನ್ನಡ ರಾಜ್ಯೋತ್ಸವ ಸಂದರ್ಭದ ಪ್ರಶಸ್ತಿ, ಕುವೆಂಪು ಜನ್ಮ ಶತಮಾನೋತ್ಸವ ಪ್ರಯುಕ್ತ ಗಾದಿಗನೂರಿನಲ್ಲಿ ನಡೆದ ಗ್ರಾಮೀಣ ರಂಗೋತ್ಸವ ಸಂದರ್ಭದಲ್ಲಿ ನೀಡಿದ ಪ್ರಶಸ್ತಿಗಳು ಸಂದಿರುವುದು ಇವರ ರಂಗ ಸಾಧನೆಯ ಶ್ಲಾಘನೆ.



## ವಿಲಾಸಬಾಯಿ ಮಗೆಪ್ಪ ರಾಯಣ್ಣವರ

ಶ್ರೀ ವಿಲಾಸಬಾಯಿ ಮಗೆಪ್ಪ ರಾಯಣ್ಣವರರು 1945ರಲ್ಲಿ ಜಮಖಂಡಿ ತಾಲ್ಲೂಕಿನ ತೇರದಾಳ ಪಟ್ಟಣದಲ್ಲಿ ಜನಿಸಿದ ಅಭಿಜಾತ ಕಲಾವಿದೆ. ಇವರು ಕಲಾಗುರು ಅಲ್ಲಯ್ಯಸ್ವಾಮಿ ಭಂಡಾರಿಯವರ ಮಾರ್ಗದರ್ಶನದಲ್ಲಿ ಪ್ರಥಮ ಬಾರಿಗೆ 'ಮದುಮಗಳು' ನಾಟಕದಲ್ಲಿ ಅಭಿನಯಿಸುವುದರ ಮೂಲಕ ರಂಗಭೂಮಿಗೆ ಪಾದಾರ್ಪಣೆ ಮಾಡಿದರು. ಅದರ ನಂತರ ಪಾರಿಜಾತದ ಶ್ರೇಷ್ಠ ಕಲಾವಿದ ದಿವಂತರ ಡಿ.ಮರಿಗಪ್ಪ ಸೊರೆಂಗಾವಿ ಇವರ ಪಾರಿಜಾತ ಕಂಪನಿಯಲ್ಲಿ ಸುಮಾರು ವರ್ಷಗಳ ಕಾಲ ರುಕ್ಮಿಣಿ ಪಾತ್ರ ನಿರ್ವಹಿಸಿವುದರ ಮೂಲಕ ಪ್ರೇಕ್ಷಕರ ಗಮನವನ್ನು ಸೆಳೆದರು. ಮುಂದೆ ಇವರು ಹೇಮಲಾಪುರದ ಕಲಾವಿದ ಸಂತ್ರಾಮ ಬಡಿಗೇರ, ಕಾಶೀಬಾಯಿ ದಾದನಟ್ಟಿ ಅವರ ಮಂಜುನಾಥ ನಾಟ್ಯ ಸಂಘ, ದಿ.ಅಪ್ಪಾಸಾಬ ನದಾಫ್ ಪಾರಿಜಾತ ಕಂಪನಿಗಳಲ್ಲಿ ಹಲವು ವರ್ಷಗಳ ಕಾಲ ಸೇವೆಗೈದರು.

ಪ್ರಸ್ತುತ ಇವರು ಗೋಕಾಕ್ ತಾಲ್ಲೂಕಿನ ಹುಣಶ್ಯಾಳದ ಶ್ರೀ ಬಲಭೀಮ ನಾಟ್ಯಸಂಘದ ದ್ರೌಪದಿ ವಸ್ತ್ರಾಪಹರಣ ಬಯಲಾಟದಲ್ಲಿ ದ್ರೌಪದಿ ಪಾತ್ರ ನಿರ್ವಹಿಸುವುದರ ಮೂಲಕ ಈ ಭಾಗದ ಜನಪ್ರಿಯ ರಂಗಭೂಮಿ ಕಲಾವಿದರಲ್ಲಿ ಇವರೂ ಒಬ್ಬರಾಗಿದ್ದಾರೆ.



## ಸುನಂದಾ ಕಂದಗಲ್ಲ

ಶ್ರೀಮತಿ ಸುನಂದಾ ಕಂದಗಲ್ಲರವರು ಮೂಲತಃ ಇಳಕಲ್‌ನವರು. ಕಲಾವಿದೆಯಾಗಿ ಕಳೆದ 30 ವರ್ಷಗಳಿಂದ ವೃತ್ತಿ ಮತ್ತು ಹವ್ಯಾಸಿ ರಂಗತಂಡಗಳ ಪ್ರಮುಖ ನಾಟಕವಾದ ಅಣ್ಣತಂಗಿ, ಆದರ್ಶ ಪ್ರೇಮ, ಚಿನ್ನದ ಬೊಂಬೆ, ಕಲಿತ ಕಳ್ಳ, ಹೇಮರೆಡ್ಡಿ ಮಲ್ಲಮ್ಮ, ರತ್ನ ಮಾಂಗಲ್ಯ ಮುಂತಾದ ವೃತ್ತಿ ನಾಟಕಗಳಲ್ಲಿ ಹಾಗೂ ಜೋಕುಮಾರಸ್ವಾಮಿ, ತುಘಲಕ್, ಹಾವ ಹರಿದಾಡಶವ, ಒಂದು ಪಾಡೆಯ ಕಥೆ, ಕಣ್ಣಿಮುಟ್ಟ ಕಾಶೀಬಾಯಿ, ನಾಗಮಂಡಲ, ಸಿರಿಸಂಪಿಗೆ, ತಲೆದಂಡ, ಕತ್ತಲೆ ಬೆಳಕು, ಮಿಸ್ ಸದಾರಮೆ, ಅಗ್ನಿ ಮತ್ತು ಮಳೆ ಹೀಗೆ ಹಲವು ನಾಟಕಗಳಲ್ಲಿ ಅಭಿನಯಿಸುತ್ತಾ ಸಾವಿರಾರು ಮರು ಪ್ರದರ್ಶನಗಳನ್ನು ನೀಡಿದ್ದಾರೆ.

ಕರ್ನಾಟಕದ ಪ್ರಮುಖ ರಂಗನಿರ್ದೇಶಕರಾದ ಶ್ರೀ ಅಶೋಕ್ ಬಾದರದಿನ್ನಿ, ಧ್ರುವರಾಜ್ ದೇಶಪಾಂಡೆ, ಗಣಪತಿ ಹೆಗಡೆ, ಮಹಾಂತೇಶ ಗಜೇಂದ್ರಗಡ, ವಂಶಕೃತಮಠ, ಪಿ.ಎ. ಕುಲಕರ್ಣಿ ಇವರುಗಳ ನಿರ್ದೇಶನದಲ್ಲಿ ಡಾ. ಚಂದ್ರಶೇಖರ ಕಂಬಾರ, ಗಿರೀಶ್ ಕಾರ್ನಾಡ, ಪಿ.ಬಿ.ಧುತ್ತರಗಿ, ಹೂಲಿಶೇಖರ್ ಮುಂತಾದವರು ರಚಿಸಿರುವ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಬಿಜಾಪುರದ ಕಲಾಮಾಧ್ಯಮ, ಬಾಗಲಕೋಟದ ವಾಸುದೇವ ವಿನೋದಿನಿ ನಾಟ್ಯಸಭಾ, ಗುಲಬರ್ಗಾದ ರಂಗಭಾರತಿ, ಗುಳೇದಗುಡ್ಡದ ರಂಗಚಿಂತನ, ಕೂಡಲಸಂಗಮದ ಸಂಗ್ರಾತ ಇನ್ನೂ ಹಲವು ಹವ್ಯಾಸಿ ತಂಡಗಳ ನಾಟಕಗಳಲ್ಲಿ ಅಭಿನಯಿಸಿರುವುದು ಇವರ ಹೆಗ್ಗಳಿಕೆ.



## ಡಾ॥ ಅಶೋಕ್ ತೋಳನೂರ್

ವಿಜಾಪುರದ ಡಾ॥ ಅಶೋಕ ತೋಳನೂರ ಅವರು ರಂಗಭೂಮಿಯಲ್ಲಿ ನಟರಾಗಿ, ನಿರ್ದೇಶಕರಾಗಿ ಹೆಸರು ಮಾಡಿದವರು. ವೃತ್ತಿಯಲ್ಲಿ ವೈದ್ಯರಾಗಿ ಸಾವಿರರು ಜನರ ಆಪದ್ಬಾಂಧವರಾಗಿದ್ದವರು. ಇವರು ಪ್ರೈಮರಿ ಶಾಲೆಯಲ್ಲಿದ್ದಾಗಲೇ ರಂಗಭೂಮಿಯ ಗೀಳು ಅಂಟಿಸಿಕೊಂಡವರು. 1972ರಲ್ಲಿ ಶ್ರೀರಂಗದ 'ಏನ ಬೇಡಲಿ ನಿನ್ನ' ನಾಟಕಕ್ಕೆ ರಾಜ್ಯ ಶ್ರೇಷ್ಠ ನಿರ್ದೇಶಕ ಪುರಸ್ಕಾರಕ್ಕೆ ಪಾತ್ರರಾದರು. ಚಂದ್ರಶೇಖರ ಕಂಬಾರರ, 'ಕೇಳು ಜನಮೇಜಯ', ಜಿ.ಬಿ. ಜೋಶಿಯವರ 'ಕದಡಿದ ನೀರು' ಸೇರಿದಂತೆ ಸುಮಾರು 15 ನಾಟಕಗಳನ್ನು ನಿರ್ದೇಶಿಸಿದ್ದಾರೆ. 300 ನಾಟಕಗಳಲ್ಲಿ ಅಭಿನಯಿಸಿರುವ ತೋಳನೂರ ಅವರು, ಬಾದರದಿನ್ನಿಯವರ 'ಬಾಗಲ ತಗೀರಪ್ಪೋ ಬಾಗಲ' ಹಾಗೂ ಚಂದ್ರಕಾಂತ ಕುಸನೂರರ 'ಆನೆ ಬಂತಾನೆ' ನಾಟಕಗಳ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿದ್ದಕ್ಕಾಗಿ 'ಶ್ರೇಷ್ಠ ನಟ' ಪ್ರಶಸ್ತಿ ಪಡೆದಿದ್ದಾರೆ. ಶ್ರೀ ತೋಳನೂರು ಅವರು 40 ವರ್ಷಗಳ ಕಾಲ ನಿರಂತರ ರಂಗಭೂಮಿ ಸೇವೆ ಮಾಡುತ್ತಲೇ ಬಂದು ರಂಗಭೂಮಿಯನ್ನು ಶ್ರೀಮಂತಗೊಳಿಸಿದ್ದಾರೆ.



## ಅಂಬಾದಾಸ ಜೋಶಿ

ಬಿಜಾಪುರದ ಅಂಬಾದಾಸ ಜೋಶಿಯವರು 6 ಮೇ 1955ರಲ್ಲಿ ಜನಿಸಿದರು. ಚಿತ್ರಕಲಾ ಶಿಕ್ಷಕರಾಗಿರುವ ಇವರು ನಾಟಕ, ಸಂಗೀತ, ಚಿತ್ರಕಲೆ, ತೋಟಗಾರಿಕೆ, ಸಮಾಜಸೇವೆ, ಪರಿಸರ ಚಿಂತನೆ ಮತ್ತು ಸ್ತಬ್ಧ ಚಿತ್ರ ನಿರ್ಮಾಣ ಹೀಗೆ ಹತ್ತು ಹಲವು ಆಸಕ್ತಿಗಳನ್ನು ಬೆಳೆಸಿಕೊಂಡು ಬಿಜಾಪುರದ ಸಾಂಸ್ಕೃತಿಕ ಕ್ಷೇತ್ರದಲ್ಲಿ ತಮ್ಮದೇ ಆದ ಹೆಜ್ಜೆಗುರುತುಗಳನ್ನು ಮೂಡಿಸಿರುವವರು. ಅಂಬಾದಾಸರವರು ಬಿಜಾಪುರದಲ್ಲಿ ಸ್ನೇಹಿತರೊಡಗೂಡಿ 'ರಂಗವೈಭವ' ನಾಟಕ ತಂಡ, 'ಸ್ವರಲೋಕ' ಸಂಗೀತ ಮಂಡಲಿ, ಗೆಳೆಯರ ಬಳಗ, ಶ್ರೀ ಗುರು ಸುಧೀಂದ್ರ ಭಜನಾ ಮಂಡಲಿ ಹೀಗೆ ಹಲವಾರು ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ಇವರು ಆಯೋಜಿಸಿರುವ ಹಾಸ್ಯ ಸಂಗೀತ ಸಂಜೆ, ನಾಡಗೀತೆ, ರಸಮಂಜರಿ ಕಾರ್ಯಕ್ರಮ, ಚಿಣ್ಣರ ಇಂಚರ – ಚಿಲಿಪಿಲಿಗಾನ, ಭಾವೈಕ್ಯ ರಸಮಂಜರಿ ಇಂತಹ ಹಲವಾರು ಕಾರ್ಯಕ್ರಮಗಳು ಹಾಗೂ ರಂಗವೈಭವದಿಂದ ಪ್ರದರ್ಶಿಸಿದ 'ನೀರು ನೀರಡಿಕೆ', 'ಮೇಘದೂತ', 'ಆಷಾಢದ ಒಂದು ದಿನ' ನಾಟಕಗಳು ವಿಜಾಪುರ ಜನರ ಮನದಲ್ಲಿ ಹಸಿರಾಗಿ ನಿಂತಿವೆ. ಶ್ರೀಯುತರು ಕಳೆದ 32 ವರ್ಷಗಳಿಂದಲೂ ಬಹುಮುಖ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.



## ಶಾಂತಪ್ಪ ದೇವರಾಯ

ಬೀದರ್ ಜಿಲ್ಲೆಯ 'ಹುಡಗಿ'ಯ ಶ್ರೀ ಶಾಂತಪ್ಪ ದೇವರಾಯ ಅವರ ತಂದೆ ಶರಣಪ್ಪ ದೇವರಾಯ, ತಾಯಿ ಭೀಮಬಾಯಿ ದೇವರಾಯ. ಬಿ.ಎ., ಬಿ.ಇಡಿ. ಪದವಿ ಗಳಿಸಿರುವ ಶ್ರೀಯುತರು ಪ್ರೌಢಶಾಲಾ ಶಿಕ್ಷಕರಾಗಿ ವೃತ್ತಿ ನಿರ್ವಹಿಸುತ್ತಾ ರಂಗಭೂಮಿ, ಸಾಹಿತ್ಯ ಹಾಗೂ ಹಾಡುಗಾರಿಕೆಗಳನ್ನು ಪ್ರವೃತ್ತಿಯಾಗಿಸಿಕೊಂಡವರು.

ದಿಗಂಬರ ಕರಿಬಸವೇಶ್ವರನಾಟ್ಯ ಸಂಘ, ಹುಡಗಿ ಎಂಬ ಹವ್ಯಾಸಿ ನಾಟ್ಯ ಸಂಘವನ್ನು ಸ್ಥಾಪಿಸಿದ ಹೆಗ್ಗಳಿಕೆ ಇವರದು. 1950ರಿಂದ ಇಲ್ಲಿಯವರೆಗೆ ಅನೇಕ ನಾಟಕಗಳಲ್ಲಿ ಅಭಿನಯಿಸಿದ್ದಲ್ಲದೆ ನಿರ್ದೇಶನವನ್ನು ಕೂಡ ಮಾಡುವುದರ ಮೂಲಕ ರಂಗಭೂಮಿಗೆ ಅಪಾರ ಸೇವೆ ಸಲ್ಲಿಸಿದ್ದಾರೆ.

ಇವರು ಅಭಿನಯಿಸಿದ ನಾಟಕಗಳು ಗಾಂಧಿ ಟೋಪಿ, ಅಣ್ಣ ತಂಗಿ, ಪ್ರೇಮ ಬಂಧನ, ತಾಯಿ ಕರುಳು, ರಕ್ತ ದೀಪ, ಹೇಮರೆಡ್ಡಿ ಮಲ್ಲಮ್ಮ, ಅಕ್ಕಮಹಾದೇವಿ, ಶರಣಬಸವೇಶ್ವರ, ಹರಿಶ್ಚಂದ್ರ, ಸೂರ್ಯಶಿಕಾರಿ. ಇವರು ನಿರ್ದೇಶಿಸಿರುವ ನಾಟಕಗಳೆಂದರ ಅಶಿಕ್ಷಿತರ ಗೋಳು, ವಯಸ್ಕರ ಶಿಕ್ಷಣ, ಪ್ರೇಮಬಂಧನ, ತಾಯಿ ಕರುಳು, ಸುನಂದ, ಝಾನ್ಸಿರಾಣಿ ಲಕ್ಷ್ಮೀಬಾಯಿ, ಕಲ್ಯಾಣ ಕ್ರಾಂತಿ, ಕುಮಾರ ಗುಂಡಯ್ಯ, ಉರಿಲಿಂಗಪೆದ್ದಿ, ನರರಾಕ್ಷಸಿ. ಹೀಗೆ ಸುಮಾರು 25ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದು, ಅಲ್ಲದೆ 20ಕ್ಕೂ ಹೆಚ್ಚು ನಾಟಕಗಳನ್ನು ನಿರ್ದೇಶಿಸಿದ್ದಾರೆ.



## ವೈಜನಾಥ ಬಿರಾದಾರ್

ಬೀದರ್ ಜಿಲ್ಲೆಯ ಬಾಲ್ಕಿಯ ತೇಗಂಪುರದಂತಹ ಕುಗ್ರಾಮದಲ್ಲಿ ಜನಿಸಿದ ಶ್ರೀ ಬಿರಾದಾರ್ ಅವರು ಓದಿದ್ದು ಕೇವಲ 4ನೇ ತರಗತಿ. ಚಿಕ್ಕಂದಿನಿಂದಲೆ ಕಲೆಯಲ್ಲಿ ಆಸಕ್ತಿ ವಹಿಸಿದ ಇವರು ಊರಲ್ಲಿ ಎಲ್ಲೇ ನಾಟಕ, ಕೋಲಾಟ, ಮೊಹರಂ ಹಾಡು ನಡೆಯುವಲ್ಲಿ ಹಾಜರಾಗಿ ತನ್ನ ಬಾಲಪ್ರತಿಭೆಯಿಂದಲೇ ಪ್ರೇಕ್ಷಕರನ್ನು ನಗೆಗಡಲಿನಲ್ಲಿ ರಂಜಿಸುತ್ತಿದ್ದರು. ಮುಂದೆ ಇವರು ಧಾರವಾಡದ ನಾಗೇಶ್ ಅವರ ಪಂಚಲಿಂಗೇಶ್ವರ ನಾಟ್ಯ ಸಂಘದ 'ಬಸ್ ಹಮಾಲ್' ನಾಟಕದ ನಾಗೇಗೌಡನ ಪಾತ್ರದ ಮೂಲಕ ವೃತ್ತಿ ರಂಗಭೂಮಿಗೆ ಪ್ರವೇಶ ಮಾಡಿದರು. ತದನಂತರ ವಿಜಯ ನಾಟ್ಯ ಸಂಘ, ಗದಗ ಜಿಲ್ಲೆ, ಬಸವೇಶ್ವರ ನಾಟ್ಯ ಸಂಘ, ಬಸವನಗರ ಇಂತಹ ಹಲವು ಕಂಪನಿಗಳಲ್ಲಿ ಅಭಿನಯಿಸುತ್ತಾ ಬಂದ ಇವರು ಹಾಸ್ಯ ಪಾತ್ರಗಳ ಮೂಲಕ ಜನರನ್ನು ರಂಜಿಸುತ್ತಾ ಬಂದವರು. ತದನಂತರ ಎಂ.ಎಸ್. ಸತ್ಯುರವರ ಬರ ಚಿತ್ರದ ಮೂಲಕ ಚಿತ್ರರಂಗಕ್ಕೆ ಪಾದಾರ್ಪಣೆ ಮಾಡಿದರು. ಇಷ್ಟಲ್ಲದೆ ಇವರು ಸಂಗಮೇಶ್ವರ ಮಿತ್ರಮಂಡಳಿ ಎಂಬ ಹವ್ಯಾಸ ಕಂಪನಿ ಸ್ಥಾಪಿಸಿ ಕರ್ನಾಟಕದಾದ್ಯಂತ ನಾಟಕ ಪ್ರದರ್ಶನ ನೀಡುತ್ತಾ ಬಂದಿದ್ದಾರೆ.



## ಎನ್.ಎಸ್. ದಾನಿ

ಬೆಂಗಳೂರಿನ ಶ್ರೀ ನಾ.ಸೂ. ದಾನಿಯವರು 1 ಮಾರ್ಚ್ 1942ರಲ್ಲಿ ಜನಿಸಿದರು. ಬಿ.ಎಸ್ಸಿ ಹಾಗೂ ಭಾಯಾ ಇನ್‌ಸ್ಟಿಟ್ಯೂಟ್ ಆಫ್ ಡ್ರಾಮಾಟಿಕ್ ಆರ್ಟ್ಸ್‌ನಿಂದ ಡಿಪ್ಲೋಮಾ ಪದವಿ ಪಡೆದಿರುವ ಇವರು ನಟನೆ, ಪ್ರಸಾಧನ ಹಾಗೂ ನಿರ್ದೇಶನಗಳಲ್ಲಿ ಒಲವುಳ್ಳವರು. ನ್ಯಾಷನಲ್ ಕಾಲೇಜು ಹಿಸ್ಟ್ರಿಯಾನಿಕ್ ಕ್ಲಬ್, ಕನ್ನಡ ಸಾಹಿತ್ಯ ಕಲಾಸಂಘ, ಪ್ರತಿಮಾ ನಾಟಕರಂಗ, ನಂ ಕಂಪ್ನಿ, ಶಶಿ ಕಲಾವಿದರು, ಸಾರಂಗ, ಕಲಾ ಗಂಗೋತ್ರಿ ನಟರಂಗ ತಂಡದ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಅಲ್ಲದೆ ನ್ಯೂ ಷೇಕ್ಸ್‌ಪೀಯರಿನ್ ಥಿಯೇಟರ್ ಕಂಪನಿ, ಲಂಡನ್, ಮರ್ಸಿ ಲೂಯಿಸ್ ನೃತ್ಯ ತಂಡ ಅಮೇರಿಕಾ ಹೀಗೆ ದೇಶ–ವಿದೇಶದ ಕಂಪನಿಗಳು ಭಾರತಕ್ಕೆ ಬಂದ ಸಂದರ್ಭದಲ್ಲಿ ಅವುಗಳಿಗೆ ನೇಪಥ್ಯದಲ್ಲಿ ದುಡಿದಿದ್ದಾರೆ. ಪ್ರೊ. ಬಿ.ಸಿ., ಬಿ.ವಿ. ಕಾರಂತ, ಎನ್.ಎಸ್. ವೆಂಕಟರಾಂ, ಪ್ರಸನ್ನ, ಸಿ.ಆರ್. ಸಿಂಹ, ವೆಂಕಟಸುಬ್ಬಯ್ಯ, ಪರ್ವತವಾಣಿ, ರೆವರೆಂಡ್ ರೆಂಟ್ಜೂಲ್, ವಿಜಯಪದಕಿ, ಜಗದೀಶ ರಾಜಾರಂತಹ ನಿರ್ದೇಶಕರ ಸುಮಾರು 800ಕ್ಕೂ ಹೆಚ್ಚು ನಾಟಕಗಳಿಗೆ ಮೇಕಪ್ ಮಾಡಿರುವ ಇವರಿಗೆ ನಾಲ್ಕು ದಶಕಗಳ ನಿರಂತರ ರಂಗಸೇವೆಗಾಗಿ 'ಪದ್ದಣ್ಣ' ಪ್ರಶಸ್ತಿ ಲಭಿಸಿದೆ.



## ನಾಗಿಣಿ ಭರಣ

ಬೆಂಗಳೂರಿನ ಶ್ರೀಮತಿ ನಾಗಿಣಿ ಭರಣರವರು ಕೇಶವ ಐಯ್ಯಂಗಾರ್ ಮತ್ತು ಇಂದಿರಾರವರ ಸುಪುತ್ರಿಯಾಗಿ 9 ಮೇ 1959ರಲ್ಲಿ ಜನಿಸಿದರು. ಶಾಲೆಯ ದಿನಗಳಲ್ಲಿ ಇವರು ಅಭಿನಯಿಸಿದ ಕೃಷ್ಣದೇವರಾಯ ನಾಟಕದ ಕೃಷ್ಣದೇವರಾಯ ಪಾತ್ರ ಎಲ್ಲರ ಪ್ರಶಂಸೆಗೆ ಪಾತ್ರವಾಯಿತು.

1975ರಲ್ಲಿ ತಮ್ಮ 15ನೇ ವಯಸ್ಸಿನಲ್ಲಿ ಬೆನಕ ತಂಡದ ಹಯವದನ ನಾಟಕದ ವಸ್ತ್ರಾಲಂಕಾರ ಮತ್ತು ಮೇಳದಲ್ಲಿ ಭಾಗವಹಿಸಿವುದರ ಮೂಲಕ ಇವರ ರಂಗಕಾಯಕ ಆರಂಭವಾಯಿತು. ಬೆನಕ ಹಾಗೂ ರಂಗಸಂಪದ ತಂಡದ ಜಸ್ಮಾ ಒಡನ್, ಹಯವದನ, ಸತ್ತವರ ನೆರಳು, ಜೋಕುಮಾರಸ್ವಾಮಿ, ಯಮ ರಂಜನೆ, ಕಾಗೆ ಕುಣಿತ, ಯಯಾತಿ, ಇಸ್ಪೀಟ್ ರಾಜ, ತ್ರಿಶಂಕು, ಜೈಸಿದನಾಯ್ಕ, ಸನ್ನಿವೇಶ, ಸಂಗ್ಯಾಬಾಳ್ಯ, ಮಹಾಚೈತ್ರ, ಕಾಲಿಗುಲ ನಾಟಕಗಳಲ್ಲಿ ಭಾಗವಹಿಸಿ ದೇಶಾದ್ಯಂತ ಪ್ರದರ್ಶನ ನೀಡಿದ್ದಾರೆ.

ಇವರು ಬೆಂಗಳೂರಿನ 80–90ರ ದಶಕದ ಬಹುತೇಕ ನಾಟಕಗಳಿಗೆ ವಸ್ತ್ರವಿನ್ಯಾಸ ಮಾಡಿರುವುದೂ ಅಲ್ಲದೆ ತೆನಾಲಿರಾಮ, ಸ್ವೂನ್‌ಬಾಯ್, ಸನ್‌ಸ್ಮರಣೆ, ಆರಾಧನಾ ಟಿ.ವಿ. ಧಾರಾವಾಹಿಗಳಿಗೂ ವಸ್ತ್ರವಿನ್ಯಾಸ ಮಾಡಿದ್ದಾರೆ. 1985ರಲ್ಲಿ ಕೂಚುಪುಡಿ ನೃತ್ಯದೊಂದಿಗೆ ರಂಗಪ್ರವೇಶ ಮಾಡುವ ಇವರು ಹಲವಾರು ನಾಟಕ, ಟೆಲಿಚಿತ್ರ ಸಿನಿಮಾಗಳಿಗೆ ನೃತ್ಯ ನಿರ್ದೇಶನ ಮಾಡಿದ್ದು ಅಲ್ಲದೆ ದೇಶವಿದೇಶಗಳಲ್ಲಿ ಕಾರ್ಯಕ್ರಮ ಕೊಟ್ಟಿರುತ್ತಾರೆ. ಬೆನಕ ತಂಡದ ಪ್ರಮುಖ ಸದಸ್ಯರಾಗಿ ರಂಗಚಟುವಟಿಕೆ ಮುಂದುವರಿಸಿದ್ದಾರೆ.



## ಎಚ್.ಎಸ್. ನೀಲಕಂಠ (ನೀಲಿ)

ಬೆಂಗಳೂರಿನ ಶ್ರೀ ನೀಲಿಯವರು ಹುಟ್ಟಿದ್ದು 3 ಅಕ್ಟೋಬರ್ 1942ರಲ್ಲಿ. ಇವರ ತಂದೆ ಎಚ್.ಸಿ. ಶಂಕರಭಟ್‌ರವರು ವೃತ್ತಿಯಲ್ಲಿ ಬಿಲ್ಡರ್ ಆಗಿರುವರು. ನೀಲಿಯವರು ಸುಮಾರು 50 ವರ್ಷಗಳಿಂದಲೂ ರಂಗಭೂಮಿಗೆ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ.

ನ್ಯಾಷನಲ್ ಮಿಡಲ್ ಸ್ಕೂಲ್‌ನಲ್ಲಿ ಓದುತ್ತಿದ್ದಾಗಲೇ ಸಿ.ಆರ್. ಸಿಂಹ, ಶ್ರೀನಾಥ್‌ರೊಡಗೂಡಿ ಬಸವನಗುಡಿಯ ಮಲ್ಲಿಕಾರ್ಜುನ ದೇವಸ್ಥಾನದ ಪ್ರಕಾರದಲ್ಲಿ ಸೀರೆ, ಶಾಲು, ಜಮಖಾನಗಳನ್ನೇ ಪರದೆಗಳನ್ನಾಗಿಸಿ ಸಿ.ಎನ್.ಎನ್. ಶಾಸ್ತ್ರಿ ಅವರ ನಿರ್ದೇಶನದಡಿಯಲ್ಲಿ ನಾಟಕ ಮಾಡಿದರು. ಜಿ. ಸದಾಶಿವಯ್ಯ ನಿರ್ದೇಶನದ 'ಶಾಂತ್ಯಾಟೋಪಿ' ನಾಟಕದಲ್ಲಿ ಅಭಿನಯಿಸಿದ ಇವರು ಬಿ.ಸಿ. ನಾಣೀಯವರ ಪ್ರಭಾವಕ್ಕೆ ಒಳಗಾಗಿ ನೇಪಥ್ಯದಲ್ಲಿ ಪರಿಣಿತರಾದರು. 'ನ್ಯಾಷನಲ್ ಕಾಲೇಜಿನ ಹಿಸ್ಟ್ರಿಯಾನ್ ಕ್ಲಬ್'ನ ಎಲ್ಲಾ ನಾಟಕಗಳಿಗೂ ಇವರದೇ ರಂಗವ್ಯವಸ್ಥೆಯ ಸೌಕರ್ಯ. 'ಸ್ಟೇಜ್ ಮ್ಯಾನೇಜರ್' ಎಂದು ನಾಣಿಯವರಿಂದ ಹೊಸ ಅಭಿದಾನಕ್ಕೆ ಪಾತ್ರರಾದರು.

ಮುಂದೆ ಬೆಂಗಳೂರಿನ ರಂಗದಿಗ್ಗಜರ ಸಂಪರ್ಕಕ್ಕೆ ಬಂದು ಪದ್ಮಣ್ಣನವರ ಪರಿಚಯವಾಗಿ ಬಿ.ಎಲ್.ಟಿ. ಸ್ಪಂದನ, ನಟರಂಗ, ಸಮುದಾಯ, ಕಲಾಕುಂಜ ಯಾವುದೇ ಸಂಸ್ಥೆಯ ನಾಟಕಗಳಿಗೆ ಇವರದೇ ಸ್ಟೇಜ್. ಅನೇಕ ಇಂಗ್ಲಿಷ್ ನಾಟಕಗಳಲ್ಲೂ ನೇಪಥ್ಯದಲ್ಲಿ ದುಡಿದಿರುವ ಇವರು 70ರ ದಶಕದಲ್ಲಿ ರವೀಂದ್ರ ಕಲಾಕ್ಷೇತ್ರದ ಹಿಂಭಾಗದಲ್ಲಿ 'ಬಯಲು ರಂಗಮಂದಿರ'ವನ್ನು ನಿರ್ಮಿಸಿದ್ದು ಇವರಿಗೆ ಹೆಸರು ತಂದುಕೊಟ್ಟಿದೆ.



## ಯು.ವಿ. ನಂಜಪ್ಪ

ಉಜ್ಜನಿ ವೀರಣ್ಣ ಶ್ರೀ ನಂಜಪ್ಪನವರು ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು ಹುಲಿಯೂರು ದುರ್ಗದ ಉಜ್ಜನಿಯಲ್ಲಿ ವೀರಣ್ಣ ಮತ್ತು ದೇವಮ್ಮ ದಂಪತಿಗಳ ಸುಪುತ್ರರಾಗಿ 12 ನೇ 1949ರಲ್ಲಿ ಜನಿಸಿದರು. ಬೆಂಗಳೂರಿನ ಅಭಿನಯ ತರಂಗದಲ್ಲಿ ರಂಗತರಬೇತಿಯನ್ನು ಪಡೆದ ಇವರು ಬೆನಕ, ರಂಗಸಂಪದ, ಸೂತ್ರಧಾರ, ಮಲ್ಲಿಕಾ ಹೀಗೆ ಬೆಂಗಳೂರಿನ ಪ್ರಮುಖ ತಂಡಗಳ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

ಬೆನಕ ತಂಡದ ಸತ್ತವರ ನೆರಳು, ತಬರನ ಕತೆ, ಜೋಕುಮಾರಸ್ವಾಮಿ, ತದ್ರೂಪಿ, ಗೋಕುಲ ನಿರ್ಗಮನ, ಹಯವದನ ಹಾಗೂ ರಂಗಸಂಪದದ ಒಡಲಾಳ, ಹರಕೆಯ ಕುರಿ, ಸಂಗ್ಯಾಬಾಳ್ಯ, ಸುಲ್ತಾನ್ ಟಿಪ್ಪು, ಮಹಾಚೈತ್ರ ಮತ್ತು ಸೂತ್ರಧಾರದ ಆಸ್ಫೋಟ, ಮಲ್ಲಿಕಾ ತಂಡದ ಮಾನಿಷಾದ, ಸಂಕ್ರಾಂತಿ, ಅವಿಶ್ವಾಸ ನಾಟಕಗಳಲ್ಲಿ ಪ್ರಮುಖ ಪಾತ್ರಗಳಲ್ಲಿ ನಟಿಸಿರುವುದಲ್ಲದೆ ನೇಪಥ್ಯದಲ್ಲಿಯೂ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ.

ಬಿ.ಎಂ.ಟಿ.ಸಿ.ಯಲ್ಲಿ ಚಾಲಕರಾಗಿ ನಿವೃತ್ತಿ ಪಡೆದಿರುವ ಶ್ರೀಯುತರು 80ರ ದಶಕದಿಂದ ರಂಗಭೂಮಿಯಲ್ಲಿದ್ದು ಬಿ.ವಿ. ಕಾರಂತ, ಆರ್. ನಾಗೇಶ್, ಸಿ.ಜಿ.ಕೆ. ನಾಗಾಭರಣ, ಅಶೋಕ್ ಬಾದರದಿನ್ನಿಯವರ ಒಡನಾಟದಲ್ಲಿ ರಂಗಭೂಮಿಯಲ್ಲಿ ಹೆಜ್ಜೆ ಹಾಕಿದ್ದಾರೆ.

---



## ಮೂರ್ತಿ ಬೆಂಗಳೂರ್ಕರ್

ಮೂಲತಃ ಆಂಧ್ರದವರಾದ ಶ್ರೀ ಮೂರ್ತಿ ಬೆಂಗಳೂರ್ಕರ್‌ರವರು 28 ಫೆಬ್ರವರಿ 1939ರಲ್ಲಿ ಬಿ.ಎನ್. ಭುಜಂಗರಾಜ್ ಹಾಗೂ ಮಣಿಬಾಯಿ ದಂಪತಿಗಳ ಪುತ್ರರಾಗಿ ಜನಿಸಿದರು. ನ್ಯಾಷನಲ್ ಹೈಸ್ಕೂಲ್, ಆಚಾರ್ಯ ಪ್ರೌಢಶಾಲೆ ಹಾಗೂ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರಿಂಗ್ ಬೆಂಗಳೂರು ಇಲ್ಲಿ ವ್ಯಾಸಂಗ ಮಾಡಿರುವ ಇವರು, ಮೈಕೋದಲ್ಲಿ ವೃತ್ತಿಯನ್ನಾರಂಭಿಸಿದರು.

ಬಾಲ್ಯದಿಂದಲೇ ಅಭಿನಯದಲ್ಲಿ ಆಸಕ್ತಿ ವಹಿಸಿದ್ದ ಇವರು ಚಲನಚಿತ್ರಗಳಲ್ಲಿ ನಟಿಸಬೇಕೆಂಬ ಮಹದಾಸೆಯಿಂದ ಮದ್ರಾಸಿಗೆ ಪಯಣ ಬೆಳೆಸಿದರು. ತಮ್ಮ ಮೈಕೋ ವೃತ್ತಿಯ ಜೊತೆಜೊತೆಗೆ ಗುರುಗಳಾದ ಮನ್ಮಥರಾವ್. ಪೀತಾಂಬರಂ, ವಿಲಾಸ್‌ಮಾಳ್ವಿರವರ ಸಹವಾಸದಲ್ಲಿ ಪ್ರಸಾಧನವನ್ನು ಮೈಗೂಡಿಸಿಕೊಂಡರು. ಇವರಿಗೆ ತಮ್ಮ ಪ್ರವೃತ್ತಿಯಲ್ಲಿ ಸಹಕಾರ ನೀಡಿದವರು ಆರ್. ನಾಗೇಶ್, ಸಿ.ಜಿ.ಕೆ. ಮತ್ತು ಎಸ್.ಕೆ. ಮಾಧವರಾವ್‌ರವರು.

ಇಪ್ಪತ್ತೈದು ವರ್ಷಗಳಿಂದಲೂ ನಿರಂತರವಾಗಿ ಹಲವಾರು ನಾಟಕಗಳಿಗೆ ಮೇಕಪ್ ಮಾಡಿದ್ದು ಅಲ್ಲದೆ, ಮಾಲ್ಗುಡಿ ಡೇಸ್ ಹಾಗೂ ನಾನಾ ಪಾಟೇಕರ್‌ರವರ ಹಿಂದಿ ಚಿತ್ರಗಳಿಗೂ ಮೇಕಪ್ ಮಾಡಿದ್ದಾರೆ. ಈಗಲೂ ಉಡುಗೆ–ತೊಡುಗೆ ನಿರ್ಮಾಣ ಹಾಗೂ ಪ್ರಸಾಧನವನ್ನೇ ತಮ್ಮ ವೃತ್ತಿಯಾಗಿಸಿಕೊಂಡಿದ್ದಾರೆ.

---



## ಮೈನಾವತಿ

ಶ್ರೀಮತಿ ಮೈನಾವತಿಯವರು ರಂಗರಾಯರು ಹಾಗೂ ಕಾವೇರಿಬಾಯಿಯರ ಪುತ್ರಿಯಾಗಿ ಭಟ್ಕಳದಲ್ಲಿ ಜನಿಸಿದರು. ಚಿಕ್ಕಂದಿನಿಂದಲೇ ಅಭಿನಯಕ್ಕೆ ಒಲಿದ ಮೈನಾವತಿಯವರು ಹಲವಾರು ನಾಟಕಗಳಲ್ಲಿ ಅಭಿನಯಿಸಿದರೂ ಮುಂದೆ ಪೂರ್ಣವಾಗಿ ಚಿತ್ರರಂಗಕ್ಕೆ ಅರ್ಪಿಸಿಕೊಂಡು ಅಪೂರ್ವ ಅಭಿನೇತ್ರಿ ಎಂಬ ಹೆಸರನ್ನು ಗಳಿಸಿದರು.

ಮೈನಾವತಿ ಅಂದಕೂಡಲೇ ನೆನಪಿಗೆ ಬರುವುದು 'ಅಬ್ಬಾ ಆ ಹುಡುಗಿ' ಚಿತ್ರ. ಆಗಿನ ಕಾಲಕ್ಕೆ ಆ ಚಿತ್ರ ಅಭಿಮಾನಿಗಳನ್ನು ಉದ್ಯಮದವರನ್ನು ದಂಗುಬಡಿಸಿತು.

ತಮ್ಮ ನಾಲ್ಕನೇ ವಯಸ್ಸಿನಲ್ಲಿಯೇ ನೃತ್ಯ ಕಾರ್ಯಕ್ರಮ ಕೊಟ್ಟ ಮೈನಾವತಿಯ ಬಾಲಪ್ರತಿಭೆ ಅಂದೇ ನೋಡುಗರ ಮನಸೂರೆಗೊಂಡಿತ್ತು. ಸಹೋದರಿ ಸ್ಥಾಪಿಸಿದ ಶ್ರೀಕೃಷ್ಣ ಚೈತನ್ಯ ಸಭಾದ ವತಿಯಿಂದ ಹಲವಾರು ನಾಟಕಗಳನ್ನು ರಂಗಕ್ಕೆ ತಂದಿದ್ದಾರೆ. ಅಲ್ಲದೆ ಇವರು ಅಭಿನಯಿಸಿದ್ದ 'ಶಾಂತಿನಿವಾಸ' ನಾಟಕ ಸಾವಿರಾರು ಪ್ರದರ್ಶನಗಳನ್ನು ಕಂಡಿವೆ.

ಇವರ ಹಿರಿಯ ಸಹೋದರಿ ಪಂಡರಿಬಾಯಿಯವರೊಡನೆ ಅನೇಕ ಚಿತ್ರಗಳಲ್ಲಿ ಅಭಿನಯಿಸಿರುವುದು ಅಲ್ಲದೆ ಇವರು ತಮ್ಮ ಮಕ್ಕಳಾದ ಶ್ಯಾಂಸುಂದರ್ ಮತ್ತು ಗುರುದತ್‌ರೊಡಗೂಡಿ ಸುವರ್ಣ ವಾಹಿನಿಯ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದಾರೆ. ಮೈನಾವತಿಯವರ ಪತಿ ರಾಧಾಕೃಷ್ಣರವರು ಇವರ ಕಲಾ ಜೀವನಕ್ಕೆ ಸ್ಫೂರ್ತಿದಾಯಕರು.



## ಎಚ್.ಕೆ. ರಾಮಮೂರ್ತಿ

ಬೆಂಗಳೂರಿನ ಶ್ರೀ ಎಚ್.ಕೆ. ರಾಮಮೂರ್ತಿಯವರು ಜನಿಸಿದ್ದು 14 ಸೆಪ್ಟೆಂಬರ್ 1939ರಲ್ಲಿ. ಬಿ.ಎಸ್‌ಸಿ., ಎಂ.ಇ.ಇ. ಪದವಿ ಪಡೆದಿರುವ ಇವರು ತಮ್ಮ ಬಾಲ್ಯದಲ್ಲಿ ಕುದೂರಿನ ಸಿ.ಬಿ. ಜಯರಾವ್‌ರವರ ಮಾರ್ಗದರ್ಶನದಲ್ಲಿ ನಾಟಕದಲ್ಲಿ ಅಭಿರುಚಿಗೊಂಡರು.

ತಮ್ಮ ವೃತ್ತಿಜೀವನದ ಸಂದರ್ಭದಲ್ಲಿ ಬಿ.ಇ.ಎಲ್. ಗೆಳೆಯರೊಡನೆ ಸೇರಿ 'ಕಲಾಪೋಷಿಣಿ' ಹಾಗೂ ಐ.ಟಿ.ಐ. ಗೆಳೆಯರೊಡನೆ ಸೇರಿ 'ಮಿತ್ರರ ಬಳಗ' ತಂಡಗಳನ್ನು ಸಂಘಟಿಸಿದರು. 60ರ ದಶಕದಲ್ಲಿ ಶ್ರೀರಂಗರು ನಡೆಸಿದ ರಂಗಶಿಬಿರದಲ್ಲಿ ಭಾಗಿಯಾಗಿ ನಂತರ ಬಿ.ವಿ. ಕಾರಂತರ ನೀ ಕೊಡೆ ನಾಬಿಡೆ, ಹಾಗೂ ಸ್ವರ್ಗಕ್ಕೆ ಮೂರೇ ಬಾಗಿಲು, ನಾಟಕಗಳಲ್ಲಿ ಅಭಿನಯಿಸಿದರು. ಬಿ.ಸಿ., ಎಂ.ಎಸ್. ಶ್ರೀನಿವಾಸ್, ಆರ್. ನಾಗೇಶ್‌ರವರ ಬಹುತೇಕ ನಾಟಕಗಳಲ್ಲಿ ನಟಿಸಿರುವ ಇವರು ಸ್ವರ್ಗದ ಸಂಭಾಷಣೆ, ದಾರಿ ಯಾವುದಯ್ಯಾ ವೈಕುಂಠಕೆ, ರಂಗಭಾರತ ಹುಟ್ಟಿದ್ದು, ಹೊಲೆಯೂರು, ಅಶ್ವತ್ಥಾಮನ್, ಗೋಡೆ ಬೇಕೆ ಗೋಡೆ ಹೀಗೆ ಹಲವಾರು ನಾಟಕಗಳನ್ನು ನಿರ್ದೇಶಿಸಿದ್ದಾರೆ. ಮಕ್ಕಳಿಗಾಗಿ ಜಲೀಲನ ಸಹಸ, ಮಹಾಮಾಂತ್ರಿಕ, ಬುಡಮೇಲು ನಗರ, ಮನಸ್ಸಿದ್ದರೆ ಮಹದೇವ ನಾಟಕಗಳನ್ನು ಬರೆದಿರುವ ಇವರು ಈಗಲೂ ರಂಗದಲ್ಲಿ ಸಕ್ರಿಯವಾಗಿದ್ದಾರೆ.



## ಜಿ.ಕೆ. ರಾಧಾ

ಶ್ರೀಮತಿ ರಾಧಾರವರು ಟಿ.ಎ. ಹನುಮಂತಾಚಾರ್ ಹಾಗೂ ಗೌರಮ್ಮ ದಂಪತಿಗಳ ಪುತ್ರಿಯಾಗಿ ಹೊಳೇನರಸೀಪುರದಲ್ಲಿ ಜನಿಸಿದರು. ಬಾಲ್ಯದಿಂದಲೇ ತಂದೆಯವರ ಬಳಿ ಸಂಗೀತ ಕಲಿತ ಇವರು ತಮ್ಮ 6–7ನೇ ವರ್ಷದಲ್ಲಿಯೇ ಸಂಗೀತ ಕಚೇರಿ ನಡೆಸಿಕೊಟ್ಟ ಪ್ರತಿಭಾವಂತ ಕಲವಿದೆ. ತಂದೆಯ ಮರಣಾನಂತರ ತಮ್ಮ ಊರಿನ ಪಕ್ಕದ ಕೆ.ಆರ್. ನಗರದಲ್ಲಿ ಕ್ಯಾಂಪ್ ಮಾಡಿದ್ದ ಗುಬ್ಬಿ ವೀರಣ್ಣನವರ ಜೊತೆ ಸೇರಿ ಅಲ್ಲಿಯ ಲವ–ಕುಶ ಪಾತ್ರದಲ್ಲಿ ಅಭಿನಯಿಸತೊಡಗಿದ್ದು ಇವರ ಬದುಕಿನ ಮಹತ್ವದ ಘಟ್ಟ. ಅವಳಿ–ಜವಳಿಗಳಾದ ರಾಧಾ–ರುಕ್ಮಿಣಿಯವರು 1961ರಿಂದ 1973ರವರೆಗೆ ಸುಮಾರು ಹತ್ತು ಸಾವಿರಕ್ಕೂ ಹೆಚ್ಚು 'ಲವ–ಕುಶ' ನಾಟಕದ ಪ್ರಯೋಗಗಳಲ್ಲಿ ಅಭಿನಯಿಸಿರುವುದು ಇವರ ಹೆಗ್ಗಳಿಕೆ. ಕೃಷ್ಣಲೀಲೆಯಲ್ಲಿ ಕೃಷ್ಣ ಬಲರಾಮ, ಅಲ್ಲದೆ ದಶಾವತಾರ–ಅಕ್ಕಮಹಾದೇವಿ ಇಂತಹ ನಾಟಕಗಳಲ್ಲಿ ಮುಖ್ಯ ಪಾತ್ರಗಳನ್ನೇ ವಹಿಸುತ್ತಾ ಬಂದಿದ್ದಾರೆ. ಅದೇ ಕಂಪನಿಯ ಹರಿಕಥಾ ವೆಂಕಟೇಶಯ್ಯನವರ ಪುತ್ರ ಜಿ.ವಿ. ಕೃಷ್ಣರವರ ಕೈಹಿಡಿದ ನಂತರ ಹಲವು ನಾಟಕಗಳಲ್ಲಿ ಜೊತೆಜೊತೆಯಾಗಿ ನಟಿಸಿದವರು ಮುಂದೆ ಪತಿಯೊಡನೆ ಸೇರಿ ಜಿ.ವಿ. ಕೃಷ್ಣ ನಾಟಕ ಮಂಡಲಿ ಸ್ಥಾಪಿಸಿ ರಂಗಸೇವೆ ಮಾಡುತ್ತಾ ಬಂದಿದ್ದಾರೆ.



## ಜಿ.ಕೆ. ರುಕ್ಮಿಣಿ

ಶ್ರೀಮತಿ ರುಕ್ಮಿಣಿಯವರ ತಂದೆ ತಾಯಿಗಳು ಹೊಳೇನರಸೀಪುರದ ಟಿ.ಎ. ಹನುಮಂತಾಚಾರ್ ಹಾಗೂ ಗೌರಮ್ಮನವರು. ಬಾಲ್ಯದಿಂದಲೇ ತಂದೆಯವರ ಬಳಿ ಸಂಗೀತ ಅಭ್ಯಾಸ ಮಾಡಿದ್ದು ಇವರ ವೃತ್ತಿಜೀವನಕ್ಕೆ ಪೂರಕವಾಗಿ, ಇವರ ಜೀವನ ನಿರ್ವಹಣೆಗೆ ಸಹಕಾರಿಯಾಯಿತು. ಗುಬ್ಬಿ ವೀರಣ್ಣನವರು ತಮ್ಮ ಲವ–ಕುಶ ನಾಟಕಕ್ಕೆ ಅವಳಿ–ಜವಳಿ ಮಕ್ಕಳನ್ನು ಅರಸುತ್ತಿದ್ದ ಸಂದರ್ಭದಲ್ಲಿ ರಾಧಾ–ರುಕ್ಮಿಣಿಯವರು ಕಂಪನಿಯಲ್ಲಿ ಪ್ರವೇಶ ಮಾಡಿದರು. ಲವ–ಕುಶ ಪಾತ್ರಗಳು ರಾಧಾ–ರುಕ್ಮಿಣಿಯರ ಪಾಲಿಗೆ ಬಂದದ್ದು ಇವರ ರಂಗ ಬದುಕಿನ ಪ್ರಮುಖ ಘಟ್ಟ. ಮುಂದೆ ಇವರು ಗುಬ್ಬಿ ವೀರಣ್ಣ ಕಂಪನಿಯಲ್ಲಿ 25 ವರ್ಷಗಳು, ನಂತರ ಮಾಸ್ಟರ್ ಹಿರಣ್ಣಯ್ಯನವರ ಕಂಪನಿ, ಗುಡಿಗೇರಿ ಬಸವರಾಜ ಕಂಪನಿ, ಚಿಂದೋಡಿ ಲೀಲಾರವರ ಕಂಪನಿಗಳಲ್ಲಿ ಬಹುತೇಕ ಎಲ್ಲಾ ನಾಟಕಗಳಲ್ಲಿ ಅಭಿನಯಿಸಿದರು. ಅನಂತರ ಪತಿ ಜಿ.ವಿ. ಕೃಷ್ಣ ಹಾಗೂ ಸಹೋದರಿ ರಾಧಾರವರೊಡಗೂಡಿ ಜಿ.ವಿ. ಕೃಷ್ಣ ಡ್ರಾಮಾ ಕಂಪನಿ ಸ್ಥಾಪಿಸಿ ಇಲ್ಲಿಯವರೆಗೂ ರಂಗಸೇವೆ ಮಾಡುತ್ತಾ ಬಂದಿದ್ದಾರೆ.



## ಎಂ.ಎನ್. ಲಕ್ಷ್ಮೀದೇವಿ

ಕೋಲಾರ ಜಿಲ್ಲೆ ಚಿಂತಾಮಣಿಯ ನರಸಿಂಹಯ್ಯ ಮತ್ತು ಯಲ್ಲಮ್ಮ ದಂಪತಿಗಳ ಸುಪುತ್ರಿಯಾದ ಶ್ರೀಮತಿ ಎಂ.ಎನ್. ಲಕ್ಷ್ಮೀದೇವಿಯವರು ಕಲೆಯನ್ನೇ ತಮ್ಮ ಜೀವನವನ್ನಾಗಿಸಿಕೊಂಡವರು. ಸುಮಾರು 50 ವರ್ಷಗಳ ಹಿಂದೆಯೇ ಮುಖಕ್ಕೆ ಬಣ್ಣ ಹಚ್ಚಿದ ಇವರು ನಿರಂತರವಾಗಿ ನಾಟಕಗಳು, ಸಿನಿಮಾಗಳು ಹಾಗೂ ಇದೀಗ ಟಿ.ವಿ. ಧಾರಾವಾಹಿಗಳಲ್ಲಿ ಅಭಿನಯಿಸುತ್ತಾ ಬಂದಿದ್ದಾರೆ. 'ಗುಬ್ಬಿ ಕಂಪನಿ', 'ಕರ್ನಾಟಕ

ಚಲನಚಿತ್ರ ಕಲಾವಿದರ ಸಂಘ', 'ಪಂಡರಿಬಾಯಿಯವರ ಶ್ರೀಕೃಷ್ಣ ಚೈತನ್ಯ ನಾಟಕ ಸಭಾ', 'ಎಂ.ಎನ್. ಲಕ್ಷ್ಮೀದೇವಿ ಪಾರ್ಟಿ' ನಾಟಕಗಳಲ್ಲಿ ಡಾ. ರಾಜ್‌ಕುಮಾರ್, ನರಸಿಂಹರಾಜು, ಬಾಲಣ್ಣರ ಜೊತೆ ಅಭಿನಯಿಸಿದ ಕೀರ್ತಿ ಇವರದಾಗಿದೆ. 1947ರಲ್ಲಿ 'ಬಂದು ಬಿ.ಎ.' ಎಂಬ ಸಿನಿಮಾದಿಂದ ಸಿನಿಮಾ ರಂಗ ಪ್ರವೇಶಿಸಿದ ಇವರು 'ಶ್ರೀನಿವಾಸ ಕಲ್ಯಾಣ', 'ಆಶಾ ಸುಂದರಿ', 'ರತ್ನ ಮಂಜರಿ', 'ಆಶಾ ಗೋಪುರ', 'ಸಾಕು ಮಗಳು', 'ಶರಪಂಜರ', 'ಗೆಜ್ಜೆಪೂಜೆ', 'ನಾಗರಹಾವು', 'ಭಕ್ತ ಕುಂಬಾರ' ಹೀಗೆ ಕನ್ನಡ, ತುಳು, ತೆಲುಗು ಸೇರಿದಂತೆ 400ಕ್ಕೂ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿರುವ ಇವರಿಗೆ 'ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ', 'ಅತ್ತಿಮಬ್ಬೆ ಪ್ರಶಸ್ತಿ', 'ವರದಪ್ಪ ಪ್ರಶಸ್ತಿ', 'ಡಾ. ರಾಜ್‌ಕುಮಾರ್ ಪ್ರಶಸ್ತಿ'ಗಳು ಸಂದಿರುತ್ತವೆ.

## ಎಂ.ಜಿ. ವೆಂಕಟೇಶ್



ಶ್ರೀ ಎಂ.ಜಿ. ವೆಂಕಟೇಶ್‌ರವರ ಜನನ 18 ಅಕ್ಟೋಬರ್ 1952ರಲ್ಲಿ. ರಂಗಭೂಮಿಯಲ್ಲಿ ಹೊಸ ಪಥವನ್ನು ಸೃಷ್ಟಿಸಿದ ಸಮುದಾಯದ ಪ್ರಾರಂಭದಿಂದಲೂ ಅದರ ಸಂಘಟನೆಯಲ್ಲಿ ಪ್ರಸನ್ನ, ಸಿ.ಜಿ.ಕೆ., ಗುಂಡಣ್ಣ, ಗಂಗಾಧರಸ್ವಾಮಿ, ಎಸ್. ಮಾಲತಿ, ಜನ್ನಿ ಇವರೊಡನೆ ಎಂ.ಜಿ. ವೆಂಕಟೇಶ್‌ರವರ ಪಾತ್ರವೂ ಮಹತ್ವವಾದದ್ದು. ಸಮುದಾಯದ ಸ್ಥಾಪಕ ಸದಸ್ಯರಾಗಿ, ಸಂಘಟಕರಾಗಿ, ಪ್ರಧಾನ ಕಾರ್ಯದರ್ಶಿಯಾಗಿ ಅಧ್ಯಕ್ಷರಾಗಿ ಹೀಗೆ ವಿವಿಧ ಪದವಿಗಳನ್ನಲಂಕರಿಸಿದ ಇವರು ಹೆಚ್ಚು ಒಲಿದಿದ್ದು ಸಂಘಟನೆಗೆ. ಸಮುದಾಯ ತಂಡವು ನಾಡಿನಾದ್ಯಂತ 1979, 81, 85ರಲ್ಲಿ ಸಂಘಟಿಸಿದ ಜಾಥಾಗಳು, 1986ರ ನೂರು ಅಡಿಗಳ ಬಣ್ಣದ ನಡೆ ಜಾಥಾ, ಭಾರತ ಜನ ವಿಜ್ಞಾನ ಜಾಥಾ, ಸಾಕ್ಷರತಾ ಜಾಥಾ, ಜನಸಂಸ್ಕೃತಿ ಉತ್ಸವ ಇದು ಯಾವುದೇ ಇರಬಹುದು. ಅದರ ರೂವಾರಿಗಳಲ್ಲೊಬ್ಬರು ವೆಂಕಟೇಶರವರು. ಸಂಘಟನೆಯ ಜೊತೆಜೊತೆಗೆ ಸಮುದಾಯದ ಹುತ್ತವ ಬಡಿದರೆ, ಗೆಲಿಲಿಯೋ, ಕತ್ತಲೆ ದಾರಿ ದೂರ, ದಂಗೆಯ ಮುಂಚಿನ ದಿನಗಳು, ಕುರಿ, ಈ ಕೆಳಗಿನವರು, ಮದುರೆ ಕಾಂಡ, ಮಾದಾರಿ ಮಾದಯ್ಯ, ರುಡಾಲಿ, ಪಂಪಭಾರತ, ಕೇಸರಿ ಬಿಳಲಿ ಹಸಿರು ನಾಟಕಗಳಲ್ಲಿ ಅಭಿನಯಿಸುವುದರ ಮೂಲಕ ರಂಗದಲ್ಲಿ ಸಕ್ರಿಯವಾಗಿದ್ದಾರೆ.

## ಶೋಭಾ ಸತೀಶ್‌ಚಂದರ್



ಶ್ರೀಮತಿ ಶೋಭಾರವರು ಬಾಲ್ಯದಲ್ಲಿಯೇ ನಾಟಕಗಳಲ್ಲಿ ಆಸಕ್ತಿವಹಿಸಿ 1969ನೇ ಇಸವಿಯಲ್ಲಿ ಮೀನಿನ ಹೆಜ್ಜೆ ನಾಟಕದ ಮುಖಾಂತರ ಮದ್ರಾಸ್ ಕರ್ನಾಟಕ ಸಂಘದ ರಂಗಮಂದಿರದಲ್ಲಿ ಮೊದಲ ಬಾರಿಗೆ ನಾಟಕದಲ್ಲಿ ಅಭಿನಯಿಸಿದವರು. ಇಲ್ಲಿಯವರೆಗೆ 200ಕ್ಕೂ ಹೆಚ್ಚು ನಾಟಕಗಳಲ್ಲಿ ಇವರು ನಟಿಸಿದ್ದಾರೆ. ನೃತ್ಯದಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿರುವ ಇವರಿಗೆ ಅಭಿಮಾನಿಗಳಿಂದ ದೊರೆತ ಬಿರುದು ಎಂದರೆ 'ಕರ್ನಾಟಕದ ಜೂನಿಯರ್ ಹೆಲನ್' ಎಂದು. ಇವರು ಬೆಂಗಳೂರಿನ ಸತೀಶ್‌ಚಂದರ್ ಅವರನ್ನು ವಿವಾಹವಾಗಿ, ಅವರ ಪ್ರೋತ್ಸಾಹದಿಂದ ಮತ್ತಷ್ಟು ರಂಗಚಟುವಟಿಕೆಗಳಲ್ಲಿ ಭಾಗಿಯಾಗಿದ್ದಾರೆ. ಅಲ್ಲದೆ ತಮ್ಮ ಮಕ್ಕಳಾದ ದೀಪಕ್ ಮತ್ತು ಕ್ಷಮಾರವರೂ ರಂಗಭೂಮಿಯಲ್ಲಿ ಅಭಿನಯಿಸಲು ಉತ್ತೇಜಿಸಿದ್ದಾರೆ. ಶೋಭಾರವರು ದೇಸಾಯಿ ಕಂಪನಿಯಲ್ಲಿ ತಮ್ಮ ಕಲಾಸೇವೆ ಮುಂದುವರಿಸಿ ಹಲವು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಇವರು ಅಭಿನಯದ ಜೊತೆಗೆ ನೃತ್ಯ ನಿರ್ದೇಶನವನ್ನು ಹಲವು ನಾಟಕಗಳಿಗೆ ಮಾಡಿದ್ದಾರೆ.



## ಸಂಜಯ್ ಸೂರಿ

ತಿಪಟೂರಿನವರಾದ ಶ್ರೀ ಸಂಜಯ ಸೂರಿಯವರು ಬದುಕನರಸಿ ಬಂದದ್ದು ಬೆಂಗಳೂರಿಗೆ. 1970ರಲ್ಲಿ ಹತ್ತನೇ ವಯಸ್ಸಿನಲ್ಲಿಯೇ ಗುಬ್ಬಿ ಕಂಪನಿಯಲ್ಲಿ ಬಾಲನಟರಾಗಿ ಬಣ್ಣ ಹಚ್ಚಿಕೊಂಡವರು. ಬೆಂಗಳೂರಿನ ಬೆನಕ, ಸ್ಪಂದನ ಚೇತನ ಕಲಾವಿದರು, ಪದ್ಮಶ್ರೀ ಕಲಾಸಂಘ, ದರ್ಶನರಂಗ, ಅರುಣ್‌ಕುಮಾರ್ ಕಲಾವಿದರು ಹೀಗೆ ಹಲವಾರು ಸಂಸ್ಥೆಗಳ ನಟ ಸಾಮ್ರಾಟ್, ಸಂಸಾರನೌಕೆ ಕರಿಮಾಯಿ, ಕಲ್ಯಾಣದಲ್ಲಿ ಒಂದು ಕ್ರಾಂತಿ, ಸತ್ತವರ ನೆರಳು, ಜೋಕುಮಾರಸ್ವಾಮಿ, ತಬರನ ಕತೆ, ಹಯವದನ, ದೇವರಾಜ, ಋಣಾನುಬಂಧ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

ಅಲ್ಲದೆ ಪ್ರಭಾತ್ ಕಲಾವಿದರು, ಶ್ರೀಕೃಷ್ಣ ವೈಜಯಂತಿ, ಕರ್ನಾಟಕ ವೈಭವ, ಧರ್ಮಭೂಮಿ, ಕಿಂದರಜೋಗಿ ನೃತ್ಯರೂಪಕಗಳಲ್ಲಿ ಪ್ರಮುಖ ಪಾತ್ರ ನಿರ್ವಹಣೆ ಮಾಡಿದ್ದಾರೆ. ಬಿ.ವಿ. ಕಾರಂತ, ಡಾ. ಕಂಬಾರ್, ಎನ್.ಎ. ಸೂರಿ, ರಂಜಿತ್ ಕಪೂರ್, ಚಿ.ಕು. ಸಿಂಗ್, ಆರ್. ನಾಗೇಶ್, ಬಿ. ಜಯಶ್ರೀ ಹೀಗೆ ರಂಗಭೂಮಿ ದಿಗ್ಗಜರೊಡನೆ ಒಡನಾಟ.

1963ರಲ್ಲಿ ತಮ್ಮದೆ ಆದ 'ಸೂರ್ಯ ಕಲಾವಿದರು' ಸಂಸ್ಥೆ ಸ್ಥಾಪನೆ. ಆ ಮೂಲಕ ಕಾಬೂಲಿವಾಲ, ಗಂಡುಗೊಡಲಿ, ಹೃದಯದೇಗುಲ ಹಲವಾರು ನಾಟಕಗಳು ಹಾಗೂ ನೃತ್ಯರೂಪಕಗಳ ಪ್ರದರ್ಶನ ನೀಡಿದ್ದಾರೆ. ಹಲವಾರು ಚಲನಚಿತ್ರ, ಟಿ.ವಿ. ಧಾರಾವಾಹಿಗಳಲ್ಲೂ ಅಭಿನಯಿಸಿರುವ ಇವರು ಕಳೆದ 50 ವರ್ಷಗಳಿಂದಲೂ ರಂಗಭೂಮಿಯಲ್ಲಿ ಸಕ್ರಿಯವಾಗಿದ್ದಾರೆ.

---



## ಶಿರೀಷ ಜೋಶಿ

ಗಡಿನಾಡಿನ ಬೆಳಗಾಂ ಜಿಲ್ಲೆಯವರಾದ *ಶ್ರೀ ಶಿರೀಷ್* ಜೋಶಿಯವರು ಎಂ.ಎ. ಪದವಿ ಪಡೆದವರು. ಕಾವ್ಯ, ಕಾದಂಬರಿ, ನಾಟಕ ರಚನೆ, ಸಂಗೀತ, ರಂಗಭೂಮಿ ಈ ಹತ್ತು ಹಲವು ಕ್ಷೇತ್ರಗಳಲ್ಲಿ ಆಸಕ್ತಿ ವಹಿಸಿ ಆ ಕ್ಷೇತ್ರಗಳಲ್ಲಿ ಕೃಷಿ ಮಾಡುತ್ತಾ ಬಂದವರು. ಎಂಥಾ ಮೋಜಿನ ಕುದುರಿ, ಯಶೋಗಾಥೆ (ಕಾದಂಬರಿ), ಮಿಂಚು (ನಾಟಕ), ಕುಮಾರ ಗಂಧರ್ವ, ಸ್ವರಯಾನ (ಜೀವನಚರಿತ್ರೆ) ಇವೆಲ್ಲವೂ ಜೋಶಿಯವರ ಲೇಖನಿಯಿಂದ ಹೊರಹೊಮ್ಮಿದ ಸಾಹಿತ್ಯ ಕೃತಿಗಳು.

ಮೆಟ್ಟಿಲೇರುವ ಗಡಿಬಿಡಿಯಲ್ಲಿ ಕೊಡೆ ಮರೆತವನು, ಜಿ.ಕೆ. ಮಾಸ್ತರರ ಪ್ರಣಯ ಪ್ರಸಂಗ, ಬೆಸುಗೆಗೊಳ್ಳದ ಹಳಿಗಳು, ನಿಮಿತ್ತ ಈ ಸಾಹಿತ್ಯ ಕೃತಿಗಳನ್ನು ರೂಪಾಂತರಿಸಿ ರಂಗಭೂಮಿಯ ಮೇಲೆ ತಂದಿರುವುದು ಇವರ ಮತ್ತೊಂದು ಸಾಧನೆ.

ಗರ್ಭಗುಡಿ, ದಿಂಡಿ, ಆಗಮನ, ಮಿಂಚು, ಕಪ್ಪು-ಬಿಳುಪು, ಅಧ್ಯಾನಪುರ ಹೀಗೆ 50ಕ್ಕೂ ಹೆಚ್ಚು ನಾಟಕಗಳಲ್ಲಿ ಜೋಶಿಯವರು ಅಭಿನಯಿಸಿದ್ದಾರೆ. ಎಚ್. ಡುಂಡೀರಾಜ್ ಅವರ ಹುಡುಕಾಟ, ವರ್ಷಾಂತರ ಪ್ರಸಂಗ, ಅಜ್ಜಿ ಕಥೆ ಹಾಗೂ ಶ್ರೀರಂಗರ ದಾರಿ ಯಾವುದಯ್ಯ ವೈಕುಂಠಕೆ, ಕಪ್ಪು ಬಿಳುಪು ಇವು ಶಿರೀಷ್ ಜೋಶಿಯವರು ನಿರ್ದೇಶಿಸಿರುವ ನಾಟಕಗಳು.

---



## ಎಚ್.ವಿ. ಜಯರಾಂ

ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಹಿಟ್ಟನಹಳ್ಳಿ ಕೊಪ್ಪಲು ಗ್ರಾಮದ ಹೆಚ್.ವಿ. ವೀರೇಗೌಡ ಮತ್ತು ಬಿ.ಕೆ. ಶಾರದಮ್ಮನವರ ಪುತ್ರ ಶ್ರೀ ಎಚ್.ವಿ. ಜಯರಾಂರವರು 20ನೇ ಆಗಸ್ಟ್ 1940ರಲ್ಲಿ ಜನಿಸಿದರು.

ನಾಟಕ, ಸಂಗೀತ, ಸಾಹಿತ್ಯ, ಕ್ರೀಡೆ ಮುಂತಾದ ಕ್ಷೇತ್ರಗಳಲ್ಲಿ ಆಸಕ್ತಿ ವಹಿಸಿರುವ ಇವರಿಗೆ ಕುವೆಂಪುರವರ 'ಸ್ಮಶಾನ ಕುರುಕ್ಷೇತ್ರ'ದ ದುರ್ಯೋಧನನ ಪಾತ್ರ ಹಾಗೂ 'ರಕ್ತಾಕ್ಷಿ'ಯ ಶಿವಯ್ಯನ ಪಾತ್ರಗಳು ಹೆಸರು ತಂದ ಪಾತ್ರಗಳು.

ಸ್ಥಳೀಯ ಪೌರಾಣಿಕ ನಾಟಕಗಳಲ್ಲಿ ರಾವಣ, ದುರ್ಯೋಧನ, ಇಂದ್ರ ಮುಂತಾದ ಪ್ರಮುಖ ಪಾತ್ರಗಳಲ್ಲಿ ಜಯರಾಂರವರು ಮನೋಜ್ಞ ಅಭಿನಯ ನೀಡಿ ಮೆಚ್ಚಿಗೆ ಗಳಿಸಿದ್ದಾರೆ. ಪ್ರಕಾಶ್ ಕಲಾ ಸಂಘದ ಅಧ್ಯಕ್ಷರಾಗಿ ರಾಜ್ಯಮಟ್ಟದ ನಾಟಕ ಸ್ಪರ್ಧೆ ಏರ್ಪಡಿಸಿದ್ದಾರೆ. ಕರ್ನಾಟಕ ಗಮಕಕಲಾ ಪರಿಷತ್ತಿನ ಜಿಲ್ಲಾ ಸಂಚಾಲಕರಾಗಿ ಪ್ರಸ್ತುತ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಜಿಲ್ಲೆಯಲ್ಲಿ ರಂಗಭೂಮಿ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಸಂವರ್ಧನೆಗಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.

ಪ್ರೌಢಶಾಲಾ ಮುಖ್ಯೋಪಾಧ್ಯಾಯರಾಗಿ 1997ರಲ್ಲಿ ನಿವೃತ್ತಿ ಹೊಂದಿರುವ ಇವರು ಜಿಲ್ಲಾ ಆಡಳಿತದಿಂದ ಉತ್ತಮ ಮುಖ್ಯ ಶಿಕ್ಷಕ ಪ್ರಶಸ್ತಿ ಹಾಗೂ ಕನ್ನಡ ರಾಜ್ಯೋತ್ಸವ ಪ್ರಶಸ್ತಿಯನ್ನು ಜಯರಾಂ ಪಡೆದಿರುತ್ತಾರೆ.

---



## ಕೆ. ಪ್ರಹ್ಲಾದರಾವ್

ಮಂಡ್ಯದ ಶ್ರೀ ಕೆ. ಪ್ರಹ್ಲಾದರಾವ್‌ರವರು ಬಿ. ಕೇಶವಮೂರ್ತಿರಾವ್ ಹಾಗೂ ಪದ್ಮಾವತಮ್ಮ ದಂಪತಿಗಳ ಸುಪುತ್ರರಾಗಿ 1933ರಲ್ಲಿ ಜನಿಸಿದರು.

ಬಾಲ್ಯದಿಂದಲೂ ರಂಗಕಲೆಯಲ್ಲಿ ಆಸಕ್ತಿ ವಹಿಸಿರುವ ಶ್ರೀಯುತರು ಮಂಡ್ಯದ ಮೇರು ವ್ಯಕ್ತಿ ಕೆ.ವಿ. ಶಂಕರಗೌಡರ ಒಡನಾಡಿಯಾಗಿ ಪಾದುಕಾ ಕಿರೀಟ, ದಾನಶೂರ ಕರ್ಣ ನಾಟಕಗಳಲ್ಲಿ ಅಭಿನಯ.

1954ರಲ್ಲಿ ಮಂಡ್ಯ ಡ್ರಮಾಟಿಕ್ ಅಸೋಸಿಯೇಷನ್ ಸ್ಥಾಪನೆ, ತೆಲುಗಿನ 'ಪಾಣಿಗ್ರಹಣ' ನಾಟಕವನ್ನು ಮಂಡ್ಯದ ತ್ಯಾಗರಾಜ್‌ರವರಿಂದ 'ಮದುವೆ ಮಾಡಿನೋಡಿ' ಎಂಬ ಹೆಸರಿನಿಂದ ಅನುವಾದಿಸಿ ಅಂದಿನ ಉಪರಾಷ್ಟ್ರಪತಿ ಡಾ. ಎಸ್. ರಾಧಾಕೃಷ್ಣನ್‌ರವರ ಸಮ್ಮುಖದಲ್ಲಿ ಅಭಿನಯಿಸಿದ್ದು, ಇವೆಲ್ಲ ಇವರ ರಂಗಭೂಮಿಯ ಮಹತ್ವದ ಸಾಧನೆಗಳು. ಮಕ್ಮಲ್ ಟೋಪಿ, ಬ್ಲಾಕ್ ಮಾರ್ಕೆಟ್, ಎಚ್ಚಮನಾಯಕ, ಅಳಿಯ ದೇವರು, ಉಂಡಾಡಿಗುಂಡ, ಹೋಂರೂಲ್, ಗಂಡಸ್ಲೋ ಗಂಡು ಇವರಿಗೆ ಹೆಸರು ತಂದುಕೊಟ್ಟ ನಾಟಕಗಳು.

ಕರ್ನಾಟಕ ಸಂಘದ ಆಡಿಯಲ್ಲಿ 'ಕುವೆಂಪು ಬಯಲು ರಂಗಮಂದಿರ' ನಿರ್ಮಾಣದಲ್ಲಿ ಸಕ್ರಿಯ ಪಾತ್ರ ವಹಿಸಿದ್ದು, ಹೀಗೆ ಶ್ರೀಯುತರು ಹಲವು ಕ್ಷೇತ್ರಗಳಲ್ಲಿ ಕೆಲಸ ನಿರ್ವಹಿಸಿ ಮಂಡ್ಯದ ಸಾಂಸ್ಕೃತಿಕ ನೇತಾರರಾಗಿದ್ದಾರೆ.

---



## ಹುಲಿವಾನ ರಾಮಲಿಂಗು

ಮಂಡ್ಯ ಜಿಲ್ಲೆಯ ಹುಲಿವಾನದ ಕೆಂಚಪ್ಪ ಹಾಗೂ ಮರಿಲಿಂಗಮ್ಮ ದಂಪತಿಗಳಿಗೆ 1947ರಲ್ಲಿ ಶ್ರೀ ರಾಮಲಿಂಗುರವರು ಜನಿಸಿದರು.

ಪ್ರಾಥಮಿಕ ಶಾಲೆಯಿಂದಲೇ ಬಣ್ಣದ ಗೀಳಿಗೆ ಅಂಟಿಕೊಂಡ ಇವರು, ಐದನೇ ತರಗತಿಯಲ್ಲಿ ಇದ್ದಾಗಲೇ ಬಾಲಕೃಷ್ಣನಾಗಿ ಅಭಿನಯಿಸುವ ಮೂಲಕ ರಂಗಕ್ಕೆ ಬಂದವರು.

'ಉಲ್ಲಾಳ' ನಾಟಕ ಸ್ಪರ್ಧೆಯಲ್ಲಿ 3 ಬಾರಿ ಶ್ರೇಷ್ಠ ನಟ ಪ್ರಶಸ್ತಿ ಗಳಿಸಿದ್ದು ಇವರ ಹೆಗ್ಗಳಿಕೆ. ನಟನೆಯ ಜೊತೆಗೆ ಬರಹದಲ್ಲಿ ತೊಡಗಿದ ರಾಮಲಿಂಗುರವರು ಬದುಕು, ಬದಲಾಗದವರು, ಬಲಿ, ಯಾರು ಹುಚ್ಚಕೋದೇವ, ದೌರ್ಜನ್ಯ, ನಾಯಿಮರಿಗಳ ನಡುವೆ, ತೋಳ ಬಂತು ತೋಳ, ನಾವೆಲ್ಲಾ ಒಂದೇ, ಅರಿವು, ಕನಸುಗಾರರು, ಬಸವನ ಬಾಳೆಮರ, ನನಗೆ ಬಿದ್ದ ಕನಸು, ಸ್ವರ್ಗ ಸೀಮೆಯ ಕನಸು, ಹಲವಾರು ನಾಟಕಗಳನ್ನು ಬರೆದಿದ್ದಾರೆ. ಕಲಾರಂಗ, ರಂಗಸಿರಿ, ಕರ್ನಾಟಕ ಕಲಾಸಂಘ, ಮಂಡ್ಯ ಕಲಾವಿದರು ಇವು ರಾಮಲಿಂಗುರವರು ಕಟ್ಟಿಬೆಳೆಸಿರುವ ಸಂಸ್ಥೆಗಳು.

ಪ್ರೌಢಶಾಲಾ ಅಧ್ಯಾಪಕರಾಗಿ ಸೇವೆಯಿಂದ ನಿವೃತ್ತರಾಗಿರುವ ಇವರು 30 ವರ್ಷಕ್ಕೂ ಹೆಚ್ಚು ವರ್ಷಗಳಿಂದ ರಂಗಭೂಮಿ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಬೆಳ್ಳಿ ನಟ, ರಂಗಸಾಮ್ರಾಟ, ರಂಗಸಿಂಹ, ಹೀಗೆ ಅಭಿಮಾನಿಗಳಿಂದ ಹಲವು ಬಿರುದುಗಳನ್ನು ಶ್ರೀಯುತರು ಪಡೆದಿದ್ದಾರೆ.



## ಕಿಕ್ಕೇರಿ ಕೆ.ಜಿ. ನಾರಾಯಣ

ಮಂಡ್ಯ ಜಿಲ್ಲೆ ಕೆ.ಆರ್. ಪೇಟೆ ತಾಲ್ಲೂಕಿನ ಕಿಕ್ಕೇರಿ ಗ್ರಾಮದಲ್ಲಿ ಶ್ರೀ ನಾರಾಯಣರವರು 8 ಮೇ 1948ರಲ್ಲಿ ಜನಿಸಿದರು. ಇವರ ತಂದೆ ಖ್ಯಾತ ಕಲಾವಿದರಾಗಿದ್ದ ಜಯರಾಯಶೆಟ್ಟರು.

ಇವರು ಗೆಳೆಯರನ್ನು ಒಟ್ಟುಗೂಡಿಸಿ 1965ರಲ್ಲಿ ಕಿಕ್ಕೇರಿಯಲ್ಲಿ 'ಕನ್ನಡ ಕಲಾ ಸಂಘ'ವನ್ನು ಕಟ್ಟಿ ನಾಟಕಗಳನ್ನು ಆಡತೊಡಗಿದರು. ರಣ ದುಂಧುಬಿ, ರಾಷ್ಟ್ರವೀರ, ಎಚ್ಚಮನಾಯಕ, ಟಿಪ್ಪುಸುಲ್ತಾನ್, ದೀಪಾವಳಿ, ಮೀನಿನ ಹೆಜ್ಜೆ, ಅಂಗುಲಿಮಾಲ, ಅಣ್ಣ-ತಂಗಿ, ಹೀಗೆ 35ಕ್ಕೂ ಹೆಚ್ಚು ನಾಟಕಗಳಲ್ಲಿ ನಟಿಸಿ ನಿರ್ದೇಶಿಸಿದ್ದಾರೆ.

ಮೈಸೂರು ವಿಶ್ವವಿದ್ಯಾನಿಲಯದ ಜಾನಪದ ವಸ್ತುಸಂಗ್ರಹಾಲಯದ ಸಾಕ್ಷ್ಯಚಿತ್ರ ತಯಾರಿಕೆಯಲ್ಲಿ ಡಾ. ಪಿ.ಪಿ. ನಾಗರಾಜ್ ಅರಸ್ ಅವರಿಗೆ ಸಹಕಾರ, ಶ್ರೀ ಗುಬ್ಬಿ ವೀರಣ್ಣ ರಂಗಪೀಠದ ಆಶ್ರಯದಲ್ಲಿ ಕರ್ನಾಟಕದ ವೃತ್ತಿರಂಗಭೂಮಿ 100 ವರ್ಷ ವಿಡಿಯೋ ಚಿತ್ರಣದಲ್ಲಿ ಎಚ್.ಕೆ. ಯೋಗಾನರಸಿಂಹರಿಗೆ ಸಹಕಾರ, ಹೀಗೆ ವಿವಿಧ ಕ್ಷೇತ್ರಗಳಲ್ಲಿ ಆಸಕ್ತಿ ಇವರದು.

ತಾಂತ್ರಿಕ ನಿರ್ದೇಶಕರಾಗಿ, ಸ್ಟೇಜ್ ಮ್ಯಾನೇಜರ್ ಆಗಿ, ಬೆಳಕು ತಜ್ಞರಾಗಿ, ಪ್ರಸಾಧನ ಹಾಗೂ ವಸ್ತ್ರವಿನ್ಯಾಸ, ಮುಖವಾಡ ತಯಾರಕರಾಗಿ ಕೆಲಸ ನಿರ್ವಹಣೆ ಮಾಡುತ್ತಿದ್ದಾರೆ. ಶ್ರೀಯುತರು ಮೈಸೂರಿನ ವಿ.ವಿ.ಯ ಲಲಿತಕಲಾ ಕಾಲೇಜಿನ ನಾಟಕ ವಿಭಾಗದಲ್ಲಿ ರಂಗತಜ್ಞರಾಗಿ ಸೇವೆ ಸಲ್ಲಿಸಿದ್ದಾರೆ.



## ಆರ್. ಜಯರಾಮ

ಮೈಸೂರಿನ ಶ್ರೀ ಆರ್. ಜಯರಾಮರವರ ತಂದೆ ಎಂ. ರಂಗಸ್ವಾಮಿ. ಇವರು 13 ಮೇ 1948ರಲ್ಲಿ ಜನಿಸಿದರು.

ನಾಟಕಕಾರ, ನಟ, ನಿರ್ದೇಶಕ, ಚಿತ್ರಸಾಹಿತಿ, ಪ್ರಸಾಧನ ಕಲಾವಿದ, ಬೆಳಕು ತಜ್ಞರಾಗಿ ಹೀಗೆ ಹಲವು ಕ್ಷೇತ್ರಗಳಲ್ಲಿ ಗುರುತಿಸಿಕೊಂಡಿರುವ ಶ್ರೀಯುತರು ಸಪ್ತ ವರ್ಷ, ಬೊಂಬೆ ಮನೆ, ಛತ್ರಪತಿ, ಶಿವಾಜಿ, ಸಂದಿಗ್ಧ, ದೌರ್ಜನ್ಯ, ನಕ್ಕರೆ ಬಾಳು ಸಕ್ಕರೆ, ಸಂಗೊಳ್ಳಿ ರಾಯಣ್ಣ, ಕಾಗದದ ದೋಣಿಗಳು, ಗದಾಯುದ್ಧ, ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ಛತ್ರಪತಿ ಶಿವಾಜಿ, ಕಾಶೀಯಾತ್ರೆ, ಕೆಲಸ ಖಾಲಿ ಇದೆ, ಮದುವೆ ಮಾರ್ಕೆಟ್, ಹುತ್ತದಲ್ಲಿ ಹುತ್ತ, ಹರಿದ್ರಾ ಕುಂಕುಮ, ವರದಕ್ಷಿಣೆ ಹೀಗೆ 60ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದಾರೆ.

ರಣಧೀರ ಕಂಠೀರವ, ದಾರಿ ಬದಲಿಸಿದಾಗ, ಕುರುಡು ಕಾಂಚಾಣ, ರಂಗಿದೊಡ್ಡಿ ರಾಮಾಯಣ, ನನ್ನ ನಿನ್ನ ನಡುವೆ, ಹೊತ್ತು ಮುಳುಗುವ ಮುನ್ನ ಮುಂತಾದ ನಾಟಕಗಳನ್ನು ನಿರ್ದೇಶಿಸಿದ್ದಾರೆ.

1968ರಲ್ಲೇ ಕಣಗಾಲ್ ಪುಟ್ಟಣ್ಣನವರಿಂದ ಚಿತ್ರರಂಗ ಪ್ರವೇಶಿಸಿದ ಇವರು ಹಲವು ಚಿತ್ರಗಳ ಸಹಾಯಕ ನಿರ್ದೇಶಕರಾಗಿ ದುಡಿದಿದ್ದಾರೆ. ಇವರ ಅನೇಕ ಸಣ್ಣಕತೆಗಳು ಕನ್ನಡದ ಹಲವು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ.

---



## ಪುಟ್ಟಯ್ಯ

ಪುಟ್ಟಯ್ಯನವರು ಮೈಸೂರಿನ ರಾಕಯ್ಯ ಮತ್ತು ಕೆಂಪಮ್ಮ ದಂಪತಿಗಳ ಪುತ್ರರಾಗಿ 4 ಏಪ್ರಿಲ್ 1950ರಲ್ಲಿ ಜನಿಸಿದರು.

6ನೇ ತರಗತಿಯನ್ನು ಓದಿರುವ ಇವರು ರಂಗಭೂಮಿಯ ಅತಿರಥರೊಡನೆ ಬೆಳೆದು ಅವರ ನಾಟಕಗಳಲ್ಲಿ ಕೆಲಸ ಮಾಡಿರುವುದು ಇವರ ರಂಗಶ್ರದ್ಧೆಯ ದ್ಯೋತಕ. ಸಂಗೀತವಾದ್ಯಗಳ ಅಂಗಡಿಯಲ್ಲಿ ವೃತ್ತಿಯನ್ನಾರಂಭಿಸಿದ ಇವರು ಕಲಿತದ್ದು ಹಾರ್ಮೋನಿಯಂ ಹಾಗೂ ಇತರ ವಾದ್ಯಗಳ ರಿಪೇರಿ.

ಅದೇ ವೇಳೆಯಲ್ಲಿ ಗುಬ್ಬಿ ಕಂಪನಿಯ ನಾಟಕಗಳಲ್ಲಿ ಆಸಕ್ತಿ ವಹಿಸಿದ್ದು, ಬದುಕಿಗಾಗಿ ನಾನಾ ವೃತ್ತಿಗಳನ್ನು ನಿರ್ವಹಿಸುತ್ತಲೇ ಕೊನೆಗೆ ತಮ್ಮದೇ ಆದ ಹಾರ್ಮೋನಿಯಂ ರಿಪೇರಿ ಪ್ರಾರಂಭಿಸಿದರು. ರಂಗಾಯಣದ ಜಯತೀರ್ಥ ಜೋಶಿಯವರ ಗಮನಕ್ಕೆ ಬಂದ ಇವರು ಜರ್ಮನ್ ನಿರ್ದೇಶಕರು ನಿರ್ದೇಶಿಸಿದ ನಾಟಕಕ್ಕೆ ಪಿಯಾನೋ ತಯಾರಿಸಿಕೊಟ್ಟು, ರಂಗಾಯಣದ ಕಲಾವಿದರಿಂದ ಮೆಚ್ಚುಗೆ ಪಡೆದ ಇವರು ಮುಂದೆ ರಂಗಾಯಣದಲ್ಲಿ ಬಡಗಿಯಾಗಿ ಅಲ್ಲಿಯ ಅನೇಕ ನಾಟಕಗಳಿಗೆ ರಂಗಮಂಚವನ್ನು ನಿರ್ವಹಿಸುವಲ್ಲಿ ದ್ವಾರಕನಾಥರವರ ಜೊತೆ ಕೆಲಸ ಮಾಡಿದ್ದಾರೆ. ಬಿ.ವಿ. ಕಾರಂತ, ರಘುನಂದನ, ಸಿ. ಬಸವಲಿಂಗಯ್ಯ, ಗಂಗಾಧರಸ್ವಾಮಿ, ಸಿ.ಜಿ.ಕೆ., ಎಂ.ಎಸ್. ಸತ್ಯು ಅಲ್ಲದೆ ದೇಶ-ವಿದೇಶದ ಖ್ಯಾತ ನಿರ್ದೇಶಕರುಗಳ ಜೊತೆ ಕೆಲಸ ಮಾಡಿರುವ ಅನುಭವ ಪುಟ್ಟಣ್ಣನವರದು.

---



## ಕೆ.ಎನ್. ಬಸವರಾಜ್

ಶ್ರೀ ಕೆ.ಎನ್. ಬಸವರಾಜುರವರು ಕೋಲಾರ ಜಿಲ್ಲೆ, ಬಂಗಾರಪೇಟೆ ತಾಲ್ಲೂಕು ಎಸ್. ಮಾದಮಂಗಲದ ಕೆ.ಆರ್. ನಾಗಲಿಂಗಪ್ಪ ಮತ್ತು ಬಸಮ್ಮ ದಂಪತಿಗಳ ಪುತ್ರರು. ಶ್ರೀಯುತರು ವಿದ್ಯಾಭ್ಯಾಸ ಮಾಡುತ್ತಿರುವಾಗಲೇ ಕಲೆಯ ಗೀಳು ಹತ್ತಿಸಿಕೊಂಡವರು. ಎಂ.ಎನ್. ಗಂಗಾಧರರಾಯರ ಜೊತೆ ಕೃಷ್ಣಲೀಲಾ ನಾಟಕದಲ್ಲಿ ಬಾಲನಟರಾಗಿ ಅಭಿನಯಿಸುವುದರ ಮೂಲಕ ರಂಗಕ್ಕೆ ಬಂದವರು.

1945ರಲ್ಲಿ ಗುಬ್ಬಿ ಕಂಪನಿ ಸೇರಿ ಸಣ್ಣಪುಟ್ಟ ಪಾತ್ರಗಳ ಮೂಲಕ ಬೆಳಕಿಗೆ ಬಂದವರು. ಮುಂದೆ ಮುಖ್ಯ ಪಾತ್ರಗಳಿಗೆ ಬಡ್ತಿ ಹೊಂದಿ ಜಮಖಂಡಿಯ ಗಜಾನನ ನಾಟಕ ಮಂಡಳಿ, ಹೊನ್ನಪ್ಪ ಭಾಗವತರ ಶ್ರೀ ಉಮಾಮಹೇಶ್ವರ ಕೃಪಾಪೋಷಿತ ನಾಟಕ ಮಂಡಳಿ, ಲಲಿತ ಕಲಾ ನಾಟಕ ಮಂಡಳಿ, ಶ್ರೀ ಕನ್ನಡ ಥಿಯೇಟರ್ಸ್‌ಗಳಲ್ಲಿ ಹಲವಾರು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಮನೆ ತುಂಬಿದ ಸೊಸೆ, ಬಾಳಸಂಗಾತಿ, ಇವಳೆ ನನ್ನವಳು, ಪ್ರೇಮಾನುರಾಗ, ಗರತಿ ಗಂಗವ್ವ, ಸಮಾಜ ದುರಂತ, ಅನುಭವ ಮಂಟಪ ಹೀಗೆ ಹತ್ತಾರು ನಾಟಕಗಳನ್ನು ರಚಿಸಿ ತಮ್ಮ ಶ್ರೀ ಕನ್ನಡಾಂಬೆ ಕಲಾಥಿಯೇಟರ್ಸ್ ಸಂಸ್ಥೆಯಿಂದ ರಂಗದ ಮೇಲೆ ತಂದವರು. ತಮ್ಮ 76ರ ಇಳಿವಯಸ್ಸಿನಲ್ಲಿಯೂ ರಂಗಭೂಮಿಯಲ್ಲಿ ಶ್ರೀಯುತರು ಸಕ್ರಿಯವಾಗಿದ್ದಾರೆ.



## ಮೋಹನ್ ದಾಸ್

ಮೈಸೂರಿನ ಕೃಷ್ಣದಾಸ್ ಹಾಗೂ ಜಯದೇವಿ ದಂಪತಿಗಳ ಸುಪುತ್ರರಾಗಿ 19 ಅಕ್ಟೋಬರ್ 1939ರಲ್ಲಿ ಜನಿಸಿದ ಶ್ರೀ ಮೋಹನ್‌ದಾಸ್‌ರವರ ಮನೆ ಮಾತು ಸಿಂಧಿ. ಶಾಲಾದಿನಗಳಲ್ಲೆ ರೂಪಾಯಿ ಗಿಡ ನಾಟಕದ ಆದಿಮೂಲಾ ಪಾತ್ರ ವಹಿಸುವುದರ ಮೂಲಕ ರಂಗಕ್ಕೆ ಇವರು ಪಾದಾರ್ಪಣ ಮಾಡಿದರು.

ಅರವಿಂದ ಪರಿಮಳ ವರ್ಕ್ಸ್‌ನ ರಾಮತೀರ್ಥರ ಗರಡಿಯಲ್ಲಿ ಪಳಗಿದ ಇವರು 1962ರಲ್ಲಿ ಸಿಎಫ್‌ಟಿಆರ್‌ಐಗೆ ನೌಕರಿಗೆ ಸೇರಿದ ನಂತರ ಖ್ಯಾತ ಕಲಾವಿದ ಸಂಪತ್‌ರವರ ತೆಕ್ಕೆಗೆ ಬಿದ್ದು, ಅವರು ನಿರ್ದೇಶಿಸಿದ ರಣಹದ್ದು, ಸುಂದೋಪಸುಂದು, ವಿಗಡ ವಿಕ್ರಮರಾಯ, ಅಹಾಥಭೂತಿ ನಾಟಕಗಳಲ್ಲಿ ಮುಖ್ಯಪಾತ್ರಗಳನ್ನು ನಿರ್ವಹಿಸಿದರು.

1963ರಲ್ಲಿ ಗೆಳೆಯರ ಜೊತೆಗೂಡಿ ಬಾಸ್ಕರ್ ಮಿತ್ರಮಂಡಳಿ ಸ್ಥಾಪಿಸಿ, ಸರಸು ಮದುವೆ, ಸಮಾಜ ಸುಧಾರಕ, ಹರಿದ್ರಾ ಕುಂಕುಮ, ಗುಂಡನ ಮದುವೆ, ಮಾಂಗಲ್ಯ ಭಾಗ್ಯ ಮುಂತಾದ ನಾಟಕಗಳನ್ನು ರಂಗಕ್ಕೆ ತರುವಲ್ಲಿ ಮುಖ್ಯಪಾತ್ರ ವಹಿಸಿದರು. ಚಲನಚಿತ್ರರಂಗದ ದಿಗ್ಗಜರಾದ ಉದಯಕುಮಾರ್, ನರಸಿಂಹರಾಜು, ಬಾಲಕೃಷ್ಣ, ಎಂ.ಪಿ. ಶಂಕರ್, ಸುಂದರಕೃಷ್ಣ ಅರಸ್, ತೂಗದೀಪ ಶ್ರೀನಿವಾಸ ಇವರುಗಳ ಜೊತೆ ಒಡನಾಟವಿದ್ದು ಇವರು ಮಂಜಿನ ತೆರೆ, ಅಂಜದಗಂಡು, ಧರ್ಮಪತ್ನಿ, ಸಿನಿಮಾಗಳಲ್ಲೂ ಅಭಿನಯಿಸಿದ್ದಾರೆ. ತಮ್ಮ 68ರ ವಯಸ್ಸಿನಲ್ಲಿಯೂ ಶ್ರೀಯುತರು ರಂಗಭೂಮಿಯಲ್ಲಿ ಸಕ್ರಿಯವಾಗಿದ್ದಾರೆ.



## ಬಿ.ಜಿ. ರಾವ್

ಮೈಸೂರಿನ ಶ್ರೀ ಬಿ.ಜಿ. ರಾವ್‌ರವರು ಬಾಪುರಾವ್ ಖಾನ್ವಿಲ್ಕರ್ ಮತ್ತು ಶಾಬಾಬಾಯಿಯವರ ಪುತ್ರರಾಗಿ 3 ಆಗಸ್ಟ್ 1934ರಲ್ಲಿ ಜನಿಸಿದರು. ತಮ್ಮ ಬಾಲ್ಯದಲ್ಲಿಯೇ 1947ರಲ್ಲಿ ವಾಲ್ಮೀಕಿ ನಾಟಕದಲ್ಲಿ ನಟಿಸುವುದರ ಮೂಲಕ ರಂಗಪ್ರವೇಶಿಸಿದರು. ಮೈಸೂರಿನ ಕೆ.ಆರ್. ಮಿಲ್ಸ್‌ನಲ್ಲಿ ನೌಕರರಾಗಿದ್ದುಕೊಂಡು ರಂಗಭೂಮಿಯನ್ನು ಹವ್ಯಾಸವಾಗಿಸಿಕೊಂಡರು. ಟಿಪ್ಪುಸುಲ್ತಾನ್, ಛತ್ರಪತಿ ಶಿವಾಜಿ, ರಾಜಾ ಕೆಂಪೇಗೌಡ, ಎಚ್ಚಮನಾಯಕ, ಛಲದಂಕಮಲ್ಲ ಹಾಗೂ ಸಾಮ್ರಾಟ್ ಸುಯೋಧನ ಇಂತಹ ಐತಿಹಾಸಿಕ ಮತ್ತು ಪೌರಾಣಿಕ ಪಾತ್ರದಲ್ಲಿ ಅಭಿನಯಿಸುತ್ತಿದ್ದ ಇವರಿಗೆ ರಾಣಿ ಚೆನ್ನಮ್ಮನ ಭಂಟ ರಾಯಣ್ಣ ಪಾತ್ರ ಅಪಾರವಾದ ಹೆಸರು ತಂದುಕೊಟ್ಟಿದೆ. ಧರ್ಮರತ್ನಾಕರ, ಮಕ್ಮಲ್ ಟೋಪಿ, ವರದಕ್ಷಿಣೆ, ಶಂಖವಾದ್ಯ, ಕುರುಕ್ಷೇತ್ರ, ರಾಜಸೂಯಯಾಗ ಹೀಗೆ ಮುಂತಾದ ಪೌರಾಣಿಕ ಐತಿಹಾಸಿಕ ಮತ್ತು ಸಾಮಾಜಿಕ ನಾಟಕಗಳಲ್ಲೂ ಇವರು ಅಭಿನಯಿಸಿದ್ದಾರೆ. 1981ರಲ್ಲಿ ಶ್ರೀಯುತರು ಅಹಲ್ಯಾ ಕೃಪಾಪೋಷಿತ ನಾಟಕ ಮಂಡಳಿಯನ್ನು ಕಟ್ಟಿ ಅನೇಕ ನಾಟಕಗಳನ್ನು ರಂಗಕ್ಕೆ ತಂದಿದ್ದಾರೆ. ತಮ್ಮ 70ರ ವಯಸ್ಸಿನಲ್ಲೂ ರಂಗಭೂಮಿಯಲ್ಲಿ ಸಕ್ರಿಯವಾಗಿದ್ದಾರೆ.



## ವಿಜಯಾ ಸಿಂಧುವಳ್ಳಿ

ಮೈಸೂರಿನ ಕುವೆಂಪುನಗರದ ಚಿತ್ರಭಾನು ರಸ್ತೆಯಲ್ಲಿರುವ 'ಸುರುಚಿ ರಂಗಮನೆ' ಡಾ॥ ಸಿಂಧುವಳ್ಳಿ ಅನಂತಮೂರ್ತಿಯವರ ಕನಸು. ಇಲ್ಲಿರುವ ಕಲಾತಂಡವೇ ಕಲಾಸುರುಚಿ. 1984ರಿಂದ ನಿರಂತರವಾಗಿ ರಂಗಭೂಮಿ ಹಾಗೂ ಇತರ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರ ಬಿಂದು. ಪ್ರಯೋಗಶೀಲತೆ, ನಾವಿನ್ಯ ಮತ್ತು ವೈವಿಧ್ಯಗಳ ಸಂಗಮ ಕಲಾಸುರುಚಿ, ಇವೆಲ್ಲ ಸಿಂಧುವಳ್ಳಿ ದಂಪತಿಗಳು ಪಟ್ಟ ಶ್ರಮದ ಫಲ. ಡಾ. ಸಿಂಧುವಳ್ಳಿ ಅನಂತಮೂರ್ತಿಯವರ ಕಾಲಾನಂತರ (1998) ಪತಿಯ ಉಸಿರಾದ ರಂಗಚಟುವಟಿಕೆಗಳನ್ನು ಮುಂದುವರಿಸಿಕೊಂಡು ಅವರ ಹೆಜ್ಜೆಯ ಜಾಡಿನಲ್ಲಿಯೇ ಶ್ರೀಮತಿ ವಿಜಯಾ ಸಿಂಧುವಳ್ಳಿಯವರು ಕಲಾಸುರುಚಿಯನ್ನು ಬಹಳ ಶ್ರದ್ಧೆಯಿಂದ, ರಂಗಪ್ರೀತಿಯಿಂದ ಮುನ್ನಡೆಸಿದ್ದಾರೆ. ವಂಶವೃಕ್ಷ, ಸದಾರಮೆ, ವಿಗಡ ವಿಕ್ರಮರಾಯ, ಬೆರಳ್‌ಗೆ ಕೊರಳ್, ತಲೆದಂಡ, ಮನವೆಂಬ ಮರ್ಕಟ, ಹದ್ದುಮೀರಿದ ಹಾದಿ, ಸುಳ್ಳಾಗಿ ಕಾದಿತ್ತು ನೋಡ ಹೀಗೆ ಹಲವಾರು ಕಾರ್ಯಕ್ರಮಗಳು ಇಲ್ಲಿ ನಡೆದಿವೆ. ಇಂತಹ ಸಂಸ್ಥೆಯ ಹೊಣೆಯೊತ್ತು ಜವಾಬ್ದಾರಿಯುತ ರಂಗಕಾಯಕ ನಡೆಸುತ್ತಾ ಬಂದಿರುವ ವಿಜಯಾರವರು ಅಭಿನಂದನಾರ್ಹರು.



## ಶ್ರೀನಿವಾಸ ಭಟ್ (ಚೀನಿ)

ಶ್ರೀನಿವಾಸ ಭಟ್‌ರವರು ಉಡುಪಿಯ ತಬಲಾ ದಾಸ್‌ಭಟ್ ಮತ್ತು ಗಿರಿಜಾ ದಂಪತಿಗಳ ಸುಪುತ್ರರು. ಕಲೆ ಹಾಗೂ ಸಂಗೀತಾ ಇವರಿಗೆ ವಂಶಪಾರಂಪರ್ಯವಾಗಿ ಒಲಿದು ಬಂದಿದ್ದು ಇವರು ಗಿಟಾರ್ ನುಡಿಸುವುದರಲ್ಲಿ ವಿಶೇಷ ಪರಿಣಿತರಾಗಿರುವವರು. ಇವರು ತಬಲಾ, ಹಾರ್ಮೋನಿಯಂ, ಕೀಬೋರ್ಡ್, ಡ್ರಂ, ಮೆಂಡೋಲಿನ್, ಕಾಂಗೋ ಡ್ರಂ ಮುಂತಾದ ವಾದ್ಯಗಳನ್ನು ಯಾವುದೇ ಗುರುವಿನ ಆಶ್ರಯವಿಲ್ಲದೆ ಕಲಿತವರು. 'ಚೀನಿ ಮೇಲೋಡಿಸ್'

ಎನ್ನುವ ಸಂಘ ಕಟ್ಟಿ ಸಂಗೀತ ಕಾರ್ಯಕ್ರಮಗಳನ್ನು ನೀಡಿ ಗಿಟಾರ್ ಚೀನಿ ಎಂದೇ ಖ್ಯಾತರಾದವರು. ಕೆ.ವಿ. ಅಕ್ಷರರವರು ಉಡುಪಿಯ ರಥಬೀದಿ ಗೆಳೆಯರು ತಂಡಕ್ಕೆ ಬೇಕಾಬಿಟ್ಟಿ ಸಂಗೀತ ನಾಟಕಗಳನ್ನು ನಿರ್ದೇಶಿಸುವಾಗ ಚೀನಿಯವರು ಹವ್ಯಾಸಿ ರಂಗ ಪ್ರವೇಶಿಸಿದರು. ನಂತರ ನೀನಾಸಂನ ತಿರುಗಾಟದ ಹಲವಾರು ನಾಟಕಗಳಿಗೆ ಕಾರಂತರು ಸಂಯೋಜಿಸುವಾಗ ಚೀನಿ ಅವರ ಬಲಗೈಯಾದರು. ಕಾರಂತರು ಮುಂದೆ ಇವರನ್ನು ರಂಗಾಯಣಕ್ಕೂ ಆಹ್ವಾನಿಸಿ ಸಂಗೀತ ಶಿಕ್ಷಕರಾಗಿ, ಸಂಗೀತ ಸಂಯೋಜಕ ಹುದ್ದೆ ನೀಡಿದರು. ತ್ರಿಪೆನ್ನಿ ಆಪೇರಾ, ಟೆಂಪಸ್ಟ್, ಹದ್ದು ಮೀರಿದ ಹಾದಿ, ಕಿರಗೂರಿನ ಗಯ್ಯಾಳಿಗಳು, ಮ್ಯಾಕ್‌ಬೆತ್, ಹೂ ಹುಡುಗಿ, ಭೂಮಿಗೀತ, ಎತ್ತ ಹಾರುತಿದೆ ಹಂಸ ಹೀಗೆ ಹಲವಾರು ನಾಟಕಗಳಿಗೆ ಸಂಗೀತ ನೀಡಿದ್ದಾರೆ. ಪ್ರಸ್ತುತ ರಂಗಾಯಣದಲ್ಲಿ ಕಳೆದ 18 ವರ್ಷಗಳಿಂದಲೂ ಸಂಗೀತ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

---



## ಸಿ.ವಿ. ಶ್ರೀಧರಮೂರ್ತಿ

ಶ್ರೀ ಸಿ.ವಿ. ಶ್ರೀಧರಮೂರ್ತಿಯವರು 3ನೇ ನವೆಂಬರ್ 1953ರಲ್ಲಿ ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿಯ ವೆಂಕಟರಾಮಯ್ಯ ಮತ್ತು ಜಾನಕಮ್ಮ ದಂಪತಿಗಳ ಪುತ್ರರಾಗಿ ಜನಿಸಿದರು. ತಮ್ಮ 6ನೇ ವಯಸ್ಸಿನಲ್ಲಿಯೇ ಶ್ರೀಧರಮೂರ್ತಿಯವರು ಘಟೋತ್ಕಜನ ವೇಷ ಹಾಕಿ ಜನಮೆಚ್ಚುಗೆ ಪಡೆದರು. ಏಕಪಾತ್ರಾಭಿನಯ, ಮೂಕಾಭಿನಯ, ಸ್ತಬ್ಧ ಚಿತ್ರ ಕಲಾವಿದನಾಗಿ ಹೆಸರು ಗಳಿಸಿದ ಇವರು, ಗಂಡುಕೊಡಲಿ, ನರಕದ ನ್ಯಾಯ, ಸ್ಮಶಾನ ಕುರುಕ್ಷೇತ್ರ, ಪರಶುರಾಮ, ಯಮ, ದುರ್ಯೋಧನ ಪಾತ್ರಗಳಲ್ಲಿ ನಟಿಸಿ ಅನೇಕ ಬಹುಮಾನಗಳನ್ನು ತಮ್ಮದಾಗಿಸಿಕೊಂಡರು. ನಾಟಕಶಾಸ್ತ್ರದ ಡಿಪ್ಲೋಮಾ ಮಾಡಲು ಲಲಿತಕಲಾ ಕಾಲೇಜು ಸೇರಿದಾಗ ಸಿಂಧುವಳ್ಳಿ ಅನಂತಮೂರ್ತಿಯವರ ಪರಿಚಯವಾಗಿ 'ಸಮತೆಂತೋ' ನಾಟಕಗಳಲ್ಲಿ ಅಭಿನಯಿಸತೊಡಗಿದ್ದು ಇವರ ರಂಗಜೀವನಕ್ಕೊಂದು ಹೊಸ ತಿರುವು. ವಂಶವೃಕ್ಷ, ಹುಯ್ಯಲೇ ಡಂಗೂರವ, ಸದಾರಮೆ, ತಲೆದಂಡ, ವಿಗಡ ವಿಕ್ರಮರಾಯ, ಬೆರಳ್ಗೆ ಕೊರಳ್, ಮೃಚ್ಛಕಟಿಕ, ಇವು 'ಸುರುಚಿ' ರಂಗಮನೆಯಲ್ಲಿ ಅಭಿನಯಿಸಿದ ನಾಟಕಗಳು. ಮೈಸೂರಿನ ಅಮರ ಕಲಾಸಂಘ, ಕದಂಬ ರಂಗವೇದಿಕೆ, ಕಲಾಪ್ರಿಯ ತಂಡದ ನಾಟಕಗಳಲ್ಲೂ ಅಭಿನಯಿಸುತ್ತಾ ರಂಗಭೂಮಿಯಲ್ಲಿ ಸಕ್ರಿಯವಾಗಿದ್ದಾರೆ.

---



## ಬಿ. ಬಸವರಾಜ

ಸಿಂದನೂರಿನ ಕೋಟೆಯಲ್ಲಿ ಅಮರಯ್ಯನವರ ಪುತ್ರರಾಗಿ 1961ರಲ್ಲಿ ಜನಿಸಿದ ಇವರು ಬಿ.ಎ., ಬಿ.ಎಡ್. ಪದವಿ ಗಳಿಸಿ ರಂಗಶಿಕ್ಷಕರಾಗಿ ಉದ್ಯೋಗದಲ್ಲಿದ್ದಾರೆ. ಶ್ರೀಯುತರು 1980ರಿಂದ ರಾಯಚೂರಿನ ಸಮುದಾಯ ಸಂಘಟನೆಯಲ್ಲಿ ಕಾರ್ಯದರ್ಶಿಯಾಗಿ, ಸಂಘಟನಾ ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಾ ನಟರಾಗಿ, ನಿರ್ದೇಶಕರಾಗಿ, ಪ್ರಸಾದನ, ರಂಗಸಜ್ಜಿಕೆ ನಿರ್ಮಾಣಗಳಲ್ಲಿಯೂ ತಮ್ಮ ಪ್ರೌಢಿಮೆಯನ್ನು ಮೆರೆದಿದ್ದಾರೆ. ಇವರು ಕುರಿ ಮತ್ತು ಕತ್ತಲ ರಾಜ್ಯ, ಉದ್ಧವ, ತದ್ರೂಪಿ, ಚೋರಚರಣ ದಾಸ, ಪೋಸ್ಟರ್, ಸಂಕ್ರಾಂತಿ, ದಫನ್, ತಬರನ ಕಥೆ, ಪಂಚಮ, ರಕ್ತರಾತ್ರಿ, ಅಂಧೇರಿ ನಗರಿ ಚೌಪಟ್ ರಾಜ, ಭೂತ ನಾಟಕಗಳಲ್ಲಿ ಎಸ್. ಮಾಲತಿ, ಬಿ. ಬಸವಲಿಂಗಯ್ಯ, ಸುರೇಶ್ ಆನಗಳ್ಳಿ, ಗಂಗಾಧರಸ್ವಾಮಿ, ಸಿ.ಎಸ್. ಹಿರೇಮಠ, ಬಸವರಾಜ ಕೊಡಗೆ, ವಾದಿರಾಜ ಕಂಪಲಿಯವರ ನಿರ್ದೇಶನದಲ್ಲಿ ನಟಿಸಿದ್ದಾರೆ.

ಸ್ವತಃ ಇವರೇ ಭಗತ್‌ಸಿಂಗ್, ಸತ್ಯಾಗ್ರಹ, ಶರಣರು ಕಂಡ ಬಸವಣ್ಣ ಹೀಗೆ ಹಲವಾರು ನಾಟಕಗಳನ್ನು ನಿರ್ದೇಶಿಸಿದ್ದಾರೆ. ಸಾಕ್ಷರತಾ ಕಲಾಜಾಥಾ, ಭಾರತ್ ಜ್ಞಾನವಿಜ್ಞಾನ ಕಲಾಜಾಥಾ, ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ ಕಲಾಜಾಥಾಗಳಲ್ಲಿ ದುಡಿದಿರುವ ಇವರು ಸುಮಾರು 25 ವರ್ಷಗಳಿಂದ ರಂಗಭೂಮಿಯಲ್ಲಿ ಸಕ್ರಿಯವಾಗಿದ್ದಾರೆ.

---



## ಬಸವರಾಜ ಪತ್ರಪ್ಪ ಯಮ್ಮಿ

ಶ್ರೀ ಪತ್ರಪ್ಪಾ ಯಮ್ಮಿಯವರು ಬೆಳಗಾಂ ಜಿಲ್ಲೆಯ ಗಿರಿಯಾಲದಲ್ಲಿ 1922ರಲ್ಲಿ ಜನಿಸಿದರು. ಮುಂದೆ ಇವರು ತಾಯಿಯ ತವರೂರಾದ ಯರಗಾಡಕ್ಕೆ ಬಂದು ನೆಲೆಸಿದರು. 'ಉಡತಡಿ ಮಹಾದೇವಿ' ದೊಡ್ಡಾಟದಲ್ಲಿ 'ಮಹಾದೇವಿ' ಪಾತ್ರ ವಹಿಸುವುದರ ಮೂಲಕ ರಂಗಪ್ರವೇಶ ಮಾಡಿದರು. ನಂತರ ಶ್ರೀ ಏಣಗಿ ಬಾಳಪ್ಪನವರ ಕಂಪನಿ 'ಕಲಾವೈಭವ ನಾಟ್ಯ ಸಂಘ'ದ ಪಠಾಣಿಪಾಶ, ಜಹಗೀರದಾರ ಮುಂತಾದ ನಾಟಕಗಳಲ್ಲಿ ಅಭಿನಯಿಸಿದರು.

ತದನಂತರ ಗುಬ್ಬಿ ಕಂಪನಿ, ಸುಬ್ಬಯ್ಯನಾಯ್ಡು ಕಂಪನಿ, ಮಹಾದೇವಸ್ವಾಮಿ ಕಂಪನಿ, ಕೆ. ಹಿರಣ್ಣಯ್ಯನವರ ಕಂಪನಿ, ಮರಾಠಿ ಕಂಪನಿಗಳಾದ ಶ್ರೀ ಸವಾಯಿ ಗಂಧರ್ವ ಮತ್ತು ಬಾಲಗಂಧರ್ವ ಕಂಪನಿಗಳಲ್ಲಿ ಬಹಳಷ್ಟು ವರ್ಷ ಸೇವೆ ಸಲ್ಲಿಸಿದರು. ನಂತರ ಇವರು 1955ರಲ್ಲಿ ಶ್ರೀ ಗುರುಸಿದ್ಧೇಶ್ವರ ನಾಟ್ಯಸಂಘ ಚೆನ್ನಮ್ಮನ ಚಿತ್ತೂರು ಎಂಬ ನಾಟಕ ಸಂಸ್ಥೆ ಕಟ್ಟಿ 1939ರವರೆಗೂ ಬಹಳ ಅದ್ದೂರಿಯಾಗಿ ಕಂಪನಿ ನಡೆಸಿದರು. ರಾಯಚೂರು, ಬಳ್ಳಾರಿ ಜಿಲ್ಲೆ, ಅದೋನಿ ತಾಲ್ಲೂಕುಗಳಲ್ಲಿ ಸುತ್ತಾಡಿ ಅಲ್ಲಿಯ ಹವ್ಯಾಸಿ ತಂಡಗಳಿಗೆ ನಾಟಕ ನಿರ್ದೇಶನ ಮಾಡುತ್ತಾ ಅದನ್ನೇ ತಮ್ಮ ಬದುಕಿನ ದಾರಿಯಾಗಿಸಿಕೊಂಡಿದ್ದಾರೆ.

---



## ಕೆ.ಬಿ. ಕಪನೀಗೌಡ

ನಾಗಮಂಗಲ ತಾಲ್ಲೂಕು ಆಯಿತನಹಳ್ಳಿಯ ಶ್ರೀ ಬಸವೇಗೌಡ ಹಾಗೂ ಶ್ರೀಮತಿ ನಂಜಮ್ಮ ದಂಪತಿಗಳ ಸುಪುತ್ರರಾದ ಶ್ರೀ ಕೆ.ಬಿ. ಕಪನೀಗೌಡರು ಮಂಡ್ಯ ತಾಲ್ಲೂಕು ಬಸರಾಳುವಿನಲ್ಲಿ 1944ರಲ್ಲಿ ಜನಿಸಿದರು.

ವೃತ್ತಿಯನ್ನರಸಿ ಭದ್ರಾವತಿ ಸೇರಿದ ಇವರು ವಿಕಸಂ ಹಾಗೂ ಶ್ರೀ ರಾಮಸೇವಾ ನಾಟಕ ಮಂಡಲಿಯ ಕೆ.ಬಿ. ಶೇಷಪ್ಪ, ಬೀಸಯ್ಯ, ಎಸ್. ಮರಿನಂಜಯ್ಯ ಹಾಗೂ ಟಿ. ಹೊನ್ನೇಗೌಡ, ಎಸ್. ರಾಮಮೂರ್ತಿಯವರ ಸಹಯೋಗದಿಂದ 1962ರಲ್ಲಿ ದಶಾವತಾರ ನಾಟಕದಲ್ಲಿ ಪಾತ್ರವಹಿಸುವುದರ ಮೂಲಕ ರಂಗಕ್ಕೆ ಪಾದಾರ್ಪಣೆ ಮಾಡಿದರು. ದಶಾವತಾರ, ಸದಾರಮೆ, ರಕ್ತರಾತ್ರಿ, ಟಿಪ್ಪುಸುಲ್ತಾನ್, ಶನಿಮಹಾತ್ಮೆ, ವರಭ್ರಷ್ಟ ಸುಯೋಧನ, ಎಚ್ಚಮ ನಾಯಕ, ರಣದುಂದುಭಿ, ಸಮರವೀರ, ಶಿವಪ್ಪನಾಯಕ ಹೀಗೆ ಪೌರಾಣಿಕ ಮತ್ತು ಐತಿಹಾಸಿಕ ನಾಟಕಗಳಲ್ಲಿ ಅಭಿನಯಿಸಿದ್ದು ಅಲ್ಲದೆ ಹಯವದನ, ಸಾಕ್ಷಿಕಲ್ಲು, ಬೆಳ್ಳಕ್ಕಿ ಹಿಂಡು ಬೆದರ್ಯಾವೋ, ಹಿಟ್ಟಿನ ಹುಂಜ, ಒಡಲಾಳ, ಪುಟ್ಟಕ್ಕನ ಮೆಡಿಕಲ್ ಕಾಲೇಜ್, ಮೃಚ್ಛಕಟಿಕ, ನಾಗಮಂಡಲ ಇಂತಹ ಆಧುನಿಕ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಅಲ್ಲದೆ ಆಕಾಶವಾಣಿಯ ಸುಮಾರು 30 ನಾಟಕಗಳಲ್ಲಿ ಅಭಿನಯಿಸಿರುವ ಇವರು 40 ವರ್ಷದಿಂದಲೂ ರಂಗಭೂಮಿಯಲ್ಲಿ ದುಡಿಯುತ್ತಾ ಬಂದಿದ್ದಾರೆ.

---



## ಕಾಗೋಡು ಅಣ್ಣಪ್ಪ

ಶ್ರೀ ಕಾಗೋಡು ಅಣ್ಣಪ್ಪನವರು ರಂಗಭೂಮಿ, ಜಾನಪದ, ಸಾಮಾಜಿಕ ಹೋರಾಟ ಹೀಗೆ ಹಲವು ಕ್ಷೇತ್ರಗಳಲ್ಲಿ ಗುರುತಿಸಿಕೊಂಡಿರುವ ಅಪರೂಪದ ಕರ್ನಾಟಕದ ಸಾಂಸ್ಕೃತಿಕ ನೇತಾರ. ಮೂಡಲಪಾಯದ ಇಂದ್ರಜಿತ್ ಕಾಳಗ, ಕರ್ಣಾರ್ಜುನರ ಕಾಳಗ ಹಾಗೂ ರಾವಣ ಸಂಹಾರ ಬಯಲಾಟಗಳನ್ನು 'ಗ್ರಾಮೀಣ ಪರ್ಯಟನೆ' ತಿರುಗಾಟದಡಿಯಲ್ಲಿ 1973ರಿಂದ 1975ರ ವರೆಗೆ ಹಳ್ಳಿಹಳ್ಳಿಗೆ ನಾಡಿನ ಜಾನಪದ ಸೊಗಡನ್ನು ಹರಡಿದವರು. ಮ್ಯಾಂಚೆಸ್ಟರ್, ಇಂಗ್ಲೆಂಡ್, ಹ್ಯೂಸ್ಟನ್, ಟೆಕ್ಸಾಸ್ ಹೀಗೆ ವಿಶ್ವದ ನಾನಾಭಾಗಗಳಲ್ಲಿ ಕರ್ನಾಟಕದ ಗಂಡುಕಲೆ 'ಡೊಳ್ಳು ಕುಣಿತ'ವನ್ನು ಕೊಂಡೊಯ್ದುವರು. ಶ್ರೀ ಕಾಗೋಡು ತಿಮ್ಮಪ್ಪ ರಂಗಮಂದಿರದ ನಿರ್ಮಾಣ ಮಾಡಿ, ಗ್ರಂಥಭಂಡಾರ, ರಂಗಭೂಮಿ ಅಧ್ಯಯನ, ಬುಡಕಟ್ಟು ಸಂಸ್ಕೃತಿ ಅಧ್ಯಯನ ಹೀಗೆ ಹತ್ತಾರು ಕೆಲಸಗಳಿಗೆ ರಂಗಮಂದಿರವನ್ನು ಮೀಸಲಿಟ್ಟು ಹಲವಾರು ಚಟುವಟಿಕೆಗಳಿಗೆ ಸ್ಫೂರ್ತಿಯಾದವರು. ಇದೆಲ್ಲದರ ನಡುವೆ ತುಘಲಕ್, ಅಂಗುಲಿಮಾಲ, ಶೋಕಚಕ್ರ, ಹರಿ ಜನಿವಾರ, ಜೋಕುಮಾರಸ್ವಾಮಿ, ನಾಯಿಕತೆ, ಬೆತ್ತಲೆಸೇವೆ ನಾಟಕಗಳಲ್ಲಿ ಅಭಿನಯಿಸಿ ರಂಗದ ಮೇಲೂ ಮಿಂಚಿದವರು.

---



## ಜೆ.ಆರ್. ಕಲ್ಲಪ್ಪ ಹೊಸಮನೆ

ಶ್ರೀ ಜೆ.ಆರ್. ಕಲ್ಲಪ್ಪ ಹೊಸಮನೆಯವರು ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕಿನ ಜಯಚಾಮರಾಜಪುರ ಗ್ರಾಮದ ಹೊಸಮನೆ ರಂಗಪ್ಪ ಹಾಗೂ ದೇವೀರಮ್ಮ ದಂಪತಿಗಳ ಹಿರಿಯ ಪುತ್ರರಾಗಿ 1943ರಲ್ಲಿ ಜನಿಸಿದರು. ವೃತ್ತಿಯಲ್ಲಿ ವ್ಯವಸಾಯಗಾರರಾಗಿರುವ ಇವರು ನಾಟಕ, ಸಂಗೀತ, ಜಾನಪದಗಳನ್ನು ತಮ್ಮ ಪ್ರವೃತ್ತಿಯನ್ನಾಗಿಸಿಕೊಂಡಿದ್ದಾರೆ. 1970ರಲ್ಲಿ ತಮ್ಮ ಗ್ರಾಮದವರ ಸಹಕಾರದಿಂದ ಶ್ರೀ ಹಿರೇಕಲ್ ಬೆಟ್ಟದ ಸಿದ್ಧೇಶ್ವರ ಕಲಾಸಂಘವನ್ನು ಸ್ಥಾಪಿಸಿ ಆ ಮೂಲಕ ತಮ್ಮ ಜಿಲ್ಲೆಯಾದ್ಯಂತ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪ್ರಸ್ತುತಪಡಿಸಿ ಜನಪ್ರಿಯರಾದವರು. ಮುಂದೆ ಶ್ರೀ ಹಿರೇಕಲ್ ಬೆಟ್ಟದ ಸಿದ್ಧೇಶ್ವರಸ್ವಾಮಿ ಮಹಿಮೆ, ಹಾಲು ಎರೆದ ಹಾವು, ಕೆಂಡದ ಕೊಳ, ನಾಗಪುರಿ, ವೀರ ತಿಮ್ಮಪ್ಪ ನಾಯಕ, ಶ್ರೀ ಕೊಟ್ಟೂರು ಬಸವೇಶ್ವರ ಸ್ವಾಮಿ ಮಹಿಮೆ, ಹೀಗೆ ಪೌರಾಣಿಕ, ಐತಿಹಾಸಿಕ ನಾಟಕಗಳನ್ನು ರಚಿಸಿ ರಂಗದ ಮೇಲೆ ತಂದ ಕೀರ್ತಿ ಶ್ರೀಯುತರಿಗೆ ಸಂದಿದೆ. ಗೀಗೀಪದ, ಲಾವಣಿ, ಸುಗ್ಗೀ ಹಾಡುಗಳನ್ನು ಹಾಡಬಲ್ಲ ಇವರಿಗೆ ಅನೇಕ ಸಂಘ ಸಂಸ್ಥೆಗಳಿಂದ ಪ್ರಶಸ್ತಿಗಳ ಜೊತೆಗೆ ಹಾಸನ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿಯೂ ಸಂದಿದೆ.

---



## ಗೇಣಿಗೆರೆ ರಂಗಪ್ಪದಾಸ್

ಹಾಸನ ಜಿಲ್ಲೆಯ ದೊಡ್ಡಗೇಣಿಗೆರೆಯ ಶ್ರೀ ನಂಜೇಗೌಡ ಹಾಗೂ ಶ್ರೀಮತಿ ಲಕ್ಷ್ಮಮ್ಮನವರ ಸುಪುತ್ರರಾಗಿ 1951ರಲ್ಲಿ ಜನಿಸಿದ ಶ್ರೀಯುತರು ತಮ್ಮ ಶಾಲಾದಿನಗಳಲ್ಲಿಯೇ ಗುರುಗಳಾದ ಎಂ.ಹೆಚ್. ಸುಬ್ಬಯ್ಯನವರಿಂದ ಪ್ರೇರೇಪಿತರಾಗಿ 'ದಾನಶೂರ ಕರ್ಣ' ನಾಟಕದ 'ಋಷಿಕೇತು' ಪಾತ್ರದ ಮೂಲಕ ರಂಗಭೂಮಿ ಪಾದಾರ್ಪಣ ಮಾಡಿದವರು. ಮುಂದೆ 1973ರ ನಂತರ ಹರಿಕಥಾ ವಿದ್ವಾನ್ ಎಂ.ಕೆ. ಬಸವಾಚಾರ್‌ರವರಲ್ಲಿ ಹರಿಕಥಾ ಕೀರ್ತನೆಯನ್ನು, ಮುದ್ದುರಂಗಪ್ಪನವರಲ್ಲಿ ರಂಗಸಂಗೀತವನ್ನು ಅಭ್ಯಾಸ ಮಾಡಿದ್ದಾರೆ.

ಚಿಕ್ಕೋನಹಳ್ಳಿ ವೀರಭದ್ರಚಾರ್, ವೆಂಕಟರಮಣಚಾರ್, ಹೊನ್ನಂಜಾಚಾರ್ ಇವರ ಪ್ರೋತ್ಸಾಹದಿಂದ ರಂಗನಟರಾಗಿ, ನಿರ್ದೇಶಕರಾಗಿ, ಪಕ್ಕವಾದ್ಯಗಾರನಾಗಿ ಜಿಲ್ಲಾದ್ಯಂತ ಹಾಗೂ ರಾಜ್ಯಾದ್ಯಂತ ನಡೆಯುವ ನಾಟಕಗಳಲ್ಲಿ ಭಾಗವಹಿಸಿರುವ ಇವರು ಕೆಲವು ಕಾಲ ಓಬಳೇಶ್ವರ ಶ್ರೀ ಓಂಕಾರೇಶ್ವರ ನಾಟಕ ಮಂಡಲಿಯಲ್ಲಿಯೂ ನಟನಾಗಿ ಸೇವೆ ಸಲ್ಲಿಸಿದ್ದಾರೆ.

ಇವರ ರಂಗಭೂಮಿ ಸೇವೆಯನ್ನು ಮೆಚ್ಚಿ ಹಲವಾರು ಸಂಘ ಸಂಸ್ಥೆಗಳು 'ನಾಟಕರತ್ನ', 'ರಂಗಕಲಾಭೂಷಣ', 'ಅಭಿನವ ಗಾನಕಲಾ ಶಿರೋಮಣಿ' ಎಂಬ ಬಿರುದನ್ನಿತ್ತು ಸನ್ಮಾನಿಸಿದ್ದಾರೆ. ಇವರು ಪ್ರಸ್ತುತ ಹಾಸನ ಜಿಲ್ಲಾ ಕನ್ನಡ ರಂಗಭೂಮಿ ಕಲಾವಿದರ ಸಂಘ (ರಿ.)ದ ಸಂಸ್ಥಾಪಕ ಪ್ರಧಾನ ಕಾರ್ಯದರ್ಶಿಯಾಗಿದ್ದು ಕಲಾಪೋಷಕರಾಗಿದ್ದಾರೆ.

---



## ಕರೀಂಸಾಬ ಪೀರಸಾಬ ಕೋಟಣ್ಣನವರ

ಶ್ರೀ ಕರೀಂಸಾಬ್ ದೇವಗಿರಿಯವರ ತಂದೆ ಪೀರಸಾಬ, ತಾಯಿ ಶ್ರೀಮತಿ ಬೀಬಾಯಿ. ಹೇಮರಡ್ಡಿಮಲ್ಲಮ್ಮ, ಅಕ್ಕಮಹಾದೇವಿ, ಬಂಜೆ ತೊಟ್ಟಿಲು, ಬಸ್ ಕಂಡಕ್ಟರ್, ನಂಬಿಯಕ್ಕ, ರತ್ನ ಮಾಂಗಲ್ಯ ಮುಂತಾದ 40ಕ್ಕೂ ಹೆಚ್ಚು ನಾಟಕಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಹೇಮರಡ್ಡಿ ಮಲ್ಲಮ್ಮ ನಾಟಕದಲ್ಲಿ ಇವರು ಅಭಿನಯಿಸಿದ ವೇಮಣ್ಣನ ಪಾತ್ರ ಇವರಿಗೆ ಬಹಳ ದೊಡ್ಡ ಹೆಸರು ತಂದಿದೆ.

ಹದಿನೆಂಟನೆ ವಯಸ್ಸಿನಲ್ಲಿಯೇ ರಂಗಭೂಮಿಗೆ ಬಂದಿರುವ ಕರೀಮ ಸಾಹೇಬರು ತಮ್ಮ 70ನೇ ವಯಸ್ಸಿನಲ್ಲಿಯೂ ರಂಗಭೂಮಿಯ ಬಗ್ಗೆ ಅಪಾರ ಪ್ರೀತಿ ಇಟ್ಟುಕೊಂಡವರು. ಇವರ ರಂಗದ ಹಿಂದಿನ ಶಕ್ತಿಯು ಅಪಾರವಾದದ್ದು. ಅರಸಿನಗೋಡಿ ಕಂಪನಿಯ ಮ್ಯಾನೇಜರ್ ಆಗಿ ವೃತ್ತಿರಂಗಭೂಮಿಗೆ ಇವರು ಅಪಾರ ಸೇವೆ ಸಲ್ಲಿಸಿದ್ದಾರೆ.

---



## ಕೆ.ಎನ್. ಜಾನ್ವೇಕರ್

ಶ್ರೀ ಕೆ.ಎನ್. ಜಾನ್ವೇಕರ್‌ರವರ ತಂದೆ ನೀಲಕಂಠರಾವ್, ತಾಯಿ ಲಕ್ಷ್ಮೀಬಾಯಿ, 1948, ಮೇ 31ರಲ್ಲಿ ಜನಿಸಿದ ಕೃಷ್ಣಾಜಿ ಜಾನ್ವೇಕರ್ ಹಾವೇರಿಯ ಪ್ರಸಿದ್ಧ ಮಾಗಾವಿ ಟಾಕೀಜಿನಲ್ಲಿ ಆಪರೇಟರ್ ಆಗಿ ವೃತ್ತಿ ಆರಂಭಿಸಿದರು. ನಂತರ ಕೆ.ಇ.ಬಿ.ಯಲ್ಲಿ ಉದ್ಯೋಗ ಸಿಕ್ಕಿ ವೃತ್ತಿ ಆರಂಭಿಸಿದರು. ನಂತರ ಶ್ರೀಯುತರು ಸಾಹಿತಿ, ನಾಟಕಕಾರ, ನಿರ್ದೇಶಕ ಸತೀಶ ಕುಲಕರ್ಣಿ ಅವರ ಪ್ರೇರಣೆಯಿಂದ ರಂಗಭೂಮಿಗೆ ಬಂದರು.

ಬೆಂಗಳೂರು, ಬಳ್ಳಾರಿ, ಕೋಲಾರ, ಬೆಳಗಾಂವಿ, ಶಿವಮೊಗ್ಗ, ಧಾರವಾಡ ಮುಂತಾದ ಪ್ರಮುಖ ನಗರ ಒಳಗೊಂಡಂತೆ ರಾಜ್ಯಾದ್ಯಂತ ನಾಟಕ ಪ್ರದರ್ಶನದಲ್ಲಿ ನಟರಾಗಿ, ಸಂಘಟಕರಾಗಿ ಭಾಗವಹಿಸಿದ್ದಾರೆ. ಸಹೋದರ ಮಾಲತೇಶ ಜಾನ್ವೇಕರರು ದೃಶ್ಯ ಮಾಧ್ಯಮದ ಹುಚ್ಚು ಹತ್ತಿಸಿದರು.

ಕೆ.ಇ.ಬಿ. ಕಾರ್ಮಿಕ ಸಂಘದ ಪದಾಧಿಕಾರಿಯಾಗಿ 20 ವರ್ಷ ದುಡಿದಿರುವ ಜಾನ್ವೇಕರ್ ಹಲವಾರು ನಾಟಕಗಳನ್ನು ರಂಗದ ಮೇಲೆ ತಂದವರು. ಸರಳ, ಬಿಚ್ಚು ಮನಸ್ಸಿನ ಸಹಜ ನಡಾವಳಿಯ ಕೆ.ಎನ್. ಜಾನ್ವೇಕರ್ 'ಜಾನಿ' ಎಂದೇ ಉತ್ತರ ಕರ್ನಾಟಕದಲ್ಲಿ ಪ್ರಸಿದ್ಧರಾದವರು.

---

## 2007ರ ಪ್ರಶಸ್ತಿ ವಿಜೇತರು



### ಕೆ.ಎಸ್. ಭಗವಾನ್ (ಗೌರವ ಪ್ರಶಸ್ತಿ)

ಮೈಸೂರು ಜಿಲ್ಲೆ, ಹುಣಸೂರು ತಾಲೂಕು, ಕಲ್ಲಹಳ್ಳಿಯಲ್ಲಿ 14 ಜನವರಿ 1945ರಲ್ಲಿ ಜನನ. 1966ರಲ್ಲಿ ಮೈಸೂರಿನ ಮಹಾರಾಜ ಕಾಲೇಜಿನಿಂದ ಬಿ.ಎ. ಪದವಿ. ಮಾನಸ ಗಂಗೋತ್ರಿಯಿಂದ 1968ರಲ್ಲಿ ಎಂ.ಎ. ಪದವಿ. 1995ರಲ್ಲಿ ಯು.ಎಸ್.ಎ.ಯ ಕ್ಯಾಲಿಫೋರ್ನಿಯಾದ ಇಂಟರ್‌ನ್ಯಾಷನಲ್ ಯೂನಿವರ್ಸಿಟಿಯಿಂದ ಡಿ ಲಿಟ್ ಪದವಿ. 37 ವರ್ಷಗಳ ಕಾಲ ಪ್ರಾಧ್ಯಾಪಕರಾಗಿ ಸೇವೆ. ಕರ್ನಾಟಕದ ಅತ್ಯುತ್ತಮ ಪ್ರಾಧ್ಯಾಪಕರೆಂದು ಹೆಸರುಗಳಿಸಿರುವ ಇವರ ಪಾಠ ಕೇಳಲು ಮೈಸೂರಿನ ವಿವಿಧ ಕಾಲೇಜಿನ ವಿದ್ಯಾರ್ಥಿಗಳು ಆಗಮಿಸುತ್ತಿದ್ದುದು ಇವರ ಬೋಧನಾ ಪ್ರೌಢಿಮೆಗೆ ಸಾಕ್ಷಿ. ಶಂಕರಾಚಾರ್ಯ ಮತ್ತು ಪ್ರತಿಗಾಮಿತನ, ಭಾಷೆ ಮತ್ತು ಸಂಸ್ಕೃತಿ, ಗಾಂಧಿಯನ್ನು ಗೋಡ್ಸೆ ಏಕೆ ಕೊಂದ ? ಕುವೆಂಪುಯುಗ ಇವೇ ಮುಂತಾದ 40ಕ್ಕೂ ಹೆಚ್ಚು ಕೃತಿಗಳು ಇವರ ಲೇಖನಿಯಿಂದ ಹರಿದುಬಂದ ವೈಚಾರಿಕ ಕೃತಿಗಳು. ಜೂಲಿಯಸ್ ಸೀಸರ್, ಹ್ಯಾಮ್ಲೆಟ್, ಮ್ಯಾಕ್‌ಬೆತ್, ವೆನಿಸ್ಸಿನ ವರ್ತಕ, ಒಥೆಲೋ, ಮಹಾರಾಯ ಲಿಯರ್, ವಿಮ್ಸಷ್ಟ ಇವರ ಅನುವಾದಿತ ಷೇಕ್ಸ್‌ಪಿಯರ್‌ನ ನಾಟಕಗಳು. ಷೇಕ್ಸ್‌ಪಿಯರ್‌ನ 37 ನಾಟಕಗಳ ಕತೆಗಳನ್ನು ಗದ್ಯದಲ್ಲಿ ನಲಿವಿನಾಟಗಳು, ನೋವಿನಾಟಗಳು ಮತ್ತು ಚರಿತ್ರಾಟಗಳು ಎಂಬ ಹೆಸರಿನಲ್ಲಿ ಬರೆದಿದ್ದಾರೆ.

ಕಾವ್ಯಾನಂದ ಪ್ರಶಸ್ತಿ, ಶ್ರೀ ಕುವೆಂಪು ಕಲಾನಿಕೇತನ ಅವರಿಂದ ಕುವೆಂಪು ಪ್ರಶಸ್ತಿ, ನಾಡಚೇತನ ಹಾಗೂ ರಂಗಚೇತನ ಪ್ರಶಸ್ತಿಗಳು ಹಾಗೂ 1999ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳು ಇವರಿಗೆ ಸಂದಿವೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಕ್ರಾಂತಿಕಾರಕ ಲೇಖನಗಳ ಮೂಲಕ ತಮ್ಮದೆ ಓದುಗ ಬಳಗವನ್ನು ಹೊಂದಿರುವ ಶ್ರೀಯುತರು ಕನ್ನಡ ಸಾರಸ್ವತ ಲೋಕಕ್ಕೆ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ. ಷೇಕ್ಸ್‌ಪಿಯರ್‌ನ ಪ್ರಮುಖ ಮತ್ತು ಅತ್ಯುತ್ತಮ ಅನುವಾದಕ ಎಂದು ನಾಡಿನ ಖ್ಯಾತ ವಿದ್ವಾಂಸರು ಇವರನ್ನು ಪರಿಗಣಿಸಿದ್ದಾರೆ. ಜರ್ಮನಿ, ಇಟಲಿ, ಸ್ವಿಟ್ಜರ್‌ಲ್ಯಾಂಡ್, ಫ್ರಾನ್ಸ್ ಮುಂತಾದ ಐರೋಪ್ಯ ರಾಷ್ಟ್ರಗಳಲ್ಲಿ ಶೈಕ್ಷಣಿಕ ಪ್ರವಾಸ ಮಾಡಿ ಉಪನ್ಯಾಸಗಳನ್ನು ನೀಡಿದ್ದಾರೆ.

---



### ಶ್ರೀ ಹಾನಗಲ್ ಕುಮಾರೇಶ್ವರ ಕೃಪಾ ಪೋಷಿತ ಪಂಚಾಕ್ಷರಿ ಗವಾಯಿಗಳವರ ನಾಟ್ಯ ಸಂಘ

**ಡಾ. ಪುಟ್ಟರಾಜ ಗವಾಯಿಗಳು** (ಕೆ. ಹಿರಣ್ಣಯ್ಯ ಪುರಸ್ಕಾರ)

ಕ್ರಿ.ಶ. 1935ರ ಸುಮಾರಿಗೆ ಸಂಗೀತದ ಮೇರು ಪರ್ವತವಾದ ಪಂಡಿತ ಡಾ॥ ಪಂಚಾಕ್ಷರಿ ಗವಾಯಿಗಳು ವಿಕಲಾಂಗ ಶಿಷ್ಯರನ್ನ ಕಟ್ಟಿಕೊಂಡು ಸಂಗೀತೋಪಾಸನೆಯಲ್ಲಿ ತೊಡಗಿದರು. ಅವರ ಶಿಷ್ಯರಾದ ಪಂಡಿತ ಪುಟ್ಟರಾಜ ಗವಾಯಿಗಳು ಗುರುಗಳ ಆಶೀರ್ವಾದ ಪಡೆದು 1937ರಲ್ಲಿ ಪಂಚಾಕ್ಷರಿ ನಾಟ್ಯ ಸಂಘವನ್ನು ಆರಂಭಿಸಿದರು.

ಮೊಟ್ಟ ಮೊದಲ ಬಾರಿಗೆ ಪುಟ್ಟರಾಜ ಗವಾಯಿಗಳು ರಚಿಸಿದ ಸೊನ್ನಲಾಪುರ ಸಿದ್ಧರಾಮೇಶ್ವರ ಚರಿತೆ ರಂಗದ ಮೇಲೆ ವಿಜೃಂಭಿಸಿತು. 1961 ಗದುಗಿನಲ್ಲಿ ಪ್ರಾರಂಭಿಸಿದ ಹೇಮರೆಡ್ಡಿ ಮಲ್ಲಮ್ಮನ ಮಹಾತ್ಮೆ 365ಕ್ಕೂ ಹೆಚ್ಚು ದಿನ

ಪ್ರದರ್ಶನಗೊಂಡು ಪವಾಡವನ್ನೇ ನಿರ್ಮಿಸಿದೆ. ಕಲಾವಿದರ ನೆಲೆಗಾಗಿ ಗವಾಯಿಗಳು ಸ್ಥಳವನ್ನು ಅರಸುತ್ತಿರುವಾಗ ತಮ್ಮ ಆಸ್ತಿಯನ್ನ ಧಾರೆಎರೆದವರು ದಾನಶೂರ ಬಸಿರಿ ಗಿಡದ ವೀರಪ್ಪನವರು. ಅಲ್ಲಿ ಇಂದು ಶ್ರೀ ವೀರೇಶ್ವರ ಪುಣ್ಯಾಶ್ರಮವು ತಲೆ ಎತ್ತಿ ಅಸಂಖ್ಯಾತ ಅಂಧ, ಅನಾಥ ಕಲಾವಿದರಿಗೆ ನೆರಳನ್ನು ನೀಡಿದೆ. ಸ್ತ್ರೀಪಾತ್ರಗಳನ್ನು ಪುರುಷರೇ ನಿರ್ವಹಿಸುತ್ತಿರುವುದು ಈ ಸಂಘದ ವಿಶೇಷ. ಗಂಡು ಹೆಣ್ಣಾಗಿ ರಂಗದ ಮೇಲೆ ನಿಂತರೆ ಹೆಣ್ಣೂ ಕೂಡ ನಾಚುವಂತ ಅವರ ರೂಪ, ಅಭಿನಯ, ಹಾವ, ಭಾವ, ನರ್ತನಕ್ಕೆ ತಲೆದೂಗಿದವರೇ ಇಲ್ಲ. ಶ್ರೀ ಕೃಷ್ಣಗಾರುಡಿ, ಮಹಾಶಿವಶರಣೆ ಅಕ್ಕಮಹಾದೇವಿ, ಹೇಮರೆಡ್ಡಿ ಮಲ್ಲಮ್ಮ, ಕೊಪ್ಪಳದ ಗವಿಸಿದ್ಧೇಶ್ವರ ಮಹಾತ್ಮೆ, ಮಲಮಗಳು, ಬಸ್ ಕಂಡಕ್ಟರ್, ಕೊರವಂಜಿ, ಬಂಜೆ ತೊಟ್ಟಿಲು, ಚಿನ್ನದ ಗೊಂಬೆ ಇವು ಇಲ್ಲಿಯ ಪ್ರಖ್ಯಾತ ನಾಟಕಗಳು. ಪ್ರಾರಂಭದ ಹಲವು ದಶಕಗಳು ಶಿವ ಶರಣರ ಕುರಿತ ನಾಟಕಗಳನ್ನೇ ಪ್ರದರ್ಶಿಸಿದ ಇವರು ಕಳೆದ 2 ದಶಕಗಳಿಂದ ಸಾಮಾಜಿಕ ನಾಟಕಗಳ ಪ್ರದರ್ಶನಗಳನ್ನ ಪ್ರಾರಂಭಿಸಿದ್ದಾರೆ.

ಹಾನಗಲ್ ತಾಲ್ಲೂಕಿನ ಬೊಮ್ಮನ ಹಳ್ಳಿಯಲ್ಲಿ ಈ ನಾಟ್ಯ ಸಂಘವು ಬೀಡು ಬಿಟ್ಟಿದೆ. ಶ್ರೀಯುತರಾದಂತಹ ಸಿದ್ದಪ್ಪ ಗುಳೆಂ, ವಿರೂಪಾಕ್ಷಪ್ಪ ನೇಸರ್ಗಿ, ಪರಮೇಶ್ವರಯ್ಯ ಹಿರೇಮಠ, ಪ್ರಕಾಶ್ ಗದಗ, ರಾಜಯ್ಯ ಬಡ್ನಿ, ಗುರಯ್ಯಸ್ವಾಮಿ ಸಂಶನೂರ, ಲೋಕೇಶ ಶಶಿಮಠ, ಸಣ್ಣಪ್ಪ ಹಾವೇರಿ, ಅಶೋಕಪುರದ ದೇವಗಿರಿ, ವಿಜಯಕುಮಾರ ಗಜೇಂದ್ರಗಡ, ನಾಗೇಶ್ ಶಿಗ್ಗಾಂವ, ಕುಮಾರ ಶಿಗ್ಗಾಂವ, ಮಂಜಪ್ಪ ಹಾವೇರಿ, ವೀರಯ್ಯಸ್ವಾಮಿ ಮಾಡಲಗೇರಿ, ವಿಜಯಾನಂದ ಕರಡೀಗುಡ್ಡ, ಬಾಬೂ ಸಾಲಹಳ್ಳಿ, ಚಿದಾನಂದ ಸಂಜೀವಪ್ಪ ಗಟ್ಟೂರ, ಸೋಮು ಜಮಖಂಡಿ, ಮಹೇಶ ಕೊಪ್ಪಳ, ರಾಜು ಬಾದಾಮಿ ಇವರುಗಳು ನಾಟ್ಯ ಸಂಘದ ಮೂಲಕ ಕಲಾಭಿಮಾನಿಗಳ ಮನಸೂರೆಗೊಂಡಿದ್ದಾರೆ.



## ಬಿ.ಎಸ್. ಮಂಜುಳಮ್ಮ

ದಿವಾನ್ ಸೂರಪ್ಪನವರ ಮನೆತನದ ಲಾಯರ್ ಮೈಲಾರಯ್ಯ ಹಾಗೂ ವೆಂಕಮ್ಮನವರ ಮಗ ಸುಂದರರಾಜ್ ಹಾಗೂ ಲಲಿತಮ್ಮ ಅವರ ಮಗಳಾಗಿ 1934ರಲ್ಲಿ ಜನನ.

ಬಾಲ್ಯದಿಂದಲೂ ಹಾಡುವುದರಲ್ಲಿ ಪ್ರಾವಿಣ್ಯತೆ. ಎಡತೊರೆ ರಾಮಶೆಟ್ರು ಕಂಪನಿಗೆ 1945ರಲ್ಲಿ ಪಾದಾರ್ಪಣೆ ಮಾಡಿ ಬಾಲ ಪಾತ್ರಗಳನ್ನು ಮಾಡುತ್ತಾ ರಂಗಪ್ರವೇಶ. ಲಕ್ಷ್ಮಸಾನಿಯವರ ಶ್ರೀ ನಾಟಕ ಮಂಡಳಿಗೆ ಸೇರಿ ಕೃಷ್ಣನ ಪಾತ್ರಕ್ಕೆ ಅಪಾರ ಮೆಚ್ಚುಗೆ ಗಳಿಸಿದ್ದಾರೆ. ಅಲ್ಲಿಂದ ಶ್ರೀ ಚಾಮುಂಡೇಶ್ವರಿ ನಾಟಕ ಸಭಾ ಗಂಗಾಧರ ರಾಯರ ಕಂಪನಿ, ಶೇಷಕಮಲ್ ಕಲಾಮಂಡಳಿ, ಹಿರಣ್ಣಯ್ಯ ಮಿತ್ರ ಮಂಡಳಿ, ಮಹದೇಶ್ವರ ಸ್ವಾಮಿಯವರ ಕಂಪನಿ. ಶ್ರೀ ಕಂಠಮೂರ್ತಿಗಳ ಕಂಪನಿ ಹಾಗೂ ಯೋಗಾನರಸಿಂಹ ಮೂರ್ತಿಗಳ ಕಂಪನಿಗಳ ಪಾತ್ರಗಳಲ್ಲಿ ಅಭಿನಯ.

ಸುಭದ್ರಾ, ಕೃಷ್ಣ, ನಾರದ, ಆಂಜನೇಯ, ಅರ್ಜುನ ಪಾತ್ರಗಳಿಗೆ ಹೆಸರುವಾಸಿ. ಗಾನಕೋಗಿಲೆ ಎಂಬ ಬಿರುದು ಹಾಗೂ ಅನೇಕ ಪ್ರಶಸ್ತಿಗಳನ್ನು ಪಡೆದಿರುತ್ತಾರೆ. ಚಿತ್ರನಟರಾದ ಬಾಲಣ್ಣ, ನರಸಿಂಹರಾಜು, ಹೊನ್ನಪ್ಪ ಭಾಗವತರು, ಮುಸುರಿ ಕೃಷ್ಣಮೂರ್ತಿ, ಡಾ: ರಾಜ್‌ಕುಮಾರ್ ಅವರ ಜೊತೆ ಅನೇಕ ಪಾತ್ರಗಳನ್ನು ಮಾಡಿ ಜನರಿಂದ ಮನ್ನಣೆ ಪಡೆದಿರುತ್ತಾರೆ. ಅನೇಕ ಚಲನಚಿತ್ರಗಳಲ್ಲಿ, ದೂರದರ್ಶನದ ಧಾರವಾಹಿಗಳಲ್ಲಿ, ಆಕಾಶವಾಣಿ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ರಂಗಗೀತೆ ಕ್ಷೇತ್ರದಲ್ಲಿಯೂ ಅಮೋಘ ಸೇವೆ ಇವರದು.

## ಸದಾಶಿವ ಕೆ. ಬ್ರಹ್ಮಾವರ



ಉಡುಪಿ ಜಿಲ್ಲೆಯ ಬ್ರಹ್ಮಾವರದಲ್ಲಿ 15 ಫೆಬ್ರವರಿ 1929ರಲ್ಲಿ ಜನನ. ಶ್ರೀ ಸದಾಶಿವ ಅವರು ತಮ್ಮ 9ನೇ ವಯಸ್ಸಿಗೆ ಬಣ್ಣದ ವೃತ್ತಿಯನ್ನು ಆರಂಭಿಸಿದರು.

1939ರಲ್ಲಿ ವೃತ್ತಿ ರಂಗಭೂಮಿಗೆ ಪಾದಾರ್ಪಣೆ ಮಾಡಿದರು. ಶ್ರೀ ಜೈ ಕರ್ನಾಟಕ ನಾಟ್ಯ ಸಂಘ, ಸಿದ್ದಾಪುರ, ಶ್ರೀ ಮಾನ್ ಹಲಗೇರಿ ಜಟ್ಟಪ್ಪ, ಬಾಲಸಿದ್ಧೇಶ್ವರ ನಾಟ್ಯ ಸಂಘ, ಶ್ರೀ ಶಾರದಾ ಸಂಗೀತ ನಾಟಕ ಮಂಡಳಿ, ಗೋಕಾಕ, ಬಿ.ಟಿ. ಹೊಸಮನಿಯವರ ಸಂಘಗಳಲ್ಲಿ ಸ್ತ್ರೀ ಪಾತ್ರಧಾರಿಯಾಗಿ ರಂಗ ಪ್ರವೇಶ ಮಾಡಿದರು. ಅಲ್ಲದೆ ಏಣಗಿ ಬಾಳಪ್ಪ ಅವರ ಕಲಾವೈಭವ ನಾಟ್ಯ ಸಂಘ, ಶ್ರೀ ಶಂಕ್ರಯ್ಯ ಹಿರೇಮಠರ ಕುಮಾರೇಶ್ವರ ನಾಟಕ ಸಂಘ, ಶ್ರೀ ವೀರೇಶ್ವರ ನಾಟಕ ಸಂಘ, ಶ್ರೀ ಗುಬ್ಬಿ ಚೆನ್ನಬಸವೇಶ್ವರ ನಾಟಕ ಸಭಾ ಹೀಗೆ ಹಲವಾರು ಕಂಪನಿಗಳಲ್ಲಿ ವಿವಿಧ ಪಾತ್ರಗಳಲ್ಲಿ ಅಭಿನಯಿಸುತ್ತಾ 50 ವರ್ಷಗಳ ಕಾಲ ವೃತ್ತಿ ರಂಗಭೂಮಿಯಲ್ಲಿ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಅಲ್ಲದೆ 35ಕ್ಕೂ ಹೆಚ್ಚು ವರ್ಷಗಳಿಂದ ಚಲನಚಿತ್ರಗಳಲ್ಲಿ ಭಾಗವಹಿಸುತ್ತಾ ಬಂದಿರುವ ಇವರು ಹೆಸರಾಂತ ನಟರುಗಳ ಜೊತೆ ಹಾಗೂ ಡಾ: ರಾಜ್‌ಕುಮಾರ್ ಅವರ ಜೊತೆ ಅಭಿನಯಿಸಿರುವುದು ಇವರ ಹೆಗ್ಗಳಿಕೆ.

ಇವರ ಪತ್ನಿ ಶ್ರೀಮತಿ ರತ್ನಾಬಾಯಿ ಸ್ವತಃ ನಟಿಯಾಗಿ ರಂಗಭೂಮಿಯಲ್ಲಿ ಸೇವೆ ಸಲ್ಲಿಸಿದ್ದವರು. ಶ್ರೀ ಬ್ರಹ್ಮಾವರ ಅವರು ತಮ್ಮ ಎಂಬತ್ತರ ಈ ಇಳಿ ವಯಸ್ಸಿನಲ್ಲಿಯೂ ರಂಗ್ಭೂಮಿಯಲ್ಲಿ ಹಾಗೂ ಚಲನಚಿತ್ರ ರಂಗದಲ್ಲಿ ಸಕ್ರಿಯರಾಗಿದ್ದಾರೆ.

---

## ಮಡಿವಾಳರ ಬಾಳಪ್ಪ



ಬಳ್ಳಾರಿ ಜಿಲ್ಲೆಯ ಶ್ರೀ ಮಡಿವಾಳರ ನಿಂಗಪ್ಪ ಹಾಗೂ ಶ್ರೀಮತಿ ಮಡಿವಾಳರ ಶಿವಬಸಮ್ಮ ಇವರ ಪುತ್ರರಾಗಿ 1 ಜುಲೈ 1937ರಲ್ಲಿ ಜನನ. 1955ರಲ್ಲಿ ರಂಗಪ್ರವೇಶ ಮಾಡಿದ ಇವರದು ಸುಧೀರ್ಘ ರಂಗಸೇವೆ.

71ರ ತಮ್ಮ ಇಳಿವಯಸ್ಸಿನಲ್ಲಿಯೂ ಸಹ ರಂಗಚಿಂತನೆ ಹಾಗೂ ರಂಗಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. 'ರಕ್ತರಾತ್ರಿ', 'ಕುರುಕ್ಷೇತ್ರ', 'ಸತ್ಯಹರಿಶ್ಚಂದ್ರ', 'ಹೇಮರೆಡ್ಡಿ ಮಲ್ಲಮ್ಮ', 'ಚಿತ್ರಾಂಗದ', 'ಭೂ ಕೈಲಾಸ', 'ಬಾಣಸಿಗ ಭೀಮ', 'ಭೀಷ್ಮ ಪ್ರತಿಜ್ಞೆ' ಇಂತಹ ಪೌರಾಣಿಕ ನಾಟಕಗಳಲ್ಲದೆ 'ಅಣ್ಣ ತಂಗಿ', 'ಆದರ್ಶ ಪ್ರೇಮ', 'ರತ್ನ ಮಾಂಗಲ್ಯ', 'ಬಂಜೆ ತೊಟ್ಟಿಲು' ಮುಂತಾದ ಸಾಮಾಜಿಕ ನಾಟಕಗಳಲ್ಲಿಯೂ ಅಭಿನಯಿಸಿದ್ದಾರೆ. ನಾಟಕ ನಿರ್ದೇಶಕರಾಗಿ, ಹಾರ್ಮೋನಿಯಂ ಮಾಸ್ತರರಾಗಿ ಹಳ್ಳಿಹಳ್ಳಿಗೂ ಸುತ್ತಿ ನಾಟಕ ಮಾಡಿಸಿದ್ದಾರೆ. 'ಶ್ರೀ ಗುರು ಹೊಳೆ ಬಸವೇಶ್ವರ ಮಹಾತ್ಮೆ', 'ಶ್ರೀ ಮುದುಕೇಶ್ವರ ಮಹಾತ್ಮೆ', 'ಶ್ರೀ ಗುರುದೊಡ್ಡಬಸವೇಶ್ವರ ಮಹಾತ್ಮೆ' ಇವರ ಲೇಖನಿಯಿಂದ ಹೊರಬಂದ ಕೃತಿಗಳು.

ಇವರಿಗೆ ಖ್ಯಾತಿ ತಂದುಕೊಟ್ಟ ಪಾತ್ರಗಳೆಂದರೆ ಶ್ರೀ ಕಂದಗಲ್ಲ ಹನಮಂತರಾಯರಿಂದ ರೂಪಗೊಂಡ ದುರ್ಯೋಧನ, ಉದ್ದಂಡ, ಶಕುನಿ ಪಾತ್ರಗಳು. ರಕ್ತರಾತ್ರಿ ನಾಟಕದ ಧರ್ಮರಾಯನ ಪಾತ್ರದ ಅಭಿನಯಕ್ಕಾಗಿ 1982ರಲ್ಲಿ ಬೆಂಗಳೂರಿನಲ್ಲಿ ಅಭಿನಂದನೆ. 2006ರಲ್ಲಿ ಹೂವಿನ ಹಡಗಲಿಯಲ್ಲಿ ರಂಗಮಲ್ಲಿಗೆ ನಾಟಕೋತ್ಸವದಲ್ಲಿ ಸನ್ಮಾನ ಹೀಗೆ ಹಲವು ಸಂಘ ಸಂಸ್ಥೆಗಳಿಂದ ಇವರಿಗೆ ಮನ್ನಣೆ ದೊರೆತಿದೆ. 53 ವರ್ಷಗಳಿಂದಲೂ ನಿರಂತರವಾಗಿ ರಂಗಭೂಮಿಯಲ್ಲಿ ಶ್ರೀಯುತರು ಸಕ್ರೀಯವಾಗಿದ್ದಾರೆ.

---



## ಬಾಬು ಈರಪ್ಪ ಈಳಿಗೇರ

ಧಾರವಾಡದ ಶ್ರೀ ಬಾಬು ಈರಪ್ಪ ಈಳಿಗೇರ 1 ಆಗಸ್ಟ್ 1948ರಲ್ಲಿ ಜನನ. ಬಿ.ಎ. ಪದವಿ ಪಡೆದು ಎಲ್.ಐ.ಸಿಯಲ್ಲಿ ವೃತ್ತಿ ಜೀವನ ಆರಂಭ. ಇವರು ರಂಗಭೂಮಿ ಸಂಘಟನೆ, ನಟನೆ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮನ್ನು ಅರ್ಪಿಸಿಕೊಂಡವರು. ಬಾಲ್ಯದಿಂದಲೇ ನಾಟಕದ ಗೀಳು ಅಂಟಿಸಿಕೊಂಡರು 1973ರಿಂದ ರಂಗಭೂಮಿಯ ನಿರಂತರ ಸೇವೆಯಲ್ಲಿ ನಟನಾಗಿ, ನಿರ್ದೇಶಕರಾಗಿ, ಸಂಘಟಕಾರರಾಗಿ 35 ವರ್ಷಗಳಿಂದಲೂ ಸಕ್ರೀಯವಾಗಿದ್ದಾರೆ.

'ಅಪರಾಧಿ ಯಾರು?', 'ಸ್ವರ್ಗ ಸಂದೇಶ', 'ದೇಶ ಎತ್ತ ಸಾಗುತ್ತಿದೆ', 'ಖಾಸಗೀಕರಣ', 'ಭೀಮಾ ವಿಜಯ', 'ನಮಗೂ ಒಂದು ಕಾಲ', 'ಕೂಡಿಬಾಳೋಣ' ನಾಟಕಗಳನ್ನು ರಚಿಸಿ ನಿರ್ದೇಶಿಸಿದ್ದಾರೆ. 'ಗೌಡರ ಗದ್ದ', 'ಬೆಲೆ ಏರಿಕೆ', 'ಹೆಬ್ಬೆರಳು', 'ಸಂತ್ಯಾಗ ನಿಂತಾನ ಕಬೀರ', 'ಹರಗಿನ ಬೆಟ್ಟ', 'ಜನತೆ', 'ದೇಶ ಎತ್ತ ಸಾಗುತ್ತಿದೆ', 'ಹರಿಜನವಾರ', 'ಏಕಲವ್ಯ', 'ಬೆಳ್ಚಿ', 'ಮುಖವಿಲ್ಲದವರು', 'ದನ', 'ಶಬರನ ಕಥೆ', 'ಶೋಕ ಚಕ್ರ' ಇನ್ನೂ ಹಲವಾರು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ನಾಟಕ ಅಕಾಡೆಮಿ ಹಮ್ಮಿಕೊಂಡಿದ್ದ ಕಾರ್ಮಿಕ ರಂಗೋತ್ಸವದ ಸಂಚಾಲಕರಾಗಿ ಹಾಗೂ 2005 ರಿಂದ 2008 ರವರೆಗೆ ಕರ್ನಾಟಕ ನಾಟಕ ಅಕಾಡೆಮಿಯ ಧಾರವಾಡ ಜಿಲ್ಲಾ ಸಂಚಾಲಕರಾಗಿ ರಂಗಭೂಮಿಗೆ ಸೇವೆಯನ್ನು ಸಲ್ಲಿಸಿದ್ದಾರೆ.

---



## ಕೆ. ವೆಂಕಟರಾಜು

ಚಾಮರಾಜನಗರದ ಕೆ.ವಿ. ಕೃಷ್ಣಮೂರ್ತಿ ಹಾಗೂ ಕಮಲಮ್ಮ ದಂಪತಿಗಳ ಪುತ್ರರಾಗಿ 26 ನವೆಂಬರ್ 1949ರಲ್ಲಿ ಜನನ. ಬಿ.ಎ. ಪದವಿ ಹಾಗೂ ಮಧುರೈ ಕಾಮರಾಜ್ ವಿಶ್ವವಿದ್ಯಾಲಯದ ಸ್ನಾತಕೋತ್ತರ ಡಿಪ್ಲಮೋ ಪದವಿಯನ್ನು ಗಳಿಸಿರುತ್ತಾರೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕ್ಷೇತ್ರ ಆರೋಗ್ಯ ಶಿಕ್ಷಣಾಧಿಕಾರಿಯಾಗಿ ಕಾರ್ಯನಿರ್ವಹಿಸಿ ಪ್ರಸ್ತುತ ನಿವೃತ್ತಿಯನ್ನು ಹೊಂದಿರುತ್ತಾರೆ.

ಶಾಲಾ ಹಾಗೂ ಕಾಲೇಜು ದಿನಗಳಲ್ಲಿಯೇ ರಂಗಭೂಮಿಯಲ್ಲಿ ಆಸಕ್ತಿ ವಹಿಸಿ ಕೈಲಾಸಂ, ಕುವೆಂಪು, ಲಂಕೇಶರ ನಾಟಕಗಳನ್ನು ರಂಗಕ್ಕೆ ತಂದವರು. ರಂಗಾಯಣದ ನೆರವಿನಿಂದ ಮಹಾವೀರರ ಜನ್ಮ ಕಲ್ಯಾಣೋತ್ಸವ ಸಂದರ್ಭದಲ್ಲಿ 'ಅರಹಂತ' ನಾಟಕ. 1992ರಲ್ಲಿ ನಾಟಕ ಅಕಾಡೆಮಿ ನೆರವಿನಿಂದ 'ಕರಿಮಾಯಿ' ನಾಟಕ, ನೀನಾಸಂ ಶಾಲಾ ರಂಗಯೋಜನೆಯಲ್ಲಿ 'ಮಕ್ಕಳ ನಾಟಕ ಕಾರ್ಯಾಗಾರ', 2005ರಲ್ಲಿ ಜನಾಧಿಕಾರ ಜನಾಂದೋಲನ ಜಾಥಾ ಹೀಗೆ ಹಲವಾರು ರಂಗಚಟುವಟಿಕೆಗಳ ಮುಖ್ಯ ಭೂಮಿಕೆಯಲ್ಲಿ ಕೆಲಸ ಮಾಡಿದ್ದಾರೆ. 'ತಲೆಬಾಗದ ಜನ', 'ಬಾಪುಕುಟೀರ' ಇವರ ಪ್ರಕಟಿತ ಕೃತಿಗಳು. ನಟ, ನಿರ್ದೇಶಕ, ನಾಟಕಕಾರ ಹಾಗೂ ರಂಗ ಸಂಘಟಕರಾಗಿ ಕೆಲಸ ನಿರ್ವಹಿಸಿರುವ ಶ್ರೀಯುತರನ್ನು ಶಿವಮೊಗ್ಗದಲ್ಲಿ 2006ರಲ್ಲಿ ನಡೆದ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಸಮಿತಿಯು ಗೌರವಿಸಿ ಪ್ರಶಸ್ತಿಯನ್ನು ನೀಡಿರುವುದು ಇವರ ರಂಗ ಸಾಧನೆಗೆ ಸಂದ ಗೌರವ.

---



## ಎನ್. ಗುಡ್ಡಪ್ಪ

ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ಮಲ್ಲಾಡಿ ಹಳ್ಳಿಯನ್ನು ತಮ್ಮ ಕಾರ್ಯಕ್ಷೇತ್ರ ಮಾಡಿಕೊಂಡಿರುವ ಶ್ರೀ ಎನ್. ಗುಡ್ಡಪ್ಪನವರ ತಂದೆ ಶ್ರೀ ನೀಲಪ್ಪ. ಶ್ರೀಯುತರು 20 ಏಪ್ರಿಲ್ 1950ರಲ್ಲಿ ಜನಿಸಿದರು. ನಟ, ವಿನ್ಯಾಸಕಾರ, ಹಾಡುಗಾರ, ಜಾನಪದ ನೃತ್ಯಪಟು, ತಬಲಾ, ಹಾರ್ಮೋನಿಯಂ ವಾದ್ಯಗಾರ ಹೀಗೆ ಅನೇಕ ವಿಶೇಷತೆಗಳನ್ನು ಗಳಿಸಿದ್ದಾರೆ. ಇವರು ತಿರುಕರೆಂದೇ ಖ್ಯಾತರಾಗಿರುವ ಶ್ರೀ ಶ್ರೀ ರಾಘವೇಂದ್ರ ಸ್ವಾಮಿಯವರ ಪ್ರಭಾವಕ್ಕೆ ಒಳಗಾಗಿ ಮಲ್ಲಾಡಿಹಳ್ಳಿಯಲ್ಲಿ ನೆಲೆನಿಂತು ತಿರುಕರಂಗ ಸಾಂಸ್ಕೃತಿಕ ವೇದಿಕೆಯ ಮುಖ್ಯ ನೇತಾರರಾಗಿ ಗ್ರಾಮಾಂತರ ಪ್ರದೇಶದ ರಂಗಭೂಮಿಗೆ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ. ಕರ್ನಾಟಕದ ಖ್ಯಾತ ನಿರ್ದೇಶಕರುಗಳನ್ನು ಮಲ್ಲಾಡಿಹಳ್ಳಿಗೆ ಕರೆಸಿಕೊಂಡು ಅನೇಕ ಆಧುನಿಕ ನಾಟಕಗಳನ್ನು ರಂಗಕ್ಕೆ ತರುವಲ್ಲಿ ಶ್ರೀ ಗುಡ್ಡಪ್ಪನವರ ಪಾತ್ರ ಬಹಳ ಮುಖ್ಯವಾದದ್ದು. ಕರ್ನಾಟಕದ ಯುವ ರಂಗ ನಿರ್ದೇಶಕ ಶ್ರೀ ಕೃಷ್ಣಮೂರ್ತಿ ಕವತ್ತಾರ್‌ರಂತಹ ಅನೇಕ ರಂಗಕರ್ಮಿಗಳು ಮಲ್ಲಾಡಿಹಳ್ಳಿಯಲ್ಲಿ ಕಾರ್ಯನಿರ್ವಹಿಸಲು ಶ್ರೀಯುತರು ಕಾರಣರಾಗಿರುತ್ತಾರೆ. ಇವರ ನೇತೃತ್ವದಲ್ಲಿ 'ತಿರುಕ ರಂಗೋತ್ಸವ', 'ಕುವೆಂಪು ನಾಟಕೋತ್ಸವ', 'ಚಿತ್ರದುರ್ಗ ಜಿಲ್ಲಾ ಜನಪದ ಮೇಳ' ಇಂತಹ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದಿವೆ. ತಿರುಕರಂಗದ ಮುಖ್ಯ ರುವಾರಿಗಳಲ್ಲೊಬ್ಬರಾಗಿ ಇವರು ಖ್ಯಾತರಾಗಿದ್ದಾರೆ.

---



## ನಾ.ಸು. ನಾಗೇಶ್

ಮಂಡ್ಯ ಜಿಲ್ಲೆ ನಾಗಮಂಗಲದ ಶ್ರೀ ಎನ್.ಪಿ. ಸುಬ್ಬರಾವ್ ಹಾಗೂ ಶ್ರೀಮತಿ ಟಿ.ವಿ. ಸೀತಾಲಕ್ಷ್ಮಮ್ಮ ದಂಪತಿಗಳ ಪುತ್ರರಾಗಿ ನಾ.ಸು. ನಾಗೇಶ್ ಅವರು 1952ರಲ್ಲಿ ಜನನ. ಮೆಕ್ಯಾನಿಕಲ್ ಇಂಜನಿಯರಿಂಗ್‌ನಲ್ಲಿ ಪದವಿ ಹಾಗೂ ಆಟೋಮೊಬೈಲ್ ಇಂಜನಿಯರಿಂಗ್‌ನಲ್ಲಿ ಡಿಪ್ಲೊಮೊ. ವೃತ್ತಿಯಲ್ಲಿ ಲೋಕೋಪಯೋಗಿ ಗುತ್ತಿಗೆದಾರರು.

ನಾಟಕ ರಚನೆ, ನಟನೆ, ನಿರ್ದೇಶನ, ಸಾಹಿತ್ಯ ಚಿಂತನೆ, ಪದ್ಯ ರಚನೆ, ಸಾಮಾಜಿಕ ಜೀವನ, ಸಾರ್ವಜನಿಕ ಹಿತಾಸಕ್ತಿ, ಸಾಂಸ್ಕೃತಿಕ ಸಂಘಟನೆಗಳಲ್ಲಿ ಆಸಕ್ತಿ ವಹಿಸಿರುವ ಇವರು ನಾಗಮಂಗಲದಂತಹ ಗ್ರಾಮೀಣ ಪರಿಸರದಲ್ಲಿ 1972ರಲ್ಲಿ ಗೆಳೆಯರೊಡಗೂಡಿ ಕನ್ನಡ ಸಂಘವನ್ನು ಕಟ್ಟಿ ಆ ಮೂಲಕ ರಂಗಭೂಮಿ, ಸಾಹಿತ್ಯ, ಸಾಂಸ್ಕೃತಿಕ ಚಿಂತನೆಗಳನ್ನು ನಡೆಸುತ್ತಾ ಬಂದವರು.

ಏಳನೇ ತರಗತಿಯಲ್ಲಿದ್ದಾಗಲೇ ಯಮ ಗರ್ವಭಂಗ ನಾಟಕದಲ್ಲಿ ಅಭಿನಯಿಸುವುದರ ಮೂಲಕ ರಂಗಕ್ಕೆ ಪಾದಾರ್ಪಣೆ ಮಾಡಿದರು. ವಿವಿಧ ವಿನೋದಾವಳಿ, ಛದ್ಮವೇಶ ಸ್ಪರ್ಧೆ ಇತ್ಯಾದಿಗಳ ನಿರಂತರ ಅಭಿಮಾನಿ. ಸ್ನೇಹಿತರ ಪೂರ್ಣ ಸಹಕಾರದಿಂದ ಕರ್ನಾಟಕದ ಖ್ಯಾತ ಸಾಹಿತಿಗಳು, ಕಲಾವಿದರು ರಂಗಕರ್ಮಿಗಳನ್ನು ನಾಗಮಂಗಲದಂತಹ ಗ್ರಾಮೀಣ ನೆಲಕ್ಕೆ ಕರೆಸಿಕೊಂಡು ರಂಗಶಿಬಿರಗಳು, ನಾಟಕ ಪ್ರದರ್ಶನಗಳು, ನಾಟಕೋತ್ಸವಗಳು, ವಿಚಾರ ಸಂಕೀರ್ಣಗಳನ್ನು ಆಯೋಜಿಸಿದ್ದಾರೆ. ದೊರೆ 'ಈಡಿಪಸ್' ಹಾಗೂ 'ಹೆದ್ದಾಯರ' ನಾಟಕಗಳನ್ನು ನಿರ್ದೇಶಿಸಿ ಜನಪ್ರಿಯರಾದ ಇವರು ಗ್ರಾಮೀಣ ಹವ್ಯಾಸಿ ರಂಗಭೂಮಿಯ ಪರಿಚಾರಕರಲ್ಲಿ ಪ್ರಮುಖರು.

---



## ಅಲ್ತಾಫ

ರಾಯಚೂರಿನ ಅಲ್ತಾಫರವರು ಬಿ.ಎ., ಎಲ್.ಎಲ್.ಬಿ. ಪದವೀಧರರು. 1977ರಲ್ಲಿ ಕಣ್ಣೆಟ್ಟ ಹೆಣ್ಣು ಮೂಲಕ ರಂಗಪ್ರವೇಶಿಸಿದರು. ಇವರು ವೃತ್ತಿ ರಂಗಭೂಮಿ ಕಲಾವಿದರಾಗಿ, ನಿರ್ದೇಶಕರಾಗಿ, ಕಂಪನಿ ಮಾಲೀಕರಾಗಿ ಸೇವೆ ಸಲ್ಲಿಸುವುದರ ಜೊತೆ ಸುಮಾರು 40ಕ್ಕೂ ಹೆಚ್ಚಿನ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

1985ರಲ್ಲಿ ಬಿಜಾಪುರದಲ್ಲಿ ಚಂದನ ಡ್ರಾಮಾ ಕಂಪನಿ ಪ್ರಾರಂಭಿಸಿ ಬೀದರ್, ಗುಲ್ಬರ್ಗಾ, ರಾಯಚೂರು, ಬಾಗಲಕೋಟೆ, ಗದಗ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಕ್ಯಾಂಪ್‌ಗಳನ್ನು ಮಾಡಿ ಕಲೆಯನ್ನು ತಮ್ಮ ಉಸಿರಾಗಿಸಿಕೊಂಡಿದ್ದಾರೆ. 'ಗಂಡನ ಮಾನ', 'ಬಸ್‌ಹಮಾಲ', 'ಧರ್ಮದೇವತೆ', 'ಮಲಮಗಳು', 'ಬಂಜೆತೊಟ್ಟಿಲು', 'ಕೈಲಾಗದ ಗಂಡ ಕೈಲಾಸ ಕಂಡ' 'ಹಸಿರು ಬಳೆ', 'ರೈತನ ಮಕ್ಕಳು', 'ಚೆನ್ನಪ್ಪ ಚನ್ನೇಗೌಡ', 'ಬದುಕು ಬಂಗಾರವಾಯ್ತು', 'ರೇಣುಕಾ ಎಲ್ಲಮ್ಮ', 'ಗೌಡ್ರಗದ್ಲ' ನಾಟಕಗಳಲ್ಲಿ ಡಾ: ಜೀವನ, ನಾಗನಗೌಡ, ಶಿವನಗೌಡ, ಶಿವರುದ್ರ, ರಮಾಕಾಂತ, ದಪೇದಾರ ಧರ್ಮಣ್ಣ, ಜಮದಗ್ನಿ, ಪರಶುರಾಮ, ಬಸವಲಿಂಗೇಗೌಡ ಪಾತ್ರಗಳನ್ನು ನಿರ್ವಹಿಸಿದ್ದಾರೆ. ಅಲ್ಲದೆ ಮೃತ್ಯು ಮೋಹಿನಿ, ಜನನಾಯಕ, ಸುರಪುರದ ಸಿಂಹ, ರಾಜಾ ವೆಂಕಟಪ್ಪನಾಯಕ ನಾಟಕಗಳನ್ನು ರಚನೆ ಮಾಡಿರುತ್ತಾರೆ. ಹವ್ಯಾಸಿ ರಂಗಭೂಮಿಯ ಅನೇಕ ನಾಟಕಗಳಲ್ಲಿಯೂ ಕಲಾವಿದರಾಗಿ ಸಕ್ರೀಯವಾಗಿದ್ದಾರೆ.

---



## ಪುಷ್ಪಮಾಲಾ ಎ. ಅಣ್ಣಿಗೇರಿ

ಆಂಧ್ರ ಪ್ರದೇಶದ ಅಧ್ವಾನಿಯ ಶ್ರೀ ಲಕ್ಷ್ಮಣ್ ಶೆಟ್ಟಿ ಹಾಗೂ ನಾಗರತ್ನಮ್ಮ ಅವರ ಪುತ್ರಿಯಾಗಿ 25 ಸೆಪ್ಟಂಬರ್ 1945 ರಲ್ಲಿ ಜನನ. ಹುಟ್ಟಿದ ಐದನೇ ದಿನಕ್ಕೆ ಶಿಶು ಕಲಾವಿದೆಯಾಗಿ ರಂಗಭೂಮಿಗೆ ಪಾದಾರ್ಪಣೆ. ಐದನೇ ವರ್ಷದಲ್ಲಿ ಸತ್ಯವಾನ್ ಸಾವಿತ್ರಿ ನಾಟಕದ ನಾರದನ ಪಾತ್ರದ ಮೂಲಕ ಅಧಿಕೃತವಾಗಿ ರಂಗಪ್ರವೇಶ.

ಸುಳ್ಳದ ದೇಸಾಯಿಯವರ ಕಂಪನಿ, ಬೆಡಮಕ್ಕಿ ಕಂಪನಿ, ಜೋಷಿಯವರ ಕಂಪನಿ, ಜೇವರಗಿ ರಾಜಣ್ಣ ಕಂಪನಿ, ಬೆಡಮಕ್ಕಿ ಕಂಪನಿ, ಜೋಷಿಯವರ ಕಂಪನಿ, ಜೇವರಗಿ ರಾಜಣ್ಣ ಕಂಪನಿ, ಏಣಗಿ ಬಾಳಪ್ಪ ಕಂಪನಿ, ಗಂಗಾಧರ ಶಾಸ್ತ್ರಿ ಕಂಪನಿಗಳಲ್ಲಿ ರಂಗಸೇವೆ, ಹಡೆದವ್ವ, ಬದುಕು ಬಂಗಾರವಾಯ್ತು, ಸಂಪತ್ತಿಗೆ ಸವಾಲ್, ಅಣ್ಣ ತಂಗಿ, ದಾರಿದೀಪ, ಪತಿಯ ಸೌಭಾಗ್ಯ, ರಕ್ತರಾತ್ರಿ, ಯಕ್ಷಾಂಬರ ಛತ್ರಪತಿ ಶಿವಾಜಿ, ಸಿಂಧೂರ ಲಕ್ಷ್ಮಣ, ಹೇಮರೆಡ್ಡಿ ಮಲ್ಲಮ್ಮ, ರೇಣುಕಾ ಎಲ್ಲಮ್ಮ ಇನ್ನೂ ಹಲವಾರು ನಾಟಕಗಳಲ್ಲಿ ಅಭಿನಯ. ನಲವತ್ತಕ್ಕೂ ಹೆಚ್ಚು ವರ್ಷಗಳಿಂದ ರಂಗಭೂಮಿಯ ಸೇವೆ. ಪೌರಾಣಿಕ, ಐತಿಹಾಸಿಕ ಹಾಗೂ ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸಿರುವ ಇವರಿಗೆ ಬದುಕು ಬಂಗಾರವಾಯ್ತು ನಾಟಕದ ಗಿರಿಜಾ ಪಾತ್ರ, ಅಣ್ಣಾ ತಂಗಿಯ ಗಂಗಾ, ಸಂಪತ್ತಿಗೆ ಸವಾಲ್‌ನ ಲಕ್ಷ್ಮಿ, ಹರಿಶ್ಚಂದ್ರದ ತಾರಾಮತಿ, ಸಂಗೊಳ್ಳಿ ರಾಯಣ್ಣದ ಚೆನ್ನಮ್ಮ, ಕುರುಕ್ಷೇತ್ರದ ದ್ರೌಪದಿ, ರಕ್ತರಾತ್ರಿಯ ಭಾನುಮತಿ, ರೇಣುಕಾ ಎಲ್ಲಮ್ಮನ ಎಲ್ಲಮ್ಮನ ಪಾತ್ರ, ಛತ್ರಪತಿ ಶಿವಾಜಿಯ ಜೀಜಾಬಾಯಿಯ ಪಾತ್ರಗಳು ಇವರಿಗೆ ಖ್ಯಾತಿಯನ್ನು ತಂದುಕೊಟ್ಟಿವೆ.

---



## ಜಯರಾಮ್ ತಾತಾಚಾರ್

ಮೈಸೂರಿನ ಆರ್.ಎಲ್.ಕೆ. ತಾತಾಚಾರ್ ಹಾಗೂ ರುಕ್ಮಿಣಿಯಮ್ಮ ಇವರ ಪುತ್ರರಾಗಿ 3 ನವೆಂಬರ್ 1955ರಲ್ಲಿ ಜನನ. ಮೈಸೂರು ವಿಶ್ವವಿದ್ಯಾಲಯದಿಂದ ಬಿ.ಕಾಂ ಹಾಗೂ ಡಿಪ್ಲೊಮೊ ಇನ್ ಡ್ರಾಮ್ಯಾಟಿಕ್ಸ್ ಪದವಿ, ರಾಷ್ಟ್ರೀಯ ನಾಟಕ ಶಾಲೆಯ ಪದವಿ. ಇವರು ಅಭಿನಯಿಸಿದ ಕನ್ನಡ ನಾಟಕಗಳು ತದ್ರೂಪಿ, ರಂಗಭಾರತಿ, ಬಿರುದೆಂತೆಂಬರ ಗಂಡ, ಮಾದಾರಿ ಮಾದಯ್ಯ, ಡಿಯರ್ ಲಿಯರ್, ಮಾಗಿಯ ಹೂಗಳು, ಇಳಿಹೊತ್ತಿನ ದಾಹಗಳು, ಎಂದೆಂದೂ ಮುಗಿಯದ ಕತೆ.

ಇವರು ಅಭಿನಯಿಸಿದ ಹಿಂದಿ ನಾಟಕಗಳು ಆಕಾಡ್ ಕೆ. ಏಕ್ ದಿನ್, ಘಾಶೀರಾಮ್ ಕೊತ್ವಾಲ್, ಆ್ಯಡಿಂಗ್ ಮಿಷನ್, ನಿರ್ದೇಶಿಸಿದ ನಾಟಕಗಳು ಜನತೆಯ ಶತ್ರು, ಗುಮ್ಮ ಬಂತು ಗುಮ್ಮ, ಹೈದರ್, ಜಲ್ಲಿ ಆಟ. ಅಭಿನಯಿಸಿದ ಟಿ.ವಿ. ಧಾರಾವಾಹಿಗಳು ದೊಡ್ಡಮನೆ, ಕಥಾಸಂಗಮ, ಪ್ರತಿಧ್ವನಿ, ಸಸ್ಪೆನ್ಸ್ ರಾಮರಾವ್, ಸಿನಿಮಾಗಳು ಆಆಇಈ, ಹಾರು ಹಕ್ಕಿಯನೇರಿ. ಫ್ರಿಟ್ಸ್ ಬೆನ್‌ವಿಟ್ಸ್, ಬ್ಯಾರಿಜಾನ್, ಬಿ.ಎಂ.ಷಾ, ಗಿರೀಶ್ ಕಾರ್ನಾಡ್, ಎಂ.ಎಸ್. ಸತ್ಯು ಮುಂತಾದ ಪ್ರಮುಖ ನಿರ್ದೇಶಕರೊಂದಿಗೆ ಕಾರ್ಯನಿರ್ವಹಿಸಿದ್ದಾರೆ. ಮೈಸೂರಿನ 'ಪರಿವರ್ತನ' ಹವ್ಯಾಸಿ ತಂಡದೊಂದಿಗೆ ಸಕ್ರೀಯವಾಗಿ ತೊಡಗಿಸಿಕೊಂಡು ಕಳೆದ ನಾಲ್ಕು ವರ್ಷಗಳಿಂದ ಮಕ್ಕಳಿಗೆ ಬೇಸಿಗೆ ಶಿಬಿರ, ಕಾಲೇಜು ವಿದ್ಯಾರ್ಥಿಗಳಿಗೆ ಅಭಿನಯ ತರಬೇತಿ ಕಾರ್ಯಾಗಾರಗಳನ್ನು ನಡೆಸುತ್ತಾ ಬಂದಿದ್ದಾರೆ.

---



## ರಾಜಮ್ಮ ಶ್ರೀಧರ ಹೆಗಡೆ

ತಂದೆ ಸಣ್ಣಪ್ಪ ರಾಮದುರ್ಗ ಹಾಗೂ ತಾಯಿ ಲಲಿತಮ್ಮ ಅವರ ಪುತ್ರಿಯಾಗಿ 1958ರಲ್ಲಿ ಜನನ. 1974ರಲ್ಲಿ ವೃತ್ತಿ ರಂಗಭೂಮಿ ಪ್ರವೇಶ. ಇವರು ಶ್ರೀ ಶಾರದಾ ಸಂಗೀತ ನಾಟಕ ಮಂಡಳಿ, ಗೋಕಾಕ್ ಕಂಪನಿಯ 'ಗುಳಗಿ ಗುಂಡಮ್ಮ' ನಾಟಕದಲ್ಲಿ ಶಂಕರನ ಬಾಲಪಾತ್ರದಲ್ಲಿ ರಂಗಪ್ರವೇಶಿಸಿ, ನಂತರ ಶಿವಲಿಂಗಶಾಸ್ತ್ರಿ ಕಂಪನಿ, ರಾಘವೇಂದ್ರ ಕಲಾಸಂಘ, ವರವಿ, ಗುಡಗೇರಿ ಕಂಪನಿ, ಪುರಾಣಿಕ ಮಠ, ಲಕ್ಷ್ಮೇಶ್ವರ ಹುಚ್ಚೇಶ್ವರ ಕಂಪನಿ, ಕಮತಗಿ, ಶ್ರೀ ಕುಮಾರ ನಾಟಕ ಸಂಘ, ಹಾನಗಲ್ ಹಾಗೂ ಕೆ.ಬಿ.ಆರ್. ಡ್ರಾಮಾ ಕಂಪನಿಗಳಲ್ಲಿ ಪಾತ್ರಗಳನ್ನು ನಿರ್ವಹಿಸಿದ್ದಾರೆ.

ರೇಣುಕಾದೇವಿ ಮಹಾತ್ಮೆ, ಬದುಕು ಬಂಗಾರವಾಯ್ತು, ಜೈ ಪದ್ಮಾವತಿ, 'ರೈತನ ಮಕ್ಕಳು, ಕಲಿಯುಗದ ರಾಮ, ಎಚ್ಚರ ತಂಗಿ ಎಚ್ಚರ, ವರನೋಡಿ ಹೆಣ್ಣುಕೊಡು, ಕಿವುಡ ಮಾಡಿದ ಕಿತಾಪತಿ, ನನ್ನ ಗಂಡನ ಹೆಂಡತಿ, ನಾಟಕಗಳಲ್ಲಿ ಮಾರಿದಶ್ಯಾ, ಗೋದಾವರಿ, ಭಾಗೀರಥಿ, ಬಾಲ ಪರಶುರಾಮ ಪಾತ್ರಗಳಲ್ಲಿ ಅಮೋಘವಾದ ಅಭಿನಯವನ್ನು ನೀಡಿ ಜನಮೆಚ್ಚುಗೆ ಗಳಿಸಿರುತ್ತಾರೆ. ಕಳೆದ 75 ವರ್ಷಗಳಿಂದಲೂ ವೃತ್ತಿ ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಕಲಾಸೇವೆಯನ್ನು ಮಾಡುತ್ತಾ ಬಂದಿರುವ ಇವರಿಗೆ ಅನೇಕ ಪ್ರಶಸ್ತಿಗಳು ಸಂದಿವೆ.

---



## ಶಶಿಧರ ಭಾರಿಘಾಟ್

ಕೆ.ಆರ್. ಪೇಟೆ ತಾಲೂಕು ಅಕ್ಕಿಹೆಬ್ಬಾಳಿನ ಶ್ರೀ ಬಿ.ಕೆ. ರಾಮಚಂದ್ರ ಹಾಗೂ ಶ್ರೀಮತಿ ಗಿರಿಜಮ್ಮ ಅವರ ಪುತ್ರರಾಗಿ 20 ಜುಲೈ 1959ರಲ್ಲಿ ಜನನ. ನಾಟಕ ಶಾಸ್ತ್ರದ ಡಿಪ್ಲೊಮೊ ಪಡೆದು ರಂಗಶಿಕ್ಷಕರಾಗಿ ವೃತ್ತಿ ಜೀವನ ಆರಂಭ.

ಬಾಲ್ಯದಿಂದಲೇ ಗ್ರಾಮೀಣ ರಂಗಭೂಮಿಯಲ್ಲಿ ಆಸಕ್ತಿವಹಿಸಿ ಶಾಲೆಗಳಲ್ಲಿ ರಂಗಾಭಿನಯ ಆರಂಭ. ಮೈಸೂರು ಯುವರಾಜ ಕಾಲೇಜಿನಲ್ಲಿ ಗೆಳೆಯರೊಂದಿಗೆ ಕೂಡಿ ಚಿಂತನ ರಂಗವೇದಿಕೆಯ ಮೂಲಕ ಕ್ಯಾಲಿಗುಲ, ಟಿ. ಪ್ರಸನ್ನನ ಗೃಹಸ್ಥಾಶ್ರಮ, ಭ್ರಮೆ ನಾಟಕಗಳಲ್ಲಿ ಅಭಿನಯ. 'ಕಲಾಪ್ರಿಯ' ರಂಗತಂಡದ 'ಹಕ್ಕಿಗಳು' ನಾಟಕದ ಮೂಲಕ ಸಕ್ರಿಯ ರಂಗಭೂಮಿಗೆ ಪಾದಾರ್ಪಣೆ. ಮೈಸೂರಿನ ಸಮುದಾಯ ತಂಡವನ್ನು ಪ್ರವೇಶಿಸಿ ಹೈದರ್, ಕುಸುಮಬಾಲೆ, ದ್ಯಾವನೂರು ನಾಟಕಗಳಿಗೆ ಬೆಳಕು, ರಂಗಸಜ್ಜಿಕೆ ಹಾಗೂ ಹುತ್ತವ ಬಡಿದರೆ, ಅಲ್ಲೇ ಕುಂತವರೆ, ಸಿಂಗಿರಾಜ ಸಂಪಾದನೆ, ದ್ಯಾವನೂರು ನಾಟಕಗಳಲ್ಲಿ ಅಭಿನಯ.

1988ರಿಂದ ಇಲ್ಲಿಯವರೆಗೆ ಬೆಂಗಳೂರು ರಂಗಭೂಮಿಯ ಆಗುಹೋಗುಗಳಲ್ಲಿ ಸಕ್ರಿಯ ಪಾತ್ರ. ಸಮುದಾಯದ ಮುಂಚೂಣಿಯ ನಾಯಕ. ಮಾದಾರಿ ಮಾದಯ್ಯ, ಈ ಕೆಳಗಿನವರು, ರುಡಾಲಿ, ಅಂಬೇಡ್ಕರ್, ಮಹಾಚೈತ್ರ, ಮದುರೆಕಾಂಡ, ಸಂಕ್ರಾಂತಿ, ಪಂಪಭಾರತ, ಜುಗಾರಿಕ್ರಾಸ್, ಮುಂತಾದ ಪ್ರಯೋಗಗಳನ್ನು ರಂಗಕ್ಕೆ ತರುವಲ್ಲಿ ಸಂಘಟಕರಾಗಿ ದುಡಿಮೆ. ಕೇಸರಿ ಬಿಳಿ ಹಸಿರು, ಬಾಪು, ನೇಣು ಹಾಗೂ ದೇವರುಗಳ ರಾಜ್ಯದಲ್ಲಿ, ಮುದುಕ ಹೇಳಿದ ಕತೆ ಮುಂತಾದ ನಾಟಕಗಳನ್ನು ನಿರ್ದೇಶಿಸಿದ್ದಾರೆ.



## ಚಿಂದೋಡಿ ಶಂಭುಲಿಂಗಪ್ಪ

ಶ್ರೀ ಚಿಂದೋಡಿ ಶಾಂತರಾಜ್ ಹಾಗೂ ಶ್ರೀಮತಿ ಚಿಂದೋಡಿ ಶಾಂತಮ್ಮ ಇವರ ಪ್ರಥಮ ಪುತ್ರರಾಗಿ 5 ಜೂನ್ 1961ರಲ್ಲಿ ದಾವಣಗೆರೆಯಲ್ಲಿ ಶ್ರೀ ಶಂಭುಲಿಂಗಪ್ಪನವರ ಜನನ. 12ನೇ ವಯಸ್ಸಿನಲ್ಲಿ ಬೆಳ್ಳಿ ಬಂಗಾರ ನಾಟಕದ ಭದ್ರನ ಪಾತ್ರದ ಮೂಲಕ ರಂಗಪ್ರವೇಶ. ಲಂಕಾದಹನ, ಸುಮಂಗಲಿ ನಾಟಕಗಳಲ್ಲಿ ಬಾಲ ಪಾತ್ರಗಳಲ್ಲಿ ಖ್ಯಾತರಾದರು.

ದೇಸಾಯಿ ದರ್ಬಾರ್, ಛತ್ರಪತಿ ಶಿವಾಜಿ, ರೌಡಿ ರಾಮಾಚಾರಿ, ಗೌಡಮೆಚ್ಚಿದ ಹುಡುಗಿ ನಾಟಕಗಳಲ್ಲಿ ಅಭಿನಯಿಸಿ ಜನಮೆಚ್ಚುಗೆ ಗಳಿಸಿದರು. ವೃತ್ತಿ ರಂಗಭೂಮಿಗೆ ಶ್ರೇಷ್ಠ ಕೊಡುಗೆ ನೀಡಿರುವ ಶ್ರೀ ಕೆ.ಬಿ.ಆರ್. ಡ್ರಾಮಾ ಕಂಪನಿಯ ಪದ್ಮಶ್ರೀ ಚಿಂದೋಡಿ ಲೀಲಾ ಅವರ ಮಾರ್ಗದರ್ಶನದಲ್ಲಿ ಕಂಪನಿಯ ಸಂಘಟನೆಯ ಜವಾಬ್ದಾರಿ ಹಾಗೂ ಮುಖ್ಯ ವ್ಯವಸ್ಥಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಬೆಳಗಾವಿಯಲ್ಲಿ ಕಂಪನಿ ನಿರ್ಮಿಸಿದ ಎರಡು ರಂಗಮಂದಿರಗಳ ಕಟ್ಟಡ ನಿರ್ಮಾಣದ ಉಸ್ತುವಾರಿ ವಹಿಸಿದ್ದಾರೆ.

ವೃತ್ತಿ ರಂಗಭೂಮಿ ಸಮ್ಮೇಳನ, ಮೈಸೂರು, ಬೆಳಗಾವಿಯ ಡಾ. ಚಂದ್ರಶೇಖರ ಕಂಬಾರರ ನಾಟಕೋತ್ಸವ, ಕನ್ನಡ ಸಾಹಿತ್ಯ ಪರಿಷತ್ ಸಮ್ಮೇಳನಗಳಲ್ಲಿ ಭಾಗವಹಿಸಿ ವಿಚಾರಗಳನ್ನು ಮಂಡಿಸಿದ್ದಾರೆ. ಅಮೇರಿಕಾದ ಹೋಸ್ಟನ್‌ನಲ್ಲಿ ಹಾಗೂ ಇಂಗ್ಲೆಂಡಿನ ಮ್ಯಾಂಚೆಸ್ಟರ್‌ನಲ್ಲಿ ನಡೆದ ವಿಶ್ವ ಕನ್ನಡ ಸಮ್ಮೇಳನಗಳಲ್ಲಿ ಭಾಗವಹಿಸಿದ್ದಾರೆ. ಶ್ರೀ ಗುರು ವಾದ್ಯವೃಂದದ ಮಾಲೀಕರಾಗಿ ಸಂಗೀತ ಕ್ಷೇತ್ರದಲ್ಲಿ ಸೇವೆಗೈದಿದ್ದಾರೆ. 1998 ರಿಂದ 2001ರವರೆಗೆ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿದ್ದರಲ್ಲದೆ ಈಗಲೂ ರಂಗಭೂಮಿಯಲ್ಲಿ ಸಕ್ರೀಯವಾಗಿದ್ದಾರೆ.



## ರಾಜೇಂದ್ರ ಕಾರಂತ್

ಶ್ರೀ ರಾಜೇಂದ್ರ ಕಾರಂತರ ತಂದೆ ಶ್ರೀಯುತ ನರಸಿಂಹ ಕಾರಂತ. ಶ್ರೀ ರಾಜೇಂದ್ರ ಕಾರಂತರ ಜನನ 20 ಅಕ್ಟೋಬರ್ 1961. ಬಿ.ಎಸ್ಸಿ ಪದವೀಧರರಾದ ಇವರು ಕನ್ನಡ ವಿಷಯದಲ್ಲಿ ಚಿನ್ನದ ಪದಕ ಗಳಿಸಿದ್ದಾರೆ. ಎಂ.ಎ. ಸ್ನಾತಕೋತ್ತರ ಪದವಿಯನ್ನು ತಮ್ಮದಾಗಿಸಿಕೊಂಡಿದ್ದಾರೆ. ಬೆಂಗಳೂರಿನ ಕಾರ್ಪೋರೇಷನ್ ಬ್ಯಾಂಕಿನ ಉದ್ಯೋಗಿ.

ಇವರು 37ಕ್ಕೂ ಹೆಚ್ಚು ನಾಟಕಗಳನ್ನು ರಚಿಸಿದ್ದಾರೆ. 2000ಕ್ಕೂ ಹೆಚ್ಚು ಪ್ರದರ್ಶನಗಳನ್ನು ಅವು ಕಂಡಿವೆ. ಇವುಗಳಲ್ಲಿ 6 ನಾಟಕಗಳು ಪ್ರಕಟಣೆಗೊಂಡಿವೆ. ಇವರು ಅಭಿನಯಿಸಿದ ತಂಡಗಳೆಂದರೆ ಚಿತ್ತಾರ, ಹಂದರ, ಚಿರಂತನ, ನಟರಂಗ, ಸ್ಪಂದನ, ಕಲಾಗಂಗೋತ್ರಿ, ಪ್ರಯೋಗರಂಗ, ನಾಟ್ಯದರ್ಪಣ, ಅಂತರಂಗ, ಇನ್ನೂ ಹೆಚ್ಚಿನ ತಂಡಗಳಲ್ಲಿ ಮುಖ್ಯ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ.

ಇದಲ್ಲದೆ 10 ಸಿನಿಮಾಗಳಿಗೆ, ಎರಡು ಧಾರವಾಹಿ ಹಾಗೂ 7 ಟೆಲಿಫಿಲಂಗಳಿಗೆ ಸಂಭಾಷಣೆಯನ್ನು ರಚಿಸಿದ್ದಾರೆ. 1983ರಲ್ಲಿ 'ಚಿತ್ತಾರ' ತಂಡವನ್ನು ಸ್ಥಾಪಿಸಿದ್ದಾರೆ. ಇವರ ಲೇಖನಿಯ ಮೂಲಕ ರಂಗಭೂಮಿಯಲ್ಲಿಯ ನಾಟಕಕಾರನ ಕೊರತೆಯನ್ನು ತುಂಬಿದ್ದಾರೆ. ಬೆಂಗಳೂರು ಸೇರಿದಂತೆ ಕರ್ನಾಟಕದ ಹಲವೆಡೆ ನಡೆಯುವ ರಂಗಸ್ಪರ್ಧೆಗಳಲ್ಲಿ ಇವರ ಬಹಳಷ್ಟು ನಾಟಕಗಳು ಸ್ಪರ್ಧೆಯಲ್ಲಿ ಭಾಗವಹಿಸಿ ಉತ್ತಮ ಬಹುಮಾನಗಳನ್ನು ಪಡೆಯುವುದು ಇವರ ಲೇಖನಿಯ ಸಾಮರ್ಥ್ಯವನ್ನು ತೋರುತ್ತದೆ. ದೋಣಿ, ಬದುಕಿಲ್ಲದವನ ಭಾವಗೀತೆ, ಮುದ್ದಣ್ಣನ ಪ್ರಮೋಷನ್ ಪ್ರಸಂಗ, ತಗಡಪ್ಪ, ಮೈಸೂರು ಮಲ್ಲಿಗೆ, ನಮ್ಮ ನಿಮ್ಮೊಳಗೊಬ್ಬ – ಇವರ ಪ್ರಮುಖ ನಾಟಕಗಳು.



## ಶಾಂತಾ ಭೀಮಸೇನರಾವ್

ಗುಲ್ಬರ್ಗಾದ ರಂಗಚಟುವಟಿಕೆಗಳಲ್ಲಿ ಸಕ್ರಿಯವಾಗಿರುವ ಶ್ರೀಮತಿ ಶಾಂತಾ ಅವರು ಸಾಹಿತ್ಯ, ಸಂಗೀತ, ಕ್ಷೇತ್ರಗಳಲ್ಲಿಯೂ ಅಭಿರುಚಿಯನ್ನು ಹೊಂದಿರುತ್ತಾರೆ. ಕಲಬುರ್ಗಿಯ ಎಂ.ಎಸ್. ಪದವಿ ಮಹಾವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕಿ, ಇವರು ಆಧುನಿಕ ದ್ರೋಣ, ಸದ್ದು ವಿಚಾರಣೆ ನಡೆಯುತ್ತಿದೆ, ಶಿಟವಿ, ಹರಕೆಯ ಕುರಿ, ಹೆಜ್ಜೆಗಳು, ಜೈಸಿದ್ದನಾಯ್ಕ, ಏನ ಬೇಡಲಿ ನಿನ್ನ ಬಳಿಗೆ ಬಂದು, 'ಕಾಡುಕುದುರೆ, ನಾಪತ್ತೆಯಾದ ಪ್ರೇಮಿ ಪ್ರಸಂಗ, ಯಯಾತಿ – ಇನ್ನೂ ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

ಮಾನಿಷಾದ, ಸುರಪುರದ ವೆಂಕಟಪ್ಪ ನಾಟಕ, ಮಂಥರ ನಾಟಕಗಳಿಗೆ ಕ್ರಮವಾಗಿ ರಂಗಪರಿಕರ, ಸಹನಿರ್ದೇಶನ, ವಸ್ತುವಿನ್ಯಾಸವನ್ನು ಮಾಡಿರುತ್ತಾರೆ. ದೂರದರ್ಶನ ನಾಟಕಗಳಲ್ಲಲ್ಲದೆ ಆಕಾಶವಾಣಿಯ 'ಬಿ' ಗ್ರೇಡ್ ಕಲಾವಿದೆಯಾಗಿಯೂ ಸಹ ತಮ್ಮ ಸೇವೆಯನ್ನು ರಂಗಭೂಮಿಗೆ ಸಲ್ಲಿಸಿದ್ದಾರೆ. ಹೆಗ್ಗೋಡಿನ ಸಾಂಸ್ಕೃತಿಕ ಶಿಬಿರ, ನಾಟಕ ಅಕಾಡೆಮಿಯ ಮಹಿಳೆಯರ ರಂಗಕಾರ್ಯಾಗಾರ, ರಂಗಾಯಣದ ವಿಮರ್ಶಾಕಮ್ಮಟಗಳಲ್ಲಿ ಭಾಗವಹಿಸಿ ರಂಗಭೂಮಿ ನಿರಂತರವಾಗಿ ನಡೆಯಲು ತಮ್ಮನ್ನು ರಂಗಕ್ಕೆ ಅರ್ಪಿಸಿಕೊಂಡಿದ್ದಾರೆ.



## ಡಾ. ಶ್ರೀಪಾದ ಭಟ್ (ಸಿ.ಜಿ.ಕೆ. ಯುವರಂಗ ಪುರಸ್ಕಾರ)

ಉತ್ತರ ಕನ್ನಡ ಜಿಲ್ಲೆಯ ಶಿಳುವಳ್ಳಿಯ ಶ್ರೀ ಭಟ್ ಅವರು ಬಿ.ಎಸ್ಸಿ, ಎಂ.ಎ, ಪಿ.ಎಚ್.ಡಿ. ಪದವಿ ಗಳಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಉತ್ತರ ಕನ್ನಡ ಜಿಲ್ಲಾ ರಂಗಭೂಮಿ ವಿಷಯದಲ್ಲಿ ಮಹಾಪ್ರಬಂಧ ಮಂಡನೆ. ಫಾಸಿಲ ಸಂಸ್ಥೆಯಿಂದ ದಕ್ಷಿಣ ಭಾರತ ಮಟ್ಟದ ಜಾನಪದ ಅಧ್ಯಯನ ಶಿಬಿರದಲ್ಲಿ ಜಾನಪದ ಸಂಶೋಧನೆ ಮತ್ತು ಕ್ಷೇತ್ರಕಾರ್ಯದ ಕುರಿತು ವಿಶೇಷ ಅಧ್ಯಯನ. ರಂಗಭೂಮಿ, ಸಾಹಿತ್ಯ, ಸಂಗೀತ ಕ್ಷೇತ್ರಗಳಲ್ಲಿ ವಿಶೇಷ ಆಸಕ್ತಿ.

ಚಿಕ್ಕಂದಿನಿಂದ ತಂದೆ ಶ್ರೀ ಗಜಾನನ ಭಟ್ ಧಾರೇಶ್ವರ ಅವರಿಂದ ಯಕ್ಷಗಾನದಲ್ಲಿ ತರಬೇತಿ ಮತ್ತು ಪ್ರದರ್ಶನಗಳಲ್ಲೂ ಪಾಲ್ಗೊಂಡಿದ್ದಾರೆ. ಕಿರಣ್ ಭಟ್, ಸುರೇಶ್ ಅನಗಳ್ಳಿ ಪ್ರಸನ್ನ, ಬಿ.ವಿ. ಕಾರಂತರಿಂದ ರಂಗತರಬೇತಿಯನ್ನು ಪಡೆದ ಅನುಭವ ಇವರದು. ಎನ್.ಎಸ್.ಡಿ. ಯಿಂದ ನಡೆದ ರಾಷ್ಟ್ರಮಟ್ಟದ ನಿರ್ದೇಶಕರ ತರಬೇತಿಯಲ್ಲಿ ಪಾಲ್ಗೊಂಡಿದ್ದಾರೆ. 'ಇವನ್ಯಾರವ', 'ಬದುಕು ಬಂದೀಖಾನೆ', 'ಮೂರು ಮೆಟ್ಟಿಲ ಕಥೆ', 'ಕುವೆಂಪು ದೃಶ್ಯಕಾವ್ಯ', 'ಶೂದ್ರ ತಪಸ್ವಿ', 'ಪುರೂರವ ಊರ್ವಶಿ', 'ನಕ್ಕಳಾ ರಾಜಕುಮಾರಿ', 'ಏಕಲವ್ಯ', 'ಕತ್ತಲೆ ದಾರಿದೂರ', 'ಅಳಿಲು ರಾಮಾಯಣ', 'ಶೋಕಚಕ್ರ' ಮುಂತಾದ ನಾಟಕಗಳನ್ನು ಇವರು ನಿರ್ದೇಶಿಸಿದ್ದಾರೆ.

---



## ಸುಜಾತ ಜಂಗಮಶೆಟ್ಟಿ (ಸಿ.ಜಿ.ಕೆ. ಯುವರಂಗ ಪುರಸ್ಕಾರ)

ಬಿಜಾಪುರ ಜಿಲ್ಲೆಯ ಓಟಲೇಶ್ವರದ ಶ್ರೀ ಸಂಗಪ್ಪ ಜಂಗಮಶೆಟ್ಟಿಯವರ ಪುತ್ರಿಯಾಗಿ 7 ಜೂನ್ 1968ರಲ್ಲಿ ಜನನ. ಶ್ರೀಮತಿ ಸುಜಾತ ಎಂ.ಎ. ಹಾಗೂ ಬಿ.ಎಡ್. ಪದವೀಧರರು. ಕಲಬುರ್ಗಿಯ ಶರಣ ಬಸವೇಶ್ವರ ಸಂಸ್ಥಾನದ ಮುಕ್ತಾಂಬಿಕ ಪದವಿ ಪೂರ್ವ ಮಹಿಳಾ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಡಾ. ಬೆಸಗರಹಳ್ಳಿ ರಾಮಣ್ಣ ಅವರ ಬದುಕು ಬರಹವನ್ನು ಕುರಿತು ಪಿ.ಎಚ್.ಡಿ. ಮಹಾಪ್ರಬಂಧವನ್ನು ಕಲಬುರ್ಗಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಸುಮಾರು 20 ವರ್ಷಗಳಿಂದ ಹವ್ಯಾಸಿ ರಂಗಭೂಮಿಯ ನಟಿಯಾಗಿ ಕ್ರೀಯಾಶೀಲರಾಗಿದ್ದಾರೆ. ಸಾಹಿತ್ಯ, ಸಂಸ್ಕೃತಿ, ರಂಗಭೂಮಿ, ಸಮಾಜಸೇವೆ ಇವರ ಇತರ ಆಸಕ್ತ ಕ್ಷೇತ್ರಗಳು, ಶೋಷಿತ ಮಹಿಳೆಯರನ್ನು ಸಂಘಟಿಸಿ ಆ ನಿಟ್ಟಿನಲ್ಲಿ ಹೋರಾಟ ನಡೆಸಿದ್ದಾರೆ.

ಶ್ರೀಮತಿಯವರು 'ಸಂಗೊಳ್ಳಿ ರಾಯಣ್ಣ', 'ಕಿತ್ತೂರು ಚೆನ್ನಮ್ಮ', 'ಈಡೋಬಿ', 'ಮಗ್ಗಲು ಮನೆ ಅತಿಥಿ', 'ವಿವೇಕಾನಂದ', 'ಮಹಿಮಾಪುರ', 'ಹ್ಯಾಮ್ಲೆಟ್', 'ಶ್ರಮಮೇವ ಜಯತೆ' ಮುಂತಾದ ನಾಟಗಳಲ್ಲಿ ಅಭಿನಯಿಸಿದ್ದಾರೆ. ಆಕಾಶವಾಣಿ, ದೂರದರ್ಶನ ಹಾಗೂ ಬೀದಿನಾಟಕಗಳಲ್ಲಿಯೂ ಅಭಿನಯಿಸಿ ಜನಪ್ರಿಯರಾಗಿದ್ದಾರೆ. ಕಾಲೇಜು ವಿದ್ಯಾರ್ಥಿನಿಯರ ರಂಗಾಭಿನಯ ಶಿಬಿರ, ಸಾಹಿತ್ಯ ಸಂಸ್ಕೃತಿ ಶಿಬಿರಗಳ ಸಂಚಾಲಕಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಕೊಳಗೇರಿ ಮಹಿಳೆಯರಿಗಾಗಿ ಜಾಗೃತಿ ಶಿಬಿರಗಳ ಸಂಚಾಲಕಿಯಾಗಿಯೂ ಕಾರ್ಯನಿರ್ವಹಿಸಿದ್ದಾರೆ. ಹವ್ಯಾಸಿ ರಂಗಭೂಮಿ ಮತ್ತು ನವ್ಯ ಚಳುವಳಿ, ಮಹಿಳಾ ನಾಟಕಗಳ ಸಾಧ್ಯತೆಗಳು, ಜನಜಾಗೃತಿಯಲ್ಲಿ ಬೀದಿನಾಟಕಗಳು, ಬೆಸಗರಹಳ್ಳಿ ರಾಮಣ್ಣನವರ ಕಥೆಯಲ್ಲಿ ಸಾಮಾಜಿಕ ಸಂಘರ್ಷ ಇಂತಹ ಹಲವು ವಿಷಯಗಳ ಮೇಲೆ ಪ್ರಬಂಧಗಳನ್ನು ಮಂಡಿಸಿದ್ದಾರೆ.

---



## ಕೆ.ಹೆಚ್. ಕುಮಾರ್ (ಸಿ.ಜಿ.ಕೆ. ಯುವರಂಗ ಪುರಸ್ಕಾರ)

ಬೆಂಗಳೂರಿನ ರಾಜಾಜಿನಗರದ ಎಧ್ಧಲೂರು ದಿಣ್ಣೆಯ ಕೆ. ಹೊನ್ನಪ್ಪ ಅವರ ಪುತ್ರರಾಗಿ 2 ಏಪ್ರಿಲ್ 1971ರಲ್ಲಿ ಜನನ. ಶ್ರೀ ಕುಮಾರ್ ಅವರು ಅಭಿನಯ ತರಂಗದಲ್ಲಿ ರಂಗಭೂಮಿಯ ಕುರಿತಾದ ಡಿಪ್ಲೊಮೊ ಪದವಿ ಗಳಿಸಿದ್ದಾರೆ. ಎ.ಎಸ್. ಮೂರ್ತಿ, ಸಿ.ಜಿ. ಕೃಷ್ಣಸ್ವಾಮಿ, ರಾಮಮೂರ್ತಿ, ಆರ್.ಟಿ. ರಮಾ, ಅಶೋಕ್ ಬಾದರದಿನ್ನಿ, ಮೇಕಪ್‌ನಾಣಿ, ಚಂದ್ರಕುಮಾರ್ ಸಿಂಗ್‌ರಂತಹ ರಂಗಭೂಮಿಯ ದಿಗ್ಗಜರ ಕೈಕೆಳಗೆ ಕೆಲಸ ಮಾಡುತ್ತಾ ರಂಗಭೂಮಿಗೆ ಪಾದಾರ್ಪಣೆ ಮಾಡಿದರು.

ಮೊದ ಮೊದಲು ಬೀದಿ ನಾಟಕಗಳು ಹಾಗೂ ರಂಗನಾಟಕಗಳಲ್ಲಿ ನಟನಾಗಿ ಅಭಿನಯಿಸುತ್ತಾ, ನೇಪಥ್ಯದೆಡೆಗೆ ಆಕರ್ಷಿತರಾಗಿ ಆ ಕ್ಷೇತ್ರಕ್ಕೆ ಅರ್ಪಿಸಿಕೊಂಡವರು. 1993ರಲ್ಲಿ ಮಕ್ಕಳ ರಂಗಶಾಲೆ ರಂಗೋತ್ರಿಯನ್ನು ಬೆಂಗಳೂರಿನ ರಾಜಾಜಿನಗರ ಶ್ರೀರಾಮಮಂದಿರದ ಬಯಲು ರಂಗಮಂದಿರದಲ್ಲಿ ಸ್ಥಾಪಿಸಿದ್ದಾರೆ. ಬೆಳಕು ವಿನ್ಯಾಸಕಾರರಾಗಿ, ವೇದಿಕೆ ವಿನ್ಯಾಸಕಾರರಾಗಿ ನೇಪಥ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. 'ದೇವರ ಆಟ', 'ಸಂಗ್ರಾಮ ಭಾರತ', 'ಕಾರ್ಪೋರೇಷನ್ ಲಾರಿ', 'ಸಾಕ್ರಟೀಸ್' ಇನ್ನೂ ಹಲವಾರು ನಾಟಕಗಳನ್ನು ಮಕ್ಕಳಿಗಾಗಿ ನಿರ್ದೇಶಿಸಿದ್ದಾರೆ.

ಕಳೆದ ನಾಲ್ಕು ವರ್ಷಗಳಿಂದ ಕುವೆಂಪು ಸ್ಮಾರಕ ಅಂತರ ಕಾಲೇಜು ಪರ್ಯಾಯ ಪಾರಿತೋಷಿಕ ನಾಟಕ ಸ್ಪರ್ಧೆಯಲ್ಲಿ ಏರ್ಪಡಿಸಿದ್ದಾರೆ. ಮೇ ತಿಂಗಳ ಬುದ್ಧ ಪೌರ್ಣಿಮೆಯಂದು ಪ್ರತಿ ವರ್ಷವೂ ಬೆಳದಿಂಗಳ ಕವಿಗೋಷ್ಠಿ ಹಾಗೂ ಸಾಹಿತ್ಯ ಗೋಷ್ಠಿಗಳನ್ನು ನಿರಂತರವಾಗಿ ನಡೆಸುತ್ತಾ ಬಂದಿದ್ದಾರೆ. ರಾಜಾಜಿನಗರದ ಆಟದ ಮೈದಾನದಲ್ಲಿ ಪ್ರತಿವರ್ಷವೂ ಗ್ರಾಮೀಣ ಕಲೆಗಳ ಸ್ಪರ್ಧೆಗಳನ್ನು ಏರ್ಪಡಿಸುವ ಮೂಲಕ ತಮ್ಮನ್ನು ಕ್ರೀಡಾ ರಂಗಕ್ಕೂ ಅರ್ಪಿಸಿಕೊಂಡಿದ್ದಾರೆ.

---



## ಉಮೇಶ್ ತೆಂಕನಹಳ್ಳಿ (ಸಿ.ಜಿ.ಕೆ. ಯುವರಂಗ ಪುರಸ್ಕಾರ)

ಹಾಸನ ಜಿಲ್ಲೆಯ ತೆಂಕನಹಳ್ಳಿಯಲ್ಲಿ ನಂಜೇಗೌಡ ಹಾಗೂ ಗೌರಮ್ಮ ದಂಪತಿಗಳಿಗೆ ಪುತ್ರರಾಗಿ 1976ರಲ್ಲಿ ಜನನ. ಒಂದು ದಶಕಗಳಿಂದಲೂ ರಂಗಭೂಮಿಯ ನಂಟು. ಸಿ. ಬಸವಲಿಂಗಯ್ಯ, ರಘುನಂದನ, ಕೃಷ್ಣಮೂರ್ತಿ ಕವತ್ತಾರ್, ಜೀವನರಾಂ ಸುಳ್ಯ, ಜನ್ನಿ ಮುಂತಾದ ಪ್ರಸಿದ್ಧ ನಿರ್ದೇಶಕರ ಗರಡಿಯಲ್ಲಿ ಪಳಗಿದ್ದಾರೆ. ಇದುವರೆಗೆ 'ನಂದನ', 'ಅಕಸಂ', 'ಜನಪದ ರಂಗಮಾಧ್ಯಮ', 'ನಾವು–ನೀವು' ಮುಂತಾದ ರಂಗತಂಡಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅಭಿನಯ, ರಂಗಪರಿಕರ, ವೇಷಭೂಷಣ ತಯಾರಿಕೆಯಲ್ಲಿ ಪರಿಣಿತಿ ಹೊಂದಿದ್ದಾರೆ.

ಇವರು ಅಭಿನಯಿಸಿದ 'ಕರಿಭಂಟ ಮೂಡಲಪಾಯ ಯಕ್ಷಗಾನ' ಇವರ ರಂಗಬದುಕಿನ ಒಂದು ಮೈಲುಗಲ್ಲು. ಬೀದಿನಾಟಕ ಶಿಬಿರಗಳಲ್ಲೂ ತರಬೇತಿ ಹೊಂದಿ ತೆಂಕನಹಳ್ಳಿ ಅಸ್ಪೃಶ್ಯತಾ ನಿವಾರಣೆಯಂತಹ ಸಾಮಾಜಿಕ ಕಾಳಜಿಯ ಬೀದಿನಾಟಕಗಳಲ್ಲಿಯೂ ಅಭಿನಯಿಸಿದ್ದಾರೆ. 'ಸಂಭವಾಮಿ ಯುಗೇ ಯುಗೇ' ನಾಟಕವನ್ನು ನಿರ್ದೇಶಿಸಿ, ವಸ್ತ್ರವಿನ್ಯಾಸವನ್ನು ಮಾಡಿ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಗ್ರಾಮೀಣ ಪರಿಸರದಿಂದ ಬಂದ ಅಪ್ಪಟ ದೇಸೀ ಪ್ರತಿಭೆಯಾದ ಶ್ರೀ ತೆಂಕನಹಳ್ಳಿ ಅವರಿಂದ ಇನ್ನೂ ಹೆಚ್ಚಿನ ರಂಗಸೇವೆ ನಿರೀಕ್ಷಿಸಬಹುದು.

---



**ಡಾ. ಗಣೇಶ್ ಅಮೀನಗಡ** (ಪುಸ್ತಕ ಬಹುಮಾನ ಪುರಸ್ಕಾರ – 2004)

**ಪ್ರಯೋಗ ಪ್ರಸಂಗ**

ಊರೂ ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನ ಅಮೀನಗಡ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಕನ್ನಡ ಎಂ.ಎ. ಪದವಿ, ಹಂಪಿ ವಿಶ್ವವಿದ್ಯಾಲಯದಿಂದ 'ಕನ್ನಡ ಬಂಡಾಯ ಕಾವ್ಯದಲ್ಲಿ ಪ್ರತಿಮಾ ಸಂವಿಧಾನ' ಕುರಿತು ಪಿ.ಎಚ್.ಡಿ. ಪ್ರಬಂಧ ಇವರದ್ದಾಗಿದೆ.

ಮೂರು ವರ್ಷ ಸಂಯುಕ್ತ ಕರ್ನಾಟಕದಲ್ಲಿ ಪತ್ರಕರ್ತರಾಗಿದ್ದು, ಪ್ರಸ್ತುತ ಹುಬ್ಬಳ್ಳಿಯಲ್ಲಿ ಪ್ರಜಾವಾಣಿ ವರದಿಗಾರರಾಗಿದ್ದಾರೆ. ವಿದ್ಯಾರ್ಥಿಯಾಗಿದ್ದಾಗ ಬೀದಿ ನಾಟಕ ಆಡಿದ ಅನುಭವ ಇವರದು. ಜ್ಞಾನ ವಿಜ್ಞಾನ ಸಮಿತಿಯಿಂದ ವಿಜಾಪುರ ಜಿಲ್ಲೆ ತುಂಬ ಬೀದಿನಾಟಕವಾಡಿದ್ದಾರೆ. ರಂಗಭೂಮಿ ಕುರಿತ ಲೇಖನಗಳ ಸಂಕಲನ, 'ಪ್ರಯೋಗ ಪ್ರಸಂಗ' ಇವರ ಮೊದಲ ಕೃತಿ. ಇದಕ್ಕೆ ಬೆಂಗಳೂರಿನ ರುಕ್ಮಿಣಿ ಬಾಯಿ ಸ್ಮಾರಕ ಟ್ರಸ್ಟ್ ಪ್ರಶಸ್ತಿ, ವಿಜಾಪುರದ ಯುವ ಲೇಖಕರ ವೇದಿಕೆಯ ಪ್ರಶಸ್ತಿ ಹಾಗೂ ಸೇಡಂನ ಅಮ್ಮ ಪ್ರಶಸ್ತಿ ಲಭಿಸಿವೆ.

ಕಳೆದ ವರ್ಷ ಹಿರಿಯ ರಂಗಕರ್ಮಿ ಏಣಗಿ ಬಾಳಪ್ಪ ಅವರ ರಂಗ ಬದುಕಿನ ದಾಖಲೆಯ 'ಬಣ್ಣದ ಬದುಕಿನ ಚಿನ್ನದ ದಿನಗಳು' ಪುಸ್ತಕ ಪ್ರಕಟಗೊಂಡಿದೆ. ಇದು ಪ್ರಕಟವಾದ ವರ್ಷದಲ್ಲೇ 3ನೇ ಮುದ್ರಣ ಕಂಡಿದೆ. ಮೈಸೂರಿನ ರಂಗಾಯಣದ ಪ್ರಸ್ತುತ ರಂಗಸಮಾಜದ ಸದಸ್ಯರು.

**ಕೃತಿ ಕುರಿತು** – ಈ ಕೃತಿಯಲ್ಲಿ ಜನಪದ ರಂಗಭೂಮಿ, ವೃತ್ತಿ ರಂಗಭೂಮಿ, ಹವ್ಯಾಸಿ ರಂಗಭೂಮಿಗಳನ್ನು ಕುರಿತಂಥಹ ಲೇಖನಗಳಿವೆ. ಜೊತೆಗೆ, ನಾಟಕ ವಿಮರ್ಶೆಗಳು, ಖ್ಯಾತ ರಂಗಕರ್ಮಿಗಳ ಸಂದರ್ಶನಗಳೂ ಇವೆ. ರಂಗಭೂಮಿಯ ಪ್ರತಿಯೊಂದು ಪ್ರಭೇದದಲ್ಲೂ ಯಾವ ರೀತಿಯ ಬೆಳವಣಿಗೆಯಾಗಿದೆ. ಮುಂದೆ ಸಾಗಬೇಕಾದ ದಾರಿ ಯಾವುದು ಎಂಬುದರ ಬಗ್ಗೆ ಲೇಖಕರು ತೀವ್ರವಾದ ಕಾಳಜಿಯಿಂದ ಅವಲೋಕಿಸಿರುವುದು ಈ ಕೃತಿಯ ಹೆಚ್ಚುಗಾರಿಕೆ. ಭಾಷೆ ಸಮರ್ಥವಾಗಿದ್ದು, ನಿರೂಪಣೆ–ಶೈಲಿಗಳು ಆಪ್ತವಾಗಿದ್ದು, ಪುಸ್ತಕ ವಿನ್ಯಾಸ ಸುಂದರವಾಗಿದೆ. ರಂಗಭೂಮಿಯನ್ನು ಸಮಗ್ರವಾಗಿ ಅವಲೋಕಿಸಿ ಹೊಸ ಹೊಳಹುಗಳನ್ನು ನೀಡುತ್ತಾರೆ. ರಂಗಭೂಮಿಯ ಬಗ್ಗೆ ಲೇಖಕರಿಗಿರುವ ಅತೀವ ಕಾಳಜಿ ಮನಸ್ಸಿಗೆ ತಟ್ಟುತ್ತದೆ. ರಂಗಭೂಮಿಯ ಬೆಳವಣಿಗೆಗೆ ಬೇಕಾದ ಚಿಂತನಶೀಲ ಅಭಿಪ್ರಾಯಗಳು ಈ ಕೃತಿಯಲ್ಲಿವೆ.





**ಡಾ. ಎಸ್.ಎಂ. ಗಂಗಾಧರಯ್ಯ** (ಪುಸ್ತಕ ಬಹುಮಾನ ಪುರಸ್ಕಾರ – 2005)

**ರಂಗ ಗಂಭೀರ**

ಡಾ. ಎಸ್.ಎಂ. ಗಂಗಾಧರಯ್ಯ ಅವರು ಹುಟ್ಟಿದ್ದು 01–03–1970ರಲ್ಲಿ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಕೊಟ್ಟೂರು ಹತ್ತಿರದ ರಾಂಪುರ ಗ್ರಾಮದಲ್ಲಿ. ಪ್ರಸ್ತುತ, ಬೆಂಗಳೂರಿನ ಮಹಾರಾಣಿ ಮಹಿಳಾ ವಿಜ್ಞಾನ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಈ ಹಿಂದೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚನ್ನಪಟ್ಟಣದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದರು. ಕರ್ನಾಟಕ ವಿಧಾನ ಪರಿಷತ್ತಿನಲ್ಲಿ ಎಂಟು ವರ್ಷಗಳ ಕಾಲ ಭಾಷಾಂತರಕಾರರಾಗಿ ಸೇವೆ ಸಲ್ಲಿಸಿದ್ದಾರೆ.

ಬಾಲ್ಯದಲ್ಲಿಯೇ ರಂಗ ಸಂಘಟನೆಯ ಹವ್ಯಾಸ ಬೆಳೆಸಿಕೊಂಡ ಇವರು ವಾಮನರಾವ್ ಮಾಸ್ತರ್, ನಾಲ್ವಡಿ ಶ್ರೀಕಂಠ ಶಾಸ್ತ್ರಿಗಳು, ಕಂದಗಲ್ಲ ಹನುಮಂತರಾಯರು ಅಲ್ಲದೆ ಶ್ರೀರಂಗರ ಆರು ನಾಟಕಗಳನ್ನು, ನಿರ್ದೇಶಿಸಿ ರಂಗಪ್ರಯೋಗಿಸಿದ್ದರು. 'ಸಂಸ್ಕೃತಿ ಸಂಶೋಧನೆ', 'ರಂಗಭೂಮಿ', 'ಸಾಹಿತ್ಯ ವಿಮರ್ಶೆ' ಸೇರಿದಂತೆ ಸುಮಾರು

ಹದಿನೆಂಟು ಕೃತಿಗಳನ್ನು ಬರೆದು ಪ್ರಕಟಿಸಿರುವವರು. ಡಾ. ಶಂಭಾ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ ಎಂಬುದು ಇವರ ಸಂಶೋಧನಾ ಪ್ರಬಂಧವಾಗಿದೆ. 'ರಂಗ ಗಂಭೀರ', ಇವರ ರಂಗಭೂಮಿಯನ್ನು ಕುರಿತಾದ ಇವರ ಕೃತಿ. 'ಸರಿಗಮದ ಸೆಳೆತಗಳು' ರಂಗ ಸಂಗೀತದೊಟ್ಟಿಗೆ ಕನ್ನಡ ಸಂದರ್ಭದ ಉತ್ತರ ಕರ್ನಾಟಕದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ ಪರಂಪರೆಯನ್ನು ಅನಾವರಣಗೊಳಿಸುವ ಕೃತಿಯಾಗಿದೆ.

**ಕೃತಿ ಕುರಿತು** – ಕನ್ನಡದ ಷೇಕ್ಸ್‌ಪಿಯರ್ ಎಂದೇ ಪ್ರಸಿದ್ಧರಾಗಿದ್ದ ಕಂದಗಲ್ಲ ಹನುಮಂತರಾಯರ ಜೀವನ, ರಂಗಜೀವನ, ಸಾಹಿತ್ಯಿಕ ಕೊಡುಗೆಗಳ ಬಗ್ಗೆ ಸಮಗ್ರವಾಗಿ ಅಧ್ಯಯನ ಮಾಡಿರುವ ಗ್ರಂಥ. ಕಂದಗಲ್ಲ ಹನುಮಂತರಾಯರ ರಂಗಜೀವನವನ್ನು ನಮ್ಮೆದುರಿಗೆ ನಿಲ್ಲಿಸುವ ಪ್ರಯತ್ನ ಈ ಕೃತಿಯಲ್ಲಾಗಿದೆ. ಅಲ್ಲದೆ, ಅವರು ಬರೆದ ನಾಟಕಗಳ ಮೂಲ, ಅವುಗಳು ಪ್ರದರ್ಶಿತವಾದ ರೀತಿ, ಅಂದಿನ ಪ್ರೇಕ್ಷಕನ ಪ್ರತಿಕ್ರಿಯೆ ಎಲ್ಲವೂ ದಾಖಲಾಗಿದೆ. ಚರಿತ್ರೆಯನ್ನು ಅರಿಯದವ ಚರಿತ್ರೆಯನ್ನು ಸೃಷ್ಟಿಸಲಾರ ಎಂಬ ಮಾತಿದೆ. ಹಾಗೆಯೇ ಇಂದಿನ ರಂಗಚರಿತ್ರೆ ಕಟ್ಟಲು, ಹಿಂದಿನವರ ಅನುಭವ ತಿಳಿದುಕೊಳ್ಳುವುದು ಬಹುಮುಖ್ಯ ಈ ನಿಟ್ಟಿನಲ್ಲಿ ಈ ಕೃತಿಗೆ ಮಹತ್ವ ಬರುತ್ತದೆ.

---



## ಗುಡಿಹಳ್ಳಿ ನಾಗರಾಜ (ಪುಸ್ತಕ ಬಹುಮಾನ ಪುರಸ್ಕಾರ – 2006)

**ತೆರೆ ಸರಿದಾಗ**

ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲೂಕು, ಗುಡಿಹಳ್ಳಿ, ಅರಸೀಕೆರೆಯ ನಾಗರಾಜ ಬಾಲ್ಯದಲ್ಲಿಯೇ ರಂಗಾಸಕ್ತಿಯನ್ನು ಅಂಟಿಸಿಕೊಂಡವರು. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಇಂಗ್ಲೀಷ್ ಪದವಿ ಪಡೆದವರು. ವಿದ್ಯಾರ್ಥಿ ದೆಸೆಯಿಂದಲೇ ಭಾಷೆ, ಸಾಹಿತ್ಯ ಚಳವಳಿಯಲ್ಲಿ ತೊಡಗಿಸಿಕೊಂಡಿದ್ದ ಇವರು ರಾಜ್ಯ ಸಮುದಾಯ ಸಂಘಟಿಸಿದ್ದ ಜಾಥಾದಲ್ಲಿ ತೀವ್ರವಾಗಿ ತೊಡಗಿಸಿಕೊಂಡವರು.

1983ರಲ್ಲಿ ಪ್ರಜಾವಾಣಿಯ ಉಪ ಸಂಪಾದಕರಾಗಿ ಸೇರ್ಪಡೆಗೊಂಡ ನಂತರವೂ ರಂಗ ನಂಟನ್ನು ಬಿಡದ ಗುಡಿಹಳ್ಳಿಯವರು ರಂಗಭೂಮಿಯ ನಿರ್ಲಕ್ಷ್ಯ ಕ್ಷೇತ್ರಗಳತ್ತ ಗಮನಹರಿಸಿದರು. 'ರಂಗಸಿರಿ: ಕೆ. ನಾಗರತ್ನಮ್ಮನವರ ಆತ್ಮಕತೆ', 'ಕಲಾಗ್ರಾಮ ಮರಿಯಮ್ಮನಹಳ್ಳಿ', ಈ ಕೃತಿಗಳು ಗುಡಿಹಳ್ಳಿ ನಾಗರಾಜರ ಗ್ರಾಮೀಣ ರಂಗಭೂಮಿಯ ಮೇಲಿನ ಪ್ರೀತಿಯ ಸಾಕ್ಷಿಗಳು. 'ಚಿಂದೋಡಿ ಲೀಲಾ' ಇವರ ಮತ್ತೊಂದು ಕೃತಿ. ಇದನ್ನು ಕರ್ನಾಟಕ ನಾಟಕ ಅಕಾಡೆಮಿ ಪ್ರಕಟಿಸಿದೆ, ಇವರ ಮತ್ತೊಂದು ಮಹತ್ವದ ಕೃತಿ 'ರಂಗನಾಟಕ ಪ್ರಯೋಗ ಸಾರ್ಥಕತೆ'. ವೃತ್ತಿರಂಗದ ಮಹತ್ವದ ನಾಟಕಗಳು 'ಸಾಹಿತ್ಯ ಮತ್ತು ಸಮೂಹ ಪ್ರಜ್ಞೆ', 'ದುತ್ತರಗಿಯವರ ಆಯ್ದ ನಾಟಕಗಳು' ಮುಂತಾದ ಗ್ರಂಥಗಳನ್ನು ಸಂಪಾದಿಸಿರುವ ಇವರು ರಂಗಸಾಹಿತ್ಯಕ್ಕೆ ನೀಡಿರುವ ಕೊಡುಗೆ ಅಪಾರ.

**ಕೃತಿ ಕುರಿತು** – ವೃತ್ತಿ ರಂಗಭೂಮಿಯ ನಟಿ ಮಾಲತಿಶ್ರೀ ಮೈಸೂರು ಅವರ ಹೋರಾಟದ ಬದುಕನ್ನು ಈ ಕೃತಿ ತೆರೆದಿಡುತ್ತದೆ. ರಂಗಕರ್ಮಿಗಳ ಬದುಕು ದುಸ್ತರವಾದದ್ದು, ಅದರಲ್ಲೂ ರಂಗಭೂಮಿಯ ಮಹಿಳೆಯರ ಬದುಕು ಕರುಣಾಜನಕವಾಗಿರುತ್ತದೆ. ಆದರೂ, ಆ ಕ್ಷೇತ್ರದಲ್ಲೇ ಛಲತೊಟ್ಟು ಮುಂದುವರಿದ ಮಹಿಳೆಯೊಬ್ಬಳ ಬದುಕಿನ ಎಳೆಎಳೆಗಳನ್ನೂ ಬಿಡಿಸಿಡುವ ಈ ಕೃತಿ, ಆ ಕಾಲದ ವೃತ್ತಿ ರಂಗಭೂಮಿಯ ಸ್ಥಿತಿಗತಿಗಳನ್ನೂ ಒಟ್ಟೊಟ್ಟಿಗೇ ದಾಖಲಿಸುತ್ತ ಹೋಗುತ್ತದೆ. ನಿರೂಪಣೆ–ಶೈಲಿ ಆಪ್ತವಾಗಿದ್ದು, ಭಾಷೆ ಸಮರ್ಥವಾಗಿದೆ. ಒಬ್ಬ ನಟಿಯ ಮನದಾಳದಿಂದ ನೆನಪಿನ ಎಳೆಗಳನ್ನು ಹೊರಗೆಳೆಯುವ ಶ್ರಮದ ಕೆಲಸವನ್ನು ಗುಡಿಹಳ್ಳಿ ನಾಗರಾಜ ಅವರು ಸಮರ್ಥವಾಗಿ ಮಾಡಿದ್ದಾರೆ. ಇದೊಂದು ಮಹತ್ವದ ದಾಖಲೆ.

---



## ಡಾ. ಜಯಪ್ರಕಾಶ್ ಮಾವಿನಕುಳಿ (ಪುಸ್ತಕ ಬಹುಮಾನ ಪುರಸ್ಕಾರ–2006)

**ಬಾರೇ ಗೆಳತಿ ನಾಟಕ ನೋಡೋಣ**

ಮೈಸೂರು ವಿಶ್ವವಿದ್ಯಾಲಯದಿಂದ ಎಂ.ಎ. ಪದವಿ ಹಾಗೂ ಮಂಗಳೂರು ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವ ಪಡೆದಿರುವ ಮಾವಿನಕುಳಿಯವರು ಪ್ರಸ್ತುತ ಉಡುಪಿಯ ಎಂ.ಜಿ.ಎಂ. ಕಾಲೇಜಿನ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಮಂಗಳೂರು ವಿಶ್ವವಿದ್ಯಾಲಯದ ಸಿಂಡಿಕೇಟ್, ಸೆನೆಟ್ ಹಾಗೂ ಅಕಾಡೆಮಿಕ್ ಕೌನ್ಸಿಲ್ ಸದಸ್ಯರಾಗಿ, ಕರ್ನಾಟಕ ನಾಟಕ ಅಕಾಡೆಮಿ ಸದಸ್ಯರಾಗಿ, ಮೂಡಬಿದ್ರೆ ಶಿವರಾಮ ಕಾರಂತ ಪ್ರತಿಷ್ಠಾನದ ಪ್ರಧಾನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ.

ಸ್ವತಃ ನಟರಾಗಿರುವ ಇವರು 'ಕೊಡೆಗಳು', 'ಅಮ್ರಪಾಲಿ', 'ಬದುಕ ಮನ್ನಿಸು ಪ್ರಭುವೇ', 'ಅಸ್ಫೋಟ', 'ಯಯಾತಿ', 'ಕತ್ತಲೆ ದಾರಿ ದೂರ' ಹಾಗೂ ಇನ್ನಿತರ ನಾಟಕಗಳನ್ನು ನಿರ್ದೇಶಿಸಿದ್ದಾರೆ. 'ಸಾಗರದಲ್ಲಿ ಸಾಯಂಕಾಲ', 'ಅಶ್ವತ್ಥಾಮ', 'ವಿರಹ–ಕಡಲು' ಇವರ ಕವಿತಾ ಸಂಕಲನಗಳು. 'ಪಾರ್ಟಿ', 'ಮಹಾಯಾತ್ರೆ', 'ಕೊಡೆಯಪ್ಪನ ಕಥಾ ಪ್ರಸಂಗ', ರೂಪಾಂತರ ಇವರ ನಾಟಕಗಳು, 'ಕಾಲ', 'ಮುಖಗಳು', 'ಹೆಜ್ಜೆ ಮೂಡದ ಹಾದಿಯಲ್ಲಿ ಚಂದಿರನೇಕೆ ಓಡುವನಮ್ಮ' ಕಥಾ ಸಂಕಲನಗಳು ಇವು ಇವರ ಲೇಖನಿಯಿಂದ ಮೂಡಿ ಬಂದ ಕೃತಿಗಳು.

**ಕೃತಿ ಕುರಿತು** – ವರ್ತಮಾನದ ರಂಗಭೂಮಿಯ ಬಹುತೇಕ ಎಲ್ಲಾ ಮಹತ್ವದ ಪ್ರಯೋಗಗಳ ವಿಮರ್ಶೆ ಈ ಕೃತಿಯಲ್ಲಿದೆ. ನಾಟಕವನ್ನು ಮೇಲ್ಪದರದಲ್ಲಷ್ಟೇ ನೋಡದೆ, ಅದರ ವಸ್ತುವಿಗೆ ಆಳವಾಗಿ ಇಳಿದು, ವಿಶ್ಲೇಷಿಸುತ್ತ, ಪ್ರಯೋಗದ ಅಂಗಗಳಾದ ರಂಗ ಸಜ್ಜಿಕೆ, ಪರಿಕರ, ಸಂಗೀತ, ವಸ್ತ್ರ ವಿನ್ಯಾಸ, ಬೆಳಕುಗಳ ಬಗ್ಗೆಯೂ ತರ್ಕಬದ್ಧ ತೀರ್ಮಾನಗಳನ್ನು ನೀಡುವ ಈ ಕೃತಿಯು ನಾಟಕ ವಿಮರ್ಶೆಗಳು ಮಾದರಿಯೆನಿಸುವಂತಿವೆ. ವಿಮರ್ಶೆಗಳ ಶೈಲಿ ಆಪ್ತವಾಗಿದ್ದು, ಭಾಷೆಯಲ್ಲಿ ಖಚಿತತೆ ಇದೆ. ಲೇಖಕರ ರಂಗ ಕಳಕಳಿ ಪ್ರತಿ ಪುಟದಲ್ಲೂ ಎದ್ದು ಕಾಣುವಂತಿದೆ.



# 2008ರ ಪ್ರಶಸ್ತಿ ವಿಜೇತರು



**ಬಿ.ಎಸ್. ಕೇಶವರಾವ್** (ಜೀವಮಾನ ರಂಗಸಾಧನೆ ಗೌರವ ಪ್ರಶಸ್ತಿ)

ಗೆಳೆಯರ ಬಳಗದಲ್ಲಿ ಬಿಎಸ್‌ಕೆ ಎಂದೇ ಪರಿಚಿತರಾದ ಶ್ರೀ ಬಿ.ಎಸ್. ಕೇಶವರಾಯರು ಸಿವಿಲ್ ಇಂಜಿನಿಯರಿಂಗ್ ಕಾಲೇಜಿನಲ್ಲಿ ದೀರ್ಘಾವಧಿಯ ಶಿಕ್ಷಕರೂ, ಪ್ರಾಚಾರ್ಯರೂ ಆಗಿ ಶಿಕ್ಷಣ ಕ್ಷೇತ್ರಕ್ಕೆ ಮಾಡಿದ ಅರ್ಥಪೂರ್ಣ ಸೇವೆಯನ್ನೇ ಕಲಾವಿದರಾಗಿ, ನಿರ್ದೇಶಕರಾಗಿ, ವಿಮರ್ಶಕರಾಗಿ, ಸಾಹಿತಿಯಾಗಿ, ನಾಟಕ ಕ್ಷೇತ್ರಕ್ಕು ಮಾಡಿದ್ದಾರೆ ಹಾಗೂ ಮಾಡುತ್ತಿದ್ದಾರೆ.

1948ರಲ್ಲಿ ಆಕಾಶವಾಣಿಯ ನಾಟಕ ವಿಭಾಗದ ಕಲಾವಿದರಾಗಿ ತಮ್ಮ ಪ್ರವೃತ್ತಿ ಜೀವನ ಪ್ರಾರಂಭಿಸಿದ ಶ್ರೀಯುತರು 1953ರಲ್ಲಿ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರ ಸಮ್ಮುಖದಲ್ಲಿ 'ಧರ್ಮದುರಂತ' ನಾಟಕದಲ್ಲಿ ನಟಿಸಿ, 1955ರಲ್ಲಿ ಶಿವರಾಮ ಕಾರಂತರ ಅಧ್ಯಕ್ಷತೆಯಲ್ಲಿ ಮೈಸೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕಾರಂತರೇ ಬರೆದ 'ಗರ್ಭಗುಡಿ' ನಾಟಕವನ್ನು ನಿರ್ದೇಶಿಸಿದ್ದೇ ಅಲ್ಲದೇ ಅದರಲ್ಲಿ ಪಾತ್ರಧಾರಿಯಾಗಿಯೂ ಕಾಣಿಸಿದ್ದರು.

1957ರಲ್ಲಿ ಹವ್ಯಾಸಿ ರಂಗಭೂಮಿಯಲ್ಲಿ ಮೊಟ್ಟಮೊದಲಾಗಿ 'ತ್ರಿ-ರಂಗಭೂಮಿ' ರಚಿಸಿ, ಪರ್ವತವಾಣಿಯವರ 'ಸುಂದ್ರೋಪಸುಂದ್ರು' ನಾಟಕವನ್ನು ನಿರ್ದೇಶಿಸಿ ಪ್ರಯೋಗಿಸಿದರು.

ತಮ್ಮ ಸುಮಾರು ಆರು ದಶಕಗಳ ರಂಗ ಹಾಗೂ ಸಾಹಿತ್ಯ ಕ್ಷೇತ್ರ ಸೇವೆಯಲ್ಲಿ ಕೈಲಾಸಂ, ಕಾರಂತರು, ಮೂರ್ತಿರಾಯರು, ರಾಜರತ್ನಂ, ರಾಜಾರಾವ್, ಪರ್ವತವಾಣಿ, ಮುಂತಾದವರ ನಾಟಕಗಳನ್ನು ನಿರ್ದೇಶಿಸಿ, ಅವುಗಳಲ್ಲಿ ನಟಿಸಿದ್ದೇ ಅಲ್ಲದೆ, ಕೈಲಾಸಂ, ಕಸ್ತೂರಿ, ಬೀchi, ಅನಕೃ, ಕಾಳಿಂಗರಾವ್, ಗೊರೂರು ಹಾಗೂ ರಾ.ಶಿ. ಮುಂತಾದವರ ಕುರಿತು ನಾಡಿನಾದ್ಯಂತ ಭಾಷಣ ಮಾಡಿ, ಜನರಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಜಾಗೃತಿ ಮೂಡಿಸಿದ್ದಾರೆ.

ಕನ್ನಡಕ್ಕೊಬ್ಬನೇ ಕೈಲಾಸಂ, ಕನ್ನಡದ ಕೋಗಿಲೆ ಕಾಳಿಂಗರಾಯರು, ಕನ್ನಡದ ಕಟ್ಟಾಳು ಕೃಷ್ಣದೇವರಾಯರು, ಮುಂತಾದ ಸುಮಾರು 25ಕ್ಕೂ ಹೆಚ್ಚು ಕೃತಿ ರಚನೆ ಮಾಡಿದ್ದಾರೆ. ತರಾಸುರವರ 'ದುರ್ಗಾಸ್ತಮಾನ' ಮತ್ತು ಅ.ನ.ಕೃ ಅವರ 'ಕಿತ್ತೂರರಾಣಿ ಚೆನ್ನಮ್ಮ' ಕಾದಂಬರಿಗಳನ್ನು ರಂಗರೂಪಕ್ಕೆ ಹಾಗೂ ಬಾನುಲಿ ರೂಪಕ್ಕೆ ಅಳವಡಿಸಿರುತ್ತಾರೆ.

ಅನಕೃರವರ 'ಸಂಧ್ಯಾರಾಗ' ಕಾದಂಬರಿಯನ್ನು ಮೊಟ್ಟಮೊದಲಿಗೆ ಸಿಡಿ ರೂಪಕವಾಗಿ ಪ್ರಕಟಿಸಿದ್ದು ಇವರ ಹೆಗ್ಗಳಿಕೆ. ಇವರ 'ಕನ್ನಡದ ಕೋಗಿಲೆ ಕಾಳಿಂಗರಾಯರು' ಕೃತಿಗೆ ಆರ್ಯಭಟ ಪ್ರಶಸ್ತಿ, 'ಕನ್ನಡಕ್ಕೊಬ್ಬನೆ ಕೈಲಾಸಂ' ಕೃತಿಗೆ ಕೈಲಾಸಂ ಪ್ರಶಸ್ತಿ, 'ಅಪೂರ್ವರೊಡನೆ' ಕೃತಿಗೆ ಗೊರೂರು ಸಾಹಿತ್ಯ ಪ್ರಶಸ್ತಿ, 'ಮರೆಯಲಾಗದವರು' ಕೃತಿಗೆ ಕುವೆಂಪು ಸಾಹಿತ್ಯ ಪ್ರಶಸ್ತಿ ಹಾಗೂ ರಂಗಭೂಮಿಯ ಸೇವೆಗಾಗಿ ಎರಡನೇ ಬಾರಿ ಆರ್ಯಭಟ ಪ್ರಶಸ್ತಿಗಳು ಸಂದಿವೆ.

ಕರ್ನಾಟಕ ನಾಟಕ ಅಕಾಡೆಮಿಯು ಶ್ರೀ ಬಿ.ಎಸ್. ಕೇಶವರಾಯರು ರಂಗಭೂಮಿಗೆ ಸಲ್ಲಿಸಿದ ಬಹುಮುಖಿ ಸೇವೆಯನ್ನು ಗುರುತಿಸಿ 2008ನೇ ಸಾಲಿನ 'ಜೀವಮಾನ ಸಾಧನೆ' ಗೌರವ ರಂಗಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.



## ಫಕೀರಪ್ಪ ವರವಿ

(ಕಲ್ಬುರ್ಗ್ ಕಮೆಡಿಯನ್ ಕೆ. ಹಿರಣ್ಣಯ್ಯನವರ ದತ್ತಿ ಪುರಸ್ಕಾರ)

ಸುಮಾರು ಐದು ದಶಕಗಳಿಂದ ರಂಗಭೂಮಿಯನ್ನೇ ವಿಶ್ವವಿದ್ಯಾಲಯವನ್ನಾಗಿಸಿಕೊಂಡು ರಂಗಕಲೆಯನ್ನೇ ಶಿಕ್ಷಣವನ್ನಾಗಿಸಿಕೊಂಡ ಹಾಸ್ಯ ಚಕ್ರವರ್ತಿ ಶ್ರೀ ಫಕೀರಪ್ಪನವರ ಹುಟ್ಟೂರು, ಗದಗ ಜಿಲ್ಲೆ, ಶಿರಹಟ್ಟಿ ತಾಲೂಕಿನ ವರವಿ. 67 ವರ್ಷದ ಈ ಹಿರಿಯ ಕಂಪನಿ ನಾಟಕ ಕಲಾವಿದರ ಪ್ರಥಮ ಗುರು ವರವಿಯ ಮೊಗಲಾಯ ಮಾಸ್ತರು.

1952ರಲ್ಲಿ ಈ ಗುರುಗಳ ನಿರ್ದೇಶನದ 'ಚಿತ್ರಾಂಗದ' ನಾಟಕದಲ್ಲಿ ಶ್ರೀ ವರವಿಯವರ ಅಣ್ಣ ಭರಮಣ್ಣ ಉಲೂಪಿ ಪಾತ್ರಕ್ಕೆ ರಂಗತಾಲೀಮು ನಡೆಸಿದ್ದಾಗ, ಪ್ರತಿದಿನ ತಾಲೀಮು ನೋಡಲು ಹೋಗುತ್ತಿದ್ದ ಬಾಲಕ ವರವಿಯವರಿಗೆ ನಾಟಕದ ಹಾಡು ಮತ್ತು ಸಂಭಾಷಣೆ ಕಂಠಸ್ಥವಾಗಿತ್ತು, ಬಾಲಕನಲ್ಲಿದ್ದ ಈ ಪ್ರತಿಭೆಯನ್ನು ಗುರುತಿಸಿದ ಮೊಗಲಾಯ ಮಾಸ್ತರು ಇವರಿಗೆ ನಾಟಕದ ಮೊದಲು ಪೂಜಾ ಕುಣಿತಕ್ಕೆ ಅವಕಾಶ ಮಾಡಿಕೊಟ್ಟರು. ಇದನ್ನು ಕಂಡ ನಾಟಕದ ಗುರು ವೀರಭದ್ರಯ್ಯಸ್ವಾಮಿ ಹಿರೇಮಠರು ವರವಿಯವರಿಗೆ ತಮ್ಮ ಮನೆಯಲ್ಲಿ ಶಿಷ್ಯವೃತ್ತಿ ನೀಡಿ ಸಂಗೀತ ಕಲಿಸಿದರು. ಶಿರಹಟ್ಟಿ ಜಾತ್ರೆಯಲ್ಲಿ ಆಡಲ್ಪಟ್ಟ ಜಗಜ್ಯೋತಿ ಬಸವೇಶ್ವರ ನಾಟಕದಿಂದ ಪ್ರಭಾವಿತರಾಗಿ ದೊಡ್ಡವಾಡಿ ನಾಟಕ ಕಂಪನಿ ಸೇರಿದ ವರವಿಯವರು ಹಿಂದಿರುಗಿ ನೋಡಲಿಲ್ಲ.

ಬಸವೇಶ್ವರ, ಚೆನ್ನಬಸವೇಶ್ವರ, ಸ್ತ್ರೀ ರತ್ನ, ವಧು-ವರ, ನಾಟಕಗಳಲ್ಲಿ ಬಾಲಪಾತ್ರಗಳನ್ನು ಮಾಡಿ ಮುಂದೆ ಕೆ. ಹಿರಣ್ಣಯ್ಯ ಮಿತ್ರಮಂಡಲಿ ಸೇರಿ ಕೃಷ್ಣಲೀಲಾ, ರಾಮಾಯಣ, ದೇವದಾಸಿ, ಎಚ್ಚಮನಾಯಕ, ಲಂಚಾವತಾರ ಮುಂತಾದ ನಾಟಕಗಳಲ್ಲಿ ನಟಿಸಿದರು. ನಂತರ ಇವರು ಸೇರಿದ ಶ್ರೀ ವೀರಭದ್ರೇಶ್ವರ ನಾಟಕ ಸಂಘ ಬಿಜಾಪುರದಲ್ಲಿ ಕ್ಯಾಂಪ್ ಮಾಡಿದ್ದಾಗ ಒಮ್ಮೆ ಆಕಸ್ಮಾತ್ತಾಗಿ ಹಾಸ್ಯಪಾತ್ರಧಾರಿಯ ಅನುಪಸ್ಥಿತಿಯಲ್ಲಿ ಶ್ರೀ ವರವಿಯವರು ಆ ಪಾತ್ರ ನಿರ್ವಹಿಸಬೇಕಾಯಿತು. ಈ ಪಾತ್ರಪೋಷಣೆಯನ್ನು ಲೀಲಾಜಾಲವಾಗಿ ಮಾಡಿದ್ದರಿಂದ ಮುಂದೆ ಶ್ರೀ ವರವಿಯವರು ಮುಖ್ಯ ಹಾಸ್ಯ ಪಾತ್ರಧಾರಿಯಾಗಿ ಖಾಯಂಗೊಂಡರು.

ಮುಂದಿನ ದಿನಗಳಲ್ಲಿ ಇವರು ರೆಹಮಾನವ್ವನ ಕಂಪನಿ, ಮಾಂತೇಶ ಶಾಸ್ತ್ರಿಗಳ ಕಂಪನಿ, ಓಬಳೇಶ್ವರ ಕಂಪನಿ, ಸುಳ್ಳದ ದೇಸಾಯಿ ಕಂಪನಿ ಹಾಗೂ ಗೋಕಾಕ ಕಂಪನಿಗಳಲ್ಲಿ ರಂಗನಟನೆಯ ಅಪಾರ ಅನುಭವ ಪಡೆದು 1977ರಲ್ಲಿ ತಮ್ಮದೇ ಆದ 'ರಾಘವೇಂದ್ರ ವಿಜಯ ನಾಟ್ಯಸಂಘ' ಸ್ಥಾಪಿಸಿದರು.

ರಾಜ್ಯದ ಪ್ರಮುಖ ಪಟ್ಟಣಗಳಲ್ಲಿ ಜನಪ್ರಿಯವಾದ ಸಾಮಾಜಿಕ ನಾಟಕಗಳನ್ನು ನೂರಾರು ಬಾರಿ ಆಡಿ, ಅವುಗಳಲ್ಲಿನ ಪ್ರಮುಖ ಹಾಸ್ಯ ಪಾತ್ರಗಳನ್ನು ನಿರ್ವಹಿಸಿದ ಜನಮನ ಸೂರೆಗೊಂಡ ವರವಿಯವರು ಕೊಪ್ಪಳದಲ್ಲಿ ಹಾಸ್ಯ ಚಕ್ರವರ್ತಿ ಬಿರುದಾಂಕಿತರಾಗಿರುತ್ತಾರೆ. ಸುಮಾರು ನೂರು ಆಡಿಯೋ ಕ್ಯಾಸೆಟ್‌ಗಳಿಗೆ ಕಂಠದಾನ ಮಾಡಿರುವ ಈ ನಟ ಹತ್ತಾರು ಚಲನಚಿತ್ರಗಳಲ್ಲಿ ಪೋಷಕ ನಟನಾಗಿಯೂ ಅಭಿನಯಿಸಿದ್ದಾರೆ. ಇವರು ಬರೆದ 'ರಾತ್ರಿ' ಕಥೆ ದೂರದರ್ಶನದಲ್ಲಿ ಧಾರಾವಾಹಿಯಾಗಿ ಮೂಡಿಬಂದಿದೆ. ಇವರು ಬರೆದ 'ಅಲ್ಲಮಪ್ರಭು' ನಾಟಕ ಹಲವೆಡೆ ಪ್ರದರ್ಶನ ಕಂಡಿದೆ. ಏಳು ಪೌರಾಣಿಕ ನಾಟಕಗಳನ್ನು ಹಾಗೂ ಆರು ಸಾಮಾಜಿಕ ನಾಟಕಗಳನ್ನು ರಚಿಸಿ, ಈ ರಂಗಭೂಮಿಗೆ ಗುರುತರ ಸೇವೆ ಮಾಡಿರುತ್ತಾರೆ.

ಶ್ರೀ ಫಕೀರಪ್ಪ ವರವಿಯವರಿಗೆ ಕರ್ನಾಟಕ ನಾಟಕ ಅಕಾಡೆಮಿ 2008ನೇ ಸಾಲಿನ ಕಲ್ಬುರ್ಗ್ ಕಮೆಡಿಯನ್ ಕೆ. ಹಿರಣ್ಣಯ್ಯನವರ ದತ್ತಿ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ರಮಾನಂದ ಹಿರೇಜೇವರ್ಗಿ



ಉತ್ತರ ಕರ್ನಾಟಕ ಗಡಿಭಾಗದ ಅಫಜಲಪುರ ತಾಲೂಕಿನ ಹಿರೇಜೇವರ್ಗಿಯ ಶ್ರೀ ರೇವಣಸಿದ್ದಪ್ಪ ಈರಪ್ಪ ಮಾಲಿ ಪಾಟೀಲರು ಚಿಕ್ಕವಯಸ್ಸಿನಲ್ಲಿಯೇ ನಾಟಕದ ಗೀಳು ಬೆಳೆಸಿಕೊಂಡು 'ರಾಮಾನಂದ' ಹೆಸರಿನಿಂದ ರಂಗಭೂಮಿಗೆ ಪರಿಚಿತರಾದರು. ತಮ್ಮ ಹಲವಾರು ಕಥೆ ಕವನಗಳ ಮೂಲಕ 'ಕವಿ ಕಲಾಸಿಂಧು' ಬಿರುದಾಂಕಿತರಾಗಿ ನೂರಾರು ನಾಟಕಗಳಲ್ಲಿ ನಾಯಕನ ಪಾತ್ರವಹಿಸಿದ್ದಾರೆ.

77ರ ಹರೆಯದ ಶ್ರೀಯುತರು ತಮ್ಮ ರಮಾನಂದ ಮಿತ್ರಮಂಡಳಿ ಸಂಗೀತ ನಾಟಕ ಕಂಪನಿ ಸ್ಥಾಪಿಸಿ ತಾವೇ ಬರೆದ 20 ನಾಟಕಗಳನ್ನು ಪ್ರದರ್ಶಿಸಿದ್ದಾರೆ. ಅಲ್ಲದೆ 68 ನಾಟಕ, ಹಲವಾರು ರೇಡಿಯೋ ರೂಪಕಗಳನ್ನು ರಚಿಸಿ ಪ್ರದರ್ಶಿಸಿದ್ದಾರೆ. ಸಾವಿರಾರು ಕವನಗಳ ಕರ್ತೃವೂ ಆಗಿದ್ದಾರೆ. ಯಾವ ಆಡಂಬರವಿಲ್ಲದ ತೀರ ಸರಳಜೀವಿ ರಮಾನಂದ. ನೇರ ನಡೆ-ನುಡಿ, ಸದಾ ಹಸನ್ಮುಖಿಯಾದ ಇವರು ತೆರೆಮರೆಯ ಪ್ರತಿಭೆ. ಅರಳು ಹುರಿದಂತೆ ಮಾತನಾಡುವ ಈ ಕಲಾವಿದ ಭಾಷಣಕಾರ, ನಾಟಕ, ಕಾದಂಬರಿ, ಗೀತರಚನೆಕಾರ, ಆಕಾಶವಾಣಿ ಕಲಾವಿದ, ನಟ, ನಿರ್ದೇಶಕ, ಸ್ವರಸಂಯೋಜಕ, ಹಾಡುಗಾರ – ಹೀಗೆ ಬಹುಮುಖಿ ಪ್ರತಿಭಾವಂತರು. ಅರಳು ಶ್ರೀ ಶಂಕರಲಿಂಗ ಸಂಗೀತ ನಾಟಕ ಕಂಪೆನಿ, ಗುಬ್ಬಿ ವೀರಣ್ಣನವರ ಶ್ರೀ ಚನ್ನಬಸವೇಶ್ವರ ಥ್ರೇಟಿಕಲ್ ನಾಟಕ ಕಂಪೆನಿ, ಯೋಗಾನರಸಿಂಹ ಅವರ ಶ್ರೀ ಉದಯ ಕಲಾ ಮಂಡಳಿ, ಮೈಸೂರು ಕಲಾವರ್ಧಕ ನಾಟಕ ಕಂಪೆನಿ, ಗೋಕಾಕ, ರಮಾನಂದ ಸಂಗೀತ ನಾಟಕ ಮಿತ್ರ ಮಂಡಳಿ, ಕಲ್ಬುರ್ಗಿ ಮುಂತಾದ ವೃತ್ತಿನಾಟಕ ಕಂಪೆನಿಗಳಲ್ಲಿ ಖಳನಾಯಕನಾಗಿಯೂ ಜನಪ್ರಿಯರಾಗಿದ್ದಾರೆ.

ಆಕಾಶವಾಣಿ, ದೂರದರ್ಶನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳ ಕುಟುಂಬ ಯೋಜನೆ, ಸಾಕ್ಷರತಾ ಯೋಜನೆ ಮುಂತಾದ ಹಲವಾರು ಕಾರ್ಯಕ್ರಮಗಳಿಗೆ ಪದ್ಯ ರಚನೆಮಾಡಿ ಖ್ಯಾತರಾಗಿದ್ದಾರೆ. ಇವಲ್ಲದೆ ಹಾರ್ಮೋನಿಯಂ, ಕೊಳಲು, ಬುಲ್‌ಬುಲ್ ತರಂಗ ಹಾಗೂ ಕ್ಯಾಸಿಯೋ ವಾದ್ಯಗಳನ್ನು ನಿರಾಯಾಸವಾಗಿ ನುಡಿಸಬಲ್ಲವರಾಗಿದ್ದಾರೆ. ಡಿಸೆಂಬರ್ 2003ರಲ್ಲಿ ನಡೆದ ಅಫಜಲ್‌ಪುರ ತಾಲ್ಲೂಕಾ ಪ್ರಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿರುತ್ತಾರೆ.

ಶ್ರೀಯುತರ ರಂಗಸಾಧನೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2008ರ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---

## ತಿಪ್ಪಾನಾಯ್ಕ



ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ತಿಪ್ಪಾನಾಯಕರು ಸುಮಾರು 65 ವರ್ಷಗಳಿಂದ ರಂಗಭೂಮಿಯ ನಂಟು ಉಳಿಸಿಕೊಂಡ 85 ವರ್ಷದ ಹಿರಿಯ ಕಲಾವಿದ. ವೃತ್ತಿಯಿಂದ ಎಲೆಕ್ಟ್ರಿಕಲ್ ಗುತ್ತಿಗೆದಾರರಾಗಿ, ಚಿತ್ರದುರ್ಗದ ನವಭಾರತ ತರುಣ ಕಲಾವಿದರ ಸಂಘದ ಪ್ರಮುಖ ಕಾರ್ಯಕರ್ತರಾಗಿ, 1955 ರಿಂದ 1995 ರವರೆಗೆ 40 ವರ್ಷಗಳ ಕಾಲಾ ರಾಜಾ ವೀರಮದಕರಿ ನಾಯಕನ ಪಾತ್ರವನ್ನು ಸತತವಾಗಿ 600 ನಾಟಕಗಳಲ್ಲಿ ನಾಯಕ ನಟನಾಗಿ ನಿರ್ವಹಿಸಿದ ಹಿರಿಮೆ ಇವರದು.

ಬೆಂಗಳೂರಿನ ಕಾಂಗ್ರೆಸ್ ವಸ್ತುಪ್ರದರ್ಶನದಲ್ಲಿ ಈ ನಾಟಕವನ್ನು ವೀಕ್ಷಿಸಿದ ಪಂಡಿತ್ ನೆಹರೂ ತಿಪ್ಪಾನಾಯಕರ ಅಭಿನಯವನ್ನು ಪ್ರಶಂಸಿಸಿದ್ದಾರೆ. ಈ ನಾಟಕವನ್ನು ವೀಕ್ಷಿಸಿದ ಮಾಜಿ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪನವರು, ಮಾಜಿ ಮಂತ್ರಿ ಭೀಮಪ್ಪನಾಯಕರು, ಅನಕೃ, ತರಾಸು ಅವರಂತಹ ಸಾಹಿತ್ಯ ದಿಗ್ಗಜರು ತಿಪ್ಪಾನಾಯಕರನ್ನು

ವೈಯಕ್ತಿಕವಾಗಿ ಪ್ರಶಂಸಿರುವುದು ಇವರ ದೈತ್ಯ ಪ್ರತಿಭೆಯ ಧ್ಯೋತಕ. ಕನ್ನಡ ಕಣ್ಮಣಿ ಡಾ॥ ರಾಜ್‌ಕುಮಾರರಿಗೆ ಡಾಕ್ಟರೇಟ್ ಪದವಿ ದೊರೆತ ಸಮಯದಲ್ಲಿ ಚಿತ್ರದುರ್ಗದಲ್ಲಿ ನಡೆದ ಸನ್ಮಾನ ಸಮಾರಂಭದಲ್ಲಿ ಈ ನಾಟಕ ಪ್ರದರ್ಶನಗೊಂಡಾಗ ಶ್ರೀ ತಿಪ್ಪಾನಾಯಕರ ನಟನೆ ಮೆಚ್ಚಿಕೊಂಡ ಡಾ. ರಾಜ್ ಇವರ ಕಂಠಸಿರಿ ಹಾಗೂ ನಟನಾಪ್ರೌಢಿಮೆಯನ್ನು ಪ್ರಶಂಸಿಸಿದ್ದಾರೆ. ಈ ಎಲ್ಲಕ್ಕೆ ಕಲಶಪ್ರಾಯದಂತೆ ಮೈಸೂರರಸ ಶ್ರೀ ಜಯಚಾಮರಾಜ ಒಡೆಯರ್ ಅವರು ನಾಟಕ ತಂಡವನ್ನು ಜಗನ್ಮೋಹನ ಅರಮನೆಗೆ ಆಹ್ವಾನಿಸಿ, ನಾಟಕ ವೀಕ್ಷಿಸಿ, ನಾಯಕರ ಅಭಿನಯವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ತಿಪ್ಪಾನಾಯಕರು ಮದಕರಿ ನಾಯಕನ ಪಾತ್ರವೇ ಅಲ್ಲದೆ 'ಚಿತ್ರಾಂಗದ' ಬಭ್ರುವಾಹನನಾಗಿ, 'ರಕ್ತರಾತ್ರಿ'ಯ ಅಶ್ವತ್ಥಾಮನಾಗಿ 'ವಿಜಯನಗರ ಪತನ'ದ ರಣಮಸ್ತಖಾನ್‌ನಾಗಿ ಅನೇಕ ವೈವಿಧ್ಯಮಯ ಪಾತ್ರಗಳಲ್ಲಿ ತಮ್ಮ ನಟನಾಕೌಶಲ ಮೆರೆದಿದ್ದಾರೆ.

ಚಿತ್ರದುರ್ಗದ ಜಿಲ್ಲಾಡಳಿತವೇ ಅಲ್ಲದೆ ಹಲವಾರು ಪ್ರಶಸ್ತಿ ಪ್ರಶಂಸೆಗಳಿಗೆ ಭಾಜನರಾಗಿರುವ ಶ್ರೀ ತಿಪ್ಪನಾಯಕರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ ಅವರಿಗೆ 2008ರ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಭಾರತಿ ಶಿರಹಟ್ಟಿ

ಉತ್ತರ ಕರ್ನಾಟಕದ ವೃತ್ತಿ ಕಲಾವಿದೆಯವರಲ್ಲಿ ತೀರ ಪರಿಚಿತ ಹೆಸರು ಭಾರತಿ ಶಿರಹಟ್ಟಿ, ಹಾಸ್ಯ, ಸೌಮ್ಯ, ನಾಯಕಿ, ಖಳನಾಯಕಿ ಪಾತ್ರಗಳಲ್ಲದೆ ಪುರುಷ ಪಾತ್ರಗಳಿಂದಲೂ ರಂಗದಲ್ಲಿ ಪರಿಣಾಮ ಬೀರುತ್ತ ಮೂವತ್ತು ವರ್ಷಗಳಿಂದ ಅವಿರತವಾಗಿ ರಂಗಭೂಮಿಯನ್ನು ತಮ್ಮ ಪ್ರೌಢಿಮೆಯಿಂದ, ಪ್ರತಿಭೆಯಿಂದ ಶ್ರಮದಿಂದ ಶ್ರೀಮಂತಗೊಳಿಸಿದವರು.

ಭಾರತಿ ಶಿರಹಟ್ಟಿ ಅವರಿಗೆ ಅಭಿನಯ ರಕ್ತಗತವಾಗಿ ಬಂದಿದೆ. ತಂದೆ, ತಾಯಿ, ಅಜ್ಜಿ ಶ್ರೇಷ್ಠ ರಂಗಕಲಾವಿದರು. ಶಿರಹಟ್ಟಿ ವೆಂಕೋಬರಾಯರ ಸಂಬಂಧಿ. ಬಾಲ್ಯದಲ್ಲಿಯೇ ರಂಗಭೂಮಿ ಪ್ರವೇಶಿಸಿ ಇದುವರೆಗೂ ದುಡಿಯುತ್ತ ಬಂದ ಭಾರತಿ ಅವರು ನೂರಾರು ಪಾತ್ರಗಳಲ್ಲಿ ಅಭಿನಯಿಸಿ ಕನ್ನಡ ವೃತ್ತಿ ಹಾಗೂ ಹವ್ಯಾಸಿ ಕಲಾವಿದೆಯರಲ್ಲಿ ವಿಶಿಷ್ಟವಾಗಿ ಗುರುತಿಸಿಕೊಂಡಿದ್ದಾರೆ. 1978ರಲ್ಲಿ ಗೌಡ್ರಗದ್ಲ ನಾಟಕವನ್ನು ಪ್ರಪ್ರಥಮ ಮಹಿಳಾ ತಂಡದಿಂದ ಪ್ರದರ್ಶಿಸಿದರು. ಆ ನಾಟಕದಲ್ಲಿ ಮಲ್ಲೇಶಿ ಹಾಸ್ಯ (ಪುರುಷ) ಪಾತ್ರದಿಂದ ಜನರನ್ನು ಆಕರ್ಷಿಸಿ ರಂಜಿಸಿದರು. ಭಾರತಿ ಶಿರಹಟ್ಟಿ ಅನೇಕ ಹಿರಿಯ ಕಂಪನಿಗಳಲ್ಲಿ ಅಭಿನಯಿಸಿದ್ದಾರೆ. ಏಣಗಿ ಬಾಳಪ್ಪನವರ 'ಕಲಾವೈಭವ ನಾಟಕ ಮಂಡಳಿ" ಗುಡಿಗೇರಿ ಬಸವರಾಜರ 'ಸಂಗಮೇಶ್ವರ ನಾಟ್ಯ ಸಂಘ" ಗಡಿನಾಡ ಮೈಂದ್ರಗಿ "ರೇಣುಕಾಚಾರ್ಯರ ನಾಟ್ಯ ಸಂಘ" ಅವರು ನಟಿಸಿದ ಪ್ರಮುಖ ಕಂಪನಿಗಳಾಗಿವೆ. 1965–66 ಸಾಲಿನಲ್ಲಿ 'ಉಮಾ ಮಹೇಶ್ವರಿ' ಎನ್ನುವ ಹೆಸರಿನಲ್ಲಿ ಸ್ವತಂತ್ರ ಕಂಪನಿ ಕಟ್ಟಿಕೊಂಡು ಎರಡು ವರ್ಷಗಳ ವರೆಗೆ ನಿರಂತರ ನಡೆಸಿಕೊಂಡು ಬಂದು ಮತ್ತೆ ಹವ್ಯಾಸಿ ನಟಿಯಾಗಿ ಹಲವೆಡೆ ಖ್ಯಾತರಾಗಿದ್ದಾರೆ.

ತೂಕಬದ್ಧ ಮಾತುಗಳು, ಏರಿಳಿತ, ಅವುಗಳಿಗೆ ತಕ್ಕ ಅಭಿನಯ ಎಲ್ಲವೂ ಭಾರತೀಯವರು ಉತ್ತಮ ನಟಿಯೆಂದು ಸಾರುತ್ತವೆ. ಒಟ್ಟಿನಲ್ಲಿ ಪ್ರೇಕ್ಷಕರ ಹೃದಯ ತಟ್ಟುವ ಮನಮಿಡಿಯುವ ಅಭಿನಯ, ಇಂದಿಗೂ ಯಾವುದೇ ಪಾತ್ರ ಕೊಟ್ಟರೂ ಜನರನ್ನು ರಂಜಿಸಬಲ್ಲೆನೆನ್ನುವ ಆತ್ಮವಿಶ್ವಾಸ ಈ ಕಲಾವಿದೆಯದು. ರಂಗಕಲೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡು ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ದುಡಿಯುತ್ತ ಬಂದ ಭಾರತಿಯವರು ಮೂರು ದಶಕಗಳಿಂದ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸುತ್ತಾ ತಮ್ಮ ಪ್ರತಿಭೆಯನ್ನು ಕ್ರಿಯಾಶೀಲವಾಗಿಸುತ್ತ ಬಂದಿದ್ದಾರೆ. ಈ ಹಿರಿಯ ಕಲಾವಿದೆಯ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2008ರ ರಂಗಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.



## ಪಿ. ವೆಂಕಟರಾಮಯ್ಯ

ನಾಟಕ ಮಾಸ್ತರರಾಗಿದ್ದ ತಂದೆ ಪುಟ್ಟಸ್ವಾಮಯ್ಯನವರಿಂದ ರಂಗಕಲೆಯನ್ನು ಬಳುವಳಿಯಾಗಿ ಪಡೆದ ಶ್ರೀ ಪಿ. ವೆಂಕಟರಾಮಯ್ಯ ಮಂಡ್ಯದ ಹವ್ಯಾಸಿ ನಾಟಕ ಕಲಾವಿದ. ಶ್ರೀ ರಾಮಕೃಪಾ ಪೋಷಿತ ಕಲಾತಂಡ 1957ರಲ್ಲಿ ಪ್ರದರ್ಶಿಸಿದ 'ರುಕ್ಮಿಣಿ ಸ್ವಯಂವರ'ದ ಮೂಲಕ ಬಾಲ ಬಲರಾಮನಾಗಿ, ನಂತರ 'ಹರಿಶ್ಚಂದ್ರ'ದಲ್ಲಿ ಲೋಹಿತಾಶ್ವನಾಗಿ ಮತ್ತು 'ಭಕ್ತಪ್ರಹ್ಲಾದ'ದಲ್ಲಿ ಪ್ರಹ್ಲಾದನಾಗಿ ತಮ್ಮ 12ನೇ ವಯಸ್ಸಿನಿಂದಲೇ ರಂಗನಟನೆಯಲ್ಲಿ ಪಳಗಿದವರು. ರಂಗಭೂಮಿಯ ವಿಶೇಷ ಒಲವಿನಿಂದ 1969ರಲ್ಲಿ ಸಮಾನಮನಸ್ಕರ ಸಹಕಾರದಿಂದ 'ಪ್ರಕಾಶ ಕಲಾಸಂಘ' ಎಂಬ ಹವ್ಯಾಸಿ ನಾಟಕ ತಂಡ ಕಟ್ಟಿ, ಅದರ ಮೂಲಕ ನಟನೆ, ನಿರ್ದೇಶನ ಹಾಗೂ ಬೆಳಕು ಸಂಯೋಜನೆಗಳಲ್ಲಿ ಪ್ರಾವೀಣ್ಯತೆ ಗಳಿಸಿದರು. ರಾಜ್ಯದ ಎಲ್ಲೆಡೆ ಐತಿಹಾಸಿಕ ಮತ್ತು ಸಾಮಾಜಿಕ ನಾಟಕಗಳನ್ನು ಪ್ರದರ್ಶಿಸಿ ಜನಪ್ರಿಯರಾದರು. ಮಂಡ್ಯ ನಗರದ ಹಲವಾರು ಹವ್ಯಾಸಿ ಕಲಾತಂಡಗಳಿಗಾಗಿ ನಾಟಕ ನಿರ್ದೇಶನ ಮಾಡಿ ನೂರಾರು ಹವ್ಯಾಸಿ ಕಲಾವಿದರನ್ನು ರಂಗಭೂಮಿಗೆ ಪರಿಚಯಿಸಿದ ಸಾಧನೆ ಒಂದೆಡೆಯಾದರೆ, ರಾಷ್ಟ್ರಕವಿ ಕುವೆಂಪುರವರ 'ಜಲಗಾರ' ನಾಟಕವನ್ನು ನಿರ್ದೇಶಿಸಿ, ಅದರಲ್ಲಿ ಶಿರುಕನ ಪಾತ್ರವಹಿಸಿ, ಸಭಾಂಗಣದಲ್ಲಿ ನಾಟಕ ವೀಕ್ಷಿಸಿದ ಕುವೆಂಪುರವರಿಂದಲೇ ಶಹಬ್ಬಾಸ್‌ಗಿರಿ ಪಡೆದಿದ್ದು ಮತ್ತೊಂದೆಡೆ ಮಹತ್ತರ ಸಾಧನೆ.

ಶ್ರೀಯುತರು 1974ರಿಂದ 82ರ ತನಕ ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ ಸ್ಮರಣಾರ್ಥ ರಾಜ್ಯಮಟ್ಟದ ನಾಟಕ ಸ್ಪರ್ಧೆ ನಡೆಸಿರುತ್ತಾರೆ. ಮಾಜಿ ಸಚಿವ, ರಂಗಕರ್ಮಿ ಡಾ॥ ಕೆ.ವಿ. ಶಂಕರೇಗೌಡರ ಸ್ಮರಣಾರ್ಥ 1998ರಿಂದ ರಾಜ್ಯಮಟ್ಟದ ಕನ್ನಡ ನಾಟಕ ಸ್ಪರ್ಧೆಗಳನ್ನು ನಡೆಸಿರುತ್ತಾರೆ. 2002ರಲ್ಲಿ ರಾಷ್ಟ್ರೀಯ ನಾಟಕಶಾಲೆ ಮತ್ತು ರಾಷ್ಟ್ರೀಯ ಸಂಪನ್ಮೂಲ ಕೇಂದ್ರದ ಸಂಯುಕ್ತ ಆಶ್ರಯದಲ್ಲಿ ಶ್ರೀಮತಿ ಪ್ರೇಮಾ ಕಾರಂತರ ನಿರ್ದೇಶನದಲ್ಲಿ ರಂಗ ತರಬೇತಿ ಶಿಬಿರವನ್ನು ಏರ್ಪಡಿಸಿರುತ್ತಾರೆ.

ಶ್ರೀಯುತರ ರಂಗಭೂಮಿ ಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2008ರ ರಂಗಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.

---



## ಡಾ. ಕೆ.ಹೆಚ್. ಪಂಚಾಕ್ಷರಪ್ಪ

ವೃತ್ತಿಯಲ್ಲಿ ವೈದ್ಯರೂ ಪ್ರವೃತ್ತಿಯಲ್ಲಿ ನಟರೂ ಆದ ಡಾ॥ ಪಂಚಾಕ್ಷರಪ್ಪನವರು ದಾವಣಗೆರೆಯ ಜೆ.ಜೆ.ಎಂ. ಮೆಡಿಕಲ್ ಕಾಲೇಜಿನಲ್ಲಿ ಹಿರಿಯ ಆರೋಗ್ಯಾಧಿಕಾರಿಯಾಗಿ ದೀರ್ಘಕಾಲ ಸೇವೆಗೈದು ನಿವೃತ್ತರಾಗಿರುತ್ತಾರೆ. ತಮ್ಮ ಶಾಲಾ ದಿನಗಳಿಂದಲೇ ಬಣ್ಣದ ಬದುಕಿನತ್ತ ಬಾಗಿದ ಇವರ ಕಲಾಪ್ರತಿಭೆ ಹಲವಾರು ಪ್ರಮುಖ ಸ್ಥಳಗಳಲ್ಲಿ ರಂಗದ ಮೇಲೆ ಹೊರಹೊಮ್ಮಿದೆ. ನಾಟಕ, ಸಿನೆಮಾ, ಪ್ರಹಸನಗಳು ಸಾಗೂ ರೂಪಕಗಳ ಮೂಲಕ ಜನಮನವನ್ನು ತಲುಪಿರುವ ಶ್ರೀಯುತರು ಖ್ಯಾತ ನಿರ್ದೇಶಕರಾದ ಸುರೇಂದ್ರನಾಥರ ನಿರ್ದೇಶನದಲ್ಲಿ 'ಹಯವದನ', ಬಸವಲಿಂಗಯ್ಯನವರ ನಿರ್ದೇಶನದಲ್ಲಿ 'ಕತ್ತಲೆ ದಾರಿ ದೂರ' ಶ್ರೀ ಅಶೋಕಬಾದರದಿನ್ನಿಯವರ ನಿರ್ದೇಶನದಲ್ಲಿ 'ಸಂಕ್ರಾಂತಿ' ಸುರೇಶ ಅನಗಳ್ಳಿಯವರ ನಿರ್ದೇಶನದಲ್ಲಿ 'ಸೂರ್ಯಶಿಕಾರಿ', ಸಿಜಿಕೆಯವರ ನಿರ್ದೇಶನದಲ್ಲಿ 'ಬೆಲ್ಚಿ' ಮುಂತಾದ ನಾಟಕಗಳೇ ಅಲ್ಲದೆ ವಾಲ್ಟರ್ ಡಿ'ಸೋಜರವರ ನಿರ್ದೇಶನದಲ್ಲಿ 'ಸಂತೆಯಲ್ಲಿ ನಿಂತ ಕಬೀರ' ಸೆಜುವಾನಿನ ಸಾಧ್ವಿ, ಗಂಡಾನ ಮಡದಿ ನಡೆ ಮುಂದೆ, ದಿವ್ಯದರ್ಶನ, ಮಹಾಬೆಳಗು, ಗೋಕರ್ಣದ ಗೌಡಸಾನಿ, ಹಾಗೂ 'ಒಂದು ಕೊಲೆಯ ಸುತ್ತ' ಮುಂತಾದ ನಾಟಕಗಳಲ್ಲಿಯೂ ನಟಿಸಿದ್ದಾರೆ. ಬಿ.ಸಿ.ಪಾಟೀಲ್ ನಿರ್ದೇಶನದ 'ಪೂರ್ಣ ಸತ್ಯ' ಹಾಗೂ ಮೇಕಾ ಮುರಳೀಕೃಷ್ಣ

ನಿರ್ದೇಶನದ 'ದಂಡನಾಯಕ' ಚಿತ್ರಗಳಲ್ಲಿ ಪಾತ್ರ ನಿರ್ವಹಿಸಿದ್ದಾರೆ. ಡಾ. ಪಂಚಾಕ್ಷರಪ್ಪ ಒಂದು ಗ್ರಾಮಜನ್ಯ ಪ್ರತಿಭೆ. ದಾವಣಗೆರೆಯಲ್ಲಿನ ರಂಗಚಟುವಟಿಕೆ ಗಟ್ಟಿಗೊಳ್ಳಲು ಸಂಘಟನೆಯ ಕೆಲಸ ಮಾಡಿದ್ದಾರೆ. ಮಹಾಭಾರತದ ಭೀಮ, ರಾಮಾಯಣದ ರಾವಣ ಪಾತ್ರಗಳಿಗೆ ಹೇಳಿ ಮಾಡಿಸಿದ ಕಾಯ, ಅಭಿನಯ ಸಂಪನ್ನ, ತುಂಗಾತೀರದ ಮಣ್ಣಿನ ತಾಜಾತನವನ್ನು ಜೀವಂತವಿಟ್ಟ ತುಂಟ ಹರಟುವಿಕೆ ಇವರ ಇನ್ನೊಂದು ವಿಶೇಷ. ಸಾಮಾಜಿಕ ಮೌಲ್ಯಗಳ ಚಿಂತನೆಯ ಅನೇಕ ಪ್ರಹಸನಗಳಲ್ಲಿ, ರೂಪಕಗಳಲ್ಲಿ ಭಾಗವಹಿಸಿದ್ದಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2008ನೇ ಸಾಲಿನ ರಂಗಪ್ರಶಸ್ತಿಯನ್ನು ಶ್ರೀಯುತರಿಗೆ ನೀಡಿ ಗೌರವಿಸುತ್ತಿದೆ.



## ಇಂದಿರಮ್ಮ

ಪ್ರಸ್ತುತ ಮೈಸೂರಿನ ಭೋಗಾದಿ ಬಡಾವಣೆಯಲ್ಲಿ ವಾಸವಾಗಿರುವ 72 ವರ್ಷದ ಹಿರಿಯ ಕಲಾವಿದೆ ಶ್ರೀಮತಿ ಇಂದಿರಮ್ಮ, ತಮ್ಮ ಆರನೇ ವಯಸ್ಸಿನಿಂದ ರಂಗಸೇವೆಗೆ ತಮ್ಮನ್ನು ತಾವು ಅರ್ಪಿಸಿಕೊಂಡವರು. ಶ್ರೀಕೃಷ್ಣನ ಪಾತ್ರದ ಮೂಲಕ ರಂಗಪ್ರವೇಶ ಮಾಡಿದ ಇವರು ಅನೇಕ ನಾಟಕ ಕಂಪನಿಗಳ ಪೌರಾಣಿಕ ಹಾಗೂ ಸಾಂಸಾರಿಕ ನಾಟಕಗಳಲ್ಲಿ ವೈವಿಧ್ಯಮಯ ಪಾತ್ರ ಪೋಷಣೆಮಾಡಿ ಹೆಸರುವಾಸಿಯಾಗಿದ್ದಾರೆ. ಉತ್ತಮ ಕಂಠಸಿರಿಯ ಖ್ಯಾತ ಗಾಯಕಿಯೂ ಆಗಿರುವುದು ಇವರ ಹೆಗ್ಗಳಿಕೆ. 1942 ರಿಂದ ಎಡತೊರೆ (ಕೃಷ್ಣರಾಜನಗರ)ಯ ಕರ್ನಾಟಕ ನಾಟಕ ಸಭಾಮಂಡಳಿ, ಮೈಸೂರಿನ ಹರಿಹರೇಶ್ವರ ನಾಟಕ ಸಂಘ, ಚಾಮುಂಡೇಶ್ವರಿ ನಾಟಕ ಮಂಡಳಿ, ಕನ್ನಡ ಥಿಯೇಟರ್ಸ್, ಶ್ರೀ ಶ್ರೀಕಂಠೇಶ್ವರ ಕೃಪಾಪೋಷಿತ ನಾಟಕ ಮಂಡಳಿ, ಬೆಂಗಳೂರಿನ ಸುಬ್ಬಯ್ಯನಾಯ್ಡು ಕಂಪನಿ, ಶೇಷಕಮಲ ಕಲಾ ಮಂಡಳಿ, ಶ್ರೀ ಗುರುರಾಜ ನಾಟಕ ಮಂಡಳಿ ಹಾಗೂ ಸ್ತ್ರೀ ನಾಟಕ ಮಂಡಳಿಗಳಲ್ಲಿ ಗಾಯನ ಹಾಗೂ ನಟನಾ ಕ್ಷೇತ್ರಕ್ಕೆ ಗಣನೀಯ ಸೇವೆ ಸಲ್ಲಿಸಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿಯ ಜಿಲ್ಲಾ ನಾಟಕೋತ್ಸವ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವೃತ್ತಿ ರಂಗಭೂಮಿ ಸಮಾವೇಶ, ಮೈಸೂರು ದಸರಾ ಮಹೋತ್ಸವದ ನಾಟಕೋತ್ಸವ, ತಲಕಾಡು ಪಂಚಲಿಂಗದರ್ಶನ ಮಹೋತ್ಸವ, ಮುಂತಾದ ಕಡೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ.

ಶ್ರೀಮತಿ ಇಂದಿರಮ್ಮನವರ ರಂಗಭೂಮಿ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ ಇವರಿಗೆ 2008ರ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಕೆ.ವಿ. ಶ್ರೀನಿವಾಸ ಪ್ರಭು

ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಚಿನ್ನದ ಪದಕದೊಂದಿಗೆ ಕನ್ನಡ ಸ್ನಾತಕೋತ್ತರ ಪದವಿ ಪಡೆದ ನಂತರ ನವದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯಿಂದ ರಂಗಕಲೆಯಲ್ಲಿ ಡಿಪ್ಲೋಮಾ ಪಡೆದ ನಟ, ನಿರ್ದೇಶಕ, ಸಂಘಟಕ ಶ್ರೀನಿವಾಸ ಪ್ರಭು. ತಮ್ಮ ಶಾಲಾ ದಿನಗಳಿಂದಲೂ ನಟನಾ ಕ್ಷೇತ್ರದಲ್ಲಿ ತೊಡಗಿಸಿಕೊಂಡು, ಕಾಲೇಜು ದಿನಗಳಲ್ಲಿ ರಂಗದ ಮೇಲೆ ಅಪಾರ ಬೆಳವಣಿಗೆ ಕಂಡರು. ಡಾ॥ ಚಂದ್ರಶೇಖರ ಕಂಬಾರ, ಡಾ॥ ಕೆ.ವೆಂ. ರಾಜಗೋಪಾಲ, ಡಾ॥ ಕೆ. ಮರುಳಸಿದ್ಧಪ್ಪನವರ ಮಾರ್ಗದರ್ಶನದಲ್ಲಿ ಅಭಿನಯ ಕ್ಷೇತ್ರದಲ್ಲಿ ನಂತರ ಹವ್ಯಾಸಿ ರಂಗಭೂಮಿಯ ಆಬ್ಬೂರು ಜಯತೀರ್ಥ ಮತ್ತು ಡಾ॥ ಪರೇಶ್‌ಕುಮಾರರ ಮಾರ್ಗದರ್ಶನದಲ್ಲಿ ನೇಪಥ್ಯ ಚಟುವಟಿಕೆಗಳಲ್ಲಿಯೂ ಪರಿಶ್ರಮ ಪಡೆದವರು. ದೆಹಲಿ ನಾಟಕ ಶಾಲೆಯಲ್ಲಿ

ರಂಗಭೂಮಿ ಶಿಬಿರ ನಿರ್ವಹಣೆ, ನಾಟಕರಚನೆ ಹಾಗೂ ನಿರ್ದೇಶನಗಳಲ್ಲಿ ಪೂರ್ಣ ಪ್ರಮಾಣದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು, ಹಲವಾರು ನಾಟಕಗಳನ್ನು ನಿರ್ದೇಶಿಸಿದ್ದಾರೆ. ಇವರು ಸುಮಾರು 19 ನಾಟಕಗಳನ್ನು ತಾವೇ ರಚಿಸಿ ನಿರ್ದೇಶಿಸಿದ್ದಲ್ಲದೆ, ಅಶೋಕ ಬಾದರದಿನ್ನಿ ನಿರ್ದೇಶಿತ ಹ್ಯಾಮ್ಲೆಟ್, ಎಂ.ಎಸ್. ಸತ್ಯು ನಿರ್ದೇಶಿತ ಇತಿ ನಿನ್ನ ಅಮೃತಾ, ಸುರೇಂದ್ರನಾಥ್ ನಿರ್ದೇಶಿತ ಈ ಮುಖದವರು, ಅಬ್ಬೂರು ಜಯತೀರ್ಥ ನಿರ್ದೇಶಿತ ಮಾರೀಚನ ಬಂಧುಗಳು, ಟಿ.ಎನ್. ನರಸಿಂಹನ್ ನಿರ್ದೇಶಿತ ನಮ್ಮ ನಿಮ್ಮಂಥವರು, ಶಂಕರನಾಗ್ ನಿರ್ದೇಶಿತ ಆಟ ಬಂಬಾಟ ಮುಂತಾದ ಹಲವು ಹತ್ತು ನಾಟಕಗಳಲ್ಲಿ ಮುಖ್ಯ ಪಾತ್ರಧಾರಿಯಾಗಿ ಅಭಿನಯಿಸಿದ್ದಾರೆ. ನವದೆಹಲಿ ಹಾಗೂ ರಾಜ್ಯದ ಹಲವೆಡೆ ನಾಟಕ ಶಿಬಿರಗಳನ್ನು ನಡೆಸಿದ್ದಾರೆ. ಮ್ಯಾಂಚೆಸ್ಟರ್‌ನಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದಲ್ಲಿ ಇವರ ಅಭಿನಯದ 'ಸಿಕ್ಕು' ಜನಮನ್ನಣೆ ಗಳಿಸಿದೆ. ಸುಮಾರು 15 ವರ್ಷ ಬೆಂಗಳೂರು ದೂರದರ್ಶನದ ಕಾರ್ಯಕ್ರಮ ಅಧಿಕಾರಿಯಾಗಿ ಕಾರ್ಯನಿರ್ವಹಿಸಿದ ಶ್ರೀ ಶ್ರೀನಿವಾಸ ಪ್ರಭು, ಹಲವಾರು ಜನಪ್ರಿಯ ಧಾರಾವಾಹಿಗಳಲ್ಲಿ ನಟಿಸಿದ್ದೇ ಅಲ್ಲದೆ ಜಿ.ವಿ. ಅಯ್ಯರ್, ಶಂಕರ್‌ನಾಗ್, ಗಿರೀಶ್ ಕಾರ್ನಾಡ್, ಬಿ.ಎಸ್. ರಂಗಾ ಮುಂತಾದ ನಿರ್ದೇಶಕರ ಚಲನಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2008ರ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಐ.ಕೆ. ಬೊಳುವಾರು

ರಂಗಸೇವೆಯಲ್ಲಿ ನಿರತರಾದ ಶ್ರೀ ಬೊಳುವಾರರಿಗೂ ಮಕ್ಕಳ ರಂಗಭೂಮಿಗೂ ನಿರಂತರ ನಂಟು. ತಮ್ಮ ಮೂರು ದಶಕಗಳ ಅವಿರತ ರಂಗಚಟುವಟಿಕೆಗಳಲ್ಲಿ ಇವರ ಎರಡು ದಶಕಗಳ ಸಾಧನೆ – ತಮ್ಮ 'ನಿರತನಿರಂತ' ಸಂಸ್ಥೆಯ ಮೂಲಕ ಹೊಸ ಬಗೆಯ ಮಕ್ಕಳ ನಾಟಕ ಪ್ರಯೋಗದ ಸಾಧ್ಯಾಸಾಧ್ಯತೆಗಳನ್ನು ಗುರುತಿಸಿ, ರಂಗಭೂಮಿಯ ಬಹುಮುಖೀ ಆಯಾಮಗಳನ್ನು ಕಂಡುಕೊಂಡು ಅವನ್ನು ರಂಗದ ಮೇಲೆ ಯಶಸ್ವಿಯಾಗಿ ತಂದಿರುತ್ತಾರೆ.

2004–09ರ ನಡುವೆ ಮೈಸೂರಿನ ರಂಗಾಯಣ ಹಾಗೂ ಸ್ವೀಡಿಷ್ ಐಟಿಐ ಸಹಕಾರದೊಂದಿಗೆ ಶೈಕ್ಷಣಿಕ ರಂಗಭೂಮಿ ಯೋಜನೆಯಡಿ ಮಕ್ಕಳ ನಾಟಕಗಳನ್ನು ಸಿದ್ಧಪಡಿಸಿ ರಾಜ್ಯದ 125ಕ್ಕೂ ಹೆಚ್ಚಿನ ಸಂಸ್ಥೆಯ ಶಾಲೆಗಳಲ್ಲಿ, ರಂಗಮಂದಿರಗಳಲ್ಲಿ ಹಾಗೂ ನಾಟಕೋತ್ಸವಗಳಲ್ಲಿ ಮಕ್ಕಳ ನಾಟಕ ಪ್ರದರ್ಶನ ಏರ್ಪಡಿಸಿರುತ್ತಾರೆ.

ಶ್ರೀಯುತರು ನಿರ್ದೇಶಿಸಿದ ಮಕ್ಕಳ ನಾಟಕಗಳು ಹೊರ ರಾಜ್ಯಗಳಾದ ಕೇರಳ, ತಮಿಳುನಾಡು, ಪಾಂಡಿಚೇರಿ, ನವದೆಹಲಿಗಳಲ್ಲಿಯೂ ಯಶಸ್ವೀ ಪ್ರದರ್ಶನ ಕಂಡಿವೆ. ಭಾರತೀಯ ರಂಗಭೂಮಿಗೆ ವಿಶೇಷ ಸೇವೆ ಸಲ್ಲಿಸಿರುವ ಖ್ಯಾತ ರಂಗ ನಿರ್ದೇಶಕರ ನಿಕಟ ಒಡನಾಟದ ಮೂಲಕ ತಮ್ಮ ರಂಗಭೂಮಿಯ ಜ್ಞಾನ ದಿಗಂತವನ್ನು ವಿಸ್ತರಿಸಿಕೊಂಡಿದ್ದಾರೆ. ದೇಶವಿದೇಶಗಳ ರಂಗತಜ್ಞರು ನಡೆಸಿದ ನಾಟಕ ಕಮ್ಮಟಗಳಲ್ಲಿ. ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ, ತಾವೇ ಹಲವಾರು ರಂಗತರಬೇತಿ ಶಿಬಿರಗಳನ್ನು ನಡೆಸಿ, 35ಕ್ಕೂ ಹೆಚ್ಚಿನ ನಾಟಕಗಳನ್ನು ನಿರ್ಮಾಣ ಮಾಡಿ, ರಂಗಸೇವೆ ಮಾಡಿದ್ದಾರೆ.

ರಾಜ್ಯ, ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ರಂಗಸಂಕಿರಣಗಳಲ್ಲಿ ಪ್ರಬಂಧ ಮಂಡಿಸಿ, ಉಪನ್ಯಾಸ ನೀಡಿರುತ್ತಾರೆ. 1999–2001ರ ಅವಧಿಯಲ್ಲಿ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿಯೂ ಸಕ್ರಿಯ ಸೇವೆ ಸಲ್ಲಿಸಿದ್ದಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2008ರ ರಂಗಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.

---



## ಕಾಂತೇಶ ಕದರಮಂಡಲಗಿ

ಧಾರವಾಡ ಜಿಲ್ಲೆಯ ಸವಣೂರಿನ ಶ್ರೀ ಕಾಂತೇಶ ಕದರಮಂಡಲಗಿಯವರು ರಂಗಭೂಮಿಯೊಡನೆ ಸುಮಾರು ಎರಡೂವರೆ ದಶಕಗಳ ನಿಕಟಸಂಪರ್ಕ ಹೊಂದಿರುವ ನಟ, ನಿರ್ದೇಶಕ ಮತ್ತು ಹಾಡುಗಾರ. ಹೊನ್ನಾಳಿಯ 'ಅಭಿವ್ಯಕ್ತಿ' ತಂಡದೊಂದಿಗೆ ಹವ್ಯಾಸಿ ರಂಗಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು 1986ರಲ್ಲಿ ಶಿವಮೊಗ್ಗದಲ್ಲಿ ತಮ್ಮದೇ ಆದ 'ಸಹ್ಯಾದ್ರಿ ರಂಗತರಂಗ' ಪ್ರಾರಂಭಿಸಿ, ನಾಡಿನಾದ್ಯಂತ ಹಲವಾರು ಜನಪ್ರಿಯ ನಾಟಕಗಳನ್ನು ರಂಗದ ಮೇಲೆ ತಂದಿರುತ್ತಾರೆ.

2007ರಲ್ಲಿ ನಾಟಕ ಅಕಾಡೆಮಿಯು ಶಿವಮೊಗ್ಗದಲ್ಲಿ ಹಮ್ಮಿಕೊಂಡಿದ್ದ ದೇಸಿ ನಾಟಕೋತ್ಸವದಲ್ಲಿ ಡಾ॥ ದ.ರಾ. ಬೇಂದ್ರೆಯವರ ಜೀವನ ಕುರಿತ 'ಗಂಗಾವತರಣ' ನಾಟಕವನ್ನು ರಚಿಸಿ, ನಿರ್ದೇಶಿಸಿರುತ್ತಾರೆ. ಈ ನಾಟಕ ಬೆಂಗಳೂರಿನಲ್ಲಿಯೂ ಪ್ರದರ್ಶಿತವಾಗಿರುತ್ತದೆ. ಶ್ರೀ ಉತ್ಪಲ್‌ದತ್ ವಿರಚಿತ, ಮಾಜಿ ಸಚಿವ, ಲೇಖಕ ಶ್ರೀ ಎಂ.ಪಿ. ಪ್ರಕಾಶ ಅನುವಾದಿತ 'ಸೂರ್ಯಶಿಕಾರಿ' ನಾಟಕ ಶ್ರೀ ಕಾಂತೇಶರ ನಿರ್ದೇಶನದಲ್ಲಿ ನಾಡಿನ ಅನೇಕ ಕಡೆ ಪ್ರದರ್ಶನಗೊಂಡಿರುತ್ತದೆ. ಇವರ ನಿರ್ದೇಶನದಲ್ಲಿ 2009ರಲ್ಲಿ ಮುಂಬಯಿಯಲ್ಲಿ ನಡೆದ ಕುವೆಂಪು ನಾಟಕೋತ್ಸವದಲ್ಲಿ ಕಾನೀನ ನಾಟಕವನ್ನು ಸಹ್ಯಾದ್ರಿ ರಂಗತರಂಗ ಪ್ರದರ್ಶಿಸಿರುತ್ತದೆ. ನಾಗಪುರದ ಸೌತ್ ಸೆಂಟ್ರಲ್ ಜೋನ್ ಆಶ್ರಯದಲ್ಲಿ ವಿಶಾಖಪಟ್ಟಣದಲ್ಲಿ ಪ್ರದರ್ಶನಗೊಂಡ ಸಂಕ್ರಾಂತಿ ಜನಪ್ರಿಯವಾಯಿತು. 'ಹಾವು ಹರಿದಾಡ್ತಾವ' ನಾಟಕದಲ್ಲಿ ಇವರ ನಟನೆಗೆ ಉತ್ತಮ ನಟ ಪ್ರಶಸ್ತಿ ಲಭಿಸಿರುತ್ತದೆ.

ಕರ್ನಾಟಕ ನಾಟಕ ಅಕಾಡೆಮಿ ಆಶ್ರಯದಲ್ಲಿಯೂ ಇವರು ಹಲವಾರು ಮೌಲಿಕ ನಾಟಕಗಳನ್ನು ಪ್ರದರ್ಶಿಸಿರುತ್ತಾರೆ. ಜನಜಾಗೃತಿ ಮೂಡಿಸುವ ಹಲವಾರು ಬೀದಿ ನಾಟಕಗಳ, ಕಿರುಚಿತ್ರಗಳ, ರಚನೆಯೇ ಅಲ್ಲದೆ ಚಲನಚಿತ್ರಗಳಲ್ಲಿಯೂ ನಟಿಸಿದ್ದಾರೆ.

ಶ್ರೀ ಕಾಂತೇಶ ಕದರಮಂಡಲಗಿಯವರ ರಂಗಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2008ರ ರಂಗಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.





## ಕನ್ನರ್ಪಾಡಿ ರಾಮಕೃಷ್ಣ

ವೃತ್ತಿಯಿಂದ ಬೆಂಗಳೂರಿನ ಬಿಇಎಂಎಲ್ ಉದ್ಯೋಗಿ, ಶ್ರೀ ರಾಮಕೃಷ್ಣ ಪ್ರವೃತ್ತಿಯಿಂದ ನಟ, ನೇಪಥ್ಯ ರಂಗಕರ್ಮಿ, ವಿಶೇಷವಾಗಿ ಪ್ರಸಾಧನ ಕಲಾವಿದ. ತಮ್ಮ ಹದಿಮೂರನೇ ವಯಸ್ಸಿನಿಂದಲೇ ರಂಗಭೂಮಿಯ ಆಕರ್ಷಣೆಗೆ ಒಳಗಾಗಿ 1970ರ ನಂತರ ನಿರಂತರವಾಗಿ ರಂಜಸಜ್ಜಿಕೆ, ಉಡುಪು ವಿನ್ಯಾಸ, ನಟನೆ ಹಾಗೂ ಪ್ರಸಾಧನ ವಿಭಾಗಗಳಲ್ಲಿ ವಿಶೇಷ ಸಾಮರ್ಥ್ಯವನ್ನು ಉತ್ತಮವಾಗಿ ಮೈಗೂಡಿಸಿಕೊಂಡಿದ್ದಾರೆ.

ಬೆಂಗಳೂರು ವಿ.ವಿ. ದಿಂದ ಬಿ.ಎ. ಪದವಿ ಗಳಿಸಿ, ನಂತರ ಇದೇ ವಿಶ್ವವಿದ್ಯಾಲಯ ನಾಟಕ ಡಿಪ್ಲೋಮಾ ಪದವಿಯನ್ನು 78ರಲ್ಲಿ ಗಳಿಸಿದ್ದಾರೆ. ಖ್ಯಾತ ರಂಗದಿಗ್ಗಜರಾದ ಬಿ.ವಿ. ಕಾರಂತ, ಬಿ. ಜಯಶ್ರೀ ಡಾ॥ ಬಿ.ವಿ. ರಾಜಾರಾಂ, ಪ್ರಸನ್ನ, ಪ್ರೇಮಾಕಾರಂತ, ಎಂ.ಎಸ್. ಸತ್ಯು, ನಾಗಾಭರಣ, ಆರ್. ನಾಗೇಶ್, ಪ್ರೊ. ಬಿ. ಚಂದ್ರಶೇಖರ್, ಎ.ಎಸ್. ಮೂರ್ತಿ, ಡಾ॥ ಕೆ.ಜಿ. ರಂಗನಾಥ್‌ರಂತಹವರ ನಿರ್ದೇಶಕರ ಪ್ರಯೋಗಗಳಲ್ಲಿ ನೇಪಥ್ಯ ರಂಗಕರ್ಮಿಯಾಗಿ, ಪ್ರಸಾಧನ ಕಲಾವಿದರಾಗಿ, ರಾಜ್ಯಾದ್ಯಂತ ಕಾರ್ಯನಿರ್ವಹಿಸಿರುತ್ತಾರೆ. ತಮ್ಮ ಪ್ರಸಾಧನ ಕಲೆಯ ಗುರು ಮೇಕಪ್ ನಾಣಿಯವರನ್ನು ಸದಾ ಕೃತಜ್ಞತಾಪೂರ್ವಕ ಸ್ಮರಿಸುತ್ತಾರೆ. ಶ್ರೀ ವಿ. ರಾಮಮೂರ್ತಿಯವರ ಮಾರ್ಗದರ್ಶನದಲ್ಲಿ ಮೈಮ್ ಕಲಾವಿದನಾಗಿ ರೂಪುಗೊಂಡು ಹಲವಾರು ಮೂಕಿ–ಟಾಕಿ ಪ್ರಯೋಗಗಳನ್ನು

ನಡೆಸಿರುತ್ತಾರೆ. ಇವರ ಸಾಧನೆ–ಸುಮಾರು 90 ನಾಟಕಗಳಲ್ಲಿ ನಟನೆ, ಸುಮಾರು 300 ನಾಟಕಗಳ 5,000ಕ್ಕೂ ಹೆಚ್ಚಿನ ಪ್ರಯೋಗಗಳಿಗೆ ಪ್ರಸಾಧನ ಕಾರ್ಯ, ಅಂತರ ಕಾಲೇಜು, ಅಂತರ ಕಾರ್ಮಿಕ ರಂಗಸ್ಪರ್ಧೆಗಳು, ಅಂತರ ಕೈಗಾರಿಕಾ ನಾಟಕ ಸ್ಪರ್ಧೆಗಳು ಅಂತರ ಬ್ಯಾಂಕ್ ನಾಟಕ ಸ್ಪರ್ಧೆಗಳ ಪ್ರದರ್ಶನಗಳಿಗೆ ಉತ್ತಮ ಪ್ರಸಾಧನ ಕಲಾವಿದರಾಗಿ ಸೇವೆ ಮಾಡಿರುತ್ತಾರೆ. ಇವರ ಪ್ರಸಾಧನ ಕೌಶಲಕ್ಕಾಗಿ 2005ರಲ್ಲಿ ನವದೆಹಲಿಯ ಜಮನ್‌ಲಾಲ್ ಮೆಮೋರಿಯಲ್ ಪ್ರಶಸ್ತಿ ದೊರೆತಿರುತ್ತದೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ಇವರಿಗೆ 2008ರ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಮೋಹನ್ ಸೋನ

ದಕ್ಷಿಣ ಕನ್ನಡ ಜಿಲ್ಲೆ ಸುಳ್ಯ ತಾಲ್ಲೂಕಿನ ಸೋಣಂಗೇರಿಯಲ್ಲಿ 1954ರಲ್ಲಿ ಜನಿಸಿದ ಶ್ರೀ ಮೋಹನ ಸೋನ ಚಿತ್ರಕಲೆಯಲ್ಲಿ ಪದವಿ ಹೊಂದಿ 1975ರಿಂದ ನಿರಂತರವಾಗಿ ರಂಗಚಟುವಟಿಕೆಯಲ್ಲಿ ಕ್ರಿಯಾಶೀಲರಾಗಿರುವ ಕಲಾವಿದ, ನಾಟಕ ರಚನಕಾರ ಮತ್ತು ಸಂಘಟಕ. ಶಿಕ್ಷಣ ಕ್ಷೇತ್ರಕ್ಕೆ ರಂಗಭೂಮಿಯನ್ನು ದುಡಿಸಿಕೊಳ್ಳುವ ನಿಟ್ಟಿನಲ್ಲಿ ಸಾಧ್ಯಾಸಾಧ್ಯತೆಗಳ ಕುರಿತಾಗಿ ಪ್ರಾತ್ಯಕ್ಷಿಕೆ, ಪ್ರದರ್ಶನ, ಪ್ರಯೋಗಗಳಿಗಾಗಿ ಹಲವಾರು ಶಾಲೆಗಳ ಶಿಕ್ಷಕರೊಂದಿಗೆ ಸಂವಾದ ನಡೆಸಿ, ನಾಡಿನಾದ್ಯಂತ ಚಿರಪರಿಚಿತರಾಗಿದ್ದಾರೆ. ಮಕ್ಕಳ ಮನೋವಿಜ್ಞಾನದ ಆಯಾಮಗಳನ್ನು ಬಿಂಬಿಸುವ ಚಿತ್ರ ಪ್ರಬಂಧ ಎನ್ನುವ ಅಪೂರ್ವ ರಂಗನಾಟಕ ಮತ್ತು ಮಳೆ ಹಕ್ಕಿ ಎನ್ನುವ ಸಂಸ್ಕೃತಿ–ವಿಜ್ಞಾನ ಮೇಳೈಸಿದ ವಿಶಿಷ್ಟ ಪ್ರಯೋಗಗಳನ್ನು ಮಾಡಿರುತ್ತಾರೆ.

'ನಕ್ಷತ್ರಗಳಾಚೆ' ಮತ್ತು 'ನೀಲನಾಡಿನಲ್ಲಿ' ಎಂಬ ವೈಜ್ಞಾನಿಕ ನಾಟಕ 'ಗೊಂಬೆ ಹೇಳಿದ ಕತೆ' ಎಂಬ ನವಿರು ಭಾವನೆಗಳ ನಾಟಕ 'ಮೊಮ್ಮಕ್ಕಳೊಂದಿಗೆ ಸುಗ್ರೀವನೆಂಬ ತಾತ' ಎಂಬ ಇವರ ನಾಟಕಗಳು ಪ್ರಮುಖವಾಗಿದ್ದು, ಉತ್ತಮ ಪ್ರಯೋಗಗಳಾಗಿ ರಂಗದ ಮೇಲೆ ಪ್ರದರ್ಶಿತವಾಗಿವೆ. ತಮ್ಮ ಪ್ರಾದೇಶಿಕ ಭಾಷೆಯಾದ ತುಳುವಿನಲ್ಲಿ ಶಿವರಾಮ ಕಾರಂತರ ಚೋಮನದುಡಿ ಕಾದಂಬರಿಯನ್ನು ರಂಗಭೂಮಿಯ ಮೇಲೆ ತಂದದ್ದು ಶ್ರೀ ಮೋಹನ ಸೋನರ ವಿಶೇಷ ಸಾಧನೆ.

ಮಕ್ಕಳ ನಾಟಕಗಳೆಡೆಗೆ ಇವರದು ವಿಶೇಷ ಆಸಕ್ತಿ. ಸುಮಾರು 34 ಮಕ್ಕಳ ನಾಟಕಗಳನ್ನು ರಾಜ್ಯದ ಹಲವೆಡೆ ರಂಗದ ಮೇಲೆ ಪ್ರದರ್ಶಿಸಿದ್ದು, ಇವುಗಳಲ್ಲಿ ಹಲವು ನಾಟಕಗಳು ಹತ್ತಾರು ಪ್ರದರ್ಶನಗಳನ್ನು ಕಂಡಿವೆ. ಅಲ್ಲದೆ, ಹಿರಿಯರಿಗಾಗಿ ಹತ್ತು ನಾಟಕಗಳನ್ನು ನಿರ್ದೇಶಿಸಿ, ಜಿಲ್ಲೆಯ ವಿವಿಧ ರಂಗತಂಡಗಳಿಗೆ ವಿನ್ಯಾಸ, ಸಹನಿರ್ದೇಶನ, ಬೆಳಕು ಹಾಗೂ ಸಹಕಾರಗಳನ್ನು ನೀಡಿರುತ್ತಾರೆ. ರಾಜ್ಯದ ಹಲವು ಖ್ಯಾತ ತಂಡಗಳಿಗೆ ರಂಗಸಜ್ಜಿಕೆ ಮಾಡಿರುತ್ತಾರೆ. ರಂಗಭೂಮಿ ಮೂಲಕ ಶಿಕ್ಷಣ ಯೋಜನೆಯಡಿ ಬೆಂಗಳೂರಿನ ರಾಜ್ಯ ಶಿಕ್ಷಣ ತರಬೇತಿ ಸಂಶೋಧನಾ ನಿರ್ದೇಶನಾಲಯ (ಡಿ.ಎಸ್.ಇ.ಆರ್.ಟಿ) ಮತ್ತು ಹಲವು ಹತ್ತು ಶಿಕ್ಷಕ ತರಬೇತಿ ಕೇಂದ್ರಗಳ ಸಹಯೋಗದಲ್ಲಿ ರಾಜ್ಯದೆಲ್ಲೆಡೆ ವಿವಿಧ ಬೋಧನಾ ವಿಷಯಗಳ ನಿರ್ವಹಣಾ ತರಬೇತಿ ಕಮ್ಮಟಗಳನ್ನು ನಡೆಸಿರುತ್ತಾರೆ. ಶಾಲಾ ಮಕ್ಕಳಿಗಾಗಿ ಅನೇಕ ರಂಗಶಿಬಿರಗಳನ್ನು ನಡೆಸಿರುತ್ತಾರೆ. ಬಣ್ಣಗಳ ಮೂಲಕ ಮಕ್ಕಳ ಮನೋವಿಜ್ಞಾನವನ್ನು ಅವಲೋಕಿಸುವ ಹವ್ಯಾಸ ಹೊಂದಿರುತ್ತಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2008ರ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---

## ಮಂಜುನಾಥ ಹೆಗಡೆ



ಉತ್ತರ ಕನ್ನಡ ಜಿಲ್ಲೆಯ ಸಿರ್ಸಿ ತಾಲೂಕಿನ ಅಡಳ್ಳಿಯ ಶ್ರೀ ಮಂಜುನಾಥ ಹೆಗಡೆ ತಮ್ಮ ಪದವಿಯ ನಂತರ ನಟನೆಯಲ್ಲಿ ಎರಡು ವರ್ಷಗಳ ಸ್ನಾತಕೋತ್ತರ ಡಿಪ್ಲೋಮಾ ಪಡೆದು, ತರಬೇತಿ ಹೊಂದಿ, ರಂಗದ ಮೇಲೆ ಜನಪ್ರಿಯತೆ ಗಳಿಸಿದ ಕಲಾವಿದ. ಪ್ರಾರಂಭಿಕವಾಗಿ ಶಿವಮೊಗ್ಗದಲ್ಲಿ 15 ವರ್ಷ ಮುದ್ರಣ ವೃತ್ತಿಯನ್ನು ಕೈಗೊಂಡ ಅನುಭವದೊಂದಿಗೆ ಪ್ರಸ್ತುತ ನಟನೆಯನ್ನೇ ವೃತ್ತಿಯಾಗಿಸಿಕೊಂಡವರು.

ತಮ್ಮ ನೂತನ ವೃತ್ತಿಯಲ್ಲಿ ಒಂದು ದಶಕದಿಂದೀಚೆಗೆ ಜನಾನುರಾಗಿ ರಂಗನಟ, ದೂರದರ್ಶನ ಧಾರವಾಹಿಗಳ ಪಾತ್ರಧಾರಿ, ಸಿನಿಮಾ ನಟನಾಗಿ, ಕನ್ನಡಿಗರ ಮನೆಮಾತಾಗಿರುವ ಕಲಾವಿದ. ಶಿವಮೊಗ್ಗ ಹಾಗೂ ಬೆಂಗಳೂರು ನಗರಗಳ ರಂಗತಂಡಗಳೊಂದಿಗೆ ನಿರಂತರ ಹಾರ್ದಿಕ ಒಡನಾಟ ಬೆಳೆಸಿಕೊಂಡು, ಉಳಿಸಿಕೊಂಡು, ಹಲವಾರು ವಿನೂತನ ರಂಗಚಟುವಟಿಕೆಗಳನ್ನು ಹಮ್ಮಿಕೊಂಡು, ಗುಪ್ತಗಾಮಿನಿಯಾಗಿದ್ದ ಬಾಲಪ್ರತಿಭೆಗಳನ್ನು ಬೆಳಕಿಗೆ ತಂದವರು. ಶಾಲಾಮಕ್ಕಳಿಂದ ಮೊದಲುಗೊಂಡು ವಯಸ್ಸಿನ ಅಂತರವಿಲ್ಲದೆ ಕಲಾವಿದರನ್ನು ರಂಗಕ್ಕೆ ಪರಿಚಯಿಸುವ ಹಲವಾರು ರಂಗಶಿಬಿರಗಳನ್ನು ಕಮ್ಮಟ, ರೆಪರ್ಟರಿಗಳನ್ನು ನಡೆಸಿರುತ್ತಾರೆ. 'ಕಿನ್ನರ' ಸಂಸ್ಥೆಯ ಮೂಲಕ ರಂಗಾಸಕ್ತರಿಗೆ ಮೂಕಾಭಿನಯದಲ್ಲಿ ವಿಶೇಷ ತರಬೇತಿ ನೀಡಿರುತ್ತಾರೆ. ಕನ್ನಡದ ಹಲವಾರು ಖ್ಯಾತ ರಂಗನಿರ್ದೇಶಕರ ಜನಪ್ರಿಯ ನಾಟಕಗಳಲ್ಲಿ ಅಭಿನಯಿಸಿ, ತಮ್ಮ ನಟನಾ ಕೌಶಲವನ್ನು ಪ್ರದರ್ಶಿಸಿದ್ದಾರೆ. ಮಾತ್ರವಲ್ಲದೆ ಹತ್ತಾರು ಸಾಮಾಜಿಕ ನಾಟಕಗಳನ್ನು ಸ್ವತಃ ನಿರ್ದೇಶಿಸಿದ್ದಾರೆ. ಇತ್ತೀಚೆಗೆ ದೂರದರ್ಶನ ಧಾರಾವಾಹಿಗಳ ಮೂಲಕ ಜನಮನ ತಲುಪಿರುವ ಶ್ರೀ ಮಂಜುನಾಥ ಹೆಗಡೆ ಹಲವು ಪ್ರಶಸ್ತಿಗಳನ್ನು ಪಡೆದಿದ್ದಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2008ರ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---

## ಏಣಗಿ ನಟರಾಜ್



ಆರು ತಿಂಗಳ ಕೂಸಾಗಿ ಕಣ್ಣು ಬಿಟ್ಟು ಜಗತ್ತನ್ನು ಕಾಣುವ ಮುನ್ನವೇ 'ಗೋರ ಕುಂಬಾರ'ರದ ಶಿಶುವಾಗಿ ಏಣಗಿ ನಟರಾಜ್‌ರನ್ನು ಜಗತ್ತು ರಂಗದ ಮೇಲೆ ಕಂಡಿತ್ತು. ಖ್ಯಾತ ವೃತ್ತಿ ನಾಟಕ ಕಂಪೆನಿ ಮಾಲೀಕ, ನಟ, ಗಾಯಕ, ಶ್ರೀ ಏಣಗಿ ಬಾಳಪ್ಪನವರ ಪುತ್ರನಾಗಿ ಹುಟ್ಟಿದ ಹೆಮ್ಮೆಯೊಂದಿಗೆ, ರಕ್ತಗತವಾಗಿ ಬಂದ ನಟನಾ ಸಾಮರ್ಥ್ಯ ಕೌಶಲ್ಯಗಳನ್ನು ರಂಗಭೂಮಿಯ ಸೇವೆಗೆ ಬಳಸಿದ ಕಲಾವಿದ. ಶ್ರೀ ನಟರಾಜ್ ತಮ್ಮ ತೀರ್ಥರೂಪರ ನಾಟಕ ಕಂಪೆನಿಯಲ್ಲಿ 1964ರಿಂದ ಅಭಿನಯ ಜೀವನವನ್ನು ಪ್ರಾರಂಭಿಸಿ ಚಿಕ್ಕವಯಸ್ಸಿನಿಂದಲೇ ತಂದೆಯವರ ಪ್ರಭಾವದಿಂದ ವೃತ್ತಿನಾಟಕ ತಾಲೀಮಿನ ಕೆಲಸ ನಿರ್ವಹಿಸಿರುತ್ತಾರೆ.

1980ರಲ್ಲಿ ಹೆಗ್ಗೋಡಿನ 'ನೀನಾಸಂ' ರಂಗ ತರಬೇತಿ ಶಾಲೆಯ ಪ್ರಾರಂಭಿಕ ವರ್ಷದ ವಿದ್ಯಾರ್ಥಿಯಾಗಿ ರಂಗಶಿಕ್ಷಣ ಹೊಂದಿರುತ್ತಾರೆ. 'ನೀನಾಸಂ ರಂಗ ತಿರುಗಾಟ'ದಲ್ಲಿ ರಾಜ್ಯದ ಹಲವೆಡೆ ನಾಟಕಗಳ ಮುಖ್ಯ ಪಾತ್ರಧಾರಿಯಾಗಿ ಜನಮನ ಸೆಳೆದಿದ್ದಾರೆ. ರಾಜಾ ಹರಿಶ್ಚಂದ್ರ, ಕಿತ್ತೂರ ರಾಣಿ ಚೆನ್ನಮ್ಮ, ರಾಜ ಗೋಪಿಚಂದ್, ಹೇಮರೆಡ್ಡಿ ಮಲ್ಲಮ್ಮ, ಶಾಲಾಮಾಸ್ತರ, ದೇವರ ಮಗು, ಮುಂತಾದ ಹಲವಾರು ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ನಿರ್ದೇಶಕರಾಗಿ 20ಕ್ಕೂ ಹೆಚ್ಚಿನ ಸಾಮಾಜಿಕ ಐತಿಹಾಸಿಕ ನಾಟಕಗಳನ್ನು ನಿರ್ದೇಶಿಸಿದ್ದಾರೆ. ರಂಗಶಿಕ್ಷಕರಾಗಿ ತಮ್ಮ ರಂಗಭೂಮಿಯ ಅನುಭವವನ್ನು ಹಲವು ಸಂಸ್ಥೆಗಳ ಮೂಲಕ ವಿದ್ಯಾರ್ಥಿಗಳಿಗೆ ನೀಡಿರುತ್ತಾರೆ. ತಾವು ವಿದ್ಯಾರ್ಥಿಯಾಗಿದ್ದ ನೀನಾಸಂ ರಂಗಶಿಕ್ಷಣ ಕೇಂದ್ರದಲ್ಲಿ ಧ್ವನಿ

ಹಾಗೂ ಸಂಭಾಷಣೆ ವಿಭಾಗದಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿರುತ್ತಾರೆ. ತ್ರಿಶೂರಿನ ಕ್ಯಾಲಿಕಟ್ ವಿಶ್ವವಿದ್ಯಾಲಯ ರಂಗಶಿಕ್ಷಣ ಕೇಂದ್ರದಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿರುತ್ತಾರೆ. ಮೈಸೂರಿನ ರಂಗಾಯಣದಲ್ಲಿ ಅಭಿನಯ ಪ್ರದರ್ಶಕ ಹಾಗೂ ಅಧ್ಯಾಪಕರಾಗಿ ಕಾರ್ಯನಿರ್ವಹಿಸಿರುತ್ತಾರೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ರಂಗಭೂಮಿಯ ಸಂಯೋಜಕರೂ ಆಗಿ ಸೇವೆ ಸಲ್ಲಿಸಿದ್ದಾರೆ.

ಶ್ರೀಯುತರ ರಂಗಭೂಮಿಯ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ ಇವರಿಗೆ 2008ರ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಬಸವರಾಜ ಹೊಸಮನಿ

ರಂಗಭೂಮಿ ಹಾಗೂ ಸಾಹಿತ್ಯ ಕ್ಷೇತ್ರಗಳಲ್ಲಿ ಸುಪರಿಚಿತರಾದ ಜಾನಪದ ಸಂಘಟಕ ಶ್ರೀ ಬ. ಹೊಸಮನಿಯವರು ಹುಟ್ಟಿದ್ದು ವಿಜಾಪುರ ಜಿಲ್ಲೆಯ ಬೀಳಗಿ ತಾ॥ ನ. ಚಿಕ್ಕಾಲಗುಂಡಿ ಗ್ರಾಮದಲ್ಲಿ ಗ್ರಾಮೀಣ ಪ್ರದೇಶದ ಸಣ್ಣಾಟ, ದೊಡ್ಡಾಟ ಮತ್ತು ಶ್ರೀಕೃಷ್ಣ ಪಾರಿಜಾತದಂತಹ ಬಯಲಾಟಗಳ ಪ್ರಭಾವಕ್ಕೆ ಒಳಗಾಗಿ ಇವರ ರಂಗಜೀವನ ರೂಪುಗೊಂಡಿತು. ಶಾಲೆಯಲ್ಲಿ ಏಕಲವ್ಯನ ಪಾತ್ರದಲ್ಲಿ ಮಿಂಚಿದ ಇವರು ರಂಗಭೂಮಿಯ ಕಲಾವಿದರ ಬಗ್ಗೆ ನಿಜವಾದ ಕಾಳಜಿ ಹೊಂದಿದವರಾಗಿ, ತಮ್ಮ ಹೋರಾಟದ ವ್ಯಕ್ತಿತ್ವದಿಂದಾಗಿ ಜಿಲ್ಲೆಯ ಕಲಾವಿದರಿಗೆ ದೊರಕಬೇಕಾದ ಸಹಾಯ–ಸೌಲಭ್ಯಗಳನ್ನು ಅವರಿಗೆ ದಕ್ಕಿಸಿಕೊಟ್ಟಿದ್ದಾರೆ.

ಮೊದಲಿಗೆ ವಿಜಾಪುರದಲ್ಲಿ ಗಂಧರ್ವಲೋಕ ನಾಟಕ ತಂಡ ಸೇರಿ 'ತುಳಿತ' ನಾಟಕದ ಮೂಲಕ ಎಲ್ಲರ ಗಮನ ಸೆಳೆದ ಹೊಸಮನಿಯವರು 1984ರಲ್ಲಿ ತಮ್ಮದೇ ಆದ ಶ್ರೀ ನಟೇಶ್ವರ ಕಲಾ ಬಳಗ ಸ್ಥಾಪಿಸಿದರು. ರಾಜ್ಯದ ಮೂಲೆಮೂಲೆಗಳಿಂದ ಉತ್ತಮ ಕಲಾವಿದರನ್ನು ಆರಿಸಿ, ಅವರನ್ನು ಸನ್ಮಾನಿಸಿದರು. ಈ ಕಂಪನಿಯ ಮೂಲಕ ರಾಜ್ಯದೆಲ್ಲೆಡೆ ಹಲವಾರು ಸಾಮಾಜಿಕ, ಪೌರಾಣಿಕ ಹಾಗೂ ಸಾಂಸಾರಿಕ ನಾಟಕಗಳನ್ನು ಆಡಿಸಿದ್ದಾರೆ. ಇವರ ಬಂಗಾಳಿ ಮೂಲದ, ಮಾಜಿ ಸಚಿವ ಶ್ರೀ ಎಂ.ಪಿ. ಪ್ರಕಾಶ್‌ರ ಅನುವಾದಿತ 'ಸೂರ್ಯಶಿಕಾರಿ' ನಾಟಕ ಜನಮನ್ನಣೆ ಗಳಿಸಿದೆ. ಈ ನಾಟಕ ವಿಜಾಪುರ, ಬೆಳಗಾವಿ, ಜಿಲ್ಲೆಗಳಾದ್ಯಂತ ಹಲವಾರು ಪ್ರದರ್ಶನಗಳನ್ನು ಕಂಡಿರುತ್ತದೆ.

ಇವರ ಸಾಧನೆಗಳ ದ್ಯೋತಕವಾಗಿ 1995ರಲ್ಲಿ ಇವರನ್ನು ಕರ್ನಾಟಕ ನಾಟಕ ಅಕಾಡೆಮಿ ಸದಸ್ಯತ್ವ ನೀಡಿ ಗೌರವಿಸಿದೆ. ಶ್ರೀಯುತರು ಜಿಲ್ಲೆಯ 75 ಬಾಲಪ್ರತಿಭೆಗಳನ್ನು ಗುರುತಿಸಿ, ವಿಜಾಪುರದಲ್ಲಿ ಮಕ್ಕಳ ರಂಗತರಬೇತಿ ಶಿಬಿರವನ್ನು ನಡೆಸಿರುತ್ತಾರೆ. ಇವರ ಮೂಲಕ ಶ್ರೀ ಕೆ.ಎಸ್. ನಿಸಾರ್ ಅಹಮದ್ ಅನುವಾದಿತ ಶೇಕ್ಸ್‌ಪಿಯರ್ ಮಹಾಕವಿಯ 'ದಿ ಮಿಡ್ ಸಮ್ಮರ್ ನೈಟ್ಸ್ ಡ್ರೀಂ' ನಾಟಕವನ್ನು ಆಡಿಸಿರುತ್ತಾರೆ. ಈ ನಾಟಕ ಬೆಂಗಳೂರು ದೂರದರ್ಶನದಲ್ಲಿ ಹಲವು ಬಾರಿ ಬಿತ್ತರಗೊಂಡಿದೆ. ಶ್ರೀ ಹೊಸಮನಿಯವರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮುಖಾಂತರ ಜಿಲ್ಲೆಯಲ್ಲಿ 30 ರಂಗಮಂದಿರಗಳ ನಿರ್ಮಾಣ ಮಾಡಿಸಿರುವುದು ಇವರ ಸಾಧನೆಗಳಿಗೆ ಮುಕುಟಪ್ರಾಯವಾಗಿದೆ. ಇವರ ಸೇವೆಯನ್ನು ಗುರುತಿಸಿ ಸರ್ಕಾರ 2001ರಲ್ಲಿ ಇವರನ್ನು ಎರಡನೇ ಬಾರಿಗೆ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರನ್ನಾಗಿ ನೇಮಿಸಿದೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2008ನೇ ಸಾಲಿನ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಅರವಿಂದ ಪಾಟೀಲ

ಮೂಲತಃ ಕರ್ನಾಟಕದ ಬೆಳಗಾವಿಯಲ್ಲಿ ಜನಿಸಿ, ವಿದ್ಯಾಭ್ಯಾಸ ಪಡೆದು, ಕಾಲೇಜು ದಿನಗಳಲ್ಲಿಯೇ ಬೆಳಗಾಂ, ಹುಬ್ಬಳ್ಳಿ, ಧಾರವಾಡಗಳಂತಹ ಸ್ಥಳಗಳಲ್ಲಿ ನಾಟಕಗಳನ್ನು ನಿರ್ದೇಶಿಸಿ ನಟಿಸಿರುವ ಶ್ರೀ ಅರವಿಂದ ಪಾಟೀಲರು ರಂಗಭೂಮಿ ಹಿನ್ನೆಲೆ ಹೊಂದಿದವರು. ಇವರ ತಾತ ಸಿ.ಎ. ಪಾಟೀಲರು ಹೀರ್ ಕಂಪೆನಿಯಲ್ಲಿ ನಟ ಹಾಗೂ ಹಾಡುಗಾರರಾಗಿ, ಹೆಣ್ಣು ಪಾತ್ರಗಳಲ್ಲಿ ಮಿಂಚಿದ್ದರು.

ಹವ್ಯಾಸಿ ಕಲಾವಿದರಾದ ಶ್ರೀ ಅರವಿಂದ್ ಪಾಟೀಲರು ಬಿ.ವಿ.ಬಿ. ಕಾಲೇಜಿನ ವಿದ್ಯಾರ್ಥಿದೆಸೆಯಲ್ಲಿ 'ಹುಚ್ಚನ ಸಂಸಾರ', 'ಇನ್ನೂ ಯಾಕೆ ಬರಲಿಲ್ಲ', 'ಇದು ಭಾಷಣವೇ', 'ಐ ಲವ್ ಯು', ಮುಂತಾದ ಕಿರುನಾಟಕಗಳನ್ನು ರಚಿಸಿ, ಅವನ್ನು ರಂಗದ ಮೇಲೆ ತಂದಿದ್ದಾರೆ. 'ಕುಂಟ ಕುಂಟ ಕುರವತ್ತಿ', 'ಜಾತ್ರೆ', 'ಯಮನ ಸೋಲು' ಮುಂತಾದ ನಾಟಕಗಳನ್ನು ಬೆಳಗಾಂನ ಕೆಎಲ್ಇ ಇಂಜಿನೀಯರಿಂಗ್ ಕಾಲೇಜ್‌ನ ವಿದ್ಯಾರ್ಥಿಗಳಿಗಾಗಿ ನಿರ್ದೇಶಿಸಿರುತ್ತಾರೆ.

ಪ್ರಸ್ತುತ ಕತಾರ್‌ನ ಪೆಟ್ರೋಲಿಯಂ ಕಂಪನಿಯೊಂದರಲ್ಲಿ ಇಂಜನಿಯರಾಗಿ ಕಾರ್ಯನಿರ್ವಹಿಸುತ್ತಿದ್ದು, ಅಲ್ಲಿಯೂ ತಮ್ಮ ರಂಗಚಟುವಟಿಕೆಗಳ ಮೂಲಕ ಕನ್ನಡ ರಂಗಸಂಪ್ರದಾಯವನ್ನು ಸ್ಥಾಪಿಸಿ, ಕನ್ನಡ ರಂಗಭೂಮಿಯ ರಾಯಭಾರಿಯಾಗಿದ್ದಾರೆ. ಕನ್ನಡಿಗರ, ಕನ್ನಡ ಕಲಾವಿದರ ಸಂಘಟನೆಯನ್ನು ಸಫಲವಾಗಿ ಮಾಡಿ, ಐದನೇ ವಿಶ್ವಕನ್ನಡ ಸಾಂಸ್ಕೃತಿಕ ಸಮ್ಮೇಳನವನ್ನು ಅತ್ಯಂತ ಯಶಸ್ವಿಯಾಗಿ ನಡೆಸಿದ ಕೀರ್ತಿ ಸಂಪಾದಿಸಿದ್ದಾರೆ. ಕತಾರ್‌ನ ಸುಮಾರು 400 ಕನ್ನಡಿಗರ ಕುಟುಂಬಗಳ ಹತ್ತು ಸಾವಿರಕ್ಕೂ ಹೆಚ್ಚಿನ ಸದಸ್ಯರು ಶ್ರೀ ಅರವಿಂದ ಪಾಟೀಲರ ಸಂಘಟನಾ ಚತುರತೆಯಿಂದಾಗಿ ಹುಟ್ಟೂರಿನಿಂದ ಸಾವಿರಾರು ಮೈಲು ದೂರವಿದ್ದರೂ ಕನ್ನಡದ ಸಾಂಸ್ಕೃತಿಕ ವಾತಾವರಣದಲ್ಲಿ ನೆಮ್ಮದಿಯಿಂದಿದ್ದಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2008ರ ವಾರ್ಷಿಕ ರಂಗಪ್ರಶಸ್ತಿಯನ್ನು ಅವರಿಗೆ ನೀಡಿ ಗೌರವಿಸುತ್ತಿದೆ.

---



## ವಿರೂಪಾಕ್ಷ ನಾಯಕ (ವಾರ್ಷಿಕ ಪುಸ್ತಕ ಪ್ರಶಸ್ತಿ ಪುರಸ್ಕೃತರು – 2007)

**ಜೀವನ ರಂಗಧಾರೆ**

ಕಲಾಸಂಸ್ಥೆಯೊಂದು ಅನೇಕ ಪ್ರತಿಭಾನ್ವಿತರ ನಿರಂತರ ಪೋಷಣೆಯಲ್ಲಿ ಕಳೆದ 55 ವರ್ಷಗಳಿಂದ ಜನಮನದ ಆಕರ್ಷಣೆಯ ಬಿಂದುವಾಗಿ ಬೆಳೆದುಬಂದ ಪರಿಯನ್ನು ಓದುವುದೆಂದರೆ ಮುದ ನೀಡುವ ಸಂಗತಿ. ರಾಣೆಬೆನ್ನೂರಿನ ಅವಿಭಕ್ತ ನಾಯಕ ಕುಟುಂಬದಲ್ಲಿ ಜನಿಸಿದ ಶ್ರೀ ವಿರೂಪಾಕ್ಷನಾಯಕರು ಧಾರವಾಡಕ್ಕೆ 1954ರಲ್ಲಿ ಬಂದು ನಂತರ 'ಕಲೋದ್ಧಾರಕ ಸಂಘದ' ಸಂಪರ್ಕಕ್ಕೆ ಸಿಲುಕಿದ್ದು ಆಕಸ್ಮಿಕ.

ಧಾರವಾಡದ ಶ್ರೀ ವಿರೂಪಾಕ್ಷ ನಾಯಕರು 'ಕರ್ನಾಟಕ ಕಲೋದ್ಧಾರಕ ಸಂಘ' ನಡೆದು ಬಂದ ಪರಿಯನ್ನು 'ಜೀವನ ರಂಗಧಾರೆ' ಎಂಬ ಪುಸ್ತಕರೂಪದಲ್ಲಿ ಹೊರತಂದಿದ್ದಾರೆ. ಈ ಸಂಘದ ಜೊತೆ ಜೊತೆಗೆ ತಾವೂ ಕಲಾಸಾಧನೆಯ ಹೆಜ್ಜೆಗಳನ್ನಿಡುತ್ತಾ ಬೆಳೆದ ನಾಯಕರು ನಿರಂತರವಾಗಿ ಇಪ್ಪತ್ತು ವರ್ಷಗಳ ಕಾಲ 'ರಂಗತೋರಣ' ಪತ್ರಿಕೆಯನ್ನು ಸಾಕಿ ಸಲಹಿದವರು ಹೌದು.

ಈ ಪುಸ್ತಕದ ನಿರೂಪಣೆಯಲ್ಲಿ ನಾಯಕರು ಅಲ್ಲಿ ನಡೆದ ಪ್ರತಿಯೊಂದು ನಾಟಕ ಪ್ರಯೋಗ ಹಾಗೂ ಅದರ ವಿಶಿಷ್ಟತೆಗಳನ್ನು ನೆನಪಿಸಿಕೊಂಡಿದ್ದಾರೆ, ಅನುಭವಗಳನ್ನು ಮೆಲುಕು ಹಾಕಿದ್ದಾರೆ. ಅವರ ಜೀವನವೆಂದರೆ ಕಲೋದ್ಧಾರಕ ಸಂಘದ ಚರಿತ್ರೆಯೇ ಎಂಬಷ್ಟು ನಾಯಕರು ಆ ಸಂಘದ ಆಗುಹೋಗುಗಳಲ್ಲಿ ಹಾಸುಹೊಕ್ಕಾಗಿ ಬದುಕಿದ್ದಾರೆ.

ಅಂದಿನ ಧಾರವಾಡ ರಾಜಕೀಯ, ಸಾಹಿತ್ಯ, ಸಂಗೀತ, ನಾಟಕ ಮುಂತಾದ ಕ್ಷೇತ್ರಗಳಲ್ಲಿ ಮುಂಚೂಣಿಯನ್ನು ಕಾಯ್ದುಕೊಂಡಿತ್ತು. ಬೇಂದ್ರೆಯವರು, ಡಾ॥ ಭೀಮಸೇನ ಜೋಶಿ, ಡಾ॥ ಗಂಗೂಬಾಯಿ ಹಾನಗಲ್‌ರಂಥವರು ದಿ॥ ಆಲೂರು ವೆಂಕಟರಾಯರಂಥವರ ಕಾಲಘಟ್ಟದಲ್ಲಿ 'ಕಲೋದ್ಧಾರಕ ಸಂಘ' ತನ್ನ ಕಲಾಸೇವೆಯನ್ನು ಮಾಡಿತ್ತು.

ರಂಗಭೂಮಿಯಲ್ಲಿ ಈ ಸಂಸ್ಥೆ ತೋರಿದ ಸಾಧನೆ ನಾಡಿನ ರಂಗಪ್ರಿಯರೆಲ್ಲರಿಗೂ ದಾರಿದೀಪ. ನಾಟಕ ಪ್ರಯೋಗ, ರಂಗಶಿಬಿರಗಳು, ನಾಟಕ ಸ್ಪರ್ಧೆಗಳು, ವಿಚಾರ ಸಂಕಿರಣಗಳ ಮೂಲಕ 1955ರಿಂದ ನಿರಂತರವಾಗಿ ಮುಂಬೈ ಕರ್ನಾಟಕ ಭಾಗದಲ್ಲಿ ಸಕ್ರಿಯವಾಗಿ ತನ್ನನ್ನು ಗುರುತಿಸಿಕೊಂಡ ಸಂಸ್ಥೆ ಇದು. 1961ರಷ್ಟು ಹಿಂದೆಯೇ 'ರವಿವಾರದ ನಾಟಕ ಶಾಲೆ' ಎಂಬ ಕಲ್ಪನೆಗೆ ಸ್ವರೂಪ ನೀಡಿದ 'ಕಲೋದ್ಧಾರಕ ಸಂಘ' ವಿಶೇಷವಾಗಿ ಮಕ್ಕಳ ರಂಗಭೂಮಿಗೆ ಚೈತನ್ಯ ನೀಡುತ್ತಿದೆ.

'ಕಲೋದ್ಧಾರಕ ಸಂಘ'ದ ಚರಿತ್ರೆಯ ಹೆಜ್ಜೆಗಳನ್ನು ಶ್ರೀ ವಿರೂಪಾಕ್ಷಪ್ಪನಾಯಕರು ಕಣ್ಣಿಗೆ ಕಟ್ಟುವಂತೆ 'ಜೀವನ ರಂಗಧಾರೆ'ಯಲ್ಲಿ ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ.

ರಂಗಭೂಮಿಯಲ್ಲಿ ಕೆಲಸ ಅತ್ಯಂತ ಸಂಕೀರ್ಣವಾದುದು, ಕ್ಲಿಷ್ಟವೆನಿಸುವಂತಹದು. 'ಜೀವನ ರಂಗಧಾರೆ'ಯಂಥ ಪುಸ್ತಕಗಳು ರಂಗಭೂಮಿ ಆಸಕ್ತರಿಗೆ ಮಾರ್ಗದರ್ಶಿ ಎನಿಸಬಲ್ಲುದು.

ಶ್ರೀ ವಿರೂಪಾಕ್ಷ ನಾಯಕರಿಂದ ನಿರೂಪಿತವಾದ ಈ ಪುಸ್ತಕದ ಮೌಲಿಕತೆ ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2007ರ ಪುಸ್ತಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## 2009ರ ಪ್ರಶಸ್ತಿ ವಿಜೇತರು



### ಎಸ್.ಆರ್. ಶಂಕರರಾವ್ (ಜೀವಮಾನ ರಂಗಸಾಧನೆ ಗೌರವ ಪ್ರಶಸ್ತಿ)

ಸುಮಾರು ಐದು ದಶಕಗಳ ರಂಗ ಸಾಧನೆಯ ಹಿನ್ನೆಲೆಯ ಶ್ರೀ ಶಂಕರರಾವ್, ತಮ್ಮ ವಿಭಿನ್ನ ಹಾವ-ಭಾವಗಳಿಂದಾಗಿ ತಾವು ನಟಿಸುವ ಪಾತ್ರಕ್ಕೆ ಜೀವತುಂಬುವ ರಂಗಭೂಮಿ ನಟರಾಗಿ, ಚಲನಚಿತ್ರ, ಕಿರುತೆರೆ ಕಲಾವಿದರಾಗಿ ಜನಮನ ಸೂರೆಗೊಂಡವರು. ಕಲಾಮೋಹದಿಂದಾಗಿ ಇಂಟರ್‌ಮೀಡಿಯಟ್‌ನಲ್ಲೇ ವ್ಯಾಸಂಗ ತ್ಯಜಿಸಿ, ಕಲಾರಂಗಕ್ಕೆ ಧುಮುಕಿ, ಅದರಲ್ಲಿ ಬದುಕು ಕಂಡವರು, ಬಾಳು ರೂಪಿಸಿಕೊಂಡವರು. 1952ರಲ್ಲಿ ಪ್ರೌಢಶಾಲಾ ಹಂತದಲ್ಲೇ ಬಣ್ಣದ ಬದುಕು ಆರಂಭಿಸಿದ ಇವರು. ವಿದ್ಯಾರ್ಥಿ ಕಲಾ ಸಂಘದ ನಾಟಕಗಳಲ್ಲಿ ನಟಿಸಿದವರು. ಬೆಂಗಳೂರಿನಲ್ಲಿ ಸ್ನೇಹಿತರೊಡಗೂಡಿ 'ಗೆಳೆಯರ ಬಳಗ' ಹವ್ಯಾಸಿ ನಾಟಕ ತಂಡ ರಚಿಸಿ, ನಾಟಕ ಸ್ಪರ್ಧೆಗಳಲ್ಲಿ ಪಾಲ್ಗೊಂಡು ಬಹುಮಾನಗಳಿಸುತ್ತಿದ್ದ ಇವರು ತಮ್ಮದೇ ಆದ 'ಕಲಾಕ್ಷೇತ್ರ ನಾಟಕ ಸಂಘ' ಕಟ್ಟಿ, ಯಾರ ಸಾಕ್ಷಿ, ಕುರುಡು ಕಾಂಚಾಣ ಸದ್ದು ವಿಚಾರಣೆ ನಡೀತಿದೆ ಮುಂತಾದ ನಾಟಕಗಳ ಪ್ರಯೋಗ ಮಾಡಿದ ಸಾಹಸಿಗರು. ಶ್ರೀ ಜೆ.ವಿ. ಶಿವಾನಂದರ 'ಕಲಾಕುಂಜ' ತಂಡದ ಭೈರವಿ, ಕರ್ಣ, ಮೀಸೆ ಬಂದೋರು ರಸಋಷಿ, ನಾಟಕಗಳಲ್ಲಿ ನಟಿಸಿ, ಹಿರಿಯ ನಟರಾದ ಸಂಪತ್, ಲೋಕನಾಥ್ ಮುಂತಾದವರ ಒಡನಾಟದಲ್ಲಿ ಬೆಳೆದವರು. ಹೆಸರಾಂತ ಕಲಾವಿಲಾಸಿ ನಾಟಕ ತಂಡವಾದ 'ನಟರಂಗ'ದ ಮೂಲಕ ಹಲವಾರು ನಾಟಕಗಳಲ್ಲಿ ನಟಿಸಿರುವ ಇವರು, ಬಿ.ವಿ. ಕಾರಂತ್ ನಿರ್ದೇಶನದ ನಾಟಕಗಳಲ್ಲಿ ಪಾತ್ರ ನಿರ್ವಹಿಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. 'ನಟರಂಗ'ದ ಮೂಲಕ ಖ್ಯಾತ ನಿರ್ದೇಶಕ ಸಿ.ಆರ್. ಸಿಂಹರವರ ನಿರ್ದೇಶನದಲ್ಲಿ ತುಘಲಕ್ 100 ಪ್ರದರ್ಶನಗಳು, ಕಾಕನಕೋಟೆ, ಓಥೆಲೋ ಮಹಾನಿರ್ವಾಣ ಹಾಗೂ ದೆಹಲಿಯ ಕನ್ನಡ ರಾಜ್ಯೋತ್ಸವ ನಾಟಕೋತ್ಸವದಲ್ಲಿ ಸತತ ಎಂಟುವರ್ಷ ಭಾಗವಹಿಸಿದವರು. ರಾಜ್ಯ ವೇದಿಕೆ ಫೌಂಡೇಶನ್‌ನ ಎಮ್.ಎಸ್. ಸತ್ಯುರವರ ನಿರ್ದೇಶನದಲ್ಲಿ ಮೋಟೀರಾಮನ ಸತ್ಯಾಗ್ರಹ, ಶ್ರೀ ರಣಜಿತ ಕಪೂರ್ ನಿರ್ದೇಶನದ "ನನಗೆ ಯಾರ ಹಂತು ನಾಯಕನ ಪಾತ್ರದ' ನಾಟಕಗಳಲ್ಲಿ ನಟಿಸಿರುವ ಶ್ರೀಯುತರು, ಈವರೆಗೂ ಸುಮಾರು 130 ಚಲನಚಿತ್ರಗಳಲ್ಲಿ ಪೋಷಕ ನಟರಾಗಿ, ಅಭಿನಯಿಸಿದ್ದು ಮೂವತ್ತೈದಕ್ಕೂ ಹೆಚ್ಚು ಧಾರವಾಹಿಗಳಲ್ಲಿ ನಟಿಸಿದ್ದಾರೆ. ಇವರಿಗೆ ಶ್ರೇಷ್ಠ ಹಾಸ್ಯನಟ ಆರ್ಯಭಟ ಪ್ರಶಸ್ತಿ ಸಂದಿದೆ. ವಾರ್ತಾ ಮತ್ತು ಪ್ರಚಾರ ಇಲಾಖೆಯ ನಾಟಕ ಸರ್ವೇಜನಾಃ ಸುಖಿನೋಭವಂತು ನಾಟಕದ 300 ಹೆಚ್ಚು ಪ್ರದರ್ಶನಗಳಲ್ಲಿ ಪಾತ್ರಧಾರಿಯಾಗಿ ಜನಪ್ರಿಯರಾಗಿದ್ದಾರೆ.

ಶ್ರೀ ಶಂಕರರಾವ್‌ರವರ ಅನುಪಮ ರಂಗಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿಯು 2009ರ ಜೀವಮಾನ ರಂಗಸಾಧನೆ ಗೌರವ ಪ್ರಶಸ್ತಿ ನೀಡಿ ಗೌರವಿಸಿದೆ.

---



### ಲಕ್ಷ್ಮಣರಾವ್ ಮುತ್ತಂಗಿ (ಕಲ್ಬುರ್ಗಿ ಕಮೆಡಿಯನ್ ಕೆ. ಹಿರಣ್ಯ್ಯ)

ವೃತ್ತಿ ಕಂಪನಿ ಮಾಲೀಕರು ಮತ್ತು ನಟರು

ಬೀದರ್ ಜಿಲ್ಲೆಯ ಹುಮ್ನಾಬಾದ್ ತಾಲ್ಲೂಕಿನ ಮುತ್ತಂಗಿಯಲ್ಲಿ 1942ರಲ್ಲಿ ಜನಿಸಿದ ಶ್ರೀ ಲಕ್ಷ್ಮಣರಾವ್, ಶಾಲೆ ಕಲಿತದ್ದು ಮೂರನೇ ತರಗತಿಯವರೆಗೆ ಮಾತ್ರವಾದರೂ, ಕಲಾಪ್ರಪಂಚದಲ್ಲಿ ಮಾಡಿದ್ದು ನಾಲ್ಕು ದಶಕಗಳ ಸೇವೆ. 'ಹಗಲುವೇಶ' ಕಲೆಯನ್ನು ಕರಗತ ಮಾಡಿಕೊಂಡಿದ್ದ ಇವರ ಪೂರ್ವಿಕರಿಂದ ಕಲೆ ಇವರಿಗೆ ರಕ್ತಗತವಾಗಿ ಬಂದ ಬಳುವಳಿ. ಆಳಂದ ತಾಲ್ಲೂಕಿನ ಸಕ್ಕರಿಗಿಯ ನಾರಾಯಣ ಭಜಂತ್ರಿಯವರಲ್ಲಿ ತಮ್ಮ

12ನೇ ವಯಸ್ಸಿನಲ್ಲಿ ಶಿಷ್ಯವೃತ್ತಿ ಪ್ರಾರಂಭಿಸಿ, ಸಂಗೀ ಪೆಟ್ಟಿಗೆ, (ಹಾರ್ಮೋನಿಯಂ) ವಾದನದಿಂದ ಮೊದಲುಗೊಂಡು, ತಬಲಾವಾದನ, ಹಾಡುಗಾರಿಕೆ, ವಚನಗಾಯನ ಮುಂತಾದುವನ್ನು ಸಾಧಿಸಿ, ನಾಟಕ ಕಲಿಸುವ ಮಾಸ್ತರರಾಗಿ ರಾಜ್ಯಾದ್ಯಂತ ಅನೇಕ ತಂಡಗಳನ್ನು ರಂಗಕಲೆಯಲ್ಲಿ ತಯಾರುಮಾಡಿದ್ದಾರೆ. ಹಲವಾರು ನಾಟಕಗಳಲ್ಲಿ ನಟಿಸಿದ ಅನುಭವವನ್ನು ಹೊಂದಿರುವ ಶ್ರೀಯುತರು ಪೌರಾಣಿಕ, ಐತಿಹಾಸಿಕ ಹಾಗೂ ಸಾಮಾಜಿಕ ನಾಟಕ ಪ್ರಕಾರಗಳಲ್ಲಿ ಪರಿಣತಿ ಹೊಂದಿರುತ್ತಾರೆ. ಇವುಗಳಲ್ಲಿ ನೂರಾರು ಪ್ರದರ್ಶನ ಕಂಡಿರುವ ಸತ್ಯಹರಿಶ್ಚಂದ್ರ, ಹೇಮರೆಡ್ಡಿ ಮಲ್ಲಮ್ಮ, ಜಗಜ್ಯೋತಿ ಬಸವೇಶ್ವರ ಪ್ರಮುಖವಾದವು.

1983ರಲ್ಲಿ ತಮ್ಮ ಸ್ವಂತ ನಾಟಕ ಕಂಪೆನಿಯಾದ "ಶ್ರೀ ಗುರುಪಾದಲಿಂಗೇಶ್ವರ ನಾಟ್ಯಸಂಘ"ವನ್ನು ಸ್ವಂತ ಊರಾದ ಮುತ್ತರಗಿಯಲ್ಲಿ ಸ್ಥಾಪಿಸಿ, ನೂರಾರು ಜನಪ್ರಿಯ ನಾಟಕ ಪ್ರದರ್ಶನಗಳನ್ನು ಮಾಡಿರುತ್ತಾರೆ. ಹಸಿವಿನ ಬಾಧೆ ಅನ್ನದ ಅವಶ್ಯಕತೆಗಳನ್ನು ಅರಿತಿದ್ದ ಇವರು ತಮ್ಮ ಕಂಪೆನಿಯ ಮೂಲಕ ಹಲವಾರು ಕಲಾವಿದರ ಉದರಪೋಷಣೆಗೆ ಸಹಾಯ ಮಾಡಿದ್ದಾರೆ. ವಂಶಗತವಾಗಿ ಬಂದ ಪಾರಂಪರಿಕ ನಾಟಕ ಕಲೆಯನ್ನು ಉಳಿಸಿ ಬೆಳೆಸುವಲ್ಲಿ ಇವರ ಹನ್ನೆರಡು ಮಂದಿ ಮಕ್ಕಳು ಮಾಡುತ್ತಿರುವ ಸೇವೆ ಅನನ್ಯ. ಇವರ ಇಡೀ ಕುಟುಂಬ ಒಂದು ಕಲಾ ಕುಟೀರ. ಕನ್ನಡ, ತೆಲುಗು ಹಾಗೂ ಮರಾಠಿ ಭಾಷೆಗಳನ್ನು ಬಲ್ಲವರಾಗಿದ್ದರೂ, ಇವರ ನಿಷ್ಠೆ ಕನ್ನಡಕ್ಕೆ ಮಾತ್ರ.

ಉತ್ತರ ಕರ್ನಾಟಕದ ಜನಪ್ರಿಯ ಸಾಮಾಜಿಕ ನಾಟಕಗಳಾದ ಹೆಜ್ಜೆ ತಪ್ಪಿದ ಹೆಣ್ಣು, ಕೈಲಾಗದ ಗಂಡ ಕೈಲಾಸ ಕಂಡ, ತಾಯಿ ಕರುಳು, ಪತಿಭಕ್ತಿ, ರಕ್ತ ಮಾಂಗಲ್ಯ, ಸಂಪತ್ತಿಗೆ ಸವಾಲ್, ಸಾಹುಕಾರ ಮರಿಯಪ್ಪ – ಇವು ಇವರ ಕಂಪೆನಿ ಪ್ರದರ್ಶಿಸುತ್ತಿರುವ ಪ್ರಮುಖ ನಾಟಕಗಳು. 67 ವರ್ಷ ಪ್ರಾಯದ ಈ ರಂಗ ಶಿಕ್ಷಕ, ನಟ, ಸಂಘಟಕ, ವಿವಿಧ ವಾದ್ಯ ವಾದಕನಿಗೆ ಕರ್ನಾಟಕ ನಾಟಕ ಅಕಾಡೆಮಿ 2009ರ ಕಲ್ಚರ್ಡ್ ಕಮೆಡಿಯನ್ ಮಾಸ್ಟರ್ ಹಿರಣ್ಣಯ್ಯನವರ ದತ್ತಿ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

---

## ವೈ.ಎಮ್. ಪುಟ್ಟಣ್ಣಯ್ಯ

ಅರಸೀಕೆರೆಯವರಾದ ಶ್ರೀ ವೈ.ಎಮ್. ಪುಟ್ಟಣ್ಣಯ್ಯನವರು ಗುಬ್ಬಿಕಂಪೆನಿಯ ಕಲಾವಿದ ದಂಪತಿಗಳ ಸುಪುತ್ರರಾಗಿದ್ದು, ಕಂಪೆನಿಯಲ್ಲಿ ನಾಟಕದ ಹಾಡುಗಳನ್ನು ಆಲಿಸುತ್ತಾ, ಗುಣಿಗುಣಿಸುತ್ತಾ, ಬೆಳೆದವರು, ಗುಬ್ಬಿಯ ಶ್ರೀ ಚನ್ನಬಸವೇಶ್ವರ ನಾಟಕ ಸಂಘದಲ್ಲಿ ಬಾಲನಟರಾಗಿ ಜನಮನ ಸೆಳೆದವರು. ಕ್ರಮೇಣ ರಂಗ ಸಂಗೀತದ ನಾದ ಲಯಗಳನ್ನು ಮೈಗೂಡಿಸಿಕೊಂಡು ತಮ್ಮ ಕಂಚಿನ ಕಂಠದಿಂದ ರಂಗಗೀತೆಗಳನ್ನು ಹಾಡುತ್ತಾ, ಜೊತೆ ಜೊತೆಯಲ್ಲೇ ಹಾರ್ಮೋನಿಯಂ ವಾದ್ಯವನ್ನು ಲೀಲಾಜಾಲವಾಗಿ ನುಡಿಸುವ ಸಾಮರ್ಥ್ಯಗಳಿಸಿದ ಇವರಿಗೆ ವೇಣುವಿದ್ವಾನ್ ಸೋಮಶೇಖರಪ್ಪನವರು ಸಂಗೀತಪಾಠ ನೀಡಿ ಮುನ್ನಡೆಸಿದ್ದು ಉಲ್ಲೇಖಾರ್ಹ. ರಂಗಸಂಗೀತ ಶಿಕ್ಷಕರೆಂದೇ ಖ್ಯಾತರಾಗಿದ್ದ ಶ್ರೀಯುತರು ಹಾರ್ಮೋನಿಯಂ ನುಡಿಸುವಲ್ಲಿ ತೋರಿದ ಪರಿಪಕ್ವತೆಯಿಂದಾಗಿ, 'ವಿದ್ವಾನ್'ರೆನಿಸಿಕೊಂಡರು. ಗುಬ್ಬಿಕಂಪನಿ, ಹೊನ್ನಪ್ಪ ಭಾಗವತರ ಕಂಪೆನಿ ಹಾಗೂ ಹಿರಣ್ಣಯ್ಯ ಮಿತ್ರಮಂಡಳಿಗಳಂತಹ ವೃತ್ತಿನಾಟಕ ಕಂಪನಿಗಳ ಜೀವಾಳವಾಗಿ ಹಾರ್ಮೋನಿಯಂ ಮಾಸ್ಟರ್ ಎಂದೇ ಖ್ಯಾತರಾಗಿದ್ದು, ಕುರುಕ್ಷೇತ್ರ, ಸದಾರಮೆ ಯಂತಹ ನಾಟಕಗಳಲ್ಲಿ ತಮ್ಮ ಹಾರ್ಮೋನಿಯಂ ವಾದನದಿಂದ ಇವರು ಸೃಷ್ಟಿಸಿದ ಭಾವಾನುಲಹರಿ ಅನನ್ಯವಾಗಿರುತ್ತಿತ್ತು. ಮೈಸೂರು ಆಕಾಶವಾಣಿ ಕೇಂದ್ರ ಇವರ ರಂಗ ಗೀತಾಗಾಯನವನ್ನು ಸಾವಿರಾರು ರಸಿಕರಿಗೆ ತಲುಪಿಸಿದೆ. ಕದಂಬ ರಂಗವೇದಿಕೆ, ಅಮರ ಕಲಾಸಂಘ, ಸುರುಚಿ, ರಂಗಮನೆ ಮುಂತಾದ ಹವ್ಯಾಸಿ ನಾಟಕ ತಂಡಗಳಿಗೆ ಸಂಗೀತ ನಿರ್ದೇಶಕರಾಗಿ, ರಂಗಾಯಣ ಹಾಗೂ ಭಾರತೀಯ ರಂಗಶಿಕ್ಷಣ ಕೇಂದ್ರದಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿರುವ ಶ್ರೀಯುತರನ್ನು ಚೆನ್ನೈ ಕಲಾಕ್ಷೇತ್ರವು ಕರ್ನಾಟಕ ರಂಗಸಂಗೀತ ವಿದ್ವಾಂಸರೆಂದೇ ಗುರುತಿಸಿದೆ. 'ಪದ್ಮಣ್ಣ ಪ್ರಶಸ್ತಿ'ಗೆ ಪಾತ್ರರಾಗಿರುವ ಇವರು ರಂಗಸಂಗೀತದ ಏಳ್ಗೆಗಾಗಿ

ದುಡಿಯುತ್ತಿರುವ ಹಿರಿಯ ವಿದ್ವಾಂಸರು. ಶ್ರೀಯುತರ ರಂಗಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿಯು 2009ರ ರಂಗಪ್ರಶಸ್ತಿಯನ್ನು ನೀಡಿ ಅವರನ್ನು ಗೌರವಿಸಿದೆ.

---



## ಹೆಚ್. ಪಾಂಡುರಂಗಪ್ಪ

ಬಳ್ಳಾರಿ ಜಿಲ್ಲೆಯಾದ್ಯಂತ ಯಾವುದೇ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕವಿರಲಿ ಅಲ್ಲಿಯ ಸಂಗೀತ ಕಲಾವಿದರಲ್ಲಿ ಶ್ರೀ ಹೆಚ್. ಪಾಂಡುರಂಗಪ್ಪ ಅವರ ತಬಲಾ ಕೈಚಳಕ ಇದ್ದೇ ಇರಬೇಕು. ಬರೀ ಪೌರಾಣಿಕಗಳಷ್ಟೇ ಅಲ್ಲದೆ ಇತ್ತೀಚಿನ ಹವ್ಯಾಸಿ ನಾಟಕಗಳ ರಂಗ ಸಂಗೀತದಲ್ಲೂ ಹೆಚ್. ಪಾಂಡುರಂಗಪ್ಪ ಇವರ ತಬಲ ರಿಂಗಣಿಸುತ್ತದೆ.

ಯಾವುದೇ ಹಮ್ಮಿಲ್ಲದ ಶ್ರೀ ಹೆಚ್. ಪಾಂಡುರಂಗಪ್ಪನವರು 1936ರಿಂದ ಸಂಗೀತ ಸಾಧನೆಯಲ್ಲಿ ನಿರಂತರ ತೊಡಗಿಕೊಂಡಿದ್ದಾರೆ. ಅವರ ತಂದೆಯವರಿಂದಲೇ ಬಳುವಳಿಯಾಗಿ ಬಂದ ತಬಲಾ ವಾದನ 40–45 ವರ್ಷಗಳಿಗೂ ಹೆಚ್ಚು ಕಾಲದಿಂದ ಇವರನ್ನು ಮುನ್ನಡೆಸಿದೆ.

ಜಿಲ್ಲೆಯಾದ್ಯಂತ ಪ್ರದರ್ಶನಗಳನ್ನು ಏರ್ಪಡಿಸುವ ಕಂಪೆನಿ, ಹವ್ಯಾಸಿ ತಂಡಗಳ ರಂಗಸಂಗೀತದಲ್ಲಿ ಇವರ ತಬಲಾ ಕೈಚಳಕ ಅನಿವಾರ್ಯ. ತಬಲಾ ವಾದನವನ್ನು ರಕ್ತಗತವಾಗಿ ಪಡೆದಿರುವ ಶ್ರೀಯುತರು ನಾಲ್ಕು ದಶಕಗಳಿಂದ ತಬಲಾ ನುಡಿಸುವಿಕೆಗೆ ತಮ್ಮನ್ನು ಅರ್ಪಿಸಿಕೊಂಡಿದ್ದು ಅಭಿಮನ್ಯು ಕಾಳಗ, ಪಾರ್ಥವಿಜಯ, ಗಿರಿಜಾ ಕಲ್ಯಾಣ, ರತಿ ಕಲ್ಯಾಣ, ತ್ರಿಪುರ ಸಂಹಾರ ಮುಂತಾದ ನಾಟಕಗಳ ಇವರ ಸಂಗೀತ ಮಟ್ಟುಗಳ ತಬಲಾ ವಾದನಕ್ಕೆ ತಲೆದೂಗದವರು ವಿರಳ. ನಾಟಕ ಅಕಾಡೆಮಿಯಿಂದ ಗುರುತಿಸಲ್ಪಟ್ಟು, ಮಾಸಾಶನ ಪಡೆಯುತ್ತಿರುವ ಶ್ರೀಯುತರನ್ನು ಕನ್ನಡ ಸಂಸ್ಕೃತಿ ಇಲಾಖೆ, ಜಿಲ್ಲಾಡಳಿತ, ಸುವರ್ಣ ಸಂಸ್ಕೃತಿ ದಿಬ್ಬಣ–2009, ಹಂಪಿ ಉತ್ಸವ, ಜನಪದಜಾತ್ರೆ, ಸಂಗೀತ ಸಂಭ್ರಮ ಕಾರ್ಯಕ್ರಮಗಳಿಗೆ ಆಹ್ವಾನಿಸಿ, ಅಭಿನಂದನಾ ಪತ್ರ ನೀಡಿ ಗೌರವಿಸಿದೆ. ಕನ್ನಡ ಸಾಹಿತ್ಯ ಪರಿಷತ್, ಶರಣ ಸಾಹಿತ್ಯ ಪರಿಷತ್ ಮುಂತಾದ ಸಂಘಟನೆಗಳು, ಸಂಗೀತ ಕಾರ್ಯಕ್ರಮಕ್ಕೆ ಆಹ್ವಾನಿಸಿ ಸನ್ಮಾನಿಸಿವೆ. ಸುತ್ತೂರು ಹಾಗೂ ಕೊಟ್ಟೂರಿನ ವೀರಶೈವ ಮಠಗಳಿಂದ ಗೌರವಿಸಲ್ಪಟ್ಟಿರುವ ಇವರನ್ನು ಭಾರತ ಸೇವಾದಳ, ನಾಟ್ಯ ಭಾರತಿ ಕಲಾ ಶಾಲೆ ಮುಂತಾದವೂ ಸನ್ಮಾನಿಸಿವೆ. ಬಳ್ಳಾರಿಯ ವಾಲ್ಮೀಕಿ ಕಲಾ ಬಳಗದವರಿಂದಲೂ ಆದರಿಸಲ್ಪಟ್ಟಿರುವ ಇವರು ನೆರೆಯ ಆಂಧ್ರದ ಕೆಲವು ತೆಲುಗು ನಾಟಕಗಳಿಗೂ ಸಂಗೀತ–ಸಂಯೋಜನೆ ಮತ್ತು ತಬಲಾವಾದನ ಸಾಥಿ ನೀಡಿದ್ದಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿಯು 2009ರ ರಂಗಪ್ರಶಸ್ತಿಯನ್ನು ನೀಡಿ ಇವರನ್ನು ಗೌರವಿಸಿದೆ.

---



## ಲಿಂಗರಾಜ ಪಲ್ಲೇದ

ಕೊಪ್ಪಳ ಗ್ರಾಮೀಣ ಪ್ರದೇಶದ ರಂಗಭೂಮಿ ಕಲಾವಿದರಾದ ಶ್ರೀ ಲಿಂಗರಾಜ ಪಲ್ಲೇದ ಅವರು ಪ್ರೌಢಶಾಲೆಗೆ ಸೇರುವ ಮೊದಲೇ ಕಲಾವಿದರಾಗಿ ರಂಗಭೂಮಿಯನ್ನು ಪ್ರವೇಶಿಸುವ ಮೂಲಕ, ಕಲೆ ತಮ್ಮಲ್ಲಿ ರಕ್ತಗತವಾಗಿರುವ ಅಂಶವನ್ನು ಬಿಂಬಿಸಿದವರು. ಮೈಸೂರು ಮೂಲದ ಶ್ರೀಕಂಠೇಶ್ವರ ನಾಟ್ಯ ಸಂಘದ ಮೂಲಕ ರಂಗಭೂಮಿಗೆ ಪಾದಾರ್ಪಣೆ ಮಾಡಿದ ಇವರು ಇಂದಿಗೂ ಬಣ್ಣದ ಬದುಕಲ್ಲೇ ಬಾಳನ್ನು ಕಂಡುಕೊಂಡಿರುವ ಅಪರೂಪದ ರಂಗ ಕಲಾವಿದರಾಗಿದ್ದಾರೆ. ನಾಡಿನಾದ್ಯಂತ ಹೆಸರು

ಮಾಡಿರುವ ಇವರು 10ಕ್ಕೂ ಹೆಚ್ಚು ವೃತ್ತಿ ನಾಟಕ ಕಂಪೆನಿಗಳಲ್ಲಿ ನಟರಾಗಿ, ಗಾಯಕರಾಗಿ, ವ್ಯವಸ್ಥಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ರಂಗಭೂಮಿ ಕಲಾವಿದರಾಗಿ ಇಂದಿಗೂ ಇವರು, ಸುಳ್ಳದ ಶ್ರೀ ಶೈಲಮಲ್ಲಿಕಾರ್ಜುನ ಸಂಘ, ಸೂಡಿಯ ಭಾರತಿ ನಾಟ್ಯ ಸಂಘ; ಗುಡಗೇರಿ, ಸುಂಕನೂರು, ಮೂಡಲಗಿರಿ, ನಾಟ್ಯ ಸಂಘಗಳು, ಗದಗ ಜಿಲ್ಲೆಯ ಶ್ರೀ ಕೊಟ್ಟೂರೇಶ್ವರ ನಾಟ್ಯ ಸಂಘ ಹಾಗೂ ಪಂಡಿತ ಪುಟ್ಟರಾಜು ಗವಾಯಿಗಳ ಶ್ರೀ ವೀರೇಶ್ವರ ನಾಟ್ಯ ಸಂಘಗಳಲ್ಲಿ ನಾಯಕ, ಖಳನಾಯಕ ಹಾಗೂ ಹಾಸ್ಯನಟರಾಗಿ ಹಲವಾರು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಇವರು ಅಭಿನಯಿಸಿರುವ ವೀರರಾಣಿ ಕಿತ್ತೂರು ಚೆನ್ನಮ್ಮ, ಎಂಥಾ ಮೋಜಿನ ಕುದರಿ ಮತ್ತು ಎಚ್ಚರ ತಂಗಿ ಎಚ್ಚರ ನಾಟಕಗಳು 150ಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡಿವೆ. ಸತ್ಯಹರಿಶ್ಚಂದ್ರ, ಶ್ರೀ ರೇಣುಕಾ ಮಹಾತ್ಮೆ, ಬದುಕು ಬಂಗಾರವಾಯ್ತು, ಸಿಂಧೂರ ಲಕ್ಷ್ಮಣ, ಸಂಪತ್ತಿಗೆ ಸವಾಲ್, ಮುಂತಾದವು ಇವರಿಗೆ ಖ್ಯಾತಿ ತಂದ ನಾಟಕಗಳು. ವೃತ್ತಿರಂಗ ಭೂಮಿಗೆ ಸುಮಾರು 40 ವರ್ಷಗಳಿಂದ ನಿರಂತರ ಸೇವೆ ಸಲ್ಲಿಸುತ್ತಿರುವ ಇವರಿಗೆ ಮಹಾತ್ಮಾ ಜ್ಯೋತಿ ಭಾಪುಲೆ ಪ್ರಶಸ್ತಿ, ಪೆರಿಯಾರ್ ರಾಮಸ್ವಾಮಿ ಪ್ರಶಸ್ತಿ ಮುಂತಾದ ಹತ್ತು ಹಲವು ಪ್ರಶಸ್ತಿಗಳು ಸಂದಿವೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿಯು 2009ರ ರಂಗಪ್ರಶಸ್ತಿಯನ್ನು ನೀಡಿ ಇವರನ್ನು ಗೌರವಿಸಿದೆ.



## ಹನುಮಂತು

ಹಾಸನದ ಎಚ್.ಸಿ. ಹನುಮಂತು ರಂಗಭೂಮಿ ಕ್ಷೇತ್ರದಲ್ಲಿ ಮೇಕಪ್ ಹನುಮಂತು ಎಂದೇ ಚಿರಪರಿಚಿತರಾದವರು. ರಂಗಸಜ್ಜಿಕೆ ಉಡುಪುಗಳು, ಮೇಕಪ್, ಕೀಲು ಕುದುರೆ, ಮುಂತಾದ ಕಲಾ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಹನುಮಂತುರವರ ಪರಿಚಯವಿಲ್ಲದ ರಂಗಕರ್ಮಿ ಹಾಸನದಲ್ಲಿ ವಿರಳ. ಬಾಲ್ಯದಲ್ಲಿ ಉದರ ನಿಮಿತ್ತವಾಗಿ, ಬಿಡುವಿನ ವೇಳೆಯಲ್ಲಿ ರಂಗಚಟುವಟಿಕೆಗಳಿಗೆ ತಮ್ಮನ್ನು ತೊಡಗಿಸಿಕೊಂಡ ಶ್ರೀಯುತರು, ಉತ್ತಮ ಹಾಸ್ಯಕಲಾವಿದರೂ ಆಗಿದ್ದು, ಭಕ್ತ ಮಾರ್ಕಂಡೇಯ (1962) ನಾಟಕದಲ್ಲಿ ಚಿತ್ರಗುಪ್ತ ಪಾತ್ರಕ್ಕೆ ಜೀವ ತುಂಬಿ ಜನಮನ್ನಣೆಗೆ ಪಾತ್ರರಾದರು. ಭೂಕೈಲಾಸ, ರಾಜಸೂಯಾಗ, ಎಚ್ಚಮನಾಯಕ ಮುಂತಾದವು ಇವರು ನಟಿಸಿರುವ ಪ್ರಮುಖ ನಾಟಕಗಳು. ಪ್ರಪ್ರಥಮವಾಗಿ ಬಂಗಾರು ಅವರ ಜೊತೆಗೂಡಿ 1964ರಲ್ಲಿ ಕೀಲುಕುದುರೆ ತಂಡ ಕಟ್ಟಿ ರಾಜ್ಯದಾದ್ಯಂತ ಸಂಚರಿಸಿ, ಪ್ರದರ್ಶನ ನಡೆಸಿ ಜಾನಪದ ಕಲೆಯನ್ನು ಮೆರೆಸಿದರಾದರೂ, ಪ್ರೋತ್ಸಾಹ ಕಡಿಮೆಯಾದಾಗ 1979ರಲ್ಲಿ ಹಿಂದೆ ಸರಿಯ ಬೇಕಾಯಿತು. ಕಬ್ಬಿಣದ ಅಂಗಡಿಯಲ್ಲಿ ಸಿಗುವ ಬಣ್ಣಗಳನ್ನು ಕೊಬ್ಬರಿಎಣ್ಣೆಯೊಂದಿಗೆ ಬೆರೆಸಿ, ವಿಶಿಷ್ಟವಾದ ಪ್ರಸಾಧನ ಕಲೆಯನ್ನು ಬಂಗಾರು ಅವರಿಂದ ಮೈಗೂಡಿಸಿಕೊಂಡಿದ್ದ ಇವರು ಪ್ರಸಾಧನ ಮಾಡಿದ ಕಲಾತಂಡಗಳು ರಾಜ್ಯ-ರಾಷ್ಟ್ರಮಟ್ಟದ ನಾಟಕಸ್ಪರ್ಧೆಗಳಲ್ಲಿ ಯಶಸ್ಸು ಪಡೆದದ್ದು ಉಲ್ಲೇಖಾರ್ಹ. ಹಾಸನದಲ್ಲಿ ಹಂಸಲೇಖರವರು 1975ರಲ್ಲಿ ಸ್ಥಾಪಿಸಿದ 'ಧರ್ಮಭೂಮಿ ಕಲಾಸಂಘ'ದ ಪ್ರಮುಖ ರೂವಾರಿ ಇವರಾಗಿದ್ದರು. ಆಗ ಈ ತಂಡ ಪ್ರದರ್ಶಿಸಿದ ಜೋಕುಮಾರಸ್ವಾಮಿ ನಾಟಕ ಬಹಳ ಖ್ಯಾತಿ ಪಡೆದಿತ್ತು. ಪ್ರಸ್ತುತ ಹಾಸನದಲ್ಲಿ ಬೇಕರಿ ಉದ್ಯಮವನ್ನು ಜೀವನ ನಿರ್ವಹಣೆಗೆಂದು ನಡೆಸುತ್ತಿರುವ ಶ್ರೀಯುತರು. ದೇಶದ ವಿವಿಧ ಭಾಗಗಳಿಂದ ಸಂಗ್ರಹಿಸಿ ತಂದಿರುವ ನಾಟಕ ಸಾಮಗ್ರಿಗಳೂ ಸೇರಿದಂತೆ ನಾಟಕಕ್ಕೆ ಬೇಕಾದ ಪರಿಕರಗಳನ್ನು ಭರತನಾಟ್ಯದ ಉಡುಗೆ ತೊಡುಗೆ, ಮುಂತಾದವನ್ನು ನಾಟಕತಂಡಗಳಿಗೆ ಬಾಡಿಗೆಗೆ ನೀಡುವ ಕಾಯಕವನ್ನು ಮುಂದುವರಿಸಿದ್ದಾರೆ. ರಂಗಾಸಕ್ತರಿಗೆ ಮಾರ್ಗದರ್ಶಿಯಾಗಿ, ರಂಗಚಟುವಟಿಕೆಯಲ್ಲಿ ಕ್ರಿಯಾಶೀಲರಾಗಿರುವ ಇವರು ಗ್ರಾಮೀಣ ಕಲಾಪ್ರತಿಭೆಯ ಕಣಜದಂತಿದ್ದಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿರುವ ಕರ್ನಾಟಕ ನಾಟಕ ಅಕಾಡೆಮಿಯು ಅವರಿಗೆ 2009ರ ರಂಗಪ್ರಶಸ್ತಿಯನ್ನು ನೀಡಿ ಗೌರವಿಸಿದೆ.



## ಮಂಜುನಾಥ ಬೆಳಕೆರೆ

ಮೈಸೂರು ವಿಶ್ವವಿದ್ಯಾಲಯದಿಂದ ಎಂ.ಎ. ಕನ್ನಡ ಸ್ನಾತಕೋತ್ತರ ಪದವಿ ಪಡೆದಿರುವ ಶ್ರೀ ಮಂಜುನಾಥ ಬೆಳಕೆರೆ ಅವರು ತಮ್ಮಲ್ಲಿ ಹುದುಗಿದ್ದ ಕಲಾಪ್ರೇಮದಿಂದಾಗಿ ನೀನಾಸಂನಿಂದ ಡಿಪ್ಲೋಮ ಇನ್ ಥಿಯೇಟರ್ಸ್ ಪದವಿ ಗಳಿಸಿ, ಮೈಸೂರಿನ ರಂಗಾಯಣದಲ್ಲಿ ರೆಪರ್ಟರಿ ಕಲಾವಿದರಾಗಿ ವೃತ್ತಿ ಜೀವನವನ್ನು ಆರಂಭಿಸಿದರು. ರಂಗಾಯಣದಲ್ಲಿ ಪ್ರಯೋಗಗೊಂಡಿರುವ ಎಲ್ಲಾ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ರಂಗಭೂಮಿ ನಟನಾಗಿ, ನಾಟಕಕಾರನಾಗಿ, ನಿರ್ದೇಶಕನಾಗಿ, ಸಂಘಟಕನಾಗಿ 24 ವರ್ಷಗಳ ಅನುಭವವನ್ನು ಹೊಂದಿದ್ದಾರೆ.

ಕಳೆದ 15 ವರ್ಷಗಳಿಂದ ಕಿರುತೆರೆ, ಮತ್ತು ಹಿರಿಯತೆರೆಗಳಲ್ಲಿ ಸಕ್ರಿಯವಾಗಿ ದುಡಿಯುತ್ತಿರುವ ಇವರು ಚಿತ್ರ ನಿರ್ಮಾಣದ ವಿವಿಧ ಹಂತಗಳಲ್ಲಿ ಕಾರ್ಯ ನಿರ್ವಹಿಸಿರುವ ಹೆಗ್ಗಳಿಕೆ ಪಡೆದಿದ್ದಾರೆ. ಚಿತ್ರಕಥೆ–ಸಂಭಾಷಣೆಗಳ ರಚನೆಯಲ್ಲೂ ಸಿದ್ಧಹಸ್ತರಿರುವ ಇವರು ಟಿ.ವಿ. ಧಾರವಾಹಿ ಸೇರಿದಂತೆ ಸಾಕ್ಷಚಿತ್ರಗಳಿಗೆ ಕಥೆ–ಸಂಭಾಷಣೆಗಳನ್ನು ಒದಗಿಸಿದ್ದು, ಕೆಲವು ಸಾಕ್ಷ್ಯಚಿತ್ರಗಳಲ್ಲಿ ಅಭಿನಯಿಸಿಯೂ ಇದ್ದಾರೆ. ಸ್ವತಃ ನಾಟಕ ರಚನಾಕಾರರೂ ಆಗಿರುವ ಇವರು ಇದಿತಾಯಿ, ಕರೀಫ ನನ್ನೊಳು ನೀ ನಿನ್ನೊಳು ನಾ, ಕುಹು ಕುಹೂ ಕೋಗಿಲೆ ಮುಂತಾದ ಮಕ್ಕಳ ನಾಟಕಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಬಾನುಲಿ ನಾಟಕಕಾರರಾಗಿ ಖ್ಯಾತರಾದ ಇವರ ಕಡಲದೋಣಿ ಕೃತಿ ಬಾನುಲಿ ನಾಟಕಗಳ ಸಂಕಲನವಾಗಿದೆ. ಕತೆ, ಕಾದಂಬರಿ ರಚನೆ, ಸಂಶೋಧನೆ, ಜಾನಪದ ಆಕರಗಳ ಸಂಗ್ರಹ ಮುಂತಾದ ಕ್ಷೇತ್ರಗಳಲ್ಲೂ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀಯುತರು ಕೇಂದ್ರಮಾನವ ಸಂಪನ್ಮೂಲ ಇಲಾಖೆಯಿಂದ ಕನ್ನಡ ಜಾನಪದ ನಾಟಕಗಳ ಯಶಸ್ಸು ಮತ್ತು ವೈಫಲ್ಯಗಳು ಕುರಿತ ಅಧ್ಯಯನಕ್ಕಾಗಿ ಜೂನಿಯರ್ ಫೆಲೋಶಿಫ್ ಪಡೆದಿದ್ದಾರೆ. ನಾಟಕ ಸಾಹಿತ್ಯರಚನೆಗಾಗಿ ಕನ್ನಡಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಆರ್ಯಭಟ ಸಾಹಿತ್ಯ ಪ್ರಶಸ್ತಿ, ಸಮತೆಂತೋ ಸಾಹಿತ್ಯ ಪ್ರಶಸ್ತಿ, ಬಾನುಲಿ ನಾಟಕಕ್ಕಾಗಿ ಅಖಿಲ ಕರ್ನಾಟಕ ಆಕಾಶವಾಣಿ ನಾಟಕ ರಚನಾ ಪ್ರಶಸ್ತಿ ಹಾಗೂ ನಿರ್ದೇಶನಕ್ಕಾಗಿ ಉಡುಪಿ ರಂಗಭೂಮಿ ಪ್ರಶಸ್ತಿ ಮುಂತಾದವು ಇವರಿಗೆ ಲಭಿಸಿದೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿಯು 2009ರ ರಂಗಪ್ರಶಸ್ತಿಯನ್ನು ಅವರಿಗೆ ನೀಡಿ ಗೌರವಿಸಿದೆ.

---



## ಎನ್. ರವೀಂದ್ರ

ಕಳೆದ 40 ವರ್ಷಗಳಿಂದ ಕನ್ನಡ ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀ ಎನ್. ರವೀಂದ್ರರವರು, ಅಭಿನಯ, ಮೂಕಾಭಿನಯ, ನಿರ್ದೇಶನ, ಬೆಳಕು–ಧ್ವನಿ ಸಂಯೋಜನೆ ಮುಂತಾದ ರಂಗ ಚಟುವಟಿಕೆಗಳಿಂದಾಗಿ ಖ್ಯಾತಿ ಪಡೆದಿದ್ದಾರೆ. ಬಾಲ್ಯದಿಂದಲೂ ನಟನೆಯಲ್ಲಿ ಒಲವನ್ನು ಹೊಂದಿದ್ದ ಇವರು 1971ರ ಅಂತರ ಕಾಲೇಜು ನಾಟಕ ಸ್ಪರ್ಧೆಯಲ್ಲಿ ಉತ್ತಮನಟನೆಗಾಗಿ ಬಹುಮಾನಿತರಾಗಿದ್ದು, ಬೆಂಗಳೂರಿನ ಹವ್ಯಾಸಿ ನಾಟಕಗಳಲ್ಲಿ ಈಗಲೂ ಅಭಿನಯಿಸುತ್ತಿದ್ದಾರೆ. ಬೆಂಗಳೂರಿನ ಕಲಾಗಂಗೋತ್ರಿ, ರಂಗಸಂಪದ, ನಾಟ್ಯದರ್ಪಣ, ಅಂತರಂಗ, ಪ್ರಯೋಗರಂಗ, ಸ್ಪಂದನ ಮುಂತಾದ ರಂಗತಂಡಗಳ ಮೂಲಕ ಕಾಲಿಗುಲ, ಮೂಕಬಲಿ, ಮ್ಯಾಕ್‌ಬೆತ್, ಅಚಲಾಯತನ, ಕ್ರಾಂತಿ ಬಂತು ಕ್ರಾಂತಿ, ಕರಿಮಾಯಿ, ಮೂಕಜ್ಜಿಯ ಕನಸುಗಳು ಮುಂತಾದ 17ಕ್ಕೂ ಹೆಚ್ಚು ನಾಟಕಗಳಲ್ಲಿ ವಿಭಿನ್ನ ಪಾತ್ರಗಳಲ್ಲಿ ಅಭಿನಯಿಸಿ ಜನಮನ್ನಣೆಗೆ ಪಾತ್ರರಾಗಿದ್ದಾರೆ.

ಅಲ್ಲದೆ ಶ್ರೀಕೃಷ್ಣಸಂಧಾನ, ಗಾಂಪರ ಗುಂಪು, ಪಂಚಭೂತ, ಸಮಯಕ್ಕೊಂದ್ಸುಳ್ಳು, ಗಗ್ಗಯ್ಯನ ಗಡಿಬಿಡಿ ಮುಂತಾದ ಹಾಸ್ಯ ಪ್ರಧಾನ ನಾಟಕಗಳಲ್ಲೂ ಅಭಿನಯಿಸಿದ್ದಾರೆ. ಮೂಕಾಭಿನಯ ಕಲಿತು, ಮೂಕಿ ಟಾಕಿಯ ಸುಮಾರು ಮುನ್ನೂರು ಪ್ರದರ್ಶನಗಳಲ್ಲಿ ಅಭಿನಯಿಸಿದ್ದು 'ಕಲಾಗಂಗೋತ್ರಿ' ತಂಡದೊಂದಿಗೆ ದೆಹಲಿ, ಗೌಹಾತಿಗಳಲ್ಲಿ ನಡೆದ ರಾಷ್ಟ್ರೀಯ ಮೈಮ್ ಉತ್ಸವಗಳಲ್ಲಿ ಪಾಲ್ಗೊಂಡಿದ್ದಾರೆ. ನಿರ್ದೇಶಕರಾಗಿ ಸರ್ವೇಜನಾಃ ಸುಖಿನೋಭವಂತು, ಗೀತಾರಾಕ್ಷಸ, ಅಳಿಯದೇವರು, ಗಾಂಪರ ಗುಂಪು, ಗಗ್ಗಯ್ಯನ ಗಡಿಬಿಡಿ, ದಾರಿಯಾವುದಯ್ಯ ಮುಂದೆ, ಮಹಾಯಾತ್ರೆ, ರಕ್ತಾಕ್ಷಿ, ಆ ಊರು ಈ ಊರು ನರಕದ ನ್ಯಾಯ ಮುಂತಾದ 50 ನಾಟಕಗಳನ್ನು ನಿರ್ದೇಶಿಸಿದ್ದು, ಅಂತರ ಬ್ಯಾಂಕ್ ನಾಟಕ ಸ್ಪರ್ಧೆಗಳಲ್ಲಿ ಉತ್ತಮ ನಿರ್ದೇಶಕ ಪ್ರಶಸ್ತಿಯನ್ನು ಎರಡು ಬಾರಿ ಪಡೆದ ಹೆಗ್ಗಳಿಕೆ ಇವರದು.

ಬೆಳಕು ಸಂಯೋಜನೆಯಲ್ಲೂ ಸಿದ್ಧ ಹಸ್ತರಿರುವ ಇವರು ಹಲವಾರು ನಾಟಕ, ನೃತ್ಯ ರೂಪಗಳಿಗೆ ಬೆಳಕು ಸಂಯೋಜನೆ ಮಾಡಿದ್ದಾರೆ. ಅಲ್ಲದೆ ಹಲವಾರು ನಾಟಕಗಳಿಗೆ ಹಿನ್ನೆಲೆ ಧ್ವನಿ ಸಂಯೋಜಿಸಿದ್ದಾರೆ. ಹವ್ಯಾಸಿ ರಂಗತಂಡಗಳೊಂದಿಗೆ ದೇಶಾದ್ಯಂತ ನೂರಾರು ಪ್ರದರ್ಶನಗಳಲ್ಲಿ ಪಾಲ್ಗೊಂಡಿದ್ದಾರೆ. ರಂಗಸೇವೆಗಾಗಿ ಭಾರತಯಾತ್ರಾ ಕೇಂದ್ರದಿಂದ 'ಸಂಸರಂಗ' ಪ್ರಶಸ್ತಿ ಇವರಿಗೆ 1997ರಲ್ಲಿ ಲಭಿಸಿದೆ. ಕಿರುತೆರೆಯ ಧಾರಾವಾಹಿಗಳಲ್ಲೂ ನಟಿಸಿ ಜನ ಮೆಚ್ಚುಗೆ ಗಳಿಸಿದ್ದಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿಯ 2009ರ ರಂಗಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.

---



## ಜಯಮ್ಮ ಕಲ್ಲೂರು

ಬಡ ಕುಟುಂಬದಲ್ಲಿ ಜನಿಸಿ ಜೀವನ ನಿರ್ವಹಣೆಗಾಗಿಯೇ 16ನೇ ವಯಸ್ಸಿನಲ್ಲಿ ಗುಬ್ಬಿ ಕಂಪೆನಿ ಸೇರಿದ ಶ್ರೀಮತಿ ಜಯಮ್ಮನವರಿಗೆ ಈಗ 80ರ ಪ್ರಾಯ. ತುಂಬಿದ ಕುಟುಂಬದ ಈ ಕಲಾವಿದೆ ನಾಲ್ಕನೇ ತರಗತಿಯವರೆಗೆ ಶಾಲೆ ಕಲಿತು, ತದನಂತರ ತಮ್ಮನ್ನು ತಾವು ರಂಗಸೇವೆಗೆ ಅರ್ಪಿಸಿಕೊಂಡವರು. ಗುಬ್ಬಿ ಕಂಪೆನಿಯ ದಶಾವತಾರ ನಾಟಕದ ಚಿಕ್ಕ ಪಾತ್ರದಿಂದ ಮೊದಲುಗೊಂಡು ಹಲವಾರು ಪ್ರತಿಷ್ಠಿತರ ಕಂಪನಿಗಳಲ್ಲಿ ಪಾತ್ರ ನಿರ್ವಹಣೆ ಮಾಡಿರುತ್ತಾರೆ. ಗೋಕಾಕ್ ಬಸವಣ್ಣಪ್ಪನವರ ಕಂಪೆನಿಯಲ್ಲಿ ಎಂಟು ವರ್ಷಗಳ ಕಾಲ ಕಲಾ ಸೇವೆಗೈದು, ತದನಂತರ ಹಿರಣ್ಣಯ್ಯನವರ ಕಂಪೆನಿ ಸೇರಿ, ಅಲ್ಲಿ ಮೂರು ವರ್ಷ ನಟಿಯಾಗಿ ಕಾರ್ಯ ನಿರ್ವಹಿಸಿದರು. ಇದರ ನಂತರ ಸ್ವಂತ ಕಂಪೆನಿ ಪ್ರಾರಂಭಿಸುವ ಉದ್ದೇಶವನ್ನು ತಮ್ಮ ಗಂಡ ಕಲ್ಲೂರು ಬಸಪ್ಪನವರಲ್ಲಿ ಪ್ರಸ್ತಾಪ ಮಾಡಿದಾಗ, ಅವರ ಸಹಮತದಿಂದ ಸ್ಥಾಪನೆಯಾದುದೇ 'ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ, ಕಲ್ಲೂರು'. ತುಂಬು ಕುಟುಂಬದ ಈ ದಂಪತಿಗಳ ಎಂಟು ಗಂಡು ಮಕ್ಕಳು, ಎರಡು ಹೆಣ್ಣು ಮಕ್ಕಳು ಎಲ್ಲರೂ ಕಲಾವಿದರೇ. ಉದರಪೋಷಣೆಗೆ ಇವರೆಲ್ಲರಿಗೆ ಕಂಡ ಒಂದೇ ಮಾರ್ಗವೆಂದರೆ – ರಂಗಭೂಮಿ. ತಮಗರಿವಿಲ್ಲದೆಯೇ ಕಲಾ ಸೇವೆಯನ್ನು ವೃತ್ತಿಯಾಗಿ ಸ್ವೀಕರಿಸಿದ ಈ ಕುಟುಂಬ ಸದಸ್ಯರೆಲ್ಲ ಉತ್ತಮ ಕಲಾವಿದರಾಗಿ ಉತ್ತರ ಕರ್ನಾಟಕದ ಮೂಲೆ ಮೂಲೆಗಳಲ್ಲಿ ಜನಾಭಿರುಚಿಯ ನಾಟಕಗಳನ್ನು ಪ್ರದರ್ಶಿಸುತ್ತ ಸುಮಾರು ಆರು ದಶಕಗಳ ರಂಗ ಸೇವೆ ಮಾಡಿರುತ್ತಾರೆ.

ಅನೇಕ ಪೌರಾಣಿಕ, ಸಾಮಾಜಿಕ ಹಾಗೂ ಐತಿಹಾಸಿಕ ನಾಟಕಗಳಲ್ಲಿ ಉತ್ತಮ ನಟನಾ ಸಾಮರ್ಥ್ಯ ಪ್ರದರ್ಶಿಸಿ, ಪ್ರಸ್ತುತ ವಯೋಧರ್ಮದಿಂದ ನಿವೃತ್ತಿ ಜೀವನ ಸಾಗಿಸುತ್ತಿರುವ ಶ್ರೀಮತಿ ಜಯಮ್ಮ ಕಲ್ಲೂರ ಅವರಿಗೆ ಕರ್ನಾಟಕ ನಾಟಕ ಅಕಾಡೆಮಿ 2009ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಡಾ॥ ಜಯಪ್ರಕಾಶ್ ಮಾವಿನಕುಳಿ

ರಂಗಭೂಮಿ ಹಾಗೂ ಸಾಹಿತ್ಯ ಕ್ಷೇತ್ರಗಳೆರಡರಲ್ಲೂ ಸೇವೆಸಲ್ಲಿಸುತ್ತಿರುವ ಶ್ರೀ ಜಯಪ್ರಕಾಶ್ ಮಾವಿನಕುಳಿಯವರು, ಪ್ರಥಮ ರ್‍ಯಾಂಕ್‌ನೊಂದಿಗೆ ಸ್ನಾತಕೋತ್ತರ ಪದವಿ ಹಾಗೂ ಜಾನಪದ ಡಿಪ್ಲೊಮಗಳನ್ನು ಪಡೆದಿದ್ದು, ಪ್ರಸ್ತುತ ಕಾರ್ಕಳದ ಭುವನೇಂದ್ರ ಕಾಲೇಜಿನಲ್ಲಿ ಪ್ರಾಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ನಾಟಕರಂಗದಲ್ಲಿ ವಿಶೇಷ ಆಸಕ್ತಿ ಹೊಂದಿರುವ ಇವರು ಶೆಫಾಟಕ ನಿರಾಕರಣ, ಪಾರ್ಟಿ, ಯವನಿಕಾ, ಮುಂತಾದ ಉತ್ತಮ ನಾಟಕಗಳನ್ನು ರಚಿಸಿ ಪ್ರಸ್ತುತ ಪಡಿಸಿದ್ದಾರೆ. ನಿರ್ದೇಶಕರಾಗಿ ಕೊಡೆಗಳು, ಆಸ್ಫೋಟ, ಯಯಾತಿ, ಆಮ್ರಪಾಲಿ, ಬದುಕ ಮನ್ನಿಸು ಪ್ರಭುವೇ ಮುಂತಾದ ಅನೇಕ ನಾಟಕಗಳನ್ನು ಯಶಸ್ವಿಯಾಗಿ ರಂಗದ ಮೇಲೆ ತಂದಿದ್ದಾರೆ.

ಕರ್ನಾಟಕ ನಾಟಕ ಅಕಾಡೆಮಿಯಿಂದ ಆಯ್ಕೆಗೊಂಡು ದೆಹಲಿಯ ರಾಷ್ಟ್ರೀಯ ನಾಟಕಶಾಲೆಯಲ್ಲಿ ಒಂದೂವರೆ ತಿಂಗಳ ತರಬೇತಿ ಶಿಬಿರದಲ್ಲಿ ಪಾಲ್ಗೊಂಡಿರುವ ಹೆಗ್ಗಳಿಕೆ ಇವರದು. ಅಂತಾರಾಷ್ಟ್ರೀಯ ಖ್ಯಾತಿಯ ನಾಟಕಕಾರ ಗಿರೀಶ್ ಕಾರ್ನಾಡರಂತಹ ಕಲಾವಿದರೊಂದಿಗೆ ಶ್ರೀಯುತರು ಸಂದರ್ಶನ ನಡೆಸಿ, ನಿರೂಪಿಸಿದ್ದಾರೆ. ರಂಗಭೂಮಿಗೆ ಸಂಬಂಧಿಸಿದಂತಹ ಹಲವಾರು ಲೇಖನಗಳನ್ನು ಬರೆದಿರುವ ಇವರು ಆಕಾಶವಾಣಿಯ ನಾಟಕ ವಿಭಾಗದಲ್ಲೂ ಕಲಾವಿದರಾಗಿ ಭಾಗವಹಿಸಿದ್ದಾರೆ. ಕವಿ, ಕಥೆಗಾರ, ಕಾದಂಬರಿಕಾರರೂ ಆಗಿರುವ ಶ್ರೀ ಜಯಪ್ರಕಾಶ್ ನಿರ್ದೇಶಿಸಿರುವ ನಾಟಕಗಳಿಗೆ ಉಡುಪಿ, ಮಂಗಳೂರು, ಕೋಟೇಶ್ವರಗಳಲ್ಲಿ ನಡೆದ ಅಂತರ ಕಾಲೇಜು ನಾಟಕ ಸ್ಪರ್ಧೆಗಳಲ್ಲಿ ಬಹುಮಾನಗಳು ಬಂದಿವೆ. ಇವರೇ ರಚಿಸಿ ನಿರ್ದೇಶಿಸಿರುವ 'ಸೂರ್ಯಾಸ್ತದಿಂದ ಸೂರ್ಯೋದಯದವರೆಗೆ' ನಾಟಕಕ್ಕಾಗಿ ಇವರಿಗೆ ಉತ್ತಮ ನಿರ್ದೇಶಕ, ಪ್ರಶಸ್ತಿ ಸಂದಿದೆ. ಇವರಿಗೆ 1997ರಲ್ಲಿ ಸರ್ ಎಂ.ವಿ. ಸಾಹಿತ್ಯ ಪ್ರಶಸ್ತಿಯನ್ನು ನೀಡಿ ಸನ್ಮಾನಿಸಲಾಗಿದೆ.

ಶ್ರೀಯುತರ ರಂಗಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿ 2009ರ ರಂಗಪ್ರಶಸ್ತಿಯನ್ನು ಅವರಿಗೆ ನೀಡಿ ಗೌರವಿಸಿದೆ.

---



## ಶಾಂತಾಬಾಯಿ ಡಿಗ್ಗಿ

ಉತ್ತರ ಕನ್ನಡ ರಂಗಭೂಮಿಯ ಹೆಸರಾಂತ ಕಲಾವಿದರಾದ ಧಾರವಾಡದ ಶಿವಪ್ಪ ಡಿಗ್ಗಿಯವರ ಮಗಳಾದ ಶ್ರೀಮತಿ ಶಾಂತಾಬಾಯಿ ಶಿವಪ್ಪ ಡಿಗ್ಗಿ, ಬಣ್ಣದ ಬದುಕನ್ನೇ ಅವಲಂಬಿಸಿದ್ದ ಕುಟುಂಬದಲ್ಲಿ ಜನಿಸಿದ್ದರಿಂದ, ಕಲಾಭಿನಯ ಅವರಿಗೆ ರಕ್ತಗತವಾಗಿದೆ. ಅನೇಕ ದಶಕಗಳಿಂದ ರಂಗಭೂಮಿಯಲ್ಲಿ ತಮ್ಮನ್ನು ಅಪ್ರಯತ್ನ ತೊಡಗಿಸಿಕೊಂಡವರು. ಅದರಲ್ಲೇ ಬಾಳನ್ನು ಕಂಡವರು. ತಮ್ಮ 12ನೇ ವಯಸ್ಸಿನಲ್ಲೇ, ತಂದೆ ಶಿವಪ್ಪನವರ ವಿಶ್ವರಂಜನ ಸಂಗೀತ ನಾಟಕಮಂಡಳಿ (ಧಾರವಾಡ) ಪ್ರದರ್ಶಿಸುತ್ತಿದ್ದ ಹೇಮರೆಡ್ಡಿ ಮಲ್ಲಮ್ಮ ನಾಟಕದಲ್ಲಿ ಮಲ್ಲಮ್ಮನ ಪಾತ್ರ ನಿರ್ವಹಿಸುವ ಮೂಲಕ ರಂಗಭೂಮಿಗೆ ಪಾದಾರ್ಪಣೆ ಮಾಡಿದ ಶ್ರೀಮತಿ ಶಾಂತಾಬಾಯಿ, ರಾಮಾಂಜನೇಯ ನಾಟಕವೂ ಸೇರಿದಂತೆ ಕಂಪೆನಿಯ 25ಕ್ಕೂ ಹೆಚ್ಚು ನಾಟಕಗಳಲ್ಲಿ ಸುಮಾರು ಆರು ವರ್ಷ ನಟಿಸಿ, ತಂದೆಯ ಮರಣ, ಸ್ವಂತ ಕಂಪೆನಿಯ ಮುಚ್ಚುವಿಕೆ, ಕಾಲಾಂತರದಲ್ಲಿ ವಿವಾಹ ಮುಂತಾದ ಘಟನೆಗಳಿಂದಾಗಿ ತಮ್ಮ ರಂಗ ಚಟುವಟಿಕೆಗಳನ್ನು ಕೆಲಕಾಲ ಸ್ಥಗಿತಗೊಳಿಸಿದರು. ನಂತರ ಗುಡಗೇರಿ ಕಂಪೆನಿ, ಶ್ರೀಮದ್ ಗುರು ರೇಣುಕಾಚಾರ್ಯ ನಾಟಕ ಮಂಡಳಿ ಮೈಂದರ್ಗಿ, ಸುಳ್ಳದ ಮಲ್ಲಿಕಾರ್ಜುನ ನಾಟ್ಯಸಂಘ, ರಾಣೆಬೆನ್ನೂರಿನ ಓಂಕಾರೇಶ್ವರ ನಾಟ್ಯ ಸಂಘ, ಕಮತಗಿಯ ಶ್ರೀಹುಚ್ಚೇಶ್ವರ ನಾಟ್ಯ ಸಂಘ, ಚಿತ್ರರಗಿಯ ಶ್ರೀ ಕುಮಾರ

ವಿಜಯ ನಾಟ್ಯ ಸಂಘ ಮುಂತಾದ ಹತ್ತಾರು ಕಂಪೆನಿಗಳಲ್ಲಿ ರಂಗಸೇವೆ ಮುಂದುವರಿಸಿದರು. ಮತ್ತೆ ತಮ್ಮ ಕಂಪೆನಿಯ ಮರುಹುಟ್ಟಿಗೆ ಮುಂದಾದರಾದರೂ, ಇದರಲ್ಲಿ ಯಶಸ್ಸು ಕಾಣಲಿಲ್ಲ. ಪತಿಯ ನಿಧನ, ಕುಟುಂಬ ನಿರ್ವಹಣೆ, ಅವರನ್ನು ಕಮತಗಿಯ ಕಂಪೆನಿಗೆ ಕಲಾಸೇವೆಗೆ ಮತ್ತೆ ಕರೆತಂದಿತು. ಇಂದು ಕಲಾವೃತ್ತಿ ಜೀವನಕ್ಕೆ ವಿದಾಯ ಹೇಳಿ ಸರ್ಕಾರ ನೀಡುತ್ತಿರುವ ವೃದ್ಧಾಪ್ಯವೇತನದೊಂದಿಗೆ ಬದುಕನ್ನು ಸವೆಸುತ್ತಿದ್ದಾರೆ ಈ ಹಿರಿಯ ಕಲಾವಿದೆ.

ಇವರ ರಂಗಸೇವೆಯನ್ನು ಗುರುತಿಸಿರುವ ಕರ್ನಾಟಕ ನಾಟಕ ಅಕಾಡೆಮಿ ಅವರಿಗೆ 2009ರ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ರಂಗಶ್ರೀ ಆರ್. ರಂಗಸ್ವಾಮಿ

'ರಂಗಶ್ರೀ ರಂಗಸ್ವಾಮಿ' ಎಂದೇ ಖ್ಯಾತರಾಗಿರುವ ರಂಗಭೂಮಿ ಕಲಾವಿದರಾದ ಆರ್. ರಂಗಸ್ವಾಮಿ ಬಾಲ್ಯದಿಂದಲೇ ನಾಟಕಗಳಲ್ಲಿ ಅಭಿನಯಿಸಲು ಆರಂಭಿಸಿದವರು. ಕಳೆದ 25 ವರ್ಷಗಳಿಂದ ರಂಗಭೂಮಿ ಕಲಾವಿದರಾಗಿ, ನಟರಾಗಿ, ನಾಟಕಕಾರರಾಗಿ, ನಿರ್ದೇಶಕರಾಗಿ, ತಮ್ಮನ್ನು ತೊಡಗಿಸಿಕೊಂಡಿರುವ ಇವರು ಈವರೆಗೆ ಸುಮಾರು 89 ನಾಟಕಗಳಲ್ಲಿ ಅಭಿನಯಿಸಿದ್ದಾರೆ. 'ಕುರುಕ್ಷೇತ್ರ ನಾಟಕದ 'ಶಕುನಿ' ಪಾತ್ರ 'ಮೂಗೂರು ಮುತ್ತಾಳರು' ನಾಟಕದ ಹಾಸ್ಯ ಪಾತ್ರಗಳಿಂದಾಗಿ ಜನಾದರಕ್ಕೆ ಪಾತ್ರರಾಗಿದ್ದಾರೆ.

ದುರ್ಯೋಧನ, ಭೀಮ, ಕಾಲಭೈರವ, ಕಂಸ, ಹಿರಣ್ಯಾಕ್ಷ, ಯಮ, ಘಟೋತ್ಕಜ ಮುಂತಾದ ಪಾತ್ರಗಳಲ್ಲಿ ಮೈತುಂಬಿ ನಟಿಸಿ, ಪಾತ್ರಗಳಿಗೆ ಜೀವತುಂಬಿದ ಹೆಗ್ಗಳಿಕೆ ಇವರದು. ಇವರು ರಾವಣನಾಗಿ ಅಭಿನಯಿಸಿರುವ 'ಪ್ರಚಂಡ ರಾವಣ' ನಾಟಕ ನಾಡಿನೆಲ್ಲೆಡೆ 450ಕ್ಕೂ ಹೆಚ್ಚು ಪ್ರಯೋಗಗಳನ್ನು ಕಂಡಿರುವುದು ಉಲ್ಲೇಖನೀಯ ವಿಷಯವಾಗಿದ್ದು, ಖಳನಾಯಕರಾಗಿ ಇವರು ನೀಡಿರುವ ಅಭಿನಯ ಪ್ರಶಂಸಾರ್ಹವಾದುದು. 'ರಂಗ ಶ್ರೀ' ಕಲಾಸಂಸ್ಥೆಯನ್ನು 1984ರಲ್ಲಿ 'ಆರಂಭಿಸಿ, ರಾಜ್ಯಮಟ್ಟದ ವಾರ್ಷಿಕ ನಾಟಕ ಸ್ಪರ್ಧೆಗಳನ್ನು ಏರ್ಪಡಿಸುವುದರ ಜೊತೆಗೆ, ಹಿರಿಯ ನಟರು, ಕಲಾವಿದರು ಹಾಗೂ ಸಮಾಜಸೇವಕರನ್ನು ಸನ್ಮಾನಿಸುತ್ತಾ ಬಂದಿದ್ದಾರೆ.

ಕವಿಗಳಾಗಿ ಎಂಟು ಕವನ ಸಂಕಲನಗಳನ್ನೂ, ನಾಟಕಕಾರರಾಗಿ 'ಗೌರವ ರತ್ನ ಕೌರವ' ಎಂಬ ನಾಟಕವನ್ನೂ ರಚಿಸಿದ್ದಾರೆ. ತಮ್ಮ ರಂಗಸೇವೆಯಿಂದಾಗಿ ರಾಜ್ಯಮಟ್ಟದ ಪೌರಾಣಿಕ ನಾಟಕ ಸ್ಪರ್ಧೆಗಳಲ್ಲಿ ಪ್ರಶಸ್ತಿಗಳಿಸಿರುವ ಇವರು ವಿವಿಧ ಸಂಘ – ಸಂಸ್ಥೆಗಳಿಂದ ಸನ್ಮಾನಿಸಲ್ಪಟ್ಟಿದ್ದಾರೆ. ರಂಗಭೂಮಿ ಸಾಧನೆಗಾಗಿ ಮದರ್‌ತೆರೆಸಾ ಶಾಂತಿ ಪ್ರಶಸ್ತಿ, ಪದ್ಮಶ್ರೀ ಕಲಾಕೌಸ್ತುಭ ಪ್ರಶಸ್ತಿ, ನವಚೇತನ ಪ್ರಶಸ್ತಿ, ರಾಜೀವ್‌ಗಾಂಧಿ ಪ್ರಶಸ್ತಿ, 'ರಂಗಭೂಷಣ' ಕರ್ನಾಟಕ ಸುವರ್ಣ ಭೂಷಣ, ರಂಗಕಲ್ಪಶ್ರೀ, ಮುಂತಾದ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿರುವ ಕರ್ನಾಟಕ ನಾಟಕ ಅಕಾಡೆಮಿಯ 2009ರ ರಂಗಪ್ರಶಸ್ತಿಯನ್ನು ನೀಡಿ ಅವರನ್ನು ಗೌರವಿಸಿದೆ.



## ಪ್ರಕಾಶ್

ರೈತ ಕುಟುಂಬದಲ್ಲಿ ಜನಿಸಿರುವ ಶ್ರೀ ಪ್ರಕಾಶ್‌ರವರು ಅಪ್ಪಟ ಗ್ರಾಮೀಣ ಪ್ರತಿಭೆಯಾಗಿದ್ದು, ಕಳೆದ 32 ವರ್ಷಗಳಿಂದ ಪೌರಾಣಿಕ ನಾಟಕಗಳಲ್ಲಿ ಅಭಿನಯಿಸುವ ಮೂಲಕ ರಂಗಭೂಮಿ ಕಲಾವಿದರಾಗಿ ಸಲ್ಲಿಸಿರುವ ಸೇವೆ ವಿಶಿಷ್ಟವಾದದು. ಬಾಲ್ಯದಿಂದಲೇ ನಾಟಕದತ್ತ ಒಲವು ಬೆಳೆಸಿಕೊಂಡ ಶ್ರೀಯುತರು 20ಕ್ಕೂ ಹೆಚ್ಚು ಪೌರಾಣಿಕ ನಾಟಕಗಳಲ್ಲಿ ಸುಯೋಧನ, ಕಂಸ, ಭೀಷ್ಮ, ದಕ್ಷ, ಬ್ರಹ್ಮ, ರಾವಣ, ಮಹಿಷಾಸುರ, ಶನಿರಾಜ, ಮುಂತಾದ ಪಾತ್ರಗಳಲ್ಲಿ ಜೀವತುಂಬಿ ಅಭಿನಯಿಸಿ ಜನಾದರಕ್ಕೆ ಪಾತ್ರರಾದವರು, ಮೂರೂವರೆ ವಜ್ರಗಳು, ಕುರುಕ್ಷೇತ್ರ, ಭೂಕೈಲಾಸ, ರಾಜಾ ವಿಕ್ರಮ, ಸಾಮ್ರಾಟ ಸುಯೋಧನ, ಪ್ರಭುಲಿಂಗಲೀಲೆ, ಮುಂತಾದ ಪೌರಾಣಿಕ ನಾಟಕಗಳಲ್ಲಷ್ಟೇ ಅಲ್ಲದೇ, ದೇವದಾಸಿ, ವಿಷಜ್ವಾಲೆ, ಅಣ್ಣ–ತಂಗಿ, ಬದುಕು ವಿಷವರ್ತುಲ ಮುಂತಾದ ಸಾಮಾಜಿಕ ನಾಟಕಗಳಲ್ಲೂ ಅಭಿನಯಿಸಿದ್ದಾರೆ.

ತಮ್ಮ ನಟನೆಯಿಂದಾಗಿ, ಪ್ರಶಂಸೆ, ಅಭಿನಂದನೆ, ಸನ್ಮಾನ, ಪ್ರಶಸ್ತಿ ಗೌರವಾದರಗಳಿಗೆ ಭಾಜನರಾಗಿರುವ ಶ್ರೀಯುತರು, 1984ರ ಯುವಜನ ಮೇಳದಲ್ಲಿ ಏಕಪಾತ್ರಾಭಿನಯಕ್ಕಾಗಿ ಪ್ರಶಸ್ತಿ ಪಡೆದಿದ್ದಾರೆ. ಸಾಮ್ರಾಟ್ ಸುಯೋಧನ, 'ಭೂಕೈಲಾಸ', (ರಾವಣ) 'ದಕ್ಷಯಜ್ಞ' ಮುಂತಾದ ನಾಟಕಗಳಲ್ಲಿ ಶ್ರೇಷ್ಠ ಅಭಿನಯಕ್ಕಾಗಿ ಇವರಿಗೆ ಹಲವಾರು ಪ್ರಶಸ್ತಿಗಳು ಸಂದಿದೆ. ಶ್ರೀ ಸಿದ್ಧಗಂಗಾ ಹಾಗೂ ಶ್ರೀ ಆದಿಚುಂಚನ ಗಿರಿ ಮಠಗಳಿಂದ ಸನ್ಮಾನಿಸಲ್ಪಟ್ಟಿರುವ ಇವರು ವಸ್ತು ಪ್ರದರ್ಶನ ಪ್ರಾಧಿಕಾರ, ತಾಲ್ಲೂಕು ಸ್ವಾತಂತ್ರ್ಯೋತ್ಸವ ಸಮಿತಿ, ಹೋಬಳಿ ರಂಗಭೂಮಿ ಕಲಾವಿದರ ಸಂಘ, ದಿ॥ ಎಸ್. ಜಯರಾಂ ಟ್ರಸ್ಟ್, ಮದ್ದೂರು ತಾಲ್ಲೂಕು ರಂಗಭೂಮಿ ಸಂಘ, ಹಾಗೂ ಜಿಲ್ಲಾಡಳಿತಗಳಿಂದ ಅಭಿನಂದಿಸಲ್ಪಟ್ಟಿದ್ದಾರೆ. ಮಂಡ್ಯ ಜಿಲ್ಲಾ ಕನ್ನಡರಾಜ್ಯೋತ್ಸವ ಪ್ರಶಸ್ತಿ ಗಳಿಸಿ ಕಲಾಸಾಮ್ರಾಟ್ ಬಿರುದಿನೊಂದಿಗೆ ಸನ್ಮಾನಿತಗೊಂಡಿರುತ್ತಾರೆ.

ಶ್ರೀಯುತರು ರಂಗಭೂಮಿಗೆ ಸಲ್ಲಿಸಿರುವ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2009ರ ವಾರ್ಷಿಕ ರಂಗ ಪ್ರಶಸ್ತಿಯ ನೀಡಿ ಇವರನ್ನು ಗೌರವಿಸಿದೆ.

---



## ಹುಸೇನಪ್ಪ ಪುಲಮೇಶ್ವರ ದಿನ್ನಿ

ಪುಲಮೇಶ್ವರ ದಿನ್ನಿ (ಸಿಂಧನೂರು ತಾ॥) ಗ್ರಾಮದ ಶ್ರೀ ಹುಸೇನಪ್ಪ, ರಂಗಭೂಮಿಯ ಹಿರಿಯ ಕಲಾವಿದರು. ಎಳನೆಯ ತರಗತಿಯಲ್ಲೇ ರಂಗಭೂಮಿಯತ್ತ ಸೆಳೆಯಲ್ಪಟ್ಟು, ಅದನ್ನೆ ಬದುಕಾಗಿಸಿಕೊಂಡವರು. ಸುಮಾರು 35 ವರ್ಷ ರಂಗಭೂಮಿಯಲ್ಲಿ ನಿರಂತರವಾಗಿ ಶ್ರಮಿಸಿದ ಶ್ರೀಯುತರು, 'ಕರ್ಣಾರ್ಜುನಕಾಳಗ' ಬಯಲಾಟದಲ್ಲಿ ಸ್ತ್ರೀಪಾತ್ರಧಾರಿಯಾಗಿ ರಂಗಪ್ರವೇಶಿಸಿ, ಕಂಪ್ಲಿಯ ನಟರಾಜ ಕಲಾ ಸಂಘದ ಕಲಾವಿದರಾಗಿ ಅನೇಕ ನಾಟಕಗಳಲ್ಲಿ ಅಭಿನಯಿಸಿದರು.

'ಹೆಜ್ಜೆ ತಪ್ಪಿದ ಹೆಣ್ಣು' ನಾಟಕದಲ್ಲಿ ಖಳನಾಯಕ ರಾಜೇಶನ ಪಾತ್ರದಲ್ಲಿ ಜನಮೆಚ್ಚುಗೆ ಪಡೆದವರು. ಸಿಂಧೂರ ಲಕ್ಷ್ಮಣ, ವೆಂಕಟಪ್ಪ ನಾಯಕ, ಇಳಕಲ್‌ಸೀರೆ, ದೇಸಾಯಿ ದರ್ಬಾರು, ರಕ್ತರಾತ್ರಿ, ಮುಂತಾದ 100ಕ್ಕೂ ಹೆಚ್ಚು ನಾಟಕಗಳಲ್ಲಿ ಕಂಪ್ಲಿ, ರಾಯಚೂರು, ಬಳ್ಳಾರಿ, ಸಿಂಧನೂರು, ಹುಬ್ಬಳ್ಳಿ, ಬೆಂಗಳೂರು, ಆದೋನಿ, ಗದಗ, ಗುಲ್ಬರ್ಗಾ, ವಿಜಾಪುರ, ಬೆಳಗಾವಿ, ಮುಂತಾದೆಡೆ ಅಭಿನಯಿಸಿ ವೈವಿಧ್ಯಮಯ ಪಾತ್ರಗಳ ಮೂಲಕ ಖ್ಯಾತಿ ಪಡೆದಿದ್ದವರು. ಇವರು ನಟಿಸಿರುವ 'ರಕ್ತರಾತ್ರಿ' ನಾಟಕ ಆಂಧ್ರ ಹಾಗೂ ಕರ್ನಾಟಕ ದೂರದರ್ಶನ ಕೇಂದ್ರಗಳಿಂದ ಪ್ರದರ್ಶಿಸಲ್ಪಟ್ಟಿದೆ.

ರಂಗಕಲೆಯ ವಿವಿಧ ರಂಗಸಂಜ್ಜಿಕೆಗಳನ್ನು ಬಾಡಿಗೆಗೆ, ನಾಟಕ ಕಲಾತಂಡಗಳಿಗೆ ನೀಡುವ ಕಾರ್ಯದಲ್ಲಿ ತೊಡಗಿರುವ ಇವರ ರಂಗಭೂಮಿ ಸೇವೆ ಉಲ್ಲೇಖಾರ್ಹ.

ಶ್ರೀಯುತರ ರಂಗ ಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ಇವರಿಗೆ 2009ರ ರಂಗ ಪ್ರಶಸ್ತಿ ನೀಡಿ ಗೌರವಿಸಿದೆ.



## ತಿರಕಪ್ಪ ವೀರಭದ್ರಪ್ಪ ಕಬಾಡಿ

ವಿಜ್ಞಾನ ಪದವೀಧರರಾದ ಮೋಟೇಬೆನ್ನೂರಿನ ಶ್ರೀ ತಿರಕಪ್ಪ ವೀರಭದ್ರಪ್ಪ ಕಬಾಡಿ (ಜನನ 1947) ಸುಮಾರು 45 ವರ್ಷಗಳಿಂದ ರಂಗಭೂಮಿಯ ಹಾಗೂ ಕಿರುತೆರೆಯ ನಟನಾಗಿ, ನಾಟಕಕಾರರಾಗಿ, ನಿರ್ದೇಶಕರಾಗಿ ರಂಗಾಭೂಮಿಯಲ್ಲಿ ಕಲಾ ಸೇವೆ ನಡೆಸಿಕೊಂಡು ಬರುತ್ತಿರುವ ಹಿರಿಯ ಕಲಾವಿದರು. ಜೀವ ವಿಮಾ ಇಲಾಖೆಯಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಇವರು ರಾಜಾ ಸತ್ಯವ್ರತ, ಮೂರೂವರೆ ವಜ್ರಗಳು, ಶ್ರೀ ಕೃಷ್ಣ ಪಾರಿಜಾತ, ಲಂಕಾದಹನ ಮುಂತಾದ ಹತ್ತಾರು ಪೌರಾಣಿಕ ನಾಟಕಗಳಲ್ಲಿ; ಸಣ್ಣಾಟ ದೊಡ್ಡಾಟಗಳಲ್ಲಿ; ವೀರ ಸಂಗೋಳ್ಳಿರಾಯಣ್ಣ, ಎಚ್ಚಮನಾಯಕ, ಶ್ರೀ ಕೃಷ್ಣದೇವರಾಯ, ಸುರಪುರದ ವೆಂಕಟಪ್ಪನಾಯಕ ಮುಂತಾದ ನಾಲ್ಕಾರು ಐತಿಹಾಸಿಕ ನಾಟಕಗಳಲ್ಲಿ ಹಾಗೂ ಸಂಗ್ಯಾ-ಬಾಳ್ಯ, ಧರ್ಮಯುದ್ಧ ನಮ್ಮ ಹಳ್ಳಿ ಮುಂತಾದ ಹಲವಾರು ಸಾಮಾಜಿಕ ನಾಟಕಗಳಲ್ಲಿ ವಿಭಿನ್ನ ಪಾತ್ರಗಳಲ್ಲಿ ನಟಿಸಿರುವ ಜನಪ್ರಿಯ ಕಲಾವಿದರು.

ಜೀವವಿಮಾ ಹವ್ಯಾಸಿ ಕಲಾ ಬಳಗದ ಸದಸ್ಯರಾಗಿ ದುಡಿದಿರುವ ಇವರು ವೃತ್ತಿಯೊಂದಿಗೆ ಪ್ರವೃತ್ತಿಯನ್ನು ಸಮನಾಗಿ ಮೇಳೈಸಿ ಕೊಂಡು ಉಳಿದು ಬೆಳೆದವರು. ವಿವಿಧ ಸಾಂಸ್ಕೃತಿಕ ಸಂಘಟನೆಗಳೊಂದಿಗೆ, ಸಾಮಾಜಿಕ ಜಾಗೃತಿಯನ್ನುಂಟು ಮಾಡುವ ಬೀದಿ ನಾಟಕಗಳಲ್ಲೂ ಭಾಗವಹಿಸುವ ಸಾಮಾಜಿಕ ಕಳಕಳಿಯುಳ್ಳ ರಂಗ ಕಲಾವಿದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಾಯೋಜಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲೂ ಪಾಲ್ಗೊಂಡಿರುವ ಶ್ರೀಯುತರು. ಹಾವೇರಿಯ ಸ್ನೇಹಕಲಾ ವೃಂದ, ಮೋಟೇಬೆನ್ನೂರಿನ ಕಲೋಪಾಸಕ ಸಂಘ, ಸಾಹಿತ್ಯಮಂಟಪ, ರಂಗ ತರಂಗ, ಜೀವವಿಮಾ ಹವ್ಯಾಸಿ ಕಲಾ ಬಳಗ ಮುಂತಾದ ಸಾಂಸ್ಕೃತಿಕ ಸಂಘಟನೆಗಳ ಕಾರ್ಯಚಟುವಟಿಕೆಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಮಿಗಿಲಾಗಿ ಕನ್ನಡ ಕ್ರಿಯಾ ಸಮಿತಿಯ ಸಕ್ರಿಯ ಸದಸ್ಯರಾಗಿ ತಾಲ್ಲೂಕುಮಟ್ಟದಲ್ಲಿ ಕನ್ನಡಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀಯುತರ ರಂಗ ಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2009ರ ವಾರ್ಷಿಕ ರಂಗ ಪ್ರಶಸ್ತಿಯನ್ನು ನೀಡುವ ಮೂಲಕ ಅವರನ್ನು ಗೌರವಿಸಿದೆ.



## ಪ್ರಕಾಶ್‌ರಾವ್ ಪಯ್ಯಾರ್

ದುಬೈನ ಪ್ರತಿಷ್ಠಿತ ಕಂಪೆನಿಯಲ್ಲಿ ಫೈನಾನ್ಸ್ ಮ್ಯಾನೇಜರ್ ಆಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಪ್ರಕಾಶ್ ರಾವ್ ಪಯ್ಯಾರ್ ಅವರು ಅಚ್ಚ ಕನ್ನಡಿಗ. ಉದ್ಯೋಗ ನಿಮಿತ್ತ ದುಬೈ ಸೇರಿದವರು. ಕಳೆದ ಇಪ್ಪತ್ತೈದು ವರ್ಷಗಳಿಂದ ಹೊರದೇಶಗಳಲ್ಲಿ ಕನ್ನಡ ನಾಟಕ ಕ್ಷೇತ್ರವನ್ನು ವಿಸ್ತರಿಸಿದವರು. ನಾಟಕ ರಚನೆ, ನಿರ್ದೇಶನ, ಕವನ ಮತ್ತು ಕತೆ ರಚನೆ, ಸಂಘಟನೆ ಇವು ಇವರ ಹವ್ಯಾಸಗಳು. ಇವರ ಹಲವಾರು ಲೇಖನಗಳು ಮುಂಬೈಯಿಂದ ಪ್ರಕಟವಾದ ಹಲವಾರು ದಿನಪತ್ರಿಕೆ, ವಾರ ಮತ್ತು ಮಾಸಪತ್ರಿಕೆಗಳಲ್ಲಿ

ಅಜ್ಞಾಗಿವೆ. ಬೆಂಗಳೂರಿನ ರಂಗ ಸಮಾಜ ಸಾಂಸ್ಕೃತಿಕ ಸಂಸ್ಥೆಯಿಂದ 'ಕರ್ನಾಟಕ ಚೇತನ', ಜ್ಞಾನ ಮಂದಾರ ಅಕಾಡೆಮಿಯಿಂದ 'ಜ್ಞಾನ ಸರಸ್ವತಿ', 2008ರಲ್ಲಿ ಗೋವೆಯಲ್ಲಿ ನಡೆದ ಅಖಿಲ ಭಾರತ ಸಾಂಸ್ಕೃತಿಕ ಸಮ್ಮೇಳನದಲ್ಲಿ ಕೊಡಮಾಡಿದ 'ಹೃದಯ ವಂತರು', 2007ರಲ್ಲಿ ಕುವೈಟ್‌ನಲ್ಲಿ ಅಲ್ಲಿನ ಕನ್ನಡ ಕೂಟದ ವತಿಯಿಂದ ಪಡೆದ ಸನ್ಮಾನ; 2009ರಲ್ಲಿ ಶಾರ್ಜಾ ಕರ್ನಾಟಕ ಸಂಘ ನೀಡಿದ 'ಮಯೂರ' ಪ್ರಶಸ್ತಿ – ಇವು ಶ್ರೀಯುತರಿಗೆ ಸಂದಿರುವ ಗೌರವ ಪ್ರಶಸ್ತಿಗಳು.

ತಾವು ಸ್ಥಾಪಿಸಿದ 'ಧ್ವನಿ' ರಂಗ ಸಂಸ್ಥೆಯ ಮೂಲಕ ಮುಂಬೈ, ಪುಣೆ ಯುಎಇ ಮತ್ತು ಗಲ್ಫ್ ರಾಷ್ಟ್ರಗಳಲ್ಲಿ ಸತತ ರಂಗ ಚಟುವಟಿಕೆಗಳನ್ನು ನಡೆಸುತ್ತ ಸುಮಾರು 25 ನಾಟಕಗಳನ್ನು ನಿರ್ದೇಶಿಸಿ ಪ್ರದರ್ಶಿಸಿರುತ್ತಾರೆ. ಕರ್ನಾಟಕದ ಎಲ್ಲಾ ರಂಗಕರ್ಮಿಗಳೊಡನೆ ಮತ್ತು ರಂಗ ತಂಡಗಳೊಡನೆ ನಿಕಟ ಸಂಪರ್ಕ ಹೊಂದಿರುವ ಶ್ರೀ ಪಯ್ಯಾರ್, ಯುಎಇ ಚರಿತ್ರೆಯಲ್ಲಿ ಅನಿವಾಸಿ ಕನ್ನಡಿಗರು ಅಭಿನಯಿಸಿದ ಪ್ರಪ್ರಥಮ ಕನ್ನಡ ನಾಟಕ 'ನಾಗಮಂಡಲ' ವನ್ನು ನಿರ್ದೇಶಿಸಿ ರಂಗದ ಮೇಲೆ ತಂದ ಕನ್ನಡ ಕಲಾವಿದರು. ಇದೇ ರೀತಿ ಭಾರತೀಯ ದೂತವಾಸದ ಸಭಾಗೃಹದಲ್ಲಿ 'ಹಯವದನ'ವನ್ನೂ ಗಿರೀಶ್ ಕಾರ್ನಾಡರ 'ಒಡಕಲು ಬಿಂಬ' ವನ್ನೂ ನಿರ್ದೇಶಿಸಿರುತ್ತಾರೆ.

ತಮ್ಮ 'ಧ್ವನಿ' ಸಂಸ್ಥೆಯ ಬೆಳ್ಳಿ ಹಬ್ಬದ ಪ್ರಯುಕ್ತ ವಿಶ್ವ ಕನ್ನಡ ನಾಟಕ ಸ್ಪರ್ಧೆಯನ್ನು ಆಯೋಜಿಸಿದ ಶ್ರೀಯುತರಿಗೆ ಕರ್ನಾಟಕ ನಾಟಕ ಅಕಾಡೆಮಿ 2009ರ ಹೊರನಾಡ ಕನ್ನಡ ಕಲಾವಿದರಿಗೆ ನೀಡಲಾಗಿರುವ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಎಂ. ನಾಗರಾಜಾಚಾರ್

ಹತ್ತು ವರ್ಷದ ಬಾಲಕನಾಗಿದ್ದಾಗ 'ರಾಜಾ ಸತ್ಯ ವ್ರತ' ನಾಟಕದ ಚತುರನ ಪಾತ್ರದ ಮೂಲಕ ರಂಗಪ್ರವೇಶ ಮಾಡಿದ ಶ್ರೀ ನಾಗರಾಜಾಚಾರ್ ಅವರು ಪೌರಾಣಿಕ, ವೃತ್ತಿರಂಗ ಭೂಮಿಯ ಸಂಗೀತ ನಿರ್ದೇಶಕರಾಗಿ, ಪಕ್ಕ ವಾದ್ಯಗಾರರಾಗಿ ಸುಮಾರು 46 ವರ್ಷಗಳ ರಂಗಾನುಭವ ಹೊಂದಿರುವ ರಂಗ ಕರ್ಮಿ. ಸಂಪೂರ್ಣ ರಾಮಾಯಣ, ತ್ರಿಜನ್ಮ ಮೋಕ್ಷ, ಶಿವ ಜಲಂಧರ, ಪಂಚಾವತಾರ, ರುಕ್ಮಿಣಿ ಸ್ವಯಂವರ, ದಾನ ಶೂರ ಕರ್ಣ, ಕೃಷ್ಣ ಲೀಲೆ ದಶಾವತಾರ–ಹೀಗೆ ನೂರಾರು ಪೌರಾಣಿಕ ನಾಟಕಗಳನ್ನು ರಾಜ್ಯಾದ್ಯಂತ ನಿರ್ದೇಶಿಸಿದ ಶ್ರೀಯುತರು ಸ್ವತಃ ನಟರೂ ಹೌದು. ಇವರು ವಹಿಸಿದ ಪಾತ್ರಗಳಾದ ಶ್ರೀರಾಮ, ನಾರದ, ಆಂಜನೇಯ, ಕೌಶಿಕ, ಪ್ರಹ್ಲಾದ ಮುಂತಾದವು ಜನ ಮಾನಸದಲ್ಲಿ ಇಂದಿಗೂ ಚಿರಸ್ಮರಣೀಯ.

ತಮ್ಮ ಗುರುಗಳಾದ ದಿವಂಗತ ಹೆಚ್.ಕೆ. ಯೋಗಾ ನರಸಿಂಹ, ಮೈಸೂರು, ಇವರಲ್ಲಿ ಹಾಗೂ ಬೆಂಗಳೂರಿನ ದಿವಂಗತ ವಾಸುದೇವ ಶಾಸ್ತ್ರಿ ಇವರಲ್ಲಿ ಹಾರ್ಮೋನಿಯಂ ಅಭ್ಯಾಸ ಮತ್ತು ಬೆಂಗಳೂರಿನ ದಿವಂಗತ ಕಳಸಪ್ಪ ಇವರಲ್ಲಿ ತಬಲ ವಾದನ ಕಲಿಕೆ, ಇವು ಇವರ ಜೀವನದ ಅವಿಸ್ಮರಣೀಯ ಘಟ್ಟಗಳು. 1960 ರಿಂದ 62 ರವರೆಗೆ ಮೈಸೂರಿನ ಗಾಯತ್ರಿ ನಾಟಕ ಸಭಾದಲ್ಲಿ ಎರಡು ವರ್ಷಗಳ ಸೇವೆಯ ನಂತರ 1963 ರಿಂದ ಗುಬ್ಬಿ ವೀರಣ್ಣನವರ ನಾಟಕ ಕಂಪೆನಿಯಲ್ಲಿ ನಟನಾಗಿ ಪಕ್ಕ ವಾದ್ಯಗಾರನಾಗಿ 18 ವರ್ಷಗಳ ಅವಿರತ ಸೇವೆ ಸಲ್ಲಿಸಿದ್ದಾರೆ. 1965ರಿಂದ 69ರವರೆಗೆ ಮಾಸ್ಟರ್ ಹಿರಣ್ಣಯ್ಯನವರ ಕಂಪನಿಯಲ್ಲಿ ತಬಲಾವಾದಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ದಿವಂಗತ ಸುಬ್ಬಯ್ಯ ನಾಯ್ಡು ಕಂಪೆನಿ ಸಿರಸಿಯಲ್ಲಿ ಕ್ಯಾಂಪ್ ಮಾಡಿದ್ದಾಗ ಅಲ್ಲಿ ಸಂಗೀತ ನಿರ್ದೇಶಕರಾಗಿ ಮತ್ತು ಹಾರ್ಮೋನಿಯಂ ವಾದಕರಾಗಿ ಸೇವೆಸಲ್ಲಿಸಿದ್ದಾರೆ.

ಕೆ.ವಿ. ಶಂಕರೇಗೌಡ ಪ್ರಶಸ್ತಿ, ಜನದನ ಪ್ರಶಸ್ತಿ ಮುಂತಾಗಿ ಹತ್ತು ಹಲವು ಗೌರವಗಳಿಗೆ ಪಾತ್ರರಾದ ಶ್ರೀಯುತರು ಬೆಂಗಳೂರು ಮತ್ತು ಧಾರವಾಡ ಆಕಾಶವಾಣಿ ಕೇಂದ್ರಗಳಲ್ಲಿ ಮತ್ತು ರಾಜ್ಯದ ಹಲವಾರು ಪ್ರತಿಷ್ಠಿತ ವೇದಿಕೆಗಳಲ್ಲಿ ರಂಗ ಗೀತ ಗಾಯನ ಮಾಡಿರುತ್ತಾರೆ. ಕಲ್ಕತ್ತ, ಅಹಮದಾಬಾದ್‌ಗಳ ಕರ್ನಾಟಕ ಸಂಘಗಳಲ್ಲಿ ರಂಗ ಗೀತ ಗಾಯನ

ಕಾರ್ಯಕ್ರಮ ನೀಡಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿ ಹೊರತಂದಿರುವ ಧ್ವನಿ ತಟ್ಟೆಗಳಲ್ಲಿ ರಂಗ ಗೀತೆಗಳಿಗೆ ಕಂಠದಾನ ಮಾಡಿದ್ದಾರೆ.

ಶ್ರೀಯುತರ ರಂಗ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2009ರ ರಂಗ ಪ್ರಶಸ್ತಿ ನೀಡಿ ಗೌರವಿಸಿದೆ.

---



## ರಾಜಶೇಖರ ಕದಂಬ (ವಾರ್ಷಿಕ ಪುಸ್ತಕ ಪ್ರಶಸ್ತಿ ಪುರಸ್ಕೃತರು)

ಬೆಂಗಳೂರಿನಲ್ಲಿ 1945ರಲ್ಲಿ ಜನಿಸಿದ ಶ್ರೀ ರಾಜಶೇಖರ ಕದಂಬ ಅವರು ತಂದೆ ದಾಸಪ್ಪನವರು ರಚಿಸಿದ 'ಪುರೂರವ' ನಾಟಕದ ಮೂಲಕ ಸಣ್ಣವಯಸ್ಸಿಗೇ ರಂಗ ಪ್ರವೇಶ ಮಾಡಿ, ಉತ್ತಮ ನಟ, ನಿರ್ದೇಶಕ ಹಾಗೂ ಸಂಘಟಕರಾಗಿ ರಾಜ್ಯದ ರಂಗಭೂಮಿಯಲ್ಲಿ ತಮ್ಮ ಛಾಪು ಮೂಡಿಸಿದ್ದಾರೆ. ರಣಧೀರ ಕಂಠೀರವ, ಕೆಂಪೇಗೌಡ, ಎಚ್ಚಮ ನಾಯಕ, ಸಂಗೊಳ್ಳಿ ರಾಯಣ್ಣ, ಟಿಪ್ಪು ಸುಲ್ತಾನ್, ಅಳಿಯ ದೇವರು, ಸಂದಿಗ್ಧ ಮುಂತಾದ ನಾಟಕಗಳಲ್ಲಿ ಜನಪ್ರಿಯ ನಟರಾಗಿ ಪ್ರಸಿದ್ಧರಾದ ಇವರು 1963ರಲ್ಲಿ 'ಕದಂಬ ರಂಗ ವೇದಿಕೆ' ಸ್ಥಾಪಿಸಿ ಅನೇಕ ನಾಟಕಗಳನ್ನು ರಾಜ್ಯಾದ್ಯಂತ ಪ್ರದರ್ಶಿಸಿದರು. ಇವುಗಳಲ್ಲಿ ದುರ್ಗಾಸ್ತಮಾನ ಜನಪ್ರಿಯವಾಯಿತು. ಶ್ರೀ ರಂಗರ ಕೇಳು ಜನಮೇಜಯ, ಮಾಸ್ತಿಯವರ ಕಣಕಣ್ಣ, ಕುವೆಂಪುರವರ ಬಿರುಗಾಳಿ ಹಾಗೂ ಮಹಾರಾತ್ರಿ, ಜಡಭರತರ ಪರಿಮಳದವರು ಮುಂತಾದ ನಾಟಕಗಳನ್ನು ಯಶಸ್ವಿಯಾಗಿ ರಂಗದ ಮೇಲೆ ತಂದಿರುತ್ತಾರೆ. ಸುಮಾರು 25ಕ್ಕೂ ಹೆಚ್ಚಿನ ಚಲನಚಿತ್ರಗಳಲ್ಲಿ ನಟಿಸಿರುವ ಶ್ರೀಯುತರು 2004ರಲ್ಲಿ ರಾಜ್ಯೋತ್ಸವ ಪ್ರಶಸ್ತಿ, 1999ರಲ್ಲಿ ಕನ್ನಡ ಪ್ರಶಸ್ತಿ, 2007ರಲ್ಲಿ ಕೆ.ವಿ. ಶಂಕರೇಗೌಡ ರಂಗಭೂಮಿ ಪ್ರಶಸ್ತಿ, ಸಾಗರ್ ಪ್ರಶಸ್ತಿ, ದೆಹಲಿ ಕನ್ನಡ ಬಳಗ ಪತ್ರಿಕಾ ಪ್ರಶಸ್ತಿ, ಹೊಯ್ಸಳ ಪ್ರಶಸ್ತಿಗಳನ್ನುಗಳಿಸಿರುತ್ತಾರೆ.

ಶ್ರೀ ರಾಜಶೇಖರ ಕದಂಬರ 108 ರಂಗ ಮುಖಿಗಳು ಒಂದು ರಂಗ ಚರಿತ್ರೆ, ಇದರಲ್ಲಿ ಮೈಸೂರಿನ ನೂರೆಂಟು ಕಲಾವಿದರ ಪರಿಚಯವೇ ಅಲ್ಲದೆ ಅವರ ಸಾಧನೆಗಳ ಸೂಕ್ಷ್ಮ ದಾಖಲೆಯಿದೆ. ಹವ್ಯಾಸಿ ಮತ್ತು ಕಲಾವಿಲಾಸಿ ವೃತ್ತಿರಂಗ ಕರ್ಮಿಗಳು, ಪ್ರಸಾಧಕರು, ವಸ್ತ್ರಾಲಂಕರ ವಿನ್ಯಾಸಕರು, ರಂಗ ಸಜ್ಜಿಕೆ ಹಾಗೂ ಬೆಳಕು ವಿನ್ಯಾಸಕರು, ಗ್ರಾಮೀಣ ನಾಟಕ ಮಾಸ್ತರರು ಹೀಗೆ ಹಲವು ಹತ್ತು, ಪ್ರಕಾರಗಳ ತಜ್ಞರ ಪ್ರಾತಿನಿಧಿಕ ಪರಿಚಯವಿದೆ.

ಅನನ್ಯವಾದ ಇಂತಹ ರಂಗ ಸಾಧಕರ ದಾಖಲೀಕರಣ ಮಾಡಿರುವ ಶ್ರೀಯುತರ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ ಇವರಿಗೆ 2009ರ ಪುಸ್ತಕ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಮಾರ್ತಾಂಡಪ್ಪ ಎಂ. ಕತ್ತಿ (ವಾರ್ಷಿಕ ಪುಸ್ತಕ ಪ್ರಶಸ್ತಿ ಪುರಸ್ಕೃತರು)

ಹಾವೇರಿ ಜಿಲ್ಲೆಯ ಹಾನಗಲ್ಲ ತಾಲೂಕಿನ ಹಿರೇಬಾಸೂರು ಗ್ರಾಮದ ಮಾರ್ತಾಂಡಪ್ಪ ಎಂ. ಕತ್ತಿ ಧಾರವಾಡದಲ್ಲಿ ಶಿಕ್ಷಣ ಪಡೆಯಲು ಬಂದಾಗಲೇ ಸಾಹಿತ್ಯದೊಲವು ಅವರನ್ನು ಸೆಳೆಯಿತು. ಕರ್ನಾಟಕ ವಿದ್ಯಾವರ್ಧಕ ಸಂಘದ ಸಭೆ ಸಮಾರಂಭಗಳಿಗೆ ಆಗಾಗ ಹೋಗಿಬರುತ್ತಿದ್ದಾಗ, ನಟಶೇಖರ ಪಂಡಿತ ಬಸವರಾಜ ಮನಸೂರರ ಬಗ್ಗೆ, ಅವರ ರಂಗಭೂಮಿಯ ಸಾಧನೆಗಳ ಬಗ್ಗೆ ಜನ ಮಾತನಾಡಿಕೊಳ್ಳುತ್ತಿದ್ದುದನ್ನು ಕೇಳಿ ಈ ಮಹಾಶಕ್ತಿಯ ಬಗ್ಗೆ ಮತ್ತಷ್ಟು ತಿಳಿದುಕೊಳ್ಳುವ ಕುತೂಹಲ ಹೊಂದಿದರು. ಈ ರಂಗದಿಗ್ಗಜರ ಸಾಧನೆಗಳನ್ನು, ಕೀರ್ತಿಯನ್ನು ದಾಖಲೀಕೃತ ಮಾಡಿ, ಮುಂದಿನ ಜನಾಂಗಕ್ಕೆ ಇವುಗಳನ್ನು

ಪರಿಚಯಿಸಬೇಕೆಂಬ ಅದಮ್ಯ ಬಯಕೆ ಚಿಗುರೊಡೆಯಿತು. ಇದರ ಪ್ರತಿಫಲವೇ – 'ರಂಗಭೂಮಿ ದಿಗ್ಗಜ ನಟಶೇಖರ ಪಂಡಿತ ಬಸವರಾಜ ಮನಸೂರ ಜೀವನ – ಸಾಧನೆ' ಎಂಬ ಗ್ರಂಥ.

ಧಾರವಾಡದ ಮನಸೂರ ಎಂಬ ಪುಟ್ಟ ಗ್ರಾಮದಲ್ಲಿ ಜನಿಸಿದ ಹಿರಿಯ ರಂಗ ಪ್ರತಿಭೆಯಾದ ಪಂಡಿತ ಬಸವರಾಜರ ಸಾಧನೆ ವರ್ಣನಾತೀತ. ಸಂಗೀತರತ್ನ, ಗಾನ ಗಂಧರ್ವ ಡಾ. ಮಲ್ಲಿಕಾರ್ಜುನ ಮನಸೂರರ ಹಿರಿಯ ಅಣ್ಣನವರಾದ ಇವರದು ಬಹುಮುಖ ವ್ಯಕ್ತಿತ್ವ. ಸ್ನೇಹಜೀವಿ, ಪುಸ್ತಕ ಪ್ರೇಮಿ, ಜಾತಿಭೇದ ಮೀರಿದ ಗೆಳೆಯ. ಶಾಲಾ ಕಲಿಕೆಯ ಕಡೆ ತೋರಿಸಿದ ಒಲವಿಗಿಂತ ರಂಗಭೂಮಿ ಇವರನ್ನು ಚಿಕ್ಕಂದಿನಿಂದಲೇ ಸೆಳೆಯಿತು. ರಂಗ ಸಂಗೀತ, ನಟನೆ, ರಂಗ ತಾಲೀಮಿಗೆ ಹೆಚ್ಚಿನ ಸಮಯ ನೀಡಲು ಪ್ರಾರಂಭಿಸಿದರು.

ಶ್ರೀ ವಾಮನರಾಯರ ಕಂಪೆನಿಯ ಭಕ್ತ ಪ್ರಹ್ಲಾದನಾಗಿ ರಂಗಪ್ರವೇಶ ಮಾಡಿದ ಬಸವರಾಜರು ಕಲಾ ನೈಪುಣ್ಯತೆಯನ್ನು ಬೆಳೆಸಿಕೊಂಡು ಮುಂದೆ ರಂಗದಿಗ್ಗಜರಾದರು. ಸಂಗೀತಯೋಗಿ ನೀಲಕಂಠ ಬುವಾರ ಬಳಿ ಸಂಗೀತವನ್ನು ಕಲಿತರು. ಮುಂದೆ 1935ರಲ್ಲಿ ಚಿತ್ರರಂಗ ಇವರನ್ನು ಕೈ ಬೀಸಿ ಕರೆದಾಗ, ತಮ್ಮಂದಿರಾದ ಮಲ್ಲಿಕಾರ್ಜುನ ಮನಸೂರರೊಡಗೂಡಿ ಮುಂಬೈಗೆ ಹೊರಟರು. ಶಾರದಾ ಕಂಪೆನಿಯ ಪ್ರಥಮ ಚಿತ್ರ 'ರತ್ನ ಮಂಜರಿ'ಗೆ ಸಂಗೀತ ನಿರ್ದೇಶಕರಾದರು. ಇದರಲ್ಲಿ ಚಿಕ್ಕ ಸನ್ಯಾಸಿಯ ಪಾತ್ರವನ್ನೂ ಮಾಡಿದರು, ಜನಪ್ರಿಯರಾದರು.

ಇಂತಹ ರಂಗ ದಿಗ್ಗಜರ ಮಹತ್ತರ ಸಾಧನೆಯ ದಾಖಲೆಯಾದ ಈ ಗ್ರಂಥಕ್ಕೆ ಅದರ ಕರ್ತೃ ಶ್ರೀ ಮಾರ್ತಾಂಡಪ್ಪ ಎಂ. ಕತ್ತಿಯವರಿಗೆ ಕರ್ನಾಟಕ ನಾಟಕ ಅಕಾಡೆಮಿ 2009ರ ವಾರ್ಷಿಕ ಪುಸ್ತಕ ಪ್ರಶಸ್ತಿ ನೀಡಿ ಗೌರವಿಸಿದೆ.



# 2010ರ ಪ್ರಶಸ್ತಿ ವಿಜೇತರು



## ಶೋಭಾ ವೆಂಕಟೇಶ್ (ಜೀವಮಾನ ರಂಗಸಾಧನೆ ಪ್ರಶಸ್ತಿ)

ಬೆಂಗಳೂರಿನ ಜನಪ್ರಿಯ ಬಿಂಬ ಎಂಬ ಶನಿವಾರ ಮಕ್ಕಳ ರಂಗಶಾಲೆಯ ಅಧ್ಯಕ್ಷೆಯಾದ ಶ್ರೀಮತಿ ಶೋಭಾ ವೆಂಕಟೇಶ್ ಕಲಾವಿದರ ಕುಟುಂಬದಲ್ಲಿಯೇ ಜನಿಸಿದವರು. ನಾಡಿನ ಖ್ಯಾತ ರಂಗಕರ್ಮಿ ಶ್ರೀ ಎ.ಎಸ್.ಮೂರ್ತಿ ಹಾಗೂ ಕಮಲಮೂರ್ತಿಯವರ ಮೊದಲನೇ ಪುತ್ರಿಯಾದ ಇವರು ಬೆಳೆದದ್ದು ರಂಗಭೂಮಿ ಮತ್ತು ಸಾಂಸ್ಕೃತಿಕ ವಾತಾವರಣದಲ್ಲಿ. ಬಾಲಕಿಯಾಗಿ ನಾಟಕದ ಸೈಡ್‌ವಿಂಗ್‌ಗಳಲ್ಲಿಯೇ ಆಟವಾಡಿಕೊಂಡಿದ್ದ ಇವರಿಗೆ ಬಾಲ್ಯದಿಂದಲೂ ಕನ್ನಡ ಸಾಹಿತಿಗಳ ಹಾಗೂ ರಂಗತಜ್ಞರ ಒಡನಾಟವಿದ್ದಿತು. ನಾಲ್ಕನೇ ತರಗತಿಯಲ್ಲಿ ಓದುವಾಗಲೇ 'ಅಮನಿ' ನಾಟಕದ ಮೂಲಕ ರಂಗಪ್ರವೇಶ ಮಾಡಿದ ಇವರು ಐದು ದಶಕಗಳ ಕಾಲ ಅರ್ಥಪೂರ್ಣ ರಂಗಸೇವೆ ಮಾಡಿದ್ದಾರೆ. 'ಬೀದಿ ನಾಟಕ' ಪ್ರಕಾರ ಪ್ರಥಮವಾಗಿ ಪ್ರಾರಂಭವಾದಾಗ ಹಲವಾರು ಅಂತಹ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

ಕುವೆಂಪು ಅವರ ನಿವಾಸದ ಮುಂದೆ ಅವರ ಉಪಸ್ಥಿತಿಯಲ್ಲಿ 'ಕರಿಸಿದ್ಧ' ಬೀದಿ ನಾಟಕ ಪ್ರದರ್ಶಿಸಿದ ಹೆಗ್ಗಳಿಕೆ ಇವರದ್ದು. ಕರ್ನಾಟಕ ಲೇಖಕಿಯರ ಸಂಘದ ನಿರ್ದೇಶಕಿಯಾಗಿ ಹಲವು ಹತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸಿದ್ದಾರೆ. ತಮ್ಮ ಕಲಾವಿದ ತಾಯ್ತಂದೆಗಳ ಮಾರ್ಗದರ್ಶನದಲ್ಲಿ 'ಪಪೆಟ್ ಲ್ಯಾಂಡ್' ಎಂಬ ಬೊಂಬೆಯಾಟದ ರೆಪರ್ಟರಿ ಹುಟ್ಟುಹಾಕಿದ್ದಾರೆ. ಇದರ ಮೂಲಕ ಹಾಸ್ಯ ಪ್ರಧಾನ ನಾಟಕಗಳೇ ಅಲ್ಲದೆ ಅನೇಕ ಗಂಭೀರ ಹಾಗೂ ಅಸಂಗತ ನಾಟಕಗಳನ್ನು ಬೊಂಬೆಯಾಟಕ್ಕೆ ಅಳವಡಿಸಿದ್ದಾರೆ. ಕರ್ನಾಟಕದಲ್ಲಿ ಮೊಟ್ಟಮೊದಲಿಗೆ ಬೊಂಬೆಯಾಟವನ್ನು ಕಿರುತೆರೆಗೂ ಪರಿಚಯಿಸಿದ ಖ್ಯಾತಿ ಇವರದಾಗಿದೆ. ತಮ್ಮ ಪತಿ ಶ್ರೀ ಎಸ್.ಆರ್. ವೆಂಕಟೇಶ್‌ರವರ ಸಹಕಾರ ಸಹಾಯಗಳೊಂದಿಗೆ ಕೆನರಾಬ್ಯಾಂಕ್‌ನ ಉದ್ಯೋಗಿಯಾಗಿ ದೆಹಲಿಯಲ್ಲಿ ಕನ್ನಡಿಗರನ್ನು ಸಂಘಟಿಸಿ, ನಾಟಕಗಳು, ಚಿತ್ರಪ್ರದರ್ಶನಗಳು, ಕೋಲಾಟ, ಇನ್ನಿತರ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸಿದ್ದಾರೆ.

ಮಕ್ಕಳಲ್ಲಿ ರಂಗಪ್ರಜ್ಞೆ, ರಂಗಪ್ರೇಮ ಬೆಳೆಸಲು ಶನಿವಾರದ ಮಕ್ಕಳ ರಂಗಶಾಲೆಯಾದ 'ವಿಜಯನಗರ ಬಿಂಬ' ಸಂಸ್ಥೆಯನ್ನು ಬೆಂಗಳೂರಿನಲ್ಲಿ ಹುಟ್ಟುಹಾಕಿ ಮಕ್ಕಳಿಗಾಗಿ ರಂಗತರಬೇತಿ ಕಾರ್ಯಾಗಾರಗಳನ್ನೂ, ಹೊಸ ನಾಟಕ ಪ್ರಯೋಗಗಳನ್ನೂ ರಂಗದ ಮೇಲೆ ನಿರಂತರವಾಗಿ ತರುತ್ತಿದ್ದಾರೆ. 15 ವರ್ಷ ಪೂರೈಸಿರುವ ಈ ರಂಗಶಾಲೆಯ ಮೂಲಕ ಹೆಸರಾಂತ ರಂಗನಿರ್ದೇಶಕರ ತಂತ್ರಜ್ಞರ ನೇತೃತ್ವದಲ್ಲಿ ಮಕ್ಕಳ ಕವಿಮೇಳ, ಕಿರಿಯರ ಕಟಕಟೆ, ಸಂವಾದಗಳನ್ನು ಆಯೋಜಿಸಿ ಮಕ್ಕಳಿಗೆ ಸಾಹಿತ್ಯ ಸಂಸ್ಕೃತಿಗಳ ಪರಿಚಯ ಮಾಡಿಸಿದ್ದಾರೆ. ಈವರೆಗೆ ಸುಮಾರು 15 ಹೊಸ ನಾಟಕಗಳು, ಏಳು ನೃತ್ಯ ರೂಪಕಗಳನ್ನು ನಿರ್ಮಿಸಿ, 5,000ಕ್ಕೂ ಹೆಚ್ಚಿನ ಮಕ್ಕಳಿಗೆ ರಂಗ ತರಬೇತಿ ನೀಡಿದ್ದಾರೆ. ಬೆಂಗಳೂರಿನ ಮಲ್ಲೇಶ್ವರದ 'ಸೇವಾಸದನ'ದಲ್ಲಿ ಕಳೆದ ಮೂರುವರ್ಷಗಳಿಂದ ಮಕ್ಕಳಿಗೆ ಉಚಿತ ರಂಗತರಬೇತಿ ಕಾರ್ಯಾಗಾರಗಳನ್ನು ನಡೆಸುತ್ತಿದ್ದಾರೆ.

ಮಕ್ಕಳ ನಾಟಕಗಳಿಗೆ ವಸ್ತ್ರವಿನ್ಯಾಸವನ್ನು ಮಾಡುವುದರಲ್ಲಿ ಪರಿಣಿತರಾದ ಇವರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.



## ತಾವರೆಕೆರೆ ನಾಗರಾಜ್ (ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ)

ಬೆಂಗಳೂರು ದಕ್ಷಿಣ ತಾಲೂಕಿನ ಖ್ಯಾತ ತಬಲಾ ವಿದ್ವಾಂಸ ಹನುಮಯ್ಯ ಶೆಟ್ಟಿಯವರ ಪುತ್ರ ಶ್ರೀ ನಾಗರಾಜ್ ಅವರಿಗೆ ತಂದೆಯೇ ರಂಗ ಗುರು. ಬಾಲ್ಯದಲ್ಲಿಯೇ ಪೌರಾಣಿಕ ಪಾತ್ರಗಳ ಮೂಲಕ ನಟನೆ ಆರಂಭಿಸಿ, ಅದನ್ನೇ ರೂಢಿಸಿಕೊಂಡು ಮುಂದೆ ಅನೇಕ ಪೌರಾಣಿಕ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ವಹಿಸಿ ಜನಪ್ರಿಯರಾದರು. ತಂದೆಯವರಿಂದ ತಬಲಾವಾದನ, ಟಿ.ಎ.ಗಂಗರೇವಣ್ಣನವರಿಂದ ಹಾರ್ಮೋನಿಯಂ ವಾದನ ಕಲಿತು, 1961ರಿಂದ ನಿರ್ದೇಶನ ಕ್ಷೇತ್ರಕ್ಕೆ ಪದಾರ್ಪಣೆ ಮಾಡಿದರು. ಇವರು ನಿರ್ದೇಶಿಸಿದ ಕುರುಕ್ಷೇತ್ರ, ದಾನಶೂರ ಕರ್ಣ, ಹರಿಶ್ಚಂದ್ರ, ನಳದಮಯಂತಿ, ಸಂಪೂರ್ಣ ರಾಮಾಯಣ, ಸಾಮ್ರಾಟ್ ಸುಯೋಧನ, ಅಹಿಮಹಿ ರಾವಣ, ಸುಭದ್ರಾ ಪರಿಣಯ, ಶಿವಜಲಂಧರ, ಭೂ ಕೈಲಾಸ ಹಾಗೂ ಭಕ್ತ ಮಾರ್ಕಂಡೇಯ ನಾಟಕಗಳು ರಾಜ್ಯದ ಹಲವೆಡೆ ಪ್ರದರ್ಶಿಸಲ್ಪಟ್ಟು ಜನಪ್ರಿಯವಾಗಿದೆ.

ತಮ್ಮ ನಾಲ್ಕೂವರೆ ದಶಕಗಳ ರಂಗಸೇವೆಯಲ್ಲಿ ಶ್ರೀಯುತರು ಅನೇಕ ರಂಗಗೀತೆಗಳ ಧ್ವನಿಸುರುಳಿಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ. ಇವರ ಕಲಾಸೇವೆಯನ್ನು ಮೆಚ್ಚಿ ಅನೇಕ ಸಂಘಸಂಸ್ಥೆಗಳು ಇವರಿಗೆ ಹಲವಾರು ಪ್ರಶಸ್ತಿಗಳನ್ನು ನೀಡಿ ಸನ್ಮಾನಿಸಿವೆ. ಶ್ರೀಯುತರ ರಂಗ ಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2010–11ರ ಕಲ್ಚರ್ಡ್ ಕಮೆಡಿಯನ್ ಕೆ.ಹಿರಣ್ಣಯ್ಯ ಪುರಸ್ಕಾರ ನೀಡಿ ಇವರನ್ನು ಗೌರವಿಸಿದೆ.

---



## ವಸಂತ ಕೃಷ್ಣ

ಅರವತ್ತರ ದಶಕದಲ್ಲಿ ಮೈಸೂರಿನ ಸುತ್ತಮುತ್ತಲಿನ ಹಳ್ಳಿಗಳು ಹಾಗೂ ವಿಲಾಸಿ ರಂಗಭೂಮಿಯಲ್ಲಿ ಬಹಳ ಪ್ರಸಿದ್ಧಿ ಪಡೆದ ನಟಿಯರಲ್ಲಿ ಇಂದ್ರಾಣಿ–ವಸಂತ ಮಂಚೂಣಿಯಲ್ಲಿದ್ದರು. ಇವರಿಬ್ಬರು ಅಕ್ಕ–ತಂಗಿಯರು. ಅಕ್ಕ ಇಂದ್ರಾಣಿ ನಾಯಿಕಿ ಪಾತ್ರದಲ್ಲಿದ್ದರೆ, ತಂಗಿ ವಸಂತ ಹಾಸ್ಯ ಇಲ್ಲವೇ ಪೋಷಕ ಪಾತ್ರದಲ್ಲಿ ನಟಿಸುತ್ತಿದ್ದರು ಒಟ್ಟಿನಲ್ಲಿ ಇಬ್ಬರೂ ಖ್ಯಾತರಾಗಿದ್ದರು. ಅಕ್ಕ ನಟನೆಯಿಂದ ದೂರ ಉಳಿದಾಗಲೂ ವಸಂತ ಅದನ್ನು ಮುಂದುವರಿಸಿಕೊಂಡು ಬಂದರು.

ವಸಂತ ಅವರು ಜನಿಸಿದ್ದು ಆಂಧ್ರದ ಕರ್ನೂಲಿನ ಗದ್ವಾಲ್ ನಲ್ಲಿ. ಫೆಬ್ರವರಿ 28, 1946 ರಲ್ಲಿ ಜನಿಸಿದರು. ಇವರ ತಂದೆ ವೆಂಕಟಾಚಾರ್, ತಾಯಿ ರುಕ್ಮಿಣಮ್ಮ ಇವರು ಬೆಳೆದಿದ್ದು ಮೈಸೂರಿನಲ್ಲಿ. 8ನೇ ತರಗತಿಯವರೆಗೆ ಮಾತ್ರ ಓದಿರುವ ವಸಂತ ಅವರು ರಂಗಭೂಮಿಯ ಆಕರ್ಷಣೆಗೊಳಗಾದ್ದು ತಮ್ಮ ಸೋದರ ಮಾವ ವೆಂಕಟಾಚಾರ್ ಅವರಿಂದ. ಮೊಟ್ಟಮೊದಲಿಗೆ ಸ್ತ್ರೀಯರದೇ ನಾಟಕ ಸಂಸ್ಥೆಯನ್ನು ಹುಟ್ಟು ಹಾಕಿದವರು ವೆಂಕಟಾಚಾರ್. 'ಸುಭದ್ರಾ ಪರಿಣಯ' ನಾಟಕದಲ್ಲಿ ನಾರದನಾಗಿ ವಸಂತ ಅವರ ರಂಗಪ್ರವೇಶ. ಇವರಿಗೆ ಗುರು ಆಗಿದ್ದವರು ದೊರೆಸ್ವಾಮಿಯವರು. ಇಲ್ಲಿಂದ ಪ್ರಾರಂಭವಾದ ರಂಗಭೂಮಿಯ ನಂಟು ಇಲ್ಲಿಯವರೆಗೂ ಬಿಡದೆ ಮುಂದುವರಿದಿದೆ. ಕೃಷ್ಣಲೀಲೆ, ಕೃಷ್ಣಗಾರುಡಿ, ಗುಲೇಬಕಾವಲಿ, ಸದಾರಮೆ ಮುಂತಾದ ನಾಟಕಗಳಲ್ಲಿ ಪ್ರಾರಂಭದಲ್ಲಿ ಅಭಿನಯಿಸಿದ್ದ ಇವರಿಗೆ ಅಂದು ಖ್ಯಾತ ಸ್ತ್ರೀ ನಾಟಕ ಮಂಡಳಿಯನ್ನು ನಡೆಸುತ್ತಿದ್ದ ನಾಗರತ್ನಮ್ಮನವರು ಅವಕಾಶವನ್ನು ಕಲ್ಪಿಸಿ, ತಮ್ಮ ಸಂಸ್ಥೆ ಸೇರಿಸಿಕೊಂಡರು ಐದು ವರ್ಷ ಈ ಕಂಪನಿಯಲ್ಲಿದ್ದು ನಂತರ ಶೇಷಾಚಾರ್ ಅವರ ಶೇಷ ಕಲಾ ನಾಟಕ ಮಂಡಳಿ ಮತ್ತು ಚಾಮುಂಡೇಶ್ವರಿ ಕಂಪನಿಯಲ್ಲಿ ಕೆಲಸ ಮಾಡಿದರು. ಉದಯ್‌ಕುಮಾರ್, ಕಲ್ಯಾಣ್‌ಕುಮಾರ್, ರಾಜಾನಂದ್‌ರಂತಹ ದಿಗ್ಗಜರೊಡನೆ ಅಭಿನಯಿಸಿದರು. ಮೈಸೂರಿನಲ್ಲೇ ವಾಸ್ತವ್ಯ ಹೂಡಿದ್ದ ವಸಂತ ಅವರಿಗೆ ಹಳ್ಳಿ ನಾಟಕಗಳು, ವಿಲಾಸಿ ನಾಟಕ ಸಂಸ್ಥೆಗಳಿಂದ ಆಹ್ವಾನ ಬಂದು ಅಲ್ಲಿಯೂ

ಅಭಿನಯಿಸಿದರು. ಭರಣಿ ಕಲಾವಿದರು, ರೇಣುಕಾ ಕಲಾನಿಕೇತನ, ಶ್ರೀರಂಗ ಮಿತ್ರ ಮಂಡಳಿ ಮುಂತಾದ ಅಂದಿನ ಖ್ಯಾತ ರಂಗ ಸಂಸ್ಥೆಗಳು ವಸಂತರ ಪ್ರತಿಭೆಯನ್ನು ಗುರುತಿಸಿ ಅವಕಾಶ ನೀಡಿದವು. ಎಚ್ಚಮನಾಯಕ, ಸಂಗೊಳ್ಳಿ ರಾಯಣ್ಣ, ಮದುವೆ ಮಾರ್ಕೆಟ್, ಸಾಹುಕಾರ, ಸಂಸಾರ ನೌಕೆ, ಗಂಡನ ಮನೆ, ಬಂಜೇ ತೊಟ್ಟಿಲು, ದೇವದಾಸಿ ಮುಂತಾದ ನಾಟಕಗಳಲ್ಲಿ ನಟಿಸಿದರು.

ವಸಂತ ಅವರು ಸ್ತ್ರೀ ಕಲಾವಿದೆಯರ ಕಷ್ಟ ಸುಖಗಳಲ್ಲಿ ಭಾಗಿಯಾಗಿ ಅವರ ಶ್ರೇಯೋಭಿವೃದ್ಧಿಗೆ ಶ್ರಮಿಸಿದರು. ವೃತ್ತಿ ಕಲಾವಿದೆಯರ ಮಹಿಳಾ ಸಂಘಸ್ಥಾಪಿಸಿ, ಅವರ ಅಧ್ಯಕ್ಷರಾಗಿ ಹಲವಾರು ಉತ್ತಮ ಕಾರ್ಯಗಳನ್ನು ಮಾಡಿದ್ದಾರೆ. ಸುಮಾರು 20 ಕಲಾವಿದೆಯರಿಗೆ ವಸತಿ ಸೌಕರ್ಯ ಕಲ್ಪಿಸುವ ಹೋರಾಟದಲ್ಲಿ ಜಯಸಾಧಿಸಿ ಮನೆಗಳನ್ನು ಸರ್ಕಾರದಿಂದ ಮಂಜೂರು ಮಾಡಿಸುವಲ್ಲಿ ಸಫಲರಾಗಿದ್ದಾರೆ. ಈಗಲೂ ಈ ಸಂಘದ ಅಧ್ಯಕ್ಷರಾಗಿ ದುಡಿಯುತ್ತಿದ್ದಾರೆ.

ಸದ್ಯ ನಂಜನಗೂಡಿನಲ್ಲಿ ಊಟದ ಹೋಟೆಲ್ ತೆರೆದು ತಮ್ಮ ಉದರ ಪೋಷಣೆಗೆ ದಾರಿ ಮಾಡಿಕೊಂಡಿದ್ದಾರೆ. ಇವರ ಪತಿ ಕೃಷ್ಣ ಸಹ ವ್ಯಾಪಾರಸ್ಥರಾಗಿದ್ದು, ನೆಮ್ಮದಿ ಜೀವನ ಸಾಗಿಸುತ್ತಿದ್ದಾರೆ. ಇವರ ಸುದೀರ್ಘ ರಂಗಸೇವೆಯನ್ನು ಗುರುತಿಸಿ ಹಲವಾರು ಸಂಘ ಸಂಸ್ಥೆಗಳು ಸನ್ಮಾನಿಸಿ ಗೌರವಿಸಿದೆ. ಕರ್ನಾಟಕ ನಾಟಕ ಅಕಾಡೆಮಿಯೂ ಸಹ ಇವರ ರಂಗ ಸೇವೆಯನ್ನು ಪುರಸ್ಕರಿಸಿ, 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.

---



## ಮಂಜುನಾಥ ಡಿ.ಎಸ್.

ಸರ್ವೋದಯ ಪ್ರೈಮರಿ ಶಾಲೆಯಲ್ಲಿ ತಮ್ಮ ಐದನೇ ವಯಸ್ಸಿಗೇ ಮುಖ್ಯೋಪಧ್ಯಾಯರಾದ ತಂದೆ ಡಿ.ಸುಬ್ಬರಾವ್ ಇವರಿಂದ ಬಣ್ಣ ಹಚ್ಚಿಸಿಕೊಂಡು ರಂಗಪ್ರವೇಶ ಮಾಡಿದ ಶ್ರೀಯುತರು. ನಂತರ ಸುಬ್ರಹ್ಮಣ್ಯಪುರದ ವಿದ್ಯಾರ್ಥಿ ಕಲಾಸಂಘದ ಹಲವಾರು ನಾಟಕಗಳಲ್ಲಿ ಅಭಿನಯ ಮುಂದುವರೆಸಿದರು. ನ್ಯಾಷನಲ್ ಮಾಧ್ಯಮಿಕ ಶಾಲೆಯ ಶ್ರೀಯುತ ಕರಿಗಿರಿ ಆಚಾರ್ಯರ ನಿರ್ದೇಶನದಲ್ಲಿ ಚಂದ್ರಹಾಸ, ಭಕ್ತಪ್ರಹ್ಲಾದ ಮುಂತಾದ ನಾಟಕಗಳಲ್ಲಿ ಅಭಿನಯ ಹಾಗೂ ಶೃತಿಗೆ ತಕ್ಕಂತೆ ಹಾಡುವ ಕಲೆ ಕಲಿತರು. ಜೊತೆಜೊತೆಯಲ್ಲೇ ಅಭಿನಯ ತರಂಗ ಬೇಸಿಗೆ ಶಿಬಿರದಲ್ಲಿ ಭಾಗವಹಿಸುವುದರ ಜೊತೆಗೆ ಚಿತ್ರಾ ತಂಡದೊಂದಿಗೆ ಶ್ರೀಯುತ ಎ.ಎಸ್.ಮೂರ್ತಿಯವರ ನಿರ್ದೇಶನದಲ್ಲಿ ನೂರಾರು ಪ್ರದರ್ಶನ ಕಂಡ ಅನೇಕ ನಾಟಕಗಳಲ್ಲಿ ನಟನೆ, ರಂಗಸಜ್ಜಿಕೆ, ಪರಿಕರ ಜೋಡಣೆ ಇತ್ಯಾದಿ ಕಾರ್ಯಗಳಲ್ಲಿ ಭಾಗವಹಿಸಿದರು. ಚಂದ್ರಶೇಖರ ಕಂಬಾರರ ಕಿಟ್ಟಿಕಥೆ, ಕಟ್ಟಿ ರಾಮಚಂದ್ರ ನಿರ್ದೇಶನದ ಕಳಸಾಪುರದ ಹುಡುಗರು. ಬಿ.ವಿ.ಕಾರಂತರ ನಿರ್ದೇಶನದ ಜಂಬೂಸವಾರಿ ನಾಟಕಗಳಲ್ಲಿ ಅಭಿನಯ, ಅಲ್ಲದೆ ಪಪೆಟ್‌ಲ್ಯಾಂಡ್, ಸೂತ್ರದ ಗೊಂಬೆಯಾಟದ ತಂಡದೊಂದಿಗೆ ಗೊಂಬೆಗಳ ತಯಾರಿಯಿಂದ ಮೊದಲಾಗಿ, ಕಂಠದಾನ, ಬೊಂಬೆ ಆಡಿಸುವುದು, ರಂಗನಿರ್ವಹಣೆ ಇತ್ಯಾದಿ ಕೆಲಸಗಳಲ್ಲಿ ಭಾಗಿಯಾದರು. ನ್ಯಾಷನಲ್ ಹೈಸ್ಕೂಲ್‌ನ ಅಧ್ಯಾಪಕರಾದ ಪಿ.ಆರ್.ಶ್ರೀಕಂಠಯ್ಯ ಹಾಗೂ ಬಿ.ಎಸ್. ನಾರಾಯಣರಾಯರ ಬಳಿ ಪಠ್ಯದ ಒಂದು ವಿಷಯವಾಗಿ ರಂಗಭೂಮಿಯ ಬಗೆಗೆ ಅಭ್ಯಾಸ ಮಾಡಿ ನಾಟಕ ಪ್ರಯೋಗಗಳಲ್ಲಿ ಸಕ್ರಿಯಪಾತ್ರ ಅಭಿನಯಕ್ಕೆ ಪ್ರಶಂಸೆ ಹಾಗೂ ಬಹುಮಾನ ಪಡೆದರು. ಜಯನಗರದ ನ್ಯಾಷನಲ್ ಕಾಲೇಜು ನಾಟಕ ಪ್ರದರ್ಶನಗಳಲ್ಲಿ ಹಾಗೂ ಗಾಯನ ತಂಡಗಳಲ್ಲಿ ಸಕ್ರಿಯಪಾತ್ರವಹಿಸಿ, ಅಂತರಕಾಲೇಜು ವಿಶ್ವವಿದ್ಯಾನಿಲಯಗಳ ಅನೇಕ ಸ್ಪರ್ಧೆಗಳಲ್ಲಿ ಕಾಲೇಜನ್ನು ಪ್ರತಿನಿಧಿಸುವುದರೊಂದಿಗೆ ಅನೇಕ ಪ್ರಶಸ್ತಿಗಳೂ ಲಭ್ಯವಾದವು. ಇದೇ ವೇಳೆಯಲ್ಲೇ ಕಲಾಗಂಗೋತ್ರಿ ತಂಡದೊಂದಿಗೆ ಸಕ್ರಿಯ ಪಾಲ್ಗೊಂಡು ಬೆಂಗಳೂರು ವಿಶ್ವವಿದ್ಯಾಲಯ ನಾಟಕವಿಭಾಗದಲ್ಲಿ ಡಿಪ್ಲೊಮೊ ಪಡೆದರು. ಡಾ.ಎಚ್.ಕೆ. ರಂಗನಾಥ್‌ರ ನಿರ್ದೇಶನದಲ್ಲಿ

ಸೋಮಿಯ ಸೌಭಾಗ್ಯ, ಕಿಸಾಗೌತಮಿ ಹಾಗೂ ಶ್ರೀ ಸುಧೀಂದ್ರಶರ್ಮರ ನಿರ್ದೇಶನದ ಆಷಾಡದ ಒಂದು ದಿನ. ಕಲಾಗಂಗೋತ್ರಿಯ ಎಲ್ಲ ಪ್ರಮುಖ ನಾಟಕಗಳಲ್ಲಿ ಹಾಗೂ ಮುಖ್ಯವಾಗಿ ಬಿ. ಚಂದ್ರಶೇಖರ್. ಡಾ.ಬಿ.ವಿ. ರಾಜಾರಾಂ ಶ್ರೀ ಮುಖ್ಯಮಂತ್ರಿ ಚಂದ್ರು, ಶ್ರೀ ಸುರೇಂದ್ರನಾಥ, ಬಿ.ಶಂಕರ್ ನಾಗ್, ಶ್ರೀ ವಿ.ರಾಮಮೂರ್ತಿ, ಶ್ರೀ ಬಿ.ಎಸ್.ನಾಣಿ, ಇವರುಗಳ ನಿರ್ದೇಶನದ ನಾಟಕಗಳಿಗೆ ರಂಗಸಜ್ಜಿಕೆ, ಪ್ರಸಾಧನ, ಬೆಳಕಿನ ಸಂಯೋಜನೆ, ಪರಿಕರ ಜೋಡಣೆ, ವಸ್ತ್ರವಿನ್ಯಾಸ, ಧ್ವನಿಸಂಯೋಜನೆ ಹಾಗೂ ನಟನೆ ಮುಂತಾದ ವಿಭಾಗಗಳಲ್ಲಿ ಪಾಲ್ಗೊಂಡಿದ್ದಾರೆ. ಮೂಕಾಭಿನಯದ ಸುಮಾರು ಸಾವಿರಕ್ಕೂ ಹೆಚ್ಚು ಪ್ರದರ್ಶನಗಳಲ್ಲಿ ನಟನಾಗಿ ಭಾಗಿಯಾಗಿದ್ದಾರೆ. ಅಲ್ಲದೆ ಕಿನ್ನರ ರಾಷ್ಟ್ರೀಯ ಯುವಜನ ಶಿಬಿರ, ಶ್ರೀಮತಿ ಮಾಯಾರಾವ್ ಅವರು ನಡೆಸಿದ ನೃತ್ಯ ಶಿಬಿರ ಇವರುಗಳಲ್ಲಿ ಶ್ರೀಯುತ ವಿ.ರಾಮಮೂರ್ತಿಯವರೊಂದಿಗೆ ಶಿಬಿರಾರ್ಥಿಗಳಿಗೆ ಮೂಕಾಭಿನಯದ ಬಗ್ಗೆ ಬೋಧಿಸಿದ್ದಾರೆ. ಫಾದರ್ ಅಫ್ ಮೈಮ್ – ಫ್ರಾನ್ಸ್‌ನ ಮಾರ್ಸ್ಲ್ ಮಾರ್‌ಸ್ಯೂ ಅವರೊಂದಿಗೆ ಸಹಾಯಕನಾಗಿ ಕಾರ್ಯನಿರ್ವಹಣೆ ಮಾಡಿ ಅವರಿಂದ ಪ್ರಶಂಸೆ, ಮೆಚ್ಚುಗೆ ಪಡೆದಿದ್ದಾರೆ.

ಕಲಾಗಂಗೋತ್ರಿಯ ಸುಮಾರು 60 ವಿದ್ಯಾರ್ಥಿಗಳಿಗೆ ಮೂಕಾಭಿನಯ ಶಿಬಿರ ನಡೆಸಿದ್ದಾರೆ. ಇದಲ್ಲದೆ ಸ್ಪಂದನ, ರಂಗನಿರಂತರ, ಅಂತರಂಗ, ಯುವರಂಗ, ಸಂಕೇತ್, ಚಿತ್ರಾನಾಟಕ ತಂಡದ ಹಲವಾರು ನಾಟಕ ಪ್ರಯೋಗಗಳಿಗೆ ತಾಂತ್ರಿಕ ಸಹಕಾರ ನೀಡಿದ್ದಾರೆ. ದೆಹಲಿ ಹಾಗೂ ಗುವಾಹತಿಯಲ್ಲಿ ನಡೆದ ರಾಷ್ಟ್ರೀಯ ಮೂಕಾಭಿನಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ಶಿವಮೊಗ್ಗ ಶಿರಸಿ, ಗುಲ್ಬರ್ಗಾ, ಬೆಳಗಾವಿ, ಪಡುಬಿದರೆ, ಮುಂತಾದೆಡೆ ಮೂಕಾಭಿನಯ ತರಬೇತಿ ಶಿಬಿರಗಳ ನಿರ್ವಹಣೆ ಮಾಡಿದ್ದಾರೆ. ಇತ್ತೀಚೆಗೆ ನಾಟಕ ಅಕಾಡೆಮಿ ವತಿಯಿಂದ ವಿಶ್ವಕನ್ನಡ ಸಮ್ಮೇಳನದಲ್ಲಿ ವಿದ್ಯಾರ್ಥಿಗಳಿಗೆ ಮೂಕಾಭಿನಯ ತರಬೇತಿ ನೀಡಿರುವ ಶ್ರೀಯುತರ ರಂಗ ಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.

---



## ಬಿ. ಪರಶುರಾಂ

ದಾವಣಗೆರೆ ಜಿಲ್ಲೆಯ ಹರಪನಹಳ್ಳಿಯ ಶ್ರೀ ಪರಶುರಾಮ್ ನಾಟಕ ವಿಷಯದಲ್ಲಿ ಡಿಪ್ಲೊಮೊ ಪದವೀಧರ. ಸಾಮಾಜಿಕ ಹಾಗೂ ಸಾಂಸ್ಕೃತಿಕ ಹೋರಾಟಗಾರರಾದ ಇವರು 1982 ರಲ್ಲಿ 'ಸಮುದಾಯ' ಸಾಂಸ್ಕೃತಿಕ ಸಂಘವನ್ನು ಸ್ಥಾಪಿಸಿ, ಬೀದಿ ನಾಟಕಗಳ ಮುಖೇನ ಜನಜಾಗೃತಿ ಮೂಡಿಸುವಲ್ಲಿ ಯಶಸ್ವಿಯಾಗಿರುವ ರಂಗಕಲಾವಿದ. ಬಳ್ಳಾರಿ ಜಿಲ್ಲೆಯಾದ್ಯಂತ ಸೈಕಲ್ ಜಾಥಾ ನಡೆಸಿ ಜನಸಾಮಾನ್ಯರಲ್ಲಿ ರಂಗಪ್ರೇಮ ಮೂಡಿಸಿದ್ದಾರೆ. ಬುಡಕಟ್ಟು ಜನಾಂಗದ ಸಂಸ್ಕೃತಿಯ ಉಳಿವಿಗಾಗಿ 60 ದಿನಗಳ ಲಂಬಾಣಿ ಜನಾಂಗದ ರಂಗತರಬೇತಿ ಶಿಬಿರ ನಡೆಸಿದ್ದಾರೆ. ವರ್ಷಂಪ್ರತಿ ತಾವು ನಡೆಸುವ 'ಅಹೋ ರಾತ್ರಿ ರಂಗತರಬೇತಿ' ಶಿಬಿರಗಳಲ್ಲಿ ನಾಡಿನ ಹೆಸರಾಂತ ರಂಗತಂಡಗಳನ್ನು ಕರೆಸಿ, ಅವುಗಳನ್ನು ಕಲಾವಿದರಿಗೆ ಪರಿಚಯಿಸಿ, ಅವರಿಂದ ರಂಗಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ. ಅಲ್ಲದೆ, ನೀನಾಸಂ, ಎನ್.ಎಸ್.ಡಿ. ಶಾಲೆಗಳ ಪದವೀಧರರಿಂದ ಹರಪನಹಳ್ಳಿಯಲ್ಲಿ ತಿಂಗಳಿಗೊಂದರಂತೆ ರಂಗಪ್ರಯೋಗಗಳನ್ನು ನಡೆಸುತ್ತ ಬಂದಿದ್ದಾರೆ. ಈವರೆಗೆ ಸುಮಾರು ಇಪ್ಪತ್ತು ರಂಗಪ್ರದರ್ಶನಗಳಲ್ಲಿ ನಟನೆ, ಎಂಟು ನಾಟಕಗಳ ನಿರ್ದೇಶನ ಏಳು ನಾಟಕಗಳ ರಚನೆ 13 ನಾಟಕಗಳ ಸಂಘಟನೆ, ಆರು ರಂಗಶಿಬಿರಗಳ ಸಂಯೋಜನೆ – ಇವು ಶ್ರೀಯುತರ ರಂಗ ಸಾಧನೆಗಳು. ಸಾಹಿತ್ಯ ಕ್ಷೇತ್ರದಲ್ಲಿಯೂ ಪ್ರವೇಶ ಹೊಂದಿರುವ ಇವರು ಹಲವು ಕವನಗಳನ್ನು, ಲೇಖನಗಳನ್ನು ಬರೆದಿದ್ದಾರೆ. ಸಾಮಾಜಿಕ ನ್ಯಾಯಕ್ಕಾಗಿ ರಂಗಮುಖೇನ ಶ್ರಮಿಸುವ ಧ್ಯೇಯಹೊಂದಿರುವ ಇವರು ಸಮಾಜಮುಖಿ ರಂಗಕರ್ಮಿ ಇವರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.

---



## ಎಂ.ಎಂ. ಕೃಷ್ಣಮೂರ್ತಿ

ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಶ್ರೀ ಕೃಷ್ಣಮೂರ್ತಿಯವರು ಎಂಜಿನಿಯರಿಂಗ್ ವಿಷಯದಲ್ಲಿ ಡಿಪ್ಲೊಮೋ ಪದವೀಧರ. ತಮ್ಮ ಹದಿನಾರನೇ ವಯಸ್ಸಿನಿಂದಲೇ ಹವ್ಯಾಸಿ ತಂತ್ರಜ್ಞರಾಗಿ ರಂಗಸಜ್ಜಿಕೆ ಧ್ವನಿ–ಬೆಳಕಿನಲ್ಲಿ ಪರಿಣತಿ ಹೊಂದಿದವರು. ಇಪ್ಪತ್ತು ವರ್ಷಗಳ ಕಾಲ ನೀನಾಸಂ ಸಂಸ್ಥೆಯಲ್ಲಿ ಸಂಘಟಕರಾಗಿ ಸೇವೆ ಸಲ್ಲಿಸಿದ್ದಾರೆ.

1980 ರಿಂದ ಇದೇ ರಂಗಶಿಕ್ಷಣ ಸಂಸ್ಥೆಯಲ್ಲಿ ಗೌರವ ಅಧ್ಯಾಪಕನಾಗಿ ನಂತರ 1985 ರಿಂದ ನೀನಾಸಂ ತಿರುಗಾಟದಲ್ಲಿ ಬೆಳಕು ವಿನ್ಯಾಸಕರಾಗಿ ಕೆಲಸ ಮಾಡಿದ ಅನುಭವ ಹೊಂದಿದ್ದಾರೆ. ಈ ಸಂಸ್ಥೆಯ ಶಿವರಾಮಕಾರಂತ ರಂಗಮಂದಿರ ಮತ್ತು ಸಾಗರದ ಕಾಗೋಡು ರಂಗಮಂದಿರಗಳ ಬೆಳಕಿನ ವ್ಯವಸ್ಥೆಯ ಯೋಜನೆ ಮತ್ತು ನಿರ್ವಹಣೆಗಳಲ್ಲಿ ಸಲಹೆಗಾರರಾಗಿ, ಕರ್ನಾಟಕದ ಹಲವಾರು ರಂಗತಂಡಗಳ ಜತೆಗೆ ಕಾರ್ಯನಿರ್ವಹಿಸಿರುತ್ತಾರೆ.

2009 ರಿಂದ ಇವರು ಸಾಣೇಹಳ್ಳಿಯ ಶಿವಕುಮಾರ ರಂಗತರಬೇತಿ ಕೇಂದ್ರದಲ್ಲಿ ಬೆಳಕು ವಿನ್ಯಾಸದ ವಿಷಯದಲ್ಲಿ ಅತಿಥಿ ಅಧ್ಯಾಪಕನಾಗಿ ಸೇವೆ ಸಲ್ಲಿಸುತ್ತಿದ್ದಾರೆ. ನಾಡಿನ ಹಲವಾರು ಖ್ಯಾತ ರಂಗಕರ್ಮಿಗಳೊಡನೆ ದುಡಿದ ಅನುಭವ ಹೊಂದಿರುವ ಶ್ರೀಯುತರ ರಂಗ ಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.



## ಜಿ.ಎನ್. ವಿರೂಪಾಕ್ಷಪ್ಪ

ಚಿತ್ರದುರ್ಗ ಜಿಲ್ಲೆಯ ಆಯಿತೋಳು ಗ್ರಾಮದ ಪಟೇಲ್ ನಾಗಪ್ಪನವರ ಪುತ್ರ ಶ್ರೀ ವಿರುಪಾಕ್ಷಪ್ಪನವರು 1965ರಲ್ಲಿ ನಟನಾಗಿ ಸಂಪೂರ್ಣ ರಾಮಾಯಣದ ಮೂಲಕ ರಂಗಪ್ರವೇಶ ಮಾಡಿದರು. 1969ರಲ್ಲಿ ಇವರ ಭಕ್ತಮಾರ್ಕಂಡೇಯ ನಾಟಕದಲ್ಲಿ ಮಾರ್ಕಂಡೇಯನ ಪಾತ್ರ ನಿರ್ವಹಿಸಿ ಜನಪ್ರಿಯರಾದರು. ನಂತರದ ದಿನಗಳಲ್ಲಿ ರಕ್ತರಾತ್ರಿ, ಜಗಜ್ಯೋತಿ ಬಸವೇಶ್ವರ ಮುಂತಾದ ನಾಟಕಗಳಲ್ಲಿ ಪಾತ್ರಧಾರಿಯಾಗಿ ರಂಗಸೇವೆ ಮುಂದುವರೆಸಿದರು. 1980ರಲ್ಲಿ ಆಶಾಲತಾ ಎಂಬ ಸಾಮಾಜಿಕ ನಾಟಕದ ಸಂಗೀತ ನಿರ್ದೇಶಕರಾದರು. ಮುಂದೆ 'ಬಡವ ಬದುಕಲೇಬೇಕು', 'ಸರ್ಪಸಾಮ್ರಾಜ್ಯ' ಮುಂತಾದ ನಾಟಕಗಳಿಗೆ ಹಾರ್ಮೋನಿಯಂ ವಾದಕರಾಗಿ ಮತ್ತು ಸಂಗೀತ ನಿರ್ದೇಶಕರಾಗಿ ಸೇವೆ ಸಲ್ಲಿಸಿದರು. ಇದೇ ರೀತಿ 'ಧನಿಕರ ದೌರ್ಜನ್ಯ' ಹಾಗೂ 'ಕಲಿತಕಳ್ಳ' ನಾಟಕಗಳಿಗೂ ಇವರದೇ ಸಂಗೀತ ಸಂಯೋಜನೆಯಾಗಿತ್ತು.

ಗ್ರಾಮೀಣ ಪ್ರದೇಶಗಳಲ್ಲಿ ಪೌರಾಣಿಕ, ಚಾರಿತ್ರಿಕ ಮತ್ತು ಸಾಮಾಜಿಕ ನಾಟಕಗಳು ಪ್ರದರ್ಶನಗೊಳ್ಳುವುದಕ್ಕೆ ಶ್ರೀಯುತರು ಸತತವಾಗಿ ಶ್ರಮಿಸಿದ್ದಾರೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

## ತುಕಾರಾಂ ಏನೇಕಲ್



ದಕ್ಷಿಣ ಕನ್ನಡ ಜಿಲ್ಲೆಯ ಸುಬ್ರಹ್ಮಣ್ಯದ ಕುಕ್ಕೆ ಶ್ರೀ ಸುಬ್ರಹ್ಮಣೇಶ್ವರ ಮಹಾವಿದ್ಯಾಲಯದಲ್ಲಿ ಶಾರೀರಿಕ ಶಿಕ್ಷಣ ನಿರ್ದೇಶಕರಾಗಿ ಸೇವೆಸಲ್ಲಿಸುತ್ತಿರುವ ಶ್ರೀಯುತರು ಬೆಂಗಳೂರು ವಿಶ್ವವಿದ್ಯಾಲಯದ ಎಂ.ಪಿ.ಇಡಿ ಪದವೀಧರ. 1985 ರಿಂದ ಮೇಲಿನ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತ, ರಾಜ್ಯಮಟ್ಟದ ಕ್ರೀಡಾ ಸಂಘಟಕರಾಗಿ ಖ್ಯಾತರಾಗಿದ್ದಾರೆ.

ತಮ್ಮ ಸಂಸ್ಥೆಯಲ್ಲಿ 1992ರಲ್ಲಿ ತಾವೇ ಸ್ಥಾಪಿಸಿದ 'ಕುಸುಮ ಸಾರಂಗ' ರಂಗಸಂಘಟನೆಯ ಮೂಲಕ ನಿರಂತರವಾಗಿ ರಂಗಸೇವೆ ಮಾಡುತ್ತಿದ್ದಾರೆ. ಈವರೆಗೆ 21 ನಾಟಕಗಳನ್ನು ಪ್ರದರ್ಶಿಸಿ, ರಾಜ್ಯದ ನಾನಾ ಭಾಗಗಳಲ್ಲಿ ನಡೆದ ನಾಟಕೋತ್ಸವಗಳಲ್ಲಿ ಪ್ರಶಸ್ತಿ ಪಡೆದಿದ್ದಾರೆ. ಇವರು ಒಟ್ಟು ಎಂಟು ನಾಟಕಗಳಲ್ಲಿ ಅಭಿನಯಿಸಿದ್ದಾರೆ ಹಾಗೂ 15ಕ್ಕೂ ಹೆಚ್ಚಿನ ನಾಟಕಗಳನ್ನು ನಿರ್ದೇಶಿಸಿ, ಬೆಳಕು ಸಂಯೋಜನೆ ಮಾಡಿದ್ದಾರೆ. ಹಲವಾರು ನಾಟಕ ಸ್ಪರ್ಧೆಗಳಲ್ಲಿ ತೀರ್ಪುಗಾರರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ.

ತಮ್ಮ ಸುದೀರ್ಘ ಶೈಕ್ಷಣಿಕ ಹಾಗೂ ರಂಗ ಸೇವಾವಧಿಯಲ್ಲಿ ಶ್ರೀಯುತರು ನೂರಾರು ವಿದ್ಯಾರ್ಥಿಗಳಲ್ಲಿ ರಂಗಪ್ರೇಮ ಬೆಳೆಸುವಲ್ಲಿ ಸಫಲರಾಗಿದ್ದಾರೆ. ಇವರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.

---

## ಶೃಂಗೇರಿ ರಾಮಣ್ಣ



ಸುಮಾರು 400ಕ್ಕೂ ಹೆಚ್ಚಿನ ಸಂಖ್ಯೆಯ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳಲ್ಲಿ ಹದಿನೈದು ವೃತ್ತಿ ಕಂಪನಿಗಳಲ್ಲಿ ಕೆಲಸ ಮಾಡಿರುವ ಶ್ರೀ ರಾಮಣ್ಣನವರು ಶೃಂಗೇರಿ ಬಳಿಯ ನೆಮ್ಮಾರು ಗ್ರಾಮದವರು. ಇವರು ಸೇವೆಸಲ್ಲಿಸಿದ ಖ್ಯಾತ ವೃತ್ತಿಕಂಪನಿಗಳೆಂದರೆ ಎಂ.ಸಿ.ಮಹದೇವಸ್ವಾಮಿ ಕನ್ನಡ ಥಿಯೇಟರ್, ಹಿರಣ್ಣಯ್ಯ ಮಿತ್ರಮಂಡಲಿ, ಗುಬ್ಬಿ ಕಂಪನಿ, ಗುಡಿಗೇರಿ ಸಂಗಮೇಶ್ವರ ನಾಟ್ಯಸಂಘ, ಏಣಗಿ ಬಾಳಪ್ಪನವರ ಕಂಪನಿ, ಓಟಲೇಶ್ವರ ಓಂಕಾರೇಶ್ವರ ನಾಟ್ಯಸಂಘ, ಹೋಳಿಹುಚ್ಚೇಶ್ವರ ನಾಟ್ಯ ಸಂಘ, ಚಿತ್ತರಗಿ ಕಂಪನಿ, ಕಲಾ ಪೋಷಕ ನಾಟಕ ಕಂಪನಿ, ಬ್ಯಾಡಗಿ, ನಟರಾಜ ಕಲಾಸಂಘ,ಕಂಪ್ಲಿ, ವಿಶ್ವಭಾರತಿ ನಾಟಕ ಸಂಘ, ಶಿವಮೊಗ್ಗ, ಶರೀ ಕುಮಾರೇಶ್ವರ ನಾಟಕ ಸಂಘ, ಚಿತ್ರದುರ್ಗ ಮುಂತಾದವು. ಮೇಲ್ಕಂಡ ಕಂಪನಿ ನಾಟಕಗಳಲ್ಲಿ ಇವರ ಪಾತ್ರ ವೈವಿಧ್ಯ ಜನಪ್ರಿಯವಾಗಿತ್ತು. ಹಲವಾರು ಸಂಘಸಂಸ್ಥೆಗಳು ಇವರನ್ನು ಒಬ್ಬ ನೈಜ, ಪ್ರಬುದ್ಧ ಕಲಾವಿದರೆಂದು ಪ್ರಶಂಸಿಸಿವೆ. 1985ರ ವಿಶ್ವ ಕನ್ನಡ ಸಮ್ಮೇಳನದಲ್ಲಿಯೂ ಕಲಾವಿದರಾಗಿ ಭಾಗವಹಿಸಿದ್ದಾರೆ.

ರಂಗಭೂಮಿಯೇ ಅಲ್ಲದೆ ಕಿರುತೆರೆ ಹಾಗೂ ಹಿರಿತೆರೆಗಳಲ್ಲಿ ತಮ್ಮ ಸ್ವಾಭಾವಿಕ ನಟನೆಯ ಮೂಲಕ ಮನೆಮಾತಾಗಿರುವ ಶ್ರೀ ರಾಮಣ್ಣನವರ ಕಲಾಸೇವೆ ಹಾಗೂ ರಂಗಭೂಮಿ ಸೇವೆಯನ್ನು ಪುರಸ್ಕರಿಸಿ, ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.

---



## ಜವರೇಗೌಡ

ವೃತ್ತಿಯಲ್ಲಿ ಶಿಕ್ಷಕರಾದ 75ರ ಪ್ರಾಯದ ಶ್ರೀ ಗುಂಡ್ಲುಪೇಟೆ ಜವರೇಗೌಡರು ಪ್ರವೃತ್ತಿಯಿಂದ ನಟ, ನಿರ್ದೇಶಕ, ನಾಟಕಕಾರ, ಸಣ್ಣ ಕಥೆಗಾರ ಹಾಗೂ ಕಾದಂಬರಿಕಾರ. ತಮ್ಮ 36 ವರ್ಷಗಳ ಸುದೀರ್ಘ ಬೋಧನಾ ಅವಧಿಯಲ್ಲಿ ಮಕ್ಕಳಿಗೆ ರಂಗಪ್ರೇಮ ಹೇಳಿಕೊಟ್ಟು, ಅವರಲ್ಲಿ ರಂಗಾಸಕ್ತಿ ಬೆಳೆಯಲು ಕಾರಣರಾದ ಶ್ರೀಯುತರು, ಈವರೆಗೆ 48 ನಾಟಕಗಳ 22 ಕಥೆಗಳು ಮತ್ತು 10 ಕಾದಂಬರಿಗಳನ್ನು ರಚಿಸಿದ್ದಾರೆ. ಈಗಾಗಲೇ ಇವರ 35 ನಾಟಕಗಳು, 14 ಕಥೆಗಳು ಮತ್ತು ಆರು ಕಾದಂಬರಿಗಳು ಅಚ್ಚಾಗಿ ಕನ್ನಡ ಸಾರಸ್ವತ ಪ್ರಪಂಚದಲ್ಲಿ ಜನಪ್ರಿಯವಾಗಿವೆ. ಇವರ ರಚನೆಗಳಲ್ಲಿ ಸಾಮಾಜಿಕ, ಪೌರಾಣಿಕ, ಐತಿಹಾಸಿಕ ಮತ್ತು ಜಾನಪದ ವಸ್ತುಗಳ ನಾಟಕಗಳಿವೆ. ಇವರ ಕಿತ್ತೂರ ಕೇಸರಿ ನಾಟಕ ಅಪಾರ ಜನಮನ್ನಣೆ ಗಳಿಸಿ, ರಾಜ್ಯದ ಹಲವೆಡೆ ಹಲವಾರು ಪ್ರದರ್ಶನಗಳನ್ನು ಕಂಡಿದೆ. ಮಕ್ಕಳು ಅಭಿನಯಿಸಬಹುದಾದಂತಹ ಸರಳ ನಾಟಕಗಳನ್ನು ರಚಿಸಿ, ಅವನ್ನು ರಂಗದ ಮೇಲೆ ತರುವ ಇವರ ಹವ್ಯಾಸ ಅನುಕರಣೀಯ. ಸಮಾನ ಮನಸ್ಕರಾದ ಸ್ನೇಹಿತರನ್ನು ಕಲೆಹಾಕಿ ತಾವೇ ರಚಿಸಿದ ನಾಟಕಗಳನ್ನು ಎಲ್ಲೆಡೆ ಪ್ರದರ್ಶಿಸಿ ಜನಮೆಚ್ಚುಗೆ ಗಳಿಸಿದ್ದಾರೆ.

ಹಲವಾರು ಸಂಘ ಸಂಸ್ಥೆಗಳಿಂದ ವಿವಿಧ ಬಿರುದು ಪುರಸ್ಕಾರಗಳನ್ನು ಶ್ರೀಯುತರು ಈಗಾಗಲೇ ಗಳಿಸಿದ್ದಾರೆ. ಇತ್ತೀಚೆಗೆ ಕನಕಗುರು ಪೀಠದ ಶಾಖಾಮಠದ ವತಿಯಿಂದ 'ಕನಕ ಶ್ರೀ' ಪ್ರಶಸ್ತಿ ಗಳಿಸಿದ ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಗುರುರಾಜ ಮಾರ್ಪಳ್ಳಿ

ಮೂಲತಃ ಕೃಷಿಕರಾದ ಶ್ರೀಯುತರು 1973ರಲ್ಲಿ 20ರ ಹರೆಯದಲ್ಲಿ ಶಿವರಾಮಕಾರಂತರ ಕೇಂದ್ರದ ಮೂಲಕ ರಂಗಪ್ರವೇಶ ಮಾಡಿ, ಮುಂದೆ ಗುರು, ವೀರಭದ್ರನಾಯಕರಲ್ಲಿ ನೃತ್ಯಾಭ್ಯಾಸ ಮಾಡಿದರು. ಯಕ್ಷಗಾನ ವೇಷ, ನೃತ್ಯ, ಹಾಡುಗಾರಿಕೆ, ಭಾಗವಂತಿಕೆ, ವಾದನಗಳಲ್ಲಿ ಪರಿಣಿತಿಹೊಂದಿ, 1986ರವರೆಗೆ ಯಕ್ಷಗಾನ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿ, ಕಾರಂತರ ಕೇಂದ್ರ ಸರ್ಕಾರ ಅನುದಾನಿತ "ಯಕ್ಷರಂಗದ" ಕಲಾವಿದರಾದರು. ನಂತರ ಕೆರೆಮನೆ ಶಂಭುಹೆಗಡೆಯವರ ಇಡಗುಂಜಿ ಮೇಳದಲ್ಲಿ ಭಾಗವಂತಿಕೆ ಹಾಗೂ ವೇಶಧಾರಿಯಾದರು. 1986ರಲ್ಲಿ ನೀನಾಸಂ ಸೇರಿ ಸಂಗೀತಾಭ್ಯಾಸ ಮಾಡಿ, ಅದರ 'ತಿರುಗಾಟ'ದಲ್ಲಿ ಸಂಗೀತಗಾರರಾಗಿ, ಸಂಗೀತ ನಿರ್ದೇಶಕರಾಗಿ ದುಡಿದರು. ಇವರ ಸ್ವರಚಿತ ನಾಟಕ 'ಕಾಲ' ಒಂದು ಮಾನಸಿಕ ತುಮುಲಗಳ ಅಧ್ಯಯನ. ಇದು ಕೇಂದ್ರ ಸರ್ಕಾರದ ಅನುದಾನದಿಂದ ಪ್ರದರ್ಶಿಸಿದ ನಾಟಕ. ಕಲ್ಪನೆಯಲ್ಲಿ ಇದೊಂದು ಯಕ್ಷಕಾವ್ಯ. 1994ರಲ್ಲಿ ರಂಗಾಯಣ ಸೇರಿದ ಶ್ರೀಯುತರು ಬಿ.ವಿ.ಕಾರಂತರ ಸಹಾಯಕರಾಗಿ ಚಂದ್ರಹಾಸ ನಾಟಕಕ್ಕೆ ನೃತ್ಯ, ಸಂಗೀತ ಸಹಾಯಕರಾಗಿ ಸೇವೆಸಲ್ಲಿಸಿದರು. ರಂಗಭೂಮಿಯಲ್ಲಿ ನೂತನ ಪ್ರಯೋಗಗಳನ್ನು ಮಾಡುವ ಹಂಬಲದಿಂದ ವಿವಿಧ ತಂಡಗಳಿಗೆ ಹೊಸ ನಮೂನೆ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಈ ದಿಶೆಯಲ್ಲಿ ನಮ ತುಳುವರ್ ಕಲಾಸಂಘಟನೆಗಾಗಿ ಸ್ವರಚಿತ 'ವಾಲಿ' ನಾಟಕ ನಿರ್ದೇಶಿಸಿದ್ದಾರೆ. ಇದಕ್ಕಾಗಿ ಮುಂಬಯಿಯಲ್ಲಿ ರಾಷ್ಟ್ರಪ್ರಶಸ್ತಿ ಪಡೆದಿದ್ದಾರೆ. ನಾಟಕ ರಚನೆಯಲ್ಲಿಯೂ ಪರಿಶ್ರಮ ಹೊಂದಿರುವ ಶ್ರೀಯುತರು ಕಾಲ, ಕೋವಿ ಮತ್ತು ಕೊಳಲು, ರುದ್ರಭೀಮ ಹಾಗೂ ನಳದಮಯಂತಿ ಮುಂತಾದ ನಾಟಕಗಳನ್ನು ರಚಿಸಿದ್ದಾರೆ.

ಕೆರೆಮನೆ ಶಿವರಾಮ ಹೆಗ್ಗಡೆಯವರ ನೇತೃತ್ವದ 'ಭಾಸಂ' ಎಂಬ ಕೇಂದ್ರ ಸಂಗೀತ್ ನೃತ್ಯ ಅಕಾಡೆಮಿ ಅನುದಾನಿತ ಯೋಜನೆಯಲ್ಲಿ ಇವರ ಭಾಗವತಿಕೆ ಇದೆ. 2001ರಲ್ಲಿ ಕೇಂದ್ರ ಸಂಸ್ಕೃತಿ ಇಲಾಖೆಯಿಂದ ತಮ್ಮ ಯಕ್ಷ ಸಂಗೀತಕ್ಕೆ

ಸೀನಿಯರ್ ಫೆಲೋಶಿಪ್ ಪಡೆದಿರುವ ಶ್ರೀಯುತರು ತಮ್ಮ 'ಕಾಲಪಾತ್ರ' ಕವನಸಂಕಲನಕ್ಕೆ 'ಮುದ್ದಣ' ಪ್ರಶಸ್ತಿ ಪಡೆದಿರುತ್ತಾರೆ. ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸಿದೆ.



## ಡಾ. ಭಾಸ್ಕರ್

ಮೂಲತಃ ಕುಂದಾಪುರ ತಾಲ್ಲೂಕು ಬೈಂದೂರಿನವರಾದ ಡಾ. ಭಾಸ್ಕರ್. ಬಿ ರವರು ಚಿಕ್ಕಂದಿನಲ್ಲಿಯೇ ರಂಗಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ನಂತರ ಕಾಲೇಜು ದಿನಗಳಲ್ಲಿ ಶ್ರೀರಂಗರ, ಪರ್ವತವಾಣಿಯವರ ನಾಟಕಗಳಲ್ಲಿ ಅಭಿನಯಿಸುತ್ತಿದ್ದರು. ವೃತ್ತಿಯಲ್ಲಿ ವೈದ್ಯರಾದ ಇವರು ಗದುಗಿನಲ್ಲಿ ನೆಲೆಸಿದರು.

ನಂತರ 70ರ ದಶಕದಿಂದ ನಿರಂತರವಾಗಿ ವೃತ್ತಿಯ ಜೊತೆಗೆ ರಂಗಭೂಮಿಯನ್ನು ಪ್ರವೃತ್ತಿಯಾಗಿಸಿಕೊಂಡರು. ಗದುಗಿನ 'ಅಭಿನಯರಂಗ'ದ ನಟರಾಗಿ, ಸಂಘಟಕರಾಗಿ, ರಂಗನಿರ್ದೇಶಕರಾಗಿ ದುಡಿದರು. ರಂಗನಿರ್ದೇಶಕ ಜಯತೀರ್ಥಜೋಷಿ ಹಾಗೂ ಸುಶೀಲೇಂದ್ರ ಜೋಷಿಯವರೊಂದಿಗೆ ಸುಮಾರು 20 ನಾಟಕಗಳಲ್ಲಿ ಅಭಿನಯಿಸಿ 'ಅಭಿನಯರಂಗ'ದ ಅಧ್ಯಕ್ಷರಾದರು.

ಕೊನೇರಿ ಹೊಂಡದಲ್ಲಿ 'ತಲೆದಂಡ' ನಾಟಕದ ಮುಖ್ಯ ಸಂಘಟಕರಾಗಿ, ನಟರಾಗಿ ಅಭಿನಯಿಸಿ, ಕನ್ನಡ ರಂಗಭೂಮಿಯಲ್ಲಿ ವಿಶಿಷ್ಟವಾಗಿ ಪ್ರಯೋಗಿಸಿದ 'ತಲೆದಂಡ' ನಾಟಕದ ರೂವಾರಿಗಳಾದರು.

ಬಿ.ವಿ. ಕಾರಂತ, ಗಿರೀಶ್ ಕಾರ್ನಾಡ್, ಜಯತೀರ್ಥ ಜೋಷಿ, ಶ್ರೀ ಸಿ.ಆರ್. ಸಿಂಹರ ಸಂಪರ್ಕದೊಂದಿಗೆ, ಅನೇಕ ಯುವ ಕಲಾವಿದರನ್ನು, ನಿರ್ದೇಶಕರನ್ನು ಬೆಳೆಸುವಲ್ಲಿ ಮುಖ್ಯ ಪಾತ್ರ ವಹಿಸಿದರು. ರೋಟರಿ ಕ್ಲಬ್‌ನಲ್ಲಿ ನಾಟಕಗಳನ್ನು ಪ್ರಯೋಗಿಸಿದರು. ವೃತ್ತಿಯಲ್ಲಿ ವೈದ್ಯರಾಗಿದ್ದರೂ ಅವರು ಒಲವು ಹೆಚ್ಚು ಇದ್ದದ್ದು ರಂಗಭೂಮಿ ಕಡೆಗೆ. ಗದುಗಿನಲ್ಲಿ 'ನಾಟಕದ ಡಾಕ್ಟರ್' ಅಂತಲೇ ಪ್ರಸಿದ್ಧರು. ಅವರು ಒಂದು ಲೋಕದ ಕಥೆ, ಹಯವದನ, ಹಕ್ಕಿ ಹಾರುತಿದೆ ನೋಡಿದಿರಾ, ಸಾಯೋಆಟ, ರಾವಿ ನದಿಯ ದಂಡೆಯಲ್ಲಿ ಮುಂತಾದ ನಾಟಕಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ.

ನಿರ್ದೇಶಿಸಿದ ನಾಟಕಗಳು : 6 ಅಲ್ಲ 9, ಬದುಕು ಮನ್ನಿಸು ಪ್ರಭುವೆ: ಏಡ್ಸ್ ಬಗ್ಗೆ ಬೀದಿ ನಾಟಕಗಳು ಮುಂತಾದವು. ತಮ್ಮ 60ರ ಇಳಿವಯಸ್ಸಿನಲ್ಲಿಯೂ ರಂಗಭೂಮಿ ಉತ್ಸಾಹ ಕುಂದಿಲ್ಲ. ಈಗಲೂ ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ ಇವರಿಗೆ 2010–11ರ ಜೀವಮಾನ ಸಾಧನೆಯ ಗೌರವ ಪ್ರಶಸ್ತಿ ನೀಡಿ ಪುರಸ್ಕರಿಸಿದೆ.



## ಡಿ.ಎಸ್. ಚೌಗಲೆ

ಚಿಕ್ಕೋಡಿ ತಾಲೂಕಿನ ಬೆಡೇಕಿಹಾಳದಲ್ಲಿ 1961ರಲ್ಲಿ ಜನಿಸಿದ ಶ್ರೀ ಚೌಗಲೆ ಸಮಕಾಲೀನ ಕನ್ನಡ ನಾಟಕಕಾರರಲ್ಲಿ ಪ್ರಮುಖ ಹೆಸರು. ಕರ್ನಾಟಕದ ಗಡಿನಾಡಿನಲ್ಲಿ ಕನ್ನಡ ಸೇವೆ ಮಾಡುತ್ತಿರುವ ರಂಗಕರ್ಮಿ. 90ರ ದಶಕದಿಂದೀಚೆಗೆ ಚಿತ್ರಕಲೆ, ರಂಗಭೂಮಿ ಹಾಗೂ ಸಾಹಿತ್ಯ ಕ್ಷೇತ್ರಗಳಿಗೆ ಇವರ ಕೊಡುಗೆ ಗಣನೀಯ.

ತಮ್ಮ ಹುಟ್ಟೂರಿನಲ್ಲಿ ಪ್ರಾಥಮಿಕದಿಂದ ಪದವಿ ಶಿಕ್ಷಣ ಮುಗಿಸಿ, ಕರ್ನಾಟಕ ವಿಶ್ವವಿದ್ಯಾಲಯದಿಂದ 1986ರಲ್ಲಿ ಕನ್ನಡ ಸ್ನಾತಕೋತ್ತರ ಪದವಿ ಪಡೆದು, ಅದೇ ವರ್ಷ ಬೆಳಗಾವಿಯ ಭಾವೂರಾವ್ ಕಾಕತ್ಕರ್ ಪದವಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆಗೆ ಸೇರಿದರು. ಪ್ರಸ್ತುತ ಅದೇ ಕಾಲೇಜಿನಲ್ಲಿ ಅಸೋಸಿಯೇಟ್ ಪ್ರೊಫೆಸರ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ.

'ಗಾಂಧಿ v/s ಗಾಂಧಿ' ಇದು ಶ್ರೀ ಚೌಗಲೆ ಅನುವಾದಿಸಿದ ಬಹು ಚರ್ಚಿತ ನಾಟಕ. ರಂಗಾಯಣದ ಮೂಲಕ ಪ್ರದರ್ಶನಗೊಂಡ ಈ ನಾಟಕ ಕನ್ನಡ ರಂಗಭೂಮಿಯ ಪ್ರಮುಖ ಪ್ರಯೋಗ. ದೆಹಲಿಯ ರಾಷ್ಟ್ರೀಯ ನಾಟಕೋತ್ಸವ ಸೇರಿದಂತೆ ಹಲವೆಡೆ ಪ್ರಯೋಗ ಕಂಡು, ಎರಡು ಬಾರಿ ಮುದ್ರಣಗೊಂಡಿದೆ. ಇವರ ಗಾಂಧಿ ಅಂಬೇಡ್ಕರ್ ನಾಟಕ ರಾಜ್ಯದ ಹೊರಗೆ 68 ಪ್ರದರ್ಶನಗಳನ್ನು ಕಂಡಿದೆ. ಗಡಿಭಾಗದ ತಂಬಾಕು ಕಾರ್ಮಿಕರ ಬವಣೆಯನ್ನು ಚಿತ್ರಿಸುವ ಇವರ 'ದಿಶಾಂತರ' ನಾಟಕ ಅವರ ಅನುಭವಗಳನ್ನು ವಾಸ್ತವಿಕ ನೆಲೆಯಲ್ಲಿ ಕಟ್ಟಿಕೊಡುತ್ತದೆ. ಇದು ಮರಾಠಿ ಭಾಷೆಗೆ ಅನುವಾದಗೊಂಡಿದೆ. ಇವರ ಮತ್ತೊಂದು ಅನುವಾದಿತ ನಾಟಕವಾದ 'ಪೇಯಿಂಗ್ ಗೆಸ್ಟ್' ಧಾರವಾಡದಲ್ಲಿ ಜಯತೀರ್ಥ ಜೋಷಿಯವರಿಂದ ನಿರ್ದೇಶಿತವಾಗಿ ಹಲವಾರು ಪ್ರದರ್ಶನಗಳನ್ನು ಎರಡು ಬಾರಿ ಪ್ರಕಟಣೆಗಳನ್ನು ಕಂಡಿದೆ.

ಇವರ 'ಕಸ್ತೂರ ಬಾ' ನಾಟಕವನ್ನು ಮೈಸೂರಿನ ಕಾರಾಗೃಹವಾಸಿಗಳು ಅಭಿನಯಿಸಿದರು. ನಂತರದ ದಿನಗಳಲ್ಲಿ ಇದು ಹಲವಾರು ಪ್ರದರ್ಶನಗಳನ್ನು ಕಂಡಿತು. ಇವರ ಅನುವಾದಿತ ನಾಟಕ 'ಶಿರವಂತ' ಹಾಗೂ ಮನೋ ವೈಜ್ಞಾನಿಕ ನಾಟಕ 'ಚದುರಂಗ ಮತ್ತು ಕತ್ತೆ' ಜನಪ್ರಿಯವಾಗಿವೆ.

ಸಾಹಿತ್ಯ ಕ್ಷೇತ್ರಕ್ಕೂ ಚೌಗಲೆಯವರ ಸೇವೆ ಗಣನೀಯ. ಕನ್ನಡ ಮರಾಠಿ ಭಾಷೆಗಳ ನಡುವಿನ ವೈಶಿಷ್ಟ್ಯವನ್ನು ಗ್ರಹಿಸಿ, ಅದನ್ನು ರಂಗಭೂಮಿ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಗಟ್ಟಿಗೊಳಿಸಿ, ಅರ್ಥಪೂರ್ಣಗೊಳಿಸಿದ್ದಾರೆ. 'ಕನ್ನಡ ಮರಾಠಿ' 'ಆಧುನಿಕ ರಂಗಭೂಮಿ ಒಂದು ತೌಲನಿಕ ಅಧ್ಯಯನ' ಎಂಬ ಮಹಾಪ್ರಬಂಧವನ್ನು ಸಿದ್ಧಗೊಳಿಸಿ ಪಿ.ಎಚ್‌ಡಿ ಗಾಗಿ ಸಲ್ಲಿಸಿದ್ದಾರೆ.

ಸುಮಾರು 13 ಪ್ರಶಸ್ತಿಗಳಿಗೆ ಭಾಜನರಾದ ಶ್ರೀ ಚೌಗಲೆಯವರು 'ವರದರಾಜ ಆದ್ಯ' ಹಾಗೂ 'ಚದುರಂಗ' ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿಯನ್ನು ಪಡೆದಿರುವ ಶ್ರೀಯುತರ ರಂಗಸೇವೆ ಪುರಸ್ಕರಿಸಿ, ಕರ್ನಾಟಕ ನಾಟಕ ಅಕಾಡೆಮಿ ಇವರಿಗೆ 2011 ರ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಅಮರಪ್ರಿಯ ಹಿರೇಮಠ

ಶ್ರೀ ಅಮಪ್ರಿಯ ಹಿರೇಮಠ ಅವರು ಈಗಿನ ಯಾದಗಿರಿ ಜಿಲ್ಲೆಯ ಶಹಪೂರ ತಾಲೂಕಿನ ಹೊತಪೇಟ ಗ್ರಾಮದವರು. ತಂದೆ ಪಂಚಾಕ್ಷರಯ್ಯ ಹಿರೇಮಠ ಅವರು ಶಹಪೂರ ತಾಲೂಕಿನಲ್ಲಿ ನಾಟಕ ಮಾಸ್ತರ ಎಂದೇ ಪ್ರಸಿದ್ಧರು. ವಂಶಪರಂಪರೆಯಾಗಿ ರಕ್ತಗತವೆಂಬಂತೆ ಅಮರಪ್ರಿಯರು ಏಳನೇ ಇಯತ್ತೆ ಓದುವಾಗಲೇ ಮುಖಕ್ಕೆ ಬಣ್ಣ ಬಳಿದುಕೊಂಡರು. 60ರ ದಶಕಗಳ ನಾಟಕಗಳಲ್ಲಿ ಸ್ತ್ರೀ ಪಾತ್ರಗಳಿಗೆ ಅಮರಪ್ರಿಯರೇ ಒಪ್ಪುತ್ತಿದ್ದರು. ಈ ರೀತಿ ಅವರ ರಂಗಸೇವೆ ಪ್ರಾರಂಭವಾಗಿ ಮುಂದೆ ಕಾಲೇಜು ಸೇರಿ ಪದವೀಧರರಾಗಿ ಯಾದಗಿರಿ ಜಿಲ್ಲೆಯಲ್ಲಿ ಹೈಸ್ಕೂಲ್ ಶಿಕ್ಷಕರಾಗಿ ಸೇವೆಸಲ್ಲಿಸುತ್ತಿದ್ದಾಗ 'ಬಡವನ ಕಣ್ಣೀರು' ಹಾಗೂ 'ಅಣ್ಣ ತಂಗಿ' ನಾಟಕಗಳನ್ನು ನಿರ್ದೇಶಿಸಿ ಜನಮನಗಳಿಸಿದರು.

ಇವರು 1973ರಲ್ಲಿ 10 ಜನರನ್ನು ಕಟ್ಟಿಕೊಂಡು ಸ್ಥಾಪಿಸಿದ ಅಮರಕಲಾವೃಂದದಲ್ಲಿ ಈಗ 40 ಜನರು ತಂಡದಲ್ಲಿ ಭಾಗವಹಿಸುತ್ತಾರೆ. ಗುಲ್ಬರ್ಗಾ ಆಕಾಶವಾಣಿ ಹಾಗೂ ದೂರದರ್ಶನಗಳಲ್ಲಿ ರೇಡಿಯೋ ನಾಟಕಗಳನ್ನು ಹಾಗೂ ಬೆಂಗಳೂರು ದೂರದರ್ಶನದಿಂದ 'ಋಣ ಭಾಗರ ಅರ್ಥಾತ್ ಶರಣು ಶರಣಾರ್ಥಿ' ಎಂಬ ನಾಟಕವನ್ನು ನಿರ್ದೇಶಿಸಿ ಸಂಗೀತವನ್ನು ಕೂಡ ನೀಡಿದರು.

1989ರಲ್ಲಿ ಇವರು 'ಮೈಲಾರಲಿಂಗೇಶ್ವರ ಮಹಿಮೆ' ಎಂಬ ನಾಟಕವನ್ನು ಬರೆದು ಸಂಗೀತ ನಿರ್ದೇಶಿಸಿದರು. ಹೂವಿನಹಡಗಲಿಯ ಮೈಲಾರದಲ್ಲಿ ಈ ನಾಟಕ 18 ದಿನಗಳವರೆಗೂ ಪ್ರದರ್ಶಿಸಲ್ಪಟ್ಟು ಬಹಳ ಜನಾನೂರಾಗಿಯಾಯಿತು.

ಕಲ್ಬುರ್ಗಿಯ ಸರಕಾರಿ ಆಸ್ಪತ್ರೆಯಲ್ಲಿ 1981 ರಿಂದ 1998ರವರೆಗೆ ಅಲ್ಲಿಯ ನೌಕರಬಾಂಧವರು ಶ್ರೀ ಗಜಾನನ ನಾಟಕ ಮಂಡಳಿ ಎಂಬ ಹವ್ಯಾಸಿ ತಂಡವೊಂದನ್ನು ಕಟ್ಟಿಕೊಂಡರು. ಶ್ರೀ ಗಜಾನನ ನಾಟಕ ಮಂಡಲೀಯ ಎಲ್ಲಾ ನಾಟಕಗಳ ನಿರ್ದೇಶನ ಹಾಗೂ ಸಂಗೀತ ನಿರ್ದೇಶನ ಅಮರಪ್ರಿಯರದ್ದೇ ಆಗಿರುತ್ತಿತ್ತು. 'ದೇವರಿಗೂ ನೌಕರಿ ಸಿಗಲಿಲ್ಲ' ಎಂಬ ಹಾಸ್ಯಭರಿತ ಹಾಗೂ ಸಂದೇಶಭರಿತವಾದ ಕಿರುನಾಟಕ ಬಹಳ ಜನಾಧರಣೆ ಗಳಿಸಿತು. ಆದರ್ಶ ಪ್ರೇಮ, ಬೆಳದಿಂಗಳು, ಗಾಂಪರಗುರು, ಬಡವನ ಕಣ್ಣೀರು ಮುಂತಾದ ನಾಟಕಗಳು ಇವರ ನಿರ್ದೇಶನದಲ್ಲಿ ಬಹಳ ಪ್ರಸಿದ್ಧವಾದವುಗಳು. ಶ್ರೀ ಗಜಾನನ ನಾಟಕ ಮಂಡಳಿ ಪ್ರಯೋಗಿಸಿದ ಹಾಗೂ ಇವರು ನಿರ್ದೇಶಿಸಿದ "ರಕ್ತದೀಪ" ಎಂಬ ನಾಟಕ ಅತೀ ಪ್ರಮುಖ ನಾಟಕವದು.

1992ರಲ್ಲಿ ಋಣಭಾರ ಅರ್ಥಾತ್ ಶರಣು ಶರಣಾರ್ಥಿ ಎಂಬ ನಾಟಕವನ್ನು ಕಲ್ಬುರ್ಗಿ ಬೀದರ್ ಹಾಗೂ ಕೇಂದ್ರ ಕಾರಾಗೃಹ ಕಲ್ಬುರ್ಗಿ ಕೈದಿಗಳಿದರು ತಮ್ಮ ಅಮರಕಲಾವೃಂದ ಅಥವಾ ಅಮರಪ್ರಿಯಾ ಕಲಾಬಳಗದಿಂದ ಪ್ರಯೋಗಿಸಿದರು. ಈ ನಾಟಕಕ್ಕೆ ನಿರ್ದೇಶನ ಹಾಗೂ ಸಂಗೀತವನ್ನು ನೀಡಿದರು. ಬಸವಕಲ್ಯಾಣದ ಜಾತ್ರೆಯಲ್ಲಿ ಈ ನಾಟಕ ಪ್ರಯೋಗಿಸುವ ದಿನ ಅಮರಪ್ರಿಯರೇ ಬಸವಣ್ಣನಾಗಿ ಮನೋಹರವಾಗಿ ಅಭಿನಯಿಸಿದರು. ಅಂದಿನಿಂದ ಯಾವುದೇ ಶರಣರ ನಾಟಕಗಳಲ್ಲಿ ಅಮರಪ್ರಿಯರೇ ಬಸವಣ್ಣನವರು ಎಂಬುದು ನಿಶ್ಚಿತವಾಗಿಬಿಟ್ಟಿದೆ.

1998ರಿಂದ ಹೆಚ್ಚಾಗಿ ಅಮರಪ್ರಿಯರು ಕಲ್ಯಾಣದ ಶರಣರನ್ನೇ ಕುರಿತು ನಾಟಕಗಳನ್ನು ವಿಶಿಷ್ಟ ರೀತಿಯಲ್ಲಿ ತಾವೇ ಬರೆದು ಸಂಗೀತ ನೀಡಿ, ಒಂದು ಪಾತ್ರವನ್ನು ಅವರೇ ಅಭಿನಯಿಸಿ ಕಲ್ಯಾಣ ಕರ್ನಾಟಕ, ಕಿತ್ತೂರು ಕರ್ನಾಟಕದ ಪ್ರೇಕ್ಷಕರ ಮನಗೆದ್ದಿದ್ದಾರೆ. ಅವುಗಳಲ್ಲಿ ಪ್ರಮುಖವಾದ ನಾಟಕಗಳು ಮೋಳಿಗೆ ಮಾರಯ್ಯ, ಕಿನ್ನರಿ ಬ್ರಹ್ಮಯ್ಯ, ನೀರಹಾವರೆ ಅಕ್ಕಮಹಾದೇವಿ.

ಶ್ರೀಯುತರ ರಂಗ ಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.



## ವಜ್ರಕುಮಾರ ಕಿವುಡೆ

ಸುಮಾರು ನಾಲ್ಕು ದಶಕಗಳಷ್ಟು ಹಳೆಯದಾದ ಗುಲ್ಬರ್ಗಾದ ಪ್ರಸಿದ್ಧ ಸಾಂಸ್ಕೃತಿಕ, ಸಾಹಿತ್ಯಕ ಸಂಘಟನೆ; 'ನೃಪತುಂಗ ಬರಹಗಾರರ ಮತ್ತು ಕಲಾವಿದರ ಸಂಘ' ದ ಅಧ್ಯಕ್ಷರಾದ ಶ್ರೀ ವಿ.ಜಿ.ಕಿವಡೆಯವರು ಬಿ.ಇ. ಪದವೀಧರರು. ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘಟನೆಗಳಲ್ಲಿ ಸಕ್ರಿಯವಾಗಿ ಭಾಗಿಯಾಗುವುದರ ಮೂಲಕ ಜನಜಾಗೃತಿ ಮೂಡಿಸುವ ಸಮಾಜಮುಖಿ ರಂಗಕರ್ಮಿಯಾಗಿದ್ದಾರೆ. 30ಕ್ಕೂ ಹೆಚ್ಚು ರಂಗನಾಟಕ, ಬೀದಿ ನಾಟಕ, ರೇಡಿಯೋ ನಾಟಕ ಮತ್ತು ದೂರದರ್ಶನ ನಾಟಕಗಳನ್ನು ಸಿದ್ಧಗೊಳಿಸಿ, ಅವುಗಳಲ್ಲಿ ನಟರಾಗಿ, ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ್ದಾರೆ. ಬೆಂಗಳೂರು ದೂರದರ್ಶನದಲ್ಲಿ ಪ್ರಥಮ ಕನ್ನಡ

ನಾಟಕವಾದ 'ಪರಿಸ್ಥಿತಿ' ಯನ್ನು ನಿರ್ದೇಶನ ಮಾಡಿದ ಹಿರಿಮೆ ಇವರದಾಗಿದೆ. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಜಿಲ್ಲಾ ಘಟಕವಾದ ಜಿಲ್ಲಾ ವಿಜ್ಞಾನ ಸಮಿತಿಯ ಗೌರವಾಧ್ಯಕ್ಷರಾಗಿ, ಬೆಳ್ಳಿಮಂಡಲದ ಅಧ್ಯಕ್ಷರಾಗಿ ಗುಲ್ಬರ್ಗಾ ಜಿಲ್ಲಾ ಸಮುದಾಯ ಘಟಕದ ಸ್ಥಾಪಕರಾಗಿ, ರಂಗಮಾಧ್ಯಮ, ಜನರಂಗಭೂಮಿ ಸಂಸ್ಥೆಗಳಲ್ಲಿ ನಟ, ನಿರ್ದೇಶಕರಾಗಿ ರಂಗಸೇವೆ ಮಾಡಿದ್ದಾರೆ. ಗುಲ್ಬರ್ಗಾ ಫಿಲ್ಮ್‌ಕ್ಲಬ್‌ನ ಅಧ್ಯಕ್ಷರಾಗಿ ಹಲವಾರು ಸರಕಾರಿ, ಅರೆಸರಕಾರಿ ಸಂಸ್ಥೆಗಳಿಗೆ ಸಾಕ್ಷ್ಯಚಿತ್ರ ನಿರ್ಮಾಣಮಾಡಿ ಅವುಗಳ ನಿರ್ದೇಶನವನ್ನು ಮಾಡಿರುತ್ತಾರೆ.

ಶ್ರೀಯುತರ ರಂಗ ಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ಪ್ರಶಸ್ತಿ ನೀಡಿ ಇವರನ್ನು ಗೌರವಿಸಿದೆ.

---



## ಹುಲುಗಪ್ಪ ಕಟ್ಟಿಮನಿ

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಯವರಾದ ಶ್ರೀ ಹುಲುಗಪ್ಪ ಕಟ್ಟಿಮನಿಯವರು ತಮ್ಮ ಪಿಯುಸಿ ಶಿಕ್ಷಣದ ನಂತರ ಆಯ್ಕೆಮಾಡಿಕೊಂಡಿದ್ದು ರಂಗಭೂಮಿ. ಖ್ಯಾತ ನೀನಾಸಂ ಸಂಸ್ಥೆಯಿಂದ 1985ರಲ್ಲಿ ನಾಟಕದಲ್ಲಿ ಡಿಪ್ಲೊಮೊ ಪಡೆದು 1989ರಿಂದ ಮೈಸೂರಿನ ರಮಗಾಯಣದಲ್ಲಿ ಡಾ.ಬಿ.ವಿ.ಕಾರಂತರ ಒತ್ತಾಸೆಯಿಂದ ಕಲಾವಿದನಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದರ ಜೊತೆಜೊತೆಗೆ ಇವರು ಹಲವಾರು ಉಪಯುಕ್ತ ರಂಗಶಿಬಿರಗಳನ್ನು ರಾಜ್ಯದ ವಿವಿಧೆಡೆ ನಡೆಸಿ, ಅನೇಕರಲ್ಲಿ ರಂಗಾಸಕ್ತಿ ಬೆಳೆಯುವಲ್ಲಿ ಗಣನೀಯ ಪಾತ್ರವಹಿಸಿದ್ದಾರೆ.

ಇವುಗಳಲ್ಲಿ ಇವರು 1997ರಲ್ಲಿ ಬಳ್ಳಾರಿಯ ಕೇಂದ್ರ ಕಾರಾಗೃಹದಲ್ಲಿ ಅದರ ವಾಸಿಗಳಿಗಾಗಿ 45 ದಿನ ನಡೆಸಿದ 'ಮನ ಪರಿವರ್ತನಾ ರಂಗಶಿಬಿರ' ಪರಿಣಾಮಕಾರಿಯಾಗಿಯೂ, ಅರ್ಥಪೂರ್ಣವಾಗಿಯೂ ಏರ್ಪಾಡಾಗಿದ್ದಿತು. ಖೈದಿಗಳ ಮನಸ್ಸಿಗೆ ಸಾಂತ್ವನ ನೀಡುವಲ್ಲಿ ಈ ಶಿಬಿರ ಯಶಸ್ಸು ಕಂಡಿತು. ದೇಶದ ಕಾರಾಗೃಹ ಇತಿಹಾಸದಲ್ಲಿ ನಡೆದ ಪ್ರಪ್ರಥಮ ರಂಗಭೂಮಿ ಚಟುವಟಿಕೆ ಇದಾಗಿದೆ. ಮರುವರ್ಷ 1998ರಲ್ಲಿ ಈ ಪ್ರಯತ್ನವನ್ನು ಶ್ರೀಯುತರು ಮುಂದುವರೆಸಿ, ಮೈಸೂರಿನ ಕಾರಾಗೃಹ ನಿವಾಸಿಗಳಿಗೆ ರಂಗಶಿಬಿರ ನಡೆಸಿ, ಮೊಟ್ಟಮೊದಲ ಬಾರಿಗೆ ಅವರನ್ನು ಕಾರಾಗೃಹದಿಂದ ಹೊರಕ್ಕೆ ಕರೆತಂದು, ಸಾರ್ವಜನಿಕವಾಗಿ ನಾಡಿನಾದ್ಯಂತ 'ಮಾರನಾಯಕ' ನಾಟಕದ ಪ್ರದರ್ಶನಗಳನ್ನು ಏರ್ಪಡಿಸಿದರು. ಮರುವರ್ಷ ಮೈಸೂರಿನ ಕಾರಗೃಹದಲ್ಲಿ ಖೈದಿಗಳಿಂದ 'ರಕ್ತಾಕ್ಷಿ' ನಾಟಕವನ್ನೂ, 2000ದಲ್ಲಿ ಬೆಂಗಳೂರು ಕೇಂದ್ರ ಕಾರಾಗೃಹದಲ್ಲಿ ಶೇಕ್ಸ್‌ಪಿಯರ್‌ನ 'ಜೂಲಿಯಸ್ ಸೀಸರ್' (ಕೆ.ಎಸ್.ಭಗವಾನ್ ಅನುವಾದಿತ) ನಾಟಕ ಪ್ರದರ್ಶನಗಳನ್ನೇರ್ಪಡಿಸಿದರು. 2003ರಲ್ಲಿ ಬೆಂಗಳೂರಿನ ಕೇಂದ್ರ ಕಾರಾಗೃಹದ ಮಹಿಳಾ ಖೈದಿಗಳಿಗಾಗಿ ಭೀಷ್ಮ ಸಹಾನಿಯವರ 'ಮಾಧವಿ', 2005ರಲ್ಲಿ ಮೈಸೂರಿನ ಕಾರಾಗೃಹದಲ್ಲಿ 'ತಲೆದಂಡ' 2008ರಲ್ಲಿ ಕಾರಾಗೃಹವಾಸಿಗಳ ನಾಟಕೋತ್ಸವ, ಇವು ಇವರ ಸಮಾಜಮುಖಿ ರಂಗಚಟುವಟಿಕೆಗಳು. ರಂಗಾಯಣದ ಮೂಲಕ 1992ರಲ್ಲಿ ಅಮೆರಿಕಾ ಹಾಗು 1994ರಲ್ಲಿ ಜರ್ಮನಿಗಳಲ್ಲಿ ನಾಟಕ ಪ್ರದರ್ಶನ ನೀಡಿರುವ ಶ್ರೀಯುತರು ಸುಮಾರು 25 ವರ್ಷಗಳಿಂದ ಮಕ್ಕಳಿಗಾಗಿ, ಯುವಕರಿಗಾಗಿ, ಹಿರಿಯರಿಗಾಗಿ ವಿವಿಧ ರಂಗಶಿಬಿರಗಳನ್ನೇರ್ಪಡಿಸಿದ್ದಾರೆ.

ಈವರೆಗೆ ಸುಮಾರು 22 ಖ್ಯಾತ ನಾಟಕಗಳಲ್ಲಿ ಅಭಿನಯಿಸಿ, 40 ನಾಟಕಗಳನ್ನು ನಿರ್ದೇಶಿಸಿರುವ ಯಶಸ್ವಿ ರಂಗಕರ್ಮಿ ಶ್ರೀ ಕಟ್ಟಿಮನಿಯವರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ರಾಮಚಂದ್ರ ಸೀತಾರಾಮ ಹೆಗಡೆ ಹಾರುಗಾರ

ಏಳನೇ ಇಯತ್ತೆ ಮಾತ್ರ ಶಿಕ್ಷಣ ಮಟ್ಟ ಮುಟ್ಟಿರುವ ಶ್ರೀ ಹಾರುಗಾರರಿಗೆ ರಂಗಭೂಮಿಯೇ ವಿಶ್ವವಿದ್ಯಾಲಯವಾಗಿ, ಯಾವುದೇ ಉತ್ತಮ, ನುರಿತ ರಂಗಕರ್ಮಿಗೆ ಸರಿಸಾಟಿಯಾಗುವ ರಂಗಸೇವೆ ಮಾಡಿದ್ದಾರೆ. ಸುಮಾರು 73 ವರ್ಷ ಹರೆಯದ ಶ್ರೀಯುತರು ತಮ್ಮ ಜೀವಿತಾವಧಿಯ 53 ವರ್ಷಗಳನ್ನೂ ರಂಗಸಾಧನೆಗಾಗಿ ಮುಡುಪಿಟ್ಟಿರುವ ಹಿರಿಯ ಕಲಾವಿದ. ಮೂಲತಃ ಕೃಷಿಕರಾದರೂ ಗ್ರಾಮೀಣ ರಂಗಭೂಮಿಗೆ ಇವರು ಸಲ್ಲಿಸಿರುವ ಸೇವೆ ಅನನ್ಯ. ತಮ್ಮ ಇಳಿಪ್ರಾಯದಲ್ಲಿಯೂ ರಂಗಭೂಮಿ ನಂಟನ್ನು ಕಾಪಾಡಿಕೊಂಡಿರುವ ಶ್ರೀಯುತರು ರಚಿಸಿ ನಿರ್ದೇಶಿಸಿದ ಪ್ರಮುಖ ನಾಟಕಗಳೆಂದರೆ ಅಶ್ವಮೇಧ, ಉಷಾ ಸ್ವಯಂವರ, ಕುರುಕ್ಷೇತ್ರ, ಕೃಷ್ಣ ಗಾರುಡಿ, ಚೌತಿಚಂದ್ರ ಮತ್ತು ಸಿಂದೂರವಧೆ. ಇವಲ್ಲದೆ ಹಲವಾರು ಸಾಮಾಜಿಕ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಇವರ ಮೇಲಿನ ನಾಟಕಗಳು ಹಲವೆಡೆ ಹತ್ತಾರು ಪ್ರದರ್ಶನಗಳನ್ನು ಕಂಡಿವೆ.

ಚಿತ್ರಕಲೆಯಲ್ಲಿಯೂ ಪರಿಶ್ರಮ ಹೊಂದಿರುವ ಶ್ರೀಯುತರ ಕಲಾಕೃತಿಗಳು ಜಿಲ್ಲೆಯಲ್ಲಿ ಮನೆಮಾತಾಗಿವೆ. ಗೋಳಿಯ ಸಿದ್ಧಿವಿನಾಯಕ ನಾಟ್ಯಕಲಾ ಸಂಘ ಏರ್ಪಡಿಸಿದ ಯಶಸ್ವೀ ರಂಗಪ್ರಯೋಗಗಳಿಗೆ ಇವರು ಪ್ರೇರಕ ಶಕ್ತಿಯಾಗಿದ್ದಾರೆ. ಕಂದ ಪದ್ಯಗಳನ್ನು ಭಕ್ತಿಭಾವ ಪರವಶರಾಗಿ ಹಾಡುವ ಕಂಠಶ್ರೀಯನ್ನು ಹೊಂದಿರುವ ಇವರಿಗೆ ಶ್ರೀ ಸೊಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ ಶ್ರೀ ಶಂಕರಜಯಂತಿಯಂದು 'ಕಲಾವಿಶಾರದ' ಬಿರುದನ್ನಿತ್ತು ಸನ್ಮಾನಿಸಿದೆ.

ಶ್ರೀಯುತರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2010–11ರ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಬಸವರಾಜ ಬೆಂಗೇರಿ (ರಂಗ ಪುಸ್ತಕ ಪ್ರಶಸ್ತಿ)

ಗುಡಿಗೇರಿ ಎನ್. ಬಸವರಾಜವರ ಹೆಸರು ಕರ್ನಾಟಕ ವೃತ್ತಿರಂಗಭೂಮಿಗೆ ಚಿರಪರಿಚಿತ. ಇವರ ರಂಗಭೂಮಿ ಸೇವೆ ಅಪಾರ, ಅನನ್ಯ ಅನುಕರಣೀಯ. ರೈತ ಕುಟುಂಬದಿಂದ ರಂಗಭೂಮಿಗೆ ಬಂದು ಇವರು ಮಾಡಿದ ಸಾಧನೆಯೆಂದರೆ ಶ್ರೀ ಸಂಗಮೇಶ್ವರ ನಾಟ್ಯ ಸಂಘದ ಮೂಲಕ ಕರ್ನಾಟಕದ ಮೂಲೆಮೂಲೆಗಳಲ್ಲಿ ನಾಟಕದ ಕಂಪನಿ ಕ್ಯಾಂಪ್ ಮಾಡಿ, ಅವುಗಳ ಮೂಲಕ ಜನಪ್ರಿಯ ಸಾಮಾಜಿಕ, ಪೌರಾಣಿಕ ಹಾಗೂ ಐತಿಹಾಸಿಕ ನಾಟಕಗಳನ್ನು ಜನತೆಗೆ ನೀಡಿದ್ದು, ಕರ್ನಾಟಕದಲ್ಲಿ ಈ ಹಿಂದಿನ 50 ವರ್ಷಗಳಲ್ಲಿ ಬಂದುಹೋಗಿರುವ ಶೇಕಡಾ ಎಂಬತ್ತರಷ್ಟು ಕಲಾವಿದರು ಗುಡಿಗೇರಿ ಕಂಪನಿಯಲ್ಲಿ ಸೇವೆಸಲ್ಲಿಸಿ, ತರಬೇತಿ ಹೊಂದಿ ಮುಂದೆ ಖ್ಯಾತನಾಮರಾದವರು.

ಇಂತಹ ವೈಶಿಷ್ಟ್ಯಪೂರ್ಣ ವ್ಯಕ್ತಿಯ ಸಾಹಸಗಾಥೆಯನ್ನು ಪುಸ್ತಿಕೆಯಲ್ಲಿ ದಾಖಲಿಸುವ ಪ್ರಯತ್ನ ಮಾಡಿರುವವರು ಶ್ರೀ ಬಸವರಾಜ ಬೆಂಗೇರಿ. ಇವರು ಈಗಾಗಲೇ ನಾಟಕಕಾರರೆಂದು ಹೆಸರುಮಾಡಿರುವ ಲೇಖಕ. ಇವರ ಎನ್. ಬಸವರಾಜರ ಕುರಿತ ರಂಗಮಾಹಿತಿ ಪುಸ್ತಿಕೆ ರಂಗಸಂಬಂಧಿ ದಾಖಲೆಗಳಲ್ಲಿ ಪ್ರಮುಖ ಕೃತಿಯಾಗಿದೆ. ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯ ನಿರೂಪಣೆ, ವಿಷಯಗಳು ಮನಸ್ಸಿಗೆ ನಾಟುತ್ತವೆ.

"ರಂಗ ನಟಸಾರ್ವಭೌಮ ಎನ್. ಬಸವರಾಜ ಆತ್ಮಕಥನ" ಶ್ರೀಯುತರ ಈ ರಂಗಸಂಬಂಧಿ ಪ್ರಕಟಣೆಯನ್ನು ಪುರಸ್ಕರಿಸಿ ಕರ್ನಾಟಕ ನಾಟಕ ಅಕಾಡೆಮಿ ಇವರಿಗೆ 2010ರ ಪುಸ್ತಕ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

# ಸುವರ್ಣ ರಂಗಸಂಭ್ರಮದ ರಂಗಪ್ರಶಸ್ತಿ ಪುರಸ್ಕೃತರು – 2011



## ಡಾ. ಎಚ್. ಶಾಂತಾರಾಮ್ (ಜೀವಮಾನ ರಂಗಸಾಧನೆ ಪ್ರಶಸ್ತಿ)

ಬಾಲ್ಯದಿಂದಲೂ ನಾಟಕ ಕ್ಷೇತ್ರದಲ್ಲಿ ಆಸಕ್ತಿ ಹೊಂದಿದ್ದ ಡಾ.ಶಾಂತಾರಾಮ್ ಬೆಂಗಳೂರಿನಲ್ಲಿ ಸೆಂಟ್ರಲ್ ಕಾಲೇಜು ವಿದ್ಯಾರ್ಥಿಯಾಗಿ, ಲಂಡನ್‌ನಲ್ಲಿ ಪಿ.ಹೆಚ್.ಡಿ ಪಡೆದು, ದೆಹಲಿ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ, ಹಲವಾರು ಪ್ರಮುಖ ಶೈಕ್ಷಣಿಕ ಸಂಸ್ಥೆಗಳಲ್ಲಿ ಉನ್ನತ ಹುದ್ದೆಗಳಲ್ಲಿ ಸೇವೆ ಮಾಡಿ, ಪ್ರಸ್ತುತ ಮಣಿಪಾಲದ ಅಕಾಡೆಮಿ ಆಫ್ ಜನರಲ್ ಎಜುಕೇಶನ್‌ನಲ್ಲಿ ಆಡಳಿತಾಧಿಕಾರಿಯಾಗಿದ್ದಾರೆ. ಇವರ ರಂಗಸಾಧನೆಯ ಮೇಲೆ ಬೆಂಗಳೂರು ಹಾಗೂ ಇಂಗ್ಲೆಂಡ್‌ಗಳಲ್ಲಿ ಜಾಗತಿಕ ಮಟ್ಟದ ರಂಗಭೂಮಿಯ ಪ್ರಭಾವ ಕಾಣುತ್ತದೆ. ಸುಮಾರು 50 ವರ್ಷಗಳ ಕಾಲ ಇವರ ರಂಗಸೇವೆ ಸಂದಿದೆ. 1962ರಲ್ಲಿ ಕಸ್ತೂರಬಾ ಮೆಡಿಕಲ್ ಕಾಲೇಜಿನಲ್ಲಿ ಕೊಪ್ಪಿಕರ್ ಸ್ಮಾರಕ ನಾಟಕ ಸ್ಪರ್ಧೆಯನ್ನು ಹುಟ್ಟುಹಾಕಿ ಅದನ್ನು 13 ವರ್ಷ ನಡೆಸಿದರು. ಇಪ್ಪತ್ತೇಳು ವರ್ಷಗಳ ಕಾಲ ಉಡುಪಿಯ ರಂಗಭೂಮಿ ನಾಟಕದ ಸ್ಪರ್ಧಾಸಮಿತಿಯ ಅಧ್ಯಕ್ಷರಾಗಿದ್ದರು. ಸ್ವತಃ ನಾಟಕಕಾರರೂ ಆದ ಶ್ರೀಯುತರು ಉಡುಪಿ ಹಾಗೂ ಸುತ್ತಮುತ್ತಲ ಪ್ರದೇಶಗಳಲ್ಲಿ ನಾಟಕಗಳನ್ನು ನಿರ್ದೇಶಿಸಿದ್ದಾರೆ. 1976ರಲ್ಲಿ ಅಸಂಗತ ನಾಟಕ ವೇದಿಕೆಯನ್ನು ಹುಟ್ಟುಹಾಕಿದರು.

ಇವರ ಅತ್ಯುನ್ನತ ಸೇವೆ ಎಂದರೆ 1997ರಲ್ಲಿ ಕುಂದಾಪುರದ ಭಂಡಾರ್ಕರ್ಸ್ ಕಾಲೇಜಿನಲ್ಲಿ ರಂಗ ಅಧ್ಯಯನ ಕೇಂದ್ರದ ಸ್ಥಾಪನೆ. ಪ್ರಸ್ತುತ ಇದು ನಾಡಿನ ಪ್ರತಿಷ್ಠಿತ ನಾಟಕ ಶಾಲೆ ಆಗಿದೆ. ಇಲ್ಲಿ ನಿರಂತರ ನಾಟಕ ಚಟುವಟಿಕೆಗಳು ನಡೆಯುತ್ತಿವೆ. ಅಲ್ಲದೆ 1976ರಿಂದ ಇದೇ ಕಾಲೇಜಿನಲ್ಲಿ ಯಕ್ಷಗಾನ ತಾಳ ಮದ್ದಲೆಗಳನ್ನು ನಡೆಸಿ, ಯಕ್ಷಗಾನ ಕ್ಷೇತ್ರಕ್ಕೂ ಸೇವೆ ಸಲ್ಲಿಸಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ಜೀವಮಾನ ರಂಗಸಾಧನೆ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಬೈಲೂರು ಬಾಲಚಂದ್ರರಾವ್ (ಜೀವಮಾನ ರಂಗಸಾಧನೆ ಪ್ರಶಸ್ತಿ)

ಕಾರ್ಕಳ ತಾಲ್ಲೂಕಿನ ಬೈಲೂರಿನಲ್ಲಿ 1945ರಲ್ಲಿ ಜನಿಸಿದ ಶ್ರೀ ಬಾಲಚಂದ್ರರಾವ್ ರಂಗನಟ, ನಿರ್ದೇಶಕ, ನಾಟಕಕಾರ ಹಾಗೂ ಸಂಘಟಕರಾಗಿ ಕಳೆದ ನಾಲ್ಕು ದಶಕಗಳಿಂದ ನೆರೆರಾಜ್ಯವಾದ ಮುಂಬೈನಲ್ಲಿ ಕನ್ನಡ ರಂಗಭೂಮಿ ಸೇವೆಯಲ್ಲಿ ತೊಡಗಿದ್ದಾರೆ. ಇವರ ಇಡೀ ಕುಟುಂಬ ವಿವಿಧ ರಂಗಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದು, ಮುಂಬೈನ ಹವ್ಯಾಸಿ ರಂಗಕ್ಷೇತ್ರಕ್ಕೆ ಚಿರಪರಿಚಿತವಾಗಿದೆ. ಮುಂಬೈನ ಖ್ಯಾತ ಕಲಾಸಂಸ್ಥೆಯಾದ ಕನ್ನಡ ಕಲಾಕೇಂದ್ರದ ಅಧ್ಯಕ್ಷರಾಗಿ ಅನೇಕ ವರ್ಷಗಳಿಂದ ಜನಪ್ರಿಯ ಜನೋಪಯೋಗಿ, ಸಾಮಾಜಿಕ, ಸಾಂಸ್ಕೃತಿಕವಾಗಿ ಆಯೋಜಿಸುತ್ತಿರುವ ಶ್ರೀ ಬಾಲಚಂದ್ರ ರಾವ್ ಹತ್ತಾರು ನಾಟಕಗಳ ನೂರಾರು ಪ್ರಯೋಗಗಳಲ್ಲಿ ನಟಿಸಿ, ನೂರಾರು ಪ್ರಯೋಗಗಳನ್ನು ಕಂಡಿರುವ ಹಲವಾರು ಸಾಮಾಜಿಕ, ಪೌರಾಣಿಕ, ಚಾರಿತ್ರಿಕ ಖ್ಯಾತ ಕನ್ನಡ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಇತ್ತೀಚೆಗೆ ಆದಿ ಶಂಕರಾಚಾರ್ಯ ನಾಟಕವನ್ನು ಬರೆದು

ನಿರ್ದೇಶಿಸಿ ಅದರಲ್ಲಿ ನಟಿಸಿದ್ದಾರೆ. ತಮ್ಮ ಐದನೇ ವಯಸ್ಸಿನಲ್ಲಿ ನಟನಾಗಿ ರಂಗಪ್ರವೇಶ ಮಾಡಿದ ಶ್ರೀಯುತರು ಕನ್ನಡ ಸಾರಸ್ವತ ಲೋಕಕ್ಕೆ ತಮ್ಮ ಲೇಖನಗಳ ಪ್ರವಾಸ ಕಥನಗಳ ಮಕ್ಕಳ ನಾಟಕಗಳ ಹಾಗೂ ದೊಡ್ಡವರ ನಾಟಕಗಳ ಮೂಲಕ ಗಣನೀಯ ಸೇವೆ ಸಲ್ಲಿಸಿದ್ದಾರೆ. ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ಜೀವಮಾನ ರಂಗಸಾಧನೆ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಕೆ. ಚೆನ್ನಪ್ಪ (ಜೀವಮಾನ ರಂಗಸಾಧನೆ ಪ್ರಶಸ್ತಿ)

ನಾಟಕವು ಒಂದು ಸಂಯುಕ್ತ ಕಲೆ, ನಾಟಕಕಾರ ನಾಟಕವನ್ನು ಬರೆದರೆ ನಟ ಅಭಿನಯಿಸುತ್ತಾನೆ. ನಿರ್ದೇಶಕ ನಿರ್ದೇಶಿಸುತ್ತಾನೆ. ಉಳಿದವರು ರಂಗಸಜ್ಜಿಕೆ, ಪ್ರಸಾದನ, ಬೆಳಕು, ವಸ್ತ್ರವಿನ್ಯಾಸ, ಈ ಎಲ್ಲ ಕಾರ್ಯಗಳನ್ನು ನಿರ್ವಹಿಸಲು ಅಣಿಯಾಗುತ್ತಾರೆ. ಆದರೆ, ಈ ಎಲ್ಲರನ್ನೂ ಒಂದೆಡೆ ಸೇರಿಸಿ, ಅವರಿಗೆ ಊಟ, ವಸತಿ ನೀಡಿ, ನಾಟಕ ಪ್ರದರ್ಶನಕ್ಕಾಗಿ ಸುಸಜ್ಜಿತ ರಂಗಮಂದಿರವನ್ನು ಉಚಿತವಾಗಿ ನೀಡುವ ಸಹೃದಯರು ಬಹಳ ವಿರಳ. ಬಳ್ಳಾರಿಯ ರಾಘವ ಮೆಮೋರಿಯಲ್ ಅಸೋಸಿಯೇಷನ್‌ನ ಶ್ರೀ ಕೆ.ಚನ್ನಪ್ಪನವರು ಅಂತಹ ವಿರಳ, ಸರಳ ವ್ಯಕ್ತಿ. ಕರ್ನಾಟಕ–ಆಂಧ್ರ ಗಡಿನಾಡು ಪ್ರದೇಶದಲ್ಲಿ ತಮ್ಮ ರಾಘವ ಸಂಸ್ಥೆಯ ಮೂಲಕ ಸುಮಾರು ಅರವತ್ತೊಂದು ವರ್ಷಗಳಿಂದ ರಂಗಭೂಮಿಯನ್ನು ಪೋಷಿಸಿ, ಬೆಳಸುವಲ್ಲಿ ಈ ಸಂಸ್ಥೆ ಗಮನಾರ್ಹ ಪಾತ್ರವನ್ನುವಹಿಸಿದೆ.

ಸಹೃದಯತೆಯ ಸದಭಿರುಚಿಯ ಜನಪ್ರಿಯ ವ್ಯಕ್ತಿ, ಹವ್ಯಾಸಿ, ಆಧುನಿಕ ಪ್ರಯೋಗಶೀಲ ನಾಟಕಗಳಲ್ಲದೆ ಸಹಾಯಾರ್ಥ ನಾಟಕಗಳಿಗೂ ಶ್ರೀ ಚನ್ನಪ್ಪನವರು ತಮ್ಮ ಸಂಸ್ಥೆಯಲ್ಲಿ ಅವಕಾಶ ಕಲ್ಪಿಸಿದ್ದಾರೆ. ತಮ್ಮ ಮಾತೃಭಾಷೆ ತೆಲುಗಾದರೂ ಕನ್ನಡ ರಂಗಭೂಮಿಯ ಬೆಳವಣಿಗೆಗೆ ಇವರ ಸೇವೆ ಅಪಾರ. ಕಳೆದ ಮೂರು ವರ್ಷಗಳಿಂದ ತೆಲುಗು ಹಾಗೂ ಕನ್ನಡ ಕಲಾವಿದರಿಗೆ ರಾಘವ ಪ್ರಶಸ್ತಿಯನ್ನು ತಾವೇ ಸ್ಥಾಪಿಸಿ, ತಮ್ಮ ಸಂಸ್ಥೆ ಮೂಲಕ ನೀಡುತ್ತಾ ಬಂದಿದ್ದಾರೆ. ಜನಪ್ರಿಯ ಕಲಾಪೋಷಕರಾದ ಶ್ರೀ ಚನ್ನಪ್ಪನವರು 2000ದ ಇಸವಿಯಿಂದ ಈ ಸಂಸ್ಥೆಯ ಅಧ್ಯಕ್ಷರಾಗಿದ್ದಾರೆ. ತೆಲುಗು ಮತ್ತು ಕನ್ನಡ ರಂಗಸಮ್ಮಿಲನಕ್ಕೆ ಕಾರಣಕರ್ತರಾಗಿರುವ ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ಜೀವಮಾನ ರಂಗಸಾಧನೆ ಪ್ರಶಸ್ತಿ ನೀಡಿ ಗೌರವಿಸಿದೆ.

---



## ಎಂ.ಎಸ್. ವೆಂಕಟರಾಂ ಕುಪ್ಪ

ಉತ್ತಮ ತಬಲವಾದಕರು ಹಾಗೂ ಚಿತ್ರಕಲಾವಿದರಾದ ತಂದೆ, ಸಂಪ್ರದಾಯದ ಹಾಡುಗಾರರಾದ ತಾಯಿಯ ಕಲಾಪ್ರತಿಭೆಯನ್ನು ಮೈಗೂಡಿಸಿಕೊಂಡ, 82 ವರ್ಷ ವಯಸ್ಸಿನ ಎಂ.ಎಸ್. ವೆಂಕಟರಾಮು ಆ ಕಾಲದ ಲೋಯರ್ ಸೆಕಂಡರಿ ಪಾಸು ಮಾಡಿ, 1943ರಲ್ಲಿ ಹೆಸರಾಂತ ಚಿತ್ರನಟ, ಹೆಚ್.ಆರ್. ಶಾಸ್ತ್ರಿ ಅವರ ಕಂಪನಿಯ ಶ್ರೀಕೃಷ್ಣಲೀಲಾ ನಾಟಕದ ಕೃಷ್ಣನ ಪಾತ್ರದ ಮೂಲಕ ರಂಗಭೂಮಿ ಪ್ರವೇಶ ಮಾಡಿದರು. ಸುಬ್ಬಯ್ಯನಾಯ್ಡು ಅವರ ಸಾಹಿತ್ಯ ಸಾಮ್ರಾಜ್ಯ ಮಂಡಳಿಯಲ್ಲಿ ಪೋಷಕ ನಟನಾಗಿ ಮುಂದುವರಿದು, 1948ರಲ್ಲಿ ಮದ್ರಾಸಿಗೆ ತೆರಳಿ, ಹಲವು ಚಿತ್ರಗಳಲ್ಲಿ ಸಣ್ಣಪುಟ್ಟ ಪಾತ್ರವಹಿಸಿದ ನಂತರ ಅನಿವಾರ್ಯತೆಯಿಂದ ತಾಯಿನಾಡಿಗೆ ಮರಳಿದಾಗ, ಹಲವಾರು ವೃತ್ತಿಕಂಪನಿಗಳು ಇವರಿಗೆ ಆಸರೆಯಾಗಿ ನಿಂತವು.

ಪ್ರಸ್ತುತ ಕುಷ್ಟ ಗ್ರಾಮದಲ್ಲಿ ಅರ್ಚಕರಾಗಿ ಸೇವೆ ಸಲ್ಲಿಸುತ್ತಿರುವ ಶ್ರೀಯುತರು ಸಾಂದರ್ಭಿಕವಾಗಿ ಹರಿಕಥೆಯನ್ನು ಮಾಡಿರುತ್ತಾರೆ. ಉತ್ತಮ ಕಂಠಸಿರಿಯನ್ನು ಹೊಂದಿರುವ ಇವರು ವಿದ್ವಾನ್ ಆರ್.ಪರಮಶಿವನ್ ಅವರು ಹೊರತಂದಿರುವ ಪೌರಾಣಿಕ ರಂಗಗೀತೆಗಳ ಧ್ವನಿ ಸುರಳಿಗಳಲ್ಲಿಯೂ ಹಾಡಿದ್ದಾರೆ.

ತಮ್ಮ ಇಳಿವಯಸ್ಸಿನಲ್ಲಿಯೂ ರಂಗದಮೇಲೆ ಅಭಿನಯಿಸುವ ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಬಿ.ಆರ್. ಕರನಂದಿ

ಉತ್ತರ ಕರ್ನಾಟಕದ ಬಾದಾಮಿ ತಾಲ್ಲೂಕಿನ ಗುಳೇದಗುಡ್ಡದ ಬಸವರಾಜ ರಾಚಪ್ಪ ಕರನಂದಿ ಅವರು ತಾತನ ಕಾಲದಿಂದಲೂ ರಂಗಸಂಪರ್ಕದಲ್ಲಿ ಬೆಳದವರು. ಏಕೆಂದರೆ ಇವರ ಅಜ್ಜ, ಗುರುಶಾಂತಪ್ಪನವರು ನಾಟಕ ಕಂಪನಿಗಳಿಗೆ ಕಿರೀಟಗಳನ್ನು ಹಾಗೂ ಜರತಾರಿ ಟೋಪಿಗಳನ್ನು ತಯಾರಿಸುತ್ತಿದ್ದರು. ನಂತರದ ದಿನಗಳಲ್ಲಿ ಈ ಕಾಯಕ ಮುಂದುವರೆದು ಪೌರಾಣಿಕ, ಐತಿಹಾಸಿಕ ಹಾಗೂ ಸಾಮಾಜಿಕ ನಾಟಕಗಳಿಗೂ ಉಡುಪು ಹಾಗೂ ರಂಗಪರಿಕರಗಳನ್ನು ಒದಗಿಸುವುದನ್ನು ಇವರು ವೃತ್ತಿಯಾಗಿಸಿಕೊಂಡರು. ಗ್ರಾಮೀಣ ಪ್ರದೇಶದಲ್ಲಿ ಗ್ಯಾಸ್‌ದೀಪದ ಬೆಳಕಿನಲ್ಲಿ ನಾಟಕ ಪ್ರದರ್ಶನ ಏರ್ಪಡಿಸುತ್ತಿದ್ದ ಕಾಲದಲ್ಲಿ ಹವ್ಯಾಸಿ ನಾಟಕಗಳಿಗೆ ಸೀನರಿ ಹಾಗೂ ಉಡುಪುಗಳನ್ನು ಬಾಡಿಗೆ ರೂಪದಲ್ಲಿ ಕೊಡುತ್ತಿದ್ದರು.

ಹೀಗೆ ಮೂರು ತಲೆಮಾರಿನ ಕರನಂದಿ ಕುಟುಂಬ ಸುಮಾರು 85 ವರ್ಷಗಳಿಂದ ಸಾಧನೆ ಹಾಗೂ ಸೇವೆ ನಡೆಸುತ್ತಿದೆ. ಗುಳೇದಗುಡ್ಡದ ತಮ್ಮ ಶಿವಕೃಪ ನಾಟ್ಯಮಂದಿರದಲ್ಲಿ ರಾಜ್ಯದ ಖ್ಯಾತ ವೃತ್ತಿಕಂಪನಿಗಳೇ ಅಲ್ಲದೆ, ಹವ್ಯಾಸಿ ಕಂಪನಿಗಳ ಪ್ರದರ್ಶನಗಳನ್ನು ಏರ್ಪಡಿಸುತ್ತಿವೆ. ಪ್ರಸ್ತುತ ಬಿ.ಆರ್. ಕರನಂದಿ ಅವರು ಈ ರಂಗಮಂದಿರವನ್ನು ಸುಸಜ್ಜಿತಗೊಳಿಸಿ, ನಿರಂತರ ರಂಗಚಟುವಟಿಕೆಗಳನ್ನು ನಡೆಸುತ್ತ ರಂಗಸಂಘಟಕರಾಗಿ ಸೇವೆ ಮಾಡುತ್ತಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಬಿ. ಕಮಲಮ್ಮ

ಚಿತ್ರದುರ್ಗ ಜಿಲ್ಲೆಯ ಅದೇ ತಾಲ್ಲೂಕಿನ ಬಂಗಾರಕ್ಕನಹಳ್ಳಿಯ ಕಲಾವಿದೆ ಶ್ರೀಮತಿ ಕಮಲಮ್ಮ ಕಲೆಯನ್ನು ವೃತ್ತಿಯಾಗಿಸಿಕೊಂಡವರು. 1959ರಲ್ಲೇ ರಂಗಪ್ರವೇಶ ಮಾಡಿ, ನೂರಾರು ನಾಟಕಗಳಲ್ಲಿ ಅಭಿನಯಿಸಿ, ಜನಮನ ಗೆದ್ದವರು. ಇವರು ನಟಿಸಿದ ಸಾಮಾಜಿಕ, ಪೌರಾಣಿಕ ಹಾಗೂ ಐತಿಹಾಸಿಕ ನಾಟಕಗಳು ರಾಜ್ಯದ ವಿವಿಧೆಡೆ ಪ್ರದರ್ಶಿಸಲ್ಪಟ್ಟು ಜನಪ್ರಿಯತೆಗಳಿಸಿವೆ.

ಇವರು ನಟಿಸಿರುವ ಪ್ರಮುಖ ನಾಟಕಗಳೆಂದರೆ ದೇವದಾಸಿ, ಆದರ್ಶಪ್ರೇಮ, ಅಣ್ಣತಂಗಿ, ಕುರುಕ್ಷೇತ್ರ, ರಕ್ತರಾತ್ರಿ, ರಾಜಾವೀರ ಮದಕರಿನಾಯಕ, ದಾರಿದೀಪ, ಸಂಪೂರ್ಣ ರಾಮಾಯಣ, ಶನಿಪ್ರಭಾವ, ವೀರಧನಂಜಯ, ವೀರಮಾರ್ಕಂಡೇಯ, ಜಗಜ್ಯೋತಿ ಬಸವೇಶ್ವರ, ಹರಿಶ್ಚಂದ್ರ, ಕಲಿಕಂಠೀರವ ಮುಂತಾದವು.

ಉತ್ತಮ ಗಾಯಕಿಯೂ ಆದ ಶ್ರೀಮತಿ ಕಮಲಮ್ಮನವರು ಹಲವಾರು ಶಾಲಾ ಕಾಲೇಜುಗಳ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿಯೂ ಭಾಗವಹಿಸಿ ತಮ್ಮ ಕಲಾಪ್ರತಿಭೆ ಮೆರೆದಿದ್ದಾರೆ. ತಮ್ಮ ಜಿಲ್ಲೆಯ ಪ್ರಮುಖ ವೃತ್ತಿನಾಟಕ ಕಂಪನಿಗಳೊಡನೆ ಒಡನಾಟವನ್ನು ಹೊಂದಿರುವ ಇವರು ತಮ್ಮ ನಟನಾಭ್ಯಾಸವನ್ನು ಇಂದಿಗೂ ಮುಂದುವರೆಸಿದ್ದಾರೆ.

ಇವರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಎಂ.ವಿ. ಸುಬ್ಬಣ್ಣ

ಕಳೆದ 60 ವರ್ಷಗಳಿಂದ ನಿರಂತರ ರಂಗಸೇವೆಯಲ್ಲಿ ತೊಡಗಿರುವ ನಾಟಕ ದ್ರೋಣ ಬಿರುದಾಂಕಿತ ಎಂ.ವಿ.ಸುಬ್ಬಣ್ಣ ಬೆಂಗಳೂರು ಹೈಯರ್ ಸೆಕೆಂಡರಿ ಶಾಲೆಯಲ್ಲಿ (ಬಿಹೆಚ್.ಎಸ್) ಅಧ್ಯಾಪಕ ವೃತ್ತಿಯನ್ನು 40 ವರ್ಷಗಳ ಕಾಲ ನಿರ್ವಹಿಸಿ, ಪ್ರಸ್ತುತ ತಮ್ಮ ವಿಶ್ರಾಂತ ಜೀವನದಲ್ಲಿ ರಂಗದೀಪ್ತಿ- ಬೆಂಗಳೂರು ಸ್ಕೂಲ್ ಆಫ್ ಡ್ರಾಮಾ ಎಂಬ ರಂಗತರಬೇತಿ ಶಾಲೆಯನ್ನು ಸ್ಥಾಪಿಸಿ, ವಿದ್ಯಾರ್ಥಿಗಳಿಗೆ ಮತ್ತು ಯುವಕರಿಗೆ ರಂಗಶಿಕ್ಷಣ ನೀಡುತ್ತಿದ್ದಾರೆ. 1962ನೇ ಇಸವಿಯಲ್ಲಿ ಡಿಪ್ಲೊಮೊ ಇನ್ ಡ್ರಮಾಟಿಕ್ಸ್ ಎಂಬ ವಿಶೇಷ ಪರಿಣತಿಯ ರಂಗಪದವಿಯನ್ನು ಪಡೆದ ಹಳೇ ರಂಗಕರ್ಮಿಗಳಲ್ಲಿ ಒಬ್ಬರಾದ ಸುಬ್ಬಣ್ಣನವರು ತಮ್ಮ ಹುಟ್ಟೂರಾದ ಹಾಸನ ಜಿಲ್ಲೆಯ ಮತಿಗಟ್ಟ ಗ್ರಾಮದಲ್ಲಿಯೇ ಶಿಕ್ಷಕರಾಗಿ ತಮ್ಮ ಸೇವೆ ಪ್ರಾರಂಭಿಸಿದರು. ತಮ್ಮ ವೃತ್ತಿಜೀವನದಲ್ಲಿ ಬಿಹೆಚ್‌ಎಸ್ ಸಂಸ್ಥೆಯ ನಾಟಕ ಅಧ್ಯಾಪಕರಾಗಿ, ಸಾವಿರಾರು ವಿದ್ಯಾರ್ಥಿಗಳಲ್ಲಿ ರಂಗಪ್ರಜ್ಞೆ ಮೂಡಿಸಿ, ಸಿದ್ಧಪಡಿಸಿದ್ದಾರೆ. ಅಂತಹವರಲ್ಲಿ ಹಲವರು ಇಂದಿನ ಖ್ಯಾತ ರಂಗನಟರು, ಚಿತ್ರನಟರು, ಕಲಾವಿದರು ಹಾಗೂ ನಿರ್ದೇಶಕರಾಗಿ ಕಲಾಸೇವೆ ಮಾಡುತ್ತಿದ್ದಾರೆ. ಸ್ವತಃ ನಟರಾಗಿ, ನಾಟಕಕಾರರಾಗಿ, ನಿರ್ದೇಶಕರಾಗಿ, ರಂಗಶಿಕ್ಷಣ ಅಧ್ಯಾಪಕರಾಗಿ, ಆಕಾಶವಾಣಿ ಹಾಗೂ ದೂರದರ್ಶನಗಳ ಹಿರಿಯ ಕಲಾವಿದರಾಗಿ ಸುಬ್ಬಣ್ಣನವರು ಇಂದಿಗೂ ಸಕ್ರಿಯರಾಗಿದ್ದಾರೆ. ನಾಟಕ ಸಾಹಿತ್ಯ ರಚನೆಯಲ್ಲಿಯೂ ಪರಿಶ್ರಮ ಹೊಂದಿರುವ ಇವರು ಶೈಕ್ಷಣಿಕ ರೂಪಕಗಳು, ಏಕಾಂಕಗಳು, ಕಿರುನಾಟಕಗಳು, ಕಥನಕವನಗಳು, ಮುಂತಾದವನ್ನು ರಚಿಸಿರುತ್ತಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ನಾರಾಯಣ ರಾಯಚೂರು

ಧಾರವಾಡ ಜಿಲ್ಲೆ ಸವಣೂರಿನಲ್ಲಿ 1957ರಲ್ಲಿ ಜನಿಸಿದ ನಾರಾಯಣ ರಾಯಚೂರು ಅರ್ಥಶಾಸ್ತ್ರ ಪದವೀಧರರಾಗಿ ಪತ್ರಿಕೋದ್ಯಮ ಡಿಪ್ಲೊಮೊ ಪಡೆದು ಬೆಂಗಳೂರು ನಗರದ ರಿಸರ್ವ್‌ಬ್ಯಾಂಕ್ ಉದ್ಯೋಗಿಯಾಗಿದ್ದಾರೆ. ಖ್ಯಾತ ರಂಗವಿಮರ್ಶಕರಾದ ಶ್ರೀಯುತರು ಬೆಂಗಳೂರಿನ ಸೂತ್ರಧಾರ ಹಾಗೂ ರಂಗಸಂಪದ ತಂಡಗಳ ಅನೇಕ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಕಂಬಾರರ ಪುಷ್ಪರಾಣಿ, ಕಾರ್ನಾಡ್‌ರ ಅಲಿಬಾಬಾ, ಹಯವದನ, ಸುಬ್ಬಣ್ಣನವರ ಸೂಳೇಸನ್ಯಾಸಿ, ಮಾಸ್ತಿಯವರ ಗೌತ್ರಮಲ್ಲಿ ಮುಂತಾದ ನಾಟಕಗಳಿಗೆ ಸಂಗೀತ ಸಂಯೋಜನೆ ಮಾಡಿದ್ದಾರೆ. ಮನುಭಂಡಾರಿ ಅವರ ಮಹಾಭೋಜ್ ಹಿಂದಿ ನಾಟಕವನ್ನು ಕನ್ನಡಕ್ಕೆ ಹಾಗೂ ಲಂಕೇಶರ ತೆರೆಗಳು ನಾಟಕವನ್ನು ಹಿಂದಿಗೆ ಅನುವಾದಿಸಿದ್ದಾರೆ. ಬಾನುಲಿಗಾಗಿ ಲಂಕೇಶರ ತೆರೆಗಳು,

ಕಂಬಾರರ ಚಾಳೀಶ್, ಶ್ರೀರಂಗರ ಶೋಕಚಕ್ರ ಮುಂತಾದವುಗಳನ್ನು ನಿರ್ದೇಶಿಸಿದ್ದಾರೆ. ದೂರದರ್ಶನಕ್ಕಾಗಿ ಹಲವಾರು ಧಾರವಾಹಿಗಳಿಗೆ ಸಂಭಾಷಣೆ ರಚಿಸಿದ್ದಾರೆ. ಸೂತ್ರಧಾರ ವಾರ್ತಾಪತ್ರ, ಸಂಸ ಮತ್ತು ಪ್ರೊ॥ ಬಿ.ಸಿ. ಸಮಗ್ರಕ್ಕಾಗಿ ದುಡಿದಿದ್ದಾರೆ.

ನಟನೆ, ನಿರ್ದೇಶನ, ರಂಗವಿಮರ್ಶೆ, ರಂಗ ಲೇಖನಗಳು, ವ್ಯಕ್ತಿ ಚಿತ್ರಗಳು, ಕಂಠದಾನ, ನಿರೂಪಣೆ ಪತ್ರಿಕೋದ್ಯಮ, ಪುಸ್ತಕೋದ್ಯಮ, ಲಘುಚರ್ಚೆ ಮುಂತಾಗಿ ಬಹುಮುಖಿ ಪ್ರತಿಭೆಯ ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಯು. ಸೀತಾರಾಮಚಾರ್

ತೀರ್ಥಹಳ್ಳಿಯ ರಂಗಭೂಮಿಯ ಭೀಷ್ಮ ಎಂದೇ ಖ್ಯಾತರಾದ ಯು.ಸೀತಾರಾಮಾಚಾರ್ ಅವರು ನಿರಂತರವಾಗಿ 60 ವರ್ಷಗಳ ರಂಗಭೂಮಿಯ ಸೇವೆಯನ್ನು ಸಹಜವಾಗಿ ಮಾಡಿಕೊಂಡು ಬರುತ್ತಿರುವ ಅಪರೂಪದ ನಿಷ್ಠಾವಂತ ರಂಗಕರ್ಮಿ. 1955ರಲ್ಲಿ ತಮ್ಮ 16ನೇ ವಯಸ್ಸಿನಲ್ಲಿ ಕೃಷ್ಣಲೀಲೆಯ ಮಕರಂದನಾಗಿ ರಂಗಪ್ರವೇಶ ಮಾಡಿದ ಸೀತಾರಾಮಾಚಾರ್ ಒಬ್ಬ ಸಹಜ ನಟ. ಎಂದೂ ಪ್ರಚಾರವನ್ನು ಬಯಸದ ರಂಗಭೂಮಿಯ ವಿವಿಧ ವಿಭಾಗಗಳಲ್ಲಿ ಉತ್ತಮ ಪರಿಶ್ರಮ ಹೊಂದಿರುವ ಇವರು ನುರಿತ ರಂಗ ಸಂಗೀತಗಾರರೂ ಹೌದು.

ಹಿಂದಿನ ಕಾಲದ ರಂಗಸಂಗೀತದ ಮಟ್ಟುಗಳನ್ನು ಸಾಂಪ್ರದಾಯಿಕವಾಗಿ ಲೀಲಾಜಾಲವಾಗಿ ಹಾಡುವ ಶ್ರೀಯುತರು ಇಂದಿನ ಪ್ರಾಯೋಗಿಕ ರಂಗಭೂಮಿಗೂ ಹೊಂದಿಕೊಂಡು ಎರಡರ ಮಧ್ಯದ ಸ್ನೇಹಪೂರ್ವ ಕೊಂಡಿಯಾಗಿ ಇಂದಿಗೂ ರಂಗಸೇವೆ ಮುಂದುವರೆಸಿದ್ದಾರೆ. ತೀರ್ಥಹಳ್ಳಿಯ ಎಲ್ಲಾ ರಂಗತಂಡಗಳಿಗೆ ನಾಟಕಗಳನ್ನು ಹೇಳಿಕೊಟ್ಟು, ವಿವಿಧ ರೀತಿಗಳಲ್ಲಿ ಸಹಕಾರ ನೀಡಿರುವ ಶ್ರೀಯುತರು ಎಲ್ಲೆಡೆ ನಾಟಕದ ಮೇಸ್ಟ್ರು ಎಂದೇ ಚಿರಪರಿಚಿತರು.

ಸ್ವತಃ ನಾಟಕಕಾರರೂ ಆಗಿರುವ ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಸಿ.ಆರ್. ಗುರುರಾಜರಾವ್

ಖ್ಯಾತ ಪ್ರಸಾದನ ಕಲಾವಿದರಾದ ಸಿ.ಆರ್.ಗುರುರಾಜರಾವ್ ಮೈಸೂರು ಹಾಗೂ ಆಸುಪಾಸಿನ ರಂಗಕಲಾವಿದರಿಗೆ ಚಿರಪರಿಚಿತ ಹೆಸರು. ಮೈಸೂರಿನ ಶಾರದಾ ವಿಲಾಸ ಶಿಕ್ಷಣ ಮಹಾವಿದ್ಯಾಲಯದಲ್ಲಿ ಬೆರಳಚ್ಚುಗಾರರಾಗಿ 33 ವರ್ಷಗಳ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಶ್ರೀಯುತರು ಉತ್ತಮ ಕ್ರೀಡಾಪಟು. ಓಟಸ್ಪರ್ಧೆ, ಕಬಡ್ಡಿ, ಕುಸ್ತಿ, ಬ್ಯಾಡ್‌ಮಿಟನ್, ವಿಶೇಷವಾಗಿ ಕೋ–ಕೋ ಆಟಗಳಲ್ಲಿ ಪರಿಣಿತರಾದ ಇವರು ತಮ್ಮ ರಂಗಭೂಮಿ ಸೇವೆಯನ್ನು ನಟರಾಗಿ, ವಸ್ತ್ರಾಲಂಕಾರ ಕಲಾವಿದರಾಗಿ, ವಿಶೇಷವಾಗಿ ಪ್ರಸಾಧನ ಕಲಾವಿದರಾಗಿ ನಿರ್ವಹಿಸಿದ್ದಾರೆ. ಶಾಲಾ ದಿನಗಳಲ್ಲಿ ಛದ್ಮವೇಷ ಸ್ಪರ್ಧೆಯಲ್ಲಿ ಪಾಲ್ಗೊಂಡು ರಂಗಭೂಮಿಯ ಗೀಳು ಹತ್ತಿಸಿಕೊಂಡು 1968ರಲ್ಲಿ ಅಮರಕಲಾಸಂಘದ ತುಘಲಕ್ ನಾಟಕದ ಮೂಲಕ ರಂಗಸಂಪರ್ಕ ಏರ್ಪಡಿಸಿಕೊಂಡರು. ದಿವಂಗತ ಸೋರಟ್ ಅಶ್ವತ್ಥ್ ಅವರ ಕಲಾಜ್ಯೋತಿ ತಂಡದಲ್ಲಿ ನಟನಾಗಿ, ಪ್ರಸಾಧನ ಕಲಾವಿದನಾಗಿ ಸೇವೆ ಸಲ್ಲಿಸಿದರು. ಪ್ರಸ್ತುತ ಇವರು ಮೈಸೂರಿನ ಮೇಕಪ್ ಗುರು. ಇವರು ಪ್ರಸಾಧನ

ಕಾರ್ಯನಿರ್ವಹಿಸಿರುವ ನಾಟಕಗಳ ಸಂಖ್ಯೆ 1000ಕ್ಕೂ ಹೆಚ್ಚು, ಸುಮಾರು 16 ಖ್ಯಾತ ರಂಗತಂಡಗಳಿಗೆ ಬಿ.ವಿ.ಕಾರಂತರಾದಿಯಾಗಿ 20 ಖ್ಯಾತ ನಿರ್ದೇಶಕರ ನಾಟಕಗಳಿಗೆ ಪ್ರಸಾಧನ ಸೇವೆ ನೀಡಿರುತ್ತಾರೆ. ಇವರ ಶ್ರೀಮತಿಯವರು ಸಹ ಪ್ರಸಾಧನದಲ್ಲಿ ತೊಡಗಿ ರಂಗಸೇವೆ ಸಲ್ಲಿಸುತ್ತಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಎಂ.ಎಸ್. ಮಡ್ಡೆ

ಶ್ರೀ ಮಲ್ಲಿಕಾರ್ಜುನ ಸೋಮಶೇಖರ ಮಡ್ಡೆ ಕರ್ನಾಟಕದ ಗಡಿದಾಟಿದ ನಂತರ ಸಿಗುವ ಸೋಲ್ಲಾಪುರದ ಅಕ್ಕಲಕೋಟೆಯ ಮೈಂದರ್ಗಿಯಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯ ಸಂಘವನ್ನು ಸ್ಥಾಪಿಸಿ, ಮರಾಠಿ ನೆಲದಲ್ಲಿ ಕನ್ನಡ ನಾಟಕಗಳನ್ನು ಪ್ರದರ್ಶಿಸುತ್ತಾ ಕನ್ನಡ ಸೇವೆ ಮಾಡುತ್ತಿರುವ ಅಪರೂಪದ ವೃತ್ತಿರಂಗಭೂಮಿ ಕಲಾವಿದ. ಸಾಮಾಜಿಕ ಪರಿವರ್ತನೆ ಕನ್ನಡ ಭಾಷೆ ಹಾಗೂ ಸಂಸ್ಕೃತಿಗಳ ಅಭಿವೃದ್ಧಿಯನ್ನೇ ಗಮನವಾಗಿಟ್ಟುಕೊಂಡ ಇವರ ಸಂಘದಲ್ಲಿ ಸುಮಾರು 35 ಮಂದಿ ಕನ್ನಡಿಗರು ರಂಗಸೇವೆ ಮಾಡುತ್ತಿದ್ದು, ಈವರೆಗೆ ಇವರ ರಂಗದ ಮೇಲೆ 2000ಕ್ಕೂ ಮೇಲ್ಪಟ್ಟು ಕನ್ನಡ ನಾಟಕಗಳು ಪ್ರದರ್ಶಿತವಾಗಿವೆ. ಈ ಸಂಸ್ಥೆ, ಕಿವುಡ ಮಾಡಿದ ಕಿತಾಪತಿ, ಬಸ್ ಕಂಡಕ್ಟರ್, ಮುದುಕನ ಮದುವೆ, ಧರ್ಮ ದಾರಿ ತಪ್ಪಿತು, ತಾಯಿ ಕರುಳು, ಸಿಂಧೂರ ಲಕ್ಷ್ಮಣ, ಚೆನ್ನಪ್ಪ ಚನ್ನೇಗೌಡ, ಜಗಜ್ಯೋತಿ ಬಸವೇಶ್ವರ, ಹರಿಶ್ಚಂದ್ರ, ಗೌಡರ ಗದ್ದಲ – ಹೀಗೆ ಎಲ್ಲಾ ರೀತಿಯ ಸಾಮಾಜಿಕ, ಐತಿಹಾಸಿಕ ಮತ್ತು ಸಾಂಸ್ಕೃತಿಕ ನಾಟಕಗಳನ್ನು ಬೀದರ್, ಬಿಜಾಪುರ ಗುಲ್ಬರ್ಗಾ, ಸೋಲ್ಲಾಪುರ, ಹೈದರಾಬಾದ್, ಪುಣೆಗಳಲ್ಲಿ ಪ್ರದರ್ಶಿಸಿ ಜನಮನ ಗೆದ್ದಿವೆ. ತಮ್ಮ ನಾಟಕ ಕಂಪನಿಯಿಂದ ಹಲವಾರು ಸಮಾಜ ಸೇವೆಗಳನ್ನು ಮಾಡಿರುವುದು ಶ್ರೀ ಮಡ್ಡೆಯವರ ಸಾಮಾಜಿಕ ಕಳಕಳಿಗೆ ನಿದರ್ಶನ. ಉಚಿತ ಮದುವೆಗಳು, ವಿದ್ಯಾರ್ಥಿಗಳ ಶಿಕ್ಷಣಕ್ಕೆ ಸಹಾಯ, ಬಡವರ ಮದುವೆಗೆ ಆರ್ಥಿಕ ಸಹಾಯವನ್ನು ಸಹ ಈ ವೃತ್ತಿಕಂಪನಿ ಮಾಡುತ್ತದೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಡಿ.ಬಿ. ಮಲ್ಲಿಕಾರ್ಜುನ ಮಹಾಮನೆ

ರಾಜ್ಯ ರಂಗಭೂಮಿ ಸಂದರ್ಭದಲ್ಲಿ ಮಹಾಮನೆ ಎಂದೇ ಚಿರಪರಿಚಿತರಾದ ರಂಗನಟ, ನಿರ್ದೇಶಕ, ಸಂಘಟಕ ಹಾಗೂ ಲೇಖಕರಾದ ಶ್ರೀಯುತರು ನಾಗಮಂಗಲದ ಉದಯಭಾನು ಕಲಾಸಂಘದ ಮೂಲಕ 1976ರಲ್ಲಿ ರಂಗಪ್ರವೇಶ ಮಾಡಿದರು. ಎ.ಪಿ.ಎಸ. ಸಂಜೆ ಕಾಲೇಜಿನ ವಿದ್ಯಾರ್ಥಿಯಾಗಿ, ಸಾಂಸ್ಕೃತಿಕ ಕಾರ್ಯಕ್ರಮಗಳ ಆಯೋಜನೆ, ಮುಂದಾಳತ್ವ ಹಾಗೂ ರಂಗಸಂಘಟನೆಯಲ್ಲಿ ತೊಡಗಿಕೊಂಡ ಇವರು ಆ ಕಾಲದಲ್ಲಿಯೇ ಅತ್ಯುತ್ತಮ ನಟ ಪ್ರಶಸ್ತಿ ಪಡೆದವರು. 1981ರಲ್ಲಿ ಅಭಿನಯ ತರಂಗದ ವಿದ್ಯಾರ್ಥಿಯಾಗಿ ಹಲವಾರು ಖ್ಯಾತನಾಮರ ನಾಟಕಗಳನ್ನು ನಿರ್ದೇಶಿಸಿ ಅವುಗಳಲ್ಲಿ ನಟನೆಯನ್ನು ಮಾಡಿದರು. ಶಾಲಾ ಕಾಲೇಜುಗಳಲ್ಲಿ ರಂಗಶಿಬಿರಗಳನ್ನು ಏರ್ಪಡಿಸಿದರು. ಸಾಮಾಜಿಕ ಕಾಳಜಿಯ ವಿಷಯಗಳನ್ನುಳ್ಳ ಬೀದಿ

ನಾಟಕಗಳನ್ನು ಬರೆಯುವಂತೆ ಸಮಾನಮನಸ್ಕರನ್ನು ಪ್ರೇರೇಪಿಸಿದರು. ಕೆಲವುಕಾಲ ಪತ್ರಕರ್ತರೂ ಆಗಿ 2005–08ರ ಅವಧಿಗೆ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿ ಕನ್ನಡ ರಂಗಭೂಮಿಗೆ ಬಹುಮುಖ ಸೇವೆಯನ್ನು ಸಲ್ಲಿಸಿದರು. ನಾಡಿನ ಖ್ಯಾತ ಕನ್ನಡ ದಿನಪತ್ರಿಕೆಗಳಿಗೆ ರಂಗಭೂಮಿಯ ಬಗ್ಗೆ ಲೇಖನಗಳನ್ನು ಬರೆದು ವಿಚಾರಸಂಕಿರಣ ಹಾಗೂ ಗೋಷ್ಠಿಗಳಲ್ಲಿ ಭಾಗವಹಿಸಿ ಕಳೆದ 35 ವರ್ಷಗಳಿಂದ ರಂಗಭೂಮಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಜಗದೀಶ್ ಮಲ್ನಾಡ್

ಚಿಕ್ಕಮಗಳೂರಿನ ಬೆಳಲುಕೊಪ್ಪದ ಶ್ರೀ ಜಗದೀಶ್ ಮಲ್ನಾಡ್ ರಂಗಭೂಮಿಗೆ ಪರಿಚಯವಾದುದು ಖ್ಯಾತ ನಿರ್ದೇಶಕ ಟಿ.ಎನ್.ನರಸಿಂಹನ್ ಅವರಿಂದ. ಅವರ ನಿರ್ದೇಶನದ ಅರಣ್ಯ ನ್ಯಾಯ ನಾಟಕದಲ್ಲಿ 1979ರಲ್ಲಿ ಚಿಕ್ಕ ಪಾತ್ರದ ಮೂಲಕ ರಂಗಕ್ಕೆ ಬಂದ ಇವರು ಮೀನಾಕ್ಷಿ ಮನೆ ಮೇಸ್ಟ್ರು ನಾಟಕದಲ್ಲಿ ಪ್ರಮುಖ ಪಾತ್ರ ವಹಿಸಿದರು. ಖ್ಯಾತ ನಾಟಕ ತಂಡ ಸಂಕೇತ್ ಪ್ರಾರಂಭವಾದಾಗ ಅದಕ್ಕೆ ಸೇರ್ಪಡೆಗೊಂಡ ಇವರು ಇಂದಿನವರೆಗೆ ಆ ತಂಡದ ಎಲ್ಲಾ ನಾಟಕಗಳ ಮೇಲ್ವಿಚಾರಣೆ ಜವಾಬ್ದಾರಿಯನ್ನು ಹೊತ್ತಿದ್ದಾರೆ ಅಲ್ಲದೆ ಕೆಲವು ನಾಟಕಗಳಲ್ಲಿ ನಟನೆಯನ್ನೂ ಮಾಡಿದ್ದಾರೆ.

ದಿವಂಗತ ಖ್ಯಾತ ನಟ ಶಂಕರ್‌ನಾಗ್ ರವರ ಒಡನಾಡಿಯಾಗಿ ಅವರ ಎಲ್ಲಾ ಪ್ರಮುಖ ಚಲನಚಿತ್ರಗಳ ಹಾಗೂ ಧಾರವಾಹಿಗಳ ಮೇಲ್ವಿಚಾರಣೆ ಮಾಡಿದ್ದಾರೆ. ಚಲನಚಿತ್ರ ನಿರ್ಮಾಪಕರಾಗಿಯೂ ಅನುಭವ ಹೊಂದಿರುವ ಶ್ರೀಯುತರು ತಮ್ಮ ಸ್ವಂತ ಚಿತ್ರನಿರ್ಮಾಣ ಸಂಸ್ಥೆ, ಜಾಹೀರಾತು ಸಂಸ್ಥೆ, ಉಪಾಹಾರ ಗೃಹ ಮುಂತಾದವುಗಳನ್ನು ನಡೆಸುತ್ತಿದ್ದಾರೆ.

ಪ್ರಸ್ತುತ ರಂಗಶಂಕರದ ಮುಖ್ಯ ವ್ಯವಸ್ಥಾಪಕರಾಗಿ ರಂಗಸೇವೆ ಸಲ್ಲಿಸುತ್ತಿರುವ ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಅನಂತವೇಣಿ

ತುಮಕೂರು ಜಿಲ್ಲೆ ಚಿಕ್ಕನಾಯಕಹಳ್ಳಿ ತಾಲ್ಲೂಕಿನ ಹೆಚ್. ಅನಂತವೇಣಿಯವರು ಪೌರಾಣಿಕ ಸಾಮಾಜಿಕ ಮತ್ತು ಐತಿಹಾಸಿಕ ನಾಟಕಗಳಲ್ಲಿ ವೈವಿಧ್ಯಮಯ ನಟನಾ ಸಾಮರ್ಥ್ಯ ಹೊಂದಿರುವ ರಂಗಭೂಮಿ ಕಲಾವಿದೆ. ರಾವಣ, ಭೀಮ, ದುರ್ಯೋಧನ, ಕಂಸ ಮುಂತಾದ ಭೀಭತ್ಸ ಪುರುಷ ಪಾತ್ರಗಳಲ್ಲಿಯೂ; ದ್ರೌಪದಿ, ಸೀತೆ, ಕುಂತಿ, ಗಾಂಧಾರಿ, ದಮಯಂತಿ ಮುಂತಾದ ಲಾಲಿತ್ಯಪೂರ್ಣವಾದ ಸ್ತ್ರೀ ಪಾತ್ರಗಳಲ್ಲಿಯೂ ಲೀಲಾಜಾಲವಾಗಿ ಅಭಿನಯಿಸಿ, ಜನಮನ ಗೆದ್ದವರು.

ಸಾಮಾಜಿಕ ನಾಟಕಗಳಾದ ಅಣ್ಣತಂಗಿ, ದ್ವೀಪ, ರತ್ನಮಾಂಗಲ್ಯ, ಸಂಪತ್ತಿಗೆ ಸವಾಲ್, ಬಂಜೆತೊಟ್ಟಿಲು ಮುಂತಾದ ನಾಟಕಗಳಲ್ಲಿಯೂ ತಮ್ಮ ಪ್ರತಿಭೆಯನ್ನು ತೋರಿಸಿದವರು. ತಮ್ಮ ಹದಿಮೂರನೇ ವಯಸ್ಸಿನಲ್ಲಿಯೇ ಬಣ್ಣದ ಬದುಕಿಗೆ ಮಾರುಹೋದ ಇವರು ಕಿರುತೆರೆ, ಚಲನಚಿತ್ರಗಳಲ್ಲಿ ಅವಕಾಶ ಸಿಕ್ಕಿದರೂ ಸಹ ಆ ಕಡೆಗೆ ಗಮನವೀಯದೆ ತಮ್ಮ ಬದುಕನ್ನು ರಂಗಭೂಮಿಗೆ ಮುಡಿಪಾಗಿಟ್ಟುಕೊಂಡವರು.

ಹಲವಾರು ಸಂಘಸಂಸ್ಥೆಗಳಿಂದ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿರುವ ಇವರು ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಕೆಂಚಪ್ಪ ಹನುಮಂತಪ್ಪ ನಾಯಿಕ

ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಕೆ.ಹೆಚ್.ನಾಯಿಕರು ಬಾಲಕರಾಗಿದ್ದಾಗಲೇ ರಂಗಭೂಮಿಯ ಸಂಪರ್ಕಕ್ಕೆ ಬಂದು ಹಲವಾರು ವೃತ್ತಿಕಂಪನಿಗಳ ಒಡನಾಟದಲ್ಲಿ ಹತ್ತಾರು ಜನಪ್ರಿಯ ನಾಟಕಗಳಲ್ಲಿ ವೈವಿಧ್ಯಮಯ ಪಾತ್ರವಹಿಸಿ, ಜನಪ್ರಿಯ ನಟನೆನಿಸಿದ್ದಾರೆ. ನಟನೆಯನ್ನು ಹವ್ಯಾಸವಾಗಿ ಪ್ರಾರಂಭ ಮಾಡಿದ ಇವರು ಅದನ್ನೇ ಮುಂದೆ ವೃತ್ತಿಯನ್ನಾಗಿಸಿಕೊಂಡರು. ಇವರು ನಟಿಸಿರುವ ಹಲವಾರು ನಾಟಕಗಳಿಗೆ ಜಿಲ್ಲಾ ಮತ್ತು ರಾಜ್ಯಮಟ್ಟಗಳಲ್ಲಿ ಪ್ರಶಸ್ತಿ ಬಂದಿದೆ. 1985ರಲ್ಲಿ ಸತಿ ಅನಸೂಯ ನಾಟಕದಲ್ಲಿ ನಟನೆಗಾಗಿ ಪ್ರಶಸ್ತಿ, 1992 ರಲ್ಲಿ ಕಲಾಭಿನಾಯಕ ಎಂಬ ಪ್ರಶಸ್ತಿ, 1993 ರಲ್ಲಿ ಸೌಭಾಗ್ಯಲಕ್ಷ್ಮೀ ಎಂಬ ಸಾಮಾಜಿಕ ನಾಟಕ ಅಭಿನಯಕ್ಕಾಗಿ ಪ್ರಶಸ್ತಿ, 2006ರಲ್ಲಿ ಬೆಳಗಾವಿ ಜಿಲ್ಲಾಮಟ್ಟದ ಯುವಜನ ಮೇಳದಲ್ಲಿ ನಡೆದ ಸಂಗ್ಯಾ–ಬಾಳ್ಯ ನಾಟಕದಲ್ಲಿ ನಟನೆಗಾಗಿ ಪ್ರಶಸ್ತಿ, 2006 ಗಡಿನಾಡ ಉತ್ಸವ ಕಾರ್ಯಕ್ರಮದಲ್ಲಿ ಗೌರವಾರ್ಪಣೆ, 2008ರಲ್ಲಿ ಬೆಳಗಾವಿ ಜಾನಪದ ಕಲಾಮೇಳದ ಪ್ರಶಸ್ತಿ ಇವೇ ಮುಂತಾದ ಹಲವು ಹತ್ತು ಪ್ರಶಸ್ತಿಗಳಿಗೆ ಭಾಜನರಾದ ಇವರು ತಮ್ಮ ಇಳಿಪ್ರಾಯದಲ್ಲಿಯೂ ಇಂದಿಗೂ ಕಲಾಸೇವೆಗಾಗಿ ಟೊಂಕಕಟ್ಟಿ ನಿಂತಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಆರ್. ಈಶ್ವರಪ್ಪ

ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಹವ್ಯಾಸಿ ನಟ, ಕವಿ, ನಿರ್ದೇಶಕ ಹಾಗೂ ಪ್ರಸಾಧನ ಕಲಾವಿದನಾಗಿ ಮತ್ತು ಕಂಪನಿ ನಾಟಕ ಸಂಸ್ಥೆಗಳ ಮ್ಯಾನೇಜರ್ ಆಗಿ ರಂಗಭೂಮಿಗೆ ಉತ್ತಮ ಸೇವೆಯನ್ನು ಸಲ್ಲಿಸಿರುವ ಈಶ್ವರಪ್ಪನವರಿಗೆ 82 ವರ್ಷ. ಹೈದರಾಬಾದ್ ಕರ್ನಾಟಕ ಪ್ರದೇಶದ ಕರ್ನಾಟಕ ರಂಗಭೂಮಿಯ ಅಪ್ಪಟ ಪ್ರತಿಭೆಯಾದ ಶ್ರೀಯುತರು ನಾಲ್ಕು ನಾಟಕ ಕಂಪನಿಗಳನ್ನು ಕಟ್ಟಿ ಐದು ದಶಕಗಳ ಕಾಲ ರಂಗಭೂಮಿಗೆ ಬದುಕನ್ನೇ ಮುಡಿಪಾಗಿಟ್ಟವರು.

ಹವ್ಯಾಸಿ ರಂಗಕಲಾವಿದರಾಗಿ ರಂಗಸೇವೆ ಪ್ರಾರಂಭಿಸಿ, ವೃತ್ತಿರಂಗಭೂಮಿಯಲ್ಲಿಯೂ ಹೆಸರು ಮಾಡಿ, ಸ್ತ್ರೀ ಪಾತ್ರ, ಪುರುಷ ಪಾತ್ರ ಎರಡರಲ್ಲೂ ಸೈ ಎನಿಸಿಕೊಂಡ ಇವರು ಕಂದಗಲ್ಲು ಹನುಮಂತರಾಯರೊಡನೆ ಚಿತ್ರಾಂಗದ ನಾಟಕದಲ್ಲಿ ಅರ್ಜುನನ ಪಾತ್ರ ಮಾಡಿ ಹೆಸರು ಪಡೆದರು. ಶಾರದ ಸಂಗೀತ ನಾಟಕ ಮಂಡಳಿ,

ಅರಿಶಿನಗೋಡಿಯವರ ಹುಚ್ಚೇಶ್ವರ ನಾಟಕ ಕಂಪನಿ, ಗುಬ್ಬಿ ವೀರಣ್ಣನವರ ಕಂಪನಿ, ಬಸವೇಶ್ವರ ನಾಟಕ ಸಂಘ, ಮುಂತಾದ ಕಂಪನಿಗಳ ಒಡನಾಟವನ್ನು ಹೊಂದಿದ್ದ ಇವರು ಪ್ರಸ್ತುತ ಶ್ರೀ ಸಂಗಮೇಶ್ವರ ನಾಟಕ ಸಂಘದ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಡಾ. ಗಜಾನನ ಶರ್ಮ

ವೃತ್ತಿಯಲ್ಲಿ ಇಂಜಿನಿಯರ್ ಪ್ರವೃತ್ತಿಯಲ್ಲಿ ಮಕ್ಕಳ ನಾಟಕ ರಚನೆಕಾರ, ನಿರ್ದೇಶಕ, ಬಾನುಲಿ ನಾಟಕ ರಚನಾಕಾರ, ವೈಜ್ಞಾನಿಕ, ತಾಂತ್ರಿಕ, ಸಾಹಿತ್ಯ ಕೃತಿಕಾರ ಮತ್ತು ಸಿನಿಮಾಸಾಹಿತ್ಯ ರಚನೆಕಾರರಾದ ಡಾ.ಗಜಾನನ ಶರ್ಮರವರು ಸಾಗರ ತಾಲ್ಲೂಕಿನಲ್ಲಿ ಹುಟ್ಟಿದ ಗ್ರಾಮೀಣ ಪ್ರತಿಭೆ. ಸ್ವಂತ ಜಿಲ್ಲೆಯಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಾಲಾ ವಿದ್ಯಾಭ್ಯಾಸ ಮುಗಿಸಿ, ದಾವಣಗೆರೆಯ ಬಿ.ಡಿ.ಟಿ ಇಂಜನಿಯರ್ ಕಾಲೇಜಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ದ್ವಿತೀಯ ರ್‍ಯಾಂಕ್‌ನೊಂದಿಗೆ ತೇರ್ಗಡೆ ಹೊಂದಿ, ಕನ್ನಡ ಎಂ.ಎ ಪದವಿ ಪಡೆದು, ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದಿಂದ "ಕನ್ನಡದಲ್ಲಿ ಮಕ್ಕಳ ನಾಟಕ ಮತ್ತು ರಂಗಭೂಮಿ – ಒಂದು ಅಧ್ಯಯನ" ಎಂಬ ಮಹಾಪ್ರಬಂಧಕ್ಕೆ ಪಿ.ಹೆಚ್.ಡಿ ಪದವಿ ಪಡೆದರು.

ಕಳೆದ ಮೂವತ್ತು ವರ್ಷಗಳಿಂದ ಹಲವಾರು ಮಕ್ಕಳ ಹಾಗೂ ಇತರೆ ನಾಟಕಗಳನ್ನು ರಚಿಸಿ, ಬಾನುಲಿಗಾಗಿಯೂ ಮೂರು ನಾಟಕಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಕೆಲವು ಪ್ರಕಟಣೆಯಾಗಿರುವುದೇ ಅಲ್ಲದೆ, ಹಲವು ಪ್ರದರ್ಶನಗಳನ್ನು ಕಂಡಿವೆ. ಗಿರೀಶ್ ಕಾಸರವಳ್ಳಿರವರ ದ್ವೀಪ ಹಾಗೂ ನಾಯಿನೆರಳು ಚಿತ್ರಗಳಿಗೆ ಸಂಭಾಷಣೆ ರಚನೆಗೆ ಸಹಾಯ ಮಾಡಿದ್ದಾರೆ. ತಮ್ಮ ಬರಹಗಳಿಗೆ ಈಗಾಗಲೇ ಹಲವಾರು ಪ್ರಶಸ್ತಿಗಳನ್ನು ಪಡೆದಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಆರ್.ಎಸ್. ಗಿರಿ

ಜೋಗ್ ಜಲಪಾತದ ಸಮೀಪವಿರುವ ತಾಳಗುಪ್ಪದಲ್ಲಿ ಒಂದು ರೈತಕುಟುಂಬದಲ್ಲಿ ಜನಿಸಿದ ಶ್ರೀ ಆರ್.ಎಸ್.ಗಿರಿ ತಮ್ಮ ಶಾಲಾ ದಿನಗಳಲ್ಲಿಯೇ "ಚಂದ್ರಲೋಕದ ಮಾನವ" ಎಂಬ ನಾಟಕವನ್ನು ರಚಿಸಿ, ನಿರ್ದೇಶಿಸಿ ಜೊತೆಗೆ ತಾವು ಒಂದು ಮುಖ್ಯ ಪಾತ್ರದಲ್ಲಿ ನಟಿಸಿ, ಅಧ್ಯಾಪಕ ಮತ್ತು ವಿದ್ಯಾರ್ಥಿವೃಂದಗಳನ್ನು ಹಾಗೂ ಸ್ಥಳೀಯರನ್ನು ಬೆರಗುಗೊಳಿಸಿದರು.

ಕನ್ನಡ ರಂಗಭೂಮಿ ಕಂಡ ಕ್ರಿಯಾಶೀಲ ರಂಗಕರ್ಮಿ ಆರ್.ಎಸ್.ಗಿರಿಯವರು ಮೈಸೂರಿನ ಹವ್ಯಾಸಿ ರಂಗಭೂಮಿಯ ಶ್ರದ್ಧಾವಂತ, ಪ್ರತಿಭಾವಂತ, ನಟ, ನಿರ್ದೇಶಕ ಹಾಗೂ ಸಂಘಟಕ. ಗಂಭೀರ ಸ್ವರೂಪದ ನೇರನುಡಿಯ ಈ ಕಲಾವಿದ ಪಾತ್ರನಿರ್ವಹಣೆಯಲ್ಲಿ ತಲ್ಲೀನತೆ ಹೊಂದಿ, ಸಹಜತೆಯನ್ನು ತೋರಿಸುತ್ತಾರೆ. ಮುಖ್ಯವಾಗಿ ಇವರ ಸಂಭಾಷಣಾ ಚತುರತೆ ಪ್ರೇಕ್ಷಕರನ್ನು ಸೆಳೆಯುತ್ತದೆ. ನಾಟಕವೊಂದನ್ನು

ರಂಗದ ಮೇಲೆ ತರಲು ನಿರ್ಧಾರವಾದ ಮೊದಲನೇ ದಿನದಿಂದ ಇವರು ತೋರುವ ಶಿಸ್ತು ಮತ್ತು ಶ್ರದ್ಧೆ ಸಹಕಲಾವಿದರೊಂದಿಗೆ ಬೆರೆಯುವ ಸ್ನೇಹಪೂರ್ವ ವ್ಯಕ್ತಿತ್ವ ಅಪರೂಪದ್ದು.

ವಿವಿಧ ವೇಷಸ್ಪರ್ಧೆ, ಏಕಪಾತ್ರಾಭಿನಯಗಳ ಮೂಲಕ ಹಳ್ಳಿ-ಹಳ್ಳಿ ಸುತ್ತಾಡಿ ನಾಟಕ ಪ್ರದರ್ಶನಗಳನ್ನು ಏರ್ಪಡಿಸಿ, ದೇಣಿಗೆ ಸಂಗ್ರಹಿಸಿ, ಸಾರ್ವಜನಿಕ ಸೇವೆಯಲ್ಲಿ ನಿರತರಾದರು. ನಾಟಕ ರಚನಾಕಾರರೂ ಆದ ಇವರ ಹಲವಾರು ನಾಟಕಗಳು ವೇದಿಕೆ ಏರಿದ್ದರೂ ಪ್ರಕಟಣೆಗೊಳ್ಳಲಿಲ್ಲ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಕೆ.ಎನ್. ತಮ್ಮಯ್ಯ

ಮಂಡ್ಯ ಜಿಲ್ಲೆ ಕೆ.ಆರ್.ಪೇಟೆಯ ನಟ, ನಿರ್ದೇಶಕ ಹಾಗೂ ಹಾರ್ಮೋನಿಯಂ ವಾದಕ ಕೆ.ಎನ್.ತಮ್ಮಯ್ಯನವರು ಜನಪ್ರಿಯ ರಂಗಸಂಘಟಕ. ಎಂಟು ವರ್ಷದ ಪ್ರಾಯದಲ್ಲಿಯೇ ಬಾಲನಟನಾಗಿ ರಂಗಪ್ರವೇಶ ಮಾಡಿ, 15 ನೇ ವಯಸ್ಸಿನಲ್ಲಿ ಹಾರ್ಮೋನಿಯಂ ವಾದನ ಅಭ್ಯಾಸ ಮಾಡಿಕೊಂಡು ಕೆ.ಆರ್.ಪೇಟೆಯ ಸುತ್ತಮುತ್ತಲ ಹಳ್ಳಿಗಳಲ್ಲಿ ಹಾರ್ಮೋನಿಯಂ ಮಾಸ್ಟರ್ ಆಗಿ ಹಾಗೂ ನಟನಾಗಿ ರಂಗಸೇವೆ ಮಾಡಿದ್ದಾರೆ. ಸ್ವಯಂ ನಟರಾದ ಶ್ರೀಯುತರು 50ಕ್ಕೂ ಹೆಚ್ಚು ನಾಟಕಗಳಲ್ಲಿ ಸ್ತ್ರೀಪಾತ್ರ ಪುರುಷಪಾತ್ರಗಳಲ್ಲಿ ಸಮರ್ಥವಾಗಿ ಅಭಿನಯಿಸಿ ಪ್ರೇಕ್ಷಕರ ಮನಗೆದ್ದಿದ್ದಾರೆ. ಸ್ಥಳೀಯವಾಗಿ ಕಲಾವಿದರು ಹಾಗೂ ಸ್ನೇಹಿತರೊಡಗೂಡಿ, 1980ರಲ್ಲಿ ಜೈ ಭುವನೇಶ್ವರಿ ಕಲಾಸಂಘವನ್ನು ಸ್ಥಾಪಿಸಿ, ತನ್ಮೂಲಕ ನಾಡಿನ ಎಲ್ಲೆಡೆ ಜನಪ್ರಿಯ ನಾಟಕಗಳನ್ನು ಪ್ರದರ್ಶಿಸಿದ್ದಾರೆ. ಮಂಡ್ಯ ಜಿಲ್ಲಾ ರಂಗಭೂಮಿ ಕಾರ್ಯನಿರತ ಸಂಘದ ಉಪಾಧ್ಯಕ್ಷರಾಗಿ, ಸದರಿ ಸಂಘದ ಕೆ.ಆರ್. ಪೇಟೆ ತಾಲ್ಲೂಕು ಘಟಕದ ಅಧ್ಯಕ್ಷರಾಗಿ ವೃತ್ತಿರಂಗ ಕಲಾವಿದರ ಕ್ಷೇಮಾಭಿವೃದ್ಧಿ ಸಂಘದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ರಾಜ್ಯದ ಹತ್ತಾರು ಕಲಾಸಂಘಗಳು ಶ್ರೀಯುತರನ್ನು ಸನ್ಮಾನಿಸಿ ಗೌರವಿವೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಪ್ರಕಾಶ್ ಕಡಪಟ್ಟಿ

ಹುಬ್ಬಳ್ಳಿಯ ಕಡಪಟ್ಟಿಯಲ್ಲಿ 1945ರಲ್ಲಿ ಜನಿಸಿದ ಶ್ರೀ ಪ್ರಕಾಶ್‌ರವರು ನಟ, ನಿರ್ದೇಶಕ ಹಾಗೂ ನಾಟಕಕಾರ. ವೃತ್ತಿರಂಗಭೂಮಿಯಲ್ಲಿ 25 ವರ್ಷಗಳ ಸುದೀರ್ಘ ಸೇವೆ ಸಲ್ಲಿಸಿದ್ದಾರೆ. ತಮ್ಮದೇ ಆದ ಶ್ರೀ ಗುರುಪ್ರಸಾದ್ ನಾಟ್ಯಸಂಘದಲ್ಲಿ ಚೆನ್ನಪ್ಪ ಚೆನ್ನೇಗೌಡ ನಾಟಕವನ್ನು ಹುಬ್ಬಳ್ಳಿ ನಗರದಲ್ಲಿ ನಿರಂತರವಾಗಿ ಐನೂರು ಪ್ರಯೋಗಗಳನ್ನು ಮಾಡಿ, ದಾಖಲೆ ಸ್ಥಾಪಿಸಿರುವ ಶ್ರೀಯುತರು ಇಂದಿಗೂ ರಂಗಸೇವೆಯಲ್ಲಿ ನಿರತರಾಗಿದ್ದಾರೆ. ನಾಟಕಕಾರರಾಗಿ ಸುಮಾರು 50ಕ್ಕಿಂತ ಹೆಚ್ಚು ನಾಟಕಗಳನ್ನು ರಚಿಸಿರುವ ಇವರ ಪ್ರಮುಖ ನಾಟಕಗಳೆಂದರೆ ಭಲೇ ಮಗಳೇ, ಚಿನ್ನದಗೊಂಬೆ, ಮನೆಗೆ ತಕ್ಕ ಮಗ, ಬಂಗಾರದ ಮನುಷ್ಯ, ಪಂಚರಂಗಿ ಪವಾಡ, ತವರು ಬಿಟ್ಟ ತಂಗಿ, ಮನೆ ಮಗಳು, ಘಟಸರ್ಪ, ಸಂಗಮ, ತಾಯಿ ಆಶೀರ್ವಾದ ಮುಂತಾದವು. ಸುಮಾರು 15 ವೃತ್ತಿಕಂಪನಿಗಳಲ್ಲಿ ಇವರು ಸೇವೆ ಸಲ್ಲಿಸಿದ್ದು ಅವುಗಳಲ್ಲಿ ತಮ್ಮ ಸ್ವಂತ ಕಂಪನಿ ಕಡಪಟ್ಟಿಯ ಗುರುಪ್ರಸಾದ್

ನಾಟ್ಯಸಂಘ, ಲಕ್ಷ್ಮೇಶ್ವರದ ಪುರಾಣಿಕ್ ಕಂಪನಿ, ಕಮತಗಿಯ ಹುಚ್ಚೇಶ್ವರ ನಾಟ್ಯಸಂಘ, ಗುಡಿಗೇರಿಯ ಸಂಗಮೇಶ್ವರ ನಾಟ್ಯಸಂಘ, ಕೆ.ಬಿ.ಆರ್. ಡ್ರಾಮಾ ಕಂಪನಿ, ಮೈಂದರ್ಗಿಯ ರೇಣುಕಾಚಾರ್ಯ ನಾಟ್ಯ ಸಂಘ, ತಾಳಿಕೋಟೆಯ ಖಾಸ್ಗೇತೇಶ್ವರ ನಾಟ್ಯ ಸಂಘ ಇನ್ನೂ ಮುಂತಾದವು.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ರೇಣುಕಾ

ಕನ್ನಡ ರಂಗಭೂಮಿಗೆ ಅಪಾರಸೇವೆಯನ್ನು ಮಾಡಿರುವ ಮರಿಯಮ್ಮನ ಹಳ್ಳಿಗೆ ಸಾಂಸ್ಕೃತಿಕವಾಗಿ ತನ್ನದೇ ಆದ ಒಂದು ಹಿರಿಮೆ ಇದೆ. ಈ ಗ್ರಾಮ ರಂಗಭೂಮಿಗೆ ಅನೇಕ ಉತ್ತಮ ಕಲಾವಿದೆಯರನ್ನು ನೀಡಿದೆ. ಇಂತಹವರಲ್ಲಿ ಗ್ರಾಮೀಣ ವೃತ್ತಿರಂಗಭೂಮಿ ಪ್ರತಿಭೆ ಶ್ರೀಮತಿ ರೇಣುಕಾ ಪ್ರಮುಖರು. ಹಿರಿಯ ರಂಗಕಲಾವಿದೆ ಎಸ್.ಸುವರ್ಣಮ್ಮನವರ ಮಗಳಾಗಿ 1949ರಲ್ಲಿ ಜನಿಸಿದ ಇವರು ತಮ್ಮ ಹತ್ತನೇ ವಯಸ್ಸಿಗೆ ಒಂದು ಸಾಮಾಜಿಕ ನಾಟಕದ ಚಿಕ್ಕ ಪಾತ್ರದ ಮೂಲಕ ರಂಗಭೂಮಿಗೆ ಪ್ರವೇಶಮಾಡಿ, ತಮ್ಮ ಪ್ರತಿಭೆಯ ಮೂಲಕ ಮುಂದೆ ಉತ್ತಮ ನಟಿಯಾಗುವ ಭರವಸೆ ಮೂಡಿಸಿದರು. ಪೌರಾಣಿಕ, ಐತಿಹಾಸಿಕ ಹಾಗು ಸಾಮಾಜಿಕ ನಾಟಕಗಳಲ್ಲಿ ತಮ್ಮ ಕಲಾಪ್ರತಿಭೆಯನ್ನು ಸಾರಿದ್ದಾರೆ. ಮರಿಯಮ್ಮನಹಳ್ಳಿಯ 'ಲಲಿತಕಲಾರಂಗ' ದ ಉಪಾಧ್ಯಕ್ಷರಾಗಿಯೂ ಸೇವೆ ಸಲ್ಲಿಸಿರುವ ಇವರು ಪುರುಷ ಪಾತ್ರಗಳನ್ನು ಸಹ ಜನಮೆಚ್ಚಿದ ರೀತಿಯಲ್ಲಿ ಅಭಿನಯಿಸಿದ್ದಾರೆ. ಜನಜಾಗೃತಿಗಾಗಿ ಬೀದಿ ನಾಟಕಗಳಲ್ಲಿ ಅಭಿನಯಿಸಿರುವ ಇವರು ದಿವಂಗತ ಎಂ.ಪಿ ಪ್ರಕಾಶರವರ ರಂಗಭಾರತಿ ತಂಡದ ನಾಟಕಗಳಲ್ಲಿಯೂ ಅಭಿನಯಿಸಿದ್ದಾರೆ.

ಹಲವಾರು ರೇಡಿಯೋ ನಾಟಕಗಳಿಗೆ ಕಂಠದಾನ ಮಾಡಿದ್ದಾರೆ.

ಇವರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಶರಣಪ್ಪ ಪಿ ಹಾಲಭಾವಿ

ಯಾದಗಿರಿ ಜಿಲ್ಲೆ ಸುರಪುರ ತಾಲ್ಲೂಕಿನ ಹಾಲಭಾವಿ ಗ್ರಾಮದ ಶರಣಪ್ಪ ಪಿ ಹಾಲಭಾವಿ ಪದವೀಧರರಾಗಿ ವೃತ್ತಿರಂಗ ನಟನೆಯನ್ನೇ ಉದ್ಯೋಗವನ್ನಾಗಿಸಿಕೊಂಡವರು. ಸ್ವತಃ ಕವಿ ಹಾಗೂ ನಾಟಕಕಾರರಾದ ಶ್ರೀ ಶರಣಪ್ಪನವರು ಬಂಗಾರದ ಗಿಣಿ, ಮಾಂಗಲ್ಯ ಯಾರದ್ದು, ನೀ ಮಡದಿ ಯಾರಿಗೆ, ನ್ಯಾಯದ ಗದ್ದುಗೆ ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ಇವರು ಬರೆದಿರುವ ಬಣ್ಣದ ಜಗತ್ತಿನಲ್ಲಿ ಹೆಣ್ಣಿನ ಸ್ಥಾನ ನಾಟಕ ರಚಿತವಾಗಿದ್ದು ಇನ್ನು ಮುದ್ರಣಗೊಂಡಿಲ್ಲ. ಸ್ಥಳೀಯವಾಗಿ ಹಲವಾರು ಸಂಘಸಂಸ್ಥೆಗಳೊಂದಿಗೆ ಸಂಪರ್ಕ ಹೊಂದಿದ್ದು ಹತ್ತಾರು ವೃತ್ತಿರಂಗಕಂಪನಿಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ನಟನೆ ಮಾಡಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಅನಂತ ನಾಯ್ಕ್

ಉತ್ತರ ಕನ್ನಡ ಜಿಲ್ಲೆಯ ಅಂಕೋಲದ ಅನಂತನಾಯ್ಕ ತಮ್ಮ ಪಿಯುಸಿ ಯ ನಂತರ ಹೊನ್ನಾವರದಲ್ಲಿ ಜನತಾ ವಿದ್ಯಾಲಯದಲ್ಲಿ ಕಚೇರಿ ಸಹಾಯಕರಾಗಿ ವೃತ್ತಿಯಲ್ಲಿದ್ದುಕೊಂಡು, ಪ್ರಸ್ತುತ ನಿರ್ದೇಶನ ಮತ್ತು ಅಭಿನಯಗಳಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ. ತಮ್ಮ ಶಾಲಾ ಕಾಲದಿಂದಲೇ ಹಾಡು, ನಾಟಕ, ಯಕ್ಷಗಾನಗಳಲ್ಲಿ ಏಕಪಾತ್ರಾಭಿನಯ ಮತ್ತು ನಾಟಕಗಳಲ್ಲಿ ಅಭಿನಯಿಸಿ, 1968ರಲ್ಲಿ ಸ್ತ್ರೀ ಪಾತ್ರದ ಮೂಲಕ ರಂಗಪ್ರವೇಶ ಮಾಡಿ 100ಕ್ಕೂ ಹೆಚ್ಚು ಪಾತ್ರಗಳಲ್ಲಿ ಅಭಿನಯಿಸಿದ್ದಾರೆ. ಅಂಕೋಲಾದಲ್ಲಿ ವಿಷ್ಣು ನಾಯಕರೊಡನೆ ರಂಗಸಂಘಟನೆ ಮಾಡಿ, ಹಾಲಕ್ಕಿ ಜನಾಂಗವನ್ನು ನಾಟಕ ರಂಗಕ್ಕೆ ಪರಿಚಯಿಸಿ, ಸುಮಾರು 25ವರ್ಷಗಳ ಕಾಲ ನಿರಂತರವಾಗಿ ಅವರಿಂದ ನಾಟಕಗಳನ್ನು ಆಡಿಸಿದ್ದಾರೆ. ತಮ್ಮ 40 ವರ್ಷಗಳ ಸುದೀರ್ಘ ರಂಗಬದುಕಿನಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಮಿಂಚಿದ್ದಾರೆ. ಉತ್ತರ ಕನ್ನಡ ಜಿಲ್ಲೆಯ ಬೀದಿ ನಾಟಕಗಳ ಚಳುವಳಿಯಲ್ಲಿ ಮುಂದಾಳತ್ವವಹಿಸಿ, ಸಾಕ್ಷರತೆ ಮುಂತಾದ ವಿಷಯಗಳುಳ್ಳ ಬೀದಿ ನಾಟಕಗಳ ಮೂಲಕ ಶೈಕ್ಷಣಿಕ ಹಾಗೂ ಸಾಮಾಜಿಕ ಅರಿವನ್ನು ಮೂಡಿಸಿದ್ದಾರೆ. ತಾವು ಕೆಲಸ ಮಾಡಿದ ಶಾಲೆಯಲ್ಲಿ ನಲವತ್ತು ವರ್ಷಗಳ ಕಾಲ ನಿರಂತರವಾಗಿ ಮಕ್ಕಳಲ್ಲಿ ರಂಗಪ್ರಜ್ಞೆ ಮೂಡಿಸಿ, ನೂರಾರು ಕಲಾವಿದರನ್ನು ರಂಗಭೂಮಿಗೆ ಪರಿಚಯ ಮಾಡಿಸಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಎಸ್. ಕೆಟ್ಟಿ

ಶ್ರೀ ಎಸ್. ಕೆಟ್ಟಿ ತಮ್ಮ ರಂಗಚಟುವಟಿಕೆಗಳನ್ನು ಪ್ರಾರಂಭಿಸಿದ್ದು, ನಾಲ್ಕು ದಶಕಗಳ ಹಿಂದೆ ಡಾ.ಬಿ.ವಿ.ರಾಜಾರಾಂ ಹಾಗೂ ಸಮಾನಮನಸ್ಕರಿಂದ ಸ್ಥಾಪನೆಗೊಂಡ ರಾಜ್ಯದ ಖ್ಯಾತ ಹವ್ಯಾಸಿ ತಂಡವಾದ ಕಲಾಗಂಗೋತ್ರಿಯಲ್ಲಿಯೇ. ಈ ತಂಡದ ಎಲ್ಲಾ ರಂಗಚಟುವಟಿಕೆಗಳಲ್ಲಿಯೂ ಕಳೆದ 30 ವರ್ಷಗಳಿಂದಲೂ ತೊಡಗಿಸಿಕೊಂಡಿರುವ ಇವರು ಆ ತಂಡಕ್ಕೆ ನಾಟಕ ಕ್ಷೇತ್ರದಲ್ಲಿ ಚಿರಸ್ಥಾಯಿ ಹೆಸರು ನೀಡಿದ 500ಕ್ಕೂ ಹೆಚ್ಚು ಪ್ರದರ್ಶನ ಕಂಡಿರುವ ಮುಖ್ಯಮಂತ್ರಿ ನಾಟಕದಲ್ಲಿ ವಿವಿಧ ಪಾತ್ರಗಳನ್ನು ನಿರ್ವಹಿಸಿರುತ್ತಾರೆ. ಇದೇ ತಂಡದ, 120ಕ್ಕೂ ಹೆಚ್ಚು ಕಲಾಪ್ರದರ್ಶನಗಳನ್ನು ಕಂಡಿರುವ ಮೈಸೂರು ಮಲ್ಲಿಗೆ ನಾಟಕದಲ್ಲಿ ಪ್ರಮುಖ ಪಾತ್ರಧಾರಿಯಾಗಿದ್ದಾರೆ. ಈಜಿಪ್ಟ್ ಮತ್ತು ರಷ್ಯಾ ದೇಶಗಳಲ್ಲಿ ಅಂತರರಾಷ್ಟ್ರೀಯ ರಂಗಹಬ್ಬಗಳಲ್ಲಿ ಖ್ಯಾತ ನಿರ್ದೇಶಕಿ ಮತ್ತು ರಾಜ್ಯಸಭಾ ಸದಸ್ಯೆ ಡಾ.ಬಿ.ಜಯಶ್ರೀ ಅವರ ನಿರ್ದೇಶನದಲ್ಲಿ ಲಕ್ಷಾಧಿಪತಿ ರಾಜನ ಕಥೆ ನಾಟಕದ ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ. ಬೆಂಗಳೂರಿನ ಖ್ಯಾತ ರಂಗತಂಡಗಳಾದ ನಟರಂಗ, ಪ್ರಯೋಗರಂಗ ಹಾಗೂ ಸ್ಪಂದನಗಳ ನಾಟಕಗಳಲ್ಲಿಯೂ ನಟಿಸಿರುವ ಇವರಿಗೆ ಮೂರು ಬಾರಿ ಉತ್ತಮ ಕಲಾವಿದ ಪುರಸ್ಕಾರ ದೊರೆತಿರುತ್ತದೆ. ಹಲವಾರು ದೂರದರ್ಶನದ ಧಾರವಾಹಿಗಳಲ್ಲಿ ಹಾಗೂ ಸುಮಾರು ಹತ್ತು ಚಲನಚಿತ್ರಗಳಲ್ಲಿ ನಟಿಸಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಗಣೇಶ ಕಾರಂತ

ರಾಜ್ಯದ ಹವ್ಯಾಸಿ ಕಲಾಸಂಘಟನೆಯ ನಕ್ಷೆಯಲ್ಲಿ ಬೈಂದೂರಿನ ಲಾವಣ್ಯ ಸಂಸ್ಥೆ ಪ್ರಮುಖ ಸ್ಥಾನ ಹೊಂದಿದೆ. ಈ ಸಂಸ್ಥೆಯ ನಿರ್ಮಾಣದ ಹಿಂದೆ, ಅನೇಕ ಕಲಾಪ್ರೇಮಿಗಳ ರಂಗಕರ್ಮಿಗಳ ಪರಿಶ್ರಮವಿದೆ. ಇವರಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಪ್ರಮುಖರಲ್ಲಿ ಗಣೇಶ ಕಾರಂತರು ಒಬ್ಬರು. ಲಾವಣ್ಯದ ಕಾರಂತರು ಎಂದೇ ಪ್ರಸಿದ್ಧರಾದ ಶ್ರೀಯುತರು ಲಾವಣ್ಯದ ಹುಟ್ಟು ಬೆಳವಣಿಗೆಯಲ್ಲಿ ಎಲ್ಲಾ ರೀತಿಯಲ್ಲಿಯೂ ಪರಿಶ್ರಮದಿಂದ ದುಡಿದಿದ್ದಾರೆ.

ಸಾಂಸ್ಕೃತಿಕವಾಗಿ ಸಂಪದ್ಭರಿತವಾದ ಕುಟುಂಬದಲ್ಲಿ ಜನಿಸಿದ ಕಾರಂತರಲ್ಲಿ ಬೈಂದೂರಿನ ತಮ್ಮ ಮನೆಯ ಬಳಿಯಲ್ಲಿರುವ ದೇವಸ್ಥಾನದಲ್ಲಿ ನಡೆಯುತ್ತಿದ್ದ ಯಕ್ಷಗಾನ, ಭಜನೆ ಮತ್ತು ತಾಳಮದ್ದಲೆಗಳು ಕಲಾವಿದನನ್ನಾಗಿ ರೂಪಿಸಿದವು. ಹೋಟೆಲ್ ಉದ್ಯಮದಲ್ಲಿ ಜೀವನದ ನೆಲೆ ಕಂಡುಕೊಂಡ ಇವರು ಯಶಸ್ವಿ ಹೋಟೆಲ್ ಉದ್ಯಮಿಯಾಗಿ ಇದೇ ಯಶಸ್ಸನ್ನು ರಂಗಭೂಮಿಯಲ್ಲಿಯೂ ಕಂಡು, ಲಾವಣ್ಯದ ಮೂಲಕ ತಮ್ಮ ಕನಸನ್ನು ಸಾಕಾರಗೊಳಿಸಿಕೊಂಡರು. 15ನೇ ವಯಸ್ಸಿನಲ್ಲಿ ಬಣ್ಣ ಹಚ್ಚಿದ ಕಾರಂತರು ಇದುವರೆವಿಗೆ ರಂಗಸಾಧಕರಾಗಿಯೇ ಉಳಿದಿದ್ದಾರೆ. ಹಲವಾರು ನಾಟಕಗಳಲ್ಲಿ ಸ್ತ್ರೀ ಪಾತ್ರಗಳನ್ನು ಸಮರ್ಥವಾಗಿ ಅಭಿನಯಿಸಿದ್ದಾರೆ. ಉತ್ತಮ ನಿರ್ದೇಶಕರಾಗಿ, ಸಂಘಟಕರಾಗಿ, ನಟರಾಗಿ ರಂಗಸೇವೆ ಮಾಡಿರುವ ಶ್ರೀ ಕಾರಂತರಿಗೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಸಂದಿವೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ದಿವಾಕರ ಹೆಗಡೆ

ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ ಬಹುಮುಖ ಪ್ರತಿಭೆಯಾದ ದಿವಾಕರ್ ಹೆಗಡೆ ವಾಣಿಜ್ಯ ಹಾಗೂ ಕಾನೂನು ಪದವೀಧರ. ಪ್ರಸ್ತುತ ಧಾರವಾಡದ ಆಕಾಶವಾಣಿಯಲ್ಲಿ ಕಾರ್ಯಕ್ರಮ ಅಧಿಕಾರಿಯಾಗಿರುವ ಇವರ ವಿಶೇಷ ಆಸಕ್ತಿಗಳೆಂದರೆ ಯಕ್ಷಗಾನ, ನಾಟಕ, ನೃತ್ಯರೂಪಕ, ಸಾಹಿತ್ಯ ಹಾಗೂ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಘಟನೆ. ಉತ್ತಮ ಮಾತುಗಾರ ಹಾಗೂ ಬರಹಗಾರರಾಗಿರುವ ಶ್ರೀಯುತರು ಯುದ್ಧಭಾರತ, ಕಲಿಯೋ ಆಟ, ಬೇರು, ಒಡ್ಡು, ಶೋಧ, ಅಜ್ಞಾತ ಅಪಾರ್ಟ್‌ಮೆಂಟ್, ಅನುಮಾನ, ಉದ್ಧಾರ, ಸಂಜೆ ಮುಂತಾದ ನಾಟಕಗಳನ್ನು ಬರೆದು ಶ್ರೀಗಂಧದ ಸಂಸಾರ ಎಂಬ ಜೀವನ ಚರಿತ್ರೆಯನ್ನು ಸಿದ್ಧಪಡಿಸಿದ್ದಾರೆ. ಇದು ಮರಾಠಿಗೆ ಅನುವಾದವಾಗಿದೆ. ನಾಟಕ ರಚನೆಗೆ ಕೆ.ವಿ. ಸುಬ್ಬಣ್ಣ ಬಹುಮಾನ ಪಡೆದಿದ್ದಾರೆ. ಯಕ್ಷಗಾನ ಮತ್ತು ಗೀತರೂಪಕಗಳನ್ನು ಸುಲಲಿತವಾದ ಕನ್ನಡದಲ್ಲಿ ರಚಿಸಿರುವ ಹೆಗಡೆಯವರಿಗೆ ಹಲವಾರು ಭಾಷೆಗಳ ಪರಿಚಯವುಂಟು. ದೊಡ್ಡ ಸಾಧನೆ ಮಾಡಿರುವ ಶ್ರೀಯುತರಿಗೆ ಈಗಾಗಲೇ ಹಲವಾರು ಪ್ರಶಸ್ತಿ ಪುರಸ್ಕಾರಗಳು ಲಭಿಸಿರುತ್ತವೆ. ಇವುಗಳಲ್ಲಿ ಯಕ್ಷಗಾನ ಮದ್ದಲೆಗೆ ಆಕಾಶವಾಣಿ ರಾಜ್ಯಪ್ರಶಸ್ತಿ, ಮೇಘಮೇದಿನಿ ಸಂಗೀತ ರೂಪಕಕ್ಕೆ ಆಕಾಶವಾಣಿ ರಾಷ್ಟ್ರಪ್ರಶಸ್ತಿಗಳು ಮುಖ್ಯವಾದವು. ಇವಲ್ಲದೆ, ಬಿಡಿ ಲೇಖನಗಳು, ಕವನಗಳು, ಭಾವಗೀತೆಗಳು ಮತ್ತು ಭಕ್ತಿಗೀತೆಗಳನ್ನು ಸಹ ದಿವಾಕರ ಹೆಗಡೆಯವರು ರಚಿಸಿರುತ್ತಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಕಲ್ಪನಾ ನಾಗನಾಥ್

ಬೆಂಗಳೂರಿನ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ ಉದ್ಯೋಗಿ ಯಾಗಿರುವ ಶ್ರೀಮತಿ ಕಲ್ಪನಾ ನಾಗನಾಥ್ 1978ರಲ್ಲಿ ಹವ್ಯಾಸಿ ರಂಗಭೂಮಿಗೆ ಪ್ರವೇಶ ಮಾಡಿದ ಖ್ಯಾತ ರಂಗಗೀತೆ ಗಾಯಕಿ ಮತ್ತು ನಟಿ. ರಾಜ್ಯದ ಹಲವಾರು ಖ್ಯಾತ ರಂಗತಂಡಗಳಾದ ಬೆನಕ, ಸ್ಪಂದನ, ರಂಗಸಂಪದ, ಸೂತ್ರಧಾರ, ಸಂಕೇತ್, ಕಲಾಗಂಗೋತ್ರಿ, ರಂಗನಿರಂತರ, ನಾಟ್ಯದರ್ಪಣಗಳೊಡನೆ ನಟನೆ ಹಾಗೂ ಹಾಡುಗಾರಿಕೆ ಮೂಲಕ ಒಡನಾಟವನ್ನು ಹೊಂದಿರುವ ಇವರು ಖ್ಯಾತ ರಂಗನಿರ್ದೇಶಕರಾಗಿರುವ ಬಿ.ವಿ.ಕಾರಂತ, ಪ್ರೇಮ ಕಾರಂತ, ಬಿ.ಜಯಶ್ರೀ, ಆರ್.ನಾಗೇಶ್, ಸಿ.ಜಿ.ಕೆ, ನಾಗಾಭರಣ, ಶಂಕರ್‌ನಾಗ್, ಬಿ.ಸುರೇಶ್, ಡಾ.ಬಿ.ವಿ.ರಾಜಾರಾಂ, ಸುರೇಶ್ ಅನಗಳ್ಳಿ ಮುಂತಾದವರ ಅನೇಕ ನಾಟಕಗಳಲ್ಲಿ ನಟಿಯಾಗಿ, ಗಾಯಕಿಯಾಗಿ ರಂಗಸೇವೆ ಸಲ್ಲಿಸಿದ್ದಾರೆ. ಮರುಪ್ರದರ್ಶನಗಳನ್ನು ನೀಡಿರುವ ರಾಜ್ಯದ ಖ್ಯಾತ ನಿರ್ದೇಶಕರ ಜನಪ್ರಿಯ ನಾಟಕಗಳಲ್ಲಿ ನಟಿಸಿ, ರಂಗಗೀತೆಗಳನ್ನು ಹಾಡಿರುತ್ತಾರೆ. ರಾಜ್ಯದಲ್ಲಿ, ದೇಶದ ಇತರೆಡೆಗಳಲ್ಲಿ, ಲಂಡನ್, ಅಮೆರಿಕ, ಆಸ್ಟ್ರೇಲಿಯಾಗಳಲ್ಲಿ ತಮ್ಮ ನಟನೆ ಹಾಗೂ ಹಾಡುಗಾರಿಕೆ ಮೂಲಕ ಕಲಾರಸಿಕರ ಗಮನ ಸೆಳೆದಿದ್ದಾರೆ. ಹಲವಾರು ರಂಗಗೀತೆ ಧ್ವನಿ ಸುರುಳಿಗಳಲ್ಲಿ ತಮ್ಮ ಕಂಠಶ್ರೀಯನ್ನು ಕನ್ನಡಿಗರಿಗೆ ನೀಡಿರುವ ಇವರು ರಂಗಗೀತಾ ಶಿಬಿರಗಳನ್ನು ನಡೆಸಿರುತ್ತಾರೆ. ಚಲನಚಿತ್ರ ಹಾಗೂ ಧಾರವಾಹಿಗಳಲ್ಲೂ ನಟಿಯಾಗಿ, ಹಿನ್ನಲೆ ಗಾಯಕಿಯಾಗಿ, ಕಂಠದಾನ ಕಲಾವಿದೆಯಾಗಿ ಸೇವೆ ಸಲ್ಲಿಸಿರುತ್ತಾರೆ.

ಇವರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಯು.ಎಸ್. ರಾಮಣ್ಣ

ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ಶ್ರೀ ರಾಮಣ್ಣನವರು ಜನಪದ ಹಾಗೂ ನಾಟಕ ಕಲೆಗಳಲ್ಲಿ ಪರಿಣತಿ ಹೊಂದಿದ್ದಾರೆ. ವೃತ್ತಿಯಲ್ಲಿ ಜಾನಪದ ವಸ್ತುಸಂಗ್ರಹಾಲಯದ ಕ್ಯೂರೇಟರ್ ಆಗಿ ಕಾರ್ಯ ನಿರ್ವಹಿಸಿರುವ ಶ್ರೀಯುತರು ಕಂಸಾಳೆ, ಮೂಡಲಪಾಯ ಯಕ್ಷಗಾನ ಮತ್ತು ಕರಪಾಲಮೇಳಗಳ ಪ್ರದರ್ಶನ ಹಾಗೂ ಪ್ರಾತ್ಯಕ್ಷಿಕೆ ನೀಡಿರುತ್ತಾರೆ. ರಾಜ್ಯದ ಹಲವಾರು ಜಾನಪದ ವಸ್ತುಸಂಗ್ರಹಾಲಯಗಳಿಗೆ ತಜ್ಞ ಸಲಹೆಗಾರರಾದ ಇವರು ವಿದ್ಯಾರ್ಥಿ ದೆಸೆಯಿಂದಲೂ ರಂಗಸೇವೆಯನ್ನು ಮಾಡಿರುತ್ತಾರೆ. ತಮ್ಮ ನೂರಾರು ಏಕವ್ಯಕ್ತಿ ಪ್ರದರ್ಶನಗಳ ಮೂಲಕ ಶಾಲಾಕಾಲೇಜು ವಿದ್ಯಾರ್ಥಿಗಳಲ್ಲಿ ರಂಗಪ್ರಜ್ಞೆ ಹಾಗೂ ರಂಗಪ್ರೇಮವನ್ನು ಮೂಡಿಸಿದ್ದಾರೆ. ಹತ್ತಾರು ನಾಟಕಗಳನ್ನು ನಿರ್ದೇಶಿಸಿ, 70ಕ್ಕೂ ಹೆಚ್ಚಿನ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ರಾಜ್ಯದ ರಂಗವಿಮರ್ಶಕರು ಇವರ ನಿರ್ದೇಶನ ಹಾಗೂ ನಟನೆಯನ್ನು ಮೆಚ್ಚಿಕೊಂಡಿದ್ದಾರೆ. ಸಂಪನ್ಮೂಲ ವ್ಯಕ್ತಿಯಾಗಿ ರಾಜ್ಯದ ವಿವಿಧ ನಾಟಕ ಸಂಸ್ಥೆಗಳು ನಡೆಸಿದ ಕಮ್ಮಟಗಳಲ್ಲಿ, ಶಿಬಿರಗಳಲ್ಲಿ ಭಾಗವಹಿಸಿ, ಉತ್ತಮ ರಂಗಕರ್ಮಿ ಎನಿಸಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಎಸ್. ವೆಂಕಟೇಶಪ್ಪ

ಕೋಲಾರ ಜಿಲ್ಲೆ ಮುಳಬಾಗಲು ತಾಲ್ಲೂಕಿನ 61 ವರ್ಷದ ಶ್ರೀ ವೆಂಕಟೇಶಪ್ಪನವರಿಗೆ 35 ವರ್ಷಗಳ ರಂಗಾನುಭವ. ನಟರಾಗಿ, ನಿರ್ದೇಶಕರಾಗಿ, ಸಾರಂಗಧರ ಕುರುಕ್ಷೇತ್ರ, ರಾಮಾಂಜನೇಯ ಯುದ್ಧ, ಸಂಪೂರ್ಣ ರಾಮಾಯಣ, ವಿರಾಟಪರ್ವ, ರಾಜಸೂಯಯಾಗ, ರಾಜ ಸತ್ಯವ್ರತ, ರಾಜಾವಿಕ್ರಮ, ದಾನವೀರ ಶೂರಕರ್ಣ, ಕೀಚಕವಧೆ, ಲಂಕಾದಹನ, ಕೃಷ್ಣಲೀಲೆ ಮುಂತಾದ ಪೌರಾಣಿಕ ನಾಟಕಗಳನ್ನು ರಾಜ್ಯದ ಹಲವೆಡೆ ಹಾಗೂ ತಮ್ಮ ಜಿಲ್ಲೆಯಾದ್ಯಂತ ನಿರ್ದೇಶಿಸಿ, ರಂಗದ ಮೇಲೆ ತಂದಿದ್ದೇ ಅಲ್ಲದೆ, ಹಲವು ನಾಟಕಗಳಲ್ಲಿ ನಟನೆಯನ್ನು ಮಾಡಿದ್ದಾರೆ. ಉತ್ತಮ ಹಾರ್ಮೋನಿಯಂ ವಾದಕರಾದ ಶ್ರೀಯುತರು ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಇವರೆಗೆ 150ಕ್ಕೂ ಹೆಚ್ಚಿನ ನಾಟಕಗಳನ್ನು ಕಲಿಸಿರುತ್ತಾರೆ. ಇತ್ತೀಚೆಗೆ ಬೆಳಗಾವಿಯಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದಲ್ಲಿ ತಮ್ಮ ಜಿಲ್ಲೆಯ ಪೌರಾಣಿಕ ವೇಷಧಾರಿಗಳೊಂದಿಗೆ ಪಾಲ್ಗೊಂಡು ನುಡಿತೇರಿಗೆ ಕಳೆಕಟ್ಟಿಸಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಕೂರ್ಗಿ ಶಂಕರನಾರಾಯಣ ಉಪಾಧ್ಯಾಯ

ಮಂಗಳೂರಿನ ಕಟೀಲಿನಲ್ಲಿ 1955ರಲ್ಲಿ ಜನಿಸಿದ ಉಪಾಧ್ಯಾಯರು ಪ್ರಸ್ತುತ ಬೆಂಗಳೂರಿನ ದೂರವಾಣಿ ಇಲಾಖೆಯ ಉದ್ಯೋಗಿ. ಯಕ್ಷಗಾನ, ನಾಟಕ, ಸಾಹಿತ್ಯ, ಸಂಗೀತ ಹಾಗೂ ನಾಟ್ಯ ಪ್ರದರ್ಶನಗಳನ್ನು ಹವ್ಯಾಸವಾಗಿ ಹೊಂದಿರುವ ಉಪಾಧ್ಯಾಯರು ಹಲವಾರು ಯಕ್ಷಗಾನ ಪ್ರದರ್ಶನಗಳಲ್ಲಿ ನಟಿಸಿ ತಾಳಮದ್ದಲೆಗಳಲ್ಲಿ ಪಾಲ್ಗೊಂಡಿದ್ದಾರೆ.

1985ರಲ್ಲಿ ಬೆಂಗಳೂರಿನಲ್ಲಿ ಯಕ್ಷಾಂಗಣ ತಂಡವನ್ನು ನಿರ್ಮಿಸಿ, ತನ್ಮೂಲಕ ಹಲವಾರು ಯಕ್ಷಗಾನ ಹಾಗೂ ನಾಟಕ ಪ್ರದರ್ಶನಗಳನ್ನು ನೀಡಿದ್ದಾರೆ. ಬೆಂಗಳೂರು ದೂರದರ್ಶನಕ್ಕೆ ಮೊತ್ತಮೊದಲ ತುಳು ಹಾಗೂ ಸಂಸ್ಕೃತ ಯಕ್ಷಗಾನದ ನಿರ್ದೇಶನ ಕಾರ್ಯ ಮಾಡಿದ್ದಾರೆ. ಅನೇಕ ನಾಟಕಗಳಲ್ಲಿ, ನೂರಾರು ಪ್ರದರ್ಶನಗಳಲ್ಲಿ ನಟರಾಗಿ ಅಭಿನಯಿಸಿದ್ದಾರೆ.

ತಮ್ಮ ಮನೆಯಲ್ಲೇ ಒಂದು ಸಣ್ಣವೇದಿಕೆ ನಿರ್ಮಿಸಿ ಸಾಂಸ್ಕೃತಿಕ ಕಾರ್ಯಕ್ರಮ ನಡೆಸುತ್ತಿದ್ದಾರೆ. ಶಿವರಾಮ ಕಾರಂತರ ಗೀತ ನಾಟಕ ಕೀಚಕ ಸೈರಂಧ್ರಿಯ ಯಕ್ಷಗಾನ ರೂಪಕ ರಚನೆ ಮಾಡಿದ್ದಾರೆ. ಹಲವಾರು ನಾಟಕಗಳನ್ನು ರಚನೆ ಮಾಡಿರುವ ಶ್ರೀಯುತರ ಪ್ರಮುಖ ರಚನೆಗಳೆಂದರೆ, ಮಧ್ಯಮ ವ್ಯಾಯೋಗ, ಮುದ್ರಾರಾಕ್ಷಸ (ಅನುವಾದ) ಹಾಗೂ ಇತ್ತೀಚೆಗೆ ಖ್ಯಾತಿ ಪಡೆದ ಎಸ್.ಎಲ್. ಭೈರಪ್ಪನವರ "ಮಂದ್ರ"ದ ನಾಟಕದ ರೂಪ, ಬೆಳಗೆರೆ ಕೃಷ್ಣಶಾಸ್ತ್ರಿಗಳ "ಏಗ್ದಾಗೆಲ್ಲಾ ಐತೆ" ನಾಟಕ ರೂಪ ರಚನೆ. ಉತ್ತಮ ಪಿಟೀಲು ವಾದಕರಾದ ಇವರು ಶತಾವಧಾನಿ ಆರ್.ಗಣೇಶ ಅವರ 80ಕ್ಕೂ ಹೆಚ್ಚಿನ ಅವಧಾನಗಳಲ್ಲಿ ಪೃಚ್ಛಕನಾಗಿ ಭಾಗವಹಿಸಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಎ.ಸಿ. ಚಂದ್ರಪ್ಪ

ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕಿನ ಅಜ್ಜಂಪುರದ ಶ್ರೀ ಎ.ಸಿ.ಚಂದ್ರಪ್ಪನವರು ಉತ್ತಮ ಸಂಘಟಕರು. 1975ರಿಂದಲೇ ಸ್ಥಳೀಯ ಖ್ಯಾತ ಹವ್ಯಾಸಿ ರಂಗತಂಡವಾದ ಕಲಾಸೇವಾಸಂಘದೊಂದಿಗೆ ರಂಗಭೂಮಿಯ ಸೇವೆ ಮತ್ತು ಒಡನಾಟವನ್ನು ಆರಂಭಿಸಿಕೊಂಡರು.

ಇವರು ನಡೆಸುತ್ತಿದ್ದ ರಾಜ್ಯಮಟ್ಟದ ನೃತ್ಯ, ಚಿತ್ರಕಲೆ ಹಾಗೂ ನಾಟಕ ಸ್ಪರ್ಧೆಗಳಲ್ಲಿ ರಂಗಕರ್ಮಿಯಾಗಿ ದುಡಿದು, ಈ ಸಂಸ್ಥೆಯು ಅಭಿನಯಿಸುತ್ತಿದ್ದ ನಾಟಕಗಳಲ್ಲಿ ನಟನಾಗಿ ಹಾಗೂ ಸಂಘಟಕನಾಗಿ ಕೆಲಸ ಮಾಡಿದ ಅನುಭವದಿಂದ ಮುಂದೆ ತಮ್ಮದೇ ಆದ ಗೆಳೆಯರ ಬಳಗ ರಂಗತಂಡ ಎಂಬ ಹವ್ಯಾಸಿ ರಂಗಸಂಸ್ಥೆಯನ್ನು ಸ್ಥಾಪಿಸಿ, 1988 ಏಪ್ರಿಲ್-ಮೇನಲ್ಲಿ 45 ದಿನಗಳ ರಂಗಶಿಬಿರ (ನಿರ್ದೇಶಕ: ಧ್ರುವರಾಜ ದೇಶಪಾಂಡೆ), 1989ರಲ್ಲಿ 20 ದಿನಗಳ ರಂಗಕಾರ್ಯಗಾರ (ನಿರ್ದೇಶಕ: ಇಕ್ಬಾಲ್ ಅಹ್ಮದ್), 1990ರಲ್ಲಿ ಹಿರಿಯ ರಂಗ ಕಲಾವಿದರಾಗಿ 30 ದಿನಗಳ ರಂಗ ನಿವರ್ತನ ಶಿಬಿರ (ನಿರ್ದೇಶಕ: ಧ್ರುವರಾಜ ದೇಶಪಾಂಡೆ), 1991ರಿಂದ ಇಲ್ಲಿಯವರೆವಿಗೂ ಶಾಲಾ ಮಕ್ಕಳಿಗಾಗಿ ಮಕ್ಕಳ ರಂಗಶಿಬಿರಗಳನ್ನು ಸಂಘಟಿಸಿ, ಸ್ಥಳೀಯ ಯುವ ಕಲಾವಿದರಲ್ಲಿ ನಾಟಕದ ಅಭಿರುಚಿಯನ್ನು ಬೆಳೆಸಿದ್ದಾರೆ.

1988ರಿಂದ ಇಲ್ಲಿಯವರೆವಿಗೂ ರಾಜ್ಯಮಟ್ಟದ ಹವ್ಯಾಸಿ ನಾಟಕೋತ್ಸವ ಏರ್ಪಡಿಸಿ, ರಾಜ್ಯದ ಖ್ಯಾತ ರಂಗಕಲಾವಿದರ ಹಾಗೂ ಸಂಸ್ಥೆಗಳ ಉತ್ತಮ ನಾಟಕ ಪ್ರದರ್ಶನಗಳನ್ನು ಏರ್ಪಡಿಸುತ್ತಾರೆ. ಅಜ್ಜಂಪುರದಲ್ಲಿ ಸ್ಥಳೀಯ ಹಾಗೂ ಸರ್ಕಾರದ ಆರ್ಥಿಕ ನೆರವಿನೊಂದಿಗೆ ಕೈಲಾಸಂ ಕಲಾಕ್ಷೇತ್ರ ಬಯಲು ರಂಗಮಂದಿರ ನಿರ್ಮಾಣ ಮಾಡಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಎನ್.ಆರ್. ಪ್ರಕಾಶ್

ತಮ್ಮ 10ನೇ ವಯಸ್ಸಿನಿಂದ ರಂಗಭೂಮಿಯ ನಂಟು ಬೆಳೆಸಿಕೊಂಡಿರುವ ಎನ್.ಆರ್.ಪ್ರಕಾಶ್ (ಆಚಿ)ರವರು ಶಿವಮೊಗ್ಗದ ನಿವಾಸಿ. ಸುಮಾರು 18 ವರ್ಷಗಳ ಕಾಲ ಭಾರತೀಯ ಕುಟುಂಬ ಯೋಜನೆ ಸಂಘದಲ್ಲಿ ಸೇವೆ ಸಲ್ಲಿಸಿ, ಮೂರು ವರ್ಷಗಳ ಕಾಲ ಪತ್ರಕರ್ತರಾಗಿ ದುಡಿದು, ಪ್ರಸ್ತುತ ಶಿವಮೊಗ್ಗದ ಜ್ಞಾನದೀಪ ಶಾಲೆಯಲ್ಲಿ ಪಠ್ಯೇತರ ಚಟುವಟಿಕೆಗಳ ಸಂಯೋಜಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

1965ರಿಂದ ಹಲವು ವರ್ಷಗಳ ಕಾಲ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಉತ್ತಮ ನೈತಿಕ ಶಿಕ್ಷಣ ನಾಟಕಗಳನ್ನು ನಿರ್ದೇಶಿಸಿರುತ್ತಾರೆ. ಶಿವಮೊಗ್ಗದ ಕಲಾಜ್ಯೋತಿ ತಂಡದ ನಾಟಕೋತ್ಸವದ ಮಾರ್ಗದರ್ಶಕರಾಗಿ ಕಾರ್ಯನಿರ್ವಹಿಸಿರುತ್ತಾರೆ. ಇದೇ ನಗರದ ಖ್ಯಾತ ಅಭಿನಯ ತಂಡ ಪ್ರದರ್ಶಿಸಿದ ಎಲ್ಲಾ ನಾಟಕಗಳಿಗೂ ರಂಗಪರಿಕರ ಮತ್ತು ರಂಗಸಜ್ಜಿಕೆ ನೆರವು ನೀಡಿದ್ದೇ ಅಲ್ಲದೆ ಹಲವು ಪಾತ್ರಗಳನ್ನು ನಿರ್ವಹಿಸಿರುತ್ತಾರೆ.

ರಂಗಪ್ರಯೋಗ, ರಂಗಶತಕ, ನಮ್ ಟೀಮ್, ಶ್ರೀಗಂಧ, ರಂಗಜಾವಡಿ ಹಾಗೂ ರಂಗಸ್ನೇಹಿತ್ರು ಮುಂತಾದ ಹಲವಾರು ತಂಡಗಳಿಗೆ ರಂಗಸಜ್ಜಿಕೆಯ ನೆರವು ನೀಡಿರುತ್ತಾರೆ.

ಹಲವಾರು ಪುರಸ್ಕಾರಗಳನ್ನು ಕಳೆದ ಐದು ದಶಕಗಳಿಂದ ಪಡೆದಿರುವ ಶ್ರೀಯುತರು ಪ್ರಸ್ತುತ ರಂಗಸೇವೆಯಲ್ಲಿ ನಿರತರಾಗಿದ್ದು, ಶಿವಮೊಗ್ಗದ ಹಲವಾರು ಸಾಂಸ್ಕೃತಿಕ ಸಂಘಟನೆಗಳಲ್ಲಿ ಜವಾಬ್ದಾರಿಯುತ ಸ್ಥಾನಗಳನ್ನು ಹೊಂದಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ವಿಜಯಲಕ್ಷ್ಮೀ ಶೆಟ್ಟಿ

ವೃತ್ತಿರಂಗ ಕಲಾವಿದೆ, ಗುಳೇದಗುಡ್ಡ

ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಖ್ಯಾತ ಕಲಾವಿದೆಯಾದ ಶ್ರೀಮತಿ ವಿಜಯಲಕ್ಷ್ಮೀ ಗುಳೇದಗುಡ್ಡ ಶಾಲಾ ದಿನಗಳಲ್ಲಿ ಹವ್ಯಾಸಿ ರಂಗಭೂಮಿಯತ್ತ ಸೆಳೆಯಲ್ಪಟ್ಟರು. ತಮ್ಮ ಹೈಸ್ಕೂಲ್ ಶಿಕ್ಷಣದ ನಂತರ ಮೈಂದರ್ಗಿಯ ಜಗದ್ಗುರು ರೇಣುಕಾಚಾರ್ಯ ನಾಟ್ಯಸಂಘದಲ್ಲಿ ಇವರ ರಂಗಚಟುವಟಿಕೆ ಪ್ರಾರಂಭವಾಯಿತು. ಉತ್ತಮ ನೃತ್ಯಗಾರ್ತಿ ನಟಿ ಹಾಗೂ ಗಾಯಕಿ ಶ್ರೀಮತಿ ವಿಜಯಲಕ್ಷ್ಮೀಯವರು ಭರತನಾಟ್ಯವನ್ನು ಕಲಿತಿದ್ದಾರೆ. ಇವರು ನಟಿಸಿದ ಹಲವಾರು ಸಾಮಾಜಿಕ, ಪೌರಾಣಿಕ ಹಾಗೂ ಐತಿಹಾಸಿಕ ನಾಟಕಗಳು ನೂರಾರು ಪ್ರದರ್ಶನಗಳನ್ನು ಕಂಡಿವೆ.

ಅದರಲ್ಲೂ ಇವರ ನಟನೆಯ ಎಚ್ಚರ ತಂಗಿ ಎಚ್ಚರ ನಾಟಕ 400ಕ್ಕೂ ಹೆಚ್ಚಿನ ಪ್ರದರ್ಶನವನ್ನು ಕಂಡಿವೆ. ಇವರ ವೃತ್ತಿಕಂಪನಿಯಾದ ಸಂಗಮೇಶ್ವರ ನಾಟ್ಯಸಂಘ, ಆಶಾಪೂರದ ಮೂಲಕ ಪ್ರದರ್ಶನಗೊಂಡ ವೀರರಾಣಿ ಕಿತ್ತೂರು ಚೆನ್ನಮ್ಮ ಐತಿಹಾಸಿಕ ನಾಟಕದಲ್ಲಿ ಇವರು ವೈವಿಧ್ಯಮಯ ಪಾತ್ರಗಳಲ್ಲಿ ಕಾಣಿಸಿಕೊಂಡಿದ್ದು, ಇದು ರಾಜ್ಯದಾದ್ಯಂತ 1600ಕ್ಕೂ ಹೆಚ್ಚಿನ ಪ್ರದರ್ಶನವನ್ನು ಕಂಡಿದೆ

ಇವರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಡಾ. ಚಂದ್ರು ಕಾಳೇನಹಳ್ಳಿ

ಹಾಸನ ಜಿಲ್ಲೆ ಚನ್ನರಾಯಪಟ್ಟಣದ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ.ಚಂದ್ರು ಕಾಳೇನಹಳ್ಳಿ, ಸಾಹಿತ್ಯ, ಜಾನಪದ ಹಾಗೂ ರಂಗಭೂಮಿ ಕ್ಷೇತ್ರಗಳಿಗೆ ಗಣನೀಯ ಸೇವೆ ಸಲ್ಲಿಸಿದ್ದಾರೆ. 1976ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಜಾನಪದ ಎಂ.ಎ. ಪದವಿಯಲ್ಲಿ ಪ್ರಥಮರ್‍ಯಾಂಕ್ ಗಳಿಸಿ, ಶಿಕ್ಷಣ ಕ್ಷೇತ್ರ ಪ್ರವೇಶ ಮಾಡಿದ ಶ್ರೀಯುತರು ಸಮತಾರಂಗವನ್ನು ಹುಟ್ಟುಹಾಕಿ, ತನ್ಮೂಲಕ ಹಲವಾರು ನಾಟಕಗಳನ್ನು ರಂಗದ ಮೇಲೆ ತಂದಿದ್ದಾರೆ.

ಉತ್ತಮ ನಿರ್ದೇಶಕರಾದ ಇವರು ಹಲವಾರು ನಾಟಕ ಸ್ಪರ್ಧೆಗಳಲ್ಲಿ ನಿರ್ದೇಶನಕ್ಕೆ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಸ್ವತಃ ನಾಟಕ ರಚನೆಕಾರರೂ ಆಗಿರುವ ಡಾ. ಚಂದ್ರು ಅವರ ಅನೇಕ ನಾಟಕಗಳು ಅವರಿಂದಲೇ ನಿರ್ದೇಶನಗೊಂಡು, ರಾಜ್ಯದ ವಿವಿಧೆಡೆ ಪ್ರದರ್ಶನಗೊಂಡಿವೆ. ಹಲವಾರು ಸಾಂಸ್ಕೃತಿಕ, ಸಾಮಾಜಿಕ, ಶೈಕ್ಷಣಿಕ ಸಂಘಟನೆಗಳನ್ನು

ಸಮರ್ಥವಾಗಿ ನಿರ್ವಹಿಸಿರುವ ಇವರು ವಿವಿಧ ಪ್ರಮುಖ ಸಂಘಸಂಸ್ಥೆಗಳಲ್ಲಿ ಜವಾಬ್ದಾರಿಯುತ ಸ್ಥಾನಗಳಲ್ಲಿ ಕಾರ್ಯನಿರ್ವಹಿಸಿರುತ್ತಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಡಾ. ರಾಜಪ್ಪ ದಳವಾಯಿ

ಕನ್ನಡ ನಾಟಕ ಹಾಗೂ ಜಾನಪದ ಕ್ಷೇತ್ರಗಳಲ್ಲಿ ಖ್ಯಾತನಾಮರಾದ ರಾಜಪ್ಪ ದಳವಾಯಿ ಗುಲ್ಬರ್ಗಾ ಜಿಲ್ಲೆಯ ಕನ್ನಡ ಅಧ್ಯಯನ ಸಂಸ್ಥೆಯ ಸಹಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಬೆಂಗಳೂರು ಹಾಗೂ ಮೈಸೂರು ವಿಶ್ವವಿದ್ಯಾನಿಲಯಗಳಲ್ಲಿ ಮೇಲ್ಕಂಡ ವಿಷಯಗಳಲ್ಲಿ ಅಧ್ಯಾಪಕ ವೃತ್ತಿಯನ್ನು ಮುಗಿಸಿದ ಶ್ರೀಯುತರು ಮೈಸೂರು ವಿಶ್ವವಿದ್ಯಾನಿಲಯದ ಯು.ಜಿ.ಸಿ ಫೆಲೋ ಆಗಿ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಚಾರಿತ್ರಿಕ ಕಾದಂಬರಿಗಳ ಬಗ್ಗೆ ಬಾಹ್ಯ ಸಂಶೋಧಕರಾಗಿ ಗಿರೀಶ್ ಕಾರ್ನಾಡ್ ರ ನಾಟಕಗಳ ಬಗ್ಗೆ ಎಂ.ಫಿಲ್ ಪದವಿ ಪಡೆದು, ಕನ್ನಡ ಸಂಸ್ಕೃತಿ ವಿಷಯದಲ್ಲಿ ಪಿ.ಹೆಚ್.ಡಿ ಪದವಿ ಪಡೆದ ಬಹುಶ್ರುತ ನಾಟಕಕಾರ, ನಟ, ನಿರ್ದೇಶಕ. ಹಲವಾರು ಸಾಂಸ್ಕೃತಿಕ, ಸಾಮಾಜಿಕ ರಂಗಸಂಸ್ಥೆಗಳೊಡನೆ ನಿಕಟ ಸಂಪರ್ಕ ಹೊಂದಿರುವ ಶ್ರೀಯುತರು ಹಲವಾರು ಬೀದಿ ನಾಟಕಗಳ ರಚನೆ ಮಾಡಿದ್ದೇ ಅಲ್ಲದೆ, ಒಂದು ಬೊಗಸೆ ನೀರು, ಕುಲಂ, ಪ್ರೀತಿಯ ಹುಡುಕುತ್ತಾ, ಕಳಚಿದ ಕೊಂಡಿಗಳು, ದಾರಾಶಿಕೋ ಹಾಗೂ ಜೇಡರ ದಾಸಿಮಯ್ಯ ಮುಂತಾದ ಜನಪ್ರಿಯ ನಾಟಕಗಳನ್ನು ರಚಿಸಿದ್ದಾರೆ. ಮೇಲ್ಕಂಡ ನಾಟಕಗಳು ರಾಜ್ಯದೆಲ್ಲೆಡೆ ಹಲವಾರು ಪ್ರದರ್ಶನಗಳನ್ನು ಕಂಡಿವೆ. ನಾಟಕದ ನಿರ್ದೇಶನದಲ್ಲಿ ಉತ್ತಮ ಪರಿಶ್ರಮ ಹೊಂದಿರುವ ಡಾ. ರಾಜಪ್ಪನವರು ಈವರೆಗೆ ಆರು ನಾಟಕಗಳನ್ನು ನಿರ್ದೇಶಿಸಿದ್ದಾರೆ. 2008ರಲ್ಲಿ 12 ದಿನಗಳ ಕಾಲ ಇವರ 12 ನಾಟಕಗಳು ದಳವಾಯಿ ನಾಟಕೋತ್ಸವದಲ್ಲಿ ಪ್ರದರ್ಶನಗೊಂಡಿವೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಸತೀಶ್ ಕುಲಕರ್ಣಿ

ಹಾವೇರಿ ಜಿಲ್ಲೆಯ ಕೆ.ಇ.ಬಿ. ಕಂಪನಿ ಉದ್ಯೋಗಿಯಾಗಿ ನಿವೃತ್ತಿಯಾಗಿರುವ ಸತೀಶ್ ಕುಲಕರ್ಣಿಯವರು ಉತ್ತರ ಕರ್ನಾಟಕದ ವಿವಿಧ ಭಾಗಗಳಲ್ಲಿ ತಮ್ಮ ಶಾಲಾ ಕಾಲೇಜಿನ ವ್ಯಾಸಂಗವನ್ನು ಮುಗಿಸಿ, ಅಲ್ಲಿಯೇ ಕೆಲಸಕ್ಕೆ ಸೇರಿ ನಿವೃತ್ತರಾದವರು. ಇವರ ಮೂಲ ಹವ್ಯಾಸ ಸಾಹಿತ್ಯ ರಚನೆ. ಕನ್ನಡ ಸಾರಸ್ವತ ಲೋಕಕ್ಕೆ ಹಲವಾರು ಜನಪ್ರಿಯ ಕೃತಿಗಳನ್ನು ನೀಡಿರುವ ಶ್ರೀಯುತರು ನಟರೂ ಹೌದು, ನಿರ್ದೇಶಕರು ಹೌದು. ಸುಮಾರು 12 ನಾಟಕಗಳನ್ನು ನಿರ್ದೇಶಿಸಿ ರಂಗಕ್ಕೆ ತಂದಿರುವ ಇವರು 15ಕ್ಕೂ ಹೆಚ್ಚು ಬೀದಿ ನಾಟಕಗಳಲ್ಲಿ ಅಭಿನಯಿಸಿದ್ದೇ ಅಲ್ಲದೆ ಅದನ್ನು ನಿರ್ದೇಶಿಸಿದ್ದಾರೆ. ಇವರು ನಿರ್ದೇಶಿಸಿದ ಅನೇಕ ನಾಟಕಗಳು ಬೆಂಗಳೂರು ಸೇರಿದಂತೆ, ರಾಜ್ಯದ ವಿವಿಧೆಡೆಗಳಲ್ಲಿ ನಾಟಕ ಸ್ಪರ್ಧೆಗಳಲ್ಲಿ ಹಲವಾರು ಬಹುಮಾನಗಳನ್ನು ಗಳಿಸಿವೆ. ಜಿಲ್ಲಾ ಹಾಗೂ ರಾಜ್ಯಮಟ್ಟದಲ್ಲಿ ನಡೆದ ಹಲವಾರು ರಂಗಚಟುವಟಿಕೆಗಳಲ್ಲಿ, ಕಾರ್ಯಾಗಾರಗಳಲ್ಲಿ, ಕಮ್ಮಟಗಳಲ್ಲಿ

ಶ್ರೀಯುತರು ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿ ದೂರದರ್ಶನದ ಹಲವಾರು ಧಾರವಾಹಿಗಳಲ್ಲೂ ಕೂಡ ಅಭಿನಯಿಸಿದ್ದಾರೆ. ಆಕಾಶವಾಣಿಯಿಂದ ಅನುಮೋದಿತ ಬಿ ಗ್ರೇಡ್ ಕಲಾವಿದರಾದ ಇವರನ್ನು ಹಲವಾರು ಪ್ರಶಸ್ತಿ ಪುರಸ್ಕಾರಗಳು ಅರಸಿ ಬಂದಿವೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಡಬ್ಲ್ಯೂ.ಹೆಚ್. ಶಾಂತಕುಮಾರ್

ವೃತ್ತಿ ಮತ್ತು ಹವ್ಯಾಸಿ ರಂಗಭೂಮಿ ಕ್ಷೇತ್ರಗಳಲ್ಲಿ ಸುಪರಿಚಿತ ಹೆಸರು ಶ್ರೀ ಶಾಂತಕುಮಾರ್ ಅವರದು. ಇವರು ಮೂಲತಃ ನಟ ಹಾಗೂ ಗಾಯಕ ತಮ್ಮ ಶರೀರ ಹಾಗೂ ಶಾರೀರಗಳಿಂದ ಸುಮಾರು 40 ವರ್ಷಗಳಿಂದ ರಂಗಭೂಮಿ ಸೇವೆಯಲ್ಲಿ ನಿರತವಾಗಿರುವ ಶ್ರೀಯುತರು ಹಲವಾರು ರಂಗ ಸಂಘಸಂಸ್ಥೆಗಳಲ್ಲಿ ನಟರಾಗಿ, ಗಾಯಕರಾಗಿ ಸೇವೆಸಲ್ಲಿಸಿದ್ದಾರೆ. ಪೌರಾಣಿಕ ನಾಟಕಗಳಲ್ಲಿ ಇವರ ಭಾವಪೂರ್ಣ ಅಭಿನಯ, ಜನಮಾನಸವನ್ನು ಗೆದ್ದಿದೆ. ದಾನಶೂರ ಕರ್ಣದ ನಾರದನಾಗಿ, ಕುರುಕ್ಷೇತ್ರದ ಅರ್ಜುನನಾಗಿ, ಸಂಪೂರ್ಣ ರಾಮಾಯಣದ ರಾಮನಾಗಿ, ಪಾದುಕಾ ಪಟ್ಟಾಭಿಷೇಕದ ಭರತನಾಗಿ, ಲಂಕಾದಹನ ಮತ್ತು ರಾಮಾಂಜನೇಯ ಯುದ್ಧದ ಆಂಜನೇಯನಾಗಿ ಎಚ್ಚಮನಾಯಕದ ಬುಡನ್‌ಸಾಬ್ ಪ್ರದರ್ಶನಗಳಲ್ಲಿ ಇವರ ನಟನೆ ಮತ್ತು ಗಾಯನ ಜನಪ್ರಿಯವಾಗಿವೆ. ಖ್ಯಾತ ಸಂಘಸಂಸ್ಥೆಗಳಿಂದ, ಜನಪ್ರಿಯ ರಂಗಕರ್ಮಿಗಳಿಂದ, ಪ್ರಶಂಸೆ ಪುರಸ್ಕಾರಗಳಿಗೆ ಪಾತ್ರರಾಗಿರುವ ಶ್ರೀ ಶಾಂತಕುಮಾರ್ ರಾಜ್ಯಮಟ್ಟದ ಹಲವಾರು ಉತ್ಸವಗಳಲ್ಲಿ ಭಾಗವಹಿಸಿದ್ದಾರೆ. ಅಖಿಲ ಕರ್ನಾಟಕ ರಂಗಸಂಗೀತ ಪರಿಷತ್‌ನ ಕಾರ್ಯದರ್ಶಿಯಾಗಿ ಮೂರು ಮಹತ್ವದ ರಂಗಸಂಗೀತ ಸಮ್ಮೇಳನಗಳನ್ನು ಸಂಘಟಿಸಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಡಾ. ಹೆಚ್.ವಿ. ವೇಣುಗೋಪಾಲ್

ಬೆಂಗಳೂರಿನ ಬಸವನಗುಡಿ ನ್ಯಾಷನಲ್ ಪದವಿ ಕಾಲೇಜಿನ ಸಂಸ್ಕೃತ ವಿಭಾಗದ ಮುಖ್ಯಸ್ಥರಾದ ಶ್ರೀ ವೇಣುಗೋಪಾಲ್ ಕನ್ನಡ ಮತ್ತು ಸಂಸ್ಕೃತ ವಿಷಯಗಳಲ್ಲಿ ಸ್ನಾತಕೋತ್ತರ ಪದವಿ ಪಡೆದವರು ಹಾಗೂ ಸಂಸ್ಕೃತದಲ್ಲಿ ಪಿ.ಹೆಚ್.ಡಿ ಪದವಿಯನ್ನು ಪಡೆದವರು.

ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳ ರಂಗಪರಿಸರದಲ್ಲಿ ಚಿರಪರಿಚಿತರಾದ ಶ್ರೀ ವೇಣುಗೋಪಾಲ್ ಸಮುದಾಯ ಸಾಂಸ್ಕೃತಿಕ ಸಂಘಟನೆಯೊಡನೆ ಕಳೆದ 30 ವರ್ಷಗಳಿಂದ ಒಡನಾಟವನ್ನಿರಿಸಿಕೊಂಡು, ಹಲವಾರು ಬೀದಿ ನಾಟಕಗಳನ್ನು, ರಂಗನಾಟಕಗಳನ್ನು ಬರೆದು ನಿರ್ದೇಶಿಸಿದ್ದಾರೆ. ಇವರು ಶ್ರೀ ಶಂಕರ್ ಶೇಷ್ ಅವರ ಕೋಮಲ ಗಾಂಧಾರ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಹೆನ್ರಿಕ್ ಇಬ್ಸನ್‌ನ ಸುತ್ತಿಕೊಂಡರೆ ಸರ್ಪ, ಬ್ರೆಕ್ಟನ ಚಾಕ್‌ಸರ್ಕಲ್, ಸಿಂಜ್‌ನ ಹಳ್ಳಿಯೂರ ಹಮ್ಮೀರ ಎಂಬ ಯುರೋಪ್ ನಾಟಕಗಳನ್ನು ಶಂಕರಮೊಕಾಶಿ ಪುಣೇಕರರವರ ನಟ ನಾರಾಯಣಿ

ಕಾದಂಬರಿಯನ್ನು ನಿರಂಜನ ಅವರ ಚಿರಸ್ಮರಣೆಯನ್ನು ನಾಟಕ ರೂಪಾಂತರ ಮಾಡಿದ್ದಾರೆ. ಕಳೆದ 15 ವರ್ಷಗಳಿಂದ ರಾಜ್ಯಮಟ್ಟದ ಕಾಲೇಜು ನಾಟಕ ಸ್ಪರ್ಧೆಗಾಗಿ ತಮ್ಮ ನ್ಯಾಷನಲ್ ಕಾಲೇಜಿನ ಯುವಜನರನ್ನು ತಯಾರು ಮಾಡಿ ಉತ್ತಮರಂಗ ಪ್ರದರ್ಶನಗಳನ್ನು ನೀಡಿದ್ದಾರೆ.

1999ರಲ್ಲಿ ಅತ್ಯುತ್ತಮ ರಂಗಸಂಘಟನೆ ಅಧ್ಯಾಪಕ ಎಂದು ಗುರುತಿಸಲ್ಪಟ್ಟು ಇದಕ್ಕಾಗಿ ರಾಜ್ಯಮಟ್ಟದ ಸಂಸ ಪ್ರಶಸ್ತಿಗೆ ಪಾತ್ರರಾದ ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಸಂಗ್ರಾಮ ಗುಂಡಪ್ಪ ಎಂಗಲೇ

ವೃತ್ತಿಯಲ್ಲಿ ಸಸ್ಯಶಾಸ್ತ್ರ ಉಪನ್ಯಾಸಕರಾದ ಶ್ರೀ ಎಂಗಲೇ ಅವರು ಬೀದರ್ ಜಿಲ್ಲೆಯ ಚಿಟ್ಟಗುಪ್ಪ ತಾಲ್ಲೂಕಿನವರು. ಬಿಡುವಿನ ಸಮಯದಲ್ಲಿ ಪ್ರವೃತ್ತಿಯಾಗಿ ರಂಗಭೂಮಿಯ ನಟನೆ ಹಾಗೂ ನಿರ್ದೇಶನವನ್ನು ಮಾಡುತ್ತಾ ತಮ್ಮ ಬರವಣಿಗೆ ಮೂಲಕ ಜನಜಾಗೃತಿ ಮೂಡಿಸುವ ಸಾಮಾಜಿಕ ಕಳಕಳಿಯನ್ನುಳ್ಳವರು. ತಮ್ಮ 18ನೇ ವಯಸ್ಸಿನಿಂದ ರಂಗಭೂಮಿಯ ಗೀಳು ಅಂಟಿಸಿಕೊಂಡ ಶ್ರೀಯುತರು ವಿಜ್ಞಾನ ಪದವೀಧರರಾಗಿದ್ದರಿಂದ, ಜನರಲ್ಲಿ ವೈಜ್ಞಾನಿಕ ಮನೋಭಾವ ಮೂಡಿಸುವ ನಾಟಕಗಳನ್ನು ಬರೆದು, ಅವುಗಳಲ್ಲಿ ನಟಿಸಿ, ಅವುಗಳನ್ನು ನಿರ್ದೇಶಿಸಿ, ರಂಗಕ್ಕೆ ತಂದವರು. ಹತ್ತಾರು ನಾಟಕಗಳಲ್ಲಿ ನಟರಾಗಿ ಜನಪ್ರಿಯತೆ ಪಡೆದಿರುವ ಪ್ರೊ.ಎಂಗಲೇ ಯವರು ಯಮನ ದರ್ಬಾರು, ಆಲದ ಮರ, ಅಂಧಕಾರ, ಮಾವ ಮಾವ ಕಥೆ ಹೇಳು, ಮುಂತಾದ ನಾಟಕಗಳಿಗೆ ಸಹನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ನಂತರದ ದಿನಗಳಲ್ಲಿ ಸುಮಾರು 20ಕ್ಕೂ ಹೆಚ್ಚು ನಾಟಕ ಮತ್ತು ರೂಪಕಗಳನ್ನು ಸ್ವತಃ ತಾವೇ ನಿರ್ದೇಶಿಸಿದ್ದಾರೆ. ಇವಲ್ಲದೆ, ರೇಡಿಯೋ ನಾಟಕ, ಜಾಗೃತಿ ಮೂಡಿಸುವ ಪವಾಡ ಬಯಲು ಕಾರ್ಯಕ್ರಮ, ರಾಜ್ಯಮಟ್ಟದ ರಂಗತರಬೇತಿ ಶಿಬಿರ, ಜನಪ್ರಿಯ ವಿಜ್ಞಾನ ಶಿಬಿರ, ಮಕ್ಕಳಿಗಾಗಿ ಬೇಸಿಗೆ ರಂಗಶಿಬಿರ, ಚೈತ್ರ ರಂಗಶಿಬಿರ ಮುಂತಾದ ರಂಗಚಟುವಟಿಕೆಗಳನ್ನು ಈಗಲೂ ನಡೆಸುತ್ತಿದ್ದಾರೆ.

ಬೀದರ್ ಜಿಲ್ಲಾ ಹವ್ಯಾಸಿ ಕಲಾತಂಡದ ಅಧ್ಯಕ್ಷನಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಡಾ. ಪ್ರಕಾಶ ಗರುಡ

ಉತ್ತರ ಕರ್ನಾಟಕದ ಖ್ಯಾತ ವೃತ್ತಿರಂಗಕಲಾವಿದರಾಗಿದ್ದ ಗರುಡ ಸದಾಶಿವರಾಯರ ಮೊಮ್ಮಗನಾಗಿ ಹುಟ್ಟಿದ ಡಾ. ಪ್ರಕಾಶ ಗರುಡ ಮೂಲತಃ ವಿಜ್ಞಾನ ಪದವೀಧರ. ನಂತರ ತಮ್ಮ ರಕ್ತದಲ್ಲಿ ಹರಿಯುತ್ತಿದ್ದ ವೃತ್ತಿರಂಗಪ್ರೇಮದಿಂದ 1988ರಲ್ಲಿ ನೀನಾಸಂ ಸಂಸ್ಥೆಯಿಂದ ನಾಟಕ ಡಿಪ್ಲೋಮೊ ಪಡೆದರು. ಮಧುರೈ ಕಾಮರಾಜನ್ ವಿಶ್ವವಿದ್ಯಾಲಯದಿಂದ ನಾಟಕಕಲೆ ವಿಷಯದಲ್ಲಿ ಎಂ.ಎ ಪದವಿ ಪಡೆದು ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಇದೇ ವಿಷಯದಲ್ಲಿ ಪಿ.ಹೆಚ್.ಡಿ ಪದವಿ ಪಡೆದರು. ಪ್ರಸ್ತುತ ಧಾರವಾಡದಲ್ಲಿ ಥಿಯೇಟರ್ ಮತ್ತು ಪಪೆಟರಿಯ ಯೋಜನಾ ನಿರ್ದೇಶಕರಾಗಿದ್ದಾರೆ. ಕಳೆದ 25 ವರ್ಷಗಳಿಂದ ರಂಗಸೇವೆಯಲ್ಲಿ ತೊಡಗಿರುವ ಶ್ರೀಯುತರು ನಟರೂ ಹೌದು, ನಿರ್ದೇಶಕರೂ ಹೌದು. ಹತ್ತಾರು ಮಕ್ಕಳ

ನಾಟಕಗಳನ್ನು ಮತ್ತು ದೊಡ್ಡವರ ನಾಟಕಗಳನ್ನು ನಿರ್ದೇಶಿಸಿ ಅವುಗಳಲ್ಲಿ ನಟನೆಯನ್ನು ಮಾಡಿರುತ್ತಾರೆ. ಶಾಲಾ ಕಾಲೇಜು ವಿದ್ಯಾರ್ಥಿಗಳಿಗಾಗಿ ರಂಗಶಿಬಿರವನ್ನು ನಡೆಸುತ್ತಾ, ವಿದ್ಯಾರ್ಥಿಗಳಲ್ಲಿ ರಂಗಪ್ರಜ್ಞೆಯನ್ನು ಮೂಡಿಸುವ ಕೆಲಸವನ್ನು ಶ್ರದ್ಧೆಯಿಂದ ಮಾಡುತ್ತಿದ್ದಾರೆ. ಜೊತೆ ಜೊತೆಗೆ ತಮ್ಮ ಮತ್ತೊಂದು ಹವ್ಯಾಸವಾದ ತೊಗಲುಗೊಂಬೆಯಾಟವನ್ನು ಜನಪ್ರಿಯಗೊಳಿಸುವ ನಿಟ್ಟಿನಲ್ಲಿ ಕಳೆದ ಐದು ವರ್ಷಗಳಿಂದ ರಾಜ್ಯದ ವಿವಿಧ ಕಾಲೇಜುಗಳಲ್ಲಿ ಐನೂರಕ್ಕೂ ಹೆಚ್ಚಿನ ಪ್ರದರ್ಶನವನ್ನು ನೀಡಿರುತ್ತಾರೆ.

ಸ್ವತಃ ಬರಹಗಾರರೂ ಆದ ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಕೆ.ಎಸ್.ಡಿ.ಎಲ್. ಚಂದ್ರು

ಕನ್ನಡ ರಂಗಭೂಮಿಗೆ ಕೆ.ಎಸ್.ಡಿ.ಎಲ್.ಚಂದ್ರು ಎಂದೇ ಪರಿಚಿತರಾದ ಇವರು ರಾಜ್ಯದ ಸಾಬೂನು ಕಾರ್ಖಾನೆ ನೌಕರ. ರಂಗವಿನ್ಯಾಸಕರಾಗಿ, ಬೆಳಕು ವಸ್ತ್ರವಿನ್ಯಾಸಕರಾಗಿ, ಬರಹಗಾರರಾಗಿ, ನಟರಾಗಿ ಹಾಗೂ ನಿರ್ದೇಶಕರಾಗಿ ಸುಮಾರು 25 ವರ್ಷಗಳಿಂದ ರಂಗಸೇವೆಯಲ್ಲಿ ನಿರತವಾಗಿರುವ ಶ್ರೀ ಚಂದ್ರು 34 ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿ, ಅವುಗಳಲ್ಲಿ 20 ನಾಟಕಗಳನ್ನು ತಾವೇ ನಿರ್ದೇಶಿಸಿದ್ದಾರೆ. ತಮ್ಮ ರೂಪಾಂತರ ತಂಡದ ಕನ್ನಡದ ಹಲವಾರು ಖ್ಯಾತ ನಾಟಕಗಳನ್ನು ನಿರ್ದೇಶಿಸಿ ರಾಜ್ಯದ ಹಲವೆಡೆ ರಂಗಕ್ಕೆ ತಂದಿದ್ದಾರೆ. ರಾಜ್ಯದ ವಿವಿಧ ನಾಟಕ ತಂಡಗಳಾದ ಕಲಾಜ್ಯೋತಿ, ರಂಗಚೇತನ, ಪ್ರಜ್ಞಾಸಾಂಸ್ಕೃತಿಕ ವೇದಿಕೆಗಳಿಗಾಗಿಯೂ ಹಲವಾರು ನಾಟಕಗಳನ್ನು ನಿರ್ದೇಶಿಸಿದ್ದಾರೆ. ಕಾಲೇಜು ರಂಗಭೂಮಿ, ಕಾರ್ಮಿಕ ರಂಗಭೂಮಿ ಹಾಗೂ ಬೀದಿ ನಾಟಕಗಳಿಗಾಗಿಯೂ ಹಲವು ಹತ್ತು ನಾಟಕಗಳನ್ನು ನಿರ್ದೇಶಿಸಿ, ಅವುಗಳಲ್ಲಿ ನಟಿಸಿದ್ದಾರೆ. ಕಿರುತೆರೆಗಾಗಿ ಹಲವು ಧಾರವಾಹಿಗಳನ್ನು ನಿರ್ದೇಶಿಸಿ ಅವುಗಳಲ್ಲಿ ನಟಿಸಿದ್ದಾರೆ. ದೇಶದ ವಿವಿಧೆಡೆಗಳಲ್ಲಿ ನಡೆದ ನಾಟಕೋತ್ಸವಗಳಲ್ಲಿ ತಮ್ಮ ನಟನೆ ಹಾಗೂ ನಿರ್ದೇಶನಗಳ ಮೂಲಕ ಕಲಾರಸಿಕರ ಮನಸೆಳೆದಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಸುಶೀಲೇಂದ್ರ ಜೋಶಿ

ಗದಗ ಜಿಲ್ಲೆಯ ಸುಶೀಲೇಂದ್ರ ಜೋಷಿಯವರು ಖ್ಯಾತ ನಟ ಹಾಗೂ ಸಾಂಸ್ಕೃತಿಕ ಸಂಘಟಕ. ಗದಗ ಜಿಲ್ಲೆ ಶಿರಹಟ್ಟಿಯಲ್ಲಿ 1958ರಲ್ಲಿ ಜನಿಸಿದ ಶ್ರೀಯುತರು ನಾಟಕ ಅಕಾಡೆಮಿಯಿಂದ ಗದಗ ಜಿಲ್ಲೆ ಸಂಚಾಲಕರಾಗಿ ಕಾರ್ಯನಿರ್ವಹಿಸಿರುತ್ತಾರೆ. 1977ರಲ್ಲಿ ಅಭಿನಯರಂಗ ಎಂಬ ನಾಟಕ ಸಂಸ್ಥೆಯನ್ನು ಸ್ಥಾಪಿಸಿ 35 ವರ್ಷಗಳಿಂದ ಗದಗಿನಲ್ಲಿ ನಾಟಕ, ಸಂಗೀತ, ರಸಗ್ರಹಣ ಶಿಬಿರಗಳನ್ನು, ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಿರುತ್ತಾರೆ. ಚಲನಚಿತ್ರ ರಂಗದಲ್ಲಿಯೂ ಪರಿಶ್ರಮ ಹೊಂದಿರುವ ಶ್ರೀಯುತರು ಹಲವು ಚಿತ್ರಗಳಿಗೆ ಸಹಾಯಕ ನಿರ್ದೇಶಕರಾಗಿ ಅವುಗಳಲ್ಲಿ ನಟನೆಯನ್ನು ಮಾಡಿದ್ದಾರೆ. ಬೆಂಗಳೂರು ದೂರದರ್ಶನಕ್ಕಾಗಿ ಹಲವಾರು ಸಾಕ್ಷ್ಯಚಿತ್ರಗಳನ್ನು ನಿರ್ದೇಶನ ಮಾಡಿ, ಇವು ದೂರದರ್ಶನದ ಮೂಲಕ ಪ್ರದರ್ಶನಗಳನ್ನು ಕಂಡಿವೆ. ಇವರು ಲಕ್ಕುಂಡಿ ಉತ್ಸವಕ್ಕೆ ತಯಾರಿಸಿದ ಲಾಂಛನ (ಲೋಗೋ) ಈಗಲೂ

ಉಪಯೋಗಿಸಲ್ಪಡುತ್ತಿದೆ. 1993ರಲ್ಲಿ ಅಭಿನಯರಂಗದ ವತಿಯಿಂದ ನಾಟಕಶಾಲೆ ಆರಂಭಿಸಿ, ಶಾಲಾಕಾಲೇಜು ವಿದ್ಯಾರ್ಥಿಗಳಿಗೆ ಒಂದು ವರ್ಷದ ನಾಟಕ ತರಬೇತಿ ನೀಡಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಶಿವಬಸವಯ್ಯ ಗು. ಹಿರೇಮಠ

ಗುಲ್ಬರ್ಗಾ ಜಿಲ್ಲೆ ಅಫಜಲಪುರ ತಾಲ್ಲೂಕಿನ ಶಿವಬಸವ ಕಾವ್ಯನಾಮದ ಶ್ರೀ ಶಿವಬಸವಯ್ಯ ಹಿರೇಮಠರು ವೃತ್ತಿಯಲ್ಲಿ ರಂಗಭೂಮಿ ನಟ, ನಿರ್ದೇಶಕ, ಸಂಗೀತಗಾರ ಹಾಗೂ ಕವಿ. 1948ರಲ್ಲಿ ಹುಟ್ಟಿದ ಇವರು ತಮ್ಮ 13 ನೇ ವಯಸ್ಸಿನಲ್ಲಿ ಮಾತಂಗ ಕನ್ಯಾ ನಾಟಕದಲ್ಲಿ ಪಾತ್ರ ಮಾಡುವುದರ ಮೂಲಕ ರಂಗಪ್ರವೇಶ ಮಾಡಿದರು. 1965ರಲ್ಲಿ ರೇವೂರದಲ್ಲಿ ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘವನ್ನು ಸ್ಥಾಪಿಸಿ, 1972ರಲ್ಲಿ ವೃತ್ತಿರಂಗಭೂಮಿಯನ್ನು ಪ್ರವೇಶ ಮಾಡಿದರು. ಪಂ.ಪುಟ್ಟರಾಜ ಗವಾಯಿಗಳಿಂದ, ಮೈಂದರ್ಗಿಯ ಶ್ರೀ ಸಿದ್ದಯ್ಯ ಎಲಿವಾಳರ ಪ್ರಭಾವದಿಂದ, ನಾಟಕ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದರು. ಮೈಂದರ್ಗಿಯ ರೇಣುಕಾಚಾರ್ಯ ನಾಟ್ಯಸಂಘ, ಇದೇ ಊರಿನ ರೇವಣಸಿದ್ಧೇಶ್ವರ ನಾಟಕಸಂಘ, ಆಕಾಪೂರದ ಸಂಗಮೇಶ್ವರ ನಾಟ್ಯ ಸಂಘ, ಇಳಕಲ್ ವಿಜಯ ಮಹಂತೇಶ್ವರ ನಾಟ್ಯ ಸಂಘ, ಗದುಗಿನ ವೀರೇಶ್ವರ ನಾಟ್ಯಸಂಘ ಮುಂತಾದ ವೃತ್ತಿನಾಟಕ ಸಂಸ್ಥೆಗಳ ಹಲವಾರು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಸಾಹಿತ್ಯ ಸೇವೆಯಲ್ಲೂ ಸೈ ಎನಿಸಿಕೊಂಡಿರುವ ಶ್ರೀಯುತರು ಹಲವಾರು ಪುಸ್ತಕಗಳನ್ನು ರಚಿಸಿದ್ದಾರೆ. ಇವರು ಸಿದ್ಧಪಡಿಸಿರುವ ಅನೇಕ ಧಾರ್ಮಿಕ ಹಾಡುಗಳ ಧ್ವನಿಸುರಳಿಗಳು ಸ್ಥಳೀಯವಾಗಿ ಈಗಾಗಲೇ ಜನಪ್ರಿಯವಾಗಿವೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಹೆಚ್.ಜಿ. ಸಿದ್ಧರಾಜಯ್ಯ

ತಮ್ಮ 18ನೇ ವಯಸ್ಸಿನಲ್ಲಿಯೇ ನಾರದನ ಪಾತ್ರದ ಮೂಲಕ ಪೌರಾಣಿಕ ರಂಗಭೂಮಿಗೆ ಪಾದಾರ್ಪಣೆ ಮಾಡಿದ ಸಿದ್ಧರಾಜಯ್ಯ ಹಿರಿಯ ರಂಗಭೂಮಿ ಕಲಾವಿದ ಹಾಗೂ ರಂಗಗೀತೆ ಗಾಯಕ. ತಮ್ಮ ನಟನಾ ಚತುರತೆಯನ್ನು ಹಲವಾರು ಪೌರಾಣಿಕ, ಸಾಮಾಜಿಕ ಐತಿಹಾಸಿಕ ನಾಟಕಗಳ ವೈವಿಧ್ಯಮಯ ಪಾತ್ರಗಳ ಮೂಲಕ ಪ್ರದರ್ಶಿಸುವುದರ ಮೂಲಕ ಶ್ರೀಯುತರು ರಾಜ್ಯದಾದ್ಯಂತ ಹಾಗೂ ಮುಂಬೈ, ಕಲ್ಕತ್ತಾ, ಕಾಶಿ ಮುಂತಾದೆಡೆಗಳಲ್ಲಿ ಪೌರಾಣಿಕ ನಾಟಕಗಳಲ್ಲಿ ನಟನೆ ಮಾಡಿ, ರಂಗಗೀತೆ ಗಾಯನ ಕಾರ್ಯಕ್ರಮ ನಡೆಸಿಕೊಟ್ಟಿರುತ್ತಾರೆ. ಇವರು ನಟಿಸಿರುವ ಶ್ರೀ ರಾಮಮುದ್ರಿಕೆ ಪೌರಾಣಿಕ ನಾಟಕ ಮತ್ತು ರಂಗಗೀತೆ ಗಾಯನ ಕಾರ್ಯಕ್ರಮ, ಬೆಂಗಳೂರು ದೂರದರ್ಶನ ಮೂಲಕ ನಾಲ್ಕು ವಾರಗಳು ಪ್ರದರ್ಶಿತವಾಗಿರುತ್ತವೆ. ಸದಾ ರಂಗಭೂಮಿಯನ್ನೇ ಸ್ಮರಿಸುತ್ತಾ, ನಾಟಕ ಕ್ಷೇತ್ರಕ್ಕೆ ಗಣನೀಯ ಸೇವೆ ಸಲ್ಲಿಸಿರುವಂತವರು ಒಂದೇ ವರ್ಷದಲ್ಲಿ 13 ಪೌರಾಣಿಕ ಪ್ರದರ್ಶನಗಳನ್ನು ಮಾಡಿರುತ್ತಾರೆ. ಇಂದಿಗೂ ನಟನೆ, ರಂಗಗೀತ ಗಾಯನ, ಜನಪದ ಗೀತಗಾಯನಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ರಂಗಸೇವೆಯಲ್ಲಿ ನಿರತರಾಗಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಸಿ.ಟಿ. ಬ್ರಹ್ಮಾಚಾರ್

ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಚೆನ್ನಗಿರಿಯ ಸಿ.ಟಿ. ಬ್ರಹ್ಮಾಚಾರ್ ಖ್ಯಾತ ರಂಗನಿರ್ದೇಶಕ ಎನ್.ಆರ್. ಮಾಸೂರರ ಉದಯ ಕಲಾವಿದರು ಸಂಸ್ಥೆಯ ಪ್ರತಿಭೆ. 1983ರಲ್ಲಿ ನೀನಾಸಂ ನಿಂದ ರಂಗಶಿಕ್ಷಣ ಡಿಪ್ಲೊಮೊ ಪಡೆದು 1987ರಿಂದ 90ರವರೆಗೆ ನೀನಾಸಂ ತಿರುಗಾಟದಲ್ಲಿ ನಾಟಕಗಳಿಗೆ ರಂಗತಾಂತ್ರಿಕ ಸಹಾಯ ಮಾಡಿದ ಅನುಭವ ಹೊಂದಿದವರು. ಸುಮಾರು 140 ನಾಟಕಗಳನ್ನು ನಿರ್ದೇಶಿಸಿರುವ ಶ್ರೀಯುತರು ಮಕ್ಕಳ ರಂಗಕಾರ್ಯಾಗಾರಕ್ಕೆ 75, ಪ್ರೌಢರಂಗ ಕಾರ್ಯಾಗಾರಕ್ಕೆ 45, ಬೀದಿರಂಗಕಾರ್ಯಾಗಾರಕ್ಕೆ 8 ಮೈಮ್ ಪ್ರದರ್ಶನಗಳಿಗೆ 7 ಹೀಗೆ 138 ನಾಟಕಗಳನ್ನು ನಿರ್ದೇಶಿಸಿದ್ದಾರೆ.

ಇದಲ್ಲದೆ ಒಟ್ಟು 300 ನಾಟಕಗಳಿಗೆ ರಂಗತಾಂತ್ರಿಕ ವರ್ಗಗಳಿಗೆ ಕೆಲಸ ಮಾಡಿದ ಅನುಭವ ಹೊಂದಿದ್ದಾರೆ. ನಾಟಕ ರಚನಾಕಾರರು ಆದ ಇವರು ಬರೆದ 10 ನಾಟಕಗಳಲ್ಲಿ 3 ನಾಟಕಗಳು ರಂಗಪ್ರಯೋಗ ಕಂಡಿವೆ. ಹಾಗೂ 5 ನಾಟಕಗಳು ಮುದ್ರಣಗೊಂಡಿವೆ. ಹಲವಾರು ಕಾರ್ಯಾಗಾರಗಳು ಮತ್ತು ಕಮ್ಮಟಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಕಾರ್ಯನಿರ್ವಹಿಸಿರುವ ಇವರು ಭಾರತ ಸರ್ಕಾರದ ಸಂಗೀತ ಮತ್ತು ನಾಟಕ ವಿಭಾಗದಲ್ಲಿ ಬೆಳಕಿನ ವಿನ್ಯಾಸ, ಪ್ರಸಾಧನ ಮತ್ತು ರಂಗತಾಂತ್ರಿಕ ವರ್ಗದಲ್ಲಿ ಮೂರು ವರ್ಷಗಳ ಸೇವೆ ಸಲ್ಲಿಸಿರುತ್ತಾರೆ.

ರಾಜ್ಯದ ಹಲವಾರು ಸಂಘಸಂಸ್ಥೆಗಳಲ್ಲಿ ಹತ್ತಾರು ಶಾಲಾ ಕಾಲೇಜುಗಳಲ್ಲಿ ಜನಪ್ರಿಯ ನಾಟಕಗಳನ್ನು ನಿರ್ದೇಶಿಸಿ, ತಾಂತ್ರಿಕ ಸಹಾಯವನ್ನು ಒದಗಿಸಿರುತ್ತಾರೆ. ಈಗಾಗಲೇ ಹಲವಾರು ಪ್ರಶಸ್ತಿ ಸನ್ಮಾನಗಳಿಗೆ ಪಾತ್ರರಾಗಿದ್ದಾರೆ.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.



## ಮೂರ್ತಿ ದೇರಾಜೆ

ಬ್ಯಾಂಕ್ ನೌಕರಿಯಿಂದ ಸ್ವಯಂ ನಿವೃತ್ತಿ ಪಡೆದ ಮೂರ್ತಿ ದೇರಾಜೆ ಪ್ರಸ್ತುತ ಸಂಪೂರ್ಣವಾಗಿ ರಂಗಭೂಮಿಯ ಕಾರ್ಯ ಪ್ರವೃತ್ತರಾಗಿದ್ದಾರೆ. ತಮ್ಮ ಸುಮಾರು ಮೂವತ್ತು ವರ್ಷಗಳ ರಂಗಭೂಮಿಯ ಸಂಪರ್ಕದಲ್ಲಿ ನಟರಾಗಿ, ಸಂಗೀತಗಾರರಾಗಿ, ವಿನ್ಯಾಸಕಾರರಾಗಿ, ನಿರ್ದೇಶಕರಾಗಿ, ನಾಟಕ ಕರ್ತೃವಾಗಿ ನಾಟಕ ಕ್ಷೇತ್ರಕ್ಕೆ ವೈವಿಧ್ಯಮಯ ಸೇವೆ ಸಲ್ಲಿಸಿದ್ದಾರೆ. ಜೋಮನದುಡಿ, ಚೋರಚರಣದಾಸ ಮುಂತಾದ ನಾಟಕಗಳು ಇವರ ಸಂಗೀತದಿಂದ ತಮ್ಮ ಜನಪ್ರಿಯತೆಯನ್ನು ಹೆಚ್ಚಿಸಿಕೊಂಡಿವೆ. ಸುಮಾರು 15 ಮಕ್ಕಳ ನಾಟಕಗಳು ಇವರ ವಿನ್ಯಾಸದಿಂದ ಹೆಚ್ಚು ಆಕರ್ಷಿತವಾಗಿವೆ. ಹಲವು ರೇಡಿಯೋ ನಾಟಕಗಳನ್ನು ರಚಿಸಿ, ನಿರ್ದೇಶಿಸಿರುವ ಇವರು ಹತ್ತಾರು ಮಕ್ಕಳ ನಾಟಕಗಳನ್ನು ನಿರ್ದೇಶಿಸಿ ರಂಗಕ್ಕೆ ಅಳವಡಿಸಿದ್ದಾರೆ. ಕಪ್ಪು ಕಾಗೆಯ ಹಾಡು, ಗುಡುಗುಡು ಗುಮ್ಮಟ ದೇವರು ಇವು ಇವರ ಪ್ರಕಟಿತ ರಂಗಕೃತಿಗಳಾದರೆ, ರಾಮಧಾನ್ಯ ಚರಿತೆ, ಮತ್ತೆ ಹುಣ್ಣಿಮೆ ಬಂತು, ಅಕ್ಷಯಪಾತ್ರೆ, ರಾಮಣ್ಣನ ಕಥೆ, ಸೋಮಾರಿ ಕಟ್ಟೆ, ಬಲ್ಲವನಿಗೆ ಅಪಾಯವಿಲ್ಲ ಇನ್ನು ಮುಂತಾದವು ಇವರ ಅಪ್ರಕಟಿತ ರಂಗಕೃತಿಗಳು.

ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಮೈಸೂರು ರಮಾನಂದ

ಕಳೆದ 30 ವರ್ಷಗಳಿಂದ ನಿರಂತರವಾಗಿ ಬೀದಿ ನಾಟಕ, ರಂಗನಾಟಕ ಹಾಗೂ ನಾಟಕ ನಿರ್ದೇಶನಗಳಲ್ಲಿ ತೊಡಗಿರುವ ಮೈಸೂರು ರಮಾನಂದ ಗೆಜ್ಜೆಹೆಜ್ಜೆ ರಮಾನಂದ ಎಂದು ನಾಡಿನಾದ್ಯಂತ ಖ್ಯಾತರಾಗಿದ್ದಾರೆ. ಕರ್ನಾಟಕದ ಬಹುತೇಕ ಎಲ್ಲಾ ಸ್ಥಳಗಳಲ್ಲಿಯೂ ಸಾಮಾಜಿಕ ಕಳಕಳಿಯ ಹಾಸ್ಯಪ್ರಧಾನ ನಾಟಕಗಳನ್ನು ಪ್ರದರ್ಶಿಸಿರುವ ಈ ನಟ ನಾಟಕಕಾರನೂ ಹೌದು. ಇವರ ಪ್ರಕಟಿತ ಕೃತಿಗಳಾದ ಚಟ, ನಾನಿನ್ನೂ ಸತ್ತಿಲ್ಲ, ಕಾಣೆಯಾಗಿದ್ದಾನೆ ಇವು ಹಲವಾರು ಪ್ರದರ್ಶನಗಳನ್ನು ಕಂಡಿವೆ. ಇವರು ಬರೆದಿರುವ ಮೂರು ನಾಟಕಗಳು ಅಚ್ಚಿನಲ್ಲಿವೆ. ಪ್ರಕಟಣೆಯಾಗದೇ ಇರುವ ಫೋನಾಯಣ, ಕಿಲಾಡಿಅಳಿಯ, ವರಪರೀಕ್ಷೆ, ಮೋಬೈಲಾಯಣ, ವಿಧವೆ ಮದುವೆ ಮುಂತಾದ ಹಲವು ರಂಗನಾಟಕಗಳು ಈಗಾಗಲೇ ಪ್ರದರ್ಶನಗೊಂಡು ಜನಮನ ಗೆದ್ದಿವೆ. ಹತ್ತಾರು ಖ್ಯಾತ ರಂಗನಾಟಕಗಳಲ್ಲಿ ನಟನೆ ಮಾಡಿರುವ ರಮಾನಂದ ಅವರು ಸುಮಾರು 120ಕ್ಕೂ ಹೆಚ್ಚು ಚಲನಚಿತ್ರಗಳಲ್ಲಿ ಹಾಗೂ ಹತ್ತಾರು ಕಿರುತೆರೆ ಧಾರವಾಹಿಗಳಲ್ಲಿ ಅಭಿನಯಿಸಿದ್ದಾರೆ. 25 ವರ್ಷಗಳಿಂದ ಸಮಾಜಮುಖಿಯಾದ ಜನಪರ ವಸ್ತುಗಳನ್ನುಳ್ಳ ಖ್ಯಾತ ಬೀದಿ ನಾಟಕಗಳ ಮೂಲಕ ಸಾಮಾಜಿಕ ಪ್ರಜ್ಞೆಯನ್ನು ಮೂಡಿಸಿದ್ದಾರೆ. ಕರ್ನಾಟಕದಲ್ಲಿ ಮೌನಾಭಿನಯ (ಮೈಮ್) ರಂಗ ತರಬೇತಿ ಶಿಬಿರವನ್ನು ಖ್ಯಾತ ಬೆಳಕುತಜ್ಞ ವಿ.ರಾಮಮೂರ್ತಿ ನಿರ್ದೇಶನದಲ್ಲಿ ನಡೆಸಿದ್ದಾರೆ. ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಶಾಂತಾ ಕುಲಕರ್ಣಿ

ರಾಯಚೂರು ಜಿಲ್ಲೆಯ ಗಾಯಕಿಯರಲ್ಲಿ ಖ್ಯಾತ ಹೆಸರಾದ ಶ್ರೀಮತಿ ಶಾಂತಾ ಕುಲಕರ್ಣಿಯವರು ವೃತ್ತಿಯಿಂದ ಶಿಕ್ಷಕಿ. ರಂಗಗೀತೆ ಗಾಯನ, ಜನಪದ ಗೀತೆ, ಭಕ್ತಿಗೀತೆ, ದೇಶಭಕ್ತಿಗೀತೆ, ವಚನ ಗಾಯನ ಶಿಶುಗೀತೆ ಜನಜಾಗೃತಿ ಗೀತೆಗಳಿಂದ ರಾಜ್ಯದ ಜನತೆಗೆ ಸುಪರಿಚಿತರಾದವರು. ಇವರು ರಾಗಸಂಯೋಜಿಸಿ ಹಾಡಿರುವ ನೂರಾರು ಆಡಿಯೋ ವಿಡಿಯೋ ಕ್ಯಾಸೆಟ್‌ಗಳು ಉತ್ತಮ ಸಾಮಾಜಿಕ ಕಳಕಳಿಯಿಂದ ಕೂಡಿದ್ದಾಗಿವೆ. ಹಲವಾರು ಖ್ಯಾತ ನಾಟಕಗಳಿಗೆ ಹಿನ್ನೆಲೆ ಗಾಯಕಿಯಾಗಿ ತಮ್ಮ ಕಂಠದಾನ ನೀಡಿರುವ ಇವರು ಸೋಲರಿಯದ ಶೂರರು, ಅಲಿಬಾಬಾ ಮತ್ತು 40 ಕಳ್ಳರು, ಕತ್ತೆ ಮತ್ತು ಧರ್ಮ, ಹಕ್ಕಿಹಾಡು, ಎಲ್ಲಾ ಮಾಯೆ, ಊರಕೆರೆ, ನೀಲಿಕುದುರೆ, ಅಂಧೇರಿ ನಗರ ಚೌಪಟ್ ರಾಜ ಮುಂತಾದ ನಾಟಕಗಳಿಗೆ ಸಂಗೀತ ನೀಡಿ, ಹಿನ್ನಲೆಗಾಯಕಿಯಾಗಿ, ವಸ್ತ್ರವಿನ್ಯಾಸಕಿಯಾಗಿ ಇವುಗಳ ನಿರ್ದೇಶನವನ್ನು ಮಾಡಿದ್ದಾರೆ. ಇವರ ಅಭಿನಯ ಮತ್ತು ಹಿನ್ನಲೆಗಾಯನದ ಹಲವಾರು ನಾಟಕಗಳು ನೂರಾರು ಪ್ರದರ್ಶನಗಳನ್ನು ಕಂಡಿವೆ. ರಾಯಚೂರಿನ ಜಿಲ್ಲಾ ಬಾಲಭವನದಲ್ಲಿ ಕಳೆದ ಆರು ವರ್ಷಗಳಿಂದ ಮಕ್ಕಳ ನಾಟಕ ಶಿಬಿರ ಹಾಗೂ ನಾಟಕೋತ್ಸವಗಳನ್ನು ನಡೆಸಿದ್ದಾರೆ. ಜಿಲ್ಲಾ ಮತ್ತು ರಾಜ್ಯಮಟ್ಟದ ಹಲವಾರು ಸಮ್ಮೇಳನಗಳಲ್ಲಿ ಭಾಗವಹಿಸಿರುವ ಇವರು 15ಕ್ಕೂ ಹೆಚ್ಚು ಕಲಾಜಾಥಗಳಲ್ಲಿ ಭಾಗವಹಿಸಿದ್ದಾರೆ. ಇವರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಟಿ.ಎಂ. ನಾಗರಾಜ್

ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ ಟಿ.ಎಂ.ನಾಗರಾಜ್, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಕೇಂದ್ರೀಯ ವಿಭಾಗದಲ್ಲಿ ಕುಶಲಕರ್ಮಿಯಾಗಿ ವೃತ್ತಿ ನಿರತರಾಗಿದ್ದಾರೆ. ಆದರೆ, ಇವರು ತಮ್ಮ ರಂಗಸೇವೆಯನ್ನು ನಟನೆ, ಬೆಳಕು ವಿನ್ಯಾಸ, ರಂಗಸಜ್ಜಿಕೆಗಳನ್ನು ನಿರ್ವಹಿಸುವುದರ ಮೂಲಕ ಮೂವತ್ತು ವರ್ಷಗಳ ಹಿಂದೆ ಪ್ರಾರಂಭಿಸಿದರು. ನೂರಕ್ಕೂ ಹೆಚ್ಚು ಹೊಸ ನಾಟಕಗಳಿಗೆ ಹಾಗೂ ಮೂನ್ನೂರಕ್ಕೂ ಹೆಚ್ಚು ಪ್ರದರ್ಶನಗಳಿಗೆ ಈವರೆವಿಗೂ ಬೆಳಕು ವಿನ್ಯಾಸ ಮಾಡಿರುತ್ತಾರೆ. ಮಕ್ಕಳ ರಂಗಭೂಮಿಯ ಕಡೆ ವಿಶೇಷ ಸೆಳೆಯಲ್ಪಟ್ಟಿರುವ ಶ್ರೀಯುತರು ಪ್ರೇಮಕಾರಂತರಾದಿಯಾಗಿ ಹಲವಾರು ಮಕ್ಕಳ ರಂಗಭೂಮಿ ನಿರ್ದೇಶಕರೊಡನೆ ಕೆಲಸ ನಿರ್ವಹಿಸಿರುತ್ತಾರೆ. ಇತ್ತೀಚಿನ ದಿನಗಳಲ್ಲಿ ತೊಗಲುಗೊಂಬೆಗಳ ನಾಟಕಗಳಿಗೂ ಬೆಳಕು ವಿನ್ಯಾಸ ಮಾಡಿರುತ್ತಾರೆ. ಇವರು ಬೆಳಕು ವಿನ್ಯಾಸ ಮಾಡಿದ ಹಲವಾರು ನಾಟಕಗಳಿಗೆ ರಾಜ್ಯಮಟ್ಟದ ಸ್ಪರ್ಧೆಗಳಲ್ಲಿ ಹತ್ತಾರು ಬಹುಮಾನ ಬಂದಿದೆ. ರಾಷ್ಟ್ರಮಟ್ಟದ ಸ್ಪರ್ಧೆಗಳಲ್ಲಿ ಐದು ಬಾರಿ ಬಹುಮಾನ ಬಂದಿರುತ್ತದೆ. ಇತ್ತೀಚಿನ ದಿನಗಳಲ್ಲಿ ನೃತ್ಯ ನಾಟಕ ರಂಗದಲ್ಲಿಯೂ ತಮ್ಮ ಕಾಯಕವನ್ನು ಮುಂದುವರಿಸಿದ್ದಾರೆ. ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---



## ಎಂ.ಸಿ. ರಾಮು

ನಾಲ್ಕು ದಶಕಗಳ ಕಾಲ ನಿರ್ದೇಶಕರಾಗಿ ನಾಟಕ ರಚನಾಕಾರರಾಗಿ, ಸಂಘಟಕರಾಗಿ, ರಂಗಭೂಮಿಯ ಸೇವೆ ಸಲ್ಲಿಸಿರುವ ಎಂ.ಸಿ.ರಾಮು ನೀನಾಸಂ ಸಂಸ್ಥೆಯಿಂದ ರಂಗಭೂಮಿ ಡಿಪ್ಲೊಮೊ ಪದವಿ ಗಳಿಸಿದ್ದಾರೆ. ಬೆಳಕು ವಿನ್ಯಾಸ, ರಂಗವಿನ್ಯಾಸ, ರಂಗಪರಿಕರ, ವಸ್ತ್ರವಿನ್ಯಾಸಗಳಲ್ಲಿಯೂ ಪರಿಶ್ರಮ ಹೊಂದಿರುವ ಶ್ರೀಯುತರು ದಲಿತ, ಸಮುದಾಯ ಶಿಕ್ಷಣ, ಮಕ್ಕಳ ವಾರಾಂತ್ಯ ರಂಗಶಾಲೆ, ಗ್ರಾಮಾಂತರ, ಬೀದಿ ನಾಟಕ ರಂಗಭೂಮಿಗಳಿಗೆ ಸಂಘಟಕರಾಗಿ, ಶಮ್ಮಟ ನಿರ್ದೇಶಕರಾಗಿ, ಸಂಯೋಜಕರಾಗಿ ಗಣನೀಯ ಸೇವೆ ಸಲ್ಲಿಸಿದ್ದಾರೆ. ರಾಜ್ಯ ಹಾಗೂ ಅಂತರರಾಜ್ಯಮಟ್ಟದಲ್ಲಿ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಮತ್ತು ತಮಿಳುನಾಡು, ಆಂಧ್ರ, ಕೇರಳಗಳಲ್ಲಿ ರಂಗಭೂಮಿ ಅಭಿವೃದ್ಧಿಗಾಗಿ ರಂಗಜಾಗೃತಿ ಮೂಡಿಸುವ ಸಲುವಾಗಿ, ಕಮ್ಮಟಗಳನ್ನು ಆಯೋಜಿಸಿ ನಿರ್ದೇಶಿಸಿದ್ದಾರೆ. ಶಿಕ್ಷಣದಲ್ಲಿ ರಂಗಭೂಮಿ ಕಾರ್ಯಕ್ರಮದಡಿ ಕಾಲೇಜು ವಿದ್ಯಾರ್ಥಿಗಳಿಗೆ ಏಕಲವ್ಯ, ನಾಟಕದ ರಂಗಸಂವಾದವನ್ನು ರಾಜ್ಯದ 15 ಸ್ಥಳಗಳಲ್ಲಿ ಸುಮಾರು 15,000 ವಿದ್ಯಾರ್ಥಿಗಳಿಗೆ ನೀಡಿರುತ್ತಾರೆ. ಹಲವಾರು ಪ್ರಶಸ್ತಿಗಳಿಗೆ ಭಾಜನರಾಗಿರುವ ಶ್ರೀಯುತರು ರಂಗಭೂಮಿಗೇ ಅಲ್ಲದೆ ಸಾಹಿತ್ಯ ಕ್ಷೇತ್ರಕ್ಕೂ ಗಣನೀಯ ಸೇವೆ ಸಲ್ಲಿಸಿರುತ್ತಾರೆ. ರಂಗಭೂಮಿಯಲ್ಲಿ ವೈವಿಧ್ಯಮಯ ಸಾಧನೆ ಮಾಡಿರುವ ಶ್ರೀಯುತರ ರಂಗಸಾಧನೆಗಳನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ ತನ್ನ ಸುವರ್ಣಾಚರಣೆಯ ಸಂದರ್ಭದಲ್ಲಿ ರಂಗಪ್ರಶಸ್ತಿ ನೀಡಿ ಗೌರವಿಸಿದೆ.

---

# 2011ರ ಪ್ರಶಸ್ತಿ ವಿಜೇತರು



## ಜಿ. ವೆಂಕಟಸ್ವಾಮಿ (ಜೀವಮಾನ ರಂಗಸಾಧನೆ ಪ್ರಶಸ್ತಿ)

ಸಾಮಾನ್ಯ ರೈತ ಕುಟುಂಬದ ಹಿನ್ನೆಲೆಯ ಜಿ.ವೆಂಕಟಸ್ವಾಮಿ ಗೌರಿಬಿದನೂರು ತಾಲ್ಲೂಕಿನ ಗೋಟಕಣಾಪುರದವರು. 85 ವರ್ಷದ ವೆಂಟಕಸ್ವಾಮಿಯವರು ವೃತ್ತಿಯಲ್ಲಿ ಎಂಜಿನಿಯರ್ ಆಗಿ ಹಲವಾರು ಕೈಗಾರಿಕಾ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ.

ಪ್ರೌಢಶಾಲಾ ಹಂತದಲ್ಲೇ ನಾಟಕದಲ್ಲಿ ಅಭಿನಯಿಸಿದ ಅನುಭವ, ಬಿ.ಇ.ಎಲ್ ಕಾರ್ಖಾನೆಯಲ್ಲಿದ್ದಾಗ 'ಕಲಾಘೋಷಣೆ' ಎಂಬ ಹವ್ಯಾಸಿ ರಂಗಸಂಸ್ಥೆಯನ್ನು ಹುಟ್ಟುಹಾಕಿದರು.

ಪರ್ವತವಾಣಿ, ಶ್ರೀರಂಗ, ಬಾದಲ್ ಸರ್ಕಾರ್, ಬಿ.ಎಂ.ಶ್ರೀ ಮುಂತಾದ ಹೆಸರಾಂತ ನಾಟಕಕಾರರ ನಾಟಕಗಳನ್ನು 'ಕಲಾಘೋಷಣೆ' ತಂಡದ ಮೂಲಕ ರಂಗಕ್ಕೆ ತಂದು ಬೆಂಗಳೂರು ಹವ್ಯಾಸಿ ರಂಗಭೂಮಿಯಲ್ಲಿ ಕ್ರಿಯಾಶೀಲರಾದರು. 1972ರಲ್ಲಿ ಸುಚಿತ್ರ ಫಿಲಂ ಸೊಸೈಟಿಯೊಂದಿಗೆ ತಮ್ಮ ಚಟುವಟಿಕೆಯನ್ನು ಪ್ರಾರಂಭಿಸಿ, ಅವಿರತವಾಗಿ ಸೇವೆಸಲ್ಲಿಸುತ್ತಿದ್ದಾರೆ.

ಸುಚಿತ್ರ ಬಾಲಜಗತ್ ಪ್ರಾರಂಭಿಸಿ ಕಳೆದ 25 ವರ್ಷಗಳಿಂದ ಸತತವಾಗಿ ಮಕ್ಕಳ ರಂಗ ಚಟುವಟಿಕೆಯನ್ನು ನಡೆಸುತ್ತಿರುವ ಜಿ. ವೆಂಕಟಸ್ವಾಮಿ ಮಕ್ಕಳ ಮನೋವಿಕಾಸ, ವೈಜ್ಞಾನಿಕ ಮನೋಭಾವನೆ, ಪರಿಸರ ಪ್ರಜ್ಞೆ ಬೆಳೆಸುವಲ್ಲಿ ಅಪಾರ ಕಾಳಜಿ ತೋರಿದ್ದಾರೆ. ನಗರದ ವಿವಿಧ ರಂಗ ಸಂಘಟನೆಗಳ ಸಹಯೋಗದೊಂದಿಗೆ ಸುಚಿತ್ರ ಬಾಲಜಗತ್ ಪ್ರತಿವರ್ಷ ಬೇಸಿಗೆ ರಂಗ ತರಬೇತಿ ಶಿಬಿರವನ್ನು ಯಶಸ್ವಿಯಾಗಿ ನಡೆಸುವಲ್ಲಿ ಇವರ ಪಾತ್ರ ಹಿರಿದು.

ಮಕ್ಕಳಲ್ಲಿ ಚಲನಚಿತ್ರ ಮಾಧ್ಯಮದ ಬಗ್ಗೆ ಉತ್ತಮ ಅಭಿರುಚಿ ಬೆಳೆಸಿ, ಹಲವಾರು ರಾಷ್ಟ್ರೀಯ – ಅಂತರ ರಾಷ್ಟ್ರೀಯ ಚಲನ ಚಿತ್ರೋತ್ಸವಗಳಲ್ಲಿ ಮಕ್ಕಳು ಪಾಲ್ಗೊಳ್ಳುವಂತೆ ಮಾಡಿದ್ದಾರೆ. ಅನೇಕ ವಿಜ್ಞಾನ ಸಮಾವೇಶಗಳಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದಾರೆ. ಬೆಂಗಳೂರು ಹವ್ಯಾಸಿ ರಂಗಭೂಮಿ ಹಾಗೂ ಮಕ್ಕಳ ರಂಗಭೂಮಿಗೆ ನೀಡುತ್ತಿರುವ ಇವರ ಕೊಡುಗೆಯನ್ನು ಪರಿಗಣಿಸಿ ಜೀವಮಾನ ರಂಗಸಾಧನೆ ಗೌರವ ಪ್ರಶಸ್ತಿಯನ್ನು 2011ನೇ ಸಾಲಿಗಾಗಿ ಕರ್ನಾಟಕ ನಾಟಕ ಅಕಾಡೆಮಿ ನೀಡಿ ಗೌರವಿಸುತ್ತಿದೆ.

---



## ವೈಜನಾಥ್ ಎಸ್. ಬಿರಾದರ್

(ಕಲ್ಬುರ್ಗಿ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿ)

ಬೀದರ್ ಜಿಲ್ಲೆ ಭಾಲ್ಕಿ ತಾಲೂಕಿನ ತೇಗಂಪೂರ್‌ನಲ್ಲಿ 1947ರಲ್ಲಿ ಜನಿಸಿದ ವೈಜನಾಥ ಬಿರಾದಾರ್ ಕನ್ನಡ ರಂಗಭೂಮಿ ಹಾಗೂ ಚಲನಚಿತ್ರ ರಂಗದಲ್ಲಿ ತಮ್ಮ ವೈವಿಧ್ಯಮಯ ಹಾಸ್ಯಾಭಿನಯದಿಂದ ಕನ್ನಡಿಗರ ಮನಗೆದ್ದಿದ್ದಾರೆ.

ಸುಮಾರು 10 ಕಂಪನಿಗಳಲ್ಲಿ ತಮ್ಮ ಅಭಿನಯ ಕಾಯಕ ಮಾಡಿರುವ ಬಿರಾದಾರ್, ಪಂಚಲಿಂಗೇಶ್ವರ ನಾಟಕ ಸಂಘದ 'ಬಸ್ ಹಮಾಲ್' ನಾಟಕದ ಮೂಲಕ ರಂಗ ಪ್ರವೇಶ ಮಾಡಿದರು. ತಾಯಿ ಕರುಳು, ಮುದುಕನ ಮದುವೆ, ಮುಂತಾದವು ಇವರಿಗೆ ಬಹಳ ಹೆಸರು ತಂದುಕೊಟ್ಟ ನಾಟಕಗಳು.

ಹಾಸ್ಯಪಾತ್ರಗಳಿಗೆ ತಮ್ಮನ್ನು ಅರ್ಪಿಸಿಕೊಂಡು, ನಿರಂತರವಾಗಿ ಪ್ರೇಕ್ಷಕರನ್ನು ನಗಿಸುವ ಕಾಯಕದಲ್ಲಿ ತೊಡಗಿದ ಬಿರಾದಾರ್ ತಮ್ಮ ಹಾಸ್ಯ ರಸಮಂಜರಿ ಕಾರ್ಯಕ್ರಮದ ಮೂಲಕ ಅಪಾರ ಜನಪ್ರಿಯತೆಗಳಿಸಿದರು. ತಮ್ಮದೇ ಆದ 'ಸಂಗಮೇಶ್ವರ ಕಲಾವೃಂದ' ವನ್ನು ಸ್ಥಾಪಿಸಿ, ಕರ್ನಾಟಕದಾದ್ಯಂತ ನಾಟಕಗಳನ್ನು ಪ್ರದರ್ಶಿಸಿದ ಇವರ ಪ್ರತಿಭೆಗೆ ಚಲನಚಿತ್ರ ರಂಗವೂ ನೀರೆರೆಯಿತು. ಖ್ಯಾತ ನಿರ್ದೇಶಕ ಎಂ.ಎಸ್. ಸತ್ಯು ಅವರ 'ಬರ' ಸಿನಿಮಾಮೂಲಕ ಹಿರಿತೆರೆಯಲ್ಲಿ ಕಾಣಿಸಿಕೊಂಡು ಬಿರಾದಾರ್ ಅವರು 'ಕನಸೆಂಬ ಕುದುರೆಯನೇರಿ' ಚಿತ್ರದ ಮೂಲಕ ಅಂತರರಾಷ್ಟ್ರೀಯ ಖ್ಯಾತಿಗಳಿಸಿದರು.

ಚಲನಚಿತ್ರಗಳ ಅಭಿನಯದ ಜೊತೆ ಜೊತೆಗೆ ನಿರಂತರ ರಂಗಭೂಮಿ ಚಟುವಟಿಕೆ, ಹಾಸ್ಯ ರಸಸಂಜೆಗಳ ಮೂಲಕ ರಂಜಿಸುತ್ತಿರುವ ವೈಜನಾಥ ಬಿರಾದಾರ ಅವರ ರಂಗಭೂಮಿ ಬದ್ಧತೆ, ಅವರ ಹಾಸ್ಯ ಪ್ರಜ್ಞೆ ಗಮನಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ಕಲ್ಬುರ್ಗಿ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.

---



## ಪ್ರಕಾಶ ಬೆಳವಾಡಿ

ಬಾಲ್ಯದಿಂದಲೂ ರಂಗಭೂಮಿ ಪರಿಸರದಲ್ಲಿ ಬೆಳೆದ ಪ್ರಕಾಶ ಬೆಳವಾಡಿ, ಎಂಜಿನಿಯರಿಂಗ್ ಓದಿದರೂ, ಅವರ ಆಯ್ಕೆ ರಂಗಭೂಮಿ, ಸಿನಿಮಾ, ಪತ್ರಿಕೋದ್ಯಮ, ಕಿರುತೆರೆ ಇತ್ಯಾದಿ ಅಭಿವ್ಯಕ್ತಿ ಮಾಧ್ಯಮಗಳು, ತಮ್ಮದೇ ಆದ CFD – ಸೆಂಟರ್ ಫಾರ್ ಫಿಲಂ ಅಂಡ್ ಡ್ರಾಮ (Centre for Film and Drama) ಸಂಸ್ಥೆಯನ್ನು ಹುಟ್ಟುಹಾಕಿ ಈ ಮಾಧ್ಯಮಗಳ ಬಗ್ಗೆ ಯುವಕರಿಗೆ ತರಬೇತಿಯನ್ನು ನೀಡುತ್ತಿದ್ದಾರೆ. ಪತ್ರಿಕೋದ್ಯಮವನ್ನು ತಮ್ಮ ಆಯ್ಕೆಯನ್ನಾಗಿಸಿಕೊಂಡು, ಇಂಗ್ಲಿಷ್ ಹಾಗೂ ಕನ್ನಡ ಪತ್ರಿಕೆಗಳಲ್ಲಿ ಕೆಲಸಮಾಡಿದ್ದಾರೆ.

ಇಂಗ್ಲೀಷ್, ಕನ್ನಡ ಭಾಷೆಗಳಲ್ಲಿ ನಾಟಕಗಳನ್ನು ನಿರ್ದೇಶಿಸುತ್ತಾ, ಆಧುನಿಕ ರಂಗ ಪ್ರಯೋಗಗಳ ವ್ಯಾಪ್ತಿಯನ್ನು ಹಿಗ್ಗಿಸಿದ್ದಾರೆ.

ಮೈಸೂರಿನ ರಂಗಾಯಣ, ಹೆಗ್ಗೋಡಿನ ನೀನಾಸಂ ಸೇರಿದಂತೆ ಅನೇಕ ವೃತ್ತಿಪರ ರಂಗತಂಡಗಳಿಗೆ ನಾಟಕಗಳನ್ನು ನಿರ್ದೇಶಿಸುವ ಜೊತೆಗೆ ರಂಗಾಭಿನಯ, ಸಂಘಟನೆ, ನಿರ್ದೇಶನ ಕುರಿತಾದ ವಿಚಾರ ಸಂಕಿರಣಗಳಲ್ಲಿ, ಕಮ್ಮಟಗಳಲ್ಲಿ ಭಾಗವಹಿಸಿ, ತಮ್ಮ ಚಿಂತನೆಯ ರಂಗಭೂಮಿಯನ್ನು ಪ್ರತಿಪಾದಿಸುತ್ತಿದ್ದಾರೆ.

ಇತ್ತೀಚೆಗೆ ಸುಚಿತ್ರ ಫಿಲಂ ಸೊಸೈಟಿಯ ಚುಕ್ಕಾಣಿ ಹಿಡಿದು ರಂಗಭೂಮಿ ಹಾಗೂ ಸಿನಿಮಾ ಕುರಿತಂತೆ ಸತತ ಚಟುವಟಿಕೆ ನಡೆಸುತ್ತಿದ್ದಾರೆ. ಅನೇಕ ಸಾಕ್ಷ್ಯಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಇವರ ನಿರ್ದೇಶನದ 'ಸ್ಟಂಬಲ್' ಚಿತ್ರಕ್ಕೆ ರಾಷ್ಟ್ರ ಪ್ರಶಸ್ತಿ ಬಂದಿದೆ.

ರವೀಂದ್ರನಾಥ ಟಾಗೋರರ 'ಗೋರ', ಡಾ|| ಯು.ಆರ್. ಅನಂತಮೂರ್ತಿ ಅವರ 'ಅವಸ್ಥೆ' ಸೇರಿದಂತೆ ಪಿ.ಲಂಕೇಶ, ಪ್ರಸನ್ನ, ಬಾದಲ್‌ಸರ್ಕಾರ್ ಮುಂತಾದ ನಾಟಕಕಾರರ ನಾಟಕಗಳನ್ನು ಪ್ರಯೋಗಿಸಿದ್ದಾರೆ. ನಾಟಕ ರಚನೆ, ಅನುವಾದ, ನಿರ್ದೇಶನ, ಅಭಿನಯ, ಸಂಘಟನೆ ಹಾಗೂ ನೇಪಥ್ಯ ಕಾರ್ಯದಲ್ಲೂ ಅಪಾರ ಅನುಭವ ಪಡೆದಿರುವ ಪ್ರಕಾಶ ಬೆಳವಾಡಿ ಅವರಿಗೆ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಹರಿಗೆ ಗೋಪಾಲಸ್ವಾಮಿ

ಬೆಳಕು ವಿನ್ಯಾಸ ಹಾಗೂ ರಂಗಸಜ್ಜಿಕೆಯಲ್ಲಿ ನಿರಂತರವಾಗಿ ತೊಡಗಿಸಿಕೊಂಡು ಶಿವಮೊಗ್ಗ ಜಿಲ್ಲೆಯ ಹವ್ಯಾಸಿ ರಂಗಭೂಮಿಗೆ ತಾಂತ್ರಿಕ ಚೌಕಟ್ಟು ತಂದು ಕೊಟ್ಟವರು ಹರಿಗೆ ಗೋಪಾಲಸ್ವಾಮಿ. 35 ವರ್ಷಗಳ ಅನುಭವದೊಂದಿಗೆ ಹರಿಗೆ ಗೋಪಾಲಸ್ವಾಮಿಯವರು ಇಂದಿಗೂ ಕ್ರಿಯಾಶೀಲರಾಗಿ ರಂಗಭೂಮಿಯಲ್ಲಿ ತೊಡಗಿಕೊಂಡಿದ್ದಾರೆ.

ಶಿವಮೊಗ್ಗ ಹವ್ಯಾಸಿ ರಂಗತಂಡಗಳ ಯಾವುದೇ ಪ್ರಯೋಗವಿರಲಿ ಅದಕ್ಕೆ ಗೋಪಾಲಸ್ವಾಮಿ ಅವರ ಸಹಾಯಹಸ್ತ ಸದಾಕಾಲಸಿದ್ಧ, ಸುಮಾರು 150ಕ್ಕೂ ಹೆಚ್ಚು ನಾಟಕಗಳಿಗೆ ಬೆಳಕುವಿನ್ಯಾಸ ಮಾಡಿದ್ದಾರೆ. ರಾಜ್ಯ ಮತ್ತು ರಾಷ್ಟ್ರೀಯ ನಾಟಕ ಸ್ಪರ್ಧೆಗಳಲ್ಲಿ ಬೆಳಕು ವಿನ್ಯಾಸಕ್ಕಾಗಿ 16 ಬಾರಿ ಪ್ರಶಸ್ತಿ ಗಳಿಸಿದ್ದಾರೆ.

ಅದ್ರೇಶಿಪರದೇಶಿಯಾದ, ಶ್ರೀಕೃಷ್ಣಸಂಧಾನ, ಸುಣ್ಣಹಚ್ಚಿದ ಸಮಾಧಿಗಳು, ಯಯಾತಿ, ಮಾಯಾಮೃಗ, ರಾವೀನದಿಯ ದಂಡೆಯಲ್ಲಿ, ಗುಣಮುಖ, ಸಾಲಭಂಜಿಕೆ ಮುಂತಾದ ನಾಟಕಗಳಿಗೆ ಬೆಳಕುವಿನ್ಯಾಸ ಮಾಡಿದ್ದಾರೆ. ಶಿವಮೊಗ್ಗದಲ್ಲಿ ನಡೆದ ವಸಂತರಂಗೋತ್ಸವ, ದೇಶಿ ನಾಟಕೋತ್ಸವ, ರಂಗಸಹ್ಯಾದ್ರಿ ನಾಟಕೋತ್ಸವಗಳು ಸೇರಿದಂತೆ, ರಂಗಾಯಣದ ಪಠ್ಯರಂಗೋತ್ಸವ, ಮಕ್ಕಳಬೇಸಿಗೆ ಶಿಬಿರ ಮುಂತಾದವುಗಳ ನಿರ್ವಹಣೆಯ ಜೊತೆಗೆ ಉತ್ಸವದ ನಾಟಕಗಳಿಗೆ ಬೆಳಕು ವಿನ್ಯಾಸ ಮಾಡಿದ್ದಾರೆ.

ಅನೇಕ ನಾಟಕಸ್ಪರ್ಧೆಗಳಿಗೆ ತೀರ್ಪುಗಾರರಾಗಿಯೂ ಸೇವೆ ಸಲ್ಲಿಸಿದ್ದಾರೆ. ಒಂದು ಅವಧಿಗೆ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿಯೂ ತಮ್ಮ ಅನುಭವನ್ನು ಹೆಚ್ಚಿಸಿಕೊಂಡಿದ್ದಾರೆ.

ಶಿವಮೊಗ್ಗ ಜಿಲ್ಲೆಯ ಹವ್ಯಾಸಿರಂಗಭೂಮಿಯಲ್ಲಿ ಮಿಂಚುಹರಿಸಿದ ಹರಿಗೆ ಗೋಪಾಲಸ್ವಾಮಿ ಅವರ ಸೇವೆಯನ್ನು ಗಮನಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.





## ಡಿಂಗ್ರಿ ನಾಗರಾಜ್

ವೃತ್ತಿರಂಗಭೂಮಿಯ ನುರಿತ ಕಲಾವಿದರಾದ ಡಿಂಗ್ರಿ ನಾಗರಾಜ್ ಹಾಸ್ಯಪಾತ್ರಗಳಿಂದಾಗಿ ಕರ್ನಾಟಕದಲ್ಲಿ ಮನೆಮಾತಾದವರು. 56 ವರ್ಷಗಳಿಂದ ನಿರಂತರವಾಗಿ ಕಲಾಸೇವೆ ಮಾಡುತ್ತಿರುವ ನಾಗರಾಜ್ ಅವರು 5ನೇ ವರ್ಷವಿದ್ದಾಗಲೇ ರಂಗವೇರಿದರು. ಖ್ಯಾತ ವೃತ್ತಿಕಂಪನಿ ಕಲಾವಿದ ಶ್ರೀ ಸುಬ್ಬಯ್ಯನಾಯ್ಡು ಅವರ 'ಜಗಜ್ಯೋತಿ ಬಸವೇಶ್ವರ' ನಾಟಕದ ಪೂಜಾರಿಯ ಮಗನ ಪಾತ್ರದಿಂದ ಇವರು ಅಭಿನಯ ಪ್ರಾರಂಭಿಸಿದರು. ನಾಲ್ಕುವರ್ಷಗಳ ನಂತರ ವೀರಣ್ಣ ಅವರ ಕಂಪನಿಗೆ ಸೇರಿ 1955 ರಿಂದ 1970ರವರೆಗೆ ತಮ್ಮ ವಿಶಿಷ್ಟ ಅಭಿನಯದಿಂದ ಜನಮನ ಸೂರೆಗೊಂಡರು.

ನಂತರ ಮಾಸ್ಟರ್ ಹಿರಣ್ಣಯ್ಯ ಕಂಪನಿಯಲ್ಲಿ ಹಾಸ್ಯಪಾತ್ರಗಳಲ್ಲಿ ಮಿಂಚಿದರು. ಯೋಗಾನರಸಿಂಹಮೂರ್ತಿ, ಕೆ.ಬಿ.ಆರ್. ಡ್ರಾಮಾ ಕಂಪನಿಗಳಲ್ಲೂ ಹಾಸ್ಯ ನಟರಾಗಿ ಸೇವೆಸಲ್ಲಿಸಿದರು.

'ಪರಸಂಗದ ಗೆಂಡೆತಿಮ್ಮ' ಚಿತ್ರದ ಮೂಲಕ 1977ರಲ್ಲಿ ಚಿತ್ರರಂಗಕ್ಕೆ ಬಂದು, ಹಿರಿತೆರೆಯಲ್ಲೂ ಉತ್ತಮ ಹೆಸರು ಪಡೆದರೂ ರಂಗಭೂಮಿಯ ನಂಟನ್ನು ಸತತವಾಗಿ ಗಟ್ಟಿಗೊಳಿಸಿಕೊಂಡು ತಮ್ಮದೇ ಆದ 'ಡಿಂಗ್ರಿ ನಾಗರಾಜ್ ಮಿತ್ರಮಂಡಲಿ' ವೃತ್ತಿ ನಾಟಕ ಕಂಪನಿಯನ್ನು ಕಟ್ಟಿ ಕಳೆದ 30 ವರ್ಷಗಳಿಂದ ನಿರಂತರವಾಗಿ ಕನ್ನಡ ಜನತೆಯನ್ನು ನಕ್ಕು ನಲಿಸುತ್ತಿದ್ದಾರೆ.

ಸಾವಿರಾರು ರಂಗಪ್ರಯೋಗಗಳು, 400ಕ್ಕೂ ಹೆಚ್ಚು ಚಿತ್ರಗಳ ಹಾಸ್ಯ ಪಾತ್ರಗಳು ಇವರ ಅನುಭವದ ಶ್ರೀಮಂತಿಕೆಗೆ ಸಾಕ್ಷಿಯಾಗಿವೆ. ಇವರ ಕಲಾಸೇವೆಯನ್ನು ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಶೀಲಾ ಹಿರೇಮಠ

ಬಡತನದ ಹಿನ್ನೆಲೆಯಿಂದ ಬಂದಿರುವ ಶೀಲಾಹಿರೇಮಠ, ಅನಕ್ಷರಸ್ಥರಾದರೂ ರಂಗದ ಮೇಲೆ ಮಹಾರಾಣಿಯಾಗಿ ಮೆರೆದ ಪ್ರತಿಭಾನ್ವಿತೆ. ಉತ್ತರಕನ್ನಡ ಜಿಲ್ಲೆಯ ಯಲ್ಲಾಪುರದ ಶೀಲಾಹಿರೇಮಠ 9 ವರ್ಷದವರಾಗಿದ್ದಾಗ ನರಸಣ್ಣನವರ ನಾಟಕ ಕಂಪನಿ ಯಲ್ಲಾಪುರಕ್ಕೆ ಬಂದಿತ್ತು. ತಂದೆಯವರೊಂದಿಗೆ ಹೋಗಿ ನಾಟಕವನ್ನು ನೋಡಿದ ಬಾಲಕಿಗೆ, ಮುಂದೆ ಅದೇ ಕಂಪನಿಯಲ್ಲಿ ಬಾಲನಟಿಯಾಗಿ ಅಭಿನಯಿಸುವ ಅವಕಾಶ ಅನಿರೀಕ್ಷಿತವಾಗಿ ಒದಗಿಬಂತು.

ಅದೇ ಕಂಪನಿಯ ಹರಿಶ್ಚಂದ್ರ ನಾಟಕದಲ್ಲಿ ಲೋಹಿತಾಶ್ವ ಪಾತ್ರದಲ್ಲಿ ಬಾಲಕಲಾವಿದೆಯಾಗಿ ರಂಗಪ್ರವೇಶ ಮಾಡಿದರು. ಬಣ್ಣದ ಬದುಕಿನ ಎಲ್ಲಾ ಕಷ್ಟನಷ್ಟ, ಸುಖಗಳನ್ನು ಅನುಭವಿಸಿದ ಶೀಲಾ ಅವರು ತಮ್ಮ ಸಹೋದರಿಯರಿಬ್ಬರನ್ನು ರಂಗಭೂಮಿಗೆ ಕರೆತಂದರು.

ವೃತ್ತಿ ರಂಗನಾಟಕಗಳ ನಾಯಕಿಯಾಗಿ, ಕಂಪನಿಯ ಮಾಲೀಕಳಾಗಿ ಅಪಾರ ಹೆಸರುಗಳಿಸಿದ ಶೀಲಾ ಹಿರೇಮಠ, ಮಹಂತೇಶಶಾಸ್ತ್ರಿ ಅವರ ಕಂಪನಿ, ಬಿ.ಆರ್. ಅರಿಶಿನಗೋಡಿ ಅವರ ಕಂಪನಿ, ಕವಲಿ ಕಂಪನಿ, ಯೋಗಾನರಸಿಂಹ ಮೂರ್ತಿಯವರ ಕಂಪನಿಗಳಲ್ಲಿ ಅಭಿನಯಿಸಿ, ತಮ್ಮ ಭಾವಪೂರ್ಣ ಅಭಿನಯದಿಂದ ಜನಮನಸೂರೆಗೊಂಡರು.

ಇವರ ಪ್ರಬುದ್ಧ ಅಭಿನಯಕ್ಕೆ ಮಾರುಹೋದ ಮಾಲೀಕರು ತಮ್ಮ ಕಂಪನಿಗಳಿಗೆ ಆಹ್ವಾನಿಸಿ ನಾಟಕ ಮಾಡಲು ದುಂಬಾಲು ಬೀಳುತ್ತಿದ್ದರು. ದುರ್ದೈವದ ಸಂಗತಿ ಎಂದರೆ ಇವರು ಕಟ್ಟಿ ಪೋಷಿಸಿದ 'ಗಂಗಾಧರ ವಿಜಯ ನಾಟ್ಯಸಂಘ' ಜಾಲಿಹಾಳ, ಮಹಾರಾಷ್ಟ್ರದ ಸಾಂಗ್ಲಿಕ್ಯಾಂಪ್‌ನಲ್ಲಿ ಅಗ್ನಿ ಆಕಸ್ಮಿಕದಿಂದ ಸುಟ್ಟು ನಾಶವಾಯಿತು. ಅಂದಿನಿಂದ ಬೀದಿಗೆ ಬಿದ್ದ ಇವರು ಬೇರೆ ಬೇರೆ ಕಂಪನಿಗಳಲ್ಲಿ, ಗ್ರಾಮೀಣ ರಂಗಭೂಮಿಯಲ್ಲಿ ನಾಟಕ ಮಾಡುತ್ತಾ ಜೀವನ ಸಾಗಿಸುತ್ತಿದ್ದಾರೆ. ವೃತ್ತಿರಂಗಭೂಮಿಗೆ ಇವರು ನೀಡಿರುವ ಕೊಡುಗೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಬಸವರಾಜ್ ತಿಲ್ಲಾಪುರ

ರಂಗಭೂಮಿಯನ್ನು ಪ್ರವೇಶಮಾಡಲು ಪ್ರೇರಕಶಕ್ತಿಯಾಗಿ ಬಸವರಾಜ ತಿಲ್ಲಾಪುರ ಅವರ ಬೆನ್ನಿಗೆ ನಿಂತವರು ತಂದೆ ದಿ.ಡಿ. ಸಿದ್ದಣ್ಣ ಪಡೆಸೂರ ಅವರು. ಪ್ರಸಿದ್ಧ ಹಾಸ್ಯಕಲಾವಿದರಾಗಿದ್ದ ಸಿದ್ದಣ್ಣ, ಬಸವರಾಜ ಅವರಿಗೆ ಬಾಲ್ಯದಲ್ಲೇ ರಂಗಪ್ರವೇಶಕ್ಕೆ ಅನುವುಮಾಡಿಕೊಟ್ಟರು.

ಕಳೆದ 4 ದಶಕಗಳಿಂದ ವೃತ್ತಿರಂಗಕಲಾವಿದರಾಗಿ ತಮ್ಮ ಪ್ರತಿಭೆ ತೋರುತ್ತಿರುವ ಬಸವರಾಜ ತಿಲ್ಲಾಪುರ ಅವರು ಶ್ರೀ ಶಾರದಾ ಸಂಗೀತ ನಾಟಕ ಮಂಡಳಿ ಗೋಕಾಕ, ಜಿ.ವಿ. ಕೃಷ್ಣ ಮಿತ್ರರುಮಂಡಲಿ, ಬೆಂಗಳೂರು. ಶ್ರೀ ಹೋಳಿಹುಚ್ಚೇಶ್ವರ ನಾಟ್ಯಸಂಘ ಕಮತಗಿ, ಕೆ.ಬಿ.ಆರ್. ಡ್ರಾಮಾ ಕಂಪನಿ, ದಾವಣಗೆರೆ, ಸಂಗಮೇಶ್ವರ ನಾಟ್ಯ ಸಂಘ ಗುಡಗೇರಿ, ಶ್ರೀ ಕುಮಾರೇಶ್ವರ ಕೃಪಾಪೋಷಕ, ಪಂ.

ಪಂಚಾಕ್ಷರ ಗವಾಯಿಗಳ ನಾಟ್ಯ ಸಂಘ, ಗದಗ ಸೇರಿದಂತೆ ಹಲವಾರು ಕಂಪನಿಗಳ ನಾಟಕಗಳಲ್ಲಿ ಮುಖ್ಯಪಾತ್ರಗಳಲ್ಲಿ ಅಭಿನಯಿಸಿದ್ದಾರೆ.

ರೈತನ ಮಕ್ಕಳು ನಾಟಕದ 'ಕಾಳಿದಾಸ'ನ ಪಾತ್ರ, ಸತ್ಯಸತ್ತಿತು ನಾಟಕ ಧರ್ಮನ ಪಾತ್ರ, ದುಡ್ಡಿನದರ್ಪ ನಾಟಕದ ದೇವಪ್ಪನ ಪಾತ್ರ ಸೇರಿದಂತೆ 35ಕ್ಕೂ ಹೆಚ್ಚು ನಾಟಕಗಳ ವಿವಿಧ ಪಾತ್ರಗಳಲ್ಲಿ ಅಭಿನಯಿಸಿರುವ ಬಸವರಾಜ್ ಕಿರುಕೆರೆ ಧಾರಾವಾಹಿ, ಚಲನಚಿತ್ರಗಳಲ್ಲಿ ನಟಿಸಿದ್ದಾರೆ. ಧ್ವನಿಸುರುಳಿ ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಆಕಾಶವಾಣಿಯ 'ಬಿ' ಗ್ರೇಡ್ ಕಲಾವಿದರೂ ಆಗಿರುವ ಇವರ ನಿರಂತರ ಕಲಾಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಭೈರೇಗೌಡ

ರಾಮನಗರದವರಾದ ಭೈರೇಗೌಡ ರಂಗಭೂಮಿ ಕಲಾವಿದ ಹಾಗು ಸಾಮಾಜಿಕ ಸೇವಾಕರ್ತ. ಹತ್ತುಹಲವು ಸಂಸ್ಥೆಗಳ ಒಡನಾಟದೊಂದಿಗೆ ತಮ್ಮ ರಂಗತಂಡ 'ಅಮರಜ್ಯೋತಿ ಕಲಾಬಳಗ'ವನ್ನು ಕಳೆದ ಮೂರು ದಶಕಗಳಿಂದ ಸಕ್ರಿಯವಾಗಿ ನಡೆಸುತ್ತಿದ್ದಾರೆ. ರಂಗಾಭಿನಯ ಹಾಗು ಸಂಘಟನೆಯನ್ನು ಬಹಳ ಶಿಸ್ತಿನಿಂದ ಮಾಡುವ ಭೈರೇಗೌಡ, ಪ್ರತಿವರ್ಷ ರಾಜ್ಯ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ರಂಗಸಂಗೀತ ಗಾಯನ ಸ್ಪರ್ಧೆ, ಪೌರಾಣಿಕ ನಾಟಕೋತ್ಸವಗಳನ್ನು ಸಂಘಟಿಸುತ್ತ ಗ್ರಾಮೀಣ ಪ್ರತಿಭೆಗಳಿಗೆ ವೇದಿಕೆ ನೀಡಿದ್ದಾರೆ. ತ್ಯಾಗಿ, ಉಂಡಾಡಿಗುಂಡ, ದೇವದಾಸಿ, ಕುರಿದೊಡ್ಡಿ ಕುರುಕ್ಷೇತ್ರ, ಎಚ್ಚಮನಾಯಕ ಸೇರಿದಂತೆ ಹಲವಾರು ಸಾಮಾಜಿಕ, ಐತಿಹಾಸಿಕ ನಾಟಕಗಳಿಗೆ ಬಣ್ಣಹಚ್ಚಿದ್ದಾರೆ. ಗ್ರಾಮೀಣ ರಂಗಭೂಮಿಯ ಮುಖ್ಯ ಆಕರ್ಷಣೆಯಾದ ಪೌರಾಣಿಕ ನಾಟಕಗಳಲ್ಲಿ ಇವರದು ಉತ್ಸಾಹಪೂರ್ಣ ಭಾಗವಹಿಸುವಿಕೆ. ಈವರೆಗೆ 25ಕ್ಕೂ ಹೆಚ್ಚು ಪೌರಾಣಿಕ ನಾಟಕಗಳ ನೂರಾರು ಪ್ರದರ್ಶನಗಳನ್ನು ನೀಡಿದ್ದಾರೆ.

ಸಂಪೂರ್ಣರಾಮಾಯಣ, ರುಕ್ಮಿಣಿಸ್ವಯಂವರ, ಶ್ರೀಕೃಷ್ಣ ಸಂಧಾನ, ಕುರುಕ್ಷೇತ್ರ ಮುಂತಾದ ನಾಟಕಗಳಲ್ಲಿ ಮುಖ್ಯಪಾತ್ರಗಳಲ್ಲಿ ಅಭಿನಯಿಸಿರುವ ಭೈರೇಗೌಡ ವೃತ್ತಿಯಲ್ಲಿ ಸಹಕಾರ ಸಂಘದ ಕಾರ್ಯದರ್ಶಿ, ಬಿಡುವಿನ ವೇಳೆಯಲ್ಲಿ ನಾಟಕದ ಅಭ್ಯಾಸ, ಪ್ರದರ್ಶನ ಹಾಗು ಸಂಘಟನೆಯ ಕೆಲಸ. ಗ್ರಾಮೀಣ ರಂಗಭೂಮಿ ವಲಯದಲ್ಲಿ ಇವರು ಮಾಡಿರುವ ಸತತ ಸೇವೆಯನ್ನು, ಕಲಾವಂತಿಕೆಯನ್ನು ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿಗೌರವಿಸುತ್ತಿದೆ.

---



## ರತ್ನಾ ನಾಗೇಶ್

ಬೆಂಗಳೂರು ಹವ್ಯಾಸಿ ರಂಗವಲಯದಲ್ಲಿ ಪರಿಚಿತ ಹೆಸರು ರತ್ನಾ ನಾಗೇಶ್. ರಂಗನಟಿಯಾಗಿ, ನಿರ್ದೇಶಕಿಯಾಗಿ, ಸಂಘಟಕಿಯಾಗಿ ದಿನವಿಡೀ ರಂಗ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ರತ್ನಾ ನಾಗೇಶ್, ಅಭಿನಯದ ಬಗ್ಗೆ ತರಬೇತಿ ಪಡೆದುಕೊಂಡು, ರಂಗಭೂಮಿಯನ್ನೇ ವೃತ್ತಿಯಾಗಿ ಸ್ವೀಕರಿಸಿದ್ದಾರೆ. ಬೆಂಗಳೂರಿನಲ್ಲಿ ನಡೆಯುವ ಅನೇಕ ಪ್ರತಿಷ್ಠಿತ ರಂಗಸ್ಪರ್ಧೆಗಳಲ್ಲಿ ನಟನೆಗಾಗಿ ಪ್ರಶಸ್ತಿ ಇವರಿಗೆ ಕಟ್ಟಿಟ್ಟಬುತ್ತಿ, ವೃತ್ತಿಪರತೆ ಹಾಗು ರಂಗಶಿಸ್ತು ಇವರ ಯಶಸ್ಸಿಗೆ ಕಾರಣ. ತಮ್ಮದೇ ಆದ ನಂದನ ಸಾಂಸ್ಕೃತಿಕ ಸಂಘಟನೆಯ ಮೂಲಕ ಪತಿ ದೇವನಾಗೇಶ್ ಅವರೊಂದಿಗೆ ಸೇರಿ ಅನೇಕ ಮಹತ್ವದ

ಪ್ರಯೋಗಗಳನ್ನು ಕನ್ನಡ ರಂಗಭೂಮಿಗೆ ನೀಡಿದ್ದಾರೆ. ಸತತ 100 ಗಂಟೆ ನಾಟಕಮಾಡಿ ಲಿಮ್ಕಾ ದಾಖಲೆಗೆ ನಂದನ ತಂಡವನ್ನು ಸೇರಿಸುವಲ್ಲಿ ಇವರ ಶ್ರಮ ಅಪಾರ. 150ಕ್ಕೂ ಹೆಚ್ಚು ಪ್ರಶಸ್ತಿಗಳನ್ನು ಪಡೆದಿರುವ ರಕ್ಷಾ ನಾಗೇಶ್ ರಾಜ್ಯದ ಅನೇಕ ಸಾಂಸ್ಕೃತಿಕ ಉತ್ಸವಗಳಲ್ಲಿ ಸಂಯೋಜಕಿಯಾಗಿ ಕಾರ್ಯನಿರ್ವಹಿಸಿದ್ದಾರೆ.

ಕಾಲೇಜು ವಿದ್ಯಾರ್ಥಿಗಳಲ್ಲಿ ರಂಗಾಭಿರುಚಿ ಮೂಡಿಸಲು, ಕಾಲೇಜು ಪಠ್ಯಗಳನ್ನು ರಂಗಕ್ಕೆ ಅಳವಡಿಸಿ, ರಾಜ್ಯಾದ್ಯಂತ ನೂರಾರು ಪ್ರದರ್ಶನಗಳನ್ನು ನೀಡಿದ್ದಾರೆ. ಇವರ ನಿರಂತರ ಕ್ರಿಯಾಶೀಲ ಚಟುವಟಿಕೆ ಹಾಗೂ ಬದ್ಧತೆಯನ್ನು ಗುರುತಿಸಿ ನಾಟಕ ಅಕಾಡೆಮಿ 2011–12ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಗಿರಿಯಪ್ಪ ಇಡ್ಯ

ಬಾಲ್ಯದಿಂದಲೇ ರಂಗಭೂಮಿಯ ಗೀಳು ಬೆಳೆಸಿಕೊಂಡ ಗಿರಿಯಪ್ಪ ಇಡ್ಯ ತಮ್ಮ ಪರಿಸರದ ಯಕ್ಷಗಾನಬಯಲಾಟ, ನಾಟಕಗಳಿಂದ ಪ್ರಭಾವಿತರಾದರು. ಕೃಷಿ ಕುಟುಂಬದ ಹಿನ್ನಲೆಯ ಶ್ರೀಯುತರು ಖಾಸಗಿ ಕಂಪನಿಯೊಂದರಲ್ಲಿ ಉದ್ಯೋಗ ಮಾಡುತ್ತಿದ್ದರಾದರೂ, ರಂಗಭೂಮಿಯ ಅತೀವ ಸೆಳೆತದಿಂದ ನೌಕರಿಯನ್ನು ತ್ಯಜಿಸಿದರು. ರಂಗಭೂಮಿಯ ನೇಪಥ್ಯದ ಕಾರ್ಯಗಳಲ್ಲಿ ತಮ್ಮನ್ನು ಒಳಗೊಳ್ಳುತ್ತಾ ಹಿರಿಯರ ಮಾರ್ಗದರ್ಶನದಲ್ಲಿ ರಂಗನಿರ್ವಹಣೆ, ರಂಗವಿನ್ಯಾಸ, ಬೆಳಕುವಿನ್ಯಾಸಗಳ ಬಗ್ಗೆ ತಿಳಿದುಕೊಂಡರು. ಬಣ್ಣ ಇವರನ್ನು ಬಹುವಾಗಿ ಆಕರ್ಷಿಸಿತು. ಪ್ರಸಾಧನ ಕೊಠಡಿಯಲ್ಲಿ ಪ್ರಸಾಧನಕಲಾವಿದರು ಬಣ್ಣಗಳ ಮಿಶ್ರಣ ಮಾಡುತ್ತಾ, ವಿವಿಧ ಹೊಸಬಣ್ಣಗಳನ್ನು ಸಿದ್ಧಪಡಿಸಿ ಪಾತ್ರಗಳಿಗೆ ಹಚ್ಚುತ್ತಿದ್ದುದು ಇವರನ್ನು ಬೆರಗುಗೊಳಿಸಿತು.

ಪ್ರಸಾಧನ ಕಲೆಯನ್ನೇ ವಿಶೇಷವಾಗಿ ಗಮನಿಸುತ್ತಾ, ಅಭ್ಯಾಸ ಮಾಡತೊಡಗಿದರು, ಜೊತೆಗೆ ವಸ್ತ್ರವಿನ್ಯಾಸಕ್ಕೂ ಕೈಹಾಕಿದರು. ಸ್ಥಳೀಯ ಸಂಪನ್ಮೂಲಗಳನ್ನು ಬಳಸಿ ವಸ್ತ್ರವಿನ್ಯಾಸ, ರಂಗಪರಿಕರ ತಯಾರಿಕೆ, ಮುಖವಾಡಗಳ ಸಿದ್ಧತೆಗಳನ್ನು ವಿಶಿಷ್ಟವಾಗಿ ಮಾಡತೊಡಗಿದ ಇವರು ಸಮಕಾಲೀನ ರಂಗಭೂಮಿಯ ಆಶಯಕ್ಕೆ ತಕ್ಕಹಾಗೆ ತಮ್ಮ ಕ್ರಿಯಾಶೀಲತೆಯನ್ನು ಉಪಯೋಗಿಸತೊಡಗಿದರು. ತುಳು, ಕನ್ನಡ, ಕೊಂಕಣಿ ಭಾಷೆಗಳ ನಾಟಕಗಳಿಗೆ ಪ್ರಸಾಧನ ಮಾಡುತ್ತಾ, ನೈಸರ್ಗಿಕವಾಗಿ ದೊರೆಯುವ ಭತ್ತದಹೆಸೆ, ಬೈಹುಲ್ಲು, ತೆಂಗಿನಚಿಪ್ಪು, ತೆಂಗಿನಸುಳಿ, ನಾರುಗಳನ್ನು ಬಳಸಿ ನಾಟಕಕ್ಕೆ ಪೂರಕವಾದ ರಂಗಪರಿಕರ, ರಂಗಸಜ್ಜಿಕೆಗಳನ್ನು ನಿರ್ಮಿಸುವ ಚಾಕಚಕ್ಯತೆ ಬೆಳೆಸಿಕೊಂಡರು.

ಮಕ್ಕಳ ನಾಟಕಗಳು, ರಂಗತರಬೇತಿ ಶಿಬಿರಗಳಲ್ಲಿ ವಿಶೇಷವಾಗಿ ತರಬೇತಿ ನೀಡಿ 15ಕ್ಕೂ ಹೆಚ್ಚು ಮಕ್ಕಳ ನಾಟಕಗಳಿಗೆ, 80ಕ್ಕೂ ಹೆಚ್ಚು ರಂಗಪ್ರಯೋಗಗಳಿಗೆ ಪ್ರಸಾಧನ ವಿನ್ಯಾಸ ಮಾಡಿದ್ದಾರೆ. ಇವರ ಬಹುಮುಖಿ ಸಾಧನೆಗಾಗಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ವಿರೂಪಾಕ್ಷಯ್ಯ ಶಿವಲಿಂಗಯ್ಯ ಕಂಬಿ

ಸಾಮಾಜಿಕ ಪರಿವರ್ತನೆಗೆ ರಂಗಮಾಧ್ಯಮ ಹಾಗು ಇನ್ನಿತರ ಸಾಂಸ್ಕೃತಿಕ ಪ್ರಕಾರಗಳ ಬಳಕೆಸಾಧ್ಯ ಎಂದು ನಂಬಿರುವ ವಿರೂಪಾಕ್ಷಯ್ಯ ಕಂಬಿ, ಬಾಲ್ಯದಿಂದಲೇ ರಂಗಭೂಮಿ ಹಾಗು ಭಜನೆಯ ಬಗ್ಗೆ ಒಲವು ಮೂಡಿಸಿಕೊಂಡವರು. ಬೆಳಗಾವಿ ಜಿಲ್ಲೆಯ ಕಣವಿ ಕರವಿನಕೊಪ್ಪದಲ್ಲಿ ಜನಿಸಿದ ವಿರೂಪಾಕ್ಷಯ್ಯ ಬಡತನದಲ್ಲೇ ತಮ್ಮ ಬಾಲ್ಯ ಕಳೆದರು.

ಶಾಲಾ ದಿನಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಿದ್ದ ಇವರು ಅನೇಕ ಏಕಾಂಕಗಳು, ಕಿರುನಾಟಕಗಳಲ್ಲಿ ಅಭಿನಯಿಸಿ, ತಮ್ಮ ಪ್ರತಿಭೆಯನ್ನು ಪರಿಚಯಿಸಿದರು.

ಸಮಾನ ಮನಸ್ಕ ಗೆಳೆಯರನ್ನು ಕೂಡಿಸಿಕೊಂಡು ಕಣವಿಕರವಿನಕೊಪ್ಪ ಗ್ರಾಮದಲ್ಲಿ ರಾಮಾಯಣ ಬಯಲಾಟವನ್ನು ಆಡಿಸಿದರು, ಈ ಪ್ರಯತ್ನ ಅವರಿಗೆ ಯಶಸ್ಸುತಂದಿತಲ್ಲದೆ, ರಂಗಭೂಮಿಯ ಮೇಲೆ ಅಪಾರ ಪ್ರೀತಿಗೌರವ ಉಂಟಾಯಿತು.

ಮುಂದೆ ರಾಜಾ ಹರಿಶ್ಚಂದ್ರ, ಸಂಗೊಳ್ಳಿರಾಯಣ್ಣ, ಸೇಡು ಬಾಳಿಗೊಂದು ಕೇಡು, ಕಣಿಕರವಿಲ್ಲದ ಧನಿಕರು, ಸತ್ಯವಿಲ್ಲದೆ ಕೈಎತ್ತಿ ಹೇಳಿ, ಮುಂತಾದ ನಾಟಕಗಳನ್ನು ಹಲವು ಬಾರಿ ಅಭಿನಯಿಸಿದರು. ಜಗಜ್ಯೋತಿ ಬಸವೇಶ್ವರ ನಾಟಕದ ಹರಳಯ್ಯನ ಪಾತ್ರದಲ್ಲಿ ಅಪಾರ ಹೆಸರು ಮಾಡಿದರು.

ಅಶಕ್ತ ಕಲಾವಿದರ ಸಂಕ್ಷೇಮಾಭಿವೃದ್ಧಿಗಾಗಿ ಸಂಘಟನೆಮಾಡಿ, ಅವರಿಗೆ ಆರ್ಥಿಕ ಸಹಾಯ ದೊರಕಿಸಲು ಶ್ರಮಿಸುತ್ತಿದ್ದಾರೆ. ತಮ್ಮ ಹರಿಕಥೆ ಭಜನೆಗಳ ಮೂಲಕ ಜನ ಜಾಗೃತಿಗೆ ಶ್ರಮಿಸುತ್ತಿದ್ದಾರೆ. ನಾಟಕಕಲೆಯಲ್ಲಿ ಇವರಿಗಿರುವ ಪರಿಶ್ರಮ ಹಾಗು ಸಾಧನೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಮಲ್ಲಿಕಾರ್ಜುನ ಕಡಕೋಳ

ಕನ್ನಡ ರಂಗಭೂಮಿಯ ಬೆಳವಣಿಗೆಯಲ್ಲಿ ರಂಗವಿಮರ್ಶೆಯ ಪಾತ್ರ ಹಿರಿದಾದುದು. ರಂಗಚಿಂತನೆಯ ಲೇಖನಗಳಿಂದ ನಿರಂತರ ರಂಗಭೂಮಿಯನ್ನು ಜೀವಂತವಾಗಿಟ್ಟ ಮಲ್ಲಿಕಾರ್ಜುನ ಕಡಕೋಳ ಅವರು ರಂಗಭೂಮಿಯ ಚಿಂತನ ಚಿಲುಮೆ.

ಮಲ್ಲಿಕಾರ್ಜುನ ಕಡಕೋಳ ಅವರು ಪತ್ರಿಕೆಗಳಲ್ಲಿ ಅಂಕಣಗಳನ್ನು ಬರೆಯುತ್ತಾ, ಹಲವಾರು ರಂಗಭೂಮಿ ಸಂಬಂಧಿತ ಲೇಖನಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ದಾವಣಗೆರೆಯ ಜಿಲ್ಲಾ ರಂಗ ಮಾಹಿತಿಯನ್ನು ಅಚ್ಚುಕಟ್ಟಾಗಿ ಸಂಗ್ರಹಿಸಿಕೊಟ್ಟಿದ್ದಾರೆ.

ಅವ್ವ, ಕ್ರಾಂತಿಸೂರ್ಯ, ಕಲ್ಯಾಣಿ, ದೇವಿಮಹಾತ್ಮೆ, ಸುವರ್ಣ ಮುಂತಾದ ನಾಟಕಗಳಲ್ಲಿ ಅಭಿನಯಿಸಿರುವ ಕಡಕೋಳ ಹಲವಾರು ಜನಪರ ರಂಗಭೂಮಿ ಚಟುವಟಿಕೆಗಳನ್ನು ಹಮ್ಮಿಕೊಂಡು ಯಶಸ್ವಿಗೊಳಿಸಿದ್ದಾರೆ. ರಂಗಸುನೇರಿ, ರಂಗಕಂಕಣ, ಜೀವನ್ಮುಖಿ, ತೆನೆತೇರು, ರಂಗವಿಹಂಗಮ ಮುಂತಾದವು ಇವರ ಸಂಪಾದಿತ ಕೃತಿಗಳು.

ರಂಗಸಂಘಟಕರಾಗಿಯೂ ಅನುಭವ ಪಡೆದಿರುವ ಕಡಕೋಳ ಅನೇಕ ನಾಟಕ ತರಬೇತಿ ಶಿಬಿರ, ನಾಟಕೋತ್ಸವಗಳನ್ನು ಆಯೋಜಿಸಿದ್ದಾರೆ.

ರಂಗವಿಮರ್ಶೆಯಲ್ಲಿ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡಿರುವ ಇವರು ದೊಡ್ಡಾಟ ಕುರಿತಾದ ಒಂದುವಾರದ ಉತ್ಸವ, ವಿಚಾರಸಂಕಿರಣ, ವೃತ್ತಿ ಹಾಗು ಆಧುನಿಕ ರಂಗ ಸಮನ್ವಯ ವಿಚಾರ ಸಂಕಿರಣ, '21ನೇ ಶತಮಾನದ ಹೊಸ್ತಿಲಲ್ಲಿ ಕನ್ನಡ ರಂಗಭೂಮಿ' ಅಖಿಲ ಕರ್ನಾಟಕ ವೃತ್ತಿರಂಗಸಮಾವೇಶ ಮುಂತಾದವುಗಳನ್ನು ಸಂಘಟಿಸಿ ಯಶಸ್ವಿಗೊಳಿಸಿದ್ದಾರೆ. ಇವರ ನಿರಂತರ ರಂಗಸೇವೆಯನ್ನು ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಡಾ. ನಾಗೇಶ ವಿ. ಬೆಟ್ಟಕೋಟೆ

ರಂಗಶಿಕ್ಷಣದ ಸಾಧ್ಯತೆಗಳು ಅಪಾರ. ಇದನ್ನು ಅರಿತ ನಾಗೇಶ್ ಬೆಟ್ಟಕೋಟೆ ನಾಟಕ ಶಾಸ್ತ್ರದಲ್ಲಿ ಪದವಿ, ಸ್ನಾತಕೋತ್ತರ ಪದವಿ ಹಾಗು ಪಿಹೆಚ್‌ಡಿಗಳನ್ನು ಗಳಿಸಿ, ರಂಗಶಿಕ್ಷಣಾರ್ಥಿಗಳಿಗೆ ಮಾರ್ಗದರ್ಶಕರಾಗಿದ್ದಾರೆ. ಬೆಂಗಳೂರು ಗ್ರಾಮಾಂತರ ಜಿಲ್ಲೆ ಬೆಟ್ಟಕೋಟೆಯ ನಾಗೇಶ್ ಪ್ರಸ್ತುತ ಬೆಂಗಳೂರು ವಿಶ್ವವಿದ್ಯಾಲಯದ ನಾಟಕ ವಿಭಾಗದ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

18 ವರ್ಷಗಳ ಕಾಲ ಬೋಧನಾನುಭವ ಪಡೆದಿರುವ ಇವರು ರಂಗಭೂಮಿ ಕುರಿತು ನೂರಾರು ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದ್ದಾರೆ. ಆಂಧ್ರ ಮತ್ತು ಕರ್ನಾಟಕದ ಬೀದಿನಾಟಕ ಚಳವಳಿಯ ತುಲನಾತ್ಮಕ ಅಧ್ಯಯನ ನಡೆಸಿ ಡಾಕ್ಟರೇಟ್ ಪಡೆದಿರುವ ನಾಗೇಶ ಬೆಟ್ಟಕೋಟೆ ಅವರು ಬೆಂಗಳೂರು ಹವ್ಯಾಸಿರಂಗಭೂಮಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ.

ಪೀಟರ್‌ಬ್ರೂಕ್, ಬಿ.ವಿ. ಕಾರಂತ, ಸಿ.ಜಿ.ಕೆ., ವಿ. ರಾಮಮೂರ್ತಿ, ಸಿ. ಬಸವಲಿಂಗಯ್ಯ, ಸುರೇಶ ಆನಗಳ್ಳಿ, ಚಾಟ್ಲ‌ಶ್ರೀರಾಮುಲು ಮುಂತಾದವರಿಂದ ರಂಗತರಬೇತಿ ಪಡೆದಿದ್ದಾರೆ. 60ಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ್ದಾರೆ. 45ಕ್ಕೂ ಹೆಚ್ಚು ನಾಟಕಗಳ ನಿರ್ದೇಶನ ಮಾಡಿದ್ದಾರೆ.

ಅನೇಕ ಸ್ಥಳೀಯ, ರಾಷ್ಟ್ರೀಯ, ಅಂತರರಾಷ್ಟ್ರೀಯ, ರಂಗಸಂಶೋಧನಾ ಕೇಂದ್ರಗಳ ಸದಸ್ಯರಾಗಿರುವ ಇವರು, ರಾಷ್ಟ್ರೀಯ, ಅಂತರಾಷ್ಟ್ರೀಯ ವಿಚಾರ ಸಂಕಿರಣಗಳಲ್ಲಿ 45ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳನ್ನು ಮಂಡಿಸಿದ್ದಾರೆ. ಉಪನ್ಯಾಸಗಳನ್ನು ನೀಡಿದ್ದಾರೆ. ಇವರ ರಂಗಾಸಕ್ತಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.





## ಇಂದಿರಾ ಅಂಬವ್ವ ಚಿಮ್ಮಲ

ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಹಂಸನೂರು ಒಂದು ವಿಶಿಷ್ಟ ಗ್ರಾಮ. ಈ ಗ್ರಾಮದ ತುಂಬಾ ರಂಗ ಕಲಾವಿದರೇ ಇದ್ದಾರೆ. ಗ್ರಾಮೀಣ ರಂಗಭೂಮಿಯನ್ನು ಶಕ್ತಗೊಳಿಸುವಲ್ಲಿ ಈ ಗ್ರಾಮದ ಕಲಾವಿದೆಯರ ಕೊಡುಗೆ ಅಪಾರ. ಇಂತಹ ಕಲಾವಿದೆಯರಲ್ಲಿ ಇಂದಿರಾ ಅಂಬವ್ವ ಚಿಮಲ ಕೂಡ ಒಬ್ಬರು.

ಬಾಲ್ಯದಿಂದಲೇ ರಂಗಭೂಮಿಯ ಮೇಲೆ ಆಸಕ್ತಿ ಮೂಡಿಸಿಕೊಂಡ ಇವರಿಗೆ ಗ್ರಾಮದ ಕಲಾ ವಾತಾವರಣವೇ ಪ್ರೇರಕಶಕ್ತಿಯಾಯಿತು. ಬಾಗಲಕೋಟೆ ಜಿಲ್ಲೆಯ ಬಹುತೇಕ ಗ್ರಾಮಗಳು ಸೇರಿದಂತೆ ಅಕ್ಕಪಕ್ಕದ ಜಿಲ್ಲೆಗಳ ಹಳ್ಳಿಗಳಿಗೆ ಪ್ರಯಾಣಿಸುತ್ತಾ ಅಲ್ಲಿನ ನಾಟಕಗಳಲ್ಲಿ ಸ್ತ್ರೀ ಪಾತ್ರವನ್ನು ಮಾಡುತ್ತಿರುವುದು ಇವರ ಹೆಗ್ಗಳಿಕೆ. ಹೀಗೆ ಗ್ರಾಮದಿಂದ ಗ್ರಾಮಕ್ಕೆ ತೆರಳಿ ನಿತ್ಯ ರಂಗರಸದೌತಣ ನೀಡುತ್ತಿರುವ ಇಂದಿರಾ ಅಂಬವ್ವ, ಅನೇಕ ನಾಟಕೋತ್ಸವಗಳಲ್ಲಿ, ವಿಚಾರಸಂಕಿರಣಗಳಲ್ಲಿ ಹಂಸನೂರನ್ನು ಪ್ರತಿನಿಧಿಸಿದ್ದಾರೆ.

40ಕ್ಕೂ ಹೆಚ್ಚು ವಿವಿಧ ಉತ್ಸವಗಳಲ್ಲಿ ಅಭಿನಯಿಸಿ ಹೆಸರು ಮಾಡಿದ ಅಭಿನೇತ್ರಿ ಇವರು. ಇವರ ರಂಗಸಾಧನೆಯನ್ನು ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿ ನೀಡಿಗೌರವಿಸುತ್ತಿದೆ.



## ವೀಣಾ ಮೊಡಕ (ಅಠವಲೆ)



ವೃತ್ತಿಯಲ್ಲಿ ದೈಹಿಕ ಶಿಕ್ಷಣ ಶಿಕ್ಷಕರಾದರೂ, ರಂಗಭೂಮಿಯನ್ನು ಹವ್ಯಾಸವನ್ನಾಗಿ ಆಯ್ಕೆಮಾಡಿಕೊಂಡು ಸಾಧನೆ ಮಾಡಿದವರು ವೀಣಾಮೊಡಕ. ಗದಗದಲ್ಲಿ ಮರಾಠಿನಾಟಕಗಳಲ್ಲಿ ಅಭಿನಯಿಸುತ್ತಿದ್ದ ವೀಣಾಮೊಡಕ, ತಮ್ಮ ವಿವಾಹದ ನಂತರ ಹುಬ್ಬಳ್ಳಿಗೆ ಬಂದರು. ತಮ್ಮ ಸಾಂಸಾರಿಕ ಜೀವನದ ಜೊತೆಜೊತೆಗೇ ತಮ್ಮ ಅಭಿರುಚಿಗೆ ತಕ್ಕಹಾಗೆ ರಂಗಭೂಮಿಯಲ್ಲಿ ಗುರುತಿಸಿಕೊಂಡರು. ಜೀವನೋಪಾಯಕ್ಕಾಗಿ ಶಿಕ್ಷಕ ವೃತ್ತಿಗೆ ಸೇರಿದರಾದರೂ ಮಕ್ಕಳಲ್ಲಿ ರಂಗಭೂಮಿಯ ಬಗ್ಗೆ ಆಸಕ್ತಿ ಬೆಳೆಯುವಂತೆ ಶ್ರಮಿಸಿದರು. ಸದಾ ಸ್ನೇಹಶೀಲರು, ಮಕ್ಕಳ ಮನೋವಿಕಾಸ ಹಾಗು ಬೆಳವಣಿಗೆಯ ಬಗ್ಗೆ ತೀವ್ರವಾದ ಆಸಕ್ತಿ ತೋರುವ ವೀಣಾಮೊಡಕ, ತಮ್ಮ ರಂಗಭೂಮಿಯ ಅನುಭವದ ಹಿನ್ನೆಲೆಯಲ್ಲಿ ಮಕ್ಕಳ ರಂಗತರಬೇತಿ ಶಿಬಿರ, ಅಭಿನಯ ಕಾರ್ಯಾಗಾರಗಳನ್ನು ನಿರಂತರವಾಗಿ ನಡೆಸುತ್ತಿದ್ದಾರೆ.

ಶಿಕ್ಷಣ ಇಲಾಖೆಯ ಹಲವಾರು ಕಾರ್ಯಕ್ರಮಗಳ ಪ್ರಚಾರಕ್ಕೆ, ಮಕ್ಕಳನ್ನು ಶಾಲೆಗೆ ಆಕರ್ಷಿಸಲು ರಂಗಭೂಮಿಯನ್ನು ಸಮರ್ಥವಾಗಿ ದುಡಿಸಿಕೊಂಡರು. ಹುಬ್ಬಳ್ಳಿ-ಧಾರವಾಡ ಅವಳಿ ನಗರಗಳ ರಂಗಚಟುವಟಿಕೆಗಳ ಅವಿಭಾಜ್ಯ ಅಂಗವಾದ ಇವರು ಅಭಿನಯಭಾರತಿ, ಪ್ರಗತಿಕಲಾವೃಂದ, ಕಿರ್ಲೋಸ್ಕರ್ ಕಂಪನಿ, ರಂಗಪರಿಸರ, ರಂಗಭಾರತಿ ಮುಂತಾದ ತಂಡಗಳ ನೂರಾರು ನಾಟಕ ಪ್ರಯೋಗಗಳಲ್ಲಿ ಅಭಿನಯಿಸಿದ್ದಾರೆ. ಮೈಲಾರಮಹದೇವ, ಜಗಜ್ಯೋತಿ ಬಸವೇಶ್ವರ, ಪೇಯಿಂಗ್ ಗೆಸ್ಟ್, ಕದಡಿದ ನೀರು, ಅರ್ಧೇ ಅಧೂರೆ, ಖರೇಖರೇ ಸಂಗ್ಯಾಬಾಳ್ಯ ಮುಂತಾದವು ಇವರು ಅಭಿನಯಿಸಿದ ನಾಟಕಗಳು. ವೀಣಾಮೊಡಕ (ಅಠವಲೆ) ಅವರ ಕಲಾ ಸೇವೆಯನ್ನು ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.

---

## ಟಿ. ನೀಲಾಂಬಿಕೆ



ವೃತ್ತಿಯಲ್ಲಿ ಅಧ್ಯಾಪಕರಾದರೂ ಪ್ರವೃತ್ತಿಯಲ್ಲಿ ರಂಗಭೂಮಿಯ ಕಲಾವಿದೆ, ಸಂಘಟಕಿ ಹಾಗು ನಾಟಕಕಾರರಾಗಿ ನಿರಂತರವಾಗಿ ರಂಗದೊಡನೆ ಒಡನಾಟ ಹೊಂದಿರುವ ನೀಲಾಂಬಿಕೆ ಅವರು ತರಳಬಾಳು ಸಾಂಸ್ಕೃತಿಕ ಸಂಘದ ಖಾಯಂ ಸದಸ್ಯರು.

ಉಪನ್ಯಾಸಕಿಯಾಗಿ ಕಾಲೇಜು ಸೇರಿ ಪ್ರಾಚಾರ್ಯರಾಗಿ ಸೇವೆಸಲ್ಲಿಸುತ್ತ ನಿರಂತರ ಕಲಾಸೇವೆಯಲ್ಲಿ ತೊಡಗಿದ್ದಾರೆ. ಬಾಲ್ಯದಿಂದಲೇ ಕಲೆಯ ಬಗ್ಗೆ ಆಸಕ್ತಿ ಹೊಂದಿದ್ದ ಇವರು ಹಾಡುಗಾರಿಕೆ, ಅಭಿನಯದ ಜೊತೆಜೊತೆಗೇ ವೀಣಾವಾದನವನ್ನು ಕಲಿತರು.

ತರಳಬಾಳು ಕಲಾಕೇಂದ್ರದ ಎಲ್ಲಾ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮುಂಚೂಣಿಯಲ್ಲಿ ಗುರುತಿಸಿಕೊಂಡ ಇವರು ಉತ್ತಮ ಸಂಘಟಕರು.

ಹಿರಿಯ ನಿರ್ದೇಶಕ ಅಶೋಕಬಾದರದಿನ್ನಿ ಅವರು ಸೇರಿದಂತೆ ಅನೇಕ ನಿರ್ದೇಶಕರ ರಂಗತರಬೇತಿ ಶಿಬಿರ, ನಾಟಕಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ನಟನೆ ಹಾಗು ರಂಗಸಂಗೀತದಲ್ಲಿ ನಿರಂತರ ಪರಿಶ್ರಮ ಪಡೆದಿದ್ದಾರೆ.

ಮರಣವೇ ಮಹಾನವಮಿ, ವಿಶ್ವಬಂಧುಮರುಳಸಿದ್ಧ, ಶರಣಸತಿ-ಲಿಂಗಪತಿ, ಮೃಚ್ಛಕಟಿಕ, ತಲೆದಂಡ, ಉದ್ಧವ, ಜಲಗಾರ, ತಾಮ್ರಪತ್ರ, ಸುಲ್ತಾನ್ ಟಿಪ್ಪು, ಮಹಾಬೆಳಕು ಮುಂತಾದ ನಾಟಕಗಳಲ್ಲಿ ಅಭಿನಯಿಸಿದ್ದಾರೆ, ರಂಗಸಂಗೀತದ ಒಂದು ಭಾಗವಾಗಿ ಶ್ರಮಿಸಿದ್ದಾರೆ.

ದೇಶದ ರಂಗೋತ್ಸವಗಳಲ್ಲಿ ಪಾಲ್ಗೊಂಡಿರುವ ನೀಲಾಂಬಿಕೆ ರೇಡಿಯೋ ಕಲಾವಿದರೂ ಕೂಡ. ಅನೇಕ ಲೇಖನಗಳನ್ನು, ಪ್ರಬಂಧಗಳನ್ನು ಬರೆದಿದ್ದಾರೆ. ಇವರ ಕಲಾಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ವೀರಭದ್ರಪ್ಪ ಬಡಿಗೇರ (ರಾಜು ಪೇಂಟರ್)

ರಾಜು ಪೇಂಟರ್ ಎಂದೇ ಖ್ಯಾತರಾದ ವೀರಭದ್ರಪ್ಪ ಮಳಿಯಪ್ಪ ಬಡಿಗೇರ (ಹಿರೇಹಾಳ) ಅಪರೂಪದ ಚಿತ್ರಕಲಾವಿದ. ಪ್ರಖ್ಯಾತ ಕುಂಚಕಲಾವಿದ ಶ್ರೀ ಅಪ್ಪುರಾಜ್ ಪೇಂಟರ್ ಬೈಲಹೊಂಗಲ ಇವರಲ್ಲಿ ಚಿತ್ರಕಲೆಯನ್ನು ಸತತ 6 ವರ್ಷಗಳ ಕಾಲ ಕಲಿತರು. ನಂತರದಲ್ಲಿ ವೃತ್ತಿನಾಟಕ ಕಂಪನಿಗಳಿಗೆ, ಹವ್ಯಾಸಿ ರಂಗ ತಂಡಗಳಿಗೆ ದೃಶ್ಯ ಪರದೆಗಳನ್ನು ಬರೆಯತೊಡಗಿದರು.

ಸೀನರಿಗಳನ್ನು ಬರೆಯುವ ಕಲೆ ವಿಶಿಷ್ಟವಾದುದು. ಅರಮನೆ, ದರ್ಬಾರ್, ಉದ್ಯಾನವನ, ದೇವಲೋಕ, ಪಟ್ಟಣಗಳ ಚಿತ್ರಗಳನ್ನು ಆಕರ್ಷಕವಾಗಿ ಬರೆಯುವ ವೀರಭದ್ರಪ್ಪ ಬಡಿಗೇರ, ಶ್ರೀ ಸಂಗಮೇಶ್ವರ ನಾಟ್ಯ ಸಂಘ, ಗುಡಿಗೇರಿ, ಶ್ರೀಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ, ಸುಳ್ಯ, ಶ್ರೀ ಹೊಳೆ ಹುಚ್ಚೇಶ್ವರ ನಾಟ್ಯ ಸಂಘ ಕಮತಿಗಿ, ಶ್ರೀ ಕರ್ನಾಟಕ ಕಲಾ ವೈಭವಸಂಘ, ಬೆಂಗಳೂರು, ಶ್ರೀ ಕೆ.ಬಿ.ಆರ್. ಡ್ರಾಮಾ ಕಂಪನಿ ದಾವಣಗೆರೆ ಸೇರಿದಂತೆ ಹಲವಾರು ಪ್ರತಿಷ್ಠಿತ ನಾಟಕ ಕಂಪನಿಗಳಿಗೆ ಡ್ರಾಮಾಸೀನರಿಗಳನ್ನು ಬರೆದುಕೊಟ್ಟಿದ್ದಾರೆ.

ಕುಂಚಕಲೆಯಲ್ಲೇ ತಮ್ಮ ಬದುಕನ್ನು ಕಂಡುಕೊಂಡಿರುವ ವೀರಭದ್ರಪ್ಪ ಬಡಿಗೇರ ಅವರು ಚಿತ್ರಿಸಿರುವ ಪರದೆಗಳೇ ಅವರ ಪ್ರತಿಭೆಗೆ ಸಾಕ್ಷಿಯಾಗಿವೆ. ಅನೇಕ ಹವ್ಯಾಸಿ ತಂಡಗಳಿಗೂ ಬ್ಯಾನರ್, ಕಟೌಟ್‌ಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಇವರ ಅನನ್ಯ ಕಲಾವಂತಿಕೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಡಾ. ಬಾಳಣ್ಣ ಶೀಗೀಹಳ್ಳಿ (ರಂಗ ಪುಸ್ತಕ ಬಹುಮಾನ)

ವಸ್ತುವೈವಿಧ್ಯತೆ ಹಾಗು ಗಂಭೀರ ರಂಗಚಿಂತನೆಗಳಿಂದ ಕೂಡಿರುವ ಕೃತಿ 'ಕನ್ನಡ ರಂಗಚಿಂತನೆ'. ಈ ಕೃತಿಯನ್ನು ರಚಿಸಿದವರು ಡಾ. ಬಾಳಣ್ಣ ಶೀಗೀಹಳ್ಳಿ, ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲೂಕಿನ ದೇವಗಾವಿಯವರಾದ ಇವರು ಬಾಲ್ಯದಿಂದಲೇ ತಮ್ಮ ಪ್ರದೇಶದ ಜಾನಪದ, ವೃತ್ತಿ ರಂಗಭೂಮಿಯ ಆಟ್ಟರಿಗಳನ್ನು ನೋಡುತ್ತಾ ಬೆಳೆದರು. ತಮ್ಮ ಹಳ್ಳಿಯಲ್ಲಿ ನಡೆಯುತ್ತಿದ್ದ ನಾಟಕ ಪ್ರಯೋಗಗಳು ಇವರ ಮೇಲೆ ಅಪಾರ ಪರಿಣಾಮ ಬೀರಿದವು.

ದೇವಗಾವಿಯ 'ಕಲೋಪಾಸಕ ನಾಟ್ಯಸಂಘ'ವು ಸಾಮಾಜಿಕ, ಐತಿಹಾಸಿಕ ಹಾಗು ಪೌರಾಣಿಕ ನಾಟಕಗಳನ್ನು ಮಾಡುತ್ತಿತ್ತು, ಇವರ ತಂದೆಯವರು ಆ ಊರಿನ ಎಲ್ಲಾ ಸಾಂಸ್ಕೃತಿಕ ಕಾರ್ಯಕ್ರಮಗಳ ಮುಂಚೂಣಿಯಲ್ಲಿದ್ದು, ಭಾಗವಹಿಸುತ್ತಿದ್ದರು. ತಂದೆಯವರ ಜೊತೆ ಬಾಳಣ್ಣನವರೂ ಕೂಡ ಪಾಲ್ಗೊಳ್ಳುತ್ತಿದ್ದರು. ಈ ಚಟುವಟಿಕೆಗಳು ಬಾಳಣ್ಣ ಅವರ ಮೇಲೆ ಅಪಾರ ಪರಿಣಾಮಬೀರಿದವು.

ಮುಂದೆ ವಿದ್ಯಾಭ್ಯಾಸದ ನಂತರ ಉದ್ಯೋಗಾರ್ಥಿಯಾಗಿ ಹೋದ ಕಿತ್ತೂರಿನಲ್ಲಿ ಗೆಳೆಯರೊಡಗೂಡಿ 'ಗ್ರಾಮೀಣ ರಂಗ ಚೇತನ' ಸಂಸ್ಥೆಯ ಹುಟ್ಟಿಗೆ ಕಾರಣರಾದರು. ರಂಗ ಪ್ರಯೋಗಗಳ ಹಿಂದಿನ ತಾತ್ವಿಕತೆ, ಪರಿಸರದ ಪ್ರಭಾವ, ಸಮಕಾಲೀನ ರಂಗಭೂಮಿಯ ಹೊಸ ಸಾಧ್ಯತೆಗಳ ಬಗ್ಗೆ ಚಿಂತಿಸುತ್ತಾ ತಮ್ಮ ಲೇಖನಗಳನ್ನು ಬರೆಯಲು ಪ್ರಾರಂಭಿಸಿದರು.

'ಕನ್ನಡ ರಂಗಚಿಂತನೆ' ಒಂದು ವಿಶಿಷ್ಟವಾದ ಕೃತಿ. ಜಾನಪದ, ವೃತ್ತಿ, ಹವ್ಯಾಸಿ ರಂಗಭೂಮಿ ಕುರಿತಂತೆ ಡಾ.ಬಾಳಣ್ಣ ಶೀಗೀಹಳ್ಳಿಯವರ ಚಿಂತನೆ ಬಹಳ ಕುತೂಹಲಕಾರಿಯಾಗಿದೆ. ಕನ್ನಡ ರಂಗಭೂಮಿಯ ವಿವಿಧ ಆಯಾಮಗಳನ್ನು ಪರಿಚಯಿಸುವ ಲೇಖನಗಳ ಜೊತೆಗೆ ನಾಟಕಗಳ ಕೃತಿ, ರಂಗತಂಡಗಳ ಸ್ವರೂಪ, ಸಾಧನೆ, ಮಿತಿ, ನಾಟಕಕಾರರೊಂದಿಗೆ ಸಂದರ್ಶನ, ಬೇರೆ ಬೇರೆ ರಂಗಚಿಂತಕರ ಕೃತಿಗಳ ಅವಲೋಕನ ಮುಂತಾದವುಗಳನ್ನು ಒಳಗೊಂಡಿದೆ.

ಪ್ರಸ್ತುತ 'ಕನ್ನಡ ರಂಗಚಿಂತನೆ' ಪುಸ್ತಕವನ್ನು ಕರ್ನಾಟಕ ನಾಟಕ ಅಕಾಡೆಮಿ 2011ನೇ ಸಾಲಿನ 'ಪುಸ್ತಕ ಬಹುಮಾನ'ಕ್ಕೆ ಆಯ್ಕೆಮಾಡಿ ಡಾ.ವೀರಣ್ಣ ಶೀಗೀಹಳ್ಳಿಯವರ ಸಾಧನೆಯನ್ನು ಗೌರವಿಸುತ್ತಿದೆ.



# 2012ರ ಪ್ರಶಸ್ತಿ ವಿಜೇತರು



## ಚಿಂದೋಡಿ ಶ್ರೀಕಂಠೇಶ್ (ಜೀವಮಾನ ರಂಗಸಾಧನೆ ಪ್ರಶಸ್ತಿ)

ವೃತ್ತಿರಂಗಭೂಮಿಯ ಹಿರಿಯ ನಟ, ಸಂಘಟಕ, ಕಂಪನಿಯ ಮಾಲೀಕ ಶ್ರೀ ಚಿಂದೋಡಿ ಶ್ರೀಕಂಠೇಶ್ ಕಳೆದ ಐದು ದಶಕಗಳಿಂದ ನಿರಂತರ ರಂಗಭೂಮಿಯ ಸೇವೆಯಲ್ಲಿ ತೊಡಗಿದ್ದಾರೆ. ಬಾಲ್ಯದಿಂದಲೇ ರಂಗಭೂಮಿಯ ಒಲವು ಮೂಡಿಸಿಕೊಂಡ ಶ್ರೀಕಂಠೇಶ್, ಹಾಸ್ಯ ಪಾತ್ರ ಮೊದಲುಗೊಂಡು, ಕಥಾನಾಯಕ, ಖಳನಾಯಕ, ಪೋಷಕ ಕಲಾವಿದ ಮುಂತಾದ ವೈವಿಧ್ಯಮಯ ಪಾತ್ರ ಪೋಷಣೆಯಲ್ಲಿ ಅಪಾರ ಅನುಭವಗಳಿಸಿದ್ದಾರೆ. ಟಿಪ್ಪುಸುಲ್ತಾನ್, ಬೆಳ್ಳಿಬಂಗಾರ, ಲಂಕಾದಹನ, ಶ್ರೀ ಕೃಷ್ಣದೇವರಾಯ, ಪೋಲೀಸನ ಮಗಳು ಮುಂತಾದ ನೂರಾರು ನಾಟಕಗಳಲ್ಲಿ ಅಭಿನಯಿಸಿದ್ದಾರೆ. ಪ್ರಖ್ಯಾತ ಕೆ.ಬಿ.ಆರ್. ಡ್ರಾಮಾ ಕಂಪನಿಯ ನಟರಾಗಿ, ತಂತ್ರಜ್ಞರಾಗಿ, ನಿರ್ದೇಶಕರಾಗಿ, ಕಂಪನಿಯ ಮಾಲೀಕರಾಗಿ ನಿರಂತರ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಪ್ರತಿಷ್ಠಿತ ಚಿಂದೋಡಿ ಬಳಗದ ಸದಸ್ಯರಾಗಿ ಇವರ ಕಲಾಪ್ರೇಮ ಅಪಾರವಾದುದು.

ವೃತ್ತಿರಂಗಭೂಮಿಗೆ ಇವರು ಸಲ್ಲಿಸಿರುವ ಸೇವೆಯನ್ನು ಗಮನಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ರಂಗಸಾಧನೆ ಗೌರವ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.

---



## ಹೆಲನ್ (ಕಲ್ಬುರ್ಗಿ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿ)

ಬಾಲಕಲಾವಿದೆಯಾಗಿ ತಮ್ಮ ನಾಲ್ಕನೇ ವಯಸ್ಸಿನಲ್ಲೇ ಬಣ್ಣಹಚ್ಚಿದ ಹೆಲನ್ ಮೈಸೂರಿನವರು. ಗುಬ್ಬಿಕಂಪನಿಯ ಪ್ರಮುಖ ಕಲಾವಿದೆಯರಲ್ಲಿ ಒಬ್ಬರಾದ ಥೆರೇಸಮ್ಮ ಮೈಸೂರು ಇವರ ಪುತ್ರಿಯಾಗಿ 1962ರಲ್ಲಿ ಜನನ. ಕಲೆಯೇ ಕಾಯಕವೆಂದು ನಂಬಿದ್ದ ರಂಗದಿಗ್ಗಜ ಗುಬ್ಬಿವೀರಣ್ಣನವರ ಮಾರ್ಗದರ್ಶನದಲ್ಲಿ ರಂಗಭೂಮಿಯ ಅನುಭವ ಪಡೆದ ಹೆಲನ್, ಅಂದಿನ ಮಹಾನ್ ಕಲಾವಿದರ ಮಾರ್ಗದರ್ಶನ, ಒಡನಾಟದಲ್ಲಿ ಬೆಳೆದರು.

ರಂಗನಾಯಕಮ್ಮ, ರಾಧಾ–ರುಕ್ಮಿಣಿ, ಮಾಲತಮ್ಮ, ಸಂಪಿಗೆ ಶಂಕ್ರಣ್ಣ, ಬೇಬಿ (ವಾಸುದೇವರಾವ್) ಮುಸುರಿ ಕೃಷ್ಣಮೂರ್ತಿ, ಎಂ.ಎಸ್. ಉಮೇಶ್ ಮುಂತಾದವರೊಂದಿಗೆ ಅಭಿನಯಿಸಿದ ಹೆಗ್ಗಳಿಕೆ ಇವರದು. ಗುಬ್ಬಿ ಕಂಪನಿ ಸೇರಿದಂತೆ, ತಮ್ಮ ತಾಯಿಯವರು ಸ್ಥಾಪಿಸಿದ ನಟರಾಜ ನಾಟ್ಯಮಂಡಲಿ, ಮಿನುಗುತಾರೆ ಮಿತ್ರಮಂಡಲಿ, ಸುಳ್ಳದ ದೇಸಾಯಿಯವರ ಕಂಪನಿಗಳಲ್ಲಿ ಅಭಿನಯಿಸಿದರು. ರಂಗನಟನೆಯ ಜೊತೆಗೆ, ಧ್ವನಿಸುರಳಿ ನಾಟಕಗಳಲ್ಲಿ, ವಿಡಿಯೋ ನಾಟಕಗಳಲ್ಲಿ, ಚಲನಚಿತ್ರಗಳಲ್ಲಿ ನಟಿಸಿದರು.

ಕಲೆಯನ್ನೇ ಬದುಕನ್ನಾಗಿ ಸ್ವೀಕರಿಸಿ, 11ಕ್ಕೂ ಹೆಚ್ಚು ನಾಟಕ ಕಂಪನಿಗಳಲ್ಲಿ ಅಭಿನಯಿಸಿದ್ದಾರೆ. ಪ್ರಸಿದ್ಧ ಆಡಿಯೋ ಕಂಪನಿಗಳ ಧ್ವನಿಸುರಳಿಗಳಿಗೆ ಧ್ವನಿದಾನ ಮಾಡಿದ್ದಾರೆ. 43ಕ್ಕೂ ಹೆಚ್ಚು ನಾಟಕಗಳ ಸಾವಿರಾರು ಪ್ರದರ್ಶನಗಳಲ್ಲಿ ಹಾಸ್ಯ ಪಾತ್ರಗಳಲ್ಲಿ ಮಿಂಚಿದ್ದಾರೆ. ರಂಗಭೂಮಿಯಲ್ಲಿ ಇವರು ಸಲ್ಲಿಸಿದ ಅಪಾರ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ಕಲ್ಬುರ್ಗಿ ಕಮೇಡಿಯನ್ ಕೆ. ಹಿರಣ್ಣಯ್ಯ ದತ್ತಿಪುರಸ್ಕಾರವನ್ನು ನೀಡಿ ಗೌರವಿಸುತ್ತಿದೆ.

---



## ಹೆಚ್.ಎನ್. ನಾಗರಾಜ್

ಅರವತ್ತರ ದಶಕದ ಬೆಂಗಳೂರು ಹವ್ಯಾಸಿ ರಂಗಭೂಮಿಯ ಚಟುವಟಿಕೆಯ ಪಾಲುದಾರರು ಶ್ರೀ ಹೆಚ್.ಎನ್. ನಾಗರಾಜ್. ಮೈಸೂರಿನಲ್ಲಿ ತಮ್ಮದೇ ಆದ ಕೈಗಾರಿಕಾ ಉತ್ಪಾದನಾ ಘಟಕ ಸ್ಥಾಪಿಸಿರುವ ಇವರು ಪ್ರತಿಷ್ಠಿತ ದಿ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಷನ್ ಟ್ರಸ್ಟ್‌ನ ಛೇರ್ಮನ್ ಹಾಗು ಮ್ಯಾನೇಜಿಂಗ್ ಟ್ರಸ್ಟಿಯಾಗಿದ್ದಾರೆ. ನಾಗರಾಜ್ ಅವರು 60ರ ದಶಕದ ಬೆಂಗಳೂರು ರಂಗಭೂಮಿಯ ಕ್ರಿಯಾಶೀಲರಲ್ಲಿ ಒಬ್ಬರು. ಬಿ.ವಿ. ಕಾರಂತ, ಶ್ರೀರಂಗ ಅವರ ಪ್ರಯೋಗಗಳಿಂದ ರಂಗಭೂಮಿಗೆ ಬಂದು, ಆಧುನಿಕ ರಂಗಭೂಮಿಯ ನಿರ್ದೇಶನ ಕೌಶಲ್ಯ, ತಾಂತ್ರಿಕ ಪರಿಣತಿ, ಸಂಘಟನಾ ಚತುರತೆಯನ್ನು ಕಲಿತು, 'ನಾಟ್ಯಸಂಘ'ದ ಚುಕ್ಕಾಣಿ ಹಿಡಿದು ಹಲವಾರು ವರ್ಷಗಳ ನಾಟ್ಯ ಸಂಘವನ್ನು ಮುನ್ನಡೆಸಿದರು. ಪ್ರತಿಷ್ಠಿತ ಉಲ್ಲಾಳ ಪಾರಿತೋಷಕ ನಾಟಕ ಸ್ಪರ್ಧೆಯ ಸಂಘಟಕರಾಗಿಯೂ ದುಡಿದರು.

ನೇಪಥ್ಯದ ಕಾರ್ಯದಲ್ಲೂ ತೊಡಗಿಕೊಂಡು ಕಲಾಕುಂಜ, ಸಾಧನ ಕಲಾವಿದರು ತಂಡಗಳಲ್ಲಿ ನಟನೆ, ಬೆಳಕು, ನೇಪಥ್ಯ ಮುಂತಾದ ವಿಭಾಗಗಳಲ್ಲಿ ಕೆಲಸಮಾಡಿದರು. ಆಧುನಿಕ ಕನ್ನಡ ರಂಗಭೂಮಿಯನ್ನು ಪ್ರಾರಂಭಿಕ ಹಂತವನ್ನು ದಾಟಿ ಮುನ್ನಡೆಸುವಲ್ಲಿ ಇವರ ಶ್ರಮ ಅಪಾರ. ಅಂತರರಾಷ್ಟ್ರೀಯ ರಂಗಕಲಾವಿದರ ಸಮ್ಮೇಳನದಲ್ಲಿ ಪಾಲ್ಗೊಂಡ ಹೆಗ್ಗಳಿಕೆ ಇವರದು. ಆಧುನಿಕ ಕನ್ನಡ ರಂಗಭೂಮಿಗೆ ಇವರು ಸಲ್ಲಿಸಿದ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಡಾ. ಹೆಚ್. ಆರ್. ಸ್ವಾಮಿ

ಜನಪರ ರಂಗಭೂಮಿ ಚಳವಳಿಯ ಕ್ರಿಯಾಶೀಲ ಸಂಘಟಕರಾಗಿ ಕಲಾವಿದರಾಗಿ, ರಂಗಚಿಂತಕರಾಗಿ ಹೆಚ್.ಆರ್. ಸ್ವಾಮಿ ನಿರಂತರವಾಗಿ ತೊಡಗಿಸಿಕೊಂಡಿದ್ದಾರೆ. ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲೂಕಿನ ಚಿಕ್ಕ ಜಾಜೂರಿನ ಹೆಚ್.ಆರ್. ಸ್ವಾಮಿ, ಕನ್ನಡ ಸ್ನಾತಕೋತ್ತರ ಪದವೀಧರರು. ಮೈಸೂರು ವಿಶ್ವವಿದ್ಯಾಲಯದಿಂದ ಪಿಹೆಚ್‌ಡಿ ಪದವಿ ಪಡೆದವರು. ಸರ್ಕಾರಿ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಹೆಚ್.ಆರ್.ಸ್ವಾಮಿ ಶಾಲಾದಿನಗಳಿಂದಲೇ ರಂಗಭೂಮಿಯಲ್ಲಿ ಆಸಕ್ತಿ ಬೆಳೆಸಿಕೊಂಡು ಬಂದರು. ಪ್ರೊ॥ ಬಿ.ಸಿ. ಅವರ ನಿರ್ದೇಶನದ 'ಯಮಳ ಪ್ರಶ್ನೆ' ಇವರ ಮುಖ್ಯವಾದ ನಾಟಕ. ಗೋಪಾಲ ಕೃಷ್ಣನಾಯರಿ ಅವರ ರಂಗತರಬೇತಿ ಶಿಬಿರದ ಶಿಬಿರಾರ್ಥಿಯಾಗಿ ಆಧುನಿಕ ರಂಗಭೂಮಿಯ ಪರಿಚಯ ಪಡೆದು, ತಮ್ಮ ಬಿಡುವಿನ ವೇಳೆಯಲ್ಲಿ ಗ್ರಾಮೀಣ ಪರಿಸರದಲ್ಲಿ ರಂಗಚಟುವಟಿಕೆಯನ್ನು ನಡೆಸುತ್ತಾ, ಹಲವಾರು ರಂಗೋತ್ಸವಗಳು, ವಿಚಾರ ಸಂಕಿರಣ, ರಂಗಕಾರ್ಯಾಗಾರಗಳನ್ನು ಸಂಘಟಿಸಿದ್ದಾರೆ.

ಭಾರತ ಜ್ಞಾನ ವಿಜ್ಞಾನ ಸಮಿತಿಯ ವಿಜ್ಞಾನ ಜಾಥಾಗಳಲ್ಲಿ ಕಲಾವಿದರಾಗಿ, ನಿರ್ದೇಶಕರಾಗಿ, ಸಂಘಟಕರಾಗಿ ಅನುಭವಪಡೆದಿದ್ದಾರೆ. ಸಾಕ್ಷರತಾ ಆಂದೋಲನ, ಪರಿಸರ ಜಾಗೃತಿ, ಭಾವೈಕ್ಯತೆ ಹಾಗು ವಿಜ್ಞಾನದ ಪ್ರಚಾರದಲ್ಲಿ ರಂಗಮಾಧ್ಯಮವನ್ನು ಸಮರ್ಥವಾಗಿ ಬಳಸಿ ಯಶಸ್ವಿಯಾಗಿರುವ ಸ್ವಾಮಿ ಅವರು ಒಂದು ಅವಧಿಗೆ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ಡಾ॥ ಹೆಚ್.ಆರ್. ಸ್ವಾಮಿಯವರ ಸಂಘಟನಾ ಚಾತುರ್ಯ ಹಾಗೂ ರಂಗ ಚಿಂತನೆಯನ್ನು ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

## ಪದ್ಮಾ ವೇಣುಗೋಪಾಲ್



ಬಾಲ ಕಲಾವಿದೆಯಾಗಿ ಗುಬ್ಬಿ ಕಂಪನಿಯಲ್ಲಿ ಅರಳಿದ ಪದ್ಮಾ, 10 ವರ್ಷಕ್ಕೂ ಹೆಚ್ಚು ಕಾಲ ಗುಬ್ಬಿ ಕಂಪನಿಯಲ್ಲಿ ಅಭಿನಯಿಸಿದವರು. ಸ್ಫುಟವಾದ ಮಾತು, ಇಂಪಾದ ಹಾಡುಗಾರಿಕೆ ಇವರ ಕಲಾವಂತಿಕೆಯ ಸಾರ್ಥಕತೆಗೆ ಪೂರಕವಾದ ಅಂಶಗಳು.

1963ರಲ್ಲಿ ಜನಿಸಿದ ಇವರು ಬೆಂಗಳೂರಿನವರು, ಗಣೇಶೋತ್ಸವ, ರಾಜ್ಯೋತ್ಸವ ಕಾರ್ಯಕ್ರಮಗಳಲ್ಲಿ ನೃತ್ಯ ಮಾಡುತ್ತಿದ್ದ ಇವರು ರಂಗಭೂಮಿಯಿಂದ ಆಕರ್ಷಿತರಾಗಿ ಗುಬ್ಬಿ ಕಂಪನಿ ಸೇರಿದರು. ಆರ್. ನಾಗರತ್ನಮ್ಮನವರ ಸ್ತ್ರೀ ನಾಟಕ ಮಂಡಲಿ, ಅರುಣಕುಮಾರ್ ಮಿತ್ರಮಂಡಲಿ, ಮುಸುರಿ ಕೃಷ್ಣಮೂರ್ತಿ ನಾಟಕ ಮಂಡಲಿ, ಹಿರಣ್ಣಯ್ಯ ಮಿತ್ರಮಂಡಲಿ ಮುಂತಾದ ಕಂಪನಿಗಳಲ್ಲಿ ಅಭಿನಯಿಸಿದ ಪದ್ಮಾ ಪೌರಾಣಿಕ ಪಾತ್ರಗಳಲ್ಲಿ ಅಪಾರ ಯಶಸ್ಸು ಕಂಡರು.

ಗ್ರಾಮೀಣ ರಂಗಭೂಮಿಯಲ್ಲಿ ನಿರಂತರವಾಗಿ 35 ವರ್ಷಗಳಿಂದ ಅಭಿನಯಿಸುತ್ತಿರುವ ಪದ್ಮಾವೇಣುಗೋಪಾಲ್ ಕುಂತಿ, ಗಾಂಧಾರಿ, ಚಂದ್ರಮತಿ ಪಾತ್ರಗಳಲ್ಲಿ ಅಪಾರ ಹೆಸರು ಗಳಿಸಿದ್ದಾರೆ. ಅನೇಕ ಚಲನಚಿತ್ರಗಳಲ್ಲಿ, ಕಿರುತೆರೆ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಪೌರಾಣಿಕ ನಾಟಕಗಳ ಧ್ವನಿಸುರಳಿಗಳಲ್ಲಿ ತಮ್ಮ ಧ್ವನಿಯ ಪ್ರತಿಭೆತೋರಿದ್ದಾರೆ.

ಗ್ರಾಮೀಣ ರಂಗಭೂಮಿಯ ಹಾಗು ಪೌರಾಣಿಕ ಪಾತ್ರಗಳಲ್ಲಿ ಇವರ ಕಲಾ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.

## ಜಯಲಕ್ಷ್ಮಿ ತರಿಕೆರೆ



ಮೂಲತಃ ಚಿಕ್ಕಮಗಳೂರು ಜಿಲ್ಲೆಯವರಾದ ಜಯಲಕ್ಷ್ಮಿ ರಂಗಭೂಮಿಯನ್ನೇ ವೃತ್ತಿಯನ್ನಾಗಿ ಸ್ವೀಕರಿಸಿ, ಕಳೆದ 5 ದಶಕಗಳಿಂದ ರಂಗಭೂಮಿ ಸೇವೆ ಮಾಡುತ್ತಿದ್ದಾರೆ.

ಖ್ಯಾತ ರಂಗ ಕಲಾವಿದರು, ನಾಟಕಕಾರರಾದ ಹೆಚ್.ಕೆ. ಯೋಗಾನರಸಿಂಹಮೂರ್ತಿ ಅವರ ನಾಟಕದ ಮೂಲಕ ರಂಗ ಪ್ರವೇಶ ಮಾಡಿದ ಜಯಲಕ್ಷ್ಮಿ ಕಳ್ಳಭಟ್ಟ, ಕನ್ಯಾಬಲಿ, ಬೀದಿಕಾಮಣ್ಣ, ಸಾಹುಕಾರ ಮುಂತಾದ ನಾಟಕಗಳಲ್ಲಿ ಅಭಿನಯಿಸಿ ತಮ್ಮ ರಂಗಭೂಮಿ ಅನುಭವವನ್ನು ಹೆಚ್ಚಿಸಿಕೊಂಡರು.

ಶ್ರೀ ಓಬಳೇಶ್ವರ ಕಂಪನಿ, ಗುಬ್ಬಿಕಂಪನಿ, ಮಾಸ್ಟರ್ ಹಿರಣ್ಣಯ್ಯ ಕಂಪನಿಗಳಲ್ಲಿ 25 ವರ್ಷಗಳಿಗೂ ಹೆಚ್ಚುಕಾಲ ಅಭಿನಯಿಸಿದ ಜಯಲಕ್ಷ್ಮಿ ಅವರು, ನಾಟಕ ನಿರ್ದೇಶನ ಹಾಗು ಸಂಘಟನೆಯಲ್ಲು ಅಪಾರ ಪರಿಶ್ರಮ ಪಡೆದಿದ್ದಾರೆ. ಸಾಮಾಜಿಕ, ಪೌರಾಣಿಕ ಹಾಗು ಐತಿಹಾಸಿಕ ಪಾತ್ರಗಳನ್ನು ಲೀಲಾಜಾಲವಾಗಿ ಅಭಿನಯಿಸುವ ಜಯಲಕ್ಷ್ಮಿ ತಮ್ಮನ್ನು ಕನ್ನಡ ಹೋರಾಟಗಳಲ್ಲೂ ಗುರುತಿಸಿಕೊಂಡಿದ್ದಾರೆ.

ಸಮಾಜಸೇವೆ ಇವರ ಮತ್ತೊಂದು ಆದ್ಯತೆಯ ವಲಯ. ಅಶಕ್ತ ಕಲಾವಿದರನ್ನು ಗುರುತಿಸಿ ಅವರಿಗೆ ಆರ್ಥಿಕ ಸಹಾಯ ನೀಡುವುದು, ಅರ್ಹರಿಗೆ ಪ್ರಶಸ್ತಿ ಪುರಸ್ಕಾರಗಳನ್ನು ಕೊಡಿಸುವುದು, ವೈದ್ಯಕೀಯ ಸೌಲಭ್ಯ ಒದಗಿಸುವುದು ಮುಂತಾದ ಕಾರ್ಯಗಳಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ರಂಗಭೂಮಿಯಲ್ಲಿನ ಇವರ ಸೇವೆ ಹಾಗು ಸಂಘಟನಾ ಚಾತುರ್ಯವನ್ನು ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

## ಅಪ್ಪುರಾಜ್ ರಾಂಗೋಪಾಲ್



ವೃತ್ತಿರಂಗಭೂಮಿ ಹಾಗು ಚಲನಚಿತ್ರ ನಟರಾದ ದಿ. ರಾಂಗೋಪಾಲ್ ಹಾಗು ವೃತ್ತಿ ರಂಗಭೂಮಿ ಕಲಾವಿದೆ ಹೇಮಾಮತಿ ಅವರ ಮಗನಾದ ಅಪ್ಪುರಾಜ್ ಅವರು ಸಹಜವಾಗಿಯೇ ರಂಗಭೂಮಿಯನ್ನು ತಮ್ಮ ವೃತ್ತಿಯನ್ನಾಗಿ ಆಯ್ಕೆ ಮಾಡಿಕೊಂಡರು. ಬಣ್ಣ ಹಚ್ಚಿ, ರಂಗಪ್ರವೇಶ ಮಾಡಿದ ಅಪ್ಪುರಾಜ್ ಅವರಿಗೆ ಶಿಕ್ಷಕ ವೃತ್ತಿಯ ಬಗ್ಗೆ ಅಪಾರ ಒಲವಿತ್ತು. ಆದರೆ ಪರಿಸ್ಥಿತಿಯ ಒತ್ತಡದಿಂದ ರಂಗಕಾಯಕಕ್ಕೆ ಇಳಿದ ಅಪ್ಪುರಾಜ್ ಪದವೀಧರರು.

ಶ್ರೀ ಶಾರದಾ ಸಂಗೀತ ನಾಟಕ ಮಂಡಲಿ ಗೋಕಾಕ, ಶ್ರೀ ಕೆ.ಬಿ.ಆರ್. ಡ್ರಾಮಾ ಕಂಪನಿ, ನಂದೀಶ್ವರ ನಾಟಕ ಸಂಘ, ಮಂಗಳೂರು, ಶ್ರೀಮತಿ ಮಾಲತಿ ಸುಧೀರ್ ಅವರ ಕರ್ನಾಟಕ ಕಲಾ ವೈಭವ, ಬೆಂಗಳೂರು ಮುಂತಾದ ವೃತ್ತಿ ನಾಟಕ ಕಂಪನಿಗಳಲ್ಲಿ ಕಲಾವಿದರಾಗಿ ಪಾಲ್ಗೊಂಡಿದ್ದಾರೆ.

ದಕ್ಷಿಣಕನ್ನಡ ಜಿಲ್ಲೆಯ ಏಕೈಕ ವೃತ್ತಿನಾಟಕ ಕಂಪನಿ ನಂದಿಕೇಶ್ವರ ನಾಟಕ ಸಂಘದಲ್ಲಿ ಇವರು ತಮ್ಮ ನಾಟಕ ಕಾಯಕವನ್ನು ಪ್ರಾರಂಭಿಸಿದರು. ಹವ್ಯಾಸಿ ನಾಟಕಗಳಲ್ಲಿ ಅಭಿನಯ, ಧಾರಾವಾಹಿಗಳು, ಧ್ವನಿ ಸುರಳಿಗಳಿಗೆ ಕಂಠದಾನ ಮುಂತಾದ ಚಟುವಟಿಕೆಗಳಿಂದ ತಮ್ಮ ರಂಗಾನುಭವವನ್ನು ಹೆಚ್ಚಿಸಿಕೊಂಡರು. ಇವರ ರಂಗಕಾಯಕವನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---

## ಎಸ್.ಆರ್. ವಿಜಯಲಕ್ಷ್ಮಿ



ಬಹುಮುಖ ಪ್ರತಿಭೆಯ ಎಸ್.ಆರ್. ವಿಜಯಲಕ್ಷ್ಮಿ ಶಿವಮೊಗ್ಗ ನಿವಾಸಿ. ಪ್ರಾಥಮಿಕ ಶಾಲಾ ಶಿಕ್ಷಕಿಯಾಗಿ ವೃತ್ತಿ ಜೀವನ ಆರಂಭಿಸಿದ ಇವರು ನಿರಂತರ ಓದು ಪರಿಶ್ರಮಗಳಿಂದಾಗಿ ಕಾಲೇಜು ಅಧ್ಯಾಪಕರಾದರು. ಬಾಲ್ಯದಿಂದಲೇ ಇವರಲ್ಲಿ ಮನೆ ಮಾಡಿದ್ದ ಅಭಿನಯ ಪ್ರತಿಭೆ ಇವರ ವೃತ್ತಿ ಜೀವನದ ಜೊತೆ ಜೊತೆಗೇ ಬೆಳೆಯತೊಡಗಿತು. ಹಾಗಾಗಿ ಶಿವಮೊಗ್ಗದ ಹವ್ಯಾಸಿ ರಂಗಭೂಮಿಯಲ್ಲಿ ಇವರು ನಿರಂತರವಾಗಿ ತೊಡಗಿಸಿಕೊಂಡರು.

ಶಾಲಾಮಕ್ಕಳಿಗಾಗಿ, ಆಕಾಶವಾಣಿಗಳಿಗಾಗಿ ಕಿರು ನಾಟಕ, ರೂಪಕಗಳನ್ನು ರಚಿಸಿ ನಿರ್ದೇಶಿಸುತ್ತಾ, ಶಿವಮೊಗ್ಗ ಜಿಲ್ಲೆಯ ರಂಗವಲಯದಲ್ಲಿ ನಟಿಯಾಗಿ, ಸಂಘಟಕರಾಗಿ, ನೇಪಥ್ಯ ಕರ್ಮಿಯಾಗಿ ಅಪಾರ ಅನುಭವ ಪಡೆದರು.

ಪ್ರಸಾಧನ, ವಸ್ತ್ರವಿನ್ಯಾಸಗಳಲ್ಲೂ ಪರಿಶ್ರಮ ಹೊಂದಿರುವ ಇವರು 30ಕ್ಕೂ ಹೆಚ್ಚು ನಾಟಕಗಳ ನೂರಾರು ಪ್ರದರ್ಶನಗಳಲ್ಲಿ ಅಭಿನಯಿಸಿದ್ದಾರೆ. ಅನೇಕ ಜನಜಾಗೃತಿ ನಾಟಕಗಳನ್ನು ರಚಿಸಿ ನಿರ್ದೇಶಿಸಿದ್ದಾರೆ. ಮಕ್ಕಳಲ್ಲಿ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪ್ರಜ್ಞೆ ಮೂಡಿಸುವಲ್ಲಿ ಇವರ ನಾಟಕಗಳು ಪರಿಣಾಮಕಾರಿಯಾಗಿವೆ.

ಶಿವಮೊಗ್ಗದ ಅನೇಕ ರಂಗತಂಡಗಳು ಸೇರಿದಂತೆ ಹಲವಾರು ಸಮಾಜಸೇವಾ ಸಂಸ್ಥೆಗಳ ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ವಿಜಯಲಕ್ಷ್ಮಿ ಅನೇಕ ಸಿನಿಮಾಗಳಲ್ಲಿ ಅಭಿನಯಿಸಿದ್ದಾರೆ. 15ಕ್ಕೂ ಹೆಚ್ಚು ಧಾರಾವಾಹಿಗಳಲ್ಲಿ ಅಭಿನಯಿಸಿದ್ದಾರೆ. ಎಸ್.ಆರ್. ವಿಜಯಲಕ್ಷ್ಮಿಯವರ ರಂಗಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ನಾಗರಾಜ್ ಸಾಗರ್

ಕೊಪ್ಪಳ ಜಿಲ್ಲೆಯ ಮಂಡಲಗಿರಿಯವರಾದ ನಾಗರಾಜ ಜಿ. ಸಾಗರ, ಉದಯಕಲಾವಿದರು, ಸಾಗರ ಇದರ ಮೂಲಕ ರಂಗಭೂಮಿ ಪ್ರವೇಶ ಮಾಡಿದರು. ಸಂತಾನಲಕ್ಷ್ಮಿ, ಸ್ವರ್ಗಕ್ಕೆ ಮೂರೇ ಬಾಗಿಲು, ಇವರ ಮೊದಲ ನಾಟಕಗಳು, ಅಭಿನಯದ ಹುಚ್ಚಿನಿಂದ ರಂಗಭೂಮಿ ಬಂದರಾದರೂ ಇವರು ಸ್ವೀಕರಿಸಿದ್ದು ನೇಪಥ್ಯ ಹಾಗು ಸಂಘಟನೆಯ ಕೆಲಸ. ಹವ್ಯಾಸಿ ರಂಗದ ಮೂಲಕ ರಂಗಭೂಮಿಗೆ ಬಂದರಾದರೂ, ಇವರು ವೃತ್ತಿರಂಗಭೂಮಿಯಲ್ಲೇ ತಮ್ಮ ಕ್ರಿಯಾಶೀಲತೆಯನ್ನು ಕಂಡುಕೊಂಡರು.

40 ವರ್ಷಗಳಿಗೂ ಹೆಚ್ಚುಕಾಲ ಅನೇಕ ಪ್ರತಿಷ್ಠಿತ ನಾಟಕ ಕಂಪನಿಗಳಲ್ಲಿ ನೇಪಥ್ಯ ಕಾರ್ಯದಲ್ಲಿ ಕಲಾವಿದರಾಗಿ, ಸಂಘಟಕರಾಗಿ ದುಡಿದರು. ವೃತ್ತಿಕಂಪನಿಗಳ ವ್ಯವಸ್ಥಾಪಕರಾಗಿ, ವಿನ್ಯಾಸಕಾರರಾಗಿ ಇವರ ಸೇವೆ ಗಮನಾರ್ಹ. ಕಲಾಪ್ರಕಾಶ ನಾಟ್ಯ ಸಂಘ ಬ್ಯಾಡಗಿ, ಶ್ರೀ ಸಂಗಮೇಶ್ವರ ನಾಟ್ಯಸಂಘ, ದೊಡ್ಡವಾಡ, ಶಾರದಾ ಸಂಗೀತ ನಾಟಕ ಮಂಡಲಿ, ಗೋಕಾಕ, ಶ್ರೀ ಕೆ.ಬಿ.ಆರ್. ಡ್ರಾಮಾ ಕಂಪನಿ ದಾವಣಗೆರೆ ಸೇರಿದಂತೆ 11ಕ್ಕೂ ಹೆಚ್ಚು ವೃತ್ತಿ ಕಂಪನಿಗಳಲ್ಲಿ ತಮ್ಮ ಸೇವೆಸಲ್ಲಿಸಿದ್ದಾರೆ.

ತಮ್ಮ ನೇಪಥ್ಯ ಕಾರ್ಯದ ಜೊತೆ ಜೊತೆಗೇ 15ಕ್ಕೂ ಹೆಚ್ಚು ನಾಟಕಗಳ ನೂರಾರು ಪ್ರದರ್ಶನಗಳಲ್ಲಿ ಅಭಿನಯಿಸಿದ್ದಾರೆ. ಇವರು ಕರ್ನಾಟಕ ನಾಟಕ ಅಕಾಡೆಮಿ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ರಂಗಭೂಮಿಗೆ ಇವರು ಸಲ್ಲಿಸಿದ ಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಸಾವಿತ್ರಿ ಚಿಂದೋಡಿ

ಹುಬ್ಬಳ್ಳಿಯವರಾದ ಸಿ.ಬಿ. ಸಾವಿತ್ರಮ್ಮ ನಾಟಕವನ್ನೇ ತಮ್ಮ ವೃತ್ತಿ ಜೀವನವನ್ನಾಗಿ ಸ್ವೀಕರಿಸುವ ಸಾಹಸಿ ಮಹಿಳೆ. ನಾಡಿನ ಹಳೆತಲೆಮಾರಿನ ರಂಗಕಲಾವಿದರಲ್ಲಿ ಸಿ.ಬಿ. ಸಾವಿತ್ರಮ್ಮ ಕೂಡ ಒಬ್ಬರು. ನಾಟಕದ ಎಲ್ಲ ರೀತಿಯ ಪಾತ್ರಗಳನ್ನು ನಿರ್ವಹಿಸಿರುವ ಇವರು, ಪಾತ್ರಾಭಿನಯದಲ್ಲಿ ತನ್ಮಯತೆಗೆ ಹೆಸರಾದವರು.

ಶ್ರೀ ಸಂಗಮೇಶ್ವರ ನಾಟ್ಯ ಸಂಘ ಗುಡಗೇರಿ, ಶ್ರೀ ಕೆ.ಬಿ.ಆರ್. ಡ್ರಾಮಾ ಕಂಪನಿ, ಶ್ರೀ ಹುಚ್ಚೇಶ್ವರ ನಾಟ್ಯ ಸಂಘ, ಕಮತಗಿ, ಶ್ರೀ ಶೈಲ ನಾಟ್ಯ ಸಂಘ ಸುಳ್ಯ, ಗುಬ್ಬಿ ಕಂಪನಿ ಸೇರಿದಂತೆ ಹಲವಾರು ಕಂಪನಿಗಳಲ್ಲಿ ಅಭಿನಯಿಸಿದ್ದಾರೆ.

ನಿರಂತರ ರಂಗಭೂಮಿಯ ಸೇವೆಯಲ್ಲಿ ತೊಡಗಿಕೊಂಡು ವೃದ್ಧಾಪ್ಯ ಸಮೀಪಿಸುತ್ತಿರುವ ಈ ಸಂದರ್ಭದಲ್ಲಿ ಬೆಂಗಳೂರಿಗೆ ಬಂದು ನೆಲೆಸಿದ್ದಾರೆ. 30ಕ್ಕೂ ಹೆಚ್ಚು ನಾಟಕಗಳ ನೂರಾರು ಪ್ರದರ್ಶನಗಳಲ್ಲಿ ಅಭಿನಯಿಸಿರುವ ಸಾವಿತ್ರಮ್ಮ ಅವರ ಕಲಾಸೇವೆಯನ್ನು ಗುರುತಿಸಿ, ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಬಸವರಾಜ್ ಕಟ್ಟಿಮನಿ

ಬಾಲ್ಯದ ಅಪರಿಮಿತ ರಂಗಭೂಮಿಯ ಒಲವು ಬಸವರಾಜ ಕಟ್ಟಿಮನಿ ಅವರ ವೃತ್ತಿಬದುಕನ್ನು ರೂಪಿಸಿತು ಎನ್ನಬಹುದು. ಇಂದು ನಟರಾಗಿ, ರಂಗಸಂಘಟಕರಾಗಿ, ಹಾರ್ಮೋನಿಯಂ ವಾದಕರಾಗಿ, ತಬಲ ವಾದಕರಾಗಿ ಹಾಗು ಗಾಯಕರಾಗಿ ಹೆಸರು ಮಾಡಿರುವ ಬಸವರಾಜ ಕಟ್ಟಿಮನಿ ಅಪರೂಪದ ಪ್ರತಿಭೆ.

ಶ್ರೀ ಶಿರಡಿ ಸಾಯಿಬಾಬ ನಾಟ್ಯ ಸಂಘ, ಕೊಡೇಕಲ್–ಹುಟ್ಟುಹಾಕುವ ಮುನ್ನ ಬಸವರಾಜ್ ಶ್ರೀ ಬ್ರಹ್ಮಾನಂದ ನಾಟ್ಯಸಂಘ, ಕೊಡ್ಲಿ, ಶ್ರೀ ರಾಘವೇಂದ್ರ ನಾಟ್ಯಸಂಘ ವರವಿ, ಶ್ರೀ ಗುರುಪಾದಲಿಂಗೇಶ್ವರ ನಾಟ್ಯಸಂಘ, ಮುತ್ತಂಗಿ ಮುಂತಾದ ವೃತ್ತಿ ಕಂಪನಿಗಳಲ್ಲಿ ಅಭಿನಯಿಸಿದರು.

ಈ ಕಂಪನಿಗಳ ಹಿರಿಯ ಕಲಾವಿದರ ಮಾರ್ಗದರ್ಶನದಲ್ಲಿ ಕಲೆಯ ಪಾಠ ಕಲಿತ ಇವರು ತಮ್ಮ ಸ್ವಂತ ಕಂಪನಿ ಕಟ್ಟಲು ಕೈಹಾಕಿದರು. ಸುಮಾರು 15ಕ್ಕೂ ಹೆಚ್ಚು ನಾಟಕಗಳ ಸಾವಿರಾರು ಪ್ರಯೋಗಗಳಲ್ಲಿ ಅಭಿನಯಿಸಿರುವ ಬಸವರಾಜ್ ಅವರ ಮುಖ್ಯಪಾತ್ರಗಳು, ಹೇಮರೆಡ್ಡಿ ಮಲ್ಲಮ್ಮ ನಾಟಕದ ಮಲ್ಲಿಕಾರ್ಜುನ, ಚಿನ್ನದಗೊಂಬೆಯ ಸಿದ್ಧರಾಮ, ಮುದುಕನ ಮದುವೆಯ ಶ್ಯಾಮ, ಬಸ್‌ಕಂಡಕ್ಟರ್ ನಾಟಕದ ಪ್ರದೀಪ ಮುಂತಾದವು.

ರಂಗಭೂಮಿಯ ಬಗ್ಗೆ, ಕಲಾವಿದರ ಬಗ್ಗೆ ಅಪಾರ ಪ್ರೀತಿ ಗೌರವಗಳನ್ನು ಹೊಂದಿರುವ ಇವರ ಅಭಿನಯ ಪ್ರತಿಭೆಯನ್ನು ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಬೇಬಿಜಾನ್ (ಕಲ್ಲೂರು) ತಾಳಿಕೋಟಿ

ವೃತ್ತಿ ಕಲಾವಿದರ ಕುಟುಂಬದ ಕುಡಿಯಾಗಿ ಜನಿಸಿದ ಬೇಬಿಜಾನ್ ತಾಳಿಕೋಟಿ ಅವರು ತಮ್ಮ 7ನೇ ವಯಸ್ಸಿನಲ್ಲೇ ರಂಗಭೂಮಿ ಪ್ರವೇಶ ಮಾಡಿದರು. ರಂಗಕಲಾವಿದೆ ಮಹಬೂಬಿ ತಾಳಿಕೋಟಿ ಅವರೇ ಬೇಬಿಜಾನ್ ತಾಳಿಕೋಟಿ ಅವರ ತಾಯಿ ಹಾಗೂ ಮೊದಲಗುರು ತಂದೆ ಜಟ್ಟೆಪ್ಪ. ಸತ್ಯಹರಿಶ್ಚಂದ್ರ ನಾಟಕದಲ್ಲಿ ಲೋಹಿತಾಶ್ವ ಮತ್ತು ರೇಣುಕಾ ಎಲ್ಲಮ್ಮ ನಾಟಕದಲ್ಲಿ ಬಾಲ ಪರಶುರಾಮನಾಗಿ, ಬೇಬಿಜಾನ್ ತಮ್ಮ ವೃತ್ತಿಯನ್ನು ಆರಂಭಿಸಿದರು.

ಕಳೆದ ನಾಲ್ಕುದಶಕಗಳಿಂದ ನಿರಂತರವಾಗಿ ರಂಗಕಲಾವಿದೆಯಾಗಿ ಪರಿಶ್ರಮ ಪಡೆದಿರುವ ಇವರು ಬ್ರಹ್ಮಾನಂದ ನಾಟ್ಯಸಂಘ, ತೇರದಾಳ, ಹುಚ್ಚೇಶ್ವರ ನಾಟ್ಯ ಸಂಘ ಹೆಬ್ಬಾಳ, ಹುಚ್ಚೇಶ್ವರ ನಾಟ್ಯ ಸಂಘ ಕಮತಗಿ, ಸಂಗಮೇಶ್ವರ ನಾಟ್ಯ ಸಂಘ ಗುಡಗೇರಿ, ಶ್ರೀ ಗುರುಕುಮಾರೇಶ್ವರ ನಾಟ್ಯ ಸಂಘ, ಹಾನಗಲ್ಲ, ಖಾಸ್ಗತೇಶ್ವರ ನಾಟ್ಯ ಸಂಘ ತಾಳಿಕೋಟಿ ಸೇರಿದಂತೆ ಅನೇಕ ಪ್ರಮುಖ ವೃತ್ತಿ ಕಂಪನಿಗಳಲ್ಲಿ ಕಲಾವಿದೆಯಾಗಿ ಸೇವೆ ಸಲ್ಲಿಸಿದ್ದಾರೆ.

'ದಾರಿದೀಪ' ನಾಟಕದ ಗುಣವತಿ, 'ತಾಯಿಕರುಳು' ನಾಟಕದ ತಾಯಿ, 'ಮಲಮಗಳು' ನಾಟಕದ ಕಲ್ಯಾಣಿ, 'ಹೇಮರೆಡ್ಡಿ ಮಲ್ಲಮ್ಮ' ನಾಟಕದ ಮಲ್ಲಮ್ಮ ಮುಂತಾದ ಪಾತ್ರಗಳು ಇವರಿಗೆ ಜನಪ್ರಿಯತೆಯನ್ನು ತಂದುಕೊಟ್ಟವು.

ನಿರಂತರ ರಂಗಪ್ರೀತಿಯ ಪ್ರತಿಭಾನ್ವಿತ ಕಲಾವಿದೆ ಬೇಬಿಜಾನ್ ತಾಳಿಕೋಟಿ ಅವರಿಗೆ 2012ನೇ ಸಾಲಿನ ವಾರ್ಷಿಕ ಪ್ರಶಸ್ತಿಯನ್ನು ಕರ್ನಾಟಕ ನಾಟಕ ಅಕಾಡೆಮಿ ನೀಡಿ ಗೌರವಿಸುತ್ತಿದೆ.

---



## ಡಾ. ಸುಜಾತ ಜಂಗಮಶೆಟ್ಟಿ

ಕನ್ನಡ ಉಪನ್ಯಾಸಕರಾದ ಸುಜಾತ ಜಂಗಮಶೆಟ್ಟಿ, ಹವ್ಯಾಸಿ ರಂಗಭೂಮಿಯಲ್ಲಿ ನಟಿಯಾಗಿ, ವಿಮರ್ಶಕರಾಗಿ, ರಂಗಚಿಂತಕರಾಗಿ ಸೇವೆ ಸಲ್ಲಿಸಿದ್ದಾರೆ. ಸಾಹಿತ್ಯ, ಸಾಂಸ್ಕೃತಿಕ ಹಾಗು ಸಾಮಾಜಿಕ ರಂಗಗಳ ಬಗ್ಗೆ ತೀವ್ರವಾದ ಆಸಕ್ತಿ ಬೆಳೆಸಿಕೊಂಡು ಕ್ರಿಯಾಶೀಲರಾಗಿರುವ ಇವರು ತಮ್ಮ ಅಧ್ಯಾಪಕ ವೃತ್ತಿಯ ಜೊತೆ ಜೊತೆಗೇ ರಂಗಭೂಮಿ ಕುರಿತಾದ ಆಳವಾದ ಅಧ್ಯಯನದೊಂದಿಗೆ ರಂಗವಿಮರ್ಶೆ ಹಾಗು ಚಿಂತನಾ ಲೋಕವನ್ನು ವಿಸ್ತರಿಸಿದ್ದಾರೆ. ಕಲಬುರ್ಗಿ ಸಮುದಾಯ ಸೇರಿದಂತೆ ಅನೇಕ ಹವ್ಯಾಸಿ ರಂಗತಂಡಗಳ ಸಕ್ರಿಯ ಕಲಾವಿದೆಯಾಗಿ, ರಂಗನಾಟಕ, ಬೀದಿನಾಟಕ ಹಾಗು ರೇಡಿಯೋ, ದೂರದರ್ಶನ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

ಕಾಲೇಜು ರಂಗಭೂಮಿಯ ಬೆಳವಣಿಗೆಯಲ್ಲೂ ಇವರ ಶ್ರಮ ಗಣನೀಯ. 20ಕ್ಕೂ ಹೆಚ್ಚು ರಂಗಪ್ರಯೋಗಗಳಲ್ಲಿ ಅಭಿನಯಿಸಿರುವ ಇವರು ಅನೇಕ ರಂಗಕಮ್ಮಟಗಳು, ವಿಚಾರ ಸಂಕಿರಣಗಳ ಆಯೋಜನೆ, ರಂಗಭೂಮಿ ಕುರಿತಂತೆ ಬರಹಗಳು ಮುಂತಾದ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿರುವ ಸುಜಾತ ಜಂಗಮಶೆಟ್ಟಿ ಅವರ ರಂಗಾಸಕ್ತಿ ಹಾಗು ಕ್ರಿಯಾಶೀಲತೆಯನ್ನು ಗಮನಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ರಾಧಾ, ರುಕ್ಮಿಣಿ

ಕನ್ನಡ ರಂಗಭೂಮಿ ಕಂಡ ಅಪರೂಪದ ಅವಳಿ ಸೋದರಿಯರು ರಾಧಾರುಕ್ಮಿಣಿ. 10 ವರ್ಷದವರಾಗಿದ್ದಾಗಲೇ ಗುಬ್ಬಿಕಂಪನಿಯ ಪ್ರತಿಷ್ಠಿತ ನಾಟಕ 'ಲವಕುಶ'ದ ಮೂಲಕ ಲವ–ಕುಶರಾಗಿ, ಕೃಷ್ಣಲೀಲೆಯಲ್ಲಿ ಕೃಷ್ಣಬಲರಾಮರಾಗಿ ಬಣ್ಣಹಚ್ಚಿದ ಈ ಸೋದರಿಯರು ತಮ್ಮ ಜೀವಮಾನವನ್ನು ಕಾಯಾ ವಾಚಾ ಮನಸಾ ಒಟ್ಟಾಗಿ ಕಳೆಯುತ್ತಿದ್ದಾರೆ. ತಮ್ಮ ಸಾಂಸಾರಿಕ ಬದುಕಿನ ಎಲ್ಲಾ ಸುಖಸಂತೋಷಗಳನ್ನು ಒಟ್ಟಿಗೆ ಅನುಭವಿಸುತ್ತಿದ್ದಾರೆ. ಒಬ್ಬನನ್ನೇ ವರಿಸಿ ನಿರಂತರ ಕಲಾಸೇವೆಯಲ್ಲಿ ತೊಡಗಿದ್ದು ಇವರಿಬ್ಬರ ಹೆಗ್ಗಳಿಕೆ. ಖ್ಯಾತ ರಂಗನಟ ಜೆ.ವಿ. ಕೃಷ್ಣ ಅವರ ಬಾಳಸಂಗಾತಿಗಳಾಗಿ ತಮ್ಮದೇ ಆದ ಜೆ.ವಿ. ಕೃಷ್ಣಾ ಡ್ರಾಮಾ ಕಂಪನಿಯನ್ನು ಹುಟ್ಟುಹಾಕಿ, ಇಪ್ಪತ್ತೈದು ವರ್ಷಗಳ ಕಾಲ ನಿರಂತರವಾಗಿ ಕಂಪನಿ ನಡೆಸಿದ ಕೀರ್ತಿ ಈ ಸೋದರಿಯರದು.

ರಂಗಭೂಮಿಯ ಮೇಲಿನ ಅಪಾರ ಪ್ರೀತಿಯಿಂದ ಚಲನಚಿತ್ರ ಲೋಕದ ಕರೆಯನ್ನು ನಿರಾಕರಿಸಿದ ಇವರು ಬಾಲ್ಯದಿಂದಲೇ ಸಂಗೀತ ಅಭ್ಯಾಸವನ್ನು ಮಾಡಿ ವೇದಿಕೆಯಲ್ಲಿ ಕಾರ್ಯಕ್ರಮ ನೀಡತೊಡಗಿದರು. ಗುಬ್ಬಿಕಂಪನಿಯ ವೈಭವದ ರಂಗ ಪ್ರಯೋಗಗಳ ಪ್ರಮುಖಭಾಗವಾಗಿ ಈ ಜೋಡಿ ಕಲಾವಿದೆಯರು ತಮ್ಮ ಅಭಿನಯ, ಸಂಗೀತ ಹಾಗೂ ಭಾವನಾತ್ಮಕತೆಯಿಂದ ಅಪಾರ ಮೆಚ್ಚುಗೆಗೆ ಪಾತ್ರರಾದರು. ಚೆನ್ನಪ್ಪ ಚನ್ನೇಗೌಡ, ಗುಲಾಮಗಂಡ, ಬಸ್‌ಕಂಡಕ್ಟರ್, ವರನೋಡಿ ಹೆಣ್ಣು ಕೊಡು, ಧರ್ಮದೇವತೆ, ಕೊಂಡುತಂದ ಗಂಡ ಮುಂತಾದವು ಇವರ ಸ್ವಂತಕಂಪನಿ ನಾಟಕಗಳು. ಸಾರ್ಥಕ ರಂಗಜೀವನ ನಡೆಸುತ್ತಾ ರಂಗಸಂಗೀತಕ್ಕೆ, ಗಾಯನಕ್ಕೆ ಹೊಸ ಆಯಾಮ ನೀಡಿದ ರಾಧಾರುಕ್ಮಿಣಿ ಸೋದರಿಯರಿಗೆ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಕೆಂಚನೂರು ಶಂಕರ್

ಕನ್ನಡ ರಂಗಭೂಮಿಯಲ್ಲಿ ನಾಟಕಕಾರರಾಗಿ, ನಟರಾಗಿ, ನಿರ್ದೇಶಕರಾಗಿ ತಂತ್ರಜ್ಞರಾಗಿ, ಸಂಘಟಕರಾಗಿ ನಿರಂತರವಾಗಿ ದುಡಿಯುತ್ತಿರುವ ಕೆಂಚನೂರು ಶಂಕರ ಬಹುಮುಖ ಪ್ರತಿಭಾನ್ವಿತರು.

ರಂಗಭೂಮಿಯ ಸೇವೆಯ ಜೊತೆಜೊತೆಗೆ ಸಮಾಜಸೇವೆಯನ್ನು ಮಾಡುತ್ತಿರುವ ಕೆಂಚನಹಳ್ಳಿ ಶಂಕರ ಅವರು ಪತ್ರಕರ್ತರೂಕೂಡ. ಅನೇಕ ಸಾಂಸ್ಕೃತಿಕ ಪತ್ರಿಕೆಗಳ ಗೌರವ ಸಂಪಾದಕರಾಗಿ ಶಂಕರ್ ಮಾರ್ಗದರ್ಶನ ಮಾಡಿದ್ದಾರೆ.

ಸಾಮಾಜಿಕ ಪರಿಣಾಮ ಬೀರುವ ವಸ್ತುಗಳನ್ನು ಆರಿಸಿಕೊಂಡು ನಾಟಕಗಳನ್ನು ರಚನೆ ಮಾಡಿ, ನಿರ್ದೇಶಿಸಿ ಸಮಾಜದ ಜಾಗೃತಿಗೆ ಕಾರಣರಾದವರು ಇವರು. ಜಾತಿಸಮಸ್ಯೆ, ಅಸ್ಪೃಶ್ಯತೆ, ಮದ್ಯಪಾನ ಮುಂತಾದ ಸಾಮಾಜಿಕ ಪಿಡುಗುಗಳ ಬಗ್ಗೆ ನಾಟಕಗಳನ್ನು ರಚಿಸಿ, ರಾಜ್ಯದಾದ್ಯಂತ ಪ್ರದರ್ಶಿಸಿದ್ದಾರೆ.

ಮಕ್ಕಳಿಗಾಗಿ ಅನೇಕ ನಾಟಕಗಳು, ನೃತ್ಯರೂಪಕಗಳನ್ನು ಬರೆದಿರುವ ಕೆಂಚನೂರು ಶಂಕರ್ ಅತ್ಯುತ್ತಮ ಸಂಘಟಕರು. ಶೋಷಿತರ ಪರವಾಗಿ, ಅಶಕ್ತ ಕಲಾವಿದರ ನೆರವಿಗಾಗಿ ಸದಾಕಾಲ ನಿಲ್ಲುವ ಕೆಂಚನೂರು ಶಂಕರ್ ಅನೇಕ ರಾಜ್ಯ ಮಟ್ಟದ ಹಾಗೂ ರಾಷ್ಟ್ರಮಟ್ಟದ ಉತ್ಸವಗಳನ್ನು, ಬೀದಿನಾಟಕ, ಜಾಥಾಗಳನ್ನು ಸಂಘಟಿಸಿದ್ದಾರೆ.

ನಾಲ್ಕು ದಶಕಗಳಿಂದ ರಂಗಭೂಮಿಯಲ್ಲಿ ಅಪಾರ ಸೇವೆ ಸಲ್ಲಿಸಿರುವ ಕೆಂಚನೂರು ಶಂಕರ್ ಅವರ ಸಾಧನೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗಪ್ರಶಸ್ತಿ ನೀಡಿ ಗೌರವಿಸುತ್ತಿದೆ.





## ಕಬಡ್ಡಿ ರಾಮಚಂದ್ರ

ಕನ್ನಡ ಭಾಷೆಯ ಸ್ಪಷ್ಟಉಚ್ಚಾರ, ಉತ್ತಮ ಕಂಠಸಿರಿ, ಸದೃಢ ದೇಹದ ಕಬಡ್ಡಿ ರಾಮಚಂದ್ರ ಪೌರಾಣಿಕ – ಐತಿಹಾಸಿಕ ಪಾತ್ರಗಳಿಗೆ ಹೆಸರಾದವರು. ಬಾಲ್ಯದಿಂದಲೇ ರಂಗಭೂಮಿ ಆಸಕ್ತಿ, ಏಕಪಾತ್ರಾಭಿನಯಗಳಲ್ಲಿ ಬಹುಮಾನಗಳನ್ನು ಗೆಲ್ಲುತ್ತಿದ್ದ ರಾಮಚಂದ್ರ ಶಾಲಾ ಕಾಲೇಜು ದಿನಗಳಲ್ಲಿ ನಾಟಕಗಳಲ್ಲಿ ಅಭಿನಯಿಸುತ್ತಾ, ಹವ್ಯಾಸಿ ರಂಗತಂಡಗಳಿಗೆ ಅನಿವಾರ್ಯವಾದ ನಟರಾದರು.

ಮಂಡ್ಯದ ಗಂಡು ಭೂಮಿಯಲ್ಲಿ ವೀರೋಚಿತ ಪಾತ್ರಗಳಿಗೆ ಹೆಸರಾದ ರಾಮಚಂದ್ರ, ಪೊಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಕಬಡ್ಡಿ ಆಟದಲ್ಲಿ ಪ್ರಾವೀಣ್ಯತೆ ಪಡೆದ ಇವರು ಎರಡು ಬಾರಿ ರಾಷ್ಟ್ರೀಯ ತಂಡವನ್ನು ಪ್ರತಿನಿಧಿಸಿದ್ದರು. ರಾಷ್ಟ್ರಮಟ್ಟದ ಕಬಡ್ಡಿ ತೀರ್ಪುಗಾರರಾಗಿಯೂ ಸೇವೆಸಲ್ಲಿಸಿದ್ದಾರೆ. ರಾಜ್ಯಮಟ್ಟದ ನಾಟಕ ಸ್ಪರ್ಧೆಗಳಲ್ಲಿ ಅತ್ಯುತ್ತಮ ನಟ ಪ್ರಶಸ್ತಿ ಇವರಿಗೇ ಕಟ್ಟಿಟ್ಟ ಬುತ್ತಿ.

ರಾವಣ, ದುರ್ಯೋಧನ, ಭೀಮ, ಕರ್ಣ, ಶಕುನಿ, ವಾಲಿ, ಆಂಜನೇಯ, ಮಹಿಷಾಸುರ ಮುಂತಾದ ಪೌರಾಣಿಕ ಪಾತ್ರಗಳ ಜೊತೆ ಎಚ್ಚಮನಾಯಕ, ವೀರಮದಕರಿ ಮುಂತಾದ ಐತಿಹಾಸಿಕ ಪಾತ್ರಗಳಿಗೂ ಜೀವತುಂಬಿದ್ದಾರೆ. ರಂಗಭೂಮಿಗೆ ಇವರು ನೀಡಿರುವ ಕೊಡುಗೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.





## ಕೆ.ಬಿ. ಮಂಜುನಾಥ್

'ರಂಗಭೂಮಿಯ ರಾಣಿ' ಎಂದೇ ಪ್ರಖ್ಯಾತರಾದ ಕೆ.ಬಿ. ಮಂಜುನಾಥ ದಾವಣಗೆರೆಯ ಕಲಾಪ್ರತಿಭೆ. ಕಲಾವಿದರ ಕುಟುಂಬದ ಕುಡಿಯಾಗಿ 1944ರಲ್ಲಿ ಜನಿಸಿದ ಕೆ.ಬಿ. ಮಂಜುನಾಥ, ಕರ್ನಾಟಕ ವೃತ್ತಿರಂಗ ಭೂಮಿಯಲ್ಲಿ ಕಳೆದ 50 ವರ್ಷಗಳಿಂದ ಕಲಾವಿದರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

6ನೇ ವಯಸ್ಸಿನಲ್ಲಿ 'ಭೌಮಾಸುರ' ಎಂಬ ನಾಟಕದ 'ಭಗದತ್ತ'ನ ಪಾತ್ರದಲ್ಲಿ ಬಣ್ಣ ಹಚ್ಚಿದರೂ, ಮುಂದೆ ಕನ್ನಡ ವೃತ್ತಿರಂಗಭೂಮಿಯ ಖಾಯಂ ಸ್ತ್ರೀ ಪಾತ್ರಧಾರಿಯಾಗಿ ತಮ್ಮ ಕಲಾಜೀವನಕ್ಕೆ ಮೆರುಗು ತುಂಬಿದರು.

ಶ್ರೀ ಏಣಗಿಬಾಳಪ್ಪನವರ ಕಲಾವೈಭವ ನಾಟಕ ಸಂಘ, ಶ್ರೀ ಸಂಗಮೇಶ್ವರ ನಾಟಕ ಸಂಘ, ಗುಡಗೇರಿ, ಶ್ರೀ ವಿಜಯಕುಮಾರ ನಾಟಕ ಸಂಘ ನರೇಗಲ್ಲ ಮುಂತಾದ ಪ್ರಖ್ಯಾತ ರಂಗ ಕಂಪನಿಗಳಲ್ಲಿ ಪಾತ್ರಗಳನ್ನು ಮಾಡುತ್ತಾ ಮುಂದೆ ಇವರ ಸಹೋದರ ಕೆ.ಬಿ. ಶಿವರಾಜ ಅವರೊಡಗೂಡಿ ಜಯಲಕ್ಷ್ಮೀ ನಾಟಕ ತಂಡವನ್ನು ಸ್ಥಾಪಿಸಿ ಮುನ್ನಡೆಸುತ್ತಿದ್ದಾರೆ.

'ಹೇಮರೆಡ್ಡಿಮಲ್ಲಮ್ಮ' ನಾಟಕದ ಮಲ್ಲಮ್ಮ, 'ರೇಣುಕಾಮಹಾತ್ಮೆ'ಯ ರೇಣುಕಾ, 'ದೇವಿ ಮಹಾತ್ಮೆ'ಯ ನಾರದ, 'ದೇವದಾಸಿ' ನಾಟಕದ ಮಣಿಮಂಜರಿ ಮುಂತಾದ ಪಾತ್ರಗಳು ಇವರಿಗೆ ಅಪಾರ ಹೆಸರು ತಂದುಕೊಟ್ಟವು.

ಅನೇಕ ಸಂಘ ಸಂಸ್ಥೆಗಳಿಂದ ಪ್ರಶಸ್ತಿ ಗೌರವಗಳನ್ನು ಸ್ವೀಕರಿಸಿದ್ದಾರೆ. ಪ್ರಸ್ತುತ ಕೆ.ಬಿ. ಮಂಜುನಾಥ ಅವರ ಕಲಾಸೇವೆಯನ್ನು ಗುರುತಿಸಿ ಕರ್ನಾಟಕ ನಾಟಕ ಅಕಾಡೆಮಿ 2012ನೇ ಸಾಲಿನ ವಾರ್ಷಿಕ ರಂಗ ಪ್ರಶಸ್ತಿಯನ್ನು ನೀಡುತ್ತಿದೆ.



## 2013ರ ಪ್ರಶಸ್ತಿ ವಿಜೇತರು



### ಅಮೀನ್ ಪೇಂಟರ್ ಕೆ. (ಜೀವಮಾನ ರಂಗಸಾಧನೆ ಪ್ರಶಸ್ತಿ)

ಇದು ಪೇಂಟಿಂಗ್ ಎಂದು ಗುರುತಿಸಲಾಗದಷ್ಟು ಸಹಜವಾಗಿ ಪರದೆಗಳ ಮೇಲೆ ಚಿತ್ರ ಬಿಡಿಸುತ್ತಿದ್ದರು ಪೇಮರಾಜ ಕೆಂಧೂಳಿಯವರು. ವೃತ್ತಿ ರಂಗಭೂಮಿಯ ಕಲಾ ಜಗತ್ತಿಗೆ ಅವರೊಂದು ದಂತಕತೆ. ಅದೇ ಪ್ರಮಾಣದ ಸಾಧನೆಯಿಂದ ವೃತ್ತಿರಂಗಭೂಮಿಯ ತಾರೆಯಾದವರು ಇಳಕಲ್‌ನ ಅಮೀನ್ ಪೇಂಟರ್. ನೆಲಕ್ಕೆ ಪರದೆ ಹಾಸಿ– ಬಣ್ಣ ಬ್ರಷ್ ಹಿಡಿದು ಕುಳಿತರೆ– ಅಲ್ಲಿ ಅರಮನೆ, ಗುರುಮನೆ, ಜಂಗಲ್, ರಸ್ತಾ ಎಲ್ಲವೂ ಸೃಷ್ಟಿಯಾಗಿಬಿಡುತ್ತವೆ! ಅದೊಂದು ವಿಸ್ಮಯ. ಹೇಗೆ ಸಾಧ್ಯ? ಎಂದು ಪ್ರಶ್ನಿಸಿದರೆ ಗುರುಗಳು ಹೀಗೆ ಹೇಳಿಕೊಟ್ಟಿದ್ದರು ಎನ್ನುತ್ತಾರೆ. ನಿಂತನಿಂತಲ್ಲಿ ಎನ್ನುವ ಹಾಗೆ ವಿವಿಧ ಭಂಗಿಗಳಲ್ಲಿ ಕುಳಿತ ಕುಳಿತಲ್ಲಿ ಹೀಗೆ ಸೃಷ್ಟಿಸುವ ಕಲೆ ಒಂದು ಪವಾಡವೇ ಸರಿ. ಅದು ಅಮೀನ್ ಪೇಂಟರ್‌ಗೆ ಸಿದ್ಧಿಸಿದೆ.

ಬಾವಸಾಬ–ಹುಸೇನಬಿ ದಂಪತಿಗೆ 1950ರಲ್ಲಿ ಇಳಕಲ್‌ನಲ್ಲಿ ಜನಿಸಿದ ಅಮೀನಸಾಬ ಕೊಡಗಲಿಯವರು ಶಾಲೆಯಲ್ಲಿ ಅಕ್ಷರ ಬರೆಯುವ ಬದಲಿಗೆ ಚಿತ್ರಗಳನ್ನು ಬಿಡಿಸಿ ಶಿಕ್ಷಕರ ಮನಗೆದ್ದರು. ಶಿಕ್ಷಕ ವಾರಿಯವರ ಪ್ರೇರಣೆಯಿಂದ ಪ್ರಾಥಮಿಕ ಚಿತ್ರಕಲಾ ಪರೀಕ್ಷೆಯಲ್ಲಿ ಪಾಸಾದರು. ಎಸ್‌ಎಸ್‌ಎಲ್‌ಸಿ ನಂತರ ಗದಗಿನ ವಿಜಯ ಚಿತ್ರಕಲಾ ಶಾಲೆಯಲ್ಲಿ ಡಿಪ್ಲೊಮಾ ಪದವಿ ಪಡೆದು, ಮುಂಬಯಿ ನಗರದ ರಾಜಕಪೂರ್ ಸ್ಟುಡಿಯೋದಲ್ಲಿ ಕಲಾ ನಿರ್ದೇಶಕರ ಸಹಾಯಕನಾಗಿ ಸೇರಿದರು. ಮೈಸೂರಿನಲ್ಲಿ ಶಿಕ್ಷಕ ಹುದ್ದೆಗೆ ವಿಫಲ ಯತ್ನ ನಡೆಸಿದರು.

ಈ ಲೋಕಸಂಚಾರ ಹುತ್ತಿನ ಚೀಲ ತುಂಬಲಿಲ್ಲ. ಮತ್ತೆ ಇಳಕಲ್‌ಗೆ ಬಂದು ಕೆಂಧೂಳಿಯವರ ಶಿಷ್ಯತ್ವದಲ್ಲಿ ಪರದೆ ಚಿತ್ರಕಲೆಯ ಪಟ್ಟುಗಳನ್ನು ಅರಗಿಸಿಕೊಂಡರು. ಗುಳೇದಗುಡ್ಡದ ಆರ್.ಜಿ.ಕರಿನಂದಿಯವರ ನಾಟಕದ ಪರದೆಗಳಿಗೆ ಚಿತ್ರ ಬಿಡಿಸಿ ರಂಗಾಸಕ್ತರ ಮನಗೆದ್ದರು. ಅಮೀನ್ ಕೊಡಗಲಿಯವರು 'ಅಮೀನ್ ಪೇಂಟರ್' ಎಂದು ಹೆಸರಾದರು. ಅಲ್ಲಿಂದ ತಿರುಗಿ ನೋಡಿದ್ದೇ ಇಲ್ಲ.

30ಕ್ಕೂ ಅಧಿಕ ಪ್ರತಿಷ್ಠಿತ ನಾಟಕ ಕಂಪನಿಗಳ ಪರದೆಗಳಿಗೆ ಚಿತ್ರ ಬಿಡಿಸಿದರು. ಹಿನ್ನೆಲೆ ದೃಶ್ಯವನ್ನು ಕಳೆಗಟ್ಟಿಸುವಂತಹ ವೈಚಿತ್ರ್ಯಪೂರ್ಣ ಚಿತ್ರ ರಚನೆಯಿಂದ ನಾಡಿನ ಹೆಸರಾಂತ ಚಿತ್ರ ಕಲಾವಿದರೆನಿಸಿದರು. ಹೆಸರಾಂತ ಹವ್ಯಾಸಿ ತಂಡಗಳಾದ ನೀನಾಸಂ, ಹುನಗುಂದದ ಧ್ರುವರಂಗ, ಇಳಕಲ್‌ನ ಸ್ನೇಹರಂಗದ ಹಲವು ನಾಟಕಗಳಿಗೆ ಕಲಾವಿನ್ಯಾಸ ಮಾಡಿ ಸೈ ಎನಿಸಿಕೊಂಡರು.

ಅಮೀನ್ ಪೇಂಟರ್‌ನಂತಹ ಪ್ರತಿಭೆ ಬೆಂಗಳೂರಿನಲ್ಲಿ ಇರಬೇಕು ಎಂಬ ಕಲಾವಿದ ಗುರುರಾಜ ಹೊಸಕೋಟೆ ಅವರ ಸಲಹೆ ಮೇರೆಗೆ ಬೆಂಗಳೂರಿಗೆ ಬಂದು ಕನ್ನಡ, ತಮಿಳು ಚಿತ್ರರಂಗದವರ ಸಂಪರ್ಕಕ್ಕೆ ಬಂದರು. ದೇವಾಲಯ, ಕ್ಯಾಲೆಂಡರ್‌ಗಳಿಗೆ ಹಿಂದೂ ದೇವತೆಗಳ ಚಿತ್ರಗಳನ್ನು ಸೊಗಸಾಗಿ ಬಿಡಿಸಿಕೊಟ್ಟರು. ದೆಹಲಿಯ ಚಿತ್ರಕಲಾ ಪ್ರದರ್ಶನದಲ್ಲಿ ಶಿಲಾಬಾಲಿಕೆ, ಗೋಳಗುಮ್ಮಟ, ಮೈಸೂರು ಅರಮನೆ ಚಿತ್ರ ಪ್ರದರ್ಶಿಸಿ, ಚಿತ್ರಲೋಕದ ದಿಗ್ಗಜ ಎಂ.ಎಫ್ ಹುಸೇನರಿಂದ ಮೆಚ್ಚುಗೆ ಪಡೆದರು. ಆದರೆ ಬೆಂಗಳೂರಿನಲ್ಲಿ ಅಮೀನ್ ಕಲೆಯನ್ನು ಕೆಲವರು ಶೋಷಿಸಿ ದುಡ್ಡು ಮಾಡಿಕೊಂಡದ್ದು ಎಷ್ಟೋ ಕಾಲ ಅವರ ಅರಿವಿಗೇ ಬರಲಿಲ್ಲ. ಮತ್ತೆ ಕಲೆಯ ತವರೂರು ಇಳಕಲ್‌ಗೆ ಮರಳಿ ಚಿತ್ರಕಲೆಯನ್ನೇ ಆರಾಧ್ಯ ದೈವವಾಗಿಸಿಕೊಂಡಿದ್ದಾರೆ.



## ಜಿ.ಡಿ. ತಿಮ್ಮಯ್ಯ

ಮಧ್ಯ ಕರ್ನಾಟಕದ ಹೆಸರಾಂತ ಸಂಗೀತ ಮೇಷ್ಟ್ರು ಶ್ರೀಯುತ ಜಿ.ಡಿ.ತಿಮ್ಮಯ್ಯನವರು. ಹಾರ್ಮೋನಿಯಂ ಮಾಸ್ಟರ್ ಎನ್ನಿ, ಸಂಗೀತ ನಿರ್ದೇಶಕರು ಎನ್ನಿ– ಯಾವುದೇ ಹೆಸರಿನಿಂದ ಕರೆದರೂ ಅವರು ನಾಟಕದ ನಿರ್ದೇಶಕರೂ ಹೌದು.

79 ವರ್ಷ ವಯಸ್ಸಿನ ತಿಮ್ಮಯ್ಯನವರು ಚಿತ್ರದುರ್ಗ, ಶಿವಮೊಗ್ಗ, ತುಮಕೂರು, ಬೆಂಗಳೂರು, ಕೋಲಾರ ಜಿಲ್ಲೆಗಳ ಹತ್ತಾರು ಹಳ್ಳಿಗಳಲ್ಲಿ ಕಳೆದ 60 ವರ್ಷಗಳಿಂದ ಹಾರ್ಮೋನಿಯಂ ನುಡಿಸುತ್ತ, ಪದ ಹಾಗೂ ಸಂಭಾಷಣೆ ಹೇಳಿಕೊಡುತ್ತ, ಕಲಾವಿದರನ್ನು ರೂಪಿಸುತ್ತ ಬಂದಿದ್ದಾರೆ.

ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕು ಪರಿಯಟ್ಟೆ ಗ್ರಾಮದಲ್ಲಿ 1936ರಲ್ಲಿ ಗಿರಿ ತಿಮ್ಮಯ್ಯ ಮತ್ತು ತಿಮ್ಮಕ್ಕ ದಂಪತಿಗೆ ಜನಿಸಿದ ತಿಮ್ಮಯ್ಯ ಬಾಲ್ಯದಲ್ಲಿಯೇ ಪರಶುರಾಮಪುರದ ತಿಪ್ಪೇಸ್ವಾಮಿ, ತಮಿಳುನಾಡಿನ ಎಂ.ರಾಮಸ್ವಾಮಿ ಅವರಿಂದ ಕರ್ನಾಟಕ ಸಂಗೀತದ ದೀಕ್ಷೆ ಪಡೆದು, ಅದನ್ನು ರಂಗಗೀತೆಗಳಿಗೆ ಕಸಿ ಮಾಡಿದ್ದಾರೆ. ಮುಂದೆ ರಂಗಗೀತೆ, ಹಾರ್ಮೋನಿಯಂ ಸಾಥ್, ನಾಟಕ ನಿರ್ದೇಶನವನ್ನೇ ವೃತ್ತಿಯಾಗಿ ಸ್ವೀಕರಿಸಿದ್ದಾರೆ.

ಪಂಗನಾಮ, ವಿಜಯನಗರ ಪುತ್ರ, ಟಿಪ್ಪುಸುಲ್ತಾನ್, ಕುರುಕ್ಷೇತ್ರ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಕೊಳಾಳದ ಕೆಂಚಾವಧೂತರು ಸೇರಿದಂತೆ 900 ನಾಟಕಗಳ ಹಾಡುಗಳಿಗೆ ಸ್ವರ ಸಂಯೋಜನೆ ಮಾಡಿ ಅವನ್ನು ಕಲಾವಿದರಿಗೆ ಕಲಿಸಿಕೊಟ್ಟಿದ್ದಾರೆ.

ಮಧ್ಯದಲ್ಲಿ ಕೆಲಕಾಲ ಸೊಂಡೆಕರೆ ಮಂಜುನಾಥ, ಕಂಚೀಕೇರಿ ಶಿವಣ್ಣ ಅವರ ನಾಟಕ ಕಂಪನಿಗಳಲ್ಲಿ ಸಂಗೀತ ನಿರ್ದೇಶಕರಾಗಿಯೂ ಹೆಸರು ಮಾಡಿದ್ದಾರೆ. 300ಕ್ಕೂ ಹೆಚ್ಚು ರಂಗಗೀತೆ, ಭಕ್ತಿಗೀತೆ ರಚಿಸಿದ್ದಾರೆ. ಕವನ ಸಂಕಲನ ಹೊರತಂದಿದ್ದಾರೆ. ಆಕಾಶವಾಣಿ, ದೂರದರ್ಶನದ ನಾಟಕಗಳಿಗೂ ಸಂಗೀತ ನಿರ್ದೇಶನ ಮಾಡಿದ್ದಾರೆ.

ಗ್ರಾಮೀಣ ರಂಗಭೂಮಿಗೆ ತಿಮ್ಮಯ್ಯನವರು ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.





## ಗುಬ್ಬಿ ಪ್ರಕಾಶ್

ಗುಬ್ಬಿ ಪ್ರಕಾಶ್ (ಎಂ.ಪ್ರಕಾಶ್) ಹವ್ಯಾಸಿ ರಂಗಭೂಮಿಯ ಹೆಸರಾಂತ ನಟರು. ಘಾಸಿರಾಂ ಕೊತ್ವಾಲ, ಗುಣಮುಖ, ಬೆಳ್ಳಕ್ಕಿ ಹಿಂಡು ಬೆದರ್ಯಾವೊ, ಹುತ್ತವ ಬಡಿದರೆ, ಗೋಕರ್ಣದ ಗೌಡಶಾನಿ, ಸಂಗ್ಯಾಬಾಳ್ಯಾ, ಒಥೆಲೊ ಸೇರಿದಂತೆ 40ಕ್ಕೂ ಅಧಿಕ ನಾಟಕಗಳ ನೂರಾರು ಪ್ರಯೋಗಗಳಲ್ಲಿ ಕಳೆದ 30 ವರ್ಷಗಳಿಂದ ನಟಿಸುತ್ತ ಬಂದಿರುವ ಅವರು, ತಮ್ಮ ಅಭಿನಯ ಚತುರತೆಯಿಂದಾಗಿ ಖ್ಯಾತರಾಗಿದ್ದಾರೆ.

ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕು ಚನ್ನಶೆಟ್ಟಿಹಳ್ಳಿಯ ಸಿ.ಬಿ.ಮರಿಬಸಪ್ಪ – ಮಲ್ಲಮ್ಮ ದಂಪತಿಗೆ 1961ರಲ್ಲಿ ಜನಿಸಿದ ಪ್ರಕಾಶ್ ಎಂಎ ಕನ್ನಡ ಪದವೀಧರರು. ತುಮಕೂರಿನ ಎಚ್.ಎಂ.ಟಿ.ಯಲ್ಲಿ ಉದ್ಯೋಗಿಯಾಗಿದ್ದ ಅವರು ನಟನೆಗೆ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡು ಹುದ್ದೆಗೆ ರಾಜೀನಾಮೆ ನೀಡಿದ್ದಾರೆ. ಚಲನಚಿತ್ರ, ಧಾರಾವಾಹಿಗಳಲ್ಲಿ ನಟನೆ ಜತೆಗೆ ಸಾಕ್ಷ್ಯಚಿತ್ರ ನಿರ್ಮಾಣದಲ್ಲೂ ತೊಡಗಿಸಿಕೊಂಡು ಬೆಂಗಳೂರಿನಲ್ಲಿ ನೆಲೆಸಿದ್ದಾರೆ.

ಕರ್ನಾಟಕ ರಂಗ ಜಾಗೃತಿ ಪರಿಷತ್ ಅಧ್ಯಕ್ಷ, ಬೆಂಗಳೂರು ರಂಗಮಂಡಲ ಸಾಂಸ್ಕೃತಿಕ ನಿರ್ದೇಶಕ ಸೇರಿದಂತೆ ಹತ್ತಾರು ರಂಗಸಂಬಂಧಿ ಸಂಘ ಸಂಸ್ಥೆಗಳಲ್ಲಿ ಪ್ರಕಾಶ್ ಕ್ರಿಯಾಶೀಲರಾಗಿದ್ದಾರೆ. ಟಿವಿ, ಸಿನಿಮಾಗಳಲ್ಲಿ ಹೆಚ್ಚಿನ ಬೇಡಿಕೆ ಇದ್ದರೂ ರಂಗಭೂಮಿಗೆ ಅವರದು ಪ್ರಥಮ ಆದ್ಯತೆ.

ಹವ್ಯಾಸಿ ರಂಗಭೂಮಿಯಲ್ಲಿ ಪ್ರಕಾಶ್ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಭಾರತಿ ಕೆ.

ಕಾಸರಗೋಡು ಕೇರಳದಲ್ಲಿದ್ದರೂ ಕನ್ನಡಿಗರ ಆತ್ಮ. ಕೆಲವೊಮ್ಮೆ ಏಳುಬೀಳುಗಳಿದ್ದರೂ ಅಲ್ಲಿನ ಕನ್ನಡ ರಂಗಭೂಮಿ ಸದಾ ಜೀವಂತ. ಅಲ್ಲಿನ ಎಲ್ಲ ರಂಗ ತಂಡಗಳ ಅನಿವಾರ್ಯ ನಟಿ ಕೆ.ಭಾರತಿ.  ನಟನೆಯ ಜತೆಗೆ ಶಾಲಾ ಕಾಲೇಜು ಮಕ್ಕಳಿಗೆ ರಂಗ ತರಬೇತಿ, ರಂಗಗೀತೆ ರಚನೆ, ವಸ್ತ್ರಾಲಂಕಾರ, ಪ್ರಸಾಧನ ಕಲೆಯಲ್ಲೂ ಅವರು ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡಿದ್ದಾರೆ.

ಕಾಸರಗೋಡಿನ ವಿ.ಕೃಷ್ಣನ್– ರಾಜೀವಿ ದಂಪತಿಗೆ 1963ರಲ್ಲಿ ಜನಿಸಿದ ಭಾರತಿ, ಎಸ್‌ಎಸ್‌ಎಲ್‌ಸಿ ವಿದ್ಯಾಭ್ಯಾಸದ ಜೊತೆಗೆ ಸಂಗೀತದಲ್ಲಿ ಸೀನಿಯರ್ ಮಾಡಿಕೊಂಡಿದ್ದಾರೆ. ಸೂರ್ಯ ಶಿಕಾರಿ, ಗಾಂಧಾರಿ, ಬತ್ತಿ, ಚಿರಸ್ಮರಣೆ, ಕತ್ತಲೆ ದಾರಿ ದೂರ ಸೇರಿದಂತೆ 50ಕ್ಕೂ ಅಧಿಕ ಕನ್ನಡ ನಾಟಕಗಳು, ನಾಲ್ಕಾರು ತುಳು ನಾಟಕಗಳಲ್ಲೂ ನಟಿಸಿ ಅಲ್ಲಿನ ರಂಗಾಸಕ್ತರಿಗೆ ಚಿರಪರಿಚಿತರಾಗಿದ್ದಾರೆ.

ತುಳು, ಕನ್ನಡ ನಾಟಕಗಳ ನಿರ್ದೇಶನದ ಜತೆಗೆ ಹಲವಾರು ಸಾಂಸ್ಕೃತಿಕ ಸಂಘಸಂಸ್ಥೆಗಳಲ್ಲಿ ಸದಾ ಕ್ರಿಯಾಶೀಲರಾಗಿದ್ದಾರೆ. ಭಾರತಿ ಅವರ ಪತಿ ಪಿ.ವಿ.ಬಾಬು ಅವರೂ ರಂಗ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಗಡಿನಾಡಿನಲ್ಲಿ ತುಳು, ಕನ್ನಡ ರಂಗಭೂಮಿಯನ್ನು ಜೀವಂತ ಇಟ್ಟ ಕಾರಣಕ್ಕೆ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಆಲೂರು ನಾಗರಾಜು

ಆಲೂರು ನಾಗರಾಜ ವೃತ್ತಿ ರಂಗಭೂಮಿಯ ಹೆಸರಾಂತ ನಟರು. ಗೋಕಾಕ ಕಂಪನಿ, ಅರಿಶಿಣಗೋಡಿ, ಕುಮಾರಸ್ವಾಮಿ, ಪ್ರೇಮಾ ಗುಳೇದಗುಡ್ಡ, ಗುಡಿಗೇರಿ ಬಸವರಾಜ ಅವರ ನಾಟಕ ಕಂಪನಿಗಳಲ್ಲಿ ಎಲ್ಲ ಬಗೆಯ ಪಾತ್ರಗಳಲ್ಲಿ ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಅಭಿನಯಿಸಿ ದೊಡ್ಡ ಹೆಸರು ಮಾಡಿದ್ದಾರೆ. ಕಂಸ, ಬಲಿ ಚಕ್ರವರ್ತಿ, ಬಸವಣ್ಣ, ಇಂದ್ರ ಮುಂತಾದ ಪೌರಾಣಿಕ ಪಾತ್ರಗಳ ಜತೆಗೆ; ಬಸ್ ಕಂಡಕ್ಟರ್ ನಾಟಕದ ರಂಗಣ್ಣ, ಸಂಪತ್ತಿಗೆ ಸವಾಲುನಲ್ಲಿ ಭದ್ರಿ, ಗರೀಬಿ ಹಟಾವೋ–ಕಾರ್ಮಿಕ, ಕೊಂಡು ತಂದ ಗಂಡ–ಠಾಕೂರ್ ಪಾತ್ರಗಳು ಸೇರಿದಂತೆ ಎಪ್ಪತ್ತಕ್ಕೂ ಅಧಿಕ ಸಾಮಾಜಿಕ ನಾಟಕಗಳ ಸಹಸ್ರಾರು ಪ್ರದರ್ಶನಗಳಲ್ಲಿ ಕಳೆದ 60 ವರ್ಷಗಳ ಕಾಲ ಸತತವಾಗಿ ಅಭಿನಯಿಸಿ ಖ್ಯಾತರಾಗಿದ್ದಾರೆ.

ಚಾಮರಾಜನಗರ ತಾಲ್ಲೂಕು ಆಲೂರು ಗ್ರಾಮದ ಮಲ್ಲಣ್ಣ– ಮಲ್ಲಮ್ಮ ದಂಪತಿಗೆ 1942ರಲ್ಲಿ ಜನಿಸಿದ ನಾಗರಾಜು ವಿದ್ಯಾರ್ಥಿಯಾಗಿದ್ದಾಗಲೇ ಲಿಂಗರಾಜು ಅರಸು ರಚಿಸಿದ ಪ್ರಭುಲಿಂಗ ಲೀಲೆ ನಾಟಕದ ಕಲಿ ಮತ್ತು ಸಿದ್ಧರಾಮನ ಪಾತ್ರಗಳಲ್ಲಿ ಊರಲ್ಲಿ ಹೆಸರು ಮಾಡಿದರು. ಪಿಯುಸಿ ನಂತರ ನಾಟಕ ಕಂಪನಿಯೇ ಅವರ ವಿಶ್ವವಿದ್ಯಾಲಯವಾಯಿತು. ಚಿಂದೋಡಿ ವೀರಪ್ಪನವರ ಕೆಬಿಆರ್ ಡ್ರಾಮಾ ಕಂಪನಿಯಲ್ಲಿ ರಂಗಪ್ರವೇಶ ಮಾಡಿದ ನಂತರ ತಿರುಗಿ ನೋಡಲಿಲ್ಲ. ಮೈಸೂರು ಭಾಗದ ನಾಗರಾಜು ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಸಿದ್ಧಿಯಾದರು. ಇಳಿ ವಯಸ್ಸಿನಲ್ಲಿ ತಮ್ಮ ಊರಲ್ಲಿ ನೆಲೆನಿಂತು ಯುವಕರಿಗೆ ತಮ್ಮ ರಂಗ ಅನುಭವಗಳನ್ನು ಹಂಚುವುದರ ಜತೆಗೆ, ಮಾರ್ಗದರ್ಶನ ಮಾಡುವಲ್ಲಿ ನಿರತರಾಗಿದ್ದಾರೆ. ಈ ಮಧ್ಯೆ ವಿಶ್ವಗುರು ನಾಟ್ಯ ಸಂಘ ಸ್ಥಾಪಿಸಿ ಕೈಸುಟ್ಟುಕೊಂಡದ್ದೂ ಇದೆ.

ವೃತ್ತಿ ರಂಗಭೂಮಿಗೆ ನಾಗರಾಜು ಅವರು ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಸಂಜೀವಪ್ಪ ಗಬ್ಬೂರ

ವೃತ್ತಿ ರಂಗಭೂಮಿ ಪುರುಷ ಪ್ರಧಾನವಲ್ಲ. ಅಲ್ಲಿ ಮಹಿಳೆ ಪುರುಷನಿಗೆ ಸರಿಸಾಟಿ. ಸಂಖ್ಯೆಯ ದೃಷ್ಟಿಯಿಂದ ಅಲ್ಲದಿರಬಹುದು. ಆದರೆ ಸಾಮರ್ಥ್ಯದ ದೃಷ್ಟಿಯಿಂದ ಸರಿಸಮ. ಆದರೆ ಕನ್ನಡ ವೃತ್ತಿ ರಂಗಭೂಮಿಯ ಇತಿಹಾಸದಲ್ಲಿ ಒಂದು ನಾಟಕ ಕಂಪನಿ ಇದೆ. ಅಲ್ಲಿ ಮಾತ್ರ ಸ್ತ್ರೀಯರಿಗೆ ಪ್ರವೇಶವಿಲ್ಲ! ಎಲ್ಲ ಸ್ತ್ರೀಪಾತ್ರಗಳನ್ನೂ ಪುರುಷರೇ ಅಭಿನಯಿಸುತ್ತಾರೆ. ಆ ಕಂಪನಿ ಯಾವುದೆಂದರೆ ಸಂಗೀತ ಲೋಕದ ದಂತಕತೆ ಪಂಚಾಕ್ಷರ ಗವಾಯಿಗಳ ಶಿಷ್ಯ ಪುಟ್ಟರಾಜ ಗವಾಯಿಗಳು ಆರಂಭಿಸಿದ ಶ್ರೀ ಕುಮಾರೇಶ್ವರ ಕೃಪಾಪೋಷಿತ ಪಂಡಿತ ಪಂಚಾಕ್ಷರ ಗವಾಯಿಗಳ ನಾಟ್ಯಸಂಘ. ಅಲ್ಲಿ ಸ್ತ್ರೀಪಾತ್ರಗಳನ್ನು ಸೊಗಸಾಗಿ ಅಭಿನಯಿಸುತ್ತ ಬಂದ ಪುರುಷರು ಜನಜನಿತರಾಗಿದ್ದಾರೆ. ಹಾಗೆ ಮನೆ ಮಾತಾದವರಲ್ಲಿ ಒಬ್ಬರು ಸಂಜೀವಪ್ಪ ಗಬ್ಬೂರ ಅವರು.

ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕು ಗಬ್ಬೂರದಲ್ಲಿ 1946ರಲ್ಲಿ ರಂಗಪ್ಪ–ಬಾಬಮ್ಮ ದಂಪತಿಗೆ ಜನಿಸಿದ ಸಂಜೀವಪ್ಪ ತನ್ನ 16ನೇ ವಯಸ್ಸಿನಲ್ಲಿ ಗದಗದ ಪುಟ್ಟರಾಜ ಗವಾಯಿಗಳ ವೀರೇಶ್ವರ ಪುಣ್ಯಾಶ್ರಮ ಸೇರಿ ಆರು ತಿಂಗಳು ಸಂಗೀತಾಭ್ಯಾಸ ಮಾಡಿ, ನಂತರ ನಾಟ್ಯಸಂಘ ಸೇರಿ ಚಿಕ್ಕಪುಟ್ಟ ಪಾತ್ರಗಳೊಂದಿಗೆ ಮುಖ್ಯ ಪಾತ್ರಕ್ಕೆ ಬಡ್ತಿ ಪಡೆದು, ಅಖಂಡ 45 ವರ್ಷಗಳ ಕಾಲ ಎಲ್ಲಬಗೆಯ ಪಾತ್ರಗಳಲ್ಲಿ ಅಭಿನಯಿಸಿ ಜನಮೆಚ್ಚುಗೆ ಪಡೆದಿದ್ದಾರೆ.

ನೆಲ್ಲೂರ ನಂಬೆಕ್ಕ, ಅಕ್ಕಮಹಾದೇವಿ, ಶ್ರೀಕೃಷ್ಣಗಾರುಡಿ, ಸತ್ಯಸಂಕಲ್ಪ, ರತ್ನಹಾರ, ತವರುಮನೆ, ಮಹಾಲಿಂಗೇಶ್ವರ ಮಹಾತ್ಮೆ, ಗವಿಸಿದ್ಧೇಶ್ವರ ಮಹಾತ್ಮೆ, ಮಲಮಗಳು, ಸುಖದ ಸುಪ್ಪತ್ತಿಗೆ, ಆದವಾನಿ ಲಕ್ಷ್ಮಮ್ಮ ಸೇರಿದಂತೆ 60ಕ್ಕೂ ಹೆಚ್ಚು ನಾಟಕಗಳ ಸಹಸ್ರಾರು ನಾಟಕಗಳಲ್ಲಿ ಅಭಿನಯಿಸಿ ದಂತೆಕತೆಯೂ ಆಗಿದ್ದಾರೆ. ಈಗವರು ನಿವೃತ್ತ ಜೀವನವನ್ನು ತಮ್ಮ ಊರಿನಲ್ಲಿ ಕಳೆಯುತ್ತಿದ್ದಾರೆ.

ಅಂಧ, ಅನಾಥರಿಗೆ ಕಲಾಶ್ರಯ ನೀಡಿದ ಪುಟ್ಟರಾಜ ಗವಾಯಿ (ಅಜ್ಜನವರ) ಕಂಪನಿಯಲ್ಲಿ ಸುದೀರ್ಘ ಅವಧಿ ಸಲ್ಲಿಸಿದ ಸೇವೆಗಾಗಿ ಸಂಜೀವಪ್ಪ ಅವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಶಿವಣ್ಣ ಅರಳಿಹೊಂಡ

ಗ್ರಾಮೀಣ ರಂಗಭೂಮಿಯಲ್ಲಿ ಪೌರಾಣಿಕ ನಾಟಕಗಳ ಕಲಾಕೇಸರಿ ಎಂದೇ ಬಿರುದಾಂಕಿತರಾಗಿರುವ ಶಿವಣ್ಣ ಅವರ ಮೂಲ ಹೆಸರು ಶಿವಪ್ಪ ಭರಮಪ್ಪ ಅದರಗುಂಚಿ. ನಟನೆ, ನಿರ್ದೇಶನದ ಜತೆಗೆ ನಾಟಕಗಳನ್ನು ಸಂಘಟಿಸುವ ಕೆಲಸದಲ್ಲಿ ನಿರತರಾಗಿರುವ ಇಂತಹ ರಂಗ ಪರಿಚಾರಕರೇ ಗ್ರಾಮೀಣ ರಂಗಭೂಮಿಯ ಜೀವಾಳ.

ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕು ಅರಳಿಹೊಂಡದಲ್ಲಿ 1952ರಲ್ಲಿ ಭರಮಪ್ಪ ಅದರಗುಂಚಿ– ಲಕ್ಷ್ಮವ್ವ ದಂಪತಿಗೆ ಜನಿಸಿದ ಶಿವಣ್ಣ, ಎಸ್‌ಎಸ್‌ಎಲ್‌ಸಿ ನಂತರ ಕುಲಕಸುಬು ಕೃಷಿಗೆ ಶರಣಾದರೂ– ಅವರ ಆತ್ಮ ಸದಾ ಮಿಡಿದದ್ದು, ಕ್ರಿಯಾಶೀಲವಾಗಿದ್ದು ಗ್ರಾಮೀಣ ಹವ್ಯಾಸಿ ನಾಟಕಗಳಿಗೆ. ಶ್ರೀ ಬಸವೇಶ್ವರ ನಾಟ್ಯ ಸಂಘ ಅರಳಿಹೊಂಡ, ಶ್ರೀ ಗುರು ಸೋಮಲಿಂಗೇಶ್ವರ ಸಾಂಸ್ಕೃತಿಕ ಸಂಘ ಕಲಘಟಗಿ ಸ್ಥಾಪಿಸಿ, ಜಗಜ್ಯೋತಿ ಬಸವೇಶ್ವರ, ರೇಣುಕಾ ಮಹಾತ್ಮೆ, ವೀರ ಸಿಂಧೂರ ಲಕ್ಷ್ಮಣ, ರಕ್ತರಾತ್ರಿ, ಕಲಿತ ಕಳ್ಳ, ಗೌಡ್ರ ಗದ್ಲ, ಬಡವ ಬದುಕಲೇಬೇಕು, ಕಿತ್ತೂರು ಚೆನ್ನಮ್ಮ ಮುಂತಾದ ಹತ್ತಾರು ನಾಟಕಗಳ 300ಕ್ಕೂ ಅಧಿಕ ಪ್ರಯೋಗಗಳಿಂದ ಕಳೆದ 37 ವರ್ಷಗಳ ಕಾಲ ತಮ್ಮ ಭಾಗದ ಹಳ್ಳಿ ನಾಟಕಗಳನ್ನು ಜೀವಂತವಾಗಿ ಇಟ್ಟಿದ್ದಾರೆ.

ಗ್ರಾಮೀಣ ಭಾಗದಲ್ಲಿ ನೆಲೆಸಿರುವ ಇಂತಹ ಕಲಾಪೋಷಕರಿಂದಲೇ ಗ್ರಾಮೀಣ ರಂಗಭೂಮಿ ಜೀವಂತವಾಗಿದೆ. ಗ್ರಾಮೀಣ ರಂಗಭೂಮಿಗೆ ಇವರು ನೀಡಿದ ಕೊಡುಗೆ ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.





## ಪುಷ್ಪಾ ಸಾಗರ

ಸುಳ್ಳ ದೇಸಾಯಿಯವರ ಶ್ರೀಶೈಲ ಮಲ್ಲಿಕಾರ್ಜುನ ನಾಟ್ಯಸಂಘದಿಂದ ಆರಂಭಿಸಿ– ಚಿತ್ತರಗಿ, ಕಡಪಟ್ಟಿ, ಗುಡಿಗೇರಿ, ಕಮತಗಿ, ಮಾಲತಿ ಸುಧೀರರ ಕಲಾವೈಭವದವರೆಗೆ 15ಕ್ಕೂ ಹೆಚ್ಚು ಕರ್ನಾಟಕದ ಪ್ರತಿಷ್ಠಿತ ನಾಟಕ ಕಂಪನಿಗಳ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿ ಹೆಸರು ಮಾಡಿರುವ ಹಿರಿಯ ನಟಿ ಪುಷ್ಪಾ ಸಾಗರ.

ಸಾಗರದ ಎಚ್.ಎನ್.ಹಿರಿಯಣ್ಣಯ್ಯ– ಶಶಿಕಲಾ ದಂಪತಿಗೆ 1955ರಲ್ಲಿ ಜನಿಸಿದ ಪುಷ್ಪಾ ಬಾಲ ಕಲಾವಿದೆಯಾಗಿ ನಾಟಕ ಕಂಪನಿ ಪ್ರವೇಶ ಪಡೆದರು. ಈ ಮಧ್ಯೆ ನೃತ್ಯ ಕಲಿತು ಪಾತ್ರಕ್ಕೆ ಅಗತ್ಯವಿರುವ ನೃತ್ಯ ಮಾಡಿ ಸೈ ಎನಿಸಿಕೊಂಡರು. ನಾಯಿಗಳಿವೆ ಎಚ್ಚರಿಕೆ, ಚೆನ್ನಪ್ಪ ಚೆನ್ನಗೌಡ, ಧರ್ಮದೇವತೆ, ಬಸ್‌ಹಮಾಲಿ, ಮಗಳಾಗಿ ಬಂದಳು ಸೊಸೆಯಾಗಿ ನಿಂತಳು–ಮುಂತಾದ 40ಕ್ಕೂ ಹೆಚ್ಚು ನಾಟಕಗಳ ಸಹಸ್ರಾರು ಪ್ರದರ್ಶನಗಳಲ್ಲಿ ಕಳೆದ 45 ವರ್ಷಗಳಿಂದ ಅಭಿನಯಿಸಿರುವ ಹೆಸರಾಂತ ನಟಿ.

ಪತಿ ಎಚ್.ಟಿ.ಪ್ರಕಾಶ್ ಅವರೂ ವೃತ್ತಿರಂಗಭೂಮಿಯ ಪ್ರಸಿದ್ಧ ಕಲಾವಿದರು. ದಂಪತಿಗಳು ಅರಿಕೇಶ್ವರ ನಾಟ್ಯಸಂಘ ಎಂಬ ಸ್ವಂತ ನಾಟಕ ಕಂಪನಿಯನ್ನು ಕೆಲಕಾಲ ನಡೆಸಿದರು.

ವೃತ್ತಿ ರಂಗಭೂಮಿಗೆ ಪುಷ್ಪಾ ಅವರು ಸಲ್ಲಿಸಿದ ಸೇವೆ ಪರಿಗಣಿಸಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.





## ಉಮಾರಾಣಿ ಇಳಕಲ್

ವೃತ್ತಿ ನಾಟಕ ಕಂಪನಿ ಹಾಗೂ ಗ್ರಾಮೀಣ ನಾಟಕಗಳ ಹೆಸರಾಂತ ನಟಿ ಉಮಾರಾಣಿ ಬಾರಿಗಿಡದ ಅವರು. ಸಹಜ ಅಭಿನಯದ ಮೂಲಕ ಹಾಸ್ಯದ ಹೊನಲು ಹರಿಸುವ ಪ್ರಖ್ಯಾತ ಹಾಸ್ಯನಟಿ ಇವರು. ನೀನೂ ಸಾಹುಕಾರನಾಗು, ಮುದುಕನ ಮದುವೆ, ಮಂಗಲಾ ನನ್ನ ಅತ್ತಿಗೆ, ದಾರಿದೀಪ, ಆಶಾಲತಾ ಮುಂತಾದ ಸಾಮಾಜಿಕ ನಾಟಕಗಳ ಹಾಸ್ಯ ಪಾತ್ರಕ್ಕೆ ಇವರು ಎಷ್ಟು ಹೆಸರುವಾಸಿಯೋ; ರಕ್ತರಾತ್ರಿ, ಸತ್ಯ ಹರಿಶ್ಚಂದ್ರ, ಹೇಮರೆಡ್ಡಿ ಮಲ್ಲಮ್ಮ, ಸಂಗೊಳ್ಳಿ ರಾಯಣ್ಣ, ಸುರಪುರ ವೆಂಕಟಪ್ಪ ನಾಯಕ, ಗಂಡುಗಲಿ ಕುಮಾರರಾಮದಂತಹ ಪೌರಾಣಿಕ, ಐತಿಹಾಸಿಕ ನಾಟಕಗಳ ಹಾಸ್ಯ ಪಾತ್ರಗಳಲ್ಲೂ ಪ್ರೇಕ್ಷಕರನ್ನು ಮನದಣಿಯೆ ನಗಿಸಿದ ಅಸಾಧಾರಣ ನಟಿ ಇವರು.

ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕು ಇಳಕಲ್‌ನ ಹನುಮಂತಪ್ಪ– ಸುಲೋಚನ ದಂಪತಿಗೆ 1968ರಲ್ಲಿ ಜನಿಸಿದ ಉಮಾರಾಣಿ 9ನೇ ತರಗತಿಯ ನಂತರ ರಂಗಭೂಮಿಗೆ ತಮ್ಮನ್ನು ಸಂಪೂರ್ಣ ಅರ್ಪಿಸಿಕೊಂಡಿದ್ದಾರೆ. ಹುನಗುಂದದ ಧ್ರುವರಂಗ, ಇಳಕಲ್ ಸ್ನೇಹರಂಗ, ಮರಿಯಮ್ಮನಹಳ್ಳಿ ಮಹಿಳಾ ವೃತ್ತಿ ರಂಗ ಕಲಾವಿದರ ಸಂಘ, ಬಳ್ಳಾರಿ ಶರಣರ ಕಲಾಬಳಗ ಸೇರಿದಂತೆ ಹತ್ತಾರು ಹವ್ಯಾಸಿ ತಂಡಗಳ ಜೋಕುಮಾರಸ್ವಾಮಿ, ತಲೆದಂಡ, ತುಘಲಕ್, ಪ್ರಮೀಳಾ ರಾಜ್ಯ ಮುಂತಾದ ಪ್ರಯೋಗಶೀಲ ನಾಟಕಗಳಲ್ಲಿ ನಟಿಸಿ, ರಂಗದ ಎಲ್ಲ ಪ್ರಕಾರಗಳಲ್ಲಿ ನಟಿಸಿದ ಕೆಲವೇ ನಟಿಯರ ಪೈಕಿ ಒಬ್ಬರೆನಿಸಿಕೊಂಡಿದ್ದಾರೆ. ಇಳಕಲ್‌ನಲ್ಲಿ ನಾಟ್ಯರಾಣಿ ಕಲಾಸಂಘ ಆರಂಭಿಸಿ ಹಲವಾರು ನಾಟಕಗಳನ್ನು ಮಹಿಳೆಯರಿಗೆ ನಿರ್ದೇಶಿಸಿದ್ದಾರೆ. ಜೋಗತಿ(ಮಂಗಳಮುಖಿ) ಅವರ ಜತೆಗೇ ವಾಸಿಸಿ, ಅವರಿಗೆ ನಾಟಕಗಳ ತರಬೇತಿ ನೀಡಿ ಪ್ರದರ್ಶಿಸಿದ ಸಾಹಸ ಇವರದು. ಪಿ.ಬಿ.ಧುತ್ತರಗಿ ಟ್ರಸ್ಟ್ ಸದಸ್ಯರಾಗಿಯೂ ಅವರು ನೇಮಕಗೊಂಡಿದ್ದಾರೆ.

ವೃತ್ತಿ, ಹವ್ಯಾಸಿ ಹಾಗೂ ಗ್ರಾಮೀಣ ರಂಗಭೂಮಿಗೆ ಸಲ್ಲಿಸಿದ ಸೇವೆಗಾಗಿ ಇಳಕಲ್ ಉಮಾರಾಣಿ ಅವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ವಿಶಾಲಾಕ್ಷಿ ರಾಮದುರ್ಗ

ನಾಯಕಿಯಾಗಿ, ಖಳನಾಯಕಿಯಾಗಿ ಹಲವು ನಾಟಕ ಕಂಪನಿಗಳಲ್ಲಿ ಅಭಿನಯಿಸಿ ಹೆಸರು ಮಾಡಿರುವ ಹಿರಿಯ ಕಲಾವಿದೆ ವಿಶಾಲಾಕ್ಷಿ ರಾಮದುರ್ಗ ಅವರು– ಸ್ಫುಟವಾದ ಸಂಭಾಷಣೆ, ಔಚಿತ್ಯಪೂರ್ಣ ಅಭಿನಯಕ್ಕೆ ಹೆಸರುವಾಸಿ.

ಬೆಳಗಾವಿ ಜಿಲ್ಲೆ ರಾಮದುರ್ಗದಲ್ಲಿ 1954ರಲ್ಲಿ ಜಯಣ್ಣ– ಸುವರ್ಣ ರಾಮದುರ್ಗ ದಂಪತಿಗೆ ಜನಿಸಿದ ವಿಶಾಲಾಕ್ಷಿ ನಾಲ್ಕನೇ ತರಗತಿ ವಿದ್ಯಾಭ್ಯಾಸದ ನಂತರ ತಮ್ಮ ಹತ್ತನೇ ವಯಸ್ಸಿನಲ್ಲಿ ಸುಳ್ಳ ದೇಸಾಯಿ ನಾಟಕ ಕಂಪನಿಯಲ್ಲಿ ಬಾಲ ಸಿದ್ಧರಾಮನ ಪಾತ್ರದ ಮೂಲಕ ರಂಗ ಪ್ರವೇಶ ಮಾಡಿದರು. ಲಕ್ಷ್ಮೇಶ್ವರ ಶಿವಯ್ಯ, ಎಲಿವಾಳ ಸಿದ್ದಯ್ಯ, ದುರ್ಗಾದಾಸ್ ಮಾರ್ಗದರ್ಶನದಲ್ಲಿ ನಟಿಯಾಗಿ ರೂಪುಗೊಂಡರು. ಅರಿಶಿಣಗೋಡಿ, ಗುಡಿಗೇರಿ ಬಸವರಾಜ, ತಾಳಿಕೋಟಿ ರಾಜು, ಮಾಲತಿ ಸುಧೀರ್ ಹಾಗೂ ಕೇಬಿ ಮಾಸ್ತರ್ ಅವರ ನಾಟಕ ಕಂಪನಿಗಳಲ್ಲಿ ಎಲ್ಲ ಬಗೆಯ ಪಾತ್ರಗಳಲ್ಲಿ ನಟಿಸಿ ಹೆಸರು ಮಾಡಿದರು.

ಗೌರಿ ಹೋದಳು ಗಂಗೆ ಬಂದಳು –ಗೌರಿ, ನನ್ನವರು ನನ್ನ ಹಡೆದವರು –ಚೆನ್ನಿ, ಹೆಣ್ಣಿಗೆ ಹಟ ಗಂಡಿಗೆ ಚಟ – ಗಂಗಾ, ಧರ್ಮಾಧಿಕಾರಿ– ಭರಣಿ ಸೇರಿದಂತೆ 50ಕ್ಕೂ ಅಧಿಕ ನಾಟಕಗಳ ಸಹಸ್ರಾರು ಪ್ರದರ್ಶನಗಳಲ್ಲಿ ಅರ್ಧ ಶತಮಾನದಿಂದ ನಟಿಯಾಗಿ ದೊಡ್ಡ ಹೆಸರು ಮಾಡಿದ್ದಾರೆ.

ವೃತ್ತಿ ರಂಗಭೂಮಿಗೆ ವಿಶಾಲಾಕ್ಷಿ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಚಂದ್ರಕಾಂತ ಎಂ.

ರಂಗ ಸಜ್ಜಿಕೆ, ಉಡುಗೆ ತೊಡಿಗೆ, ಬೆಳಕು ಮತ್ತು ರಂಗ ನಿರ್ವಹಣೆಯನ್ನು ಅತೀವ ಕಾಳಜಿಯಿಂದ ನಿರ್ವಹಿಸುವ ಚಂದ್ರಕಾಂತನಂತಹ ನೇಪಥ್ಯ ಕಲಾವಿದರು ಹವ್ಯಾಸಿ ತಂಡಗಳ ಜೀವಾಳ ಇದ್ದಂತೆ. ಬೆಂಗಳೂರು ರಂಗಸಂಪದದ ಖ್ಯಾತಿ ಹೆಚ್ಚಲು ತೆರೆಯ ಹಿಂದೆ ನಿಷ್ಠೆಯಿಂದ ದುಡಿದ ಇಂತಹವರ ಶ್ರಮ ಇದೆ.

ಸಾಕ್ಷಿಕಲ್ಲು, ತ್ರಿಶಂಕು, ಸನ್ನಿವೇಶ, ಚಿದಂಬರ ರಹಸ್ಯ, ಮಹಾಚೈತ್ರ, ಮಂಟೇಸ್ವಾಮಿ ಕಥಾ ಪ್ರಸಂಗ, ತಬರ, ವೈಶಾಖ ಮುಂತಾದ ನಾಟಕಗಳಲ್ಲಿ ನಟನೆಯ ಜತೆಗೆ ಸಂಘಟನೆಯಲ್ಲೂ ಚಂದ್ರಕಾಂತ ಸದಾಮುಂದು.

ಮೈಸೂರಿನ ಮಹದೇವಯ್ಯ– ಜಯಲಕ್ಷ್ಮಮ್ಮ ದಂಪತಿಗೆ 1954ರಲ್ಲಿ ಜನಿಸಿದ ಚಂದ್ರಕಾಂತ, ಡಿಪ್ಲೊಮಾ ಪದವಿ ನಂತರ ಬಿಇಎಂಎಲ್(ಬೆಮೆಲ್)ನಲ್ಲಿ ನೌಕರರಾಗಿ ಸೇವೆ ಸಲ್ಲಿಸುತ್ತಲೇ ರಂಗಭೂಮಿಗೆ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಬೆಮೆಲ್ ಲಲಿತ ಕಲಾ ಸಂಘದ ಕಾರ್ಯದರ್ಶಿಯಾಗಿ ಕೈಗಾರಿಕಾ ನಾಟಕಗಳನ್ನು ಯಶಸ್ವಿಯಾಗಿ ಸಂಘಟಿಸಿದ್ದಾರೆ.

ರಂಗಸಂಪದದ ಜತೆಗೆ ಬೆಂಗಳೂರಿನ ಬೆನಕ, ಸೂತ್ರಧಾರ, ನಟರಂಗ, ಸಮುದಾಯ, ಕಲಾಗಂಗೋತ್ರಿ, ಸ್ಪಂದನ, ಪ್ರಯೋಗರಂಗ ತಂಡಗಳಲ್ಲೂ ಚಂದ್ರಕಾಂತ ನಟರಾಗಿ, ನೇಪಥ್ಯ ಕಲಾವಿದರಾಗಿ ಹೆಸರು ಮಾಡಿದ್ದಾರೆ. ನಾಟಕ ಅಕಾಡೆಮಿ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ.

ನಗರದ ಹವ್ಯಾಸಿ ರಂಗಭೂಮಿಗೆ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ರಾಜಮ್ಮ ದಾವಣಗೆರೆ

ದಾವಣಗೆರೆ ರಾಜಮ್ಮ ಹಾಗೂ ಗುಡಗೇರಿ ರಾಜಮ್ಮ ಎಂದೇ ಖ್ಯಾತರಾದ ಎ.ರಾಜಲಕ್ಷ್ಮಿ, ಯಾವುದೇ ಪಾತ್ರಕ್ಕೆ ಒಪ್ಪುವ ಶರೀರ ಮತ್ತು ಶಾರೀರ ಹೊಂದಿದ್ದು ವೃತ್ತಿರಂಗಭೂಮಿಯ ಪ್ರಖ್ಯಾತ ತಾರೆ ಎನಿಸಿದ್ದಾರೆ.

ಮೈಸೂರಿನಲ್ಲಿ ಕ್ಯಾಂಪ್ ಮಾಡಿದ್ದ ಸುಬ್ಬಯ್ಯ ನಾಯ್ಡು ನಾಟಕ ಕಂಪನಿಗೆ ಕೇರಳದಿಂದ ವಲಸೆ ಬಂದು ಸೇರಿಕೊಂಡ ಅನಂತರಾಮ ಐಯ್ಯರ್– ಸುಬ್ಬಲಕ್ಷ್ಮಮ್ಮ ದಂಪತಿಗೆ 1948ರಲ್ಲಿ ಜನಿಸಿದ ರಾಜಲಕ್ಷ್ಮಿ ಅವರು, ಮಾಸ್ಟರ್ ಹಿರಣ್ಣಯ್ಯ ಮತ್ತು ಬಳ್ಳಾರಿ ಲಲಿತಮ್ಮ

ನಾಟಕ ಮಂಡಳಿಯಲ್ಲಿ ಬಾಲನಟಿಯಾಗಿ ಬಣ್ಣ ಹಚ್ಚಿದರು. ಕವಿ ಎಚ್.ಟಿ.ಮಹಾಂತೇಶ ಶಾಸ್ತ್ರಿ, ನಟ ಗೋಕಾಕ ಬಸವಣ್ಣೆಪ್ಪ ಅವರಿಂದ ನಟನೆಯ ತರಬೇತಿ ಪಡೆದು– ಗೋಕಾಕ ಕಂಪನಿಯ ಗಂಡನ ಮಾನ ನಾಟಕದ ಪ್ರಮುಖ ಪಾತ್ರದಲ್ಲಿ ನಟಿಸಿ ಸೈ ಎನಿಸಿಕೊಂಡು, ಮುಂದೆ ಜಮಖಂಡಿ ಅನಂತರಾಯರ ಕಂಪನಿಯಲ್ಲಿ ರಾಣಿ ಪಾತ್ರಗಳಿಗೆ ಬಡ್ತಿ ಪಡೆದರು.

ನಟ–ನಾಟಕಕಾರ ಓಬಳೇಶ್ ಕಂಪನಿಯ ಖಾದಿ ಸೀರೆ ನಾಟಕದ ಶಾಂತಲಾ ಪಾತ್ರ ಇವರನ್ನು ಖ್ಯಾತ ತಾರೆಯಾಗಿಸಿತು. ಕಾಕನೂರು ಕಂಪನಿಯ ಜೈ ಜವಾನ್ ಜೈ ಕಿಸಾನ್, ಸತಿ ಪತಿ, ದೇವರಿಲ್ಲದ ಗುಡಿ ನಾಟಕಗಳ ಪಾತ್ರಗಳ ಮೂಲಕ ಮನೆಮಾತಾದರು. ಗುಡಗೇರಿ ಬಸವರಾಜರ ಹೈಬ್ರಿಡ್ ಹೆಣ್ಣು ನಾಟಕ ದಾವಣಗೆರೆ ಕ್ಯಾಂಪಿನಲ್ಲಿ ಸತತ 1000 ಪ್ರಯೋಗ ಕಂಡು ದಾಖಲೆ ನಿರ್ಮಿಸಿತು.

ಈ ನಾಟಕದಲ್ಲಿ ಪ್ರಮುಖ ಪಾತ್ರ ವಹಿಸಿದ್ದ ರಾಜಮ್ಮ ಅವರು 'ದಾವಣಗೆರೆ ರಾಜಮ್ಮ' ಎಂದೇ ಹೆಸರಾದರು. ಗುಡಗೇರಿ ಕಂಪನಿಯಲ್ಲೇ ತಮ್ಮ ಜೀವನದ ಪ್ರಮುಖ ಆಯುಷ್ಯ ಕಳೆದ ಕಾರಣ 'ಗುಡಗೇರಿ ರಾಜಮ್ಮ' ಎಂದೂ ಪ್ರತೀತಿಯಾದರು.

ವೃತ್ತಿ ರಂಗಭೂಮಿಯಲ್ಲಿ ರಾಜಮ್ಮ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಚಿಂದೋಡಿ ಬಂಗಾರೇಶ್

ತಾತ ಮತ್ತು ತಂದೆ ಚಿಂದೋಡಿ ವೀರಪ್ಪಯ್ಯನವರ ಕೆಬಿಆರ್ ಡ್ರಾಮಾ ಕಂಪನಿಯಲ್ಲಿ ಲೋಕಶಿಕ್ಷಣಕ್ಕೆ ಕಣ್ಣು ತೆರೆದುಕೊಂಡ ಬಂಗಾರೇಶ್ ಹುಟ್ಟುನಟರು. ನಟರತ್ನ ಚಿಂದೋಡಿ ವೀರಪ್ಪ– ಸಾವಿತ್ರಮ್ಮ ದಂಪತಿಗೆ 1948ರಲ್ಲಿ ದಾವಣಗೆರೆಯಲ್ಲಿ ಜನಿಸಿದ ಬಂಗಾರೇಶ್, ತಂದೆ ಮಾರ್ಗದರ್ಶನದಲ್ಲಿ 1955ರಲ್ಲಿ ಎಂಟು ವರ್ಷದ ಬಾಲ ನಟನಾಗಿ ರಂಗಪ್ರವೇಶ ಮಾಡಿದರು. ಕೆಬಿಆರ್‌ನ ಆ ಕಾಲದ ಹೆಸರಾಂತ ಗುಣಸಾಗರಿ, ಅಭಿಜ್ಞಾನ ಶಾಕುಂತಲ ಸೇರಿದಂತೆ ಹಲವು ಪೌರಾಣಿಕ ನಾಟಕಗಳಲ್ಲಿ ಬಾಲ ನಟನಿಂದ ಪ್ರಮುಖ ಪಾತ್ರಗಳಿಗೆ ಕ್ರಮೇಣ ಬಡ್ತಿ ಪಡೆದರು.

ತಂದೆಯ ಉಸ್ತುವಾರಿ ವಹಿಸಿಕೊಂಡು ಮುಂದಿನ ದಿನಗಳಲ್ಲಿ ನಿರ್ದೇಶನದಲ್ಲಿ ತೊಡಗಿಸಿಕೊಂಡರು. ನಾಟಕ ಕಂಪನಿಯ ಏಳುಬೀಳಿನ ಆ ದಿನಗಳಲ್ಲಿ ಸಹೋದರ ಶ್ರೀಕಂಠೇಶ್ ಸೇರಿದಂತೆ ಇಡೀ ಕುಟುಂಬ ಅವರ ಜತೆಗಿತ್ತು, ಬಾಲನಟಿಯಾಗಿ ಬೆಳೆದು ಚಿತ್ರರಂಗದತ್ತ ಹೋಗಿದ್ದ ಅತ್ತೆ ಚಿಂದೋಡಿ ಲೀಲಾ ಮತ್ತೆ ಕೆಬಿಆರ್‌ಡ್ರಾಮಾ ಕಂಪನಿಗೆ ಮರಳಿದರು. ಅವರ ನೇತೃತ್ವದಲ್ಲಿ ಕಂಪನಿ ಉತ್ತರೋತ್ತರವಾಗಿ ಬೆಳೆಯಿತು. ಈ ಮಧ್ಯೆ ಬಂಗಾರೇಶ್ ಚಿತ್ರರಂಗದತ್ತ ವಾಲಿದ್ದರೂ ಸಹ, ಕಂಪನಿ ಬೆಳವಣಿಗೆಯ ಬೆನ್ನೆಲುಬಾಗಿ ಇದ್ದರು.

ದುಡುಕಿ ಹೋದ ಮಗ ಹುಡುಕಿ ಬಂದ ಸೊಸೆ, ಸಾಕ್ಷಿಗೆ ಬಂದ ಸಾವಿತ್ರಿ, ಧರ್ಮದ ದೌರ್ಜನ್ಯ, ಖಾದಿ ತೊಟ್ಟ ಹಾದಿ ಬಿಟ್ಟ ಸೇರಿದಂತೆ 25ಕ್ಕೂ ಅಧಿಕ ನಾಟಕಗಳನ್ನು ಬಂಗಾರೇಶ್ ತಮ್ಮ ಕಂಪನಿಗೆ ನಿರ್ದೇಶಿಸಿದರು. ಅವರ ನಿರ್ದೇಶನದ ಪೋಲೀಸನ ಮಗಳು ಬೆಂಗಳೂರು ಗುಬ್ಬಿ ವೀರಣ್ಣ ರಂಗಮಂದಿರದಲ್ಲಿ ದಾಖಲೆ ಪ್ರದರ್ಶನ ನೀಡಿತು. ಬಂಗಾರೇಶ್ ತಮ್ಮ ಶ್ರೀಕಂಠೇಶ್ ನೇತೃತ್ವದಲ್ಲಿ ಹಾಲಿ ನಡೆಯುತ್ತಿರುವ ಕೆಬಿಆರ್ ಕಂಪನಿಯಲ್ಲಿ ಬಂಗಾರೇಶ್ ರಚಿಸಿರುವ ಶಿರಡಿ ಸಾಯಿಬಾಬ ಯಶಸ್ವಿಯಾಗಿ ನಡೆಯುತ್ತಿದೆ.

ಬಂಗಾರೇಶ್ ನಿರ್ದೇಶಿಸಿದ ನಾಲ್ಕು ಚಿತ್ರಗಳಲ್ಲಿ ಗಾನಯೋಗಿ ಪಂಚಾಕ್ಷರಿ ಗವಾಯಿ ಚಿತ್ರ ರಂಗಭೂಮಿಗೆ ನೀಡಿದ ಕೊಡುಗೆಯೇ ಆಗಿದೆ. ಎರಡು ರಾಷ್ಟ್ರ, ನಾಲ್ಕು ರಾಜ್ಯ ಪ್ರಶಸ್ತಿಗಳನ್ನು ಈ ಚಿತ್ರ ಪಡೆದಿದೆ.

ಹೆಸರಾಂತ ನಟ– ಮಾಲೀಕರಾಗಿದ್ದ ತಮ್ಮ ತಂದೆ ನಟರತ್ನ ಚಿಂದೋಡಿ ವೀರಪ್ಪ ಅವರ ಹೆಸರಿನಲ್ಲಿ ಬಂಗಾರೇಶ್ ಅಕಾಡೆಮಿಯಲ್ಲಿ ದತ್ತಿ ಪುರಸ್ಕಾರ ಸ್ಥಾಪಿಸಿದ್ದಾರೆ. ವೃತ್ತಿ ರಂಗಭೂಮಿಗೆ ಬಂಗಾರೇಶ್ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಕೃಷ್ಣೇಗೌಡ

ಕೃಷ್ಣೇಗೌಡ ಹೆಸರಾಂತ ರಂಗನಟರು. ಏಕಲವ್ಯ, ಟಿಪ್ಪು ಸುಲ್ತಾನ್, ಸುರಪುರ ವೆಂಕಟಪ್ಪ ನಾಯಕ, ಹರಕೆಯ ಕುರಿ, ಗೌಡ್ರಗದ್ದ, ಶನಿ ಪ್ರಭಾವ, ಅಂಗೂಲಿ ಮಾಲ, ರಕ್ತರಾತ್ರಿ, ಅಪ್ಪಾವಂಕ ಸೇರಿದಂತೆ 120ಕ್ಕೂ ಹೆಚ್ಚು ನಾಟಕಗಳಲ್ಲಿ ನಟಿಸಿರುವ ಕೃಷ್ಣೇಗೌಡ, ತಮ್ಮ ನಟನೆಗಾಗಿ 35ಕ್ಕೂ ಹೆಚ್ಚು ನಾಟಕಗಳಲ್ಲಿ ಬಹುಮಾನ ಪಡೆದಿದ್ದಾರೆ.

ಸರ್ಕಾರದ ಅಭಿವೃದ್ಧಿ ಯೋಜನೆಗಳ ಕುರಿತು ರೇಡಿಯೋ ನಾಟಕಗಳನ್ನು ರಚಿಸಿದ್ದಾರೆ. ಕಿರುತೆರೆ, ಹಿರಿತೆರೆಯಲ್ಲಿ ನಟನಾಗಿ, ನಿರ್ಮಾಪಕನಾಗಿ, ನಿರ್ದೇಶಕನಾಗಿ ತೊಡಗಿಸಿಕೊಂಡಿರುವ ಕೃಷ್ಣೇಗೌಡ, ಬಣ್ಣದ ಹೆಜ್ಜೆ, ಅಮಾಸ ಚಲನಚಿತ್ರಗಳಿಗೆ ರಾಜ್ಯ ಪ್ರಶಸ್ತಿ ಪಡೆದಿದ್ದಾರೆ.

ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕು ಗೊಟ್ಟೀಕೆರೆಯಲ್ಲಿ 1969ರಲ್ಲಿ ಮಾಯಣ್ಣಗೌಡ ಎಂಬುವರ ಪುತ್ರನಾಗಿ ಜನಿಸಿದ ಕೃಷ್ಣೇಗೌಡ, ಬಿ.ಕಾಂ.ವ್ಯಾಸಂಗದ ನಂತರ ನಾಟಕ, ಟಿವಿ, ಸಿನಿಮಾಗಳ ನಟನೆ, ನಿರ್ಮಾಣ, ನಿರ್ದೇಶನದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯಲ್ಲಿ ನಿರ್ಮಾಪಕ ವಲಯದ ಸದಸ್ಯನಾಗಿ, ಕನ್ನಡ ಚಲನಚಿತ್ರ ನಿರ್ಮಾಪಕರ ಸಾಂಸ್ಕೃತಿಕ ಸಂಘದಲ್ಲಿ ಕಾರ್ಯಕಾರಿ ಸಮಿತಿ ಸದಸ್ಯನಾಗಿ, ಒಕ್ಕಲಿಗರ ವೇದಿಕೆಯಲ್ಲಿ ಪ್ರಧಾನ ಕಾರ್ಯದರ್ಶಿಯಾಗಿ ಸಾರ್ವಜನಿಕ ರಂಗದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾರೆ.

ನಗರದ ಹವ್ಯಾಸಿ ರಂಗಭೂಮಿಗೆ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಸುಲೋಚನಾ ಮೈಸೂರು

ಹಳೆ ಮೈಸೂರು ಭಾಗದ ಶ್ರೀಕಂಠೇಶ್ವರ ನಾಟಕ ಮಂಡಳಿ, ಚಿತ್ರದುರ್ಗ ಓಬಳೇಶರ ಶ್ರೀ ಓಂಕಾರೇಶ್ವರ ನಾಟಕ ಸಂಘ, ಹಿರಣ್ಣಯ್ಯ ಮಿತ್ರಮಂಡಳಿಯ ವೈವಿಧ್ಯಮಯ ಪಾತ್ರಗಳಲ್ಲಿ ಹೆಸರು ಮಾಡಿರುವ ಸುಲೋಚನಾ ಅವರು, 1980ರಿಂದ ಮೈಸೂರಿನಲ್ಲಿ ನೆಲೆನಿಂತು ಗ್ರಾಮೀಣ ಮತ್ತು ಪಟ್ಟಣಗಳ ಹವ್ಯಾಸಿ ರಂಗ ತಂಡಗಳಲ್ಲಿ ಅಭಿನಯಿಸುವ ವೃತ್ತಿ ಕಲಾವಿದರಾಗಿದ್ದಾರೆ.

ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕು ಬಿಳಗಲಿ ಗ್ರಾಮದ ಶ್ಯಾನುಭೋಗ ಬೊಮ್ಮರಸಯ್ಯ– ಚಲುವಮ್ಮ ದಂಪತಿಗೆ 1949ರಲ್ಲಿ ಜನಿಸಿದ ಸುಲೋಚನಾ ಬಾಲಕಿಯಿದ್ದಾಗಲೇ ನಟನೆಯಿಂದ ಆಕರ್ಷಿತರಾಗಿ ಮೈಡದೇವ ಗವಾಯಿಗಳ ಕಂಪನಿ ಸೇರಿಕೊಂಡರು. ನಂತರ ಶ್ರೀಕಂಠ ಮೂರ್ತಿ ಹಾಗೂ ಓಬಳೇಶರ ಕಂಪನಿಗಳ ನಾಟಕಗಳ ಮೂಲಕ ಉತ್ತರ ಕರ್ನಾಟಕ ಸೇರಿದಂತೆ ರಾಜ್ಯದ ಹಲವೆಡೆ ನಡೆದ ಕ್ಯಾಂಪ್‌ಗಳಲ್ಲಿ ತಮ್ಮ ವೈವಿಧ್ಯಮಯ ಪಾತ್ರಗಳಿಂದ ಹೆಸರು ಮಾಡಿದರು.

ಸುಲೋಚನಾರ ಪತಿ ಕೆ.ಎಸ್.ನರಸಿಂಹಮೂರ್ತಿ ಹೆಸರಾಂತ ನಟರು. ಪತಿಯ ಅಕಾಲಿಕ ನಿಧನದ ನಂತರ ರಂಗವನ್ನು ತೊರೆಯದೆ ಸಂಘ ಸಂಸ್ಥೆಗಳ ನಾಟಕ ಪ್ರದರ್ಶನ, ರಸಮಂಜರಿ, ಸುಗಮ ಸಂಗೀತ, ಧ್ವನಿ ಬೆಳಕು ಕಾರ್ಯಕ್ರಮದ ಆಯೋಜಕರಾಗಿ; ಚಲನಚಿತ್ರ, ಧಾರಾವಾಹಿಗಳ ನಟಿಯಾಗಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು.

ವೃತ್ತಿ ಮತ್ತು ಹವ್ಯಾಸಿ ರಂಗಭೂಮಿಯಲ್ಲಿ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ರಾಮಚಂದ್ರಮೂರ್ತಿ ಎನ್.

ಪ್ರಸಾಧನ ಕಲಾವಿದನಾಗಿ ಬೆಂಗಳೂರಿನ ಹವ್ಯಾಸಿ ತಂಡಗಳಿಗೆ ರಾಮಚಂದ್ರಮೂರ್ತಿ ಅಚ್ಚುಮೆಚ್ಚು, ಅವರ ಈ ಕಲಾಯಾತ್ರೆಗೆ ಈಗಾಗಲೇ 60 ತುಂಬಿದೆ.

ಮೈಸೂರಿನ ಕೃಷ್ಣಮೂರ್ತಿ– ರುಕ್ಮಿಣಿಬಾಯಿ ದಂಪತಿಗೆ 1935ರಲ್ಲಿ ಜನಿಸಿದ ರಾಮಚಂದ್ರಮೂರ್ತಿ ಅವರಿಗೆ ಬೆಂಗಳೂರಿನ ತಮ್ಮ ಶಾಲಾ ದಿನಗಳಿಂದಲೇ ಸಿನಿಮಾದ ಹುಚ್ಚು ಹಿಡಿಯಿತು. 15 ವಯಸ್ಸಿನ ಬಾಲಕ ರೈಲ್ವೆ ಹಳಿ ಮಾರ್ಗ ಹಿಡಿದು ಹತ್ತಾರು ದಿನ ನಡೆದು ಹೋಗಿ ಮದ್ರಾಸ್ ತಲುಪಿ, ಅಲ್ಲಿನ ಹೆಸರಾಂತ ವಾಹಿನಿ ಸ್ಟುಡಿಯೋದಲ್ಲಿ ಮಹಾಸತಿ ಅನುಸೂಯ ಸಿನಿಮಾದ ಬಾಲಪಾತ್ರ ಪಾತ್ರ ಗಿಟ್ಟಿಸಿಕೊಂಡರು. ಸಿನಿಮಾದ ತಾಂತ್ರಿಕ ವಿಷಯಗಳು ಹಾಗೂ ಪ್ರಸಾಧನ ಕಲೆಯತ್ತ ಅವರ ಮನಸ್ಸು ಹರಿಯಿತು. ಅಲ್ಲಿ ಏನೂ ಗಿಟ್ಟದಾಗ ಬೆಂಗಳೂರಿಗೆ ವಾಪಸ್ ಬಂದು ಓದು ಮುಂದುವರಿಸಿ, ಗೆಳೆಯರೊಂದಿಗೆ ಕರ್ನಾಟಕ ಕಲಾಮಂಡಳಿ ಸ್ಥಾಪಿಸಿ, ಸಾಹಿತ್ಯ ಪರಿಷತ್ ಸಭಾಂಗಣದಲ್ಲಿ ನಾಟಕವಾಡಲು ಶುರುಮಾಡಿದರು.

ತಾವು ಪ್ರದರ್ಶಿಸುತ್ತಿದ್ದ ನಾಟಕಗಳಿಗೆ ತಾವೇ ತಯಾರಿಸಿದ ಓಪನ್ ಕಾಯಿಲ್ಡ್ ಡಿಮ್ಮರ್ ಉಪಯೋಗಿಸಿ ಬೆಳಕನ್ನು ಪರಿಣಾಮಕಾರಿಯಾಗಿ ಬಳಸಿದರು.

ಜೀವನ ನಿರ್ವಹಣೆಗೆ ದೂರದರ್ಶನದಲ್ಲಿ ಪ್ರಸಾಧನ ಕಲಾವಿದ, ಜತೆಗೆ ಎಲ್‌ಐಸಿ ಏಜೆಂಟ್. ಆದರೆ ಅವರು ತಮ್ಮ ಸೃಜನಶೀಲ ಪ್ರತಿಭೆಯನ್ನು ಧಾರೆ ಎರೆದದ್ದು ನಾಟಕದ ಪ್ರಸಾಧನ ಕಲೆಗೆ. ಹಾಗಾಗಿ ಪ್ರಸಾಧನ ಕಲೆಯಲ್ಲಿ ಅವರದೀಗ ದೊಡ್ಡ ಹೆಸರು.

ಪ್ರಸಾಧನ ಕಲೆಗೆ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2013ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಜಿ.ವಿ. ಕೃಷ್ಣ (ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿ)

ಗುಬ್ಬಿ ವೀರಣ್ಣ ನಾಟಕ ಕಂಪನಿಯ ಹೆಸರಾಂತ ನಟಿ, ಹರಿಕಥೆ ವಿದ್ವಾಂಸೆ ವೆಂಕಟೇಶಮ್ಮ ಹಾಗೂ ವೆಂಕಟರಮಣರೆಡ್ಡಿ ದಂಪತಿಗೆ 1945ರಲ್ಲಿ ಜನಿಸಿದ ಜಿ.ವಿ.ಕೃಷ್ಣ ಹುಟ್ಟುನಟ. 6 ತಿಂಗಳ ಮಗುವಿದ್ದಾಗಲೇ ತೊಟ್ಟಿಲ ಕೃಷ್ಣನಾಗಿ ರಂಗದ ಮೇಲೆ ಬಂದ ಜಿ.ವಿ.– ಮುಂದೆ ಒಂದು ವರ್ಷ, ಎರಡು ವರ್ಷ, ಐದು ವರ್ಷ ಹೀಗೆ ಆಯಾ ವಯಸ್ಸಿಗೆ ತಕ್ಕ ಬಾಲ ಪಾತ್ರ ಮಾಡುತ್ತ ನಟನೆಯನ್ನೇ ವೃತ್ತಿಯಾಗಿ ಸ್ವೀಕರಿಸಿದ್ದನ್ನು ಲೆಕ್ಕ ಹಾಕಿದರೆ ಅವರ

ರಂಗಯಾತ್ರೆಗೆ ಈಗ 68ರ ಹರೆಯ. ಗುಬ್ಬಿ ವೀರಣ್ಣ ಕಂಪನಿಯ ನಂತರ ಈ ಮಧ್ಯೆ ಸುಬ್ಬಯ್ಯ ನಾಯ್ಡು, ಮಾಸ್ಟರ್ ಹಿರಣ್ಣಯ್ಯ ಮಿತ್ರಮಂಡಳಿಯಲ್ಲೂ ನಟನಾಗಿ ಪರಿಣತಿ ಪಡೆದ ಕೃಷ್ಣ ತಮ್ಮ 30ನೇ ವಯಸ್ಸಿನಲ್ಲಿ ಜೆ.ವಿ.ಕೃಷ್ಣ ನಾಟಕ ಮಂಡಳಿ ಆರಂಭಿಸಿದರು. ಅದೆ ವೃತ್ತಿ ನಾಟಕ ತಂಡ ಎನ್ನಿ, ಹವ್ಯಾಸಿ ತಂಡ ಎನ್ನಿ, ಈಗಲೂ ಆ ಕಂಪನಿ ನಿಂತಿಲ್ಲ.

ಇತ್ತೀಚಿನ ವರ್ಷಗಳಲ್ಲಿ ಕೃಷ್ಣ ನಾಟಕಗಳಲ್ಲಿ ನಟಿಸುವುದು ಕಡಿಮೆ ಎನಿಸಿದರೂ, ಅವರ ಒಟ್ಟು ನಟನೆಯ ಆಯುಷ್ಯ 60 ವರ್ಷಕ್ಕೂ ಮಿಕ್ಕಿದೆ. 25 ಸಿನಿಮಾಗಳಲ್ಲೂ ನಟಿಸಿರುವ ಕೃಷ್ಣ, ವೃತ್ತಿ ರಂಗಭೂಮಿಯ ಹಲವಾರು ದಿಗ್ಗಜರೊಂದಿಗೆ ಅಭಿನಯಿಸಿದ್ದಾರೆ. ಗುಡಗೇರಿ ಬಸವರಾಜ, ಚಿಂದೋಡಿ ಲೀಲಾ, ಚಿಂದೋಡಿ ವೀರಪ್ಪ, ಕಲ್ಪನಾ ಅವರ ನಾಟಕ ಕಂಪನಿಗಳ ಪಾಲುದಾರರಾಗಿಯೂ ಅವರು ದುಡಿದಿದ್ದಾರೆ.

ಲವ ಕುಶ ಪಾತ್ರಗಳಿಂದ ಖ್ಯಾತರಾಗಿರುವ ಅವಳಿ ಸಹೋದರಿ ರಾಧಾ, ರುಕ್ಮಿಣಿ –ಇಬ್ಬರನ್ನೂ ಕೃಷ್ಣ ವರಿಸಿದ್ದಾರೆ. ರಾಧಾ ಯಾರು? ರುಕ್ಮಿಣಿ ಯಾರು? ಎಂದು ಗೊತ್ತು ಹಿಡಿಯಲಾಗದಷ್ಟು ಅವರ ಮಧ್ಯೆ ಹೋಲಿಕೆ ಇದೆ. ಚಲನಚಿತ್ರ ತಾರೆಯರಾದ ಶ್ರುತಿ, ಶರಣ್, ಗಾಯಕಿ ಉಷಾ –ಈ ಮೂವರು ರಾಧಾ, ರುಕ್ಮಿಣಿಯರ ಮಕ್ಕಳು. ಯಾರು ಯಾರ ಮಕ್ಕಳು ಎಂಬ ಗುಟ್ಟು ಇದುವರೆಗೂ ರಟ್ಟಾಗಿಲ್ಲ. ರಾಧಾ–ರುಕ್ಮಿಣಿ ಡಿಟ್ಟೊ ಒಂದೇ ತರ ಇದ್ದಾರೆ. ಕಳೆದ ವರ್ಷ ನಾಟಕ ಅಕಾಡೆಮಿಯು ಈ ಇಬ್ಬರು ಸಹೋದರಿಯರಿಗೆ ಒಂದೇ ಪ್ರಶಸ್ತಿ ಎಂದು ಪರಿಗಣಿಸಿ ನೀಡಿದೆ.

ಇಷ್ಟು ಸುಧೀರ್ಘ ಅವಧಿಯಲ್ಲಿ ಕೃಷ್ಣ ಹಾಸ್ಯ ಪಾತ್ರಗಳಲ್ಲಿ ಹೆಚ್ಚಾಗಿ ಅಭಿನಯಿಸಿ ಹಲವು ಬಿರುದು, ಸನ್ಮಾನಗಳನ್ನು ಪಡೆದಿದ್ದಾರೆ. ಹಾಗಾಗಿ ನಾಟಕ ಅಕಾಡೆಮಿ ನೀಡುವ ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪುರಸ್ಕಾರ ಪ್ರಶಸ್ತಿ ಸಮಂಜಸವಾಗಿದೆ.

---



## ರಾಜಣ್ಣ ಜೇವರ್ಗಿ (ನಟರತ್ನ ಚಿಂದೋಡಿ ವೀರಪ್ಪ ದತ್ತಿ ಪುರಸ್ಕಾರ ಪ್ರಶಸ್ತಿ)

ಜೇವರ್ಗಿಯಲ್ಲಿ ಟೈಲರ್ ಆಗಿದ್ದ ರಾಜಣ್ಣನಿಗೆ ಓದುವ ಹುಚ್ಚು. ಅದು ಬರವಣಿಗೆಗೆ ಪ್ರೇರಣೆ ನೀಡಿತು. ನಾಟಕ ಬರೆದು ಕಂಪನಿಗಳ ಮಾಲೀಕರಿಗೆ ಕೊಟ್ಟರು. ಹಲವರು ಉದಾಸೀನ ತೋರಿದರು. ಮತ್ತೆ ಬರೆದರು... ಮತ್ತೆ ಕೊಟ್ಟರು... ಕೊನೆಗೂ ಶೇಖ್ ಮಾಸ್ತರ್, ಯಾಳವಾರ ಅವರು ತಮ್ಮ ಕಂಪನಿಗಳಲ್ಲಿ ರಾಜಣ್ಣ ಬರೆದುಕೊಟ್ಟ ನಾಟಕ ಆಡಿಸಿದರು. ಕಾಡಿ ಬೇಡಿ ನಾಟಕಗಳಲ್ಲಿ ಅಭಿನಯಿಸಿದರು. ಯಾಕೋ ಗಿಟ್ಟಲಿಲ್ಲ. ಟೈಲರ್ ಹುದ್ದೆಗೆ ಮರಳಿದರು. ಆದರೆ ನಾಟಕದ ಹುಚ್ಚು ಬಿಡಲಿಲ್ಲ.

ಅಖಂಡೇಶ್ವರ ಮಠದ ಶಾಂತಲಿಂಗ ಸ್ವಾಮಿಗಳು ಅಧ್ಯಾತ್ಮ ಪ್ರಚಾರಕ್ಕಾಗಿಯೇ ಸ್ವಯಂ ಜ್ಯೋತಿ ನಾಟ್ಯ ಸಂಘ ತೆರೆದಿದ್ದರು. ರಾಜಣ್ಣನ ಪ್ರತಿಭೆಗೆ ಅಲ್ಲಿ ಬೆಲೆ ಸಿಕ್ಕಿತು. ಆದರೆ ಕೆಲ ದಿನಗಳಲ್ಲಿಯೇ ಕಂಪನಿ ಮುಚ್ಚಿತು. ಮತ್ತೆ ನಾಟಕ ಕಂಪನಿ ಸೇರಿ ಅಭಿನಯ ವೃತ್ತಿ ಮುಂದುವರಿಸಲು ಆಗ ಪ್ರೇರಣೆ ನೀಡಿದವರು ಸ್ವತಃ ಡಾ.ಪುಟ್ಟರಾಜ ಗವಾಯಿಗಳು.

ಜೇವರ್ಗಿಯ ಬಾಲಯ್ಯ– ಚಂದ್ರಮ್ಮ ದಂಪತಿಗೆ 1960ರಲ್ಲಿ ಜನಿಸಿದ ರಾಜಣ್ಣನಿಗೆ ಹಾಡುಗಾರಿಕೆ ತಾಯಿಯಿಂದಲೇ ಬಳುವಳಿಯಾಗಿ ಬಂದಿತ್ತು. ಹಾಡು, ಅಭಿನಯ, ಬರವಣಿಗೆ ಅವರಿಗೆ ಒಗ್ಗಿತ್ತು. ಬಡತನದಲ್ಲೇ ಬೆಳೆದಿದ್ದ ಅವರು ಜೀವನದ ಭದ್ರತೆಗಿಂತ, ತಮ್ಮ ಪ್ರತಿಭೆಯನ್ನೇ ಹೆಚ್ಚು ನೆಚ್ಚಿಕೊಂಡರು. ಜೇವರ್ಗಿಯ ಮನೆಯನ್ನೇ ಮಾರಿ ವಿಶ್ವಜ್ಯೋತಿ ಶ್ರೀ ಪಂಚಾಕ್ಷರ ನಾಟ್ಯಸಂಘವನ್ನು 1989ರಲ್ಲಿ ಸ್ಥಾಪಿಸಿದರು. ಇಂದು ಕನ್ನಡದ ಪ್ರತಿಷ್ಠಿತ ನಾಟಕ ಕಂಪನಿಗಳ ಸಾಲಿಗೆ ಅದು ಸೇರಿದೆ. ರಾಜಣ್ಣ ರಚಿಸಿದ ನಾಟಕಗಳ ಪೈಕಿ ಕಾರ್ಗಿಲ್ ವೀರರು ನಾಟಕ ತನ್ನ ಪ್ರಸ್ತುತತೆಗಾಗಿ ಹೆಸರು ಮಾಡಿತು. ಕುಂಟ ಕೋಣ ಮೂಕ ಜಾಣ ಜನಪ್ರಿಯವಾಯಿತು.

ರಾಜಣ್ಣ ಸ್ವತಃ ಹಾಡುಗಾರರು, ಅವರ ಬಳಗದಲ್ಲಿ ಹೆಚ್ಚು ಹಾಡುಗಾರರೂ ಇದ್ದಾರೆ. ಪತ್ನಿ ಪ್ರೇಮಾ, ಮಗಳು ಸುಜಾತ ಹಾಡಬಲ್ಲರು. ಗಾಯನದ ಗುಂಗಿನಲ್ಲಿ, ಹಾಸ್ಯದ ಹೊನಲಿನಲ್ಲಿ ನಾಟಕವನ್ನು ಭಿನ್ನವಾಗಿ ಕಟ್ಟಿ

ಜನಪ್ರಿಯತೆಯ ತುಟ್ಟ ತುದಿಗೆ ರಾಜಣ್ಣ ಒಯ್ಯುತ್ತಾರೆ. ಕುಂಟ ಕೋಣ... ದಾವಣಗೆರೆಯಲ್ಲಿ ದಾಖಲೆಯ ಪ್ರದರ್ಶನ ನೀಡಿತು. ಅದರ ಬೆನ್ನಿಗೆ ಇಡೀ ರಂಗಮಂದಿರ ಸುಟ್ಟು ಭಸ್ಮವಾಯಿತು. ರಾಜಣ್ಣ ಇಂತಹ ಏಳುಬೀಳುಗಳನ್ನು ಸಾಕಷ್ಟು ಕಂಡಿದ್ದಾರೆ. ಅಳಿಯ ಪ್ರಶಾಂತ ಗುಬ್ಬಿ ಅವರಿಗೆ ತಮ್ಮ ಕಂಪನಿಯ ಶಾಖೆ ವಹಿಸಿಕೊಟ್ಟಿದ್ದಾರೆ. ಅದೂ ಲಾಭಕ್ಕಿಂತ ನಷ್ಟ ಅನುಭವಿಸಿದ್ದೇ ಹೆಚ್ಚು.

ಕಷ್ಟಗಳಲ್ಲಿ ಪಾಗಿ ಮುನ್ನಡೆದಿರುವ ರಾಜಣ್ಣ ತಮ್ಮ ವಿನಯದಿಂದಲೇ ಎಲ್ಲರನ್ನೂ ಗೆಲ್ಲುತ್ತಾರೆ. ಅದನ್ನು ನಾಟಕ ಕಂಪನಿಯ ಉಳಿವಿಗೆ ಬಳಸಿಕೊಳ್ಳುತ್ತಾರೆ. ಕಂಪನಿ ತನ್ನ ರಕ್ತದಲ್ಲಿಯೇ ಇದೆಯೋ ಏನೋ ಅನ್ನುವ ಹಾಗೆ ಮತ್ತೆ ಮತ್ತೆ ಅದರ ಉಳಿವಿಗೆ ಸಂಕಲ್ಪ ತೊಡುತ್ತಾರೆ.



# 2014ರ ಪ್ರಶಸ್ತಿ ವಿಜೇತರು



## ಲಕ್ಷ್ಮಿ ಚಂದ್ರಶೇಖರ್ (ಜೀವಮಾನ ರಂಗಸಾಧನೆ ಪ್ರಶಸ್ತಿ)

ನಟಿ, ನಿರ್ಮಾಪಕಿ, ನಿರ್ದೇಶಕಿಯಾಗಿ ಲಕ್ಷ್ಮಿ ಚಂದ್ರಶೇಖರ್ ಹವ್ಯಾಸಿ ರಂಗಭೂಮಿಗೆ ನೀಡಿರುವ ಕೊಡುಗೆ ದೊಡ್ಡದು. 15 ವರ್ಷ ಕಾಲ ದಿ ಹಿಂದೂ ಪತ್ರಿಕೆಯಲ್ಲಿ ನಾಟಕಗಳ ವಿಮರ್ಶೆ ಬರೆದು ಕನ್ನಡ ಹವ್ಯಾಸಿ ರಂಗಭೂಮಿಯನ್ನು ಹೊರಗಿನವರಿಗೆ ಪರಿಚಯಿಸಿದ್ದಾರೆ. ಲೇಖನ, ಪ್ರಬಂಧ ಆಧರಿಸಿಯೂ ನಾಟಕ ನಿರ್ಮಿಸಬಹುದು ಎಂಬುದನ್ನು ತೋರಿಸಿಕೊಟ್ಟ ಪ್ರಯೋಗಶೀಲ ವ್ಯಕ್ತಿ ಲಕ್ಷ್ಮಿ.

ಹಾಸನ ಜಿಲ್ಲೆ ಹೊಳೆನರಸೀಪುರದ ಎಚ್.ಎಸ್.ಕೃಷ್ಣಮೂರ್ತಿ– ಜಯಲಕ್ಷ್ಮಿ ದಂಪತಿಗೆ 1951ರಲ್ಲಿ ಜನಿಸಿದ ಲಕ್ಷ್ಮಿ ಅವರು, ಮೈಸೂರು ಮತ್ತು ಲೀಡ್ಸ್ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಸಾಹಿತ್ಯದಲ್ಲಿ ಎಂಎ ಪದವಿ ಪಡೆದು ಬೆಂಗಳೂರಿನ ಎನ್‌ಎಂಕೆಆರ್‌ವಿ ಕಾಲೇಜಿನಲ್ಲಿ ಇಂಗ್ಲಿಷ್ ಉಪನ್ಯಾಸಕಿಯಾಗಿದ್ದರು. ರಂಗಭೂಮಿಗೆ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಲು ಈ ಮಧ್ಯೆ ತಮ್ಮ ಹುದ್ದೆಗೆ ರಾಜೀನಾಮೆ ನೀಡಿದರು.

ಶಾಲೆ ಕಾಲೇಜು ದಿನಗಳಲ್ಲೇ ನಾಟಕದಲ್ಲಿ ಆಸಕ್ತಿ ಬೆಳೆಸಿಕೊಂಡ ಲಕ್ಷ್ಮಿ ಅವರು, ಸಮಾಜ ಬದಲಾವಣೆಗೆ ಬದ್ಧವಾದ ಸಮುದಾಯ ತಂಡದಲ್ಲಿ ನಟಿಯಾಗಿ ಗಂಭೀರವಾಗಿ ತೊಡಗಿಸಿಕೊಂಡರು. ಸತ್ಯು ನಿರ್ದೇಶನದ ಕುರಿ, ಅಂಕುರ್ ನಿರ್ದೇಶನದ ಸಂಸ್ಕಾರ, ಪ್ರಸನ್ನರ ದಂಗೆಯ ಮುಂಚಿನ ದಿನಗಳು; ಇಂಗ್ಲಿಷ್‌ನಲ್ಲಿ ವೆಲ್ ಆಫ್ ದಿ ಸೇಂಟ್ಸ್, ಸ್ನೇಕ್‌ಪಿಟ್ ಸೇರಿದಂತೆ 25 ನಾಟಕಗಳ ನೂರಾರು ಪ್ರದರ್ಶನಗಳಲ್ಲಿ ಪ್ರಮುಖ ಪಾತ್ರ ವಹಿಸಿದರು.

ಕ್ರಿಯೇಟಿವ್ ಥಿಯೇಟರ್ ಎಂಬ ಸ್ವಂತ ತಂಡ ಕಟ್ಟಿ ವಿಭಿನ್ನ ಪ್ರಯೋಗಗಳಲ್ಲಿ ಈಗ ಅವರು ನಿರತರಾಗಿದ್ದಾರೆ. ಸ್ವಂತ ರಚನೆಯ ಹೆಣ್ಣಲ್ಲವೆ? 190 ಪ್ರದರ್ಶನ; ಕಂಬಾರರ ಕಾದಂಬರಿ ಆಧರಿಸಿದ ಸಿಂಗಾರೆವ್ವ ಮತ್ತು ಅರಮನೆ 95 ಏಕವ್ಯಕ್ತಿ ಪ್ರದರ್ಶನಗಳನ್ನು ಇಂಗ್ಲಿಷ್ ಮತ್ತು ಕನ್ನಡದಲ್ಲಿ ದೇಶ ವಿದೇಶಗಳಲ್ಲಿ ಅವರು ನೀಡಿದ್ದಾರೆ. ಟಿ.ಸುನಂದಮ್ಮ ಅವರ ಹಾಸ್ಯ ಪ್ರಬಂಧಗಳನ್ನು ಆಧರಿಸಿ ಹೀಗಾದ್ರೆ ಹೇಗೆ? ಆದದ್ದೆಲ್ಲಾ ಒಳಿತೆ..., ಜಿ.ಪಿ.ರಾಜರತ್ನ ಕೃತಿಗಳನ್ನು ಆಧರಿಸಿ ರತ್ನನ ಪ್ರಪಂಚ ನಾಟಕ ನಿರ್ಮಿಸಿದ್ದಾರೆ. ಕನ್ನಡದ ಇನ್ನೂ ಅನೇಕ ಕತೆ, ಕಾದಂಬರಿ ಆಧರಿಸಿ ನಾಟಕಕ್ಕೆ ರೂಪಾಂತರಿಸಿ ನಿರ್ಮಿಸಿ ಪ್ರಯೋಗಿಸುವ ಮೂಲಕ ಹವ್ಯಾಸಿ ರಂಗಭೂಮಿಯನ್ನು ವೈವಿಧ್ಯತೆಯಿಂದ ಶ್ರೀಮಂತಗೊಳಿಸಿದ್ದಾರೆ.

ದಿ ಹಿಂದೂ, ದಿ ಎಕನಾಮಿಕ್ ಟೈಮ್ಸ್, ದಿ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಗಳಿಗೆ ವಿಶೇಷವಾಗಿ ಕನ್ನಡ ರಂಗಭೂಮಿ ಬಗ್ಗೆ ನಿರಂತರವಾಗಿ ಬರೆದಿದ್ದಾರೆ. ಅನುವಾದಗಳನ್ನು ಮಾಡಿದ್ದಾರೆ. ಬರವಣಿಗೆ, ನಟನೆ, ನಿರ್ಮಾಣ, ನಿರ್ದೇಶನ –ಹೀಗೆ ರಂಗದ ಬಹು ಆಯಾಮಗಳಲ್ಲಿ ತೊಡಗಿಕೊಂಡ ಬಹುರೂಪಿ ಲಕ್ಷ್ಮಿ ಚಂದ್ರಶೇಖರ್. ಕನ್ನಡ ಹವ್ಯಾಸಿ ರಂಗಭೂಮಿಗೆ ಲಕ್ಷ್ಮಿ ಚಂದ್ರಶೇಖರ್ ನೀಡಿದ ಕೊಡುಗೆಯನ್ನು ಮನ್ನಿಸಿ, ಕರ್ನಾಟಕ ನಾಟಕ ಅಕಾಡೆಮಿಯು 2014ರ ರಂಗಸಾಧನೆ ಗೌರವ ಪ್ರಶಸ್ತಿ ನೀಡುತ್ತಿದೆ.



## ಡಿ.ಎಚ್. ಕೋಲಾರ

ಹವ್ಯಾಸಿ ಮತ್ತು ವೃತ್ತಿ ಶೈಲಿಯನ್ನು ಹದವಾಗಿ ಬೆರೆಸಿದ ಅಪರೂಪದ ನಟ ಡೋಂಗ್ರಿ ಹುಸೇನಸಾಬ ಕೋಲಾರ ಅವರು. ಬಸವಣ್ಣ, ಅರ್ಜುನ, ದುಷ್ಯಂತ, ಸಿಂಧೂರ ಲಕ್ಷ್ಮಣದಂತಹ ಪೌರಾಣಿಕ– ಚಾರಿತ್ರಿಕ ಪಾತ್ರಗಳಲ್ಲಿ ಎಷ್ಟು ಅಚ್ಚುಕಟ್ಟೋ– ಅಷ್ಟೇ ಪ್ರತಿಭೆಯನ್ನು ಸಾಂಬಶಿವ ಪ್ರಹಸನ, ತ್ರೀ ಸಿಸ್ಟರ್ಸ್, ಅರಗಿನ ಬೆಟ್ಟ, ಆದೂ ನಂದೆ ಇದೂ ನಂದೆ, ಗಂಡ ಇಲ್ಲದ ಗರತಿ –ಮುಂತಾದ ಹವ್ಯಾಸಿ ಹಾಗೂ ವೃತ್ತಿ ನಾಟಕಗಳ ಪ್ರಮುಖ ಪಾತ್ರಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ವಿಜಯಪುರದಲ್ಲಿ 1961ರಲ್ಲಿ ಹುಸೇನ್ ಸಾಬ್–ಬಿಶಾ ಬೇಗಂ ದಂಪತಿಗೆ ಜನಿಸಿದ (ಹಸನ್) ಡೋಂಗ್ರಿ ಹದಿಹರೆಯದ ದಿನಗಳಲ್ಲೇ ಎಲ್ಲ ಪ್ರಕಾರದ ನಾಟಕಗಳಲ್ಲಿ ಅಭಿನಯಿಸತೊಡಗಿದರು. ಬಿ.ಎ.ನಂತರ ನೀನಾಸಂನಲ್ಲಿ ನಾಟಕ ಡಿಪ್ಲೊಮಾ ಪದವಿ ಪಡೆದು ನಾಟಕಕ್ಕೇ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡರು.

1978ರಲ್ಲಿ ಜಲಜಮಿತ್ರ ಕಲಾವೇದಿಕೆ, 2000ನೇ ಇಸ್ವಿಯಲ್ಲಿ ರಂಗ ಮೇಳ ಕಲಾಸಂಸ್ಥೆ ಸ್ಥಾಪಿಸಿ– ರಂಗ ಶಿಬಿರ, ನಾಟಕ ಪ್ರದರ್ಶನ, ಮಕ್ಕಳ ಶಿಬಿರವನ್ನು ನಿರಂತರವಾಗಿ ನಡೆಸುತ್ತ ಬಂದಿದ್ದಾರೆ. ಸರ್ಕಾರ, ಸಂಘ ಸಂಸ್ಥೆಗಳ ಜನಪರ ಆಶಯಗಳನ್ನು ಜನರಿಗೆ ತಲುಪಿಸಲು ಬೀದಿ ನಾಟಕಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ನೀನಾಸಂ, ಶಿವಸಂಚಾರ, ಜಮುರಾ ಮುಂತಾದ ರೆಪರ್ಟರಿ (ಸಂಚಾರಿ ನಾಟಕ ತಂಡ)ಗಳ ನಾಟಕ ಪ್ರದರ್ಶನಗಳಿಗೆ ಅನುವು ಮಾಡಿಕೊಟ್ಟಿದ್ದಾರೆ. 20ಕ್ಕೂ ಅಧಿಕ ನಾಟಕಗಳನ್ನು ನಿರ್ದೇಶಿಸಿರುವ ಡಿಎಚ್ ಕೋಲಾರ ರಂಗಭೂಮಿಯ ಬಹುಮುಖ ಪ್ರತಿಭೆ.

ಹವ್ಯಾಸಿ, ಅರೆವೃತ್ತಿ ರಂಗಭೂಮಿಗೆ ಅವರು ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.





## ವೈ.ಡಿ. ಬದಾಮಿ

ಯಲ್ಲಪ್ಪ ದೇವಪ್ಪ ಬದಾಮಿ ಹವ್ಯಾಸಿ ರಂಗಭೂಮಿಯ ಹೆಸರಾಂತ ರಂಗ ನಿರ್ದೇಶಕರು. ಆಕರ್ಷಕವಾಗಿ ನಾಟಕವನ್ನು ಕಟ್ಟಿಕೊಡುವಲ್ಲಿ ಅವರು ಸಿದ್ಧಹಸ್ತರು. ವಿಜಯಪುರದಿಂದ ಸಾಣೇಹಳ್ಳಿಯವರೆಗೆ ಅವರ ಕಾರ್ಯಕ್ಷೇತ್ರ ವಿಸ್ತರಿಸಿದೆ.

ವಿಜಯಪುರದಲ್ಲಿ ದೇವಪ್ಪ– ಯಮುನಾಬಾಯಿ ದಂಪತಿಗೆ 1964ರಲ್ಲಿ ಜನಿಸಿದ ಯಲ್ಲಪ್ಪ, ಕನ್ನಡ ಸಾಹಿತ್ಯದಲ್ಲಿ ಎಂ.ಎ., ನಾಟಕದಲ್ಲಿ ಡಿಪ್ಲೊಮಾ ಪದವಿ ಪಡೆದು, ನೀನಾಸಂ ತಿರುಗಾಟದ ನಾಟಕಗಳ ತಮ್ಮ ನಟನೆಯ ಮೂಲಕ ನಾಡಿನ ರಂಗಾಸಕ್ತರ ಗಮನ ಸೆಳೆದರು. ನಂತರ ಶಿವಕುಮಾರ ಕಲಾಸಂಘದಲ್ಲಿ ನಟ, ನಿರ್ದೇಶಕ, ಸಂಘಟಕರಾಗಿ ಸಾಣೇಹಳ್ಳಿಯಲ್ಲಿ ನೆಲೆಸಿದರು.

ನೀನಾಸಂನಲ್ಲಿ ತಮ್ಮ ಸಹಪಾಠಿಯಾಗಿದ್ದ ಅದೇ ಊರಿನ ಮಂಜುಳಾ ಅವರನ್ನು ವರಿಸಿದರು. ದಂಪತಿ ಪೂರ್ಣಾವಧಿ ರಂಗಭೂಮಿಗೆ ಸಮರ್ಪಿಸಿಕೊಂಡ ನಂತರ ಬದಾಮಿ ತಮ್ಮ ಕಾರ್ಯಕ್ಷೇತ್ರ ವಿಸ್ತರಿಸಿಕೊಂಡು– ನಾಡಿನ ನಾಲ್ಕಾರು ತಂಡಗಳಿಗೆ ‘ಉರಿಲಿಂಗ ಪೆದ್ದಿ’, ‘ಅಪ್ಪ’, ‘ಮಹಾಬೆಳಗು’, ‘ಸೂಳೆ ಸಂಕವ್ವ’, ‘ದಿವ್ಯಾಂಬರಿ’, ‘ರಂಗ ಪುರಂದರ’, ‘ಗಾನಯೋಗಿ ಪಂಚಾಕ್ಷರಿ’, ‘ನೀಲಿ ಕುದುರೆ’, ‘ಹೂ ಹುಡುಗಿ’, ‘ಕದಡಿದ ನೀರು’ ಸೇರಿದಂತೆ 60ಕ್ಕೂ ಹೆಚ್ಚು ಹಾಗೂ 40ಕ್ಕೂ ಹೆಚ್ಚು ಮಕ್ಕಳ ನಾಟಕಗಳನ್ನು ನಿರ್ದೇಶಿಸಿ ದೊಡ್ಡ ಹೆಸರು ಮಾಡಿದ್ದಾರೆ. ದೂರದರ್ಶನ, ಬೀದಿ ನಾಟಕಗಳನ್ನು ನಿರ್ದೇಶಿರುವ ಬದಾಮಿ 1,500ಕ್ಕೂ ಹೆಚ್ಚು ರಂಗ ರೂಪಕಗಳನ್ನು ನಿರ್ದೇಶಿಸಿದ್ದಾರೆ. ಹತ್ತಾರು

ರಂಗ ಶಿಬಿರಗಳನ್ನು ಯಶಸ್ವಿಯಾಗಿ ನಿಭಾಯಿಸಿದ್ದಾರೆ. ಸಾಣೇಹಳ್ಳಿಯ ಭಾರತ್ ಸಂಚಾರ ಹಿಂದಿ ನಾಟಕಗಳ ಸಂಘಟನೆ ನಿರ್ದೇಶನದ ಹೊಣೆ ಹೊತ್ತುಕೊಂಡು ಒರಿಸ್ಸಾ, ಮಧ್ಯಪ್ರದೇಶ, ಡೆಹ್ರಾಡೂನ್, ಪುಣೆ, ಗೋವಾ ಮುಂತಾದ ದೇಶದ ಹಲವೆಡೆ ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

ಹವ್ಯಾಸಿ ರಂಗಭೂಮಿಗೆ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ವಂದನಾ ಜಿ.

ಹೆಸರಾಂತ ವೃತ್ತಿ ರಂಗಭೂಮಿ ಕಲಾವಿದರಾದ ನೀಲಕಂಠಪ್ಪ ಮಾಸ್ತರ್ ಮತ್ತು ಜಿ.ಎಸ್.ಅಂಜಲಿದೇವಿ ದಂಪತಿಗೆ ಜನಿಸಿದ ವಂದನಾ ಹುಟ್ಟು ಕಲಾವಿದೆ. ಕಳೆದ ನಾಲ್ಕು ದಶಕಗಳಿಂದ ರಾಯಚೂರು, ಕೊಪ್ಪಳ, ಬಳ್ಳಾರಿ, ಗದಗ, ದಾವಣಗೆರೆ ಜಿಲ್ಲೆಗಳ ಗ್ರಾಮೀಣ ಪೌರಾಣಿಕ ನಾಟಕಗಳಲ್ಲಿ ಅವರು ದೊಡ್ಡ ಹೆಸರು ಮಾಡಿದ್ದಾರೆ.

ಗದಗದಲ್ಲಿ 1964ರಲ್ಲಿ ಜನಿಸಿದ ವಂದನಾ ಎಸ್‌ಎಸ್‌ಎಲ್‌ಸಿ ಶಿಕ್ಷಣದ ನಂತರ ತಾಯಿಯ ಮಾರ್ಗದರ್ಶನದಿಂದ ಹಳ್ಳಿಯ ನಾಟಕಗಳಲ್ಲಿ ಅಭಿನಯಿಸುವ ವೃತ್ತಿ ಕಲಾವಿದೆಯಾದರು. ಈ ಮಧ್ಯೆ ಅರಿಷಿಣಗೋಡಿ, ಧುತ್ತರಗಿ, ಗುಡಗೇರಿ ಬಸವರಾಜ, ವೀರೇಶ್ವರ ನಾಟ್ಯ ಸಂಘದಲ್ಲಿ ಕಲಾವಿದೆಯಾಗಿ ವೃತ್ತಿ ರಂಗಭೂಮಿ ಅಭಿನಯ ಶೈಲಿಯ ಎಲ್ಲ ಪಟ್ಟುಗಳನ್ನೂ ಕರಗತ ಮಾಡಿಕೊಂಡರು. ಮಾತಂಗ ಕನ್ಯ, ರಕ್ತರಾತ್ರಿ, ಕಿತ್ತೂರು ಚೆನ್ನಮ್ಮ, ಅಶ್ವಮೇಧ, ಕುರುಕ್ಷೇತ್ರ, ಅಣ್ಣ ತಂಗಿ, ಚಿಕ್ಕಸೊಸೆ, ಚಿತ್ರಾಂಗದಾ, ಮಲಮಗಳು, ಬೆಳ್ಳಿಚುಕ್ಕಿ ಮುಂತಾದ ನಾಟಕಗಳ ಪ್ರಮುಖ ಪಾತ್ರಗಳ ಜತೆಗೆ ಎಲ್ಲಬಗೆಯ ಪಾತ್ರಗಳಲ್ಲೂ ಅಭಿನಯಿಸಿ ದೊಡ್ಡ ಹೆಸರು ಮಾಡಿದ್ದಾರೆ.

ಪಾತ್ರಕ್ಕೆ ತಕ್ಕಷ್ಟು ಹಾಡುಬಲ್ಲ ಅನೇಕರಿದ್ದಾರೆ. ಆದರೆ ಅದಕ್ಕೂ ಮಿಗಿಲಾಗಿ ರಂಗಗೀತೆ ಹಾಡುವ ವಂದನಾ ತಮ್ಮ ಖಡಕ್ ಶೈಲಿಯ ಪಾತ್ರಗಳಿಂದಲೂ ಜನಮನ ಸೂರೆಗೊಂಡಿದ್ದಾರೆ.

ಗ್ರಾಮೀಣ ರಂಗಭೂಮಿಯಲ್ಲಿ ಅವರು ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಮೇಜರ್ ಬಸವರಾಜ ಮಳಗಿ

ಇವರು ಎನ್‌ಸಿಸಿಯಲ್ಲಿ ಮಾತ್ರವಲ್ಲ, ನಾಟಕದಲ್ಲೂ ಮೇಜರ್. ಹಾಗಾಗಿ ಮೇಜರ್ ಬಸವರಾಜ ಮಳಗಿ ಇವರಿಗೆ ಅನ್ವರ್ಥನಾಮ. ನಟನಾಗಿ, ನಾಟಕಕಾರನಾಗಿ, ಸಂಗೀತ ಹಾಗೂ ನಾಟಕ ನಿರ್ದೇಶಕನಾಗಿ ನಾಟಕದಲ್ಲೂ ಇವರದು ಮೇಜರ್ ಪಾತ್ರ.

ನೀಲಕಂಠಪ್ಪ ಮಳಗಿ– ಅಂಬಮ್ಮ ದಂಪತಿಗೆ 1943ರಲ್ಲಿ ರಾಣೆಬೆನ್ನೂರು ತಾಲ್ಲೂಕು ಚಿಕ್ಕಮಾಗೂರ ಗ್ರಾಮದಲ್ಲಿ ಜನಿಸಿದ ಬಸವರಾಜ, ಶಾಲಾ ಕಾಲೇಜು ದಿನಗಳಿಂದಲೇ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂಘಟಿಸುವತ್ತ ಒಲವು ಬೆಳೆಸಿಕೊಂಡರು. ಬಿ.ವಿ.ಕಾರಂತ ನಿರ್ದೇಶನದ ಕಿಂಗ್ ಲಿಯರ್ ನಾಟಕದಲ್ಲಿ ಲಿಯರ್ ಪಾತ್ರದ ಮೂಲಕ ಗಮನ ಸೆಳೆದ ಮೇಜರ್, ಔರಂಗಜೇಬನ ಅಂತಿಮ ಯಾತ್ರೆ, ನರಗುಂದ ಮುತ್ತಿಗೆ, ಬೆಳಕಿನೆಡೆಗೆ, ರಕ್ತಾಕ್ಷಿ, ಚಿತ್ರಾಂಗದ ನಾಟಕಗಳಲ್ಲಿ ಮನೋಜ್ಞ

ಅಭಿನಯ ನೀಡಿದರು. ಕಿತ್ತೂರ ಕೇಸರಿ ವೀರರಾಣಿ ಚೆನ್ನಮ್ಮ, ರಾಮಾಯಣ ದೃಶ್ಯಾವಳಿ, ರಜಪೂತ ರತ್ನ ಸೊಹ್ರಾಬ್ ರುಸ್ತುಮ್ ಮುಂತಾದ ನಾಟಕಗಳನ್ನು ರಚಿಸಿ, ನಿರ್ದೇಶಿಸಿರುವ ಮೇಜರ್– ಕಲಾಕಿರಣ ಶಿವಮೊಗ್ಗ ಹಾಗೂ ಕುವೆಂಪು ವಿಶ್ವವಿದ್ಯಾಲಯ ತಂಡ ಕಟ್ಟಿ ನಿರಂತರವಾಗಿ ನಾಟಕಗಳನ್ನು ಪ್ರದರ್ಶಿಸಿದ್ದಾರೆ.

ಕುವೆಂಪು ವಿಶ್ವವಿದ್ಯಾಲಯ ಸ್ನಾತಕೋತ್ತರ ಅಧ್ಯಯನ ಕೇಂದ್ರದ ಮುಖ್ಯಸ್ಥರಾಗಿ ನಿವೃತ್ತರಾಗಿರುವ ಮೇಜರ್, ಎನ್‌ಸಿಸಿಯಲ್ಲಿ ಸಕ್ರಿಯರಾಗಿದ್ದರು. ಗಣರಾಜ್ಯೋತ್ಸವದ ದಿನ ದೆಹಲಿಯಲ್ಲಿ ನಡೆಯುವ ಎನ್‌ಸಿಸಿ ಶಿಬಿರದ ನಾಯಕರಾಗಿ 16 ವರ್ಷಗಳ ಕಾಲ ಗೋವಾ– ಕರ್ನಾಟಕ ಸಂಯುಕ್ತ ರಾಜ್ಯಗಳ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಸಂಘಟಿಸಿ ಪ್ರಧಾನಿಗಳಿಂದ ಮೆಚ್ಚುಗೆ ಪಡೆದಿದ್ದಾರೆ.

ಹಾವೇರಿಯ ಅವರ ನೀಲಾಂಬಿಕಾ ಮನೆ ಸಂಗೀತ ಮತ್ತು ಪರಿಕರಗಳ ಕಲಾಶಾಲೆಯಾಗಿದೆ. 50ಕ್ಕೂ ಹೆಚ್ಚು ವಾದ್ಯಗಳನ್ನು ಅವರು ಸಂಗ್ರಹಿಸಿದ್ದಾರೆ.  ಹವ್ಯಾಸಿ ರಂಗಭೂಮಿಗೆ ಮೇಜರ್ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಸೋಗಿ ಬಿ. ನಾಗರತ್ನಮ್ಮ

ಸೋಗಿ ರತ್ನಮ್ಮ ಎಂದೇ ಹೆಸರಾಗಿರುವ ಬಿ.ನಾಗರತ್ನಮ್ಮ ಮಧ್ಯ ಕರ್ನಾಟಕದ ಗ್ರಾಮೀಣ ಭಾಗದ ಹೆಸರಾಂತ ವೃತ್ತಿ ನಟಿ. ಪೌರಾಣಿಕ, ಸಾಮಾಜಿಕ ನಾಟಕಗಳ ಎಲ್ಲ ಬಗೆಯ ಪಾತ್ರಗಳು ಹಾಗೂ ಕೆಲವು ದೊಡ್ಡಾಟಗಳಲ್ಲೂ ನಟಿಸಿ, ನರ್ತಿಸಿ ಹೆಸರು ಮಾಡಿದ್ದಾರೆ.

ಬಳ್ಳಾರಿ ಜಿಲ್ಲೆ ಹೂವಿನ ಹಡಗಲಿ ತಾಲ್ಲೂಕು ಬಸಾಪುರದ ತುಮನೆಪ್ಪ ಮತ್ತು ಕಾಳಮ್ಮ ದಂಪತಿಗೆ 1968ರಲ್ಲಿ ಜನಿಸಿದ ರತ್ನಮ್ಮ ಹತ್ತನೇ ವಯಸ್ಸಿನಲ್ಲಿ ಖಿರೋಖಿರ ಹವ್ಯಾಸಿ ನಾಟಕ, ಮುಂದೆ ದಕ್ಷಬ್ರಹ್ಮ ದೊಡ್ಡಾಟ, ಮಲಮಗಳು ಕಂಪನಿ ಶೈಲಿಯ ನಾಟಕಗಳಲ್ಲಿ ಅಭಿನಯಿಸಿ ಗಮನ ಸೆಳೆದರು. ತಮ್ಮ 15ನೇ ವಯಸ್ಸಿನಲ್ಲಿ ಉತ್ತಂಗಿಯಲ್ಲಿ ವೀರ ಅಭಿಮನ್ಯು ನಾಟಕದ ಉತ್ತರೆ ಪಾತ್ರದಲ್ಲಿ ನಟಿಸಿದ ನಂತರ ಅವರ ಆತ್ಮವಿಶ್ವಾಸ ಗರಿಗಟ್ಟಿತು. ಅಲ್ಲಿಂದ ಹಿಂತಿರುಗಿ ನೋಡಿದ್ದೇ ಇಲ್ಲ.

ಬಳ್ಳಾರಿ ಜಿಲ್ಲೆಯ ಹಿರಿಯ ಕಲಾವಿದರಾದ ಸುಭದ್ರಮ್ಮ ಮನ್ಸೂರು, ಮರಿಯಮ್ಮನಹಳ್ಳಿ ನಾಗರತ್ನಮ್ಮ, ಎಸ್.ರೇಣುಕ ಅವರ ಮಾರ್ಗದರ್ಶನದಲ್ಲಿ ಕುರುಕ್ಷೇತ್ರ, ಉತ್ತರಭೂಪ, ಹರಿಶ್ಚಂದ್ರ, ವಿಜಯನಗರ ಸಾಮ್ರಾಜ್ಯ, ನಾಗಲಿಂಗ, ಶರೀಫ ಮುಂತಾದ ಪೌರಾಣಿಕ ನಾಟಕಗಳ ಎಲ್ಲ ಪಾತ್ರಗಳಲ್ಲಿ ಅಭಿನಯಿಸಿ ಹೆಸರು ಮಾಡಿದರು. ಈ ಮಧ್ಯೆ ಬೆಳವಿಗಿ, ಕುಮಾರಸ್ವಾಮಿ, ಕಡಪಟ್ಟಿ ಪ್ರಕಾಶ್, ಸೂಡಿ ಶೇಖರಯ್ಯ, ಕರೀಂಸಾಬ್, ಹಂಬನಾಳ ಕರಿಯಪ್ಪ, ಆನವಟ್ಟಿ ರಾಜಣ್ಣ ಮುಂತಾದ ನಾಟಕ ಕಂಪನಿಗಳಲ್ಲೂ ಕೆಲ ದಿನ ನಟಿಸಿ ಅಭಿನಯದಲ್ಲಿ ಮತ್ತಷ್ಟು ಪಳಗಿದರು.

ಬಯಲಾಟದ ಕುಣಿತ, ಹಾಡುಗಳನ್ನು ಕಲಿತಿರುವ ರತ್ನಮ್ಮ ತಮ್ಮದೇ ಆದ ದೊಡ್ಡಾಟ ತಂಡ ಕಟ್ಟಿಕೊಂಡು ಹಲವೆಡೆ ಕಾರ್ಯಕ್ರಮಗಳನ್ನು ನೀಡಿದ್ದಾರೆ.

ಹವ್ಯಾಸಿ ರಂಗಭೂಮಿಗೆ ಸೋಗಿ ಬಿ.ನಾಗರತ್ನಮ್ಮ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಗೋಪಾಲಕೃಷ್ಣ ದೇವರು ಭಟ್ಟ

ಹೊನ್ನಾವರ ತಾಲ್ಲೂಕು ಕೆಕ್ಕಾರು ಗ್ರಾಮದ ಕೃಷಿಕರು ಗೋಪಾಲಕೃಷ್ಣ ಭಟ್ಟರು. ತಮ್ಮ ಊರನ್ನೇ ಅವರು ನಾಟಕದ ಪ್ರಯೋಗ ಶಾಲೆಯಾಗಿಸಿಕೊಂಡರು. ಸತ್ಯ ಘಟನೆಯೊಂದನ್ನು ಆಧರಿಸಿ ರಚಿಸಿ– ನಿರ್ದೇಶಿಸಿದ 'ಸಾವಾದ ಕೊಲೆ' ಒಂದು ಆಂದೋಲನವನ್ನೇ ರೂಪಿಸಿತು. ಸಿದ್ಧಿ ವಿನಾಯಕ ಯುವಕ ಸಂಘದಿಂದ ನಿರ್ಮಾಣವಾದ ಈ ನಾಟಕ ಸುತ್ತಲಿನ ಊರುಗಳಲ್ಲಿ ನೂರಾರು ಪ್ರದರ್ಶನ ಕಂಡಿತು. ಆರೋಪಿಗೆ ಶಿಕ್ಷೆಯಾಗುವವರೆಗೆ ನಾಟಕದ ಅಭಿಯಾನ ನಿಲ್ಲಲಿಲ್ಲ. ನಾಟಕ ಎಷ್ಟು ಪರಿಣಾಮಕಾರಿ  ಎಂಬುದಕ್ಕೆ ಇದು ಅತ್ಯುತ್ತಮ ಉದಾಹರಣೆ.

ಕೆಕ್ಕಾರು ಗ್ರಾಮ ಹಾಗೂ ಸಮೀಪದ ಬುಡಕಟ್ಟು ಜನಾಂಗ ಸೇರಿದಂತೆ ಸುಮಾರು 300 ಜನರನ್ನು ಕಲೆಹಾಕಿ ಸಂಪೂರ್ಣ ರಾಮಾಯಣ ನಾಟಕ ಮಾಡಿಸಿದರು. ಚಿರಂಜೀವಿ ಎಂಬ ನಾಟಕ ಬರೆದು ನಿರ್ದೇಶಿಸಿದರು. ತಮ್ಮ ಭಾಗದಲ್ಲಿ ಆಗುವ ಎಲ್ಲ ನಾಟಕಗಳಿಗೆ ಆಧಾರಸ್ತಂಭವಾದ ಭಟ್ಟರು, ಹೊನ್ನಾವರ ಕಾಲೇಜಿನಲ್ಲಿ ಸಂಕ್ರಾಂತಿ ನವೀನ ನಾಟಕ ಪರಿಚಯಿಸಿದರು. ಹೊಸ ಅಲೆ ನಾಟಕ ಪ್ರಯೋಗಗಳಿಗೆ ಕಾರಣರಾದರು. ಅತಿ ಹೆಚ್ಚು ನಾಟಕಗಳಿಗೆ ರಂಗಸಜ್ಜಿಕೆ ನಿರ್ಮಿಸಿದರು. ವಸ್ತ್ರಾಲಂಕಾರ, ವರ್ಣಾಲಂಕಾರದಲ್ಲೂ ಅವರು ನಿಪುಣರು. ಕೆಕ್ಕಾರುನಲ್ಲಿ ಗ್ರಾಮಸ್ಥರ ಸಹಕಾರದಿಂದ ರಂಗಮಂದಿರ ನಿರ್ಮಿಸಿದ್ದಾರೆ. ರಂಗಭೂಮಿಯತ್ತ ಯುವಕರನ್ನು ಆಕರ್ಷಿಸಿದ್ದಾರೆ. ಗ್ರಾಮೀಣ ರಂಗಭೂಮಿಗೆ ಗೋಪಾಲಕೃಷ್ಣ ಭಟ್ಟರು ನೀಡಿದ ಕೊಡುಗೆ ದೊಡ್ಡದು.

1952ರಲ್ಲಿ ದೇವರು ಭಟ್ಟ – ಲಕ್ಷ್ಮೀ ದಂಪತಿಗೆ ಜನಿಸಿದ ಗೋಪಾಲಕೃಷ್ಣ ಅವರು ಕೃಷಿಯ ಜತೆಗೆ ಜೀವನ ನಿರ್ವಹಣೆಗೆ ಆಶ್ರಯಿಸಿದ್ದು ಮಣ್ಣಿನ ಮೂರ್ತಿ, ಜಲವರ್ಣ ತೈಲವರ್ಣ ಚಿತ್ರ ಹಾಗೂ ಪೆನ್ಸಿಲ್ ಚಿತ್ರಗಳ ತಯಾರಿ. ಆದರೆ ಅವರ ಬದ್ಧತೆ ಸಂಪೂರ್ಣ ರಂಗಭೂಮಿಗೆ. ಗ್ರಾಮೀಣ ರಂಗಭೂಮಿಗೆ ಗೋಪಾಲಕೃಷ್ಣ ಭಟ್ಟರು ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.





## ಕೆ.ಆರ್. ಸುಮತಿ

ಮೈಸೂರಿನ ಕೆ.ಆರ್.ಸುಮತಿ ಹೆಸರಾಂತ ರಂಗ ನಿರ್ದೇಶಕಿ. ಸಾಹೇಬರು ಬರುತ್ತಾರೆ, ಕೆರೆಗೆ ಹಾರ, ಈಡಿಪಸ್, ದ್ಯಾವನೂರು, ಚಿತ್ರಪಟ ರಾಮಾಯಣ ಸೇರಿದಂತೆ 20ಕ್ಕೂ ವಿಭಿನ್ನ ರಂಗ ಪ್ರಯೋಗಗಳನ್ನು ನಿರ್ದೇಶಿಸಿದ್ದಾರೆ.

ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕು ತಲವಾಟ ಗ್ರಾಮದ ಕೆ.ರಾಮಚಂದ್ರಯ್ಯ–ಭಾಗೀರಥಮ್ಮ ದಂಪತಿಗೆ 1962ರಲ್ಲಿ ಜನಿಸಿದ ಸುಮತಿ, ನೀನಾಸಂ ಡಿಪ್ಲೊಮಾ ಹಾಗೂ ದೆಹಲಿ ರಾಷ್ಟ್ರೀಯ ನಾಟಕ ಶಾಲೆ ಪದವೀಧರರು. ಕೇಂದ್ರ ಸರ್ಕಾರದ ಸಂಸ್ಕೃತಿ ಇಲಾಖೆ ವತಿಯಿಂದ ಕನ್ನಡ ರಂಗಭೂಮಿ ವಿನ್ಯಾಸದ ಬೆಳವಣಿಗೆ (1950–90) ಅಧ್ಯಯನ ಮಾಡಿರುವ ಸುಮತಿ, ಕಥೆಯ ನಾಟಕೀಕರಣದ ಕುರಿತು ಸಂಶೋಧನೆ ಮತ್ತು ಪ್ರಯೋಗ ಮಾಡಿದ್ದಾರೆ.

ಮೈಸೂರು ವಿಶ್ವವಿದ್ಯಾಲಯದ ಲಲಿತ ಕಲಾ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿರುವ ಸುಮತಿ ಅವರು, ರಾಜ್ಯದ ನಾನಾಕಡೆ ಕಾಲೇಜು ಹಾಗೂ ಮಕ್ಕಳ ರಂಗ ಶಿಬಿರ ಸಂಘಟಿಸಿ ನಿರ್ದೇಶಿಸಿದ್ದಾರೆ. ಅಕ್ಕಮಹಾದೇವಿ ವಚನ ಆಧರಿಸಿ ಕಲ್ಲರಳಿ ಹೂವಾಗಿ; ಜಿಎಸ್ಎಸ್ ಕಾವ್ಯದ ಯಾವ ಹಾಡ ಹಾಡಲಿ ಕವನ ಆಧರಿಸಿ ಕಾವ್ಯ ರಂಗ ಪ್ರಯೋಗ ಮಾಡಿದ್ದಾರೆ. ಕುವೆಂಪು ಪ್ರಬಂಧದ ಮೇಲೆ ನಾಟಕ ಪ್ರಯೋಗ ಮಾಡಿದ್ದಾರೆ.  ಸಾಗರದ ಹಸಲರು ಬುಡಕಟ್ಟು ಜನಾಂಗ, ಮೈಸೂರು ಆದಿವಾಸಿಗಳು ಹಾಗೂ ಗೃಹಿಣಿಯರಿಗೆ ರಂಗ ತರಬೇತಿಯನ್ನು ಸಂಘಟಿಸಿ, ನಿರ್ದೇಶಿಸುವ

ವಿಶಿಷ್ಟ ಕಾರ್ಯಕ್ರಮಗಳ ಮೂಲಕ ಗಮನ ಸೆಳೆದಿದ್ದಾರೆ. ಸುಮತಿಯವರ ತಂದೆ ಗಜಾನನ ನಾಟ್ಯ ಮಂಡಳಿ ಎಂಬ ನಾಟಕ ಕಂಪನಿ ನಡೆಸುತ್ತಿದ್ದರಂತೆ. ಈಗ ಅವರ ಸಂಗಾತಿ ಜನಾರ್ಧನ (ಜನ್ನಿ) ಸರ್ಕಾರದ ನಾಟಕ ಕಂಪನಿ ಮೈಸೂರು ರಂಗಾಯಣದ ನಿರ್ದೇಶಕರಾಗಿದ್ದಾರೆ.

ಹವ್ಯಾಸಿ ರಂಗಭೂಮಿಗೆ ಸುಮತಿ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ವೀಣಾಕುಮಾರಿ ಬಿ.

ವೀಣಾ ಆದವಾನಿ ಎಂದೇ ಹೆಸರಾದ ವೀಣಾಕುಮಾರಿ ಕರ್ನಾಟಕ– ಆಂಧ್ರ ಗಡಿನಾಡಿನ ಹೆಸರಾಂತ ನಟಿ. ಭರತನಾಟ್ಯ ಪ್ರವೀಣೆಯೂ ಆಗಿರುವ ವೀಣಾ ಅವರು– ಪೌರಾಣಿಕ ನಾಟಕಗಳ ಕೆಲವು ಪಾತ್ರಗಳಲ್ಲಿ ನಾಟ್ಯದ ಗತ್ತುಗಾರಿಕೆಯನ್ನು ಅಭಿವ್ಯಕ್ತಿಸುವ ಮೂಲಕ ತಮ್ಮದೇ ಆದ ಅಭಿನಯ ಶೈಲಿಯನ್ನು ರೂಢಿಸಿಕೊಂಡು ಹೆಸರಾಗಿದ್ದಾರೆ.

ತಾಯಿ ಉಳೇಬೀಡು ರಂಗಮ್ಮ ಪೌರಾಣಿಕ ನಾಟಕಗಳಲ್ಲಿ ದೊಡ್ಡ ಹೆಸರು ಮಾಡಿದವರು. 7ನೇ ವರ್ಷದಲ್ಲಿಯೇ ರಂಗ ಪ್ರವೇಶ ಮಾಡಲು ಅವರೇ ಪ್ರೇರಣೆ. 1962ರಲ್ಲಿ ಆಂಧ್ರಪ್ರದೇಶದ ಆದವಾನಿ ಬಳಿ ಇರುವ ಉಳೇಬೀಡುನಲ್ಲಿ ವೀಣಾ ಜನಿಸಿದರು. ತೆಲುಗು, ಕನ್ನಡ ಶಿಕ್ಷಣ ಒಟ್ಟೊಟ್ಟಿಗೇ ಆಯಿತು. ತಾಯಿಯಂತೆಯೇ ಬಳ್ಳಾರಿ, ರಾಯಚೂರು, ಕೊಪ್ಪಳ ಜಿಲ್ಲೆಗಳ ಗ್ರಾಮೀಣ ನಾಟಕಗಳಲ್ಲಿ ಬಾಲ್ಯದಿಂದಲೇ ನಟಿಸಲು ಆರಂಭಿಸಿದರು. ಸುಭದ್ರಮ್ಮ ಮನ್ಸೂರು, ಮರಿಯಮ್ಮನಹಳ್ಳಿ ನಾಗರತ್ನಮ್ಮ ಮಾರ್ಗದರ್ಶಕರಾದರು. ಈ ಮಧ್ಯೆ ಭರತನಾಟ್ಯ ಕಲಿತು ಆದವಾನಿಯಲ್ಲಿ ನೃತ್ಯಶಾಲೆ ನಡೆಸುತ್ತಿದ್ದರು. ಕೆಲ ವರ್ಷಗಳ ನಂತರ ಮತ್ತೆ ಬಳ್ಳಾರಿಗೆ ವಾಪಸ್ಸಾಗಿ ನೃತ್ಯ ಶಿಕ್ಷಣ ನೀಡುವ ಜತೆಗೆ ಗ್ರಾಮೀಣ ನಾಟಕಗಳಲ್ಲಿ ಪಾತ್ರವಹಿಸುತ್ತ ಬಿಡುವಿಲ್ಲದ ನಟಿಯಾದರು.

ರಕ್ತರಾತ್ರಿ, ವೀರ ಅಭಿಮನ್ಯು, ದೈವದುರಂತ ಕರ್ಣ, ಬಾಣಸಿಗ ಭೀಮ– ಪೌರಾಣಿಕ; ಉಳವಿ ಚೆನ್ನಬಸವೇಶ್ವರ, ಮೌನೇಶ್ವರ ಮಹಾತ್ಮೆ, ಕರಗೋಳೇಶ್ವರ ಮಹಾತ್ಮೆ– ಅಧ್ಯಾತ್ಮಿಕ; ಮಲಮಗಳು, ಮತ್ಸಳಿ, ರೂಪವತಿ, ನಾಟ್ಯರಾಣಿ ಸೇರಿದಂತೆ ನೂರಾರು ನಾಟಕಗಳ ಸಹಸ್ರಾರು ಪ್ರದರ್ಶನಗಳಲ್ಲಿ ಕಳೆದ 47 ವರ್ಷಗಳಿಂದ ಅಭಿನಯಿಸುತ್ತ ಗಡಿನಾಡಿನ ಹೆಸರಾಂತ ನಟಿಯಾಗಿದ್ದಾರೆ.

ಗ್ರಾಮೀಣ ರಂಗಭೂಮಿಗೆ ವೀಣಾಕುಮಾರಿ ಬಿ. ಅವರು ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಶಿವಲಿಂಗಪ್ರಸಾದ್ ಎಚ್.ಎಸ್.

ಯಾವುದೇ ರಂಗ ಕ್ರಿಯೆಯಲ್ಲಿ ಭಾಗವಹಿಸಿದರೂ, ಅದು ರಂಗಭೂಮಿಗೆ ಸಲ್ಲಿಸುವ ಕೊಡುಗೆಯೇ ಎಂದು ಭಾವಿಸುವ ಶಿವಲಿಂಗ ಪ್ರಸಾದ್ ಈ ಕಾರಣಕ್ಕೆ ಒಬ್ಬ ಅತ್ಯುತ್ತಮ ನಟನಾಗಿರುವ ಜತೆಗೆ ರಂಗಸಜ್ಜಿಕೆ, ನೇಪಥ್ಯದ ಕುಶಲ ಕಲೆಗಳು ಹಾಗೂ ಸಂಘಟನೆಯಲ್ಲೂ ಮುಂದು. ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು ಹೊನ್ನುಡಿಕೆಯಲ್ಲಿ ಸಿದ್ದಲಿಂಗಮೂರ್ತಿ–ರಾಜಮ್ಮ ದಂಪತಿಗೆ ಜನಿಸಿದ ಶಿವಲಿಂಗ ಪ್ರಸಾದ್, ಶಾಲೆ, ಕಾಲೇಜು ದಿನಗಳಲ್ಲಿ ತುಮಕೂರಿಗೆ ಕ್ಯಾಂಪ್ ಮಾಡುತ್ತಿದ್ದ ಕಂಪನಿ

ನಾಟಕವನ್ನು ನೋಡುತ್ತ ಆ ಪಾತ್ರಗಳನ್ನು ಆವಾಹಿಸಿಕೊಳ್ಳುತ್ತ ಬೆಳೆದವರು. ಅಂತೆಯೇ ಅವರ ಅಭಿನಯದಲ್ಲಿ ವೃತ್ತಿ– ಹವ್ಯಾಸಿ ಸಮ್ಮಿಶ್ರಣದ ಪಾಕ ಇದೆ. ರಂಗಸಂಪದ ತುಮಕೂರು ಘಟಕದ ತದ್ರೂಪಿ ನಾಟಕದ ಮೂಲಕ ರಂಗ ಪ್ರವೇಶ ಮಾಡಿದ ಪ್ರಸಾದ್, ಒಥೆಲೊ ನಾಟಕದ ರೊಡೆರಿಕೋ ಪಾತ್ರದಲ್ಲಿ ಸೈ ಎನಿಸಿಕೊಂಡರು. ಭಾರತ್ ಸಂಚಾರ ನಿಗಮ ಲಿಮಿಟೆಡ್‌ನಲ್ಲಿ ನೌಕರಿ ದೊರೆತು ಬೆಂಗಳೂರಿಗೆ ಆಗಮಿಸಿದ ಪ್ರಸಾದ್, ಸಿಜಿಕೆಯವರ ಸಂಪರ್ಕಕ್ಕೆ ಬಂದ ನಂತರ ರಂಗ ಶಿಸ್ತು ಕಲಿತರು, ನೇಪಥ್ಯದ ಕೆಲಸಗಳಲ್ಲಿ ಹೆಚ್ಚಾಗಿ ತೊಡಗಿಕೊಂಡರು.

ಕದಡಿದ ನೀರು, ಸಂಗ್ಯಾಬಾಳ್ಯಾ, ಒಡಲಾಳ, ಹರಕೆಯ ಕುರಿ, ಒಥೆಲೊ, ತ್ರಿಶಂಕು, ಸಾಕ್ಷಿಕಲ್ಲು, ಕಳವು ಮುಂತಾದ ನಾಟಕಗಳಲ್ಲಿ ಉತ್ತಮ ಅಭಿನಯದ ಜತೆಗೆ ನೇಪಥ್ಯದ ಕೆಲಸಗಳಲ್ಲೂ ಅನಿವಾರ್ಯವೆನಿಸಿಕೊಂಡರು.

ಹವ್ಯಾಸಿ ರಂಗಭೂಮಿಗೆ ಶಿವಲಿಂಗ ಪ್ರಸಾದ್ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಭಗವಂತಪ್ಪ ಹೂಗಾರ

ಗ್ರಾಮೀಣ ಹಾಗೂ ವೃತ್ತಿ ನಾಟಕಗಳಿಗೆ ಹಾರ್ಮೋನಿಯಂ ಮತ್ತು ತಬಲಾ ಅವಶ್ಯವಾಗಿ ಇರಲೇಬೇಕಾದ ವಾದ್ಯಗಳು (ಹಾರ್ಮೋನಿಯಂ ಸ್ಥಾನವನ್ನು ಈಗೀಗ ಕೀಬೋರ್ಡ್ ಆಕ್ರಮಿಸಿದೆ) ಸತತ 40–50 ವರ್ಷಗಳ ಕಾಲ ನಾಟಕಗಳಿಗೆ ತಬಲಾ ನುಡಿಸುತ್ತ ದೊಡ್ಡ ರಂಗ ಕಲಾವಿದರೆಂದು ಹೆಸರು ಮಾಡಿದ ಪ್ರತಿಭಾವಂತರು ಸಾಕಷ್ಟು ಮಂದಿ ಇದ್ದಾರೆ. ಅಂತಹ ಹೆಸರಾಂತ ತಬಲಾ ವಾದಕರಲ್ಲಿ ಭಗವಂತಪ್ಪ ಹೂಗಾರ ಪ್ರಮುಖರು.

ಕಲಬುರಗಿ ಜಿಲ್ಲೆ ಅಫಜಲಪೂರ ತಾಲ್ಲೂಕಿನ ದೇಸಾಯಿ ಕಲ್ಲೂರು ಗ್ರಾಮದ ಸಂಗೀತ ಮನೆತನದ ಶಂಕರಪ್ಪ ಹೂಗಾರ– ಭೀಮಮ್ಮ ದಂಪತಿಗೆ 1949ರಲ್ಲಿ ಜನಿಸಿದ ಭಗವಂತಪ್ಪ ತಂದೆಯವರಿಂದ ತಬಲಾ, ಕಣಿವಾದನ, ಸಂಬಾಳ ಕಲಿತು ಸುತ್ತಲಿನ ಗ್ರಾಮಗಳ ಹಬ್ಬಹರಿದಿನ ಜಾತ್ರೆ ಉತ್ಸವಗಳ– ನಾಟಕ ಬಯಲಾಟಗಳಲ್ಲಿ ಆ ವಾದ್ಯಗಳನ್ನು ನುಡಿಸಿ ಹೆಸರು ಮಾಡುತ್ತ ಬೆಳೆದರು. ಸಂಗೀತ ಲೋಕದ ದಂತಕತೆಯಾದ ಪುಟ್ಟರಾಜ ಗವಾಯಿಗಳ ಶಿಷ್ಯರಾದ ಸೋಮಶೇಖರ ಪಾಟೀಲ, ಸಿ.ಎಸ್.ಬಡಿಗೇರ ಗವಾಯಿಗಳಲ್ಲಿ ಶಾಸ್ತ್ರೀಯ ಸಂಗೀತ ಮತ್ತು ತಬಲಾ ವಾದನವನ್ನು 15 ವರ್ಷಗಳ ಕಾಲ ಕಲಿತು– ತಬಲಾದ ಮೇಲೆ ಹಿಡಿತ ಸಾಧಿಸಿದರು.

1972ರಲ್ಲಿ ಕಲಬುರಗಿ ಭಾಗಕ್ಕೆ ಭೀಕರ ಬರಗಾಲ ಆವರಿಸಿದಾಗ ಬಳ್ಳಾರಿ ಜಿಲ್ಲೆಯ ಸಿರುಗುಪ್ಪಕ್ಕೆ ವಲಸೆ ಬಂದು ನೆಲಸಿದರು. ಆ ಭಾಗ ನಾಟಕಕ್ಕೆ ತುಂಬಾ ಹೆಸರಾಗಿತ್ತು, ಸುಭದ್ರಮ್ಮ ಮನ್ಸೂರು ಗಾಯನಕ್ಕೆ, ಸಿರಿಗೇರಿ ನಾಗನಗೌಡ, ಮದಿರೆ ಮರಿಸ್ವಾಮಿಯವರ ಸುಮಧುರ ಹಾರ್ಮೋನಿಯಂ ವಾದನಕ್ಕೆ ತಕ್ಕ ತಬಲಾ ಸಾಥ್ ನೀಡಿ ದೊಡ್ಡ ಹೆಸರು ಮಾಡಿದರು. ಆಕಾಶವಾಣಿಯ ಎ ಗ್ರೇಡ್ ಕಲಾವಿದರಾದ ಭಗವಂತಪ್ಪ ನಾಡಿನ ಬಹಳಷ್ಟು ಹಿರಿಯ ಕಲಾವಿದರಿಗೆ ತಬಲಾ ಸಾಥ್ ನೀಡಿದ್ದಾರೆ. ಕಲ್ಯಾಣ (ಹೈದರಾಬಾದ್) ಕರ್ನಾಟಕದಲ್ಲಂತೂ ಮನೆ ಮಾತಾಗಿದ್ದಾರೆ. ತಬಲಾ ವಾದನ ಗುರು ಶಿಷ್ಯ ಪರಂಪರೆಯಲ್ಲಿ ಮುಂದುವರಿಯುವ ಕಲೆ. ಇವರ ಬಳಿ ತಬಲಾ ಕಲಿತ ಶಿವಪುತ್ರಪ್ಪ ಬಿದನೂರು, ವಸಂತ ಬಡಿಗೇರ, ಜಗನ್ನಾಥರಾವ್ ಕುಲಕರ್ಣಿ, ರಾಮಲಿಂಗಪ್ಪ ಹೂಗಾರ, ರಾಮಲಿಂಗಪ್ಪ ಬಬ್ಬೂರು; ಹಾರ್ಮೋನಿಯಂ ಕಲಿತ ಹನಗೂಳೆಪ್ಪ ಹೆಸರಾಂತ ಕಲಾವಿದರಾಗಿದ್ದಾರೆ.

ಗ್ರಾಮೀಣ ರಂಗಭೂಮಿಗೆ ಭಗವಂತಪ್ಪ ಹೂಗಾರ ಅವರು ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಎ. ಯಶೋಧಮ್ಮ

ಕಳೆದ ನಲವತ್ತೈದು ವರ್ಷಗಳಿಂದ ಎಲ್ಲ ರೀತಿಯ ರಂಗ ಪ್ರಕಾರಗಳಲ್ಲಿ ನಟಿಯಾಗಿ, ರಂಗಗೀತೆ ಗಾಯಕರಾಗಿ ಯಶೋಧಮ್ಮ ಹೆಸರು ಮಾಡಿದ್ದಾರೆ.

ಕೋಲಾರ ಜಿಲ್ಲೆ ಚಿಕ್ಕಬಳ್ಳಾಪುರ ತಾಲ್ಲೂಕು ದೇವರ ಮಳ್ಳೂರು ಗ್ರಾಮದ ಎನ್. ವೆಂಕಟರಾಯಪ್ಪ- ಕೆಂಪಮ್ಮ ದಂಪತಿಗೆ 1952ರಲ್ಲಿ ಜನಿಸಿದ ಯಶೋಧಮ್ಮ ಬಿ.ಎ. ಪದವಿಯನ್ನು ಹಿಂದಿ ರತ್ನ, ಸಂಸ್ಕೃತ ಕಾವ್ಯದಲ್ಲಿ ಪಡೆದಿದ್ದಾರೆ. ಅಭಿನಯ ತರಂಗ ಹಾಗೂ ರಂಗಾಭರಣ ಅಭಿನಯ ಶಾಲೆಯಲ್ಲಿ ಒಟ್ಟು ಎರಡು ನಾಟಕ ಡಿಪ್ಲೊಮಾ ಪದವಿ ಪಡೆದು ರಂಗಭೂಮಿಗೆ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ. ಅಯ್ಯನ ಕೆರೆ, ಅಧ್ವಾನಪುರ, ಮದ್ವೆ ಮದ್ವೆ, ಬಂಕಾಪುರದ ಬಯಲಾಟ, ಯಜಮಾನರ ಹೆಸರು, ಕತ್ತಲೆಗಳೂ ಮಾತನಾಡುತ್ತವೆ, ಕೆರೆಗೆ ಹಾರ, ಅಭಿಜ್ಞಾನ ಶಾಕುಂತಲ, ಗರ್ಭಗುಡಿ, ಹಕ್ಕಿ ಚೆಲ್ಲಿದ ಬೀಜ ನಾಟಕಗಳಲ್ಲಿ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿದ್ದಾರೆ.

ರಾಮಾಯಣ ಸಂಸ್ಕೃತ ನಾಟಕದಲ್ಲಿ ನಟಿಸಿರುವ ಯಶೋಧಮ್ಮ, ಎ.ಎಸ್.ಮೂರ್ತಿ ತಂಡದ ನೂರಾರು ಬೀದಿ ನಾಟಕಗಳಲ್ಲಿ ಅಭಿನಯಿಸಿದ್ದಾರೆ. 11 ಧಾರಾವಾಹಿ, 3 ಸಿನಿಮಾ, 4 ಟೆಲಿ ಫಿಲಂಗಳಲ್ಲಿ ನಟಿಸಿರುವ ಯಶೋಧಮ್ಮ, ಸ್ವರ್ಗದ ಮಡಿಲು ಎಂಬ ಅಂತರ್‌ರಾಷ್ಟ್ರೀಯ ಮಾನ್ಯತೆ ಪಡೆದ ಕಿರುಚಿತ್ರದ ಅಭಿನಯಕ್ಕೆ ಪ್ರಶಂಸೆ ಪಡೆದಿದ್ದಾರೆ.

ಹವ್ಯಾಸಿ ರಂಗಭೂಮಿಯಲ್ಲಿ ಯಶೋಧಮ್ಮ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ನಾಗೇಶ ಕಟ್ಟಿಮನಿ (ಮಾಸ್ತರ)

ಎತ್ತರವಾದ ಮೈಕಟ್ಟಿನ ಸುಂದರ ಶರೀರ ಹಾಗೂ ಶಾರೀರದ ನಾಗೇಶ ಕಟ್ಟಿಮನಿ ಸಮರ್ಥ ನಟರು. ಅದಕ್ಕಿಂತಲೂ ದೊಡ್ಡ ಹಾರ್ಮೋನಿಯಂ ವಾದಕರು. ತಬಲಾ ವಾದನದಲ್ಲೂ ಅವರದು ಅಷ್ಟೇ ದೊಡ್ಡ ಹೆಸರು. ನಟನೆಯ ಜತೆಗೆ ಸಂಗೀತ ನಿರ್ದೇಶಕನಾಗಿ ಸಲ್ಲಿಸಿದ ಸೇವೆಗೆ ನಾಗೇಶ ಮಾಸ್ತರ ಎಂದೇ ಪ್ರತೀತಿಯಾಗಿದ್ದಾರೆ.

ಬೀದರ ಜಿಲ್ಲೆ ಹುಮನಾಬಾದ್ ತಾಲ್ಲೂಕು ಏತಲಪೂರದ ಸಿದ್ರಾಮಪ್ಪ ಕಟ್ಟಿಮನಿ ಅವರಿಗೆ 1956ರಲ್ಲಿ ಜನಿಸಿದ ನಾಗೇಶ ಅವರಿಗೆ ಮನೆಯ ವಾತಾವರಣವೇ ಸಂಗೀತ ಹಾಗೂ ನಾಟಕ ಲೋಕಕ್ಕೆ ಎಳೆತಂದಿತು. ಸಿರವಾರ, ಪಡೇಸೂರ, ಜತ್, ಮೈಂದರಗಿ, ಗುಡಗೇರಿ, ಶೇಖ್ ಮಾಸ್ತರ್ ನಾಟಕ ಕಂಪನಿಗಳಲ್ಲಿ ನಟರಾಗಿ, ಹಾರ್ಮೋನಿಯಂ ಹಾಗೂ ತಬಲಾ ವಾದಕರಾಗಿ ಸೇವೆ ಸಲ್ಲಿಸಿದ್ದಾರೆ. ರಾಜಾ ಹರಿಶ್ಚಂದ್ರ, ಹೇಮರೆಡ್ಡಿ ಮಲ್ಲಮ್ಮ, ರಾಜಾ ವಿಕ್ರಮ, ನರವೀರ ಪಾರ್ಥ, ಹಸಿರು ಬಳೆ, ತಾಯಿ ಕರುಳು, ನನ್ನವರು ನನ್ನ ಹಡೆದವರು, ಎಚ್ಚರ ತಂಗಿ ಎಚ್ಚರ, ಕಿವುಡ ಮಾಡಿದ ಕಿತಾಪತಿ – ಹೀಗೆ 80ಕ್ಕೂ ಹೆಚ್ಚು ನಾಟಕಗಳ ಸಹಸ್ರಾರು ಪ್ರದರ್ಶನಗಳಲ್ಲಿ ನಟರಾಗಿ ಸಂಗೀತ ನಿರ್ದೇಶಕರಾಗಿ ಕಳೆದ 40 ವರ್ಷಕ್ಕೂ ಅಧಿಕ ಕಾಲದಿಂದ ಸೇವೆ ಸಲ್ಲಿಸಿದ್ದಾರೆ.

ಶ್ರೀ ಸದ್ಗುರು ಪಂಚಲಿಂಗೇಶ್ವರ ನಾಟ್ಯ ಸಂಘ ಎಂಬ ನಾಟಕ ಕಂಪನಿಯನ್ನು 1991ರಿಂದ ನಡೆಸಿಕೊಂಡು ಬಂದಿದ್ದಾರೆ.

ವೃತ್ತಿ ರಂಗಭೂಮಿಗೆ ನಾಗೇಶ ಮಾಸ್ತರ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ದೇವೇಂದ್ರಪ್ಪ ವಿಶ್ವಕರ್ಮ

ಹೆಸರಾಂತ ಹಾರ್ಮೋನಿಯಂ ವಾದಕ ದೇವೇಂದ್ರಪ್ಪ ವಿಶ್ವಕರ್ಮ ಅವರು ಯಾದಗಿರಿ ಜಿಲ್ಲೆ ಸುರಪುರ ತಾಲ್ಲೂಕು ಬಾಚಿಮಟ್ಟಿ ಗ್ರಾಮದವರು. ಹಾಗಾಗಿ ಬಾಚಿಮಟ್ಟಿ ದೇವೇಂದ್ರಪ್ಪ ಎಂದೇ ಅವರು ಹೆಸರಾಗಿದ್ದಾರೆ.

ಪರಪ್ಪ ವಿಶ್ವಕರ್ಮ– ಕಾಳಮ್ಮ ದಂಪತಿಗೆ 1949ರಲ್ಲಿ ಜನಿಸಿದ ದೇವೇಂದ್ರಪ್ಪ ಎಸ್‌ಎಸ್‌ಎಲ್‌ಸಿ ನಂತರ ಚಿತ್ರಕಲೆಯಲ್ಲೂ ಡಿಪ್ಲೋಮಾ ಪದವಿ ಪಡೆದಿದ್ದಾರೆ. ವಿಶ್ವಕರ್ಮ ಜನಾಂಗದವರು ಸಂಗೀತ, ವಾದ್ಯ ಸಂಗೀತದಲ್ಲಿ ಹೆಚ್ಚು ಪರಿಣತರು. ದೇವೇಂದ್ರಪ್ಪ ಹಾರ್ಮೋನಿಯ ವಾದನದಲ್ಲಿ ಉನ್ನತಿ ಸಾಧಿಸಿದರು. ವೃತ್ತಿ ನಾಟಕದ ಅತ್ಯಂತ ಅವಶ್ಯಕವಾದ ಹಾರ್ಮೋನಿಯಂ ವಾದನದಲ್ಲಿ ಅವರದು ನುರಿತ ಕೈ. ವಾದ್ಯವನ್ನು ಮಧುರವಾಗಿ ನುಡಿಸಿ ಅದನ್ನೇ ಒಂದು ಪಾತ್ರವಾಗಿಸುವ ಕಲಾವಂತರು ಅವರು. ಸಂದರ್ಭಕ್ಕೆ ಅನುಗುಣವಾದ ಹಾಡು ರಚಿಸಿ, ರಾಗ ಸಂಯೋಜಿಸುವಲ್ಲಿಯೂ ಅವರು ಹೆಸರು ವಾಸಿ.

ಸಿರವಾರ, ಕಮತಗಿ, ಮೈಂದರಗಿ, ಚಿತ್ತರಗಿ, ಅಠಾಪುರ, ಕಲಾವೈಭವ ಮುಂತಾದ ಪ್ರತಿಷ್ಠಿತ ನಾಟಕ ಕಂಪನಿಗಳಲ್ಲಿ ಸಂಗೀತ ನಿರ್ದೇಶಕರಾಗಿ ದೊಡ್ಡ ಹೆಸರು ಮಾಡಿರುವ ದೇವೇಂದ್ರಪ್ಪ ಹಾಲಿ ಶೇಖ್ ಮಾಸ್ತರ್ ಅವರ ಶ್ರೀ ಗುರು ಕುಮಾರೇಶ್ವರ ನಾಟ್ಯಸಂಘದಲ್ಲಿ ಹಾರ್ಮೋನಿಯಂ ವಾದಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ವೃತ್ತಿ ರಂಗಭೂಮಿಗೆ ದೇವೇಂದ್ರಪ್ಪ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.





## ಬಿ. ವಿಠ್ಠಲ್ (ಅಪ್ಪಯ್ಯ)

ರಂಗ ಸಜ್ಜಿಕೆ, ಪರದೆ ಮೇಲೆ ಹಾಗೂ ಅಚೀಚೆಯ ಹಿನ್ನೆಲೆ ದೃಶ್ಯಗಳು ನಾಟಕದ ನಟ ನಟಿಯರಷ್ಟೇ ಮುಖ್ಯ. ಅವೂ ಪ್ರಮುಖ ಪಾತ್ರಧಾರಿಗಳು. ನಾಟಕಕ್ಕೆ ಅನುಗುಣವಾದ ಹಿನ್ನೆಲೆ ನಾಟಕದ ಪರಿಣಾಮ ಹೆಚ್ಚಿಸುತ್ತದೆ. ಅಂತಹ ಹಿನ್ನೆಲೆ ಕಲ್ಪಿಸುವುದೂ ಮಹಾನ್ ಕಲೆಗಾರಿಕೆಯೇ.

ರಂಗಸಜ್ಜಿಕೆಯನ್ನು ಅತ್ಯಂತ ಚಿಚಿತ್ರಪೂರ್ಣವಾಗಿ ನಿರ್ಮಿಸುವ ಬಿ.ವಿಠಲ್ ಒಬ್ಬ ಹೆಸರಾಂತ ಕಲಾ ನಿರ್ದೇಶಕರು. ಅಪ್ಪಯ್ಯ ಎಂದೇ ರಂಗ ತಂಡಗಳಿಗೆ ಚಿರಪರಿಚಿತವಾಗಿರುವ ವಿಠಲ್ ಕಳೆದ 40 ವರ್ಷಗಳಿಂದ ರಂಗ ಸಂಪದ, ರಂಗ ನಿರಂತರ, ಸೂತ್ರಧಾರ, ಸಮುದಾಯ, ಸ್ಪಂದನ, ನಾಟ್ಯಸಂಘ ಸೇರಿದಂತೆ ಹತ್ತಾರು ಹವ್ಯಾಸಿ ತಂಡಗಳ ಹಿನ್ನೆಲೆ ದೃಶ್ಯಗಳನ್ನು ಕಲಾತ್ಮಕವಾಗಿ ನಿರ್ಮಿಸಿ ಹೆಸರು ಮಾಡಿದ್ದಾರೆ.

ಮರಾಠಿ ಮೂಲದ ಬಲವಂತ ಲಕ್ಷ್ಮಣ ಗಾಡಿ – ರುಕ್ಮಿಣಿ ಬಾಯಿ ದಂಪತಿಗೆ 1955ರಲ್ಲಿ ಜನಿಸಿದ ಅಪ್ಪಯ್ಯ ಎಸ್‌ಎಸ್‌ಎಲ್‌ಸಿ ನಂತರ ರಂಗ ಪರಿಕರ, ಸಜ್ಜಿಕೆ ವಿನ್ಯಾಸದಲ್ಲೇ ತಮ್ಮನ್ನು ತೊಡಗಿಸಿಕೊಂಡು ಇಂದು ಬಹು ಎತ್ತರಕ್ಕೆ ಬೆಳೆದು ನಿಂತಿದ್ದಾರೆ. ಬಿ.ವಿ.ಕಾರಂತ, ಪ್ರಸನ್ನ, ಸಿ.ಆರ್.ಸಿಂಹ, ಸಿಜಿಕೆ, ಶಂಕರನಾಗ್, ಆರ್.ನಾಗೇಶ್, ವಿ.ರಾಮಮೂರ್ತಿ, ಮಲ್ಲಿಕಾ ಪ್ರಸಾದ್, ಬಿ.ಜಯಶ್ರೀ, ಎಂ.ಎಸ್.ಸತ್ಯು, ಅಜಿತ್ ಸಲ್ಡಾನ, ಅರ್ಜುನ್ ಸಜ್ನಾನಿ ಮುಂತಾದ ರಾಜ್ಯ– ರಾಷ್ಟ್ರಮಟ್ಟದ ನಿರ್ದೇಶಕರ ನಾಟಕಗಳು ಕಳೆಗಟ್ಟಲು ಸೂಕ್ತವಾದ ರಂಗ ಪರಿಕರ ಹಾಗೂ ಸಜ್ಜಿಕೆಗಳನ್ನು ಅಪ್ಪಯ್ಯ ನಿರ್ಮಿಸಿದ್ದಾರೆ. ನೇಪಥ್ಯ ಕಲಾವಿದ ನಾಣಿ, ಹೆಸರಾಂತ ಕಲಾ ನಿರ್ದೇಶಕ ಶಶಿಧರ ಅಡಪ

ಅವರ ಒಡನಾಡಿಯಾಗಿ ಕಲಾ ನಿರ್ದೇಶನದಲ್ಲಿ ದೊಡ್ಡ ಸಾಧನೆ ಮಾಡಿದ್ದಾರೆ. ಹಿಂದಿ ಸಿನಿಮಾಗಳು, ಟಿವಿ ರಂಗಸಜ್ಜಿಕೆ ನಿರ್ಮಾಣದಲ್ಲೂ ಅಪ್ಪಯ್ಯ ವಿಠಲ್ ಹೆಸರು ಮಾಡಿದ್ದಾರೆ.

ಹವ್ಯಾಸಿ ರಂಗಭೂಮಿಗೆ ವಿಠಲ್ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಮಮತಾಶ್ರೀ ಅರಳಿಹಳ್ಳಿ

ನಟಿಗೆ ಹಾಡು, ನೃತ್ಯಗಳಲ್ಲಿ ತಕ್ಕಮಟ್ಟಿನ ಪರಿಣತಿ ಇದ್ದರೂ ನಾಟಕ ಕಳೆಗಟ್ಟಿಬಿಡುತ್ತದೆ. ಅದು ವೃತ್ತಿ ರಂಗಭೂಮಿಗೆ ದೊಡ್ಡ ಆಸ್ತಿ. ಒಂದು ಕಾಲದಲ್ಲಂತೂ ನಟ ಅಥವಾ ನಟಿಗೆ ಹಾಡಲು ಬರಲೇಬೇಕಿತ್ತು. ಇಂದು ಹಾಡುವ ನಟಿಯರು ಕಡಿಮೆ. ಪಾತ್ರವನ್ನು ಚೆನ್ನಾಗಿ ಅಭಿನಯಿಸಿದರೂ, ಹಿನ್ನೆಲೆ ಹಾಡಿಗೆ ಬೇರೆಯವರನ್ನು ನೆಚ್ಚುವವರು ಇಂದು ಹೆಚ್ಚಾಗಿದ್ದಾರೆ. ಅಂತಹವರ ಮಧ್ಯೆ ಹಾಡು, ನೃತ್ಯ ಬಲ್ಲ ಕೆಲವೇ ನಟಿಯರ ಪೈಕಿ ಮಮತಾಶ್ರೀ ಶಂಕರ ಅರಳಿಹಳ್ಳಿ ಅವರು ಒಬ್ಬರು.

ನಾಯಕಿ, ಖಳನಾಯಕಿ, ಹಾಸ್ಯ ಸೇರಿದಂತೆ ಎಲ್ಲ ರೀತಿಯ ಪಾತ್ರಗಳಿಗೆ ಒಗ್ಗುವ ಶರೀರ ಹಾಗೂ ಶಾರೀರ ಹೊಂದಿರುವ ಮಮತಾಶ್ರೀ ಅವರು, ಮಂಡಲಗಿರಿ ಶ್ರೀ ಗುರು ತೋಂಟದಾರ್ಯ ನಾಟ್ಯಸಂಘದ ಆಸ್ತಿಯಾಗಿದ್ದಾರೆ.

ರಂಗ ಕಲಾವಿದ ರಂಗಪ್ಪ ನಾಗರಾಳ– ಶಚಿದೇವಿ ದಂಪತಿಗೆ 1964ರಲ್ಲಿ ಕಲಬುರಗಿಯಲ್ಲಿ ಜನಿಸಿದ ಮಮತಾ 10ನೇ ವರ್ಷಕ್ಕೆ ಮಲಮಗಳು ನಾಟಕಕ್ಕೆ ಬಣ್ಣ ಹಚ್ಚಿದವರು. ರಾಯಚೂರು ಜಿಲ್ಲೆ ಶಿರವಾರದ ಬ್ರಹ್ಮಾನಂದ ನಾಟ್ಯ ಸಂಘ ಸೇರಿದಂತೆ ಕರ್ನಾಟಕದ 10 ಪ್ರತಿಷ್ಠಿತ ನಾಟಕ ಕಂಪನಿಗಳ ವಿವಿಧ ಪಾತ್ರಗಳಲ್ಲಿ ಅಭಿನಯಿಸಿ ಮಂಡಲಗಿರಿ ಕಂಪನಿಯಲ್ಲಿ ನೆಲೆ ನಿಂತರು. ನೂರಕ್ಕೂ ಹೆಚ್ಚು ನಾಟಕಗಳ ಸಹಸ್ರಾರು ಪ್ರದರ್ಶನಗಳಲ್ಲಿ ಕಳೆದ 39 ವರ್ಷಗಳಿಂದ ಅಭಿನಯಿಸುತ್ತ ಹೆಸರು ಮಾಡಿರುವ ಮಮತಾಶ್ರೀ ಐದು ನಾಟಕಗಳನ್ನು ನಿರ್ದೇಶಿಸಿದ್ದಾರೆ. ಹೆಸರಾಂತ ನಟರೂ ಆಗಿರುವ ಪತಿ ಶಂಕರ್ ಮಂಡಲಗಿರಿ ಕಂಪನಿಯ ಮಾಲೀಕದ್ವಯರಲ್ಲಿ ಒಬ್ಬರು. ಹಾಗಾಗಿ ಕಂಪನಿಯ ಉಸ್ತುವಾರಿಯನ್ನೂ ಮಮತಾಶ್ರೀ ಹಲವು ಬಾರಿ ಹೊತ್ತು ಯಶಸ್ವಿಯಾಗಿ ನಿಭಾಯಿಸಿದ್ದಾರೆ.

ವೃತ್ತಿ ರಂಗಭೂಮಿಯಲ್ಲಿ ಮಮತಾಶ್ರೀ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2014ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಸಿದ್ದು ನಾಲತ್ತವಾಡ (ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪ್ರಶಸ್ತಿ)

ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ಹೆಸರಾಂತ ಹಾಸ್ಯ ನಟ ಸಿದ್ದು ನಾಲತ್ತವಾಡ. ಕಲ್ಚರ್ಡ್ ಕಮೆಡಿಯನ್ ಕೆ.ಹಿರಣ್ಣಯ್ಯ ಹೆಸರಿನ ದತ್ತಿ ಪುರಸ್ಕಾರ ಅವರಿಗೆ ಅತ್ಯಂತ ಔಚಿತ್ಯಪೂರ್ಣವಾಗಿ ದಕ್ಕಿದೆ.

ಕಿವುಡ ಮಾಡಿದ ಕಿತಾಪತಿಯ ಕಿವುಡ, ಬಸ್ ಕಂಡಕ್ಟರ್ ನಾಟಕದ ರೇವಣ್ಣ, ನೀನೂ ಸಾಹುಕಾರನಾಗು– ಚಂದ್ರಮೌಳಿ, ಎಚ್ಚರ ತಂಗಿ ಎಚ್ಚರ– ದಫೇದಾರ್ ಧರ್ಮಯ್ಯ, ಬಸ್ಪಮಾಲ– ದಾದೂ, ಮಲಮಗಳು– ಲಕ್ಷ್ಮಣರಾವ್ ಹಾಗೂ ಪೌರಾಣಿಕ ಸತ್ಯ ಹರಿಶ್ಚಂದ್ರ ನಾಟಕದ ನಕ್ಷತ್ರಿಕ (ಸಾಂಬಾ), ಹೇಮರೆಡ್ಡಿ ಮಲ್ಲಮ್ಮದ ಪದ್ಮಮ್ಮ ಮುಂತಾದ ಪಾತ್ರಗಳು ಆಯಾ

ನಾಟಕದ ಜೀವಾಳವಿದ್ದಂತೆ. ಹಾಸ್ಯರಸ ಅವುಗಳಲ್ಲಿ ಚಿಮ್ಮಿ ಹರಿಯುತ್ತದೆ. ಈ ಎಲ್ಲ ಹಾಸ್ಯ ಪಾತ್ರಗಳಲ್ಲಿ ಸಿದ್ದು ತಮಗೆ ತಾವೇ ಸಾಟಿ ಎಂಬಂತೆ ನಕ್ಕು ನಲಿಸುತ್ತಾರೆ. ಹಾಸ್ಯ ನಟರುಗಳಲ್ಲಿ ಅವರದೇ ಆದ ವಿಶೇಷ ಶೈಲಿಯೊಂದಿರುತ್ತದೆ. ಹಾಗೆಯೇ ಸಿದ್ದು ಶೈಲಿಯೂ ಒಂದು ವಿಶೇಷ. ಅವರ ಹಾವಭಾವ, ಸಂಭಾಷಣೆ ಹೇಳುವ ವೈಖರಿಗೆ ಉತ್ತರ ಕರ್ನಾಟಕದ ಪ್ರೇಕ್ಷಕರು ಬಿದ್ದುಬಿದ್ದು ನಗುತ್ತಾರೆ. ನಾಟಕದ ಕಲೆಕ್ಷನ್ ಇಮ್ಮಡಿಗೊಳ್ಳುತ್ತದೆ.

ವಿಜಯಪುರ ಜಿಲ್ಲೆ ಮುದ್ದೇಬಿಹಾಳ ತಾಲ್ಲೂಕು ನಾಲತ್ವಾಡದ ಬಡ ರೈತ ದೊಡ್ಡಬಸಪ್ಪ ಎಂಬುವರ ಪುತ್ರನಾಗಿ 1963ರಲ್ಲಿ ಜನಿಸಿದ ಸಿದ್ದಪ್ಪ ಬಡತನದ ಕಾರಣಕ್ಕೆ 9ನೇ ತರಗತಿಗೆ ಶರಣು ಹೊಡೆದು ನಾಟಕ ಕಂಪನಿ ಕೆಲಸಗಾರನಾಗಿ ಸೇರಿಕೊಂಡರು. ಹಿರಿಯ ನಟರ ಅಭಿನಯ ಆವಾಹಿಸಿಕೊಳ್ಳುತ್ತ ತಮ್ಮದೇ ಶೈಲಿಯನ್ನು ರೂಢಿಸಿಕೊಂಡು ಇಂದು ಹಾಸ್ಯ ನಟನೆಯಲ್ಲಿ ದೊಡ್ಡ ಹೆಸರು ಮಾಡಿದ್ದಾರೆ. ಹಲವಾರು ನಾಟಕ ಕಂಪನಿಯಲ್ಲಿ ಅಭಿನಯಿಸಿ ಹೆಸರು ಮಾಡಿದ ಸಿದ್ದು, ತಮ್ಮದೇ ಆದ ವೀರೇಶ್ವರ ನಾಟ್ಯ ಸಂಘವನ್ನು 20 ವರ್ಷಗಳಿಂದ ಹೆಚ್ಚು ಕಾಲದಿಂದ ನಡೆಸಿಕೊಂಡು ಬರುತ್ತಿದ್ದಾರೆ.

ವೃತ್ತಿ ರಂಗಭೂಮಿಯ ಹಾಸ್ಯ ನಟನೆಗೆ ಸಿದ್ದು ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯ ವತಿಯಿಂದ 2014ರ ಕಲ್ಚರ್ಡ್ ಕಮೆಡಿಯನ್ ಕೆ.ಹಿರಣ್ಣಯ್ಯ ದತ್ತಿ ಪುರಸ್ಕಾರ ಪ್ರಶಸ್ತಿ ನೀಡಿ ಗೌರವಿಸಲಾಗುತ್ತಿದೆ.





## ರೇವಣಸಿದ್ದಯ್ಯ ಹೊಸೂರುಮಠ

(ನಟರತ್ನ ಚಿಂದೋಡಿ ವೀರಪ್ಪ ದತ್ತಿ ಪುರಸ್ಕಾರ ಪ್ರಶಸ್ತಿ)

ಅಜ್ಜನವರ ಕಂಪನಿ ಎಂದೇ ಮನೆ ಮಾತಾಗಿರುವ ಗದಗದ ಶ್ರೀ ಕುಮಾರೇಶ್ವರ ಕೃಪಾಪೋಷಿತ ಪಂಚಾಕ್ಷರ ಗವಾಯಿಗಳ ನಾಟ್ಯ ಸಂಘಕ್ಕೂ ರೇವಣಸಿದ್ದಯ್ಯ ಹೊಸೂರುಮಠ ಅವರಿಗೂ ಅವಿನಾಭಾವ ಸಂಬಂಧ. ಆ ಕಂಪನಿಯಲ್ಲಿ ಸುದೀರ್ಘ ಕಾಲ ಸೇವೆ ಸಲ್ಲಿಸಿದ ಹಿರಿಯ ನಟ ರೇವಣಸಿದ್ದಯ್ಯನವರು. ಬಳ್ಳಾರಿ ತಾಲ್ಲೂಕು ಶ್ರೀಧರಗಡ್ಡೆಯಲ್ಲಿ ಅಮರಯ್ಯ ಹೊಸೂರಮಠ– ಲಿಂಗಮ್ಮ ದಂಪತಿಗೆ 1940ರಲ್ಲಿ ಜನಿಸಿದ ರೇವಣಸಿದ್ದಯ್ಯ ಸ್ವಗ್ರಾಮದಲ್ಲಿ ಶಾಲಾ ಶಿಕ್ಷಣ ಪಡೆದು 19ರ ಹರೆಯದಲ್ಲಿ ಗದಗದ ವೀರೇಶ್ವರ ಪುಣ್ಯಾಶ್ರಮ ಸೇರಿದರು. ಅದರ ಮುಖ್ಯಸ್ಥ ಹಾಗೂ ಸಂಗೀತ ಲೋಕದ ದಂತಕತೆ ಡಾ.ಪುಟ್ಟರಾಜ ಗವಾಯಿಗಳ ಶಿಷ್ಯತ್ವ ಪಡೆದು 5 ವರ್ಷ ಕಾಲ ಹಾರ್ಮೋನಿಯಂ ಶಿಕ್ಷಣ ಪಡೆದರು. ನಂತರ ಅವರದೇ ಪಂಚಾಕ್ಷರಿ ಗವಾಯಿ ನಾಟ್ಯ ಸಂಘದ ನಟನಾಗಿ 1965ರಲ್ಲಿ ಸೇರಿ ದೇವಗಿರಿ ಶಿವಮೂರ್ತಿ ಸ್ವಾಮಿಗಳ ನಿರ್ದೇಶನದ ಹಲವಾರು ಪೌರಾಣಿಕ ನಾಟಕಗಳಲ್ಲಿ ಅಭಿನಯಿಸಿ, ರಂಗಸಂಗೀತ ಮತ್ತು ನಟನೆಯಲ್ಲಿ ಪರಿಣತರಾದರು.

1971ರಿಂದ 1986ರ ವರೆಗೆ ಬೇರೆ ಬೇರೆ ನಾಟಕ ಕಂಪನಿಗಳಲ್ಲಿ ನಟನಾಗಿ ಹೆಸರು ಮಾಡಿ ಮತ್ತೆ 1986ಕ್ಕೆ ಅಜ್ಜನವರ ಕಂಪನಿಗೆ ವಾಪಸ್ ಬಂದರು. ಅಲ್ಲಿಂದ ಇಲ್ಲಿವರೆಗೆ ಅದೇ ಕಂಪನಿಯಲ್ಲಿ ಅವರ ಸೇವೆ ಮುಂದುವರಿದಿದೆ. ನಾಟ್ಯಸಂಘದ ಹೊಣೆಗಾರಿಕೆಯನ್ನೂ ಹಲವು ಸಂದರ್ಭದಲ್ಲಿ ನಿಭಾಯಿಸಿದ ರೇವಣಸಿದ್ದಯ್ಯ, 75ರ ಹರೆಯದಲ್ಲೂ ಯಶಸ್ವಿ ನಟನಾಗಿ ಮುಂದುವರಿದಿದ್ದಾರೆ.

ಅಕ್ಕಮಹಾದೇವಿ, ನೆಲ್ಲೂರು ನಂಬೆಕ್ಕ, ಸೊನ್ನಲಗಿ ಸಿದ್ದರಾಮೇಶ್ವರ, ಶ್ರೀ ನಾಗಲಿಂಗಲೀಲೆ, ಕೊರವಂಜಿ, ಬದುಕು ಬಂಗಾರವಾಯಿತು ಮುಂತಾದ ಪೌರಾಣಿಕ, ಸಾಮಾಜಿಕ ನಾಟಕಗಳಲ್ಲಿ ಅವರದು ಪ್ರಮುಖ ಪಾತ್ರ, ಅಜ್ಜನವರ ನಾಟ್ಯಸಂಘದ ಇದುವರೆಗಿನ ನಡೆಯಲ್ಲೂ ರೇವಣಸಿದ್ದಯ್ಯ ಅವರದು ಪ್ರಮುಖ ಪಾತ್ರ. ಇದೀಗ ಅವರು ಗದಗ ಸಮೀಪದ ಲಕ್ಕುಂಡಿಯಲ್ಲಿ ನೆಲೆಸಿದ್ದಾರೆ.

ವೃತ್ತಿ ರಂಗಭೂಮಿಯಲ್ಲಿ ಸಲ್ಲಿಸಿದ ಸೇವೆಗಾಗಿ ರೇವಣಸಿದ್ದಯ್ಯ ಅವರಿಗೆ ಕರ್ನಾಟಕ ನಾಟಕ ಅಕಾಡೆಮಿ ವತಿಯಿಂದ 2014ರ ನಟರತ್ನ ಚಿಂದೋಡಿ ವೀರಪ್ಪ ದತ್ತಿ ಪುರಸ್ಕಾರ ಪ್ರಶಸ್ತಿ ನೀಡಿ ಗೌರವಿಸಲಾಗುತ್ತಿದೆ.

---



**ಜಿ.ಎನ್. ಮೋಹನ್** (ರಂಗಭೂಮಿಯ ಪುಸ್ತಕ ಪುರಸ್ಕಾರ)

ರಂಗ ವಿಮರ್ಶೆಯ ಮೂಲಕ ನಾಟಕದ ಸಂಚಲನಕ್ಕೆ ಜಿ.ಎನ್.ಮೋಹನ್ ಕಾರಣರಾಗಿದ್ದಾರೆ. ನೀನಾಸಂ ತಿರುಗಾಟ, ಸಮುದಾಯ ಸಾಂಸ್ಕೃತಿಕ ಉತ್ಸವಗಳು, ಬೆಂಗಳೂರಿನಲ್ಲಿ ಜರುಗಿದ ಹಲವು ನಾಟಕಗಳ ವಿಮರ್ಶೆಯನ್ನು ಅವರು ಪತ್ರಿಕೆಗಳಿಗೆ ಬರೆದಿದ್ದಾರೆ. ಎಲೆಕ್ಟ್ರಾನಿಕ್ ಮಾಧ್ಯಮಕ್ಕೆ ಕಾಲಿಟ್ಟ ನಂತರವೂ ರಂಗದ ನಂಟನ್ನು ಉಳಿಸಿಕೊಂಡು ಬಂದಿರುವ ಅಪರೂಪದ ರಂಗ ಪರಿಚಾರಕ ಜಿ.ಎನ್.ಮೋಹನ್.

ಶಾಲಾ ಕಾಲೇಜು ದಿನಗಳಲ್ಲೇ ನಾಟಕಕ್ಕೆ ಆಕರ್ಷಿತರಾದ ಮೋಹನ್ ಬೆಂಗಳೂರು ಬಾಲಭವನದ ಅನೇಕ ನಾಟಕಗಳಲ್ಲಿ ಅಭಿನಯಿಸಿದರು. ಪದವಿಯಲ್ಲಿ ರಂಗಭೂಮಿ ವಿಷಯವನ್ನೇ ಪ್ರಮುಖವಾಗಿ ಆಯ್ಕೆ ಮಾಡಿಕೊಂಡು ರ್‍ಯಾಂಕ್ ಗಳಿಸಿದರು. ಎಂ.ವಿ.ಸುಬ್ಬಣ್ಣ, ಎನ್.ಎಸ್.ವೆಂಕಟರಾಮ್, ಬಿ.ಜಯಶ್ರೀ, ಎಸ್.ಮಾಲತಿ, ಸಿಜಿಕೆ ನಿರ್ದೇಶನದ ನಾಟಕಗಳಲ್ಲಿ ನಟಿಸಿದರು. ಪ್ರಜಾವಾಣಿಯಲ್ಲಿದ್ದಾಗ ಅಲ್ಲಿಯ ಲಲಿತ ಕಲಾಸಂಘದಲ್ಲಿ ಸಕ್ರಿಯವಾಗಿದ್ದರು. ಬೀದಿ ನಾಟಕಗಳ ಜಾಥಾ ಸಂಘಟನೆಯಲ್ಲಿ ತೊಡಗಿಕೊಂಡರು. ಮೋಹನ್ ಇದನ್ನೆಲ್ಲ ತಮ್ಮ ಬರವಣಿಗೆಯ ಬಂಡವಾಳ ಮಾಡಿಕೊಂಡರು. ಹಾಗಾಗಿ ಅವರ ಬರಹಗಳು ಗಟ್ಟಿ ಅನುಭವದಿಂದ ಒಡಮೂಡಿದವು.

ಈ ಟಿವಿ ಮುಖ್ಯಸ್ಥರಾಗಿದ್ದಾಗ ರಂಗ ಚಟುವಟಿಕೆಗಳಿಗೆ ಅವಕಾಶ ಕಲ್ಪಿಸಿದರು. ರಂಗತಂಡಗಳು ಹಾಗೂ ರಂಗಕರ್ಮಿಗಳೊಂದಿಗಿನ ಅವರ ನಿಕಟ ಒಡನಾಟ ಅವರ ಬರವಣಿಗೆಯನ್ನು ಜೀವಂತವಾಗಿರಿಸಿದೆ. ಲೇಖಕರು, ಅಂಕಣಕಾರರೂ ಆಗಿರುವ ಮೋಹನ್ ಹಲವು ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

ವಸ್ತು ಮತ್ತು ನಿರೂಪಣೆಯಲ್ಲಿ ತೋರಿದ ನಾವೀನ್ಯದಿಂದ 2012ರ ಸಾಲಿಗೆ ಮೋಹನ್‌ರ ರಂಗ ಕಿನ್ನರಿ ಹಾಗೂ 2013ನೇ ಸಾಲಿಗೆ ಥರ್ಡ್‌ಬೆಲ್ ಕೃತಿಗಳು ತೀರ್ಪುಗಾರರ ಮನ್ನಣೆಗೆ ಪಾತ್ರವಾಗಿವೆ. ಹೀಗೆ ಎರಡು ವರ್ಷ ಸತತವಾಗಿ ಪ್ರಶಸ್ತಿ ಗಳಿಸಿದ ಪ್ರತಿಭಾವಂತ ಅವರು.

---



## ಮನುಬಾಯಿ ನಾಕೋಡ (ಜೀವಮಾನ ರಂಗಸಾಧನೆ ಪ್ರಶಸ್ತಿ)

"ಜೀವನದಲ್ಲಿ ಸಮಸ್ಯೆಗಳು ತೂಫಾನಿನಂತೆ ಬರ್ತಾವೆ. ಆದರೆ ಕಣ್ಣುಗಳಲ್ಲಿ ಸಮುದ್ರ ಬರದಂತೆ ನೋಡಿಕೊಳ್ಳಬೇಕು" ಎಂಬ ತಂದೆಯ ಮಾತನ್ನು ಹೃದಯದಲ್ಲಿ ಪೋಷಿಸಿಕೊಂಡು ರಂಗ ಸಮುದ್ರದಲ್ಲಿ ಎಲ್ಲ ಬಗೆಯ ವಿಳಿಳತಗಳ ತೆರೆಗಳ ನಡುವೆ ಬಾಳಿದವರು ಮನೂಬಾಯಿ ನಾಕೋಡರು.

ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಹೀಗೆ ಎಲ್ಲ ಬಗೆಯ ನಾಟಕಗಳಲ್ಲಿ ಹಾಡುನಟಿಯಾಗಿ, ನಾಯಕಿಯಾಗಿ, ಖಳನಾಯಕಿಯಾಗಿ, ವಿನೋದಿನಿಯಾಗಿ 6 ದಶಕಗಳ ಕಾಲದ ನಿರಂತರವಾಗಿ ರಂಗಸೇವೆ ಇವರದು.

ಪ್ರಸಿದ್ಧ ರಂಗಕರ್ಮಿ ಹಾನಗಲ್ ಬಾಬುರಾವರಿಂದ ಬಾಲ್ಯದಿಂದಲೇ ರಂಗ ಬದುಕಿನ ಪಾಠ. ರಂಗ ಸಂಗೀತದಲ್ಲಿ ನಿಷ್ಣಾತೆಯಾದ ಅಕ್ಕ ತಾರಾಬಾಯಿಯೊಡನೆ ಚಿಕ್ಕಂದಿನಲ್ಲೇ ಊರೂರುಗಳಲ್ಲಿ ನಡೆಯುವ ನಾಟಕಗಳನ್ನು ನೋಡುವದರ ಮೂಲಕ ರಂಗದ ಮೇಲಿನ ನಾಟಕಗಳ ಓದು ಆರಂಭ. ಅಭಿನಯ ಮತ್ತು ರಂಗಸಂಗೀತವನ್ನು ಎಳವೆಯಲ್ಲೇ ತಂದೆ ಮನೆಯಲ್ಲಿ ಕಲಿತಿದ್ದರು. ಮರಾಠಿ ನಾಟಕದ ಪ್ರಭಾವವನ್ನು ಜೀರ್ಣಿಸಿಕೊಳ್ಳುತ್ತ ಬೆಳೆದ ಇವರು ಬಾಣಸಿಗ ನಾಟಕದ ದ್ರೌಪದಿ, ಚಿತ್ರಾಂಗದದ ಉಲುಚಿ, ಮಹಾಸತಿ ಅನಸೂಯಾದ ಅನಲಾ, ಲಂಕಾದಹನದ ಸೀತೆ, ಹರಿಶ್ಚಂದ್ರದ ತಾರಾಮತಿ, ಹೇಮರೆಡ್ಡಿ ಮಲ್ಲಮ್ಮ, ಖಾದಿಸೀರೆಯ ಎಂ.ಎಲ್.ಎ. ಹೀಗೆ ನೂರಾರುಬಗೆಯ ನಾಟಕಗಳಲ್ಲಿ ವಿಭಿನ್ನ ಪಾತ್ರದ ಮೂಲಕ ಮನೆಮಾತಾದರು. ದೊಡ್ಡಗುಬ್ಬಿ ಮುದ್ದುವೀರಾಚಾರ ಕಂಪನಿ, ಅರ್ಜುನಸಾ ಕಂಪನಿ, ಹಲಗೇರಿ ಕಂಪನಿ, ಹಾನಗಲ್ಲ ಕಂಪನಿ, ಕಂಚಿಕೇರಿ ಕಂಪನಿ, ಚಿತ್ರಗಿ ಕಂಪನಿ, ಓಬಳೇಶ ಕಂಪನಿ, ದೇಸಾಯಿ ಕಂಪನಿ, ಗುಡಿಗೇರಿ ಕಂಪನಿ ಹೀಗೆ ಹಲವು ಪ್ರಸಿದ್ಧ ಕಂಪನಿಗಳ ಬದುಕಿಗೆ ನೆರವಾದವರು. ಪ್ರೇಕ್ಷಕರಿಂದ 'ರಂಗನಾಯಕಿ' ಅಂತ ಪ್ರಶಂಸೆ ಪಡೆದ ಇವರಿಗೆ ಇತ್ತೀಚೆಗಿನ 'ಜಂಗಮ ಶೆಟ್ಟಿ' ಪ್ರಶಸ್ತಿಯೂ ದೊರಕಿದೆ.

ಪ್ರಸ್ತುತ 2015ರ ರಂಗ ಗೌರವ ನೀಡುವ ಮೂಲಕ ಕರ್ನಾಟಕ ನಾಟಕ ಅಕಾಡೆಮಿ ಇವರನ್ನು ಗೌರವಿಸುತ್ತಿದೆ.

---



## ಮಧುಕೇಶ್ ಚಿಂದೋಡಿ

(ಕಲ್ಚರ್ಡ್ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪುರಸ್ಕಾರ)

ಚಿಂದೋಡಿ ಎಂಬ ಕಲಾಕುಟುಂಬದ ಮತ್ತೊಂದು ಪ್ರತಿಭಾವಂತ ಕುಡಿ ಮಧುಕೇಶ್. ನಟನಾಗಿ, ಚಿತ್ರ ನಿರ್ದೇಶಕನಾಗಿ, ನಾಟಕ ನಿರ್ಮಾಪಕನಾಗಿ ಅರ್ಧ ಶತಮಾನದಿಂದಲೂ ಅವರು ರಂಗದ ನಿರಂತರ ನಂಟು ಹೊಂದಿದ್ದಾರೆ. ವೃತ್ತಿ ರಂಗಭೂಮಿಯ ಹೆಸರಾಂತ ನಟ, ನಟರತ್ನ ಚಿಂದೋಡಿ ವೀರಪ್ಪ– ಸಾವಿತ್ರಮ್ಮ ದಂಪತಿಗೆ ದಾವಣಗೆರೆಯಲ್ಲಿ 1955 ರಲ್ಲಿ ಜನಿಸಿದ ಮಧುಕೇಶ್, ಟಿಪ್ಪುವಿನ ಮಗನ ಪಾತ್ರ, ಬಾಲ ಸಿದ್ಧರಾಮೇಶನ ಪಾತ್ರಗಳಿಗೆ ಬಣ್ಣಹಚ್ಚಿ ತಮ್ಮದೇ ನಾಟಕ ಕಂಪನಿಯಲ್ಲಿ ಬಾಲ್ಯದಲ್ಲೇ ರಂಗಪ್ರವೇಶ ಮಾಡಿದರು. ಇಪ್ಪತ್ತರ ಹರೆಯದಲ್ಲಿ ಹೇಮರೆಡ್ಡಿ ಮಲ್ಲಮ್ಮ ನಾಟಕದ ಅತ್ತೆ ಪಾತ್ರದಲ್ಲಿ ನಟಿಸಿದ ಮಧುಕೇಶ್, ದುಡುಕಿಹೋದ ಮಗ ಹುಡುಕಿ ಬಂದ ಸೊಸೆ, ಸಿಡಿದೆದ್ದ ಬಡವ, ಗುರುವಿನ ಗದ್ದೆ, ಮಲಮಗಳು, ಧರ್ಮದ ದೌರ್ಜನ್ಯ, ಹಸಿರುಬಳೆ, ಹೆತ್ತಮಕ್ಕಳು, ಗೋವಾದಲ್ಲಿ ಗೌಡ್ರು ಮುಂತಾದ ನಾಟಕಗಳಲ್ಲಿ ಎಲ್ಲ ಬಗೆಯ ಪಾತ್ರಗಳಲ್ಲಿ ನಟಿಸಿದ್ದಾರೆ.

ಚಲನಚಿತ್ರ, ಕಿರುತೆರೆಯಲ್ಲಿ ನಟಿಸಿರುವ ಮಧುಕೇಶ್, 'ಎಷ್ಟು ನಗ್ತಿ ನಗು' ಚಿತ್ರ ನಿರ್ದೇಶನ ಮಾಡಿದ್ದಾರೆ. ಕೆಬಿಆರ್ ಡ್ರಾಮಾ ಕಂಪನಿಯ ಮಹಾತ್ವಾಕಾಂಕ್ಷೆಯ ಶ್ರೀ ಶಿರಡಿ ಸಾಯಿಬಾಬಾ ನಾಟಕದ ನಿರ್ಮಾಪಕರಾಗಿ ರಂಗದ ಬಹುಆಯಾಮದಲ್ಲಿ ತೊಡಗಿಕೊಂಡಿದ್ದಾರೆ.

ಬೆಂಗಳೂರಿನ ಗುಬ್ಬಿ ರಂಗಮಂದಿರದಲ್ಲಿ ಕೆಬಿಆರ್ ಡ್ರಾಮಾ ಕಂಪನಿಯ 'ಪೋಲೀಸನ ಮಗಳು' ನಾಟಕದ ಐನೂರರ ಪ್ರದರ್ಶನದ ಸಮಯದಲ್ಲಿ ಚಿತ್ರರಂಗದ ದಂತಕತೆ ಡಾ. ರಾಜಕುಮಾರ್‌ರವರಿಂದ ಸನ್ಮಾನಕ್ಕೆ ಪಾತ್ರರಾಗಿದ್ದ ಮಧುಕೇಶ್ ಅವರಿಗೆ ಇದೀಗ ಕರ್ನಾಟಕ ನಾಟಕ ಅಕಾಡೆಮಿಯು ಕಲ್ಬುರ್ಗಿ ಕಮೆಡಿಯನ್ ಕೆ.ಹಿರಣ್ಣಯ್ಯ ದತ್ತಿ ಪುರಸ್ಕಾರ ನೀಡಿ ಗೌರವಿಸುತ್ತಿದೆ.

---



## ಗೂಡು ಸಾಹೇಬ್ ಚಟ್ನಿಹಾಳ

(ನಟರತ್ನ ಚಿಂದೋಡಿ ವೀರಪ್ಪನವರ ದತ್ತಿ ಪುರಸ್ಕಾರ)

ನಟರತ್ನ ಚಿಂದೋಡಿ ವೀರಪ್ಪನವರ ದತ್ತಿ ಪುರಸ್ಕಾರಕ್ಕೆ ಭಾಜನರಾದ ಶ್ರೀ ಗೂಡೂ ಸಾಹೇಬರು ಬಾಗಲಕೋಟೆಯ ಹುನಗುಂದದ ಇಳಕಲ್‌ನವರು. ಅವರಿಗೀಗ 77ರ ಹರೆಯ. 44 ವರ್ಷಗಳ ಅಖಂಡ ರಂಗಸೇವೆ ಇವರದು.

ತನ್ನ 20ರ ಹರಯದಲ್ಲಿ ಹವ್ಯಾಸಿ ಕಲಾವಿದರಾಗಿ ಸಾಮಾಜಿಕ ನಾಟಕಗಳಲ್ಲಿ ಅಭಿನಯ ಆರಂಭಿಸಿದ ಇವರು 1959ರಿಂದ ವೃತ್ತಿ ರಂಗ ಕಾಯಕಕ್ಕೆ ತೊಡಗಿಸಿಕೊಂಡರು. ಆರಂಭದಲ್ಲಿ ಶ್ರೀಪಾದರಾವ್ ಗರುಡ ಹಾಗೂ ಮಹಾಂತೇಶ ಶಾಸ್ತ್ರಿಗಳ ನಿರ್ದೇಶನದಲ್ಲಿ ಸುವರ್ಣ, ದಸರಾ, ರೂಪವತಿ, ಪ್ರಜಾಸರಕಾರ ಮುಂತಾದ ನಾಟಕಗಳಲ್ಲಿ ಪಾತ್ರವಹಿಸುವ ಅದರಲ್ಲೂ ಕಥಾನಾಯಕರಾಗಿ ಪಾಲ್ಗೊಂಡ ಅವಕಾಶ ಇವರದು.

ಆಗಿನ ಕಾಲದಲ್ಲೇ ಎಸ್.ಎಸ್.ಸಿ.ಪರೀಕ್ಷೆ ತೇರ್ಗಡೆ ಆಗಿದ್ದ ಅವರ ಆಧುನಿಕ ಓದು, ಪಾತ್ರ ನಿರ್ವಹಣೆಯಲ್ಲಿ ಅನುಕೂಲಕರವೂ ಆಗಿ ಪರಿಣಮಿಸಿತ್ತು, ಮುಂದೆ ಹುಚ್ಚೇಶ್ವರ ನಾಟ್ಯ ಸಂಘ ಕಮತಗಿ, ಬಿ.ಆರ್.ಅರಿಶಿಣಗೋಡಿ ಕಂಪನಿ, ಚಿತ್ತರಗಿ, ಗುಡಿಗೇರಿ ಕಂಪನಿಗಳಲ್ಲಿ ಲಂಚ ಸಾಮ್ರಾಜ್ಯ, ಬಸ್ ಕಂಡಕ್ಟರ್, ದಾರಿದೀಪ, ಭಾಗ್ಯಬಂತು ಬುದ್ಧಿ ಹೋಯ್ತು ಮುಂತಾದ ನಾಟಕಗಳಲ್ಲಿ ಪ್ರಮುಖ ಪಾತ್ರ ವಹಿಸಿದರು.

1976 ರಲ್ಲಿ ಶ್ರೀ ಗುರು ಮಹಾಂತೇಶ ನಾಟಕ ಸಂಘ ಇಲಕಲ್ ಎಂಬ ಕಂಪನಿ ಸ್ಥಾಪಿಸಿದರು. ಕಂಪನಿಯಲ್ಲಿ ಸಾಮಾಜಿಕ ನಾಟಕಗಳ ಜತೆ ಪವಾಡ ಪುರುಷರ ಮಹಾತ್ಮೆಗಳನ್ನು ಆಧರಿಸಿದ ನಾಟಕಗಳನ್ನು ಪ್ರಯೋಗಿಸುತ್ತ ಕಂಪನಿಯನ್ನು ಮುನ್ನಡೆಸಿದರು.

ಶ್ರೀಯುತರ ಇಬ್ಬರು ಮಕ್ಕಳಾದ ಸಲೀಮ ಮತ್ತು ಮೆಹಮೂದ ಅವರನ್ನೂ ರಂಗಜೀವನದಲ್ಲೇ ತೊಡಗಿಸಿದ ಇವರು ಮುಂದೆ ಮಕ್ಕಳ ಸಹಾಯದಿಂದ ಕಂಪನಿ ನಡೆಸುತ್ತ, ಸ್ವಂತ ಕಂಪನಿ ನಿಂತಾಗ ಹವ್ಯಾಸಿ ರಂಗ ತಂಡಗಳಲ್ಲಿ ಅಭಿನಯಿಸುತ್ತ 4 ದಶಕಗಳಿಗೂ ಹೆಚ್ಚುಕಾಲ ರಂಗದಲ್ಲಿ ಸಕ್ರಿಯರಾಗಿಯೇ ಬದುಕಿದರು.

ಇವರ ನಿರಂತರ ರಂಗ ಕಾಯಕವನ್ನು ಮನ್ನಿಸಿ ಕರ್ನಾಟಕ ನಾಟಕ ಅಕಾಡೆಮಿ 2015ರ ಈ ವಾರ್ಷಿಕ ದತ್ತಿ ಪ್ರಶಸ್ತಿಯನ್ನು ಇವರಿಗೆ ನೀಡುತ್ತಿದೆ.

---



## ಮಮತಾ ಗುಡೂರು (ಪದ್ಮಶ್ರೀ ಚಿಂದೋಡಿಲೀಲಾ ದತ್ತಿ ಪುರಸ್ಕಾರ)

ಮಮತಾಗುಡೂರು ವೃತ್ತಿರಂಗಭೂಮಿಯ ಹೆಸರಾಂತ ನಟಿ. ಹಾಸ್ಯ, ನಾಯಕಿ, ಖಳನಾಯಕಿ ಸೇರಿದಂತೆಎಲ್ಲಬಗೆಯ ಪಾತ್ರಗಳ ಸಲೀಸಾದ ನಟನೆಗೆ ಮಮತಾ ಹೆಸರುವಾಸಿ. ಹೆಣ್ಣುಮಗಳು ಎಂಬ ನಾಟಕದ ಖಳನಾಯಕಿ ಕಾಮಾಕ್ಷಿ, ಲಂಚಸಾಮ್ರಾಜ್ಯ, ಜೈಜವಾನ್ ಜೈಕಿಸಾನ್ ನಾಟಕಗಳ ಹಾಸ್ಯಪಾತ್ರಗಳು, ಇಲ್ಲಿಗೆ ಬಂತೋ ಸಂಗಯ್ಯ– ಲಲಿತಾ, ರೈತನ ಮಕ್ಕಳು– ಲಲಿತಾ, ಜಹಗೀರದಾರ ಜಗಳ–ಕಾತ್ಯಾಯಿನಿ, ಮಡದಿ ಕೊಟ್ಟ ಮಾತು–ಭಾರತಿ, ನರಗುಂದ ಬಂಡಾಯ–ರಾಜನರ್ತಕಿ, ಸೀತಾ ಸುಮಿತ್ರ–ಹೇಮಕ್ಕ ಪಾತ್ರಗಳು ಅವರಿಗೆ ಹೆಚ್ಚು ಹೆಸರುತಂದುಕೊಟ್ಟವೆ.

ಬಾಗಲಕೋಟೆ ಜಿಲ್ಲೆ ಇಳಕಲ್ ಸಮೀಪದಗುಡೂರು (ಎಸ್‌ಸಿ) ಗ್ರಾಮದ ಫಕ್ರುಸಾಬ್– ಇಮಾಂಬುದಂಪತಿಗೆ ಮಮ್ತಾಜ್ ಜನಿಸಿದರು. ಅರಿಷಿಣಗೋಡಿಕಂಪನಿಯಲ್ಲಿ 1960 ರದಶಕದಲ್ಲಿ ಅಕ್ಕ ಪ್ರಮೀಳಾ (ಫಾತಿಮಾ) ಗುಡೂರುದೊಡ್ಡ ಹೆಸರು ಮಾಡಿದ್ದರು. ಆರು ವರ್ಷದತಂಗಿ ಮಮತಾಳನ್ನು ಅಕ್ಕ ಅಲ್ಲಿಗೆ ಕರೆಸಿಕೊಂಡರು. ಮಮತಾ ಬಾಲಕಿಯಾಗಿದ್ದಾಗ ಗುಂಪು ಪಾತ್ರಗಳಲ್ಲಿ ಕಾಣಿಸಿಕೊಂಡರು. ನೃತ್ಯ ಮಾಡಿದರು. ಹದಿಹರೆಯದ ಮಮ್ತಾಜ್‌ಅವರು ಮಹಾಂತೇಶಶಾಸ್ತ್ರಿಗಳ ಏರಿದ ನಂಜು ನಾಟಕದ ಪುರುಷ ಪಾತ್ರಕ್ಕೆ ಬಣ್ಣ ಹಚ್ಚಿ ನಟಿಸಿದ ನಂತರ ಹಿಂತಿರುಗಿ ನೋಡಿದ್ದೇ ಇಲ್ಲ. ಮಮ್ತಾಜ್ ಈಗ ಮಮತಾಆದರು. ಅಭಿನಯದ ಎಲ್ಲ ಪಟ್ಟುಗಳನ್ನು ಅರಿಷಿಣ ಗೋಡಿಯವರ ಕಂಪನಿಯಲ್ಲಿ ಅಕ್ಕನೊಂದಿಗೆ ಕಲಿತುಕೊಂಡ ಮಮತಾ ಮುಂದಿನ ದಿನಗಳಲ್ಲಿ ಗುಡಿಗೇರಿ, ಸೂಡಿ ಶೆಟ್ರು, ಚಿತ್ತರಗಿ, ಮದಕೇರಿ ಯಮುನಪ್ಪ ಮುಂತಾದವರ ನಾಟಕ ಕಂಪನಿಗಳಲ್ಲಿ ತಲಾಒಂದೆರಡು ವರ್ಷ ಎಲ್ಲ ಬಗೆಯ ಪಾತ್ರಗಳಲ್ಲಿ ಅಭಿನಯಿಸಿದರು. ವೃತ್ತಿ ನಾಟಕ ಕಂಪನಿಗಳಲ್ಲಿ 30 ವರ್ಷ ಅಭಿನಯಿಸಿದ ನಂತರ ಬಾಗಲಕೋಟೆ, ಬಳ್ಳಾರಿ, ರಾಯಚೂರು, ಕೊಪ್ಪಳ ಭಾಗದ ಹಳ್ಳಿಗಾಡಿನ ಅಮೆಚೂರ್ ನಾಟಕಗಳಲ್ಲಿ ಪೌರಾಣಿಕ, ಸಾಮಾಜಿಕ ನಾಟಕಗಳಲ್ಲೂ ನಟಿಸಿದರು. ಮಮತಾ ಗುಡೂರು ಅವರಿಗೆ ಪ್ರತಿಷ್ಠಿತ ವರದರಾಜು ಡಾ.ರಾಜಕುಮಾರ್ ಪ್ರಶಸ್ತಿ ಲಭಿಸಿದೆ. ಅವರ ಸುದೀರ್ಘ ರಂಗಸೇವೆಯನ್ನು ಮನ್ನಿಸಿ ಇದೀಗ ಕರ್ನಾಟಕ ನಾಟಕ ಅಕಾಡೆಮಿಯು 2015 ರ ಪದ್ಮಶ್ರೀ ಚಿಂದೋಡಿ ಲೀಲಾ ದತ್ತಿ ಪುರಸ್ಕಾರ ನೀಡಿಗೌರವಿಸಲಿದೆ.

---



## ದೇವಿರಪ್ಪ ಶಿವಪ್ಪ ಬಣಕಾರ

ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನ ನಾಗವಂದದ ದೇವೀರಪ್ಪ ಅವರು ನಟ, ನಿರ್ದೇಶಕರಾಗಿ 25 ಕ್ಕೂ ಹೆಚ್ಚು ವರ್ಷಗಳ ಕಾಲದಿಂದ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳಲ್ಲಿ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ನಾಗವಂದದಲ್ಲಿ ಶ್ರೀ ಬನಶಂಕರಿ ನಾಟ್ಯಕಲಾ ಸಂಘ ಸ್ಥಾಪಿಸಿ ಅದರ ಮೂಲಕ ವಿದ್ಯಾರ್ಥಿಗಳಿಗೆ, ಯುವಕರಿಗೆ ರಂಗತರಬೇತಿ ನೀಡಿ ಹಲವಾರು ನಾಟಕಗಳನ್ನು ಸಿದ್ಧಪಡಿಸಿದ್ದಾರೆ.

ಪ್ರೌಢಶಾಲಾ ವಿದ್ಯಾರ್ಥಿನಿಯರಿಗಾಗಿ ಇವರು ನಿರ್ದೇಶಿಸಿದ ಲವ–ಕುಶ ಪೌರಾಣಿಕ ನಾಟಕ ದಾವಣಗೆರೆ, ಶಿವಮೊಗ್ಗ, ಹಾವೇರಿ ಜಿಲ್ಲೆಯಾದ್ಯಂತ 40 ಕ್ಕೂ ಹೆಚ್ಚು ಪ್ರಯೋಗಗಳನ್ನು ಕಂಡಿದೆ. ಸತ್ಯ ಹರಿಶ್ಚಂದ್ರ, ಬೇಡರ ಕಣ್ಣಪ್ಪ, ಮಹಾರಥಿ ಕರ್ಣ, ನಲ್ಲೂರ ನಂಬೆಕ್ಕ, ಚಂದ್ರಹಾಸ, ಕುರುಕ್ಷೇತ್ರ ಮೊದಲಾದ ನಾಟಕಗಳನ್ನು ನಿರ್ದೇಶಿಸಿ ಅಭಿನಯಿಸಿದ್ದಾರೆ. ಇವರ ರಂಗ ಸೇವೆ ಗುರುತಿಸಿ ಹಲವಾರು ಸಂಸ್ಥೆಗಳು ಇವರನ್ನು ಸನ್ಮಾನಿಸಿವೆ. ಗ್ರಾಮೀಣ ಭಾಗದಲ್ಲಿ ವಿದ್ಯಾರ್ಥಿ ಯುವಜನತೆಯ ಮಧ್ಯ ರಂಗಭೂಮಿಯನ್ನು ಜೀವಂತವಾಗಿಡುವ ಇವರ ಪ್ರಯತ್ನವನ್ನು ಮನ್ನಿಸಿ ಇದೀಗ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ವೆಂಕಟೇಶ ನಾರಾಯಣರಾವ್ ಕುಲಕರ್ಣಿ

ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಸೋಮನಕಟ್ಟೆಯಲ್ಲಿ ದಿನಾಂಕ 7-01-1942ರಲ್ಲಿ ಜನಿಸಿದ ಶ್ರೀಯುತರು 1954ರಲ್ಲಿ ಶಾಲಾ ದಿನಗಳಿಂದಲೇ ರಂಗಭೂಮಿಯತ್ತ ಒಲವು ಬೆಳಸಿಕೊಂಡು ನಿಂಗಬಸಯ್ಯ ಬೆಳವಣಿಕಿ, ರಾಮಚಂದ್ರ ಸಾಖರೆ, ರಹಿಮಾನಸಾಬ ದೊಡಮನಿ, ವೆ.ರುದ್ರಯ್ಯಸ್ವಾಮಿ ಬೆಳವಣಿಕಿ ಮುಂತಾದ ಗುರುಗಳ ಬಳಿ ಕಲಿತು 1958ರಿಂದಲೂ ನಟನಾಗಿ, ನಿರ್ದೇಶನ ಮತ್ತು ಹಾರ್ಮೋನಿಯಂ ವಾದಕರಾಗಿ ಶ್ರೀ ಶಾರದಾ ಸಂಗೀತ ನಾಟಕ ಸಂಘ, ಗೋಕಾಕ, ಶ್ರೀ ಮಹೇಶ ನಾಟ್ಯ ಸಂಘ, ನ್ಯಾಮತಿ, ಶ್ರೀ ಸಿದ್ದಲಿಂಗೇಶ್ವರ ನಾಟ್ಯ ಸಂಘ, ಶಿರೂರ, ಶ್ರೀ ವೆಂಕಟೇಶ್ವರ ಸಂಗೀತ ಸೇವಾ ನಾಟ್ಯಸಂಘ, ನರಗುಂದ, ಶ್ರೀ ಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ, ಸುಳ್ಳ, ಮುಂತಾದ ಕಂಪನಿಗಳಲ್ಲಿ ಸೇವೆಸಲ್ಲಿಸಿರುತ್ತಾರೆ. ಇವರು ದಸರಾ, ದೀಪಾವಳಿ, ಶ್ರೀರಕ್ಷ, ಸೌಭಾಗ್ಯಲಕ್ಷ್ಮೀ, ಜೀವನಯಾತ್ರಾ, ಹೇಮರೆಡ್ಡಿ ಮಲ್ಲಮ್ಮ, ನೆಲ್ಲೂರ ನೆಂಬಕ್ಕ, ಅಕ್ಷಯಾಂಬರ, ಕುರುಕ್ಷೇತ್ರ, ರಕ್ತರಾತ್ರಿ, ಪಾಶುಪತಾಸ್ತ್ರ, ಕಿತ್ತೂರು ಚೆನ್ನಮ್ಮ, ವಿಜಯನಗರ ಸಾಮ್ರಾಜ್ಯ, ಎಚ್.ಎಮ್.ನಾಯಕ, ಮಾತಂಗ ಕನ್ಯೆ, ಜಗಜ್ಯೋತಿ ಬಸವೇಶ್ವರ, ಟಿಪ್ಪುಸುಲ್ತಾನ, ಕೊಂಡುತಂದ-ಗಂಡ, ಮಲಮಗಳು, ಬಂಜೆತೊಟ್ಟಿಲು, ಕಣ್ಣಿಟ್ಟ ಹೆಣ್ಣು, ಶಿವರಾತ್ರಿ, ಬಡತನಭೂತ, ತಾಯಿಯ ಕರುಳು, ನರನಾಗರ, ನಾಲವತ್ವಾಡದ ಶರಣರು, ವರ ನೋಡಿ ಹೆಣ್ಣು ಕೊಡು, ಮುಂತಾದ ನಾಟಕಗಳನ್ನು ನಿರ್ದೇಶಿಸಿರುತ್ತಾರೆ ಹಾಗೂ ಸಂಗೊಳ್ಳಿ ರಾಯಣ್ಣನ ರೇಡಿಯೋ ನಾಟಕಕ್ಕೆ ಸಂಗೀತ ನೀಡಿದ್ದಾರೆ.

ಹೆಸರಾಂತ ಗಾಯಕರಾದ ಪದ್ಮಶ್ರೀ ಶ್ರೀ ಬಸವರಾಜ ರಾಜಗುರು, ಪದ್ಮಶ್ರೀ ಪಂ.ಎಮ್. ವೆಂಕಟೇಶ ಕುಮಾರ, ಶ್ರೀ ಡಿ. ಕುಮಾರದಾಸ ಮುಂತಾದ ಹಿರಿಯ ಗಾಯಕರಿಗೆ ಹಾರ್ಮೋನಿಯಂ ಸಾಥ್ ನೀಡಿರುವ ಶ್ರೀಯುತರ ರಂಗಸೇವೆಯನ್ನು ಗುರುತಿಸಿ 2004ರಲ್ಲಿ ಬಾಗಲಕೋಟೆ ಜಿಲ್ಲಾ ಆಡಳಿತವು ಜಿಲ್ಲಾಮಟ್ಟದ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ ಹಾಗೂ ಹಲವಾರು ಸಂಘಸಂಸ್ಥೆಗಳು ಸನ್ಮಾನಿಸಿವೆ.

ನಾಟಕ ಮಾಸ್ತರು ಮತ್ತು ನಿರ್ದೇಶಕರಾಗಿ ವೃತ್ತಿ ರಂಗಭೂಮಿಯಲ್ಲಿ ಸೇವೆ ಸಲ್ಲಿಸಿರುವ ಇವರಿಗೆ ಕರ್ನಾಟಕ ನಾಟಕ ಅಕಾಡೆಮಿ 2015 ನೇ ಸಾಲಿನ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಕೆ.ವಿ. ಕೃಷ್ಣಯ್ಯ

ಕೆ.ವಿ.ಕೃಷ್ಣಯ್ಯ ಹೆಸರಾಂತ ನಾಟಕಕಾರರು. 20 ನಾಟಕ ಪ್ರಕಟಿಸಿದ್ದಾರೆ. ಅನೇಕ ನಾಟಕಗಳು ನೂರಾರು ಪ್ರದರ್ಶನ ಕಂಡಿವೆ. ನಟನಾಗಿ, ನಾಟಕಕಾರನಾಗಿ, ಸಂಘಟಕನಾಗಿ ಅರವತ್ತು ವರ್ಷಕ್ಕೂ ಮಿಗಿಲಾದ ಸೇವೆ ಅವರದು.

ಬೆಂಗಳೂರಿನ ಪಟೇಲ್ ವೆಂಕಟರಾವ್– ಪದ್ಮಾವತಮ್ಮ ದಂಪತಿಗೆ 1934 ರಲ್ಲಿ ಜನಿಸಿದ ಕೃಷ್ಣಯ್ಯ, ಸ್ತ್ರೀಪಾತ್ರದ ಮೂಲಕ ಬಾಲ್ಯದಲ್ಲೇ ರಂಗ ಪ್ರವೇಶಿಸಿದರು. ಅನಕೃ, ನಾಡಿಗೇರ ಕೃಷ್ಣರಾಯರ ಒಡನಾಟದಿಂದ ಹಾಸ್ಯ ಪ್ರಹಸನ, ಸಣ್ಣಕತೆ ರಚನೆಯಲ್ಲಿ ತೊಡಗಿಸಿಕೊಂಡ ಅವರು, ಮುಂದೆ ರಂಗಭೂಮಿಗೆ ತಮ್ಮನ್ನು ಸಮರ್ಪಿಸಿಕೊಂಡರು. ಕೃಷ್ಣದೇವರಾಯ, ಕನಸಿನಲ್ಲಿ ಕಂಡ ಕೈಲಾಸ, ದ್ರೋಹ, ಜಗದೋದ್ಧಾರಕರು, ಶಿಲ್ಪಾಚಾರ್ಯ ಜಕ್ಕಣ್ಣ, ಉತ್ಸವ, ಊರಜಾತ್ರೆ, ಪ್ರತಿಫಲ ಸೇರಿದಂತೆ ಇಪ್ಪತ್ತಕ್ಕೂ ಅಧಿಕ ನಾಟಕಗಳನ್ನು ಹಾಗೂ ದೂರದರ್ಶನ ಚಂದನಕ್ಕಾಗಿ ನಾಲ್ಕು ನಾಟಕಗಳನ್ನು ರಚಿಸಿದ್ದಾರೆ. ನೂರಕ್ಕೂ ಅಧಿಕ ಹಾಸ್ಯ ಪ್ರಹಸನ ಬರೆದಿದ್ದಾರೆ. ಒಂದು ಮರದ ಸುತ್ತ ಎಂಬ ನಾಟಕವನ್ನು ಧಾರಾವಾಹಿಯಾಗಿ ಚಿತ್ರಿಸಿದ್ದಾರೆ. ದಾಹ, ಧರ್ಮದ್ವೀಪ ಚಿತ್ರಗಳಿಗೆ ಸಂಭಾಷಣೆ ಬರೆದಿದ್ದಾರೆ. ದಕ್ಷಿಣ ಕನ್ನಡಿಗರ ಸಂಘ, ಚಿತ್ರ ರಸಿಕರ ಸಂಘ, ರಂಗಪ್ರಿಯಾ

ಕಲಾಸಂಘದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿರುವ ಅವರು, ಮಯಾರ ಕಲಾಸಂಘದ ಅಧ್ಯಕ್ಷರಾಗಿ 35 ವರ್ಷಗಳ ಕಾಲ ರಂಗಸಂಘಟನೆಯಲ್ಲಿ ತೊಡಗಿಸಿಕೊಂಡಿದ್ದಾರೆ. ರಂಗಭೂಮಿ ರತ್ನ, ಇಂದಿರಾ ಪ್ರಿಯದರ್ಶಿನಿ, ಸಾಹಿತ್ಯ ಶಂಕರ, ರಂಗಾಭರಣ ಮುಂತಾದ ಪ್ರಶಸ್ತಿಗೆ ಪಾತ್ರರಾಗಿರುವ ಕೃಷ್ಣಯ್ಯ ಅವರಿಗೆ ಇದೀಗ ಕರ್ನಾಟಕ ನಾಟಕ ಅಕಾಡೆಮಿಯು 2015ರ ಸಾಲಿನ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಪೂಜಾರ ಚಂದ್ರಪ್ಪ

ದಾವಣಗೆರೆಜಿಲ್ಲೆ ಹರಪನಹಳ್ಳಿ ತಾಲ್ಲೂಕು ಅರಸೀಕೆರೆ ದಂಡಿನದುರುಗಮ್ಮ (ಶ್ರೀ ದಂಡಿನದುರ್ಗಾದೇವಿ) ದಲಿತರು ಸೇರಿದಂತೆಎಲ್ಲಜನಾಂಗದಆರಾಧ್ಯದೇವತೆ. ಹೊಳಲು ಫಕೀರೇಶ ಗವಾಯಿಗಳು ದುರುಗಮ್ಮದೇವಿ ಕುರಿತ ಪುರಾಣ, ಐತಿಹ್ಯ ಆಧರಿಸಿ ಅರ್ಧ ಶತಮಾನದ ಹಿಂದೆಒಂದು ನಾಟಕ ರಚಿಸಿ ಅರಸೀಕೆರೆಯ ದಲಿತರಿಗೆ ನಿರ್ದೇಶಿಸಿದರು. ಆ ನಾಟಕಜಯಭೇರಿ ಭಾರಿಸಿತು. ಪ್ರತಿವರ್ಷ ಜಾತ್ರೆಗೆ ತಪ್ಪದೆ ನಾಲ್ಕಾರು ಪ್ರದರ್ಶನ ಕಾಣುತ್ತಿದ್ದ ನಾಟಕ ದಾವಣಗೆರೆ, ಬಳ್ಳಾರಿ ಜಿಲ್ಲೆಗಳ ಹಲವು ಊರುಗಳಲ್ಲಿ ಇದುವರೆಗೆ 267 ಪ್ರದರ್ಶನ ಕಂಡಿದೆ. ಇದರಲ್ಲಿ ದುರುಗಮ್ಮ ದೇವಿ ಪಾತ್ರವನ್ನು ಮನೋಜ್ಞವಾಗಿ ಮಾಡುತ್ತಿದ್ದ ಪೂಜಾರ ಚಂದ್ರಪ್ಪನವರು ಆ ಪಾತ್ರದಿಂದಲೇ ಖ್ಯಾತಿ ಪಡೆದರು.

ಪೂಜಾರ ಮರಿಯಪ್ಪ–ಹಾಲಮ್ಮ ಎಂಬ ಕೂಲಿಕಾರದಂಪತಿಗೆ 1951 ರಲ್ಲಿ ಜನಿಸಿದ ಚಂದ್ರಪ್ಪ ಚಿಕ್ಕವಯಸ್ಸಿನಲ್ಲಿಯೇ ವಚನ, ಜನಪದ ಹಾಡು ಹೇಳುತ್ತ, ಬಯಲಾಟ, ನಾಟಕಗಳಲ್ಲಿ ಚಿಕ್ಕಪುಟ್ಟ ಪಾತ್ರದಿಂದ ಗಮನ ಸೆಳೆದಿದ್ದರು. ದುರುಗಮ್ಮನ ಕೃಪೆಯಿಂದ ದೊಡ್ಡ ನಟರಾಗಿ ಬೆಳಗಿದರು. ಫಕೀರೇಶ ಗವಾಯಿಗಳು ಹಾಗೂ ಗಜಾಪುರದ ಹೆಗ್ಗಪ್ಪ ಗವಾಯಿಗಳಿಂದ ಹಾರ್ಮೋನಿಯಂ ವಾದನ ಹಾಗೂ ರಾಗಸಂಯೋಜನೆ ಕಲಿತುಕೊಂಡ ಚಂದ್ರಪ್ಪನವರು– ತದನಂತರ ಹಳ್ಳಿಗಳಲ್ಲಿ ನಾಟಕ ಕಲಿಸುವ ಮೇಷ್ಟ್ರಾಗಿ ತಮ್ಮನ್ನು ಗ್ರಾಮೀಣ ರಂಗಭೂಮಿಗೆ ಸಮರ್ಪಿಸಿಕೊಂಡರು. ದುರ್ಗಾಂಬಿಕಾ ನಾಟಕ ಕಲಾಸಂಘ ಸ್ಥಾಪಿಸಿ ಆದರಿಂದ ನಾಟಕಗಳನ್ನು ಆಯೋಜಿಸಿದರು. ಗ್ರಾಮೀಣ ಪ್ರದೇಶದಲ್ಲಿ ಕೊಂಡುತಂದ ಗಂಡ, ಪತಿ ಭಕ್ತಿ, ಹೆಜ್ಜೆತಪ್ಪಿದ ಹೆಣ್ಣು, ಗಂಡನ ಮಾನ, ಜಗಜ್ಯೋತಿ ಬಸವೇಶ್ವರ, ಆದರ್ಶ ಪ್ರೇಮ ಮುಂತಾದ ಹತ್ತಾರು ನಾಟಕಗಳನ್ನು ನಿರಂತರವಾಗಿ ಕಲಿಸಿಕೊಂಡು ಬಂದಿದ್ದಾರೆ.

ಚಂದ್ರಪ್ಪನವರ ಗ್ರಾಮೀಣ ರಂಗಸೇವೆ ಮನ್ನಿಸಿ ಶ್ರೀ ಜಯದೇವ ಪ್ರಶಸ್ತಿ, ಪಂಚಮ ಶ್ರೀ ಪ್ರಶಸ್ತಿ ಸೇರಿದಂತೆ ಹತ್ತಾರು ಗೌರವ ಸನ್ಮಾನಗಳನ್ನು ನೀಡಿ ಮಠಮಾನ್ಯಗಳು ಹಾಗೂ ಸಂಘ ಸಂಸ್ಥೆಗಳು ಗೌರವಿಸಿವೆ. ಇದೀಗ ಶ್ರೀಯುತ ಚಂದ್ರಪ್ಪನವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 2015 ರ ಸಾಲಿನ ಪ್ರಶಸ್ತಿ ನೀಡಿಗೌರವಿಸುತ್ತಿದೆ.

---



## ರಾಮಚಂದ್ರರಾವ್ ಟಿ.ಆರ್.

ಬೆನಕ ಚಂದ್ರು ಎಂದೇ ಖ್ಯಾತರಾದ ರಾಮಚಂದ್ರರಾವ್ ಜನಿಸಿದ್ದು 1947ರಲ್ಲಿ. ಬಿ.ವಿ.ಕಾರಂತರ ಐತಿಹಾಸಿಕ ರಂಗಘಟನೆಯ ನಾಟಕಗಳಾದ ಈಡಿಪಸ್, ಜೋಕುಮಾರ ಸ್ವಾಮಿ, ಸಂಕ್ರಾಂತಿ ನಾಟಕಗಳಿಗೆ ಸಾಕ್ಷಿಯಾದ ಇವರು ಇದರಿಂದ ಪ್ರೇರಣೆ ಪಡೆದು ಆಧುನಿಕ ರಂಗಭೂಮಿಯ ಒಲವನ್ನು ಬಲಪಡಿಸಿಕೊಂಡರು.

ಉಲ್ಲಾಳ ಷೀಲ್ಡ್ ನಾಟಕ ಸ್ಪರ್ಧೆಯ ಕಾಲೇಜು ನಾಟಕಗಳ ಮೂಲಕ ಅಧಿಕೃತ ಪ್ರವೇಶ ಪಡೆದ ಇವರು ರಂಗಭೂಮಿಯ ವಿಶೇಷ ಅಧ್ಯಯನವನ್ನು ಖ್ಯಾತ ರಂಗ ತಜ್ಞ

ಎನ್.ಎಸ್. ವೆಂಕಟರಾಮ್ ಅವರಿಂದ ಪಡೆದರು. ನೇಪಥ್ಯದಲ್ಲಿ ವಿಶೇಷ ಪರಿಣತಿ ಸಾಧಿಸಿ ಆಧುನಿಕ ರಂಗಭೂಮಿಯ ಮಹತ್ವದ ನಾಟಕ ನಿರ್ಮಾಣದಲ್ಲಿ ಪಾಲ್ಗೊಂಡಿದ್ದಾರೆ.

ಬಿ.ವಿ.ಕಾರಂತ, ಬಿ.ಜಯಶ್ರೀ, ಆರ್.ನಾಗೇಶ, ಪ್ರಸನ್ನ, ನಾಗಾಭರಣ, ಬೆನೆವಿಟ್ಸ್, ಸಿ.ಆರ್.ಸಿಂಹ, ರಣಜಿತ್ ಕಪೂರ ಮೊದಲಾದ ರಂಗದಿಗ್ಗಜರೊಂದಿಗೆ ರಂಗ ಕಾಯಕ ಕೈಗೊಂಡಿದ್ದಾರೆ. ಸಂಕೇತ್, ಕಲಾಗಂಗೋತ್ರಿ, ಸೂತ್ರಧಾರ ಮೊದಲಾದ ಪ್ರಸಿದ್ಧ ರಂಗತಂಡಗಳೊಂದಿಗೆ ಕೆಲಸ ಮಾಡಿದ ಅನುಭವ ಇವರಲ್ಲಿದೆ. ಐ.ಟಿ.ಐ. ಲಲಿತ ಕಲಾ ಸಂಘದ ವತಿಯಿಂದ ನಡೆದ ಬಹುಭಾಷಾ ನಾಟಕಗಳಲ್ಲಿ ನಿರ್ದೇಶನ, ಬೆಳಕು ನಿರ್ವಹಣೆ, ರಂಗಸಜ್ಜಿಕೆ ಮುಂತಾದ ಹಲವು ಪ್ರಕಾರಗಳಲ್ಲಿ ಕೆಲಸ ನಿರ್ವಹಿಸಿ ಮನ್ನಣೆ ಪಡೆದಿದ್ದಾರೆ. ಸತ್ತವರ ನೆರಳು, ಹಯವದನ, ಹ್ಯಾಮ್ಲೆಟ್, ನಾಯಿಕತೆ, ಮೃಚ್ಛಕಟಿಕ, ಹುತ್ತವ ಬಡಿದರೆ, ಅಂಜುಮಲ್ಲಿಗೆ ಮೊದಲಾದ ಪ್ರಸಿದ್ಧ ನಾಟಕಗಳಲ್ಲಿ ನಟರಾಗಿ, ತಂತ್ರಜ್ಞರಾಗಿ ದುಡಿದಿದ್ದಾರೆ. ಹಲವಾರು ರೇಡಿಯೊ ನಾಟಕ, ಮೂಕಾಭಿನಯದಲ್ಲಿಯೂ ಪ್ರಯೋಗ ನಡೆಸಿದ್ದಾರೆ.

ರಷ್ಯನ್ ಬ್ಯಾಲೆ ತಂಡ, ಫ್ರೆಂಚ್ ರಂಗತಂಡ, ಇಂಗ್ಲಿಷ್ ಥಿಯೇಟರ್ ನಾಟಕಗಳಲ್ಲಿ ಭಾಗವಹಿಸಿ ರಂಗಾನುಭವವನ್ನು ವಿಸ್ತರಿಸಿದ್ದಾರೆ. ಭಾರತದ ಹಲವು ಕಡೆಗಳಲ್ಲಿ ರಂಗಸಂಚಾರ ನಡೆಸಿದ ಇವರ ಅನುಭವವನ್ನೂ, ರಂಗ ಸೇವೆಯನ್ನೂ ಗೌರವಿಸಿ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿ ನೀಡಿ ಇವರನ್ನುಗೌರವಿಸುತ್ತಿದೆ.

---



## ಕೆ.ವಿ. ವೆಂಕಟೇಶ್

ಮೈಸೂರು ಸೀಮೆಯಲ್ಲಿ ಪ್ರದರ್ಶನ ಕಾಣುವ ಪೌರಾಣಿಕ, ಐತಿಹಾಸಿಕ ನಾಟಕಗಳ ವೈವಿಧ್ಯಮಯ ಪಾತ್ರಗಳಲ್ಲಿ ನಟಿಸಿ ಹೆಸರು ಮಾಡಿರುವ ಕಲಾವಿದ ಕೆ.ವಿ.ವೆಂಕಟೇಶ್ ಅವರು. ಕುಸ್ತಿ, ಚಿತ್ರಬಿಡಿಸುವುದು, ಪ್ರಸಾಧನ ಮುಂತಾದ ಕಲೆಯನ್ನು ಒಲಿಸಿಕೊಂಡಿರುವ ವೆಂಕಟೇಶ್ ಬಹುಮುಖಿ ಪ್ರತಿಭಾವಂತರು.

ಚಾಮರಾಜನಗರ ಜಿಲ್ಲೆ ಗುಂಡ್ಲುಪೇಟೆಯ ವೆಂಕಟಪ್ಪ– ವೆಂಕಟಮ್ಮ ದಂಪತಿಗೆ 1930 ರಲ್ಲಿ ಜನಿಸಿದ ವೆಂಕಟೇಶ್, ಹದಿಹರೆಯದಲ್ಲೇ ದೇವದಾಸಿ ನಾಟಕದ ಹರಿದಾಸ ಎಂಬ ಮುಖ್ಯ ಪಾತ್ರಕ್ಕೆ ಬಣ್ಣ ಹಚ್ಚಿದರು. ರಾಮಾಯಣದಲ್ಲಿ ಲಂಕಿಣಿ, ಶನಿಮಹಾತ್ಮೆಯಲ್ಲಿ ಚಂದ್ರಸೇನಾ, ದಾನಶೂರ ಕರ್ಣದಲ್ಲಿ ಭೀಮ, ಕುರುಕ್ಷೇತ್ರದಲ್ಲಿ ದುರ್ಯೋಧನ, ವಿಷಜ್ವಾಲೆಯಲ್ಲಿ ದುರ್ಗಸೇನ ಹಾಗೂ ವಿಜಯ, ಭಾರತ ಕೇಸರಿಯಲ್ಲಿ ಪೌರವ, ಈಡಿಪಸ್ ನಾಟಕದಲ್ಲಿ ಕುರಿ ಮೇಯಿಸುವವ, ಮಹಾತ್ಯಾಗಿಯಲ್ಲಿ ರಂಗಣ್ಣ ಹಾಗೂ ಎಚ್ಚಮ ನಾಯಕ ಸೇರಿದಂತೆ ಹತ್ತಾರು ನಾಟಕಗಳ ನೂರಾರು ಪ್ರದರ್ಶನಗಳಲ್ಲಿ ನಟರಾಗಿ ಭಾಗವಹಿಸಿದ್ದಾರೆ. ಮೈಸೂರು, ಚಾಮರಾಜನಗರ ಜಿಲ್ಲೆಯ ಹಲವು ಹಳ್ಳಿ, ಪಟ್ಟಣಗಳಲ್ಲಿ ಈ ನಾಟಕಗಳು ಪ್ರಯೋಗಗೊಂಡಿವೆ.

ವಿಶ್ವಕನ್ನಡ ಸಮ್ಮೇಳನ, ಗಡಿನಾಡು ಉತ್ಸವ, ಸಾಹಿತ್ಯ ಸಮ್ಮೇಳನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹಲವು ಪ್ರದರ್ಶನ ಹಾಗೂ ಉತ್ಸವಗಳಲ್ಲಿ ನಟನಾಗಿ, ಮೇಕಪ್ ಕಲಾವಿದನಾಗಿ ಭಾಗವಹಿಸಿದ್ದಾರೆ, ಸತ್ಕಾರಕ್ಕೊಳಪಟ್ಟಿದ್ದಾರೆ.

ಇದೀಗ ಕರ್ನಾಟಕ ನಾಟಕ ಅಕಾಡೆಮಿಯು 2015 ನೇ ಸಾಲಿನ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಎಸ್.ಕೆ. ಸೂರಯ್ಯ

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ಕಾಟಪ್ಪನ ಹಳ್ಳಿಯ ಎಸ್.ಕೆ. ಸೂರಯ್ಯನವರು ಹುಟ್ಟಿದ್ದು 1958ರಲ್ಲಿ. ಚಿಕ್ಕಂದಿನಲ್ಲಿಯೇ ಬಯಲಾಟ ಪ್ರವೇಶ ಮಾಡಿದ ಇವರು ಕೀಚಕ ವಧಾ, ವಿರಾಟಪರ್ವ, ಶಬರ ಶಂಕರ ವಿಲಾಸ, ರತಿಕಲ್ಯಾಣ ಮುಂತಾದ ಬಯಲಾಟಗಳಲ್ಲಿ ವಿವಿಧ ಪಾತ್ರಗಳನ್ನು ಮಾಡುತ್ತ ಜನಪದ ರಂಗಭೂಮಿಯ ವ್ಯಾಕರಣವನ್ನು ಪರಿಚಯಿಸಿಕೊಂಡರು.

ಊರಿನ ಯುವಕರಿಗೆ ಕೋಲಾಟ ಕಲಿಸುತ್ತ, ಭಜನೆಗಳ ತಂಡ ಕಟ್ಟುತ್ತ ರಂಗದ ಕುಣಿತ ಹಾಗೂ ಸಂಗೀತದಲ್ಲಿ ಪರಿಣತಿ ಪಡೆದ ಇವರು ಈ ಎಲ್ಲ ಅನುಭವಗಳೊಂದಿಗೆ ಶ್ರೀ ಕಾಟಲಿಂಗೇಶ್ವರ ನಾಟಕ ಸಂಘ ಸ್ಥಾಪಿಸಿ ಹಲವಾರು ನಾಟಕಗಳ ನಿರ್ಮಿತಿಗೆ ಕಾರಣರಾದರು.

ಬದಲಾದ ಕಾಲಘಟ್ಟಕ್ಕೆ ಅನುಗುಣವಾಗಿ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸುತ್ತ ಬಂದಿದ್ದಾರೆ. ಭಕ್ತ ಸುಧನ್ವ, ಚಕ್ರವ್ಯೂಹ, ದಳವಾಯಿ ಮುದ್ದಣ್ಣ, ವೀರಮದಕರಿ, ಬಸ್ ಹಮಾಲ, ಶಿವರಾತ್ರಿ, ಆಶಾಲತಾ ಇವೇ ಮೊದಲಾದ ನಾಟಕಗಳು ಇವರ ಅಭಿನಯವನ್ನು ಕಂಡಿವೆ. ಇವರ ಮದಕರಿ ನಾಯಕ ಪಾತ್ರ ಅಪಾರ ಮೆಚ್ಚುಗೆ ಗಳಿಸಿದ್ದಲ್ಲದೇ 53ಕ್ಕೂ ಹೆಚ್ಚು ಪ್ರದರ್ಶನ ಕಂಡಿದೆ, ದೆಹಲಿಯ ಕರ್ನಾಟಕ ಭವನದಲ್ಲಿಯೂ ಪ್ರದರ್ಶಿತವಾಗಿದೆ.

ಪರಿಶಿಷ್ಟ ಜಾತಿ, ವರ್ಗಗಳ ನಾಟಕೋತ್ಸವಗಳನ್ನೂ ಸಂಘಟಿಸಿದ ಇವರನ್ನು ಚಿತ್ರದುರ್ಗ ಜಿಲ್ಲಾ ರಾಜ್ಯೋತ್ಸವ ಸಮಿತಿ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ.

ಗ್ರಾಮೀಣ ಬದುಕಿಗೆ ರಂಗವ್ಯಾಕರಣ ಪರಿಚಯಿಸಿದ ಇವರ ಸಾಧನೆಯನ್ನು ಮನ್ನಿಸಿ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಎಸ್. ಸರೋಜಿನಿ

ಮೈಸೂರಿನ ಸರೋಜಿನಿ ಅವರಿಗೆ ಈಗ 74 ವರ್ಷ ವಯಸ್ಸು. ತಂದೆ ಶ್ರೀನಿವಾಸ ಅಯ್ಯಂಗಾರ ಹಾಗೂ ತಾಯಿ ಅಂಬುಜಮ್ಮ ಇಬ್ಬರೂ ಕಲಾವಿದರು. ರಂಗತರಬೇತಿಯಡಿ ರಂಗಪಾಠ ಕಲಿತು 10ನೇ ವಯೋಮಾನದಲ್ಲಿಯೇ ಚಾಮುಂಡೇಶ್ವರಿ ಕಂಪನಿಯಲ್ಲಿ ಪಾತ್ರವಹಿಸಲು ಆರಂಭಿಸಿದ ಸರೋಜಿನಿ ನಂತರ ರಾಜ್ಯದ ಅನೇಕ ಭಾಗಗಳಲ್ಲಿ ನಟರಾಗಿ ಪಾಲ್ಗೊಂಡರು. ಶೇಷ ಕಮಲ ಕಲಾಮಂಡಳಿ, ಜಮಖಂಡಿ ಕಂಪನಿ, ಹೂಗಾರ ಕಂಪನಿ, ಗುಡಿಗೇರಿ ಕಂಪನಿ, ಕೆ.ಬಿ.ಆರ್. ಡ್ರಾಮಾ ಕಂಪನಿ ಹೀಗೆ ಪ್ರಸಿದ್ಧ ಕಂಪನಿಗಳೊಂದಿಗೆ ಇವರದು ರಂಗಬಾಳ್ವೆ, ತಾಯಿ ಅಂಬುಜಮ್ಮನವರು ವಿಶಿಷ್ಟವಾದ 'ರಾಜ ರಾಜೇಶ್ವರಿ ಸ್ತ್ರೀ ನಾಟಕ ಮಂಡಳಿ ಕಟ್ಟಿದ ಮೇಲೆ ಅದರಲ್ಲಿ ಮುಖ್ಯ ಭೂಮಿಕೆ ವಹಿಸುತ್ತ ಬಂದರು. ಅಭಿನಯ ಹಾಗೂ ನೃತ್ಯದಲ್ಲಿ ವಿಶೇಷ ಪರಿಣಾತಿಹೊಂದಿದ ಇವರು ಇಂದಿಗೂ ಕಲಾಸೇವೆಯಲ್ಲಿ ನಿರತರಾಗಿದ್ದಾರೆ.

ಭೀಷ್ಮ, ವೀರಭದ್ರ, ಮಕರಂದ ಮೊದಲಾದ ಪುರುಷ ಪಾತ್ರ ನಿರ್ವಹಣೆಯಲ್ಲಿಯೂ ಸಿದ್ಧಹಸ್ತರಾದ ಇವರು ಹಾಸ್ಯ ಪಾತ್ರಗಳನ್ನು ನಿರ್ವಹಿಸಿಯೂ ಸೈ ಅನಿಸಿಕೊಂಡಿದ್ದಾರೆ. ಮಂಗಳ ಸೂತ್ರ, ಭಕ್ತಚೇತ, ರಾಜಾ ಮಲಯಸಿಂಹ ಮುಂತಾದ ಕನ್ನಡ ಚಲನ ಚಿತ್ರಗಳಲ್ಲಿ ಮಾತ್ರವಲ್ಲದೇ, 'ಹ್ಯಾರಿ ಬ್ಲಾಕ್ ಅಫ್ ದಿ ಟೈಗರ್' ನಂತಹ ಅಂತರರಾಷ್ಟ್ರೀಯ ಚಲನ ಚಿತ್ರಕ್ಕೂ ಪಾದಾರ್ಪಣೆಮಾಡಿ ಅಭಿನಯದ ಸವ್ಯಸಾಚಿತನವನ್ನು ಪ್ರದರ್ಶಿಸಿದ್ದಾರೆ.

ಇವರ ನಿರಂತರ ರಂಗ ಸೇವೆಯನ್ನು ಮನ್ನಿಸಿ ದಸರಾ ಸಾಂಸ್ಕೃತಿಕ ಸಮಿತಿ, ಸುತ್ತೂರು ಮಠ, ರಂಗಸಂಗೀತ ಪರಿಷದ್, ರಾಜರಾಜೇಶ್ವರಿ ಸಂಸ್ಥೆ ಮೈಸೂರು ಮುಂತಾದ ಸಂಘಟನೆಗಳು ಇವರನ್ನು ಗೌರವಿಸಿ ಸನ್ಮಾನಿಸಿವೆ.

ಅಭಿನಯದ ಕ್ಷೇತ್ರದಲ್ಲಿನ ಇವರ ಸಾಧನೆಯನ್ನು ಗೌರವಿಸಿ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿಯನ್ನು ಇವರಿಗೆ ನೀಡುತ್ತಿದೆ.

---



## ವಿಠ್ಠಲ ಕೊಪ್ಪದ

ಧಾರವಾಡದ ವಿಠ್ಠಲ ಕೊಪ್ಪದ ಇವರು ಎಂ.ಎ. ಪದವೀಧರರು. ಹಂಪಿ ವಿಶ್ವ ವಿದ್ಯಾಲಯದಲ್ಲಿ ರಂಗಭೂಮಿ ಡಿಪ್ಲೊಮಾ ಪದವಿ ಪಡೆದಿದ್ದಾರೆ. ಗ್ರಾಮೀಣ ರಂಗಭೂಮಿಯ ಅನುಭವದೊಂದಿಗೆ ರಂಗದ ಎಲ್ಲ ಪ್ರಕಾರಗಳಲ್ಲಿಯೂ ನಿರಂತರ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ಜಾನಪದ ರಂಗಭೂಮಿ, ಬೀದಿರಂಗಭೂಮಿ,ಮಕ್ಕಳ ರಂಗಭೂಮಿ,ಹವ್ಯಾಸಿ ರಂಗಭೂಮಿ ಹೀಗೆ ಎಲ್ಲ ವಿಭಾಗಗಳಲ್ಲಿಯ ರಂಗಭೂಮಿಯ ಹಲವು ಮಗ್ಗಲುಗಳಲ್ಲಿ ನಟನೆ, ನಿರ್ದೇಶನ, ನೇಪಥ್ಯ, ಸಂಘಟನೆ ಹೀಗೆ 45 ವರ್ಷಗಳಿಂದ ಕಾಯಕ ನಡೆಸಿದ್ದಾರೆ. ಸಾಮಾಜಿಕ ನಾಟಕಗಳಿಂದ ಆರಂಭಿಸಿ, ಶಿಕ್ಷಣದಲ್ಲಿ ರಂಗಭೂಮಿಯವರೆಗಿನ ಕ್ಷೇತ್ರಗಳ ಅನುಭವ ಇವರಿಗಿದೆ.

'ರಂಗ ಪರಿಸರ' ರಂಗತಂಡ ಸ್ಥಾಪಿಸಿ ವಿವಿಧ ಚಟುವಟಿಕೆ ನಡೆಸುತ್ತಿರುವ ಇವರು ಮಕ್ಕಳಿಗಾಗಿ ರಂಗಶಿಬಿರವನ್ನೂ, ಕಾಲೇಜು ವಿದ್ಯಾರ್ಥಿಗಳಿಗಾಗಿ ರಂಗತರಬೇತಿಯನ್ನೂ ನಡೆಸಿದ್ದಾರೆ. ಕಾರ್ನಾಡ್ ನಾಟಕೋತ್ಸವ, ಸಿನಿನಾಟ್ಯ ನವಮಿ, ಬೇಂದ್ರೆ ರಂಗಾವಳಿ, ರಂಗಭಂಡಾರ ಉತ್ಸವ ಮುಂತಾದ ಪ್ರತಿಷ್ಠಿತ ರಂಗ ಉತ್ಸವಗಳ ಸಂಘಟನೆಯಲ್ಲಿ ಮುಖ್ಯಪಾತ್ರವಹಿಸಿದ್ದಾರೆ. ಖರೇ ಖರೇ ಸಂಗ್ಯಾಬಾಳ್ಯಾ, ಮಾನಿಷಾಧ, ಜಾತ್ರಾ, ಕೆಟ್ಟಿತ್ತು ಕಲ್ಯಾಣ ಮುಂತಾದ ಹಲವು ಮುಖ್ಯನಾಟಕಗಳನ್ನು ನಿರ್ದೇಶಿಸಿದ್ದಾರೆ. ಹಲವು ನಾಟಕಗಳಿಗೆ ಬೆಳಕು ನೀಡಿದ್ದಾರೆ. ರಂಗಸಜ್ಜಿಕೆ ನಿರ್ಮಿಸಿಕೊಟ್ಟಿದ್ದಾರೆ. ನಾಟಕ ರಚನೆಯಲ್ಲಿಯೂ ತಮ್ಮನ್ನು ತೊಡಗಿಸಿಕೊಂಡ ಇವರು ಸುಮಾರು 15 ನಾಟಕಗಳನ್ನು, ಬಾನುಲಿ ನಾಟಕಗಳನ್ನೂ ರಚಿಸಿದ್ದಾರೆ. ಕೆಲವು ಸಿನೆಮಾಗಳಿಗೆ ಕಲಾ ನಿರ್ದೇಶನ ಮಾಡಿದ ಅನುಭವವೂ ಇವರ ಬೆನ್ನಿಗಿದೆ.

ಹವ್ಯಾಸಿ ರಂಗಚಳುವಳಿಗೆ ನೆರವಾದ ಇವರ ಸೇವೆಯನ್ನು ಮನ್ನಿಸಿ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿಯನ್ನು ಇವರಿಗೆ ನೀಡುತ್ತಿದೆ.

---



## ಕಿಶೋರ ಡಿ. ಶೆಟ್ಟಿ

ಪ್ರಮುಖ ರಂಗಸಂಘಟಕ ಎಂದೇ ಗುರುತಿಸಿಕೊಂಡ ಮಂಗಳೂರಿನ ಕಿಶೋರ ಡಿ.ಶೆಟ್ಟಿ ಜನಿಸಿದ್ದು 1960ರಲ್ಲಿ. ಚಿಕ್ಕಂದಿನಲ್ಲಿ ಇವರನ್ನು ಕಲಾರಂಗ ಸೆಳೆದಿದ್ದು ಯಕ್ಷಗಾನದ ರೂಪದಲ್ಲಿ. 6ನೇ ತರಗತಿಯಲ್ಲಿಯೇ ಯಕ್ಷಗಾನ ತರಬೇತಿ ಪಡೆದರು. ಈ ರಂಗದಲ್ಲಿ ಹಲವಾರು ಪಾತ್ರಗಳನ್ನು ನಿರ್ವಹಿಸಿ ಮುಂದೆ ಕಂಪನಿ ನಾಟಕಗಳ ಪ್ರಭಾವದಿಂದ ಪೌರಾಣಿಕ ಹಾಗೂ ಸಾಮಾಜಿಕ ನಾಟಕಗಳಲ್ಲಿ ಪಾಲ್ಗೊಳ್ಳತೊಡಗಿದರು.

ಟಿಪ್ಪುಸುಲ್ತಾನ, ಭಕ್ತಕುಂಬಾರ, ಭೂಕೈಲಾಸ, ದಕ್ಷಯಜ್ಞ, ಕೃಷ್ಣದೇವರಾಯ ಹೀಗೆ 200ಕ್ಕೂ ಮಿಕ್ಕ ಕನ್ನಡ, ತುಳು, ಪೌರಾಣಿಕ, ಚಾರಿತ್ರಿಕ,ಜನಪದ ನಾಟಕಗಳಲ್ಲಿ ಪಾತ್ರವಹಿಸುತ್ತ, ಸಂಘಟಿಸುತ್ತ ಕರ್ನಾಟಕ ಮಾತ್ರವಲ್ಲದೇ ಮುಂಬಯಿ,

ಮದ್ರಾಸು, ದೆಹಲಿ, ಕೇರಳಗಳಲ್ಲಿಯೂ ಪ್ರದರ್ಶನ ನೀಡಿದ್ದಾರೆ. ತುಳುನಾಟಕಗಳ ನೇತೃತ್ವ ವಹಿಸಿ ದುಬೈ, ಮಸ್ಕತ್, ಬ್ಯಾರಿನ್, ಕತಾರ್, ಕುವೈಟ್ ರಾಷ್ಟ್ರಗಳಲ್ಲಿಯೂ ಪ್ರದರ್ಶನ ನೀಡಿದ್ದಾರೆ. ಇವರು 18 ಕ್ಕೂ ಹೆಚ್ಚುಸಾರಿ ತಮ್ಮ ರಂಗತಂಡವನ್ನು ಅಂತರಾಷ್ಟ್ರೀಯ ಪ್ರದರ್ಶನಗಳಿಗೆ ಕರೆದೊಯ್ದಿದ್ದಾರೆ.

ರಥಮುಸುಲ, ಹಯವದನ, ನಾಗಮಂಡಲ ಮುಂತಾದ ಆಧುನಿಕ ನಾಟಕಗಳನ್ನೂ ಪ್ರಯೋಗಿಸಿದ ಇವರು ತುಳು ನಾಟಕ ಕಲಾವಿದರ ಒಕ್ಕೂಟದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ತುಳು ನಾಟಕಗಳ ಸಿ.ಡಿ.ತಯಾರಿಕೆ, 2 ಚಲನ ಚಿತ್ರಗಳಲ್ಲಿ ಅಭಿನಯ ಹೀಗೆ ಇವರ ಅನುಭವದ ಬತ್ತಳಿಕೆಯಲ್ಲಿ ಹಲವು ಶರಗಳಿವೆ.

ರಂಗಸಂಘಟನೆಯ ಮಹತ್ತರ ಜವಾಬ್ದಾರಿಯ ಇವರ ಕಾರ್ಯನಿರ್ವಹಣೆಯನ್ನು ಗೌರವಿಸಿ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿಯನ್ನು ಇವರಿಗೆ ನೀಡುತ್ತಿದೆ.

---



## ಚಂದ್ರು ಉಡುಪಿ ಶಿರಸಿ

ನಟನಾಗಿ, ನಿರ್ದೇಶಕನಾಗಿ, ನೇಪಥ್ಯ ತಜ್ಞನಾಗಿ ಉತ್ತರಕನ್ನಡದ ರಂಗಭೂಮಿಯನ್ನು ಬಹುವಾಗಿ ಪರಿಭಾವಿಸುತ್ತಿರುವ ಚಂದ್ರು ಉಡುಪಿಯವರು ಜನಿಸಿದ್ದು 1958ರಲ್ಲಿ. ವೃತ್ತಿಯಲ್ಲಿ ಚಿಕ್ಕ ಕಾರ್ಖಾನೆಯೊಂದರ ಕಾರ್ಮಿಕ; ಪ್ರವೃತ್ತಿಯಲ್ಲಿ ರಂಗಭೂಮಿಯ ಬಹುದೊಡ್ಡ ಸೇವಕ. ಮಕ್ಕಳ ರಂಗಭೂಮಿ ಇರಲಿ, ಕಾಲೇಜು ವಿದ್ಯಾರ್ಥಿಗಳ ನಾಟಕವಿರಲಿ, ರೆಪರ್ಟರಿ ಪ್ರಯೋಗಗಳಿರಲಿ ಅಲ್ಲೆಲ್ಲ ಚಂದ್ರು ಉಡುಪಿಯವರ ಹಾಜರಿ ಕಡ್ಡಾಯ ಅನ್ನುವಷ್ಟರ ಮಟ್ಟಿಗೆ ಇವರ ಪ್ರಭಾವವಿದೆ. ರಂಗಭೂಮಿಯ ಸವ್ಯಸಾಚಿ ಇವರು.

1982ರ ಸುಮಾರಿಗೆ ಶಿರಸಿಯ ಮಾರಿಕಾಂಬಾ ನಾಟಕ ಮಂಡಳಿಯ ಸಾಮಾಜಿಕ ನಾಟಕಗಳಮೂಲಕ ನಟರಾಗಿ ಪ್ರವೇಶಿಸಿದ ಇವರು ನಂತರ ಮುಂಬೈ ರಾಜಕಪೂರರ ಸ್ಟುಡಿಯೋದಿಂದ ಶಿರಸಿಗೆ ಬಂದು ನೆಲಸಿದ ಪುತ್ತಣ್ಣ ಅವರ ಗರಡಿಯಲ್ಲಿ ರಂಗಪರಿಕರಗಳ, ಪ್ರಸಾದನದ ಮಟ್ಟುಗಳನ್ನು ಅಭ್ಯಸಿಸಿ ಜಿಲ್ಲೆಯ ಹಾಗೂ ನಾಡಿನ ಹಲವು ತಂಡಗಳಿಗೆ ನೇಪಥ್ಯದ ನೆರವು ನೀಡುತ್ತಬಂದರು. ಗಾಂಧಿ, ಕತ್ತೆಮತ್ತು ಧರ್ಮ, ನನ್ನ ತಂಗಿಗೊಂದು ಗಂಡುಕೊಡಿ, ಮಹಿಮಾಪುರ, ಗೋಸುಂಬೆ ಮೊದಲಾದ ನಾಟಕಗಳ ಅಭಿನಯ, ಕೆರೆಗೆ ಹಾರ, ದನ್ವಂತರಿ ಚಿಕಿತ್ಸೆ, ಹರಕೆಯ ಕುರಿ, ದಫನ್, ಪುಷ್ಪರಾಣಿ, ಹೆಡ್ಡಾಯಣ, ಕಿಂದರ ಜೋಗಿ  ಮುಂತಾದ ಹಲವು ನಾಟಕಗಳನ್ನು ನಿರ್ದೇಶಿಸಿದ್ದಾರೆ.

ರಂಗಸಂಗ ಶಿರಸಿ, ಚಿಂತನ ರಂಗಧ್ಯಯನ ಕೇಂದ್ರ ಸಂಘಟನೆಯ ಎಲ್ಲಬಗೆಯ ಕಾರ್ಯಗಳಲ್ಲಿಯೂ ನೆರವಾದರು. ವೈಜ್ಞಾನಿಕ ವರ್ಷಾಚರಣೆಯ, ಜನಾಧಿಕಾರದ ಬೀದಿನಾಟಕಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರು. ಶೇಷಗಿರಿ ಕಲಾತಂಡದ ಉಷಾಹರಣ, ರಾಷ್ಟ್ರೀಯ ನಾಟಕಶಾಲೆ ದೆಹಲಿಯಲ್ಲಿ ನಡೆದ ಮಕ್ಕಳ ರವೀಂದ್ರ, ಶಿವಮೊಗ್ಗ ವಿಶ್ವವಿದ್ಯಾಲಯದ ಕುವೆಂಪು ದೃಶ್ಯಕಾವ್ಯ, ಪುರೂರವ ಮುಂತಾದ ನಾಟಗಳ ಹಿನ್ನೆಲೆ ಸಹಾಯಕರಾಗಿ ಮುಖ್ಯಪಾತ್ರವಹಿಸಿದ್ದಾರೆ.

ಹಲವು ತಂಡಗಳೊಂದಿಗೆ ರಾಜ್ಯ ಮಾತ್ರವಲ್ಲದೇ ಹೈದರಾಬಾದ್, ಮುಂಬೈ ದೆಹಲಿಯ ರಂಗಪ್ರವಾಸ ನಡೆಸಿದ್ದಾರೆ. ಇವರ ರಂಗ ಸಾಧನೆಯನ್ನು ಗೌರವಿಸಿ ಕರ್ನಾಟಕ ಬೀದಿನಾಟಕ ಅಕಾಡೆಮಿ ಬೆಂಗಳೂರು ಇವರು ಸಿ.ಜಿ.ಕೆ. ರಂಗಪುರಸ್ಕಾರ ನೀಡಿ ಸಮ್ಮಾನಿಸಿದೆ. ಹಲವು ಸಂಘಟನೆಗಳು ಇವರನ್ನು ಗೌರವಿಸಿವೆ. ಇದೀಗ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿಯನ್ನು ಇವರಿಗೆ ನೀಡುತ್ತಿದೆ.

---



## ಮಾನಮ್ಮ ರಾಯನಗೌಡ

ರಾಯಚೂರು ಜಿಲ್ಲೆಯ ಸಿಂಧನೂರಿನ ಶ್ರೀಮತಿ ಮಾನಮ್ಮ ಪಾಟೀಲರದ್ದು ಸುಮಾರು 50 ವರ್ಷಗಳ ರಂಗಸೇವೆ. ಮೂಲತಃ ಮಹಾಲಿಂಗಪುರದ ಇವರು ಬಾಲ್ಯದಲ್ಲಿ ತನ್ನ ಪರಿಸರದಲ್ಲಿ ನಡೆಯುತ್ತಿದ್ದ 'ಪಾರಿಜಾತ' ಸಣ್ಣಾಟಗಳನ್ನು ನೋಡಿ ಅದರಿಂದ ಪ್ರಭಾವಿತರಾದರು. ಆ ಪ್ರಕಾರದಲ್ಲಿ ಚಿಕ್ಕ ಪುಟ್ಟ ಪಾತ್ರವಹಿಸುತ್ತ ಬಂದ ಇವರು 1965ರಲ್ಲಿ ಗುಳೇದಗುಡ್ಡ ಕಂಪನಿ ಮೂಲಕ ವೃತ್ತಿ ಬದುಕನ್ನು ಅಧಿಕೃತವಾಗಿ ಆರಂಭಿಸಿದರು.

ಕಲಾವಿದ ರಾಯನಗೌಡರನ್ನು ವಿವಾಹವಾದನಂತರ ತಮ್ಮ ಪೂರ್ಣ ಬದುಕನ್ನು ಕಲಾವಿದೆಯಾಗಿಯೇ ಕಳೆದರು. ವಿದ್ಯುತ್ ಶಕ್ತಿ ಇಲ್ಲದ ಕಾಲದಲ್ಲಿ ಸೀಮೆ ಎಣ್ಣೆ ದೀಪದಲ್ಲಿಯೇ ನಾಟಕ ಅಭಿನಯಿಸಿದ ಅನುಭವವೂ ಇವರಿಗಿದೆ.

ಇವರ ಸೊಗಸಾದ ಗಾನ ಪ್ರತಿಭೆ ಪಾತ್ರ ನಿರ್ವಹಣೆಯಲ್ಲಿ ಇಂಬು ನೀಡಿತು. ನಾಡಿನ ಖ್ಯಾತ ಕಲಾವಿದರಾದ ರೇಣುಕಮ್ಮ ಮುರಗೋಡು, ಸಿದ್ದಯ್ಯ ಸ್ವಾಮಿ ಎಲಿವಾಳ, ಅರ್ಜುನಸಾ ನಾಕೋಡ, ಸುಧೀರ್, ಎಲ್.ಬಿ. ಶೇಖ್ ಮಾಸ್ತರ ಮೊದಲಾದ ಕಲಾವಿದರೊಂದಿಗೆ ಅಭಿನಯಿಸಿದ ಅನುಭವ ಇವರದು. ಪಿ.ಬಿ. ಧುತ್ತರಗಿ, ಮಹಾಂತೇಶ ಶಾಸ್ತ್ರಿಗಳು, ಮಾಂತ್ರೆ ಕವಿ ಮೊದಲಾದ ಹಿರಿಯ ರಂಗ ತಜ್ಞರಿಂದ ವೃತ್ತಿ ಮಾರ್ಗದರ್ಶನ ಪಡೆದರು. ಮುಂದೆ 'ಮಹಾಲಿಂಗೇಶ್ವರ ನಾಟ್ಯ ಸಂಘ' ಎಂಬ ಕಂಪನಿಯನ್ನು ಸಂಘಟಿಸಿದ ಅನುಭವವೂ ಇವರಿಗಿದೆ.

1990ರಲ್ಲಿ ಸಿಂಧನೂರಿಗೆ ಬಂದು ಅಲ್ಲಿಯೇ ನೆಲೆಸಿದರು. 12 ಕ್ಕೂ ಹೆಚ್ಚು ಕಂಪನಿಗಳಲ್ಲಿಯ ಕೆಲಸ, 25ಕ್ಕೂ ಹೆಚ್ಚು ವಿಭಿನ್ನ ಪಾತ್ರಗಳ ಅಭಿನಯ, 45 ವರ್ಷಗಳಷ್ಟು ದೀರ್ಘಕಾಲದ ರಂಗಾನುಭವದ ಇವರ ಸೇವೆಯನ್ನು ಗೌರವಿಸಿ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿಯನ್ನು ಇವರಿಗೆ ನೀಡುತ್ತಿದೆ.

---



## ವನಜಶ್ರೀ ಶೆಟ್ಟಿ

ವೃತ್ತಿರಂಗ ಕಲಾವಿದೆ ವನಜಶ್ರೀ ಅವರು ಜನಿಸಿದ್ದು 1950ರಲ್ಲಿ. ಹುಬ್ಬಳ್ಳಿಯಲ್ಲಿ ವಾಸವಾಗಿರುವ ಇವರು ತಮ್ಮ 9ನೇ ವಯಸ್ಸಿನಲ್ಲಿ ರಂಗಪ್ರವೇಶ ಮಾಡಿದರು; ಅದೂ ಮಂಗಳೂರಿನ ಕೊರಗಪ್ಪ ಶೆಟ್ಟಿಯವರ ಯಕ್ಷಗಾನ ಮಂಡಳಿ ಮೂಲಕ. 2 ವರ್ಷ ಯಕ್ಷಗಾನ ಮಂಡಳಿಯಲ್ಲಿ ಬಾಲ ಕಲಾವಿದೆಯಾಗಿ ರಂಗಾನುಭವ ಪಡೆದ ನಂತರ ಆರೋರು ರಘುರಾಮಯ್ಯ ಅವರ ಕಂಪನಿ ಮೂಲಕ ವೃತ್ತಿರಂಗಭೂಮಿಯ ಪ್ರವೇಶ ಪಡೆದರು.

ಟಿಪ್ಪುಸುಲ್ತಾನ್, ಸಂಗೊಳ್ಳಿರಾಯಣ್ಣ, ಕಿತ್ತೂರು ಚನ್ನಮ್ಮ, ಮಲಮಗಳು, ಧರ್ಮದೇವತೆ, ಗೌಡರ ಗದ್ದಲ, ಸದಾರಮೆ, ಅಕ್ಷಯಾಂಬರ, ರಕ್ತರಾತ್ರಿ, ನೀನು ಸಾಹುಕಾರನಾಗು ಹೀಗೆ ಹಲವಾರು ಪೌರಾಣಿಕ, ಚಾರಿತ್ರಿಕ, ಸಾಮಾಜಿಕ ಕಥನಗಳ ನಾಟಕಗಳಲ್ಲಿ ತುಂಬ ವೈವಿಧ್ಯಮಯ ಪಾತ್ರ ನಿರ್ವಹಿಸಿದರು. ಖ್ಯಾತ ಯಕ್ಷಗಾನ ಕಲಾವಿದರಾದ ಕುಂಬಳೆ ಸುಂದರರಾವ್, ಕೆ.ಗೋವಿಂದ ಭಟ್‌ರ ಮಾರ್ಗದರ್ಶನ ಅವರ ಸಾಂಪ್ರದಾಯಿಕ ರಂಗಕಲೆಗಳ ಅನುಭವವನ್ನು ಗಟ್ಟಿಗೊಳಿಸಿದ್ದರೆ, ಸತ್ಯಭಾಮಾ ಆರೂರು, ಧೀರೇಂದ್ರ ಗೋಪಾಲ, ಯಲವಾಳ ಸಿದ್ದಯ್ಯ ಸ್ವಾಮಿ, ಹುನಗುಂದ ಬಾಬು, ಎನ್. ಬಸವರಾಜು ಮುಂತಾದವರ ಮಾರ್ಗದರ್ಶನ ಕಂಪನಿ ನಾಟಕಗಳ ಅನುಭವವನ್ನು ಗಾಢವಾಗಿಸಿತು.

50 ವರ್ಷಗಳ ಇವರ ನಿರಂತರ ರಂಗಸೇವೆಯನ್ನು ಮನ್ನಿಸಿ ನಾಡಿನ ಹಲವಾರು ಸಂಸ್ಥೆಗಳು ಇವರನ್ನು 'ಕಲಾರತ್ನ', 'ರಂಗರತ್ನ', 'ಕಲಾಚತುರ' ಮೊದಲಾದ ಬಿರುದಿನೊಂದಿಗೆ ಇವರನ್ನು ಗೌರವಿಸಿವೆ.

ಇದೀಗ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿಯನ್ನು ಇವರಿಗೆ ನೀಡಿ ಇವರ ಕಾಯಕವನ್ನು ಗೌರವಿಸುತ್ತಿದೆ.



## ಬಿ.ಇ. ತಿಪ್ಪೇಸ್ವಾಮಿ

ದಾವಣಗೆರೆ ಜಿಲ್ಲೆಯ ಚೆನ್ನಗಿರಿ ತಾಲೂಕಿನ ಗರಗದ ಬಿ.ಇ.ತಿಪ್ಪೇಸ್ವಾಮಿಯವರು ಸಾಂಪ್ರದಾಯಿಕ ಶಾಲೆಯಲ್ಲಿ ಕಲಿತಿದ್ದು 2 ನೇ ತರಗತಿಯವರೆಗೆ ಮಾತ್ರ. ಆದರೆ ರಂಗಭೂಮಿಯಲ್ಲಿ ಹಾರ್ಮೋನಿಯಂ ಶಿಕ್ಷಕರಾಗಿ, ನಟರಾಗಿ, ನಿರ್ದೇಶಕರಾಗಿ 5 ದಶಕದ ಬದುಕನ್ನು ಕಟ್ಟಿದರು. ತಂದೆ ಈಶ್ವರಪ್ಪ ಅವರು ದೊಡ್ಡಾಟದ ಕಲಾವಿದರಾಗಿದ್ದರು. ಅವರ ಪ್ರಭಾವದಡಿ ಮೂಡಲಪಾಯದ ಯಕ್ಷಗಾನ ಮಟ್ಟುಗಳನ್ನು ಕಲಿತು ಸಂಗೀತಕ್ಕೆ, ಅಭಿನಯಕ್ಕೆ ತಮ್ಮನ್ನು ತೆರೆದುಕೊಂಡರು. ಬಾಲ್ಯದ ಬಡತನ ಅವರನ್ನು ಮೈಸೂರು ನಾಟಕ ಕಂಪನಿಯತ್ತ ಕೊಂಡೊಯ್ದಿತು. 10ನೇ ವಯಸ್ಸಿನಲ್ಲಿ ಕಂಪನಿಯ ಗೇಟ್ ಕಾಯುವ ಕೆಲಸದಿಂದ ಆರಂಭಿಸಿ ಕಂಪನಿಯ ಚಾಕರಿ ಮಾಡುತ್ತ ಮುಂದೆ ಅದೇರಂಗದಲ್ಲಿ ಪಾತ್ರಗಳ ಮೂಲಕ ಅಧಿಕೃತ ಪ್ರವೇಶ ಪಡೆದರು.

ಬಾಲ್ಯದ ಅನುಭವದಿಂದ ದೊರಕಿದ ಸಂಗೀತ ಪಾತ್ರ ನಿರ್ವಹಣೆಯಲ್ಲಿ ಪೋಷಕವಾಯಿತು. ನಾಟ್ಯಮಂಡಳಿ ಮೈಸೂರು, ಮಾಲತಿ ಸುಧೀರರ ನಾಟಕ ಕಂಪನಿ ಬೆಂಗಳೂರು ಮುಂತಾದ ಕಂಪನಿಗಳಲ್ಲಿ ಕೆಲಸ ಮಾಡುತ್ತಲೇ ಗ್ರಾಮೀಣ ರಂಗಭೂಮಿಯನ್ನು ಪ್ರವೇಶಿಸಿದರು. ಶಿವಮೊಗ್ಗ, ಚಿತ್ರದುರ್ಗ, ಹಾಸನ, ತುಮಕೂರು ಸೇರಿದಂತೆ ರಾಜ್ಯದ ಹಲವೆಡೆ ಹಳ್ಳಿ ಹಳ್ಳಿಗಳಲ್ಲಿ ನಾಟಕ ಆಡಿಸುತ್ತ ಕುರುಕ್ಷೇತ್ರ, ಶಿವಜಲಂಧರ, ಭಕ್ತ ಸುಧನ್ವ, ಟಿಪ್ಪುಸುಲ್ತಾನ, ಬಸವೇಶ್ವರ, ಮರಣವೇ ಮಹಾನವಮಿ ಮುಂತಾದ ನಾಟಕಗಳನ್ನು ನಿರ್ದೇಶಿಸುತ್ತ 400 ಕ್ಕೂ ಹೆಚ್ಚು ಪ್ರಯೋಗ ನೀಡಿದ್ದಾರೆ. ಬೀದಿನಾಟಕ ಪ್ರಕಾರದಲ್ಲಿಯೂ ಕೆಲಸ ನಿರ್ವಹಿಸಿ ವರ್ತಮಾನದ ರಂಗಭೂಮಿಗೂ ಸ್ಪಂಧಿಸಿದ್ದಾರೆ.

ಪುರಂಧರ ಪ್ರಶಸ್ತಿ, ಕೀರ್ತನದಾಸ ಪ್ರಶಸ್ತಿ, ಸಾಕ್ಷರ ಪ್ರಶಸ್ತಿ ಸೇರಿದಂತೆ ಹಲವು ಪ್ರಶಸ್ತಿಗಳನ್ನು ಹಲವು ಸಂಘ ಸಂಸ್ಥೆಗಳಿಂದ ಪಡೆದಿರುವುದು ಅವರ ಕಾರ್ಯ ವೈಶಾಲ್ಯತೆಗೆ ಸಾಕ್ಷಿಯಾಗಿದೆ. ಈವರೆಗಿನ ಅವರ ಗ್ರಾಮೀಣ ರಂಗಬದುಕಿನ ಸಾಧನೆಯನ್ನು ಗಮನಿಸಿ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿಯನ್ನು ಇವರಿಗೆ ನೀಡುತ್ತಿದೆ.



## ಎಂ. ಪರಶುರಾಮ ಪ್ರಿಯ

ಎಂ. ಪರಶುರಾಮ ಪ್ರಿಯ ಅವರು ಕವಿಗಳು, ನಟರು, ರಂಗನಿರ್ದೇಶಕರು, ಪತ್ರಕರ್ತರು. ಹಲವು ಕ್ಷೇತ್ರಗಳ ಸಾಧಕರಾಗಿರುವ ಶ್ರೀಯುತರು ಕೊಪ್ಪಳ ಜಿಲ್ಲೆಯ ಗಂಗಾವತಿಯವರು. 1994ರಲ್ಲಿ ನೀನಾಸಂ ರಂಗಶಿಕ್ಷಣ ಕೇಂದ್ರದಲ್ಲಿ ರಂಗ ಡಿಪ್ಲೋಮಾ ಪಡೆದು, ಕಳೆದ 25 ವರ್ಷಗಳಿಂದಲೂ ನಟರಾಗಿ, ನಿರ್ದೇಶಕರಾಗಿ, ನೇಪಥ್ಯ ತಜ್ಞರಾಗಿ ರಂಗಕಾಯಕ ನಡೆಸಿಕೊಂಡೇ ಬಂದಿದ್ದಾರೆ. ಕಾಕನ ಕೋಟೆ, ಬೆಳಕಿನೆಡೆಗೆ, ಅಕ್ಕಮಹಾದೇವಿ ಮುಂತಾದ 40 ಕ್ಕೂ ಹೆಚ್ಚು ನಾಟಕಗಳನ್ನು ನಿರ್ದೇಶಿಸಿದ್ದಾರೆ.

ತುಘಲಕ್, ಬಿರುದಂತೆಂಬರ ಗಂಡ, ಮಹಿಮಾಪುರ, ಭಗವದಜ್ಜುಕೀಯ ಮುಂತಾದ ವಿಶಿಷ್ಟ ನಾಟಕಗಳಲ್ಲಿ ಅಭಿನಯ ನೀಡಿದ್ದಾರೆ. ಆನೆಗೊಂದಿ ಸೇರಿದಂತೆ ಹಲವು ಉತ್ಸವಗಳಲ್ಲಿ ಇವರ ನಾಟಕಗಳು ಪ್ರದರ್ಶನ ಕಂಡಿವೆ.

ಕೈಗಾರಿಕಾ ಇಲಾಖೆ, ಶಿಕ್ಷಣ ಇಲಾಖೆ, ಆರೋಗ್ಯ ಇಲಾಖೆ ಮೊದಲಾದ ಇಲಾಖೆಗಳಲ್ಲಿ ಹಲವು ರಂಗಚಟುವಟಿಕೆ ನಡೆಸಿದ್ದಾರೆ. ಅಕ್ಷರ ಆಂದೋಲನ, ಸಾಹಿತ್ಯ ಸೇವೆ, ಪತ್ರಿಕಾ ರಂಗದ ಅನುಭವ ಇವರ ರಂಗ ಚಟುವಟಿಕೆಗಳನ್ನು ಉದ್ದೀಪಿಸಿವೆ.

ಈವರೆಗಿನ ರಂಗ ಸೇವೆಯನ್ನು ಗೌರವಿಸಿ ಕರ್ನಾಟಕ ನಾಟಕ ಅಕಾಡೆಮಿ 2015ರ ವಾರ್ಷಿಕ ಪ್ರಶಸ್ತಿಯನ್ನು ಇವರಿಗೆ ನೀಡುತ್ತಿದೆ.

---



**ಪ್ರಕಾಶ ಗರುಡ** (ಪುಸ್ತಕ ಬಹುಮಾನ 2014)

ನೂರಾ ನಲವತ್ತು ವರ್ಷಗಳ ಇತಿಹಾಸ ಹೊಂದಿರುವ ವೃತ್ತಿರಂಗಭೂಮಿಗೆ ಭದ್ರವಾದ ಅಡಿಪಾಯ ಹಾಕಿದವರ ಪೈಕಿ ಗರುಡ ಸದಾಶಿವರಾಯರು ಒಬ್ಬರು. ಅಂತೆಯೇ "ಗರುಡ" ಎಂಬುದು ವೃತ್ತಿರಂಗಭೂಮಿಯ ದಂತಕತೆ. ಆ ವಂಶದಕುಡಿ ಅರ್ಥಾತ್ ಸದಾಶಿವರಾಯರ ಮೊಮ್ಮಗ ಪ್ರಕಾಶ ಗರುಡರು. ಆಧುನಿಕ ಹವ್ಯಾಸಿ ರಂಗಭೂಮಿಯಒಬ್ಬ ಪ್ರಖ್ಯಾತ ನಿರ್ದೇಶಕ, ನಟ ಹಾಗೂ ಬರಹಗಾರರು ಪ್ರಕಾಶ. ಪ್ರಸ್ತುತ ಅವರು ಧಾರವಾಡ ರಂಗಾಯಣದ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಗರುಡ ಶ್ರೀಪಾದರಾಯರ ಪುತ್ರರಾದ ಪ್ರಕಾಶ (ಜನನ: 1956) ಮನೆತನದ ವೃತ್ತಿಯಂತೆ ವೃತ್ತಿರಂಗಭೂಮಿಯನ್ನು ಬಾಲ್ಯದಲ್ಲೇ ಪ್ರವೇಶ ಮಾಡಿದರು. ಬಿಎಸ್ಸಿ ಪದವಿ ನಂತರ ನೀನಾಸಂ, ಮಧುರೆಕಾಮರಾಜ್ ವಿವಿಯಿಂದರಂಗಭೂಮಿ ಪದವಿ ಪಡೆದು ಹಂಪಿ ಕನ್ನಡ ವಿವಿಯಲ್ಲಿ 'ವೃತ್ತಿರಂಗಭೂಮಿಯ ಸ್ವರೂಪ'ದ 'ಕುರಿತು ಡಾಕ್ಟರೇಟ್ ಮಾಡಿ ನಂತರರಂಗಭೂಮಿಗೆತಮ್ಮನ್ನು ಅರ್ಪಿಸಿಕೊಂಡರು.

ತುಘಲಕ್ ಪಾತ್ರಧಾರಿಯಾಗಿ ರಾಜ್ಯದ ತಿರುಗಾಟದಲ್ಲಿ 50 ಕ್ಕೂ ಅಧಿಕಬಾರಿ ನಟಿಸಿರುವ ಪ್ರಕಾಶಅವರು, ಕಂಪನಿ ನಾಟಕಗಳ ರಾಷ್ಟ್ರೀಯ ಉತ್ಸವ–ರಂಗಶಂಕರ 2009ರಲ್ಲಿ ಏಣಗಿ ಬಾಳಪ್ಪ ಅವರ ನಿರ್ದೇಶನದಲ್ಲಿ ಬಸವಣ್ಣ ಪಾತ್ರ ವಹಿಸುವ ಅವಕಾಶ ಪಡೆದವರು. ಮೃಚ್ಛಕಟಿಕ, ದೊರೆ ಈಡಿಪಸ್, ಸಾಹೇಬರು ಬರುತ್ತಾರೆ ಸೇರಿದಂತೆ 50 ಕ್ಕೂ ಅಧಿಕ ನಾಟಕಗಳಲ್ಲಿ ನಟಿಸಿದ್ದಾರೆ. ಗಾರ್ಬೆಜ್ ಸಿಟಿಯಲ್ಲಿ ಬೆತ್ತಲೆ ಮನುಷ್ಯ, ಶಿವರಾತ್ರಿ, ಸ್ಮಶಾನ ಕುರುಕ್ಷೇತ್ರ, ಚೂರಿಕಟ್ಟೆ ಸೇರಿದಂತೆ 30 ಕ್ಕೂ ಅಧಿಕ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಮಕ್ಕಳಿಗಾಗಿ ಹತ್ತು ನಾಟಕ ನಿರ್ದೇಶಿಸಿದ್ದಾರೆ. ಜಡಭರತನ ಕನಸುಗಳು ಕಾದಂಬರಿ, ಎದೆಗೆ ಬಿದ್ದ ಅಕ್ಷರ ಲೇಖನಗಳ ಸಂಕಲನವನ್ನು ರಂಗರೂಪಕ್ಕೆ ಅಳವಡಿಸಿದ್ದಾರೆ.

ಪತ್ನಿರಜನಿ ಗರುಡರುರಂಗ ನಿರ್ದೇಶಕಿ. ಪತಿ–ಪತ್ನಿ ಒಟ್ಟಾಗಿ ಧಾರವಾಡದಲ್ಲಿ ಗೊಂಬೆಮನೆ ಸ್ಥಾಪಿಸಿ ನಿರಂತರವಾಗಿ ಗೊಂಬೆ ಆಟ ಪ್ರದರ್ಶನ ನೀಡುತ್ತ ಬಂದಿದ್ದಾರೆ. ಗರುಡ ಸದಾಶಿವರಾಯರ ಸಮಗ್ರ ನಾಟಕ ಸಂಪುಟ ಸೇರಿದಂತೆಎಂಟು ಪುಸ್ತಕಗಳನ್ನು ಅವರು ಪ್ರಕಟಿಸಿದ್ದಾರೆ. ಮಹಾರಾಷ್ಟ್ರದ ಜನಪ್ರಿಯತ ಮಾಶರಂಗ ಪ್ರಕಾರವನ್ನು ಧಾರವಾಡ ರಂಗಾಯಣದ ಮೂಲಕ ಕನ್ನಡಿಗರಿಗೆ ಪರಿಚಯಿಸಿದ ಹೆಗ್ಗಳಿಕೆ ಅವರದು. ಗರುಡರ "ಕಂಪನಿ ನಾಟಕ ಅರ್ಥಾತ್ ವೃತ್ತಿರಂಗಭೂಮಿ" ಎಂಬ ಪುಸ್ತಕಕ್ಕೆ ಕರ್ನಾಟಕ ನಾಟಕ ಅಕಾಡೆಮಿಯ ರಂಗಭೂಮಿ ಪುಸ್ತಕ ಪುರಸ್ಕಾರ 2015 ಲಭಿಸಿದೆ.

---

## ಗೋಪಾಲ ವಾಜಪೇಯಿ (ಪುಸ್ತಕ ಬಹುಮಾನ 2015)

ಬಹುಮುಖಿ ಪ್ರತಿಭಾವಂತ ಗೋಪಾಲ ವಾಜಪೇಯಿ ಅವರು ರಂಗವಲಯದಲ್ಲಿ 'ಗೋಪಾ' ಎಂದೇ ಪರಿಚಿತರು. ನಾಟಕಗಳನ್ನು ಬರೆದಿದ್ದಾರೆ, ನಟಿಸಿದ್ದಾರೆ, ನಿರ್ದೇಶನ ಮಾಡಿದ್ದಾರೆ. ನಾಟಕಗಳ ರೂಪಾಂತರ ಮಾಡಿದ್ದಾರೆ. ಸಿನಿಮಾ ಚಿತ್ರಕತೆ, ಹಾಡುಗಳನ್ನು ಬರೆದಿದ್ದಾರೆ. ಪತ್ರಿಕೋದ್ಯಮ, ಸಿನಿಮಾ, ಟಿವಿ ಹಾಗೂ ರಂಗಭೂಮಿ–ಹೀಗೆ ಬಹುವಲಯಕ್ಕೆ ಸೇರಿದವರು ಗೋಪಾ. ಅವಿಭಜಿತ ಧಾರವಾಡ ಜಿಲ್ಲೆ ಲಕ್ಷ್ಮೇಶ್ವರದಲ್ಲಿ (ಈಗಿನ ಗದಗ ಜಿಲ್ಲೆ) 1950ರಲ್ಲಿ ಜನಿಸಿದ ಗೋಪಾ ಚಿಕ್ಕ ವಯಸ್ಸಿನಲ್ಲಿಯೇ ತಂದೆ ಕಳೆದುಕೊಂಡು ಪಿಯುಸಿ ಓದುತ್ತಿರುವಾಗಲೇ ಅಡತಿ ಅಂಗಡಿಯಲ್ಲಿ ಲೆಕ್ಕ ಬರೆಯುವ ನೌಕರಿಗೆ ಸೇರಿಕೊಳ್ಳುವುದು ಅನಿವಾರ್ಯವಾಯಿತು. ಅವರ ಅಧ್ಯಯನಶೀಲತೆ ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಉಪಸಂಪಾದಕ ಹುದ್ದೆಗೆ ಸೇರಿಕೊಳ್ಳಲು ಕಾರಣವಾಯಿತು. ಮುಂದೆ ಅವರು ಸಂಯುಕ್ತ ಕರ್ನಾಟಕ ಸಮೂಹದ ಕರ್ಮವೀರ ವಾರಪತ್ರಿಕೆ, ಕಸ್ತೂರಿ ಮಾಸಿಕದ ಸಂಪಾದಕರಾಗಿ ಕೆಲಕಾಲ ಕಾರ್ಯನಿರ್ವಹಿಸಿದರು. ನಂತರ ಈ ಟಿವಿ ಮನರಂಜನಾ ವಾಹಿನಿ ಸೇರಿದ ಅವರು ಧಾರಾವಾಹಿ ಸಂಭಾಷಣೆ ಪರಿಷ್ಕರಣೆ, ಚಿತ್ರಕತೆ ರಚನೆಯಲ್ಲಿ ತೊಡಗಿಕೊಂಡರು. ನಿವೃತ್ತಿ ನಂತರ ಬೆಂಗಳೂರಿನಲ್ಲಿ ಮಗನ ಮನೆಯಲ್ಲಿ ನೆಲೆಸಿದ್ದರು. ತಮ್ಮ ವೃತ್ತಿಯುದ್ದಕ್ಕೂ ಹಲವು ಸಿನಿಮಾಗಳಿಗೆ ಸಂಭಾಷಣೆ, ಹಾಡು ಬರೆದರು.

ಆಗಮನ, ಹಸಿರೆಲೆ ಹಣ್ಣೆಲೆ, ಹಾವು ಹರದಾಡತಾವ ಮುಂತಾದ ನಾಟಕಗಳನ್ನು ರಚಿಸಿದರು. ಅವರು ರಚಿಸಿದ 'ದೊಡ್ಡಪ್ಪ' ನಾಟಕ ಅತಿಹೆಚ್ಚು ಪ್ರಯೋಗಕಂಡ ಯಶಸ್ವಿ ಕೃತಿ. ಶೇಕ್ಸ್‌ಪಿಯರ್‌ನ ಕಿಂಗ್‌ಲಿಯರ್ ಅನ್ನು ನಂದಭೂಪತಿ ಎಂದು ಕನ್ನಡಕ್ಕೆ ರೂಪಾಂತರಿಸಿದರು. ಬ್ರೆಕ್ಟ್‌ನ ಕಕೇಶಿಯನ್ ಚಾಕ್ ಸರ್ಕಲ್ ಕನ್ನಡದಲ್ಲಿ ಧರ್ಮಪುರಿಯ ಶ್ವೇತವೃತ್ತ ಆಯಿತು. ಭೀಷಮ್ ಸಹಾನಿಯವರ ಕಬೀರ ಖಡಾ ಬಜಾರ್ ಮೆ, ಸಂತ್ಯಾಗ ನಿಂತಾನ ಕಬೀರ ಎಂದಾದ. ಸ್ಥಳೀಯ ಆಡುಭಾಷೆ ಬಳಸಿದ ಗೋಪಾ ಕನ್ನಡದ್ದೇ ಸ್ವತಂತ್ರ ಕೃತಿಗಳೆಂಬಂತೆ ಅವಕ್ಕೆ ಮರುಹುಟ್ಟು ನೀಡಿದರು.

ಇತ್ತೀಚೆಗೆ ಬಿಡುಗಡೆಯಾದ ಸಂತೆಯಲ್ಲಿ ನಿಂತ ಕಬೀರ ಚಲನಚಿತ್ರಕ್ಕೆ ಅವರೇ ಸಾಹಿತ್ಯ ರಚಿಸಿದರು. ನಾಗಮಂಡಲ, ಶಿಶುನಾಳ ಶರೀಫ, ಸಿಂಗಾರೆವ್ವ, ತಾಯಿಸಾಹೇಬ ಮುಂತಾದ ಚಿತ್ರಗಳಿಗೆ ಚಿತ್ರಕತೆ, ಸಂಭಾಷಣೆ, ಹಾಡುಗಳನ್ನು ಅವರು ರಚಿಸಿದ್ದಾರೆ. ಗೋಪಾಲ ವಾಜಪೇಯಿ ಅವರು ಇತ್ತೀಚೆಗಷ್ಟೆ ನಿಧನರಾದರು. "ರಂಗದ ಒಳಗೆ – ಹೊರಗೆ" 2015 ಪುಸ್ತಕಕ್ಕೆ 2015 ರ ರಂಗಭೂಮಿ ಪುಸ್ತಕ ಪುರಸ್ಕಾರ ಲಭಿಸಿದೆ.

## 2016ರ ಪ್ರಶಸ್ತಿ ವಿಜೇತರು



**ಹಂಸಲೇಖ** (ಜೀವಮಾನ ರಂಗಸಾಧನೆ ಪ್ರಶಸ್ತಿ)

"ಹಂಸಲೇಖ" ಎನ್ನುವ ಹೆಸರು ಕನ್ನಡ ಚಲನಚಿತ್ರರಂಗದ ದಂತಕತೆ. ಚಲನಚಿತ್ರಗೀತೆಗಳಿಗೆ ದೊಡ್ಡ ತಿರುವು ತಂದ ಸಂಗೀತ ನಿರ್ದೇಶಕ ಇವರು. ಸುಮಾರು ಎರಡು ಸಾವಿರ ಚಿತ್ರಗೀತೆಗಳಿಗೆ ರಾಗ ಸಂಯೋಜಿಸಿ, ಹತ್ತಿರತ್ತಿರ ನಾನೂರು ಚಿತ್ರಗಳ ಸಂಗೀತ ನಿರ್ದೇಶನ ನೀಡಿ, ನೂರಾರು ಚಿತ್ರಗೀತೆಗಳನ್ನು ರಚಿಸಿರುವುದು ಭಾರತೀಯ ಚಿತ್ರರಂಗದಲ್ಲಿ ಒಂದು ದಾಖಲೆ. ಕನ್ನಡದ ಹಂಸಲೇಖ ಆ ದಾಖಲೆ ಮಾಡಿದ್ದಾರೆ. ಎಂಟು ತೆಲುಗು, ಏಳು ತಮಿಳು ಚಿತ್ರಗಳಿಗೂ ಅವರು ಸಂಗೀತ ನಿರ್ದೇಶನ ನೀಡಿದ್ದಾರೆ. ಚಿಂದೋಡಿ ಲೀಲಾ ನಿರ್ಮಾಣದ 'ಗಾನಯೋಗಿ ಪಂಚಾಕ್ಷರಿ ಗವಾಯಿ' ಚಿತ್ರದ ಸಂಗೀತ ನಿರ್ದೇಶನಕ್ಕೆ ರಾಷ್ಟ್ರಪ್ರಶಸ್ತಿ ಪಡೆದಿರುವ ಹಂಸಲೇಖ ಅವರು, ನಾಲ್ಕುಬಾರಿ ರಾಜ್ಯ ಸರ್ಕಾರದ ಹಾಗೂ ಆರು ಬಾರಿ ಫಿಲಂಫೇರ್ ಪ್ರಶಸ್ತಿಯನ್ನು ಚಿತ್ರಗೀತೆಗಳ ಸಂಯೋಜನೆ ನಿರ್ದೇಶನಕ್ಕೆ ಪಡೆದಿದ್ದಾರೆ. ಚಿತ್ರಗೀತೆ ರಚನೆಗೆ ಎರಡು ಬಾರಿ ರಾಜ್ಯ ಸರ್ಕಾರದ ಪ್ರಶಸ್ತಿ ಪಡೆದಿದ್ದಾರೆ.

ಈ ಎಲ್ಲ ಸಾಧನೆಯ ಅವರ ಬೆನ್ನಿಗಿರುವುದು ರಂಗಭೂಮಿ. ಆರ್ಕೆಸ್ಟ್ರಾಗಳಲ್ಲಿ ಹಾಡುತ್ತ, ಪತ್ರಿಕಾಲಯಗಳಲ್ಲಿ ಮೊಳೆ ಜೋಡಿಸುತ್ತ, ವೃತ್ತಿರಂಗಭೂಮಿ ಅಂತಸ್ಸತ್ವವನ್ನು ಅರಗಿಸಿಕೊಳ್ಳುತ್ತ ಬೆಳೆದ ಬೆಂಗಳೂರಿನ ಹಂಸಲೇಖ ಅಲಿಯಾಸ್ ಗಂಗರಾಜು ಅವರು– ಚಿತ್ರರಂಗಕ್ಕೆ ಪ್ರವೇಶ ಪಡೆಯುವುದಕ್ಕೆ ಮುಂಚೆ 'ವಿವೇಕರಂಗ' ಎಂಬ ಅರೆ ವೃತ್ತಿ ನಾಟಕ ಕಂಪನಿ ಸ್ಥಾಪಿಸಿ 1970ರ ದಶಕದಲ್ಲಿ ರಾಜ್ಯದ ಅನೇಕ ಕಡೆ ಕ್ಯಾಂಪ್ ಮಾಡಿದರು.

ರೈತಜೀವಿ, ಜೋಕುಮಾರಸ್ವಾಮಿ, ರಾಮಚಂದ್ರ, ನಮ್ಮಹಳ್ಳಿ ಮುಂತಾದ ಇಪ್ಪತ್ತು ನಾಟಕಗಳ ನೂರಾರು ಪ್ರದರ್ಶನಗಳನ್ನು ಈ ಸಂದರ್ಭದಲ್ಲಿ ಅವರು ನೀಡಿದರು. ವೃತ್ತಿರಂಗಭೂಮಿಯ ರಂಜನೀಯ ಹಾಗೂ ಹವ್ಯಾಸಿಯ ವೈಚಾರಿಕತೆಯನ್ನು ಈ ನಾಟಕಗಳಲ್ಲಿ ಅವರು ಮೇಳೈಸಿಕೊಂಡಿದ್ದರು. ನಾಟಕಗಳಿಗೆ ಹಂಸಲೇಖ ರಚಿಸಿ ರಾಗ ಸಂಯೋಜಿಸಿದ ರಂಗಗೀತೆಗಳು ಜನಸಾಮಾನ್ಯ ಪ್ರೇಕ್ಷಕರ ಮೇಲೆ ಗಾಢ ಪ್ರಭಾವ ಬೀರಿದವು. ಸಾಮಾನ್ಯರನ್ನು ರಂಜಿಸುವ, ಪ್ರಚೋದಿಸುವ ಇಂತಹದೇ ಗೀತೆಗಳು ಚಿತ್ರರಂಗಕ್ಕೆ ಬೇಕು ಎಂದು ಮನಗಂಡದ್ದು ಅವರ ರಂಗಭೂಮಿಯ ಅನುಭವದಿಂದ. ಇದರ ಪರಿಣಾಮ ಕನ್ನಡ ಚಿತ್ರರಂಗವು ಹಂಸಲೇಖ ರಚಿಸಿ ರಾಗಸಂಯೋಜಿಸಿದ ಹಾಡುಗಳ ವೈವಿಧ್ಯತೆಯಿಂದ ಶ್ರೀಮಂತವಾಯಿತು.

ಪ್ರದರ್ಶಕ ಕಲೆಗಳ ಉತ್ತೇಜನಕ್ಕಾಗಿ ಹಂಸಕಲಾ ದೇಸಿ ಕಾಲೇಜೊಂದನ್ನು ಆರಂಭಿಸಿರುವ ಹಂಸಲೇಖ ಅವರು ಗಾಯನ, ಅಭಿನಯ ತರಬೇತಿ ನೀಡಿ ಹಲವಾರು ಯುವ ಸಮೂಹವನ್ನು ರೂಪಿಸಿದ್ದಾರೆ. ಕುವೆಂಪು ಅವರ ಬೃಹತ್ ಕಾದಂಬರಿ ಆಧರಿಸಿ ಸಿ.ಬಸವಲಿಂಗಯ್ಯ ನಿರ್ದೇಶಿಸಿದ ಅಹೋರಾತ್ರಿ ಒಂಬತ್ತು ತಾಸಿನ ಮಲೆಗಳಲ್ಲಿ ಮದುಮಗಳು ನಾಟಕ ಸೇರಿದಂತೆ ಕೆಲವು ಹವ್ಯಾಸಿ ನಾಟಕಗಳಿಗೆ ರಂಗಸಂಗೀತ ನಿರ್ದೇಶಿಸಿದ್ದಾರೆ.

ಹಂಸಲೇಖ ಪತ್ನಿ ಲತಾ ಅವರೂ ಉತ್ತಮ ಹಾಡುಗಾರ್ತಿ. ಚಿತ್ರರಂಗಕ್ಕೆ ಹಂಸಲೇಖ ಸಲ್ಲಿಸಿದ ಸೇವೆಗೆ ಡಾ. ರಾಜಕುಮಾರ್ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿಗಳನ್ನು ನೀಡಿ ಗೌರವಿಸಲಾಗಿದೆ. ರಂಗಭೂಮಿ ಸೇವೆಗೆ ನಾಡಪ್ರಭು ಕೆಂಪೇಗೌಡ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

ಇದೀಗ ಅವರಿಗೆ ಕರ್ನಾಟಕ ನಾಟಕ ಅಕಾಡೆಮಿಯ 2016ರ ಗೌರವ ಪ್ರಶಸ್ತಿ ನೀಡಿ ಸನ್ಮಾನಿಸಲಾಗುತ್ತಿದೆ.



## ಆರ್. ಮಹದೇವಪ್ಪ

(ಕಲ್ಬುರ್ಗ್ಲ ಕಮೆಡಿಯನ್ ಕೆ. ಹಿರಣ್ಣಯ್ಯ ದತ್ತಿ ಪುರಸ್ಕಾರ)

ಕರ್ನಾಟಕದ ಪ್ರತಿಷ್ಠಿತ ನಾಟಕ ಕಂಪನಿಗಳಲ್ಲಿ ಪ್ರಮುಖ ಪಾತ್ರಗಳಲ್ಲಿ ನಟಿಸಿ ಮನೆಮಾತಾದವರು ಟಿ. ರಂಗಪ್ಪನವರು. ಅವರ ಪುತ್ರ ಆರ್.ಮಹದೇವಪ್ಪ ಅವರೂ ವೃತ್ತಿರಂಗಭೂಮಿಯ ಹೆಸರಾಂತ ನಟರು.

ಗುಬ್ಬಿ ಕಂಪನಿ, ಸುಬ್ಬಯ್ಯ ನಾಯ್ಡು, ಎಸ್‌ಎಸ್‌ಎಸ್ ನಾಟಕ ಮಂಡಳಿ ಸೇರಿದಂತೆ ಹಲವು ನಾಟಕ ಕಂಪನಿಗಳಲ್ಲಿ ಅವರು ವಿವಿಧ ನಾಟಕಗಳಲ್ಲಿ ಪಾತ್ರ ವಹಿಸಿದ್ದಾರೆ.

ಮಹದೇವಪ್ಪ ಅವರ ಸಹೋದರ ಅಶ್ವತ್ಥ ನಾರಾಯಣ ಸಿನಿಮಾರಂಗದಲ್ಲಿ ಜನಪ್ರಿಯರಾಗಿದ್ದಾರೆ. ಮೂಲತಃ ಅವರೂ ರಂಗಭೂಮಿಯ ಹೆಸರಾಂತ ನಟರು.

ಅಶಕ್ತ ಕಲಾವಿದರ ಪರವಾಗಿ ಹೋರಾಟ ನಡೆಸಿರುವ ಆರ್.ಮಹದೇವಪ್ಪ ಅವರನ್ನು ಹಲವು ಸಂಘ ಸಂಸ್ಥೆಗಳು ಗೌರವಿಸಿವೆ.

ಇದೀಗ ಅವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 2016ರ ಕಲ್ಬುರ್ಗ್ಲ ಕಮೆಡಿಯನ್ ಕೆ.ಹಿರಣ್ಣಯ್ಯ ದತ್ತಿ ಪುರಸ್ಕಾರ ನೀಡಿ ಗೌರವಿಸುತ್ತಿದೆ.





## ಬಿ. ಗಂಗಾಧರ್ (ನಟರತ್ನ ಚಿಂದೋಡಿ ವೀರಪ್ಪನವರ ದತ್ತಿ ಪುರಸ್ಕಾರ)

ಉತ್ತರ ಕರ್ನಾಟಕದ ನಾಟಕ ಕಂಪನಿಗಳಲ್ಲಿ ಗುಬ್ಬಿ ಗಂಗಾಧರ್ ಎಂದೇ ಖ್ಯಾತರಾಗಿದ್ದ ಬಿ.ಗಂಗಾಧರ್, ಉತ್ತರ ಕರ್ನಾಟಕ ಹಾಗೂ ಹಳೇ ಮೈಸೂರು (ದಕ್ಷಿಣ ಕರ್ನಾಟಕ) – ಹೀಗೆ ರಾಜ್ಯದ ಎರಡೂ ಭಾಗದ ಪ್ರಮುಖ ಕಂಪನಿಗಳಲ್ಲಿ ಸೇವೆ ಸಲ್ಲಿಸಿದ ಹಿರಿಯ ನಟರು. ಕೆ.ಹಿರಣ್ಣಯ್ಯ ಮಿತ್ರ ಮಂಡಳಿಯಲ್ಲಿ 1960 ರಲ್ಲಿ ರಂಗಪ್ರವೇಶ ಮಾಡಿದ ಗಂಗಾಧರ್, ಚಿತ್ರನಟ ಉದಯಕುಮಾರ್ ಅವರ ಉದಯ ಕಲಾನಿಕೇತನ, ದಾವಣಗೆರೆ ಜಿಲ್ಲೆಯ ಓಬಳೇಶ ಕಂಪನಿ, ಭೀಮಣ್ಣ ಅರಿಷಿಣಗೋಡಿಯವರ ಕಮತಗಿ ಕಂಪನಿ, ಚಿಂದೋಡಿ ವೀರಪ್ಪನವರ ಕೆಬಿಆರ್, ಮೈಸೂರು ಚೆನ್ನಪ್ಪನವರ ಗಾಯತ್ರಿ ನಾಟ್ಯಸಂಘ, ಚೆನ್ನಬಸವಣ್ಣ ನೇತೃತ್ವದ ಗುಬ್ಬಿ ಕಂಪನಿಗಳಲ್ಲಿ 45 ವರ್ಷಗಳ ಕಾಲ ಹತ್ತಾರು ಸಾಮಾಜಿಕ ನಾಟಕಗಳ ವೈವಿಧ್ಯಮಯ ಪಾತ್ರಗಳಲ್ಲಿ ಹೆಸರಾಗಿದ್ದಾರೆ.

ತುಮಕೂರು ಜಿಲ್ಲೆ ಗುಬ್ಬಿ ಸಮೀಪದ ಹೊದಲೂರುನಲ್ಲಿ ಪಾರ್ವತಮ್ಮ–ಬಸಪ್ಪ ಕೃಷಿಕ ದಂಪತಿಗೆ 1940 ರಲ್ಲಿ ಜನಿಸಿದ ಗಂಗಾಧರ್ ಅವರಿಗೆ, ಹಿಂದಿ ಚಿತ್ರಗಳ ದೈತ್ಯನಟ ಪೃಥ್ವಿರಾಜ್ ಕಪೂರರ ಸಿನಿಮಾಗಳ ಅಚ್ಚಳಿಯದ ಪ್ರಭಾವ ರಂಗಕ್ಕೆ ಕರೆತಂದಿತು. ಹಿರಣ್ಣಯ್ಯ ಕಂಪನಿಯಲ್ಲಿ ಯೋಗಾನರಸಿಂಹ ಅವರಿಂದ ಅಸ್ಖಲಿತವಾಗಿ ಸಂಭಾಷಣೆ ಹೇಳುವುದನ್ನು, ಸುಭದ್ರಮ್ಮ ಮನ್ಸೂರರಿಂದ ಭಾವಾಭಿನಯ ಕಲಿತು ಒಂದೊಂದೇ ಮೆಟ್ಟಿಲೇರುತ್ತ ನಟನಾಗಿ ಪ್ರತಿಷ್ಠಾಪಿತರಾದರು. ಓಬಳೇಶರ ಖಾದಿಸೀರೆಯ ಅರುಣ, ಮುಂಡೆಮಗ–ಅನಂತ, ಬೆಳ್ಳಿಬಂಗಾರದ ಸದಾನಂದ; ಧುತ್ತರಗಿಯವರ ಮಲಮಗಳು ನಾಟಕದ ರಾಜೀವಪ್ಪ ಪಾತ್ರಗಳು ಜನಮನ್ನಣೆ ಗಳಿಸಿಕೊಟ್ಟವು. ಅರಿಷಿಣಗೋಡಿಯವರ ಕಂಪನಿಯ ಬಸ್‌ಕಂಡಕ್ಟರ್, ಗರೀಬ ಹಟಾವೋ, ಇಲ್ಲಿಗೆ ಬಂತೋ ಸಂಗಯ್ಯ, ಕೊಂಡು ತಂದ ಗಂಡ, ಬಡವರು ನಗಬೇಕು ನಾಟಕಗಳ ವೈವಿಧ್ಯ ಪಾತ್ರಗಳಲ್ಲಿ ನಟಿಸಿ ಜನಪ್ರಿಯರಾದರು.

ಗುಬ್ಬಿ ವೀರಣ್ಣನವರ ಪುತ್ರ ಚೆನ್ನಬಸವಣ್ಣನವರ ನೇತೃತ್ವದಲ್ಲಿ ನಡೆಯುತ್ತಿದ್ದ ಕಂಪನಿಯಲ್ಲಿ ಚೆನ್ನಬಸವಣ್ಣ ರಾಮನಾಗಿ ಅಭಿನಯಿಸಿದರೆ, ಗಂಗಾಧರ್ ಲಕ್ಷ್ಮಣನಾಗಿ, ಪ್ರಭಾವತಿ ಸೀತೆಯಾಗಿ, ರಾಧಾರುಕ್ಮಿಣಿ ಅವಳಿ ಸಹೋದರಿಯರು ಲವಕುಶ ಪಾತ್ರಗಳಲ್ಲಿ ದೊಡ್ಡ ಹೆಸರು ಮಾಡಿದರು. ಕೃಷಿ ಕುಟುಂಬದಿಂದ ರಂಗಕೃಷಿಯಲ್ಲಿ ತಲ್ಲೀನರಾಗಿದ್ದ ಗಂಗಾಧರ್ 2003 ರಿಂದ ಮತ್ತೆ ಮಣ್ಣಿನ ಮಗನಾಗಿ ಹೊದಲೂರಿನಲ್ಲಿ ತೋಟ ಮಾಡಿಕೊಂಡು ಸಂತೃಪ್ತಿ ಜೀವನ ನಡೆಸಿದ್ದಾರೆ. ಅವರ ರಂಗಸೇವೆಯನ್ನು ಮನ್ನಿಸಿ ಹಲವು ಸಂಘ ಸಂಸ್ಥೆಗಳು ಗೌರವಿಸಿವೆ.

ಇದೀಗ ಕರ್ನಾಟಕ ನಾಟಕ ಅಕಾಡೆಮಿಯ 2016ರ ನಟರತ್ನ ಚಿಂದೋಡಿ ವೀರಪ್ಪನವರ ದತ್ತಿ ಪುರಸ್ಕಾರ ನೀಡಿ ಗೌರವಿಸುತ್ತಿದೆ.

---



## ಉಮಾ ರಾಣೆಬೆನ್ನೂರು

(ಪದ್ಮಶ್ರೀ ಚಿಂದೋಡಿಲೀಲಾ ದತ್ತಿ ಪುರಸ್ಕಾರ)

ನಟನೆಯನ್ನೇ ವೃತ್ತಿಯಾಗಿ ನೆಚ್ಚಿಕೊಂಡ ಕೆಲವು ನಟಿಯರು ವೃತ್ತಿ ನಾಟಕ ಕಂಪನಿ ಹಾಗೂ ಗ್ರಾಮೀಣ ಹವ್ಯಾಸಿ ನಾಟಕಗಳಲ್ಲಿ ಏಕಕಾಲದಲ್ಲಿ ಪಾತ್ರಗಳಲ್ಲಿ ಅಭಿನಯಿಸುತ್ತಾರೆ. ಅಂತಹ ನಟಿಯರ ಪೈಕಿ ವಿಜಯಪುರದಲ್ಲಿ ನೆಲೆಸಿರುವ ಉಮಾ ರಾಣೆಬೆನ್ನೂರು ಅವರೂ ಸಹ ಒಬ್ಬ ಪ್ರಮುಖ ನಟಿ.

11ನೇ ವಯಸ್ಸಿಗೆ ಅರಿಶಿಣ ಕುಂಕುಮ ನಾಟಕದ ನಂದಿನಿ ಎಂಬ ಕುರುಡಿ ಪಾತ್ರಕ್ಕೆ ಬಣ್ಣ ಹಚ್ಚಿ ನಂತರ ಅಮರೇಶ್ವರ ನಾಟಕ ಸಂಘ ಗುಡಗುಂಟಿ, ಕುಮಾರ ವಿಜಯ ನಾಟಕ ಸಂಘ ಬೇಲೂರ, ಕಮತಗಿ ಹುಚ್ಚೇಶ್ವರ ನಾಟ್ಯಸಂಘ, ಕೆಬಿಆರ್ ಡ್ರಾಮಾ ಕಂಪನಿಗಳಲ್ಲಿ ವರ್ಷೆರಡು ವರ್ಷ ಅಭಿನಯಿಸಿ ಮಧ್ಯೆ ಮಧ್ಯೆ ಮತ್ತೆ ಗ್ರಾಮೀಣ ನಾಟಕಗಳಲ್ಲೂ ಹೆಸರು ಮಾಡಿದ್ದಾರೆ. ಗುಡಿಗೇರಿ, ಚಿತ್ತರಗಿ, ಶೇಖಮಾಸ್ತರ ಅವರ ನಾಟಕ ಕಂಪನಿಗಳಲ್ಲಿ ತುಸು ಹೆಚ್ಚುಕಾಲ ನಟಿಯಾಗಿದ್ದ ಉಮಾ ಇದೀಗ ಎರಡನ್ನೂ ಪ್ರಮುಖವಾಗಿ ನೆಚ್ಚಿಕೊಂಡಿದ್ದಾರೆ.

ಹಾವೇರಿ ಜಿಲ್ಲೆಯ ರಾಣೆಬೆನ್ನೂರು ಯಲ್ಲಪ್ಪ-ಹನುಮವ್ವ ದಂಪತಿಗೆ ಜನಿಸಿದ ಉಮಾ, ನಾಟಕ ಕಂಪನಿ ಜಗತ್ತನ್ನು ಪ್ರವೇಶಿಸಿ ಅಲ್ಲಿಯೇ ನಟರಾಗಿದ್ದ ಹನುಮಂತಪ್ಪ ಚಲಕರಾಗಿ ಅವರನ್ನು ವರಿಸಿದರು. ಕಲ್ಪನಾ, ಸ್ವಪ್ನಾ ಎಂಬ ಇವರ ಇಬ್ಬರು ಪುತ್ರಿಯರು ನಾಟಕ ಕಂಪನಿ ಹಾಗೂ ಹಳ್ಳಿಗಾಡಿನ ನಟಿಯರು.

ಸಿಂಧೂರ ಲಕ್ಷ್ಮಣ, ಕಿತ್ತೂರು ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಟಿಪ್ಪುಸುಲ್ತಾನ ಮುಂತಾದ ಐತಿಹಾಸಿಕ ನಾಟಕಗಳು; ಸತ್ಯ ಹರಿಶ್ಚಂದ್ರ, ಕುರುಕ್ಷೇತ್ರ ಪೌರಾಣಿಕ ನಾಟಕಗಳು: ಬಸವಣ್ಣ, ಹೇಮರೆಡ್ಡಿ ಮಲ್ಲಮ್ಮ ಆಧ್ಯಾತ್ಮಿಕ ನಾಟಕಗಳು; ದಾರಿದೀಪ, ಹೂವಿನ ಅಂಗಡಿ, ಕಣ್ಣಿದ್ದರೂ ಬುದ್ಧಿಬೇಕು ಸೇರಿದಂತೆ ಹತ್ತಾರು ಸಾಮಾಜಿಕ ನಾಟಕಗಳ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿರುವ ಉಮಾ ಹವ್ಯಾಸಿ ನಾಟಕಗಳಾದ ಜೋಕುಮಾರಸ್ವಾಮಿ, ತಲೆದಂಡ, ರಂಗಸುಂದರಿ ಮುಂತಾದ ನಾಟಕಗಳಲ್ಲೂ ಅಭಿನಯಿಸಿ ತಮ್ಮ ರಂಗಾನುಭವವನ್ನು ವಿಸ್ತರಿಸಿಕೊಂಡಿದ್ದಾರೆ.

ರಂಗಭೂಮಿಯೇ ನಮ್ಮ ಕುಟುಂಬದ ಸರ್ವಸ್ವ, ಅದನ್ನೇ ಪೂಜಿಸುತ್ತೇವೆ ಎನ್ನುವ ಉಮಾ ಅವರನ್ನು ಹಲವು ಸಂಘಸಂಸ್ಥೆಗಳು ಗೌರವಿಸಿವೆ, ಕರ್ನಾಟಕ ಚೇತನ ಪ್ರಶಸ್ತಿ ನೀಡಿ ಸನ್ಮಾನಿಸಿವೆ.

ಕರ್ನಾಟಕ ನಾಟಕ ಅಕಾಡೆಮಿಯು ಇದೀಗ ಅವರಿಗೆ 2016ರ ಪದ್ಮಶ್ರೀ ಚಿಂದೋಡಿ ಲೀಲಾ ದತ್ತಿ ಪುರಸ್ಕಾರ ನೀಡಿ ಗೌರವಿಸುತ್ತಿದೆ.

---



## ರಾಮಕೃಷ್ಣ ಎಲ್.

ರಾಗ ಸಂಯೋಜನೆ, ನಾಟಕ ನಿರ್ದೇಶನದಲ್ಲಿ ಸುದೀರ್ಘ ಕಾಲದಿಂದ ಹವ್ಯಾಸಿ ರಂಗಭೂಮಿಯ ಸೇವೆ ಮಾಡುತ್ತ ಬಂದಿರುವ ಹೆಸರಾಂತ ರಂಗಕರ್ಮಿ ಎಲ್. ರಾಮಕೃಷ್ಣ ಅವರು. ಹಾರ್ಮೋನಿಯಂ ವಾದಕರಾಗಿ 1974 ರಲ್ಲಿ ಬೆಂಗಳೂರು ರಂಗಸಂಪದ ತಂಡ ಸೇರಿದ ರಾಮಕೃಷ್ಣ ನಂತರದಲ್ಲಿ ತಂಡದ ಹಲವು ನಾಟಕಗಳಲ್ಲಿ ಅಭಿನಯಿಸಿದರು. ಜತೆಗೆ ಐಟಿಐ, ಮೈಕೊ, ಬಿಇಎಲ್, ಬಿಎಚ್ಇಎಲ್ ಮತ್ತು ಐಟಿಸಿ ಕಂಪನಿಗಳ ರಂಗತಂಡಗಳಿಗೆ ಹಾರ್ಮೋನಿಯಂ ವಾದಕರಾಗಿ, ರಾಗ ಸಂಯೋಜಕರಾಗಿ ಕೆಲಸ ಮಾಡಿದ್ದಾರೆ.

ಬೆಂಗಳೂರು ನಗರದ ಪಿ. ಲಕ್ಷ್ಮಯ್ಯ–ಪಾಪಮ್ಮ ದಂಪತಿಗೆ 1935ರಲ್ಲಿ ಜನಿಸಿದ ರಾಮಕೃಷ್ಣ ಅವರು, ಜಿಟಿಆರ್ಇ (ಡಿಆರ್‌ಡಿಓ) ಸಂಸ್ಥೆಯಲ್ಲಿ ಆರ್ಟಿಸ್ಟ್ ಹಾಗೂ ಫೋಟೋಗ್ರಾಫರ್ ಆಗಿ 1964 ರಲ್ಲಿ ಕೆಲಸಕ್ಕೆ ಸೇರಿದರು. ರಾಮಕೃಷ್ಣ ಅವರು ತಮ್ಮ ವೃತ್ತಿಯ ಜತೆಗೆ ರಂಗಭೂಮಿಯ ನಿರಂತರ ಒಡನಾಟ ಇಟ್ಟುಕೊಂಡು ನೂರಾರು ಪ್ರದರ್ಶನಗಳಿಗೆ ವಾದ್ಯ ಸಂಗೀತದ ಸಾಥ್ ನೀಡಿದರು. ಇದರ ಜತೆಗೆ ಹಳ್ಳಿಗಳಲ್ಲಿ ರಾಮಾಯಣ, ಕುರುಕ್ಷೇತ್ರ, ದಾನಶೂರ ಕರ್ಣ, ರುಕ್ಮಿಣಿ ಸ್ವಯಂವರ, ಕೃಷ್ಣಾರ್ಜುನ ಯುದ್ಧ ಮುಂತಾದ ಪೌರಾಣಿಕ ನಾಟಕಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ. ವಧೆ ಎಂಬ ನಾಟಕ ರಚಿಸಿ ನಿರ್ದೇಶಿಸಿದ್ದಾರೆ. ಸತಿ ವಿಜಯ, ವಾಲಿ ಸಂಹಾರ ಇವರ ಇತರ ಕೃತಿಗಳು.

ತಮ್ಮ ಸುದೀರ್ಘ ರಂಗಸೇವೆಯ ದಿನಮಾನಗಳಲ್ಲಿ ಅನೇಕ ಬಿರುದು, ಸನ್ಮಾನಗಳಿಗೆ ಪಾತ್ರರಾದ ರಾಮಕೃಷ್ಣ ಅವರಿಗೆ ಇದೀಗ ಕರ್ನಾಟಕ ನಾಟಕ ಅಕಾಡೆಮಿಯ 2016ರ ವಾರ್ಷಿಕ ಪ್ರಶಸ್ತಿಯ ಗರಿ.

---



## ವಿರುಪಾಕ್ಷರಾವ್ ಮೋರಿಗೇರಿ

ವಿರುಪಾಕ್ಷಪ್ಪ ಎಂದೇ ಗ್ರಾಮೀಣ ರಂಗಾಸಕ್ತರ ಪ್ರೀತಿಗೆ ಪಾತ್ರವಾಗಿರುವ ವಿರುಪಾಕ್ಷರಾವ್ ಮೋರಿಗೇರಿ ಅವರದು ತಬಲಾ ವಾದನದಲ್ಲಿ ದೊಡ್ಡ ಹೆಸರು. ಎಲ್ಲ ಬಗೆಯ ನಾಟಕಗಳ ರಂಗಸಂಗೀತಕ್ಕೆ ಸೂಕ್ತವಾದ ತಬಲಾ ಸಾಥ್ ನೀಡಿದ ಪ್ರತಿಭಾವಂತರು.

ಬಳ್ಳಾರಿ ಜಿಲ್ಲೆ ಹಗರಿ ಬೊಮ್ಮನಹಳ್ಳಿ ತಾಲ್ಲೂಕು ಮೋರಿಗೇರಿ ಗ್ರಾಮದಲ್ಲಿ ಟೈಲರ್ ಗಂಗಾಧರರಾವ್– ವೆಂಕಮ್ಮ ದಂಪತಿಗೆ 1947 ರಲ್ಲಿ ಜನಿಸಿದ ವಿರುಪಾಕ್ಷಪ್ಪನವರು, ತಬಲಾ ವಾದಕರೂ ಆಗಿದ್ದ ತಂದೆಯ ಬಳಿ ವಾದ್ಯ ನುಡಿಸುವಿಕೆಯನ್ನು ಪ್ರಥಮಬಾರಿಗೆ ಕಲಿತರು. ಹೆಚ್ಚಿನ ಶಿಕ್ಷಣವನ್ನು ಸಂಗೀತ ವಿದ್ವಾನ್ ಹಕ್ಕಂಡಿ ವಾಮದೇವ ಅವರ ಬಳಿ ಪಡೆದು ತಬಲಾ ಜ್ಯೂನಿಯರ್‌ನಲ್ಲಿ ಪ್ರಥಮ ರ‍್ಯಾಂಕ್ ಗಳಿಸಿದರು. ನಂತರ ಗ್ರಾಮೀಣ ಭಾಗದಲ್ಲಿ ಜರುಗುವ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಸೇರಿದಂತೆ ಎಲ್ಲಬಗೆಯ ನಾಟಕಗಳಿಗೆ ತಬಲಾ ನುಡಿಸಲು ಹೋಗುತ್ತಿದ್ದರು. ಕಳೆದ 40 ವರ್ಷಗಳಲ್ಲಿ 7 ಸಾವಿರಕ್ಕೂ ಅಧಿಕ ನಾಟಕಗಳಿಗೆ ಅವರು ತಬಲಾ ನುಡಿಸಿದ್ದಾರೆ.

ಗಾನಕೋಗಿಲೆ ಸುಭದ್ರಮ್ಮ ಮನ್ಸೂರರ ದೆಹಲಿ ರಂಗಗೀತೆ ಕಾರ್ಯಕ್ರಮ, ಸಿರಿಗೇರಿ ನಾಗನಗೌಡ, ಮದಿರೆ ಮರಿಸ್ವಾಮಿಯಂತಹ ಹಲವಾರು ಹೆಸರಾಂತ ಹಾರ್ಮೋನಿಯಂ ವಾದಕರಿಗೆ ತಬಲಾ ಸಾಥ್ ನೀಡಿರುವ ವಿರುಪಾಕ್ಷಪ್ಪನವರು, ರಂಗಭೂಮಿಯಲ್ಲಿ ತನಗೆ ಮಾರ್ಗದರ್ಶಕರೂ ಹಿತೈಷಿಯೂ ಆಗಿ ಸಂಗೀತ ವಿದ್ವಾನ್ ಡಿ.ಎಂ. ಕೋಟಯ್ಯಸ್ವಾಮಿ ಹಾಗೂ ಕಲಾವಿದೆ ಮರಿಯಮ್ಮನಹಳ್ಳಿ ನಾಗರತ್ನಮ್ಮ ಅಂತಹ ಹತ್ತಾರು ಜನ ಇದ್ದಾರೆ ಎಂದು ಕೃತಜ್ಞತೆಯಿಂದ ಸ್ಮರಿಸುತ್ತಾರೆ.

ಗ್ರಾಮೀಣ ರಂಗಭೂಮಿಗೆ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು ಇದೀಗ 2016ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಬಸವರಾಜ ಹೂಗಾರ

ನಾಡಿನ ಹೆಸರಾಂತ ನಾಟಕ ಕಂಪನಿಗಳಲ್ಲಿ ಕಳೆದ 40 ವರ್ಷಗಳಿಂದ ತಬಲಾ ವಾದನದಲ್ಲಿ ಜನಪ್ರಿಯವಾಗಿರುವ ಹಿರಿಯ ಕಲಾವಿದ ಬಸವರಾಜ ಹೂಗಾರರು. ಶ್ರೀ ಭಾರತಿ ನಾಟ್ಯಸಂಘ–ಸೂಡಿ, ಶ್ರೀ ವೀರೇಶ್ವರ ನಾಟ್ಯಸಂಘ–ಗದಗ, ಶ್ರೀ ಸಂಗಮೇಶ್ವರ ನಾಟ್ಯ ಸಂಘ–ಕಟಗೇರಿ, ಶ್ರೀ ಗುರು ಕುಮಾರೇಶ್ವರ ನಾಟ್ಯಸಂಘ–ಹಾನಗಲ್ ಸೇರಿದಂತೆ ಪ್ರಖ್ಯಾತ ನಾಟಕ ಕಂಪನಿಗಳಲ್ಲಿ ಸಂಗೀತಕ್ಕೆ ತಬಲಾ ಸಾಥ್ ನೀಡಿದ್ದಾರೆ ಬಸವರಾಜ ಹೂಗಾರರು.

ವಿಜಯಪುರ ಜಿಲ್ಲೆ ಬಸವನಬಾಗೇವಾಡಿ ತಾಲ್ಲೂಕು ನರಸಲಗಿ ಗ್ರಾಮದ ಚೆನ್ನಬಸಪ್ಪ–ಬೌರಮ್ಮ ದಂಪತಿಗೆ ಜನಿಸಿದ ಬಸವರಾಜ ಅವರು ತಾಳಿಕೋಟೆಯ ಶ್ರೀ ಖಾಸ್ಗತೇಶ್ವರ ಸಂಗೀತ ಶಾಲೆಯ ಸಾಲಿಮಠ ಶಿಕ್ಷಕರಿಂದ ಸಂಗೀತದ ದೀಕ್ಷೆ ಪಡೆದರು. ನಂತರ ಅವರು ಗ್ರಾಮೀಣ ನಾಟಕಗಳು, ಅಮೆಚೂರ್ ನಾಟಕಗಳಲ್ಲಿ ಸಂಗೀತದ ಸಾಥ್ ನೀಡುವ ಜತೆಗೆ ನಾಟಕ ಕಂಪನಿಗಳಲ್ಲಿ ನೆಲೆ ನಿಂತರು. ಸರಳ ಸಜ್ಜನಿಕೆಯ ಬಸವರಾಜ ಹೂಗಾರರು ನಾಟಕ ಅಕಾಡೆಮಿ ಅಧ್ಯಕ್ಷರಾದ ಶೇಖ್ ಮಾಸ್ತರ್ ಅವರ ನಂಬುಗೆಯ ನೆಚ್ಚಿನ ಬಂಟರಾಗಿದ್ದಾರೆ. ಅದೇ ಸೌಜನ್ಯವನ್ನು ಎಲ್ಲ ಮಾಲೀಕರ ಬಳಿ ಹೊಂದಿದ್ದಾರೆ.

ಹೂಗಾರರ ಸಂಗೀತ ಸೇವೆಯನ್ನು ಮನ್ನಿಸಿ ನಾಡಿನ ಅನೇಕ ಸಂಘ ಸಂಸ್ಥೆಗಳು ಗೌರವ, ಸನ್ಮಾನ ನೀಡಿವೆ. ಇದೀಗ ಬಸವರಾಜ ಹೂಗಾರರ ವೃತ್ತಿ ರಂಗಭೂಮಿ ಸೇವೆಯನ್ನು ಮನ್ನಿಸಿ ಕರ್ನಾಟಕ ನಾಟಕ ಅಕಾಡೆಮಿಯು 2016ರ ವಾರ್ಷಿಕ ಪ್ರಶಸ್ತಿಯನ್ನು ಪ್ರದಾನ ಮಾಡುತ್ತಿದೆ.

---



## ಮಹಾಂತಯ್ಯಸ್ವಾಮಿ ಖಾನಾಪುರ

ಮಹಾಂತಯ್ಯಸ್ವಾಮಿ ಖಾನಾಪುರ ಅವರು ಹತ್ತಿರತ್ತಿರ ಅರ್ಧ ಶತಮಾನದಷ್ಟು ದೀರ್ಘಕಾಲ ಸಂಗೀತಗಾರರಾಗಿ ಮನೆಮಾತಾಗಿದ್ದಾರೆ. ಮೂರು ಸಾವಿರಕ್ಕೂ ಹೆಚ್ಚು ನಾಟಕಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ, ಹಾರ್ಮೋನಿಯಂ ನುಡಿಸಿದ್ದಾರೆ. ರಂಗಗೀತೆಗಳನ್ನು ರಚಿಸಿ, ರಾಗ ಸಂಯೋಜಿಸಿ ಹಾಡಿದ್ದಾರೆ. ಹಿನ್ನೆಲೆ ಗಾಯಕರಾಗಿ ಹೆಸರು ಮಾಡಿದ್ದಾರೆ. ಮಹಿಳೆ ಪಾತ್ರಗಳ ಹಾಡುಗಳಿಗೂ ಕಂಠದಾನ ಮಾಡಿರುವುದು ವಿಶೇಷ.

ಶ್ರೀ ಕುಮಾರೇಶ್ವರ ನಾಟ್ಯಸಂಘ ಹಾನಗಲ್, ಶ್ರೀ ವಿಶ್ವಾರಾಧ್ಯ ನಾಟ್ಯಸಂಘ ಜೇವರ್ಗಿ, ಮುತ್ಯಾನ ಬಬಲಾದ ನಾಟ್ಯಸಂಘ (ಕಲಬುರ್ಗಿ ಜಿಲ್ಲೆ); ಶ್ರೀ ಮಾರುತೇಶ್ವರ ನಾಟ್ಯಸಂಘ ಅಸ್ಕಿ (ವಿಜಯಪುರ); ಶ್ರೀ ಗುರುಪಾದಲಿಂಗೇಶ್ವರ ನಾಟ್ಯಸಂಘ (ಬೀದರ ಜಿಲ್ಲೆ); ಶ್ರೀ ಸಿದ್ಧಲಿಂಗೇಶ್ವರ ನಾಟ್ಯಸಂಘ ತಡಿಬಿಡಿ (ಯಾದಗಿರಿ ಜಿಲ್ಲೆ) ಸೇರಿದಂತೆ ಕಲ್ಯಾಣ ಕರ್ನಾಟಕದ ಹಲವು ನಾಟಕ ಕಂಪನಿಗಳಲ್ಲಿ ರಂಗಸಂಗೀತ ನಿರ್ದೇಶನ ಮಾಡಿದ್ದಾರೆ. ಮೇಲ್ವಿಚಾರಕನಾಗಿ, ಮಾಲೀಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಶಾಲೆ ಕಾಲೇಜುಗಳ ನಾಟಕಗಳಿಗೆ, ಹವ್ಯಾಸಿ ನಾಟಕಗಳಿಗೆ ಸಂಗೀತ ನಿರ್ದೇಶನ ಮಾಡಿದ್ದಾರೆ.

ಯಾದಗಿರಿ ಜಿಲ್ಲೆ ಶಹಾಪುರ ತಾಲ್ಲೂಕು ಮೋರನಹಳ್ಳಿ ಹೋಬಳಿ ಖಾನಾಪುರದಲ್ಲಿ ಕಡ್ಲಯ್ಯಸ್ವಾಮಿ– ಸಂಗಮ್ಮ ದಂಪತಿಗೆ 1957 ರಲ್ಲಿ ಜನಿಸಿದ ಮಾಂತಯ್ಯಸ್ವಾಮಿ ಶಾಲಾ ಶಿಕ್ಷಣಕ್ಕಿಂತ ಸಂಗೀತವನ್ನೇ ಹೆಚ್ಚು ನೆಚ್ಚಿಕೊಂಡು ವೃತ್ತಿ ಪ್ರವೃತ್ತಿ ಎರಡನ್ನೂ ಮಾಡಿಕೊಂಡಿದ್ದಾರೆ. ಮಹಾದೇವರೆಡ್ಡಿ ಕಾಡಿಮಾಗೇರಾ ಅವರು ಮಾಂತಯ್ಯನವರ ಸಂಗೀತದ ಗುರುಗಳು. ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಕ್ರೀಡೆ ಮತ್ತು ಯುವಜನಸೇವಾ ಇಲಾಖೆ ಮುಂತಾದೆಡೆ ಪ್ರಚಾರಾಂದೋಲನದ ಕಾರ್ಯಕ್ರಮಗಳಲ್ಲಿ ಸಂಗೀತಗಾರರಾಗಿ ಸೇವೆ ಸಲ್ಲಿಸಿದ್ದಾರೆ.

ರಂಗಸಂಗೀತ ಕ್ಷೇತ್ರಕ್ಕೆ ನೀಡಿದ ಕೊಡುಗೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು ಇದೀಗ 2016ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಹಣಮಂತಪ್ಪ ಆರ್. ನರಬೋಳಿ

ಹಗಲುವೇಷ ಕಲಾವಿದರನ್ನು ಹೆಚ್ಚು ಹೊಂದಿರುವ ಕಿಳ್ಳೆಕೇತ ಅಲಿಯಾಸ್ ಸುಡುಗಾಡಸಿದ್ದ ಎಂಬ ಅಲೆಮಾರಿ ಜನಾಂಗದಿಂದ ಬಂದಿರುವ ಹಣಮಂತಪ್ಪ ನರಬೋಳಿ ಅವರು ನಾಡಿನ ಖ್ಯಾತ ರಂಗಸಂಗೀತ ನಿರ್ದೇಶಕರು.

ತಬಲಾ, ಮೃದಂಗ, ಹಾರ್ಮೋನಿಯಂ ವಾದನದಲ್ಲಿ ಪರಿಣತರಾಗಿರುವ ಹಣಮಂತಪ್ಪ ತಬಲಾವಾದನದಲ್ಲಂತೂ ನಿಷ್ಣಾತರು. ನಾಡಿನ ಖ್ಯಾತ ನಾಟಕ ಕಂಪನಿ ಹಾಗೂ ನೂರಾರು ಹಳ್ಳಿಗಳಲ್ಲಿ ಅವರು ವಾದ್ಯಸಂಗೀತದ ತಮ್ಮ ಪರಿಣತಿಯನ್ನು ಮೆರೆದಿದ್ದಾರೆ.

ತಮ್ಮ ಕಲಾಪ್ರದರ್ಶನಗಳೊಂದಿಗೆ ಊರೂರು ಅಲೆಯುತ್ತ ಕಲಬುರ್ಗಿ ಜಿಲ್ಲೆ ಜೇವರ್ಗಿ ತಾಲ್ಲೂಕು ನರಬೋಳಕ್ಕೆ ಬಂದು ನೆಲೆನಿಂತ ರಾಮಯ್ಯ– ಲಕ್ಷ್ಮಿಬಾಯಿ ದಂಪತಿಗೆ 1940ರಲ್ಲಿ ಜನಿಸಿದ ಹಣಮಂತಪ್ಪ ಶಾಲಾ ಶಿಕ್ಷಣದ ನಂತರ ತಾಳಿಕೋಟೆ ಶ್ರೀ ಖಾಸ್ಗತೇಶ್ವರ ಮಠದ ಪಿ.ಎಸ್.ಸಾಲಿಮಠ ಅವರ ಬಳಿ ತಬಲಾ, ಹಾರ್ಮೋನಿಯಂ ಕಲಿತು ಸಂಗೀತ ನಿರ್ದೇಶಕರಾಗಿ ಇಳಕಲ್‌ನ ಮಹಾಂತೇಶ್ವರ ನಾಟಕ ಸಂಘ ಸೇರಿದರು. ಈ ಮಧ್ಯೆ ಹಳ್ಳಿಯ ಹವ್ಯಾಸಿ (ಅಮೆಚೂರ್) ನಾಟಕಗಳಿಗೂ ವಾದ್ಯ ನುಡಿಸಲು ಹೋಗುವ ಜತೆಗೆ ಕರ್ನಾಟಕದ ಪ್ರತಿಷ್ಠಿತ ನಾಟಕ ಕಂಪನಿಗಳಲ್ಲಿ ತಲಾ ನಾಲ್ಕೈದು ವರ್ಷಗಳ ಕಾಲ ವಾದ್ಯಸಂಗೀತ ಸಾಥ್ ನೀಡುತ್ತ ಸಂಗೀತ ಸುಧೆಯುಣಿಸಿದರು. ತಬಲಾ ವಾದನದಲ್ಲಿ ಅಪ್ರತಿಮ ಸಾಧನೆ ಮಾಡಿದರು.

ಹಣಮಂತಪ್ಪ ಸಂಗೀತ ಸುಧೆ ನೀಡಿದ ಕಂಪನಿಗಳೆಂದರೆ ಗದಗದ ಅಜ್ಜಾವರ (ಪಂಚಾಕ್ಷರ ಗವಾಯಿ) ಕಂಪನಿ, ಚಿಂದೋಡಿ ಬಂಗಾರೇಶ್, ಶೇಖ ಮಾಸ್ತರ, ರಾಜು ತಾಳೀಕೋಟಿ, ಪ್ರೇಮಾ ಗುಳೇದಗುಡ್ಡ ಮುಂತಾದವು. ವಿಜಯಪುರ, ಕಲಬುರ್ಗಿ, ಬೀದರ, ರಾಯಚೂರು, ಯಾದಗಿರಿ ಜಿಲ್ಲೆಗಳ ಹತ್ತಾರು ಗ್ರಾಮದ ಅಮೆಚೂರ್ ನಾಟಕಗಳಿಗೆ ನಾಟಕ ಹಾಗೂ ಸಂಗೀತ ನಿರ್ದೇಶನವನ್ನು ಅವರು ನೀಡಿದ್ದಾರೆ. ಸಂಗೀತದ ಅವರ ಸೇವೆಗೆ ಹಲವು ಸಂಘ ಸಂಸ್ಥೆಗಳು ಸನ್ಮಾನಿಸಿವೆ.

ಇದೀಗ ಕರ್ನಾಟಕ ನಾಟಕ ಅಕಾಡೆಮಿಯು 2016ರ ವಾರ್ಷಿಕ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.

---



## ಅಶೋಕ ನೇಸರ್ಗಿ

ವೃತ್ತಿರಂಗಭೂಮಿಯಲ್ಲಿ ವೈವಿಧ್ಯಮಯ ಪಾತ್ರಗಳು ಅದರಲ್ಲೂ ಹಾಸ್ಯ ಪಾತ್ರಗಳಲ್ಲಿ ಬಹುದೀರ್ಘ ಕಾಲದಿಂದ ನಟಿಸುತ್ತ ಬಂದ ಹೆಸರಾಂತ ಕಲಾವಿದರು ಅಶೋಕ ನೇಸರ್ಗಿ.

ಬೆಳಗಾವಿ ಜಿಲ್ಲೆ ನೇಸರ್ಗಿಯ ಶಿವಲಿಂಗಪ್ಪ–ನೀಲಮ್ಮ ದಂಪತಿಗೆ ಜನಿಸಿದ ಅಶೋಕ ಅವರು ಬಾಲ್ಯದಿಂದಲೇ ನಾಟಕ ರಚನೆ, ನಟನೆಯ ಗೀಳು ಹಚ್ಚಿಕೊಂಡು 1968 ರಲ್ಲಿ ವೃತ್ತಿ ರಂಗಪ್ರವೇಶ ಪಡೆದರು. ಹತ್ತಿರತ್ತಿರ ಅರ್ಧ ಶತಮಾನ ಕಾಲ ಸುಳ್ಳ ದೇಸಾಯಿ, ಗುಡಿಗೇರಿ ಬಸವರಾಜ, ಭೀಮಣ್ಣ ಅರಿಷಿಣಗೋಡಿ, ಧಾರವಾಡದ ಶರಣ ಬಸವೇಶ್ವರ ನಾಟ್ಯಸಂಘ, ಹಿರಣ್ಣಯ್ಯ ಮಿತ್ರಮಂಡಳಿ, ನ್ಯಾಮತಿ ಶಾಂತಣ್ಣ ನಾಟಕ ಕಂಪನಿ ಸೇರಿದಂತೆ ಕರ್ನಾಟಕದ ಪ್ರತಿಷ್ಠಿತ ಕಂಪನಿಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ನಟಿಸಿ ದೊಡ್ಡ ಹೆಸರು ಮಾಡಿದ್ದಾರೆ.

'ಮುದುಕನ ಮದುವೆ' ನಾಟಕದ ಮುದುಕನ ಪಾತ್ರ ಬೆಂಗಳೂರು ನಗರದ ಪ್ರೇಕ್ಷಕರನ್ನು ವಿಶೇಷವಾಗಿ ಆಕರ್ಷಿಸಿತ್ತು. 'ಕಿತ್ತೂರು ಚೆನ್ನಮ್ಮ' ನಾಟಕದ ಇವರ ಮಲ್ಲಪ್ಪಶೆಟ್ಟಿ ಪಾತ್ರವನ್ನು ವೀಕ್ಷಿಸಿದ ವಾಟಾಳ್ ನಾಗರಾಜ್ ಅವರು ನಾಟಕ ಮುಗಿದ ಮೇಲೆ ರಂಗದ ಮೇಲೆ ಬಂದು 'ಎಷ್ಟೊಂದು ಕ್ರೂರ ಮನಸ್ಸೋ ನಿನ್ನದು.. ಅದ್ಭುತ ಅಭಿನಯ ಮಾಡಿದೆ ಕಣೋ..' ಎಂದು ಮನಸಾರೆ ಮೆಚ್ಚಿ ಅಭಿನಂದಿಸಿದ್ದರಂತೆ.

1975 ರಲ್ಲಿ ಕಲಾ ಸಾಮ್ರಾಜ್ಯ ನಾಟ್ಯ ಸಂಘ ಎಂಬ ನಾಟಕ ಕಂಪನಿ ಶುರುಮಾಡಿ ಏಳುವರ್ಷ ನಡೆಸಿದ ಸಾಹಸಿ ಅಶೋಕ ನೇಸರ್ಗಿ. ಆಸ್ತಿ ಅಂತಸ್ತು, ರೈತ ನಕ್ಕರೆ ನಾಡೆಲ್ಲ ಸಕ್ಕರೆ, ಭರತೇಶ ಬಾಹುಬಲಿ, ಘನಮಠೇಶ್ವರ, ಅಥಣಿ ಮುರುಘೇಂದ್ರ ಶಿವಯೋಗಿಗಳು, ಆರಕ್ಷರಿಗೆ ರಕ್ಷಕರಾರು? ಸೇರಿದಂತೆ ಹತ್ತಕ್ಕೂ ಅಧಿಕ ನಾಟಕಗಳನ್ನು ಅವರು ರಚಿಸಿದ್ದಾರೆ.

ವೃತ್ತಿ ರಂಗಭೂಮಿಗೆ ಅಶೋಕ ನೇಸರ್ಗಿ ಸಲ್ಲಿಸಿದ ಸೇವೆಯನ್ನು ಮನ್ನಿಸಿ ಕರ್ನಾಟಕ ನಾಟಕ ಅಕಾಡೆಮಿಯು ಇದೀಗ 2016ರ ವಾರ್ಷಿಕ ಪ್ರಶಸ್ತಿಯನ್ನು ಪ್ರದಾನ ಮಾಡುತ್ತಿದೆ.

---



## ಸಿದ್ದಪ್ಪ ನಿಂಗಪ್ಪ ಗುಳ್ಳೆ

ಅಂಧರು, ಅಂಗವಿಕಲರು, ಅನಾಥರನ್ನು ಬಹುದೊಡ್ಡ ಪ್ರತಿಭಾವಂತರಾಗಿ ರೂಪಿಸಿದ ಗದಗ ಶ್ರೀ ವೀರೇಶ್ವರ ಪುಣ್ಯಾಶ್ರಮದ ಕೊಡುಗೆ ಸಿದ್ದಪ್ಪ ಗುಳ್ಳೆ ಅವರು.

ಮೂರು ವರ್ಷಕ್ಕೆ ಅಂಧರಾದ ಸಿದ್ದಪ್ಪ ತಮ್ಮ 13ನೇ ವಯಸ್ಸಿನಿಂದ (1950) 23ನೇ ವಯಸ್ಸಿನವರೆಗೆ (1960) ಡಾ.ಪಂಡಿತ ಪುಟ್ಟರಾಜ ಗವಾಯಿಗಳ ಶಿಷ್ಯರಾಗಿ ಸಂಗೀತ ಕಲಿಸಿಕೊಂಡು ಅರ್ಧ ಶತಮಾನಕ್ಕೂ ಹೆಚ್ಚು ಕಾಲ ಅದನ್ನು ರಂಗಭೂಮಿಗೆ ಧಾರೆ ಎರೆದರು. ಪುಟ್ಟರಾಜ ಗವಾಯಿಗಳು ಸ್ಥಾಪಿಸಿದ ಶ್ರೀ ಕುಮಾರೇಶ್ವರ ಕೃಪಾಪೋಷಿತ ಪಂ.ಪಂಚಾಕ್ಷರ ಗವಾಯಿಗಳ ನಾಟ್ಯಸಂಘದಲ್ಲಿ ಆರಂಭದಲ್ಲಿ ಹತ್ತು ವರ್ಷ ವಯಲಿನ್. ನಂತರ 42 ವರ್ಷಗಳ ಕಾಲ ಹಾರ್ಮೋನಿಯಂ ನುಡಿಸಿ ಸಂಗೀತಪ್ರಿಯರ ಹೃದಯ ಗೆದ್ದಿದ್ದಾರೆ. ಶಿವಶರಣೆ ಅಕ್ಕಮಹಾದೇವಿ, ಸಂಪೂರ್ಣ ಹೇಮರೆಡ್ಡಿ ಮಲ್ಲಮ್ಮ, ಸತಿ ಸುಕನ್ಯ, ಸೊಲ್ಲಾಪುರ ಶ್ರೀ ಸಿದ್ಧರಾಮೇಶ್ವರ ಮಹಾತ್ಮೆ, ನವಲಗುಂದ ನಾಗಲೀಲೆ, ಆದವಾನಿ ಲಕ್ಷ್ಮೀದೇವಿ ಮಹಾತ್ಮೆ, ಶ್ರೀ ಪಂಚಾಕ್ಷರ ಗವಾಯಿಗಳ ಮಹಾತ್ಮೆ, ಮಲಮಗಳು, ಬಸ್ ಹಮಾಲ, ಕೊಂಡು ತಂದ ಗಂಡ, ಬಂಜೆತೊಟ್ಟಿಲು, ಬಸ್ ಕಂಡಕ್ಟರ್ ಸೇರಿದಂತೆ ಐವತ್ತಕ್ಕೂ ಹೆಚ್ಚು ನಾಟಕಗಳ ಹಾಡುಗಳಿಗೆ ರಾಗ ಸಂಯೋಜನೆ ಮಾಡಿ ಸಂಗೀತ ನಿರ್ದೇಶನ ಮಾಡಿದ್ದಾರೆ.

ಸುಮಧುರವಾದ ಇವರ ವಾದ್ಯಸಂಗೀತ ನುಡಿಸುವಿಕೆ ಮನ್ನಿಸಿದ ಸಂಘಸಂಸ್ಥೆಗಳು ಸರಸ್ವತಿ ಪುತ್ರ, ಗಾನಗಂಧರ್ವ, ಶ್ರೀಕುಮಾರೇಶ್ವರ ಪ್ರಶಸ್ತಿ ಸೇರಿದಂತೆ ಹಲವು ಬಿರುದು, ಸನ್ಮಾನ ನೀಡಿ ಗೌರವಿಸಿವೆ. ಮೂಲತಃ ತೆಲಂಗಾಣದ ಕರ್ನೂಲು ಜಿಲ್ಲೆಯ ಆಲೂರು ತಾಲ್ಲೂಕು ಗುಳ್ಳೆಯ ಸಿದ್ದಪ್ಪ ಶೆಟ್ಟಿ ಬಾಲ್ಯದಲ್ಲೇ ತಮ್ಮ ಊರು ತೊರೆದು ಗದಗ ವೀರೇಶ್ವರ ಪುಣ್ಯಾಶ್ರಮದಲ್ಲಿ ನೆಲೆಸಿದರು. ಆಶ್ರಮ ಹಲವು ಅಶಕ್ತರಿಗೆ ಆಶ್ರಯ ನೀಡಿದಂತೆ ಸಿದ್ದಪ್ಪನವರಿಗೂ ಇರಲು ಉಚಿತವಾದ ಮನೆ ನೀಡಿದೆ. ಪತ್ನಿ ಹಾಗೂ ಮಗಳೊಂದಿಗೆ ಗದಗದಲ್ಲೇ ಸಿದ್ದಪ್ಪ ವಾಸವಾಗಿದ್ದಾರೆ.

ರಂಗಸಂಗೀತ ಕ್ಷೇತ್ರಕ್ಕೆ ಇವರು ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು ಇದೀಗ 2016 ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಕೆ. ಭಾಗ್ಯಲಕ್ಷ್ಮೀ ರವಿಕುಮಾರ್

ಅತಿ ಎತ್ತರದ ಸ್ಥಾಯಿಯಲ್ಲಿ ಲೀಲಾಜಾಲವಾಗಿ ಹಾಡುವ ಬೆಂಗಳೂರು ನಗರದ ರಂಗ ಕಲಾವಿದೆ ಪ್ರತಿಭಾ ನಾರಾಯಣ್. ಅಷ್ಟೇ ಸಮರ್ಥವಾಗಿ ಹಾಡಬಲ್ಲ ನಟ ಪ್ರತಿಭಾ ಅವರ ತಂಗಿ ಭಾಗ್ಯಶ್ರೀಯವರು. ಪೌರಾಣಿಕ ರಂಗವಲಯದಲ್ಲಿ ಭಾಗ್ಯಶ್ರೀ ಎಂದೇ ಹೆಸರಾದ ಭಾಗ್ಯಲಕ್ಷ್ಮೀ ರವಿಕುಮಾರ್ ಅವರು. ಸೀತೆ, ಮಂಡೋದರಿ, ದ್ರೌಪದಿ, ಕುಂತಿ ಮುಂತಾದ ಪಾತ್ರಗಳಲ್ಲಿ ಮನೆಮಾತಾಗಿದ್ದಾರೆ. ಬೆಂಗಳೂರು ನಗರ, ಗ್ರಾಮಾಂತರ, ರಾಮನಗರ, ಮಂಡ್ಯ, ಕೋಲಾರ, ತುಮಕೂರು ಮುಂತಾದ ಸುತ್ತಲಿನ ಜಿಲ್ಲೆಗಳ ಹಳ್ಳಿ, ಪಟ್ಟಣಗಳ ಹವ್ಯಾಸಿ ತಂಡಗಳಲ್ಲಿ ನಟಿಸುವ ವೃತ್ತಿ ಕಲಾವಿದೆ ಭಾಗ್ಯಶ್ರೀ

ಭಾಗ್ಯಶ್ರೀ ಕಲಾವಿದರ ಕುಟುಂಬದಲ್ಲಿ ಜನಿಸಿದವರು. ಅವರ ಆರು ಮಂದಿ ಅಜ್ಜಿಯರು 1930–40–50 ದಶಕಗಳಲ್ಲಿ ಬಾಲ ಸರಸ್ವತಿ ನಾಟಕ ಮಂಡಳಿ ಎಂಬ ವೃತ್ತಿ ನಾಟಕ ಕಂಪನಿಯನ್ನು ಸ್ಥಾಪಿಸಿ ಬೆಂಗಳೂರು ಭಾಗದಲ್ಲಿ ಯಶಸ್ವಿಯಾಗಿ ಮುನ್ನಡೆಸಿದ ದಿಟ್ಟೆಯರು. ತಂದೆ ಕೃಷ್ಣರಾವ್ ಹೆಸರಾಂತ ಹಾರ್ಮೋನಿಯಂ ಮಾಸ್ಟರ್. ಕೃಷ್ಣರಾವ್–ಸಾವಿತ್ರಮ್ಮ ದಂಪತಿಗೆ 1966ರಲ್ಲಿ ಜನಿಸಿದ ಭಾಗ್ಯಶ್ರೀ ಬಾಲನಟಿಯಾಗಿ 1974ರಲ್ಲಿ ರಂಗಪ್ರವೇಶಿಸಿ ನಲವತ್ತು ವರ್ಷಗಳಿಗೂ ಅಧಿಕ ಕಾಲದಿಂದ ಹವ್ಯಾಸಿ ಪೌರಾಣಿಕ ನಾಟಕಗಳಲ್ಲಿ ನಟನೆಯನ್ನೇ ನೆಚ್ಚಿಕೊಂಡ ವೃತ್ತಿ ಕಲಾವಿದೆಯಾಗಿದ್ದಾರೆ.

ಇದುವರೆಗೆ ಈ ವೃತ್ತಿ ಕಲಾವಿದೆ ಅಭಿನಯಿಸಿದ ನಾಟಕಗಳ ಸಂಖ್ಯೆ ಎಂಟು ಸಾವಿರವನ್ನು ದಾಟುತ್ತದೆ. ನಾಟಕ ಪರದೆ, ಪರಿಕರಗಳ ಮಾಲೀಕರಾಗಿರುವ ಪತಿ ರವಿಕುಮಾರ್ ಅವರೂ ನಾಟಕವನ್ನೇ ನೆಚ್ಚಿಕೊಂಡಿರುವ ನೇಪಥ್ಯ ಕಲಾವಿದರು. ಹಲವು ಸನ್ಮಾನ, ಮನ್ನಣೆಗಳಿಗೆ ಪಾತ್ರವಾಗಿರುವ ಭಾಗ್ಯಶ್ರೀ ಅವರಿಗೆ ಇದೀಗ ಕರ್ನಾಟಕ ನಾಟಕ ಅಕಾಡೆಮಿಯು 2016ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಮಹದೇವಪ್ಪ ಹುಣಶ್ಯಾಳ

ನಾಟಕ ಕಂಪನಿ ಮಾಲೀಕರು ಹಾಗೂ ಮ್ಯಾನೇಜರ್ ಎಂದರೆ ಬಂಡವಾಳಶಾಹಿಗಳೂ ಅಲ್ಲ, ಐಎಎಸ್ ಅಧಿಕಾರಿಯೂ ಅಲ್ಲ, ರಂಗ ಕಲಾವಿದರ ಪೈಕಿಯೇ ಯಾರಾದರೂ ಒಬ್ಬರು ಕಂಪನಿಯ ಆಡಳಿತ ನೋಡಿಕೊಳ್ಳುವವರನ್ನು ವ್ಯವಸ್ಥಾಪಕ (ಮ್ಯಾನೇಜರ್) ಎನ್ನುತ್ತಾರೆ. (ನಟ, ನಾಟಕಕಾರ, ನಿರ್ದೇಶಕ ಹೀಗೆ ರಂಗದ ಯಾವುದಾದರೂ ಒಂದು ಕ್ಷೇತ್ರದಲ್ಲಿ ಸಾಧನೆ ಮಾಡಿದವರು ನಾಟಕ ಕಂಪನಿ ಸ್ಥಾಪಿಸುವ ಮೂಲಕ ಮಾಲೀಕರು

ಎನಿಸಿಕೊಳ್ಳುತ್ತಾರೆ.) ಅಧಿಕಾರಿಗಳು, ಸಾರ್ವಜನಿಕರೊಂದಿಗೆ ವ್ಯವಹರಿಸುವ ಉತ್ತಮ ಸಂವಹನ ಮ್ಯಾನೇಜರ್‌ಗೆ ಇರಬೇಕು. ಮುಂದಿನ ಕ್ಯಾಂಪ್‌ಗಳಿಗೆ ಲೈಸೆನ್ಸ್ ತರಬೇಕು, ಎಲ್ಲಿ ಕ್ಯಾಂಪ್ ಮಾಡಿದರೆ ಸೂಕ್ತ ಎಂಬುದರ ಮುನ್ನೋಟ ಇರಬೇಕು. ನಟನಾಗಿರುವುದರ ಜತೆಗೆ ಅಂತಹ ಉತ್ತಮ ಆಡಳಿತ ನೋಡಿಕೊಂಡು ಹೆಸರಾಗಿರುವವರು ಮಹದೇವಪ್ಪ ಹುಣಶ್ಯಾಳ ಅವರು.

1974 ರಲ್ಲಿ ಸುಳ್ಳ ದೇಸಾಯಿಯವರ ಪ್ರತಿಷ್ಠಿತ ನಾಟಕ ಕಂಪನಿಯಲ್ಲಿ ನಟನಾಗಿ ಪ್ರವೇಶ ಪಡೆದು ಅಲ್ಲಿಯೇ 20 ವರ್ಷ ಕಾಲ ವ್ಯವಸ್ಥಾಪಕನಾಗಿ ಕಾರ್ಯನಿರ್ವಹಿಸಿದರು. ನಂತರ ಗುಡಗೇರಿ ಬಸವರಾಜ, ರಾಜು ತಾಳೀಕೋಟಿ ನಾಟಕ ಕಂಪನಿ ಹಾಗೂ ಇದೀಗ ಮಂಡಲಗಿರಿ ವೀರಯ್ಯ ಮತ್ತು ಜೇವರ್ಗಿ ರಾಜಣ್ಣ ಅವರ ನಾಟಕ ಕಂಪನಿಗಳಲ್ಲಿ ಮ್ಯಾನೇಜರ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ. ಕರ್ನಾಟಕ ನಾಟಕ ಅಕಾಡೆಮಿಯಿಂದ ಒಮ್ಮೆ 'ವರ್ಷದ ಶ್ರೇಷ್ಠ ಕಂಪನಿ ಮ್ಯಾನೇಜರ್' (1992) ಎಂಬ ಹೆಗ್ಗಳಿಕೆಗೂ ಅವರು ಪಾತ್ರರಾಗಿದ್ದಾರೆ.

ವಿಜಯಪುರ ಜಿಲ್ಲೆ ಸಿಂದಗಿ ತಾಲ್ಲೂಕು ದೇವರ ನಾದಗಿಯಲ್ಲಿ ಈರಪ್ಪ ಹುಣಶ್ಯಾಳ– ಸಿದ್ದವ್ವ ದಂಪತಿಗೆ 1955 ರಲ್ಲಿ ಜನಿಸಿದ ಮಹದೇವಪ್ಪ ವಿದ್ಯಾಭ್ಯಾಸದ ನಂತರ ರಂಗಭೂಮಿ ಸೇವೆಗೆ ತನ್ನನ್ನು ಸಮರ್ಪಿಸಿಕೊಂಡರು. ಮೆಹಬೂಬಿ ತಾಳಿಕೋಟಿ ಸ್ಮರಣಾರ್ಥ ಪ್ರಶಸ್ತಿ, ವೃತ್ತಿ ನಾಟಕೋತ್ಸವಗಳಲ್ಲಿ ಸನ್ಮಾನ, ಕೊಟ್ಟೂರು ಕಲಾಕೇಂದ್ರ, ದಾವಣಗೆರೆ ಸ್ಫೂರ್ತಿ ಕಲಾಕೇಂದ್ರ ಸೇರಿದಂತೆ ಇಪ್ಪತ್ತಕ್ಕೂ ಅಧಿಕ ಕಡೆ ಸಂಘ ಸಂಸ್ಥೆಗಳು ಸನ್ಮಾನಿಸಿವೆ.

ವೃತ್ತಿ ರಂಗಭೂಮಿಗೆ ಅವರು ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2016 ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಬೈರ್‍ನಳ್ಳಿ ಶಿವರಾಂ

ಬೈರ್‍ನಳ್ಳಿ ಶಿವರಾಂ ಹವ್ಯಾಸಿ ರಂಗಭೂಮಿಯ ವೃತ್ತಿ ಕಲಾವಿದರು. ನಾಟಕಗಳ ನಿರ್ದೇಶಕರಾಗಿ, ಶಿಬಿರಗಳ ಆಯೋಜಕರಾಗಿ ಕಳೆದ 37 ವರ್ಷಗಳಿಂದ ಅವರು ಸೇವೆ ಸಲ್ಲಿಸುತ್ತಿದ್ದಾರೆ. 15 ದಿನಗಳಿಂದ 2 ತಿಂಗಳ ಅವಧಿಗೆ ನಡೆಯುವ 11 ರಂಗ ತರಬೇತಿ ಶಿಬಿರಗಳು, ಮಕ್ಕಳಿಗೆ 8 ಶಿಬಿರ, ಶಾಲೆ ಕಾಲೇಜುಗಳಿಗೆ 10 ರಂಗ ಶಿಬಿರಗಳನ್ನು ಶಿವರಾಂ ಅವರು ರಾಮನಗರ, ಬೆಂಗಳೂರು, ಗ್ರಾಮಾಂತರ, ತುಮಕೂರು, ಹಾಸನ, ಮೈಸೂರು ಮುಂತಾದ ಜಿಲ್ಲೆಗಳ ವಿವಿಧ ಗ್ರಾಮ, ಪಟ್ಟಣಗಳಲ್ಲಿ ನಡೆಸಿಕೊಟ್ಟಿದ್ದಾರೆ. ಶಿಬಿರಾರ್ಥಿಗಳಿಗೆ ಅವರು ನಿರ್ದೇಶಿಸಿರುವ ಚೋರಪುರಾಣ, ಜುಂಜಪ್ಪ, ಬೆನಕನಕೆರೆ, ಹಲಗಲಿ ಬೇಡರ ದಂಗೆ, ಸಾಹೇಬರು ಬರುತ್ತಾರೆ, ಕರಿಬಂಟ (ಮಹಿಳೆಯರಿಗೆ), ಬೊಮ್ಮನಹಳ್ಳಿ ಕಿಂದರಿಜೋಗಿ, ನನ್ನ ಗೋಪಾಲ, ಹೆಜ್ಜಾಯಣ, ಗಧಾಯುದ್ಧ, ಮಧ್ಯಮವ್ಯಾಯೋಗ ಮುಂತಾದ ಐವತ್ತಕ್ಕೂ ಹೆಚ್ಚು ನಾಟಕಗಳು ಹೆಸರು ಮಾಡಿವೆ.

ರಾಮನಗರ ಜಿಲ್ಲೆಯ ಎನ್.ಎಚ್.ಲಿಂಗಯ್ಯ– ಜಯಮ್ಮ ದಂಪತಿಗೆ 1961ರಲ್ಲಿ ಜನಿಸಿದ ಶಿವರಾಂ ಪದವಿ ನಂತರ ನೀನಾಸಂನಲ್ಲಿ ರಂಗ ತರಬೇತಿ ಪಡೆದು ನಂತರ ರಂಗಭೂಮಿಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡರು. ರಾಮನಗರದ ಜಾನಪದ ಲೋಕದಲ್ಲಿ ಕಳೆದ 26 ವರ್ಷಗಳಿಂದ ರಂಗ ನಿರ್ದೇಶಕನಾಗಿ ಅವರು ಸೇವೆಯಲ್ಲಿದ್ದಾರೆ. ಜಾನಪದ ಲೋಕದ ಡಿಪ್ಲೊಮಾ ವಿದ್ಯಾರ್ಥಿಗಳಿಗೆ ಎಲ್ಲೋ ಜೋಗಪ್ಪ ನಿನ್ನರಮನೆ, ಮಾಯಕಾರ ಮಾದಪ್ಪ, ಸತ್ಯಗುಣಿ ಸಂಕಮ್ಮ, ಮಂಟೆಸ್ವಾಮಿ ಮುಂತಾದ ಹತ್ತಕ್ಕೂ ಅಧಿಕ ನಾಟಕಗಳನ್ನು ನಿರ್ದೇಶಿಸಿದ್ದಾರೆ. ಸೂತ್ರದಗೊಂಬೆ, ಮುಖವಾಡ ತಯಾರಿಕೆ, ರಂಗಸಜ್ಜಿಕೆ, ಜಾನಪದ ಕಥನಗೀತೆಗಳನ್ನು ರಂಗಕ್ಕೆ ಅಳವಡಿಸುವುದರಲ್ಲಿ ಅವರು ವಿಶೇಷ ಪರಿಣತಿ ಪಡೆದಿದ್ದಾರೆ.

ಉಡುಪಿ ರಂಗಭೂಮಿ ಸ್ಪರ್ಧೆಯಲ್ಲಿ ಕರಿಬಂಟ ನಾಟಕಕ್ಕೆ ಪ್ರಥಮ ಬಹುಮಾನ (1988), ಕೈಗಾರಿಕಾ ನಾಟಕೋತ್ಸವದಲ್ಲಿ ಅಗ್ನಿ ನಾಟಕಕ್ಕೆ ಡಾ.ರಾಜಕುಮಾರ್ ಪರ್ಯಾಯ ಪರಿತೋಷಕ ಮುಂತಾದ ಗೌರವಗಳಿಗೆ ಪಾತ್ರರಾಗಿರುವ ಶಿವರಾಂ ಅವರು ಹವ್ಯಾಸಿ ರಂಗಭೂಮಿಗೆ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯ 2016ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸಲಾಗುತ್ತದೆ.



## ಸಿ.ಬಿ. ಚೌಡಶೆಟ್ಟಿ

ನಟ, ನಿರ್ದೇಶಕ ಸಿ.ಬಿ.ಚೌಡಶೆಟ್ಟಿ ಅವರು ಹಳ್ಳಿಗಳ ರೈತಾಪಿ ಹವ್ಯಾಸಿಗಳಿಗೆ ನಾಟಕ ಕಲಿಸುವುದನ್ನೇ ವೃತ್ತಿಯಾಗಿ ಮಾಡಿಕೊಂಡವರು. 1928 ರಲ್ಲಿ ಜನಿಸಿದ 88 ವರ್ಷ ವಯಸ್ಸಿನ ಚೌಡಶೆಟ್ಟಿ ಅವರು 60 ವರ್ಷಗಳಿಗೂ ಹೆಚ್ಚು ಕಾಲ ಇದೇ ಕಾಯಕದಲ್ಲಿ ನಿರತರಾಗಿದ್ದವರು. ಗ್ರಾಮೀಣ ರಂಗಭೂಮಿಗೆ ಅವರ ಸೇವೆ ಅಗಾಧವಾದುದು.

ಮಂಡ್ಯ ತಾಲ್ಲೂಕು ಕೊತ್ತತ್ತಿ ಹೋಬಳಿ ಚೀರನಹಳ್ಳಿಯ ಬಸವಶೆಟ್ಟಿ ಎಂಬುವರ ಪುತ್ರರಾದ ಚೌಡಶೆಟ್ಟಿಯವರಿಗೆ ತಂದೆಯೇ ಗುರು. ಮಂಡ್ಯ ಕಡೆಯ ಗ್ರಾಮೀಣರು ಯಕ್ಷಗಾನ ಎಂದು ಕರೆಯುವ ಮೂಡಲಪಾಯ ಕಲಿಸುವ ಗುರು ಆಗಿದ್ದರು ಬಸವಶೆಟ್ಟಿ. ಆ ಕಾಲಕ್ಕೆ ಅಂದರೆ 1930–40ರಲ್ಲಿ ಹಳ್ಳಿಗಳಲ್ಲಿ ಅಟ್ಟವೇರುತ್ತಿದ್ದ ಪೌರಾಣಿಕ ನಾಟಕಗಳಲ್ಲಿ ಪಾತ್ರ ಮಾಡುವ ಮೂಲಕ ರಂಗಪ್ರವೇಶಿಸಿದ ಯುವಕ ಚೌಡಶೆಟ್ಟಿ ಅವರು, ಪೌರಾಣಿಕ ನಾಟಕಗಳನ್ನು ಕಲಿಸಿಕೊಡುತ್ತಿದ್ದ ಪಂಡಿತ್ ವಿದ್ವಾನ್ ವೆಂಕಟರಮಣಪ್ಪ ಚಿಕ್ಕಮುಲಗೂಡು ಲಿಂಗಪ್ಪ ಅವರ ಬಳಿ ಅಭ್ಯಾಸ ಮಾಡಿದರು. ಹಳ್ಳಿ ಜನರಿಗೆ ನಾಟಕ ಕಲಿಸಿಕೊಡುವುದನ್ನು ಇವರೂ ಕರಗತ ಮಾಡಿಕೊಂಡು ಕ್ರಮೇಣ ಅದನ್ನೇ ವೃತ್ತಿ ಮಾಡಿಕೊಂಡರು.

ವಿರಾಟಪರ್ವ, ರಾಮಾಯಣ, ಅಶ್ವಮೇಧಯಾಗ, ಪ್ರಮೀಳಾರ್ಜುನ, ಕುರುಕ್ಷೇತ್ರ, ರೇವಣಸಿದ್ಧೇಶ್ವರ ಮಹಾತ್ಮೆ, ಮೂರೂವರೆ ವಜ್ರಗಳು, ಭಕ್ತ ಪುರೂರವ, ಗಯಚರಿತ್ರೆ ಸೇರಿದಂತೆ ಹತ್ತಾರು ನಾಟಕಗಳನ್ನು ಗ್ರಾಮೀಣರಿಗೆ ಅವರು ಕಲಿಸಿಕೊಟ್ಟಿದ್ದಾರೆ ಅಂದರೆ ನಿರ್ದೇಶನ ಮಾಡಿದ್ದಾರೆ. ಸ್ವತಃ ಗಾಯಕರೂ, ನಟರೂ ಆಗಿರುವ ಚೌಡಶೆಟ್ಟಿ ಅವರು ಭೀಷ್ಮ, ಕರ್ಣ, ನಾರದ, ದ್ರೌಪದಿ, ಪ್ರಮೀಳೆ, ರುಕ್ಮಿಣಿ ಮುಂತಾದ ಪಾತ್ರಗಳಲ್ಲಿ ನಟಿಸಿದ್ದಾರೆ. ಚನ್ನಪ್ಪನದೊಡ್ಡಿ, ಹೊಸಹಳ್ಳಿ, ಮಂಡ್ಯ ಮುಂತಾದ ಕಡೆ ಚೌಡಶೆಟ್ಟಿಯವರನ್ನು ಸನ್ಮಾನಿಸಿ ಗೌರವಿಸಿದ್ದಾರೆ. ಚೌಡಶೆಟ್ಟಿಯವರ ಸುದೀರ್ಘ ರಂಗಸೇವೆಯನ್ನು ಮನ್ನಿಸಿ ಇದೀಗ ಕರ್ನಾಟಕ ನಾಟಕ ಅಕಾಡೆಮಿಯು 2016 ರ ವಾರ್ಷಿಕ ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿದೆ.



## ಹೆಚ್.ಪಿ. ವೆಂಕಟೇಶ್

'ದರ್ಶನ್ ವೆಂಕಟೇಶ್' ಎಂದೇ ರಂಗವಲಯದಲ್ಲಿ ಪರಿಚಿತರಾಗಿರುವ ಹೆಚ್.ಪಿ.ವೆಂಕಟೇಶ್ ಹೆಸರಾಂತ ನಟರು. ಉಡುಗೆ ತೊಡುಗೆ, ಮೇಕಪ್, ನೃತ್ಯ ಸಂಯೋಜನೆಯಲ್ಲಿ ತೊಡಗಿಸಿಕೊಂಡ ಬಹುಮುಖಿ ಪ್ರತಿಭಾವಂತರು ಅವರು. ಧ್ವನಿ ಬೆಳಕು ಪ್ರದರ್ಶನಗಳಲ್ಲಿ ನಟಿಸಿದ್ದಾರೆ. ಹಲವು ಸಂಘ ಸಂಸ್ಥೆಗಳ ನಾಟಕ ಸ್ಪರ್ಧೆಗಳಲ್ಲಿ ತೀರ್ಪುಗಾರರಾಗಿ ಭಾಗವಹಿಸಿ ಹಾಸನ ಜಿಲ್ಲೆ ಹವ್ಯಾಸಿ ರಂಗಭೂಮಿಯ ಅವಿಭಾಜ್ಯ ಅಂಗವಾಗಿದ್ದಾರೆ.

ಕೃಷ್ಣಗಾರುಡಿಯ ಮಾಯಾರಾಕ್ಷಸ, ಕುರುಕ್ಷೇತ್ರ–ಧರ್ಮರಾಯ, ವಿಷಜ್ವಾಲೆ–ವಿಜಯ, ಬೈರಾಂಖಾನ್–ಅಕ್ಬರ್, ಮಾವು ಬೇವು–ಆನಂದ್, ಜೋಕುಮಾರಸ್ವಾಮಿ–ಬಸಣ್ಣಾ, ಪ್ರೇಮಪಕ್ಷಿ–ಕಿಟ್ಟಿ, ಬೆಗ್ ಬಾರೊ ಅಂಡ್ ಸ್ಟೀಲ್ ನಾಟಕದ ಸ್ಟೂಡೆಂಟ್, ಮೀನಿನ ಹೆಜ್ಜೆಯ ಮಾಧು ಸೇರಿದಂತೆ ಐವತ್ತಕ್ಕೂ ಅಧಿಕ ನಾಟಕಗಳ ನೂರಾರು ಪ್ರದರ್ಶನಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ನಟಿಸಿದ್ದಾರೆ. ಇವರು ನಟಿಸಿದ 'ಹಗ್ಗದ ಕೊನೆ' ರಾಜ್ಯದ ವಿವಿಧೆಡೆ ಪ್ರದರ್ಶನಗೊಂಡು ಜನಮನ್ನಣೆ ಗಳಿಸಿದೆ. ಚಲನಚಿತ್ರ ಕಲಾವಿದರಾದ ದೊಡ್ಡಣ್ಣ, ಉಮಾಶ್ರೀ, ಹಂಸಲೇಖ, ರತ್ನಾಕರ, ಸೋರಟ್ ಅಶ್ವತ್ಥ್, ಸುಧಾ ನರಸಿಂಹರಾಜು ಮುಂತಾದವರೊಂದಿಗೆ ನಟಿಸಿದ ಹೆಗ್ಗಳಿಕೆ ವೆಂಕಟೇಶ್ ಅವರದು.

ವೆಂಕಟೇಶ್ ಅವರ ಬಹುಮುಖಿ ಸೇವೆಯನ್ನು ಗುರುತಿಸಿ ಆಲೂರುನಲ್ಲಿ ಜರುಗಿದ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ಜಿಲ್ಲಾಡಳಿತ, ಹಾಸನದ ಶ್ರೀರಮ್ಮ ಕಲಾರಂಗ, ಹಾಸನಾಂಬ ಕಲಾಸಂಘ, ಶ್ರೀ ಗಣಪತಿ ಸೇವಾ ಸಮಿತಿ ಮುಂತಾದ ಸಂಘ ಸಂಸ್ಥೆಗಳು ಪ್ರಶಸ್ತಿ ಸನ್ಮಾನ ನೀಡಿ ಗೌರವಿಸಿವೆ.

ಹವ್ಯಾಸಿ ರಂಗಭೂಮಿಗೆ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು ಇದೀಗ 2016 ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಪಿ. ವಾಸುದೇವರಾವ್

ಅಭಿನಯ, ನಿರ್ದೇಶನ, ನಾಟಕಸ್ಪರ್ಧೆ ಆಯೋಜನೆ, ಸಂಘಟನೆಯಲ್ಲಿ ಐದೂವರೆ ದಶಕಗಳಿಂದ ಹವ್ಯಾಸಿ ರಂಗಭೂಮಿಯಲ್ಲಿ ತೊಡಗಿಸಿಕೊಂಡ ನಿವೃತ್ತ ಉಪನ್ಯಾಸಕರು ಪಿ.ವಾಸುದೇವರಾವ್. ಉಡುಪಿ ರಂಗಭೂಮಿ ಸಂಸ್ಥೆಗೆ ಅವರು ನೀಡಿದ ಕೊಡುಗೆ ದೊಡ್ಡದು.

ಉಡುಪಿಯ ಪಿ. ಶ್ರೀನಿವಾಸರಾವ್–ಪದ್ಮಾವತಿ ದಂಪತಿಗೆ 1942 ರಲ್ಲಿ ಜನಿಸಿದ ವಾಸುದೇವರಾವ್ ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸುವ ಜತೆಗೆ ಹವ್ಯಾಸಿ ರಂಗಭೂಮಿಯ ಚಟುವಟಿಕೆಯಲ್ಲಿ ಐವತ್ತೈದು ವರ್ಷಗಳಿಂದ ನಿರಂತರವಾಗಿ ತೊಡಗಿಸಿಕೊಂಡಿದ್ದಾರೆ. ದೇವದಾಸಿ, ಎಚ್ಚಮ ನಾಯಕ, ಅಣ್ಣತಮ್ಮ, ಪುತ್ಥಳಿ, ಕಲ್ಲನಾಗರ ಕಂಡರೆ, ಪಂಚಭೂತಗಳು ಸೇರಿದಂತೆ 12 ನಾಟಕಗಳನ್ನು ನಿರ್ದೇಶಿಸಿದ್ದಾರೆ. ಸೆರಗು, ಬಂಗಾರದ ತಟ್ಟೆ ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ಕೆಲವು ನಾಟಕಗಳಲ್ಲಿ ನಟಿಸಿದ್ದಾರೆ.

ಉಡುಪಿ ರಂಗಭೂಮಿ ಸಂಸ್ಥೆಯ ಕಟ್ಟಡ ನಿರ್ಮಾಣಕ್ಕೆ ನಿವೇಶನವನ್ನು ಉದಾರವಾಗಿ ದಾನ ಮಾಡಿರುವ ವಾಸುದೇವರಾವ್, ಅದೇ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಯಾಗಿ, ಉಪಾಧ್ಯಕ್ಷರಾಗಿ ಸುದೀರ್ಘ ಸೇವೆ ಸಲ್ಲಿಸಿದ್ದಾರೆ. ಉಡುಪಿ ರಂಗಭೂಮಿಯ ಪ್ರತಿಷ್ಠಿತ ರಾಜ್ಯಮಟ್ಟದ ನಾಟಕ ಸ್ಪರ್ಧೆಯಲ್ಲಿ ನಿರಂತರವಾಗಿ ತೊಡಗಿಸಿಕೊಂಡಿದ್ದಾರೆ. ಉದಯವಾಣಿ, ಮಂಗಳಾ, ಗೋಕುಲವಾಣಿ ಮುಂತಾದ ಪತ್ರಿಕೆಗಳಲ್ಲಿ ರಂಗಭೂಮಿ ಕುರಿತ ಲೇಖನ ಹಾಗೂ ರಂಗಕರ್ಮಿಗಳ ವ್ಯಕ್ತಿಚಿತ್ರಗಳನ್ನು ಬರೆಯುತ್ತ ಬಂದಿದ್ದಾರೆ.

ಹವ್ಯಾಸಿ ರಂಗಭೂಮಿಗೆ ವಾಸುದೇವರಾವ್ ಸಲ್ಲಿಸಿದ ಸೇವೆಯನ್ನು ಮನ್ನಿಸಿ ಕರ್ನಾಟಕ ನಾಟಕ ಅಕಾಡೆಮಿಯು ಇದೀಗ 2016 ರ ವಾರ್ಷಿಕ ಪ್ರಶಸ್ತಿಯನ್ನು ಪ್ರದಾನ ಮಾಡುತ್ತಿದೆ.



## ಲಕ್ಷ್ಮಣದಾಸ್

ಡಾಕ್ಟರ್ ಲಕ್ಷ್ಮಣದಾಸ್ ಹರಿಕತೆ ವಿದ್ವಾಂಸರಾಗಿ ಲೋಕವಿಖ್ಯಾತಿ ಪಡೆದವರು. ರಾಮಾಯಣ, ಮಹಾಭಾರತದ ಕತೆಗಳನ್ನೇ ಹೆಚ್ಚು ನೆಚ್ಚಿದ್ದ ಹರಿಕತೆ ಎಂಬ ಕಲಾಪ್ರಕಾರದಲ್ಲಿ ಬುದ್ಧ, ಪಂಪ, ಅಂಬೇಡ್ಕರ್, ಗುಬ್ಬಿ ವೀರಣ್ಣನಂತಹವರ ಕತೆ ಕಟ್ಟಿ ರಂಜಿಸಿದರು, ಪದಕಟ್ಟಿ ಹಾಡಿದರು. ಹರಿಕತೆಯಲ್ಲಿನ ಅವರ ಈ ಪ್ರಯೋಗಶೀಲತೆ ಕನ್ನಡ ಸಾರಸ್ವತ ಲೋಕದ ಗಮನ ಸೆಳೆಯಿತು. ವಿಶ್ವವಿದ್ಯಾಲಯ ಡಾಕ್ಟರೇಟ್ ಪದವಿ ನೀಡಿ ಗೌರವಿಸಿತು. ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಲಭಿಸಿತು. ಕನಕ ಪುರಂದರ ಪ್ರಶಸ್ತಿ ಅವರ ಮುಡಿಗೇರಿದೆ.

ಹರಿಕತೆಯಲ್ಲಿ ಈ ಎತ್ತರಕ್ಕೆ ಏರಲು ಅವರಿಗೆ ಬುನಾದಿಯಾಗಿದ್ದು ಪೌರಾಣಿಕ ನಾಟಕಗಳು. ಮೂಲತಃ ಅವರೊಬ್ಬ ನಟರು. ರಂಗಗೀತೆ ಗಾಯಕರು. ರಾಗ ಸಂಯೋಜಕರು. ಮೊದಲು ಅವರ ಕಲಾಪ್ರತಿಭೆ ವಿಕಸನಗೊಂಡಿದ್ದು ಪೌರಾಣಿಕ ನಾಟಕಗಳಲ್ಲಿ. ಅದರಲ್ಲೂ ವಿಶೇಷವಾಗಿ ಹೆಸರಾಂತ ನಾಟಕ ಕಂಪನಿಗಳಲ್ಲಿ. ತುಮಕೂರು ನಗರಕ್ಕೆ ಹೊಂದಿಕೊಂಡಿರುವ ಮಲ್ಲಸಂದ್ರ ಗ್ರಾಮದ ಸೀಬನಯ್ಯ- ಸೀಬಮ್ಮ ದಂಪತಿಗೆ 1946 ರಲ್ಲಿ ಜನಿಸಿದ ಲಕ್ಷ್ಮಣ ಅವರು ಶಿಕ್ಷಣ ಇಲಾಖೆಯಲ್ಲಿ ಹೆಸರಿಗೆ ನೌಕರಿಯಲ್ಲಿದ್ದರು. ಉಳಿದಂತೆ ಅವರ ವ್ಯಕ್ತಿ ಪ್ರವೃತ್ತಿ ಪೌರಾಣಿಕ ನಾಟಕಗಳಲ್ಲಿ ಅಭಿನಯ ಹಾಗೂ ಹರಿಕತೆ. ತುಮಕೂರು, ಬೆಂಗಳೂರು ಹಾಗೂ ಆಸುಪಾಸಿನ ಜಿಲ್ಲೆಗಳಲ್ಲಿ ಕ್ಯಾಂಪ್ ಮಾಡುತ್ತಿದ್ದ ಹಳೇ ಮೈಸೂರು ಭಾಗದ ವೃತ್ತಿನಾಟಕ ಕಂಪನಿಗಳು ಅವರಿಗೆ ಚಿರಪರಿಚಿತ. ಖಾಲಿಬಿದ್ದ ವೃತ್ತಿನಟರ ಸ್ಥಾನವನ್ನು ಅವರು ತುಂಬುತ್ತಿದ್ದರು. ಅಂತೆಯೇ ಹೊನ್ನಪ್ಪ ಭಾಗವತರ್, ಎಂ.ಸುಬ್ಬರಾವ್, ಮುಸರಿ ಕೃಷ್ಣಮೂರ್ತಿ, ಉದಯಕುಮಾರ್, ಎಂ.ಪಿ.ಶಂಕರ್ ಅಂತಹ ದಿಗ್ಗಜರೊಂದಿಗೆ ಪಾತ್ರವಹಿಸುವ ಅವಕಾಶ ಅವರಿಗೆ ಲಭಿಸಿತು. ಅದನ್ನವರು ಸಮರ್ಥವಾಗಿ ಬಳಸಿಕೊಂಡರು.

ಹರಿಕತೆಯ ದಂತಕತೆ ಗುರುರಾಜುಲು ನಾಯ್ಡು ಅವರ ಶಿಷ್ಯತ್ವದಲ್ಲಿ ಹರಿಕತೆಯಲ್ಲಿ ಹೆಚ್ಚಿನದನ್ನು ಸಾಧಿಸಿದರು. ಪ್ರತಿಕೂಲ ಪರಿಸ್ಥಿತಿಯಲ್ಲಿ ಹರಿಕತೆ ಒಲಿಸಿಕೊಂಡ ಕಾರಣಕ್ಕೆ ಲಕ್ಷ್ಮಣ–ಲಕ್ಷ್ಮಣದಾಸರಾದರು. ಅವರ ಕುರಿತು 'ರಂಗಕೀರ್ತನ' ಅಭಿನಂದನಾ ಗ್ರಂಥ ಹೊರಬಂದಿದೆ. ಡಾ.ಲಕ್ಷ್ಮಣದಾಸ್ (ಲೇ: ಗುಡಿಹಳ್ಳಿ ನಾಗರಾಜ) ಕೃತಿಯನ್ನು ಪುಸ್ತಕ ಪ್ರಾಧಿಕಾರ ಹೊರತಂದಿದೆ. ಎಡೆಯೂರು ಶ್ರೀ ಸಿದ್ಧಲಿಂಗೇಶ್ವರ ವೈಭವ, ಭಕ್ತಸುಧಾಮ, ಚಕ್ರವರ್ತಿ ದಶರಥ, ಸೀತಾ ಪರಿತ್ಯಾಗ, ನೆನಪಿನಂಗಳದಲ್ಲಿ ಗುಬ್ಬಿ ಕಂಪನಿ, ಕನಕದರ್ಶನ ಎಂಬ ಆರು ನಾಟಕಗಳನ್ನು ಸ್ವತಃ ಲಕ್ಷ್ಮಣದಾಸ್ ರಚಿಸಿ ಪ್ರಕಟಿಸಿದ್ದಾರೆ. ನಾಟಕಗಳನ್ನು ನಿರ್ದೇಶಿಸಿದ್ದಾರೆ. ಕ್ಯಾಸೆಟ್‌ಗಳನ್ನು ಹೊರತಂದಿದ್ದಾರೆ. ಅಧ್ಯಯನಶೀಲರಾದ ಲಕ್ಷ್ಮಣದಾಸ್ ಕಾವ್ಯದರ್ಶನ ಎಂಬ ಅಪರೂಪದ ಪುಸ್ತಕ ಪ್ರಕಟಿಸಿದ್ದಾರೆ.

ಈ ಬಹುಮುಖ ಪ್ರತಿಭೆಗೆ ಇದೀಗ ಕರ್ನಾಟಕ ನಾಟಕ ಅಕಾಡೆಮಿಯು 2016ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಚೇತನ್ ಪ್ರಸಾದ್ ಡಿ.

ಹವ್ಯಾಸಿ ರಂಗತಂಡಗಳ ಎಲ್ಲ ಬಗೆಯ ನಾಟಕಗಳ ವಿಭಿನ್ನ ಪಾತ್ರಗಳಲ್ಲಿ ಅಭಿನಯಿಸಿ ಹೆಸರು ಮಾಡಿರುವ ಗಾಯಕನಟ ಡಿ.ಚೇತನ್ ಪ್ರಸಾದ್. ಏಕಪಾತ್ರಾಭಿನಯ, ಭಾವಗೀತೆ, ಜಾನಪದ, ರಂಗಗೀತೆ ಗಾಯನ ಕಾರ್ಯಕ್ರಮಗಳಲ್ಲಿ ನಿರಂತರವಾಗಿ ಭಾಗವಹಿಸುವ ಮೂಲಕ ಗಡಿ ಜಿಲ್ಲೆ ಕೋಲಾರದ ರಂಗಾಸಕ್ತರಿಗೆ ಚಿರಪರಿಚಿತರಾಗಿದ್ದಾರೆ. ಕೋಲಾರ ಜಿಲ್ಲೆ ಮುಳಬಾಗಿಲು ತಾಲ್ಲೂಕು ಊರುಕುಂಟೆ ಮಿಟ್ಟೂರು ಗ್ರಾಮದ ಮುನಿವೆಂಕಟಮ್ಮ-

ಎ. ದೊಡ್ಡಪಾಪಯ್ಯ ದಂಪತಿಗೆ 1956 ರಲ್ಲಿ ಜನಿಸಿದ ಚೇತನ್ ಪ್ರಸಾದ್ ಅವರು, ಹತ್ತನೇ ವಯಸ್ಸಿನಲ್ಲಿ ಸತ್ಯಹರಿಶ್ಚಂದ್ರ ನಾಟಕದ ಲೋಹಿತಾಶ್ವನ ಪಾತ್ರಕ್ಕೆ ಬಣ್ಣ ಹಚ್ಚುವ ಮೂಲಕ ರಂಗಪ್ರವೇಶ ಮಾಡಿದರು. ಟಿಸಿಎಚ್ ವಿದ್ಯಾಭ್ಯಾಸದ ಜೊತೆಗೆ ಬೆಂಗಳೂರಿನ ಅಭಿನಯ ತರಂಗದಲ್ಲಿ ಒಂದು ವರ್ಷ ರಂಗತರಬೇತಿ ಪಡೆದಿದ್ದಾರೆ.

ಸರ್ಕಾರಿ ನೌಕರಿಯ ವೃತ್ತಿಯಿದ್ದರೂ ನಾಟಕ ಚಟುವಟಿಕೆಗಳಲ್ಲಿ ತೀವ್ರವಾಗಿ ತೊಡಗಿಕೊಂಡ ಚೇತನ್‌ಪ್ರಸಾದ್ ಹಲವು ಸಂಘ ಸಂಸ್ಥೆಗಳ ಹುಟ್ಟಿಗೆ ಕಾರಣರಾಗಿದ್ದಾರೆ. ನವೋದಯ ಕನ್ನಡ ಕಲಾಸಂಘ, ಕಾರ್ಮಿಕ ಇಲಾಖೆ ಕನ್ನಡ ಕಲಾಸಂಘ, ಗುರುಕೃಪ ಶಿಕ್ಷಣ ಸಂಸ್ಥೆ, ಭಾರ್ಗವ ಕಲಾನಿಕೇತನ ಸಂಸ್ಥಾಪಕ ಅಧ್ಯಕ್ಷರಾಗಿ ರಂಗಚಟುವಟಿಕೆಗಳನ್ನು ಆಯೋಜಿಸುತ್ತ ಬಂದಿದ್ದಾರೆ. ಗಂಡನ ಮನೆ, ಬೆಳ್ಳಕ್ಕಿ ಹಿಂಡು ಬೆದರ್ಯಾವೋ, ಅಣ್ಣತಂಗಿ, ತ್ಯಾಗಿ, ವಿಷಜ್ವಾಲೆ, ಬಸ್‌ಕಂಡಕ್ಟರ್, ಕುರುಕ್ಷೇತ್ರ, ಲಚ್ಚಿ, ರತ್ನಮಾಂಗಲ್ಯ ಮುಂತಾದ ವೃತ್ತಿ, ಜಾನಪದ, ಹವ್ಯಾಸಿಯ ಎಲ್ಲ ಬಗೆಯ ನಾಟಕಗಳಲ್ಲಿ ವಿಭಿನ್ನ ನಾಟಕಗಳಲ್ಲಿ ಅಭಿನಯಿಸಿ ಸೈ ಎನಿಸಿಕೊಂಡಿದ್ದಾರೆ. ಸಂಘಸಂಸ್ಥೆಗಳು ನಟಶೇಖರ, ರಂಗಕಲಾ ಸಾಮ್ರಾಟ್, ಸೃಜನ ಶ್ರೀ ಬಿರುದುಗಳನ್ನು ನೀಡಿ ಗೌರವಿಸಿವೆ.

ಗಡಿನಾಡಿನಲ್ಲಿ ಹವ್ಯಾಸಿ ರಂಗಭೂಮಿಗೆ ಸಲ್ಲಿಸಿದ ಸೇವೆಗಾಗಿ ಇದೀಗ ಇವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 2016 ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಕಮಲಮ್ಮಾ ಬೀಳಗಿ

ಕಮಲಮ್ಮಾ ಬೀಳಗಿ ಅವರು ಕರ್ನಾಟಕದ ಹೆಸರಾಂತ ನಾಟಕ ಕಂಪನಿಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಹೆಸರು ಮಾಡಿರುವ ಹಿರಿಯ ನಟಿ. ಬೀಳಗಿ ಪೇಂಟರ್ ಎಂದು ವೃತ್ತಿ ರಂಗಭೂಮಿಯಲ್ಲಿ ಚಿರಪರಿಚಿತರಾಗಿದ್ದ ದಿವಂಗತ ಚಂದ್ರಶೇಖರ ಬೀಳಗಿ ಇವರ ಪತಿ. ಕಮಲಮ್ಮ ಅವರ ಪುತ್ರ ದಯಾನಂದ ಬೀಳಗಿ ಜೇವರ್ಗಿ ರಾಜಣ್ಣ ಅವರ 'ಕುಂಟ ಕೋಣ, ಮೂಖ ಜಾಣ' ನಾಟಕದ ಕುರುಡನ ಪಾತ್ರದಲ್ಲಿ ಕರ್ನಾಟಕದ ನಾನಾಕಡೆ ದೊಡ್ಡ ಹೆಸರು ಮಾಡಿದ್ದಾರೆ. ಮತ್ತೊಬ್ಬ ಪುತ್ರ ಸಿದ್ದು ಬೀಳಗಿ ಕೂಡ ಹೆಸರಾಂತ ನಟರು.

ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕು ಇಳಕಲ್‌ನ ಮಲ್ಲೇಶಪ್ಪ–ಈರವ್ವ ದಂಪತಿಗೆ ಜನಿಸಿದ ಕಮಲಮ್ಮ 13ನೇ ವಯಸ್ಸಿಗೆ ಗದಗ ಶ್ರೀ ವೀರೇಶ್ವರ ನಾಟ್ಯಸಂಘ ಪ್ರವೇಶಿಸಿಸುವ ಮೂಲಕ ಮುಖಕ್ಕೆ ಬಣ್ಣ ಹಚ್ಚಿದರು. ನಂತರ ಗುಡಗೇರಿ ಶ್ರೀ ಸಂಗಮೇಶ್ವರ ನಾಟ್ಯಸಂಘ, ಜೇವರ್ಗಿ ವಿಶ್ವಜ್ಯೋತಿ ಶ್ರೀ ಪಂಚಾಕ್ಷರ ನಾಟ್ಯಸಂಘ, ಶ್ರೀ ಗುರುಕುಮಾರೇಶ್ವರ ನಾಟ್ಯಸಂಘ, ಶ್ರೀ ಹುಚ್ಚೇಶ್ವರ ನಾಟ್ಯಸಂಘ, ಕೆಬಿಆರ್ ಡ್ರಾಮಾ ಕಂಪನಿ ಸೇರಿದಂತೆ ಕರ್ನಾಟಕದ ಹಲವು ಪ್ರಮುಖ ನಾಟಕ ಕಂಪನಿಗಳಲ್ಲಿ ವೈವಿಧ್ಯಮಯ ಪಾತ್ರಗಳಲ್ಲಿ ಅಭಿನಯಿಸಿ ಹೆಸರು ಮಾಡಿದರು.

ಸಾಳುಂಕೆಯವರ ವರನೋಡಿ ಹೆಣ್ಣುಕೊಡು ನಾಟಕದ ಜಾನವಿ ಪಾತ್ರ, ಬದುಕು ಬಂಗಾರವಾಯ್ತುನಲ್ಲಿ ಮಹಾದೇವಿ ಪಾತ್ರ; ಗುಡಗೇರಿ ಬಸವರಾಜರ ಸತ್ಯ ಸತ್ತಿತು – ಚಿಕ್ಕಿ, ರೈತನ ಮಕ್ಕಳು – ಪುಷ್ಪಾ, ದುಡ್ಡಿನ ದರ್ಪ – ಕಾಮಿನಿ; ಧುತ್ತರಗಿಯವರ ಚಿಕ್ಕಸೊಸೆ ನಾಟಕದ ಸುನಂದಾ ಪಾತ್ರಗಳು ಇವರ ಅಭಿನಯ ವಿಶೇಷತೆಯಿಂದ ದೊಡ್ಡ ಹೆಸರು ಗಳಿಸಿಕೊಟ್ಟಿವೆ.

ವೃತ್ತಿರಂಗಭೂಮಿಗೆ ಕಮಲಮ್ಮ ಸಲ್ಲಿಸಿದ ಸೇವೆಯನ್ನು ಮನ್ನಿಸಿ ಕರ್ನಾಟಕ ನಾಟಕ ಅಕಾಡೆಮಿಯು ಇದೀಗ 2016ರ ವಾರ್ಷಿಕ ಪ್ರಶಸ್ತಿಯನ್ನು ಪ್ರದಾನ ಮಾಡುತ್ತಿದೆ.

---



## ಆಂಜನೇಯ

ಪೌರಾಣಿಕ, ಸಾಮಾಜಿಕ, ಪ್ರಾಯೋಗಿಕ ಸೇರಿದಂತೆ ಎಲ್ಲ ಬಗೆಯ ನಾಟಕಗಳನ್ನು ನಿರ್ಮಿಸಿ, ನಟಿಸಿ, ನಿರ್ದೇಶಿಸಿರುವ ಆಂಜನೇಯ ಅವರಿಗೆ ಐತಿಹಾಸಿಕ ನಾಟಕಗಳ ಮೇಲಿನ ಒಲವು ಒಂದು ಗುಂಜಿ ತೂಕ ಹೆಚ್ಚು. ಐತಿಹಾಸಿಕ ಎಂದರೆ ಅವರಿಗೆ ನಾಟಕ ಮಾತ್ರವಲ್ಲ, ಅದೊಂದು ಆಂದೋಲನ. ನಾಟ್ಯ ಸರಸ್ವತಿ ಶಾಂತಲಾ ಕನ್ನಡ ಕಲಾಸಂಘ (1985) ಸ್ಥಾಪಿಸಿ ಅದರಿಂದ ಕೆಂಪೇಗೌಡ ನಾಟಕ ಹಾಗೂ ನೃತ್ಯ ರೂಪಕಗಳನ್ನು ಬೆಂಗಳೂರಿನ ವಿವಿಧ ಬಡಾವಣೆಗಳಲ್ಲಿ ನಿರಂತರವಾಗಿ ಪ್ರದರ್ಶಿಸಿ, ನೆಲಗಳ್ಳರ ಪಾಲಾಗಿದ್ದ ಕೆಂಪೇಗೌಡರ ಸೊಸೆ ಲಕ್ಷ್ಮಿದೇವಿ ಅವರ ಸಮಾಧಿ ಉಳಿಸಿಕೊಳ್ಳುವವರೆಗೆ ನಾಟಕ ಚಳವಳಿಯನ್ನು ಕೊಂಡೊಯ್ದರು.

ಇಮ್ಮಡಿ ಕೆಂಪೇಗೌಡ, ಮಹಾಭಕ್ತಿ ದೊಡ್ಡಾಂಜಿ, ಆವತಿ ನಾಡಪ್ರಭು ರಣಭೈರೇಗೌಡ, ವಿಜಯನಗರ ಸಾಮ್ರಾಜ್ಯದ ರಾಜಶೇಖರ, ರಂಗಸಾಮ್ರಾಟ ದುರ್ವಿನೀತ, ಸಾಮ್ರಾಟ್ ಶ್ರೀಪುರುಷ ಮುಂತಾದ ಹತ್ತಾರು ಐತಿಹಾಸಿಕ ನಾಟಕಗಳನ್ನು ರಚಿಸಿ ತಮ್ಮ ಶಾಂತಲಾ ಕನ್ನಡ ಕಲಾಸಂಘದ ವತಿಯಿಂದ ನಿರಂತರ ಪ್ರದರ್ಶನ ನೀಡುತ್ತ ಬಂದಿದ್ದಾರೆ. 30 ವರ್ಷಗಳ ಕಾಲ ಪಂಚರಾತ್ರ ನಾಟಕೋತ್ಸವ ನಡೆಸಿದ್ದಾರೆ. ಐತಿಹಾಸಿಕ ನಾಟಕೋತ್ಸವ, ಪೌರಾಣಿಕ ನಾಟಕೋತ್ಸವ, ಕಿರು ನಾಟಕೋತ್ಸವ, ಹಾಸ್ಯ ನಾಟಕೋತ್ಸವ ನಡೆಸಿದ್ದಾರೆ. ಇಂತಹ ಉತ್ಸವಗಳಿಗೆ ಬರೀ ರವೀಂದ್ರ ಕಲಾಕ್ಷೇತ್ರದಂತಹ ಪ್ರತಿಷ್ಠಿತ ಸ್ಥಳವನ್ನು ಮಾತ್ರ ನೆಚ್ಚಿದವರಲ್ಲ. ಬೆಂಗಳೂರಿನ ಮೂಲೆ ಮೂಲೆಯಲ್ಲಿರುವ ಸಭಾಭವನದಲ್ಲಿ; ಶಾಲೆ ಕಾಲೇಜುಗಳ ಸಭಾಂಗಣಗಳಲ್ಲಿ ನಾಟಕ ಪ್ರದರ್ಶಿಸುತ್ತ ಬಂದಿದ್ದಾರೆ.

ಬೆಂಗಳೂರು ದಕ್ಷಿಣ ತಾಲ್ಲೂಕು ಮುದ್ದಯ್ಯನಪಾಳ್ಯದ ವೆಂಕಟಪ್ಪ–ತಿಮ್ಮಕ್ಕ ಕೃಷಿ ದಂಪತಿಗೆ 1956 ರಲ್ಲಿ ಜನಿಸಿದ ಆಂಜನೇಯ ಬಿ.ಎ. ಹಾಗೂ ನಾಟಕ ಡಿಪ್ಲೊಮಾ ಪದವೀಧರರಾಗಿ ಅಂಚೆ ಕಚೇರಿಯಲ್ಲಿ ನೌಕರಿಯಲ್ಲಿದ್ದರು. ಆಂಜನೇಯ ತಮ್ಮ ಮನೆಯ ಕೆಳ ಅಂತಸ್ತಿನಲ್ಲಿ ಪುಟ್ಟದೊಂದು ರಂಗಮಂದಿರ, ರಂಗಪರಿಕರ ಇಟ್ಟುಕೊಳ್ಳಲು ಕೋಣೆಗಳು ಹಾಗೂ ಕಲಾವಿದರು ಉಳಿದುಕೊಳ್ಳಲು ವಸತಿ ವ್ಯವಸ್ಥೆ ಮಾಡಿದ್ದಾರೆ. ಈ ರಂಗಮಂದಿರದಲ್ಲಿ ಆಗಾಗ ನಾಟಕ ಪ್ರದರ್ಶನಗಳಿರುತ್ತವೆ. ಹತ್ತಾರು ಯುವ ಕಲಾವಿದರನ್ನು ಅವರು ರೂಪಿಸಿದ್ದಾರೆ.

ಆಂಜನೇಯ ತಮ್ಮಿಡೀ ಕುಟುಂಬವನ್ನು ರಂಗಭೂಮಿಗೆ ತೊಡಗಿಸಿದ್ದಾರೆ. ಪತ್ನಿ ಪ್ರಭಾವತಿ ಅವರು ರಂಗದಾಸೋಹದಲ್ಲಿ ನಿರತರಾದರೆ; ಮಗಳು ಶಾಂತಲಾದೇವಿ, ಮಗ ಧನ್ವಂತ್ರಿ ನಟಿ, ಸಂಘಟಕರಾಗಿ ತಂದೆ ಕಟ್ಟಿದ ರಂಗ ಪರಂಪರೆಯನ್ನು ಮುಂದುವರಿಸಿದ್ದಾರೆ. ಆಂಜನೇಯರಿಗೆ ಇದೀಗ ಕರ್ನಾಟಕ ನಾಟಕ ಅಕಾಡೆಮಿಯ 2016 ರ ವಾರ್ಷಿಕ ಪ್ರಶಸ್ತಿಯ ಗರಿ.

---



## ಲಲಿತಾಬಾಯಿ ಅಣ್ಣಪ್ಪ ಸಣ್ಣಂಗಿ

ಸಾಮಾನ್ಯವಾಗಿ ವೃತ್ತಿ ರಂಗಭೂಮಿಯಲ್ಲಿ ಅಭಿನಯದ ಪಾಠ ಕಲಿತು ನಂತರದಲ್ಲಿ ಗ್ರಾಮೀಣ ಹವ್ಯಾಸಿ (ಅಮೆಚೂರ್) ನಾಟಕಗಳಲ್ಲಿ ನಟಿಸುವ ವೃತ್ತಿ ಕಲಾವಿದೆಯರಾಗುತ್ತಾರೆ. ಆದರೆ ಅಮೆಚೂರ್‌ನಲ್ಲಿ ನಟನೆಯ ಪಟ್ಟುಗಳನ್ನು ಕಲಿತು ವೃತ್ತಿರಂಗಭೂಮಿ ಪ್ರವೇಶಿಸಿ ಅಲ್ಲಿ ದೊಡ್ಡ ಹೆಸರು ಮಾಡಿದ ನಟಿ ಲಲಿತಾ ಸಣ್ಣಂಗಿ ಎಂದೇ ಖ್ಯಾತರಾದ ಹಾವೇರಿ ಲಲಿತಮ್ಮನವರು. ಎಂಬತ್ತು ಸಮೀಪಿಸಿರುವ ಈ ಹಿರಿಯ ನಟಿ ಗೋಕಾಕ ಬಸವಣ್ಣೆಪ್ಪ, ದೊಡ್ಡವಾಡ ಸಿದ್ದಯ್ಯ, ಉದಯಪ್ರಕಾಶ, ರವಿಕಲಾ, ಕರ್ನಾಟಕ, ಹುಚ್ಚೇಶ್ವರ ನಾಟ್ಯಸಂಘ ಮುಂತಾದ ಪ್ರತಿಷ್ಠಿತ ನಾಟಕ ಕಂಪನಿಗಳಲ್ಲಿ ವೈವಿಧ್ಯಮಯ ಪಾತ್ರಗಳ

ಹಾಡುನಟಿಯಾಗಿ ದೊಡ್ಡ ಹೆಸರು ಮಾಡಿದ್ದಾರೆ. ಲಲಿತಾ ಸಣ್ಣಿಂಗಿಯವರು ಅದಕ್ಕೂ ಮುಂಚೆ ನಾಲ್ಕಾರು ವರ್ಷ ಕಾಲ ಹಳ್ಳಿಗಾಡಿನ ನಾಟಕಗಳಲ್ಲಿ ಅಭಿನಯಿಸುವ ಅಮೆಚೂರ್ ನಟಿಯಾಗಿದ್ದರು.

ಹಾವೇರಿ ಶಿವಪ್ಪ-ಸಾವಿತ್ರಮ್ಮ ದಂಪತಿಗೆ ಜನಿಸಿದ ಲಲಿತ ಆ ಕಾಲಕ್ಕೆ ಎಸ್‌ಎಸ್‌ಎಲ್‌ಸಿ ಸಮಾನ ಶಿಕ್ಷಣ ಪಡೆದು ನಾಟ್ಯಾಚಾರ್ಯ ಎಂದೇ ಖ್ಯಾತರಾದ ಶ್ರೀನಿವಾಸ ಕುಲಕರ್ಣಿ ಅವರ ಬಳಿ ಸಂಗೀತ, ನೃತ್ಯವನ್ನು ಶಾಸ್ತ್ರೀಯವಾಗಿ ಕಲಿತರು. ಈ ಶಾಸ್ತ್ರೀಯ ಸಂಸ್ಕಾರವನ್ನು ಮುಂದಿನ ದಿನಗಳಲ್ಲಿ ಅವರು ನಾಟಕಕ್ಕೆ ಬಳಸಿದರು. ಕೊರವಂಜಿಯ ರತ್ನಾ, ಸಮಾಜಕ್ಕೆ ಸವಾಲು ನಾಟಕದ ಜ್ಯೋತಿ ಪಾತ್ರಗಳು ಅವರನ್ನು ಅಭಿನಯದಲ್ಲಿ ಎತ್ತರಕ್ಕೆ ತಂದಿವೆ ಎಂದು ರಂಗಲೇಖಕ ಗವೀಶ ಹಿರೇಮಠ ಬರೆಯುತ್ತಾರೆ. ಇವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 2016 ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ವಿಜಯಕಾಶಿ

ಚಿತ್ರನಟ ವಿಜಯಕಾಶಿ ಅವರು ರಂಗಸಂಪದ ತಂಡದ 'ಸಂಗ್ಯಾಬಾಳ್ಯಾ', 'ಒಥೆಲೋ', 'ಆ ಊರು-ಈ ಊರು', 'ಗುಲಾಮನ ಸ್ವಾತಂತ್ರ್ಯಯಾತ್ರೆ' ಮುಂತಾದ ನಾಟಕಗಳ ಪ್ರಮುಖ ಪಾತ್ರಗಳನ್ನು ನಿರ್ವಹಿಸಿ ಬೆಂಗಳೂರಿನ ಹವ್ಯಾಸಿ ರಂಗಭೂಮಿಯ ಗಮನಾರ್ಹ ನಟ ಎನಿಸಿದವರು. ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕು ಭೀಮನಕೋಣೆಯ ಮಂಜಭಟ್ಟ ಕಾಶಿ-ಭಾಗಿರಥಮ್ಮ ದಂಪತಿಗೆ ಜನಿಸಿದ ವಿಜಯಕಾಶಿ 1970 ರ ದಶಕದಲ್ಲಿ ಬಿ.ವಿ.ಕಾರಂತರ 'ಪಂಜರಶಾಲೆ' ನಾಟಕದಲ್ಲಿ ಬಾಲ ಕಲಾವಿದನಾಗಿ ರಂಗಪ್ರವೇಶ ಮಾಡಿದರು. ನಂತರ ತಮ್ಮ ಊರಿಗೆ ಹೊಂದಿಕೊಂಡಿರುವ ಹೆಗ್ಗೋಡಿನ ನೀಲಕಂಠೇಶ್ವರ ನಾಟ್ಯಸಂಘ (ನೀನಾಸಂ) ದಲ್ಲಿ ಕೆ.ವಿ.ಸುಬ್ಬಣ್ಣನವರ ಸಾರಥ್ಯದಲ್ಲಿ ಹಲವು ನಾಟಕಗಳಿಗೆ ಬಣ್ಣ ಹಚ್ಚಿದರು. ವಿದ್ಯಾರ್ಥಿ ದೆಸೆಯಲ್ಲಿ ಶಿವಮೊಗ್ಗದ ಅಭಿನಯ ತಂಡದಲ್ಲಿ 'ತುಘಲಕ್', 'ಸತ್ತವರ ನೆರಳು' ನಾಟಕಗಳ ಮುಖ್ಯ ಪಾತ್ರಗಳಲ್ಲಿ ನಟಿಸಿದ್ದರು.

ನೂರಕ್ಕೂ ಅಧಿಕ ಚಿತ್ರಗಳಲ್ಲಿ ಹೀರೋ ಮತ್ತಿತರ ಪಾತ್ರಗಳಲ್ಲಿ ಅಭಿನಯಿಸಿದ ವಿಜಯಕಾಶಿ ಬಿಡುವಿನ ಸಮಯದಲ್ಲಿ ಚಿತ್ರರಂಗದ ಸಹೋದ್ಯೋಗಿಗಳಾದ ದೊಡ್ಡಣ್ಣ, ಉಮಾಶ್ರೀ, ಮಾನು, ಶ್ರೀಲಲಿತಾ, ಉಮೇಶ್ ಮುಂತಾದವರ ಜತೆಯಲ್ಲಿ ಕಂಪನಿ ನಾಟಕಗಳಲ್ಲಿ ಅಭಿನಯಿಸಿ ಉತ್ತರ ಕರ್ನಾಟಕದಲ್ಲಿ ಹೆಸರು ಮಾಡಿದ್ದಾರೆ. ಅಂತರಾಷ್ಟ್ರೀಯ ಖ್ಯಾತಿಯ ಕೂಚಿಪುಡಿ ನೃತ್ಯ ಕಲಾವಿದೆ ವೈಜಯಂತಿ ಕಾಶಿ ಅವರು ಇವರ ಪತ್ನಿ. ಪುತ್ರಿ ಪ್ರತೀಕ್ಷಾ ಕಾಶಿ ಕೂಡಾ ನೃತ್ಯ ಕಲಾವಿದೆಯಾಗಿದ್ದಾರೆ.

ಹವ್ಯಾಸಿ ರಂಗಭೂಮಿಯಲ್ಲಿ ನಟನೆಯ ದೀಕ್ಷೆ ಪಡೆದ ವಿಜಯಕಾಶಿ ಅವರ ಪ್ರತಿಭೆ ಮನ್ನಿಸಿ ಕರ್ನಾಟಕ ನಾಟಕ ಅಕಾಡೆಮಿಯು ಇದೀಗ 2016 ರ ವಾರ್ಷಿಕ ಪ್ರಶಸ್ತಿಯನ್ನು ಪ್ರದಾನ ಮಾಡುತ್ತಿದೆ.

---



## ಛಾಯಾದೇವಿ ರೆಡ್ಡಿ

ಕಲಾವಿದರನ್ನು ತಯಾರಿಸುವ ಕಾರ್ಖಾನೆ ಎಂದೇ ಪ್ರತೀತಿಯಾದ ಗೋಕಾಕದ ಶ್ರೀ ಶಾರದಾ ಸಂಗೀತ ನಾಟಕ ಮಂಡಳಿಗೆ ಹದಿಹರೆಯದಲ್ಲೇ ಸೇರಿ ಹತ್ತು ವರ್ಷಗಳ ಕಾಲ ಅಲ್ಲಿ ನಟನೆಯ ಪಾಠ ಕಲಿತು ಭವಿಷ್ಯದಲ್ಲಿ ವೃತ್ತಿ ರಂಗಭೂಮಿಯ ಸಮರ್ಥ ನಟಿ ಎನಿಸಿಕೊಂಡವರು ಛಾಯಾದೇವಿ ರೆಡ್ಡಿ. ಅದೇ ಕಂಪನಿಯಲ್ಲಿದ್ದ ಹಿರಿಯ ನಟ ಎಚ್.ಕೆ.ರೆಡ್ಡಿ ಛಾಯಾದೇವಿಯ ಕಲಿಕೆಯ ಆಸಕ್ತಿಗೆ ನೀರೆರೆದು ಪೋಷಿಸಿ,

ಮದುವೆಯಾದರು. ನಂತರ ಈ ತಾರಾಜೋಡಿ ಕರ್ನಾಟಕದ ಹಲವು ಪ್ರತಿಷ್ಠಿತ ಕಂಪನಿಗಳಲ್ಲಿ ಪಾತ್ರ ಮಾಡಿ ಜನಪ್ರಿಯರಾದರು.

ಗುಬ್ಬಿವೀರಣ್ಣ, ಏಣಗಿ ಬಾಳಪ್ಪ, ಚಿತ್ತರಗಿ ಶಾಸ್ತ್ರಿಗಳು, ನಾಗರತ್ನಮ್ಮನವರ ಸ್ತ್ರೀನಾಟಕ ಮಂಡಳಿ, ಕೆಬಿಆರ್, ಸೂಡಿ ಶೇಖರಯ್ಯ, ಪಟ್ಟದಕಲ್ ಬಸಯ್ಯ, ಬೆಂಗಳೂರು ಪ್ರಭಾತ್ ಕಲಾವಿದರು, ಮೆಳ್ಳಗೇರಿ ಪಂಚಯ್ಯ ನಾಟಕ ಕಂಪನಿಗಳಲ್ಲಿ ಛಾಯಾದೇವಿ ವೈವಿಧ್ಯಮಯ ಪಾತ್ರಗಳಲ್ಲಿ ನಟಿಸಿದರು. ಮುಧೋಳದಲ್ಲಿ ಟೈಲರ್ ಆಗಿದ್ದ ಮಾಧವರಾವ್ – ಶಕುಂತಲಾ ದಂಪತಿಗೆ ಜನಿಸಿದ ಛಾಯಾದೇವಿ ವೃತ್ತಿನಾಟಕ ಕಂಪನಿಗಳ 45 ವರ್ಷಗಳ ಸೇವೆ ನಂತರ ಹುಬ್ಬಳ್ಳಿಯಲ್ಲಿ ನೆಲೆಸಿ ಗ್ರಾಮೀಣ ಹವ್ಯಾಸಿ ನಾಟಕಗಳ ವೃತ್ತಿಕಲಾವಿದೆಯಾಗಿ ಕೆಲಕಾಲ ದುಡಿದರು. ಮಹಿಳಾ ತಂಡಗಳಲ್ಲಿ ಪುರುಷ ಪಾತ್ರಗಳಲ್ಲಿ ಅಭಿನಯಿಸುತ್ತಿದ್ದರು. ಗೌಡ್ರಗದ್ಲ ನಾಟಕದ ಇವರ ಬಸವರಾಜ ಪಾತ್ರ ಜನಪ್ರಿಯವಾಗಿತ್ತು.

"ದುರ್ಗಾದಾಸ್ ನಿರ್ದೇಶನದ ರಕ್ತರಾತ್ರಿ ನಾಟಕದ ಉತ್ತರೆ ಪಾತ್ರ, ಶ್ರೀಕೃಷ್ಣಗಾರುಡಿಯ ದ್ರೌಪದಿ, ಸತ್ಯಹರಿಶ್ಚಂದ್ರದ ತಾರಮತಿ, ಶ್ರೀನಿವಾಸ ಕಲ್ಯಾಣದ ಬಕುಳಾದೇವಿ ನಾನು ಇಷ್ಟಪಟ್ಟು ಅಭಿನಯಿಸಿದ ಪಾತ್ರಗಳು" ಎಂದು ಅವರು ಹೇಳುತ್ತಾರೆ,

ಶ್ರೀ ಮಹಾಗಣಾಧೀಶ್ವರ ನಾಟ್ಯಸಂಘ ಸಾಗರ ಎಂಬ ನಾಟಕ ಕಂಪನಿಯನ್ನು ಕೆಲವು ವರ್ಷಗಳ ಕಾಲ ನಡೆಸಿದ ದಿಟ್ಟೆ ಅವರು. 30 ಚಿತ್ರಗಳಲ್ಲಿ; ಕಿನ್ನರಿ, ಅಣ್ಣಬಸವಣ್ಣ ಟಿವಿ ಧಾರಾವಾಹಿಗಳಲ್ಲಿ ಛಾಯಾದೇವಿ ಅಭಿನಯಿಸಿದ್ದಾರೆ. ಬೆಳ್ಳಿತೆರೆ, ಕಿರುತೆರೆ, ರಂಗಭೂಮಿಯ ತಮ್ಮ ಶ್ರೀಮಂತ ಅನುಭವವನ್ನು ಬದಿಗಿಟ್ಟಂತೆ ಇಳಿವಯಸ್ಸಿನಲ್ಲಿ ಹುಬ್ಬಳ್ಳಿ ಗೋಕುಲದ ದುರ್ಗಾದೇವಿ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕುತೂಹಲಕಾರಿ ಬೆಳವಣಿಗೆ. ವೃತ್ತಿ ರಂಗಭೂಮಿಗೆ ಛಾಯಾದೇವಿ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ನಾಟಕ ಅಕಾಡೆಮಿಯು 2016 ರ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.

---



## ಪ್ರೇಮಾ ತಾಳಿಕೋಟಿ

ಪ್ರೇಮಾ ತಾಳಿಕೋಟಿ ಉರ್ಫ ಪರವಿನ ಆರ್. ಯಂಕಂಚಿಯವರು ಕಲಾವಿದರ ಕುಟುಂಬದ ಹಿನ್ನೆಲೆಯಿಂದ ಬಂದ ವೃತ್ತಿರಂಗಭೂಮಿಯ ಹೆಸರಾಂತ ನಟಿ. ಎಲ್ಲಬಗೆಯ ಪಾತ್ರಗಳಲ್ಲಿ ನಟಿಸಿರುವ ಅವರು ಹಾಸ್ಯ ಪಾತ್ರಗಳಿಗೆ ಹೆಸರು ವಾಸಿಯಾಗಿದ್ದಾರೆ. ಇವರ ಪತಿರಾಜು ತಾಳಿಕೋಟಿ ಸುಪ್ರಸಿದ್ಧ ಹಾಸ್ಯನಟರು. ಪ್ರೇಮಾ–ರಾಜು ತಾಳಿಕೋಟಿ ಹಾಸ್ಯಜೋಡಿ ಕೆಲವು ನಾಟಕ ಕಂಪನಿಗಳಲ್ಲಿ ಜನಪ್ರಿಯವಾಗಿತ್ತು.

ಯಂಕಂಚಿ ಅವರು ಸ್ವತಃ ನಾಟಕ ಕಂಪನಿ ಹೊಂದಿದ್ದ ಕಲಾವಿದರು. ಯಂಕಂಚಿ ದಂಪತಿಗೆ 1954ರಲ್ಲಿ ಜನಿಸಿದ ಪ್ರೇಮಾ ಅವರು ಥೆರೇಸಮ್ಮನವರ ನಾಟಕ ಕಂಪನಿ, ಚಿತ್ರದುರ್ಗ ಕುಮಾರಸ್ವಾಮಿ, ಅರಿಷಿಣಗೋಡಿ, ಗುಡಿಗೇರಿ ಬಸವರಾಜ, ಶೇಖು ಮಾಸ್ತರ, ಕೆಬಿಆರ್ ನಾಟಕ ಕಂಪನಿಗಳಲ್ಲಿ ಎಲ್ಲ ಬಗೆಯ ಪಾತ್ರಗಳಲ್ಲಿ ನಟಿಸಿ ಪ್ರಸಿದ್ಧಿ ಪಡೆದವರು. ಬಸ್‌ಕಂಡಕ್ಟರ್, ಮಂಗಳಾ ನನ್ನ ಅತ್ತಿಗೆ, ಜಿದ್ದಬಿದ್ದ ಜಗದಹೋದ, ಕಲಿಯುಗದ ಕುಡುಕ, ಹೂವಿನ ಅಂಗಡಿ; ರಕ್ತರಾತ್ರಿ, ಮಹಾರತಿ ಕರ್ಣ, ಮೋಹಿನಿ ಭಸ್ಮಾಸುರ, ಸಂಗೊಳ್ಳಿ ರಾಯಣ್ಣ, ಖಾಸ್ಗತೇಶ್ವರ ಮಹಿಮೆ ಮುಂತಾದ ಐವತ್ತಕ್ಕೂ ಹೆಚ್ಚು ಆಧ್ಯಾತ್ಮಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳ ನೂರಾರು ಪ್ರದರ್ಶನಗಳಲ್ಲಿ ಪ್ರೇಮಾ ನಟಿಸಿದ್ದಾರೆ.

ಪತಿ ರಾಜು ಸ್ವಂತ ಕಂಪನಿ ಶ್ರೀ ಖಾಸ್ಗತೇಶ್ವರ ನಾಟ್ಯ ಸಂಘ ಆರಂಭಿಸಿದ (1983) ಮೇಲೆ ಅದರ ಯಶಸ್ಸಿಗೆ ತಮ್ಮನ್ನು ತೊಡಗಿಸಿಕೊಂಡರು. ನಟನೆ ಜತೆಗೆ ಅದರ ಉಸ್ತುವಾರಿ ನೋಡಿಕೊಂಡರು. ರಾಜು ಅವರು ಚಿತ್ರರಂಗದಲ್ಲಿ

ಬಿಜಿಯಾದ ಮೇಲೆ ಈ ನಾಟಕ ಕಂಪನಿಯ ಹೆಚ್ಚಿನ ಹೊಣೆಯನ್ನು ಪ್ರೇಮಾ ಅವರು ತಮ್ಮ ಇಬ್ಬರು ಪುತ್ರರೊಂದಿಗೆ ನಿಭಾಯಿಸುತ್ತಿದ್ದಾರೆ.

ಕಲಾವಿದೆ ಪ್ರೇಮಾ ಅವರನ್ನು ಅನೇಕ ಸಂಘ ಸಂಸ್ಥೆಗಳು ಕಲಾ ವಿಶಾರದೆ, ಹಾಸ್ಯಚತುರೆ ಪ್ರಶಸ್ತಿ ನೀಡಿ ಸನ್ಮಾನಿಸಿವೆ. ಇದೀಗ ಕರ್ನಾಟಕ ನಾಟಕ ಅಕಾಡೆಮಿಯ 2016ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸಲಾಗುತ್ತಿದೆ.



## ವೆಂಕಟೇಶ ಹೆಗಡೆ

ಯಕ್ಷಗಾನದ ಶಿವರಾಮ ಹೆಗಡೆ, ಶಂಭು ಹೆಗಡೆ, ಗಜಾನನ ಹೆಗಡೆ, ಮಹಾಬಲ ಹೆಗಡೆ ಅವರಿಂದಾಗಿ ಉತ್ತರ ಕನ್ನಡ ಜಿಲ್ಲೆಯ ಕೆರೆಮನೆ ಎಂಬ ಗ್ರಾಮ ಲೋಕವಿಖ್ಯಾತವಾಗಿದೆ. ಅದೇ ಗ್ರಾಮದ ವೆಂಕಟೇಶ ಕೆ. ಹೆಗಡೆ ವೃತ್ತಿ ರಂಗಭೂಮಿಯ ಜನಪ್ರಿಯ ಗಾಯಕ ನಟರು. 1986 ರಲ್ಲಿ ಹುಬ್ಬಳ್ಳಿಯಲ್ಲಿ ಸತತ 680 ಪ್ರಯೋಗ ಕಂಡ ಚನ್ನಪ್ಪ ಚನ್ನೇಗೌಡ; 1992 ರಲ್ಲಿ ವಿಜಯಪುರದಲ್ಲಿ ನಿರಂತರ 365 ಪ್ರಯೋಗ ಕಂಡ ಎಚ್ಚರ ತಂಗಿ ಎಚ್ಚರ; 2003 ರಲ್ಲಿ ಬೆಂಗಳೂರು ಗುಬ್ಬಿ ರಂಗಮಂದಿರದಲ್ಲಿ ಸತತ 150 ಪ್ರಯೋಗ ಕಂಡ ಎಚ್ಚರ ತಂಗಿ ಎಚ್ಚರ; 2004 ರಲ್ಲಿ ಅದೇ ಥಿಯೇಟರ್‌ನಲ್ಲಿ ಸತತ 150 ಪ್ರಯೋಗ ಕಂಡ ಬಸ್ ಕಂಡಕ್ಟರ್ ನಾಟಕಗಳ ಪ್ರಮುಖ ಪಾತ್ರಗಳಲ್ಲಿ ನಟಿಸಿ ಹಾಡಿ ಪ್ರೇಕ್ಷಕರ ಹೃದಯಗೆದ್ದ ಹೆಸರಾಂತ ನಟ ವೆಂಕಟೇಶ ಕೆ. ಹೆಗಡೆ.

ಉತ್ತರ ಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕು ಕೆರೆಮನೆಯಲ್ಲಿ 1954 ರಲ್ಲಿ ಜನಿಸಿದ ವೆಂಕಟೇಶ ಅವರು ಸಹೋದರರಾದ ಮಹಾಬಲ ಹೆಗಡೆ, ಶಂಭು ಹೆಗಡೆ ಅವರಿಂದ ಯಕ್ಷಗಾನ ಹಾಗೂ ಸಂಗೀತದ ಅಭ್ಯಾಸ ಮಾಡಿ ನಂತರ ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯಸಂಘ ಸೇರಿದರು. ಮೊದಲ ನಾಟಕ 'ಜೈ ಪದ್ಮಾವತಿ' ನಾಟಕದ ಗುಂಡಾಭಟ್ಟನ ಪಾತ್ರದಲ್ಲಿ ಗಮನ ಸೆಳೆದರು. ನಂತರ ಕೆಬಿಆರ್ ಡ್ರಾಮಾ ಕಂಪನಿ, ಚಿತ್ತರಗಿ, ಗುಡಿಗೇರಿ, ಶೇಖಮಾಸ್ತರ, ಅಶಾಪುರ ಗೌಡರ ನಾಟಕ ಕಂಪನಿಗಳ ವೈವಿಧ್ಯಮಯ ಪಾತ್ರಗಳಲ್ಲಿ ಹೆಸರು ಮಾಡಿದರು. ಹಾಡುತ್ತ ಅಭಿನಯಿಸಿದ ಹಾಸ್ಯ ಪಾತ್ರಗಳು ಹೆಚ್ಚು ಮನ್ನಣೆಗೆ ಪಾತ್ರವಾದವು. ಹಲವು ನಾಟಕ ಕಂಪನಿಗಳ ವ್ಯವಸ್ಥಾಪಕರಾಗಿ, ನಾಟಕಗಳ ಆಯೋಜಕರಾಗಿಯೂ ವೆಂಕಟೇಶ ಹೆಗಡೆ ಶ್ರಮಿಸಿದ್ದಾರೆ.

ಹಲವು ಸಂಘ ಸಂಸ್ಥೆಗಳ ಗೌರವ, ಮನ್ನಣೆಗೆ ಪಾತ್ರರಾದ ವೆಂಕಟೇಶ ಹೆಗಡೆ ಅವರಿಗೆ ಇದೀಗ ಕರ್ನಾಟಕ ನಾಟಕ ಅಕಾಡೆಮಿಯ 2016 ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸಲಾಗುತ್ತದೆ.



## ಆಲೆಮನೆ ಸುಂದರಮೂರ್ತಿ

ಹೆಸರಾಂತ ನಟ ವರದಾಚಾರ್ಯ ಅವರ ನಾಟಕ ಕಂಪನಿಯಲ್ಲಿ ಮೇಕಪ್ ತಜ್ಞರಾಗಿದ್ದ ವೈ.ಎನ್. ಮೂರ್ತಿ ಹಾಗೂ ಮೂರ್ತಿರಾಯರು ಎಂಬ ಇಬ್ಬರು 1963 ರಲ್ಲಿ ಸುಂದರಮೂರ್ತಿ ಅವರಿಗೆ ಮೂರು ಬಣ್ಣ ಕೊಟ್ಟು ಇದರಲ್ಲಿ ಆಟವಾಡು ಎಂದು ಆಶೀರ್ವದಿಸಿದರು. ಅಲ್ಲಿಂದ ಶುರುಮಾಡಿದ ಬಣ್ಣದ ಆಟವನ್ನು ಇನ್ನೂ ನಿಲ್ಲಿಸಿಲ್ಲ ಎಪ್ಪತ್ತಾರು ವರ್ಷ ವಯಸ್ಸಿನ ಹಿರಿಯ ರಂಗ ಪ್ರಸಾಧನ ಪಟು (ಮೇಕಪ್‌ಮ್ಯಾನ್) ಆಲೆಮನೆ ಸುಂದರಮೂರ್ತಿ.

"ನನಗಾಗ 23 ವರ್ಷ ವಯಸ್ಸು. ಐಟಿಐ ಮಾಡಿಕೊಂಡು ಬೆಂಗಳೂರಿನ ಎಚ್‌ಎಎಲ್‌ನಲ್ಲಿ ಕೆಲಸಕ್ಕೆ ಸೇರಿದ್ದೆ. ಅದು ಯಾವ ಗಳಿಗೆಯಲ್ಲಿ ಅವರು ಬಣ್ಣ ದಾನ ಮಾಡಿದರೋ ಅದೇ ನನ್ನ ಬದುಕಿಗೆ ಒಂದು ಅರ್ಥ ತಂದಿತು" ಎಂದು

ಆ ದಿನಗಳನ್ನು ಅವರು ಮೆಲುಕು ಹಾಕುತ್ತಾರೆ. ಬಣ್ಣದ ಹಸಿವು ಅಲ್ಲಿಂದ ಹೆಚ್ಚಾಯಿತು. ಬಿ.ವಿ.ರಂಗಪ್ಪ–ಅಕ್ಕತ್ತಮ್ಮ ದಂಪತಿಗೆ 1941 ರಲ್ಲಿ ಜನಿಸಿದ ಸುಂದರಮೂರ್ತಿ ತಮ್ಮ ವೃತ್ತಿಗಿಂತ ಹೆಚ್ಚಾದ ಮೇಕಪ್ ಬಗ್ಗೆ ಹೆಚ್ಚಿನ ತಿಳಿವಳಿಕೆ ಪಡೆಯಲು ಪುಸ್ತಕಗಳಿಗೆ ಮೊರೆಹೋಗುತ್ತಾರೆ. ಅಮೆರಿಕನ್ ಲೈಬ್ರರಿ, ಬ್ರಿಟಿಷ್ ಲೈಬ್ರರಿಯಲ್ಲಿ ಮೇಕಪ್ ಕುರಿತ ಪುಸ್ತಕ ದೊರೆಯುತ್ತವೆ.

ಯಾವುದೇ ಹೊಸ ಸಿನಿಮಾ ನೋಡಲಿ, ನಾಟಕ ನೋಡಲಿ ಪಾತ್ರಧಾರಿಗಳ ಮೇಕಪ್‌ಅನ್ನು ಸೂಕ್ಷ್ಮವಾಗಿ ಗಮನಿಸುತ್ತಾರೆ. 1982 ರಲ್ಲಿ ಮೇಕಪ್ ನಾಣಿ ಪರಿಚಯ ಆಗುತ್ತದೆ. 90 ಪೈಸೆ ಇದ್ದರೂ ಒಂದು ರೂಪಾಯಿ ಆಗುವುದಿಲ್ಲ, ಆದರೆ ಆ ಬಾಕಿ ಹತ್ತು ಪೈಸೆ ಇದ್ದರೆ ಮಾತ್ರ ಒಂದು ರೂಪಾಯಿ ಆಗುತ್ತದೆ. ಮೇಕಪ್ ಸಹ ಹಾಗೆಯೇ... ಎಂದು ಮೇಕಪ್‌ನ ಮರ್ಮವನ್ನು ಮತ್ತಷ್ಟು ಕುತೂಹಲಗೊಳಿಸುತ್ತಾರೆ.

ಕಂಠೀರವ ಸ್ಟುಡಿಯೋ ನಿರ್ಮಾತೃ ಕರಿಬಸವಯ್ಯ ಅವರ ಸುಮಾರು ಎರಡು ಸಾವಿರ ನಾಟಕಗಳಿಗೆ ಸುಂದರಮೂರ್ತಿ ಮೇಕಪ್ ಮಾಡಿದ್ದಾರೆ. ರಂಗಸುಗ್ಗಿ, ನಾಟ್ಯಸರಸ್ವತಿ ಶಾಂತಲಾ ಕನ್ನಡ ಕಲಾಸಂಘ ಪ್ರಧಾನವಾಗಿ ಸೇರಿದಂತೆ ಬೆಂಗಳೂರಿನ ಹಲವು ರಂಗತಂಡಗಳಿಗೆ ಮೇಕಪ್ ಮಾಡಿದ ಹೆಗ್ಗಳಿಕೆ ಅವರದು. ಅಧ್ಯಯನಶೀಲರಾದ ಸುಂದರಮೂರ್ತಿ ಉತ್ತಮ ನಟ, ನಿರ್ದೇಶಕರೂ ಹೌದು. ವಸ್ತ್ರವಿನ್ಯಾಸ, ರಂಗಸಜ್ಜಿಕೆ, ದೀಪ ಸಂಯೋಜನೆಯಲ್ಲೂ ಅವರು ಪರಿಣತರು. ಆಲೆಮನೆ ಎಂಬ ಸಿನಿಮಾದಲ್ಲಿ ಅವರ ನಟನೆಗೆ ಬಹಳ ಮೆಚ್ಚುಗೆ ವ್ಯಕ್ತವಾಯಿತು. ಬಿ.ಆರ್.ಸುಂದರಮೂರ್ತಿ ಅಲ್ಲಿಂದ 'ಆಲೆಮನೆ' ಸುಂದರಮೂರ್ತಿ ಆದರು. ಇವರಿಗೆ ಕರ್ನಾಟಕ ನಾಟಕ ಅಕಾಡೆಮಿಯು 2016ರ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸುತ್ತಿದೆ.



## ಎ. ಭದ್ರಪ್ಪ

ನಟ, ಸಂಘಟಕ ದಾವಣಗೆರೆಯ ಎ. ಭದ್ರಪ್ಪ ಅವರು ಹಲವು ಉತ್ಸವ, ವೃತ್ತಿರಂಗಭೂಮಿ ಕಲಾವಿದರ ಸಮಾವೇಶಗಳನ್ನು ಯಶಸ್ವಿಯಾಗಿ ಸಂಘಟಿಸಿದ್ದಾರೆ. ಸ್ವಂತ ನಾಟಕ ಕಂಪನಿ ತೆರೆದು ವರ್ಷಕಾಲ ನಡೆಸಿದ್ದಾರೆ.

ದಾವಣಗೆರೆಯ ಅನ್ನದಾನಪ್ಪ– ಸಂಗಮ್ಮ ದಂಪತಿಗೆ 1952 ರಲ್ಲಿ ಜನಿಸಿದ ಭದ್ರಪ್ಪ ಶಾಲಾ ದಿನಗಳಲ್ಲೇ ಕನ್ನಡ ನಾಡ ಕಲಾವಿದರ ಸಂಘ ಎಂಬ ರಂಗತಂಡ ಸ್ಥಾಪಿಸಿದರು. ನಂತರ ಅದು ಕನ್ನಡಪರ ಹೋರಾಟಗಳ ಕೇಂದ್ರವಾಯಿತು. ಬಾಪೂಜಿ ಸಂಸ್ಥೆಯಲ್ಲಿ ನೌಕರಿಯ ಜತೆಗೆ ನಾಟಕಗಳಲ್ಲಿ ನಟನೆ, ಸಂಘಟನೆಯಲ್ಲಿ ತಮ್ಮನ್ನು ನಿರಂತರವಾಗಿ ತೊಡಗಿಸಿಕೊಂಡರು.

1984 ರಲ್ಲಿ ಶ್ರೀ ಸರ್ವಮಂಗಳ ನಾಟಕ ಸಂಘ ಎಂಬ ನಾಟಕ ಕಂಪನಿ ಸ್ಥಾಪಿಸಿ ದಾವಣಗೆರೆ, ಸೊರಬ, ಹಾವೇರಿ, ಅಕ್ಕಿಆಲೂರು, ಜೋಗ, ಕಡೂರು ಮುಂತಾದ ಊರುಗಳಲ್ಲಿ ಕ್ಯಾಂಪ್ ಮಾಡುತ್ತ ಸಾಗಿದಾಗ 1985 ರಲ್ಲಿ ಕಂಪನಿ ಬೆಂಕಿ ಆಕಸ್ಮಿಕಕ್ಕೆ ಬಲಿಯಾಯಿತು. 1996 ರ ಮಾರ್ಚ್ 23,24 ಮತ್ತು 25 ರಂದು ದಾವಣಗೆರೆಯಲ್ಲಿ ಜರುಗಿದ ಅಖಿಲ ಕರ್ನಾಟಕ ವೃತ್ತಿರಂಗಭೂಮಿ ಕಲಾವಿದರ ಪ್ರಥಮ ಸಮ್ಮೇಳನದ ಪ್ರಧಾನ ಕಾರ್ಯದರ್ಶಿಯಾಗಿ ಅದರ ಯಶಸ್ಸಿಗೆ ಶ್ರಮಿಸಿದ ಭದ್ರಪ್ಪ ಅವರು, ರಾಜ್ಯ ವೃತ್ತಿರಂಗಭೂಮಿ ಕಲಾವಿದರ ಸಂಘವನ್ನು ಜೀವಂತವಾಗಿಟ್ಟು ಆಗಾಗ ಕಾರ್ಯಕ್ರಮ ನಡೆಸುತ್ತಾರೆ. ವೃತ್ತಿ ಹವ್ಯಾಸಿಯ 45 ಕಲಾವಿದರಿಗೆ ಆಶ್ರಯ ಮನೆ ಕಲ್ಪಿಸಿಕೊಡುವಲ್ಲಿ ನೆರವಾಗಿದ್ದಾರೆ.

ವೃತ್ತಿ ರಂಗಭೂಮಿಗೆ ಭದ್ರಪ್ಪ ಅವರು ಸಲ್ಲಿಸಿದ ಸೇವೆಯನ್ನು ಮನ್ನಿಸಿ ಕರ್ನಾಟಕ ನಾಟಕ ಅಕಾಡೆಮಿಯು ಇದೀಗ 2016 ರ ವಾರ್ಷಿಕ ಪ್ರಶಸ್ತಿಯನ್ನು ಪ್ರದಾನ ಮಾಡುತ್ತಿದೆ.



## ಜಿ.ಎಂ. ಸಿದ್ದರಾಜು

ಸುತ್ತಲಿನ ಹತ್ತಾರು ಊರುಗಳ ಪೌರಾಣಿಕ ನಾಟಕಗಳಲ್ಲಿ ಅಭಿನಯಿಸಿ ಹೆಸರು ಮಾಡಿರುವ ಗ್ರಾಮೀಣ ನಟ ಜಿ.ಎಂ.ಸಿದ್ದರಾಜು. ಶಕುನಿ, ಭೃಗಮುನಿ, ಬಲರಾಂ, ಭೀಮ, ಈಶ್ವರ, ರಾವಣ, ರಂಭಾಸುರ, ಕಣ್ವ, ಸಂಗದ, ಇಂದ್ರಜಿತ, ವೀರಭದ್ರ ಮುಂತಾದ ವೈವಿಧ್ಯಮಯ ಪಾತ್ರಗಳನ್ನು ಮನೋಜ್ಞವಾಗಿ ನಟಿಸಿದ ಸಿದ್ದರಾಜು ಅವರು ಯಾವುದೋ ಒಂದು ಪಾತ್ರಕ್ಕೆ 'ಬ್ರಾಂಡ್' ಆಗದವರು.

ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಗುರುದೇವರಹಳ್ಳಿಯ ಎಚ್.ಮರಿಶೆಟ್ಟರು– ರತ್ನಮ್ಮ ದಂಪತಿಗೆ 1953 ರಲ್ಲಿ ಜನಿಸಿದ ಸಿದ್ಧರಾಜು, ಲೋಹಿತಾಶ್ವ, ಬಾಲಕೃಷ್ಣ, ಪ್ರಹ್ಲಾದ, ಚಂದ್ರಹಾಸ, ಲವ, ಷಣ್ಮುಖ ಮುಂತಾದ ಬಾಲ ಪಾತ್ರಗಳಲ್ಲಿ ನಟಿಸುತ್ತ ಗ್ರಾಮೀಣ ಪೌರಾಣಿಕ ನಾಟಕಗಳ ಮೂಲಕ ರಂಗಪ್ರವೇಶಿಸಿದರು. ತಮ್ಮ ವೃತ್ತಿ ಟೈಲರಿಂಗ್‌ಗಿಂತ ಪ್ರವೃತ್ತಿಯಾದ ನಟನೆಯನ್ನೇ ಹೆಚ್ಚು ನೆಚ್ಚಿ ಸಮರ್ಪಿಸಿಕೊಂಡ ನಟರು.

ಸಿದ್ದರಾಜು ಅವರ ಅಭಿನಯ ಮೆಚ್ಚಿ ಹಲವು ಸಂಘಸಂಸ್ಥೆಗಳು ನಟಭೈರವ, ಕಲಾತಪಸ್ವಿ, ರಾಷ್ಟ್ರೀಯ ಭೂಷಣ, ಕರ್ನಾಟಕ ಭೂಷಣ ಮುಂತಾದ ಬಿರುದುಗಳನ್ನು ನೀಡಿ ಗೌರವಿಸಿವೆ. ಹಲವು ಕಡೆ ಸನ್ಮಾನ ನೀಡಿವೆ.

ಗ್ರಾಮೀಣ ಹವ್ಯಾಸಿ ರಂಗಭೂಮಿಗೆ ಸಿದ್ಧರಾಜು ಅಂತಹವರು ಜೀವಾಳ. ಅವರು ಗ್ರಾಮೀಣ ಹವ್ಯಾಸಿ ರಂಗಭೂಮಿಗೆ ಅದರಲ್ಲೂ ಪೌರಾಣಿಕ ನಾಟಕಗಳಿಗೆ ಸಲ್ಲಿಸಿದ ಸೇವೆಯನ್ನು ಮನ್ನಿಸಿ ಕರ್ನಾಟಕ ನಾಟಕ ಅಕಾಡೆಮಿಯು ಇದೀಗ 2016 ರ ವಾರ್ಷಿಕ ಪ್ರಶಸ್ತಿಯನ್ನು ಪ್ರದಾನ ಮಾಡುತ್ತಿದೆ.



1959ರಲ್ಲಿ ಮೈಸೂರು ರಾಜ್ಯ ಸರ್ಕಾರದಿಂದ ನಾಡಿನ ಖ್ಯಾತ ಕಲಾವಿದರನ್ನು ಗೌರವಿಸುವ ಸತ್ಕಾರ್ಯ ಕಾರ್ಯ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿಯ ಮೂಲಕ ಆರಂಭವಾಯಿತು. ಆಗ ರಾಜ್ಯ ಸರ್ಕಾರದ ಮಂತ್ರಿ ಮಂಡಲದ ಮಾಜಿ ಸನ್ಮಾನ್ಯ ಮಂತ್ರಿಗಳು ಜವಾಬ್ದಾರಿ ವಹಿಸಿಕೊಂಡು ಕೆಲವು ಸಾಹಿತಿ ಕಲಾವಿದರ ಮಾರ್ಗದರ್ಶನದಂತೆ, ಸಂಗೀತಗಾರರ ಕಲಾವಿದರ ಆಯ್ಕೆ ನಡೆದು ಪ್ರಶಸ್ತಿ ನೀಡಿ ಗೌರವಿಸಲಾಗುತ್ತಿತ್ತು. ಕರ್ನಾಟಕ ನಾಟಕ ಅಕಾಡೆಮಿಯ ಮೊದಲ ಅಧ್ಯಕ್ಷರಾಗಿ ಶ್ರೀ ಗಿರೀಶ್ ಕಾರ್ನಾಡರು ನೇಮಕಗೊಂಡರು. ಅಲ್ಲಿಂದೀಚೆಗೆ ಸುಮಾರು 12 ಜನ ಅಧ್ಯಕ್ಷರುಗಳು ಮತ್ತು ಅನೇಕ ಸಮಿತಿಗಳು ನೇಮಕಗೊಂಡು ನಿರಂತರವಾಗಿ ಕನ್ನಡ ರಂಗಭೂಮಿಯ ಅಭಿವೃದ್ಧಿಗೆ ಪೂರಕವಾಗಿ ಯೋಜನೆಗಳನ್ನು ರೂಪಿಸಿ ಕಾರ್ಯನಿರ್ವಹಿಸುತ್ತಾ ಬಂದಿವೆ.

ಪುಸ್ತಕಗಳ ಪ್ರಕಟಣೆ ನಾಟಕ ಅಕಾಡೆಮಿಯ ಮಹಾತ್ವಾಕಾಂಕ್ಷೆಯ ಯೋಜನೆ. ನಾನು 2008 ರಿಂದ 2011ರವರೆಗೆ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಜಿಲ್ಲಾ ರಂಗಮಾಹಿತಿಗಳು, ರಂಗಸಂಪನ್ನರು ಮಾಲಿಕೆಯಡಿ ಪುಸ್ತಕಗಳನ್ನು ಪ್ರಕಟಿಸುವ ಯೋಜನೆಯನ್ನು ಹಾಗೂ 1959ರಿಂದ ನಾಟಕ ಅಕಾಡೆಮಿಯ ಎಲ್ಲ ಪ್ರಶಸ್ತಿ ಪುರಸ್ಕೃತರ ಪರಿಚಯಗಳನ್ನು ಸಂಗ್ರಹಿಸಿ ಗ್ರಂಥರೂಪದಲ್ಲಿ ಹೊರತರುವ ಕೆಲಸವನ್ನು ಆರಂಭಿಸಲಾಯಿತು. ಆದರೆ ಅಂದುಕೊಂಡ ಕಾರ್ಯ ಕೈಗೂಡಲಿಲ್ಲ.

ಸದರಿ ಪ್ರಕಟಣೆಯನ್ನು ನಾಟಕ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಶೇಖ (ಮಾಸ್ತರ) ಅವರು ಈ ಮಹತ್ತರವಾದ ಪ್ರಕಟಣೆಯನ್ನು ಕೈಗೆತ್ತಿಕೊಂಡು ರಂಗಭೂಮಿಯಲ್ಲಿ ಸೇವೆಸಲ್ಲಿಸುವ ಕಲಾವಿದರುಗಳನ್ನು ಗೌರವಿಸುವ ಹಾಗೂ ಆ ಎಲ್ಲಾ ಕಲಾವಿದರ ಕಿರುಮಾಹಿತಿ ಈ ಕೃತಿಯಲ್ಲಿ ಲಭ್ಯವಾಗುವಂತೆ ಮಾಡುವಲ್ಲಿ ನಾಟಕ ಅಕಾಡೆಮಿ ಯಶಸ್ವಿಯಾಗಿದೆ. ಹೀಗೆ ನಿರಂತರವಾಗಿ ರಂಗದಾಖಲಾತಿ ಕಾರ್ಯಕ್ರಮಗಳು ನಡೆಯಲಿ ಎಂದು ಹಾರೈಸುತ್ತೇನೆ.

22–02–2017
ಬೆಂಗಳೂರು

– ಡಾ. ಬಿ.ವಿ. ರಾಜಾರಾಂ
ಮಾಜಿ ಅಧ್ಯಕ್ಷರು
ಕರ್ನಾಟಕ ನಾಟಕ ಅಕಾಡೆಮಿ



**ಕರ್ನಾಟಕ ನಾಟಕ ಅಕಾಡೆಮಿ**

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು
ದೂರವಾಣಿ : ೦೮೦ – ೨೨೨೩೭೪೮೪